

ಸಂಪುಟ–೩

ಪ್ರಕಾಶಕರು :
ಶ್ರೀಗುರುರಾಜ ಅಸೋಸಿಯೇಷನ್ (ರಿ.)
ಬಸವನಗುಡಿ, ಬೆಂಗಳೂರು 560 004.



ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತ

# ಶ್ರೀಮನ್ಮಹಾಭಾರತ

## ತಾತ್ಪರ್ಯ ನಿರ್ಣಯ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ

# ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ

(ಹದಿನೇಳನೆಯ ಅಧ್ಯಾಯದಿಂದ ಇಪ್ಪತ್ತನಾಲ್ಕನೆಯ ಅಧ್ಯಾಯದವರೆಗೆ)

ಕನ್ನಡಾನುವಾದ

ವಿದ್ಯಾಪೀಠದ ವಿದ್ವಾಂಸರು

***

ಪ್ರಕಾಶಕರು

ಶ್ರೀ ಗುರುರಾಜ ಅಸೋಸಿಯೇಷನ್

ಮಾಡೆಲ್ ಹೌಸ್ ಬೀದಿ, ಬಸವನಗುಡಿ, ಬೆಂಗಳೂರು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ
(ಹದಿನೇಳನೆಯ ಅಧ್ಯಾಯದಿಂದ ಇಪ್ಪತ್ನಾಲ್ಕನೆಯ ಅಧ್ಯಾಯದವರೆಗೆ)

ಪ್ರಕಾಶಕರು ಶ್ರೀ ಗುರುರಾಜ ಅಸೋಸಿಯೇಷನ್, ಮಾಡೆಲ್ ಹೌಸ್ ಬೀದಿ,
ಬಸವನಗುಡಿ, ಬೆಂಗಳೂರು - ೫೬೦ ೦೦೪. ದೂರವಾಣಿ : ೨೬೬೨೫೬೫೮/೯



ಪ್ರತಿಗಳು : ೧೦೦೦

ಪ್ರಕಟಿತ ವರ್ಷ : ೨೦೧೫

ಬೆಲೆ : ರೂ.೫೦೦/- (ಐದು ನೂರು ರೂಪಾಯಿ)

ಅಕ್ಷರ ವಿನ್ಯಾಸ ಮತ್ತು ಮುದ್ರಣ
ವಾಗರ್ಥ, ನಂ.149, 8ನೇ ಕ್ರಾಸ್, ನರಸಿಂಹರಾಜಾ ಕಾಲೋನಿ, ಬೆಂಗಳೂರು-560 019.
ದೂರವಾಣಿ : 080-22427677

H.H. SRI VISHVESHA TIRTHA SWAMIJI
SRI PEJAVARA ADHOKSHAJA MATHAA
Jagadguru Sri Madhwacharya Maha Samsthana
Udupi-576 101, Karnataka
Phone : 0820-2524198, 2526598



श्री श्री विश्वेशतीर्थश्रीपादाः
श्री पेजावराधोक्षज मठः
जगद्गुरु श्रीमध्वाचार्यमहासंस्थानम्
उडुपि - ५७६ १०१, कर्णाटक.

# ಆಶೀರ್ವಚನ

ಶ್ರೀಗುರುರಾಜ ಅಸೋಸಿಯೇಷನ್, ನ.ರಾ. ಕಾಲೋನಿ, ಬೆಂಗಳೂರು–04, ಇವರಿಂದ ಪ್ರತಿವರ್ಷ ವಿದ್ವತ್ ಸಮಾಜ ಹಾಗೂ ಜಿಜ್ಞಾಸುಗಳಿಗೆ ಉಪಯುಕ್ತವಾದ ಗ್ರಂಥಗಳನ್ನು ಪ್ರಕಟಪಡಿಸುತ್ತಿರುವುದು ಸಂತಸದ ಸಂಗತಿಯಾಗಿದೆ.

''ಮಹಾಭಾರತ ತಾತ್ಪರ್ಯ ನಿರ್ಣಯ''ದ ಶ್ಲೋಕಗಳನ್ನು ಪದದ ಅರ್ಥ ಹಾಗೂ ತಾತ್ಪರ್ಯ ಸಹಿತವಾಗಿ ನೀಡುತ್ತಿರುವುದು ಓದುಗರಿಗೆ ಅನುಕೂಲವಾಗಿರುವುದು. ಮಹಾಭಾರತವನ್ನು ಓದುವಾಗ ಉಂಟಾಗುವ ಹಲವಾರು ಸಮಸ್ಯೆಗಳಿಗೆ ಪರಿಹಾರವನ್ನು ಮಹಾಭಾರತ ತಾತ್ಪರ್ಯನಿರ್ಣಯದಿಂದ ಪಡೆಯಬಹುದು. ಅನೇಕ ರಹಸ್ಯ ವಿಷಯಗಳನ್ನು ತಿಳಿಯಬಹುದು. ಜಿಜ್ಞಾಸುಗಳು ಇದರ ಲಾಭವನ್ನು ಪಡೆಯುವಂತಾಗಲಿ ಎಂದು ಆಶಿಸುತ್ತಾ, ಸ್ತುತ್ಯವಾದ ಕಾರ್ಯವನ್ನು ಮಾಡುತ್ತಿರುವ ನರಸಿಂಹರಾಜಾ ಕಾಲೋನಿ ಶ್ರೀ ರಾಘವೇಂದ್ರಸ್ವಾಮಿಗಳವರ ಮಠದ ಎಲ್ಲಾ ಪದಾಧಿಕಾರಿಗಳನ್ನು ಅಭಿನಂದಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

(signature)

# ಮುನ್ನುಡಿ

ಜಗದ್ಗುರು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಮುಖ್ಯಪ್ರಾಣನ ಮೂರನೆಯ ಅವತಾರ. ಶ್ರೀ ಹರಿಯ ಆದೇಶವನ್ನು ಮುಡಿಯಲ್ಲಿ ಹೊತ್ತು, ದೇವತೆಗಳ ಬಿನ್ನಹವನ್ನು ಹೃದಯಹಾರವಾಗಿಸಿಕೊಂಡು, ಸುಜನರುದ್ಧಾರಕ್ಕಾಗಿ ಧರೆಗಿಳಿದು ಬಂದವರು. ಜ್ಞಾನದ ಎಲ್ಲ ಶಾಖೆಗಳಿಗೂ ಅಪೂರ್ವ ಹಾಗೂ ವಿಶಿಷ್ಟ ವ್ಯಾಖ್ಯಾನವನ್ನು ಕರುಣಿಸಿರುವುದು ಶ್ರೀಮದಾಚಾರ್ಯರ ಹಿರಿಮೆ. ವೇದ - ಉಪನಿಷತ್ - ಬ್ರಹ್ಮಸೂತ್ರಗಳು - ಇತಿಹಾಸ - ಪುರಾಣ - ತಂತ್ರ - ಧರ್ಮಶಾಸ್ತ್ರ - ವೇದಾಂಗಗಳು ಮತ್ತು ಕಲಾವಿದ್ಯೆಗಳ ಬಗ್ಗೆ ಬೆಳಕು ಚೆಲ್ಲಿದ ಮೊದಲ ಆಚಾರ್ಯರು - ಶ್ರೀಮದಾಚಾರ್ಯರು. ಇತಿಹಾಸ-ಪುರಾಣಗಳಲ್ಲಿ 'ಆವಾಪೋದ್ವಾಪ' ಹೆಚ್ಚಿದೆಯೆಂಬ ಹಿನ್ನೆಲೆಯಲ್ಲಿ ಅದನ್ನು ಮುಟ್ಟಲಂಜಿದವರು ಬಹಳ ಮಂದಿ. ಆದರೆ, ಯಾವ ಆಚಾರ್ಯರ ಪುರುಷರೂ ಮಾಡಲಾಗದ ಮಹಾಭಾರತದ ಪ್ರಮೇಯನಿರ್ಣಯ, ಭಾಗವತದ ಪಾಠಶುದ್ಧಿ - ಅರ್ಥನಿರ್ಣಯದ ಬಗ್ಗೆ ಅಧಿಕೃತ ಕೊಡುಗೆ ಕೊಟ್ಟವರು ಶ್ರೀಮಧ್ವಾಚಾರ್ಯರು.

ದೊರಕಿದ ವೇದಭಾಗ ಅತ್ಯಲ್ಪ. ಕಳೆದುಕೊಂಡದ್ದು ಬಹುಭಾಗ. ವೇದ - ಉಪನಿಷತ್ತುಗಳ ವ್ಯಾಖ್ಯೆ ಬಲು ಕಠಿಣ. ಇದರಂತೆ ಇತಿಹಾಸ-ಪುರಾಣಗಳಲ್ಲಿ ಹೆಜ್ಜೆ-ಹೆಜ್ಜೆಗೆ ವಿರೋಧಗಳು, ಅಸಂಗತಿಗಳು, ಅಸ್ಪಷ್ಟತೆಗಳು ಕಣ್ಣಿಗೆ ರಾಚುತ್ತವೆ. ಇವುಗಳಲ್ಲಿನ ಏಕವಾಕ್ಯತೆ - ಅಪೂರ್ವತೆಯನ್ನು ಆವಿಷ್ಕರಿಸುವುದು ಸರ್ವಜ್ಞರಿಗೆ ಮಾತ್ರವೇ ಸಾಧ್ಯವಾದ ಕಾಯಕ. ಇದನ್ನು ಮಾಡಿಕೊಟ್ಟವರು - ಪೂರ್ಣಪ್ರಜ್ಞರು.

ಇತಿಹಾಸ-ಪುರಾಣಗಳ ಮಾರ್ಗದರ್ಶನದಲ್ಲಿ ವೇದಗಳ ಅಧ್ಯಯನ ನಡೆಸಬೇಕೆಂದು ಪ್ರಾಚೀನರು ಆದೇಶಿಸಿದರು — 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬ್ರಂಹಯೇತ್' ಇತಿಹಾಸ-ಪುರಾಣಗಳು ಸಾಮಾನ್ಯ ಕೃತಿಗಳಲ್ಲ, ಸರ್ವಜ್ಞತಮರಾದ ನಾರಾಯಣಾವತಾರಿಗಳಾದ ಶ್ರೀವೇದವ್ಯಾಸರ ಕೃತಿರತ್ನಗಳು. ಇವುಗಳ ಹೃದಯವನ್ನು ಆವಿಷ್ಕರಿಸುವ ಕಾರ್ಯ, ಶ್ರೀವ್ಯಾಸರ ಆದೇಶದಂತೆ ಶ್ರೀಮಧ್ವರಿಂದ ನಡೆದಿದೆ. ಕಲಿಯುಗದಲ್ಲಿ ವೇದಾಧ್ಯಯನ ಯೋಗ್ಯತೆ ಇರುವವರು ವಿರಳ. ಬ್ರಹ್ಮಬಂಧುಗಳೇ ಎಲ್ಲೆಡೆ ಇರುವವರು. ಬ್ರಾಹ್ಮಣರು - ಸ್ತ್ರೀಯರು - ಸಂಸ್ಕಾರಹೀನವಾದ ಸುಜನವರ್ಗ ವಿಶ್ವದಲ್ಲಿ ವ್ಯಾಪಿಸಿದೆ. ಇವರ ಪಾಲಿಗೆ

ಮಹಾಭಾರತವೇ - ವೇದ. ಇದರ ಅಧ್ಯಯನವಿಲ್ಲದೆ ಅರಿವೆಲ್ಲಿ? ಅರಿವಿಲ್ಲದೆ ಮುಕ್ತಿ ಹೇಗೆ? ಈ ಹಿನ್ನೆಲೆಯಲ್ಲಿ ಮಹಾಭಾರತದ ಮೂಲಕ ವೇದೋಪನಿಷತ್ತುಗಳಲ್ಲಿ ಮುಚ್ಚಿಟ್ಟ ತತ್ತ್ವರಹಸ್ಯಗಳ, ಸೂಕ್ಷ್ಮಪ್ರಮೇಯಗಳ ಆವಿಷ್ಕರಣಕ್ಕಾಗಿ ಆಚಾರ್ಯರು ಕರುಣಿಸಿದ ಮಂಗಲಕೃತಿ - ಮಹಾಭಾರತತಾತ್ಪರ್ಯ ನಿರ್ಣಯ. ಇದು ಸಕಲಶಾಸ್ತ್ರಗಳ ಹೃದಯವನ್ನು ತೆರೆದಿಡಲೆಂದೇ ಮೈದಳೆದ ಸಂಶೋಧನಾತ್ಮಕ ಹಾಗೂ ನಿರ್ಣಯಾತ್ಮಕ ಕೃತಿ. ಇದರ ಅಧ್ಯಯನದಿಂದ ಇಹ-ಪರಗಳಲ್ಲಿ ಮಂಗಲ-ಶಾಂತಿ ನಿಶ್ಚಿತ. ಇದರ ಅಧ್ಯಯನದಿಂದ ಶ್ರೀಹರಿಯ ಒಲುಮೆ ನಿಶ್ಚಿತ - 'ನಾರಾಯಣಃ ಪ್ರೀತಿಮುಪೈತಿ ತತೋಽಲಮ್'.

ಬೆಂಗಳೂರಿನ ಪ್ರತಿಷ್ಠಿತವಾದ ಗುರುರಾಜ ಅಸೋಸಿಯೇಷನ್ ಈ ಕೃತಿಯನ್ನು ಹೊರತರುತ್ತಿರುವುದು. ನಾಡಿನ ಜನತೆಯ ಭಾಗ್ಯ. ಇದೇ ಸಂಸ್ಥೆಯವರು ಕಳೆದ ೩೪೨ನೇ ಆರಾಧನಾ ಮಹೋತ್ಸವದ ಸುಸಂದರ್ಭದಲ್ಲಿ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯದ ೧ ನೇ ಅಧ್ಯಾಯದಿಂದ ೧೬ನೇ ಅಧ್ಯಾಯದವರೆಗೆ ಎರಡು ಸಂಪುಟಗಳಲ್ಲಿ ಪ್ರಕಾಶನ ಮಾಡಿದ್ದರು. ಆ ಕಾರ್ಯವನ್ನು ಮುಂದುವರಿಸಿ ಶ್ರೀ ಗುರುಸಾರ್ವಭೌಮರ ೩೪೪ನೇ ಆರಾಧನೆಯ ಈ ಶುಭ ಅವಸರದಲ್ಲಿಯೂ ಮುಂದಿನ ೮ ಅಧ್ಯಾಯಗಳ ಸಂಪುಟವನ್ನು ಹೊರ ತರುತ್ತಿರುವುದು ನಮ್ಮೆಲ್ಲರ ಸೌಭಾಗ್ಯದ ವಿಷಯವಾಗಿದೆ. ಈ ಸಂಪುಟದ ಕನ್ನಡದ ಕನ್ನಡಿಯಲ್ಲಿವೆ. ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಅಧ್ಯಯನ ಮಾಡಿದಂತಹ ವಿದ್ವಾಂಸರುಗಳು ಈ ಅನುವಾದವನ್ನು ನೆರವೇರಿಸಿಕೊಟ್ಟಿರುತ್ತಾರೆ. ಇವು ವಿದ್ವಾಂಸರ ಹಸಿವನ್ನು ನೀಗಿಸುವಂತಹ ಅಮೂಲ್ಯ ಕೃತಿಯಾಗಿದೆ.

ಪ್ರಸಕ್ತ, ಗುರುರಾಜ ಅಸೋಸಿಯೇಷನ್ ಪದಾಧಿಕಾರಿಗಳೆಲ್ಲರೂ ಈ ವಾಙ್ಮಯ ಸೇವೆಯಿಂದ ಅಭಿನಂದನಾರ್ಹರಾಗಿದ್ದಾರೆ. ಇವರಿಗೆ ಉತ್ತಮ ಮಾರ್ಗದರ್ಶನ ನೀಡಿ, ಉತ್ಸಾಹ ತುಂಬಿ ಈ ಕೃತಿಯ ಪ್ರಕಾಶನಕ್ಕೆ ನಿರಂತರ ಶ್ರಮಿಸಿದ ವಿದ್ವಾನ್ ಬ್ರಹ್ಮಣ್ಯಾಚಾರ್ಯರೂ ಗಣನೀಯ ಸೇವೆ ಸಲ್ಲಿಸಿದ್ದಾರೆ. ಈ ಎಲ್ಲ ಮಹನೀಯರಿಗೆ ಶ್ರೀಹರಿವಾಯುಗಳು ಮತ್ತು ಬೃಂದಾವನದಲ್ಲಿ ಸನ್ನಿಹಿತರಾಗಿರುವ ಕರುಣಾಸಾಗರರಾದ ಶ್ರೀಗುರುರಾಜರು ಎಲ್ಲ ಬಗೆಯ ಭಾಗ್ಯಗಳನ್ನು ಕರುಣಿಸಿ ಹರಸಲೆಂದು ಭಕ್ತಿಯಿಂದ ಬಿನ್ನವಿಸುವೆ.

ಶ್ರೀ ಗುರುರಾಜ ಅಸೋಸಿಯೇಷನ್‌ನಂತಹ ಮಾಧ್ವ ಸಂಸ್ಥೆಗಳು, ಭಕ್ತರು ಶ್ರದ್ಧೆಯಿಂದ ನೀಡುವ ದೇಣಿಗೆಯನ್ನು ಕೇವಲ ಕಟ್ಟಡದ ವಿಸ್ತರಣೆ, ಬೆಳ್ಳಿ-ಬಂಗಾರಗಳ ಕವಚನಿರ್ಮಾಣಕ್ಕೆ ಮಾತ್ರವೇ ವಿನಿಯೋಗಿಸದೆಯೇ, ವಿದ್ವಾಂಸರ ಪೋಷಣೆ-ಗ್ರಂಥಪ್ರಕಾಶನ - ವಿದ್ಯಾರ್ಥಿವೇತನ ಇತ್ಯಾದಿಗಳಿಗೆ ಬಳಸುತ್ತಿರುವುದು ಹೆಮ್ಮೆ-ಅಭಿಮಾನ ತರುವ ಸಂಗತಿ. ಎಲ್ಲದಕ್ಕಿಂತ ಹೆಚ್ಚಾಗಿ ಶ್ರೀ ಗುರುರಾಜರ ಅಂತರಂಗದ ಅನುಗ್ರಹಕ್ಕೆ ಕಾರಣವಾದ ಭಾಗ್ಯೋದಯವಿದು. ಎಲ್ಲ ಸಂಘಸಂಸ್ಥೆಗಳು ಹಾಗೂ ಮಠಗಳು ತಮ್ಮ ಸಂಪನ್ಮೂಲವನ್ನು ಗ್ರಂಥಪ್ರಕಾಶನ - ಗ್ರಂಥಾನುವಾದ ವಿದ್ವಾಂಸರ-ವೈದಿಕರ ಸಂಪೋಷಣೆಗೆ ಬಳಸಿದಲ್ಲಿ ಧರ್ಮದರ್ಶಿ ಗಳಾದ ಸಾರ್ಥಕಸೇವೆ ಸಲ್ಲಿಸಿದಂತಾಗುವುದು. ಇಂತಹ ಭಾವ ಶುದ್ಧಿಯನ್ನು ಶ್ರೀಗುರುರಾಜರು ನೀಡಿ ಈ ಪದಾಧಿಕಾರಿಗಳಿಂದ ಇನ್ನೂ ಹೆಚ್ಚಿನ ಶಾಸ್ತ್ರಸೇವೆ ಹಾಗೂ ಶ್ರೀಗುರುರಾಜರ ಸೇವೆ ಸ್ವೀಕರಿಸುವಂತಾಗಲೆಂದು ಶ್ರೀಗುರುರಾಜರಲ್ಲಿ ಭಕ್ತಿಯಿಂದ ಬಿನ್ನವಿಸುವೆ.

ಇತಿ

ಸುಜನರ ಅನುಗ್ರಹಾಕಾಂಕ್ಷಿ

ಎ. ವಿ. ನಾಗಸಂಪಿಗೆ

# ಪ್ರಕಾಶಕರ ನುಡಿ

ವೇದಾದಪಿ ಪರಮ್‌ಚಕ್ರೆ ಮಹಾಭಾರತಮುತ್ತಮಂ ಎಂಬುದು ಇತಿಹಾಸ ಗ್ರಂಥವಾದ ಮಹಾಭಾರತದ ಪ್ರಶಸ್ತಿ. ಈ ಮೇರುಕೃತಿಯು ಭಗವಾನ್ ವೇದವ್ಯಾಸರ ಪ್ರತಿಕೃತಿ. ಸಮಗ್ರವೇದ - ವೇದಾಂತ ಉಪನಿಷತ್ತುಗಳು ಸಾರ ಸರ್ವಸ್ವವೇ ಶ್ರೀಮನ್ ಮಹಾಭಾರತ. ಈ ಮೇರುಕೃತಿಯಲ್ಲಿ ನಿರೂಪಿತವಾಗದಿರುವ ಯಾವ ವಿಷಯವು ಮತ್ತೆ ನಮಗೆಲ್ಲು ಕಾಣಸಿಗುವುದಿಲ್ಲ. ಒಂದು ರೀತಿಯಿಂದ ಭಾರತೀಯ ವೈದಿಕ ವಾಙ್ಮಯದ ಸಮಗ್ರ ಇತಿಹಾಸ ಇಲ್ಲಿ ಕಾಣಸಿಗುತ್ತದೆ.

ಶ್ರೀ ಭಗವಾನ್ ಬಾದರಾಯಣರ ಈ ಕೃತಿಗೆ ಅವರ ಆದೇಶಾನುಸಾರವಾಗಿ ಜಗದ್ಗುರು ಮಧ್ವಾಚಾರ್ಯರು ೫೦೦೦ ಸಾವಿರಕ್ಕೂ ಮಿಕ್ಕ ಶ್ಲೋಕಗಳಿಂದ ಕೂಡಿದ ತಾತ್ಪರ್ಯನಿರ್ಣಯ ಎಂಬ ಗ್ರಂಥವನ್ನು ರಚಿಸಿ ಮಹಾದುಪಕಾರ ಮಾಡಿರುತ್ತಾರೆ. ಸಂಸ್ಕೃತ ಸಾಹಿತ್ಯದಲ್ಲಿ ಅತಿ ಅಪರೂಪವಾದ ಗ್ರಂಥರತ್ನ ಇದಾಗಿದೆ. ಮಹಾಭಾರತ ತಾತ್ಪರ್ಯನಿರ್ಣಯ ಕೇವಲ ಮಹಾಭಾರತ ಕೃತಿಯ ವಿಮರ್ಶೆಯಲ್ಲದೇ ಅದು ಸಮಗ್ರ ವ್ಯಾಸಸಾಹಿತ್ಯದ ವಿಮರ್ಶೆ, ಸಂಗ್ರಹ, ನಿರ್ಣಯ ಇದಾಗಿದೆ. ಅಂತೆಯೇ ಇದನ್ನು 'ನಿರ್ಣಯಂ ಸರ್ವ ಶಾಸ್ತ್ರಾಣಾಂ' ಎಂದಿದ್ದಾರೆ.

ಇಂತಹ ಕೃತಿರತ್ನದ ಪ್ರಕಾಶನವನ್ನು ಮಂತ್ರಾಲಯ ಮಹಾಪ್ರಭುಗಳಾದ ಶ್ರೀ ಗುರುರಾಜರ ಅನುಗ್ರಹ ವಿಶೇಷದಿಂದ ನಮ್ಮ ಶ್ರೀ ಗುರುರಾಜಾ ಅಸೋಷಿಯೇಸನ್ (ರಿ.) ಇಲ್ಲಿನ ಆಡಳಿತ ಮಂಡಲಿಯವರು ಕೈಗೆತ್ತಿಕೊಂಡು ಈಗಾಗಲೇ ೮ ಅಧ್ಯಾಯಗಳ ಎರಡು ಸಂಪುಟಗಳನ್ನು ಕಳೆದ ೩೪೨ನೇ ಆರಾಧನೆಯ ಸುಸಂದರ್ಭದಲ್ಲಿ ಗುರುರಾಜರಿಗೆ ಅರ್ಪಿಸಿ ಕೃತಕೃತ್ಯರಾಗಿದ್ದಾರೆ. ಅಂತೆಯೇ ಈ ಬಾರಿಯ ೩೪೪ನೇ ಆರಾಧನಾ ಅಂಗವಾಗಿ ಶ್ರೀ ಗುರುರಾಜರಿಗೆ ೧೭ ರಿಂದ ೨೪ರ ಒಳಗಿರುವ ೮ ಅಧ್ಯಾಯಗಳ ಶ್ರೀಮನ್ ಮಹಾಭಾರತ ತಾತ್ಪರ್ಯನಿರ್ಣಯದ ಮೂರನೆಯ ಸಂಪುಟವನ್ನು ಪ್ರಕಾಶನಗೊಳಿಸಲು ಸಂತೋಷವಾಗುತ್ತಿದೆ. ಇದು ಗುರುರಾಜರಿಗೆ ಅತ್ಯಂತ ಪ್ರಿಯವಾದ ಕಾರ್ಯವಾಗಿದೆ.

ಈ ಮೂರನೇ ಸಂಪುಟಕ್ಕೆ ತಮ್ಮ ಅತ್ಯಮೂಲ್ಯವಾದ ಆಶೀರ್ವಚನವನ್ನು ನೀಡಿ ಅನುಗ್ರಹಿಸಿದ ಭಾವಿ ಪರ್ಯಾಯ ಉಡುಪಿಯ ಶ್ರೀಕೃಷ್ಣನ ಪೂಜಾ, ಕೈಂಕರ್ಯ ನೇರವೇರಿಸಲು ೫ನೇ ಐತಿಹಾಸಿಕ ಸರ್ವಜ್ಞಪೀಠವನ್ನು ಅಲಂಕರಿಸಲು ಹೊರಟ ವಾಮನರೂಪಿ, ತ್ರಿವಿಕ್ರಮಪರಾಕ್ರಮಿಗಳಾದ, ಪರಮಪೂಜ್ಯ ಶ್ರೀ ಶ್ರೀ ೧೦೦೮ ಶ್ರೀ ಪೇಜಾವರ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಅಡಿದಾವರೆಗಳಲ್ಲಿ ಸಂಸ್ಥೆಯ ಎಲ್ಲಾ ಆಡಳಿತ ಮಂಡಲಿಯ ಸದ್ಯಸರು ಶಿರಸಾಷ್ಟಾಂಗ ನಮಸ್ಕಾರಗಳನ್ನು ಸಲ್ಲಿಸುತ್ತೇವೆ.

ಈ ಗ್ರಂಥ ಹೊರಬರಬೇಕಾದರೆ ಅದರ ಗುರುತರ ಜವಾಬ್ದಾರಿಯನ್ನು ಹೊತ್ತು ನಿಂತವರು ಪೂರ್ಣಪ್ರಜ್ಞ ವಿದ್ಯಾಪೀಠದ ಅಧ್ಯಾಪಕರಾದ ಮ.ಶಾ.ಸಂ. ಸಿ.ಹೆಚ್. ಬದರೀ ಆಚಾರ್ಯ ಇವರು ಮಾಡಿದ ಉಪಕಾರವನ್ನು ಸಂಸ್ಥೆಯು ಮರೆಯುವಂತಿಲ್ಲ. ಈ ಗ್ರಂಥಕ್ಕೆ ಮುಖ್ಯ ಪ್ರೇರಕರು ಮ.ಶಾ.ಸಂ. ಎ.ವಿ. ನಾಗಸಂಪಿಗೆ ಆಚಾರ್ಯರು ಅವರಿಗೂ ಸಂಸ್ಥೆಯು ಚಿರಋಣಿಯಾಗಿದೆ.

ಈ ಸಂಪುಟದ ೮ ಅಧ್ಯಾಯಗಳ ಅನುವಾದ ಮಾಡಿದ ಎಲ್ಲ ವಿದ್ವಾಂಸರುಗಳಿಗೂ ಸಂಸ್ಥೆಯು ಋಣಿಯಾಗಿದೆ.

ಅಂತೆಯೆ ಮುದ್ರಣಕಾರ್ಯದಲ್ಲಿ ನಮ್ಮೊಂದಿಗೆ ಸದಾ ಇದ್ದು ಸಕಾಲದಲ್ಲಿ ಮುದ್ರಿಸಿ ಕೊಟ್ಟ ವಾಗರ್ಥ ಮುದ್ರಣಾಲಯದ ಎಲ್ಲಾ ಬಾಂಧವರಿಗೂ ಸಂಸ್ಥೆಯು ಚಿರಋಣಿಯಾಗಿದೆ.

ಇತಿ

ಆಡಳಿತ ಮಂಡಳಿಯ ಪರವಾಗಿ
ಗೌರವ ಕಾರ್ಯದರ್ಶಿ

## ಈ ಗ್ರಂಥಕ್ಕೆ ಪ್ರತಿಪದಾರ್ಥ, ಅರ್ಥ, ತಾತ್ಪರ್ಯವನ್ನು ಕನ್ನಡ ಭಾಷೆಯಲ್ಲಿ ಒದಗಿಸಿದ ವಿದ್ವಾಂಸರುಗಳು

★★★

ವಿದ್ವಾನ್ ಕೆ.ಆರ್. ನಾಗರಾಜಾಚಾರ್ಯ

ವಿದ್ವಾನ್ ವೇಣುಗೋಪಾಲಾಚಾರ್ಯ ಪುರೋಹಿತ್

ವಿದ್ವಾನ್ ಸತ್ಯಮೂರ್ತಿ ಆಚಾರ್ಯ

ಡಾ|| ಎಲ್.ಎಸ್. ವಾದಿರಾಜಾಚಾರ್ಯ

ವಿದ್ವಾನ್ ಅನಂತಶಯನಾಚಾರ್ಯ

ವಿದ್ವಾನ್ ಶ್ರೀನಿಧಿ ಆಚಾರ್ಯ ಪ್ಯಾಟಿ

ವಿದ್ವಾನ್ ಗುರುರಾಜಾಚಾರ್ಯ ಕುಲಕರ್ಣಿ

ವಿದ್ವಾನ್ ಹೆಚ್.ಪಿ. ನಾಗರಾಜಾಚಾರ್ಯ

ವಿದ್ವಾನ್ ಆನಂದತೀರ್ಥ ಮಾಳಗಿ

ವಿದ್ವಾನ್ ಸುಧೀಂದ್ರಾಚಾರ್ಯ

ವಿದ್ವಾನ್ ವಿಠೋಬಾಚಾರ್ಯ

ವಿದ್ವಾನ್ ಮಾತರಿಶ್ವಾಚಾರ್ಯ

ವಿದ್ವಾನ್ ಸಂಜೀವಾಚಾರ್ಯ

ವಿದ್ವಾನ್ ವ್ಯಾಸಮುನಿ ಆಚಾರ್ಯ

ವಿದ್ವಾನ್ ಕೆ.ಪಿ. ವಾದಿರಾಜಾಚಾರ್ಯ

# ವಿಷಯಾನುಕ್ರಮಣಿಕೆ

## ಅಧ್ಯಾಯ - 17

### ಹಂಸ-ಡಿಭಿಕರ ವಧ



## ಅಧ್ಯಾಯ - 18

## ಅಧ್ಯಾಯ - 19

### ಪಾಂಡವರ ರಾಜ್ಯ ಲಾಭ



## ಅಧ್ಯಾಯ - 20

### ಖಾಂಡವ ದಹನ

## ಅಧ್ಯಾಯ - 21

ಪಾಂಡವ ವನಪ್ರವೇಶ



## ಅಧ್ಯಾಯ - 22

ಅರಣೀ ಪ್ರಾಪ್ತಿ

## ಅಧ್ಯಾಯ - 23



## ಅಧ್ಯಾಯ - 24

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ

# ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ

## ಅಧ್ಯಾಯ - 17

### ಹಂಸಡಿಭಕವಧಃ

**ಗತೇಽಥ ಚೇದಿಪೇ ಸ್ವಕಂ ಪುರಂ ಜನಾರ್ದನೋಽಶೃಣೋತ್ ।**
**ರಮೈವ ರುಗ್ಮಿಣೀತಿ ಯೋದ್ಯತಾಂ ಸ್ವಯಂವರಾಯ ತಾಮ್ ॥ ೧ ॥**

ಪದಚ್ಛೇದ :- ಗತೇ, ಅಥ, ಚೇದಿಪೇ, ಸ್ವಕಂ, ಪುರಂ, ಜನಾರ್ದನಃ, ಅಶೃಣೋತ್ । ರಮಾ, ಏವ, ರುಗ್ಮಿಣೀ, ಇತಿ, ಯೋದ್ಯತಾಂ, ಸ್ವಯಂ ವರಾಯ, ತಾಮ್ ॥

ಅರ್ಥ :- ಅಥ = ಅನಂತರ, ಚೇದಿಪೇ = ಚೇದಿರಾಜನಾದ ದಮಘೋಷ, ಸ್ವಕಂ = ತನ್ನ, ಪುರಂ = ಪಟ್ಟಣವನ್ನು ಕುರಿತು, ಗತೇ = (ಸತಿ) ಹೋಗುತ್ತಿರಲು, ರಮೈವ = ರಮಾದೇವಿಯೇ ರುಗ್ಮಿಣೀ ಇತಿ = ರುಗ್ಮಿಣೀ ಎಂಬ ಹೆಸರಿನಿಂದ (ಅವತರಿಸಿದ್ದಾಳೆಂದು), ಚ = ಮತ್ತು, ತಾಂ = ಅವಳನ್ನು, ಸ್ವಯಂ ವರಾಯ = ಸ್ವಯಂ ವರಕ್ಕೋಸ್ಕರ, ಯೋದ್ಯತಾಂ (ಇತಿ) = ಉದುಕ್ತಳಾಗಿರುವಳೆಂದು, ಅಶೃಣೋತ್ = ಕೇಳಿ ತಿಳಿದ.

ತಾತ್ಪರ್ಯ :- ಚೇದಿರಾಜ ದಮಘೋಷ ತನ್ನ ನಗರಕ್ಕೆ ಹೋದಾಗ, ರುಗ್ಮಿಣೀ ಎಂಬ ಹೆಸರಿನಿಂದ ಅವತರಿಸಿದ ಸಾಕ್ಷಾತ್ ರಮೆಯೇ ಸ್ವಯಂವರಕ್ಕೆ ಉದ್ಯುಕ್ತಳಾಗಿರುವಳೆಂದು ಶ್ರೀಕೃಷ್ಣ ಕೇಳಿ ತಿಳಿದುಕೊಂಡ.

**ಸ ರುಗ್ಮಿನಾಮಕೋಽಗ್ರಜಃ ಶ್ರಿಯೋ ದ್ವಿಷನ್ ರಮಾಪತಿಮ್ ।**
**ಹರೇಃ ಪ್ರದಾತುಮುದ್ಯತಾಂ ನ್ಯವಾರಯದ್ಧರಿಪ್ರಿಯಾಮ್ ॥ ೨ ॥**

ಪದಚ್ಛೇದ :- ಸಃ, ರಗ್ಮಿನಾಮಕಃ, ಅಗ್ರಜಃ, ಶ್ರೀಯಃ, ದ್ವಿಷನ್, ರಮಾಪತಿಮ್ । ಹರೇಃ, ಪ್ರದಾತುಂ, ಉದ್ಯತಾಂ, ನ್ಯವಾರಯತ್, ಹರಿಪ್ರಿಯಾಮ್ ॥

ಅರ್ಥ :- ಶ್ರೀಯಃ = ರುಗ್ಮಿಣಿಯ, ಅಗ್ರಜಃ = ಅಣ್ಣನಾದ, ರುಗ್ಮಿನಾಮಕಃ = ರುಗ್ಮಿ ಎಂಬ ಹೆಸರುಳ್ಳ, ಸಃ = ಅವನು, ರಮಾಪತಿಮ್ = ರಮೆಯ

ಸ್ವಾಮಿಯಾದ ಶ್ರೀಕೃಷ್ಣನನ್ನು, ದ್ವಿಷನ್(ಸನ್) = ದ್ವೇಷಿಸುತ್ತಾ, ಹರಿಪ್ರಿಯಾಂ = ಶ್ರೀಕೃಷ್ಣನ ಪ್ರಿಯತಮೆಯನ್ನು, ಹರೇಃ = ಶ್ರೀಕೃಷ್ಣನಿಗೆ, ಪ್ರದಾತುಂ = ಕೊಡಲು, ಉದ್ಯತಾನ್ = ಉದ್ಯುಕ್ತರಾದ (ಮುಂದಾದ ಭೀಷ್ಮಕ ಮೊದಲಾದವರನ್ನು), ನ್ಯವಾರಯತ್ = ತಡೆದನು.

ತಾತ್ಪರ್ಯ :- ರುಗ್ಮಿಣಿಯ ಅಣ್ಣನಾದ ರುಗ್ಮಿ, ಶ್ರೀಕೃಷ್ಣನನ್ನು ದ್ವೇಷಿಸುತ್ತಾ, ಭೀಷ್ಮಕ ಮೊದಲಾದವರು ಶ್ರೀಕೃಷ್ಣನ ಪ್ರಿಯತಮೆಯಾದ ರುಗ್ಮಿಣಿಯನ್ನು ಕೃಷ್ಣನಿಗೆ ಕೊಡಲು ಮುಂದಾದಾಗ ತಡೆದನು.

**ಪ್ರಘೋಷಿತೇ ಸ್ವಯಂವರೇಽಥ ತೇನ ಮಾಗಧಾದಯಃ ।**
**ಸಮೀಯುರುಗ್ರಪೌರುಷಾಃ ಸಸಾಲ್ವಪೌಂಡ್ರಚೇದಿಪಾಃ ॥ ೩ ॥**

ಪದಚ್ಛೇದ :- ಪ್ರಘೋಷಿತೇ, ಸ್ವಯಂವರೇ, ಅಥ, ತೇನ, ಮಾಗಧಾದಯಃ । ಸಮೀಯುಃ, ಉಗ್ರಪೌರುಷಾಃ, ಸಸಾಲ್ವಪೌಂಡ್ರಚೇದಿಪಾಃ ॥

ಅರ್ಥ :- ಅಥ = ಅನಂತರ, ತೇನ = ರುಗ್ಮಿಯಿಂದ, ಸ್ವಯಂವರೇ = ಸ್ವಯಂವರವು, ಪ್ರಘೋಷಿತೇ (ಸತಿ) = ಘೋಷಣೆ ಮಾಡುತ್ತಿರಲು, ಉಗ್ರಪೌರುಷಾಃ = ಭಯಂಕರವಾದ ಪೌರುಷವುಳ್ಳ, ಮಾಗಧಾದಯಃ = ಜರಾಸಂಧನೆ ಮೊದಲಾದವರು, ಸಸಾಲ್ವಪೌಂಡ್ರಚೇದಿಪಾಃ = ಸಾಲ್ವ ಪೌಂಡ್ರಕ ಶಿಶುಪಾಲ ಸಮೇತರಾಗಿ, ಸಮೀಯುಃ = ಬಂದರು.

ತಾತ್ಪರ್ಯ :- ಭಗಿನಿಯಾದ ರುಗ್ಮಿಣೀದೇವಿಗೆ ಮದುವೆ ಮಾಡಲು ಅಣ್ಣನಾದ ರುಗ್ಮಿಯು ಸ್ವಯಂವರಕ್ಕೆ ಘೋಷಣೆ ಮಾಡಿದಾಗ, ಭಯಂಕರವಾದ ಪ್ರಲಾಪಗಳಿಂದ ಕೂಡಿದ ಜರಾಸಂಧ ಸಾಲ್ವ ಪೌಂಡ್ರಕ ಶಿಶುಪಾಲ ಮೊದಲಾದವರು ಬಂದರು.

**ತದಾ ಜಗಾಮ ಕೇಶವೋ ಜವೇನ ಕುಂಡಿನಂ ಪುರಮ್ ।**
**ಸ್ಮೃತೋಽಥ ತೇನ ಪಕ್ಷಿರಾಟ್ ಸಮಾಜಗಾಮ ಕೇಶವಮ್ ॥ ೪ ॥**

ಪದಚ್ಛೇದ :- ತದಾ, ಜಗಾಮ, ಕೇಶವಃ, ಜವೇನ, ಕುಂಡಿನಂ, ಪುರಮ್ । ಸ್ಮೃತಃ, ಅಥ, ತೇನ, ಪಕ್ಷಿರಾಟ್, ಸಮಾಜಗಾಮ, ಕೇಶವಮ್ ॥

**ಅರ್ಥ** :- **ಅಥ** = ಅನಂತರ, **ತೇನ** = ಶ್ರೀಕೃಷ್ಣನಿಂದ, **ಸ್ಮೃತಃ** = ಸ್ಮರಿಸಿದೊಡನೆ, **ಪಕ್ಷಿರಾಟ್** = ಪಕ್ಷಿಗಳ ರಾಜನಾದ ಗರುಡನು, **ಕೇಶವಮ್ (ಪ್ರತಿ)** = ಶ್ರೀಕೃಷ್ಣನನ್ನು ಕುರಿತು, **ಸಮಾಜಗಾಮ** = ಬಂದನು, **ತದಾ** = ಆಗ, **ಕೇಶವಃ** = ಶ್ರೀಕೃಷ್ಣನು, **ಜವೇನ** = ವೇಗದಿಂದ, **ಕುಂಡಿನಂ ಪುರಂ (ಪ್ರತಿ)** = ಕುಂಡಿನ ಪುರವನ್ನು ಕುರಿತು, **ಜಗಾಮ** = ಬಂದನು.

**ತಾತ್ಪರ್ಯ** :- ಸ್ವಯಂವರದ ವಿಚಾರವನ್ನು ತಿಳಿದ ಶ್ರೀಕೃಷ್ಣನು, ಭೀಷ್ಮಕನು ಆಳುವ ವಿದರ್ಭದೇಶದ ರಾಜಧಾನಿಯಾದ ಕುಂಡಿನಪುರಕ್ಕೆ ಹೋಗಲು ತನ್ನ ವಾಹನವಾದ ಗರುಡನನ್ನು ನೆನೆದೊಡನೆ ಗರುಡ ಬಂದನು. ಆ ಗರುಡನ ಮೇಲೇರಿ ಕುಂಡಿನಪುರಕ್ಕೆ ವೇಗದಿಂದ ಆಗಮಿಸಿದನು.

**ಪತತ್ರವಾಯುನಾಽಸ್ಯ ತೇ ನರೇಶ್ವರಾಃ ಪ್ರಪಾತಿತಾಃ ।**
**ಯದೇದೃಶಂ ಪತತ್ರಿಣೋ ಬಲಂ ಹರೇಃ ಕಿಮುಚ್ಯತೇ ॥ ೫ ॥**

ಪದಚ್ಛೇದ :- ಪತತ್ರ ವಾಯುನಾ, ಅಸ್ಯ, ನರೇಶ್ವರಾಃ, ಪ್ರಪಾತಿತಾಃ, ಯದಾ, ಈದೃಶಂ, ಪತತ್ರಿಣಃ, ಬಲಂ, ಹರೇಃ, ಕಿಮ್, ಉಚ್ಯತೇ ॥

**ಅರ್ಥ** :- **ಅಸ್ಯ** = ಈ ಗರುಡನ, **ಪತತ್ರ** = ರೆಕ್ಕೆಗಳ, **ವಾಯುನಾ** = ಗಾಳಿಯಿಂದ, **ತೇ** = ಆ, **ನರೇಶ್ವರಾಃ** = ರಾಜರುಗಳು, **ಪ್ರಪಾತಿತಾಃ** = ಬಿದ್ದರು, **ಯದಾ** = ಯಾವಾಗ, **ಈದೃಶಂ** = ಇಂಥ, **ಬಲಂ** = ಶಕ್ತಿಯು, **ಪತತ್ರಿಣಃ** = ಗರುಡನಿಗೆ (ಇರುವುದಾದರೆ), **ಹರೇಃ** = ಶ್ರೀಕೃಷ್ಣನ ಬಲಕ್ಕೆ, **ಕಿಮುಚ್ಯತೇ** = ಏನೆಂದು ಹೇಳಬೇಕು.

**ತಾತ್ಪರ್ಯ** :- ಶ್ರೀಕೃಷ್ಣನನ್ನು ಹೊತ್ತು ತನ್ನ ಎರಡು ರೆಕ್ಕೆಗಳನ್ನು ಬಡಿಯುತ್ತಾ ಗರುಡನು ಹೋಗುತ್ತಿರುವಾಗ ಗರುಡನ ರೆಕ್ಕೆಗಳ ಗಾಳಿಯಿಂದಲೇ ಎಷ್ಟೋ ರಾಜರುಗಳು ಬಿದ್ದರು. ಕೃಷ್ಣನ ವಾಹನವಾದ ಗರುಡನಿಗೆ ಇಷ್ಟು ಬಲ ಇದ್ದರೆ ಕೃಷ್ಣನ ಶಕ್ತಿಯನ್ನು ಏನೆಂದು ಬಣ್ಣಿಸಬೇಕು.

**ಕಿಮತ್ರ ನಃ ಕೃತಂ ಭವೇತ್ ಸುಖಾಯ ಹೀತಿ ತೇಽಬ್ರುವನ್ ।**
**ಅಥಾಬ್ರವೀಜ್ಜರಾಸುತೋ ಜಯೀ ಪಯೋಬ್ಧಿಮಂದಿರಃ ॥ ೬ ॥**

**ಪದಚ್ಛೇದ :- ಕಿಮ್, ಅತ್ರ, ನಃ ಕೃತಂ, ಭವೇತ್, ಸುಖಾಯ, ಇತಿ, ತೇ, ಅಬ್ರುವನ್ । ಅಥ, ಅಬ್ರವೀತ್, ಜರಾಸುತಃ, ಜಯೀ, ಪಯೋಬ್ಧಿಮಂದಿರಃ ॥**

**ಅರ್ಥ** :- **ಅತ್ರ** = ಇಲ್ಲಿ, **ನಃ** = ನಾವು (ರಾಜರು), **ಕಿಂ ಕೃತಂ** = ಏನು ಮಾಡಲ್ಪಟ್ಟರೆ, **ಸುಖಾಯ ಭವೇತ್** = ಒಳ್ಳೆಯದಾದೀತು?, **ಇತಿ** = ಎಂದು, **ತೇ** = ಆ ರಾಜರುಗಳು, **ಅಬ್ರುವನ್** = ಕೇಳಿದರು, **ಅಥ** = ಅನಂತರ, **ಜರಾಸುತಃ** = ಜರಾಸಂಧನು, **ಜಯೀ** = ವಿಜಯಿಯಾಗುತ್ತಿರುವ ಶ್ರೀಕೃಷ್ಣನು, **ಪಯೋಬ್ಧಿಮಂದಿರಃ** = ಕ್ಷೀರಸಾಗರವೇ ಮನೆಯಾಗಿವುಳ್ಳ ವಿಷ್ಣು (ಆಗಿರಬೇಕೆಂದು), **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ಸ್ವಯಂವರಕ್ಕೆ ಬಂದಂಥಹ ರಾಜರು ಏನು ಮಾಡಿದರೆ ಒಳಿತಾಗುತ್ತದೆ ಎಂದು ಪರಸ್ಪರ ಕೇಳುತ್ತಿರುವಾಗ, ಯಾವಾಗಲೂ ಎಲ್ಲರನ್ನು ಗೆಲ್ಲುತ್ತಿರುವ ಈ ಕೃಷ್ಣ ಕ್ಷೀರ ಸಮುದ್ರವೇ ಮನೆಯಾಗಿವುಳ್ಳ ವಿಷ್ಣುವೇ ಆಗಿರಬೇಕು ಎಂದು ಜರಾಸಂಧ ಹೇಳಿದನು.

**ಕಿಲೈಷ ಪಕ್ಷಿವಾಹನೋ ಯತಶ್ಚ ನಾನ್ಯಥಾ ಭವೇತ್ ।**
**ಜಿತಾ ವಯಂ ಚ ಸರ್ವಶೋಽಮುನೈಕಲೇನ ಸಂಯುಗೇ ॥ ೭ ॥**

**ಪದಚ್ಛೇದ :- ಕಿಲ, ಏಷಃ, ಪಕ್ಷಿವಾಹನಃ, ಯತಃ, ಚ, ನ, ಅನ್ಯಥಾ, ಭವೇತ್ । ಜಿತಾ, ವಯಂ, ಚ, ಸರ್ವಶಃ, ಅಮುನ, ಏಕಲೇನ, ಸಂಯುಗೇ ॥**

**ಅರ್ಥ** :- **ಯತಶ್ಚ** = ಯಾವ ಕಾರಣದಿಂದ, **ಏಷಃ** = ಈ ಶ್ರೀಕೃಷ್ಣನು, **ಪಕ್ಷಿವಾಹನಃ ಕಿಲ** = ಗರುಡವಾಹನನಾದ ವಿಷ್ಣುವಷ್ಟೇ, **ಅನ್ಯಥಾ** = ಇಲ್ಲದೆ ಹೋದರೆ (ವಿಷ್ಣುವಲ್ಲದಿದ್ದರೆ), **ನ ಭವೇತ್** = ಪಕ್ಷಿವಾಹನವಾಗುತ್ತಿರಲಿಲ್ಲ, **ಚ** = ಮತ್ತು, **ಏಕಲೇನ ಅಮುನಾ** = ಏಕಾಕಿಯಾದ ಇವನಿಂದ, **ವಯಂ** = ನಾವು, **ಸರ್ವಶಃ** = ಎಲ್ಲರು, **ಸಂಯುಗೇ** = ಯುದ್ಧದಲ್ಲಿ, **ಜಿತಾ** = ಜಯಿಸಿದ್ದೇವೆ.

**ತಾತ್ಪರ್ಯ** :- ಕೃಷ್ಣನು ವಿಷ್ಣುನಾಗಿಲ್ಲದಿದ್ದರೆ ಇಲ್ಲಿಗೆ ಗರುಡವಾಹನನಾಗಿ ಬರುತ್ತಿರಲಿಲ್ಲಾ. ಅಷ್ಟೇ ಅಲ್ಲ ಏಕಾಂಗಿಯಾದ ಇವನಿಂದ ಯುದ್ಧದಲ್ಲಿ ನಾವೆಲ್ಲರೂ ಅನೇಕ ಬಾರಿ ಸೋತಿರುವುದರಿಂದ ಕೃಷ್ಣನು ಸಾಕ್ಷಾತ್ ........... ಎಂದು ಜರಾಸಂಧನು ಹೇಳುತ್ತಿದ್ದಾನೆ.

**ಅನೇಕಶೋ ನ ಸಂಗತ್ಯೈರ್ಜಿತಃ ಕದಾಚಿದೇಷ ಹಿ ।**
**ಅಮುಷ್ಯ ಚಾಗ್ರಜಃ ಪುರಾ ನಿಹಂತುಮುದ್ಯತೋ ಹಿ ಮಾಮ್ ॥ ೮ ॥**

ಪದಚ್ಛೇದ :- **ಅನೇಕಶಃ, ನ, ಸಂಗತ್ಯೈಃ, ಜಿತಃ, ಕದಾಚಿತ್, ಏಷಃ । ಅಮುಷ್ಯ, ಚ, ಅಗ್ರಜಃ, ಪುರಾ, ನಿಹಂತುಂ, ಉದ್ಯತಃ, ಮಾಮ್ ॥**

**ಅರ್ಥ** :- **ಅನೇಕಶಃ** = ಬಹಳ, **ಸಂಗತ್ಯೈಃ** = ರಾಜರುಗಳಿಂದ, **ಕದಾಚಿತ್** = ಎಂದೂ, **ಏಷಃ** = ಇವನು, **ನ ಜಿತಃ** = ಜಯಿಸಲು ಆಗಲಿಲ್ಲವಷ್ಟೆ, **ಚ** = ಮತ್ತು, **ಅಮುಷ್ಯ** = ಈ ಕೃಷ್ಣನ, **ಅಗ್ರಜಃ** = ಅಣ್ಣನು, **ಪುರಾ** = ಹಿಂದೆ, **ಮಾಂ** = ನನ್ನನ್ನು, **ನಿಹಂತುಂ** = ಕೊಲ್ಲಲು, **ಉದ್ಯತಃ** = ಉದ್ಯುಕ್ತನಾಗಿದ್ದನಷ್ಟೆ.

**ತಾತ್ಪರ್ಯ** :- ಒಂದು ಸಲವು ಈ ದಾಮೋದರನನ್ನು ರಾಜರುಗಳು ಜಯಿಸಲಿಲ್ಲ, ಅಷ್ಟೇ ಅಲ್ಲ ಹಿಂದೆ ಇವನ ಅಣ್ಣನಾದ ಬಲರಾಮನು ನನ್ನನ್ನು ಕೊಲ್ಲಲು ಸಿದ್ಧನಾಗಿದ್ದ ಎಂದು ತನ್ನ ಮಾತನ್ನು ಮುಂದುವರಿಸುತ್ತಿದ್ದಾನೆ.

**ಅದೃಶ್ಯವಾಕ್ಯತೋಽತ್ಯಜತ್ ಪ್ರತಾಡನಾತ್ ಸುಪೀಡಿತಮ್ ।**
**ಕಿಮಸ್ಯ ತೂಚ್ಯತೇ ಬಲಂ ವಯಂ ತೃಣೋಪಮಾಃ ಕೃತಾಃ ।**
**ಸಮಸ್ತಶೋ ಮೃಧೇಮೃಧೇ ಹಿ ಯೇನ ಚಾಕ್ಷತೇನ ಹಾ ॥ ೯ ॥**

ಪದಚ್ಛೇದ :- **ಅದೃಶ್ಯ, ವಾಕ್ಯತಃ, ಅತ್ಯಜತ್, ಪ್ರತಾಡನಾತ್, ಸುಪೀಡಿತಂ । ಕಿಮ್, ಅಸ್ಯ ತು, ಉಚ್ಯತೇ, ಬಲಂ, ವಯಂ, ತೃಣೋಪಮಾಃ, ಕೃತಾಃ, ಸಮಸ್ತಶಃ, ಮೃಧೇ, ಮೃಧೇ, ಹಿ, ಯೇನ, ಚ, ಅಕ್ಷತೇನ, ಹಿ ॥**

**ಅರ್ಥ** :- **ಪ್ರತಾಡನಾತ್** = ಬಹಳ ಹೊಡೆತದಿಂದ, **ಸುಪೀಡಿತಂ** = ತುಂಬಾ ಪೀಡಿತನಾಗಿದ್ದ (ನನ್ನನ್ನು), **ಅದೃಶ್ಯ ವಾಕ್ಯತಃ** = ಅಶರೀರ ವಾಣಿಯಿಂದ, **ಅತ್ಯಜತ್** = ಬಿಟ್ಟು ಬಿಟ್ಟ, **ತು** = ಆದರೆ, **ಅಸ್ಯ** = ಇವನ, **ಬಲಂ** = ಸಾಮರ್ಥ್ಯವನ್ನು, **ಕಿಂ ಉಚ್ಯತೇ** = ಏನೆಂದು ಹೇಳಲಿ?, **ಚ** = ಮತ್ತು, **ಅಕ್ಷತೇನ** = ಗಾಯಗೊಳ್ಳದ, **ಯೇನ** = ಯಾವ ಕೃಷ್ಣನಿಂದ, **ಮೃಧೇ ಮೃಧೇ ಹಿ** = ಪ್ರತಿಯುದ್ಧದಲ್ಲಿಯೂ, **ಸಮಸ್ತಶಃ ವಯಂ** = ನಮ್ಮೆಲ್ಲರನ್ನು, **ತೃಣೋಪಮಾಃ** = ತೃಣಸಮಾನರನ್ನಾಗಿ, **ಕೃತಾಃ** = ಮಾಡಲ್ಪಟ್ಟಿದ್ದಾನೆ.

**ತಾತ್ಪರ್ಯ** :- ತುಂಬ ಪೆಟ್ಟುತಿಂದು ನರಳುತ್ತಿದ್ದ ನನ್ನನ್ನು ಆಕಾಶವಾಣಿಯಿಂದ ಬಿಟ್ಟ. ಆದರೆ ಶ್ರೀಕೃಷ್ಣನ ಸಾಮರ್ಥ್ಯವನ್ನು ಏನೇಂದು ಹೇಳಲಿ. ಪ್ರತಿಬಾರಿಯೂ ಯುದ್ಧದಲ್ಲಿ ನಮ್ಮನ್ನು ತೃಣಕ್ಕೆ ಸಮಾನರನ್ನಾಗಿ ಮಾಡಿ ಸೋಲಿಸಿದ್ದಾನೆ.

**ಕಿಮತ್ರ ಕುರ್ವತಾಂ ಸುಖಂ ಭವೇದುದೀರ್ಣಸಂಕಟೇ ।**
**ಇತಿ ಬ್ರುವನ್ನವಾಙ್ ಮುಖಂ ನೃಪಶ್ಚಕಾರ ವಿಚ್ಛವಿ ॥ ೧೦ ॥**

**ಪದಚ್ಛೇದ** :- **ಕಿಂ, ಅತ್ರ, ಕುರ್ವತಾಂ, ಸುಖಂ, ಭವೇತ್, ಉದೀರ್ಣಸಂಕಟೇ, ಇತಿ, ಬ್ರುವನ್, ಅವಾಙ್ಮುಖಂ, ನೃಪಃ, ಚಕಾರ, ವಿಚ್ಛವಿಃ ॥**

**ಅರ್ಥ** :- **ಅತ್ರ** = ಇಲ್ಲಿ, **ಉದೀರ್ಣಸಂಕಟೇ** = ಮಹಾಸಂಕಟದಿಂದ ಪಾಲಾಗಲು, **ಸುಖಂ ಭವೇತ್** = ಸುಖವು ಸಿದ್ಧಿಸಲು, **ಕಿಂ ಕುರ್ವತಾಂ** = ಏನು ಮಾಡಲಿ?, **ಇತಿ** = ಎಂದು, **ಬ್ರುವನ್** = ಹೇಳುತ್ತಾ, **ನೃಪಃ** = ಜರಾಸಂಧನು, **ವಿಚ್ಛವಿಃ** = ಕಳೆಗುಂದಿ, **ಅವಾಙ್ಮುಖಂ ಚಕಾರ** = ಮೊರೆಯನ್ನು ತಗ್ಗಿಸಿದನು.

**ತಾತ್ಪರ್ಯ** :- ಜರಾಸಂಧನು ಈಗ ಬಂದೊದಗಿರುವ ಸಂಕಟದಿಂದ ಪಾರಾಗಿ ಸುಖವಾಗಿರಬೇಕಾದರೆ ಏನು ಮಾಡಬೇಕು ಎಂದು ಹೇಳುತ್ತಾ ಕಳೆಗುಂದಿ ತಲೆಯನ್ನು ತಗ್ಗಿಸಿದನು.

**ಅಥಾऽಹ ಚೇದಿಭೂಪತಿಃ ಸದಂತವಕ್ರಕೋ ವಚಃ ।**
**ಪುರಾ ಹರೇರ್ಹಿ ಪಾರ್ಷದಃ ಪ್ರಸನ್ನಬುದ್ಧಿರೇಕದಾ ॥ ೧೧ ॥**

**ಪದಚ್ಛೇದ** :- **ಅಥ, ಆಹ, ಚೇದಿಭೂಪತಿಃ, ಸದಂತವಕ್ರಕಃ, ವಚಃ । ಪುರಾ, ಹರೇಃ, ಹಿ, ಪಾರ್ಷದಃ, ಪ್ರಸನ್ನಬುದ್ಧಿಃ, ಏಕವಾ ॥**

**ಅರ್ಥ** :- **ಅಥ** = ಅನಂತರ, **ಸದಂತವಕ್ರಕಃ** = ದಂತವಕ್ರ ಸಹಿತನಾಗಿ, **ಚೇದಿಭೂಪತಿಃ** = ಶಿಶುಪಾಲರು, **ವಚಃ ಆಹಾ** = ಮಾತನಾಡಿದರು, **ಪುರಾ** = ಹಿಂದೆ, **ಹರೇಃ** = ಶ್ರೀಹರಿಯ, **ಪಾರ್ಷದಃ ಹಿ** = ಪರಿವಾರದವರಾಗಿದ್ದರಷ್ಟೆ (ಆದ್ದರಿಂದ), **ಏಕದಾ** = ಒಮ್ಮೊಮ್ಮೆ, **ಪ್ರಸನ್ನಬುದ್ಧಿಃ** (ಭವತಿ) ನಿರ್ಮಲ ಚಿತ್ತರಾಗುತ್ತಿದ್ದರು.

ತಾತ್ಪರ್ಯ :- ಆಗ ಶಿಶುಪಾಲ ದಂತವಕ್ರರು ಮಾತನಾಡಿದರು. ಇವರೀರ್ವರು ಶ್ರೀಹರಿ ದ್ವಾರಪಾಲಕರಾಗಿದ್ದರಿಂದ ಹಿಂದೆ ಕೆಲವೊಮ್ಮೆ, ಒಳ್ಳೆಯ ಬುದ್ಧಿ ಇವರಿಗೆ ಬರುತ್ತಿತ್ತು.

**ಶೃಣುಷ್ವ ರಾಜಸತ್ತಮ ಪ್ರಭುಂ ಶಿವಸ್ವಯಂಭುವೋಃ ।**
**ಹರಿಂ ವದಂತಿ ಕೇಚಿದಪ್ಯದೋ ಭವೇನ್ನ ವೈ ಮೃಷಾ ॥ ೧೨ ॥**

ಪದಚ್ಛೇದ :- ಶೃಣುಷ್ವ , ರಾಜಸತ್ತಮ, ಪ್ರಭುಂ, ಶಿವಸ್ವಯಂಭುವೋಃ । ಹರಿಂ, ವದಂತಿ, ಕೇಚಿತ್, ಅಪಿ, ಅದಃ, ಭವೇತ್, ನ, ವೈ, ಮೃಷಾ ॥

ಅರ್ಥ :- ರಾಜಸತ್ತಮ = ಎಲೈ ರಾಜಶ್ರೇಷ್ಠನಾದ ಜರಾಸಂಧನೆ, ಶೃಣುಷ್ವ = ಕೇಳು, ಹರಿಂ = ಶ್ರೀಹರಿಯನ್ನು, ಶಿವ ಸ್ವಯಂ ಭುವೋಃ ಅಪಿ = ಶಿವ ಬ್ರಹ್ಮರಿಗೂ, ಪ್ರಭುಂ = ಸ್ವಾಮಿಯೆಂದು, ಕೇಚಿದಪಿ = ಕೆಲವರೂ ವದಂತಿ = ಹೇಳುತ್ತಾರೆ, ಅದಃ = ಅದು, ನ ವೈ ಮೃಷಾಭವೇತ್ = ಸುಳ್ಳಾಗಿರಲಾರದು.

ತಾತ್ಪರ್ಯ :- ಶಿಶುಪಾಲ ದಂತವಕ್ರರು ಜರಾಸಂಧನನ್ನು ಕುರಿತು ಹೇ ರಾಜಸತ್ತಮ ಶ್ರೀಹರಿಯನ್ನು ಕೆಲವರು ಶಿವಬ್ರಹ್ಮರಿಗೆ ಸ್ವಾಮಿಯೆಂದು ಹೇಳುತ್ತಾರೆ. ಈ ಮಾತು ಸುಳ್ಳಾಗಿರಲು ಸಾಧ್ಯವಿಲ್ಲ ಎಂದು.

**ತಥಾಽಽವಯೋಶ್ಚ ದರ್ಶನೇ ಭವೇತ್ ಕದಾಚಿದೂರ್ಜಿತಾ ।**
**ಅಮುಷ್ಯ ಭಕ್ತಿರನ್ಯಥಾ ಪುನಶ್ಚ ಜಾಯತೇ ಕ್ರುಧಾ ॥ ೧೩ ॥**

ಪದಚ್ಛೇದ :- ತಥಾ, ಆವಯೋಃ, ಚ, ದರ್ಶನೇ, ಭವೇತ್, ಕದಾಚಿತ್, ಊರ್ಜಿತಾ । ಅಮುಷ್ಯ, ಭಕ್ತಿಃ, ಅನ್ಯಥಾ, ಪುನಃ, ಚ, ಜಾಯತೇ, ಕ್ರುಧಾ ॥

ಅರ್ಥ :- ತಥಾ = ಹಾಗೆಯೇ, ದರ್ಶನೇ = ಶ್ರೀಕೃಷ್ಣನನ್ನು ನೋಡುತ್ತಿರಲು, ಆವಯೋಃ ಚ = ನಮಗಿಬ್ಬರಿಗೂ, ಕದಾಚಿತ್ = ಕೆಲವೊಮ್ಮೆ, ಊರ್ಜಿತಾ = ಒಳ್ಳೆಯ, ಭಕ್ತಿಃ = ಭಕ್ತಿಯು, ಅಮುಷ್ಯ = ಕೃಷ್ಣನಲ್ಲಿ, ಭವೇತ್ = ಮೂಡುತ್ತದೆ, ಪುನಃ = ಅನಂತರ, ಅನ್ಯಥಾ = ಭಕ್ತಿಯ ಅಭಾವವೂ, ಚ = ಮತ್ತು, ಕ್ರುಧಾ = ದ್ವೇಷವು, ಜಾಯತೇ = ಉಂಟಾಗುತ್ತದೆ.

**ತಾತ್ಪರ್ಯ** :- ಶಿಶುಪಾಲ ದಂತವಕ್ರರು ಹೇಳುತ್ತಿದ್ದರೆ, ನಮಗಿಬ್ಬರಿಗೆ ಕೆಲವೊಮ್ಮೆ ಕೃಷ್ಣನನ್ನು ನೋಡಿದಾಗ ಭಕ್ತಿ ಕೆಲವೊಮ್ಮೆ ದ್ವೇಷ ಉಂಟಾಗುತ್ತದೆ ಎಂದು.

**ನ ಕಾರಣಂ ಚ ವಿದ್ಮಹೇ ನ ಸಂಶಯಃ ಪರೋ ಹರಿಃ ।**
**ವ್ರಜಾಮ ತಂ ಸುಖಾರ್ಥಿನೋ ವಯಂ ವಿಹಾಯ ಶತ್ರುತಾಮ್ ॥ ೧೪ ॥**

**ಪದಚ್ಛೇದ** :- ನ, ಕಾರಣಂ, ಚ, ವಿದ್ಮಹೇ, ನ, ಸಂಶಯಃ, ಪರಃ, ಹರಿಃ । ವ್ರಜಾಮ, ತಂ, ಸುಖಾರ್ಥಿನಃ, ವಯಂ, ವಿಹಾಯ, ಶತ್ರುತಾಂ ॥

**ಅರ್ಥ** :- **ಕಾರಣಂ** = ಕಾರಣವನ್ನು, **ನ ಚ ವಿದ್ಮಹೇ** = ತಿಳಿದಿಲ್ಲ, **ಹರಿಃ** = ಕೃಷ್ಣನು, **ಪರಃ** = ಸರ್ವೋತ್ತಮ (ಎಂಬ ವಿಷಯದಲ್ಲಿ), **ನ ಸಂಶಯಃ** = ಸಂಶಯವಿಲ್ಲ, **ಸುಖಾರ್ಥಿನಃ** = ಸುಖವನ್ನು ಬಯಸುವ, **ವಯಂ** = ನಾವು, **ಶತ್ರುತಾಂ** = ಶತೃತ್ವವನ್ನು, **ವಿಹಾಯ** = ಬಿಟ್ಟು, **ತಂ** = ಅವನನ್ನು, **ವ್ರಜಾಮ** = ಸೇರೋಣ (ಶರಣು ಹೊಂದೋಣ).

**ತಾತ್ಪರ್ಯ** :- ಈ ರೀತಿಯ ಭಕ್ತಿ ಹಾಗೂ ದ್ವೇಷಕ್ಕೆ ಕಾರಣ ಏನೇಂದು ಗೊತ್ತಿಲ್ಲ, ಆದರೆ ಕೃಷ್ಣಮಾತ್ರ ಸರ್ವೋತ್ತಮನೆಂಬ ವಿಷಯದಲ್ಲಿ ಸಂಶಯವಿಲ್ಲ, ಸುಖಾರ್ಥಿಗಳಾದ ನಾವು ಕೃಷ್ಣನಲ್ಲಿ ಶತೃತ್ವವನ್ನು ಬಿಟ್ಟು ಅವನ ಪಕ್ಷಕ್ಕೆ ಸೇರೋಣ ಎಂದು ಹೇಳುತ್ತಿದ್ದಾರೆ.

**ಇದಂ ಹಿ ನಃ ಶುಭಪ್ರದಂ ನಚಾನ್ಯಥಾ ಶುಭಂ ಕ್ವಚಿತ್ ।**
**ಇತೀರಿತೋ ಜರಾಸುತೋ ದದರ್ಶ ತೌ ದಹನ್ನಿವ ॥ ೧೫ ॥**

**ಪದಚ್ಛೇದ** :- ಇದಂ, ಹಿ, ನಃ, ಶುಭಪ್ರದಂ, ನ, ಚ, ಅನ್ಯಥಾ, ಶುಭಂ, ಕ್ವಚಿತ್ । ಇತಿ, ಈರಿತಃ, ಜರಾಸುತಃ, ದದರ್ಶ, ತೌ, ದಹನ್, ಇವ ॥

**ಅರ್ಥ** :- **ಇದಂ ಹಿ** = ಇದಾದರು, **ನಃ** = ನಮಗೆ, **ಶುಭಪ್ರದಂ** = ಶುಭದಾಯಕವಾದೀತು, **ಅನ್ಯಥಾ ಚ** = ಬೇರೆ ರೀತಿಯಿಂದಾದರೂ, **ಶುಭಂ** = ಮಂಗಲವು, **ನ ಕ್ವಚಿತ್** = ಯಾವುದೂ ಇಲ್ಲ, **ಇತಿ** = ಈ ರೀತಿಯಾಗಿ, **ಈರಿತಃ** = ಹೇಳುತ್ತಿರುವಾಗ, **ಜರಾಸುತಃ** = ಜರಾಸುತನು, **ತೌ** = ಶಿಶುಪಾಲ ದಂತವಕ್ರರನ್ನು, **ದಹನ್ನಿವ** = ಸುಟ್ಟು ಬಿಡುವಂತೆ, **ದದರ್ಶ** = ನೋಡಿದನು.

ತಾತ್ಪರ್ಯ :- ಇದೇ ನಮಗೆ ಒಳ್ಳೆಯದು, ಇದನ್ನು ಬಿಟ್ಟು ಬೇರೆ ಯಾವುದು ಇಲ್ಲ. ಆದ್ದರಿಂದ ಕೃಷ್ಣನನ್ನೇ ಮೊರೆ ಹೋಗುವುದು ಉತ್ತಮ ಎಂದು ಹೇಳುತ್ತಿರುವ ಶಿಶುಪಾಲ ದಂತವಕ್ರರನ್ನು ಸುಟ್ಟು ಬಿಡುವವನಂತೆ ಜರಾಸಂಧನು ನೋಡಿದನು.

ಅಥ ಪ್ರಹಸ್ಯ ಸೌಭರಾಡ್ ವಚೋ ಜಗಾದ ಮಾಗಧಮ್ ।
ವಿನಿಂದ್ಯ ತೌ ಕ್ರುಧಾ ಸ್ಫುರನ್ ಕ್ರುಧಾ ಸ್ಫುರಂತಮೀಕ್ಷ್ಯ ಚ ॥ ೧೬ ॥

ಪದಚ್ಛೇದ :- ಅಥ, ಪ್ರಹಸ್ಯ, ಸೌಭರಾಟ್, ವಚಃ, ಜಗಾದ, ಮಾಗಧಮ್ । ವಿನಿಂದ್ಯ, ತೌ, ಕ್ರುಧಾ, ಸ್ಫುರನ್, ಕ್ರುಧಾ, ಸ್ಫುರಂತರಂ, ಈಕ್ಷ್ಯ, ಚ ॥

ಅರ್ಥ :- ಅಥ = ಅನಂತರ, ಕ್ರುಧಾ = ಕೋಪದಿಂದ, ಸ್ಫುರನ್ = ನಡುಗುತ್ತ, ತೌ = ಶಿಶುಪಾಲದಂತವಕ್ರರನ್ನು, ವಿನಿಂದ್ಯ = ನಿಂದಿಸಿ, ಪ್ರಹಸ್ಯ = ಅಪಹಾಸ್ಯ ಮಾಡಿ, ಕ್ರುಧಾ = ಕೋಪದಿಂದ, ಸ್ಫುರಂತಂ = ನಡುಗುತ್ತಿದ್ದ, ಮಾಗಧಂ = ಜರಾಸಂಧನನ್ನು, ಈಕ್ಷ್ಯ = ನೋಡಿ, ಸೌಭರಾಟ್ = ಸಾಲ್ವರಾಜನು, ವಚಃ ಜಗಾದ = ಮಾತನ್ನು ನುಡಿದ.

ತಾತ್ಪರ್ಯ :- ಹೀಗೆ ನುಡಿದ ಶಿಶುಪಾಲ ದಂತವಕ್ರರನ್ನು ಕೋಪದಿಂದ ನಿಂದಿಸಿ ಅಪಹಾಸ್ಯ ಮಾಡಿ ನಡುಗುತ್ತ ಇದ್ದ ಜರಾಸಂಧನನ್ನು ನೋಡಿ ಸಾಲ್ವ ಈ ರೀತಿ ಹೇಳಿದ.

ನ ತನ್ಮೃಷಾ ಹರಿಃ ಸ್ವಯಂ ಜನಾರ್ದನೋ ವಧಾಯ ನಃ ।
ಪ್ರಜಾತ ಏಷ ಯಾದವೋ ವಯಂ ಚ ದಾನವೇಶ್ವರಾಃ ॥ ೧೭ ॥

ಪದಚ್ಛೇದ :- ನ, ತತ್, ಮೃಷಾ, ಹರಿಃ, ಸ್ವಯಂ, ಜನಾರ್ದನ, ವಧಾಯ ನಃ । ಪ್ರಜಾತ, ಏಷಃ, ಯಾದವಃ, ವಯಂ, ಚ, ದಾನವೇಶ್ವರಾಃ ॥

ಅರ್ಥ :- ಜನಾರ್ದನಃ = ಶ್ರೀಕೃಷ್ಣನು, ಸ್ವಯಂ ಹರಿಃ = ಸಾಕ್ಷಾತ್ ಶ್ರೀಹರಿ, ಚ = ಮತ್ತು, ವಯಂ = ನಾವು, ದಾನವೇಶ್ವರಾಃ = ದಾನವರಿಗೆ ಅಧಿಪತಿಗಳು, ಏಷಃ = ಈ, ಯಾದವಃ = ಶ್ರೀಕೃಷ್ಣನು, ನಃ = ನಮ್ಮ, ವಧಾಯ = ನಾಷಕ್ಕಾಗಿ, ಪ್ರಜಾತ = ಹುಟ್ಟಿದ್ದಾನೆ, ತತ್ಮೃಷಾ ನ = ಎಂಬುದು ಸುಳ್ಳಲ್ಲ ಎಂದು.

**ತಾತ್ಪರ್ಯ** :- ಕೃಷ್ಣನು ಸಾಕ್ಷಾತ್ ಶ್ರೀಹರಿ ಎಂಬ ವಿಷಯ ಸುಳ್ಳಲ್ಲ, ನಾವು ರಾಕ್ಷಸೇಶ್ವರರು, ನಮ್ಮ ನಾಶಕ್ಕಾಗಿಯೇ ಶ್ರೀಕೃಷ್ಣನು ಹುಟ್ಟಿದ್ದಾನೆ.

**ಸ್ವಧರ್ಮ ಏಷ ನಃ ಸದಾ ದೃಢಪ್ರತೀಪತಾ ಹರೌ ।**
**ಸ್ವಧರ್ಮಿಣೋ ಹತಾ ಅಪಿ ಪ್ರಯಾಮ ಸದ್ಗತಿಂ ಧ್ರುವಮ್ ॥ ೧೮ ॥**

**ಪದಚ್ಛೇದ** :- ಸ್ವಧರ್ಮ, ಏಷಃ, ನಃ, ಸದಾ, ದೃಢಪತೀಪತಾ, ಹರೌ । ಸ್ವಧರ್ಮಿಣಃ, ಹತಾ, ಅಪಿ, ಪ್ರಯಾಮ, ಸದ್ಗತಿಂ, ಧ್ರುವಮ್ ॥

**ಅರ್ಥ** :- **ಹರೌ** = ಶ್ರೀಹರಿಯಲ್ಲಿ, **ಸದಾ** = ಯಾವಾಗಲು, **ದೃಢಪ್ರತೀಪತಾ** = ದೃಢವಾದ ದ್ವೇಷ, **ನಃ** = ನಮಗೆ, **ಏಷಃ ಸ್ವಧರ್ಮಃ** = ಇದು ಸ್ವಧರ್ಮವಾಗಿದೆ, **ಸ್ವಧರ್ಮಿಣಃ** = ಸ್ವಧರ್ಮಿಗಳಾದ ನಾವು, **ಹತಾ ಅಪಿ** = ಹತರಾದರೂ ಕೂಡ, **ಧ್ರುವಂ** = ನಿಶ್ಚಯವಾಗಿ, **ಸದ್ಗತಿಂ** = ಸದ್ಗತಿಯನ್ನು, **ಪ್ರಯಾಮ** = ಹೊಂದುತ್ತೇವೆ.

**ತಾತ್ಪರ್ಯ** :- ಪರಮಾತ್ಮನಲ್ಲಿ ದೃಢವಾದ ದ್ವೇಷ ಮಾಡುವುದು ತಮ್ಮ ಧರ್ಮವಾಗಿದೆ. ಸ್ವಧರ್ಮಿಗಳಾದ ನಾವು ಕೃಷ್ಣನಿಂದ ನಾಶವಾದರೂ ಸದ್ಗತಿಯನ್ನು ಪಡೆಯುತ್ತೇವೆ.

**ಶಿವಶ್ಚ ನಃ ಪರಾ ಗತಿರ್ಗುರುರ್ಭವಾನರಿರ್ಹರೇಃ ।**
**ಇತೀರಿತಃ ಸ ಮಾಗಧೋ ಜಗಾದ ಸಾಧುಸಾಧ್ವಿತಿ ॥ ೧೯ ॥**

**ಪದಚ್ಛೇದ** :- ಶಿವಃ, ಚ, ನಃ, ಪರಾಗತಿಃ, ಗುರುಃ, ಭವಾನ್, ಅರಿಃ, ಹರೇಃ । ಇತಿ, ಈರಿತಃ, ಸಃ, ಮಾಗಧಃ, ಜಗಾಧ, ಸಾಧು, ಸಾಧು, ಇತಿ ॥

**ಅರ್ಥ** :- **ಶಿವಶ್ಚ** = ಶಿವನಾದರು, **ನಃ** = ನಮಗೆ, **ಪರಾಗತಿಃ** = ಪರದೇವತೆ, **ಭವಾನ್** = ನೀನು, **ಗುರುಃ** = ಗುರು, **ಹರಿಃ** = ಶ್ರೀಹರಿ, **ಅರಿಃ** = ಶತೃ, **ಇತಿ** = ಹೀಗೆ, **ಈರೀತಃ** = ಸಾಲ್ವ ಹೇಳುತ್ತಿರಲು, **ಸಃ** = ಆ, **ಮಾಗಧಃ** = ಜರಾಸಂಧನು, **ಸಾಧು ಸಾಧು ಇತಿ ಜಗಾದ** = ಸರಿಯಾದ ಮಾತು ಸರಿಯಾದ ಮಾತು ಎಂದು ಹೇಳಿದ.

ತಾತ್ಪರ್ಯ :- ಸಾಲ್ವನು ಜರಾಸಂಧನಿಗೆ ಶಿವನೇ ಪರದೇವತೆ, ನೀನೇ ನಮಗೆಲ್ಲ ಗುರು, ಕೃಷ್ಣನೇ ಶತ್ರು ಎಂದು ಹೇಳುತ್ತಿರುವಾಗ ಸರಿಯಾಗಿ ಹೇಳಿದೆ ಎಂದು ಹೇಳಿದ.

**ತಥೈವ ರುಗ್ಮಿಪೂರ್ವಕಾಃ ಕರೂಶಚೇದಿಪೌ ಚ ತೌ ।**
**ವಿನಿಶ್ಚಯಂ ಕುಬುದ್ಧಯೋ ಯುಧೇ ಚ ಚಕ್ರುರೂರ್ಜಿತಮ್ ॥ ೨೦ ॥**

ಪದಚ್ಛೇದ :- ತದಾ, ಏವ, ರುಗ್ಮೀ ಪೂರ್ವಕಾಃ, ಕರೂಶಚೇದಿಪೌ, ಚ, ತೌ, ವಿನಿಶ್ಚಯಂ, ಕುಬುದ್ಧಯಃ, ಯುಧೇ, ಚ, ಚಕ್ರುಃ, ಊರ್ಜಿತಮ್ ॥

ಅರ್ಥ :- ತದಾ ಏವ = ಹಾಗೆಯೇ, ರುಗ್ಮಿ ಪೂರ್ವಕಾಃ = ರುಗ್ಮಿಯೇ ಮೊದಲಾದವರು, ಚ = ಮತ್ತು, ತೌ = ಆ, ಕರೂಶಚೇದಿಪೌ = ದಂತವಕ್ರ ಶಿಶುಪಾಲರು (ಹೇಳಿದರು). ಕುಬುದ್ಧಯಃ = ದುರ್ಬುದ್ಧಿ ಉಳ್ಳ ಜರಾಸಂಧಾದಿಗಳು, ಯುಧೇ ಚ = ಯುದ್ಧ ಮಾಡಬೇಕೆಂದು, ವಿನಿಶ್ಚಯಂ = ದೃಢನಿಶ್ಚಯವನ್ನು, ಚಕ್ರುಃ = ಮಾಡಿದರು.

ತಾತ್ಪರ್ಯ :- ರುಗ್ಮಿ ದಂತ ವಕ್ರ, ಶಿಶುಪಾಲರು, ಹಿಂದೆ ಹೇಳಿದ ಹಾಗೆ ಹೇಳಿದರು. ಆದರೆ ಕೆಟ್ಟ ಬುದ್ಧಿಯುಳ್ಳ ಜರಾಸಂಧ ಕೃಷ್ಣನೊಡನೆ ಯುದ್ಧ ಮಾಡಲೇಬೇಕು ಎಂದು, ತೀರ್ಮಾನ ಮಾಡಿದ.

**ಸದಾ ಪ್ರತೀಪಕಾರಿಣೌ ಭವಾವ ಕೃಷ್ಣ ಇತ್ಯಪಿ ।**
**ಗುರೋಃ ಪ್ರಸಾದಮಾಪ್ನುತಾಂ ಕರೂಶಚೇದಿಭೂಭೃತೌ ॥ ೨೧ ॥**

ಪದಚ್ಛೇದ :- ಸದಾ, ಪ್ರತೀಪಕಾರಿಣೌ, ಭವಾವ, ಕೃಷ್ಣ, ಇತಿ, ಅಪಿ । ಗುರೋಃ, ಪ್ರಸಾದಮ್, ಅಪ್ನುತಾಂ, ಕರೂಶಚೇದಿಭೂಭೃತೌ ॥

ಅರ್ಥ :- ಕೃಷ್ಣ ಇತ್ಯಪಿ = ಕೃಷ್ಣ ಎಂಬುವನಿಗೆ, ಸದಾ = ಯಾವಾಗಲು, ಪ್ರತೀಪಕಾರಿಣೌ = ವಿರೋಧಿಗಳು, ಭವಾವ = ಆಗುವೆವು (ಎಂದು), ಕರೂಶಚೇದಿಭೂಭೃತೌ = ಶಿಶುಪಾಲ ದಂತವಕ್ರರು, ಗುರೋಃ = ಗುರುವಾದ, ಜರಾಸಂಧನ ಪ್ರಸಾದಮ್ = ಅನುಗ್ರಹವನ್ನು, ಅಪ್ನುತಾಂ = ಪಡೆದರು.

**ತಾತ್ಪರ್ಯ** :- ನಾವಿಬ್ಬರೂ ಕೂಡ ಕೃಷ್ಣನಿಗೆ ವಿರೋಧ ಕಾರಿಗಳು ಆಗುತ್ತೇವೆ ಎಂದು ಶಿಶುಪಾಲ ದಂತವಕ್ರರು ಪ್ರತಿಜ್ಞೆ ಮಾಡುವ ಮೂಲಕ ಗುರುವಾದ ಜರಾಸಂಧನ ಅನುಗ್ರಹಕ್ಕೆ ಪಾತ್ರರಾದರು.

**ಪುನಶ್ಚ ತೇ ತ್ವಮಂತ್ರಯನ್ ಸಹೈವ ಪಾಪಬುದ್ಧಯಃ ।**
**ಧ್ರುವಂ ಸಮಾಗತೋ ಹರಿರ್ಲಭೇತ ರುಗ್ಮಿಣೀಮಿಮಾಮ್ ॥ ೨೨ ॥**

**ಪದಚ್ಛೇದ** :- **ಪುನಃ, ಚ, ತೇ, ತು, ಅಮಂತ್ರಯನ್, ಸಹ, ಏವ, ಪಾಪಬುದ್ಧಯಃ । ಧ್ರುವಂ, ಸಮಾಗತಃ, ಹರಿಃ, ಲಭೇತ, ರುಗ್ಮಿಣಿಮ್, ಇಮಾಮ್ ॥**

**ಅರ್ಥ** :- **ಪಾಪಬುದ್ಧಯಃ** = ದುಷ್ಟ ಬುದ್ಧಿಯುಳ್ಳ, **ತೇ ತು** = ಆ ಜರಾಸಂಧಾದಿಗಳಾದರು, **ಪುನಃ ಚ** = ಮತ್ತೇ, **ಸಹೈವ** = ಜೊತೆಗೂಡಿ, **ಅಮಂತ್ರಯನ್** = ಮಂತ್ರಾಲೋಚನೆ ಮಾಡಿದರು (ಆಲೋಚಿಸಿದರು), **ಹರಿಃ** = ಕೃಷ್ಣನು, **ಸಮಾಗತಃ** = ಸ್ವಯಂವರಕ್ಕೆ ಬಂದರೆ, **ಧ್ರುವಂ** = ನಿಶ್ಚಯವಾಗಿಯೂ, **ಇಮಾಂ** = ಈ, **ರುಗ್ಮಿಣಿಂ** = ರುಗ್ಮಿಣಿಯನ್ನು, **ಲಭೇತ** = ಪಡೆಯುತ್ತಾನೆ (ಎಂದು).

**ತಾತ್ಪರ್ಯ** :- ಕುಬುದ್ಧಿಯುಳ್ಳ ಜರಾಸಂಧನೆ ಮೊದಲಾದವರು. ಶ್ರೀಕೃಷ್ಣನು ಸ್ವಯಂವರಕ್ಕೆ ಬಂದರೆ ರುಗ್ಮಿಣಿ ದೇವಿಯನ್ನು ಖಂಡಿತವಾಗಿಯೂ ವರಿಸುವನು ಎಂದು ಎಲ್ಲರೂ ಸೇರಿ ವಿಚಾರ ಮಾಡಿದರು.

**ಅಯಂ ತ್ರಿಲೋಕಸುಂದರೋಽಸುರೂಪಿಣೀ ಚ ರುಗ್ಮಿಣೀ ।**
**ಮುಖೇನ ಬಾಹುನಾಽಪ್ಯಯಂ ಸಮಸ್ತಲೋಕಜಿದ್ ವಶೀ ॥ ೨೩ ॥**

**ಪದಚ್ಛೇದ** :- **ಅಯಂ, ತ್ರಿಲೋಕಸುಂದರಃ, ಸುರೂಪಿಣೀ, ಚ, ರುಗ್ಮಿಣೀ । ಮುಖೇನ, ಬಾಹುನಾ, ಅಪಿ, ಅಯಂ, ಸಮಸ್ತ, ಲೋಕಜಿತ್, ವಶೀ ॥**

**ಅರ್ಥ** :- **ಅಯಂ** = ಈ ಕೃಷ್ಣನು, **ತ್ರಿಲೋಕ** = ಮೂರು ಲೋಕದಲ್ಲಿ, **ಸುಂದರಃ** = ಸುಂದರ, **ಚ** = ಮತ್ತು, **ರುಗ್ಮಿಣೀ** = ರುಗ್ಮಿಣಿಯು, **ಸುರೂಪಿಣೀ** = ಒಳ್ಳೆಯ ರೂಪವತಿ, **ಅಯಂ** = ಇವನು, **ಮುಖೇನ** = ಮುಖದಿಂದ, **ವಶೀ** = ಸಮಸ್ತ ಲೋಕವನ್ನು ವಶೀಕರಿಸಿದ್ದಾನೆ, **ಬಾಹುನಾ ಅಪಿ** = ಬಾಹುವಿನಿಂದಲೂ, **ಸಮಸ್ತ ಲೋಕಜಿತ್** = ಎಲ್ಲಾ ಲೋಕವನ್ನು ಗೆದ್ದಿದ್ದಾನೆ.

ತಾತ್ಪರ್ಯ :- ಕೃಷ್ಣ ರುಗ್ಮಿಣಿ ಇವರೀರ್ವರು ಮೂರು ಲೋಕದಲ್ಲಿ ಯಾರು ಪಡೆಯದ ಸೌಂದರ್ಯವನ್ನು ಪಡೆದು ತ್ರಿಲೋಕ ಸುಂದರ ಸುಂದರಿಯ- ರಾಗಿದ್ದಾರೆ. ಈ ವಾರ್ಷ್ಣೇಯ ಸಮಸ್ತ ಲೋಕವನ್ನು ಮುಖದಿಂದ ವಶೀಕರಿಸಿ- ಕೊಂಡು, ತನ್ನ ಬಾಹು ಬಲದಿಂದ ಎಲ್ಲಾ ಲೋಕದ ಜನರನ್ನು ಜಯಿಸಿದ್ದಾನೆ.

ಸಮಸ್ತವೇದಿನಾಂ ವರಂ ಜಿತಾರಿಮಗ್ರ್ಯರೂಪಿಣಮ್ ।
ಸಮಸ್ತಯೋಷಿತಾಂ ವರಾ ವ್ರಜೇತ ರುಗ್ಮಿಣೀ ಧ್ರುವಮ್ ॥ ೨೪ ॥

ಪದಚ್ಛೇದ :- ಸಮಸ್ತವೇದಿನಾಂ, ವರಂ, ಜಿತಾರಿಮ್, ಅಗ್ರ್ಯರೂಪಿಣಮ್ । ಸಮಸ್ತಯೋಷಿತಾಂ, ವರಾ, ವ್ರಜೇತ, ರುಗ್ಮಿಣಿ, ಧ್ರುವಮ್ ॥

ಅರ್ಥ :- ಸಮಸ್ತವೇದಿನಾಂ = ಸಮಸ್ತ - ಎಲ್ಲಾ, ವೇದಿನಾಂ - ತಿಳಿದವರಲ್ಲಿ (ಸರ್ವಜ್ಞರಲ್ಲಿ), ವರಂ = ಶ್ರೇಷ್ಠ, ಜಿತಾರಿಮ್ = ಶತೃಗಳ ಗೆದ್ದವ, ಅಗ್ರ್ಯರೂಪಿಣಂ = ಅತಿ ಸುಂದರನಾದ ಕೃಷ್ಣನನ್ನು, ಸಮಸ್ತಯೋಪಿತಾಂ = ಎಲ್ಲಾ ಸ್ತ್ರೀಯರಲ್ಲಿ, ವರಾಃ = ಉತ್ತಮಳಾದ, ರುಗ್ಮಿಣೀ = ರುಗ್ಮಿಣಿಯು, ಧ್ರುವಂ = ನಿಶ್ಚಿತವಾಗಿ, ವ್ರಜೇತ = ಸೇರುತ್ತಾಳೆ.

ತಾತ್ಪರ್ಯ :- ಸರ್ವಜ್ಞರಲ್ಲಿ ಶ್ರೇಷ್ಠ, ಶತೃಗಳನ್ನು ಪರಾಜಯಗೊಳಿಸಿದ ಅತ್ಯಂತ ಸ್ಫುರತ್ ರೂಪಿಯಾದ ಯದುಕುಲನಂದನನನ್ನು ಸ್ತ್ರೀಯರಲ್ಲಿ ಅಗ್ರ್ಯಳಾದ ರುಗ್ಮಿಣಿಯು ಅವಶ್ಯವಾಗಿ ವರಿಸುತ್ತಾಳೆ.

ವಯಂ ಚ ಮಾನಸಂಕ್ಷಯಂ ನಿತಾಂತಮಾಪ್ನುಮಸ್ತದಾ ।
ನ ಶಕ್ನುಮೋ ನಿವಾರಿತುಂ ಶರ್ರೈರಮುಂ ಕಥಂಚನ ॥ ೨೫ ॥

ಪದಚ್ಛೇದ :- ವಯಂ, ಚ, ಮಾನಸಂ ಕ್ಷಯಂ, ನಿತಾಂತಮ್, ಅಪ್ನುಮಃ, ತದಾ । ನ, ಶಕ್ನುಮಃ, ನಿವಾರಿತುಂ, ಶರೈಃ, ಅಮುಂ, ಕಥಂಚನ ॥

ಅರ್ಥ :- ತದಾ = ಆವಾಗ, ವಯಂ = ನಾವು, ನಿತಾಂತಂ = ಬಹಳ, ಮಾನಸಂ ಕ್ಷಯಂ = ಮಾನದ ಹಾನಿಯನ್ನು, ಅಪ್ನುಮಃ = ಹೊಂದಬೇಕಾಗು- ವುದು, ಚ = ಮತ್ತು, ಅಮುಂ = ಇವನನ್ನು, ಕಥಂ ಚ ನ = ಯಾವ

ರೀತಿಯಿಂದಲೂ, **ಶರೈಃ** = ಬಾಣಗಳಿಂದ, **ನಿವಾರಿತುಂ** = ತಡೆಯಲು, **ನ ಶಕ್ನುಮಃ** = ಶಕ್ತರಾಗಲಾರೆವು.

**ತಾತ್ಪರ್ಯ** :- ರುಗ್ಮಿಣಿಯು ಕೃಷ್ಣನನ್ನು ವರಿಸಿದಾಗ ನಾವೆಲ್ಲರೂ ತುಂಬಾ ಮಾನವನ್ನು ಕಳೆದುಕೊಳ್ಳಬೇಕಾಗಬಹುದು, ಮತ್ತು ಈ ಕೃಷ್ಣನನ್ನು ಬಾಣಗಳಿಂದ ಅಥವಾ ಯಾವ ರೀತಿಯಿಂದಲೂ ತಡೆಯಲು ಆಗುವುದಿಲ್ಲ.

**ಅತಃ ಸ್ವಯಂವರೇ ಯಥಾ ನ ಸಂಗಮೋ ಹರೇರ್ಭವೇತ್ ।**
**ತಥಾ ವಿಧಾನಮೇವ ನಃ ಸುನೀತಿರೂರ್ಜಿತಾ ಧ್ರುವಮ್ ॥ ೨೬ ॥**

**ಪದಚ್ಛೇದ** :- **ಅತಃ, ಸ್ವಯಂ ವರೇ, ಯಥಾ, ನ, ಸಂಗಮಃ, ಹರೇಃ, ಭವೇತ್ ।**
**ತಥಾ, ವಿಧಾನಮ್, ಏವ, ನಃ, ಸುನೀತಿಃ, ಊರ್ಜಿತಾ, ಧ್ರುವಮ್ ॥**

**ಅರ್ಥ** :- **ಅತಃ** = ಆದ್ದರಿಂದ, **ಸ್ವಯಂವರೇ** = ಸ್ವಯಂವರದಲ್ಲಿ, **ಯಥಾ** = ಯಾವ ರೀತಿಯಾಗಿ, **ಹರೇಃ** = ಕೃಷ್ಣನ, **ಸಂಗಮಃ** = ಸಮಾಗಮವು, **ನ ಭವೇತ್** = ಆಗಬಾರದು, **ತಥಾ ವಿಧಾನಂ ಏವ** = ಆ ರೀತಿ ಮಾಡುವುದೇ, **ನಃ** = ನಮ್ಮ, **ಧ್ರುವಂ** = ನಿಶ್ಚಿತವಾದ, **ಊರ್ಜಿತಾಃ** = ಗೆಲ್ಲುವ, **ಸುನೀತಿಃ** = ಒಳ್ಳೆಯ ನೀತಿ.

**ತಾತ್ಪರ್ಯ** :- ಸ್ವಯಂ ವರದಲ್ಲಿ ಕೃಷ್ಣನು ಬರದಂತೆ ಮಾಡುವುದು ನಮಗೆಲ್ಲ ಒಳ್ಳೆಯ ನೀತಿ ಎನಿಸುತ್ತದೆ ಎಂದು ಮಂತ್ರಾಲೋಚನೆ ಮಾಡುತ್ತಿದ್ದಾರೆ.

**ಅತೋ ನ ದೇಯಮಸ್ಯ ನಃ ಸುಭೂಭುಜಾಂ ಸಮಾಗಮೇ ।**
**ಕ್ವಚಿತ್ ಕದಾಚಿದಾಸನಂ ನಚಾರ್ಘ್ಯಪೂರ್ವಕೋ ವಿಧಿಃ ॥ ೨೭ ॥**

**ಪದಚ್ಛೇದ** :- **ಅತಃ, ನ, ದೇಯಮ್, ಅಸ್ಯ, ನಃ, ಸುಭೂಭುಜಾಂ, ಸಮಾಗಮೇ ।**
**ಕ್ವಚಿತ್, ಕದಾಚಿತ್, ಆಸನಂ, ನ, ಚ, ಅರ್ಘ್ಯಪೂರ್ವಕಃ, ವಿಧಿಃ ॥**

**ಅರ್ಥ** :- **ಅತಃ** = ಆದ್ದರಿಂದ, **ನಃ** = ನಮ್ಮ, **ಸುಭೂಭುಜಾಂ** = ರಾಜಾಧಿ ರಾಜರುಗಳ, **ಸಮಾಗಮೇ** = ಸಮ್ಮೇಳನದಲ್ಲಿ, **ಅಸ್ಯ** = ಈ ಶ್ರೀಕೃಷ್ಣನಿಗೆ, **ಕ್ವಚಿತ್** = ಎಲ್ಲಿಯೂ, **ಆಸನಂ** = ಆಸನವು, **ನ ದೇಯಂ** = ನೀಡಬಾರದು,

ಚ = ಮತ್ತು, ಕದಾಚಿತ್ = ಒಂದು ಸಲವೂ, ಅರ್ಘ್ಯಪೂರ್ವಕಃ = ಅರ್ಘ್ಯವೇ ಮೊದಲಾದ, ವಿಧಿಃ = ಉಪಚಾರವು, ನ (ದೇಯಂ) = ನೀಡಬಾರದು.

ತಾತ್ಪರ್ಯ :- ಸ್ವಯಂವರದಲ್ಲಿ ಕೃಷ್ಣನಿಗೆ ರುಗ್ಮಿಣಿ ಸಿಗಬಾರದೆಂದು ಮಂತ್ರಾಲೋಚನೆ ಮುಂದುವರಿಸುತ್ತಿದ್ದಾರೆ, ರಾಜಾಧಿರಾಜರು ಸೇರಿರುವ ಆ ಸಭೆಯಲ್ಲಿ ಶ್ರೀಕೃಷ್ಣನಿಗೆ ಕುಳಿತುಕೊಳ್ಳಲು ಆಸನ ಹಾಗೂ ಅರ್ಘ್ಯ ಪಾದ್ಯಾದಿ ಉಪಚಾರಗಳನ್ನು ಯಾರು ಮಾಡಬಾರದು ಎಂದು.

**ನಚಾಽಸ್ಯತಿ ಕ್ಷಿತೌ ಕ್ವಚಿದ್ವಿಮಾನಿತಃ ಪುರೋ ಹಿ ನಃ ।**
**ವರಾಸನಸ್ಥಭೂಭುಜಾಂ ಸ ಮಾನಿತೋ ಹಿ ದೈವತೈಃ ॥ ೨೮ ॥**

**ಪದಚ್ಛೇದ :– ನ, ಚ, ಅಸ್ಯ, ಇತಿ, ಕ್ಷಿತೌ, ಕ್ವಚಿತ್, ವಿಮಾನಿತಃ, ಪುರಃ, ಹಿ, ನಃ । ವರಾಸನಸ್ಥ, ಭೂಭುಜಾಂ, ಸಃ, ಮಾನಿತಃ, ಹಿ, ದೇವತೈಃ ॥**

**ಅರ್ಥ** :- **ಅಸ್ಯ** = ಈ, **ವರಾಸನಸ್ಥ** = ಉತ್ತಮ ಆಸನದಲ್ಲಿ ಕುಳಿತಿರುವ, **ಭೂಭುಜಾಂ** = ಭೂಪತಿಗಳಾದ, **ನಃ** = ನಮ್ಮ, **ಪುರಾಃ** = ಎದುರುಗಡೆ, **ವಿಮಾನಿತಃ** = ಅಪಮಾನಿತನಾಗಿ, **ಕ್ವಚಿತ್** = ಎಲ್ಲಿಯೂ, **ಕ್ಷಿತೌ** = ಭೂಮಿಯ ಮೇಲೆ, **ನ ಚ (ಉಪವಿಶತಿ)** = ಕುಳಿತುಕೊಳ್ಳುವುದಿಲ್ಲ, (**ಯತಃ** = ಏಕೆಂದರೆ), **ಸಃ** = ಅವನು, **ದೇವತೈಃ** = ದೇವತೆಗಳಿಂದ, **ಮಾನಿತಃ ಹಿ** = ಮಾನಿತನಾದವನಷ್ಟೆ.

ತಾತ್ಪರ್ಯ :- ಕೃಷ್ಣನಿಗೆ ಆಸನವಿಲ್ಲದಂತೆ ಮಾಡಿದರೆ, ಉತ್ತಮ ಆಸನದಲ್ಲಿ ಕುಳಿತಿರುವ ರಾಜಾಧಿರಾಜರುಗಳಾದ ನಮ್ಮ ಮುಂದೆ ಕೇವಲ ನೆಲದ ಮೇಲೆ ಅವಮಾನಿತನಾಗಿ ಕುಳಿತುಕೊಳ್ಳುವುದಿಲ್ಲ. ಏಕೆಂದರೆ ಇವನು ದೇವತೆಗಳಿಂದ ಗೌರವಿಸಲ್ಪಟ್ಟವನು (ಸರ್ವೋತ್ತಮ).

**ಸ ದರ್ಪಮಾನಸಂಯುತಃ ಕ್ರುಧಾ ಪ್ರಯಾಸ್ಯತಿ ಧ್ರುವಮ್ ।**
**ಪುರೀಂ ಸ್ವಕಾಂ ತತೋ ವಯಂ ವಿಧೇಮ ಚ ಸ್ವಯಂವರಮ್ ॥ ೨೯ ॥**

ಪದಚ್ಛೇದ :- ಸಃ, ದರ್ಪಮಾನಸಂಯುತಃ, ಕ್ರುಧಾ, ಪ್ರಯಾಸ್ಯತಿ, ಧ್ರುವಮ್ । ಪುರೀಂ, ಸ್ವಕಾಂ, ತತಃ, ವಯಂ, ವಿಧೇಮ, ಚ, ಸ್ವಯಂ ವರಮ್ ॥

**ಅರ್ಥ** :- **ಚ** = ಮತ್ತು, **ಕ್ರುಧಾ** = ಕೋಪದಿಂದ, **ದರ್ಪಮಾನ ಸಂಯುತಃ** = ಗರ್ವ ಮರ್ಯಾದಾದಿಂದ ಕೂಡಿದ, **ಸಃ** = ಆ ಕೃಷ್ಣನು, **ಸ್ವಕಾಂ** = ತನ್ನ, **ಪುರೀಂ** = ಪಟ್ಟಣವನ್ನು ಕುರಿತು, **ಧ್ರುವಂ** = ನಿಶ್ಚಿತವಾಗಿಯೂ, **ಪ್ರಯಾಸ್ಯತಿ** = ಹೋಗುವನು, **ತತಃ** = ಅನಂತರ, **ವಯಂ** = ನಾವು, **ಸ್ವಯಂವರಂ** = ಸ್ವಯಂ ವರವನ್ನು, **ವಿಧೇಮ** = ನೆಡೆಸೋಣ.

**ತಾತ್ಪರ್ಯ** :- ಗರ್ವ ಅಭಿಮಾನದಿಂದ ಕೂಡಿರುವ ಕೃಷ್ಣ ಸಿಟ್ಟುಬಂದು ತನ್ನ ನಗರಕ್ಕೆ ಹೋಗುವನು. ಆ ಮೇಲೆ ನಾವು ಸ್ವಯಂವರ ನಡೆಸೋಣ.

**ಇತಿ ಸ್ಮ ಸರ್ವಭೂಭೃತಾಂ ವಿನಿಶ್ಚಯಂ ಸಕೈಶಿಕಃ ।**
**ಕ್ರಥೋಽವಗಮ್ಯ ಭೀಷ್ಮಕಾನುಜೋಽಭ್ಯಯಾದ್ಧರಿಂದ ದ್ರುತಮ್ ॥ ೩೦ ॥**

**ಪದಚ್ಛೇದ** :- **ಇತಿ, ಸ್ಮ, ಸರ್ವಭೂಭೃತಾಂ, ವಿನಿಶ್ಚಯಂ, ಸಕೈಶಿಕಃ ಕ್ರಥಃ, ಅವಗಮ್ಯ, ಭಿಷ್ಮಕಾನುಜಃ, ಅಭ್ಯಯಾತ್, ಹರಿಂ, ದ್ರುತಮ್ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಸರ್ವಭೂಭುಜಾಂ** = ಎಲ್ಲಾ ರಾಜರುಗಳ, **ವಿನಿಶ್ಚಯಂ** = ನಿರ್ಣಯವನ್ನು, **ಭೀಷ್ಮಕಾನುಜಃ** = ಭೀಷ್ಮಕರಾಜನ ತಮ್ಮಂದಿರಾದ, **ಸಕೈಶಿಕಃ** = ಕೈಶಿಕನಿಂದ ಕೂಡಿದ, **ಕ್ರಥಃ** = ಕ್ರಥನು, **ಅವಗಮ್ಯ** = ತಿಳಿದು, **ದ್ರುತಂ** = ಶೀಘ್ರವಾಗಿ, **ಹರಿಂ** = ಕೃಷ್ಣನನ್ನು ಕುರಿತು, **ಅಭ್ಯಯಾತ್ ಸ್ಮ** = ಹೋದರಷ್ಟೆ.

**ತಾತ್ಪರ್ಯ** :- ಈ ರೀತಿಯಾಗಿ ನಿರ್ಣಯ ಕೈಗೊಂಡ ಎಲ್ಲಾ ಭೂಪತಿಗಳ ಮಾತನ್ನು ತಿಳಿಸಲು ಭೀಷ್ಮಕರಾಜನ ತಮ್ಮಂದಿರಾದ ಕ್ರಥ ಕೈಶಿಕರು ಕೃಷ್ಣನ ಸಮೀಪಕ್ಕೆ ನಡೆದರು.

ಪ್ರಣಮ್ಯ ಪಾದಪದ್ಮಯೋರ್ನಿಜಂ ಗೃಹಂ ಪ್ರವೇಶ್ಯ ಚ ।
ಮಹಾಸನಂ ಪ್ರದಾಯ ತೌ ಪ್ರಚಕ್ರತುರ್ವರಾರ್ಚನಮ್ ॥ ೩೧ ॥

ಪದಚ್ಛೇದ :- ಪ್ರಣಮ್ಯ, ಪಾದಪದ್ಮಯೋಃ, ನಿಜಂ, ಗೃಹಂ, ಪ್ರವೇಶ್ಯ, ಚ । ಮಹಾಸನಂ, ಪ್ರದಾಯ, ತೌ, ಪ್ರಚಕ್ರತುಃ, ವರಾರ್ಚನಮ್ ॥

**ಅರ್ಥ** :- **ತೌ** = ಕ್ರಥ ಕೈಶಿಕರಿಬ್ಬರು, **ಪಾದ ಪಾದ್ಮಯೋಃ** = ಕೃಷ್ಣನ ಪಾದಕಮಲಗಳಿಗೆ, **ಪ್ರಣಮ್ಯ** = ನಮಸ್ಕರಿಸಿ, **ಚ** = ಮತ್ತು, **ನಿಜಂ** = ತಮ್ಮ,

ಗೃಹಂ = ಮನೆಯನ್ನು, ಪ್ರವೇಶ್ಯ = ಪ್ರವೇಶ ಮಾಡಿಸಿ, ಮಾಹಾಸನಂ = ದೊಡ್ಡ ಆಸನವನ್ನು, ಪ್ರದಾಯ = ನೀಡಿ, ವರಾರ್ಚನಮ್ = ಉತ್ತಮವಾದ ಸತ್ಕಾರವನ್ನು, ಪ್ರಚಕ್ರತುಃ = ಮಾಡಿದರು.

ತಾತ್ಪರ್ಯ :- ಕ್ರಥ ಕೈಶಿಕರೀರ್ವರು ಕೃಷ್ಣನ ಪಾದಪಂಕಜಗಳಿಗೆ ವಂದಿಸಿ ತಮ್ಮ ಮನೆಗೆ ಕರೆದು, ಕುಳಿತುಕೊಳ್ಳಲು ಉತ್ತಮವಾದ ದೊಡ್ಡ ಸಿಂಹಾಸನವನ್ನು ನೀಡಿ ಉಪಚಾರಾದಿ ಸತ್ಕಾರವನ್ನು ಮಾಡಿದರು.

**ಅಥಾಽಗಮಚ್ಛತಕ್ರತೋರ್ವಚಃ ಪ್ರಗೃಹ್ಯ ಭೂಭುಜಃ ।**
**ಜರಾಸುತಾದಿಕಾನ್ ಪುಮಾನುವಾಚ ಚಾರ್ಥವದ್ ವಚಃ ॥ ೩೨ ॥**

ಪದಚ್ಛೇದ :- **ಅಥ, ಅಗಮತ್, ಶತಕ್ರತೋಃ, ವಚಃ, ಪ್ರಗೃಹ್ಯ, ಭೂಭುಜಃ । ಜರಾಸುತಾದಿಕಾನ್, ಪುಮಾನ್, ಉವಾಚ, ಚ, ಅರ್ಥವತ್, ವಚಃ ॥**

ಅರ್ಥ :- **ಅಥ** = ಅನಂತರ, **ಶತಕ್ರತೋಃ** = ಇಂದ್ರನ, **ವಚಃ** = ಮಾತನ್ನು, **ಪ್ರಗೃಹ್ಯ** = ಸ್ವೀಕರಿಸಿ, **ಭೂಭುಜಃ** = ದೇವದೂತ, **ಅಗಮತ್** = ಬಂದ, **ಚ** = ಮತ್ತು, **ಜರಾಸುತಾದಿಕಾನ್** = ಜರಾಸಂಧನೇ ಮೊದಲಾದ, **ಪುಮಾನ್** = ರಾಜರುಗಳಿಗೆ, **ಅರ್ಥವತ್** = ಅರ್ಥಗರ್ಭಿತವಾದ, **ವಚಃ** = ಮಾತನ್ನು, **ಉವಾಚ** = ಹೇಳಿದನು.

ತಾತ್ಪರ್ಯ :- ಒಬ್ಬ ದೇವದೂತ, ಇಂದ್ರನ ಸಂದೇಶವನ್ನು ಹೊತ್ತು ತಂದು ಜರಾಸಂಧಾದಿ ರಾಜರುಗಳಿಗೆ ಅರ್ಥಪೂರ್ಣವಾದ ಮಾತನ್ನು ಹೇಳಿದನು.

**ಅಹಂ ಪ್ರಿಯಃ ಶಚೀಪತೇಃ ಸದಾಽಸ್ಯ ಚಾಕ್ಷಿಗೋಚರಃ ।**
**ಸುರೇಂದ್ರ ಆಜ್ಞಯಾಽವದನ್ನೃಪಾನ್ ವ ಈಶ್ವರೋ ಹಿ ಸಃ ॥ ೩೩ ॥**

ಪದಚ್ಛೇದ :- **ಅಹಂ, ಪ್ರಿಯಃ, ಶಚೀಪತೇಃ, ಸದಾ, ಅಸ್ಯ, ಚಾಕ್ಷಿಗೋಚರಃ । ಸುರೇಂದ್ರ, ಆಜ್ಞಯಾ, ಅವದತ್ಂ ನೃಪಾನ್, ವಃ, ಈಶ್ವರಃ, ಹಿ, ಸಃ ॥**

ಅರ್ಥ :- **ಅಹಂ** = ನಾನು, **ಶಚೀಪತೇಃ** = ದೇವೇಂದ್ರನಿಗೆ, **ಪ್ರಿಯಃ** = ಪ್ರೀತಿಪಾತ್ರನು, **ಚ** = ಮತ್ತು, **ಸದಾ** = ಯಾವಾಗಲೂ, **ಅಸ್ಯ** = ಇಂದ್ರನ, **ಅಕ್ಷಿಗೋಚರಃ** = ಕಣ್ಣು ಮುಂದಿರುವವ, **ಸಃ** = ಆ ದೇವೇಂದ್ರನು, **ವಃ** =

ನಿಮಗೆ, **ಈಶ್ವರಃ ಹಿ** = ಒಡೆಯನಷ್ಟೆ, **ಸುರೇಂದ್ರ** = ದೇವೇಂದ್ರನು, **ನೃಪಾನ್** = ರಾಜರನ್ನು ಕುರಿತು, **ಆಜ್ಞಯಾ** = ಆಜ್ಞಾರೂಪವಾಗಿ, **ಅವದತ್** = ಹೇಳಿದ್ದಾನೆ.

**ತಾತ್ಪರ್ಯ** :- ದೇವದೂತನು ತನ್ನ ಮಾತನ್ನು ಮುಂದುವರಿಸುತ್ತಿದ್ದಾನೆ. ನಾನು ಇಂದ್ರನಿಗೆ ತುಂಬಾ ಪ್ರೀತಿ ಪಾತ್ರನಾದವನು ಯಾವಾಗಲು ಅವನ ಕಣ್ಣಮುಂದೆ ಇರುವವನು, ನಿಮಗೆಲ್ಲ ದೇವೇಂದ್ರ ಸ್ವಾಮಿಯಾಗಿರುವುದರಿಂದ ಈ ರೀತಿ ನಿಮಗೆಲ್ಲ ಅಪ್ಪಣೆ ಮಾಡಿದ್ದಾನೆ.

**ಸಮಸ್ತರಾಜಸತ್ಪತಿರ್ಹರಿರ್ನಚಾನ್ಯ ಇತ್ಯಪಿ ।**
**ವರಾಭಿಷೇಕಮೀಶಿತುಃ ಕುರುಧ್ವಮಾಶ್ವಸಂಶಯಮ್ ॥ ೩೪ ॥**

**ಪದಚ್ಛೇದ** :- ಸಮಸ್ತರಾಜಸತ್ಪತಿಃ, ಹರಿಃ, ನ, ಚ, ಅನ್ಯಃ, ಇತಿ, ಅಪಿ । ವರಾಭಿಷೇಕಮ್, ಈಶಿತುಃ, ಕುರುಧ್ವಮ್, ಆಶು, ಅಸಂಶಯಮ್ ॥

**ಅರ್ಥ** :- **ಸಮಸ್ತರಾಜಸತ್ಪತಿಃ** = ಎಲ್ಲಾ ರಾಜರಿಗೆ ಉತ್ತಮವಾದ ಪ್ರಭು ಶ್ರೀಕೃಷ್ಣ, **ಅನ್ಯಃ ಅಪಿ** = ಬೇರೆಯವರಾದರೂ, **ನ ಚ** = ಇಲ್ಲವಷ್ಟೆ, **ಅತಃ** = ಆದ್ದರಿಂದ, **ಅಸಂಶಯಂ** = ಸಂಶಯ ಪಡದೆ, **ಈಶಿತುಃ** = ಸ್ವಾಮಿಗೆ, **ವರಾಭಿಷೇಕಂ** = ಉತ್ತಮವಾದ ಪಟ್ಟಾಭಿಷೇಕವನ್ನು, **ಆಶು** = ಬೇಗನೆ, **ಕುರಧ್ವಂ** = ಮಾಡಿರಿ, **ಇತಿ** = ಎಂದು.

**ತಾತ್ಪರ್ಯ** :- ಎಲ್ಲಾ ನೃಪತಿಗಳಿಗೂ ಉತ್ತಮನಾದ ಸ್ವಾಮಿ ಶ್ರೀಕೃಷ್ಣನಾಗಿದ್ದಾನೆ. ಬೇರೆ ಯಾರೂ ಕೂಡ ಉತ್ತಮರಿಲ್ಲ, ಆದ್ದರಿಂದ ಸಂಶಯ ಪಡದೆ ಎಲ್ಲರಿಗೂ ಸ್ವಾಮಿಯಾದ ಶ್ರೀಕೃಷ್ಣನಿಗೆ ಬೇಗನೆ ಪಟ್ಟಾಭಿಷೇಕ ಮಾಡಿರಿ ಎಂದು ''ಚ'' ಮುಂದಿನ ಶ್ಲೋಕದಿಂದ ''ಅತಃ'' ಪದವನ್ನು ಅನುವರ್ತನೆ ಮಾಡಿಕೊಳ್ಳಬೇಕು.

**ಅತೋಽನ್ಯಥಾ ಶಿರಸ್ಯಹಂ ನಿಪಾತಯಾಮಿ ವೋಽಶನಿಮ್ ।**
**ಇತೀದಮಿಂದ್ರಶಾಸನಂ ಕುರುಧ್ವಮಿತ್ಯಸೌ ಯಯೌ ॥ ೩೫ ॥**

**ಪದಚ್ಛೇದ** :- ಅತಃ, ಅನ್ಯಥಾ, ಶಿರಸಿ, ಅಹಂ, ನಿಪಾತಯಾಮಿ, ವಃ, ಅಶನಿಮ್ । ಇತಿ, ಇದಂ, ಇಂದ್ರಶಾಸನಂ, ಕುರುಧ್ವಂ, ಇತಿ, ಅಸೌ, ಯಯೌ ॥

**ಅರ್ಥ** :- **ಅನ್ಯಥಾ** = ಹಾಗೆ ಮಾಡದಿದ್ದಲ್ಲಿ, **ವಃ** = ನಿಮ್ಮ, **ಶಿರಸಿ** = ತಲೆಯ ಮೇಲೆ, **ಅಹಂ** = ನಾನು, **ಅಶನಿಂ** = ವಜ್ರಾಯುಧವನ್ನು, **ನಿಪಾತಯಾಮಿ** = ಹಾಕುತ್ತೇನೆ, **ಇದಂ** = ಇದು, **ಇಂದ್ರಶಾಸನಂ** = ದೇವೇಂದ್ರನ ಅಪ್ಪಣೆ, **ಇತಿ** = ಈ ರೀತಿಯಾಗಿ, **ಕುರುಧ್ವಂ** = ನಡೆಯಿರಿ, **ಇತಿ** = ಎಂದು (ಹೇಳಿ), **ಅಸೌ** = ದೇವದೂತನು, **ಯಯೌ** = ಹೋದನು.

**ತಾತ್ಪರ್ಯ** :- ನಾನು ಹೇಳಿದ ಹಾಗೆ ನಡೆಯದಿದ್ದರೆ ನಿಮ್ಮ ತಲೆಯ ಮೇಲೆ ವಜ್ರಾಯುಧವನ್ನು ಪ್ರಹರಿಸುತ್ತೇನೆ ಎಂದು ಇಂದ್ರನ ಕಟ್ಟಪ್ಪಣೆಯಾಗಿದೆ. ಇಂದ್ರನು ಹೇಳಿದಂತೆ ನಡೆಯಿರಿ ಎಂದು ಹೇಳಿ ದೇವದೂತನು ಅಲ್ಲಿಂದ ಹೊರಟು ಹೋದನು.

**ತದೀರಿತಂ ನಿಶಮ್ಯ ತೇ ಪುನಃ ಸುತಪ್ತಚೇತಸಃ ।**
**ಬಭೂವುರೂಚಿರೇ ವಚಃ ಸುಗರ್ವಿತೋ ಹಿ ವಾಸವಃ ।। ೩೬ ।।**

**ಪದಚ್ಛೇದ** :- ತತ್, ಈರಿತಂ, ನಿಶಮ್ಯ, ತೌ, ಪುನಃ, ಸುತಪ್ತಚೇತಸಃ । ಬಭೂವುಃ, ಊಚಿರೇ, ವಚಃ, ಸುಗರ್ವಿತಃ, ಹಿ, ವಾಸವಃ ।।

**ಅರ್ಥ** :- **ತತ್** = ಅವನು, **ಈರಿತಂ** = ಹೇಳಿದ, **ವಚಃ** = ಮಾತನ್ನು, **ನಿಶಮ್ಯ** = ಕೇಳಿ, **ತೌ** = ಆ ರಾಜರು, **ಪುನಃ** = ಮತ್ತೆ, **ಸುತಪ್ತಚೇತಸಃ** = ಸಂತಪ್ತ ಚಿತ್ತರಾಗಿ, **ಬಭೂವುಃ** = ಅವರು, **ವಾಸವಃ ಹಿ** = ಇಂದ್ರನಾದರು, **ಸುಗರ್ವತಃ** = ಬಹಳ ಗರ್ವಿಷ್ಠನಾಗಿದ್ದಾನೆ (ಎಂದು), **ಊಚಿರೇ** = ಹೇಳಿದರು.

**ತಾತ್ಪರ್ಯ** :- ದೇವದೂತನ ಮಾತನ್ನು ಕೇಳಿ ರಾಜರು ಪುನಃ ಸಂತೃಪ್ತಚಿತ್ತರಾದರು. ಇಂದ್ರ ಮಾತ್ರ ಬಹಳ ಗರ್ವಿಷ್ಠನಾಗಿದ್ದಾನೆ ಎಂದುಕೊಂಡರು.

**ಪುರಾ ಬಿಭೇತಿ ನಃ ಸದಾ ಪ್ರತಿಪ್ರತಿ ಸ್ಮ ವಾಸವಃ ।**
**ಉತಾದ್ಯ ಕೃಷ್ಣಸಂಶ್ರಯಾದ್ ದೃಢಂ ವಿಭೀಷಯತ್ಯಸೌ ।। ೩೭ ।।**

**ಪದಚ್ಛೇದ** :- ಪುರಾ, ಬಿಭೇತಿ, ನಃ, ಸದಾ, ಪ್ರತಿಪ್ರತಿ, ಸ್ಮ, ವಾಸವಃ । ಉತಾ, ಅದ್ಯ, ಕೃಷ್ಣಸಂಶ್ರಯಾತ್, ದೃಢಂ, ವಿಭೀಷಯಂತಿ, ಅಸೌ ।।

**ಅರ್ಥ** :- **ವಾಸವಃ** = ದೇವೇಂದ್ರನು, **ಪುರಾ** = ಹಿಂದೆ, **ನಃ** = ನಮ್ಮ, **ಪ್ರತಿ ಪ್ರತಿ** = ಒಬ್ಬೊಬ್ಬರಿಗೂ, **ಸದಾ** = ಯಾವಾಗಲು, **ಬಿಭೇತಿ** = ಹೆದರುತ್ತಿದ್ದ, **ಉತಾ** = ಆದರೇ, **ಅದ್ಯ** = ಇಂದು, **ಕೃಷ್ಣಸಂಶ್ರಯಾತ್** = ಕೃಷ್ಣನ ಸಹಾಯದಿಂದ, **ಅಸೌ** = ಇವನು, **ದೃಢಂ** = ಚೆನ್ನಾಗಿ, (ನಃ = ನಮಗೆ), **ವಿಭೀಷಯತಿಸ್ಮ** = ಹೆದರಿಸುತ್ತಿದ್ದಾನಷ್ಟೆ.

**ತಾತ್ಪರ್ಯ** :- ಮೊದಲೆಲ್ಲ ದೇವೇಂದ್ರ ನಮಗೆ ಒಬ್ಬೊಬ್ಬರಿಗೂ ಹೆದರುತ್ತಿದ್ದ. ಈಗ ಶ್ರೀ ಕೃಷ್ಣನ ಸಹಾಯದಿಂದ ನಮ್ಮನ್ನು ಚೆನ್ನಾಗಿ ಹೆದರುಸುತ್ತಿದ್ದಾನೆ.

**ಅದೃಶ್ಯ ಏವ ದೇವರಾಡ್ ಯದಿ ಸ್ಮ ವಜ್ರಮುತ್ಸೃಜೇತ್ ।**
**ಭವೇಮ ಪೀಡಿತಾ ವಯಂ ವರಾದಮೃತ್ಯವೋಽಪಿ ಹಿ ॥ ೩೮ ॥**

**ಪದಚ್ಛೇದ** :- **ಅದೃಶ್ಯ, ಏವ, ದೇವರಾಟ್, ಯದಿ, ಸ್ಮ ವಜ್ರಮ್, ಉತ್ಸೃಜೇತ್ । ಭವೇಮ, ಪೀಡಿತಾಃ, ವಯಂ, ವರಾತ್, ಅಮೃತ್ಯವಃ, ಅಪಿ, ಹಿ ॥**

**ಅರ್ಥ** :- **ಅದೃಶ್ಯ ಏವ** = ಅದೃಶ್ಯನಾಗಿಯೇ, **ದೇವರಾಟ್** = ದೇವೇಂದ್ರನು, **ವಜ್ರಂ** = ವಜ್ರಾಯುಧವನ್ನು, **ಯದಿ** = ಒಂದುವೇಳೆ, **ಉತ್ಸೃಜೇತ್** = ಎಸೆದರೆ, **ವಯಂ** = ನಾವು, **ವರಾತ್** = ವರದಿಂದ, **ಅಮೃತ್ಯವಃ ಅಪಿ** = ಮರಣ ರಹಿತರಾಗಿದ್ದರೂ, **ಪೀಡಿತಾಃ** = ಪೀಡಿತರಾಗಿ, **ಭವೇಮ ಹಿ** = ಆಗಬಹುದಷ್ಟೆ.

**ತಾತ್ಪರ್ಯ** :- ಇಂದ್ರ ಯಾರಿಗೂ ಕಾಣದಂತೆ ವಜ್ರಾಯುಧವನ್ನು ಪ್ರಯೋಗಿಸಿದರೆ ನಾವು ವರದ ಬಲದಿಂದ ಮರಣ ರಹಿತರಾಗಿದ್ದರೂ ವಜ್ರಾಯುಧದ ಪ್ರಯೋಗದಿಂದ ಪೀಡಿತರಾಗಬಹುದು.

**ಪುರಾ ದಿವಿಸ್ಥಿತಸ್ಯ ಚ ಪ್ರಮರ್ದನೇ ವಯಂ ಕ್ಷಮಾಃ ।**
**ಉತಾದ್ಯ ಯದ್ಯಮುಂ ವಯಂ ವ್ರಜೇಮ ಕೃಷ್ಣ ಏಷ್ಯತಿ ॥ ೩೯ ॥**

**ಪದಚ್ಛೇದ** :- **ಪುರಾ, ದಿವಿಸ್ಥಿತಸ್ಯ, ಚ, ಪ್ರಮರ್ದನೇ, ಕ್ಷಯಂ, ಪಮಾಃ । ಉತಾ, ಅದ್ಯ, ಯದಿ, ಅಮುಂ, ವಯಂ, ವ್ರಜೇಮ, ಕೃಷ್ಣಃ, ಏಷ್ಯತಿ ॥**

**ಅರ್ಥ** :- ದಿವಿ = ಸ್ವರ್ಗದಲ್ಲಿ, **ಸ್ಥಿತಸ್ಯ ಚ** = ಇರುವ (ಇಂದ್ರನ), **ಪ್ರಮರ್ದನೆ** = ಮರ್ದನ ಮಾಡಲು, **ವಯಂ** = ನಾವು, **ಪುರಾ** = ಹಿಂದೆ, **ಕ್ಷಮಾಃ** = ಸಮರ್ಥರಾಗಿದ್ದೆವು, **ಉತಾ** = ಆದರೆ, **ಅದ್ಯ** = ಇಂದು, **ಯದಿ** = ಒಂದುವೇಳೆ, **ವಯಂ** = ನಾವು, **ಅಮುಂ** = ಇವನನ್ನು ಕುರಿತು, **ವ್ರಜಾಮಿ** = ಹೋದರೆ (ದಾಳಿ ಮಾಡಿದರೆ), **ಕೃಷ್ಣಃ** = ಶ್ರೀಕೃಷ್ಣನು, **ಏಷ್ಯತಿ** = ಬರುತ್ತಾನೆ.

**ತಾತ್ಪರ್ಯ** :- ಸ್ವರ್ಗದಲ್ಲಿರುವ ಇಂದ್ರನನ್ನು ಸಂಹರಿಸಲು ನಾವು ಹಿಂದೆ ಶಕ್ತರಾಗಿದ್ದೆವು. ಆದರೆ ಈಗ ಅವನ ಮೇಲೆ ದಾಳಿ ಮಾಡಿದರೆ ಶ್ರೀಕೃಷ್ಣ ಬರುತ್ತಾನೆ.

**ಅತೋಽಭಿಷೇಚನಾದ್ ಯದೀಹ ಶಾರ್ಙ್ಗಿಣಃ ಶಚೀಪತಿಃ ।**
**ನ ವಜ್ರಮುತ್ಸೃಜೇತ್ ತದಾಽಭಿಷೇಚಯಾಮ ತಂ ವಯಮ್ ॥ ೪೦ ॥**

ಪದಚ್ಛೇದ :- ಅತಃ, ಅಭಿಷೇಚನಾತ್, ಯದಿ, ಇಹ, ಶಾರ್ಙ್ಗಿಣಃ, ಶಚೀಪತಿಃ । ನ, ವಜ್ರಮ್, ಉತ್ಸೃಜೇತ್, ತದಾ, ಅಭಿಷೇಚಯಾಮ, ತಂ, ವಯಮ್ ॥

**ಅರ್ಥ** :- **ಅತಃ** = ಆದ್ದರಿಂದ, **ಯದಿ** = ಒಂದು ವೇಳೆ, **ಅಭಿಷೇಚನಾತ್** = ಅಭಿಷೇಕ ಮಾಡುವುದರಿಂದ, **ಇಹ** = ಈ, **ಶಾರ್ಙ್ಗಿಣ** = ವಜ್ರಾಯುಧ ಧಾರಿಯಾದ **ಶಚೀಪತಿಃ** = ಶಚೀದೇವಿಯ ಸ್ವಾಮಿಯಾದ ಇಂದ್ರನು, **ವಜ್ರಂ** = ವಜ್ರಾಯುಧವನ್ನು, **ನ ಉತ್ಸೃಜೇತ್** = ಪ್ರಯೋಗಿಸುವುದಿಲ್ಲವೆಂದಾದರೆ, **ತದಾ** = ಆಗ, **ವಯಂ** = ನಾವು, **ತಂ** = ಅವನನ್ನು (ಕೃಷ್ಣನನ್ನು), **ಅಭಿಷೇಚಯಾಮ** = ಪಟ್ಟಾಭಿಷೇಕ ಮಾಡೋಣ.

**ತಾತ್ಪರ್ಯ** :- ಅಭಿಷೇಕ ಮಾಡುವುದರಿಂದ ಇಂದ್ರ ವಜ್ರಾಯುಧವನ್ನು ಪ್ರಯೋಗಿಸುವುದಿಲ್ಲವೆಂದಾದರೆ ನಾವೆಲ್ಲ ಸೇರಿ ಕೃಷ್ಣನಿಗೆ ಅಭಿಷೇಕ ಮಾಡೋಣ ಎಂದು ಆಲೋಚಿಸಿದರು.

**ಅತೋಽನ್ಯಥಾ ದನುರ್ಯಥಾ ವರಾದಮೃತ್ಯುಕೋಽಪಿ ಸನ್ ।**
**ಸುರೇಂದ್ರವಜ್ರತಾಡಿತೋ ಬಭೂವ ಕುಕ್ಷಿಗಾಸ್ಯಯುಕ್ ॥ ೪೧ ॥**

ಪದಚ್ಛೇದ :- ಅತಃ, ಅನ್ಯಥಾ, ದನುಃ, ಯಥಾ, ವರಾತ್, ಅಮೃತ್ಯುಕಃ, ಅಪಿ, ಸನ್ । ಸುರೇಂದ್ರವಜ್ರತಾಡಿತಃ, ಬಭೂವ, ಕುಕ್ಷಿಗಾಸ್ಯಯುಕ್ ॥

**ಅರ್ಥ** :- **ಅತಃ** = ಆದ್ದರಿಂದ, **ಅನ್ಯಥಾ** = ಹಾಗೆ ಮಾಡದೇ ಇದ್ದಲ್ಲಿ, **ದನುಃ** = ದನು ಎಂಬುವನು, **ವರಾತ್** = ವರದಿಂದ, **ಅಮೃತ್ಯುಕಃ ಅಪಿಸನ್** = ಮರಣರಹಿತನಾಗಿದ್ದರೂ, **ಸುರೇಂದ್ರವಜ್ರತಾರಿತಃ** = ದೇವರಾಜನ ವಜ್ರಾಯುಧದ ಪೆಟ್ಟಿನಿಂದ, **ಕುಕ್ಷಿಗಾಸ್ಯಯುಕ್ ಬಭೂವ** = ಮುಖ ಹೊಟ್ಟೆಯೊಳಗೆ ಸೇರಿ ಹೋಯಿತು.

**ತಾತ್ಪರ್ಯ** :- ನಾವೇನಾದರು ಇಂದ್ರ ಹೇಳಿದ ಹಾಗೆ ನಡೆದುಕೊಳ್ಳದಿದ್ದರೆ, ದನುವಿಗೆ ಮರಣವೇ ಇಲ್ಲ ಎಂದು ವರವಿದ್ದರು, ಇಂದ್ರನ ವಜ್ರಪ್ರಹಾರದಿಂದ ಅವನ ಮುಖ ಹೊಟ್ಟೆಯೊಳಗೆ ಸೇರಿ ಹೋಯಿತು. ಅಂಥ ಪರಿಸ್ಥಿತಿ ಬಂದು ಒದಗಬಹುದು ಎಂದು ಆಲೋಚಿಸಿದರು.

**ತಥೈವ ಕೃಷ್ಣಸಂಶ್ರಯಾತ್ ಸ ನಃ ಶಚೀಪತಿರ್ನಯೇತ್ ।**
**ಇತಿ ಸ್ಮ ನಿಶ್ಚಿತಾ ನೃಪಾನಯಾತಯಂತ ಶೌರಯೇ ॥ ೪೨ ॥**

**ಪದಚ್ಛೇದ** :- ತಥಾ, ಏವ, ಕೃಷ್ಣಸಂಶ್ರಯಾತ್, ಸಃ, ನಃ, ಶಚೀಪತಿಃ, ನಯೇತ್ । ಇತಿ, ಸ್ಮ, ನಿಶ್ಚಿತಾ, ನೃಪಾನ್, ಅಯಾತಯಂತ, ಶೌರಯೇ ॥

**ಅರ್ಥ** :- **ತಥಾ ಏವ** = ಹಾಗೆಯೆ, **ಕೃಷ್ಣಸಂಶ್ರಯಾತ್** = ಶ್ರೀಕೃಷ್ಣನ ಆಶ್ರಯದಿಂದ, **ನಃ** = ನಮ್ಮನ್ನು, **ಸಃ** = ಆ, **ಶಚೀಪತಿಃ** = ಇಂದ್ರನು, **ನಯೇತ್** = ಆ ಅವಸ್ಥೆಗೆ ಕೊಂಡೊಯ್ದನು, **ಇತಿ** = ಈ ರೀತಿಯಾಗಿ, **ನಿಶ್ಚಿತಾ ಸ್ಮ** = ತೀರ್ಮಾನಿಸಿ, **ನೃಪಾನ್** = ರಾಜರನ್ನು, **ಶೌರಯೇ** = ಕೃಷ್ಣನ ಅಭಿಷೇಕಕ್ಕಾಗಿ, **ಅಯಾತಯಂತ** = ಕಳುಹಿಸಿದರು.

**ತಾತ್ಪರ್ಯ** :- ಕೃಷ್ಣನ ಬೆಂಬಲವಿರುವ ಇಂದ್ರನು ''ದನು''ವಿಗೆ ಮಾಡಿದ ಹಾಗೆ ಮಾಡಿಯಾನು ಎಂದು ನಿಶ್ಚಯಿಸಿ ರಾಜರನ್ನು ಕೃಷ್ಣನ ಅಭಿಷೇಕಕ್ಕಾಗಿ ಕಳುಹಿಸಿದರು ಅಹಂಕಾರದಿಂದ ತಾವು ಮಾತ್ರ ಹೋಗಲಿಲ್ಲ.

**ಸಮಸ್ತಶೋ ಜರಾಸುತಾದಿಭಿಃ ಕೃತೇಽಭಿಷೇಚನೇ ।**
**ಅತೀವ ಭಗ್ನಮಾನಕಾನ್ ನಚಾನುಯಾತಿ ಕಶ್ಚನ ॥ ೪೩ ॥**

**ಪದಚ್ಛೇದ** :- ಸಮಸ್ತಶಃ, ಜರಾಸುತಾದಿಭಿಃ, ಕೃತೇ, ಅಭಿಷೇಚನೇ । ಅತೀವ, ಭಗ್ನಮಾನಕಾನ್, ನ, ಚ, ಅನುಯಾತಿ, ಕಶ್ಚನ ॥

**ಅರ್ಥ** :- **ಸಮಸ್ತಶಃ** = ಎಲ್ಲಾ, **ಜರಾಸುತಾದಿಭಿಃ** = ಜರಾಸಂಧನೇ ಮೊದಲಾದವರಿಂದ, **ಅಭಿಷೇಚನೇ ಕೃತೇ** = ಅಭಿಷೇಕ ಮಾಡಿದರೆ, **ಅತೀವ** = ಬಹಳ, **ಭಗ್ನಮಾನಕಾನ್** = ಅಪಮಾನಿತರಾದ ಅವರನ್ನು, **ಕಶ್ಚನ** = ಯಾರೊಬ್ಬನೂ, **ನ ಚ ಅನುಯಾತಿ** = ಅನುಸರಿಸಲಾರ.

ತಾತ್ಪರ್ಯ :- ಜರಾಸಂಧಾದಿಗಳು ಎಲ್ಲರೂ ಸೇರಿ ಅಭಿಷೇಕ ಮಾಡಿದರೆ, ತುಂಬಾ ಅವಮಾನ ಆಗುವುದರಿಂದ ಇವರನ್ನು ಯಾರು ಕೂಡ ಅನುಸರಣೆ ಮಾಡುವುದಿಲ್ಲ.

ವಿವರಣೆ :- ಜರಾಸಂಧಾದಿಗಳ ನಾಯಕತ್ವದಲ್ಲಿ ದುಷ್ಟರಾಜರು ಕೃಷ್ಣನ ದ್ವೇಷ ಮಾಡಿ ಸಾಯಬೇಕು, ಜರಾಸಂಧಾದಿಗಳು ಅಪಮಾನಿತರಾಗಿ, ರಾಜರ ದೃಷ್ಟಿಯಲ್ಲಿ ಕಮ್ಮಿಯಾಗಿ ಹೋದರೆ ಇದು ಸಾಧ್ಯವಿಲ್ಲವೆಂದು ತಿಳಿದ ಇಂದ್ರ ಈ ನಾಲ್ಕು ಜನರನ್ನು ಬಿಟ್ಟು, ಉಳಿದವರಿಗೆ ಅಭಿಷೇಕ ಮಾಡಲು ಆಜ್ಞೆ ಮಾಡಿದ.

**ಸಮಾಶ್ರಯಂ ಚ ಕೇಶವಂ ತದೈವ ಜೀವನಾರ್ಥಿನಃ ।**
**ಪ್ರಕುರ್ಯುರಾಸುರಾ ಅಪೀತಿ ದೇವಕಾರ್ಯಸಂಕ್ಷಯಃ ॥ ೪೪ ॥**

ಪದಚ್ಛೇದ :- **ಸಮಾಶ್ರಯಂ, ಚ, ಕೇಶವಂ, ತದಾ, ಏವ, ಜೀವನಾರ್ಥಿನಃ । ಪ್ರಕುರ್ಯುಃ, ಆಸುರಾಃ, ಅಪಿ, ಇತಿ, ದೇವಕಾರ್ಯಸಂಶಯಃ ॥**

**ಅರ್ಥ** :- **ಚ** = ಮತ್ತು, **ಜೀವನಾರ್ಥಿನಃ** = ಬದುಕುವ ಆಸೆಯಿಂದ, **ಆಸುರಾಃ ಅಪಿ** = ರಾಕ್ಷಸರೂ, **ಕೇಶವಂ** = ಕೃಷ್ಣನನ್ನು, **ಸಮಾಶ್ರಯಂ** = ಶರಣಾಗತಿಯನ್ನು, **ಪ್ರಕುರ್ಯುಃ** = ಹೊಂದುವರು, **ತದಾ ಏವ** = ಆವಾಗಲೇ, **ದೇವಕಾರ್ಯಸಂಕ್ಷಯಃ** = ದೇವಕಾಯರ್ಯ ಕೆಡುವುದು, **ಇತಿ** = ಎಂದು.

ತಾತ್ಪರ್ಯ :- ರಾಕ್ಷಸರೆಲ್ಲ ಬದುಕುವ ಆಸೆಯಿಂದ ಕೃಷ್ಣನನ್ನು ಮೊರೆ ಹೋಗಬಹುದು ಆವಾಗ ಕೃಷ್ಣ ಅವರನ್ನು ಕೊಲ್ಲುವಂತಿಲ್ಲ ದೇವತೆಗಳ ಭೂಭಾರ ಹರಣರೂಪ ಕಾರ್ಯ ಕೆಡುವುದು.

**ಇತೀಕ್ಷ್ಯ ಪಾಕಶಾಸನೋऽವದಜ್ಜರಾಸುತಾದಿಕಾನ್ ।**
**ಸರುಗ್ಮಿಚೇದಿಸಾಲ್ವಪೋ ನ ಯಾತು ಮಾಗಧೋ ಹರಿಮ್ ॥ ೪೫ ॥**

**ಪದಚ್ಛೇದ :- ಇತಿ, ಈಕ್ಷ್ಯ, ಪಾಕಶಾಸನಃ, ಅವದತ್, ಜರಾಸುತಾದಿಕಾನ್, ಸರುಗ್ಮಿಸಾಲ್ವಚೇದಿಪಃ, ನ, ಯಾತು, ಮಾಗಧಃ, ಹರಿಮ್ ॥**

**ಅರ್ಥ :- ಇತಿ** = ಎಂದು, **ಈಕ್ಷ್ಯ** = ಆಲೋಚಿಸಿ, **ಪಾಕಶಾಸನಃ** = ದೇವೇಂದ್ರನು, **ಜರಾಸುತಾದಿಕಾನ್ (ಪ್ರತಿ)** = ಜರಾಸಂಧಾದಿಗಳನ್ನು, **(ಕುರಿತು) ಸರುಗ್ಮಿಸಾಲ್ವಚೇದಿಪಃ ಮಾಗಧಃ** = ರುಗ್ಮಿಯಿಂದ ಕೂಡಿದ ಸಾಲ್ವ ಶಿಶುಪಾಲ ಜರಾಸಂಧರು, **ಹರಿಂ** = ಕೃಷ್ಣನನ್ನು ಕುರಿತು, **ನ ಯಾತು** = ಹೋಗುವುದು ಬೇಡ (ಇತಿ=ಎಂದು,) **ಅವದತ್** = ಹೇಳಿದ.

**ತಾತ್ಪರ್ಯ :-** ಹೀಗೆ ವಿಚಾರಮಾಡಿ ಜರಾಸಂಧ ರುಗ್ಮಿ, ಸಾಲ್ವ, ಶಿಶುಪಾಲ, ಕೃಷ್ಣನ ಅಭಿಷೇಕಕ್ಕೆ ಹೋಗುವುದು ಬೇಡ ಎಂದು ಜರಾಸುತಾದಿಗಳಿಗೆ ಇಂದ್ರನು ಹೇಳಿದನು.

**ತತಸ್ತು ತಾನ್ ವಿನಾऽಪರೇऽಧಿರಾಜರಾಜ ಇತ್ಯಮುಮ್ ।**
**ತದಾऽಭಿಷೇಕ್ತುಮುದ್ಯತಾ ನೃಪಾಃ ಸುರೇಶಶಾಸನಾತ್ ॥ ೪೬ ॥**

**ಪದಚ್ಛೇದ :- ತತಃ, ತು, ತಾನ್, ವಿನಾ, ಪರೇ, ಅಧಿರಾಜರಾಜಃ, ಇತಿ, ಅಮುಮ್ । ತದಾ, ಅಭಿಷೇಕ್ತುಮ್, ಉದ್ಯತಾಃ, ನೃಪಾಃ, ಸುರೇಶಶಾಸನಾತ್ ॥**

**ಅರ್ಥ :- ತತಸ್ತು** = ಬಳಿಕ, **ಸುರೇಶಶಾಸನಾತ್** = ಇಂದ್ರನ ಆಜ್ಞೆಯಂತೆ, **ತಾನ್ ವಿನಾ** = ಆ ನಾಲ್ಕು ಜನರನ್ನು ಬಿಟ್ಟು, **ಪರೇ** = ಉಳಿದ, **ನೃಪಾಃ** = ರಾಜರು, **ತದಾ** = ಆವಾಗ, **ಅಧಿರಾಜರಾಜ** = ರಾಜಾಧಿರಾಜ, **ಇತಿ** = ಎಂದು, **ಅಮುಂ** = ಈ ಕೃಷ್ಣನನ್ನು, **ಅಭಿಷೇಕ್ತು** = ಅಭಿಷೇಕ ಮಾಡಲು, **ಉದ್ಯತಾಃ** = ಉದ್ಯುಕ್ತರಾದರು.

**ತಾತ್ಪರ್ಯ :-** ಶಚೀಪತಿಯ ಅಪ್ಪಣೆಯಂತೆ ಜರಾಸಂಧ, ಸಾಲ್ವ, ರುಗ್ಮಿ, ಶಿಶುಪಾಲರನ್ನು ಬಿಟ್ಟು ಉಳಿದ ರಾಜರುಗಳು ಶ್ರೀಕೃಷ್ಣ ಪರಮಾತ್ಮನನ್ನು ರಾಜಾಧಿರಾಜನೆಂದು ಅಭಿಷೇಕ ಮಾಡಲು ಉದ್ಯುಕ್ತರಾದರು.

**ಅತಃ ಶಚೀಪತಿರ್ನಿಜಂ ವರಾಸನಂ ಹರೇರದಾತ್ ।**
**ವಿವೇಶ ತತ್ರ ಕೇಶವೋ ನಭಸ್ತಲಾವತಾರಿತೇ ॥ ೪೭ ॥**

ಪದಚ್ಛೇದ :- ತತಃ, ಶಚೀಪತಿಃ, ನಿಜಂ, ವರಾಸನಂ, ಹರೇಃ, ಅದಾತ್ । ವಿವೇಶ, ತತ್ರ, ಕೇಶವಃ, ನಭಸ್ತಲಾವತಾರಿತೇ ॥

ಅರ್ಥ :- ತತಃ = ಅನಂತರ, ಶಚೀಪತಿಃ = ಇಂದ್ರನು, ನಿಜಂ = ತನ್ನ, ವರಾಸನಂ = ದಿವ್ಯವಾದ ಆಸನವನ್ನು, ಹರೇಃ = ಕೃಷ್ಣನಿಗೋಸ್ಕರ, ಅದಾತ್ = ಕಳಿಸಿಕೊಟ್ಟನು, ನಭಸ್ತಲಾವಲಾರಿತೇ = ಆಕಾಶದಿಂದ ಇಳಿದು ಬಂದ, ತತ್ರ = ಆ ಆಸನದಲ್ಲಿ, ಕೇಶವಃ = ಶ್ರೀಕೃಷ್ಣನು, ವಿವೇಶ = ಕುಳಿತುಕೊಂಡ.

ತಾತ್ಪರ್ಯ :- ಆವಾಗ ದೇವೇಂದ್ರ ತನ್ನ ಉತ್ತಮವಾದ ಸಿಂಹಾಸನವನ್ನು ಕೃಷ್ಣನಿಗೋಸ್ಕರ ಕಳುಹಿಸಿಕೊಟ್ಟ, ಕೃಷ್ಣ ಆಕಾಶ ಮಾರ್ಗದಿಂದ ಬಂದಿಳಿದ ಆ ದಿವ್ಯಾಸನದಲ್ಲಿ ಕುಳಿತುಕೊಂಡನು.

ಕರೇ ಪ್ರಗೃಹ್ಯ ಕೇಶವೋ ನ್ಯವೇಶಯತ್ ಸಹಾಸನೇ ।
ಪತತ್ರಿಪುಂಗವಂ ಚ ತೌ ಸ ಭೀಷ್ಮಕಾನುಜೌ ಪ್ರಭುಃ ॥ ೪೮ ॥

ಪದಚ್ಛೇದ :- ಕರೇ, ಪ್ರಗೃಹ್ಯ, ಕೇಶವಃ, ನ್ಯವೇಶಯತ್, ಸಹಾಸನೇ । ಪತತ್ರಿ ಪುಂಗವಂ, ಚ, ತೌ, ಸಃ, ಭೀಷ್ಮಕಾನುಜಾ, ಪ್ರಭುಃ ॥

ಅರ್ಥ :- ಪ್ರಭುಃ = ಸ್ವಾಮಿಯಾದ, ಸಃ = ಆ, ಕೇಶವಃ = ಶ್ರೀಕೃಷ್ಣನು, ಪತತ್ರಿ ಪುಂಗವಂ = ಗರುಡನನ್ನು, ಚ = ಮತ್ತು, ತೌ = ಆ, ಭೀಷ್ಮಕಾನುಜೌ = ಭೀಷ್ಮರನ ತಮ್ಮರಾದ ಕ್ರಥ, ಕೈಶಿಕರನ್ನು, ಕರೌ = ಕೈಯಲ್ಲಿ, ಪ್ರಗೃಹ್ಯ = ಹಿಡಿದು, ಸಹಾಸನೇ = ತನ್ನೊಡನೆ ಆಸನದಲ್ಲಿ, ನ್ಯವೇಶಯತ್ = ಕುಳ್ಳರಿಸಿಕೊಂಡ.

ತಾತ್ಪರ್ಯ :- ಸ್ವಾಮಿಯಾದ ಶ್ರೀಕೃಷ್ಣ ಕೈಯಲ್ಲಿ ಕ್ರಥ ಹಾಗೂ ಕೈಶಿಕರನ್ನು ಪಿಡಿದುಕೊಂಡು ಎಡಭಾಗದಲ್ಲಿ, ಗರುಡನನ್ನು ಬಲಭಾಗದಲ್ಲಿ ಕೂರಿಸಿಕೊಂಡ.

ಅಥಾಖಿಲಾ ನರೇಶ್ವರಾ ಮುನೀಂದ್ರಸಂಯುತಾ ಹರಿಮ್ ।
ಸುಶಾತಕೌಂಭಕುಂಭಕೈಃ ಪ್ರಚಕ್ರುರಾಭಿಷೇಕಿಣಮ್ ॥ ೪೯ ॥

ಪದಚ್ಛೇದ :- ಅಥ, ಅಖಿಲಾಃ, ನರೇಶ್ವರಾಃ, ಮುನೀಂದ್ರಸಂಯುತಾಃ, ಹರಿಮ್ । ಸುಶಾತಕೌಂಭಕುಂಭಕೈಃ, ಪ್ರಚಕ್ರುಃ, ಅಭಿಷೇಕಿಣಮ್ ॥

**ಪದಚ್ಛೇದ :- ಇತಿ, ಈಕ್ಷ್ಯ, ಪಾಕಶಾಸನಃ, ಅವದತ್, ಜರಾಸುತಾದಿಕಾನ್, ಸರುಗ್ಮಿಸಾಲ್ವಚೇದಿಪಃ, ನ, ಯಾತು, ಮಾಗಧಃ, ಹರಿಮ್ ॥**

**ಅರ್ಥ** :- **ಇತಿ** = ಎಂದು, **ಈಕ್ಷ್ಯ** = ಆಲೋಚಿಸಿ, **ಪಾಕಶಾಸನಃ** = ದೇವೇಂದ್ರನು, **ಜರಾಸುತಾದಿಕಾನ್** (ಪ್ರತಿ) = ಜರಾಸಂಧಾದಿಗಳನ್ನು, (ಕುರಿತು) **ಸರುಗ್ಮಿಸಾಲ್ವಚೇದಿಪಃ ಮಾಗಧಃ** = ರುಗ್ಮಿಯಿಂದ ಕೂಡಿದ ಸಾಲ್ವ ಶಿಶುಪಾಲ ಜರಾಸಂಧರು, **ಹರಿಂ** = ಕೃಷ್ಣನನ್ನು ಕುರಿತು, **ನ ಯಾತು** = ಹೋಗುವುದು ಬೇಡ (ಇತಿ=ಎಂದು,) **ಅವದತ್** = ಹೇಳಿದ.

**ತಾತ್ಪರ್ಯ** :- ಹೀಗೆ ವಿಚಾರಮಾಡಿ ಜರಾಸಂಧ ರುಗ್ಮಿ, ಸಾಲ್ವ, ಶಿಶುಪಾಲ, ಕೃಷ್ಣನ ಅಭಿಷೇಕಕ್ಕೆ ಹೋಗುವುದು ಬೇಡ ಎಂದು ಜರಾಸುತಾದಿಗಳಿಗೆ ಇಂದ್ರನು ಹೇಳಿದನು.

**ತತಸ್ತು ತಾನ್ ವಿನಾಽಪರೇಽಧಿರಾಜರಾಜ ಇತ್ಯಮುಮ್ ।**
**ತದಾಽಭಿಷೇಕ್ತುಮುದ್ಯತಾ ನೃಪಾಃ ಸುರೇಶಶಾಸನಾತ್ ॥ ೪೬ ॥**

**ಪದಚ್ಛೇದ :- ತತಃ, ತು, ತಾನ್, ವಿನಾ, ಪರೇ, ಅಧಿರಾಜರಾಜಃ, ಇತಿ, ಅಮುಮ್ । ತದಾ, ಅಭಿಷೇಕ್ತುಮ್, ಉದ್ಯತಾಃ, ನೃಪಾಃ, ಸುರೇಶಶಾಸನಾತ್ ॥**

**ಅರ್ಥ** :- **ತತಸ್ತು** = ಬಳಿಕ, **ಸುರೇಶಶಾಸನಾತ್** = ಇಂದ್ರನ ಆಜ್ಞೆಯಂತೆ, **ತಾನ್ ವಿನಾ** = ಆ ನಾಲ್ಕು ಜನರನ್ನು ಬಿಟ್ಟು, **ಪರೇ** = ಉಳಿದ, **ನೃಪಾಃ** = ರಾಜರು, **ತದಾ** = ಆವಾಗ, **ಅಧಿರಾಜರಾಜ** = ರಾಜಾಧಿರಾಜ, **ಇತಿ** = ಎಂದು, **ಅಮುಂ** = ಈ ಕೃಷ್ಣನನ್ನು, **ಅಭಿಷೇಕ್ತು** = ಅಭಿಷೇಕ ಮಾಡಲು, **ಉದ್ಯತಾಃ** = ಉದ್ಯುಕ್ತರಾದರು.

**ತಾತ್ಪರ್ಯ** :- ಶಚೀಪತಿಯ ಅಪ್ಪಣೆಯಂತೆ ಜರಾಸಂಧ, ಸಾಲ್ವ, ರುಗ್ಮಿ, ಶಿಶುಪಾಲರನ್ನು ಬಿಟ್ಟು ಉಳಿದ ರಾಜರುಗಳು ಶ್ರೀಕೃಷ್ಣ ಪರಮಾತ್ಮನನ್ನು ರಾಜಾಧಿರಾಜನೆಂದು ಅಭಿಷೇಕ ಮಾಡಲು ಉದ್ಯುಕ್ತರಾದರು.

**ಅತಃ ಶಚೀಪತಿರ್ನಿಜಂ ವರಾಸನಂ ಹರೇರದಾತ್ ।**
**ವಿವೇಶ ತತ್ರ ಕೇಶವೋ ನಭಸ್ತಲಾವತಾರಿತೇ ॥ ೪೭ ॥**

ಪದಚ್ಛೇದ :- ತತಃ, ಶಚೀಪತಿಃ, ನಿಜಂ, ವರಾಸನಂ, ಹರೇಃ, ಅದಾತ್ । ವಿವೇಶ, ತತ್ರ, ಕೇಶವಃ, ನಭಸ್ತಲಾವತಾರಿತೇ ॥

ಅರ್ಥ :- ತತಃ = ಅನಂತರ, ಶಚೀಪತಿಃ = ಇಂದ್ರನು, ನಿಜಂ = ತನ್ನ, ವರಾಸನಂ = ದಿವ್ಯವಾದ ಆಸನವನ್ನು, ಹರೇಃ = ಕೃಷ್ಣನಿಗೋಸ್ಕರ, ಅದಾತ್ = ಕಳಿಸಿಕೊಟ್ಟನು, ನಭಸ್ತಲಾವಲಾರಿತೇ = ಆಕಾಶದಿಂದ ಇಳಿದು ಬಂದ, ತತ್ರ = ಆ ಆಸನದಲ್ಲಿ, ಕೇಶವಃ = ಶ್ರೀಕೃಷ್ಣನು, ವಿವೇಶ = ಕುಳಿತುಕೊಂಡ.

ತಾತ್ಪರ್ಯ :- ಆವಾಗ ದೇವೇಂದ್ರ ತನ್ನ ಉತ್ತಮವಾದ ಸಿಂಹಾಸನವನ್ನು ಕೃಷ್ಣನಿಗೋಸ್ಕರ ಕಳುಹಿಸಿಕೊಟ್ಟ, ಕೃಷ್ಣ ಆಕಾಶ ಮಾರ್ಗದಿಂದ ಬಂದಿಳಿದ ಆ ದಿವ್ಯಾಸನದಲ್ಲಿ ಕುಳಿತುಕೊಂಡನು.

ಕರೇ ಪ್ರಗೃಹ್ಯ ಕೇಶವೋ ನ್ಯವೇಶಯತ್ ಸಹಾಸನೇ ।
ಪತತ್ರಿಪುಂಗವಂ ಚ ತೌ ಸ ಭೀಷ್ಮಕಾನುಜೌ ಪ್ರಭುಃ ॥ ೪೮ ॥

ಪದಚ್ಛೇದ :- ಕರೇ, ಪ್ರಗೃಹ್ಯ, ಕೇಶವಃ, ನ್ಯವೇಶಯತ್, ಸಹಾಸನೇ । ಪತತ್ರಿ ಪುಂಗವಂ, ಚ, ತೌ, ಸಃ, ಭೀಷ್ಮಕಾನುಜಾ, ಪ್ರಭುಃ ॥

ಅರ್ಥ :- ಪ್ರಭುಃ = ಸ್ವಾಮಿಯಾದ, ಸಃ = ಆ, ಕೇಶವಃ = ಶ್ರೀಕೃಷ್ಣನು, ಪತತ್ರಿ ಪುಂಗವಂ = ಗರುಡನನ್ನು, ಚ = ಮತ್ತು, ತೌ = ಆ, ಭೀಷ್ಮಕಾನುಜೌ = ಭೀಷ್ಮರನ ತಮ್ಮರಾದ ಕ್ರಥ, ಕೈಶಿಕರನ್ನು, ಕರೌ = ಕೈಯಲ್ಲಿ, ಪ್ರಗೃಹ್ಯ = ಹಿಡಿದು, ಸಹಾಸನೇ = ತನ್ನೊಡನೆ ಆಸನದಲ್ಲಿ, ನ್ಯವೇಶಯತ್ = ಕುಳ್ಳರಿಸಿಕೊಂಡ.

ತಾತ್ಪರ್ಯ :- ಸ್ವಾಮಿಯಾದ ಶ್ರೀಕೃಷ್ಣ ಕೈಯಲ್ಲಿ ಕ್ರಥ ಹಾಗೂ ಕೈಶಿಕರನ್ನು ಪಿಡಿದುಕೊಂಡು ಎಡಭಾಗದಲ್ಲಿ, ಗರುಡನನ್ನು ಬಲಭಾಗದಲ್ಲಿ ಕೂರಿಸಿಕೊಂಡ.

ಅಥಾಖಿಲಾ ನರೇಶ್ವರಾ ಮುನೀಂದ್ರಸಂಯುತಾ ಹರಿಮ್ ।
ಸುಶಾತಕೌಂಭಕುಂಭಕೈಃ ಪ್ರಚಕ್ರುರಾಭಿಷೇಕಿಣಮ್ ॥ ೪೯ ॥

ಪದಚ್ಛೇದ :- ಅಥ, ಅಖಿಲಾಃ, ನರೇಶ್ವರಾಃ, ಮುನೀಂದ್ರಸಂಯುತಾಃ, ಹರಿಮ್ । ಸುಶಾತಕೌಂಭಕುಂಭಕೈಃ, ಪ್ರಚಕ್ರುಃ, ಅಭಿಷೇಕಿಣಮ್ ॥

**ಅರ್ಥ** :- **ಅಥ** = ಅನಂತರ, **ಅಖಿಲಾಃ** = ಎಲ್ಲಾ, **ನರೇಶ್ವರಾಃ** = ರಾಜರುಗಳು, **ಮುನೀಂದ್ರ ಸಂಯುತಾಃ** = ಋಷಿಶ್ರೇಷ್ಠರಿಂದೊಡಗೂಡಿ, **ಸುಶಾತಕೌಂಭಕುಂಭಕೈಃ** = ಸುವರ್ಣಕಲಶದ ಜಲದಿಂದ, **ಹರಿಂ** = ಕೃಷ್ಣನನ್ನು, **ಅಭಿಷೇಕಿಣಂ** = ಅಭಿಷೇಕವನ್ನು, **ಪ್ರಚಕ್ರುಃ** = ಮಾಡಿದರು.

**ತಾತ್ಪರ್ಯ** :- ಆಮೇಲೆ ಎಲ್ಲ ರಾಜರು, ಶ್ರೇಷ್ಠ ಋಷಿಗಳ ಜೊತೆ ಬಂಗಾರ ಕಲಶದ ನೀರಿನಿಂದ ಕೃಷ್ಣನಿಗೆ ಅಭಿಷೇಕವನ್ನು ನೆರವೇರಿಸಿದರು.

**ವಿರಿಂಚಶರ್ವಪೂರ್ವಕೈರಭಿಷ್ಟುತಃ ಸುರಾದಿಭಿಃ ।**
**ಸಮಸ್ತದೇವಗಾಯಕೈಃ ಪ್ರಗೀತ ಆಸ ಕೇಶವಃ ॥ ೫೦ ॥**

**ಪದಚ್ಛೇದ** :- **ವಿರಿಂಚಶರ್ವಪೂರ್ವಕೈಃ, ಅಭಿಷ್ಟುತಃ, ಸುರಾದಿಭಿಃ । ಸಮಸ್ತದೇವಗಾಯಕೈಃ, ಪ್ರಗೀತಃ, ಆಸ, ಕೇಶವಃ ॥**

**ಅರ್ಥ** :- **ವಿರಿಂಚಶರ್ವಪೂರ್ವಕೈಃ** = ಬ್ರಹ್ಮರುದ್ರಾದಿಗಳೇ ಮೊದಲಾದ, **ಸುರಾದಿಭಿಃ** = ದೇವತೆಗಳಿಂದ, **ಅಭಿಷ್ಟುತಃ** = ಸ್ತುತಿಸಲ್ಪಟ್ಟರು, **ಸಮಸ್ತದೇವಗಾಯಕೈಃ** = ಎಲ್ಲಾ ಗಂಧರ್ವರುಗಳಿಂದ, **ಕೇಶವಃ** = ಶ್ರೀಕೃಷ್ಣನು, **ಪ್ರಗೀತಃ ಆಸ** = ಚೆನ್ನಾಗಿ ಹಾಡಲ್ಪಟ್ಟವನಾದ.

**ತಾತ್ಪರ್ಯ** :- ಸಿಂಹಾಸನದಲ್ಲಿ ಅಭಿಷಿಕ್ತನಾದ ಕೃಷ್ಣನನ್ನು ಬ್ರಹ್ಮರುದ್ರಾದಿ ದೇವತೆಗಳು ಸ್ತೋತ್ರ ಮಾಡಿದರು. ಗಂಧರ್ವರು ಹಾಡಿ ಹೊಗಳಿದರು.

**ಅಥಾಽಹ ಭೀಷ್ಮಕಂ ಪ್ರಭುಃ ಸ್ವಯಂವರಃ ಕಿಲ ತ್ವಯಾ ।**
**ಅಭೀಪ್ಸಿತಃ ಸುತಾಕೃತೇ ಶುಭಾಯ ತೇ ಭವೇನ್ನ ಸಃ ॥ ೫೧ ॥**

ಪದಚ್ಛೇದ :- **ಅಥ, ಆಹ, ಭೀಷ್ಮಕಂ, ಪ್ರಭುಃ, ಸ್ವಯಂವರಃ, ಕಿಲ, ತ್ವಯಾ । ಅಭೀಪ್ಸಿತಃ, ಸುತಾಕೃತೇ, ಶುಭಾಯ, ತೇ, ಭವೇತ್, ನ, ಸಃ ॥**

**ಅರ್ಥ** :- **ಅಥ** = ಅನಂತರ, **ಪ್ರಭುಃ** = ಸ್ವಾಮಿಯಾದ ಶ್ರೀಕೃಷ್ಣನು, **ಭೀಷ್ಮಕಂ (ಪ್ರತಿ)** = ಭೀಷ್ಮಕರಾಜನನ್ನು ಕುರಿತು, **ಆಹ** = ಹೇಳಿದ, **ತ್ವಯಾ** = ನಿನ್ನ, **ಸುತಾಕೃತೇ** = ಮಗಳಿಗೋಸ್ಕರ ಮಾಡಲ್ಪಟ್ಟ, **ಸ್ವಯಂವರಃ** = ಸ್ವಯಂವರವು, **ಅಭೀಪ್ಸಿತಃ** = ಬಯಸಿದಂತೆ, **ಸಃ** = ಅದು, **ತೇ** = ನಿನಗೆ, **ಶುಭಾಯ** = ಮಂಗಳಕರವಾಗಿ, **ನ ಭವೇತ್ ಕಿಲ** = ಆಗಲಾರದಷ್ಟೇ.

ತಾತ್ಪರ್ಯ :- ಶ್ರೀಕೃಷ್ಣ ಭೀಷ್ಮಕರಾಜನಿಗೆ ಹೇಳುತ್ತಿದ್ದಾನೆ. ನಿನ್ನ ಮಗಳಿಗೆ ಏರ್ಪಾಟು ಮಾಡಿದ ಸ್ವಯಂವರ, ನೀನು ಅಂದುಕೊಂಡಂತೆ ನಿನಗೆ ಒಳ್ಳೆಯದು ಆಗುವುದಿಲ್ಲ.

**ಇಯಂ ರಮಾ ತವಾತ್ಮಜಾ ಬಭೂವ ತಾಂ ಹರೇರ್ನಚ ।**
**ದದಾತಿ ಚೇತ್ ತದಾ ಪಿತಾ ನಿರಿಂದಿರೋ ಪ್ರಜೇದಧಃ ॥ ೫೨ ॥**

ಪದಚ್ಛೇದ :– ಇಯಂ, ರಮಾ, ತವ, ಆತ್ಮಜಾ, ಬಭೂವ, ತಾಂ, ಹರೌಃ, ನ, ಚ । ದದಾತಿ, ಚೇತ್, ತದಾ, ಪಿತಾ, ನಿರಿಂದಿರಃ, ವ್ರಜೇತ್, ಅಧಃ ॥

ಅರ್ಥ :- **ಇಯಂ** = ಇವಳು, **ರಮಾ** = ಲಕ್ಷ್ಮೀದೇವಿ, **ತವ** = ನಿನ್ನ, **ಆತ್ಮಜಾ** = ಮಗಳಾಗಿ, **ಬಭೂವ** = ಜನಿಸಿದ್ದಾಳೆ, **ತಾಂ** = ಅವಳನ್ನು, **ಹರೇಃ** = ಕೃಷ್ಣನ, **ನ ಚ ದದಾತಿ ಚೇತ್** = ಕೊಡದಿದ್ದರೆ, **ತದಾ** = ಆಗ, **ಪಿತಾ** = ಕನ್ಯೆಯ ತಂದೆಯಾದ ನೀನು, **ನಿರಿಂದಿರಃ** = ಅಲಕ್ಷ್ಮೀಕನಾಗಿ, **ಅಧಃ** = ಅಧೋಗತಿಯನ್ನು, **ಪ್ರಜೇತ್** = ಹೊಂದುವಿ.

ತಾತ್ಪರ್ಯ :- ನಿನ್ನ ಮಗಳಾಗಿ ಅವತರಿಸಿದಳು ಸಾಕ್ಷಾತ್ ಲಕ್ಷ್ಮೀದೇವಿ. ನೀನು ಅವಳನ್ನು ಕೃಷ್ಣನಾದ ನನಗೆ ಕೊಡದೇ ಹೋದರೆ ಹೆಣ್ಣಿನ ತಂದೆಯಾದ ನೀನು ಐಶ್ವರ್ಯಾದಿ ಸಂಪತ್ತನ್ನು ಕಳೆದುಕೊಂಡು ಅಧೋಗತಿ ಹೊಂದ-ಬೇಕಾಗುತ್ತದೆ.

**ಹಿತಾಯ ಚೈತದೀರಿತಂ ತವಾನ್ಯಥಾ ನ ಚಿಂತಯ ।**
**ನ ಯೋಷಿದಿಚ್ಛಯಾ ತ್ವಹಂ ಬ್ರವೀಮಿ ಪಶ್ಯ ಯಾದೃಶಃ ॥ ೫೩ ॥**

ಪದಚ್ಛೇದ :– ಹಿತಾಯ, ಚ, ಏತತ್, ಈರಿತಂ, ತವ, ಅನ್ಯಥಾ, ನ, ಚಿಂತಯ । ನ, ಯೋಷಿದಿಚ್ಛಯಾ, ತು, ಅಹಂ, ಬ್ರವೀಮಿ, ಪಶ್ಯ, ಯಾದೃಶಃ ॥

ಅರ್ಥ :- **ಚ** = ಮತ್ತು, **ಏತತ್** = ಇದು, **ತವ** = ನಿನ್ನ, **ಹಿತಾಯ** = ಒಳಿತಿಗೋಸ್ಕರ, **ಈರಿತಂ** = ಹೇಳಿರುವುದು, **ಅನ್ಯಥಾ** = ಬೇರೆ ರೀತಿ, **ನ ಚಿಂತಯ** = ತಿಳಿಯಬೇಡ, **ಅಹಂ ತು** = ನಾನಾದರು, **ಯೋಷಿದಿಚ್ಛಯಾ** = ಹೆಣ್ಣಿನಾಸೆಯಿಂದ, **ನ ಬ್ರವೀಮಿ** = ಹೇಳುತ್ತಿಲ್ಲ, **ಪಶ್ಯ** = ನೋಡು, **ಯದೃಶಃ** = ಎಂಥವನೆಂದು.

**ಅರ್ಥ** :- **ಅಥ** = ಅನಂತರ, **ಅಖಿಲಾಃ** = ಎಲ್ಲಾ, **ನರೇಶ್ವರಾಃ** = ರಾಜರುಗಳು, **ಮುನಿಂದ್ರ ಸಂಯುತಾಃ** = ಋಷಿಶ್ರಾಷ್ಠರಿಂದೊಡಗೂಡಿ, **ಸುಶಾತಕೌಂಭಕುಂಭಕೈಃ** = ಸುವರ್ಣಕಲಶದ ಜಲದಿಂದ, **ಹರಿಂ** = ಕೃಷ್ಣನನ್ನು, **ಅಭಿಷೇಕಿಣಾಂ** = ಅಭಿಷೇಕವನ್ನು, **ಪ್ರಚಕ್ರುಃ** = ಮಾಡಿದರು.

**ತಾತ್ಪರ್ಯ** :- ಆಮೇಲೆ ಎಲ್ಲ ರಾಜರು, ಶ್ರೇಷ್ಠ ಋಷಿಗಳ ಜೋತೆ ಬಂಗಾರ ಕಲಶದ ನೀರಿನಿಂದ ಕೃಷ್ಣನಿಗೆ ಅಭಿಷೇಕವನ್ನು ನೆರವೇರಿಸಿದರು.

**ವಿರಿಂಚಶರ್ವಪೂರ್ವಕೈರಭಿಷ್ಟುತಃ ಸುರಾದಿಭಿಃ ।**
**ಸಮಸ್ತದೇವಗಾಯಕೈಃ ಪ್ರಗೀತ ಆಸ ಕೇಶವಃ ॥ ೫೦ ॥**

**ಪದಚ್ಛೇದ** :- **ವಿರಿಂಚಶರ್ವಪೂರ್ವಕೈಃ, ಅಭಿಷ್ಟುತಃ, ಸುರಾದಿಭಿಃ । ಸಮಸ್ತದೇವಗಾಯಕೈಃ, ಪ್ರಗೀತಃ, ಆಸ, ಕೇಶವಃ ॥**

**ಅರ್ಥ** :- **ವಿರಿಂಚಶರ್ವಪೂರ್ವಕೈಃ** = ಬ್ರಹ್ಮರುದ್ರಾದಿಗಳೇ ಮೊದಲಾದ, **ಸುರಾದಿಭಿಃ** = ದೇವತೆಗಳಿಂದ, **ಅಭಿಷ್ಟುತಃ** = ಸ್ತುತಿಸಲ್ಪಟ್ಟರು, **ಸಮಸ್ತದೇವಗಾಯಕೈಃ** = ಎಲ್ಲಾ ಗಂಧರ್ವರುಗಳಿಂದ, **ಕೇಶವಃ** = ಶ್ರೀಕೃಷ್ಣನು, **ಪ್ರಗೀತಃ ಆಸ** = ಚೆನ್ನಾಗಿ ಹಾಡಲ್ಪಟ್ಟವನಾದ.

**ತಾತ್ಪರ್ಯ** :- ಸಿಂಹಾಸನದಲ್ಲಿ ಅಭಿಷಿಕ್ತನಾದ ಕೃಷ್ಣನನ್ನು ಬ್ರಹ್ಮರುದ್ರಾದಿ ದೇವತೆಗಳು ಸ್ತೋತ್ರ ಮಾಡಿದರು. ಗಂಧರ್ವರು ಹಾಡಿ ಹೊಗಳಿದರು.

**ಅಥಾऽಹ ಭೀಷ್ಮಕಂ ಪ್ರಭುಃ ಸ್ವಯಂವರಃ ಕಿಲ ತ್ವಯಾ ।**
**ಅಭೀಪ್ಸಿತಃ ಸುತಾಕೃತೇ ಶುಭಾಯ ತೇ ಭವೇನ್ನ ಸಃ ॥ ೫೧ ॥**

**ಪದಚ್ಛೇದ** :- **ಅಥ, ಆಹ, ಭೀಷ್ಮಕಂ, ಪ್ರಭುಃ, ಸ್ವಯಂವರಃ, ಕಿಲ, ತ್ವಯಾ । ಅಭೀಪ್ಸಿತಃ, ಸುತಾಕೃತೇ, ಶುಭಾಯ, ತೇ, ಭವೇತ್, ನ, ಸಃ ॥**

**ಅರ್ಥ** :- **ಅಥ** = ಅನಂತರ, **ಪ್ರಭುಃ** = ಸ್ವಾಮಿಯಾದ ಶ್ರೀಕೃಷ್ಣನು, **ಭೀಷ್ಮಕಂ (ಪ್ರತಿ)** = ಭೀಷ್ಮಕರಾಜನನ್ನು ಕುರಿತು, **ಆಹ** = ಹೇಳಿದ, **ತ್ವಯಾ** = ನಿನ್ನ, **ಸುತಾಕೃತೇ** = ಮಗಳಿಗೋಸ್ಕರ ಮಾಡಲ್ಪಟ್ಟ, **ಸ್ವಯಂವರಃ** = ಸ್ವಯಂವರವು, **ಅಭೀಪ್ಸಿತಃ** = ಬಯಸಿದಂತೆ, **ಸಃ** = ಅದು, **ತೇ** = ನಿನಗೆ, **ಶುಭಾಯ** = ಮಂಗಳಕರವಾಗಿ, **ನ ಭವೇತ್ ಕಿಲ** = ಆಗಲಾರದಷ್ಟೇ.

ತಾತ್ಪರ್ಯ :- ಶ್ರೀಕೃಷ್ಣ ಭೀಷ್ಮಕರಾಜನಿಗೆ ಹೇಳುತ್ತಿದ್ದಾನೆ. ನಿನ್ನ ಮಗಳಿಗೆ ಏರ್ಪಾಟು ಮಾಡಿದ ಸ್ವಯಂವರ, ನೀನು ಅಂದುಕೊಂಡಂತೆ ನಿನಗೆ ಒಳ್ಳೆಯದು ಆಗುವುದಿಲ್ಲ.

**ಇಯಂ ರಮಾ ತವಾತ್ಮಜಾ ಬಭೂವ ತಾಂ ಹರೇರ್ನಚ ।**
**ದದಾತಿ ಚೇತ್ ತದಾ ಪಿತಾ ನಿರಿಂದಿರೋ ವ್ರಜೇದಧಃ ॥ ೫೨ ॥**

ಪದಚ್ಛೇದ :- ಇಯಂ, ರಮಾ, ತವ, ಆತ್ಮಜಾ, ಬಭೂವ, ತಾಂ, ಹರೌಃ, ನ, ಚ । ದದಾತಿ, ಚೇತ್, ತದಾ, ಪಿತಾ, ನಿರಿಂದಿರಃ, ವ್ರಜೇತ್, ಅಧಃ ॥

**ಅರ್ಥ** :- **ಇಯಂ** = ಇವಳು, **ರಮಾ** = ಲಕ್ಷ್ಮೀದೇವಿ, **ತವ** = ನಿನ್ನ, **ಆತ್ಮಜಾ** = ಮಗಳಾಗಿ, **ಬಭೂವ** = ಜನಿಸಿದ್ದಾಳೆ, **ತಾಂ** = ಅವಳನ್ನು, **ಹರೇಃ** = ಕೃಷ್ಣನ, **ನ ಚ ದದಾತಿ ಚೇತ್** = ಕೊಡದಿದ್ದರೆ, **ತದಾ** = ಆಗ, **ಪಿತಾ** = ಕನ್ಯೆಯ ತಂದೆಯಾದ ನೀನು, **ನಿರಿಂದಿರಃ** = ಅಲಕ್ಷ್ಮೀಕನಾಗಿ, **ಅಧಃ** = ಅಧೋಗತಿಯನ್ನು, **ವ್ರಜೇತ್** = ಹೊಂದುವಿ.

ತಾತ್ಪರ್ಯ :- ನಿನ್ನ ಮಗಳಾಗಿ ಅವತರಿಸಿದಳು ಸಾಕ್ಷಾತ್ ಲಕ್ಷ್ಮೀದೇವಿ. ನೀನು ಅವಳನ್ನು ಕೃಷ್ಣನಾದ ನನಗೆ ಕೊಡದೇ ಹೋದರೆ ಹೆಣ್ಣಿನ ತಂದೆಯಾದ ನೀನು ಐಶ್ವರ್ಯಾದಿ ಸಂಪತ್ತನ್ನು ಕಳೆದುಕೊಂಡು ಅಧೋಗತಿ ಹೊಂದ-ಬೇಕಾಗುತ್ತದೆ.

**ಹಿತಾಯ ಚೈತದೀರಿತಂ ತವಾನ್ಯಥಾ ನ ಚಿಂತಯ ।**
**ನ ಯೋಷಿದಿಚ್ಛಯಾ ತ್ವಹಂ ಬ್ರವೀಮಿ ಪಶ್ಯ ಯಾದೃಶಃ ॥ ೫೩ ॥**

ಪದಚ್ಛೇದ :- ಹಿತಾಯ, ಚ, ಏತತ್, ಈರಿತಂ, ತವ, ಅನ್ಯಥಾ, ನ, ಚಿಂತಯ । ನ, ಯೋಷಿದಿಚ್ಛಯಾ, ತು, ಅಹಂ, ಬ್ರವೀಮಿ, ಪಶ್ಯ, ಯಾದೃಶಃ ॥

**ಅರ್ಥ** :- **ಚ** = ಮತ್ತು, **ಏತತ್** = ಇದು, **ತವ** = ನಿನ್ನ, **ಹಿತಾಯ** = ಒಳಿತಿಗೋಸ್ಕರ, **ಈರಿತಂ** = ಹೇಳಿರುವುದು, **ಅನ್ಯಥಾ** = ಬೇರೆ ರೀತಿ, **ನ ಚಿಂತಯ** = ತಿಳಿಯಬೇಡ, **ಅಹಂ ತು** = ನಾನಾದರು, **ಯೋಷಿದಿಚ್ಛಯಾ** = ಹೆಣ್ಣಿನಾಸೆಯಿಂದ, **ನ ಬ್ರವೀಮಿ** = ಹೇಳುತ್ತಿಲ್ಲ, **ಪಶ್ಯ** = ನೋಡು, **ಯದೃಶಃ** = ಎಂಥವನೆಂದು.

ತಾತ್ಪರ್ಯ :- ನಾನು (ಕೃಷ್ಣ) ನಿನ್ನ ಒಳ್ಳೆಯದಕ್ಕಾಗಿ ಹೇಳುತ್ತಿದ್ದೇನೆ ಅನ್ಯಥಾ ಭಾವಿಸಬೇಡ ನಾನು ಕೇವಲ ಹೆಣ್ಣಿನ ಆಸೆಯಿಂದ ಹೇಳುವುದಿಲ್ಲ ನಾನು ಎಂಥವನೆಂದು ನೋಡು ಎಂದು ತನ್ನ ರೂಪವನ್ನು ತೋರಿಸಿದನು.

ಉದೀರ್ಯ ಚೈವಮೀಶ್ವರಶ್ಚಕಾರ ಹಾಽವಿರಾತ್ಮನಃ ।
ಸ ವಿಶ್ವರೂಪಮುತ್ತಮಂ ವಿಸಂಖ್ಯಶೀರ್ಷಬಾಹುಕಮ್ ॥ ೫೪ ॥

ಪದಚ್ಛೇದ :- ಉದೀರ್ಯ, ಚ, ಏವಂ, ಈಶ್ವರಃ, ಚಕಾರ, ಹಾವಿರಾತ್ಮನಃ । ಸಃ, ವಿಶ್ವರೂಪಮ್, ಉತ್ತಮಂ, ವಿಸಂಖ್ಯಶೀರ್ಷಬಾಹ್ರಕಮ್ ॥

ಅರ್ಥ :- ಏವಂ = ಈ ರೀತಿಯಾಗಿ, ಉದೀರ್ಯ = ಹೇಳಿ, ಅವಿರಾತ್ಮನಃ = ನಾಶರಹಿತನಾದ ಈಶ್ವರಃ = ಒಡೆಯನಾದ ಶ್ರೀಕೃಷ್ಣನು, ಉತ್ತಮಂ = ಉತ್ತಮವಾದ, ವಿಸಂಖ್ಯಶೀರ್ಷಬಾಹುಕಂ = ಅಸಂಖ್ಯ ತಲೆ, ತೋಳುಗಳುಳ್ಳ ವಿಶ್ವರೂಪಂ = ವಿಶ್ವರೂಪವನ್ನು, ಚಕಾರ = ಮಾಡಿದನು (ತೋರಿದನು).

ತಾತ್ಪರ್ಯ :- ಈ ರೀತಿ ಹೇಳಿ ಎಲ್ಲರಿಗೂ ಸ್ವಾಮಿಯಾದ ಕೃಷ್ಣನು ತನ್ನ ವಿಶ್ವರೂಪವನ್ನು ತೋರಿದ. ಅದು ಹೇಗಿತ್ತು ಎಂದು ಎಣಿಸಲು ಅಸಾಧ್ಯವಾದ ತಲೆ, ತೋಳುಗಳಿಂದ ಯುಕ್ತವಾಗಿತ್ತು.

ಅನಂತತೇಜ ಆತತಂ ವಿಸಂಖ್ಯರೂಪಸಂಯುತಮ್ ।
ವಿಚಿತ್ರಮೌಲಿಕುಂಡಲಾಂಗದೋರುಹಾರನೂಪುರಮ್ ॥ ೫೫ ॥

ಪದಚ್ಛೇದ :- ಅನಂತತೇಜಃ, ಆತತಂ, ವಿಸಂಖ್ಯರೂಪಸಂಯುತಮ್ । ವಿಚಿತ್ರ ಮೌಲಿಕುಂಡಲಾಂಗದೋರುಹಾರನೂ ಪುರಮ್ ॥

ಅರ್ಥ :- ಅನಂತತೇಜಃ = ಅಪರಿಮಿತವಾದ ತೇಜಸ್ಸುಳ್ಳದ್ದು, ಆತತಂ = ಎಲ್ಲಾ ಕಡೆ ವ್ಯಾಪಿಸಿದೆ, ವಿಸಂಖ್ಯರೂಪ ಸಂಯುತಂ = ಅಸಂಖ್ಯ ರೂಪದಿಂದ ಕೂಡಿದೆ, ಚ = ಮತ್ತು, ವಿಚಿತ್ರ ನೂಪಪುರಂ = ವಿಚಿತ್ರ - ಸುಂದರವಾದ, ಮೌಲಿ - ಕೀರಿಟ, ಕುಂಡಲಾ = ಕರ್ಣಕುಂಡಲ, ಅಂಗದ = ಕೇಯೂರ, ಉರು = ಉತ್ತಮವಾದ, ಹಾರ = ಹೂವಿನ ಮಾಲೆ, ನೂಪುರಂ = ಗೆಜ್ಜೆಗಳುಳ್ಳದ್ದು.

ತಾತ್ಪರ್ಯ :- ಕೃಷ್ಣನ ವಿಶ್ವರೂಪದರ್ಶನವನ್ನು ತಿಳಿಸುತ್ತಿದ್ದಾರೆ. ಹೇಳಲು ಅಸಾಧ್ಯವಾದ ಕಾಂತಿ ಎಲ್ಲಾಕಡೆ ಹರಡಿದೆ ಗಣನೆ ಮಾಡಲು ಸಾಧ್ಯವಿಲ್ಲದಷ್ಟು ರೂಪದಿಂದ ಕೂಡಿದ್ದಾನೆ, ಮತ್ತು ರಮಣೀಯವಾದ ಕಿರೀಟ ಕರ್ಣಕುಂಡಲ ಕೇಯೂರ ಉತ್ತಮವಾದ ಹೂವಿನ ಹಾರ ಗೆಜ್ಜೆಗಳಿಂದ ಕೂಡಿದವನಿಗೆ ಶೋಭಿಸುತ್ತಿದ್ದಾನೆ.

ಜ್ವಲತ್ಸುಕೌಸ್ತುಭಪ್ರಭಾಭಿಭಾಸಕಂ ಶುಭಾಂಬರಮ್ ।
ಪ್ರಪಶ್ಯ ಯಾದೃಶಾಃ ಸ್ತ್ರಿಯೋ ಮಮೇತ್ಯದರ್ಶಯಚ್ಛ್ರಿಯಮ್ ॥ ೫೬ ॥

ಪದಚ್ಛೇದ :- ಜ್ವಲತ್ಸುಕೌಸ್ತಭಪ್ರಭಾಸಕಂ, ಶುಭಾಂಬರಮ್ । ಪ್ರಪಶ್ಯ, ಯಾದೃಶಾಃ, ಸ್ತ್ರಿಯಃ, ಮಮ, ಏತತ್, ಅದರ್ಶಯತ್, ಶ್ರಿಯಮ್ ॥

ಅರ್ಥ :- ಜ್ವಲಸ್ಸು ಸಕಂ ಜ್ವಲತ್ಸು = ಬೆಳಗುವ, ಕೌಸ್ತುಭ = ಕೌಸ್ತುಭಮಣಿಯ, ಪ್ರಭಾ = ಕಾಂತಿಗೂ, ಪ್ರಭಾಸಕಂ = ಕಾಂತಿಯನ್ನು ನೀಡುವಂಥಹ, ಶುಭಾಂಬರಂ = ಉತ್ತಮವಾದ ವಸ್ತ್ರವನ್ನು ಧರಿಸಿರುವ (ನನ್ನ ವಿಶ್ವರೂಪವನ್ನು), ಪ್ರಪಶ್ಯ = ನೋಡು, ಯಾದೃಶಾಃ = ಎಂಥವರು, ಮಮ = ನನ್ನ, ಸ್ತ್ರಿಯಃ = ಪತ್ನಿಯರು (ಎಂದು), ಏತತ್ = ಈ, ಶ್ರಿಯಮ್ = ಲಕ್ಷ್ಮೀದೇವಿಯನ್ನು, ಅದರ್ಶಯತ್ = ತೋರಿಸಿದನು.

ತಾತ್ಪರ್ಯ :- ಭಗವಂತ ಧರಿಸಿರುವ ಕೌಸ್ತುಭಮಣಿಯ ಪ್ರಭೆಗೂ ಪ್ರಭೆಯನ್ನು ಕೊಡುವಂಥಹದ್ದು ಈ ವಿಶ್ವರೂಪವಾಗಿ ಮತ್ತು ಉತ್ತಮವಾದ ವಸ್ತ್ರವನ್ನು ಧರಿಸಿರುವ ಶ್ರೀಕೃಷ್ಣ ನನ್ನ ಪತ್ನಿಯರನ್ನು ನೋಡು ಎಂದು ಲಕ್ಷ್ಮೀದೇವಿಯನ್ನು ತೋರಿಸಿದ.

ಅನಂತರೂಪಿಣೀಂ ಪರಾಂ ಮನುಷ್ಯದೃಷ್ಟಿತೋಽಧಿಕಾಮ್ ।
ಸ್ವರುಗ್ಮಿಣೀತನೋರಪಿ ವ್ಯದರ್ಶಯಚ್ಚ ದೇವತಾಃ ॥ ೫೭ ॥

ಪದಚ್ಛೇದ :- ಅನಂತರೂಪಿಣೀಂ, ಪರಾಂ, ಮನುಷ್ಯದೃಷ್ಟಿತಃ, ಅಧಿಕಾಮ್ । ಸಃ, ರುಗ್ಮಿಣೀತನೋಃ, ಅಪಿ, ವ್ಯದರ್ಶಯತ್, ಚ, ದೇವತಾಃ ॥

ಅರ್ಥ :- ಅನಂತರೂಪಿಣೀಂ = ಅತ್ಯಂತ ಸೌಂದರ್ಯವತಿಯಾದ, ಪರಾಂ = ಮಹಾಲಕ್ಷ್ಮೀಯ, ಮನುಷ್ಯದೃಷ್ಟಿತಃ = ಮನುಷ್ಯ ದೃಷ್ಟಿಯಿಂದ,

**ರುಗ್ಮಿಣೀತನ್ವೋಃ ಅಪಿ** = ರುಗ್ಮಿಣಿಯ ಕಾಯದ ರೂಪಕ್ಕಿಂತಲೂ, **ಅಧಿಕಾಂ** = ಹೆಚ್ಚಾಗಿ ಕಂಗೊಳಿಸುತ್ತಿದ್ದಳು, **ಚ** = ಮತ್ತು, **ಸಃ** = ಆ ಶ್ರೀಕೃಷ್ಣನು, **ದೇವತಾಃ** = ತನ್ನ ಅಂಗಾಂಗಗಳನ್ನು ಆಶ್ರಯಿಸಿದ್ದ ದೇವತೆಗಳನ್ನು, **ವ್ಯದರ್ಶಯತ್** = ವಿಶ್ವರೂಪದಲ್ಲಿ ತೋರಿದ.

**ತಾತ್ಪರ್ಯ** :- ಮನುಷ್ಯ ದೃಷ್ಟಿಯಿಂದ ರುಗ್ಮಿಣಿದೇವಿಯ ರೂಪಕ್ಕಿಂತಲೂ ಉತ್ತಮಳಾದ ಅನಂತ ರೂಪಿಣಿಯಾದ ಲಕ್ಷ್ಮಿಯು ಹೆಚ್ಚಾಗಿ ಕಂಗೊಳಿಸುತ್ತಿದ್ದಳು ಹಾಗೂ ಭಗವಂತನ ಅಂಗಗಳನ್ನು ಆಶ್ರಯಿಸಿದ ದೇವತೆಗಳ ಆ ವಿಶ್ವರೂಪದರ್ಶನದಲ್ಲಿ ಕಂಡರು.

**ತದದ್ಭುತಂ ಸಮೀಕ್ಷ್ಯ ತು ಪ್ರಭೀತ ಆಸ ಭೀಷ್ಮಕಃ ।**
**ಪಪಾತ ಪಾದಯೋರ್ವಿಭೋಃ ಕರೋಮಿ ತತ್ ತಥೇತಿ ಚ ॥ ೫೮ ॥**

**ಪದಚ್ಛೇದ :– ತತ್, ಅದ್ಭುತಂ, ಸಮೀಕ್ಷ್ಯ, ತು, ಪ್ರಭೀತಃ, ಆಸ, ಭೀಷ್ಮಕಃ । ಪಪಾತ, ಪಾದಯೋಃ, ವಿಭೋಃ, ಕರೋಮಿ, ತತ್, ತದಾ, ಇತಿ, ಚ ॥**

**ಅರ್ಥ** :- **ತತ್** = ಆ, **ಅದ್ಭುತಂ** = ಅದ್ಭುತವಾದ ವಿಶ್ವರೂಪವನ್ನು, **ಸಮೀಕ್ಷ್ಯ** = ನೋಡಿ, **ಭೀಷ್ಮಕಃ ತು** = ಭೀಷ್ಮಕನಾದರೂ, **ಪ್ರಭೀತಃ ಆಸ** = ಬಹಳ ಭಯಪಟ್ಟವನು ಆದ, **ಚ** = ಮತ್ತು, **ವಿಭೋಃ** = ಪ್ರಭುವಿನ, **ಪಾದಯೋಃ** = ಕಾಲುಗಳಿಗೆ, **ಪಪಾತ** = ಬಿದ್ದು, **ತತ್ ತಥಾ** = ಹೇಳಿದಂತೆ, **ಕರೋಮಿ** = ಮಾಡುತ್ತೇನೆ, **ಇತಿ** = ಎಂದು (ಹೇಳಿದ).

**ತಾತ್ಪರ್ಯ** :- ಭಗವಂತನ ಅತ್ಯದ್ಭುತವಾದ ವಿಶ್ವರೂಪವನ್ನು ಕಂಡು ಭಯಭೀತನಾದ ಭೀಷ್ಮಕ, ಭಗವಂತನ ಕಾಲುಗಳಿಗೆ ಎರಗಿ ನೀನು ಹೇಳಿದಂತೆ ಮಾಡುವೆನು ಎಂದ.

**ಪುನಶ್ಚ ವಿಶ್ವರೂಪತಾಂ ಪಿಧಾಯ ಪದ್ಮಲೋಚನಃ ।**
**ಜಗಾಮ ಪಕ್ಷಿವಾಹನಃ ಪುರೀಂ ಸ್ವಬಾಹುಪಾಲಿತಾಮ್ ॥ ೫೯ ॥**

ಪದಚ್ಛೇದ :– ಪುನಃ, ಚ, ವಿಶ್ವರೂಪತಾಂ, ಪಿಧಾಯ, ಪದ್ಮಲೋಚನಃ । ಜಗಾಮ, ಪಕ್ಷಿವಾಹನಃ, ಪುರೀಂ, ಸ್ವಬಾಹುಪಾಲಿತಾಮ್ ॥

**ಅರ್ಥ** :- **ಪುನಃ ಚ** = ಅನಂತರ, **ವಿಶ್ವರೂಪತಾಂ** = ವಿಶ್ವರೂಪವನ್ನು, **ಪಿಧಾಯ** = ಮರೆಮಾಚಿ, **ಪದ್ಮಲೋಚನಃ** = ಕಮಲದಂತೆ ಕಣ್ಣುಗಳುಳ್ಳ ಶ್ರೀಕೃಷ್ಣನು, **ಸ್ವಬಾಹುಪಾಲಿತಾಂ** = ತನ್ನ ಬಾಹುಬಲದಿಂದ ರಕ್ಷಿಸಲ್ಪಟ್ಟ, **ಪುರೀಂ** = ಪಟ್ಟಣಕ್ಕೆ, **ಪಕ್ಷಿವಾಹನಃ** = ಗರುಡ ವಾಹನನಾಗಿ, **ಜಗಾಮ** = ಹಿಂತಿರುಗಿದ.

**ತಾತ್ಪರ್ಯ** :- ಅನಂತರ ತನ್ನ ಅದ್ಭುತವಾದ ವಿಶ್ವರೂಪವನ್ನು ಮರೆಮಾಡಿ ತನ್ನ ಬಾಹುವಿನಿಂದ ರಕ್ಷಿತವಾಗಿದ್ದ ನಗರಕ್ಕೆ ಗರುಡನ ಮೇಲೆ ಕುಳಿತು ಹಿಂತಿರುಗಿದ.

**ಅಪಾಂಪತಿಶ್ಚ ಮೈಥಿಲಃ ಸ್ವಯಂವರಂಕೃತಾವಪಿ ।**
**ಹರಿಂ ವಿನಿಶ್ಚಯಾದಿಯಂ ವ್ರಜೇದಿತಿ ಸ್ಮ ಚಕ್ರತುಃ ॥ ೬೦ ॥**

**ಪದಚ್ಛೇದ** :- **ಅಪಾಂಪತಿಃ, ಚ, ಮೈಥಿಲಃ, ಸ್ವಯಂವರಂಕೃತೌ, ಅಪಿ । ಹರಿಂ, ವಿನಿಶ್ಚಯಾತ್, ಇಯಂ, ವ್ರಜೇತ್, ಇತಿ, ಸ್ಮ, ಚಕ್ರತುಃ ॥**

**ಅರ್ಥ** :- **ಅಪಾಂಪತಿಃ** = ಸಮುದ್ರರಾಜನು, **ಚ** = ಮತ್ತು, **ಮೈಥಿಲಃ** = ಮಿಥಿಲೆಯ ಸ್ವಾಮಿಯಾದ ಜನಕನು, **ಸ್ವಯಂವರಂ** = ಸ್ವಯಂವರವನ್ನು, **ಕೃತೌ ಅಪಿ** = ಏರ್ಪಾಟು ಮಾಡಿದ್ದರೂ, **ಇಯಂ** = ಇವಳು, **ವಿನಿಶ್ಚಯಂ** = ನಿಶ್ಚಯವಾಗಿ, **ಹರಿ** = ಶ್ರೀಹರಿಯನ್ನು, **ವ್ರಜೇತ್** = ಹೊಂದುತ್ತಾಳೆ, **ಇತಿ ಸ್ಮ** = ಎಂಬುದಾಗಿ, **ಚಕ್ರತುಃ** = ಮಾಡಿದರು.

**ತಾತ್ಪರ್ಯ** :- ಹಿಂದೆ ಸಮುದ್ರರಾಜ ಜನಕ ಸ್ವಯಂವರ ಏರ್ಪಡಿಸಿದ್ದರು ಅವರಿಗೆ ನಿಶ್ಚಯವಿತ್ತು, ತಮ್ಮ ಮಗಳು ಹರಿಯನ್ನೇ ಸೇರುತ್ತಾಳೆಂದು ಆದ್ದರಿಂದ ಸ್ವಯಂವರ ನಡೆಸಿದ್ದರು.

**ಸ್ವಯಂವರಃ ಕ್ಷಿತೇರ್ಭುಜಾಂ ಸ್ವಧರ್ಮ ಇತ್ಯತೋ ದ್ವಯೋಃ ।**
**ನ ದೋಷಾ ಆಸ ಭೀಷ್ಮಕೋ ನ ಕೇಶವಾರ್ಥಮೈಚ್ಛತ ॥ ೬೧ ॥**

**ಪದಚ್ಛೇದ** :- **ಸ್ವಯಂವರ, ಕ್ಷಿತೇಃ, ಭುಜಾಂ, ಸ್ವಧರ್ಮ, ಇತ್ಯತಃ, ದ್ವಯೋಃ । ನ, ದೋಷಃ, ಆಸ, ಭೀಷ್ಮಕಃ, ನ, ಕೇಶವಾರ್ಥಮ್, ಐಚ್ಛತ ॥**

**ಅರ್ಥ** :- **ಸ್ವಯಂವರಃ** = ಸ್ವಯಂವರವು, **ಕ್ಷಿತೇಃ ಭುಜಾಂ** = ಭೂಮಿಯಲ್ಲಿರುವ ರಾಜರುಗಳಿಗೆ, **ಸ್ವಧರ್ಮ** = ಕ್ಷತ್ರಿಯಧರ್ಮ, **ಇತ್ಯತಃ**

= ಎಂಬುದಾಗಿ, **ದ್ವಯೋಃ** = ಅವರಿಬ್ಬರಿಗೂ, **ನ ದೋಷ ಆಸ** = ದೋಷವೆನಿಸಲಿಲ್ಲ (ಆದರೆ), **ಭೀಷ್ಮಕಃ** = ಭೀಷ್ಮಕನು (ಸ್ವಯಂವರವನ್ನು), **ಕೇಶವಾರ್ಥಂ** = ಕೃಷ್ಣನಿಗಾಗಿ, **ನ ಐಚ್ಛತ** = ಮಾಡಲು ಬಯಸಲಿಲ್ಲ.

**ತಾತ್ಪರ್ಯ** :- ಸ್ವಯಂವರ ಕ್ಷತ್ರಿಯರಿಗೆ ಸ್ವಧರ್ಮವಾದುದರಿಂದ ಅವರಿಬ್ಬರಿಗೂ ಸ್ವಯಂವರ ದೋಷವೆನಿಸಲಿಲ್ಲ. ಆದರೆ ಭೀಷ್ಮಕ ಕೃಷ್ಣನಿಗಾಗಿ ಸ್ವಯಂವರವನ್ನು ಮಾಡಲು ಬಯಸಲಿಲ್ಲ.

**ಅತೋ ಹರೌ ಪ್ರಬೋಧ್ಯ ತಂ ಗತೇ ಕೃಪಾಲುಸತ್ತಮೇ ।**
**ವಶೀಕೃತೇ ಚ ಭೀಷ್ಮಕೇ ನೃಪಾಸ್ತ್ವಮಂತ್ರಯನ್ ಪುನಃ ॥ ೬೨ ॥**

**ಪದಚ್ಛೇದ** :- ಅತಃ, ಹರೌ, ಪ್ರಬೋಧ್ಯ, ತಂ, ಗತೇ, ಕೃಪಾಲು ಸತ್ತಮೇ । ವಶೀಕೃತೇ, ಚ, ಭೀಷ್ಮಕೇ, ನೃಪಾಃ, ತು, ಅಮಂತ್ರಯನ್, ಪುನಃ ॥

**ಅರ್ಥ** :- **ಅತಃ** = ಆದ್ದರಿಂದ, **ಕೃಪಾಲುಸತ್ತಮೇ** = ಪರಮ ಕರುಣಾಳುವಾದ ಶ್ರೀಕೃಷ್ಣನು, **ತಂ** = ಆ ಭೀಷ್ಮಕನನ್ನು, **ಪ್ರಬೋಧ್ಯ** = ಎಚ್ಚರಿಸಿ, **ಗತೇ** = ಹೋದಮೇಲೆ, **ಭೀಷ್ಮಕೇ ಚ** = ಭೀಷ್ಮಕನಾದರು, **ಹರೌ** = ಕೃಷ್ಣನಲ್ಲಿ, **ವಶೀಕೃತೇ (ಸತಿ)** = ವಶವರ್ತಿಯಾಗುತ್ತಿರಲು, **ನೃಪಾಃ ತು** = ರಾಜರುಗಳಾದರೂ, **ಪುನಃ** = ಮತ್ತೇ, **ಅಮಂತ್ರಯನ್** = ಮಂತ್ರಾಲೋಚನೆ ಮಾಡಿದರು.

**ತಾತ್ಪರ್ಯ** :- ದಯಾಳುವಾದ ಕೃಷ್ಣ ಭೀಷ್ಮಕನಿಗೆ ಎಚ್ಚರಿಸಿ ಹೋದಮೇಲೆ, ಭೀಷ್ಮಕನು ಕೃಷ್ಣನಿಗೆ ವಶವಾದಾಗ, ರಾಜರುಗಳು ಪುನಃ ಮಂತ್ರಾಲೋಚನೆ ಮಾಡಿದರು.

**ಯಶಶ್ಚ ಧರ್ಮಮುತ್ತಮಂ ವಿಧಿತ್ಸತಾ ವೃಕೋದರೇ ।**
**ನ ಕೇಶವೇನ ಸೂದಿತೋ ಜರಾಸುತೋ ಹಿ ಮನ್ಯತೇ ॥ ೬೩ ॥**

**ಪದಚ್ಛೇದ** :- ಯಶಃ, ಚ, ಧರ್ಮಮ್, ಉತ್ತಮಂ, ವಿಧಿತ್ಸತಾ, ವೃಕೋದರೇ । ನ, ಕೇಶವೇನ, ಸೂದಿತಃ, ಜರಾಸುತಃ, ಹಿ, ಮನ್ಸತೇ ॥

**ಅರ್ಥ** :- **ವೃಕೋದರೇ** = ಭೀಮನಲ್ಲಿ, **ಯಶಃ** = ಕೀರ್ತಿ, **ಚ** = ಮತ್ತು, **ಉತ್ತಮಂ ಧರ್ಮಂ** = ಉತ್ತಮವಾದ ಧರ್ಮವನ್ನು, **ವಿಧಿತ್ಸತಾ** =

ಉಂಟುಮಾಡಲು, ಜರಾಸುತಃ = ಜರಾಸಂಧನು, ಕೇಶವೇನ = ಕೇಶವನಿಂದ, ನ ಸೂದಿತಃ = ಕೊಲ್ಲಲಿಲ್ಲ, ಹಿ = ಆದರೆ (ಜರಾಸಂಧ), ಮನ್ಯತೇ = ಆಲೋಚಿಸಿದ.

ತಾತ್ಪರ್ಯ :- ಶ್ರೀಕೃಷ್ಣ ಭೀಮನಿಗೆ ಕೀರ್ತಿ ಹಾಗೂ ಪುಣ್ಯ ಸಿಗಬೇಕೆಂದು ಜರಾಸಂಧನನ್ನು ಸಂಹರಿಸದೆ ಬಿಟ್ಟಿದ್ದ ಆದರೆ ಜರಾಸಂಧ ಹೀಗೆ ಆಲೋಚಿಸಿ.

**ವರಾಚ್ಛಿವಸ್ಯ ಮಾಮಯಂ ನ ಹಂತುಮೀಷ್ಟ ಉತ್ತಮಾತ್ ।**
**ಅತಃ ಶಿವಪ್ರಸಾದತೋ ಜಿತೋಽಪಿ ಜೇಷ್ಯ ಉತ್ತರಮ್ ॥ ೬೪ ॥**

ಪದಚ್ಛೇದ :- ವರಾತ್, ಶಿವಸ್ಯ, ಮಾಮ್, ಅಯಂ, ನ, ಹತುಮ್, ಈಷ್ಟ, ಉತ್ತಮಾತ್ । ಅತಃ, ಶಿವಪ್ರಸಾದತಃ, ಜಿತಃ, ಅಪಿ, ಜೇಷ್ಯ, ಉತ್ತರಮ್ ॥

ಅರ್ಥ :- ಉತ್ತಮಾತ್ = ಉತ್ತಮವಾದ, ಶಿವಸ್ಯ = ಶಿವನ, ವರಾತ್ = ವರದಿಂದ, ಅಯಂ = ಇವನು (ಕೃಷ್ಣ), ಮಾಮ್ = ನನ್ನನ್ನು, ಹತುಂ = ಕೊಲ್ಲಲು, ನ ಈಷ್ಟ = ಶಕ್ತನಾಗುತ್ತಿಲ್ಲ, ಅತಃ = ಆದ್ದರಿಂದ, ಜಿತಃ ಅಪಿ = ಕೃಷ್ಣನಿಂದ ಗೆದ್ದಿದ್ದರೂ, ಶಿವಪ್ರಸಾದತಃ = ಶಿವನ ಅನುಗ್ರಹದಿಂದ, ಉತ್ತರಂ = ಮುಂದೆ, ಜೇಷ್ಯ = ಗೆಲ್ಲುವೆ.

ತಾತ್ಪರ್ಯ :- ನನಗೆ ಶಿವನ ಪ್ರಬಲವಾದ ವರವಿದ್ದ ಕಾರಣ, ಕೃಷ್ಣ ನನ್ನನ್ನು ಕೊಲ್ಲಲು ಶಕ್ತನಾಗುತ್ತಿಲ್ಲ. ಆದ್ದರಿಂದ ಇಂದು ನಾನು ಸೋತಿದ್ದರು ಮುಂದೆ ಶಿವನ ಪ್ರಸಾದದಿಂದ ಗೆಲ್ಲುವೆ ಎಂದು ಆಲೋಚಿಸಿದ.

**ಮೃಧೇಮೃಧೇ ಜಿತೋಽಪಿ ಸನ್ ದೃಢಾಶಯಾ ಪುನಃ ಪುನಃ ।**
**ಸಮೀಹತೇ ಯುಧೇ ಶಿವಂ ನಚಾವಮನ್ಯತೇ ಕ್ವಚಿತ್ ॥ ೬೫ ॥**

ಪದಚ್ಛೇದ :- ಮೃಧೇ, ಮೃಧೇ, ಜಿತಃ, ಅಪಿ, ಸನ್, ದೃಢಾಶಯಾ, ಪುನಃ, ಪುನಃ । ಸಮೀಹತೇ, ಯುಧೇ, ಶಿವಂ, ನ, ಚ, ಅವಮನ್ಯತೇ, ಕ್ವಚಿತ್ ॥

ಅರ್ಥ :- ಮೃಧೇ ಮೃಧೇ = ಪ್ರತಿ ಯುದ್ಧದಲ್ಲಿ, ಜಿತಃ ಅಪಿ = (ಸೋತಿದ್ದರು) ಕೃಷ್ಣನಿಂದ ಜಯಿಸಲ್ಪಟ್ಟರು, ದೃಢಾಶಯಾ ಸನ್ = ಬಲವಾದ ಆಸೆಯಿಂದ, ಪುನಃ ಪುನಃ = ಪ್ರತಿಬಾರಿಯೂ, ಯುದೇ = ಯುದ್ಧವನ್ನು,

**ಸಮೀಹಿತೇ** = ಬಯಸಿದನು, **ಕ್ವಚಿತ್** = ಎಂದೂ (ಶಿವನನ್ನು), **ನ ಚ ಅವಮನ್ಯತೇ** = ಕಡಿಮೆಯವನೆಂದು ತಿಳಿಯಲಿಲ್ಲ.

**ತಾತ್ಪರ್ಯ :-** ಪ್ರತಿ ಯುದ್ಧದಲ್ಲಿ ಕೃಷ್ಣ ಜರಾಸಂಧನನ್ನು ಸೋಲಿಸಿದರೂ ಅವನು ಕೃಷ್ಣನನ್ನು ಗೆಲ್ಲಬೇಕೆಂದು ಮತ್ತೆ ಮತ್ತೆ ಯುದ್ಧ ಮಾಡುವುದಕ್ಕೆ ಜಯಿಸಿದ ಯಾವತ್ತು ಶಿವನನ್ನು ಕೃಷ್ಣನಿಗಿಂತ ತಾರತಮ್ಯ ಬಲದಲ್ಲಿ ಚಿಕ್ಕವನೆಂದು ತಿಳಿಯಲಿಲ್ಲ.

**ಅತಃ ಪುನಶ್ಚ ಭೂಮಿಪಾನುವಾಚ ಬಾರುಹದ್ರಥಃ ।**
**ಧಿಗೇವ ಪೌರುಷಂ ಹಿ ನೋ ಯದೇಷ ನೋಽಜಯತ್ ಸದಾ ॥ ೬೬ ॥**

**ಪದಚ್ಛೇದ :-** ಅತಃ, ಪುನಃ, ಚ, ಭೂಮಿಪಾನ್, ಉವಾಚ, ಬಾರುಹದ್ರಥಃ । ಧಿಕ್, ಏವ, ಪೌರುಷಂ, ಹಿ, ನಃ, ಯತ್, ಏಷಃ, ನಃ, ಅಜಯತ್, ಸದಾ ॥

**ಅರ್ಥ :- ಅತಃ** = ಆದ್ದರಿಂದ, **ಪುನಃ ಚ** = ಮತ್ತೂ ಕೂಡ, **ಬಾರುಹದ್ರಥಃ** = ಜರಾಸಂಧ, **ಭೂಮಿಪಾನ್** = ರಾಜರುಗಳನ್ನು ಕುರಿತು, **ಉವಾಚ** = ಹೇಳಿದ, **ನಃ** = ನಮ್ಮ, **ಪೌರುಷಂ** = ಪೌರುಷತ್ವಕ್ಕೆ (ಬಲಕ್ಕೆ), **ಧಿಕ್ ಏವ** = ಧಿಕ್ಕಾರವಿರಲಿ, **ಯತ್** = ಯಾವ ಕಾರಣದಿಂದ, **ಏಷಃ** = ಈ ಕೃಷ್ಣನು, **ಸದಾ** = ಯಾವಾಗಲು, **ಅಜಯತ್ ಹಿ** = ಗೆಲ್ಲುತ್ತಲಿದ್ದಾನಷ್ಟೆ.

**ತಾತ್ಪರ್ಯ :-** ಜರಾಸಂಧ ರಾಜರಿಗೆಲ್ಲ ಹೇಳಿದ ನಮ್ಮ ಪೌರುಷತ್ವಕ್ಕೆ ಧಿಕ್ಕಾರವಿರಲಿ ಏಕೆಂದರೆ ಕೃಷ್ಣ ನಮ್ಮನ್ನು ಯಾವಾಗಲೂ ಗೆಲ್ಲುತ್ತಲೆ ಬಂದಿದ್ದಾನೆ.

**ಅಭೂಪತೇರ್ನಚಾಽಸನಂ ಪ್ರದೇಯಮಿತ್ಯುದಾಹೃತಮ್ ।**
**ಅಮುಷ್ಯ ನಸ್ತದನ್ಯಥಾ ಬಭೂವ ಚಿಂತಿತಂ ನೃಪಾಃ ॥ ೬೭ ॥**

**ಪದಚ್ಛೇದ :-** ಅಭೂಪತೇಃ, ನ, ಚ, ಆಸನಂ, ಪ್ರದೇಯಂ, ಇತಿ, ಉದಾಹೃತಮ್ । ಅಮುಷ್ಯ, ನಃ, ತತ್, ಅನ್ಯಥಾ, ಬಭೂವ, ಚಿಂತಿತಂ, ನೃಪಾಃ ॥

**ಅರ್ಥ :- ನೃಪಾಃ** = ರಾಜರುಗಳೇ! **ಅಭೂಪತೇಃ** = ರಾಜನಲ್ಲದವನಿಗೆ, **ಆಸನಂ** = ಆಸನವನ್ನು, **ನ ಚ ಪ್ರದೇಯಂ** = ಕೊಡಬಾರದು, **ಇತಿ** = ಎಂದು, **ಉದಾಹೃತವ್** = ಹೇಳಿದೆವು (ಆದರೆ), **ಅಮುಷ್ಯ** = ಈ ಕೃಷ್ಣನ

ವಿಷಯದಲ್ಲಿ, **ನಃ** = ನಮ್ಮ, **ತತ್** = ಆ, **ಚಿಂತಿತಂ** = ಚಿಂತನೆಯು, **ಅನ್ಯಥಾ ಬಭೂವ** = ಬೇರೆ ರೀತಿಯಾಗಿದೆ.

**ತಾತ್ಪರ್ಯ** :- ಜರಾಸಂಧ ರಾಜರಿಗೆ ಹೇಳುತ್ತಿದ್ದಾನೆ. ನಾವೆಲ್ಲ ಕೃಷ್ಣನಿಗೆ ಕುಳಿತುಕೊಳ್ಳಲು ಆಸನ ನೀಡಬಾರದೆಂದು ಹೇಳಿದ್ದೆವು. ಆದರೆ ಕೃಷ್ಣನ ವಿಷಯದಲ್ಲಿ ನಮ್ಮ ಆಲೋಚನೆ ತಳಕ ಮಳಕವಾಗಿದೆ (ಬೇರೆ ರೀತಿಯಾಗಿದೆ).

**ಅಯಂ ನೃಪೋತ್ತಮಾಂಗಣೇ ಮಹೇಂದ್ರಪೀಠಮಾರುಹತ್ ।**
**ಸಮಸ್ತರಾಜರಾಜತಾಮವಾಪ ನೋಽಪ್ಯನಿಚ್ಛತಾಮ್ ॥ ೬೮ ॥**

**ಪದಚ್ಛೇದ** :- ಅಯಂ, ನೃಪೋತ್ತಮಾಂಗಣೇ, ಮಹೇಂದ್ರಪೀಠಮ್, ಆರುಹತ್ । ಸಮಸ್ತರಾಜರಾಜತಾಮ್, ಅವಾಪ, ನಃ ಅಪಿ, ಅನಿಚ್ಛತಾಮ್ ॥

**ಅರ್ಥ** :- **ಅಯಂ** = ಶ್ರೀ ಕೃಷ್ಣನು, **ನೃಪೋತ್ತಮಾಂಗಣೆ** = ಓಲಗ ಶಾಲೆಯಲ್ಲಿ, **ಮಹೇಂದ್ರಪೀಠಂ** = ದೇವೇಂದ್ರನಿತ್ತ ಆಸನವನ್ನು, **ಆರುಪತ್** = ಏರಿದನು, **ಸಮಸ್ತರಾಜರಾಜತಾಂ** = ಎಲ್ಲಾ ರಾಜರಿಗೂ ರಾಜನಾಗಿ, **ಅವಾಪ** = ಆದ, **ನಃ** = ನಾವು, **ಅನಿಚ್ಛತಾಂ** = ಆಗಬಾರದೆಂದು ಅಂದುಕೊಂಡಿದ್ದನ್ನು, **ಅವಾಪ** = ಪಡೆದ.

**ತಾತ್ಪರ್ಯ** :- ಉತ್ತಮರಾಜರು ಕುಳಿತುಕೊಳ್ಳುವ ಅಂಗಳದಲ್ಲಿ ದೇವೇಂದ್ರನಿತ್ತ ಆಸನದಲ್ಲಿ ಕುಳಿತ, ಎಲ್ಲಾ ರಾಜರಿಗೂ ರಾಜರಾದ ನಾವು ಆಗಬಾರದೆಂದುಕೊಂಡಿದ್ದೆವೋ ಅದು ಆಯಿತು.

**ಅತಃ ಪುನಃ ಕಥಂ ಹರಿಂ ವಯಂ ಜಯೇಮ ಚಿಂತ್ಯತಾಮ್ ।**
**ಯಥಾ ಚ ಭೀಷ್ಮಕಾತ್ಮಜಾಮವಾಪ್ನುಯಾಚ್ಚ ಚೇದಿರಾಟ್ ॥ ೬೯ ॥**

**ಪದಚ್ಛೇದ** :- ಅತಃ, ಪುನಃ, ಕಥಂ, ಹರಿಂ, ವಯಂ, ಜಯೇಮ, ಚಿಂತ್ಯತಾಮ್ । ಯಥಾ, ಚ, ಭೀಷ್ಮಕಾತ್ಮಜಾಮ್, ಅವಾಪ್ನುಯಾತ್, ಚ, ಚೇದಿರಾಟ್ ॥

**ಅರ್ಥ** :- **ಅತಃ** = ಆದ್ದರಿಂದ, **ಪುನಃ** = ಮತ್ತೆ, **ಕಥಂ** = ಹೇಗೆ, **ಹರಿಂ** = ಕೃಷ್ಣನನ್ನು, **ವಯಂ** = ನಾವು, **ಜಯೇಮ** = ಜಯಿಸೋಣ?, **ಚ** = ಮತ್ತು, **ಚೇದಿರಾಟ್** = ಶಿಶುಪಾಲ, **ಯಥಾ** = ಯಾವ ರೀತಿಯಾಗಿ, **ಭೀಷ್ಮಕಾತ್ಮಜಾಂ**

= ಭೀಷ್ಮಕನ ಮಗಳಾದ ರುಗ್ಮಿಣಿಯನ್ನು, ಅಪ್ನುಯಾತ್ ಚ = ಹೊಂದಿಯಾನು? (ಎಂದು), ಚಿಂತ್ಯತಾಂ = ಚಿಂತಿಸೋಣ.

ತಾತ್ಪರ್ಯ :- ಕೃಷ್ಣನನ್ನು ಗೆಲ್ಲುವ ಬಗೆಯನ್ನು , ಶಿಶುಪಾಲ ರುಗ್ಮಿಣಿಯನ್ನು ಹೇಗೆ ಪಡೆಯುತ್ತಾನೆ ಎಂದು ನಾವು ಆಲೋಚಿಸೋಣ.

**ಅಯಂ ಹಿ ದತ್ತಪುತ್ರಕೋ ಮೌರಸಾದ್ ವಿಶಿಷ್ಯತೇ ।**
**ಅತೋ ನಿವೇಶ್ಯ ಏಷಃ ಮೇ ಸುರೂಪಿಣೀ ಚ ರುಗ್ಮಿಣೀ ॥ ೭೦ ॥**

ಪದಚ್ಛೇದ :- ಅಯಂ, ಹಿ, ದತ್ತಪುತ್ರಕಃ, ಮಮ, ಜಾರಸಾತ್, ವಿಶಿಷ್ಯತೇ । ಅತಃ, ನಿವೇಷ್ಯ, ಏಷ, ಮೇ, ಸುರೂಪಿಣೀ, ಚ, ರುಗ್ಮಿಣೀ ॥

ಅರ್ಥ :- ಅಯಂ ಹಿ = ಈ ಶಿಶುಪಾಲನಾದರೂ, ಮಮ = ನನಗೆ, ದತ್ತಪುತ್ರಕಃ = ದತ್ತುಪುತ್ರ, ಏಷಃ = ಇವನು, ಔರಸಾತ್ = ಔರಸಪುತ್ರನಿಗಿಂತ, ವಿಶಿಷ್ಯತೇ = ಹೆಚ್ಚು ಪ್ರಿಯ, ಅತಃ = ಆದ್ದರಿಂದ, ಮೇ = ನನಗೆ, (ಏಷಃ = ಇವನಿಗೆ), ನಿವೇಶ್ಯ = ವಿವಾಹ ಮಾಡಬೇಕು, ಚ = ಮತ್ತು, ರುಗ್ಮಿಣೀ = ರುಗ್ಮಿಣಿಯು, ಸುರೂಪಿಣೀ = ತುಂಬಾ ಸುಂದರಿಯಾಗಿದ್ದಾಳೆ.

ತಾತ್ಪರ್ಯ :- ಶಿಶುಪಾಲ ನನಗೆ ದತ್ತುಪುತ್ರನಾಗಿದ್ದರೂ ಔರಸಪುತ್ರನಿಗಿಂತ ತುಂಬಾ ಪ್ರೀತಿಪಾತ್ರನಾಗಿದ್ದಾನೆ ಆದ್ದರಿಂದ ಇವನಿಗೆ ನಾನು ಮದುವೆ ಮಾಡಬೇಕು ರುಗ್ಮಿಣಿಯೂ ಸಹ ಅತೀ ಸುಂದರಳಾಗಿದ್ದಾಳೆ.

**ಶಿವಾಗಮೇಷು ಶಿಷ್ಯಕಾಃ ಸರುಗ್ಮಿಸಾಲ್ವಪೌಂಡ್ರಕಾಃ ।**
**ಮಮಾಖಿಲಾ ನೃಪಾಸ್ತತಃ ಕುರುಧ್ವಮೇತದೇವ ಮೇ ॥ ೭೧ ॥**

ಪದಚ್ಛೇದ :- ಶಿವಾಗಮೇಷು, ಶಿಷ್ಯಕಾಃ, ಸರುಗ್ಮಿಸಾಲ್ವ ಪೌಂಡ್ರಕಾಃ । ಮಮ, ಅಖಿಲಾಃ, ನೃಪಾಃ, ತತಃ, ಕುರುಧ್ವಂ, ಏತತ್, ಏವ, ಮೇ ॥

ಅರ್ಥ :- ಶಿವಾಗಮೇಷು = ಶಿವಾಗಮಗಳಲ್ಲಿ, ಸರುಗ್ಮಿಸಾಲ್ವಪೌಂಡ್ರಕಾಃ = ರುಗ್ಮಿ, ಸಾಲ್ವ ಪೌಂಡ್ರಕ ಮುಂತಾದವರು, ಅಖಿಲಾಃ = ಎಲ್ಲಾ, ನೃಪಾಃ = ರಾಜರುಗಳೂ, ಮಮ = ನನ್ನ, ಶಿಷ್ಯಕಾಃ = ಶಿಷ್ಯರು, ತತಃ = ಅದ್ದರಿಂದ, ಮೇ = ನನ್ನ, ಏತತ್ ಏವ = ಅಭೀಷ್ಟವನೆಲ್ಲ, ಕುರುಧ್ವ = ಮಾಡಬೇಕು.

ತಾತ್ಪರ್ಯ :- ಶಿವಾಗಮಗಳಲ್ಲಿ ರುಗ್ಮಿ, ಸಾಲ್ವ, ಪೌಂಡ್ರಕ ಮೊದಲಾದ ಎಲ್ಲಾ ರಾಜರುಗಳೆಲ್ಲ ನನಗೆ ಶಿಷ್ಯರಾಗಿದ್ದರಿಂದ ನನ್ನ ಎಲ್ಲಾ ಅಭಿಲಾಷೆಯನ್ನು ಪೂರೈಸಿ ಕೊಡಬೇಕು.

**ಇತೀರಿತೇ ತು ಸೌಭರಾಡ್ ಜಗಾದ ರುಗ್ಮಿಸಂವಿದಾ ।**
**ಸ್ವಯಂವರೋ ನಿವರ್ತಿತಃ ಸ್ವಸಾರಮೇಷ ದಾಸ್ಯತಿ ॥ ೭೨ ॥**

**ಪದಚ್ಛೇದ :- ಇತಿ, ಈರಿತೇ, ತು, ಸೌಭರಾಟ್, ಜಗಾದ, ರುಗ್ಮಿಸಂವಿದಾ । ಸ್ವಯಂವರಃ, ನಿವರ್ತಿತಃ, ಸ್ವಸಾರಮ್, ಏಷಃ, ದಾಸ್ಯತಿ ॥**

**ಅರ್ಥ :- ಸೌಭರಾಟ್** = ಜರಾಸಂಧ, **ಈ ರಿತೇತು** = ಹೇಳುತ್ತಿರಲು, **ರುಗ್ಮಿಸಂವಿದಾ** = ರುಗ್ಮಿಯ ಅನುಮತಿಯಿಂದ, **ಜಗಾದ** = ಸಾಲ್ವ ನುಡಿದ, **ಸ್ವಯಂವರಃ** = ಸ್ವಯಂವರವು, **ನಿವರ್ತಿತಃ** = ಕೈಬಿಡಲಾಗಿದೆ, **ಏಷಃ** = ರುಗ್ಮಿ, **ಸ್ವಸಾರಂ** = ತನ್ನ ತಂಗಿಯನ್ನು, **ದಾಸ್ಯತಿ** = ಶಿಶುಪಾಲನಿಗೆ ಕೊಡುತ್ತಾನೆ, ಇತಿ=ಎಂದು.

ತಾತ್ಪರ್ಯ :- ಜರಾಸಂಧ ಹೇಳಿದ ಮಾತನ್ನು ಕೇಳಿ ರುಗ್ಮಿಯ ಅನುಮತಿ ಪಡೆದ ಸಾಲ್ವ ಹೇಳಿದ, ಸ್ವಯಂ ವರವು ಕೈಬಿಡಲಾಗಿದೆ ರುಗ್ಮಿ ತನ್ನ ತಂಗಿಯನ್ನು ತಾನೆ ಶಿಶುಪಾಲನಿಗೆ ಕೊಡುತ್ತಾನೆ ಎಂದು.

**ನಚಾತಿವರ್ತಿತುಂ ಕ್ಷಮಃ ಪಿತಾಽಸ್ಯ ಚೇದಿಪಾಯ ತಾಮ್ ।**
**ಪ್ರದಾತುಕಾಮಮಾತ್ಮಜಂ ವಯೋಗತಸ್ತಥಾಽಬಲಃ ॥ ೭೩ ॥**

**ಪದಚ್ಛೇದ :- ನ, ಚ, ಅತಿವರ್ತಿತುಂ, ಕ್ಷಮಃ, ಪಿತಾ, ಅಸ್ಯ, ಚೇದಿಪಾಯ, ತಾಮ್ । ಪ್ರದಾತುಕಾಮಮ್, ಆತ್ಮಜಂ, ವಯೋಗತಃ, ತಥಾ, ಅಬಲಃ ॥**

**ಅರ್ಥ :- ತಾಂ** = ಆ ರುಗ್ಮಿಣಿಯನ್ನು, **ಚೇದಿಪಾಯ** = ಶಿಶುಪಾಲನಿಗೆ, **ಪ್ರದಾತುಕಾಮಂ** = ಕೊಡಲು ಬಯಸಿದ, **ಆತ್ಮಜಂ** = ಮಗನನ್ನು, **ವಯೋಗತಃ** = ವೃದ್ಧನೂ, **ತಥಾ** = ಹಾಗೆಯೇ, **ಅಬಲಃ** = ದುರ್ಬಲನೂ ಆದ, **ಅಸ್ಯ** = ಇವನ, **ಪಿತಾ** = ತಂದೆ, **ಅತಿವರ್ತಿತುಂ** = ವಿರುದ್ಧವಾಗಿ ವರ್ತಿಸಲು, **ನ ಚ ಕ್ಷಮಃ** = ಸಮರ್ಥನಾಗಲಾರ.

**ತಾತ್ಪರ್ಯ** :- ಮಗನು ತನ್ನ ತಂಗಿಯಾದ ರುಗ್ಮಿಣಿಯನ್ನು ಶಿಶುಪಾಲನಿಗೆ ಕೊಡಲು ಬಯಸಿದರೆ ವೃದ್ಧ, ಬಲಹೀನನಾದ ತಂದೆ ಮಗನ ವಿರುದ್ಧವಾಗಿ ನಡೆಯಲು ಸಮರ್ಥನಾಗಲಾರ.

**ಸ್ವಯಂ ತು ಕೃಷ್ಣ ಏತ್ಯ ನೋ ವಿಜಿತ್ಯ ಕನ್ಯಕಾಂ ಹರೇತ್ ।**
**ತತೋಽಸ್ಯ ಪೂರ್ವಮೇವ ನೋ ಹ್ಯಭಾವತಾ ಕೃತಾ ಶುಭಾ ॥ ೭೪ ॥**

**ಪದಚ್ಛೇದ** :- **ಸ್ವಯಂ, ತು, ಕೃಷ್ಣ, ಏತ್ಯ, ನಃ, ವಿಜಿತ್ಯ, ಕನ್ಯಕಾಂ, ಹರೇತ್ । ತತಃ, ಅಸ್ಯ, ಪೂರ್ವಮ್, ಏವ, ನಃ, ಹಿ, ಅಭಾವತಾ, ಕೃತಾ, ಶುಭಾ ॥**

**ಅರ್ಥ** :- **ತು** = ಆದರೆ, **ಸ್ವಯಂ ಕೃಷ್ಣ** = ಸಾಕ್ಷಾತ್ ಕೃಷ್ಣ, **ಏತ್ಯ** = ಒಂದು, **ನಃ** = ನಮ್ಮನ್ನು, **ವಿಜಿತ್ಯ** = ಗೆದ್ದು **ಕನ್ಯಕಾಂ** = ಕನ್ಯೆಯನ್ನು, **ಹರೇತ್** = ಅಪಹರಿಸಬಹುದು, **ತತಃ** = ಆದ್ದರಿಂದ, **ಅಸ್ಯ** = ಇವನ, **ಪೂರ್ವಮೇವ** = ಮೊದಲೆ, **ಅಭಾವತಾ ಹಿ** = ನಾಶಮಾಡಬೇಕಷ್ಟೆ (ಅದು), **ನಃ** = ನಮಗೆ, **ಶುಭಾಕೃತಾ** = ಒಳಿತಾಗುವುದು.

**ತಾತ್ಪರ್ಯ** :- ನಮ್ಮನ್ನು ಸ್ವಯಂ ಕೃಷ್ಣನೇ ಬಂದು ಗೆದ್ದು ರುಗ್ಮಿಣಿಯನ್ನು ಅಪಹರಿಸಬಹುದು. ಅದಕ್ಕೆ ಮೊದಲೇ ಅವನ ನಾಶಮಾಡಿದರೆ ಅದು ನಮಗೆ ಒಳ್ಳೆಯದಾಗುವುದು.

**ಉಪಾಯ ಏಷ ಚಿಂತಿತೋ ಮಯಾಽತ್ರ ಮಾಗಧೇಶ್ವರ ।**
**ಮುನಿಂ ಹಿ ಗರ್ಗನಾಮಕಂ ಹ್ಯಮುಷ್ಯ ಶ್ಯಾಲ ಆಕ್ಷಿಪತ್ ॥ ೭೫ ॥**

**ಅರ್ಥ** :- **ಮಾಗಧೇಶ್ವರ** = ಜರಾಸಂಧನೇ, **ಅತ್ರ** = ಈ ವಿಷಯದಲ್ಲಿ, **ಮಯಾ** = ನನ್ನಿಂದ, **ಏಷಃ** = ಈ, **ಉಪಾಯಃ** = ಉಪಾಯವು, **ಚಿಂತಿತಃ** = ಚಿಂತಿಸಲ್ಪಟ್ಟಿದೆ, **ಗರ್ಗನಾಮಕಂ ಮುನಿಂ** = ಗರ್ಗ ಎಂಬ ಹೆಸರಿನ ಮುನಿಯನ್ನು, **ಅಮುಷ್ಯ** = ಈ ಗರ್ಗಮುನಿಯ, **ಶ್ಯಾಲಃ** = ಭಾವನು, **ಆಕ್ಷಿಪತ್** = ಆಕ್ಷೇಪಿಸಿದನು.

**ತಾತ್ಪರ್ಯ** :- ಎಲೈ ಜರಾಸಂದನೆ! ಈ ವಿಷಯದಲ್ಲಿ ನಾನೊಂದು ಉಪಾಯವನ್ನು ಮಾಡಿರುವೆನು. ಗರ್ಗನಾಮಕ ಮುನಿಯನ್ನು ಇವನ ಭಾವನು ಗೇಲಿ ಮಾಡಿದನು.

**ಯದಾऽಸ್ಯ ಷಂಢತೋದಿತಾ ಮುನೇಃ ಪುರೋ ಹಿ ತಸ್ಯ ಚ ।**
**ಪರೇಣ ವೃಷ್ಣಯೋऽಹಸಂಶ್ಚುಕೋಪ ಗರ್ಗ ಏಷು ॥ ೭೬ ॥**

**ಅರ್ಥ** :- **ತಸ್ಯ** = ಆ ಕೃಷ್ಣನ, **ಪುರಃ** = ಮುಂಭಾಗದಲ್ಲಿ, **ಅಸ್ಯ ಮುನೇಃ** = ಈ ಗರ್ಗ ಮುನಿಗೆ, **ಷಂಢತಃ** = ನಪುಂಸಕತ್ವವು, **ಉದಿತಾ** = ಹೇಳಲ್ಪಟ್ಟಿತೋ, **ತದಾ** = ಆಗ, **ಪರೇಣ** = ಕೃಷ್ಣನಿಂದ ಪ್ರೇರಿತರಾದ, **ವೃಷ್ಣಯಃ** = ಯಾದವರು, **ಅಹಸನ್** = ನಕ್ಕರು, **ಗರ್ಗಃ** = ಗರ್ಗಾಚಾರ್ಯರಾದರೋ, **ಏಷು** = ಈ ಯಾದವರಲ್ಲಿ, **ಚುಕೋಪ** = ಕೋಪಗೊಂಡನು, **ಹಿ** = ನಿಶ್ಚಯವು.

**ತಾತ್ಪರ್ಯ** :- ಗರ್ಗ ಮುನಿಯ ಮುಂದೆ ಯಾವಾಗ ಅವನ ಭಾವನು ಷಂಢನು ಎಂದು ಗೇಲಿ ಮಾಡಿದನೋ ಶ್ರೀಕೃಷ್ಣನೂ ಸೇರಿದಂತೆ ಎಲ್ಲ ಯಾದವರೂ ನಕ್ಕರು ಗರ್ಗಾಚಾರ್ಯರು ಅವರೆಲ್ಲರಲ್ಲಿಯೂ ಕುಪಿತನಾದರು.

**ಚಕಾರ ಹಿ ಪ್ರತಿಶ್ರವಂ ಸಮಾರ್ಜಯೇ ಸುತಂ ದ್ರುತಮ್ ।**
**ಅಕೃಷ್ಣತಾಂ ಯ ಆನಯೇದ್ ಭುವೋऽಪಿ ವೃಷ್ಣಿನಾಶಕಃ ॥ ೭೭ ॥**

**ಅರ್ಥ** :- **ವೃಷ್ಣಿನಾಶಕಃ** = ಯಾದವಕುಲನಾಶಕನಾದ, **ಭುವೋऽಪಿ** = ಭೂಮಿಯ ದೆಸೆಯಿಂದಲೂ, **ಅಕೃಷ್ಣತಾಂ** = ಕೃಷ್ಣನಿಲ್ಲದಿರುವಂತೆ, **ಯಃ** = ಯಾವನು, **ಆನಯೇತ್** = ಮಾಡುವನೊ, **ಸುತಂ** = (ಅಂತಹ) ಮಗನನ್ನು, **ದ್ರುತಂ** = ಕೂಡಲೆ, **ಸಮಾರ್ಜಯೇತ್** = ಸಂಪಾದಿಸುವನು, **ಪ್ರತಿಶ್ರವಂ** = (ಈ ರೀತಿಯಾದ) ಪ್ರತಿಜ್ಞೆಯನ್ನು, **ಚಕಾರಃ** = ಮಾಡಿದನು.

**ತಾತ್ಪರ್ಯ** :- ಗರ್ಗ ಮುನಿಯು ಕೂಡಲೇ ಸಿಟ್ಟಿನಿಂದ, ಭೂಮಿಯಲ್ಲಿ ಯಾದವರು ಇಲ್ಲದಂತೆ ಮಾಡುವ ಕೃಷ್ಣನಿಲ್ಲದಿರುವಂತೆ ಮಾಡುವ ಒಬ್ಬ ಮಗನನ್ನು ಸಂಪಾದಿಸುತ್ತೇನೆ ಎಂದು ಪ್ರತಿಜ್ಞೆ ಮಾಡಿದನು.

**ಯತೋ ಹಿ ಕೃಷ್ಣಸಂಶ್ರಯಾದ್ ಬತಾಪಹಾಸಿತಾ ವಯಮ್ ।**
**ಇತಿ ಬ್ರುವನ್ ವನಂ ಯಯೌ ತಪಶ್ಚ ಶೈವಮಾಚರತ್ ॥ ೭೮ ॥**

**ಅರ್ಥ** :- **ಚ** = ಮತ್ತು, **ಯತಃ** = ಯಾವ ಕಾರಣದಿಂದ, **ಕೃಷ್ಣಸಂಶ್ರಯಾತ್** = ಶ್ರೀಕೃಷ್ಣನ ಆಶ್ರಯದಿಂದ, **ವಯಂ** = ನಾವು, **ಅಪಹಾಸಿತಾಃ** = ಅಪಹಾಸ್ಯಕ್ಕೆ ಗುರಿಯಾಗಿರುವೆವು, **ಬತ** = ಅಯ್ಯೊ, **ಇತಿ** =

ಈ ರೀತಿಯಾಗಿ, **ಬ್ರುವನ್** = ಹೇಳುವವನಾಗಿ, **ಶೈವಂ** = ಶೀವ ಸಂಬಂಧಿ-ಯಾದ, **ತಪಃ** = ತಪಸ್ಸನ್ನು , **ಆಚರನ್** = ಆಚರಿಸಲು, **ವನಂ** = ಕಾಡನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ** :- ಶ್ರೀಕೃಷ್ಣನ ಆಶ್ರಯದಿಂದಲೇ ನಾವೆಲ್ಲರೂ ಇಂದಿನ ದಿವಸ ಅಪಹಾಸ್ಯಕ್ಕೀಡಾದೆವು ಎಂದು ಗೋಗರೆಯುತ್ತಾ ಕಾಡನ್ನು ಕುರಿತು ಹೋಗಿ ಶಿವನನ್ನು ಕುರಿತು ತಪಸ್ಸನ್ನಾಚರಿಸಿದನು.

**ಸ ಚೂರ್ಣಮಾಯಸಂ ತ್ವದನ್ ದದರ್ಶ ಚಾಬ್ದತಃ ಶಿವಮ್ ।**
**ವರಂ ತತೋಽಭಿಪೇದಿವಾನ್ ಸುತಂ ಹರೇರಭಾವದಮ್ ॥ ೭೯ ॥**

**ಅರ್ಥ** :- **ಸಃ ತು** = ಆ ಮುನಿಯಾದರೊ, **ಆಯಸಂ ಚೂರ್ಣಂ** = ಕಬ್ಬಿಣದ ಪುಡಿಯನ್ನಾದರೊ, **ಅದನ್** = ತಿನ್ನುವವನಾಗಿ, **ಅಬ್ದತಃ** = ಒಂದು ವರ್ಷದಲ್ಲಿ, **ಶಿವಂ** = ಈಶ್ವರನನ್ನು, **ದದರ್ಶ** = ಕಂಡನು, **ತತಃ** = ಅವನ ದೆಸೆಯಿಂದ, **ಹರೇಃ** = ಭಗವಂತನ, **ಅಭಾವದಂ** = ಇಲ್ಲದಂತೆ ಮಾಡುವ, **ಸುತಂ** = ಮಗನನ್ನು, **ವರಂ** = ವರವನ್ನಾಗಿ, **ಅಭಿಪೇದಿವಾನ್** = ಪಡೆದನು.

**ತಾತ್ಪರ್ಯ** :- ಆ ಗರ್ಗ ಮುನಿಯು ಒಂದು ವರ್ಷ ಕಾಲ ಕಬ್ಬಿಣದ ಪುಡಿಯನ್ನು ತಿನ್ನುತ್ತ ತಪಸ್ಸನ್ನಾಚರಿಸಿ ಅವನನ್ನು ಸಾಕ್ಷಾತ್ಕರಿಸಿಕೊಂಡ ಮತ್ತು ಶ್ರೀಕೃಷ್ಣನಿಲ್ಲದಿರುವಂತೆ ಮಾಡುವ ಒಬ್ಬ ಮಗನನ್ನೂ ಸಹ ಪಡೆದನು.

**ಸ ವಿಷ್ಣುದೈವತೋಽಪಿ ಸನ್ ಪ್ರವಿಷ್ಟ ಉಲ್ಬಣಾಸುರೈಃ ।**
**ವ್ಯಧಾದ್ಧರೇಃ ಪ್ರತೀಪಕಂ ವ್ರತಂ ಚ ನೈಷ್ಠಿಕಂ ಜಹೌ ॥ ೮೦ ॥**

**ಅರ್ಥ** :- **ಸಃ** = ಅವನು, **ವಿಷ್ಣುದೈವತೋಽಪಿ** = ವಿಷ್ಣು ಭಕ್ತನಾದರೂ, **ಉಲ್ಬಣಾಸುರೈಃ** = ಕ್ರೂರ ದೈತ್ಯರಿಂದ, **ಪ್ರವಿಷ್ಟ ಸನ್** = ಪ್ರವೇಶಿಸಿದವನಾಗಿ, **ಹರೇಃ** = ಭಗವಂತನ, **ಪ್ರತೀಪಕಂ** = ವಿರೋಧವನ್ನು, **ವ್ಯಧಾತ್** = ಮಾಡಿದನಷ್ಟೆ, **ನೈಷ್ಠಿಕಂ** = ನೈಷ್ಠಿಕವಾದ, **ವ್ರತಂ ತು** = ಬ್ರಹ್ಮಚರ್ಯ-ವ್ರತವನ್ನಾದರೂ, **ಜಹೌ** = ಬಿಟ್ಟನು.

**ತಾತ್ಪರ್ಯ** :- ಆ ಗರ್ಗ ಮುನಿಯು ವಿಷ್ಣುಭಕ್ತನಾದರೂ ಕೂಡ ದೈತ್ಯರಿಂದ ಆವಿಷ್ಟನಾಗಿ ಭಗವಂತನ ವಿರೋಧವನ್ನು ಮಾಡಿದನು. ಅಷ್ಟೆ ಅಲ್ಲದೆ ನೈಷ್ಠಿಕ ಬ್ರಹ್ಮಚರ್ಯ ವ್ರತವನ್ನು ಬಿಟ್ಟನು.

**ತಮಾರ ಚಾऽಸುರಾಪ್ಸರಾ ಬಲಿಷ್ಠಪುತ್ರಕಾಮ್ಯಯಾ ।**
**ಪ್ರವಿಶ್ಯ ಗೋಪಿಕಾಂಗನಾಸಮೂಹಮಧ್ಯಮುಲ್ಬಣಾ ॥ ೮೧ ॥**

**ಅರ್ಥ :-** **ತಂ** = ಆ ಗರ್ಗ ನಾಮಕ ಮುನಿಯನ್ನು, **ಉಲ್ಬಣಾಃ** = ಕ್ರೂರರಾದ, **ಅಸುರಾಪ್ಸರಾಃ** = ದುಷ್ಟರಾದ ರಾಕ್ಷಸ/ಅಪ್ಸರಾಸ್ತ್ರೀಯರು, **ಬಲಿಷ್ಟಪುತ್ರಕಾಮ್ಯಯಾ** = ಬಲಿಷ್ಠನಾದ ಪುತ್ರನನ್ನು ಪಡೆಯುವ ಇಚ್ಛೆಯಿಂದ, **ಗೋಪಿಕಾಂಗನಾಸಮೂಹಮಧ್ಯಂ** = ಗೋಪಿಕಾಸ್ತ್ರೀಯರ ಸಮೂಹದ ಮಧ್ಯ ಭಾಗವನ್ನು ಕುರಿತು, **ಪ್ರವಿಗ್ಯ** = ಪ್ರವೇಶಿಸಿ, (ಮುನಿಯನ್ನು) **ಆರ** = ಹೊಂದಿದರು.

**ತಾತ್ಪರ್ಯ :-** ದುಷ್ಟರಾದ ರಾಕ್ಷಸಅಪ್ಸರಸ್ತ್ರೀಯರು ಬಲಿಷ್ಠನಾದ ಪುತ್ರನನ್ನು ಪಡೆಯುವ ಬಯಕೆಯಿಂದ ಗೋಪಿಕಾಸ್ತ್ರೀಯರ ಸಮೂಹವನ್ನು ಪ್ರವೇಶಿಸಿ ಗರ್ಗ ಮುನಿಯನ್ನು ಹೊಂದಿದರು.

**ಸ ಯಾವನೇನ ಭೂಭೃತಾ ಹಿ ಗೋಪಿಕಾಭಿರರ್ಚಿತಃ ।**
**ಅಪುತ್ರಕೇಣ ಜಾನತಾ ಮುನೇರ್ಮನೋऽನುಚಿಂತಿತಮ್ ॥ ೮೨ ॥**

**ಅರ್ಥ :-** **ಮುನೇಃ** = ಗರ್ಗ ಮುನಿಯ, **ಮನೋऽನುಚಿಂತಿತಂ** = ಮನಸ್ಸಿನಿಂದ ಚಿಂತಿಸಲ್ಪಟ್ಟದ್ದನ್ನು, **ಜಾನತಾ** = ತಿಳಿದ, **ಯಾವನೇನ** = ಯವನ ಸಂಬಂಧಿ, **ಭೂಭೃತಾಃ** = ರಾಜನಿಂದ, **ಗೋಪಿಕಾಭಿಃ** = ಗೋಪಿಕಾಸ್ತ್ರೀಯರಿಂದ, **ಸಃ** = ಆ ಗರ್ಗನಾಮಕ ಮುನಿಯು, **ಅರ್ಚಿತಃ** = ಪೂಜಿಸಲ್ಪಟ್ಟನು, **ಹಿ** = ನಿಶ್ಚಯವು.

**ತಾತ್ಪರ್ಯ :-** ಗರ್ಗ ಮುನಿಯ ಮನೋಭಿಲಾಷೆಯನ್ನು ಸಂತತಿಹೀನನಾಗಿದ್ದ ಯವನರಾಜ ಗೋಪಿಕೆಯರ ಮೂಲಕ ಗರ್ಗ ಮುನಿಯನ್ನು ಉಪಚರಿಸಿದ.

**ಸ ಚಾಪ್ಸರಸ್ತನೌ ಸುತಂ ನಿಷಿಚ್ಯ ಯಾವನಾಯ ಚ ।**
**ದದೌ ವಿಮೋಹಿತಃ ಕ್ರುಧಾ ಕಿಮೇತದೀಶ ವೈರಿಣಃ ॥ ೮೩ ॥**

**ಅರ್ಥ :-** **ಕ್ರುಧಾ** = ಕೋಪದಿಂದ (ಕೃಷ್ಣನ ಮೇಲಿನ), **ಸ ಚ** = ಆ ಮುನಿಯಾದರೂ, **ವಿಮೋಹಿತಃ** = ಮೈಮರೆತು, **ಅಪ್ಸರಃ ತನೌ** =

ಅಪ್ಸರಾಸ್ತ್ರೀಯ ದೇಹದಲ್ಲಿ, **ಸುತಃ** = ಮಗನನ್ನು, **ನಿಷಿಚ್ಯ** = ಉತ್ಪಾದಿಸಿ, **ಯೂವನಾಯ** = ಯವನ ರಾಜನಿಗೆ, **ದದೌ** = ಕೊಟ್ಟನು, **ಈಶ** = ಶಿವನ, **ವೈರಿಣಃ** = ಶತ್ರುವಾದ ಶ್ರೀಕೃಷ್ಣನಿಗೆ, **ಕಿಮೇತತ್** = ಇದೇನು (ಅತ್ಯಲ್ಪವೇ)

**ತಾತ್ಪರ್ಯ** :- ಆ ಮುನಿಯಾದರೋ ಶ್ರೀಕೃಷ್ಣನ ಮೇಲಿನ ಕೋಪದಿಂದ ಮೈಮರೆತು ಅಪ್ಸರಾಸ್ತ್ರೀಯ ದೇಹದಲ್ಲಿ ಒಂದು ಮಗನನ್ನು ಹುಟ್ಟಿಸಿ ಯವನರಾಜನಿಗೆ ಕೊಟ್ಟನು. ಜರಾಸಂಧನೇ! ಶಿವದ್ವೇಷಿಯಾದ ಶ್ರೀಕೃಷ್ಣನಿಗೆ ಇದೇನು ಆಶ್ಚರ್ಯವಲ್ಲ.

**ಸ ಆಶ್ರಮಾಚ್ಚ ನೈಷ್ಠಿಕಾದ್ ವಿದೂಷಿತಃ ಪ್ರತೀಪಕೃತ್ ।**
**ಹರೇಶ್ಚ ತಾಪಮೇಯಿವಾನ್ ಜಗರ್ಹ ಚಾSತ್ಮಶೇಮುಷೀಮ್ ॥ ೮೪ ॥**

**ಅರ್ಥ** :- **ಸಃ** = ಗರ್ಗ ಮುನಿಯು, **ನೈಷ್ಠಿಕಾತ್ ಆಶ್ರಮಾತ್** = ನೈಷ್ಠಿಕವಾದ ಬ್ರಹ್ಮಚರ್ಯದಿಂದ, **ವಿದೂಷಿತಃ** = ದೂಷಿತನೂ, **ಹರೇಃ** = ಭಗವಂತನ, **ಪ್ರತೀಪಕೃತ್** = ವಿರೋಧವನ್ನು ಮಾಡಿದವನಾಗಿ, **ತಾಪಂ** = ಪಶ್ಚಾತ್ತಾಪವನ್ನು, **ಏಯಿವಾನ್** = ಹೊಂದಿದನು, **ಚ** = ಮತ್ತು, **ಆತ್ಮಶೇಮುಷಿಂ** = ತನ್ನ ಬುದ್ಧಿಯನ್ನು, **ಜಗಹೇ** = ನಿಂದಿಸಿದನು.

**ತಾತ್ಪರ್ಯ** :- ನಂತರ ಗರ್ಗ ಮುನಿಯು ತನ್ನ ನೈಷ್ಠಿಕ ಬ್ರಹ್ಮಚರ್ಯ ವ್ರತ ಲೋಪದಿಂದಲೂ ಹಾಗೂ ಭಗವಂತನ ವಿರೋಧವನ್ನು ಮಾಡಿದ್ದರಿಂದ ಪಶ್ಚಾತ್ತಾಪಗೊಂಡವನಾಗಿ ತನ್ನ ಬುದ್ಧಿಯನ್ನು ನಿಂದಿಸಿದನು.

**ಜಗಾಮ ಚಾರಣಂ ಹರಿಂ ಪ್ರಪಾಹಿ ಮಾಂ ಸುಪಾಪಿನಮ್ ।**
**ಇತಿ ಸ್ಮ ವಿಷ್ಣ್ವನುಜ್ಞಯಾ ಚಕಾರ ವೈಷ್ಣವಂ ತಪಃ ॥ ೮೫ ॥**

**ಅರ್ಥ** :- **ಸುಪಾಪಿನಂ** = ಪಾಪಿಷ್ಠನಾದ, **ಮಾಂ** = ನನ್ನನ್ನು, **ಪ್ರಪಾಹಿ** = ಕಾಪಾಡು, **ಇತಿ** = ಎಂದು, **ಹರಿಂ** = ಭಗವಂತನನ್ನು, **ಅರಣಂ** = ಶರಣಾಗತನಾಗಿ, **ಜಗಾಮ** = ಹೊಂದಿದನು, **ಚ** = ಮತ್ತು, **ವಿಷ್ಣ್ವನುಜ್ಞಯಾ** = ಭಗವಂತನ ಅಪ್ಪಣೆಯಿಂದ, **ವೈಷ್ಣವಂ** = ವಿಷ್ಣು ಸಂಬಂಧಿಯಾದ, **ತಪಃ** = ತಪಸ್ಸನ್ನು, **ಚಕಾರಃ ಸ್ಮ** = ಮಾಡಿದನಷ್ಟೆ.

**ತಾತ್ಪರ್ಯ :-** ಪಾಪಿಯಾದ ನನ್ನನ್ನು ರಕ್ಷಿಸು ಎಂದು ಆ ಭಗವಂತನಿಗೆ ಮೊರೆ ಹೋದನು ನಂತರ ವಿಷ್ಣು ಸಂಬಂಧಿಯಾದ ತಪಸ್ಸನ್ನು ಆಚರಿಸಿದನು.

**ಕುತೋ ಹಿ ಭಾಗ್ಯಮಾಪತೇನ್ಮುನೇಃ ಶಿವಾರ್ಚನೇ ಸದಾ ।**
**ಭವಾದೃಶಾ ಹಿ ದಾನವಾಃ ಸ್ಥಿರಾಃ ಶಿವಾರ್ಚನೇ ಸದಾ ॥ ೮೬ ॥**

**ಪದಚ್ಛೇದ :-** **ಕುತಃ, ಹಿ, ಭಾಗ್ಯಂ, ಆಪತೇತ್, ಮುನೇಃ, ಶಿವಾರ್ಚನೇ, ಸದಾ । ಭವಾದೃಶಾಃ, ಹಿ, ದಾನವಾಃ, ಸ್ಥಿರಾಃ, ಶಿವಾರ್ಚನೇ, ಸದಾ ॥**

**ಅರ್ಥ :-** **ಸದಾ** = ಯಾವಾಗಲೂ, **ಶಿವಾರ್ಚನೆ** = ಶಿವನ ಅರ್ಚನೆಯಲ್ಲಿರುವ, **ಭಾಗ್ಯಂ** = ಭಾಗ್ಯವು, **ಮುನೇಃ** = ಮುನಿಗೆ, **ಕುತಃ** = ಯಾವ ಕಾರಣದಿಂದ, **ಆಪತೇತ್** = ಬಂದೀತು, **ಭವಾದೃಶಾಃ** = ನಿನ್ನಂತಹ, **ದಾನವಾಃ** = ದಾನವರು, **ಸದಾ** = ಯಾವಾಗಲೂ, **ಶಿವಾರ್ಚನೆ** = ಶಿವನ ಆರಾಧನೆಯಲ್ಲಿ, **ಸ್ಥಿರಾಃ** = ಸ್ಥಿರವಾಗಿರುವರು, **ಹಿ** = ನಿಶ್ಚಯವು.

**ತಾತ್ಪರ್ಯ :-** ಶಿವನ ಆರಾಧನೆಯನ್ನು ಮಾಡುವಂತಹ ಭಾಗ್ಯ ಆ ಮುನಿಗೆ ಎಲ್ಲಿಂದ ಬಂದೀತು ? ನಿನ್ನಂತಹ ದಾನವರು ಮಾತ್ರ ಯಾವಾಗಲೂ ಶಿವನ ಆರಾಧನೆಯಲ್ಲಿ ಆಸಕ್ತರಾಗುವರು ನಿಶ್ಚಯವು.

**ಸುತೋऽಸ್ಯ ಕಾಲನಾಮಕೋ ಬಭೂವ ಕೃಷ್ಣಮರ್ದಿತುಮ್ ।**
**ಸದೈವ ಕಾಲಕಾಂಕ್ಷಣಾತ್ ಸ ಯಾವನಾಭಿಷೇಚಿತಃ ॥ ೮೭ ॥**

**ಪದಚ್ಛೇದ :-** **ಸುತಃ, ಅಸ್ಯ, ಕಾಲನಾಮಕಃ, ಬಭೂವ, ಕೃಷ್ಣಮರ್ದಿತುಮ್ । ಸದಾ, ಏವ, ಕಾಲಕಾಂಕ್ಷಣಾತ್, ಸಃ, ಯಾವನಾಭಿಷೇಚಿತಃ ॥**

**ಅರ್ಥ :-** **ಅಸ್ಯ** = ಗರ್ಗ ಮುನಿಯ, **ಸುತಃ** = ಮಗನು, **ಕೃಷ್ಣಮರ್ದಿತುಂ** = ಕೃಷ್ಣನನ್ನು ನಾಶ ಮಾಡಲು, **ಸದೈವ** = ಯಾವಾಗಲೂ, **ಕಾಲಕಾಂಕ್ಷಣಾತ್** = ಕಾಲವನ್ನು ಪ್ರತೀಕ್ಷೆ ಮಾಡಿದ್ದರಿಂದ, **ಸಃ** = ಅವನು, **ಕಾಲನಾಮಕಃ** = ಕಾಲ ಎಂದು ಹೆಸರುಳ್ಳವನು, **ಬಭೂವ** = ಆದನು, **ಯಾವನಾಭಿಷೇಯಿತಃ** = ಯವನರಾಜನಿಂದ ಅಭಿಷಕ್ತನು ಆದನು.

**ತಾತ್ಪರ್ಯ** :- ಗರ್ಗಾಚಾರ್ಯರ ಮಗನು ಶ್ರೀಕೃಷ್ಣನನ್ನು ಸಂಹಾರ ಮಾಡಲು ಯಾವಾಗಲೂ ಕಾಲವನ್ನು ನಿರೀಕ್ಷೆ ಮಾಡಿದ್ದರಿಂದ ಕಾಮನಾಮಕನಾದನು ಯವನರಾಜನಿಂದ ಅಭಿಷಕ್ತನಾದನು.

**ತವೈವ ಶಿಷ್ಯ ಏಷ ಚಾತಿಭಕ್ತಿಮಾನ್ ಹಿ ಶಂಕರೇ ।**
**ಪ್ರಭೂತಸೇನಯಾ ಯುತೋ ಬಲೋದ್ಧತಶ್ಚ ಸರ್ವದಾ ॥ ೮೮ ॥**

**ಅರ್ಥ** :- **ಏಷಃ** = ಈ ಕಾಲನು, **ತವೈವ** = ನಿನ್ನದೇ, **ಶಿಷ್ಯಃ** = ಶಿಷ್ಯನು, **ಶಂಕರೇ** = ರುದ್ರನಲ್ಲಿ, **ಅತಿಭಕ್ತಿಮಾನ್** = ಅತ್ಯಂತ ಭಕ್ತಿಯುಳ್ಳವನು, **ಹಿ** = ನಿಶ್ಚಯವು, **ಚ** = ಮತ್ತು, **ಪ್ರಭೂತಸೇನಯಾ** = ಬಹಳ ಸೇನೆಯಿಂದ, **ಯುತಃ** = ಕೂಡಿದವನು, **ಸರ್ವದಾ** = ಸದಾಕಾಲ, **ಬಲೋದ್ಧತಃ** = ಬಲದಿಂದ ಉದ್ಧಟನಾಗಿರುವನು.

**ತಾತ್ಪರ್ಯ** :- ಗರ್ಗ ಮುನಿಯ ಮಗನಾದ ಈ ಕಾಲಯವನು, ನಿನ್ನದೇ ಶಿಷ್ಯ ಮತ್ತು ರುದ್ರನಲ್ಲಿ ಅತ್ಯಂತ ಭಕ್ತಿಯುಳ್ಳವನು. ಬಹುಸೈನ್ಯದಿಂದ ಕೂಡಿದ ಇವನು ಯಾವಾಗಲೂ ಬಲದಿಂದ ದರ್ಪಿತನಾಗಿರುವನು.

**ತಮೇವ ಯಾಮಿ ಶಾಸನಾತ್ ತವೋಪನೀಯ ಸತ್ವರಮ್ ।**
**ವಿಕೃಷ್ಣಕಂ ವಿಧಾಯ ಚ ಕ್ಷಿತೇಸ್ತಲಂ ರಮಾಮಹೇ ॥ ೮೯ ॥**

**ಪದಚ್ಛೇದ** :- ತಮ್, ಏವ, ಯಾಮಿ, ಶಾಸನಾತ್, ತವ, ಉಪನೀಯ, ಸತ್ವರಂ । ವಿಕೃಷ್ಣಕಂ, ವಿಧಾಯ, ಕ್ಷಿತೇಸ್ತಲಂ, ರಮಾಮಹೇ ॥

**ಅರ್ಥ** :- **ಅಹಂ** = ನಾನು, **ಶಾಸನಾತ್** = ನಿನ್ನಾಜ್ಞೆಯಿಂದ, **ತಮೇವ** = ಅವನನ್ನೇ, **ಯಾಮಿ** = ಹೋಗುತ್ತೇನೆ, **ತವ** = ನಿನ್ನ (ಬಳಿ) **ಸತ್ವರಂ** = ಕೂಡಲೇ, **ಉಪನೀಯ** = ಸಮೀಪಿಸಿ, **ಚ** = ಮತ್ತು **ಕ್ಷಿತೇಸ್ತಲಂ** = ಭೂಭಾಗವನ್ನು, **ವಿಕೃಷ್ಣಕಂ** = ಕೃಷ್ಣನಿಲ್ಲದಿರುವಂತೆ, **ವಿಧಾಯಃ** = ಮಾಡಿ, **ರಮಾಮಹೇ** = ಸುಖದಿಂದ ಇರೋಣ.

**ತಾತ್ಪರ್ಯ** :- ನಾನು ನಿನ್ನ ಆದೇಶದಂತೆ ಕಾಲಯವನನ ಬಳಿ ಹೋಗುವೆನು. ಹಾಗೆಯೇ ಭೂಮಿಯಲ್ಲಿ ಕೃಷ್ಣನಿಲ್ಲದಿರುವಂತೆ ಮಾಡಿ ಸುಖದಿಂದ ಇರೋಣ.

ತತಶ್ಚ ರುಗ್ಮಿಣೀಂ ವಯಂ ಪ್ರದಾಪಯಾಮ ಚೇದಿಪೇ ।
ವಿನಾಶ್ಯ ದೇವಪಕ್ಷಿಣೋ ಯಥೇಷ್ಟಮಾಸ್ಮ ಸರ್ವದಾ ॥ ೯೦ ॥

ಪದಚ್ಛೇದ :- ತತಃ, ಚ, ರುಗ್ಮಿಣೀಂ, ವಯಂ, ಪ್ರದಾಪಯಾಮ, ಚೇದಿಪೇ, ವಿನಾಶ್ಯ, ದೇವಪಕ್ಷಿಣಃ, ಯಥೇಷ್ಟಂ, ಆಸ್ಮ, ಸರ್ವದಾ ॥

ಅರ್ಥ :- ತತಶ್ಚ = ಅನಂತರ, ವಯಂ = ನಾವು, ರುಗ್ಮಿಣೀಂ = ರುಗ್ಮಿಣಿಯನ್ನು, ಚೇದಿಪೇ = ಚೇದಿರಾಜನಿಗೆ, ಪ್ರದಾಪಯಾಮ = ಕೊಡಿಸೋಣ, ದೇವಪಕ್ಷಿಣಃ = ದೇವಪಕ್ಷದವರನ್ನು, ವಿನಾಶ್ಯ = ನಾಶಮಾಡಿ, ಸರ್ವದಾ = ಯಾವಾಗಲೂ, ಯಥೇಷ್ಟಂ = ಇಚ್ಛಾನುಸಾರ, ಆಸ್ಮ = ಇರೋಣ.

ತಾತ್ಪರ್ಯ :- ನಂತರ ನಾವೆಲ್ಲರೂ ಸೇರಿ ರುಗ್ಮಿಣಿಯನ್ನು ಶಿಶುಪಾಲನಿಗೆ ಕೊಡಿಸೋಣ ಮತ್ತು ದೇವತೆಗಳ ಪಕ್ಷದವರನ್ನು ನಾಶಪಡಿಸಿ ನಮ್ಮಿಚ್ಛೆ ಬಂದಂತೆ ಇರೋಣ.

ಇತೀರಿತೋ ಜರಾಸುತೋ ಬಭೂವ ದುರ್ಮನಾ ಭೃಶಮ್ ।
ಕಿರೀಟಮಂಡಿತಂ ಶಿರಶ್ಚಕಾರ ಚಾऽಶ್ವವಾಗ್ ಭೃಶಮ್ ॥ ೯೧ ॥

ಪದಚ್ಛೇದ :- ಇತಿ, ಈರಿತಃ, ಜರಾಸುತಃ, ಬಭೂವ, ದುರ್ಮನಾಃ, ಭೃಶಮ್, ಕಿರೀಟಮಂಡಿತಂ, ಶಿರಃ, ಚಕಾರ, ಚ, ಆಶು, ಅವಾಗ್, ಭೃಶಮ್ ॥

ಅರ್ಥ :- ಇತಿ = ಈ ರೀತಿಯಾಗಿ, ಈರಿತಃ = ಹೇಳಲ್ಪಟ್ಟಾಗ, ಜರಾಸುತಃ = ಜರಾಸಂಧನು, ಭೃಶಂ = ಬಹಳವಾಗಿ, ದುರ್ಮನಾಃ = ದುಃಖಿತನಾಗಿ, ಬಭೂವ = ಆದನು, ಚ = ಮತ್ತು, ಆಶು = ಕೂಡಲೆ, ಭೃಶಂ = ತುಂಬ, ಕಿರೀಟಮಂಡಿತಂ = ಕಿರೀಟದಿಂದ ಅಲಂಕೃತವಾದ, ಶಿರಃ = ತಲೆಯನ್ನು, ಅವಾಂ = ಕೆಳಗೆ, ಚಕಾರ = ಮಾಡಿದನು.

ತಾತ್ಪರ್ಯ :- ಈ ರೀತಿಯಾಗಿ ಸಾಲ್ವನು ಹೇಳಿದಾಗ ತುಂಬ ದುಃಖದಿಂದ ಜರಾಸಂಧನು ಕೂಡಿದನು. ಹಾಗೆಯೇ ಕಿರೀಟದಿಂದ ಅಲಂಕೃತವಾದ ತನ್ನ ತಲೆಯನ್ನು ಕೂಡಲೇ ಕೆಳ ಮಾಡಿದನು.

**ಕರಂ ಕರೇಣ ಪೀಡಯನ್ ನಿಶಾಮ್ಯ ಚಾಽತ್ಮನೋ ಭುಜೌ ।**
**ಜಗಾದ ಕಾರ್ಯಸಿದ್ಧಯೇ ಕಥಂ ಪ್ರಯಾಚಯೇ ಪರಮ್ ॥ ೯೨ ॥**

**ಪದಚ್ಛೇದ :-** ಕರಂ, ಕರೇಣ, ಪೀಡಯನ್, ನಿಶಾಮ್ಯ, ಚ, ಆತ್ಮನಃ, ಭುಜೌ, ಜಗಾದ, ಕಾರ್ಯಸಿದ್ಧಯೆ, ಕಥಂ, ಪ್ರಯಾಚಯೇ, ಪರಮ್ ॥

**ಅರ್ಥ :-** ಕರೇಣ = ಕೈಯಿಂದ, ಕರಂ = ಕೈಯನ್ನು, ಪೀಡಯನ್ = ಹೊಸೆಯುತ್ತ, ಚ = ಮತ್ತು, ಆತ್ಮನಃ = ತನ್ನ, ಭುಜೌ = ತೋಳುಗಳನ್ನು, ನಿಶಾಮ್ಯ = ಕಂಡು, ಕಾರ್ಯಸಿದ್ಧಯೇ = ಕಾರ್ಯಸಿದ್ಧಿಗಾಗಿ, ಕಥಂ = ಹೇಗೆ ತಾನೆ, ಪರಂ = ಇನ್ನೊಬ್ಬನನ್ನು, ಪ್ರಯಾಚಯೇ = ಬೇಡಲಿ, ಇತಿ = ಎಂದು, ಜಗಾದ = ಹೇಳಿದನು.

**ತಾತ್ಪರ್ಯ :-** ಕೈಯಿಂದ ಕೈಯನ್ನು ಹೊಸಕು ಹಾಕುತ್ತ ತನ್ನ ಭುಜಗಳನ್ನು ದಿಟ್ಟಿಸಿ ನೋಡುತ್ತಾ ಹೇಗೆ ತಾನೆ ಕಾರ್ಯವನ್ನು ಸಾಧಿಸಿಕೊಳ್ಳಲು ಇನ್ನೊಬ್ಬರನ್ನೇ ಬೇಡಲಿ ಎಂದು ಹೇಳಿದನು.

**ಸುದುರ್ಗಕಾರ್ಯಸಂತತಿಂ ಹ್ಯಗುಃ ಸ್ಮ ಮದ್ಭುಜಾಶ್ರಯಾಃ ।**
**ಸಮಸ್ತಭೂತಲೇ ನೃಪಾಃ ಸ ಚಾಹಮೇಷ ಮಾಗಧಃ ॥ ೯೩ ॥**

**ಪದಚ್ಛೇದ :-** ಸುದುರ್ಗಕಾರ್ಯಸಂತತಿಂ, ಹಿ, ಅಗುಃ, ಸ್ಮ ಮದ್‌ಭುಜಾಶ್ರಯಾಃ, ಸಮಸ್ತಭೂತಲೇ, ನೃಪಾಃ, ಸಃ, ಚ, ಅಹಮ್, ಏಷಃ, ಮಾಗಧಃ ॥

**ಅರ್ಥ :-** ಮದ್‌ಭುಜಾಶ್ರಯಾಃ = ನನ್ನ ತೋಳುಗಳನ್ನು ಆಶ್ರಯಿಸಿ, ಸಮಸ್ತಭೂತಲೇ = ಸಕಲ ಭೂಮಂಡಲದಲ್ಲಿ, ನೃಪಾಃ = ರಾಜರು, ಸುದುರ್ಗಕಾರ್ಯಸಂತತಿಂ = ಅತ್ಯಂತ ದುರ್ಗಮವಾದ ಅನೇಕ ಕಾರ್ಯಗಳನ್ನು, ಅಗುಃ ಸ್ಮ = ಸಾಧನಕೊಂಡಿರುವ, ಹಿ = ನಿಶ್ಚಯವು, ಸಃ = ಅಂತಹ, ಅಹಂ = ನಾನು, ಜರಾಸಂಧಃ = ಜರಾಸಂಧನು.

**ತಾತ್ಪರ್ಯ :-** ಇಡೀ ಭೂಮಂಡಲದಲ್ಲಿ ನನ್ನ ತೋಳುಗಳನ್ನು ಆಶ್ರಯಿಸಿಯೇ ಎಲ್ಲ ಕಾರ್ಯಗಳನ್ನು ಸಾಧಿಸಿಕೊಂಡಿರುವರು ಅಷ್ಟೇ ಅಂತಹವನೇ ಈ ಜರಾಸಂಧ.

ಕದಾಽಪ್ಯಚೀರ್ಣಮದ್ಯ ತತ್ ಕಥಂ ಕರೋಮಿ ಕೇವಲಮ್ ।
ಗಿರೀಶಪಾದಸಂಶ್ರಯಃ ಪ್ರಭುಃ ಸಮಸ್ತಭೂಭೃತಾಮ್ ॥ ೯೪ ॥

ಪದಚ್ಛೇದ :- ಕದಾಪಿ, ಅಚೀರ್ಣಂ, ಅದ್ಯ, ತತ್, ಕಥಂ, ಕರೋಮಿ, ಕೇವಲಂ, ಗಿರೀಶಪಾದಸಂಶ್ರಯಃ, ಪ್ರಭುಃ, ಸಮಸ್ತಭೂಭೃತಾಮ್ ॥

ಅರ್ಥ :- ಗಿರೀಶಪಾದಸಂಶ್ರಯಃ = ರುದ್ರನ ಪಾದವನ್ನು ಆಶ್ರಯಿಸಿದ, ಸಮಸ್ತಭೂಭೃತಾಂ = ಎಲ್ಲ ರಾಜರಿಗೂ, ಪ್ರಭುಃ = ಒಡೆಯನಾದ ಈ ಜರಾಸಂಧನು, ಕದಾಪಿ = ಎಂದಿಗೂ, ತತ್ = ಆ, ಅಚೀರ್ಣಂ = ಮಾಡದಿರುವ ಯಾಚನೆಯನ್ನು, ಅದ್ಯ = ಇಂದು, ಕಥಂ = ಹೇಗೆ, ಕರೋಮಿ = ಮಾಡುವೆನು.

ತಾತ್ಪರ್ಯ :- ರುದ್ರನ ಪಾದವನ್ನು ಆಶ್ರಯಿಸಿದ ಸಕಲರಾಜಾಧಿ ರಾಜರಿಗೂ ಒಡೆಯನಾದ ನಾನು ಎಂದೂ ಮಾಡದಿರುವ ಯಾಚನೆಯನ್ನು ಇಂದು ಹೇಗೆ ತಾನೆ ಮಾಡಲಿ.

ಇತೀರಿತಃ ಸ ಸೌಭರಾಡ್ ಜಗಾದ ವಾಕ್ಯಮುತ್ತರಮ್ ।
ಭವಾನಪಿ ಸ್ಮ ಮುಹ್ಯತೇ ಕಿಮಸ್ಮದಾದಯಃ ಪ್ರಭೋ ॥ ೯೫ ॥

ಪದಚ್ಛೇದ :- ಇತಿ, ಈರಿತಃ, ಸಃ, ಸೌಭರಾಟ್, ಜಗಾದ, ವಾಕ್ಯಂ, ಉತ್ತರಂ । ಭವಾನ್, ಅಪಿ, ಸ್ಮ, ಮುಹ್ಯತೇ, ಕಿಂ, ಅಸ್ಮದಾದಯಃ, ಪ್ರಭೋ ॥

ಅರ್ಥ :- ಇತಿ = ಈ ರೀತಿಯಾಗಿ, ಈರಿತಃ = ಹೇಳಲ್ಪಟ್ಟ, ಸಃ = ಆ, ಸೌಭರಾಟ್ = ರಾಜನು, ಉತ್ತರಂ = ಉತ್ತರವಾಗಿ, ವಾಕ್ಯಂ = ವಾಕ್ಯವನ್ನು, ಜಗಾದ = ಹೇಳಿದನು, ಪ್ರಭೋ = ಪ್ರಭುವೇ, ಭವಾನಪಿ = ನೀನೂ ಕೂಡ, ಮುಹ್ಯತೇ = ಮೋಹಗೊಳ್ಳುವಿಯಾದರೆ, ಅಸ್ಮದಾದಯಃ = ನಾವೆಲ್ಲರೂ, ಕಿಂ = ಏನು ಮಾಡಬೇಕು.

ತಾತ್ಪರ್ಯ :- ಈ ರೀತಿಯಾಗಿ ಜರಾಸಂಧನು ನುಡಿದಾಗ ಸಾಲ್ವರಾಜನು ಜರಾಸಂಧನನ್ನು ಕುರಿತು ಹೇಳಿದನು. ನಿನ್ನಂತಹ ಪರಾಕ್ರಮಿಯೇ ಹೀಗೆ ಮೋಹಗೊಳ್ಳುವಿಯಾದರೆ ನಮ್ಮಂತಹವರ ಪಾಡೇನು?

**ಸ್ವಶಿಷ್ಯಕೈಃ ಕೃತಂ ತು ಯತ್ ಕಿಮನ್ಯಸಾಧಿತಂ ಭವೇತ್ ।**
**ಸ್ವಶಿಷ್ಯದಾಸವರ್ಗಕೈಃ ಸಮರ್ಥಯಂತಿ ಭೂಭುಜಃ ॥ ೯೬ ॥**

**ಅರ್ಥ :- ಸ್ವಶಿಷ್ಯಕೈಃ** = ತಮ್ಮ ಶಿಷ್ಯರಿಂದ, **ಯತ್ ಕೃತಂ** = ಯಾವುದು ಮಾಡಲ್ಪಡುತ್ತದೆಯೋ, **ತತ್** = ಅದು, **ಅನ್ಯಸಾಧಿತಂ** = ಬೇರೆಯವರಿಂದ ಸಾಧಿಸಲ್ಪಟ್ಟಿದ್ದಾನೆ, **ಭವೇತ್ ಕಿಂ** = ಆಗುವುದೇನು, **ಭೂಭುಜಃ** = ರಾಜರು, **ಸ್ವಶಿಷ್ಯದಾಸವರ್ಗಕೈಃ** = ತಮ್ಮ ಶಿಷ್ಯರ ದಾಸರ ಸಮೂಹದಿಂದಲೇ, **ಸಮರ್ಥಯಂತಿ** = ಸಾಧಿಸಿಕೊಳ್ಳುವುದು.

**ತಾತ್ಪರ್ಯ :-** ತಮ್ಮ ಶಿಷ್ಯರಿಂದ ಯಾವ ಕೆಲಸವನ್ನು ಮಾಡಿಸುತ್ತವೆಯೋ ಅದು ಬೇರೆಯವರಿಂದ ಮಾಡಿಸದಂತೆ ಆಗುವುದಿಲ್ಲ. ಯಾಕೆಂದರೆ ರಾಜರೆಲ್ಲರೂ ತಮ್ಮ ಕೆಲವನ್ನು ತಮ್ಮ ಶಿಷ್ಯದಾಸರಿಂದಲೇ ಮಾಡಿಸಿಕೊಳ್ಳುವರು.

**ಅಪಿ ಸ್ಮ ತೇ ಬಲಾಶ್ರಯಪ್ರವೃತ್ತಯೋಽಸ್ಮದಾದಯಃ ।**
**ಪುಮಾನ್ ಕುಠಾರಸಂಗ್ರಹಾದಶಕ್ತ ಈರ್ಯತೇ ಹಿ ಕಿಮ್ ॥ ೯೭ ॥**

**ಪದಚ್ಛೇದ :– ಅಪಿ, ಸ್ಮ, ತೇ, ಬಲಾಶ್ರಯಪ್ರವೃತಯಃ, ಅಸ್ಮದಾದಯಃ । ಪುಮಾನ್, ಕುಠಾರಸಂಗ್ರಹಮ್, ಅಶಕ್ತಃ, ಈರ್ಯತೇ, ನು, ಕಿಮ್ ॥**

**ಅರ್ಥ :- ಅಸ್ಮದಾದಯಃ** = ನಾವೆಲ್ಲರೂ, **ತೇ** = ನಿನ್ನ, **ಬಲಾಶ್ರಯಪ್ರವೃತಯಃ** = ಬಲವನ್ನು ಆಶ್ರಯಿಸಿಯೇ ಪ್ರವೃತ್ತಿಯುಳ್ಳವರು, **ಅಪಿ ಸ್ಮ** = ಆಗಿರುವೆವು ಅಷ್ಟೆ, **ಪುಮಾನ್** = ಮನುಷ್ಯನು, **ಕುಠಾರಸಂಗ್ರಹಾತ್** = ಕೊಡಲಿಯನ್ನು ಹಿಡಿದುಕೊಂಡಿರುವುದರಿಂದ, **ಅಶಕ್ತಃ** = ಅಶಕ್ತನು ಎಂದು, **ಈರ್ಯತೇ ನು ಕಿಮ್** = ಹೇಳಲ್ಪಡುತ್ತದೆಯೇನು?

**ತಾತ್ಪರ್ಯ :-** ನಾವೆಲ್ಲರೂ ಕೂಡ ನಿನ್ನಂತಹ ಪರಾಕ್ರಮಿಯ ಬಲವನ್ನು ಆಶ್ರಯಿಸಿಯೇ ಇರುವವರು. ಒಬ್ಬ ಪುರುಷನು ಕೇವಲ ಕೊಡಲಿಯನ್ನು ಹಿಡಿದುಕೊಂಡಿರುವನು ಎಂದ ಮಾತ್ರಕ್ಕೆ ಅವನು ಅಸಮರ್ಥನು ಎಂದು ಯಾರೂ ಹೇಳಲಾರದು.

**ಕುಠಾರಸಮ್ಮಿತೋ ಹ್ಯಸೌ ತವೈವ ಯಾವನೇಶ್ವರಃ ।**
**ವಿನಾ ಭವದ್ಬಲಂ ಕ್ವಚಿತ್ ಪ್ರವರ್ತಿತುಂ ನಹಿ ಕ್ಷಮಃ ॥ ೯೮ ॥**

**ಅರ್ಥ** :- **ತವ** = ನಿನಗೆ, **ಅಸೌ** = ಈ, **ಯಾವನೇಶ್ವರಃ** = ಯವನರಾಜನು, **ಕುಠಾರಸಮ್ಮಿತಃ** = ಕೊಡಲಿ ಕಡಿಯುವವನಿಗೆ ಸಮಾನನಾದವನು, **ಭವದ್ಬಲಂ ವಿನಾ** = ನಿನ್ನ ಬಲವಿಲ್ಲದೆ, **ಕ್ವಚಿತ್** = ಯಾವ ಕಾರ್ಯದಲ್ಲಿಯೂ, **ಪ್ರವರ್ತಿತುಂ** = ಪ್ರವೃತ್ತಿ ಮಾಡಲು, **ನ ಕ್ಷಮಃ** = ಸಮರ್ಥನಲ್ಲ, **ಹಿ** = ನಿಶ್ಚಯವು.

**ತಾತ್ಪರ್ಯ** :- ಮರ ಕಡಿಯುವವನಿಗೆ ಸಮಾನನಾದವನು ಈ ಯವನರಾಜನು. ಆದ್ದರಿಂದ ನಿನ್ನ ಬಲ ಇಲ್ಲದೆ ಇದ್ದ ಪಕ್ಷದಲ್ಲಿ ಇವನು ಯಾವ ಕಾರ್ಯದಲ್ಲಿಯೂ ಪ್ರವೃತ್ತಿ ಮಾಡಲು ಸಮರ್ಥನಾಗುವುದಿಲ್ಲವಷ್ಟೆ.

**ವರೋ ಹಿ ಕೃಷ್ಣಮರ್ದನೇ ವೃತೋಽಸ್ಯ ಕೇವಲಃ ಶಿವಾತ್ ।**
**ತದನ್ಯಶತ್ರುಪೀಡನಾತ್ ತ್ವಮೇವ ತಸ್ಯ ರಕ್ಷಕಃ ॥ ೯೯ ॥**

**ಅರ್ಥ** :- **ಅಸ್ಯ** = ಈ ಕಾಲಿಯವನನಿಗೆ, **ಕೃಷ್ಣಮರ್ದನೆ ಕೇವಲಂ** = ಕೃಷ್ಣನನ್ನ ಮರ್ದಿಸುವ ವಿಷಯದಲ್ಲಿ ಮಾತ್ರ, **ಶಿವಾತ್** = ಶಿವನ ದೆಸೆಯಿಂದ **ವರಃ** = ವರವು, **ವೃತಃ** = ವರಿಸಲ್ಪಟ್ಟಿದೆ, **ತದನ್ಯಶತ್ರುಪೀಡನಾತ್** = ಅವನಿಗಿಂತ ಬೇರೆಯ ಶತ್ರುವಿನ ಪೀಡೆ ಆದಲ್ಲಿ, **ಅಸ್ಯ** = ಈ ಕಾಲಿಯವನನಿಗೆ, **ತ್ವಮೇವ** = ನೀನೊ, **ರಕ್ಷಕಃ** = ರಕ್ಷಕನಷ್ಟೆ.

**ತಾತ್ಪರ್ಯ** :- ಗರ್ಗಾಚಾರ್ಯರು ಕೃಷ್ಣನಿಲ್ಲದಂತೆ ಮಾಡಲು ಮಾತ್ರ ಶಿವನಿಂದ ವರವನ್ನು ಪಡೆದು ಕಾಲಿಯವನನ್ನು ಹುಟ್ಟಿಸಿರುವರು ಬೇರೆ ಶತ್ರುಗಳ ದಾಳಿಯಾದ ಪಕ್ಷದಲ್ಲಿ ನೀನೇ ಅವನಿಗೆ ರಕ್ಷಕನು.

**ತವಾಖಿಲೈರಜೇಯತಾ ಶಿವಪ್ರಸಾದತೋಽಸ್ತಿ ಹಿ ।**
**ವಿಶೇಷತೋ ಹರೇರ್ಜಯೇ ವರಾದಯಂ ವಿಮೃಗ್ಯತೇ ॥ ೧೦೦ ॥**

**ಅರ್ಥ** :- **ಶಿವಪ್ರಸಾದತಃ** = ಶಿವನ ಅನುಗ್ರಹದಿಂದ, **ತವ** = ನಿನಗೆ, **ಅಖಿಲೈಃ** = ಎಲ್ಲರಿಂದಲೂ, **ಅಜೇಯತಾ** = ಅವಧ್ಯತ್ವ ವರವು, **ಅಸ್ತಿ** = ಇದೆ, **ವಿಶೇಷತಃ** = ವಿಶೇಷವಾಗಿ, **ಹರೇಃ ಜಯೆ** = ಹರಿಯ ಜಯದಲ್ಲಿ, **ವರಾತ್** = ವರ ಇರುವುದರಿಂದ, **ಅಯಂ** = ಇವನು, **ವಿಮೃಗ್ಯತೇ** = ಅರಸುತ್ತಿರುವನಷ್ಟೆ.

**ತಾತ್ಪರ್ಯ** :- ನಿನಗೆ ಶಿವನ ಅನುಗ್ರಹ ಇರುವುದರಿಂದ ಎಲ್ಲರಿಂದಲೂ ಅಜೇಯತ್ವ ವರವು ಇದ್ದೇ ಇದೆ. ಆದರೆ ಹರಿಯ ಜಯದಲ್ಲಿ ಕಾಲಯವನನಿಗೆ ವರ ಇರುವುದರಿಂದ ಇವನನ್ನೇ ಅರಸುತ್ತಿರುವೆವು.

**ಇತೀರಿತೇಽಪ್ಯತೃಪ್ತವತ್ ಸ್ಥಿತೇ ತು ಬಾರುಹದ್ರಥೇ ।**
**ಜಗಾಮ ಸೌಭಮಾಸ್ಥಿತಃ ಸ ಸೌಭರಾಟ್ ಚ ಯಾವನಮ್ ॥ ೧೦೧ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ಈರಿತೇಽಪಿ** = ಹೇಳಲ್ಪಟ್ಟಿದ್ದರೂ ಕೂಡ, **ಅತೃಪ್ತವತ್** = ಅತೃಪ್ತನಂತೆ, **ಬಾರುಹದ್ರಥೇ** = ಜರಾಸಂಧನು, **ಸ್ಥಿತೇ ತು** = ಇರುತ್ತಿರಲು, **ಸಃ ಸೌಭರಾಟ್** = ಆ ಸಾಲ್ವರಾಜನು, **ಸೌಭಂ** = ಸೌಭ ವಿಮಾನವನ್ನು, **ಆಸ್ಥಿತಃ** = ಏರಿದವನಾಗಿ, **ಯಾವನಂ** = ಯವನ ರಾಜನನ್ನು ಕುರಿತು, **ಜಗಾಮ** = ಹೇಳಿದನು.

**ತಾತ್ಪರ್ಯ** :- ಹೀಗೆ ಹೇಳಿದರೂ ಜರಾಸಂಧನಿಗೆ ತೃಪ್ತಿಯಾದಂತಿರಲಿಲ್ಲ. ಆಗ ಸಾಲ್ವ ತಾನೇ ಸೌಭವಿಮಾನವನ್ನೇರಿ ಕಾಲಯವನ ಬಳಿಗೆ ತೆರಳಿದ.

**ಸ ಕಾಲಯಾವನೋಽಥ ತಂ ಜರಾಸುತಾಂತಿಕಾಗತಮ್ ।**
**ನಿಶಮ್ಯ ಭಕ್ತಿಪೂರ್ವಕಂ ಪ್ರಣಮ್ಯ ಚಾಽರ್ಚಯದ್ ದ್ರುತಮ್ ॥ ೧೦೨ ॥**

**ಅರ್ಥ** :- **ಅಥ** = ಅನಂತರ, **ಸಃ** = ಆ, **ಕಾಲಯಾವನಃ** = ಕಾಲಯವನನು, **ಜರಾಸುತ** = ಜರಾಸಂಧನ, **ಅಂತಿಕಾಗತಮ್** = ಸಮೀಪದಿಂದ ಬಂದ, **ತಂ** = ಆ ಸಾಲ್ವನನ್ನು, **ನಿಶಮ್ಯ** = ಕಂಡು, **ಭಕ್ತಿಪೂರ್ವಕಂ** = ಭಕ್ತಿಪುರಸ್ಸರವಾಗಿ, **ಪ್ರಣಮ್ಯ** = ನಮಸ್ಕರಿಸಿ, **ದ್ರುತಂ** = ಶೀಘ್ರವಾಗಿ, **ಅರ್ಚಯತ್** = ಅರ್ಚಿಸಿದನು.

**ತಾತ್ಪರ್ಯ** :- ಈ ಸಾಲ್ವನು ಜರಾಸಂಧನ ಕಡೆಯಿಂದ ಬಂದಿರುವನು ಎಂದು ತಿಳಿದು, ಕಾಲಯವನನು ಭಕ್ತಿಪೂರ್ವಕವಾಗಿ ನಮಸ್ಕರಿಸಿ ಕೂಡಲೇ ಅವನನ್ನು ಅರ್ಚಿಸಿದನು.

**ಜರಾಸುತೋ ಹಿ ದೈವತಂ ಸಮಸ್ತಕೇಶವದ್ವಿಷಾಮ್ ।**
**ಇತಿ ಪ್ರಣಮ್ಯ ತಾಂ ದಿಶಂ ತದೀಯಮಾಶ್ವಪೂಜಯತ್ ॥ ೧೦೩ ॥**

**ಅರ್ಥ** :- **ಜರಾಸುತಃ** = ಜರಾಸಂಧನು, **ಸಮಸ್ತಕೇಶವದ್ವಿಷಾಂ** = ಎಲ್ಲ ವಿಷ್ಣುದ್ವೇಷಿಗಳಿಗೂ, **ದೈವತಂ** = ಆರಾಧ್ಯದೈವ, **ಹಿ** = ನಿಶ್ಚಯವು, **ಇತಿ** = ಎಂದು, **ತಾಂ** = ಆ, **ದಿಶಂ** = ದಿಕ್ಕನ್ನು, **ಪ್ರಣಮ್ಯ** = ನಮಸ್ಕರಿಸಿ, **ತದೀಯಂ** = ಅವನ ಭಕ್ತನಾದ ಸಾಲ್ವನನ್ನು, **ಆಶು** = ಕೂಡಲೇ, **ಅಪೂಜಯತ್** = ಅರ್ಚಿಸಿದನು.

**ತಾತ್ಪರ್ಯ** :- ವಿಷ್ಣುದ್ವೇಷಿಗಳಿಗೆಲ್ಲ ಈ ಜರಾಸಂಧನು ಆರಾಧ್ಯದೈವ ಎಂದು ಮನಗಂಡು ಜರಾಸಂಧನಿಗೆ ಸಂಬಂಧಪಟ್ಟ ದಿಕ್ಕನ್ನು ನಮಸ್ಕರಿಸಿ ಅವನ ಭಕ್ತನಾದ ಸಾಲ್ವನನ್ನು ಕೂಡಲೇ ಪೂಜಿಸಿದನು.

**ತದೀರಿತಂ ನಿಶಮ್ಯ ಚ ದ್ರುತಂ ತ್ರಿಕೋಟಿಸಂಖ್ಯಯಾ ।**
**ಅಕ್ಷೌಹಿಣೀಕಯಾ ಯುತಃ ಸ್ವಸೇನಯಾ ನಿರಾಕ್ರಮತ್ ॥ ೧೦೪ ॥**

**ಅರ್ಥ** :- **ತದೀರಿತಂ** = ಸಾಲ್ವನಿಂದ ಹೇಳಲ್ಪಟ್ಟಿದ್ದನ್ನು, **ನಿಶಮ್ಯ** = ಕೇಳಿ, **ದ್ರುತಂ** = ಶೀಘ್ರವಾಗಿ, **ತ್ರಿಕೋಟಿಸಂಖ್ಯಯಾ** = ಮೂರು ಕೋಟಿ, **ಅಕ್ಷೌಹಿಣೀಕಯಾ** = ಅಕ್ಷೌಹಿಣೀಯಿಂದ, **ಯುತಃ** = ಕೂಡಿದವನಾಗಿ, **ಸ್ವಸೇನಯಾ** = ತನ್ನ ಸೈನ್ಯದಿಂದ, **ನಿರಾಕ್ರಮತ್** = ಹೊರಟರು.

**ತಾತ್ಪರ್ಯ** :- ನಂತರ ಸಾಲ್ವರಾಜನು ತಾನು ಬಂದ ಉದ್ದೇಶವನ್ನು ತಿಳಿಸಿದಾಗ ಮೂರು ಕೋಟಿ ಅಕ್ಷೌಹಿಣೀ ಸೈನ್ಯಯಿಂದ ಕೂಡಿದವನಾಗಿ ಹೊರಟನು.

**ತದಶ್ವಮೂತ್ರವಿಷ್ಠಯಾ ಬಭೂವ ನಾಮತಃ ಶಕೃತ್ ।**
**ನದೀ ಸುವೇಗಗಾಮಿನೀ ಕಲೌ ಚ ಯಾ ವಹೇದ್ ದ್ರುತಮ್ ॥ ೧೦೫ ॥**

**ಅರ್ಥ** :- **ತದಶ್ವಮೂತ್ರವಿಷ್ಠಯಾ** = ಕಾಲಯವನನ ಕುದುರೆಗಳ ಮೂತ್ರ ಮತ್ತು ಲದ್ದಿಗಳಿಂದ, **ಸುವೇಗಗಾಮಿನೀ** = ತುಂಬ ವೇಗವಾಗಿ ಹರಿಯುವ, **ನಾಮತಃ** = ಹೆಸರಿನಿಂದ, **ಶಕುತಃ ನಾಮ ನದೀ** = ಶಕೃತ್ ಎಂಬ ಹೆಸರಿನ ನದಿಯು, **ಬಭೂವ** = ಉಂಟಾಯಿತು, **ಯಾ** = ಯಾವ ನದಿಯು, **ಕಲೌ** = ಕಲಿಯುಗದಲ್ಲಿ, **ದ್ರುತಂ** = ವೇಗವಾಗಿ, **ವಹೇತ್** = ಹರಿಯುವುದು.

**ತಾತ್ಪರ್ಯ** :- ಕಾಲಯವ ರಾಜನ ಕುದುರೆಗಳ ಮೂತ್ರ ಮತ್ತು ಲದ್ದಿಗಳಿಂದಲೇ ತುಂಬಾ ವೇಗವಾಗಿ ಹರಿಯುವ ಶಕೃತ್ ಎಂಬ ನದಿಯು ಉಂಟಾಯಿತು. ಕಲಿಯುಗದಲ್ಲಿ ಈ ನದಿಯು ತುಂಬಾ ವೇಗವಾಗಿ ಹರಿಯುತ್ತದೆ.

**ಪುನಃಪುನರ್ನದೀಭವಂ ನಿಶಾಮ್ಯ ದೇಶಸಂಕ್ಷಯಮ್ ।**
**ತದನ್ಯದೇಶಮೂತ್ರಿತಂ ವ್ಯಶೋಷಯದ್ಧಿ ಮಾರುತಃ ॥ ೧೦೬ ॥**

**ಅರ್ಥ** :- **ಪುನಃ ಪುನಃ** = ಪುನಃ ಪುನಃ, **ನದೀಭವಂ** = ನದಿಗಳಿಂದಾದ, **ದೇಶಸಂಕ್ಷಯಮ್** = ದೇಶ ನಾಶವಾಗುವುದನ್ನು, **ನಿಶಾಮ್ಯ** = ಕಂಡು, **ಮಾರುತಃ** = ವಾಯುದೇವ, **ತದನ್ಯದೇಶಮೂತ್ರಿತಂ** = ಬೇರೆ ಕಡೆ ಮೂತ್ರಿಸಿದನು, **ವ್ಯಶೋಷಯತ್** = ಒಣಗಿಸಿದನು, **ಹಿ** = ನಿಶ್ಚಯವು.

**ತಾತ್ಪರ್ಯ** :- ಪುನಃ ಪುನಃ ನದಿಗಳು ಉಂಟಾಗಿ ದೇಶ ನಾಶವಾಗುವುದನ್ನು ಕಂಡು ವಾಯುದೇವರು ಆ ಕುದುರೆಗಳು ಬೇರೆ ಕಡೆ ಮೂತ್ರಿಸಿದ್ದನ್ನು ಒಣಗಿಸಿದನು.

**ಹರಿಶ್ಚ ವೈನತೇಯಯುಗ್ ವಿಚಾರ್ಯ ರಾಮಸಂಯುತಃ ।**
**ಸದಾಽತಿಪೂರ್ಣಸಂವಿದಪ್ಯಜೋಽಥ ಲೀಲಯಾಽಸ್ಮರತ್ ॥ ೧೦೭ ॥**

**ಅರ್ಥ** :- **ಅಥ** = ಅನಂತರ, **ಅಜಃ** = ಜನನರಹಿತನಾದ, **ಹರಿಃ** = ಶ್ರೀಕೃಷ್ಣನು, **ಸದಾ** = ಯಾವಾಗಲು, **ಅತಿ ಪೂರ್ಣಸಂವಿದಪಿ** = ಪೂರ್ಣಜ್ಞಾನವುಳ್ಳವನಾದರೂ ಕೂಡ, **ಲೀಲಯಾ** = ಲೀಲೆಯಿಂದ, **ರಾಮಸಂಯುತಃ** = ಬಲರಾಮನಿಂದೊಡಗೂಡಿ, **ವೈನತೇಯಯುತ್** = ಗರುಡನಿಂದಲೂ ಕೂಡಿ, **ವಿಚಾರ್ಯ** = ವಿಚಾರ ಮಾಡಿ, **ಅಸ್ಮರತ್** = ಸ್ಮರಿಸಿದನು.

**ತಾತ್ಪರ್ಯ** :- ಅನಂತ ಶ್ರೀಕೃಷ್ಣನು ಸಂಪೂರ್ಣ ಜ್ಞಾನವುಳ್ಳವನಾದರೂ ಕೂಡ ಲೀಲೆಯಿಂದ ಬಲರಾಮ ಮತ್ತು ಗರುಡನಿಂದ ಕೂಡಿಕೊಂಡು ವಿಚಾರ ಮಾಡಿ. ದೇವಶಿಲ್ಪಿಯಾದ ವಿಶ್ವಕರ್ಮನನ್ನು ಸ್ಮರಿಸಿದನು.

**ಯುಯುತ್ಸುರೇಷ ಯಾವನಃ ಸಮೀಪಮಾಗತೋಽದ್ಯ ನಃ ।**
**ಯುಯುತ್ಸತಾಮನೇನ ನೋ ಜರಾಸುತೋಽಭಿಯಾಸ್ಯತಿ ॥ ೧೦೮ ॥**

**ಅರ್ಥ** :- **ಏಷಃ** = ಈ, **ಯಾವನಃ** = ಯಾವನು, **ಅದ್ಯ** = ಈಗ, **ಯುಯುತ್ಸುಃ** = ಯುದ್ಧ ಮಾಡಲು, ಬಯಸಿದವನಾಗಿ, **ನಃ** = ನಮ್ಮ, **ಸಮೀಪವನ್** = ಸಮೀಪಕ್ಕೆ, **ಆಗತಃ** = ಬಂದಿರುವವನು, **ಅನೇನ** = ಇವನೊಂದಿಗೆ, **ಯುಯುತ್ಯತಾಂ** = ಯುದ್ಧ ಮಾಡಲು ಇಚ್ಛಿಸುವ, **ನಃ** = ನಮ್ಮನ್ನು, **ಜರಾಸುತಃ** = ಜರಾಸಂಧನು, **ಅಭಿಯಾಸ್ಯತಿ** = ಬರುತ್ತಾನೆ.

**ತಾತ್ಪರ್ಯ** :- ಯುದ್ಧ ಮಾಡುವ ಹಿನ್ನಲೆಯಲ್ಲಿ ಈ ಯವನರಾಜನು ನಮ್ಮನ್ನು ಸಮೀಪಿಸಿರುವನು. ಇವನೊಂದಿಗೆ ಯುದ್ಧ ಮಾಡಲು ಬಯಸಿದ್ದಲ್ಲಿ ಜರಾಸಂಧನೂ ಬರುತ್ತಾನೆ.

**ಸ ಯಾದವಾನ್ ಹನಿಷ್ಯತಿ ಪ್ರಭಂಗತಸ್ತು ಕೋಪಿತಃ ।**
**ಪುರಾ ಜಯಾಶಯಾ ಹಿ ನೌ ಯದೂನ್ ನ ಜಘ್ನಿವಾನಸೌ ॥ ೧೦೯ ॥**

**ಅರ್ಥ** :- **ಸಃ** = ಆ ಜರಾಸಂಧನು, **ಪ್ರಭಂಗತಃ** = ಪರಾಭವದ, **ಕೋಪಿತಃ** = ಕೋಪದಿಂದ, **ಯಾದವಾನ್** = ಯಾದವರನ್ನು, **ಹನಿಷ್ಯತಿ** = ಕೊಲ್ಲುವನು, **ಪುರಾ** = ಹಿಂದೆ, **ಜಯಾಶಯಾ** = ಜಯದ ಆಸೆಯಿಂದ, **ಅಸೌ** = ಇವನು, **ಯದೂನ್** = ಯಾದವರನ್ನು, **ನ ಜಘ್ನಿವನ್** = ಕೊಲ್ಲಲಿಲ್ಲ.

**ತಾತ್ಪರ್ಯ** :- ಆ ಜರಾಸಂಧನು ನಾನು ಪರಾಭವಗೊಂಡೆ ಎಂಬ ಕೋಪದಿಂದ ಯಾದವರನ್ನು ಸಂಹರಿಸುವನು. ಹಿಂದೆಯಾದರೋ ಜಯವಾದೀತು ಎಂಬ ಆಸೆಯಿಂದ ಯಾದವರನ್ನು ಕೊಲ್ಲಲಿಲ್ಲ.

**ನಿರಾಶಕೋಽದ್ಯ ಯಾದವಾನಪಿ ಸ್ಮ ಪೀಡಯಿಷ್ಯತಿ ।**
**ಅತಃ ಸಮುದ್ರಮಧ್ಯಗಾಪುರೀವಿಧಾನಮದ್ಯ ಮೇ ॥ ೧೧೦ ॥**

**ಅರ್ಥ** :- **ಅಘ** = ಈಗ, **ನಿರಾಶಕ** = ಹತಾಶನಾದ ಜರಾಸಂಧನು, **ಯಾದವಾನ್** = ಯಾದವರನ್ನು, **ಪೀಡಯಿಷ್ಯತಿ ಸ್ಮ** = ಪೀಡಿಸುವನು, **ಅತಃ** = ಆದ್ದರಿಂದ, **ಅಘ** = ಈಗ, **ಸಮುದ್ರಮಧ್ಯಗಾಪುರೀವಿಧಾನಂ** = ಸಮುದ್ರದ ಮಧ್ಯದಲ್ಲಿ ವಿಶಾಲವಾದ ಪಟ್ಟಣವನ್ನು ಮಾಡುವುದು.

**ತಾತ್ಪರ್ಯ** :- ಈಗ ಹತಾಶನಾದ ಜರಾಸಂಧನು ಯಾದವರನ್ನು ತುಂಬ ಪೀಡಿಸುವನು. ಆದ್ದರಿಂದ ಈಗ ಸಮುದ್ರದ ಮಧ್ಯದಲ್ಲಿ ಒಂದು ವಿಶಾಲವಾದ ಪಟ್ಟಣವನ್ನು ಮಾಡೋಣ.

**ಪ್ರರೋಚತೇ ನಿಧಾನಮಪ್ಯಮುತ್ರ ಸರ್ವಸಾತ್ವತಾಮ್ ।**
**ಉದೀರ್ಯ ಚೈವಮೀಶ್ವರೋಽಸ್ಮರತ್ ಸುರೇಶವರ್ಧಕಿಮ್ ॥ ೧೧೧ ॥**

**ಅರ್ಥ :- ಅಮುತ್ರ** = ಇಲ್ಲಿ, **ಸರ್ವಸಾತ್ವತಾಂ** = ಸಕಲ ಯಾದವರ, **ನಿಧಾನಮಪಿ** = ಇರಿಸುವಿಕೆಯೂ, **ಪ್ರರೋಚತೇ** = ಸರಿಕಾಣುವುದು, **ಏವಂ** = ಈ ರೀತಿಯಾಗಿ, **ಈಶ್ವರಃ** = ಕೃಷ್ಣನು, **ಉದೀರ್ಯ** = ಹೇಳಿ, **ಸುರೇಸವರ್ಧಕಿಂ** = ದೇವಶಿಲ್ಪಿಯನ್ನು, **ಅಸ್ಮರತ್** = ಸ್ಮರಿಸಿದನು.

**ತಾತ್ಪರ್ಯ :-** ಸಕಲ ಯಾದವರನ್ನೂ ಕೂಡ ಅಲ್ಲಿಯೇ ಇರಲು ಹೇಳೋಣ ಎಂದು ಆಲೋಚಿಸಿ ದೇವಶಿಲ್ಪಿಯಾದ ವಿಶ್ವಕರ್ಮನನ್ನು ಸ್ಮರಿಸಿದನು.

**ಸ ಭೌವನಃ ಸಮಾಗತಃ ಕುಶಸ್ಥಲೀಂ ವಿನಿರ್ಮಮೇ ।**
**ನಿರಂಬುಕೇ ತು ಸಾಗರೇ ಜನಾರ್ದನಾಜ್ಞಯಾ ಕೃತೇ ॥ ೧೧೨ ॥**

**ಅರ್ಥ :- ಜನಾರ್ದನಾಜ್ಞಯಾ** = ಶ್ರೀಕೃಷ್ಣನ ಆಜ್ಞೆಯಿಂದ, **ಸಾಗರೇ** = ಸಮುದ್ರವು, **ನಿರಂಬುಕೇಕೃತೇ** = ನೀರಿಲ್ಲದಂತೆ ಮಾಡಿದಾಗ, **ಸಃ** = ಆ, **ಭೌವನಃ** = ವಿಶ್ವಕರ್ಮನು, **ಸಮಾಗತಃ** = ಬಂದವನಾಗಿ, **ಕುಶಸ್ಥಲೀಂ** = ದ್ವಾರಕಾ ಪುರಿಯನ್ನು, **ವಿನಿರ್ಮಮೇ** = ನಿರ್ಮಾಣ ಮಾಡಿದ.

**ತಾತ್ಪರ್ಯ :-** ಆ ಶ್ರೀಕೃಷ್ಣನ ಆಜ್ಞೆಯಿಂದ ಆ ಸಮುದ್ರವು ಒಣಗಿದಾಗ ವಿಶ್ವಕರ್ಮನು ಬಂದು ದ್ವಾರಕಾಪಟ್ಟಣವನ್ನು ನಿರ್ಮಾಣ ಮಾಡಿದ.

**ಮಹೋದಕಸ್ಯ ಮಧ್ಯತಶ್ಚಕಾರ ತಾಂ ಪುರೀಂ ಶುಭಾಮ್ ।**
**ದ್ವಿಷಟ್ಕಯೋಜನಾಯತಾಂ ಪಯೋಬ್ಧಿಮಧ್ಯಗೋಪಮಾಮ್ ॥೧೧೩॥**

**ಅರ್ಥ :- ಮಹೋದಕಸ್ಯ ಮಧ್ಯತಃ** = ಸಮುದ್ರದ ಮಧ್ಯದಲ್ಲಿ, **ದ್ವಿಷಟ್ಕಯೋಜನಾಯತಾಂ** = ಹನ್ನೆರಡು ಯೋಜನೆ ಉದ್ದದ, **ಪಯೋಬ್ಧಿಮಧ್ಯಗೋಪಮಾಮ್** = ಕ್ಷೀರಸಾಗರದ ನಡುವಿನ ಶ್ವೇತ ದ್ವೀಪದಂತೆ, **ಶುಭಾಂ** = ಮಂಗಳಕರವಾದ, **ತಾಂ** = ಆ, **ಪುರೀಂ** = ಪಟ್ಟಣವನ್ನೇ, **ಚಕಾರ** = ಮಾಡಿದನು.

ತಾತ್ಪರ್ಯ :- ಕ್ಷೀರಸಾಗರದ ಮಧ್ಯದಲ್ಲಿ ಇರುವ ಶ್ವೇತದ್ವೀಪದಂತೆ ಸಮುದ್ರದ ಮಧ್ಯದಲ್ಲಿ ಹನ್ನೆರಡು ಯೋಜನೆ ಉದ್ದದ ಉತ್ತಮವಾದ ದ್ವಾರಕಾಪಟ್ಟಣವನ್ನು ನಿರ್ಮಾಣ ಮಾಡಿದ.

**ಚಕಾರ ಲಾವಣೋದಕಂ ಜನಾರ್ದನೋಽಮೃತೋಪಮಮ್ ।**
**ಸಭಾಂ ಸುಧರ್ಮನಾಮಕಾಂ ದದೌ ಸಮೀರಣೋಽಸ್ಯ ಚ ॥ ೧೧೪ ॥**

**ಅರ್ಥ** :- **ಜನಾರ್ದನಃ** = ಶ್ರೀಕೃಷ್ಣನು, **ಲಾವಣೋದಕಂ** = ಉಪ್ಪು ನೀರನ್ನು, **ಅಮೃತೋಪಮಂ** = ಅಮೃತಕ್ಕೆ ಸಮವಾಗುವಂತೆ, **ಚಕಾರ** = ಮಾಡಿದನು, **ಸಮೀರಣಃ** = ವಾಯುದೇವನು, **ಸುಧರ್ಮನಾಮಕಾಂ ಸಭಾಂ** = ಸುಧರ್ಮ ಎಂಬ ಸಭೆಯನ್ನು, **ಅಸ್ಯ** = ಇವನಿಗೆ, **ದದೌ** = ಕೊಟ್ಟನು.

ತಾತ್ಪರ್ಯ :- ಶ್ರೀ ಕೃಷ್ಣನು ಉಪ್ಪು ನೀರನ್ನು ಅಮೃತವನ್ನಾಗಿ(ಸಿಹಿ) ಮಾಡಿದನು ಹಾಗೆಯೇ ವಾಯುದೇವನು ಸುಧರ್ಮ ಎಂಬ ಸಭೆಯನ್ನು ಇವನಿಗೆ ತಂದು ಕೊಟ್ಟನು.

**ಶತಕ್ರತೋಃ ಸಭಾಂ ತು ತಾಂ ಪ್ರದಾಯ ಕೇಶವಾಯ ಸಃ ।**
**ನಿಧೀನ್ ಸಮರ್ಪ್ಯ ಸರ್ವಶೋ ಯಯೌ ಪ್ರಣಮ್ಯ ತಂ ಪ್ರಭುಮ್ ॥ ೧೧೫ ॥**

**ಅರ್ಥ** :- **ಸಃ** = ವಾಯುದೇವನು, **ಶತಕ್ರತೋಃ** = ಇಂದ್ರನ ದೆಸೆಯಿಂದ, **ತಾಂ ಸಭಾಂ** = ಸಭಾಗೃಹವನ್ನು, **ಕೇಶವಾಯ** = ಶ್ರೀಕೃಷ್ಣನಿಗೆ, **ಪ್ರದಾಯ** = ಕೊಟ್ಟು, **ಸರ್ವಶಃ** = ಎಲ್ಲ, **ನಿಧೀನ್** = ನಿಧಿಗಳನ್ನು, **ಸಮರ್ಪ್ಯ** = ಸಮರ್ಪಿಸಿ, **ತಂ ಪ್ರಭುಂ** = ಆ ಪ್ರಭುವನ್ನು, **ಪ್ರಣಮ್ಯ** = ನಮಸ್ಕರಿಸಿ, **ಯಯೌ** = ಹೊರಟುಹೋದ.

ತಾತ್ಪರ್ಯ :- ವಾಯುದೇವನು ಇಂದ್ರನಿಂದ ಆ ಸಭಾಗೃಹವನ್ನು ತಂದು ಕೃಷ್ಣಪರಮಾತ್ಮನಿಗೆ ಕೊಟ್ಟು ಸಕಲ ನಿಧಿಗಳನ್ನು ಅರ್ಪಿಸಿ ಮತ್ತು ನಮಸ್ಕರಿಸಿ ಹೊರಟುಹೋದನು.

**ಸಮಸ್ತದೇವತಾಗಣಾಃ ಸ್ವಕೀಯಮರ್ಪಯನ್ ಹರೌ ।**
**ವಿಮುಚ್ಯ ಪಕ್ಷಿಪುಂಗವಂ ಸ ಯೋದ್ಧುಮೈಚ್ಛದಚ್ಯುತಃ ॥ ೧೧೬ ॥**

**ಪ್ರರೋಚತೇ ನಿಧಾನಮಪ್ಯಮುತ್ರ ಸರ್ವಸಾತ್ವತಾಮ್ ।**
**ಉದೀರ್ಯ ಚೈವಮೀಶ್ವರೋಽಸ್ಮರತ್ ಸುರೇಶವರ್ಧಕಿಮ್ ॥ ೧೧೧ ॥**

**ಅರ್ಥ :- ಅಮುತ್ರ** = ಇಲ್ಲಿ, **ಸರ್ವಸಾತ್ವತಾಂ** = ಸಕಲ ಯಾದವರ, **ನಿಧಾನಮಪಿ** = ಇರಿಸುವಿಕೆಯೂ, **ಪ್ರರೋಚತೇ** = ಸರಿಕಾಣುವುದು, **ಏವಂ** = ಈ ರೀತಿಯಾಗಿ, **ಈಶ್ವರಃ** = ಕೃಷ್ಣನು, **ಉದೀರ್ಯ** = ಹೇಳಿ, **ಸುರೇಶವರ್ಧಕಿಂ** = ದೇವಶಿಲ್ಪಿಯನ್ನು, **ಅಸ್ಮರತ್** = ಸ್ಮರಿಸಿದನು.

**ತಾತ್ಪರ್ಯ :-** ಸಕಲ ಯಾದವರನ್ನೂ ಕೂಡ ಅಲ್ಲಿಯೇ ಇರಲು ಹೇಳೋಣ ಎಂದು ಆಲೋಚಿಸಿ ದೇವಶಿಲ್ಪಿಯಾದ ವಿಶ್ವಕರ್ಮನನ್ನು ಸ್ಮರಿಸಿದನು.

**ಸ ಭೌವನಃ ಸಮಾಗತಃ ಕುಶಸ್ಥಲೀಂ ವಿನಿರ್ಮಮೇ ।**
**ನಿರಂಬುಕೇ ತು ಸಾಗರೇ ಜನಾರ್ದನಾಜ್ಞಯಾ ಕೃತೇ ॥ ೧೧೨ ॥**

**ಅರ್ಥ :- ಜನಾರ್ದನಾಜ್ಞಯಾ** = ಶ್ರೀಕೃಷ್ಣನ ಆಜ್ಞೆಯಿಂದ, **ಸಾಗರೇ** = ಸಮುದ್ರವು, **ನಿರಂಬುಕೇಕೃತೇ** = ನೀರಿಲ್ಲದಂತೆ ಮಾಡಿದಾಗ, **ಸಃ** = ಆ, **ಭೌವನಃ** = ವಿಶ್ವಕರ್ಮನು, **ಸಮಾಗತಃ** = ಬಂದವನಾಗಿ, **ಕುಶಸ್ಥಲೀಂ** = ದ್ವಾರಕಾ ಪುರಿಯನ್ನು, **ವಿನಿರ್ಮಮೇ** = ನಿರ್ಮಾಣ ಮಾಡಿದ.

**ತಾತ್ಪರ್ಯ :-** ಆ ಶ್ರೀಕೃಷ್ಣನ ಆಜ್ಞೆಯಿಂದ ಆ ಸಮುದ್ರವು ಒಣಗಿದಾಗ ವಿಶ್ವಕರ್ಮನು ಬಂದು ದ್ವಾರಕಾಪಟ್ಟಣವನ್ನು ನಿರ್ಮಾಣ ಮಾಡಿದ.

**ಮಹೋದಕಸ್ಯ ಮಧ್ಯತಶ್ಚಕಾರ ತಾಂ ಪುರೀಂ ಶುಭಾಮ್ ।**
**ದ್ವಿಷಟ್ಕಯೋಜನಾಯತಾಂ ಪಯೋಬ್ಧಿಮಧ್ಯಗೋಪಮಾಮ್ ॥೧೧೩॥**

**ಅರ್ಥ :- ಮಹೋದಕಸ್ಯ ಮಧ್ಯತಃ** = ಸಮುದ್ರದ ಮಧ್ಯದಲ್ಲಿ, **ದ್ವಿಷಟ್ಕಯೋಜನಾಯತಾಂ** = ಹನ್ನೆರಡು ಯೋಜನೆ ಉದ್ದದ, **ಪಯೋಬ್ಧಿಮಧ್ಯಗೋಪಮಾಮ್** = ಕ್ಷೀರಸಾಗರದ ನಡುವಿನ ಶ್ವೇತ ದ್ವೀಪದಂತೆ, **ಶುಭಾಂ** = ಮಂಗಳಕರವಾದ, **ತಾಂ** = ಆ, **ಪುರೀಂ** = ಪಟ್ಟಣವನ್ನೇ, **ಚಕಾರ** = ಮಾಡಿದನು.

ತಾತ್ಪರ್ಯ :- ಕ್ಷೀರಸಾಗರದ ಮಧ್ಯದಲ್ಲಿ ಇರುವ ಶ್ವೇತದ್ವೀಪದಂತೆ ಸಮುದ್ರದ ಮಧ್ಯದಲ್ಲಿ ಹನ್ನೆರಡು ಯೋಜನೆ ಉದ್ದದ ಉತ್ತಮವಾದ ದ್ವಾರಕಾಪಟ್ಟಣವನ್ನು ನಿರ್ಮಾಣ ಮಾಡಿದ.

**ಚಕಾರ ಲಾವಣೋದಕಂ ಜನಾರ್ದನೋಽಮೃತೋಪಮಮ್ ।**
**ಸಭಾಂ ಸುಧರ್ಮನಾಮಕಾಂ ದದೌ ಸಮೀರಣೋಽಸ್ಯ ಚ ॥ ೧೧೪ ॥**

**ಅರ್ಥ** :- **ಜನಾರ್ದನಃ** = ಶ್ರೀಕೃಷ್ಣನು, **ಲಾವಣೋದಕಂ** = ಉಪ್ಪು ನೀರನ್ನು, **ಅಮೃತೋಪಮಂ** = ಅಮೃತಕ್ಕೆ ಸಮವಾಗುವಂತೆ, **ಚಕಾರ** = ಮಾಡಿದನು, **ಸಮೀರಣಃ** = ವಾಯುದೇವನು, **ಸುಧರ್ಮನಾಮಕಾಂ ಸಭಾಂ** = ಸುಧರ್ಮ ಎಂಬ ಸಭೆಯನ್ನು, **ಅಸ್ಯ** = ಇವನಿಗೆ, **ದದೌ** = ಕೊಟ್ಟನು.

ತಾತ್ಪರ್ಯ :- ಶ್ರೀ ಕೃಷ್ಣನು ಉಪ್ಪು ನೀರನ್ನು ಅಮೃತವನ್ನಾಗಿ(ಸಿಹಿ) ಮಾಡಿದನು ಹಾಗೆಯೇ ವಾಯುದೇವನು ಸುಧರ್ಮ ಎಂಬ ಸಭೆಯನ್ನು ಇವನಿಗೆ ತಂದು ಕೊಟ್ಟನು.

**ಶತಕ್ರತೋಃ ಸಭಾಂ ತು ತಾಂ ಪ್ರದಾಯ ಕೇಶವಾಯ ಸಃ ।**
**ನಿಧೀನ್ ಸಮರ್ಪ್ಯ ಸರ್ವಶೋ ಯಯೌ ಪ್ರಣಮ್ಯ ತಂ ಪ್ರಭುಮ್ ॥ ೧೧೫ ॥**

**ಅರ್ಥ** :- **ಸಃ** = ವಾಯುದೇವನು, **ಶತಕ್ರತೋಃ** = ಇಂದ್ರನ ದೆಸೆಯಿಂದ, **ತಾಂ ಸಭಾಂ** = ಸಭಾಗೃಹವನ್ನು, **ಕೇಶವಾಯ** = ಶ್ರೀಕೃಷ್ಣನಿಗೆ, **ಪ್ರದಾಯ** = ಕೊಟ್ಟು, **ಸರ್ವಶಃ** = ಎಲ್ಲ, **ನಿಧೀನ್** = ನಿಧಿಗಳನ್ನು, **ಸಮರ್ಪ್ಯ** = ಸಮರ್ಪಿಸಿ, **ತಂ ಪ್ರಭುಂ** = ಆ ಪ್ರಭುವನ್ನು, **ಪ್ರಣಮ್ಯ** = ನಮಸ್ಕರಿಸಿ, **ಯಯೌ** = ಹೊರಟುಹೋದ.

ತಾತ್ಪರ್ಯ :- ವಾಯುದೇವನು ಇಂದ್ರನಿಂದ ಆ ಸಭಾಗೃಹವನ್ನು ತಂದು ಕೃಷ್ಣಪರಮಾತ್ಮನಿಗೆ ಕೊಟ್ಟು ಸಕಲ ನಿಧಿಗಳನ್ನು ಅರ್ಪಿಸಿ ಮತ್ತು ನಮಸ್ಕರಿಸಿ ಹೊರಟುಹೋದನು.

**ಸಮಸ್ತದೇವತಾಗಣಾಃ ಸ್ವಕೀಯಮರ್ಪಯನ್ ಹರೌ ।**
**ವಿಮುಚ್ಯ ಪಕ್ಷಿಪುಂಗವಂ ಸ ಯೋದ್ಧುಮೈಚ್ಛದಚ್ಯುತಃ ॥ ೧೧೬ ॥**

**ಅರ್ಥ** :- **ಸಮಸ್ತದೇವತಾಗಣಾಃ** = ಎಲ್ಲ ದೇವತೆಗಳ ಸಮೂಹಗಳು, **ಸ್ವಕೀಯಂ** = ತಮ್ಮ ವಸ್ತುಗಳನ್ನು, **ಹರೌ** = ಶ್ರೀ ಕೃಷ್ಣನಲ್ಲಿ, **ಅರ್ಪಯನ್** = ಸಮರ್ಪಿಸಿದರು, **ಸಃ** = ಆ, **ಅಚ್ಯುತಃ** = ಶ್ರೀಕೃಷ್ಣನು, **ಪಕ್ಷಿಪುಂಗವಂ** = ಗರುಡನನ್ನು, **ವಿಮುಚ್ಯ** = ಬಿಟ್ಟು, **ಯೋದ್ಧುಂ** = ಯುದ್ಧ ಮಾಡಲು, **ಐಚ್ಛತ್** = ಇಚ್ಛಿಸಿದನು.

**ತಾತ್ಪರ್ಯ** :- ಎಲ್ಲ ದೇವತೆಗಳೂ ಕೂಡ ತಮ್ಮ ಉತ್ತಮ ವಸ್ತುಗಳನ್ನು ಹರಿಯಲ್ಲಿ ಸಮರ್ಪಿಸಿದರು. ಆ ಕೃಷ್ಣನಾದರೂ ಗರುಡನು ಕಳುಹಿಸಿಕೊಟ್ಟು ಕಾಲಯವನನೊಡನೆ ಯುದ್ಧ ಮಾಡಲು ಹೊರಟನು.

**ಸಮಸ್ತಮಾಧುರಾನ್ ಪ್ರಭುಃ ಕುಶಸ್ಥಲೀಸ್ಥಿತಾನ್ ಕ್ಷಣಾತ್ ।**
**ವಿಧಾಯ ಬಾಹುಯೋಧಕಃ ಸ ಯಾವನಂ ಸಮಭ್ಯಯಾತ್ ॥ ೧೧೭ ॥**

**ಅರ್ಥ** :- **ಸಮಸ್ತಮಾಧುರಾನ್** = ಮಧುರೆಯ ಸಕಲ ಪ್ರಜೆಗಳನ್ನು, **ಪ್ರಭುಃ** = ಶ್ರೀಕೃಷ್ಣನು, **ಕ್ಷಣಾತ್** = ಕ್ಷಣಾರ್ಧದಲ್ಲಿ, **ಕುಶಸ್ಥಲೀಸ್ಥಿತಾನ್** = ದ್ವಾರಕೆಯಲ್ಲಿರುವಂತೆ, **ವಿಧಾಯ** = ಮಾಡಿ, **ಬಾಹುಯೋಧಕಃ** = ಬಾಹುಯುದ್ಧ ಮಾಡಲು, **ಸಃ** = ಆ ಕೃಷ್ಣನು, **ಯಾವನಂ** = ಯವನ ರಾಜನನ್ನು, **ಸಮಭ್ಯಯಾತ್** = ಸಮೀಪಿಸಿದನು.

**ತಾತ್ಪರ್ಯ** :- ಮಧುರೆಯಲ್ಲಿರುವ ಎಲ್ಲ ಪ್ರಜೆಗಳನ್ನು ಕ್ಷಣಾರ್ಧದಲ್ಲಿ ದ್ವಾರಕಾ ಪಟ್ಟಣದಲ್ಲಿರುವಂತೆ ಮಾಡಿ ಬಾಹುಯುದ್ಧವನ್ನು ಮಾಡಲು ಯವನರಾಜನನ್ನು ಕುರಿತು ಹೊರಟನು.

**ಅನಂತಶಕ್ತಿರಪ್ಯಜಃ ಸುನೀತಿದೃಷ್ಟಯೇ ನೃಣಾಮ್ ।**
**ವ್ಯವಾಸಯನ್ನಿಜಾನ್ ಜನಾನ್ ಸ ಲೀಲಯೈವ ಕೇವಲಮ್ ॥ ೧೧೮ ॥**

**ಅರ್ಥ** :- **ಅನಂತಶಕ್ತಿಃ ಅಪಿ** = ಅನಂತ ಶಕ್ತಿಯುಳ್ಳವನಾದರೂ, **ಅಜಃ** = ಜನ್ಮರಹಿತನಾದ, **ಸಃ** = ಆ ಕೃಷ್ಣನು, **ನೃಣಾಂ** = ಮಾನವರಿಗೆ, **ಸುನೀತಿ ದೃಷ್ಟಯೇ** = ಉತ್ತಮ ನೀತಿಯನ್ನು ತೋರಿಸುವುದಕ್ಕಾಗಿ, **ನಿಜಾನ್ ಜನಾನ್** = ತನಗೆ ಸಂಬಂಧಿಸಿದ ಜನರನ್ನು, **ಲೀಲಯೈವ ಕೇವಲಂ** = ಕೇವಲ ಲೀಲೆಯಿಂದಲೇ, **ವ್ಯವಾಸಯನ್** = ವಲಸೆ ಹೋಗುವಂತೆ ಮಾಡಿದ.

ತಾತ್ಪರ್ಯ :- ಅಪರಿಮಿತ ಶಕ್ತಿಯುಳ್ಳವನಾದರೂ ಕೂಡ ಉತ್ತಮ ರಾಜನೀತಿಯನ್ನು ತೋರಿಸಲು ತನಗೆ ಸಂಬಂಧಪಟ್ಟ ಜನರನ್ನು ದ್ವಾರಕೆಗೆ ವಲಸೆ ಹೋಗುವಂತೆ ಮಾಡಿದ.

**ಅನಾದ್ಯನಂತಕಾಲಕಂ ಸಮಸ್ತಲೋಕಮಂಡಲಮ್ ।**
**ಯದೀಕ್ಷಯೈವ ರಕ್ಷ್ಯತೇ ಕಿಮಸ್ಯ ವೃಷ್ಣಿರಕ್ಷಣಮ್ ॥ ೧೧೯ ॥**

**ಅರ್ಥ** :- **ಅನಾದ್ಯನಂತಕಾಲಕಂ** = ಅನಾದ್ಯನಂತಕಾಲದಲ್ಲಿರುವ, **ಸಮಸ್ತಲೋಕಮಂಡಲಂ** = ಸಮಸ್ತಲೋಕ ಸಮೂಹವನ್ನು, **ಯದೀಕ್ಷಯಾ ಏವ** = ಕೇವಲ ನೋಟದಿಂದಲೇ, **ರಕ್ಷ್ಯತೇ** = ರಕ್ಷಿಸಲ್ಪಡುವುದೋ, **ಅಸ್ಯ** = ಈ ಯಾದವನಿಗೆ, **ವೃಷ್ಣಿರಕ್ಷಣಂ** = ಯಾದವರ ರಕ್ಷಣೆ, **ಕಿಂ** = ಏನು.

ತಾತ್ಪರ್ಯ :- ಅನಾದಿ ಅನಂತಕಾಲದಲ್ಲಿಯೂ ಇರುವ ಸಮಸ್ತಲೋಕ ಸಮೂಹವನ್ನು ಕೇವಲ ತನ್ನ ನೋಟದಿಂದಲೇ ರಕ್ಷಣೆ ಮಾಡುವ ಶ್ರೀಕೃಷ್ಣನಿಗೆ ಯಾದವರ ರಕ್ಷಣೆ ಏನು ಕಷ್ಟ ?

**ನಿರಾಯುಧಂ ಚ ಮಾಮಯಂ ವರಾಚ್ಛಿವಸ್ಯ ನ ಕ್ಷಮಃ ।**
**ಸಮಸ್ತಸೇನಯಾ ಯುತೋಽಪಿ ಯೋದ್ಧುಮಿತ್ಯದರ್ಶಯತ್ ॥ ೧೨೦ ॥**

**ಅರ್ಥ** :- **ಸಮಸ್ತಸೇನಯಾ** = ಎಲ್ಲ ಸೇನೆಯಿಂದ, **ಯುತೋಽಪಿ** = ಕೂಡಿದವನಾದರೋ, **ಶಿವಸ್ಯ** = ಶಿವನ, **ವರಾತ್** = ವರದಿಂದ, **ಅಯಂ** = ಈ ಕಾಲಯವನು, **ನಿರಾಯುಧಂ** = ನಿರಾಯುಧನಾದ, **ಮಾಂ** = ನನ್ನನ್ನು, **ಯೋದ್ಧುಂ** = ಯುದ್ಧ ಮಾಡಲು, **ನ ಕ್ಷಮಃ** = ಸಮರ್ಥನಲ್ಲ, **ಇತಿ** = ಎಂದು, **ಅದರ್ಶಯತ್** = ತೋರಿಸಿದನು.

ತಾತ್ಪರ್ಯ :- ಸಮಸ್ತ ಸೇನೆಯಿಂದ ಕೂಡಿದವನಾದರೂ ಕೂಡ ಶಿವನ ವರವಿದ್ದರೂ ಕೂಡ ನಿರಾಯುಧನಾದ ನನ್ನನ್ನು ಎದುರಿಸಲು ಸಮರ್ಥನಲ್ಲ ಎಂದು ತೋರಿಸಿದನು.

**ಸ ಕೃಷ್ಣಪನ್ನಗಂ ಘಟೇ ನಿಧಾಯ ಕೇಶಪೋಽರ್ಪಯತ್ ।**
**ನಿರಾಯುಧೋಽಪ್ಯಹಂ ಕ್ಷಮೋ ನಿಹಂತುಮಪ್ರಿಯಾನಿತಿ ॥ ೧೨೧ ॥**

**ಘಟಂ ಪಿಪೀಲಿಕಾಗಣ್ಯೈಃ ಪ್ರಪೂರ್ಯ ಯಾವನೋऽಸ್ಯ ಚ ।**
**ಬಹುತ್ವತೋ ವಿಜೇಷ್ಯ ಇತ್ಯಹಿಂ ಮೃತಂ ವ್ಯದರ್ಶಯತ್ ॥ ೧೨೨ ॥**

ಪದಚ್ಛೇದ :- **ಘಟಂ, ಪಿಪೀಲಿಕಾಗಣ್ಯೈಃ, ಪ್ರಪೂರ್ಯ, ಯಾವನಃ, ಅಸ್ಯ, ಚ, ಬಹುತಃ ತ್ವ , ವಿಜೇಷ್ಯ, ಇತಿ, ಅಹಿಂ, ಮೃತಂ, ವ್ಯದರ್ಶಯತ್ ॥**

**ಅರ್ಥ** :- **ಸಃ** = ಕೃಷ್ಣನು, **ಕೃಷ್ಣಪನ್ನಗಂ** = ಕೃಷ್ಣ ಸರ್ಪವನ್ನು, **ಘಟೇ** = ಕೊಡದಲ್ಲಿ, **ನಿಧಾಯ** = ಇಟ್ಟು, **ಅರ್ಪಯತ್** = ಅರ್ಪಿಸಿದನು, **ಅಹಂ** = ನಾನು, **ನಿಗಯುಧೋऽಪಿ** = ನಿರಾಯುಧನಾದರೂ ಕೂಡ, **ಅಪ್ರಿಯಾನ್** = ಶತ್ರುಗಳನ್ನು, **ನಿಹಂತುಂ** = ಕೊಲ್ಲಲು, **ಕ್ಷಮಃ** = ಸಮರ್ಥನು ಎಂದು ತೋರುವುದಕ್ಕಾಗಿ, **ಯಾವನಃ** = ಯವನ ರಾಜನು, **ಘಟಂ** = ಕೊಡವನ್ನು, **ಪಿಪೀಲಿಕಾಗಣ್ಯೈಃ** = ಇರುವೆ ಸಮೂಹಗಳಿಂದ, **ಪ್ರಪೂರ್ಯ** = ತುಂಬಿ, **ಅಸ್ಯ** = ಕೃಷ್ಣನಿಗೆ, **ಬಹುತ್ವತಃ** = ಬಹಳ ಇರುವುದರಿಂದ, **ಅಹಂ** = ನಾನು, **ವಿಜೇಷ್ಯ** = ಗೆಲ್ಲುವನು, **ಇತಿ** = ಎಂದು, **ಮೃತಂ** = ಸತ್ತ, **ಅಹಿಂ** = ಸರ್ಪವನ್ನು, **ವ್ಯದರ್ಶಯತ್** = ತೋರಿಸಿದನು.

**ತಾತ್ಪರ್ಯ** :- ಕೃಷ್ಣನು ಕೃಷ್ಣ ಸರ್ಪವನ್ನು ಕೊಡದಲ್ಲಿ ಹಾಕಿ ಕಳುಹಿಸಿದನು. ನಿರಾಯುಧನಾದರೂ ಕೂಡ ನಾನು ಶತ್ರುಗಳನ್ನು ಕೊಲ್ಲಲು ಸಮರ್ಥ ಎಂದು ತೋರಿಸಿದನು. ಯವನ ರಾಜನಾದರೂ ಕೊಡದಲ್ಲಿ ತುಂಬ ಇರುವೆಗಳನ್ನು ಹಾಕಿ ಬಹಳ ಇರುವುದರಿಂದ ನಾನೇ ಜಯಶಾಲಿಯಾಗುವೆನು ಎಂದು ಸತ್ತ ಹಾವನ್ನು ತೋರಿಸಿದನು.

**ಕಿಮತ್ರ ಸತ್ಯಮಿತ್ಯಹಂ ಪ್ರದರ್ಶಯಿಷ್ಯ ಇತ್ಯಜಃ ।**
**ಉದೀರ್ಯ ದೂತಮಭ್ಯಯಾತ್ ಸ ಯಾವನಂ ಪ್ರಬಾಧಿತುಮ್ ॥ ೧೨೩ ॥**

**ಅರ್ಥ** :- **ಅತ್ರ** = ಈ ವಿಷಯದಲ್ಲಿ, **ಕಿಂ** = ಯಾವುದು, **ಸತ್ಯಂ** = ಸತ್ಯವು, **ಇತಿ** = ಎಂದು, **ಅಜಃ** = ಜನನರಹಿತನಾದ, **ಅಹಂ** = ನಾನು, **ಪ್ರದರ್ಶಯಿಷ್ಯಂ** = ತೋರಿಸುವೆನು, **ಇತಿ** = ಎಂದು, **ದೂತಂ** = ದೂತನನ್ನು ಕುರಿತು, **ಉದೀರ್ಯ** = ಹೇಳಿ, **ಯಾವನಂ** = ಯವನರಾಜನನ್ನು, **ಪ್ರಬಾಧಿತುಂ** = ಬಾಧಿಸಲು, **ಅಭ್ಯಯಾತ್** = ಹೊರಟನು.

ತಾತ್ಪರ್ಯ :- ನಾನು ಇದರಲ್ಲಿ ಸತ್ಯವಾದುದು ಯಾವುದೆಂದು ತೋರಿಸುವೆ ಎಂದು ದೂತನನ್ನು ಕುರಿತು ಹೇಳಿ, ಯವನ ರಾಜನನ್ನು ಸಂಹರಿಸಲು ಹೊರಟನು.

**ಸ ಬಾಹುನೈವ ಕೇಶವೋ ವಿಜಿತ್ಯ ಯಾವನಂ ಪ್ರಭುಃ ।**
**ನಿಹತ್ಯ ಸರ್ವಸೈನಿಕಾನ್ ಸ್ವಮಸ್ಯ ಯಾಪಯತ್ ಪುರೀಮ್ ॥ ೧೨೪ ॥**

**ಅರ್ಥ** :- **ಪ್ರಭುಃ** = ಸಮರ್ಥನಾದ, **ಸಃ** = ಆ, **ಕೇಶವಃ** = ಕೇಶವನು, **ಬಾಹುನೈವ** = ಬಾಹುಬಲದಿಂದಲೇ, **ಯಾವನಂ** = ಯವನನ್ನು, **ವಿಜಿತ್ಯ** = ಗೆದ್ದು, **ಸರ್ವಸೈನಿಕಾನ್** = ಎಲ್ಲ ಸೈನಿಕರನ್ನು, **ನಿಹತ್ಯ** = ಕೊಂದು, **ಅಸ್ಯ** = ಈ ಯವನನ ಸಂಪತ್ತನ್ನು, **ಸ್ವಂ ಪುರಿಂ** = ತನ್ನ ಪಟ್ಟಣವನ್ನು ಕುರಿತು, **ಯಾಪಯನ್** = ಕಳುಹಿಸಿದನು.

ತಾತ್ಪರ್ಯ :- ಸಮರ್ಥನಾದ ಶ್ರೀಕೃಷ್ಣನು ಕೇವಲ ಬಾಹುವಿನಿಂದಲೇ ಯವನರಾಜನನ್ನು ಗೆದ್ದು ಎಲ್ಲ ಸೈನಿಕರನ್ನು ಸಾಯಿಸಿ ಸಂಪತ್ತನ್ನೆಲ್ಲ ದ್ವಾರಕಾ ಪಟ್ಟಣಕ್ಕೆ ಕಳುಹಿಸಿದ.

**ಮಹಾಸ್ತ್ರಶಸ್ತ್ರಸಂಚಯಾನ್ ಸೃಜಂತಮಾಶು ಯಾವನಮ್ ।**
**ನ್ಯಪಾತಯದ್ ರಥೋತ್ತಮಾತ್ ತಲೇನ ಕೇಶವೋऽರಿಹಾ ॥ ೧೨೫ ॥**

**ಅರ್ಥ** :- **ಮಹಾಸ್ತ್ರಶಸ್ತ್ರಸಂಚಯಾನ್** = ಮಹಾ ಅಸ್ತ್ರಶಸ್ತ್ರಗಳನ್ನು, **ಸೃಜಂತಂ** = ಸೃಷ್ಟಿಸುತ್ತಿದ್ದ, **ಯಾವನಂ** = ಯವನ ರಾಜನನ್ನು, **ಆಶು** = ಕೂಡಲೆ, **ಅರಿಹಾ** = ಶತ್ರುನಾಶಕನಾದ, **ಕೇಶವಃ** = ಶ್ರೀಕೃಷ್ಣನ, **ತಲೇನ** = ಹಸ್ತತಲದಿಂದಲೇ, **ರಥೋತ್ತಮಾತ್** = ರಥದ ದೆಸೆಯಿಂದ, **ನ್ಯಪಾತಯತ್** = ಬೀಳಿಸಿದನು.

ತಾತ್ಪರ್ಯ :- ಮಹಾ ಅಸ್ತ್ರ ಶಸ್ತ್ರಗಳನ್ನು ಸೃಷ್ಟಿಸುತ್ತಿದ್ದ ಯವನ ರಾಜನನ್ನು ಶ್ರೀಕೃಷ್ಣನು ಕೂಡಲೆ ತನ್ನ ಹಸ್ತತಲದಿಂದ ರಥದ ದೆಸೆಯಿಂದ ಬೀಳಿಸಿದನು.

**ವಿವಾಹನಂ ನಿರಾಯುಧಂ ವಿಧಾಯ ಬಾಹುನಾ ಕ್ಷಣಾತ್ ।**
**ವಿಮೂರ್ಛಿತಂ ನಚಾಹನತ್ ಸುರಾರ್ಥಿತಂ ಸ್ಮರನ್ ಹರಿಃ ॥ ೧೨೬ ॥**

**ಅರ್ಥ** :- **ಹರಿಃ** = ಶ್ರೀಕೃಷ್ಣನು, **ಕ್ಷಣಾತ್** = ಕ್ಷಣಾರ್ಧದಲ್ಲಿ, **ಬಾಹುನಾ** = ಬಾಹುಬಲದಿಂದ, **ವಿವಾಹನಂ** = ವಾಹನ ರಹಿತನನ್ನಾಗಿ, **ನಿರಾಯುಧಂ** = ನಿರಾಯುಧನನ್ನಾಗಿ, **ವಿಧಾಯ** = ಮಾಡಿ, **ವಿಮೂರ್ಛಿತಂ** = ಮೂರ್ಛೆಗೊಳಿಸಿದ, **ಸುರಾರ್ಥಿತಂ** = ದೇವತೆಗಳಿಂದ ಪ್ರಾರ್ಥಿಸಲ್ಪಟ್ಟಿದ್ದನು, **ಸ್ಮರನ್** = ಸ್ಮರಿಸಿ, **ನ ಜಾಹನತ್** = ಕೊಲ್ಲಲಿಲ್ಲ.

**ತಾತ್ಪರ್ಯ** :- ಹಿಂದೆ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಶ್ರೀಕೃಷ್ಣನು ಕ್ಷಣಾರ್ಧದಲ್ಲಿ ಆ ರಾಜನನ್ನು ಬಾಹುವಿನಿಂದ ವಾಹನ ಮತ್ತು ಆಯುಧ ರಹಿತನನ್ನಾಗಿ ಮಾಡಿ ಮೂರ್ಛೆಗೊಳಿಸಿದ ಹೊರತು ಕೊಲ್ಲಲಿಲ್ಲ.

**ಪುರಾ ಹಿ ಯೌವನಾಶ್ವಜೇ ವರಪ್ರದಾಃ ಸುರೇಶ್ವರಾಃ ।**
**ಯಯಾಚಿರೇ ಜನಾರ್ದನಂ ವರಂ ವರಪ್ರದೇಶ್ವರಮ್ ॥ ೧೨೭ ॥**

**ಅರ್ಥ** :- **ಪುರಾ** = ಹಿಂದೆ, **ಯೌವನಾಶ್ವಜೇ** = ಮುಚುಕುಂದನಿಗೆ, **ವರಪ್ರದಾಃ** = ವರವನ್ನು ಕೊಟ್ಟ, **ಸುರೇಶ್ವರಾಃ** = ದೇವತೆಗಳು, **ವರಪ್ರದೇಷ್ವರಂ** = ವರಪ್ರದರಿಗೆ ಒಡೆಯನಾದ **ಜನಾರ್ದನಂ** = ಜನಾರ್ದನನನ್ನು ಕುರಿತು, **ವರಂ** = ವರವನ್ನು, **ಯಯಾಚಿರೇ** = ಬೇಡಿದರು.

**ತಾತ್ಪರ್ಯ** :- ಹಿಂದೆ ಮುಚುಕುಂದನಿಗೆ ವರವಿತ್ತ ದೇವತೆಗಳು ವರದಾಯಕರಿಗೆ ಒಡೆಯನಾದ ಶ್ರೀಕೃಷ್ಣನನ್ನು ಕುರಿತು ವರವನ್ನು ಬೇಡಿದರು.

**ಅನರ್ಥಕೋ ವರೋಽಮುನಾ ವೃತೋಽಪಿ ಸಾರ್ಥಕೋ ಭವೇತ್ ।**
**ಅರಿಂ ಭವಿಷ್ಯಯಾವನಂ ದಹತ್ವಯಂ ತವೇಶ್ವರ ॥ ೧೨೮ ॥**

**ಅರ್ಥ** :- **ಈಶ್ವರ** = ಎಲೈ ಈಶ್ವರನೇ, **ಅಮುನಾ** = ಮುಚುಕುಂದನಿಂದ, **ಅನರ್ಥಕಃ** = ಅರ್ಥರಹಿತವಾದ, **ವರಃ** = ವರವು, **ವೃತೋಽಪಿ** = ಬೇಡಲ್ಪಟ್ಟರೂ, **ಸಾರ್ಥಕಃ** = ಸಾರ್ಥಕವು, **ಭವೇತ್** = ಆಗುವುದು, **ಭವಿಷ್ಯಯಾವನಂ** = ಮುಂದೆ ಹುಟ್ಟಲಿರುವ, **ಅರಿಂ** = ನಿನ್ನ ಶತ್ರುವಾದ ಕಾಲಯವನನ್ನು, **ಅಯಂ** = ಇವನು, **ದಹತು** = ಸುಡಲಿ.

**ತಾತ್ಪರ್ಯ** :- ಮುಚುಕುಂದನು ನಿರರ್ಥಕವಾದ ವರವನ್ನು ಬೇಡಿದ್ದರೂ ಅದು ಸಾರ್ಥಕವಾಗಲಿ. ಮುಂದೆ ಹುಟ್ಟಲಿರುವ ನಿನ್ನ ಶತ್ರುವಾದ ಕಾಲಯವನನ್ನು ಈತ ಸುಡಲಿ.

**ತಥಾऽಸ್ತ್ವಿತಿ ಪ್ರಭಾಷಿತಂ ಸ್ವವಾಕ್ಯಮೇವ ಕೇಶವಃ ।**
**ಋತಂ ವಿಧಾತುಮಭ್ಯಯಾತ್ ಸ ಯೌವನಾಶ್ವಜಾಂತಿಕಮ್ ॥ ೧೨೯ ॥**

**ಅರ್ಥ :-** **ತಥಾ ಅಸ್ತು** = ಹಾಗೆಯೇ ಆಗಲಿ, **ಇತಿ** = ಎಂದು, **ಕೇಶವಃ** = ಕೇಶವನು, **ಪ್ರಭಾಷಿತಂ** = ತನ್ನಿಂದ ಹೇಳಲ್ಪಟ್ಟ, **ಸ್ವವಾಕ್ಯಮೇವ** = ತನ್ನ ವಾಕ್ಯವನ್ನು, **ಋತಂ** = ಸತ್ಯವನ್ನಾಗಿ, **ವಿಧಾತುಂ** = ಮಾಡಲು, **ಯೌವನಾಶ್ವಜಾಂತಿಕಂ** = ಮುಚುಕುಂದನನ್ನು ಕುರಿತು, **ಅಭ್ಯಯಾತ್** = ಹೊರಟನು.

**ತಾತ್ಪರ್ಯ :-** ಹಾಗೆ ಆಗಲಿ ಎಂದು ಶ್ರೀಕೃಷ್ಣ ತಾನು ಹೇಳಿದ ಮಾತನ್ನು ಸತ್ಯವನ್ನಾಗಿ ಮಾಡಲು ಮುಚುಕುಂದನ ಹತ್ತಿರ ಧಾವಿಸಿದ.

**ಸಸಂಜ್ಞಕೋऽಥ ಯಾವನೋ ಧರಾತಲತ್ ಸಮುತ್ಥಿತಃ ।**
**ನಿಪಾತ್ಯ ಯಾಂತಮೀಶ್ವರಂ ಸ ಪೃಷ್ಠತೋऽನ್ವಯಾತ್ ಕ್ರುಧಾ ॥ ೧೩೦ ॥**

**ಅರ್ಥ :-** **ಅಥ** = ಅನಂತರ, **ಸಂಸಂಜಕಃ** = ಮೂರ್ಛೆಯಿಂದ ಎಚ್ಚರಗೊಂಡ, **ಯಾವನಃ** = ಯವನನು, **ಧರಾತಲಾತ್** = ನೆಲದಿಂದ, **ಸಮುತ್ಥಿತಃ** = ಎದ್ದವನಾಗಿ, **ನಿಪಾತ್ಯ** = ತನ್ನನ್ನು ಬೀಳಿಸಿ, **ಯಾಂತಂ** = ಹೋಗುತ್ತಿದ್ದ, **ಈಶ್ವರಂ** = ಈಶ್ವರನನ್ನು, **ಪೃಷ್ಟತಃ** = ಹಿಂದಿನಿಂದ, **ಕ್ರುಧಾ** = ಕೋಪದಿಂದ, **ಅನ್ವಯಾತ್** = ಹೋದ.

**ತಾತ್ಪರ್ಯ :-** ನಂತರ ಮೂರ್ಛೆಯಿಂದ ಎಚ್ಚರಗೊಂಡ ಯವನನು ಭೂಮಿಯಿಂದ ಉದ್ದತನಾಗಿ ತನ್ನನ್ನು ಬೀಳಿಸಿ ಹೋಗುತ್ತಿದ್ದ ಶ್ರೀಕೃಷ್ಣನನ್ನು ಬೆನ್ನಟ್ಟಿ ಕೋಪದಿಂದ ಹೋದ.

**ಹರಿರ್ಗುಹಾಂ ನೃಪಸ್ಯ ತು ಪ್ರವಿಶ್ಯ ಸಂವ್ಯವಸ್ಥಿತಃ ।**
**ಸ ಯಾವನಃ ಪದಾऽಹನನ್ನೃಪಂ ಸ ತಂ ದದರ್ಶ ಹ ॥ ೧೩೧ ॥**

**ಅರ್ಥ :-** **ಹರಿಃ** = ಶ್ರೀಕೃಷ್ಣನು, **ನೃಪಸ್ಯ** = ಮುಚುಕುಂದನ, **ಗುಹಾಂ** = ಗುಹೆಯನ್ನು, **ಪ್ರವಿಶ್ಯ** = ಪ್ರವೇಶಿಸಿ, **ಸಂವ್ಯವಸ್ಥಿತಃ** = ಅಡಗಿದ, **ಸಃ ಯಾವನಃ** = ಆ ಯವನ ರಾಜನು, **ನೃಪಂ** = ಮುಚುಕುಂದನನ್ನು, **ಪದಾ** =

ಕಾಲಿನಿಂದ, **ಅಹನ್** = ಹೊಡೆದನು, **ಸಃ** = ಮುಚುಕುಂದನು, **ತಂ** = ಅವನನ್ನು, **ದದರ್ಶ** = ಕಂಡನು, **ಹ** = ಆಶ್ಚರ್ಯ.

**ತಾತ್ಪರ್ಯ :-** ಶ್ರೀ ಕೃಷ್ಣನು ರಾಜನಾದ ಮುಚುಕುಂದನ ಗುಹೆಯನ್ನು ಪ್ರವೇಶಿಸಿ ಅಡಗಿದ ಆ ಯವನನು ಮುಚುಕುಂದನನ್ನು ಕಾಲಿನಿಂದ ಒದ್ದ ಆಗ ಮುಚುಕುಂದ ಅವನನ್ನು ಕಂಡ.

**ಸ ತಸ್ಯ ದೃಷ್ಟಿಮಾತ್ರತೋ ಬಭೂವ ಭಸ್ಮಸಾತ್ ಕ್ಷಣಾತ್ ।**
**ಸ ಏವ ವಿಷ್ಣುರವ್ಯಯೋ ದದಾಹ ತಂ ಹಿ ವಹ್ನಿವತ್ ॥ ೧೩೨ ॥**

**ಅರ್ಥ :- ತಸ್ಯ** = ಮುಚುಕುಂದನ, **ದೃಷ್ಟಿಮಾತ್ರತಃ** = ದೃಷ್ಟಿಯಿಂದಲೆ, **ಸಃ** = ಆ ಯವನನು, **ಕ್ಷಣಾತ್** = ಕ್ಷಣಾರ್ಧದಲ್ಲಿ, **ಭಸ್ಮಸಾತ್ ಬಭೂವ** = ಭಸ್ಮೀಭೂತನಾದನು, **ಅವ್ಯಯಃ** = ನಾಶರಹಿತನಾದ, **ಸ ಏವ ವಿಷ್ಣುಃ** = ಆ ವಿಷ್ಣುವೇ, **ತಂ** = ಅವನನ್ನು, **ವಹ್ನಿವತ್** = ಬೆಂಕಿಯಂತೆ, **ದದಾಹ** = ಸುಟ್ಟನು, **ಹಿ** = ನಿಶ್ಚಯವು.

**ತಾತ್ಪರ್ಯ :-** ಮುಚುಕುಂದನ ನೋಟದಿಂದಲೇ ಕ್ಷಣಾರ್ಧದಲ್ಲಿ ಅವನನ್ನು ಸುಟ್ಟು ಹಾಕಿದ ನಾಶರಹಿತನಾದ ಶ್ರೀಕೃಷ್ಣನೇ ಅವನನ್ನು ಬೆಂಕಿಯಂತೆ ಸುಟ್ಟಿದ.

**ವರಾಚ್ಛಿವಸ್ಯ ದೈವತ್ಯೈರವಧ್ಯದಾನವಾನ್ ಪುರಾ ।**
**ಹರೇರ್ವರಾನ್ನಿಹತ್ಯ ಸ ಪ್ರಪೇದ ಆಶ್ವಿಮಂ ಪರಮ್ ॥ ೧೩೩ ॥**

**ಸುದೀರ್ಘಸುಪ್ತಿಮಾತ್ಮನಃ ಪ್ರಸುಪ್ತಿಭಂಗಕೃತ್ಕ್ಷಯಮ್ ।**
**ಸ್ವದೃಷ್ಟಿಮಾತ್ರತಸ್ತತೋ ಹತಃ ಸ ಯಾವನಸ್ತದಾ ॥ ೧೩೪ ॥**

**ಅರ್ಥ :- ಪ್ರಸುಪ್ತಿಭಂಗಕೃತ್ಕ್ಷಯಂ** = ನಿದ್ರಾಭಂಗ ಮಾಡುವವನ ನಾಶವನ್ನು, **ಸ್ವದೃಷ್ಟಿಮಾತ್ರತಃ** = ತನ್ನ ದೃಷ್ಟಿಮಾತ್ರದಿಂದಲೇ, **ಶಿವಸ್ಯ** = ಶಿವನ, **ವರಾತ್** = ವರದಿಂದ, **ದೈವತ್ಯೈಃ** = ದೇವತೆಗಳಿಂದ, **ಅವಧ್ಯದಾನವಾನ್** = ಅವಧ್ಯರಾದ ದಾನವರನ್ನು, **ಪುರಾ** = ಹಿಂದೆ, **ಹರೇಃ** = ಹರಿಯ, **ವರಾತ್** = ವರದಿಂದ, **ನಿಹತ್ಯ** = ಕೊಂದು, **ಸಃ** = ಮುಚುಕುಂದನು, **ಸುದೀರ್ಘಸುಪ್ತಿಂ** = ತುಂಬಾ ದೀರ್ಘವಾದ ನಿದ್ರೆಯನ್ನು, **ಇಮಂ** = ಈ, **ವರಂ** = ವರವನ್ನು,

**ಪ್ರಪೇದ** = ಹೊಂದಿದ್ದನು (ಆದ್ದರಿಂದ), **ಸಃ** = ಆ, **ಯಾವನಃ** = ಯವನನು, **ತದಾ** = ಆಗ, **ಹತಃ** = ಹತನಾದನು.

**ತಾತ್ಪರ್ಯ :-** ಶಿವನ ವರದಿಂದ ದೇವತೆಗಳಿಗೆ ಅವಧ್ಯರಾಗಿದ್ದ ದಾನವರನ್ನು ಭಗವಂತನ ಅನುಗ್ರಹದಿಂದ ಸಂಹರಿಸಿದ ಮತ್ತು ನನಗೆ ತುಂಬ ದೀರ್ಘವಾದ ನಿದ್ರೆ ಬೇಕು ನಿದ್ರೆಗೆ ಭಂಗ ಮಾಡುವವರನ್ನು ನನ್ನ ದೃಷ್ಟಿಯಿಂದಲೇ ನಾಶಹೊಂದಬೇಕು ಎಂದು ವರವನ್ನು ಪಡೆದಿದ್ದ. ಆದ್ದರಿಂದ ಆ ಯವನನು ಹತನಾದ.

**ಅತಶ್ಚ ಪುಣ್ಯಮಾಪ್ತವಾನ್ ಸುರಪ್ರಸಾದತೋಽಕ್ಷಯಮ್ ।**
**ಸ ಯೌವನಾಶ್ವಜೋ ನೃಪೋ ನ ದೇವತೋಷಣಂ ವೃಥಾ ॥ ೧೩೫ ॥**

**ಅರ್ಥ :- ಅತಃ** = ಆದ್ದರಿಂದ, **ಸಃ** = ಆ, **ನೃಪಃ** = ರಾಜನಾದ, **ಯೌವನಾಶ್ವಜಂ** = ಮುಚುಕುಂದನು, **ಸುರಪ್ರಸಾದತಃ** = ದೇವತೆಗಳ ಅನುಗ್ರಹದಿಂದ, **ಅಕ್ಷಯಂ** = ಕ್ಷಯರಹಿತವಾದ, **ಪುಣ್ಯಂ** = ಪುಣ್ಯವನ್ನು, **ಆಪ್ತವಾನ್** = ಹೊಂದಿದನು, **ಚ** = ಮತ್ತು, **ದೇವತೋಷಣಂ** = ದೇವತೆಗಳ ಪ್ರಸನ್ನತೆಯು, **ನ ವೃಥಾ** = ಎಂದಿಗೂ ವ್ಯರ್ಥವಲ್ಲ.

**ತಾತ್ಪರ್ಯ :-** ಆದ್ದರಿಂದ ಮುಚುಕುಂದನು ಭಗವಂತನ ಅನುಗ್ರಹದಿಂದ ಅಕ್ಷಯ ಪುಣ್ಯವನ್ನು ಸಂಪಾದಿಸಿದ ದೇವತೆಗಳನ್ನು ಪ್ರಸನ್ನಗೊಳಿಸುವುದು ಎಂದೂ ವ್ಯರ್ಥವಾಗುವುದಿಲ್ಲ.

**ತತೋ ಹರಿಂ ನಿರೀಕ್ಷ್ಯ ಸ ಸ್ತುತಿಂ ವಿಧಾಯ ಚೋತ್ತಮಾಮ್ ।**
**ಹರೇರನುಜ್ಞಯಾ ತಪಶ್ಚಚಾರ ಮುಕ್ತಿಮಾಪ ಚ ॥ ೧೩೬ ॥**

**ಅರ್ಥ :- ತತಃ** = ಅನಂತರ, **ಹರಿಂ** = ಹರಿಯನ್ನು, **ಸಃ** = ಮುಚುಕುಂದನು, **ನಿರೀಕ್ಷ** = ಕಂಡು, **ಉತ್ತಮಾ** = ಉತ್ತಮವಾದ, **ಸ್ತುತಿಂ** = ಸ್ತುತಿಯನ್ನು, **ವಿಧಾಯ** = ಮಾಡಿ, **ಹರೇಃ** = ಭಗವಂತನ, **ಅನುಜ್ಞಯಾ** = ಅಪ್ಪಣೆಯಿಂದ, **ತಪಃ** = ತಪಸ್ಸನ್ನು, **ಚಕಾರ** = ಮಾಡಿದನು, **ಚ** = ಮತ್ತು, **ಮುಕ್ತಿಂ** = ಮುಕ್ತಿಯನ್ನು, **ಆಪ** = ಹೊಂದಿದನು.

**ತಾತ್ಪರ್ಯ** :- ಆಮೇಲೆ ಭಗವಂತನನ್ನು ಕಂಡು ಉತ್ತಮ ಸ್ತೋತ್ರವನ್ನು ಮಾಡಿ ಅವನ ಅನುಜ್ಞೆಯಿಂದ ತಪಸ್ಸನ್ನಾಚರಿಸಿ ಮುಕ್ತಿಯನ್ನು ಹೊಂದಿದ.

**ತತೋ ಗುಹಾಮುಖಾದ್ಧರಿರ್ವಿನಿಸ್ಸೃತೋ ಜರಾಸುತಮ್ ।**
**ಸಮಸ್ತಭೂಪಸಂವೃತಂ ಜಿಗಾಯ ಬಾಹುನೇಶ್ವರಃ ॥ ೧೩೭ ॥**

**ಅರ್ಥ** :- **ತತಃ** = ಅನಂತರ, **ಗುಹಾಮುಖಾತ್** = ಗುಹೆಯಿಂದ, **ಹರಿಃ** = ಶ್ರೀಹರಿಯು, **ವಿನಿಸೃತಃ** = ಹೊರಬಂದವನಾಗಿ, **ಸಮಸ್ತ ಭೂಪಸಂಯುತಂ** = ಸಕಲರಾಜರಿಂದ ಕೂಡಿಕೊಂಡು, **ಜರಾಸುತಂ** = ಜರಾಸಂಧನನ್ನು, **ಈಶ್ವರಃ** = ಈಶ್ವರನು, **ಬಾಹುನಾ** = ತನ್ನ ಬಾಹುವಿನಿಂದಲೇ, **ಜಿಗಾತಃ** = ಜಯಿಸಿದನು.

**ತಾತ್ಪರ್ಯ** :- ನಂತರ ಗುಹೆಯಿಂದ ಹೊರಬಂದ ಶ್ರೀಕೃಷ್ಣನು ಸಕಲ ರಾಜರಿಂದ ಕೂಡಿದ ಜರಾಸಂಧನನ್ನು ಬಾಹುವಿನಿಂದ ಗೆದ್ದನು.

**ತಲೇನ ಮುಷ್ಟಿಭಿಸ್ತಥಾ ಮಹೀರುಹೈಶ್ಚ ಚೂರ್ಣಿತಾಃ ।**
**ನಿಪೇತುರಸ್ಯ ಸೈನಿಕಾಃ ಸ್ವಯಂ ಚ ಮೂರ್ಛಿತೋಽಪತತ್ ॥ ೧೩೮ ॥**

**ಅರ್ಥ** :- **ತಲೇನ** = ಹಸ್ತದಿಂದ, **ಮುಷ್ಟಿಭಿಃ** = ಮುಷ್ಟಿಗಳಿಂದಲೂ, **ತಥಾ** = ಹಾಗೆ, **ಮಹೀರುಹೈಃ** = ವೃಕ್ಷಗಳಿಂದ, **ಚೂರ್ಣಿತಾಃ** = ಪುಡಿ ಮಾಡಲ್ಪಟ್ಟು, **ಅಸ್ಯ** = ಜರಾಸಂಧನ, **ಸೈನಿಕಾಃ** = ಸೈನಿಕರು, **ನಿಪೇತುಃ** = ಬಿದ್ದರು, **ಸ್ವಯಂ** = ತಾನೂ ಕೂಡ, **ಮೂರ್ಛಿತಃ** = ಮೂರ್ಛಿತನಾಗಿ, **ಅಪತತ್** = ಬಿದ್ದನು.

**ತಾತ್ಪರ್ಯ** :- ಜರಾಸಂಧನ ಸೈನಿಕರೆಲ್ಲರು ಶ್ರೀಕೃಷ್ಣನ ಅಂಗೈ ಅಂಗಾಲುಗಳಿಂದ ಮುಷ್ಟಿಗಳಿಂದ ಹಾಗೆ ವೃಕ್ಷಗಳಿಂದ ಪುಡಿಯಾಗಿ ನೆಲಕ್ಕುರುಳಿದರು. ಜರಾಸಂಧನು ತಾನೂ ಕೂಡ ಮೂರ್ಛಿತನಾಗಿ ಬಿದ್ದನು.

**ಸಸಾಲ್ವಪೌಂಡ್ರಚೇದಿಪಾನ್ ನಿಪಾತ್ಯ ಸರ್ವಭೂಭುಜಃ ।**
**ಸ ಪುಪ್ಲುವೇ ಜನಾರ್ದನಃ ಕ್ಷಣೇನ ತಾಂ ಕುಶಸ್ಥಲೀಮ್ ॥ ೧೩೯ ॥**

**ಅರ್ಥ** :- **ಸಃ** = ಶ್ರೀಕೃಷ್ಣನು, **ಸಸಾಲ್ವ ಪೌಂಡ್ರಚೇದಿಪಾನ್** = ಸಾಲ್ವ ಪೌಂಡ್ರಕ ಶಿಶುಪಾಲಕ ಮುಂತಾದ, **ಸರ್ವಭೂಭುಜಃ** = ಸಕಲ ರಾಜರನ್ನು,

ನಿಪಾತ್ಯ = ಬೀಳಿಸಿ, ಸಃ ಜನಾರ್ದನಃ = ಆ ಶ್ರೀಕೃಷ್ಣನು, ಕ್ಷಣೇನ = ಕ್ಷಣಾರ್ಧದಲ್ಲಿ, ಕುಶಸ್ಥಲೀಂ = ದ್ವಾರಕೆಯನ್ನು ಕುರಿತು, ಪುಪ್ಲುವೇ = ಹಾರಿದನು.

ತಾತ್ಪರ್ಯ :- ಶ್ರೀಕೃಷ್ಣನು ಸಾಲ್ವನೇ ಮೊದಲಾದ ಸಕಲರಾಜರನ್ನು ಬೀಳಿಸಿ ಕ್ಷಣಾರ್ಧದಲ್ಲಿ ದ್ವಾರಕಾಪಟ್ಟಣಕ್ಕೆ ಹಾರಿದನು.

**ಸಸಂಜ್ಞಕಾಃ ಸಮುತ್ಥಿತಾಸ್ತತೋ ನೃಪಾಃ ಪುನರ್ಯಯುಃ ।**
**ಜಿಗೀಷವೋಽಥ ರುಗ್ಮಿಣೀಂ ವಿಧಾಯ ಚೇದಿಪೇ ಹರಿಮ್ ॥ ೧೪೦ ॥**

**ಅರ್ಥ** :- **ಸಂಜ್ಞಕಾಃ** = ಎಚ್ಚರಗೊಂಡ, **ಸಮುತ್ಥಿತಾಃ** = ಎದ್ದ, **ನೃಪಾಃ** = ರಾಜರು, **ತತಃ** = ಅನಂತರ, **ಹರಿಂ** = ಶ್ರೀಕೃಷ್ಣನನ್ನು, **ಜಿಗೀಷವಃ** = ಜಯಿಸುವ ಆಸೆಯಿಂದ, **ರುಗ್ಮಿಣೀಂ** = ರುಕ್ಮಿಣಿಯನ್ನು, **ಚೇದಿಪೇ** = ಶಿಶುಪಾಲನಿಗೆ, **ವಿಧಾಯ** = ನಿಶ್ಚಯ ಮಾಡಿ, **ಪುನಃ** = ಮತ್ತೆ, **ಯಯುಃ** = ಕುಂಡಿನಪುರಕ್ಕೆ ಹೊರಟನು.

ತಾತ್ಪರ್ಯ :- ಎಚ್ಚರಗೊಂಡ ರಾಜರೆಲ್ಲರೂ ಎದ್ದು ಶ್ರೀಕೃಷ್ಣನನ್ನು ಜಯಿಸುವ ಬಯಕೆಯಿಂದ ರುಗ್ಮಿಣಿಯನ್ನು ಶಿಶುಪಾಲನಿಗೆ ಕೊಡುವುದು ಎಂದು ತೀರ್ಮಾನಿಸಿ ಕುಂಡಿನಪುರಕ್ಕೆ ಹೊರಟರು.

**ಸಮಸ್ತರಾಜಮಂಡಲೇ ವಿನಿಶ್ಚಯಾದುಪಾಗತೇ ।**
**ಸಭೀಷ್ಮಕೇ ಚ ರುಗ್ಮಿಣಿಂ ಪ್ರದಾತುಮುದ್ಯತೇ ಮುದಾ ॥ ೧೪೧ ॥**

**ಸಮಸ್ತಲೋಕಯೋಷಿತಾಂ ವರಾ ವಿದರ್ಭನಂದನಾ ।**
**ದ್ವಿಜೋತ್ತಮಂ ಹರೇಃ ಪದೋಃ ಸಕಾಶಮಾಶ್ವಯಾತಯತ್ ॥ ೧೪೨ ॥**

**ಅರ್ಥ** :- **ಸಮಸ್ತರಾಜಮಂಡಲೇ** = ಎಲ್ಲ ರಾಜರ ಸಮೂಹವು, **ವಿನಿಶ್ಚಯಾತ್** = ನಿಶ್ಚಯಮಾಡಿ, **ಉಪಾಗತೇ** = ಬಂದಿರಲು, **ಸಭೀಷ್ಮಕೇ** = ಭೀಷ್ಮಕನಿಂದ ಸಹಿತನಾಗಿ, **ರುಗ್ಮಿಣಿಂ** = ರುಗ್ಮಿಣಿಯನ್ನು, **ಮುದಾ** = ಸಂತೋಷದಿಂದ, **ಪ್ರದಾತುಂ** = ಕೊಡಲು, **ಉದ್ಯತೇ** = ಉದ್ಯುಕ್ತವಾಗಿತ್ತು, **ಸಮಸ್ತಲೋಕಯೋಷಿತಾಂ** = ಸಕಲಲೋಕಗಳ ಸ್ತ್ರೀಯರಲ್ಲಿ, **ವರಾ** = ಉತ್ತಮಳಾದ, **ವಿದರ್ಭನಂದನಾ** = ರುಗ್ಮಿಣಿಯು, **ಹರೇಃ** = ಶ್ರೀಕೃಷ್ಣನ, **ಪದಾಂ** = ಚರಣಗಳ, **ಸಕಾಶಂ** = ಸಮೀಪ, **ದ್ವಿಜೋತ್ತಮಂ** = ಒಬ್ಬ ಬ್ರಾಹ್ಮಣ ಶ್ರೇಷ್ಠನನ್ನು, **ಆಶು** = ಕೂಡಲೆ, **ಅಯಾತಯತ್** = ಕಳುಹಿಸಿದಳು.

ತಾತ್ಪರ್ಯ :- ಎಲ್ಲ ರಾಜರೂ ಈ ರೀತಿ ನಿಶ್ಚಯ ಮಾಡಿ ಭೀಷ್ಮಕನಿಂದ ರುಗ್ಮಿಣಿಯನ್ನು ಶಿಶುಪಾಲನಿಗೆ ಕೊಡಿಸಲು ಸಂತೋಷದಿಂದ ಉದ್ಯುಕ್ತವಾಗಿತ್ತು. ಆಗ ಸಕಲ ಲೋಕಗಳ ಸ್ತ್ರೀಯರಲ್ಲಿ ಉತ್ತಮಳಾದ ಆ ರುಗ್ಮಿಣಿಯು ಒಬ್ಬ ಬ್ರಾಹ್ಮಣನನ್ನು ಶ್ರೀಕೃಷ್ಣನ ಸನ್ನಿಧಿಗೆ ಕಳುಹಿಸಿದಳು.

**ನಿಶಮ್ಯ ತದ್ವಚೋ ಹರಿಃ ಕ್ಷಣಾದ್ ವಿದರ್ಭಕಾನಗಾತ್ ।**
**ತಮನ್ವಯಾದ್ಧಲಾಯುಧಃ ಸಮಸ್ತಯಾದವೈಃ ಸಹ ॥ ೧೪೩ ॥**

**ಅರ್ಥ** :- **ಹರಿಃ** = ಶ್ರೀಕೃಷ್ಣನು, **ತದ್ವಚಃ** = ಆ ರುಕ್ಮಿಣಿಯ ಮಾತನ್ನು, **ನಿಶಮ್ಯ** = ಕೇಳಿ, **ಕ್ಷಣಾತ್** = ಕೂಡಲೇ, **ವಿದರ್ಭಕಾನ್** = ಕುಂಡಿನಪುರವನ್ನು ಕುರಿತು, **ಅಗಾತ್** = ಹೊರಟನು, **ಸಮಸ್ತಯಾದವೈಃ** = ಎಲ್ಲ ಯಾದವರೊಂದಿಗೆ, **ಸಹ** = ಸಹಿತನಾಗಿ, **ಹಲಾಯುಧಃ** = ಬಲರಾಮನು, **ತಂ** = ಅವನನ್ನು, **ಅನ್ವಯಾತ್** = ಅನುಸರಿಸಿದ.

ತಾತ್ಪರ್ಯ :- ಶ್ರೀ ಕೃಷ್ಣನು ಆ ರುಕ್ಮಿಣಿಯ ಮಾತನ್ನು ಕೇಳಿ ಕೂಡಲೇ ಕುಂಡಿನಪುರಕ್ಕೆ ಹೊರಟ. ಬಲರಾಮನು ಎಲ್ಲ ಯಾದವರೊಂದಿಗೆ ಶ್ರೀಕೃಷ್ಣನನ್ನು ಹಿಂಬಾಲಿಸಿದ.

**ಸಮಸ್ತರಾಜಮಂಡಲಂ ಪ್ರಯಾಂತಮೀಕ್ಷ್ಯ ಕೇಶವಮ್ ।**
**ಸುಯತ್ತಮಾತ್ತಕಾರ್ಮುಕಂ ಬಭೂವ ಕನ್ಯಕಾವನೇ ॥ ೧೪೪ ॥**

**ಅರ್ಥ** :- **ಪ್ರಯಾಂತಂ** = ವಿವಾಹಕ್ಕೆ ಹೊರಟ, **ಕೇಶವಂ** = ಶ್ರೀಕೃಷ್ಣನನ್ನು, **ಈಕ್ಷ್ಯ** = ಕಂಡು, **ಸಮಸ್ತರಾಜಮಂಡಲಂ** = ಎಲ್ಲ ರಾಜರ ಸಮೂಹವು, **ಆತ್ತಕಾರ್ಮುಕಂ** = ಬಿಲ್ಲನೆತ್ತಿಕೊಂಡು, **ಕನ್ಯಕಾ** = ಕನ್ಯೆಯ, **ಅವನೇ** = ರಕ್ಷಣೆಯಲ್ಲಿ, **ಸುಯತ್ತಂ** = ಪ್ರಯತ್ನ, **ಬಭೂವ** = ಉಂಟಾಯಿತು.

ತಾತ್ಪರ್ಯ :- ಶ್ರೀಕೃಷ್ಣನು ರುಕ್ಮಿಣೀ ವಿವಾಹಕ್ಕೆ ಹೊರಟಿರುವುದನ್ನು ಕಂಡು ಎಲ್ಲ ರಾಜರು ಬಿಲ್ಲನೆತ್ತಿಕೊಂಡು ಕನ್ಯೆಯ ರಕ್ಷಣೆಯಲ್ಲಿ ದೃಢವಾದ ಪ್ರಯತ್ನವನ್ನು ಮಾಡಿದರು.

**ಪುರಾ ಪ್ರದಾನತಃ ಸುರೇಕ್ಷಣಾಚ್ಚಲಾದ್ ಬಹಿರ್ಗತಾಮ್ ।**
**ರಥೇ ನ್ಯವೇಶಯದ್ಧರಿಃ ಪ್ರಪಶ್ಯತಾಂ ಚ ಭೂಭೃತಾಮ್ ॥ ೧೪೫ ॥**

**ಅರ್ಥ** :- **ಪ್ರದಾನತಃ** = ಕನ್ಯಾದಾನಕ್ಕಿಂತ, **ಪುರಾ** = ಮೊದಲು, **ಸುರೇಕ್ಷಣಾತ್** = ದೇವತೆಯ ದರ್ಶನದ, **ಛಲಾತ್** = ನೆಪದಿಂದ, **ಬಹಿರ್ಗತಾಂ** = ಹೊರಬಂದ ರುಕ್ಮಿಣಿಯನ್ನು, **ಪ್ರಪಶ್ಯತಾಂ** = ನೋಡುತ್ತಿರುವ, **ಭೂಭೃತಾಂ** = ರಾಜರ ಸಮೂಹದ ಮಧ್ಯದಲ್ಲಿ, **ಹರಿಃ** = ಹರಿಯು, **ರಥಂ** = ರಥವನ್ನು, **ನ್ಯವೇಶಯತ್** = ಕುಳ್ಳರಿಸಿದನು.

**ತಾತ್ಪರ್ಯ** :- ಕನ್ಯಾದಾನಕ್ಕಿಂತ ಮುಂಚೆ ಕುಲದೇವತೆಯ ದರ್ಶನದ ನೆಪದಿಂದ ಹೊರಬಂದ ರುಕ್ಮಿಣಿಯನ್ನು ಸಕಲ ರಾಜರು ನೋಡುತ್ತಿರುವಾಗಲೇ ರಥದಲ್ಲಿ ಶ್ರೀಕೃಷ್ಣನು ರುಕ್ಮಿಣಿಯನ್ನು ಕುಳ್ಳಿರಿಸಿದರು.

**ಜರಾಸುತಾದಯೋ ರುಷಾ ತಮಭ್ಯಯುಃ ಶರೋತ್ತಮೈಃ ।**
**ವಿಧಾಯ ತಾನ್ ನಿರಾಯುಧಾನ್ ಜಗಾಮ ಕೇಶವಃ ಶನೈಃ ॥ ೧೪೬ ॥**

**ಅರ್ಥ** :- **ಜರಾಸುತಾದಯಃ** = ಜರಾಸಂಧನೇ ಮುಂತಾದವರು, **ರುಷಾ** = ಕೋಪದಿಂದ, **ಶರೋತ್ತಮೈಃ** = ಉತ್ತಮ ಬಾಣಗಳಿಂದ, **ತಂ** = ಅವನನ್ನು, **ಅಭ್ಯಯುಃ** = ಹಿಂಬಾಲಿಸಿದರು, **ತಾನ್** = ಅವರನ್ನು, **ನಿರಾಯುಧಾನ್** = ನಿರಾಯುಧರನ್ನಾಗಿ, **ವಿಧಾಯ** = ಮಾಡಿ, **ಶನೈಃ** = ಮೆಲ್ಲನೆ, **ಕೇಶವಃ** = ಶ್ರೀಕೃಷ್ಣನು, **ಜಗಾಮ** = ಹೋದನು.

**ತಾತ್ಪರ್ಯ** :- ಜರಾಸಂಧನೇ ಮೊದಲಾದವರೆಲ್ಲರೂ ಕೋಪದಿಂದ ಬಾಣಗಳನ್ನು ಹಿಡಿದು ಅವನನ್ನು ಹಿಂಬಾಲಿಸಿದರು ಅವರೆಲ್ಲರನ್ನು ನಿರಾಯುಧರನ್ನಾಗಿ ಮಾಡಿ ಸಾವಧಾನದಿಂದ ರುಕ್ಮಿಣಿಯನ್ನು ಕರೆದುಕೊಂಡು ಹೋದನು.

**ಪುನರ್ಗೃಹೀತಕಾರ್ಮುಕಾನ್ ಹರಿಂ ಪ್ರಯಾತುಮುದ್ಯತಾನ್ ।**
**ನ್ಯವಾರಯದ್ಧಲಾಯುಧೋ ಬಲಾದ್ ಬಲೋರ್ಜಿತಾಗ್ರಣೀಃ ॥ ೧೪೭ ॥**

**ಅರ್ಥ** :- **ಪುನಃ** = ಮತ್ತು, **ಗೃಹೀತಕಾರ್ಮುಕಾನ್** = ಬಿಲ್ಲನ್ನು ಹಿಡಿದವರಾಗಿ, **ಹರಿಂ** = ಹರಿಯನ್ನು ಕುರಿತು, **ಪ್ರಯಾತುಂ** = ಹೊರಡಲು, **ಉದ್ಯತಾನ್** = ಉದ್ಯುಕ್ತರಾದ, **ಬಲೋರ್ಜಿತಾಗ್ರಣಿಃ** = ಬಲಿಷ್ಠರಲ್ಲಿ ಅಗ್ರಗಣ್ಯನಾದ, **ಹಲಾಯುಧಃ** = ಬಲರಾಮನು, **ಬಲಾತ್** = ಬಲಾತ್ಕಾರದಿಂದ, **ನ್ಯವಾರಯತ್** = ತಡೆದನು.

ತಾತ್ಪರ್ಯ :- ಪುನಃ ರಾಜರು ತಮ್ಮ ಬಿಲ್ಲುಗಳನ್ನು ಹಿಡಿದು ಹರಿಯ ಮೇಲೆ ಆಕ್ರಮಣಕ್ಕೆ ಉದ್ಯುಕ್ತರಾದಾಗ ಬಲಿಷ್ಠರಲ್ಲಿ ಅಗ್ರಗಣ್ಯನಾದ ಬಲರಾಮನು ಬಲಾತ್ಕಾರದಿಂದ ತಡೆದನು.

**ತದಾ ಸಿತಃ ಶಿರೋರುಹೋ ಹರೇರ್ಹಲಾಯುಧಸ್ಥಿತಃ ।**
**ಪ್ರಕಾಶಮಾವಿಶದ್ ಬಲಂ ವಿಜೇತುಮತ್ರ ಮಾಗಧಮ್ ॥ ೧೪೮ ॥**

**ಅರ್ಥ** :- **ತದಾ** = ಆಗ, **ಹಲಾಯುಧ ಸ್ಥಿತಃ** = ಬಲರಾಮನಲ್ಲಿದ್ದ, **ಹರೇಃ** = ಹರಿಯ, **ಸಿತಃ ಶಿರೋರುಹಃ** = ಶುಕ್ಲ ಕೇಶರೂಪವು, **ಅತ್ರ** = ಇಲ್ಲಿ, **ಮಾಗಧಂ** = ಜರಾಸಂಧನನ್ನು, **ವಿಜೇತುಂ** = ಪರಾಭವಗೊಳಿಸಲು, **ಬಲಂ** = ಬಲರಾಮನನ್ನು, **ಪ್ರಕಾಶಂ** = ಸ್ಪಷ್ಟವಾಗಿ, **ಆವಿಶತ್** = ಪ್ರವೇಶಿಸಿತು.

ತಾತ್ಪರ್ಯ :- ಜರಾಸಂಧನನ್ನು ಪರಾಭವಗೊಳಿಸುವುದಕ್ಕಾಗಿ ಹರಿಯ ಶುಕ್ಲ ಕೇಶರೂಪವು ಬಲರಾಮನನ್ನು ಸ್ಪಷ್ಟವಾಗಿ ಪ್ರವೇಶಿಸಿತ್ತು.

**ಸ ತಸ್ಯ ಮಾಗಧೋ ರಣೇ ಗದಾಪ್ರಹಾರಚೂರ್ಣಿತಃ ।**
**ಪಪಾತ ಭೂತಲೇ ಬಲೋ ವಿಜಿತ್ಯ ತಂ ಯಯೌ ಪುರೀಮ್ ॥ ೧೪೯ ॥**

**ಅರ್ಥ** :- **ಸಃ** = ಆ, **ಮಾಗಧಃ** = ಜರಾಸಂಧನು, **ತಸ್ಯ** = ಆ ಬಲರಾಮನ, **ಗದಾಪ್ರಹಾರಚೂರ್ಣಿತಃ** = ಗದೆಯ ಪ್ರಹಾರದಿಂದ ಜಯಭರಿತನಾಗಿ, **ರಣೆ** = ರಣರಂಗದಲ್ಲಿ, **ಪಪಾತ** = ಬಿದ್ದನು, **ಬಲಃ** = ಬಲರಾಮನು, **ತಂ** = ಅವನನ್ನು, **ವಿಜಿತ್ಯ** = ಗೆದ್ದು, **ಪುರಿಂ** = ಪಟ್ಟಣವನ್ನು ಕುರಿತು, **ಯಯೌ** = ಹೊರಟನು.

ತಾತ್ಪರ್ಯ :- ಬಲರಾಮನ ಗದಾಪ್ರಹಾರದಿಂದ ಜರ್ಝರಿತನಾದ ಜರಾಸಂಧನು ರಣರಂಗದಲ್ಲಿ ಬಿದ್ದನು ಬಲರಾಮನಾದರೋ ಅವನನ್ನು ಗೆದ್ದು ದ್ವಾರಕೆಯನ್ನು ಕುರಿತು ಹೊರಟನು.

**ವರೋರುವೇಷಸಂವೃತೋಽಥ ಚೇದಿರಾಟ್ ಸಮಭ್ಯಯಾತ್ ।**
**ತಮಾಸಸಾರ ಸಾತ್ಯಕಿರ್ನದನ್ ಮೃಗಾಧಿಪೋ ಯಥಾ ॥ ೧೫೦ ॥**

**ಅರ್ಥ** :- **ಅಥ** = ಅನಂತರ, **ವರೋರುವೇಷಸಂಯುತಃ** = ಮದುಮಗನ ಒಳ್ಳೆಯ ವೇಷದಿಂದ ಕೂಡಿದವನಾಗಿ, **ಚೇದಿರಾಟ್** =

ಶಿಶುಪಾಲನು, **ಸಮಭ್ಯಯಾತ್** = ಬಂದನು, **ತಮ್** = ಅವನನ್ನು, **ಸಾತ್ಯಕಿಃ** = ಸಾತ್ಯಕಿಯು, **ಯಥಾ ಮೃಗಾಧಿಪಃ** = ಸಿಂಹದಂತೆ, **ನದನ್** = ಘರ್ಜಿಸುತ್ತ, **ಆಸಸಾರ** = ಸಮೀಪಿಸಿದ.

**ತಾತ್ಪರ್ಯ** :- ನಂತರ ಒಳ್ಳೆಯ ಮದುಮಗನ ವೇಷವನ್ನು ಧರಿಸಿದವನಾಗಿ ಶಿಶುಪಾಲನು ಸಮೀಪಿಸಿದನು ಅವನನ್ನು ಸಾತ್ಯಕಿಯು ಸಿಂಹದಂತೆ ಘರ್ಜಿಸುತ್ತ ಬಂದನು.

**ಚಿರಂ ಪ್ರಯುಧ್ಯ ತಾವುಭೌ ವರಾಸ್ತ್ರಶಸ್ತ್ರವರ್ಷಿಣೌ ।**
**ಕ್ರುಧಾ ನಿರೀಕ್ಷ್ಯ ತಸ್ಥತುಃ ಪರಸ್ಪರಂ ಸ್ಫುರತ್ತನೂ ॥ ೧೫೧ ॥**

**ಅರ್ಥ** :- **ವರಾಸ್ತ್ರಶಸ್ತ್ರವರ್ಷಿಣೌ** = ಉತ್ತಮವಾದ ಅಸ್ತ್ರಶಸ್ತ್ರಗಳನ್ನು ಸುರಿಸುವ, **ತೌಉಭೌ** = ಅವರಿಬ್ಬರು, **ಚಿರಂ** = ಬಹುಕಾಲ, **ಪ್ರಯುಧ್ಯ** = ಯುದ್ಧ ಮಾಡಿ, **ಕ್ರುಧಾ** = ಕ್ರೋಧದಿಂದ, **ಸ್ಫುರತ್ತನೂ** = ಮೈಯಲ್ಲಿ ನಡುಗುತ್ತ, **ಪರಸ್ಪರಂ** = ಪರಸ್ಪರವಾಗಿ, **ನಿರೀಕ್ಷ್ಯ** = ನೋಡುತ್ತ, **ತಸ್ಥತುಃ** = ನಿಂತರು.

**ತಾತ್ಪರ್ಯ** :- ಅತ್ಯುತ್ತಮವಾದ ಅಸ್ತ್ರಶಸ್ತ್ರಗಳನ್ನು ಸುರಿಸುತ್ತ ಅವರಿಬ್ಬರು ತುಂಬ ಹೊತ್ತು ಯುದ್ಧ ಮಾಡಿ ಕ್ರೋಧದಿಂದ ಮೈಯನ್ನು ನಡುಗಿಸುತ್ತ ಒಬ್ಬರನ್ನೊಬ್ಬರು ಪರಸ್ಪರ ದಿಟ್ಟಿಸಿ ನೋಡುತ್ತ ನಿಂತರು.

**ಸಮಾನಭಾವಮಕ್ಷಮೀ ಶಿನೇಃ ಸುತಾತ್ಮಜಃ ಶರಮ್ ।**
**ಅಥೋದ್ಬಬರ್ಹ ತತ್ಕ್ಷಣಾದ್ ಬಲಾನ್ಮುಮೋಚ ವಕ್ಷಸಿ ॥ ೧೫೨ ॥**

**ಅರ್ಥ** :- **ಶಿನೇಃ ಸುತಾತ್ಮಜಃ** = ಸಾತ್ಯಕಿಯು, **ಸಮಾನಭಾವಂ** = ಸಮಾನತೆಯನ್ನು, **ಅಕ್ಷಮೀ** = ಸಹಿಸದವನಾಗಿ, **ಶರಂ** = ಬಾಣವನ್ನು, **ಉದ್ಬಬರ್ಹಃ** = ಎತ್ತಿಕೊಂಡ, **ಅಥ** = ಅನಂತರ, **ಬಲಾತ್** = ಬಲವಾಗಿ, **ವಕ್ಷಸಿ** = ಎದೆಯಲ್ಲಿ, **ಬಲಾತ್** = ಬಲವಾಗಿ, **ಮುಮೋಚ** = ಎಸೆದನು.

**ತಾತ್ಪರ್ಯ** :- ನಂತರ ಸಾತ್ಯಕಿಯು ತನ್ನ ಸಾಮ್ಯತೆಯನ್ನು ಸಹಿಸದವನಾಗಿ ಬಾಣವನ್ನೆತ್ತಿಕೊಂಡು ಬಲವಾಗಿ ಶಿಶುಪಾಲನ ಎದೆಯಲ್ಲಿ ಎಸೆದನು.

**ಸ ತೇನ ತಾಡಿತೋಽಪತದ್ ವಿಸಂಜ್ಞಕೋ ನೃಪಾತ್ಮಜಃ ।**
**ವಿಜಿತ್ಯ ತಂ ಸ ಸಾತ್ಯಕಿರ್ಯಯೌ ಪ್ರಹೃಷ್ಟಮಾನಸಃ ॥ ೧೫೩ ॥**

**ಅರ್ಥ** :- **ತೇನ** = ಸಾತ್ಯಕಿಯಿಂದ, **ತಾಡಿತಃ** = ಹೊಡೆಸಿಕೊಳ್ಳಲ್ಪಟ್ಟ, **ಸಃ** = ಆ, **ನೃಪಾತ್ಮಜಃ** = ಶಿಶುಪಾಲನು, **ವಿಸಂಜ್ಞಕಃ** = ಮೂರ್ಛಿತನಾಗಿ, **ಅಪತತ್** = ಬಿದ್ದನು, **ತಂ** = ಶಿಶುಪಾಲನನ್ನು, **ಸ ಸಾತ್ಯಕಿಃ** = ಆ ಸಾತ್ಯಕಿಯು, **ವಿಜಿತ್ಯ** = ಗೆದ್ದು, **ಪ್ರಹೃಷ್ಟಮಾನಸಃ** = ಸಂತುಷ್ಟಮನಸ್ಕನಾಗಿ, **ಯಯೌ** = ಹೊರಟನು.

**ತಾತ್ಪರ್ಯ** :- ಬಾಣದ ಹೊಡೆತಕ್ಕೆ ಬಿದ್ದ ಶಿಶುಪಾಲನು ಮೂರ್ಛಿತನಾಗಿ ಬಿದ್ದನು. ಆ ಸಾತ್ಯಕಿಯಾದರೋ ಸಂತುಷ್ಟಮನಸ್ಕನಾಗಿ ಹೊರಟುಹೋದನು.

**ಅಥಾಪರೇ ಚ ಯಾದವಾ ವಿಜಿತ್ಯ ತದ್ಬಲಂ ಯಯುಃ ।**
**ಪುರೈವ ರುಗ್ಮಿಪೂರ್ವಕಾಃ ಪ್ರಜಗ್ಮುರಚ್ಯುತಂ ಪ್ರತಿ ॥ ೧೫೪ ॥**

**ಅರ್ಥ** :- **ಅಥ** = ಅನಂತರ, **ಅಪರೇ** = ಬೇರೆ, **ಯಾದವಾಃ** = ಯಾದವರೂ, **ತದ್ಬಲಂ** = ಅವನ ಸೈನ್ಯವನ್ನು, **ವಿಜಿತ್ಯ** = ಗೆದ್ದು, **ಯಯುಃ** = ಹೋದರು, **ಪುರೈವ** = ಮೊದಲೇ, **ರುಗ್ಮಿಪೂರ್ವಕಾಃ** = ರುಕ್ಮಿಯೇ ಮೊದಲಾದವರು, **ಅಚ್ಯುತಂ ಪ್ರತಿ** = ಕೃಷ್ಣನನ್ನು ಕುರಿತು, **ಪ್ರಜಗ್ಮುಃ** = ಹೋಗಿದ್ದರು.

**ತಾತ್ಪರ್ಯ** :- ನಂತರ ಬೇರೆ ಯಾದವರೂ ಕೂಡ ಶಿಶುಪಾಲನ ಸೈನ್ಯವನ್ನು ಗೆದ್ದರು. ಇದಕ್ಕಿಂತ ಮೊದಲೇ ರುಕ್ಮಿಯೇ ಮೊದಲಾದವರು ಶ್ರೀಕೃಷ್ಣನನ್ನು ಬೆನ್ನಟ್ಟಿ ಹೋಗಿದ್ದರು.

**ಸಹೈಕಲವ್ಯಪೂರ್ವಕೈಃ ಸಮೇತ್ಯ ಭೀಷ್ಮಕಾತ್ಮಜಃ ।**
**ಹರಿಂ ವವರ್ಷ ಸಾಯಕೈಃ ಸ ಸಿಂಹವನ್ನ್ಯವರ್ತತ ॥ ೧೫೫ ॥**

**ಅರ್ಥ** :- **ಏಕಲವ್ಯಪೂರ್ವಕೈಃ** = ಏಕಲವ್ಯ ಮುಂತಾದವರಿಂದ, **ಸಹ** = ಕೂಡಿಕೊಂಡು, **ಭೀಷ್ಮಕಾತ್ಮಜಃ** = ರುಕ್ಮಿಯು, **ಸಮೇತ್ಯ** = ಸಮೀಪಿಸಿ, **ಹರಿಂ** = ಹರಿಯನ್ನು, **ಸಾಯಕೈಃ** = ಬಾಣಗಳಿಂದ, **ವವರ್ಷ** = ಸುರಿಸಿದ, **ಸಃ** = ಶ್ರೀ ಕೃಷ್ಣನು, **ಸಿಂಹವತ್** = ಸಿಂಹದಂತೆ, **ನ್ಯವರ್ತತ** = ಹಿಂದಿರುಗಿದನು.

ತಾತ್ಪರ್ಯ :- ಏಕಲವ್ಯ ಮುಂತಾದವರಿಂದ ಕೂಡಿ ಆ ರುಕ್ಮಿಯು ಕೃಷ್ಣನ ಮೇಲೆ ಬಾಣಗಳ ಮಳೆಗೆರೆದ ಶ್ರೀಕೃಷ್ಣನಾದರೋ ಸಿಂಹದಂತೆ ಹಿಂದಿರುಗಿ ನಿಂತನು.

**ಅಕ್ಷೌಹಿಣೀತ್ರಯಂ ಹರಿಸ್ತದಾ ನಿಹತ್ಯ ಸಾಯಕೈಃ ।**
**ಅವಾಹನಾಯುಧಂ ವ್ಯಧಾನ್ನಿಷಾದಪಂ ಶರೈಃ ಕ್ಷಣಾತ್ ॥ ೧೫೬ ॥**

**ಅರ್ಥ** :- **ತದಾ** = ಆದ, **ಹರಿಃ** = ಹರಿಯು, **ಅಕ್ಷೌಹಿಣೀತ್ರಯಂ** = ಮೂರು ಅಕ್ಷೌಹಿಣಿ ಸೈನ್ಯವನ್ನು, **ಸಾಯಕೈಃ** = ಬಾಣಗಳಿಂದ, **ನಿಹತ್ಯ** = ಕೊಂದು, **ಶರೈಃ** = ಬಾಣಗಳಿಂದ, **ಕ್ಷಣಾತ್** = ಕ್ಷಣಾರ್ಧದಲ್ಲಿ, **ನಿಷಾದಪಂ** = ಏಕಲವ್ಯನನ್ನು, **ಅವಾಹನಾಯುಧಂ** = ವಾಹನ ಆಯುಧ ರಹಿತನನ್ನಾಗಿ, **ವ್ಯಧಾತ್** = ಮಾಡಿದ.

ತಾತ್ಪರ್ಯ :- ಆವಾಗ ಕೃಷ್ಣಪರಮಾತ್ಮ ಮೂರು ಅಕ್ಷೋಹಿಣಿಸೇನೆಯನ್ನು ಬಾಣಗಳಿಂದ ಸಂಹರಿಸಿ, ಏಕಲವ್ಯನನ್ನು ಕ್ಷಣದಲ್ಲಿ ವಾಹನ ಆಯುಧ-ರಹಿತನನ್ನಾಗಿ ಮಾಡಿದ.

**ಶರಂ ಶರೀರನಾಶಕಂ ಸಮಾದದಾನಮೀಶ್ವರಮ್ ।**
**ಸ ಏಕಲವ್ಯ ಆಶು ತಂ ವಿಹಾಯ ದುದ್ರುವೇ ಭಯಾತ್ ॥ ೧೫೭ ॥**

**ಅರ್ಥ** :- **ಶರೀರನಾಶಕಂ** = ಶರೀರ ನಾಶಕವಾದ, **ಶರಂ** = ಬಾಣವನ್ನು, **ಸಮಾದದಾನಂ** = ಸ್ವೀಕರಿಸುತ್ತಿರುವ, **ಈಶ್ವರಂ** = ಕೃಷ್ಣನನ್ನು, **ಸಃ** = ಆ, **ಏಕಲವ್ಯಃ** = ಏಕಲವ್ಯನು, **ಆಶು** = ಕೂಡಲೆ, **ತಂ** = ಅವನನ್ನು, **ಭಯಾತ್** = ಭಯದಿಂದ, **ವಿಹಾಯ** = ಬಿಟ್ಟು, **ದುದ್ರುವೇ** = ಓಡಿದನು.

ತಾತ್ಪರ್ಯ :- ಶರೀರನಾಶ ಮಾಡುವ ಬಾಣವನ್ನು ತೆಗೆದುಕೊಂಡಾಗ ಏಕಲವ್ಯ ಅದನ್ನು ನೋಡಿ ಭಯದಿಂದ ಓಡಿದ.

**ಧನುರ್ಭೃತಾಂ ವರೇ ಗತೇ ರಣಂ ವಿಹಾಯ ಭೂಭೃತಃ ।**
**ಕರೂಶರಾಜಪೂರ್ವಕಾಃ ಕ್ಷಣಾತ್ ಪ್ರದುದ್ರುವುರ್ಭಯಾತ್ ॥ ೧೫೮ ॥**

**ಅರ್ಥ** :- **ಧನುರ್ಭೃತಾಂ** = ಧನುರ್ಧಾರಿಗಳಲ್ಲಿ, **ವರೆ** = ಶ್ರೇಷ್ಠನಾದ ಏಕಲವ್ಯನು, **ರಣಂ** = ಯುದ್ಧವನ್ನು, **ವಿಹಾಯ** = ಬಿಟ್ಟು, **ಗತೇ** =

**ಸ ತೇನ ತಾಡಿತೋऽಪತದ್ ವಿಸಂಜ್ಞಕೋ ನೃಪಾತ್ಮಜಃ ।**
**ವಿಜಿತ್ಯ ತಂ ಸ ಸಾತ್ಯಕಿರ್ಯಯೌ ಪ್ರಹೃಷ್ಟಮಾನಸಃ ॥ ೧೫೩ ॥**

**ಅರ್ಥ** :- **ತೇನ** = ಸಾತ್ಯಕಿಯಿಂದ, **ತಾಡಿತಃ** = ಹೊಡೆಸಿಕೊಳ್ಳಲ್ಪಟ್ಟ, **ಸಃ** = ಆ, **ನೃಪಾತ್ಮಜಃ** = ಶಿಶುಪಾಲನು, **ವಿಸಂಜ್ಞಕಃ** = ಮೂರ್ಛಿತನಾಗಿ, **ಅಪತತ್** = ಬಿದ್ದನು, **ತಂ** = ಶಿಶುಪಾಲನನ್ನು, **ಸ ಸಾತ್ಯಕಿಃ** = ಆ ಸಾತ್ಯಕಿಯು, **ವಿಜಿತ್ಯ** = ಗೆದ್ದು, **ಪ್ರಹೃಷ್ಟಮಾನಸಃ** = ಸಂತುಷ್ಟಮನಸ್ಕನಾಗಿ, **ಯಯೌ** = ಹೊರಟನು.

**ತಾತ್ಪರ್ಯ** :- ಬಾಣದ ಹೊಡೆತಕ್ಕೆ ಬಿದ್ದ ಶಿಶುಪಾಲನು ಮೂರ್ಛಿತನಾಗಿ ಬಿದ್ದನು. ಆ ಸಾತ್ಯಕಿಯಾದರೋ ಸಂತುಷ್ಟಮನಸ್ಕನಾಗಿ ಹೊರಟುಹೋದನು.

**ಅಥಾಪರೇ ಚ ಯಾದವಾ ವಿಜಿತ್ಯ ತದ್ಬಲಂ ಯಯುಃ ।**
**ಪುರೈವ ರುಗ್ಮಿಪೂರ್ವಕಾಃ ಪ್ರಜಗ್ಮುರಚ್ಯುತಂ ಪ್ರತಿ ॥ ೧೫೪ ॥**

**ಅರ್ಥ** :- **ಅಥ** = ಅನಂತರ, **ಅಪರೇ** = ಬೇರೆ, **ಯಾದವಾಃ** = ಯಾದವರೂ, **ತದ್ಬಲಂ** = ಅವನ ಸೈನ್ಯವನ್ನು, **ವಿಜಿತ್ಯ** = ಗೆದ್ದು, **ಯಯುಃ** = ಹೋದರು, **ಪುರೈವ** = ಮೊದಲೇ, **ರುಗ್ಮಿಪೂರ್ವಕಾಃ** = ರುಕ್ಮಿಯೇ ಮೊದಲಾದವರು, **ಅಚ್ಯುತಂ ಪ್ರತಿ** = ಕೃಷ್ಣನನ್ನು ಕುರಿತು, **ಪ್ರಜಗ್ಮುಃ** = ಹೋಗಿದ್ದರು.

**ತಾತ್ಪರ್ಯ** :- ನಂತರ ಬೇರೆ ಯಾದವರೂ ಕೂಡ ಶಿಶುಪಾಲನ ಸೈನ್ಯವನ್ನು ಗೆದ್ದರು. ಇದಕ್ಕಿಂತ ಮೊದಲೇ ರುಕ್ಮಿಯೇ ಮೊದಲಾದವರು ಶ್ರೀಕೃಷ್ಣನನ್ನು ಬೆನ್ನಟ್ಟಿ ಹೋಗಿದ್ದರು.

**ಸಹೈಕಲವ್ಯಪೂರ್ವಕೈಃ ಸಮೇತ್ಯ ಭೀಷ್ಮಕಾತ್ಮಜಃ ।**
**ಹರಿಂ ವವರ್ಷ ಸಾಯಕೈಃ ಸ ಸಿಂಹವನ್ನ್ಯವರ್ತತ ॥ ೧೫೫ ॥**

**ಅರ್ಥ** :- **ಏಕಲವ್ಯಪೂರ್ವಕೈಃ** = ಏಕಲವ್ಯ ಮುಂತಾದವರಿಂದ, **ಸಹ** = ಕೂಡಿಕೊಂಡು, **ಭೀಷ್ಮಕಾತ್ಮಜಃ** = ರುಕ್ಮಿಯು, **ಸಮೇತ್ಯ** = ಸಮೀಪಿಸಿ, **ಹರಿಂ** = ಹರಿಯನ್ನು, **ಸಾಯಕೈಃ** = ಬಾಣಗಳಿಂದ, **ವವರ್ಷ** = ಸುರಿಸಿದ, **ಸಃ** = ಶ್ರೀ ಕೃಷ್ಣನು, **ಸಿಂಹವತ್** = ಸಿಂಹದಂತೆ, **ನ್ಯವರ್ತತ** = ಹಿಂದಿರುಗಿದನು.

ತಾತ್ಪರ್ಯ :- ಏಕಲವ್ಯ ಮುಂತಾದವರಿಂದ ಕೂಡಿ ಆ ರುಕ್ಮಿಯು ಕೃಷ್ಣನ ಮೇಲೆ ಬಾಣಗಳ ಮಳೆಗೆರೆದ ಶ್ರೀಕೃಷ್ಣನಾದರೋ ಸಿಂಹದಂತೆ ಹಿಂದಿರುಗಿ ನಿಂತನು.

**ಅಕ್ಷೌಹಿಣೀತ್ರಯಂ ಹರಿಸ್ತದಾ ನಿಹತ್ಯ ಸಾಯಕೈಃ ।**
**ಅವಾಹನಾಯುಧಂ ವ್ಯಧಾನ್ನಿಷಾದಪಂ ಶರೈಃ ಕ್ಷಣಾತ್ ॥ ೧೫೬ ॥**

**ಅರ್ಥ** :- **ತದಾ** = ಆದ, **ಹರಿಃ** = ಹರಿಯು, **ಅಕ್ಷೌಹಿಣೀತ್ರಯಂ** = ಮೂರು ಅಕ್ಷೌಹಿಣಿ ಸೈನ್ಯವನ್ನು, **ಸಾಯಕೈಃ** = ಬಾಣಗಳಿಂದ, **ನಿಹತ್ಯ** = ಕೊಂದು, **ಶರೈಃ** = ಬಾಣಗಳಿಂದ, **ಕ್ಷಣಾತ್** = ಕ್ಷಣಾರ್ಧದಲ್ಲಿ, **ನಿಷಾದಪಂ** = ಏಕಲವ್ಯನನ್ನು, **ಅವಾಹನಾಯುಧಂ** = ವಾಹನ ಆಯುಧ ರಹಿತನನ್ನಾಗಿ, **ವ್ಯಧಾತ್** = ಮಾಡಿದ.

ತಾತ್ಪರ್ಯ :- ಆವಾಗ ಕೃಷ್ಣಪರಮಾತ್ಮ ಮೂರು ಅಕ್ಷೋಹಿಣಿಸೇನೆಯನ್ನು ಬಾಣಗಳಿಂದ ಸಂಹರಿಸಿ, ಏಕಲವ್ಯನನ್ನು ಕ್ಷಣದಲ್ಲಿ ವಾಹನ ಆಯುಧ-ರಹಿತನನ್ನಾಗಿ ಮಾಡಿದ.

**ಶರಂ ಶರೀರನಾಶಕಂ ಸಮಾದದಾನಮೀಶ್ವರಮ್ ।**
**ಸ ಏಕಲವ್ಯ ಆಶು ತಂ ವಿಹಾಯ ದುದ್ರುವೇ ಭಯಾತ್ ॥ ೧೫೭ ॥**

**ಅರ್ಥ** :- **ಶರೀರನಾಶಕಂ** = ಶರೀರ ನಾಶಕವಾದ, **ಶರಂ** = ಬಾಣವನ್ನು, **ಸಮಾದದಾನಂ** = ಸ್ವೀಕರಿಸುತ್ತಿರುವ, **ಈಶ್ವರಂ** = ಕೃಷ್ಣನನ್ನು, **ಸಃ** = ಆ, **ಏಕಲವ್ಯಃ** = ಏಕಲವ್ಯನು, **ಆಶು** = ಕೂಡಲೆ, **ತಂ** = ಅವನನ್ನು, **ಭಯಾತ್** = ಭಯದಿಂದ, **ವಿಹಾಯ** = ಬಿಟ್ಟು, **ದುದ್ರುವೇ** = ಓಡಿದನು.

ತಾತ್ಪರ್ಯ :- ಶರೀರನಾಶ ಮಾಡುವ ಬಾಣವನ್ನು ತೆಗೆದುಕೊಂಡಾಗ ಏಕಲವ್ಯ ಅದನ್ನು ನೋಡಿ ಭಯದಿಂದ ಓಡಿದ.

**ಧನುರ್ಭೃತಾಂ ವರೇ ಗತೇ ರಣಂ ವಿಹಾಯ ಭೂಭೃತಃ ।**
**ಕರೂಶರಾಜಪೂರ್ವಕಾಃ ಕ್ಷಣಾತ್ ಪ್ರದುದ್ರುವುರ್ಭಯಾತ್ ॥ ೧೫೮ ॥**

**ಅರ್ಥ** :- **ಧನುರ್ಭೃತಾಂ** = ಧನುರ್ಧಾರಿಗಳಲ್ಲಿ, **ವರೆ** = ಶ್ರೇಷ್ಠನಾದ ಏಕಲವ್ಯನು, **ರಣಂ** = ಯುದ್ಧವನ್ನು, **ವಿಹಾಯ** = ಬಿಟ್ಟು, **ಗತೇ** =

ಹೋಗುತ್ತಿರಲು, **ಕುರೂತರಾಜಪೂರ್ವಕಾಃ** = ದಂತವಕ್ರನೇ ಮೊದಲಾದ, **ಭೂಭೃತಃ** = ರಾಜರು, **ಕ್ಷಣಾನ್** = ಕ್ಷಣದಲ್ಲಿ, **ಭಯಾತ್** = ಭಯದಿಂದ, **ಪ್ರದುದ್ರುವುಃ** = ಪಲಾಯನ ಮಾಡಿದರು.

**ತಾತ್ಪರ್ಯ** :- ಧನುರ್ಧಾರಿಗಳಲ್ಲಿ ಅತ್ಯಂತ ಶ್ರೇಷ್ಠನಾದ ಏಕಲವ್ಯನು ಯುದ್ಧವನ್ನು ಬಿಟ್ಟು ಹೋಗುತ್ತಿರಲು ದಂತವಕ್ರನೇ ಮೊದಲಾದ ರಾಜರು ಭಯದಿಂದ ಪಲಾಯನಗೈದರು.

**ಅಥಾಽಸಸಾದ ಕೇಶವಂ ರುಷಾ ಸ ಭೀಷ್ಮಕಾತ್ಮಜಃ ।**
**ಶರಾಂಬುಧಾರ ಆಶು ತಂ ವಿವಾಹನಂ ವ್ಯಧಾದ್ಧರಿಃ ॥ ೧೫೯ ॥**

**ಅರ್ಥ** :- **ಅಥ** = ಅನಂತರ, **ಸಃ ಭೀಷ್ಮಕಾತ್ಮಜಃ** = ಆ ರುಗ್ಮಿಯು, **ರುಷಾ** = ಕೋಪದಿಂದ, **ಕೇಶವಂ** = ಶ್ರೀಕೃಷ್ಣನನ್ನು, **ಆಸಸಾದ** = ಸಮೀಪಿಸಿದನು, **ಹರಿಃ** = ಶ್ರೀಕೃಷ್ಣನು, **ತಂ** = ಅವನನ್ನು, **ವಿವಾಹನಂ** = ವಾಹನ ರಹಿತನನ್ನಾಗಿ, **ವ್ಯಧಾತ್** = ಮಾಡಿದ.

**ತಾತ್ಪರ್ಯ** :- ನಂತರ ರುಗ್ಮಿಯು ಬಾಣಗಳ ಮಳೆಗೆರೆಯುತ್ತ ಕೋಪದಿಂದ ಶ್ರೀಕೃಷ್ಣನನ್ನು ಸಮೀಪಿಸಿದನು. ಶ್ರೀಕೃಷ್ಣನು ರುಕ್ಮಿಯನ್ನು ವಾಹನರಹಿತನನ್ನಾಗಿ ಮಾಡಿದನು.

**ಚಕರ್ತ ಕಾರ್ಮುಕಂ ಪುನಃ ಸ ಖಡ್ಗಚರ್ಮಭೃದ್ಧರೇಃ ।**
**ರಥಂ ಸಮಾರುಹಚ್ಛರೈಶ್ಚಕರ್ತ ಖಡ್ಗಮೀಶ್ವರಃ ॥ ೧೬೦ ॥**

**ಅರ್ಥ** :- **ಸಃ** = ಕೃಷ್ಣನು, **ಕಾರ್ಮುಕಂ** = ಬಿಲ್ಲನ್ನು, **ಚಕರ್ತ** = ತುಂಡುಮಾಡಿದ, **ಖಡ್ಗಚರ್ಮಭೃತ್** = ಖಡ್ಗಚರ್ಮಗಳನ್ನು ಧರಿಸಿದ, **ಸಃ** = ಆ ರುಕ್ಮಿಯು, **ಹರೇಃ** = ಹರಿಯ, **ರಥಂ** = ರಥವನ್ನು, **ಸಮಾರುಹತ್** = ಮೇಲೇರಿ ಬಂದ, **ಈಶ್ವರಃ** = ಕೃಷ್ಣನು, **ಖಡ್ಗಂ** = ಖಡ್ಗವನ್ನು, **ಶರೈಃ** = ಬಾಣಗಳಿಂದ, **ಚಕರ್ತ** = ತುಂಡರಿಸಿದನು.

**ತಾತ್ಪರ್ಯ** :- ರುಕ್ಮಿಯ ಬಿಲ್ಲನ್ನು ಶ್ರೀಕೃಷ್ಣನು ಕಡಿದ ರುಕ್ಮಿ ಪುನಃ ಖಡ್ಗ ಚರ್ಮಗಳನ್ನು ಧರಿಸಿ ಕೃಷ್ಣನ ಮೇಲೇರಿ ಬಂದ ಈಶ್ವರನು ಖಡ್ಗವನ್ನು ಬಾಣಗಳಿಂದ ತುಂಡು ಮಾಡಿದನು.

ಶರ್ರೈರ್ವಿತಸ್ತಿಮಾತ್ರಕೈರ್ವಿಧಾಯ ತಂ ನಿರಾಯುಧಮ್ ।
ಪ್ರಿಯಾವಚಃ ಪ್ರಪಾಲಯನ್ ಜಘಾನ ನೈನಮೀಶ್ವರಃ ॥ ೧೬೧ ॥

**ಅರ್ಥ** :- ವಿತಸ್ತಿಮಾತ್ರಕೈಃ = ಗೇಣು ಪರಿಮಾಣದ, **ಶರ್ರೈಃ** = ಬಾಣಗಳಿಂದ, **ತಂ** = ಅವನನ್ನು, **ನಿರಾಯುಧಂ** = ನಿರಾಯುಧನನ್ನಾಗಿ, **ವಿಧಾಯ** = ಮಾಡಿ, **ಪ್ರಿಯಾವಚಃ** = ಪ್ರಿಯೆಯ ಮಾತನ್ನು, **ಪ್ರಪಾಲಯನ್** = ಪಾಲಿಸುತ್ತ, **ಏನಂ** = ಇವನನ್ನು, **ಅಚ್ಯುತಃ** = ಈಶ್ವರನು, **ನ ಜಘಾನ** = ಕೊಲ್ಲಲಿಲ್ಲ.

**ತಾತ್ಪರ್ಯ** :- ಗೇಣುದ್ದದ ಬಾಣಗಳಿಂದ ಅವನನ್ನು ನಿರಾಯುಧನನ್ನಾಗಿ ಮಾಡಿ ರುಕ್ಮಿಣಿಯ ಮಾತನ್ನು ರಕ್ಷಿಸುವುದಕ್ಕಾಗಿ ಕೊಲ್ಲದೆ ಬಿಟ್ಟನು.

ನಿಬಧ್ಯ ಪಂಚಚೂಡಿನಂ ವಿಧಾಯ ತಂ ವ್ಯಸರ್ಜಯತ್ ।
ಜಗಜ್ಜನಿತ್ರಯೋರಿದಂ ವಿಡಂಬನಂ ರಮೇಶಯೋಃ ॥ ೧೬೨ ॥

**ಅರ್ಥ** :- **ನಿಬಧ್ಯ** = ಬಂಧಿಸಿ, **ಪಂಚಚೂಡಿನಂ** = ಪಂಚಶಿಖವುಳ್ಳವ-ನನ್ನಾಗಿ, **ವಿಧಾಯ** = ಮಾಡಿ, **ತಂ** = ಅವನನ್ನು, **ವ್ಯಸರ್ಜಯತ್** = ಬಿಟ್ಟನು, **ಜಗಜ್ಜನಿತ್ರಯೋಃ** = ಜಗತ್ತಿನ ತಂದೆ ತಾಯಂದಿರಾದ, **ರಮೇಶಯೋಃ** = ರುಕ್ಮಿಣಿ ಕೃಷ್ಣರಿಗೆ, **ಇದಂ** = ಇದು, **ವಿಡಂಬನಂ** = ವಿಡಂಬನೆಯಷ್ಟೆ.

**ತಾತ್ಪರ್ಯ** :- ಆ ರುಕ್ಮಿಯನ್ನು ಬಂಧಿಸಿ ೫ ಶಿಖೆಯುಳ್ಳವನನ್ನಾಗಿ ಮಾಡಿ ಬಿಟ್ಟು ಬಿಟ್ಟನು. ಇದು ಜಗದೊಡೆಯರಾದ ರುಕ್ಮಿಣಿ ಶ್ರೀಕೃಷ್ಣರ ವಿಡಂಬನೆಯಷ್ಟೆ.

ಸದೈಕಮಾನಸಾವಪಿ ಸ್ವಧರ್ಮಶಾಸಕೌ ನೃಣಾಮ್ ।
ರಮಾ ಹರಿಶ್ಚ ತತ್ರ ತೌ ವಿಜಹ್ರತುರ್ಹಿ ರುಗ್ಮಿಣಾ ॥ ೧೬೩ ॥

**ಅರ್ಥ** :- **ಸದಾ** = ಯಾವಾಗಲೂ, **ಏಕಮಾನಸಾವಪಿ** = ಒಂದೇ ಮನಸ್ಸುಳ್ಳವರಾದರೂ, **ನೃಣಾಂ** = ಮಾನವರಿಗೆ, **ಸ್ವಧರ್ಮಶಾಸಕೌ** = ಗೃಹಸ್ಥರಿಗೆ ಸ್ವಧರ್ಮವನ್ನು ಶಾಸನ ಮಾಡುವ, **ಹರಿಃ** = ಶ್ರೀಕೃಷ್ಣನು, **ಚ** = ಮತ್ತು **ರುಕ್ಮಿಣಾ** = ರುಕ್ಮಿಯೊಂದಿಗೆ, **ವಿಜಹ್ರತುಃ** = ಆಟವಾಡಿದರಷ್ಟೆ.

ತಾತ್ಪರ್ಯ :- ರುಕ್ಮಿಣಿ ಮತ್ತು ಶ್ರೀಕೃಷ್ಣನು ಸದಾ ಒಂದೇ ಮನಸ್ಸುಳ್ಳವ-ರಾದರೂ ಕೂಡ ಗೃಹಸ್ಥರಿಗೆ ಸ್ವಧರ್ಮವನ್ನು ಬೋಧಿಸುವುದಕ್ಕಾಗಿ ವಿಹರಿಸಿದರಷ್ಟೆ.

**ಅಥಾಽಸಸಾದ ಸೌಭರಾಡ್ ಹರಿಂ ಶರಾಂಬುವರ್ಷಣಃ ।**
**ಹರಿಃ ಶರಂ ಯಮೋಪಮಂ ಮುಮೋಚ ತಸ್ಯ ವಕ್ಷಸಿ ॥ ೧೬೪ ॥**

**ಅರ್ಥ** :- **ಅಥ** = ಅನಂತರ, **ಸೌಭರಾಟ್** = ಸಾಲ್ವನ, **ಶರಾಂಬು-ವರ್ಷಣಃ** = ಬಾಣಗಳ ಮಳೆಗರೆಯುತ್ತ, **ಹರಿಂ** = ಶ್ರೀಹರಿಯನ್ನು, **ಆಸಸಾದ** = ಸಮೀಪಿಸಿದನು, **ಹರಿಃ** = ಶ್ರೀಕೃಷ್ಣನು, **ತಸ್ಯ** = ಸಾಲ್ವನ, **ವಕ್ಷಸಿ** = ಎದೆಯಲ್ಲಿ, **ಯಮೋಪಮಂ** = ಯಮನಂತೆ ಸದೃಶವಾದ, **ಶರಂ** = ಬಾಣವನ್ನು, **ಮುಮೋ ಚ** = ಬಿಟ್ಟನು.

**ಶರೇಣ ತೇನ ಪೀಡಿತಃ ಪಪಾತ ಮಂದಚೇಷ್ಟಿತಃ ।**
**ಚಿರಾತ್ಸಸಂಜ್ಞಕೋಽಗಮತ್ ತ್ರಿನೇತ್ರತೋಷಣೇಚ್ಛಯಾ ॥ ೧೬೪ ॥**

**ಅರ್ಥ** :- **ತೇನ ಶರೇಣಃ** = ಆ ಬಾಣದಿಂದ, **ಪೀಡಿತಃ** = ಪೀಡಿತನಾಗಿ, **ಸಃ** = ಆ ಸಾಲ್ವನು, **ಮಂದಚೇಷ್ಟಿತಃ** = ನಿಶ್ಚೇಷ್ಟನಾಗಿ, **ಪಪಾತ** = ಬಿದ್ದನು, **ಚಿರಾತ್** = ಬಹುಕಾಲದ ನಂತರ, **ಸಸಂಜ್ಞಕಃ** = ಎಚ್ಚರಗೊಂಡು, **ತ್ರಿನೇತ್ರತೋಷಣೇಚ್ಛಯಾ** = ರುದ್ರನನ್ನು ಸಂತೋಷಗೊಳಿಸುವ ಬಯಕೆಯಿಂದ, **ಅಗಮತ್** = ಕಾಡನ್ನು ಕುರಿತು ಹೋದನು.

ತಾತ್ಪರ್ಯ :- ಆ ಬಾಣದ ಹೊಡೆತದಿಂದ ನಿಶ್ಚೇಷ್ಟನಾಗಿ ಬಿದ್ದನು. ಬಹುಕಾಲದ ನಂತರ ಎಚ್ಚರಗೊಂಡು ರುದ್ರನನ್ನು ಸಂತೋಷಗೊಳಿಸುವ ಇಚ್ಛೆಯಿಂದ ಕಾಡನ್ನು ಕುರಿಡು ಹೋದನು.

**ಸಮಸ್ತರಾಜಸನ್ನಿಧಾವಯಾದವೀಂ ಮಹೀಮಿಮಾಮ್ ।**
**ಕರಿಷ್ಯೇ ಇತ್ಯುದೀರ್ಯ ಸ ವ್ಯಧಾತ್ ತಪೋಽತಿದುಶ್ಚರಮ್ ॥ ೧೬೬ ॥**

**ಅರ್ಥ** :- **ಸಮಸ್ತರಾಜಸನ್ನಿಧೌ** = ಎಲ್ಲ ರಾಜರ ಸನ್ನಿಧಿಯಲ್ಲಿ, **ಇಮಾಂ** = ಈ, **ಮಹೀಂ** = ಭೂಮಿಯನ್ನು, **ಅಯಾದವೀಂ** = ಯಾದವರಿಲ್ಲದಂತೆ, **ಕರಿಷ್ಯೇ** = ಮಾಡುತ್ತೇನೆ, **ಇತಿ** = ಎಂದು, **ಉದೀರ್ಯ** = ಹೇಳಿ, **ಸಃ** =

ಅವನು, **ಅತಿದುಶ್ಚರಂ** = ಅತ್ಯಂತ ದುಷ್ಕರವಾದ, **ತಪಃ** = ತಪಸ್ಸನ್ನು, **ವ್ಯಧಾತ್** = ಮಾಡಿದನು.

**ತಾತ್ಪರ್ಯ** :- ಎಲ್ಲ ರಾಜರ ಸಮಕ್ಷಮದಲ್ಲಿ ಈ ಭೂಮಿಯಲ್ಲಿ ಯಾದವರಿಲ್ಲದಂತೆ ಮಾಡುವೆನು ಎಂದು ಪ್ರತಿಜ್ಞೆಗೈದು ಅತ್ಯಂತ ದುಷ್ಕರವಾದ ತಪಸ್ಸನ್ನು ಆಚರಿಸಿದನು.

**ಅಥೋ ವಿವೇಶ ಕೇಶವಃ ಪುರೀಂ ಕುಶಸ್ಥಲೀಂ ಪ್ರಭುಃ ।**
**ಪ್ರಿಯಾಯುತೋऽಬ್ಜಜಾದಿಭಿಃ ಸಮೀಡಿತಃ ಸುರೇಶ್ವರೈಃ ॥ ೧೬೭ ॥**

**ಅರ್ಥ** :- **ಅಥ** = ಅನಂತರ, **ಪ್ರಭುಃ** = ಸಮರ್ಥನಾದ, **ಕೇಶವಃ** = ಶ್ರೀಕೃಷ್ಣನು, **ಕುಶಸ್ಥಲೀಂ ಪುರೀಂ** = ದ್ವಾರಕಾಪಟ್ಟಣವನ್ನು, **ಪ್ರಿಯಾಯುತಃ** = ರುಕ್ಮಿಣಿಯೊಂದಿಗೆ, **ಸುರೇಶ್ವರೈಃ** = ದೇವತೆಗಳಾದ, **ಅಬ್ಜಜಾದಿಭಿಃ** = ಬ್ರಹ್ಮಾದಿ ದೇವತೆಗಳಿಂದ, **ಸಮೀಡಿತಃ** = ಸ್ತೋತ್ರ ಮಾಡಿಸಿಕೊಳ್ಳಲ್ಪಟ್ಟ, **ಕುಶಸ್ಥಲೀಂ ಪುರೀಂ** = ದ್ವಾರಕಾಪಟ್ಟಣವನ್ನು, **ವಿವೇಶ** = ಪ್ರವೇಶಿಸಿದನು.

**ತಾತ್ಪರ್ಯ** :- ನಂತರ ಬ್ರಹ್ಮಾದಿದೇವತೆಗಳಿಂದ ಸ್ತುತ್ಯನಾಗಿ ರುಕ್ಮಿಣೀ ಸಹಿತನಾಗಿ ಶ್ರೀಕೃಷ್ಣನು ದ್ವಾರಕಾಪಟ್ಟಣವನ್ನು ಕುರಿತು ಬಂದನು.

**ಪುರಾ ತತೋ ಹಲಾಯುಧಃ ಪ್ರಿಯಾಂ ನಿಜಾಂ ಪುರಾऽಪಿ ಹಿ ।**
**ಸ ವಾರುಣೀಸಮಾಹ್ವಯಾಮವಾಪ ರೇವತೀಂ ಪ್ರಭುಃ ॥ ೧೬೮ ॥**

**ಅರ್ಥ** :- **ತತಃ ಪುರಾ** = ಇದಕ್ಕಿಂತ ಮುಂಚೆಯೇ, **ಹಲಾಯುಧಃ** = ಬಲರಾಮನು, **ಪುರಾಪಿ** = ಹಿಂದೆಯೂ ಕೂಡ, **ನಿಜಾಂ** = ತನ್ನ, **ವಾರುಣೀ ಸಮಾಹ್ವಯಾಂ** = ವಾರುಣಿ ಎಂಬ ಹೆಸರಿನ, **ಪ್ರಿಯಾಂ** = ಪತ್ನಿಯೇ ಆಗಿದ್ದ, **ರೇವತೀಂ** = ರೇವತಿಯನ್ನು, **ಅವಾಪ** = ಹೊಂದಿದನು.

**ತಾತ್ಪರ್ಯ** :- ಬಲರಾಮನು ಇದಕ್ಕಿಂತ ಮುಂಚೆಯೇ ತನಗೆ ವಾರುಣಿ ಎಂಬ ಹೆಸರಿನ ಪತ್ನಿಯೇ ಆಗಿದ್ದ ರೇವತಿಯನ್ನು ಮದುವೆಯಾಗಿದ್ದನು.

**ಪತಿಂ ಯಥಾऽನುರೂಪಿಣಂ ತದೀಯಮೇವ ಪೂರ್ವಕಮ್ ।**
**ಪಿತಾ ತದೀಯ ಐಚ್ಛತ ಪ್ರವೇತ್ತುಮಬ್ಜಸಂಭವಾತ್ ॥ ೧೬೯ ॥**

**ಅರ್ಥ** :- **ತದೀಯಃ** = ರೇವತಿಯ, **ಪಿತಾ** = ತಂದೆಯು, **ತದೀಯಮೇವ** = ಆ ರೇವತಿಗೆ ಸಂಬಂಧಿಸಿದ, **ಪೂರ್ವಕಂ** = ಹಿಂದಿನ, **ಯಥಾನುರೂಪಿಣಾಂ** = ಅನುರೂಪನಾದ, **ಪತಿಂ** = ಗಂಡನನ್ನು, **ಅಬ್ಜಸಂಭವಾತ್** = ಚತುರ್ಮುಖನಿಂದ, **ಪ್ರವೇತ್ತುಂ** = ತಿಳಿಯಲು, **ಐಚ್ಛತ** = ಇಚ್ಛಿಸಿದನು.

ತಾತ್ಪರ್ಯ :- ರೇವತಿಯ ತಂದೆಯಾದ ಕಕುದ್ಮಿಯು ರೇವತಿಯ ಹಿಂದಿನ ಜನ್ಮದ ಪತಿಯನ್ನು ಬ್ರಹ್ಮನ ಮೂಲಕ ತಿಳಿಯಲು ಇಚ್ಛಿಸಿದ.

**ಸ ತತ್ಸದೋಗತೋ ವರಾತ್ ತದೀಯತಃ ಪ್ರಗೀತಿಕಾಮ್ ।**
**ನಿಶಮ್ಯ ನಾವಿದದ್ ಗತಂ ಯುಗೋರುಕಾಲಪರ್ಯಯಮ್ ॥ ೧೭೦ ॥**

**ಅರ್ಥ** :- **ಸಃ** = ಆ ಕಕುದ್ಮಿಯು, **ತದೀಯತಃ** = ಆ ಬ್ರಹ್ಮನ, **ವರಾತ್** = ವರದಿಂದ, **ತತ್ಸದೋಗತಃ** = ಅವನ ಸಭೆಯಲ್ಲಿದ್ದವನಾಗಿ, **ಪ್ರಗೀತಿಕಾಂ** = ಸಂಗೀತವನ್ನು, **ನಿಶಮ್ಯ** = ಕೇಳಿ, **ಯುಗೋರುಕಾಲಪರ್ಯಯಂ** = ಯುಗರೂಪಕಾಲವು, **ಗತಂ** = ಕಳೆದಿದ್ದನ್ನು, **ನ ಅವಿದತ್** = ತಿಳಿಯಲಿಲ್ಲ.

ತಾತ್ಪರ್ಯ :- ಆ ಬ್ರಹ್ಮನ ಸಭೆಯಲ್ಲಿ ಇದ್ದವನಾಗಿ ಸಂಗೀತವನ್ನು ಶ್ರವಣ ಮಾಡುತ್ತ ಯುಗರೂಪ ಕಾಲವೇ ಕಳೆದುಹೋದುದನ್ನು ತಿಳಿಯಲಿಲ್ಲ.

**ನರಾನಯೋಗ್ಯಗೀತಿಕಾ ವಿಮೋಹಯೇತ್ ತತೋ ನೃಪಃ ।**
**ಸುಮೂಢಬುದ್ಧಿರಂತತೋಽಲ್ಪಕಾಲ ಇತ್ಯಮನ್ಯತ ॥ ೧೭೧ ॥**

**ಅರ್ಥ** :- **ನರಾನ್** = ಮನುಷ್ಯರನ್ನು, **ಅಯೋಗ್ಯಗೀತಿಕಾ** = ಯೋಗ್ಯವಲ್ಲದ ಸಂಗೀತ, **ವಿಮೋಹಯೇತ್** = ಮೈಮರೆಸುತ್ತದೆ, **ತತಃ** = ಅನಂತರ, **ಮೂಢಬುದ್ಧಿಃ** = ಅಲ್ಪಬುದ್ಧಿಯವನಾದ, **ಸಃ ನೃಪಃ** = ಆ ರಾಜನು, **ಅಂತತಃ** = ಕೊನೆಗೆ, **ಅಲ್ಪಕಾಲಃ** = ಅಲ್ಪಕಾಲವು ಕಳೆದಿರುವುದು, **ಇತಿ** = ಎಂದು, **ಅಮನ್ಯತ** = ತಿಳಿದನು.

ತಾತ್ಪರ್ಯ :- ಮನುಷ್ಯರನ್ನು ಅವರಿಗೆ ಯೋಗ್ಯವಲ್ಲದ ಸಂಗೀತ ಮೈಮರೆಸುತ್ತದೆ. ಅದರಿಂದ ರಾಜನಾದ ಕಕುದ್ಮಿಯು ಅಲ್ಪಬುದ್ಧಿಯುಳ್ಳವನಾಗಿ ಸಂಗೀತದ ಕೊನೆಯಲ್ಲಿ ಅಲ್ಪ ಕಾಲವೇ ಕಳೆದಿರುವುದು ಎಂದು ತಿಳಿದನು.

**ಸ ಮೂರ್ಛಿತಃ ಪ್ರಬೋಧಿತೋಽಬ್ಜಜೇನ ತಂ ತ್ವಪೃಚ್ಛತ ।**
**ಸುತಾಪತಿಂ ಬಲಂ ಚ ಸೋಽಬ್ರವೀದ್ ಯುಗಾತ್ಯಯೇ ಬಹೌ ॥ ೧೭೨ ॥**

**ಅರ್ಥ** :- **ಮೂರ್ಛಿತಃ** = ಮೂರ್ಛಿತನಾದ, **ಸಃ** = ಅವನು, **ಬಹೌ** = ಬಹಳ, **ಯುಗಾತ್ಯಯೇ** = ಯುಗಗಳು ಕಳೆಯುತ್ತಿರುವಾಗ, **ಪ್ರಬೋಧಿತಃ** = ಎಚ್ಚರಿಸಿದನು, **ಸುತಾಪತಿಂ** = ಮಗಳ ಗಂಡನನ್ನು, **ಅಪೃಚ್ಛತ** = ಕೇಳಿದನು, **ಸಃ** = ಚತುರ್ಮುಖನ, **ತಂ** = ಅವನನ್ನು, **ಬಲಂ ಚ** = ಬಲರಾಮನು ಎಂದು, **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ಮೂರ್ಛಿತನಾಗಿ ಬಿದ್ದಿದ್ದ ಅವನನ್ನು ಬ್ರಹ್ಮ ಎಚ್ಚರಿಸಿ ತುಂಬಾ ಯುಗಗಳು ಕಳೆದಿರುವುವು ಎಂದು ಹೇಳಿದನು. ಆಗ ಕಕುದ್ಮಿಯು ನನ್ನ ಮಗಳ ಗಂಡ ಯಾರು ಎಂದು ಕೇಳಿದಾಗ ಬಲರಾಮನು ಎಂದು ಹೇಳಿದನು.

**ಸ ರೈವತೋ ಬಲಾಯ ತಾಂ ಪ್ರದಾಯ ಗಂಧಮಾದನಮ್ ।**
**ಗತೋಽತ್ರ ಚೀರ್ಣಸತ್ತಪಾ ಅವಾಪ ಕೇಶವಾಂತಿಕಮ್ ॥ ೧೭೩ ॥**

**ಅರ್ಥ** :- **ಸ ರೈವತಃ** = ಆ ರೈವತರಾಜನು, **ಬಲಾಯ** = ಬಲರಾಮನಿಗೆ, **ತಾಂ** = ಅವಳನ್ನು, **ಪ್ರದಾಯ** = ಕೊಟ್ಟು, **ಗಂಧಮಾದನಂ** = ಗಂಧಮಾದವನನ್ನು ಕುರಿತು, **ಗತಃ** = ಹೋದನು, **ಚೀರ್ಣಸತ್ತಪಾಃ** = ತುಂಬ ಕಾಲ ತಪಸ್ಸು ಮಾಡಿದವನಾಗಿ, **ಕೇಶವಾಂತಿಕಂ** = ಹರಿಯ ಸನ್ನಿಧಿಯನ್ನು, **ಅವಾಪ** = ಹೊಂದಿದ.

**ತಾತ್ಪರ್ಯ** :- ಆ ರೈವತರಾಜನು ತನ್ನ ಮಗಳನ್ನು ಬಲರಾಮನಿಗೆ ಕೊಟ್ಟು ಗಂಧಮಾದನವನ್ನು ಕುರಿತು ಹೋದನು ಅಲ್ಲಿ ತುಂಬ ಕಾಲ ತಪಸ್ಸನ್ನಾಚರಿಸಿ ಹರಿಯ ಸನ್ನಿಧಿಯನ್ನು ಹೊಂದಿದನು.

**ಬಲೋಽಪಿ ತಾಂ ಪ್ರರಾತನಪ್ರಮಾಣಸಮ್ಮಿತಾಂ ಪ್ರಭುಃ ।**
**ಹಲೇನ ಚಾಽತ್ಮನಾ ಸಮಾಂ ಚಕಾರ ಸತ್ಯವಾಂಛಿತಃ ॥ ೧೭೪ ॥**

**ಅರ್ಥ** :- **ಸತ್ಯವಾಂಛಿತಃ** = ಸತ್ಯಸಂಕಲ್ಪನಾದ, **ಪ್ರಭುಃ** = ಸಮರ್ಥನಾದ, **ಬಲೋಽಪಿ** = ಬಲರಾಮನು, **ಪುರಾತನಪ್ರಮಾಣ ಸವಿತಾಂ**

= ಪೂರ್ವ- ಯುಗಕ್ಕೆ ಸಮಳಾದ, **ತಾಂ** = ಆ ರೇವತಿಯನ್ನು, **ಹಲೇನ** = ಹಲಾಯುಧ- ದಿಂದ, **ಆತ್ಮನಾ ಸಮಾಂ** = ತನಗೆ ಸಮಳನ್ನಾಗಿ, **ಚಕಾರ** = ಮಾಡಿದನು.

**ತಾತ್ಪರ್ಯ** :- ಸತ್ಯಸಂಕಲ್ಪನಾದ ಆ ಬಲರಾಮನು ಪೂರ್ವಯುಗದ ಪ್ರಮಾಣಕ್ಕೆ ಸಮಳಾಗಿದ್ದ ಆ ರೇವತಿಯನ್ನು ಹಲಾಯುಧದಿಂದ ಜಗ್ಗಿ ತನ್ನ ಸಮಳನ್ನಾಗಿ ಮಾಡಿಕೊಂಡ.

**ತಯಾ ರತಃ ಸುತಾವುಭೌ ಶಠೋಲ್ಮುಕಾಭಿಧಾವಧಾತ್ ।**
**ಪುರಾಽರ್ಯಮಾಂಶಕೌ ಸುರಾವುದಾರಚೇಷ್ಟಿತೋ ಬಲಃ ॥ ೧೭೫ ॥**

**ಅರ್ಥ** :- **ಉದಾರಚೇಷ್ಟಿತಃ** = ಉತ್ತಮವಾದ ಕೆಲಸ ಮಾಡುವ, **ಬಲಃ** = ಬಲರಾಮನು, **ತಯಾ** = ಆ ರೇವತಿಯಿಂದ, **ರತಃ** = ರಮಿಸಿದವನಾಗಿ, **ಉಭೌ** = ಇಬ್ಬರು, **ಶಠೋಲ್ಮುಕೌ** = ಶಠ ಉಲ್ಮುಖ (ಎಂದು) **ಅಭಿಧೌ** = ಹೆಸರುಳ್ಳ, **ಸುತೌ** = ಮಕ್ಕಳನ್ನು, **ಅಧಾತ್** = ಹುಟ್ಟಿಸಿದ, **ಪುರಾಃ** = ಹಿಂದೆ, **ಅರ್ಯಮಾಂಶಕೌ** = ಅರ್ಯಮ ಮತ್ತು ಅಂಶ ಎಂಬ, **ಸುರೌ** = ದೇವತೆಗಳು.

**ತಾತ್ಪರ್ಯ** :- ಅವಳೊಂದಿಗೆ ವಿಹರಿಸುತ್ತ ಶಠ ಮತ್ತು ಉಲ್ಮುಖ ಎಂಬ ಎರಡು ಹೆಸರಿನ ಮಕ್ಕಳನ್ನು ಹುಟ್ಟಿಸಿದ. ಅವರು ಅರ್ಯಮಾ ಮತ್ತು ಅಂಶ ಎಂದು ಹೆಸರಿನ ದೇವತೆಗಳು.

**ಜನಾರ್ದನಶ್ಚ ರುಗ್ಮಿಣೀಕರಂ ಶುಭೇ ದಿನೇಽಗ್ರಹೀತ್ ।**
**ಮಹೋತ್ಸವಸ್ತದಾಽಭವತ್ ಕುಶಸ್ಥಲೀನಿವಾಸಿನಾಮ್ ॥ ೧೭೬ ॥**

ಪದಚ್ಛೇದ :- ಜನಾರ್ದನಃ, ಚ, ರುಗ್ಮಿಣೀಕರಂ, ಶುಭೇ, ದಿನೇ, ಅಗ್ರಹೀತ್ । ಮಹೋತ್ಸವಃ, ತದಾ, ಅಭವತ್, ಕುಶಸ್ಥಲೀ ನಿವಾಸಿನಾಮ್ ॥

**ಅರ್ಥ** :- **ಜನಾರ್ದನಃ ಚ** = ಶ್ರೀಕೃಷ್ಣನಾದರೂ, **ಶುಭೇ ದಿನೇ** = ಶುಭ ದಿನದಲ್ಲಿ, **ರುಗ್ಮಿಣೀಕರಂ** = ರುಗ್ಮಿಣೀದೇವಿಯ ಕೈಯನ್ನು, **ಅಗ್ರಹೀತ್** = ಹಿಡಿದನು, **ತದಾ** = ಆಗ, **ಕುಶಸ್ಥಲೀನಿವಾಸಿನಾಂ** = ದ್ವಾರಕೆಯಲ್ಲಿ ವಾಸಿಸುವ ಜನರಿಗೆ, **ಮಹೋತ್ಸವಃ** = ದೊಡ್ಡ ಉತ್ಸವವು, **ಅಭವತ್** = ಆಯಿತು.

ತಾತ್ಪರ್ಯ :- ಶ್ರೀಕೃಷ್ಣನು ರುಗ್ಮಿಣೀಯ ಪಾಣಿಗ್ರಹಣ ಮಾಡಿದಾಗ ದ್ವಾರಕಾನಗರದಲ್ಲಿ ವಾಸಿಸುತ್ತಿದ್ದ ಜನರಿಗೆ ಮಹಾಸಂಭ್ರಮವಾಯಿತು.

**ಚತುರ್ಮುಖೇಶಪೂರ್ವಕಾಃ ಸುರಾ ವಿಯತ್ಯವಸ್ಥಿತಾಃ ।**
**ಪ್ರತುಷ್ಟುವುರ್ಜನಾರ್ದನಂ ರಮಾಸಮೇತಮವ್ಯಯಮ್ ॥ ೧೭೭ ॥**

ಪದಚ್ಛೇದ :- ಚತುರ್ಮುಖೇಶಪೂರ್ವಕಾಃ, ಸುರಾಃ, ವಿಯತ್ಯವಸ್ಥಿತಾಃ । ಪುತುಷ್ಟುವುಃ, ಜನಾರ್ದನಂ, ರಮಾಸಮೇತಮ್, ಅವ್ಯಯಮ್ ॥

**ಅರ್ಥ :- ಚತು+ಕಾಃ ಚತುರ್ಮುಖ** = ಬ್ರಹ್ಮ, **ಈಶ** = ರುದ್ರ, **ಪೂರ್ವಕಾಃ** = ಮೊದಲಾದ, **ಸುರಾಃ** = ದೇವತೆಗಳು, **ವಿಯತ್ಯವಸ್ಥಿತಾಃ** = **ವಿಯತಿ** - ಆಕಾಶದಲ್ಲಿ, **ಅವಸ್ಥಿತಾಃ** - ನಿಂತು, **ಅವ್ಯಯಂ** = ನಾಶರಹಿತರಾದ, **ರಮಾಸಮೇತಂ** = ರುಗ್ಮಿಣೀ ದೇವಿ ಸಹಿತನಾದ, **ಜನಾರ್ದನಂ** = ಶ್ರೀಕೃಷ್ಣನನ್ನು, **ಪುತುಷ್ಟುವುಃ** = ಸ್ತೋತ್ರಗೈದರು.

ತಾತ್ಪರ್ಯ :- ರುಗ್ಮಿಣೀದೇವಿಯನ್ನು ಮದುವೆಯಾದ ಸಮಯದಲ್ಲಿ ಬ್ರಹ್ಮ ರುದ್ರ ಮೊದಲಾದ ಎಲ್ಲಾ ದೇವತೆಗಳು ನಾಶವಿಲ್ಲದ ಶ್ರೀಕೃಷ್ಣನನ್ನು ನಾನಾ ರೀತಿಯಲ್ಲಿ ಸ್ತೋತ್ರ ಮಾಡಿದರು.

**ಮುನೀಂದ್ರದೇವಗಾಯಕಾದಯೋಽಪಿ ಯಾದವೈಃ ಸಹ ।**
**ವಿಚೇರುರುತ್ತಮೋತ್ಸವೇ ರಮಾರಮೇಶಯೋಗಿನಿ ॥ ೧೭೮ ॥**

ಪದಚ್ಛೇದ :- ಮುನೀಂದ್ರದೇವಗಾದಯಕಾದಯಃ, ಅಪಿ, ಯಾದವೈಃ, ಸಹ । ವಿಚೇರುಃ, ಉತ್ತಮೋತ್ಸವೇ, ರಮಾರಮೇಶಯೋಗಿನಿ ॥

**ಅರ್ಥ :- ರಮಾರಮೇಶಯೋಗಿನಿ** = ರುಗ್ಮಿಣಿ ಕೃಷ್ಣರ, **ಉತ್ತಮೋತ್ಸವೇ** = ವಿವಾಹ ಮಹೋತ್ಸವದಲ್ಲಿ, **ಮುನೀಂದ್ರಃ** = ಋಷಿಶ್ರೇಷ್ಠರು, **ದೇವಗಾದಯ- ಕಾದಯಃ** = ಗಂಧರ್ವರು ಮೊದಲಾದವರು, **ಯಾದವೈಃ ಸಹ** = ಯಾದವ- ರೊಂದಿಗೆ, **ವಿಚೇರುಃ** = ಓಡಾಡಿದರು.

ತಾತ್ಪರ್ಯ :- ಕೃಷ್ಣ ರುಗ್ಮಿಣಿಯ ಮದುವೆಯ ಸಂದರ್ಭದ ಸಂಭ್ರಮದಲ್ಲಿ ಋಷಿಗಳು ಗಂಧರ್ವರು ಯಾದವರೊಂದಿಗೆ ಓಡಾಡಿದರು.

**ಸುರಾಂಶಕಾಶ್ಚ ಯೇ ನೃಪಾಃ ಸಮಾಹುತಾ ಮಹೋತ್ಸವೇ ।**
**ಸಪಾಂಡವಾಃ ಸಮಾಯಯುರ್ಹರಿಂ ರಮಾಸಮಾಯುತಮ್ ॥ ೧೭೮ ॥**

ಪದಚ್ಛೇದ :– ಸುರಾಂಶಕಾಃ, ಚ, ಯೇ, ನೃಪಾಃ, ಸಮಾಹುತಾಃ, ಮಹೋತ್ಸವೇ । ಸಪಾಂಡವಾಃ, ಸಮಾಯಯುಃ, ಹರಿಂ, ರಮಾಸಮಾಯುತಮ್ ॥

**ಅರ್ಥ** :- **ಚ** = ಮತ್ತು, **ಸುರಾಂಶಕಾಃ** = ದೇವಾಂಶ ಸಂಭೂತರಾದ, **ಸಪಾಂಡವಾಃ** = ಪಾಂಡವರಿಂದ ಸಹಿತರಾದ, **ಯೇ** = ಯಾವ, **ನೃಪಾಃ** = ರಾಜರುಗಳು, **ಮಹೋತ್ಸವೇ** = ವಿವಾಹೋತ್ಸವದಲ್ಲಿ, **ಸಮಾಹುತಾಃ** = ಆಹ್ವಾನಿತರಾಗಿ, **ರಮಾಸಮಾಯುತಂ** = ರಮೇಸಹಿತಳಾದ, **ಹರಿಂ** = ಕೃಷ್ಣನನ್ನು ಕುರಿತು, **ಸಮಾಯಯುಃ** = ಬಂದರು.

**ತಾತ್ಪರ್ಯ** :- ಮದುವೆಗೆ ದೇವಾಂಶರಾದ ಪಾಂಡವರು, ರಾಜರುಗಳನ್ನು ಶ್ರೀಕೃಷ್ಣ ಆಹ್ವಾನ ಮಾಡಿದ್ದರಿಂದ, ಪಾಂಡವರೇ ಮೊದಲಾದ ರಾಜರು ಬಂದರು.

**ಸಮಸ್ತಲೋಕಸುಂದರೌ ಯುತೌ ರಮಾರಮೇಶ್ವರೌ ।**
**ಸಮೀಕ್ಷ್ಯ ಮೋದಮಾಯಯುಃ ಸಮಸ್ತಲೋಕಸಜ್ಜನಾಃ ॥ ೧೮೦ ॥**

ಪದಚ್ಛೇದ :– ಸಮಸ್ತಲೋಕಸುಂದರೌ, ಯುತೌ, ರಮಾರಮೇಶ್ವರೌ । ಸಮೀಕ್ಷ್ಯ, ಮೊದಮಾಯಯುಃ, ಸಮಸ್ತಲೋಕಸಜ್ಜನಾಃ ॥

**ಅರ್ಥ** :- **ಸಮಸ್ತ** = ಎಲ್ಲಾ, **ಲೋಕ** = ಲೋಕಗಳಲ್ಲಿ; **ಸುಂದರೌ** = ಸುಂದರರಾದ, **ರಮಾರಮೇಶ್ವರೌ** = ರುಗ್ಮಿಣೀ ಕೃಷ್ಣರನ್ನು, **ಯುತೌ** = ಜೊತೆಯಾಗಿ, **ಸಮೀಕ್ಷ್ಯ** = ನೋಡಿ, **ಸಮಸ್ತಲೋಕಸಜ್ಜನಾಃ** = **ಸಮಸ್ತ** - ಎಲ್ಲಾ, **ಲೋಕ** - ಲೋಕದ, **ಸಜ್ಜನಾಃ** - ಸಜ್ಜನರುಗಳು, **ಮೊದಮಾಯಯುಃ** = ಆನಂದಪಟ್ಟರು.

**ತಾತ್ಪರ್ಯ** :- ವಿವಾಹದಲ್ಲಿ ಜೊತೆ ಜೊತೆಯಾಗಿ ಶೋಭಿಸುತ್ತಿದ್ದ ಕೃಷ್ಣ ರುಗ್ಮಿಣಿಯರನ್ನು ನೋಡಿ ಎಲ್ಲಾ ಸಾತ್ವಿಕ ಜನರು ಆನಂದ ಹೊಂದಿದರು.

**ತಯಾ ರಮನ್ ಜನಾರ್ದನೋ ವಿಯೋಗಶೂನ್ಯಯಾ ಸದಾ ।**
**ಅಧತ್ತ ಪುತ್ರಮುತ್ತಮಂ ಮನೋಭವಂ ಪುರಾತನಮ್ ॥ ೧೮೧ ॥**

**ಪದಚ್ಛೇದ :– ತಯಾ, ರಮನ್, ಜನಾರ್ದನಃ, ವಿಯೋಗ ಶೂನ್ಯಯಾ, ಸದಾ । ಅಧತ್ತ, ಪುತ್ರಮ್, ಉತ್ತಮಂ, ಮನೋಭವಂ, ಪುರಾತನಮ್ ॥**

**ಅರ್ಥ** :- **ಸದಾ** = ಯಾವಾಗಲೂ, **ವಿಯೋಗಶೂನ್ಯಯಾಃ** = ವಿಯೋಗವಿಲ್ಲದ, **ತಯಾ** (ಸಹ) = ರುಗ್ಮಿಣೀಯ ಸಂಗಡ, **ರಮನ್** = ರಮಿಸಿ, **ಜನಾರ್ದನಃ** = ಶ್ರೀಕೃಷ್ಣನು, **ಪುರಾತನಂ** = ಹಿಂದೆ, **ಮನೋಭವಂ** = ಮನ್ಮಥನೆಂಬ, **ಉತ್ತಮಂ** = ಉತ್ತಮನಾದ, **ಪುತ್ರಂ** = ಮಗನನ್ನು, **ಆಧತ್ತ** = ಪಡೆದನು.

**ತಾತ್ಪರ್ಯ** :- ನಿತ್ಯಾವಿಯೋಗಿನಿಯಾದ ರುಗ್ಮಿಣೀದೇವಿಯ ಜೊತೆ ರಮಿಸಿ ಶ್ರೀಕೃಷ್ಣ ಹಿಂದೆ ಮನ್ಮಥನೆಂಬ ಮಗನೇ ಆಗಿದ್ದ ಉತ್ತಮ ಪುತ್ರನನ್ನು ಪಡೆದನು.

**ಚತುಸ್ತನೋರ್ಹರೇಃ ಪ್ರಭೋಸ್ತೃತೀಯರೂಪಸಂಯುತಃ ।**
**ತತಸ್ತದಾಹ್ವಯೋಽಭವತ್ ಸ ರುಗ್ಮಿಣೀಸುತೋ ಬಲೀ ॥ ೧೮೨ ॥**

**ಪದಚ್ಛೇದ :– ಚತುಸ್ತನೋಃ, ಹರೇಃ, ಪ್ರಭೋಃ, ತೃತೀಯರೂಪಸಂಯುತಃ । ತತಃ, ತದಾಹ್ವಯಃ, ಅಭವತ್, ಸಃ, ರುಗ್ಮಿಣೀಸುತಃ, ಬಲೀ ॥**

**ಅರ್ಥ** :- **ಬಲೀ** = ಬಲಿಷ್ಠನಾದ, **ಸಃ** = ಆ, **ರುಗ್ಮಿಣೀಸುತಃ** = ರುಗ್ಮಿಣೀಯ ಮಗ, **ಚತುಸ್ತನೋಃ** = ವಾಸುದೇವಾದಿ ಚಮುರ್ಮೂರ್ತಿಯಾದ, **ಪ್ರಭೋಃ** = ಸ್ವಾಮಿಯಾದ, **ಹರೇಃ** = ಶ್ರೀಹರಿಯ, **ತೃತೀಯರೂಪಸಂಯುತಃ** = ಮೂರನೇ ರೂಪದಿಂದ, (ಪ್ರದ್ಯುಮ್ನ) ಯುಕ್ತನಾಗಿದ್ದ, **ತತಃ** = ಆದ್ದರಿಂದ, **ತದಾಹ್ವಯಃ** = ಆ ಪ್ರದ್ಯುಮ್ನ ರೂಪದಿಂದ ಕರೆಯಲ್ಪಡುವವನು, **ಅಭವತ್** = ಆದನು.

**ತಾತ್ಪರ್ಯ** :- ರುಗ್ಮಿಣೀಯ ಮಗನಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಮೊದಲಾದ ಚತುರ್ಮೂರ್ತಿಯಾದ ಹರಿಯ ರೂಪಗಳಲ್ಲಿ ಮೂರನೆಯ ಪ್ರದ್ಯುಮ್ನನ ಆವೇಶ ಇದ್ದಿದ್ದರಿಂದ ಆ ಪುತ್ರನು ಪ್ರದ್ಯುಮ್ನ ಎಂದು ಕರೆಯಲ್ಪಟ್ಟನು.

**ಪುರೈವ ಮೃತ್ಯವೇಽವದತ್ ತಮೇವ ಶಂಬರಸ್ಯ ಹ ।**
**ಪ್ರಜಾತಮಬ್ಜಜಾಂಕಸ್ತವಾಂತಕೋಽಯಮಿತ್ಯಪಿ ॥ ೧೮೩ ॥**

**ಪದಚ್ಛೇದ :-** ಪುರಾ, ಏವ, ಮೃತ್ಯವೇ, ಅವದತ್, ತಮ್, ಏವ, ಶಂಬರಸ್ಯ, ಹ । ಪ್ರಜಾತಮ್, ಅಬ್ಜಜಾಂಕಃ, ತವ, ಅಂತಕಃ, ಅಯಂ, ಇತಿ, ಅಪಿ ॥

**ಅರ್ಥ :-** **ಪುರಾ ಏವ** = ಹುಟ್ಟುವುದಕ್ಕಿಂತ ಮೊದಲು, **ಅಯಂ** = ಇವನು, **ತವ** = ನಿನಗೆ, **ಅಬ್ಜಜಾಂಕಃ** = ನಾರದರು, **ಅವದತ್** = ಹೇಳಿದರು, **ಪ್ರಜಾಂತಂ ಅಪಿ** = ಹುಟ್ಟಿದ ನಂತರವೂ, **ತಮೇವ** = ಅವನನ್ನು, (ಪ್ರದ್ಯುಮ್ನ-ನನ್ನೇ), **ಅಂತಕಃ** = ಅಂತಕನು, **ಇತಿ** = ಎಂದು, **ಹ** = ಆಶ್ಚರ್ಯವು,

**ತಾತ್ಪರ್ಯ :-** ಪ್ರದ್ಯುಮ್ನ ಹುಟ್ಟುವುದಕ್ಕೆ ಮೊದಲೇ ನಾರದರು ಶಂಬರಾ- ಸುರನಿಗೆ ಈತ ನಿನಗೆ ಮೃತ್ಯುವಾಗಲಿರುವನೆಂದು ಹೇಳಿದರು. ಹುಟ್ಟಿದ ಮೇಲೂ ಈತ ನಿನ್ನ ಮೃತ್ಯು ಎಂದರು.

**ಸ ಮಾಯಯಾ ಹರೇಃ ಸುತಂ ಪ್ರಗೃಹ್ಯ ಸೂತಿಕಾಗೃಹಾತ್ ।**
**ಅವಾಕ್ಷಿಪನ್ಮಹೋದಧಾವುಪೇಕ್ಷಿತೋಽರಿಪಾಣಿನಾ ॥ ೧೮೪ ॥**

**ಪದಚ್ಛೇದ :-** ಸಃ, ಮಾಯಯಾ, ಹರೇಃ, ಸುತಂ, ಪ್ರಗೃಹ್ಯ, ಸೂತಿಕಾ, ಗೃಹಾತ್ । ಅವಾಕ್ಷಿಪತ್, ಮಹೋದಧೌ, ಉಪೇಕ್ಷಿತಃ, ಅರಿಪಾಣಿನಾ ॥

**ಅರ್ಥ :-** **ಸಃ** = ಶಂಬರನು, **ಮಾಯಯಾ** = ಮಾಯೆಯಿಂದ, **ಹರೇಃ ಸುತಂ** = ಶ್ರೀಹರಿಯ ಮಗನನ್ನು, **ಸೂತಿಕಾಗೃಹಾತ್** = ಪ್ರಸವ ಗೃಹದಿಂದಲೇ, **ಪ್ರಗೃಹ್ಯ** = ಹಿಡಿದು, **ಮಹೋದಧೌ** = ಸಮುದ್ರದಲ್ಲಿ, **ಅವಾಕ್ಷಿಪತ್** = ಎಸೆದ, **ಅರಿಪಾಣಿನಾ** = ಚಕ್ರಪಾಣಿಯಾದ ಕೃಷ್ಣನಿಂದ, **ಉಪೇಕ್ಷಿತಃ** = ಉಪೇಕ್ಷಿಸಿ ಬಿಟ್ಟಿದ್ದ.

**ತಾತ್ಪರ್ಯ :-** ಮಗು ಹುಟ್ಟಿ ಏಳು ದಿವಸವಾಗಿರುವಾಗ ಶಂಬರ ಮಾಯೆ- ಯಿಂದ ಮಗುವನ್ನೆತ್ತಿ ಸಮುದ್ರಕ್ಕೆ ಎಸೆದಿದ್ದ. ಇದಕ್ಕೆ ಪ್ರಚೋದನೆ ನಾರದರಿಂದ ದೊರಕಿತ್ತು. ಕೃಷ್ಣನು ಏನೂ ತಿಳಿಯದವನಂತಿದ್ದ ಶಂಬರನ್ನು ಉಪೇಕ್ಷಿಸಿ ಬಿಟ್ಟಿದ್ದ.

ತಮುಗ್ರಸಜ್ಜಲೇಚರಃ ಸ ದಾಶಹಸ್ತಮಾಗತಃ ।
ಕುಮಾರಮಸ್ಯ ತೂದರೇ ನಿರೀಕ್ಷ್ಯ ಶಂಬರೇ ದದುಃ ॥ ೧೮೫ ॥

ಪದಚ್ಛೇದ :- ತಮ್, ಅಗ್ರಸತ್, ಜಲೇಚರಃ, ದಾಶಹಸ್ತಮ್, ಆಗತಃ । ಕುಮಾರಮ್, ಅಸ್ಯ, ತೂದರೇ, ನಿರೀಕ್ಷ್ಯ, ಶಂಬರೇ, ದದುಃ ॥

ವಿಪಾಟ್ಯ ಮತ್ಸ್ಯಕೋದರಂ ಸ ಶಂಬರಃ ಕುಮಾರಕಮ್ ।
ನ್ಯವೇದಯನ್ಮನೋಭವಪ್ರಿಯಾಕರೇ ಸುರೂಪಿಣಮ್ ॥ ೧೮೬ ॥

ಪದಚ್ಛೇದ :- ವಿಪಾಟ್ಯ, ಮತ್ಸ್ಯಕೋದರಂ, ಸಃ, ಶಂಬರಃ, ಕುಮಾರಕಮ್ । ನ್ಯವೇದಯತ್, ಮನೋಭವ ಪ್ರಿಯಾಕರೇ, ಸುರೂಪಿಣಮ್ ॥

**ಅರ್ಥ** :- **ತಂ** = ಆ ಮಗುವನ್ನು, **ಜಲೇಚರಃ** = ಮೀನು, **ಅಗ್ರಸತ್** = ನುಂಗಿತು, **ದಾಶಹಸ್ತಂ** = ಬೆಸ್ತರನ್ನು ಕುರಿತು, **ಆಗತಃ** = ಬಂದ, **ಕುಮಾರಂ** = ಪ್ರದ್ಯುಮ್ನನನ್ನು, **ಅಸ್ಯ** = ಈ ಮೀನಿನ, **ತೋಂದರೇ** = ಹೊಟ್ಟೆಯಲ್ಲಿ, **ನಿರೀಕ್ಷ್ಯ** = ನೋಡಿ, **ಮತ್ಸ್ಯಕೋದರಂ** = ಮೀನಿನ ಹೊಟ್ಟೆಯನ್ನು, **ವಿಪಾಟ್ಯ** = ಬಗಿದು, **ಶಂಬರೇ** = ಶಂಬರನಿಗೋಸ್ಕರ, **ದದುಃ** = ಕೊಟ್ಟರು, **ಸಃ** = ಆ, **ಶಂಬರಃ** = ಶಂಬರನು, **ಕುಮಾರಕಮ್** = ಮಗನನ್ನು, **ಸುರೂಪಿಣಂ** = ಒಳ್ಳೆಯ ರೂಪವತಿಯಾದ, **ಮನೋಭವ ಪ್ರಿಯಾಕರೇ** = ಮನ್ಮಥನ ಹೆಂಡತಿಯಾದ ರತಿಯ ಕೈಗೆ, **ನ್ಯವೇದಯತ್** = ಸಮರ್ಪಿಸಿದನು.

**ತಾತ್ಪರ್ಯ** :- ಶಂಬರಾಸುರ ಮಗುವನ್ನು ಸಮುದ್ರಕ್ಕೆ ಎಸೆದಾಗ ಒಂದು ಮೀನು ನುಂಗಿತು, ಅದನ್ನು ಒಬ್ಬ ಬೆಸ್ತ ಮೀನನ್ನು ಹಿಡಿದು ಹೊಟ್ಟೆ ಬಗಿದು ನೋಡಿದಾಗ, ಮಗು ಕಂಡಿತು. ಆ ಮಗುವನ್ನು ಶಂಬರನು ಮನ್ಮಥನ ಹೆಂಡತಿಯಾದ ರತಿಯ ಕೈಗೆ ಇತ್ತನು.

ಅನಂಗತಾಮುಪಾಗತೇ ಪುರಾ ಹರೇಣ ಸಾಽಂಗಜೇ ।
ವಶಂ ವಿರಿಂಚಶಾಪತೋ ಜಗಾಮ ಶಂಬರಸ್ಯ ಹಿ ॥ ೧೮೭ ॥

ಪದಚ್ಛೇದ :- ಅನಂಗತಾಮ್, ಉಪಾಗತೇ, ಪುರಾ, ಹರೇಣ, ಸಾ ಅಂಗಜೇ । ವಶಂ, ವಿರಿಂಚಶಾಪತಃ, ಜಗಾಮ, ಶಂಬರಸ್ಯ, ಹಿ ॥

**ಅರ್ಥ** :- **ಪುರಾ** = ಹಿಂದೆ, **ಹರೇಣ** = ಶಿವನಿಂದ (ಮನ್ಮಥನು), **ಅನಂಗತಾಮ್** = (ಸುಟ್ಟು) ಅನಂಗತೆಯನ್ನು, **ಉಪಾಗತೇ** = ಹೊಂದಿದಾಗ, **ವಿರಿಂಚಶಾಪತಃ** = ಚತುರ್ಮುಖನ ಶಾಪದಿಂದ, **ಸಾ** = ಆ, **ಅಂಗಜೇ** = ರತಿದೇವಿ, **ಶಂಬರಸ್ಯ** = ಶಂಬರನ, **ವಶಂ** = ಅಧೀನವನ್ನು, **ಜಗಾಮ ಹಿ** = ಹೊಂದಿದಳಷ್ಟೇ.

**ತಾತ್ಪರ್ಯ** :- ಹಿಂದೆ ಶಿವನ ಶಾಪದಿಂದ ಮನ್ಮಥ ಸುಟ್ಟುಹೋಗಿ ಅನಂಗ-ನೆನಿಸಿದ್ದ. ಮನ್ಮಥನ ಹೆಂಡತಿ ಚತುರ್ಮುಖ ಬ್ರಹ್ಮನ ಶಾಪದಿಂದ ಶಂಬರನ ಅಧೀನರಾಗಿದ್ದಳು.

**ಪುರಾ ಹಿ ಪಂಚಭರ್ತೃಕಾಂ ನಿಶಮ್ಯ ಕಂಜಜೋದಿತಾಮ್ ।**
**ಜಹಾಸ ಪಾರ್ಷತಾತ್ಮಜಾಂ ಶಶಾಪ ತಾಂ ತತಸ್ತ್ವಜಃ ॥ ೧೮೮ ॥**

**ಪದಚ್ಛೇದ** :- **ಪುರಾ, ಹಿ, ಪಂಚಭರ್ತೃಕಾಂ, ನಿಶಮ್ಯ, ಕಂಜಜೋದಿತಾಮ್ । ಜಹಾಸ, ಪಾರ್ಷತಾತ್ಮಜಾಂ, ಶಶಾಪ, ತಾಂ, ತತಃ, ತು, ಅಜಃ ॥**

**ಅರ್ಥ** :- **ಪುರಾ** = ಹಿಂದೆ, **ಕಂಜಜೋದಿತಾಂ** = ಕಮಲದಲ್ಲಿ ಹುಟ್ಟಿದ ಬ್ರಹ್ಮನಿಂದ, ಹೇಳಲ್ಪಟ್ಟ, **ಪಂಚಭರ್ತೃಕಾಂ** = ಐದು ಜನ ಪತಿಗಳೆಂದು, **ನಿಶಮ್ಯ** = ಕೇಳಿ, **ಜಹಾಸ ಹಿ** = ನಕ್ಕಿದಳಷ್ಟೆ, **ತತಃ ತು** = ಅನಂತರ, **ಅಜಃ** = ಚತುರ್ಮುಖನು, **ಪಾರ್ಷತಾತ್ಮಜಾಂ ತಾಂ** = ರತಿಯನ್ನು, **ಶಶಾಪ** = ಶಪಿಸಿದನು.

**ತಾತ್ಪರ್ಯ** :- ಚತುರ್ಮುಖ ಹಿಂದೆ ದ್ರೌಪದಿಗೆ ಐದು ಮಂದಿ ಪತಿಗಳು ಎಂದು ಕೇಳಿ ರತಿ ಅಪಹಾಸ್ಯ ಮಾಡುವ ರೀತಿಯಲ್ಲಿ ನಕ್ಕಿದ್ದಳು. ಆದಕಾರಣ ಬ್ರಹ್ಮನು ರತಿದೇವಿಗೆ ಶಾಪವನ್ನು ಕೊಟ್ಟಿದ್ದ.

**ಭವಾಸುರೇಣ ದೂಷಿತೇತಿ ಸಾ ತತೋ ಹಿ ಮಾಯಯಾ ।**
**ಪಿಧಾಯ ತಾಂ ನಿಜಾಂ ತನುಂ ಜಗಾಮ ಚಾನ್ಯಯಾಽಸುರಮ್ ॥ ೧೮೯ ॥**

**ಪದಚ್ಛೇದ** :- ಭವಾಸುರೇಣ, ದೂಷಿತಾ, ಇತಿ, ಸಾ, ತತಃ, ಹಿ, ಮಾಯಯಾ । ಪಿಧಾಯ, ತಾಂ, ನಿಜಾಂ, ತನುಂ, ಜಗಾಮ, ಚ, ಅನ್ಯಯಾ, ಅಸುರಮ್ ॥

**ಅರ್ಥ** :- **ಭವಾಸುರೇಣ** = ರಾಕ್ಷಸನಿಂದ, **ದೂಷಿತಾ** = ದೂಷಿತಳಾಗು, **ಇತಿ** = ಎಂದು, (**ಶಶಾಪ** = ಶಾಪವಿತ್ತ), **ತತಃ** = ಅನಂತರ, **ಸಾ** = ಆ ರತಿಯು, **ಮಾಯಯಾ** = ಮಾಯೆಯಿಂದ, **ನಿಜಾಂ** = ತನ್ನ, **ತಾಂ** = ಆ, **ತನುಂ** = ಶರೀರವನ್ನು, **ಪಿಧಾಯ** = ಮುಚ್ಚಿ, **ಚ** = ಮತ್ತು, **ಅನ್ಯಯಾ** = ಬೇರೆ ರೂಪದಿಂದ, **ಅಸುರಂ** = ರಾಕ್ಷಸನನ್ನು ಕುರಿತು, **ಜಗಾಮ ಹಿ** = ಹೋದಳಷ್ಟೆ.

**ತಾತ್ಪರ್ಯ** :- ಅಸುರನಿಂದ ದೂಷಿತಳಾಗೆಂದು ಬ್ರಹ್ಮ ಶಾಪವಿತ್ತಾಗ ರತಿದೇವಿ ಮಾಯೆಯಿಂದ ತನ್ನ ನಿಜರೂಪವನ್ನು ಮರೆಮಾಡಿ ಬೇರೆ ರೂಪದಿಂದ ಶಂಬರನ ಸಂಗ ಮಾಡಿದಳು.

**ಗೃಹೇಽಪಿ ಸಾಽಽಸುರೇ ಸ್ಥಿತಾ ನಿಜಸ್ವರೂಪತೋಽಸುರಮ್ ।**
**ನ ಗಚ್ಛತಿ ಸ್ಮ ಸಾ ಪತಿಂ ನಿಜಂ ಸಮೀಕ್ಷ್ಯ ಹರ್ಷಿತಾ ॥ ೧೯೦ ॥**

**ಪದಚ್ಛೇದ** :- ಗೃಹೇ, ಅಪಿ, ಸಾ, ಅಸುರೇ, ಸ್ಥಿತಾ, ನಿಜಸ್ವರೂಪತಃ, ಅಸುರಮ್ । ನ, ಗಚ್ಛತಿ, ಸ್ಮ, ಸಾ, ಪತಿಂ, ನಿಜಂ, ಸಮೀಕ್ಷ್ಯ, ಹರ್ಷಿತಾ ॥

**ಅರ್ಥ** :- **ಸಾ** = ಆ ರತಿಯು, **ಅಸುರೇ ಗೃಹೇ** = ರಾಕ್ಷಸನ ಮನೆಯಲ್ಲಿ, **ಸ್ಥಿತಾ ಅಪಿ** = ಇದ್ದರೂ, **ನಿಜಸ್ವರೂಪತಃ** = ತನ್ನ ನಿಜಸ್ವರೂಪದಿಂದ, **ಅಸುರಂ** = ರಾಕ್ಷಸನನ್ನು, **ನ ಗಚ್ಛತಿ ಸ್ಮ** = ಸಂಗ ಮಾಡುತ್ತಿರಲಿಲ್ಲವಷ್ಟೆ, **ಸಾ** = ಅವಳು, **ನಿಜಂ** = ತನ್ನ, **ಪತಿಂ** = ಗಂಡನನ್ನು, **ಸಮೀಕ್ಷ್ಯ** = ನೋಡಿ, **ಹರ್ಷಿತಾ** = ಸಂತೋಷ ಪಡುತ್ತಿದ್ದಳು.

**ತಾತ್ಪರ್ಯ** :- ರತಿದೇವಿ ಶಂಬರನ ಮನೆಯಲ್ಲಿ ವಾಸಮಾಡುತ್ತಿದ್ದರೂ ತನ್ನ ನಿಜ ಸ್ವರೂಪದಿಂದ ಅಸುರನ ಸಂಗ ಮಾಡುತ್ತಿರಲಿಲ್ಲ, ಆದರೆ ಅವಳು ತನ್ನ ಪತಿಯನ್ನು ಕಂಡು ಹರ್ಷಿತಳಾಗುತ್ತಿದ್ದಳು.

**ರಸಾಯನೈಃ ಕುಮಾರಕಂ ವ್ಯವರ್ಧಯದ್ ರತಿಃ ಪತಿಮ್ ।**
**ಸ ಪೂರ್ಣಯೌವನೋಽಭವಚ್ಚತುರ್ಭಿರೇವ ವತ್ಸರೈಃ ॥ ೧೯೧ ॥**

**ಪದಚ್ಛೇದ** :- ರಸಾಯನೈಃ, ಕುಮಾರಕಂ, ವ್ಯವರ್ಧಯತ್, ರತಿಃ, ಪತಿಮ್ । ಸಃ, ಪೂರ್ಣಯೌವನಃ, ಅಭವತ್, ಚತುರ್ಭಿಃ, ಏವ, ವತ್ಸರೈಃ ॥

**ಅರ್ಥ** :- **ರತಿಃ** = ರತಿದೇವಿಯು, **ಕುಮಾರಕಂ** = ಕುಮಾರನಾದ, **ಪತಿಂ** = ಗಂಡನನ್ನು, **ರಸಾಯನೈಃ** = ರಸಾಯನಗಳಿಂದ, **ವ್ಯವರ್ಧಯತ್** = ಬೆಳೆಸಿದಳು, **ಸಃ** = ಅವನು, **ಚತುರ್ಭಿಃ** = ನಾಲ್ಕು, **ವತ್ಸರೈಃ ಏವ** = ವರ್ಷಗಳಲ್ಲಿಯೇ, **ಪೂರ್ಣಯೌವನಃ** = ಪೂರ್ಣಯೌವನದಿಂದ ಕೂಡಿದವನಾಗಿ, **ಅಭವತ್** = ಆದನು.

**ತಾತ್ಪರ್ಯ** :- ರತಿದೇವಿ ಕುಮಾರನಾಗಿರುವ ಪತಿಗೆ ಸ್ತನ್ಯಪಾನ ಮಾಡಿಸದೆ ''ಮಗು'' ಎಂದು ಕರೆಯದೆ ದಾದಿಯ ಕೈಯಲ್ಲಿ ಕೊಟ್ಟು ಅವಳ ಎದೆ ಹಾಲಿನಿಂದ ಹಾಗು ರಸಾಯನ ದ್ರವ್ಯಗಳಿಂದ ಬೆಳೆಸಿದಾಗ ನಾಲ್ಕು ವಯಸ್ಸಿನ ಮಗು ಪದಿನಾರು ವಯಸಿನವನಂತಾದ.

**ಪತಿಂ ಸುಪೂರ್ಣಯೌವನಂ ನಿರೀಕ್ಷ್ಯ ತಾಂ ವಿಲಜ್ಜತೀಮ್ ।**
**ಉವಾಚ ಕಾರ್ಷ್ಣಿರಂಬ ತೇ ಕುಚೇಷ್ಟಿತಂ ಕಥಂ ತ್ವಿತಿ ॥ ೯೨ ॥**

**ಪದಚ್ಛೇದ** :- **ಪತಿಂ, ಸುಪೂರ್ಣ ಯೌವನಂ, ನಿರೀಕ್ಷ್ಯ, ತಾಂ, ವಿಲಜ್ಜತೀಮ್ । ಉವಾಚ, ಕಾರ್ಷ್ಣಿಃ, ಅಂಬ, ತೇ, ಕುಚೇಷ್ಟಿತಂ, ಕಥಂ, ತು, ಇತಿ ॥**

**ಅರ್ಥ** :- **ಸುಪೂರ್ಣಯೌವನಂ** = ಸಂಪೂರ್ಣ ಯೌವನ ಭರಿತನಾದ, **ಪತಿಂ** = ಗಂಡನನ್ನು, **ನಿರೀಕ್ಷ್ಯ** = ನೋಡಿ, **ವಿಲಜ್ಜತೀಂ** = ಲಜ್ಜೆ ಪಡುತ್ತಿದ್ದ, **ತಾಂ** = ಆ ರತಿಯನ್ನು ಕುರಿತು, **ಕಾರ್ಷ್ಣಿಃ** = ಪ್ರದ್ಯುಮ್ನನು, **ಅಂಬ** = ಅಮ್ಮ, **ತೇ** = ನಿನ್ನ, **ಕುಚೇಷ್ಟಿತಂ ತು** = ಕುಚೇಷ್ಟೆ ಆದರೂ, **ಕಥಂ ತು ಇತಿ** = ಏಕೇ ಎಂದು, **ಉವಾಚ** = ಹೇಳಿದನು.

**ತಾತ್ಪರ್ಯ** :- ಯೌವನದಿಂದ ಕೂಡಿದ ಪತಿಯನ್ನು ಕಂಡಾಗ ರತಿಯು ನಾಚಿಕೆ ಪಡುತ್ತಿರುತ್ತಾಳೆ. ಆಗ ಪ್ರದ್ಯುಮ್ನನನು ಕೇಳುತ್ತಾನೆ ನೀನು ನನ್ನನ್ನು ಕಂಡು ಏಕೆ ಈ ರೀತಿ ವರ್ತಿಸುತ್ತಿರುವೆ. ನನಗೆ ಸಂಶಯ ಬರುತ್ತಿದೆ. ನಾನು ನಿನ್ನ ಮಗ ಹೌದೆ ಅಲ್ಲವೆ ಎಂದು ಈ ವಿಚಾರ ಹರಿವಂಶದಲ್ಲಿಯೂ ಉಕ್ತವಾಗಿದೆ.

**''ಯದಿ ತೇಽಹಂ ಸತಃ ಸೌಮ್ಯೇ ಯದಿ ವಾ ನಾತ್ಮಜಃ ಶುಭೇ ।**
**ಕಥಿತಂ ತತ್ವಮಿಚ್ಛಾಮಿ ಕಿಮಿದಂ ತೇ ಚಿಕೀರ್ಷಿತಮ್ ॥''**

**ಜಗಾದ ಸಾಽಖಿಲಂ ಪತೌ ತದಸ್ಯ ಜನ್ಮ ಚಾಽಗತಿಮ್ ।**
**ತತೋಽಗ್ರಹೀತ್ ಸ ತಾಂ ಪ್ರಿಯಾಂ ರತಿಂ ರಮಾಪತೇಃ ಸುತಃ ॥ ೧೯೩ ॥**

**ಪದಚ್ಛೇದ :-** ಜಗಾದ, ಸಾ, ಅಖಿಲಂ, ಪತೌ, ತದಾ, ಅಸ್ಯ, ಜನ್ಮ, ಚ, ಆಗತಿಮ್ । ತತಃ, ಅಗ್ರಹೀತ್, ಸಃ, ತಾಂ, ಪ್ರಿಯಾಂ, ರತಿಂ, ರಮಾಪತೇಃ, ಸುತಃ ॥

**ಅರ್ಥ :-** ತದಾ = ಆಗ, ಸಾ = ಆ ರತಿದೇವಿಯು, ಪತೌ = ಸ್ವಾಮಿಯಾದ, ಅಸ್ಯ = ಪ್ರದ್ಯುಮ್ನನಿಗೆ, ಜನ್ಮ = ಹುಟ್ಟು, ಚ = ಮತ್ತು, ಆಗತಿಂ = ಆಗಮನವನ್ನು, ಅಖಿಲಂ = ಎಲ್ಲವನ್ನು, ಜಗಾದ = ಹೇಳಿದಳು, ತತಃ = ಅನಂತರ, ರಮಾಪತೇಃ = ಶ್ರೀಕೃಷ್ಣನ, ಸುತಃ = ಮಗನಾದ, ಸಃ = ಆ ಪ್ರದ್ಯುಮ್ನನು, ಪ್ರಿಯಾಂ = ಪ್ರಿಯಳಾದ, ತಾಂ = ಆ, ರತಿಂ = ರತಿದೇವಿಯನ್ನು, ಅಗ್ರಹೀತ್ = ಸ್ವೀಕರಿಸಿದನು.

**ತಾತ್ಪರ್ಯ :-** ಪ್ರದ್ಯುಮ್ನ ಆಡಿದ ಮಾತನ್ನು ಕೇಳಿ ರತಿದೇವಿಯು ಅವನ ಜನ್ಮವೃತ್ತಾಂತವನ್ನು ಅವನ ಬರುವಿಕೆಯನ್ನು ಸಂಪೂರ್ಣವಾಗಿ ತಿಳಿಸಿದಳು. ಆಗ ಪ್ರದ್ಯುಮ್ನನು ಪ್ರಿಯಳಾದ ರತಿಯನ್ನು ಸಂತೋಷದಿಂದ ಸ್ವೀಕರಿಸಿದನು.

**ದದೌ ಚ ಮಂತ್ರಮುತ್ತಮಂ ಸಮಸ್ತಮಾಯಿನಾಶಕಮ್ ।**
**ಭೃಗೂತ್ತಧಾಮದ್ವೈವತ್ಂ ರತಿರ್ಹರೇಃ ಸುತಾಯ ಸಾ ॥ ೧೯೪ ॥**

**ಪದಚ್ಛೇದ :-** ದದೌ, ಚ, ಮಂತ್ರಮ್, ಉತ್ತಮಂ, ಸಮಸ್ತಮಾಯಿನಾಶಕಮ್ । ಭೃಗೂತ್ಥರಾಮದೈವತಂ, ರತಿಃ, ಹರೇಃ, ಸುತಾಯ, ಸಾ ॥

**ಅರ್ಥ :-** ಸಾ = ಆ, ರತಿಃ = ರತಿದೇವಿಯು, ಸಮಸ್ತಮಾಯಿನಾಶಕಂ = ಎಲ್ಲಾ ಮಾಯಾವಿಗಳನ್ನು ನಾಶಪಡಿಸಬಲ್ಲ, ಚ = ಮತ್ತು, ಭೃಗೂತ್ಥರಾಮ-ದೈವತಂ = ಪರಶುರಾಮನಿಂದ ಹೇಳಲ್ಪಟ್ಟ, ಉತ್ತಮಂ = ಉತ್ತಮವಾದ, ಮಂತ್ರಂ = ಮಂತ್ರವನ್ನು, ಹರೇಃ = ಶ್ರೀಕೃಷ್ಣನ, ಸುತಾಯ = ಮಗನಾದ ಪ್ರದ್ಯುಮ್ನನಿಗೆ, ದದೌ = ಕೊಟ್ಟಳು.

**ತಾತ್ಪರ್ಯ :-** ಆವಾಗ ರತಿಯು ಪ್ರದ್ಯುಮ್ನನಿಗೆ ಮಾಯಾವಿಗಳನ್ನು ನಾಶ- ಪಡಿಸಬಲ್ಲ ಪರಶುರಾಮ ದೇವತಾಕವಾದ ಅಪೂರ್ವವಾದ ಮಂತ್ರವನ್ನು ನೀಡಿದಳು.

**ತತಃ ಸ್ವದಾರಧರ್ಷಕಂ ಸಮಾಹ್ವಯದ್ ಯುಧೇಽಂಗಜಃ ।**
**ಸ ಶಂಬರಂ ಸ ಚೈತ್ಯ ತಂ ಯುಯೋಧ ಶಕ್ತಿತೋ ಬಲೀ ॥ ೧೯೫ ॥**

**ಪದಚ್ಛೇದ :- ತತಃ, ಸ್ವದಾರಾಧರ್ಷಕಂ, ಸಮಾಹ್ವಯತ್, ಯುಧೇ, ಅಂಗಜಃ । ಸಃ, ಶಂಬರಂ, ಸಃ, ಚ, ಏತ್ಯ, ತಂ, ಯುಯೋಧ, ಶಕ್ತಿತಃ, ಬಲೀ ॥**

**ಅರ್ಥ** :- **ತತಃ** = ಅನಂತರ, **ಸ್ವದಾರಾಧರ್ಷಕಂ** = ತನ್ನ ಪತ್ನಿಯನ್ನು ಬಲಾತ್ಕರಿಸಿದ, **ಶಂಬರಂ** = ಶಂಬರನನ್ನು, **ಸಃ** = ಆ, **ಅಂಗಜಃ** = ಪ್ರದ್ಯುಮ್ನನು, **ಯುಧೇ** = ಯುದ್ಧಕ್ಕೋಸ್ಕರ, **ಸಮಾಹ್ವಯತ್** = ಕರೆದ, **ಶಕ್ತಿತಃ ಬಲೀ** = ಶಕ್ತಿಯಿಂದ ಬಲಿಷ್ಠನಾದ, **ಸಃ** = ಆ ಶಂಬರನು, **ತಂ** = ಆ ಪ್ರದ್ಯುಮ್ನನನ್ನು, **ಏತ್ಯ** = ಹೊಂದಿ, **ಯುಯೋಧ** = ಕಾದಾಡಿದನು.

**ತಾತ್ಪರ್ಯ** :- ಮಂತ್ರ ಪಡೆದ ಮೇಲೆ ಪ್ರದ್ಯುಮ್ನನು ತನ್ನ ಹೆಂಡತಿಯನ್ನು ಬಲಾತ್ಕರಿಸಿದ ಶಂಬರನನ್ನು ಯುದ್ಧಕ್ಕೆ ಆಹ್ವಾನಿಸಿದ. ಬಲಿಷ್ಠನಾದ ಶಂಬರನು ಪ್ರದ್ಯುಮ್ನನ ಹತ್ತಿರ ಬಂದು ಯುದ್ಧವನ್ನು ಮಾಡಿದ.

**ಸ ಚರ್ಮಖಡ್ಗಧಾರಿಣಂ ವರಾಸ್ತ್ರಶಸ್ತ್ರಪಾದಪೈಃ ।**
**ಯದಾ ನ ಯೋದ್ಧುಮಾಶಕದ್ಧರೇಃ ಸುತಂ ನ ದೃಶ್ಯತೇ ॥ ೧೯೬ ॥**

ಪದಚ್ಛೇದ :- ಸಃ, ಚರ್ಮಖಡ್ಗಧಾರಿಣಂ, ವರಸ್ತ್ರಶಸ್ತ್ರಪಾದಪೈಃ । ಯದಾ, ನ, **ಯೋದ್ಧುಮ್, ಆಶಕತ್, ಹರೇಃ, ಸುತಂ, ನ, ದೃಶ್ಯತೇ ॥**

**ಅರ್ಥ** :- **ವರಾಸ್ತ್ರಶಸ್ತ್ರಪಾದಪೈಃ** = ಉತ್ತಮವಾದ ಶಸ್ತ್ರ ಅಸ್ತ್ರ ವೃಕ್ಷಗಳಿಂದ, **ಚರ್ಮಖಡ್ಗಧಾರಿಣಂ** = ಚರ್ಮಖಡ್ಗಗಳನ್ನು ಧರಿಸಿರುವ, **ಸಃ** = ಆ ಶಂಬರನು, **ಹರೇಃ** = ಕೃಷ್ಣನ, **ಸುತಂ** = ಮಗನಾದ ಪ್ರದ್ಯುಮ್ನನನ್ನು, **ಯೋದ್ಧುಂ** = ಯುದ್ಧ ಮಾಡಲು, **ಯದಾ** = ಯಾವಾಗಲೂ, **ನ ಆಶಕತ್** = ಸಮರ್ಥನಾಗಲಿಲ್ಲ (ಆವಾಗ), **ನ ದೃಶ್ಯತೇ** = ಅದೃಶ್ಯನಾದ.

**ತಾತ್ಪರ್ಯ** :- ಶಂಬರ ಎಂಬ ಅಸುರ ಉತ್ತಮವಾದ ಶಸ್ತ್ರ ಅಸ್ತ್ರ ವೃಕ್ಷ, ಚರ್ಮ, ಖಡ್ಗಗಳನ್ನು ಧರಿಸಿ ಯುದ್ಧ ಮಾಡಲು ಬಂದ. ಆದರೆ ಪ್ರದ್ಯುಮ್ನನನ್ನು ಸೋಲಿಸಲು ಸಾಧ್ಯವಾಗದೇ ಇದ್ದಾಗ ಅದೃಶ್ಯನಾದ.

**ಸಹಸ್ರಮಾಯಮುಲ್ಬಣಂ ತ್ವದೃಶ್ಯಮಂಬರಾದ್ ಗಿರೀನ್ ।**
**ಸೃಜಂತಮೇತ್ಯ ವಿದ್ಯಯಾ ಜಘಾನ ಕೃಷ್ಣನಂದನಃ ॥ ೧೯೭ ॥**

**ಪದಚ್ಛೇದ :- ಸಹಸ್ರ ಮಾಯಮ್, ಉಲ್ಬಣಂ, ತು, ಅದೃಶ್ಯಮ್, ಅಂಬರಾತ್, ಗಿರೀನ್ । ಸೃಜಂತಮ್, ಏತ್ಯ, ವಿದ್ಯಯಾ, ಜಘಾನ, ಕೃಷ್ಣನಂದನಃ ॥**

**ಅರ್ಥ :- ಉಲ್ಬಣಂ** = ಕ್ರೂರನಾದ, **ಸಹಸ್ರಮಾಯಂ** = ಸಾವಿರಾರು ಮಾಯೆಗಳುಳ್ಳ, (ಶಂಬರನು) **ಅದೃಶ್ಯಂ** = ಅದೃಶ್ಯನಾಗಿ, **ಅಂಬರಾತ್** = ಆಕಾಶದಿಂದ, **ಗಿರೀನ್** = ಬೆಟ್ಟಗಳನ್ನು, **ಸೃಜಂತಂ** = ಎಸೆಯುತ್ತಿರುವ, ಶಂಬರನನ್ನು, **ಏತ್ಯ** = ಹೊಂದಿ, **ಕೃಷ್ಣನಂದನಃ** = ಕೃಷ್ಣನ ಮಗನಾದ ಪ್ರದ್ಯುಮ್ನನು, **ವಿದ್ಯಯಾ** = ವಿದ್ಯೆಯ ಬಲದಿಂದ, **ಜಘಾನ** = ಹೊಡೆದನು.

**ತಾತ್ಪರ್ಯ :-** ದುಷ್ಟನಾದ ಶಂಬರನು ಅದೃಶ್ಯನಾಗಿ ಆಕಾಶದಲ್ಲಿ ನಿಂತು ಬೆಟ್ಟಗಳನ್ನು ಎಸೆಯತೊಡಗಿದನು. ಆಗ ಪ್ರಧ್ಯುಮ್ನನು ತನ್ನ ವಿದ್ಯೆಯ ಶಕ್ತಿಯಿಂದ ಶಂಬರನನ್ನು ಹೊಡೆದನು.

**ಸ ವಿದ್ಯಯಾ ವಿನಾಶಿತೋರುಮಾಯ ಆಶು ಶಂಬರಃ ।**
**ನಿಕೃತ್ತಕಂಧರೋಽಪತದ್ ವರಾಸಿನಾಽಮುನಾ ಕ್ಷಣಾತ್ ॥ ೧೯೮ ॥**

**ಪದಚ್ಛೇದ :- ಸಃ, ವಿದ್ಯಯಾ, ವಿನಾಶಿತೋರುಮಾಯ, ಆಶು, ಶಂಬರಃ । ನಿಕೃತ್ತಕಂಧರಃ, ಅಪತತ್, ವರಾಸಿನಾ, ಅಮುನಾ, ಕ್ಷಣಾತ್ ॥**

**ಅರ್ಥ :- ವಿದ್ಯಯಾ** = ವಿದ್ಯೆಯಿಂದ, **ಆಶು** = ಬೇಗನೆ, **ವಿನಾಶಿತೋರು- ಮಾಯ** = ವಿನಾಶಿತ - ನಾಶಮಾಡಲ್ಪಟ್ಟ, **ಉರು** = ಬಹಳ, **ಮಾಯ** = ಮಾಯೆಗಳುಳ್ಳ, **ಸಃ** = ಆ, **ಶಂಬರಃ** = ಶಂಬರನು, **ಅಮುನಾ** = ಪ್ರದ್ಯುಮ್ನನ, **ವರಾಸಿನಾ** = ಉತ್ತಮವಾದ ಖಡ್ಗದಿಂದ, **ಕ್ಷಣಾತ್** = ಕ್ಷಣಮಾತ್ರದಲ್ಲಿ, **ನಿಕೃತ್ತಕಂಧರಃ** = ತುಂಡರಿಸಲ್ಪಟ್ಟ ಶಿರವುಳ್ಳವನಾಗಿ, **ಅಪತತ್** = ಬಿದ್ದನು.

**ತಾತ್ಪರ್ಯ :-** ಪ್ರದ್ಯುಮ್ನನ ಮಂತ್ರವಿದ್ಯೆಯಿಂದ ಶಂಬರ ಎಲ್ಲಾ ಮಾಯೆ- ಗಳೂ ತಕ್ಷಣ ನಾಶವಾದವು. ಒಡನೆ ಶಂಬರ ಪ್ರದ್ಯುಮ್ನನ ಉತ್ತಮವಾದ ಖಡ್ಗದಿಂದ ಶಿರಚ್ಛೇದ ಹೊಂದಿ ಬಿದ್ದನು.

**ನಿಹತ್ಯ ತಂ ಹರೇಃ ಸುತಸ್ತಯೈವ ವಿದ್ಯಯಾऽಂಬರಮ್ ।**
**ಸಮಾಸ್ಥಿತಃ ಸ್ವಭಾರ್ಯಯಾ ಸಮಂ ಕುಶಸ್ಥಲೀಂ ಯಯೌ ॥ ೧೯೯ ॥**

**ಪದಚ್ಛೇದ :-** ನಿಹತ್ಯ, ತಂ, ಹರೇಃ, ಸುತಃ, ತಯಾ, ಏವ, ವಿದ್ಯಯಾ, ಅಂಬರಮ್ । ಸಮಾಸ್ಥಿತಃ, ಸ್ವ , ಭಾರ್ಯಯಾ, ಸಮಂ, ಕುಶಸ್ಥಲೀಂ, ಯಯೌ ॥

**ಅರ್ಥ :-** **ಹರೇಃ** = ಶ್ರೀಕೃಷ್ಣನ, **ಸುತಃ** = ಮಗನಾದ ಪ್ರದ್ಯುಮ್ನನು, **ತಯಾ ಏವ** = ಅದೇ, **ವಿದ್ಯಯಾ** = ವಿದ್ಯೆಯಿಂದ, **ತಂ** = ಆ ಶಂಬರನನ್ನು, **ನಿಹತ್ಯ** = ಕೊಂದು, **ಅಂಬರಂ** = ಆಕಾಶವನ್ನು, **ಸಮಾಸ್ಥಿತಃ** = ಏರಿ, **ಸಃ** = ಆ ಪ್ರದ್ಯುಮ್ನನು, **ಸ್ವ ಭಾರ್ಯಯಾ** = ತನ್ನ ಹೆಂಡತಿಯ, **ಸಮಂ** = ಜೊತೆಗೆ, **ಕುಶಸ್ಥಲೀಂ** = ದ್ವಾರಕಾ ಪಟ್ಟಣವನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ :-** ಪ್ರದ್ಯುಮ್ನ ಮಂತ್ರ ವಿದ್ಯೆಯಿಂದ ಶಂಬರನನ್ನು ಕೊಂದು ಆಕಾಶವೇರಿ ಪತ್ನಿಯೊಡನೆ ದ್ವಾರಕೆಗೆ ತೆರಳಿದ.

**ಸಮಸ್ತವೇದಿನೋರ್ಮುನಿರ್ನರಾನ್ ವಿಡಂಬಮಾನಯೋಃ ।**
**ರಮಾರಮೇಶಯೋಃ ಸುತಂ ಜಗಾದ ತಂ ಸ್ಮ ನಾರದಃ ॥ ೨೦೦ ॥**

**ಪದಚ್ಛೇದ :-** ಸಮಸ್ತ, ವೇದಿನೋಃ, ಮುನಿಃ, ನರಾನ್, ವಿಡಂಬಮಾನಯೋಃ । ರಮಾರಮೇಶಯೋಃ, ಸುತಂ, ಜಗಾದ, ತಂ, ಸ್ಮ ನಾರದಃ ॥

**ಅರ್ಥ :-** **ಸಮಸ್ತ** = ಎಲ್ಲವನ್ನು, **ವೇದಿನೋಃ** = ತಿಳಿದಿರುವ, **ಮುನಿಃ** = ಮುನಿಗಳನ್ನು, **ನರಾನ್** = ಮನುಷ್ಯರನ್ನು, **ವಿಡಂಬಮಾನಯೋಃ** = ಅನುಕರಣೆ ಮಾಡುತ್ತಿರುವ, **ರಮಾರಮೇಶಯೋಃ** = ರುಗ್ಮಿಣೀ ಕೃಷ್ಣ ಈರ್ವರಿಗೆ, **ನಾರದಃ** = ನಾರದನು, **ತಂ** = ಪ್ರದ್ಯುಮ್ನನನ್ನು, **ಸುತಂ** = ಮಗನೆಂದು, **ಜಗಾದ ಸ್ಮ** = ಹೇಳಿದನಷ್ಟೆ.

**ತಾತ್ಪರ್ಯ :-** ಸರ್ವಜ್ಞರೂ, ಉತ್ತಮ ಮನುಷ್ಯರನ್ನು ಅನುಕರಣೆ ಮಾಡುವವರೂ ಆದ, ರುಗ್ಮಿಣೀ ಕೃಷ್ಣರೀರ್ವರಿಗೆ, ನಾರದ ಮಹರ್ಷಿ ಈತ (ಪ್ರದ್ಯುಮ್ನ) ನಿಮ್ಮ ಮಗನೆಂದು ತಿಳಿಸಿದ.

**ಸ ರುಗ್ಮಿಣೀಜನಾರ್ದನಾದಿಭಿಃ ಸರಾಮಯಾದವೈಃ ।**
**ಪಿತಾಮಹೇನ ಚಾऽದರಾತ್ ಸುಲಾಲಿತೋऽವಸತ್ ಸುಖಮ್ ॥ ೨೦೧ ॥**

**ಪದಚ್ಛೇದ :- ಸಃ, ರುಗ್ಮಿಣೀಜನಾರ್ದನಾದಿಭಿಃ, ಸರಾಮಯಾದವೈಃ । ಪಿತಾಮಹೇನ, ಚ, ಆದರಾತ್, ಸುಲಾಲಿತಃ, ಅವಸತ್, ಸುಖಮ್ ॥**

**ಅರ್ಥ :- ಸಃ** = ಪ್ರದ್ಯುಮ್ನನು, **ರುಗ್ಮಿಣೀಜನಾರ್ದನಾದಿಭಿಃ** = ರುಗ್ಮಿಣೀ ಕೃಷ್ಣರಿಂದ, **ಸರಾಮಯಾದವೈಃ** = ಬಲರಾಮ ಯಾದವರಿಂದ, **ಚ** = ಮತ್ತು, **ಪಿತಾಮಹೇನ** = ತಾತನಾದ ವಸುದೇವನಿಂದ, **ಆದರಾತ್** = ಪ್ರೀತಿಯಿಂದ, **ಸುಲಾಲಿತಃ** = ಚೆನ್ನಾಗಿ ಲಾಲಿತನಾಗಿ, **ಸುಖಂ** = ಸುಖವಾಗಿ, **ಅವಸತ್** = ವಾಸ ಮಾಡಿದನು.

**ತಾತ್ಪರ್ಯ :-** ಪ್ರದ್ಯುಮ್ನನನ್ನು ರುಗ್ಮಿಣೀದೇವಿ, ಶ್ರೀಕೃಷ್ಣ, ಬಲರಾಮ, ಯಾದವರು ಹಾಗೂ ಅಜ್ಜನಾದ ವಸುದೇವ ಮೊದಲಾದವರು ಪ್ರೀತಿವಾತ್ಸಲ್ಯ-ದಿಂದ ಬೆಳಸಿದರು. ಆದಕಾರಣ ಪ್ರದ್ಯುಮ್ನ ಸುಖವಾಗಿ ಬೆಳೆದ.

**ತತಃ ಪುರಾ ಸ್ಯಮಂತಕಂ ಹ್ಯವಾಪ ಸೂರ್ಯಮಂಡಲೇ ।**
**ಸ್ಥಿತಾದ್ಧರೇಃ ಸ ಸತ್ರಜಿತ್ ಸದಾऽತ್ರ ಕೇಶವಾರ್ಚಕಃ ॥ ೨೦೨ ॥**

**ಪದಚ್ಛೇದ :- ತತಃ, ಪುರಾ, ಸ್ಯಮಂತಕಂ, ಹಿ, ಅವಾಪ, ಸೂರ್ಯಮಂಡಲೇ । ಸ್ಥಿತಾತ್, ಹರೇಃ, ಸಃ, ಸತ್ರಜಿತ್, ಸದಾ, ಅತ್ರ, ಕೇಶವಾರ್ಚಕಃ ॥**

**ಅರ್ಥ :- ತತಃ** = ಅನಂತರ, **ಸದಾ** = ಯಾವಾಗಲೂ, **ಕೇಶವಾರ್ಚಕಃ** = ಭಗವಂತನ ಆರಾಧಕನಾದ, **ಸಃ** = ಆ, **ಸತ್ರಜಿತ್** = ಸತ್ರಜಿತ್ ರಾಜನು, **ಪುರಾ** = ಹಿಂದೆ, **ಅತ್ರ** = ಹಿ, **ಸೂರ್ಯಮಂಡಲೇ** = ಸೂರ್ಯಮಂಡಲದಲ್ಲಿ **ಸ್ಥಿತಾತ್** = ಇರುವ, **ಹರೇಃ** = ಶ್ರೀಹರಿಯಿಂದ, **ಸ್ಯಮಂತಕಂ** = ಸ್ಯಮಂತಕಮಣಿಯನ್ನು, **ಅವಾಪ ಹಿ** = ಪಡೆದಿದ್ದನಷ್ಟೆ.

**ತಾತ್ಪರ್ಯ :-** ಹಿಂದೆ ಸೂರ್ಯಮಂಡಲಾಂತರ್ಗತನಾದ ನಾರಾಯಣ-ನಿಂದ ಅವನ ಆರಾಧಕನಾದ ಸತ್ರಜಿತ ರಾಜನು ಸ್ಯಮಂತಕಮಣಿಯನ್ನು ಪಡೆದಿದ್ದ.

**ಸದಾऽಸ್ಯ ವಿಷ್ಣುಭಾವಿನೋऽಪ್ಯತೀವ ಲೋಭಮಾಂತರಮ್ ।**
**ಪ್ರಕಾಶಯನ್ ರಮಾಪತಿರ್ಯಯಾಚ ಈಶ್ವರೋ ಮಣಿಮ್ ॥ ೨೦೩ ॥**

**ಪದಚ್ಛೇದ :-** ಸದಾ, ಅಸ್ಯ, ವಿಷ್ಣುಭಾವಿನಃ, ಅಪಿ, ಅತೀವ, ಲೋಭಮ್, ಅಂತರಮ್ । ಪ್ರಕಾಶಯನ್, ರಮಾಪತಿಃ, ಯಯಾಚ, ಈಶ್ವರಃ, ಮಣಿಮ್ ॥

**ಅರ್ಥ :-** ಸದಾ = ಯಾವಾಗಲೂ, ವಿಷ್ಣುಭಾವಿನೋಽಪಿ = ವಿಷ್ಣುವಿನ ಭಕ್ತನಾಗಿದ್ದರೂ, ಅಸ್ಯ = ಇವನ, ಅಂತರಂ = ಹೃದಯದಲ್ಲಿ, ಅತೀವ = ಬಹಳ, ಲೋಭಮ್ = ಆಸೆ (ಇತ್ತು), ಈಶ್ವರ = ಒಡೆಯನಾದ, ರಮಾಪತಿಃ = ಶ್ರೀಕೃಷ್ಣನು (ಈ ವಿಷಯವನ್ನು), ಪ್ರಕಾಶಯನ್ = ಪ್ರಕಟ ಪಡಿಸುವುದಕ್ಕೋಸ್ಕರ, ಮಣಿಂ = ಸ್ಯಮಂತಕ ಮಣಿಯನ್ನು, ಯಯಾಚ = ಬೇಡಿದನು.

**ತಾತ್ಪರ್ಯ :-** ಸತ್ರಾಜಿತನು ಯಾವಾಗಲೂ ವಿಷ್ಣುಭಕ್ತನಾಗಿದ್ದರೂ ತುಂಬಾ ದುರಾಸೆವುಳ್ಳವನಾಗಿದ್ದನು. ಈ ವಿಷಯವನ್ನು ಜಗತ್ತಿಗೆ ಪ್ರಕಟಪಡಿಸಬೇಕೆಂದು ಶ್ರೀಕೃಷ್ಣನು ಸ್ಯಮಂತಕ ಮಣಿಯನ್ನು ಬೇಡಿದರು.

**ಸ ತಂ ನ ದತ್ತವಾಂಸ್ತತೋಽನುಜೋ ನಿಬದ್ಧ್ಯ ತಂ ಮಣಿಮ್ ।**
**ವನಂ ಗತಃ ಪ್ರಸೇನಕೋ ಮೃಗಾಧಿಪೇನ ಪಾತಿತಃ ॥ ೨೦೪ ॥**

**ಪದಚ್ಛೇದ :-** ಸಃ, ತಂ, ನ, ದತ್ತವಾನ್, ತತಃ, ಅನುಜಃ, ನಿಬಧ್ಯ, ತಂ, ಮಣಿಮ್ । ವನಂ ಗತಃ, ಪ್ರಸೇನಕಃ, ಮೃಗಾಧಿಪೇನ, ಸೂದಿತಃ ॥

**ಅರ್ಥ :-** ತತಃ = ಅನಂತರ, ಸಃ = ಆ ಸತ್ರಾಜಿತನು, ತಂ = ಆ ಮಣಿ-ಯನ್ನು, ನ ದತ್ತವಾನ್ = ಕೊಡಲಿಲ್ಲ, ಅನುಜಃ = ತಮ್ಮನಾದ ಪ್ರಸೇನನು, ತಂ = ಆ, ಮಣಿಮ್ = ಸ್ಯಮಂತಕ ಮಣಿಯನ್ನು, ನಿಬಧ್ಯ = ಧರಿಸಿ, ವನಂಗತಃ = ಕಾಡನು ಕುರಿತು ಹೋದ, ಪ್ರಸೇನಕಃ = ಪ್ರಸೇನನು, ಮೃಗಾಧಿಪೇನ = ಸಿಂಪದಿಂದ, ಸೂದಿತಃ = ಹತನಾದನು.

**ತಾತ್ಪರ್ಯ :-** ಸತ್ರಾಜಿತ್ ಕೃಷ್ಣನಿಗೆ ಸ್ಯಮಂತಕಮಣಿಯನ್ನು ಕೊಡಲಿಲ್ಲ. ಅವನ ತಮ್ಮ ಪ್ರಸೇನ ಆ ಮಣಿಯನ್ನು ಧರಿಸಿ ಕಾಡಿಗೆ ಹೋಗಿ ಸಿಂಹದಿಂದ ಹತನಾದ.

**ತದಾ ಸ ಸತ್ರಜಿದ್ಧರಿಂ ಶಶಂಸ ಸೋದರಾಂತಕಮ್ ।**
**ಉಪಾಂಶು ವರ್ತ್ಮನಾ ತತೋ ಹರಿಃ ಸಯಾದವೋ ಯಯೌ ॥ ೨೦೫ ॥**

ಪದಚ್ಛೇದ :- ತದಾ, ಸಃ, ಸತ್ಯಜಿತ್, ಹರಿಂ, ಶಶಂಸ, ಸೋದರಾಂತಕಮ್ ।
ಉಪಾಂಶು, ವರ್ತನಾ, ತತಃ, ಹರಿಃ, ಸಯಾದವಃ, ಯಯೌ ॥

ಅರ್ಥ :- ತದಾ = ಆಗ, ಸಃ = ಆ, ಸತ್ಯಜಿತ್ = ಸತ್ಯಜಿತ್ ಎಂಬುವನು, ಹರಿಂ = ಕೃಷ್ಣನನ್ನು, ಸೋದರಾಂತಕಂ = ತಮ್ಮನಾದ ಪ್ರಸೇನನ ಹಂತಕನು, ಉಪಾಂಶು = ಮೆಲ್ಲನೆ, ಶಶಂಸ = ಹೇಳಿದನು, ತತಃ = ಅನಂತರ, ಹರಿಃ = ಕೃಷ್ಣನು, ಸಯಾದವಃ = ಯಾದವರೊಂದಿಗೆ, ವರ್ತ್ಮನಾ = ಪ್ರಸೇನ ಹೋದ ದಾರಿಯಿಂದ, ಯಯೌ = ಕಾಡಿಗೆ ಹೊರಟನು.

ತಾತ್ಪರ್ಯ :- ಸತ್ರಜಿತ್ ರಾಜನು ತನ್ನ ತಮ್ಮನಾದ ಪ್ರಸೇನನನ್ನು ಕೊಂದವನು ಶ್ರೀಕೃಷ್ಣ ಎಂದು ನಿಧಾನವಾಗಿ ಹೇಳಿದನು. ಆಗ ಶ್ರೀಕೃಷ್ಣನು ಯಾದವರೊಂದಿಗೆ ಪ್ರಸೇನ ಹೋದ ಮಾರ್ಗದಲ್ಲಿಯೇ ಹೋದನು.

ವನೇ ಸ ಸಿಂಹಸೂದಿತಂ ಪದ್ಯೈಃ ಪ್ರದರ್ಶ್ಯ ವೃಷ್ಣಿನಾಮ್ ।
ಪ್ರಸೇನಮೃಕ್ಷಪಾತಿತಂ ಸ ಸಿಂಹಮಪ್ಯದರ್ಶಯತ್ ॥ ೨೦೬ ॥

ಪದಚ್ಛೇದ :- ವನೇ, ಸಃ, ಸಿಂಹಸೂದಿತಂ, ಪದ್ಯೈಃ, ಪದರ್ಶ್ಯ, ವೃಷ್ಣಿನಾಮ್ ।
ಪ್ರಸೇನಮ್, ಋಕ್ಷಪಾತಿತಂ, ಸಃ, ಸಿಂಹಂ, ಅಪಿ, ಅದರ್ಶಯತ್ ॥

ಅರ್ಥ :- ಸಃ = ಶ್ರೀಕೃಷ್ಣನು, ವೃಷ್ಣಿನಾಮ್ = ಯಾದವರಿಗೆ, ವನೇ = ಕಾಡಿನಲ್ಲಿ, ಪ್ರಸೇನಂ = ಪ್ರಸೇನನನ್ನು, ಸಿಂಹಸೂದಿತಂ = ಸಿಂಹದಿಂದ ಹತನಾಗಿದ್ದದ್ದನ್ನು, ಪದ್ಯೈಃ = ಹೆಜ್ಜೆಗಳ ಗುರುತುಗಳಿಂದ, ಪ್ರದರ್ಶ್ಯ = ತೋರಿಸಿ, ಸಃ = ಆ ಕೃಷ್ಣನು, ಋಕ್ಷಪಾತಿತಂ = ಕರಡಿಯಿಂದ ಹತವಾದ, ಸಿಂಹಂ ಅಪಿ = ಸಿಂಪವನ್ನು, ಅದರ್ಶಯತ್ = ತೋರಿಸಿದನು.

ತಾತ್ಪರ್ಯ :- ಕಾಡಿನಲ್ಲಿ ಹೋಗುವಾಗ ಪ್ರಸೇನನು ಸಿಂಹದಿಂದ ಕೊಲ್ಲಲ್ಪಟ್ಟಿದ್ದಾನೆ ಎಂದು ಸಿಂಹದ ಗುರುತುಗಳಿಂದ ತೋರಿಸಿ, ನಂತರ ಈ ಸಿಂಹವು ಒಂದು ಕರಡಿಯಿಂದ ಕೊಲ್ಲಲ್ಪಟ್ಟಿದೆ ಎಂದು ತೋರಿಸಿದನು.

ತತೋ ನಿಧಾಯ ತಾನ್ ಬಿಲಂ ಸ ಜಾಂಬವತ್ಪರಿಗ್ರಹಮ್ ।
ವಿವೇಶ ತತ್ರ ಸಂಯುಗಂ ಬಭೂವ ತೇನ ಚೇಶಿತುಃ ॥ ೨೦೭ ॥

**ಪದಚ್ಛೇದ :**– **ತತಃ, ನಿಧಾಯ, ತಾನ್, ಬಿಲಂ, ಸಃ, ಜಾಂಬವತ್ । ಪರಿಗ್ರಹಮ್, ವಿವೇಶ, ತತ್ರ, ಸಂಯುಗಂ, ಬಭೂವ, ತೇನ, ಚೇಶಿತುಃ ॥**

**ಅರ್ಥ :**- **ತತಃ** = ಅನಂತರ, **ತಾನ್** = ಆ ಯಾದವರನ್ನು, **ನಿಧಾಯ** = ಹೊರಗೆ ನಿಲ್ಲಿಸಿ, **ಸಃ** = ಆ ಶ್ರೀಕೃಷ್ಣನು, **ಜಾಂಬವತ್ಪರಿಗ್ರಹಂ** = ಜಾಂಬವಂತನ ಮನೆಯಾದ, **ಬಿಲಂ** = ಗುಹೆಯನ್ನು, **ವಿವೇಶ** = ಪ್ರವೇಶಿಸಿದನು, **ತತ್ರ** = ಅಲ್ಲಿ, **ತೇನ ಸಂಯುಗಂ** = ಜಾಂಬವಂತನೊಡನೆ, **ಚೇಶಿತುಃ** = ಯುದ್ಧವು, **ಬಭೂವ** = ನಡೆಯಿತು.

**ತಾತ್ಪರ್ಯ :**- ಬಳಿಕ ಶ್ರೀಕೃಷ್ಣನು ಯಾದವರನ್ನು ಹೊರಗೆ ನಿಲ್ಲಿಸಿ ಗುಹೆಯನ್ನು ಪ್ರವೇಶಮಾಡಿ, ಅಲ್ಲಿರುವ ಜಾಂಬವಂತನೊಡನೆ ಯುದ್ಧ ಮಾಡಿದನು.

**ಯುಯೋಧ ಮಂದಮೇವ ಸ ಪ್ರಭುಃ ಸ್ವಭಕ್ತ ಇತ್ಯಜಃ ।**
**ಚಕಾರ ಚೋಗ್ರಮಂತತಃ ಪ್ರಕಾಶಯನ್ ಸ್ವಮಸ್ಯ ಹಿ ॥ ೨೦೮ ॥**

**ಪದಚ್ಛೇದ :**– **ಯುಯೋಧ, ಮಂದಮ್, ಏವ, ಸಃ, ಪ್ರಭುಃ, ಸ್ವಭಕ್ತಃ, ಇತಿ, ಅಜಃ । ಚಕಾರ, ಚ, ಉಗ್ರಮ್, ಅಂತತಃ, ಪ್ರಕಾಶಯನ್, ಸ್ವಮ್, ಅಸ್ಯ, ಹಿ ॥**

**ಅರ್ಥ :**- **ಅಜಃ** = ಜನ್ಮರಹಿತನಾದ, **ಪ್ರಭುಃ** = ಸ್ವಾಮಿಯಾದ, **ಸಃ** = ಆ ಶ್ರೀಕೃಷ್ಣನು, **ಸ್ವಭಕ್ತಃ ಇತಿ** = ಜಾಂಬವಂತನು ನನ್ನ ಭಕ್ತನೆಂದು, **ಮಂದಂ** = ನಿಧಾನವಾಗಿ, **ಯುಯೋಧ** = ಯುದ್ಧ ಮಾಡಿದನು, **ಚ** = ಮತ್ತು, **ಅಂತತಃ** = ಕೊನೆಗೆ, **ಅಸ್ಯ** = ಇವನಿಗೆ, **ಸ್ವಂ** = ತನ್ನ ಸ್ವರೂಪವನ್ನು, **ಪ್ರಕಾಶಯನ್** = ತೋರಿಸುವುದಕ್ಕಾಗಿ, **ಉಗ್ರಂ** = ಭಯಂಕರವಾಗಿ, **ಚಕಾರ** = ಯುದ್ಧ ಮಾಡಿದ.

**ತಾತ್ಪರ್ಯ :**- ಜರಾಮರಣ ಜನ್ಮಾದಿಗಳಿಲ್ಲದ ಶ್ರೀಕೃಷ್ಣನು ಆರಂಭದಲ್ಲಿ ಜಾಂಬವಂತನು ತನ್ನ ಭಕ್ತನೆಂದು ಮೆಲ್ಲನೆ ಯುದ್ಧ ಮಾಡಿದನು. ಅನಂತರ ತನ್ನ ಸ್ವರೂಪ ತೋರಿಸಬೇಕೆಂದು ಕೊನೆಯಲ್ಲಿ ಭಯಂಕರವಾಗಿ ಯುದ್ಧ ಮಾಡಿದನು.

**ಸ ಮುಷ್ಟಿಪಿಷ್ಟವಿಗ್ರಹೋ ನಿತಾಂತಮಾಪದಂ ಗತಃ ।**
**ಜಗಾಮ ಚೇತಸಾऽऽಶರಣಂ ರಘೂತ್ತಮಂ ನಿಜಂ ಪತಿಂ ಗತಿಮ್ ॥ ೨೦೯ ॥**

ಪದಚ್ಛೇದ :- ಸಃ, ಮುಷ್ಟಿಪಿಷ್ಟವಿಗ್ರಹಃ, ನಿತಾಂತಮ್, ಆಪದಂ, ಗತಃ । ಜಗಾಮ, ಚೇತಸಾ, ಅರಣಂ, ರಘೂತ್ತಮಂ, ನಿಜಂ, ಪತಿಮ್ ॥

ಅರ್ಥ :- ಮುಷ್ಟಿಪಿಷ್ಟವಿಗ್ರಹಃ = ಮುಷ್ಟಿಯಿಂದ ಪುಡಿಯಾದ ಶರೀರ-ವುಳ್ಳ, ಸಃ = ಜಾಂಬವಂತನು, ನಿತಾಂತಂ = ಬಹಳ, ಆಪದಂ ಗತಃ = ಆಪತ್ತು ಹೊಂದಿದಾಗ, ನಿಜಂ = ತನ್ನ, ಪತಿಂ = ಸ್ವಾಮಿಯಾದ, ಅರಣಂ = ರಕ್ಷಕನಾದ, ರಘೂತ್ತಮಂ = ರಘುಕುಲೋತ್ತಮನಾದ ಶ್ರೀರಾಮನನ್ನು, ಚೇತಸಾ = ಮನಸ್ಸಿನಿಂದ, ಜಗಾಮ = ಶರಣು ಹೊಂದಿದ.

ತಾತ್ಪರ್ಯ :- ಶ್ರೀಕೃಷ್ಣನ ಮುಷ್ಟಿಯ ಹೊಡೆತದಿಂದ ಜರ್ಜರಿತವಾದ ಶರೀರವುಳ್ಳ ಜಾಂಬವಂತ ಪ್ರಾಣಾಪಾಯ ಪರಿಸ್ಥಿತಿ ಬಂದಾಗ ಮನಸ್ಸಿನಲ್ಲಿ ತನ್ನ ಸ್ವಾಮಿಯಾದ ಶ್ರೀರಾಮನನ್ನು ಶರಣು ಹೋದ.

**ಸ್ಮೃತಿಂ ಗತೇ ತು ರಾಘವೇ ತದಾಕೃತಿಂ ಯದೂತ್ತಮೇ ।**
**ಸಮಸ್ತಭೇದವರ್ಜಿತಾಂ ಸಮೀಕ್ಷ್ಯ ಸೋಽಯಮಿತ್ಯವೈತ್ ॥ ೨೧೦ ॥**

ಪದಚ್ಛೇದ :- ಸ್ಮೃತಿಂ, ಗತೇ, ತು, ರಾಘವೇ, ತದಾ, ಆಕೃತಿಂ, ಯತ್, ಉತ್ತಮೇ । ಸಮಸ್ತಭೇದವರ್ಜಿತಾಂ, ಸಮೀಕ್ಷ್ಯ, ಸಃ, ಅಯಮ್, ಇತಿ, ಅವೈತ್ ॥

ಅರ್ಥ :- ತದಾ = ಆವಾಗ, ಉತ್ತಮೇ = ಉತ್ತಮನಾದ, ರಾಘವೇ = ಶ್ರೀರಾಮನದಲ್ಲಿ, ಸ್ಮೃತಿಂ ಗತೇತು = ಸ್ಮರಿಸುತ್ತಿರಲು, ಯತ್ = ಯಾವ, ಸಮಸ್ತಭೇದವರ್ಜಿತಾಂ = ಶ್ರೀಕೃಷ್ಣ ಶ್ರೀರಾಮಗಳಲ್ಲಿ ಭೇದ ರಹಿತವಾದ, ಆಕೃತಿಂ = ಆಕೃತಿಯನ್ನು, ಸಮೀಕ್ಷ್ಯ = ಕಂಡು, ಸಃ = ಅವನೇ (ಶ್ರೀರಾಮನೇ), ಅಯಂ = ಇವನು (ಶ್ರೀಕೃಷ್ಣ), ಇಂತಿ = ಎಂಬುದಾಗಿ, ಅವೈತ್ = ತಿಳಿದನು.

ತಾತ್ಪರ್ಯ :- ಜಾಂಬವಂತ ಶ್ರೀರಾಮನನ್ನು ಸ್ಮರಿಸಿದಾಗ ಸಕಲ ಭೇದ-ವರ್ಜಿತವಾದ ಶ್ರೀರಾಮನ ಆಕೃತಿಯನ್ನು ಕೃಷ್ಣನಲ್ಲಿ ಕಂಡು ಅವನೇ ಇವನೆಂದು ತಿಳಿದ.

**ತತಃ ಕ್ಷಮಾಪಯನ್ ಸುತಾಂ ಪ್ರದಾಯ ರೋಹಿಣೀಂ ಶುಭಾಮ್ ।**
**ಮಣಿಂ ಚ ತಂ ಸುನಾವ ಸ ಪ್ರಪನ್ನ ಆಶು ಪಾದಯೋಃ ॥ ೨೧೧ ॥**

**ಪದಚ್ಛೇದ** :- ತತಃ, ಕ್ಷಮಾಪಯನ್, ಸುತಾಂ, ಪ್ರದಾಯ, ರೋಹಿಣೀಂ, ಶುಭಾಮ್ । ಮಣಿಂ, ಚ, ತಂ, ನುನಾವ, ಸಃ, ಪ್ರಪನ್ನ, ಆಶು, ಪಾದಯೋಃ ॥

**ಅರ್ಥ** :- **ತತಃ** = ಅನಂತರ, **ಸಃ** = ಜಾಂಬವಂತ, **ಕ್ಷಮಾಪಯನ್** = ಕ್ಷಮೆ ಬೇಡುತ್ತಾ, **ಆಶು** = ಬೇಗನೆ, **ಪಾದಯೋಃ** = ಕಾಲುಗಳಿಗೆ, **ಪ್ರಪನ್ನಃ** = ಬಿದ್ದು, **ಶುಭಾಂ** = ಮಂಗಳಕರಳಾದ, **ಸುತಾಂ** = ಮಗಳಾದ, **ರೋಹಿಣೀಂ** = ರೋಹಿಣಿಯನ್ನು, **ಚ** = ಮತ್ತು, **ತಂ** = ಆ, **ಮಣಿಂ** = ಸ್ಯಮಂತಮಣಿಯನ್ನು, **ಪ್ರದಾಯ** = ಕೊಟ್ಟು, **ನುನಾವ** = ಸ್ತೋತ್ರ ಮಾಡಿದ.

**ತಾತ್ಪರ್ಯ** :- ಬಳಿಕ ಜಾಂಬವಂತ ಬೇಗನೆ ಕೃಷ್ಣನಲ್ಲಿ ಕ್ಷಮೆ ಬೇಡುತ್ತಾ ಪಾದಗಳಲ್ಲಿ ಬಿದ್ದು, ಮಂಗಳಕರಳಾದ ರೋಹಿಣಿ ಎಂಬ ಮಗಳನ್ನೂ ಸ್ಯಮಂತಕ ಮಣಿಯನ್ನು ಕೊಟ್ಟು ಸ್ತೋತ್ರ ಮಾಡಿದ.

**ವಿಧಾಯ ಚಕ್ರದಾರಿತಂ ಸುಜೀರ್ಣದೇಹಮಸ್ಯ ಸಃ ।**
**ಯುವಾನಮಾಶು ಕೇಶವಶ್ಚಕಾರ ವೇದನಾಂ ವಿನಾ ॥ ೨೧೨ ॥**

**ಪದಚ್ಛೇದ** :- ವಿಧಾಯ, ಚಕ್ರದಾರಿತಂ, ಸುಜೀರ್ಣದೇಹಮ್, ಅಸ್ಯ, ಸಃ । ಯುವಾನಮ್, ಆಶು, ಕೇಶವಃ, ಚಕಾರ, ವೇದನಾಂ, ವಿನಾ ॥

**ಅರ್ಥ** :- **ಸಃ ಕೇಶವಃ** = ಶ್ರೀಕೃಷ್ಣನು, **ಅಸ್ಯ** = ಜಾಂಬವಂತನ, **ಸುಜೀರ್ಣಂ** = ಜೀರ್ಣ ಶಿಥಿಲವಾದ, **ದೇಹಂ** = ಶರೀರವನ್ನು, **ವೇದನಾಂ ವಿನಾ** = ನೋವಾಗದಂತೆ, **ಚಕ್ರದಾರಿತಂ ವಿಧಾಯ** = ಚಕ್ರದಿಂದ ಸೀಳಿ, **ಆಶು** = ಬೇಗನೆ, **ಯುವಾನಂ** = ಯುವಕನನ್ನಾಗಿ, **ಚಕಾರ** = ಮಾಡಿದ.

**ತಾತ್ಪರ್ಯ** :- ಶ್ರೀಕೃಷ್ಣ ಜಾಂಬವಂತನ ಶಿಥಿಲವಾದ ದೇಹವನ್ನು ನೋವಾಗದಂತೆ ಚಕ್ರದಿಂದ ಸೀಳಿ ಬೇಗನೆ ಯುವಕನನ್ನಾಗಿ ಮಾಡಿದ.

**ವಿಧಾಯ ಭಕ್ತವಾಂಛಿತಂ ಪ್ರಿಯಾಸಹಾಯ ಈಶ್ವರಃ ।**
**ಪ್ರಗೃಹ್ಯ ತಂ ಮಹಾಮಣಿಂ ವಿನಿರ್ಯಯೌ ಗುಹಾಮುಖಾತ್ ॥ ೨೧೩ ॥**

ಪದಚ್ಛೇದ :- ವಿಧಾಯ, ಭಕ್ತವಾಂಛಿತಂ, ಪ್ರಿಯಾಸಹಾಯ, ಈಶ್ವರಃ । ಪ್ರಗೃಹ್ಯ, ತಂ, ಮಹಾಮಣಿಂ, ವಿನಿರ್ಯಯೌ, ಗುಹಾಮುಖಾತ್ ॥

**ಅರ್ಥ** :- **ಈಶ್ವರಃ** = ಒಡೆಯನಾದ ಶ್ರೀಕೃಷ್ಣನು, **ಭಕ್ತವಾಂಛಿತಂ** = ಭಕ್ತನ ಬಯಕೆಯನ್ನು, **ವಿಧಾಯ** = ಪೂರೈಸಿ, **ಪ್ರಿಯಾಸಹಾಯ** = ಪ್ರಿಯೆಯೊಡನೆ, **ತಂ** = ಆ, **ಮಹಾಮಣಿಂ** = ಸ್ಯಮಂತಕಮಣಿಯನ್ನು, **ಪ್ರಗೃಹ್ಯ** = ತೆಗೆದುಕೊಂಡು, **ಗುಹಾಮುಖಾತ್** = ಗುಹಾದ್ವಾರದಿಂದ, **ವಿನಿರ್ಯಯೌ** = ಹೊರಗೆ ಬಂದನು.

**ತಾತ್ಪರ್ಯ** :- ಶ್ರೀಕೃಷ್ಣ ಹೀಗೆ ಭಕ್ತನ ಬಯಕೆಯನ್ನು ಈಡೇರಿಸಿ ಆ ಮಣಿ- ಯನ್ನು ತೆಗೆದುಕೊಂಡು ಪ್ರಿಯೆಯೊಡನೆ ಗುಹಾದ್ವಾರದಿಂದ ಹೊರಗೆ ಬಂದ.

**ಗುಹಾಂಪ್ರವಿಷ್ಟಮೀಶ್ವರಂ ಬಹೂನ್ಯಹಾನ್ಯನಿರ್ಗತಮ್ ।**
**ಪ್ರತೀಕ್ಷ್ಯ ಯಾದವಾಸ್ತು ಯೇ ಗತಾ ಗೃಹಂ ತದಾಽಹೃಷುಃ ॥ ೨೧೪ ॥**

**ಪದಚ್ಛೇದ** :- **ಗುಹಾಂ, ಪ್ರವಿಷ್ಟಮ್, ಈಶ್ವರಂ, ಬಹೂನಿ, ಅಹಾನಿ, ಅನಿರ್ಗತಮ್ । ಪ್ರತೀಕ್ಷ್ಯ, ಯಾದವಾಃ, ತು, ಯೇ, ಗತಾಃ, ಗೃಹಂ, ತದಾ, ಅಹೃಷುಃ ॥**

**ಅರ್ಥ** :- **ಗುಹಾಂ** = ಗುಹೆಯನ್ನು, **ಪ್ರವಿಷ್ಟಂ** = ಪ್ರವೇಶಿಸಿದ, **ಬಹೂನಿ** = ಬಹಳ, **ಅಹಾನಿ** = ದಿನಗಳು, **ಅನಿರ್ಗತಂ** = ಬರದಿರುವ, **ಈಶ್ವರಂ** = ಶ್ರೀಕೃಷ್ಣನನ್ನು, **ಪ್ರತೀಕ್ಷ್ಯ** = ನೋಡಿಯೇ, **ಯೇ** = ಯಾವ, **ಯಾದವಾಃ ತು** = ಯಾದವರಾದರೂ, **ಗೃಹಂ ಗತಾಃ** = ಮನೆಗೆ ಹಿಂತಿರುಗಿದ್ದರು, **ತದಾ** = ಕೃಷ್ಣ ತಿರುಗಿಬಂದಾಗ, **ಅಹೃಷುಃ** = ಹರ್ಷಗೊಂಡರು.

**ತಾತ್ಪರ್ಯ** :- ಗುಹೆಯನ್ನು ಪ್ರವೇಶಿಸಿದ ಕೃಷ್ಣ ಬಹುದಿನಗಳಾದರೂ ಹೊರಗೆ ಬಾರದಿದ್ದಾಗ ಕಾದು ಕೊನೆಗೆ ಮನೆಗೆ ಹಿಂತಿರುಗಿದ್ದರು ಯಾದವರು ಕೃಷ್ಣ ತಿರುಗಿ ಬಂದಾಗ ಹರ್ಷಗೊಂಡರು.

**ಸಮಸ್ತವೃಷ್ಣಿಸನ್ನಿಧೌ ಯದೂತ್ತಮಃ ಸ್ಯಮಂತಕಮ್ ।**
**ದದೌ ಚ ಸತ್ರಜಿತ್ಕರೇ ಸ ವಿಚ್ಛವಿರ್ಬಭೂವ ಹ ॥ ೨೧೫ ॥**

**ಪದಚ್ಛೇದ** :- **ಸಮಸ್ತವೃಷ್ಣಿಸನ್ನಿಧೌ, ಯತ್, ಉತ್ತಮಃ, ಸ್ಯಮಂತಕಮ್ । ದದೌ, ಚ, ಸತ್ರಜಿತ್ಕರೇ, ಸಃ, ವಿಚ್ಛವಿಃ, ಬಭೂತ, ಹ ॥**

**ಅರ್ಥ** :- **ಸಮಸ್ತವೃಷ್ಣಿಸನ್ನಿಧೌ** = ಎಲ್ಲ ಯಾದವರ ಸಮ್ಮುಖದಲ್ಲಿ, **ಯತ್** = ಯಾವ, **ಉತ್ತಮಃ** = ಉತ್ತಮವಾದ, **ಸ್ಯಮಂತಕಂ** = ಸ್ಯಮಂತಕ-ಮಣಿಯನ್ನು **ಸತ್ರಜಿತ್ತರೇ** = ಸತ್ರಜಿತ್‌ರಾಜನ ಕೈಯಲ್ಲಿ, **ದದೌ** = ಕೊಟ್ಟನು, **ಚ** = ಮತ್ತು, **ಸಃ** = ಸತ್ರಜಿತ್‌ರಾಜನು, **ವಿತ್ವಿಃ** = ನಷ್ಟವಾದ ಕಾಂತಿಯನ್ನು, **ಬಭೂವ** = ಹೊಂದಿದ, **ಹ** = ಆಶ್ಚರ್ಯವು.

**ತಾತ್ಪರ್ಯ** :- ಎಲ್ಲಾ ಯಾದವರು ಇರುವಾಗ ಸ್ಯಮಂತಕಮಣಿಯನ್ನು ಸತ್ರಜಿತ್‌ರಾಜನು ಕೊಟ್ಟು, ಕಾಂತಿಯನ್ನು ಕಳೆದುಕೊಂಡ.

**ಸ ದುರ್ಯಶೋ ರಮಾಪತಾವನೂಚ್ಯ ಮಿಥ್ಯಯಾ ತಪನ್ ।**
**ಸ್ವಪಾಪಹಾನಕಾಂಕ್ಷಯಾ ದದೌ ಸುತಾಂ ಜನಾರ್ದನೇ ॥ ೨೧೬ ॥**

ಪದಚ್ಛೇದ :- ಸಃ, ದುರ್ಯಶಃ, ರಮಾಪತೌ, ಅನೂಚ್ಯ, ಮಿಥ್ಯಯಾ, ತಪನ್ । ಸ್ವಪಾಪಹಾನಿಕಾಂಕ್ಷಯಾ, ದದೌ, ಸುತಾಂ, ಜನಾರ್ದನೇ ॥

**ಅರ್ಥ** :- **ಸಃ** = ಆ ಸತ್ರಾಜಿತನು, **ರಮಾಪತೌ** = ಶ್ರೀಕೃಷ್ಣನ ಮೇಲೆ, **ಮಿಥ್ಯಯಾ** = ನಿಷ್ಕಾರಣವಾಗಿ, **ದುರ್ಯಶಃ** = ಅಪಕೀರ್ತಿ, **ಅನೂಚ್ಯ** = ಹೊರಿಸಿ, **ತಪನ್** = ಪಶ್ಚಾತ್ತಾಪಗೊಂಡು, **ಸ್ವಪಾಪಹಾನಿಕಾಂಕ್ಷಯಾ** = ತನ್ನ ಪಾಪ ಪರಿಹಾರ ಮಾಡಿಕೊಳ್ಳಬೇಕೆಂಬ ಅಪೇಕ್ಷೆಯಿಂದ, **ಜನಾರ್ದನೇ** = ಶ್ರೀಕೃಷ್ಣನಿಗೆ, **ಸುತಾಂ** = ಮಗಳನ್ನು, **ದದೌ** = ಕೊಟ್ಟನು.

**ತಾತ್ಪರ್ಯ** :- ಸತ್ರಾಜಿತನು ಕೃಷ್ಣನ ಮೇಲೆ ನಿಷ್ಕಾರಣವಾಗಿ ಅಪಕೀರ್ತಿ ಹೊರಿಸಿ ಪಶ್ಚಾತ್ತಾಪಗೊಂಡು ತನ್ನ ಪಾಪ ಪರಿಹರಿಸಿಕೊಳ್ಳುವ ಇಚ್ಛೆಯಿಂದ ಮಗಳನ್ನು ಕೃಷ್ಣನಿಗಿತ್ತ.

**ಮಣಿಂ ಚ ತಂ ಪ್ರದಾಯ ತಂ ನನಾಮ ಹ ಕ್ಷಮಾಪಯನ್ ।**
**ಮಣಿಂ ಪುನರ್ದದೌ ಹರಿರ್ಮುಮೋದ ಸತ್ಯಭಾಮಯಾ ॥ ೨೧೭ ॥**

ಪದಚ್ಛೇದ :- ಮಣಿಂ, ಚ, ತಂ, ಪ್ರದಾಯ, ತಂ, ನನಾಮ, ಚ, ಕ್ಷಮಾಪಯನ್ । ಮಣಿಂ, ಪುನಃ, ದದೌ, ಹರಿಃ, ಮುಮೋದ, ಸತ್ಯಭಾಮಯಾ ॥

**ಅರ್ಥ** :- **ಚ** = ಮತ್ತು, **ತಂ** = ಆ, **ಮಣಿಂ** = ಮಣಿಯನ್ನು, **ಪ್ರದಾಯ** = ಕೊಟ್ಟು, **ಚ** = ಮತ್ತು, **ತಂ** = ಆ ಶ್ರೀಕೃಷ್ಣನನ್ನು, **ಕ್ಷಮಾಪಯನ್** = ಕ್ಷಮೆ

ಬೇಡುತ್ತ, ನನಾಮ = ನಮಿಸಿದನು, ಹರಿಃ = ಶ್ರೀಕೃಷ್ಣನು, ಮಣಿಂ = ಮಣಿಯನ್ನು, ದದೌ = ಮರಳಿ ಕೊಟ್ಟನು, ಪುನಃ = ಆದರೆ, ಸತ್ಯಭಾಮಯಾ = ಸತ್ಯಭಾಮೆಯಿಂದ, ಮುಮೋದ = ಸಂತುಷ್ಟನಾದ.

ತಾತ್ಪರ್ಯ :- ಸತ್ರಾಜಿತ ಮಣಿಯನ್ನು ಕೃಷ್ಣನಿಗೆ ಕೊಟ್ಟು ಕ್ಷಮೆ ಬೇಡುತ್ತಾ ನಮಿಸಿದ, ಆದರೆ ಕೃಷ್ಣ ಮಣಿಯನ್ನು ತಿರುಗಿ ಸತ್ರಾಜಿತನಿಗೆ ಕೊಟ್ಟ, ಸತ್ಯಭಾಮೆಯಿಂದಲೇ ಸಂತುಷ್ಟನಾದ.

**ರಮ್ಯೈವ ಸಾ ಹಿ ಭೂರಿತಿ ದ್ವಿತೀಯಮೂರ್ತಿರುತ್ತಮಾ ।**
**ಬಭೂವ ಸತ್ರಜಿತ್ಸುತಾ ಸಮಸ್ತಲೋಕಸುಂದರೀ ॥ ೨೧೮ ॥**

ಪದಚ್ಛೇದ :- ರಮಾ, ಏವ, ಸಾ, ಹಿ, ಭೂಃ, ಇತಿ, ದ್ವಿತೀಯಮೂರ್ತಿಃ, ಉತ್ತಮಾ । ಬಭೂವ, ಸತ್ರಜಿತ್‌ಸುತಾ, ಸಮಸ್ತಲೋಕಸುಂದರೀ ॥

ಅರ್ಥ :- ಭೂಃ ಇತಿ = ಭೂ ಎಂಬ, ಉತ್ತಮಾ = ಉತ್ತಮಳಾದ, ದ್ವಿತೀಯಾ = ಎರಡನೇ ರೂಪದ, ರಮಾ ಏವ = ರಮೆಯೆ, ಸಮಸ್ತಲೋಕ-ಸುಂದರೀ = ಸಕಲಲೋಕ ಸುಂದರಿಯಾದ ಸತ್ಯಭಾಮೆಯಾಗಿ, ಸತ್ರಜಿತ್ = ಸತ್ರಜಿತ್ ರಾಜನ, ಸುತಾ = ಮಗಳಾಗಿ, ಬಭೂವ = ಅವತರಿಸಿದ್ದಳು.

ತಾತ್ಪರ್ಯ :- ಭೂ ರೂಪಳಾದ ರಮಾದೇವಿಯೇ ಸಕಲ ಲೋಕ ಸುಂದರಿಯಾದ ಸತ್ಯಭಾಮೆಯಾಗಿ ಸತ್ರಾಜಿತನ ಮಗಳಾಗಿ ಅವತರಿಸಿದಳು.

**ತತೋ ಹಿ ಸಾ ಚ ರುಗ್ಮಿಣೀ ಪ್ರಿಯೇ ಪ್ರಿಯಾಸು ತೇಽಧಿಕಮ್ ।**
**ಜನಾರ್ದನಸ್ಯ ತೇ ಹರೇಃ ಸದಾವಿಯೋಗಿನೀ ಯತಃ ॥ ೨೧೯ ॥**

ಪದಚ್ಛೇದ :- ತತಃ, ಹಿ, ಸಾ, ಚ, ರುಗ್ಮಿಣೀ, ಪ್ರಿಯೇ, ಪ್ರಯಾಸು, ತೇ, ಅಧಿಕಮ್ । ಜನಾರ್ದನಸ್ಯ, ತೇ, ಹರೇಃ, ಸದಾವಿಯೋಗಿನೀ, ಯತಃ ॥

ಅರ್ಥ :- ಯತಃ = ಯಾವ ಕಾರಣದಿಂದ, ತೇ = ಆ, ಸಾ = ಸತ್ಯಭಾಮೆಯೂ, ಚ = ಮತ್ತು, ರುಗ್ಮಿಣೀ = ರುಗ್ಮಿಣಿಯೂ, ಹರೇಃ = ಶ್ರೀಹರಿಯಾದ, ಜನಾರ್ದನಸ್ಯ = ಶ್ರೀಕೃಷ್ಣನ, ಸದಾವಿಯೋಗಿನೀ = ನಿತ್ಯ ಅವಿಯೋಗಿನಿಯಾದ, ಪ್ರಿಯೇ = ರಮೆಯೇ, ತತಃ = ಆದ್ದರಿಂದ, ತೇ = ಅವರಿಬ್ಬರು, ಪ್ರಿಯಾಸು = ಪತ್ನಿಯರಲೆಲ್ಲ, ಅಧಿಕಂ = ಹೆಚ್ಚು ಪ್ರೀತಿಪಾತ್ರರು.

**ತಾತ್ಪರ್ಯ** :- ಸತ್ಯಭಾಮೆಯೂ ರುಗ್ಮಿಣಿಯೂ ನಿತ್ಯಾವಿಯೋಗಿನಿಯಾದ ರಮೆಯೇ ಆಗಿದ್ದರಿಂದ ಕೃಷ್ಣನಿಗೆ ಅವನ ಪತ್ನಿಯರಲೆಲ್ಲ ಹೆಚ್ಚು ಪ್ರೀತಿಪಾತ್ರರು.

**ಅವಾಪ ಸಾಂಬನಾಮಕಂ ಸುತಂ ಚ ರೋಹಿಣೀ ಹರೇಃ ।**
**ಚತುರ್ಮುಖಾಂಶಸಂಯುತಂ ಕುಮಾರಮೇವ ಷಣ್ಮುಖಮ್ ॥ ೨೨೦ ॥**

**ಪದಚ್ಛೇದ** :- **ಅವಾಪ, ಸಾಂಬನಾಮಕಂ, ಸುತಂ, ಚ, ರೋಹಿಣೀ, ಹರೇಃ । ಚತುರ್ಮುಖಾಂಶಸಂಯುತಂ, ಕುಮಾರಮ್, ಏವ, ಷಣ್ಮುಖಮ್ ॥**

**ಅರ್ಥ** :- **ರೋಹಿಣೀ** = ಜಾಂಬವತಿದೇವಿಯು, **ಹರೇಃ** = ಶ್ರೀಕೃಷ್ಣನಿಂದ, **ಷಣ್ಮುಖಂ** = ಷಣ್ಮುಖ, **ಕುಮಾರಮ್ ಏವ** = ಸನತ್ಕುಮಾರನಾಗಿದ್ದ ಸ್ಕಂದ, **ಚ** = ಮತ್ತು, **ಚತುರ್ಮುಖಾಂಶ** = ಚತುರ್ಮುಖನ ಅಂಶ, **ಸಂಯುತಂ** = ಯುಕ್ತನಾದ, **ಸಾಂಬನಾಮಕಂ** = ಸಾಂಬ ಎಂದು ಹೆಸರುಳ್ಳ, **ಸುತಂ** = ಮಗನನ್ನು, **ಅವಾಪ** = ಪಡೆದಳು.

**ತಾತ್ಪರ್ಯ** :- ಜಾಂಬವತಿ ಕೃಷ್ಣನಿಂದ ಸಾಂಬನೆಂಬ ಮಗನನ್ನು ಪಡೆದಳು. ಅವನು ಹಿಂದೆ ಷಣ್ಮುಖ ಮತ್ತು ಸನತ್ಕುಮಾರ ರೂಪನಾಗಿದ್ದ ಸ್ಕಂದನ ಹಾಗೂ ಚತುರ್ಮುಖನ ಅಂಶಯುಕ್ತನಾಗಿ ಜನಿಸಿದ.

**ಇತಿ ಪ್ರಶಾಸತಿ ಪ್ರಭೌ ಜಗಜ್ಜನಾರ್ದನೇಽಖಿಲಮ್ ।**
**ಅಗಣ್ಯಸದ್ಗುಣಾರ್ಣವೇ ಕದಾಚಿದಾಯಯೌ ದ್ವಿಜಃ ॥ ೨೨೧ ॥**

**ಪದಚ್ಛೇದ** :- **ಇತಿ, ಪ್ರಶಾಸತಿ, ಪ್ರಭೌ, ಜಗಜ್ಜನಾರ್ದನೇ, ಅಖಿಲಮ್ । ಅಗಣ್ಯಸದ್ಗುಣಾರ್ಣವೇ, ಕದಾಚಿತ್, ಆಯಯೌ, ದ್ವಿಜಃ ॥**

**ಅರ್ಥ** :- **ಅಗಣ್ಯ** = ಎಣಿಸಲು ಅಸಾಧ್ಯವಾದ, **ಸದ್ಗುಣಾರ್ಣವೇ** = ಆನಂದಾದಿ ಸದ್ಗುಣ ಸಾಗರನಾದ, **ಪ್ರಭೌ** = ಸ್ವಾಮಿಯಾದ, **ಜನಾರ್ದನೇ** = ಶ್ರೀಕೃಷ್ಣನು, **ಇತಿ** = ಈ ರೀತಿಯಾಗಿ, **ಜಗತ್** = ಜಗತ್ತನ್ನು, **ಪ್ರಶಾಸತಿ** = ಆಳುತ್ತಿರಲು, **ಕದಾಚಿತ್** = ಒಂದು ದಿನ, **ದ್ವಿಜಃ** = ಬ್ರಾಹ್ಮಣನು, **ಆಯಯೌ** = ಬಂದನು.

**ತಾತ್ಪರ್ಯ** :- ಅಗಣಿತ ಸದ್ಗುಣ ಸಾಗರನಾದ ಶ್ರೀಕೃಷ್ಣನು ಹೀಗೆ ಜಗತ್ತನ್ನು ಆಳುತ್ತಿದ್ದಾಗ ಒಮ್ಮೆ ಒಬ್ಬ ಬ್ರಾಹ್ಮಣ ಬಂದ.

**ಜನಾರ್ದನಃ ಸ ನಾಮತೋ ರಮೇಶಪಾದಸಂಶ್ರಯಃ ।**
**ಸ ಮಾನಿತಶ್ಚ ವಿಷ್ಣುನಾ ಪ್ರಣಮ್ಯ ವಾಕ್ಯಮಬ್ರವೀತ್ ॥ ೨೨೨ ॥**

ಪದಚ್ಛೇದ :- ಜನಾರ್ದನಃ, ಸಃ, ನಾಮತಃ, ರಮೇಶ ಪಾದಸಂಶ್ರಯಃ । ಸಃ, ಮಾನಿತಃ, ಚ, ವಿಷ್ಣುನಾ, ಪ್ರಣಮ್ಯ, ವಾಕ್ಯಮ್, ಅಬ್ರವೀತ್ ॥

**ಅರ್ಥ** :- **ರಮೇಶ ಪಾದಸಂಶ್ರಯಃ** = ಶ್ರೀಕೃಷ್ಣನ ಪಾದಗಳನ್ನು ಆಶ್ರಯಿಸಿದ, **ಸಃ** = ಆ ಬ್ರಾಹ್ಮಣನು, **ನಾಮತಃ** = ಹೆಸರಿನಿಂದ, **ಜನಾರ್ದನಃ** = ಜನಾರ್ದನ (**ಇತಿ** = ಎಂದು), **ಚ** = ಮತ್ತು, **ವಿಷ್ಣುನಾ** = ಕೃಷ್ಣನಿಂದ, **ಮಾನಿತಃ** = ಸನ್ಮಾನಿತನಾದ, **ಸಃ** = ಆ ಬ್ರಾಹ್ಮಣನು, **ಪ್ರಣಮ್ಯ** = ನಮಸ್ಕರಿಸಿ, **ವಾಕ್ಯಂ** = ಮಾತನ್ನು, **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ಆ ಬ್ರಾಹ್ಮಣನ ಹೆಸರು ಜನಾರ್ದನಂ ಶ್ರೀಕೃಷ್ಣನ ಪಾದಗಳನ್ನೇ ಆಶ್ರಯಿಸಿದವ, ಶ್ರೀಕೃಷ್ಣ ಅವನನ್ನು ಆದರಿಸಿದಾಗ ಬ್ರಾಹ್ಮಣನು ನಮಸ್ಕರಿಸಿ ಹೇಳಿದ.

**ಕ್ಷಮಸ್ವ ಮೇ ವಚಃ ಪ್ರಭೋ ಬ್ರವೀಮ್ಯತೀವ ಪಾಪಕಮ್ ।**
**ಯತಃ ಸುಪಾಪದೂತಕಸ್ತತೋ ಹಿ ತಾದೃಶಂ ವಚಃ ॥ ೨೨೩ ॥**

ಪದಚ್ಛೇದ :- ಕ್ಷಮಸ್ವ, ಮೇ, ವಚಃ, ಪ್ರಭೋ, ಬ್ರವೀಮಿ, ಅತೀವ, ಪಾತಕಮ್ । ಯತಃ, ಸುಪಾಪದೂತಕಃ, ತತಃ, ಹಿ, ತಾದೃಶಂ, ವಚಃ ॥

**ಅರ್ಥ** :- **ಪ್ರಭೋ** = ಸ್ವಾಮಿ, **ಯತಃ** = ಯಾವ ಕಾರಣದಿಂದ, **ಸುಪಾಪದೂತಕಃ** = ಮಹಾಪಾಪಿಯೊಬ್ಬನ ದೂತನಾದ, **ಮೇ** = ನನ್ನ, **ವಚಃ** = ಮಾತನ್ನು, **ಕ್ಷಮಸ್ವ** = ಕ್ಷಮಿಸು, **ತತಃ** = ಆದ್ದರಿಂದ, **ತಾದೃಶಂ ಹಿ** = ಅಂತಹ, **ಅತೀವ** = ಬಹಳ, **ಪಾತಕಂ** = ಕೆಟ್ಟ, **ವಚಃ** = ಮಾತುಗಳನ್ನು, **ಬ್ರವೀವಿ** = ಹೇಳುತ್ತೇನೆ.

**ತಾತ್ಪರ್ಯ** :- ಪ್ರಭು ನಾನು ಹೇಳುವುದನ್ನು ಕ್ಷಮಿಸು. ಮಹಾಪಾಪಿ-ಯೊಬ್ಬನ ದೂತನಾಗಿರುವುದರಿಂದ ಮಹಾಪಾಪಕರವಾದ ಮಾತನ್ನು ಆಡುತ್ತಿದ್ದೇನೆ.

**ನ ತೇಽಸ್ತ್ಯಗೋಚರಂ ಕ್ವಚಿತ್ ತಥಾಽಪಿ ಚಾಽಜ್ಞಯಾ ವದೇ ।**
**ವದೇತಿ ಚೋದಿತೋಽಮುನಾ ದ್ವಿಜೋ ಜಗಾದ ಮಾಧವಮ್ ॥ ೨೨೪ ॥**

**ಪದಚ್ಛೇದ :–** ನ, ತೇ, ಅಸ್ತಿ, ಅಗೋಚರಂ, ಕ್ವಚಿತ್, ತಥಾ, ಅಪಿ, ಚ, ಆಜ್ಞಯಾ, ವದೇ । ವದ, ಇತಿ, ಚ, ಉದಿತಃ, ಅಮುನಾ, ದ್ವಿಜಃ, ಜಗಾದ, ಮಾಧವಮ್ ॥

**ಅರ್ಥ :-** **ತೇ** = ನಿನಗೆ, **ಅಗೋಚರಂ** = ತಿಳಿಯದಿರುವುದು, **ಕ್ವಚಿತ್** = ಎಲ್ಲಿಯೂ, **ನ ಅಸ್ತಿ** = ಇಲ್ಲ, **ಚ** = ಮತ್ತು, **ತಥಾ ಪಿ** = ಆದರೂ, **ಆಜ್ಞಯಾ** = ಅಪ್ಪಣೆಯಿಂದ, **ವದೇ** = ಹೇಳುತ್ತೇನೆ, **ಚ** = ಮತ್ತು, **ವದ** = ಹೇಳು, **ಇತಿ** = ಎಂದು, **ಅಮುನಾ** = ಕೃಷ್ಣನಿಂದ, **ಉದಿತಃ** = ಹೇಳಲ್ಪಟ್ಟ, **ದ್ವಿಜಃ** = ಬ್ರಾಹ್ಮಣನು, **ಮಾಧವಂ** = ಕೃಷ್ಣನನ್ನು ಕುರಿತು, **ಜಗಾದ** = ಹೇಳಿದನು.

**ತಾತ್ಪರ್ಯ :-** ನಿನಗೆ ತಿಳಿಯದಿರುವುದು ಎಲ್ಲಿಯೂ ಇಲ್ಲ, ಆದರೂ ನೀನು ಹೇಳು ಎಂದರೆ ಹೇಳುತ್ತೇನೆ ಎಂದ. ಶ್ರೀಕೃಷ್ಣ ಹೇಳು ಎಂದಾಗ ಬ್ರಾಹ್ಮಣ ಕೃಷ್ಣನಿಗೆ ಹೇಳಿದ.

**ಸುತೌ ಹಿ ಸಾಲ್ವಭೂಪತೇರ್ಬಭೂವತುಃ ಶಿವಾಶ್ರಯೌ ।**
**ಶಿವಪ್ರಸಾದಸಂಭವೌ ಪಿತುಸ್ತಪೋಬಲೇನ ತೌ ॥ ೨೨೫ ॥**

**ಪದಚ್ಛೇದ :–** ಸುತೌ, ಹಿ, ಸಾಲ್ವಭೂಪತೇಃ, ಬಭೂವತುಃ, ಶಿವಾಶ್ರಯೌ । ಶಿವಪ್ರಸಾದ ಸಂಭವೌ, ಪಿತುಃ, ತಪೋಬಲೇನ, ತೌ ॥

**ಅರ್ಥ :-** **ಪಿತುಃ** = ತಂದೆಯಾದ, **ಸಾಲ್ವಭೂಪತೇಃ** = ಸಾಲ್ವರಾಜನಿಗೆ, **ತಪೋಬಲೇನ** = ತಪಸ್ಸಿನ ಬಲದಿಂದ, **ಶಿವಪ್ರಸಾದ ಸಂಭವೌ** = ಶಿವನ ಪ್ರಸಾದದಿಂದ ಹುಟ್ಟಿದ, **ತೌ** = ಆ, **ಸುತೌ** = ಮಕ್ಕಳಿಬ್ಬರು, **ಶಿವಾಶ್ರಯೌ** = ಶಿವನ ಆಶ್ರಯವನ್ನು, **ಬಭೂವತುಃ ಹಿ** = ಹೊಂದಿದರಷ್ಟೆ.

**ತಾತ್ಪರ್ಯ :-** ಸಾಲ್ವರಾಜನಿಗೆ ಇಬ್ಬರು ಮಕ್ಕಳು ಹುಟ್ಟಿದ್ದರು. ಅವರು ತಪಸ್ಸಿನಿಂದ ಶಿವನ ಅನುಗ್ರಹದಿಂದ ತಂದೆಗೆ ಹುಟ್ಟಿದರು. ಇಬ್ಬರೂ ಮಕ್ಕಳು ಶಿವನನ್ನೇ ಆಶ್ರಯಿಸಿದರು.

**ಅಜೇಯತಾಮವಧ್ಯತಾಂ ಶಿವಾದ್ ವರಂ ಸಮಾಪತುಃ ।**
**ಜರಾಸುತಸ್ಯ ಶಿಷ್ಯಕೌ ತಪೋಬಲೇನ ಕೇವಲಮ್ ॥ ೨೨೬ ॥**

**ಪದಚ್ಛೇದ :-** ಅಜೇಯತಾಮ್, ಅವಧ್ಯತಾಂ, ಶಿವಾತ್, ವರಂ, ಸಮಾಪತುಃ । ಜರಾಸುತಸ್ಯ, ಶಿಷ್ಯಕೌ, ತಪೋಬಲೇನ, ಕೇವಲಮ್ ॥

**ಅರ್ಥ :-** **ಅಜೇಯತಾಂ** = ಅಜೇಯತ್ವ **ಅವಧ್ಯತಾಂ** = ಅವಧ್ಯತ್ವ **ವರಂ** = ವರವನ್ನು, **ಶಿವಾತ್** = ಶಿವನ ದೆಸೆಯಿಂದ, **ಸಮಾಪತುಃ** = ಪಡೆದರು, **ಜರಾಸುತಸ್ಯ** = ಜರಾಸಂಧನ, **ಶಿಷ್ಯಕೌ** = ಶಿಷ್ಯತ್ವವನ್ನು (ಪಡೆದರು), **ತಪೋಬಲೇನ ಕೇವಲಮ್** = ತಪಸ್ಸಿನ ಬಲದಿಂದಲೇ.

**ತಾತ್ಪರ್ಯ :-** ಹಂಸಡಿಭಿಕರು ಶಿವನಿಂದ ಅಜೇಯತ್ವ ಅವಧ್ಯತ್ವ ವರ ಪಡೆದರು. ಜರಾಸಂಧನ ಶಿಷ್ಯರಾದರು.

**ಮಹೋದರಂ ಚ ಕುಂಡಧಾರಿಣಂ ಚ ಭೂತಕಾವುಭೌ ।**
**ತಥಾಽಜಿತಾವವಧ್ಯಕೌ ದಿದೇಶ ಶಂಕರಸ್ತಯೋಃ ॥ ೨೨೭ ॥**

**ಪದಚ್ಛೇದ :-** ಮಹೋದರಂ, ಚ, ಕುಂಡಧಾರಿಣಂ, ಚ, ಭೂತಕೌ, ಉಭೌ, ತಥಾ ಅಜಿತೌ, ಅವಧ್ಯಕೌ, ದಿದೇಶ, ಶಂಕರಃ, ತಯೋಃ ॥

**ಅರ್ಥ :-** **ತಯೋಃ** = ಹಂಸಡಿಭಿಕರಿಗೆ, **ತಥಾ** = ಹಾಗೆಯೇ, **ಅಜಿತೌ** = ಅಜೇಯರಾದ, **ಅವಧ್ಯಕೌ** = ಅವಧ್ಯರಾದ, **ಮಹೋದರಂ** = ಮಹೋದರ, **ಚ** = ಮತ್ತು, **ಕುಂಡಧಾರಿಣಂ** = ಕುಂಡಧಾರಿಗಳೆಂಬ, **ಉಭೌ** = ಇಬ್ಬರು, **ಭೂತಕೌ** = ಭೂತಗಳನ್ನು, **ಶಂಕರ** = ರುದ್ರನು, **ದಿದೇಶ** = ಕೊಟ್ಟನು.

**ತಾತ್ಪರ್ಯ :-** ಹಂಸಡಿಭಿಕರೀರ್ವರಿಗೆ ಶಿವನು ಅಜೇಯರಾದ ಅವಧ್ಯ-ರಾದ ಮಹೋದರ ಕುಂಡಧಾರಿಗಳೆಂಬ ಎರಡು ಭೂತಗಳನ್ನು ಕೊಟ್ಟನು.

**ತಯೋಃ ಸಹಾಯ ಏವ ತೌ ವರಾಚ್ಛಿವಸ್ಯ ಭೂತಕೌ ।**
**ಅಜೇಯತಾಮವಾಪತುರ್ನಚಾನ್ಯಥಾಽಮರಾವಪಿ ॥ ೨೨೮ ॥**

**ಪದಚ್ಛೇದ :-** ತಯೋಃ, ಸಹಾಯ, ಏವ, ತೌ, ವರಾತ್, ಶಿವಸ್ಯ, ಭೂತಕೌ, ಅಜೇಯತಾಮ್, ಅವಾಪತುಃ, ನ, ಚ, ಅನ್ಯಥಾ, ಅಮರೌ, ಅಪಿ ॥

**ಅರ್ಥ** :- **ತೌ** = ಆ, **ಭೂತಕೌ** = ಭೂತಗಳು, **ಅಮರೌ ಅಪಿ** = ಸ್ವತಃ ಅಮರರಾಗಿದ್ದರೂ, **ತಯೋಃ** = ಹಂಸಡಿಭಿಕರಿಗೆ, **ಸಹಾಯ ಏವ** = ಸಹಾಯಕ್ಕಾಗಿಯೆ, **ಶಿವಸ್ಯ** = ರುದ್ರನ, **ವರಾತ್** = ವರದ ದೆಸೆಯಿಂದ, **ಅಜೇಯತಾಂ** = ಅಜೇಯತ್ವವನ್ನು, **ಅವಾಪತುಃ** = ಹೊಂದಿದರು, **ನ ಚ** = ಹೊರತು, **ಅನ್ಯಥಾ** = ಬೇರೆ ರೀತಿಯಿಂದಲೆ.

**ತಾತ್ಪರ್ಯ** :- ಭೂತಗಳ ದೇವಯೋನಿಯಲ್ಲಿ ಹುಟ್ಟಿರುವುದರಿಂದ ಸ್ವಭಾವತಃ ಅಮರೇ, ಆದರೆ ಅಜೇಯರಲ್ಲ ಅಜೇಯತ್ವವು ಶಿವನ ವರದಿಂದಲೇ ಬಂದುದು ಬೇರೆ ರೀತಿಯಿಂದಲ್ಲ. ಹಂಸಡಿಭಿಕರಿಗೆ ಸಹಾಯ ಮಾಡುವುದಕೋಸ್ಕರ ಶಿವನ ವರದಿಂದ ಅಜೇಯತ್ವವನ್ನು ಸಂಪಾದಿಸಿದ್ದರು.

**ಅಜೇಯತಾಮವಧ್ಯತಾಮವಾಪ್ಯ ತಾವುಭೌ ಶಿವಾತ್ ।**
**ಪಿತುಸ್ತು ರಾಜಸೂಯಿತಾಂ ಸಮಿಚ್ಛತೋ ಮದೋದ್ಧತೌ ॥ ೨೨೯ ॥**

ಪದಚ್ಛೇದ :- **ಅಜೇಯತಾಮ್, ಅವಧ್ಯತಾಮ್, ಅವಾಪ್ಯ, ತೌ, ಉಭೌ, ಶಿವಾತ್ । ಪಿತುಃ, ಚ, ರಾಜಸೂಯಿತಾಂ, ಸಮಿಚ್ಛತಃ, ಮದೋದ್ಧತೌ ॥**

**ಅರ್ಥ** :- **ಶಿವಾತ್** = ಶಿವನ ದೆಸೆಯಿಂದ, **ಅಜೇಯತಾಂ** = ಅಜೇಯತ್ವವನ್ನು, **ಚ** = ಮತ್ತು, **ಅವಧ್ಯತಾಂ** = ಅವಧ್ಯತ್ವವನ್ನು, **ಅವಾಪ್ಯ** = ಹೊಂದಿ, **ಮದೋದ್ಧತೌ** = ಮದೋದ್ಧತರಾದ, **ತೌ** = ಆ, **ಉಭೌ** = ಹಂಸಡಿಭಿಕರು, **ಪಿತುಃ** = ತಂದೆಯ ದೆಸೆಯಿಂದ, **ರಾಜಸೂಯಿತಾಂ** = ರಾಜಸೂಯಯಾಗ ಮಾಡಿಸಲು, **ಸಮಿಚ್ಛತಃ** = ಬಯಸಿದಳು.

**ತಾತ್ಪರ್ಯ** :- ಶಿವನಿಂದ ಅಜೇಯತ್ವವನ್ನು ಅವಧ್ಯತ್ವವನ್ನು ಹೊಂದಿ ಅಹಂಕಾರಿಗಳಾದ ಹಂಸಡಿಭಿಕರು ತಂದೆಯಿಂದ ರಾಜಸೂಯ ಯಾಗ ಮಾಡಿಸಲು ಇಚ್ಛಿಸಿದರು.

**ಜರಾಸುತೋ ಗುರುತ್ವತೋ ವಿರೋದ್ಧುಮತ್ರ ನೇಚ್ಛತಿ ।**
**ನೃಪಾಂಸ್ತು ದೇವಪಕ್ಷಿಣೋ ವಿಜಿತ್ಯ ಕರ್ತುಮಿಚ್ಛತಃ ॥ ೨೩೦ ॥**

ಪದಚ್ಛೇದ :- ಜರಾಸುತಃ, ಗುರುತ್ವತಃ, ವಿರೋದ್ಧುಮ್, ಅತ್ರ, ನ, ಇಚ್ಛತಿ । ನೃಪಾಂ, ತು, ದೇವಪಕ್ಷಿಣಃ, ವಿಜಿತ್ಯ, ಕರ್ತುಮ್, ಇಚ್ಛತಃ ॥

**ಅರ್ಥ** :- **ಜರಾಸುತಃ** = ಜರಾಸಂಧನು, **ಗುರುತ್ವತಃ** = ಗುರುವಾದ್ದರಿಂದ, **ವಿರೋದ್ಧುಂ** = ವಿರೋಧ ಮಾಡಲು, **ಅತ್ರ** = ಈ ಯಾಗದಲ್ಲಿ, **ನ ಇಚ್ಛತಿ** = ಬಯಸುವುದಿಲ್ಲ, **ದೇವಪಕ್ಷಿಣಃ** = ದೇವಪಕ್ಷದ, **ನೃಪಾಂ ತು** = ರಾಜರನ್ನು, **ವಿಜಿತ್ಯ** = ಗೆದ್ದು, **ಕರ್ತುಂ** = ಯಾಗ ಮಾಡಲು, **ಇಚ್ಛತಃ** = ಬಯಸಿದ್ದಾರೆ.

**ತಾತ್ಪರ್ಯ** :- ಜರಾಸಂಧ ಗುರುವಾದ್ದರಿಂದ ಇದರಲ್ಲಿ ವಿರೋಧಮಾಡಲು ಬಯಸುವುದಿಲ್ಲ. ಏಕೆಂದರೆ ಹಂಸಡಿಭಿಕರು ದೇವಪಕ್ಷದ ರಾಜರನ್ನೇ ಮುಖ್ಯವಾಗಿ ಗೆದ್ದು ಯಾಗ ಮಾಡಲು ಬಯಸಿದ್ದಾರೆ.

**ಸ್ವಯಂ ಹಿ ರಾಜಸೂಯಿತಾಂ ಜರಾಸುತೋ ನ ಮನ್ಯತೇ ।**
**ಯತೋ ಹಿ ವೈಷ್ಣವಂ ಕ್ರತುಂ ತಮಾಹುರೀಶ ವೈದಿಕಾಃ ॥ ೨೩೧ ॥**

ಪದಚ್ಛೇದ :– ಸ್ವಯಂ, ಹಿ, ರಾಜಸೂಯಿತಾಂ, ಜರಾಸುತಃ, ನ, ಮನ್ಯತೇ । ಯತಃ, ಹಿ, ವೈಷ್ಣವಂ, ಕ್ರತುಂ, ತಂ, ಆಹುಃ, ಈಶ, ವೈದಿಕಾಃ ॥

**ಅರ್ಥ** :- **ಈಶ** = ಸ್ವಾಮಿ ಕೃಷ್ಣ, **ಜರಾಸುತಃ** = ಜರಾಸಂಧ, **ಸ್ವತಃ** = ತಾನು, **ರಾಜಸೂಯಿತಾಂ** = ರಾಜಸೂಯ ಯಾಗವನ್ನು, **ನ ಮನ್ಯತೇ** = ಮಾಡುವುದಿಲ್ಲ, **ಯತಃ** = ಏಕೆಂದರೆ, **ತಂ** = ಆ, **ಕ್ರತುಂ** = ಯಾಗವನ್ನು, **ವೈದಿಕಾಃ ಹಿ** = ವೈದಿಕರಾದರೂ, **ವೈಷ್ಣವಂ** = ವೈಷ್ಣವ ಯಾಗ (ಎಂಬುದಾಗಿ), **ಆಹುಃ** = ಹೇಳುತ್ತಾರೆ.

**ತಾತ್ಪರ್ಯ** :- ಪ್ರಭು ಕೃಷ್ಣ ಜರಾಸಂಧ ಸ್ವತಃ ರಾಜಸೂಯ ಮಾಡುವುದಿಲ್ಲ, ಏಕೆಂದರೆ ವೈದಿಕರು ಅದನ್ನು ವೈಷ್ಣವ ಯಾಗವೆನ್ನುತ್ತಾರೆ.

**ಇಮೌ ಪಿತುರ್ಯಶೋರ್ಥಿನೌ ಪರಾಭವಾಯ ತೇ ತಥಾ ।**
**ಸಮಿಚ್ಛತೋಽಚ್ಯುತ ಕ್ರತುಂ ಭವಂತಮೂಚತುಶ್ಚ ತೌ ॥ ೨೩೨ ॥**

ಪದಚ್ಛೇದ :– ಇಮೌ, ಪಿತುಃ, ಯಶಃ, ಅರ್ಥಿನೌ, ಪರಾಭವಾಯ, ತೇ, ತಥಾ । ಸಮಿಚ್ಛತಃ, ಅಚ್ಯುತಃ, ಕ್ರತುಂ, ಭವಂತಮ್, ಊಚತುಃ, ಚ, ತೌ ॥

**ಅರ್ಥ** :- **ಇಮೌ** = ಈ ಹಂಸಡಿಭಿಕರು, **ಪಿತುಃ** = ತಂದೆಯ, **ಯಶಃ** = ಕೀರ್ತಿಯನ್ನು, **ಅರ್ಥಿನೌ** = ಬಯಸಿ, **ಚ** = ಮತ್ತು, **ತಥಾ** = ಹಾಗೆ,

**ಭವಂತಂ** = ನಿನ್ನನ್ನು, **ಪರಾಭವಾಯ** = ಸೋಲಿಸಲು, **ತೌ** = ಅವರಿಬ್ಬರು, **ಅಚ್ಯುತಃ ಕ್ರತುಂ** = ವೈಷ್ಣವ ಯಾಗವನ್ನು, **ಸಮಿಚ್ಛತಃ** = ಮಾಡಲು ಇಚ್ಛಿಸಿದ್ದಾರೆ, **ತೇ** = ಅವರು, **ಊಚತುಃ** = ಹೇಳಿದರು.

**ತಾತ್ಪರ್ಯ** :- ತಂದೆಗೆ ಕೀರ್ತಿಬರಲೆಂದು ಬಯಸಿ ಹಂಸಡಿಭಿಕರು ನಿನ್ನನ್ನು ಪರಾಭವಗೊಳಿಸುವುದಕ್ಕಾಗಿ ವೈಷ್ಣವಯಾಗ ಮಾಡಲು ಬಯಸಿದ್ದಾರೆ. ಅವರು ನಿನಗೆ ಹೇಳಿದ್ದಾರೆ.

**ಸಮುದ್ರಸಂಶ್ರಯೋ ಭವಾನ್ ಬಹೂನ್ ಪ್ರಗೃಹ್ಯ ಲಾವಣಾನ್ ।**
**ಸುಭಾರಕಾನುಪೈಹಿ ನಾವಿತಿ ಕ್ಷಮಸ್ವ ಮೇ ವಚಃ ॥ ೨೩೩ ॥**

**ಪದಚ್ಛೇದ** :- ಸಮುದ್ರಸಂಶ್ರಯಃ, ಭವಾನ್, ಬಹೂನ್, ಪ್ರಗೃಹ್ಯ, ಲಾವಣಾನ್ । ಸುಭಾರಕಾನ್, ಉಪೈಹಿ, ನೌ, ಇತಿ, ಕ್ಷಮಸ್ವ ಮೇ, ವಚಃ ॥

**ಅರ್ಥ** :- **ಸಮುದ್ರಸಂಶ್ರಯಃ** = ಸಮುದ್ರವಾಸಿಯಾದ್ದರಿಂದ, **ಭವಾನ್** = ನೀನು, **ಬಹುನ್** = ಬಹಳ, **ಸುಭಾರಕಾನ್** = ಭಾರದ, **ಲಾವಣಾನ್** = ಉಪ್ಪಿನಮೂಟೆಯನ್ನು, **ನೌ** = ನಮಗೆ, **ಉಪೈಹಿ** = ಹೊತ್ತು ತಾ, **ಇತಿ** = ಎಂದು. **ಮೇ** = ನನ್ನ, **ವಚಃ** = ಮಾತನ್ನು, **ಕ್ಷಮಸ್ವ** = ಕ್ಷಮಿಸು.

**ತಾತ್ಪರ್ಯ** :- ಕೃಷ್ಣ ನೀನು ಸಮುದ್ರವಾಸಿಯಾದ್ದರಿಂದ ನಮಗೆ ಬಹಳ ಉಪ್ಪಿನ ಮೂಟೆಯನ್ನು ಹೊತ್ತು ತಾ ಎಂದು ಹೇಳಿದ್ದರಿಂದ ಭಗವಾನ್ ಈ ನನ್ನ ಮಾತನ್ನು ಕ್ಷಮಿಸು.

**ಉದೀರ್ಯ ತಂ ನನಾಮ ಸ ಪ್ರಜಾಹಸನ್ ಸ್ಮ ಯಾದವಾಃ ।**
**ಹರಿಸ್ತು ಸಾತ್ಯಕಿಂ ವಚೋ ಜಗಾದ ಮೇಘನಿಸ್ವನಃ ॥ ೨೩೪ ॥**

**ಪದಚ್ಛೇದ** :- ಉದೀರ್ಯ, ತಂ, ನನಾಮ, ಸಃ, ಪ್ರಜಾಹಸನ್, ಸ್ಮ, ಯಾವದಾಃ । ಹರಿಃ, ತು, ಸಾತ್ಯಕಿಂ, ವಚಃ, ಜಗಾದ, ಮೇಘನಿಸ್ವನಃ ॥

**ಅರ್ಥ** :- **ಸಃ** = ಜನಾರ್ದನು, **ತಂ** = ಕೃಷ್ಣನನ್ನು ಕುರಿತು, **ಉದೀರ್ಯ** = ಹೇಳಿ, **ನನಾಮ** = ನಮಸ್ಕರಿಸಿದನು, **ಯಾದವಾಃ** = ಯಾದವರು, **ಪ್ರಜಾಹಸನ್ ಸ್ಮ** = ಜೋರಾಗಿ ನಕ್ಕರು, **ಹರಿಃ ಸ್ತು** = ಶ್ರೀಕೃಷ್ಣನಾದರೂ,

ಸಾತ್ಯಕಿಂ = ಸಾತ್ಯಕಿಯನ್ನು ಕುರಿತು, ಮೇಘನಿಸ್ವನಃ = ಗುಡುಗಿನಂಥ, ವಚಃ = ಮಾತನ್ನು, ಜಗಾದ = ಹೇಳಿದನು.

ತಾತ್ಪರ್ಯ :- ಜನಾರ್ದನ ಹೀಗೆ ಹೇಳಿ ಕೃಷ್ಣನನ್ನು ನಮಸ್ಕರಿಸಿದ, ಯಾದವರು ಜೋರಾಗಿ ನಕ್ಕರು ಶ್ರೀಕೃಷ್ಣ ಗುಡುಗಿನಂಥ ನನ್ನ ಮಾತನ್ನು ಹೇಳು.

**ಪ್ರಯಾಹಿ ಸಾತ್ಯಕೇ ವಚೋ ಬ್ರವೀಹಿ ಮೇ ನೃಪಾಧಮೌ ।**
**ಸಮೇತ್ಯ ವಾಂ ವರಾಯುಧೈಃ ಕರಂ ದದಾನ್ಯಸಂಶಯಮ್ ॥ ೨೩೫ ॥**

**ಪದಚ್ಛೇದ :- ಪ್ರಯಾಹಿ, ಸಾತ್ಯಕೇ, ವಚಃ, ಬ್ರವೀಹಿ, ಮೇ, ನೃಪಾಧಮೌ । ಸಮೇತ್ಯ, ವಾಂ, ವರಾಯುಧೈಃ, ಕರಂ, ದದಾಮಿ, ಅಸಂಶಯಮ್ ॥**

ಅರ್ಥ :- ಸಾತ್ಯಕೇ = ಎಲೈ ಸಾತ್ಯಕಿಯೇ, ಪ್ರಯಾದಿ = ಹೋಗು, ನೃಪಾಧಮೌ = ರಾಜಾಧಮರ ಹತ್ತಿರ, ಮೇ = ನನ್ನ, ವಚಃ = ಮಾತು, ಬ್ರವೀಹಿ = ಹೇಳು, ವಾಂ = ನಿಮಗೆ, ಅಸಂಶಯಂ = ನಿಶ್ಚಯವಾಗಿ, ವರಾಯುಧೈಃ = ಒಳ್ಳೆಯ ಆಯುಧಗಳಿಂದ, ಸಮೇತ್ಯ = ಜೊತೆಗೆ, ಕರಂ = ಕಪ್ಪವನ್ನು, ದದಾಮಿ = ಕೊಡುತ್ತೇನೆ.

ತಾತ್ಪರ್ಯ :- ಕೃಷ್ಣ ಸಾತ್ಯಕಿಗೆ ಹೇಳುತ್ತಿದ್ದಾನೆ, ರಾಜರಲ್ಲಿ ಅಧರ್ಮರಾದ ಹಂಸಡಿಭಿಕರ ಹತ್ತಿರ ಹೋಗಿ ಹೇಳು, ನಿಮಗೆ ನಿಶ್ಚಯವಾಗಿ ಒಳ್ಳೆಯ ಆಯುಧಗಳಿಂದ ಕಪ್ಪ ಕೊಡುವನೆಂದು ನನ್ನ ಮಾತು ಹೇಳು.

**ಉಪೈತಮಾಶು ಸಂಯುಗಾರ್ಥಿನೌ ಚ ಪುಷ್ಕರಂ ಪ್ರತಿ ।**
**ಇತೀರಿತಃ ಶಿನೇಃ ಸುತೋ ಜಗಾಮ ವಿಪ್ರಸಂಯುತಃ ॥ ೨೩೬ ॥**

**ಪದಚ್ಛೇದ :- ಉಪೈತಂ, ಆಶು, ಸಂಯುಗಾರ್ಥಿನೌ, ಚ, ಪುಷ್ಕರಂ, ಪ್ರತಿ । ಇತಿ, ಈರಿತಃ, ಶಿನೇಃ, ಸುತಃ, ಜಗಾಮ, ವಿಪ್ರಸಂಯುತಃ ॥**

ಅರ್ಥ :- ಆಶು = ಬೇಗನೆ, ಸಂಯುಗಾಧಿನೌ = ಯುದ್ಧಾರ್ಥಿಗಳಾಗಿ, ಪುಷ್ಕರಂ (ಪ್ರತಿ) = ಪುಷ್ಕರವನ್ನು ಕುರಿತು, ಉಪೈತಂ = ಬನ್ನಿ, ಇತಿ = ಈ ರೀತಿಯಾಗಿ, ಈರಿತಃ = (ಕೃಷ್ಣ ) ಹೇಳುತ್ತಿರಲು, ಶಿನೇಃ ಸುತಃ = ಸಾತ್ಯಕಿಯು, ವಿಪ್ರಸಂಯುತಃ = ಜನಾರ್ದನನೊಂದಿಗೆ, ಜಗಾಮ = ಹೊರಟ.

**ತಾತ್ಪರ್ಯ** :- ಯುದ್ಧಾರ್ಥಿಗಳಾಗಿ ಪುಷ್ಕರಕ್ಕೆ ಬನ್ನಿ ಎಂದು ಕೃಷ್ಣ ಹೇಳಿದಾಗ ಸಾತ್ಯಕಿಯು ಜನಾರ್ದನನ ಜೊತೆ ಹೊರಟ.

**ಉಪೇತ್ಯ ತೌ ಹರೇರ್ವಚೋ ಜಗಾದ ಸಾತ್ಯಕಿರ್ಬಲೀ ।**
**ವಿಧಾಯ ತೌ ತೃಣೋಪಮೌ ಗಿರಾ ಜಗಾಮ ಕೇಶವಮ್ ॥ ೨೩೭ ॥**

ಪದಚ್ಛೇದ :- **ಉಪೇತ್ಯ, ತೌ, ಹರೇಃ, ವಚಃ, ಜಗಾದ, ಸಾತ್ಯಕೇಃ, ಬಲೀ । ವಿಧಾಯ, ತೌ, ತೃಣೋಪಮೌ, ಗಿರಾ, ಜಗಾಮ, ಕೇಶವಮ್ ॥**

**ಅರ್ಥ** :- **ತೌ** = ಹಂಸಡಿಭಿಕರನ್ನು ಕುರಿತು, **ಉಪೇತ್ಯ** = ಹೊಂದಿ, **ಬಲೀ** = ಬಲಿಷ್ಠನಾದ, **ಸಾತ್ಯಕಿಃ** = ಸಾತ್ಯಕಿಯು, **ಹರೇಃ** = ಕೃಷ್ಣನ, **ವಚಃ** = ಮಾತನ್ನು, **ಜಗಾದ** = ಹೇಳಿದನು, **ಗಿರಾ** = ಮಾತಿನಿಂದ, **ತೌ** = ಅವರನ್ನು, **ತೃಣೋಪಮೌ** = ತೃಣಸಮಾನರನ್ನಾಗಿ, **ವಿಧಾಯ** = ಮಾಡಿ, **ಕೇಶವಂ** = ಕೃಷ್ಣನನ್ನು ಕುರಿತು, **ಜಗಾಮ** = ಹೋದನು.

**ತಾತ್ಪರ್ಯ** :- ಹಂಸಡಿಭಿಕರ ಬಳಿಗೆ ಬಂದು ಬಲಿಷ್ಠನಾದ ಸಾತ್ಯಕಿ ಕೃಷ್ಣನ ಮಾತನ್ನು ಹೇಳಿದ, ಮಾತಿನಿಂದ ಅವರನ್ನು ತೃಣಸಮಾನರನ್ನಾಗಿ ಮಾಡಿ ಕೃಷ್ಣನ ಬಳಿಗೆ ಹೋದ.

**ತತಃ ಪುರೈವ ತಾವುಭೌ ದ್ವಿಜಂ ಹರಸ್ವರೂಪಿಣಮ್ ।**
**ಸುದುಃಖವಾಸನಾಮಕಂ ಪ್ರಚಕ್ರತುಸ್ತೃಣೋಪಮಮ್ ॥ ೨೩೮ ॥**

ಪದಚ್ಛೇದ :- ತತಃ, ಪುರಾ, ಏವ, ತೌ, ಉಭೌ, ದ್ವಿಜಂ, ಹರಸ್ವರೂಪಿಣಮ್ । ಸುದುಃಖವಾಸನಾಮಕಂ, ಪ್ರಚಕ್ರತುಃ, ತೃಣೋಪಮಮ್ ॥

**ಅರ್ಥ** :- **ತತಃ ಪುರಾ ಏವ** = ಅದಕ್ಕಿಂತ ಮೊದಲ, **ತೌ** = ಆ, **ಉಭೌ** = ಹಂಸಡಿಭಿಕರು, **ಹರಸ್ವರೂಪಿಣಂ** = ರುದ್ರಸ್ವರೂಪರಾದ, **ಸುದುಃಖವಾಸನಾಮಕಂ** = ದೂರ್ವಾಸ ಎಂದು ಹೆಸರುಳ್ಳ, **ದ್ವಿಜಂ** = ಬ್ರಾಹ್ಮಣನನ್ನು, **ತೃಣೋಪಮಮ್** = ತೃಣ ಸಮಾನರನ್ನಾಗಿ, **ಪ್ರಚಕ್ರತುಃ** = ಮಾಡಿದ್ದರು.

**ತಾತ್ಪರ್ಯ** :- ಮೊದಲೇ ರಾಕ್ಷಸರಾದ ಹಂಸಡಿಭಿಕರು ರುದ್ರಸ್ವರೂಪರಾದ, ದೂರ್ವಾಸಮುನಿಗಳನ್ನು ತೃಣಸಮಾನರನ್ನಾಗಿ ಮಾಡಿದ್ದರು.

**ದಶತ್ರಿಕೈಃ ಶತೈರ್ವೃತೋ ಯತೀಶ್ವರೈಃ ಸ ಸರ್ವವಿತ್ ।**
**ವಿಪಾಟಿತಾತ್ಮಕೌಪಿನಾದಿಸರ್ವಮಾತ್ರಕೋಽಭವತ್ ॥ ೨೩೯ ॥**

**ಪದಚ್ಛೇದ :- ದಶತ್ರಿಕೈಃ, ಶತೈಃ, ವೃತಃ, ಯತೀಶ್ವರೈಃ, ಸಃ, ಸರ್ವವಿತ್ । ವಿಪಾಟಿತಾತ್ಮ ಕೌಪಿನಾದಿಸರ್ವಮಾತ್ರಕಃ, ಅಭವತ್ ॥**

**ಅರ್ಥ :- ದಶತ್ರಿಕೈಃ ಶತೈಃ** = ಮೂರು ಸಾವಿರ ಮಂದಿ, **ಯತೀಶ್ವರೈಃ** = ಯತೀಶ್ವರರಿಂದ, **ವೃತಃ** = ಕೂಡಿದ, **ಸರ್ವವಿತ್** = ಸರ್ವಜ್ಞರಾದ, **ಸಃ** = ದೂರ್ವಾಸರು, **ವಿಪಾಟಿತಾತ್ಮ ಕೌಪಿನಾದಿ ಸರ್ವಮಾತ್ರಕಃ** = **ವಿಪಾಟಿತಾತ್ಮ** - ನಾಶಮಾಡಲ್ಪಟ್ಟ, **ಕೌಪಿನಾದಿ ಸರ್ವಮಾತ್ರಕಃ** = ಕೌಪಿನಾದಿ ಎಲ್ಲಾ ವಸ್ತುವುಳ್ಳವರು, **ಅಭವತ್** = ಆದರು.

**ತಾತ್ಪರ್ಯ :-** ಮೂರು ಸಾವಿರ ಮಂದಿ ಯತೀಶ್ವರರಿಂದ ಕೂಡಿದ ಸರ್ವಜ್ಞರಾದ ದೂರ್ವಾಸರ ಕೌಪೀನಾದಿ ಎಲ್ಲಾ ವಸ್ತುಗಳನ್ನು ಹಂಸಡಿಭಿಕರು ನಾಶಮಾಡಿದ್ದರು.

**ವರಾತ್ ಸ್ವಸಂಭವಾದಸೌ ನ ಶಾಪಶಕ್ತಿಮಾನಭೂತ್ ।**
**ತತಃ ಸಮಸ್ತಭಂಜನೋರುಶಕ್ತಿಮಾಪ ಕೇಶವಮ್ ॥ ೨೪೦ ॥**

**ಪದಚ್ಛೇದ :- ವರಾತ್, ಸ್ವಸಂಭವಾತ್, ಅಸೌ, ನ, ಶಾಪಶಕ್ತಿಮಾನ್, ಅಭೂತ್ । ತತಃ, ಸಮಸ್ತಭಂಜನೋರುಶಕ್ತಿಮ್, ಆಪ, ಕೇಶವಮ್ ॥**

**ಅರ್ಥ :- ಸ್ವಸಂಭವಾತ್** = ರುದ್ರಸ್ವರೂಪರಾದ, **ಅಸೌ** = ಈ ದೂರ್ವಾಸರು, **ವರಾತ್** = ತಮ್ಮ ವರದ ದೆಸೆಯಿಂದ, **ಶಾಪಶಕ್ತಿಮಾನ್** = ಶಾಪ ಕೊಡಲು ಶಕ್ತರು, **ನ ಅಭೂತ್** = ಆಗಲಿಲ್ಲ, **ತತಃ** = ಆದರಿಂದ, **ಸಮಸ್ತಭಂಜನೋರುಶಕ್ತಿಂ** = ಸರ್ವನಾಶ ಮಾಡುವ ಶಕ್ತಿಯುಳ್ಳ, **ಕೇಶವಂ** = ಕೃಷ್ಣನನ್ನು, **ಆಪ** = ಮೊರೆ ಹೊಂದಿದರು.

**ತಾತ್ಪರ್ಯ :-** ರುದ್ರಸ್ವರೂಪರಾದ ದೂರ್ವಾಸರು ತಾವೇ ಕೊಟ್ಟ ವರವಿದ್ದುದರಿಂದ ಹಂಸಡಿಭಿಕರಿಗೆ ಶಾಪ ಕೊಡಲು ಶಕ್ತರಾಗಿರಲಿಲ್ಲ, ಆದರಿಂದ ಸರ್ವನಾಶ ಮಾಡುವ ಮಹಾಶಕ್ತಿಯುಳ್ಳ ಕೃಷ್ಣನನ್ನು ಶರಣು ಹೊಂದಿದರು.

ಸ ತಾನ್ ಸಮರ್ಚ್ಯ ಮಾಧವಃ ಪ್ರದಾಯ ಚೋರುಮಾತ್ರಕಾಃ ।
ಯಯೌ ಚ ತೈಃ ಸಮನ್ವಿತೋ ವಧಾಯ ಸಾಲ್ವಪುತ್ರಯೋಃ ॥ ೨೪೧ ॥

ಪದಚ್ಛೇದ :- ಸಃ, ತಾನ್, ಸಮರ್ಚ್ಯ, ಮಾಧವಃ, ಪ್ರದಾಯ, ಚ, ಉರುಮಾತ್ರಕಾಃ । ಯಯೌ, ಚ, ತೈಃ, ಸಮನ್ವಿತಃ, ವಧಾಯ, ಸಾಲ್ವಪುತ್ರಯೋಃ ॥

ಅರ್ಥ :- ಸಃ = ಆ, ಮಾಧವಃ = ಕೃಷ್ಣನು, ತಾನ್ = ಆ ಯತೀಶ್ವರರನ್ನು, ಸಮರ್ಚ್ಯ = ಸತ್ಕರಿಸಿ, ಚ = ಮತ್ತು, ಉರುಮಾತ್ರಕಾಃ = ಉತ್ತಮವಾದ, ಕೌಪಿನ ದಂಡಾದಿಗಳನ್ನು, ಪ್ರದಾಯ = ಕೊಟ್ಟು, ಚ = ಮತ್ತು, ಸಾಲ್ವಪುತ್ರಯೋಃ = ಸಾಲ್ವರಾಜನ ಮಕ್ಕಳ, ವಧಾಯ = ಸಂಹಾರಕೋಸ್ಕರ, ತೈಃ = ಅವರಿಂದ, ಸಮನ್ವಿತಃ = ಕೂಡಿಕೊಂಡು, ಯಯೌ = ಹೋದನು.

ತಾತ್ಪರ್ಯ :- ಶ್ರೀಕೃಷ್ಣ ಆ ಎಲ್ಲಾ ಯತಿಗಳನ್ನು ಸತ್ಕರಿಸಿ, ಉತ್ತಮವಾದ ಕೌಪೀನ, ದಂಡ, ಕಮಂಡಲು ಮುಂತಾದುವನ್ನು ಕೊಟ್ಟು ಅವರೆಲ್ಲರನ್ನು ಕೂಡಿಕೊಂಡು ಸಾಲ್ವಪುತ್ರರ ವಧೆಗೆ ಹೊರಟ.

ತಮತ್ರಿಜಂ ಹರಾತ್ಮಕಂ ಯತೋ ಹಿ ವೇದ ಮಾಗಧಃ ।
ತತೋಽತ್ಯಜತ್ ಸ್ವಶಿಷ್ಯಕೌ ನಿಶಮ್ಯ ತತ್ ಪ್ರತೀಪಕೌ ॥ ೨೪೨ ॥

ಪದಚ್ಛೇದ :- ತಮ್, ಅತ್ರಿಜಂ, ಹರಾತ್ಮಕಂ, ಯತಃ, ಹಿ, ವೇದ, ಮಾಗಧಃ । ತತಃ, ಅತ್ಯಜತ್, ಸ್ವಶಿಷ್ಯಕೌ, ನಿಶಮ್ಯ, ತತ್ಪ್ರತೀಪಕೌ ॥

ಅರ್ಥ :- ಯತಃ = ಯಾವ ಕಾರಣದಿಂದ, ತಂ = ಆ, ಅತ್ರಿಜಂ = ದೂರ್ವಾಸರನ್ನು, ಹರಾತ್ಮಕಂ = ರುದ್ರಾವತಾರರೆಂದು, ಮಾಗಧಃ = ಜರಾಸಂಧನು, ವೇದ ಹಿ = ತಿಳಿದಿದ್ದನಷ್ಟೆ, ತತಃ = ಆದ್ದರಿಂದ, ಸ್ವಶಿಷ್ಯಕೌ = ತನ್ನ ಶಿಷ್ಯರಾದ ಹಂಸಡಿಭಿಕರು, ತತ್ಪ್ರತೀಪಕೌ = ದೂರ್ವಾಸರಿಗೆ ವಿರೋಧಿಗಳಾದರೆಂದ, ನಿಶಮ್ಯ = ಕೇಳಿ, ಅತ್ಯಜತ್ = ತಿರಸ್ಕರಿಸಿದ್ದನು.

ತಾತ್ಪರ್ಯ :- ದೂರ್ವಾಸರು ರುದ್ರಾವತಾರರೆಂದು ಜರಾಸಂಧನಿಗೆ ಗೊತ್ತು. ಆದ್ದರಿಂದ ಹಂಸಡಿಭಿಕರು ತನ್ನ ಶಿಷ್ಯರೇ ಆದರೂ ದೂರ್ವಾಸರಿಗೆ ವಿರೋಧಿಗಳಾದರೆಂದು ಕೇಳಿ ತಿಳಿದು ಅವರನ್ನು ಪರಿತ್ಯಜಿಸಿದ್ದ.

ಹರೌ ತು ಪುಷ್ಕರಂ ಗತೇ ಮುನೀಶ್ವರೈಃ ಸಮನ್ವಿತೇ ।
ಸಮೀಯತುಶ್ಚ ತಾವುಭಾವಥಾತ್ರ ಹಂಸಡೀಭಕೌ ॥ ೨೪೩ ॥

ಪದಚ್ಛೇದ :- ಹರೌ, ತು, ಪುಷ್ಕರಂ, ಗತೇ, ಮುನಿಶ್ವರೈಃ, ಸಮನ್ವಿತೇ ।
ಸಮೀಯತುಃ, ಚ, ತೇ, ಉಭೌ, ಅಥ, ಅತ್ರ, ಹಂಸಡೀಭಿಕೌ ॥

ಅರ್ಥ :- ಅಥ = ಅನಂತರ, ಹರೌ ತು = ಶ್ರೀಕೃಷ್ಣನಾದರೂ, ಮುನಿಶ್ವರೈಃ = ಮುನಿಗಳಿಂದ, ಸಮನ್ವಿತೇ = ಕೂಡಿಕೊಂಡು, ಪುಷ್ಕರಂ = ಪುಷ್ಕರವನ್ನು ಕುರಿತು, ಗತೇ = ಹೋದಾಗ, ಅತ್ರ = ಇಲ್ಲಿ, ತೌ = ಆ, ಉಭೌ = ಇಬ್ಬರು, ಹಂಸಡಿಭೀಕೌ = ಹಂಸಡಿಭಿಕರು, ಸಮೀಯತುಃ = ಬಂದರು.

ತಾತ್ಪರ್ಯ :- ಶ್ರೀಕೃಷ್ಣ ಮುನೀಶ್ವರರೊಂದಿಗೆ ಪುಷ್ಕರಕ್ಕೆ ಹೋದಾಗ ಹಂಸಡಿಭಿಕರಿಬ್ಬರೂ ಅಲ್ಲಿಗೆ ಬಂದರು.

ಸ ಬ್ರಹ್ಮದತ್ತನಾಮಕೋಽತ್ರ ತತ್ಪಿತಾಽಪ್ಯುಪಾಯಯೌ ।
ಸಮಾಗತೌ ಚ ಭೂತಕೌ ಶಿವಸ್ಯ ಯೌ ಪುರಸ್ಸರೌ ॥ ೨೪೪ ॥

ಪದಚ್ಛೇದ :- ಸಃ, ಬ್ರಹ್ಮದತ್ತನಾಮಕಃ, ಅತ್ರ, ತತ್ಪಿತಾ, ಅಪಿ, ಉಪಾಯಯೌ ।
ಸಮಾಗತೌ, ಚ, ಭೂತಕೌ, ಶಿವಸ್ಯ, ಯೌ, ಪುರಸ್ಸರೌ ॥

ಅರ್ಥ :- ಅತ್ರ = ಇಲ್ಲಿ, ಸಃ = ಆ, ಬ್ರಹ್ಮದತ್ತನಾಮಕಃ = ಬ್ರಹ್ಮದತ್ತನೆಂದು ಹೆಸರುಳ್ಳ, ತತ್ಪಿತಾ = ಹಂಸಡಿಭಿಕರ ತಂದೆ, ಉಪಾಯಯೌ = ಬಂದ, ಚ = ಮತ್ತು, ಶಿವಸ್ಯ = ಶಿವನ, ಪುರಸ್ಸರೌ = ಮುಂಭಾಗದಲ್ಲಿ, ಯೌ = ಯಾವ, ಭೂತಕೌ = ಭೂತಗಳು, ಸಮಾಗತೇ = ಬಂದವು.

ತಾತ್ಪರ್ಯ :- ಹಂಸಡಿಭಿಕರ ತಂದೆ ಬ್ರಹ್ಮದತ್ತನೆಂಬುವನೂ ಅಲ್ಲಿಗೆ ಬಂದ. ಶಿವನ ಮುಂಭಾಗದಲ್ಲಿ ಪರಿವಾರವಾಗಿ ಸಂಚರಿಸುವ ಎರಡು ಭೂತಗಳೂ ಬಂದವು.

ವಿಚಕ್ರನಾಮಕೋಽಸುರಃ ಪುರಾ ವಿರಿಂಚತೋ ವರಮ್ ।
ಅವಧ್ಯತಾಮಜೇಯತಾಮವಾಪ್ಯ ಬಾಧತೇ ಸುರಾನ್ ॥ ೨೪೫ ॥

**ಪದಚ್ಛೇದ** :- **ವಿಚಕ್ರನಾಮಕಃ, ಅಸುರಃ, ಪುರಾ, ವಿರಿಂಚತಃ, ವರಮ್ । ಅವಧ್ಯತಾಮ್, ಅಜೇಯತಾಮ್, ಅವಾಪ್ಯ, ಬಾಧತೇ, ಸುರಾನ್ ॥**

**ಅರ್ಥ** :- **ವಿಚಕ್ರನಾಕಮಃ** = ವಿಚಕ್ರನೆಂಬ, **ಅಸುರಃ** = ರಾಕ್ಷಸನು, **ಪುರಾ** = ಹಿಂದೆ, **ವಿರಿಂಚತಃ** = ಚತುರ್ಮುಖನ ದೆಸೆಯಿಂದ, **ಅವಧ್ಯತಾಂ** = ಅವಧ್ಯತ್ವ, **ಅಜೇಯತಾಂ** = ಅಜೇಯತ್ವ, **ವರಂ** = ವರನು, **ಅವಾಪ್ಯ** = ಪಡೆದು, **ಸುರಾನ್** = ದೇವತೆಗಳನ್ನು, **ಬಾಧತೇ** = ಬಾಧಿಸುತ್ತಿದ್ದ.

**ತಾತ್ಪರ್ಯ** :- ವಿಚಕ್ರನೆಂಬ ಅಸುರ ಹಿಂದೆ ಬ್ರಹ್ಮನಿಂದ ಅವಧ್ಯತ್ವ ಅಜೇಯತ್ವ ವರವನ್ನು ಪಡೆದು ದೇವತೆಗಳನ್ನು ಬಾಧಿಸುತ್ತಿದ್ದ.

**ಸ ಚಾಭವತ್ ತಯೋಃ ಸಖಾ ಸಹಾಯಕಾಮ್ಯಯಾऽऽಗಮತ್ ।**
**ಹಿಡಿಂಬರಾಕ್ಷಸೋऽಪಿ ಯಃ ಪುರಾऽऽಪ ಶಂಕರಾದ್ ವರಮ್ ॥ ೨೪೬ ॥**

**ಪದಚ್ಛೇದ** :- **ಸಃ, ಚ, ಅಭವತ್, ತಯೋಃ, ಸಖಾ, ಸಹಾಯಕಾಮ್ಯಯಾ, ಅಗಮತ್ । ಹಿಡಿಂಬರಾಕ್ಷಸಃ, ಅಪಿ, ಯಃ, ಪುರಾ, ಆಪ, ಶಂಕರಾತ್, ವರಮ್ ॥**

**ಅರ್ಥ** :- **ಸಃ** = ವಿಚಕ್ರನು, **ತಯೋಃ** = ಹಂಸಡಿಭಿಕರ, **ಸಖಾ** = ಗೆಳೆಯ, **ಅಭವತ್** = ಆಗಿದ್ದ, **ಸಹಾಯಕಾಮ್ಯಯಾ** = ಸಹಾಯ ನೀಡುವ ಬಯಕೆ-ಯಿಂದ, **ಅಗಮತ್** = ಬಂದ, **ಚ** = ಮತ್ತು, **ಹಿಡಿಂಬರಾಕ್ಷಸಃ ಅಪಿ** = ಹಿಡಿಂಬ ರಾಕ್ಷಸನೂ ಕೂಡ, **ಪುರಾ** = ಹಿಂದೆ, **ಯಃ** = ಯಾವ, **ಶಂಕರಾತ್** = ರುದ್ರನಿಂದ, **ವರಂ** = ವರವನ್ನು, **ಆಪ** = ಹೊಂದಿದ.

**ತಾತ್ಪರ್ಯ** :- ವಿಚಕ್ರ, ಹಂಸಡಿಭಿಕರ ಮಿತ್ರನಾಗಿದ್ದ. ಆದುದರಿಂದ ಅವನು ಅವರಿಗೆ ಸಹಾಯ ನೀಡುವ ಬಯಕೆಯಿಂದ ಬಂದ, ಹಿಡಿಂಬ ರಾಕ್ಷಸನೂ ಶಿವನಿಂದ ವರವನ್ನು ಪಡೆದಿದ್ದ.

**ನ ಜೇಯಸೇ ನ ವಧ್ಯಸೇ ಕುತಶ್ಚನೇತಿ ತೋಷಿತಾತ್ ।**
**ಸ ಚೈತಯೋಃ ಸಖಾऽಭವತ್ ಸಮಾಜಗಾಮ ತತ್ರ ಚ ॥ ೨೪೭ ॥**

**ಪದಚ್ಛೇದ** :- **ನ, ಜೇಯಸೇ, ನ, ವಧ್ಯಸೇ, ಕುತಶ್ಚನ, ಇತಿ, ತೋಷಿತಾತ್ । ಸಃ, ಚ, ಏತಯೋಃ, ಸಖಾ, ಅಭವತ್, ಸಮಾಜಗಾಮ, ತತ್ರ, ಚ ॥**

ಅರ್ಥ :- ತೋಷಿತಾತ್ = ಸಂತೋಷ ಪಡಿಸಲ್ಪಟ್ಟ ಶಿವನಿಂದ, ಕುತಶ್ಚನ = ಯಾರಿಂದಲೂ, ನ ವಧ್ಯಸೇ = ಕೊಲ್ಲಲ್ಪಡುವುದಿಲ್ಲ, ನ ಜಾಯಸೇ = ಪರಾಭವ ಹೊಂದುವುದಿಲ್ಲ, ಇತಿ = ಎಂದು, ಚ = ಮತ್ತು, ಸಃ = ಹಿಡಿಂಬನು, ಏತಯೋಃ = ಹಂಸಡಿಭಿಕರ, ಸಖಾ = ಮಿತ್ರ, ಅಭವತ್ = ಆಗಿದ್ದನು, ಚ = ಮತ್ತು, ತತ್ರ = ಅಲ್ಲಿಗೆ, ಸಮಾಜಗಾಮ = ಬಂದ.

ತಾತ್ಪರ್ಯ :- ಸಂತುಷ್ಟನಾದ ಶಿವನಿಂದ ಹಿಡಿಂಬನಿಗೆ ಅವಧ್ಯನಾಗು ಅಜೇಯನಾಗು ಎಂದು ವರಿವತ್ತ ಇವನು ಹಂಸಡಿಭಿಕರ ಗೆಳೆಯನಾದ್ದರಿಂದ ಅವರಿದ್ದಲ್ಲಿಗೆ ಬಂದ.

ಅಕ್ಷೋಹಿಣೀದಶಾತ್ಮಕಂ ಬಲಂ ತಯೋರ್ಬಭೂವ ಹ ।
ವಿಚಕ್ರಗಂ ಷಡಾತ್ಮಕಂ ತಥೈಕಮೇವ ರಾಕ್ಷಸಮ್ ॥ ೨೪೮ ॥

ಪದಚ್ಛೇದ :– ಅಕ್ಷೌಹಿಣೀ, ದಶಾತ್ಮಕಂ, ಬಲಂ, ತಯೋಃ, ಬಭೂವ, ಹ । ವಿಚಕ್ರಗಂ, ಷಡಾತ್ಮಕಂ, ತಥಾ, ಏಕಮ್, ಏವ, ರಾಕ್ಷಸಮ್ ॥

ಅರ್ಥ :- ತಯೋಃ = ಹಂಸಡಿಭಿಕರಿಗೆ, ದಶಾತ್ಮಕಂ = ಹತ್ತು, ಅಕ್ಷೌಹಿಣೀ ಬಲಂ = ಅಕ್ಷೌಹಿಣಿ ಸೈನ್ಯ, ವಿಚಕ್ರಗಂ = ವಿಚಕ್ರನಲ್ಲಿ, ಷಡಾತ್ಮಕಂ = ಆರು, ತಥಾ = ಹಾಗೆ, ರಾಕ್ಷಸಂ = ಹಿಡಿಂಬನಿಗೆ, ಏಕಂ ಏವ = ಒಂದೇ, (ಅಕ್ಷೌಹಿಣೀ = ಸೇನ), ಬಭೂವ ಹ = ಇತ್ತು ಅಷ್ಟೆ.

ತಾತ್ಪರ್ಯ :- ಹಂಸಡಿಭಿಕರಿಗೆ ಹತ್ತು ಅಕ್ಷೌಹಿಣೀ ಸೈನ್ಯ ವಿಚಕ್ರನಲ್ಲಿ ಆರು ಹಿಡಿಂಬನಲ್ಲಿ ಒಂದು ಅಕ್ಷೌಹಿಣಿ ಸೇನ ಇತ್ತು.

ದ್ವಿರಷ್ಟಸೇನಯಾ ಯುತೌ ಸಹೈಕಯೈವ ತೌ ನೃಪೌ ।
ಸಮೀಯತುರ್ಯುಧೇ ಹರಿಂ ಹರಿಶ್ಚ ತೌ ಸಸಾರ ಹ ॥ ೨೪೯ ॥

ಪದಚ್ಛೇದ :– ದ್ವಿರಷ್ಟಸೇನಯಾ, ಯುತೌ, ಸಹ, ಏಕಯಾ, ಏವ, ತೌ, ನೃಪೌ । ಸಮೀಯತುಃ, ಯುಧೇ, ಹರಿಂ, ಹರಿಃ, ಚ, ತೌ, ಸಸಾರ, ಹ ॥

ಅರ್ಥ :- ದ್ವಿರಷ್ಟಸೇನಯಾ = ಹದಿನಾರು ಸೇನೆಯಿಂದ, ಏಕಯಾ ಏವ ಸಹ = ಒಂದರೊಂದಿಗೆ, ಯುತೌ = ಕೂಡಿ, ತೌ = ಆ, ನೃಪೌ =

ಹಂಸಡಿಭಿಕರು, ಹರಿಂ = ಕೃಷ್ಣನನ್ನು, ಯುಧೇ = ಯುದ್ಧಕ್ಕಾಗಿ, ಸಮೀಯತುಃ = ಸಮೀಪಿಸಿದರು, ಚ = ಮತ್ತು, ತೌ = ಅವರನ್ನು, ಹರಿಃ = ಶ್ರೀಕೃಷ್ಣನು, ಸಸಾರ ಹ = ಮೇಲೇರಿ ಹೋದ.

ತಾತ್ಪರ್ಯ :- ಹೀಗೆ ಒಟ್ಟು ಹದಿನೇಳು ಅಕ್ಷೌಹಿಣಿ ಸೈನ್ಯದಿಂದ ಯುಕ್ತ-ರಾಗಿದ್ದ ಹಂಸಡಿನಿಕರು ಯುದ್ಧಕ್ಕಾಗಿ ಶ್ರೀಕೃಷ್ಣನ ಮೇಲೇರಿ ಬಂದರು ಕೃಷ್ಣನು ಅವರ ಮೇಲೇರಿ ಹೋದನು.

**ಅಥ ದ್ವಯೋರ್ದ್ವಯೋರಭೂದ್ ರಣೋ ಭಯಾನಕೋ ಮಹಾನ್ ।**
**ಹರಿರ್ವಿಚಕ್ರಮೇಯಿವಾನ್ ಬಲಶ್ಚ ಹಂಸಮುದ್ಧತಮ್ ॥ ೨೫೦ ॥**

**ಪದಚ್ಛೇದ :- ಅಥ, ದ್ವಯೋಃ, ದ್ವಯೋಃ, ಅಭೂತ್, ರಣಃ, ಭಯಾನಕಃ, ಮಹಾನ್ । ಹರಿಃ, ವಿಚಕ್ರಮ್, ಏಯಿವಾನ್, ಬಲಃ, ಚ, ಹಂಸಂ, ಉದ್ಧತಮ್ ॥**

**ಅರ್ಥ** :- **ಅಥ** = ಅನಂತರ, **ದ್ವಯೋಃ ದ್ವಯೋಃ** = ಇಬ್ಬರಲ್ಲಿ, **ಭಯಾನಕಃ** = ಭಯಂಕರವಾದ, **ರಣಃ** = ಯುದ್ಧವು, **ಅಭೂತ್** = ನಡೆಯಿತು, **ಹರಿಃ** = ಕೃಷ್ಣನು, **ವಿಚಕ್ರಂ** = ವಿಚಕ್ರನನ್ನು, **ಏಯಿವಾನ್** = ಮೇಲೇರಿ ಬಂದ, **ಚ** = ಮತ್ತು, **ಬಲಃ** = ಬಲರಾಮನು, **ಉದ್ಧತಂ** = ಉದ್ಧತನಾದ, **ಹಂಸಂ** = ಹಂಸನನ್ನು, (**ಏಯಿವಾನ್** = ಮೇಲೇರಿ ಬಂದ).

**ತಾತ್ಪರ್ಯ** :- ಬಳಿಕ ಮಹಾಭಯಂಕರವಾದ ದ್ವಂದ್ವ ಯುದ್ಧ ನಡೆಯಿತು. ಶ್ರೀಕೃಷ್ಣ ವಿಚಕ್ರನ ಮೇಲೇರಿ ಹೋದ. ಬಲರಾಮ ಉದ್ಧತನಾದ ಹಂಸನನ್ನು ಇದಿರಿಸಿದ.

**ತದಾಽಸ್ಯ ಚಾನುಜಂ ಯಯೌ ಶಿನಿಪ್ರವೀರ ಆಯುಧೀ ।**
**ಗದಶ್ಚ ನಾಮತೋಽನುಜೋ ಹರೇಃ ಸ ರೋಹಿಣೀಸುತಃ ॥ ೨೫೧ ॥**

ಪದಚ್ಛೇದ :- ತದಾ, ಅಸ್ಯ, ಚ, ಅನುಜಂ, ಯಯೌ, ಶಿನಿಪ್ರವೀರಃ, ಆಯುಧೀ । ಗದಃ, ಚ, ನಾಮತಃ, ಅನುಜಃ, ಹರೇಃ, ಸಃ, ರೋಹಿಣೀಸುತಃ ॥

**ಅರ್ಥ** :- ತದಾ = ಆವಾಗ, **ಅಸ್ಯ** = ಹಂಸನ, **ಅನುಜಂ** = ತಮ್ಮನಾದ ಡಿಭಿಕನನ್ನು, **ಶಿನಿಪ್ರವೀರಃ** = ಸಾತ್ಯಕಿಯು, **ಆಯುಧೀ** = ಆಯುಧದಿಂದ,

ಯಯೌ = ಇರಿದ, ಚ = ಮತ್ತು, ಹರೇಃ = ಕೃಷ್ಣನ, ನಾಮತಃ = ಹೆಸರಿನಿಂದ, ಅನುಜಃ = ತಮ್ಮನಾದ, ಸಃ = ಆ, ಗದಃ = ಗದನು, ರೋಹಿಣೀಸುತಃ = ರೋಹಿಣಿಯ ಮಗ.

ತಾತ್ಪರ್ಯ :- ಹಂಸನ ತಮ್ಮನಾದ ಡಿಭಿಕನನ್ನು ಆಯುಧಪಾಣಿಯಾದ ಸಾತ್ಯಕಿ ಎದರಿಸಿದ, ಶ್ರೀಕೃಷ್ಣನ ತಮ್ಮ ಗದನೆಂಬುವನು ರೋಹಿಣಿಯ ಮಗ.

ಪುರಾ ಸ ಚಂಡಕೋ ಗಣೋ ಹರೇರ್ನಿವೇದಿತಾಶನಃ ।
ಸಮಾಹ್ವಯದ್ ರಣಾಯ ವೈ ತಯೋಃ ಸ ತಾತಮೇವ ಹಿ ॥ ೨೫೨ ॥

ಪದಚ್ಛೇದ :- ಪುರಾ, ಚ, ಚಂಡಕಃ, ಗಣಃ, ಹರೇಃ, ನಿವೇದಿತಾಶನಃ । ಸಮಾಹ್ವಯತ್, ರಣಾಯ, ವೈ, ತಯೋಃ, ಸಃ, ತಾತಮ್, ಏವ, ಹಿ ॥

ಅರ್ಥ :- ಚ = ಮತ್ತು, ಪುರಾ = ಹಿಂದೆ, ನಿವೇದಿತಾಶನಃ = ಸಮರ್ಪಿಸಲ್ಪಟ್ಟ ಭೋಜನವುಳ್ಳ, ಹರೇಃ ಗಣಃ = ವಿಷ್ಣುವಿನ ಗಣ, ಸಃ = ಆ, ಚಂಡಕಃ = ಚಂಡನಾಗಿದ್ದ. ಸಃ = ಆ ಚಂಡನು, ತಯೋಃ = ಹಂಸಡಿಭಿಕರ, ತಾತಂ ಏವ = ತಂದೆಯಾದ ಬ್ರಹ್ಮದತ್ತನನ್ನು, ರಣಾಯವೈಃ = ಯುದ್ಧಕೋಸ್ಕರ, ಸಮಾಹ್ವಯತ್ ಹಿ = ಆಹ್ವಾನಿಸಿದನಷ್ಟೆ.

ತಾತ್ಪರ್ಯ :- ಹಿಂದೆ ವೈಕುಂಠದ ದ್ವಾರಪಾಲಕರಲ್ಲಿ ಮೊದಲನೆಯದಾದ ಚಂಡ ಎಂಬುವನು ಕೆಲವೊಮ್ಮೆ ಲೀಲೆಯಿಂದ ಶ್ರೀಹರಿ ಹಸಿದಾಗ ದಧ್ಯನ್ನ ಭೋಜನ ನೀಡುತ್ತಿದ್ದ. ಇಂತಹ ಚಂಡ ಹಂಸಡಿಭಿಕರ ತಂದೆಯಾದ ಬ್ರಹ್ಮದತ್ತನನ್ನು ಯುದ್ಧಕ್ಕಾಗಿ ಕರೆದ.

ಅಕ್ಷೋಹಿಣೀತ್ರಯಾನ್ವಿತಾಃ ಸಮಸ್ತಯಾದವಾಸ್ತದಾ ।
ತ್ರಿಲೋಚನಾನುಗೌ ಚ ತೌ ನ್ಯವಾರಯನ್ ಸರಾಕ್ಷಸೌ ॥ ೨೫೩ ॥

ಪದಚ್ಛೇದ :- ಅಕ್ಷೌಹಿಣೀತ್ರಯಾನ್ವಿತಾಃ, ಸಮಸ್ತಯಾದವಾಃ, ತದಾ । ತ್ರಿಲೋಚನಾನುಗೌ, ಚ, ತೌ, ನ್ಯವಾರಯನ್, ಸರಾಕ್ಷಸೌ ॥

ಅರ್ಥ :- ಅಕ್ಷೌಹಿಣೀತ್ರಯಾನ್ವಿತಾಃ = ಮೂರು ಅಕ್ಷೌಹಿಣೀ ಸೈನ್ಯನಿಂದ ಕೂಡಿದ, ಸಮಸ್ತಯಾದವಾಃ = ಎಲ್ಲಾ ಯಾದವರು, ತದಾ = ಆಗ,

ತ್ರಿಲೋಚನ = ಮೂರು ಕಣ್ಣುಗಳುಳ್ಳ ಶಿವನ, ಅನುಗೌ = ಅನುಚರರಾದ ಭೂತಗಳನ್ನು, ಚ = ಮತ್ತು, ಸರಾಕ್ಷಸೌ = ರಾಕ್ಷಸರುಗಳನ್ನು, ನ್ಯವಾರಯತ್ = ತಡೆದರು.

ತಾತ್ಪರ್ಯ :- ಮೂರು ಅಕ್ಷೌಹಿಣೀ ಸೈನ್ಯವುಳ್ಳ ಸಕಲ ಯಾದವರು ಶಿವನ ಅನುಚರರಾದ ಭೂತಗಳನ್ನು ಹಿಡಿಂಬ ರಾಕ್ಷಸನನ್ನು ಇದಿರಿಸಿದರು.

**ಹರಿರ್ವಿಚಕ್ರಮೋಜಸಾ ಮಹಾಸ್ತ್ರಶಸ್ತ್ರವರ್ಷಿಣಮ್ ।**
**ವಿವಾಹನಂ ನಿರಾಯುಧಂ ಕ್ಷಣಾಚ್ಚಕಾರ ಸಾಯಕೈಃ ॥ ೨೫೪ ॥**

ಪದಚ್ಛೇದ :- ಹರಿಃ, ವಿಚಕ್ರಮ್, ಓಜಸಾ, ಮಹಾಸ್ತ್ರಶಸ್ತ್ರವರ್ಷಿಣಮ್ । ವಿವಾಹನಂ, ನಿರಾಯುಧಂ, ಕ್ಷಣಾತ್, ಚಕಾರ, ಸಾಯಕೈಃ ॥

ಅರ್ಥ :- ಹರಿಃ = ಶ್ರೀಕೃಷ್ಣನು, ಓಜಸಾ = ಪರಾಕ್ರಮದಿಂದ, ಮಹಾಸ್ತ್ರಶಸ್ತ್ರವರ್ಷಿಣಂ = ಮಹಾ - ದೊಡ್ಡ, ಅಸ್ತ್ರ - ಅಸ್ತ್ರಗಳ, ಶಸ್ತ್ರ - ಶಸ್ತ್ರಗಳ, ವರ್ಷಿಣಂ = ಮಳೆಗರೆಯುತ್ತಿದ್ದ, ವಿಚಕ್ರಂ = ವಿಚಕ್ರನನ್ನು, ಸಾಯಕೈಃ = ಬಾಣಗಳಿಂದ, ಕ್ಷಣಾತ್ = ತಕ್ಷಣವೆ, ವಿವಾಹನಂ = ವಿರಥನನ್ನಾಗಿ, ನಿರಾಯುಧಂ = ಆಯುಧರಹಿತನನ್ನಾಗಿ, ಚಕಾರ = ಮಾಡಿದನು.

ತಾತ್ಪರ್ಯ :- ಶ್ರೀಕೃಷ್ಣ ಪರಾಕ್ರಮದಿಂದ ಮಹಾ ಅಸ್ತ್ರ ಶಸ್ತ್ರಗಳನ್ನು ಮಳೆಗರೆಯುತ್ತಿದ್ದ ವಿಚಕ್ರವನ್ನು ಬಾಣಗಳಿಂದ ವಿರಥನನ್ನಾಗಿ ನಿರಾಯುಧನನ್ನಾಗಿ ತಕ್ಷಣ ಮಾಡಿದನು.

**ಪುನಶ್ಚ ಪಾದಪಾನ್ ಗಿರೀನ್ ಪ್ರಮುಂಚತೋಽರಿಣಾಽರಿಹಾ ।**
**ಶಿರೋ ಜಹಾರ ದೇವತಾ ವಿನೇದುರತ್ರ ಹರ್ಷಿತಾಃ ॥ ೨೫೫ ॥**

ಪದಚ್ಛೇದ :- ಪುನಃ, ಚ, ಪಾದಪಾನ್, ಗಿರೀನ್, ಪ್ರಮುಂಚತಃ, ಅರಿಣಾ, ಅರಿಹಾ । ಶಿರಃ, ಜಹಾರ, ದೇವತಾಃ, ವಿನೇದುಃ, ಅತ್ರ, ಹರ್ಷಿತಾಃ ॥

ಅರ್ಥ :- ಪುನಃ = ಮತ್ತೆ, ಪಾದಪಾನ್ = ಮರಗಳನ್ನು, ಚ = ಮತ್ತು, ಗಿರೀನ್ = ಪರ್ವತಗಳನ್ನು, ಪ್ರಮುಂಚತಃ = ಎಸೆಯುತ್ತಿರುವಾಗ, ಅರಿಹಾ = ಶತೃನಾಶಕನಾದ ಕೃಷ್ಣನಿಂದ, ಅರಿಣಾ = ಚಕ್ರದಿಂದ, ಶಿರಃ = ತಲೆಯನ್ನು,

**ಜಹಾರ** = ಕತ್ತರಿಸಿದನು, **ಅತ್ರ** = ಇಲ್ಲಿ, **ದೇವತಾಃ** = ದೇವತೆಗಳು, **ಹರ್ಷಿತಾಃ** = ಸಂತುಷ್ಟರಾಗಿ, **ವಿನೇದುಃ** = ಜಯಕಾರ ಮಾಡಿದರು.

**ತಾತ್ಪರ್ಯ** :- ವಿಚಕ್ರನು ಮರಗಳನ್ನು ಬೆಟ್ಟಗಳನ್ನು ಪ್ರಯೋಗಿಸಿದಾಗ ಶತೃನಾಶಕನಾದ ಶ್ರೀಕೃಷ್ಣನು ಚಕ್ರದಿಂದ ಅವನ ಶಿರವನ್ನು ತರಿದ. ದೇವತೆಗಳು ಹರ್ಷಿತರಾಗಿ ಜಯಕಾರ ಮಾಡಿದರು.

**ಪ್ರಸೂನವರ್ಷಿಭಿಃ ಸ್ತುತಶ್ಚತುರ್ಮುಖಾದಿಭಿಃ ಪ್ರಭುಃ ।**
**ಸಸಾರ ತೌ ಹರಾನುಗೌ ಪ್ರಭಕ್ಷಕೌ ಸ ಸಾತ್ವತಾಮ್ ॥ ೨೫೬ ॥**

ಪದಚ್ಛೇದ :- **ಪ್ರಸೂನವರ್ಷಿಭಿಃ, ಸ್ತುತಃ, ಚತುರ್ಮುಖಾದಿಭಿಃ, ಪ್ರಭುಃ । ಸಸಾರ, ತೌ, ಹರಾನುಗೌ, ಪ್ರಭಕ್ಷಕೌ, ಸಃ, ಸಾತ್ಯತಾಮ್ ॥**

**ಅರ್ಥ** :- **ಪ್ರಭುಃ** = ಕೃಷ್ಣನು, **ಚತುರ್ಮುಖಾದಿಭಿಃ** = ಬ್ರಹ್ಮಾದಿಗಳಿಂದ, **ಪ್ರಸೂನ ವರ್ಷಿಭಿಃ** = ಪುಷ್ಪವೃಷ್ಟಿಗಳಿಂದ, **ಸ್ತುತಃ** = ಸ್ತುತಿಸಲ್ಪಟ್ಟನು, **ಸಃ** = ಶ್ರೀಕೃಷ್ಣನು, **ಸಾತ್ವತಾಂ** = ಯಾದವರನ್ನು, **ಪ್ರಭಕ್ಷಕೌ** = ಭಕ್ಷಿಸುತ್ತಿದ್ದ, **ತೌ** = ಆ, **ಹರಾನುಗೌ** = ಹರನ ಅನುಚರರಾದ ಭೂತಗಳನ್ನು, **ಸಸಾರ** = ಇದಿರಿಸಿದ.

**ತಾತ್ಪರ್ಯ** :- ಬ್ರಹ್ಮಾದಿ ದೇವತೆಗಳು ಕೃಷ್ಣನಿಗೆ ಪುಷ್ಪವೃಷ್ಟಿ ಮಾಡಿ ಸ್ತೋತ್ರ- ಗೈದರು. ಬಳಿಕ ಕೃಷ್ಣನು ಯಾದವರನ್ನು ಭಕ್ಷಿಸುತ್ತಿದ್ದ ಭೂತಗಳನ್ನು ಇದಿರಿಸಿದ.

**ಸಮಸ್ತಯಾದವಾನ್ ರಣೇ ವಿಧೂಯ ತೌ ಜನಾರ್ದನಮ್ ।**
**ಉಪೇತ್ಯ ಚಾಂಸಗೌ ಹರೇರದಂಶತಾಂ ಸುಕರ್ಣಕೌ ॥ ೨೫೭ ॥**

ಪದಚ್ಛೇದ :- **ಸಮಸ್ತ ಯಾದವಾನ್, ರಣೇ, ವಿಧೂಯ, ತೌ, ಜನಾರ್ದನಮ್ । ಉಪೇತ್ಯ, ಚ, ಅಸಂಗೌ, ಹರೇಃ, ಅದಂಶತಾಂ, ಸುಕರ್ಣಕೌ ॥**

**ಅರ್ಥ** :- **ತೌ** = ಆ ಭೂತಗಳು, **ರಣೇ** = ಯುದ್ಧದಲ್ಲಿ, **ಸಮಸ್ತ ಯಾದವಾನ್** = ಎಲ್ಲಾ ಯಾದವರನ್ನು, **ವಿಧೂಯ** = ಓಡಿಸಿ, **ಚ** = ಮತ್ತು, **ಜನಾರ್ದನಮ್** = ಕೃಷ್ಣನನ್ನು, **ಅಸಂಗೌ** = ಹೆಗಲನ್ನು, **ಉಪೇತ್ಯ** = ಹೊಂದಿ, **ಹರೇಃ** = ಕೃಷ್ಣನ, **ಸುಕರ್ಣಕೌ** = ಎರಡು ಕಿವಿಗಳನ್ನು, **ಅದಂಶತಾಂ** = ಕಚ್ಚಿದವು.

ತಾತ್ಪರ್ಯ :- ಆ ಭೂತಗಳು ಯುದ್ಧದಲ್ಲಿ ಎಲ್ಲಾ ಯಾದವರನ್ನು ಓಡಿಸಿ ಕೃಷ್ಣನ ಹತ್ತಿರ ಬಂದು ಅವನ ಹೆಗಲ ಮೇಲೆ ಕುಳಿತು ಸುಂದರವಾದ ಕಿವಿಗಳನ್ನು ಕಚ್ಚಿದವು.

**ಸ ತೌ ಭುಜಪ್ರವೇಗತೋ ವಿಧೂಯ ಶಂಕರಾಲಯೇ ।**
**ನ್ಯಪಾತಯದ್ ಬಲಾರ್ಣವೋऽಮಿತಸ್ಯ ಕಿಂ ತದುಚ್ಯತೇ ॥ ೨೫೮ ॥**

ಪದಚ್ಛೇದ :- **ಸಃ, ತೌ, ಭುಜಪ್ರವೇಗತಃ, ವಿಧೂಯ, ಶಂಕರಾಲಯೇ । ನ್ಯಪಾತಯತ್, ಬಲಾರ್ಣವಃ, ಅಮಿತಸ್ಯ, ಕಿಂ, ತತ್, ಉಚ್ಯತೇ ॥**

**ಅರ್ಥ** :- **ಬಲಾರ್ಣವಃ** = ಶಕ್ತಿಯಿಂದ ಸಮುದ್ರದಂತಿರುವ, **ಸಃ** = ಆ ಕೃಷ್ಣನು, **ಭುಜಪ್ರವೇಗತಃ** = ಭುಜಗಳನ್ನು ವೇಗದಿಂದ, **ವಿಧೂಯ** = ಕೊಡವಿ, **ಶಂಕರಾಲಯೇ** = ಶಿವನ ಕೈಲಾಸದಲ್ಲಿ, **ನ್ಯಪಾತಯತ್** = ಬೀಳಿಸಿದನು, **ಅಮಿತಸ್ಯ** = ಅಮಿತ ಶಕ್ತಿಯುಳ್ಳ ಶ್ರೀಕೃಷ್ಣನಿಗೆ, **ಕಿಂ ತತ್ ಉಚ್ಯತೇ** = ಇದೇನೆಂದು ಹೇಳಬೇಕು.

ತಾತ್ಪರ್ಯ :- ಬಲಸಾಗರನಾದ ಕೃಷ್ಣನು ಭುಜಗಳನ್ನು ರಭಸದಿಂದ ಕೊಡವಿ, ಅದರ ವೇಗದಿಂದ ಆ ಭೂತಗಳನ್ನು ಶಿವನ ಕೈಲಾಸಕ್ಕೆ ಎಸೆದು ಬೀಳಿಸಿದ. ಎಣಿಸಲು, ಹೇಳಲು ಅಸಾಧ್ಯವಾದ ಶಕ್ತಿಯುಳ್ಳ ಕೃಷ್ಣನಲ್ಲಿ ಇದೇನು ಆಶ್ಚರ್ಯ?

**ಪ್ರಭಕ್ಷಯಂತಮೋಜಸಾ ಹಿಡಿಂಬಮುದ್ಧತಂ ಬಲಮ್ ।**
**ಸಹೋಗ್ರಸೇನಕೋ ಯಯೌ ಪಿತಾ ಹರೇಃ ಶರಾನ್ ಕ್ಷಿಪನ್ ॥ ೨೫೯ ॥**

ಪದಚ್ಛೇದ :- **ಪ್ರಭಕ್ಷಯಂತಮ್, ಓಜಸಾ, ಹಿಡಿಂಬಮ್, ಉದ್ಧತಂ, ಬಲಮ್ । ಸಹ, ಉಗ್ರಸೇನಕಃ, ಯಯೌ, ಪಿತಾ, ಹರೇಃ, ಶರಾನ್, ಕ್ಷಿಪನ್ ॥**

**ಅರ್ಥ** :- **ಓಜಸಾ ಸಹ** = ತನ್ನ ಶಕ್ತಿಯಿಂದ, **ಪ್ರಭಕ್ಷಯಂತಂ** = ಯಾದವರ ಸೈನ್ಯವನ್ನು ತಿನ್ನುತ್ತಿದ್ದ, **ಉದ್ಧತಂ** = ಉದ್ಧತನಾದ, **ಬಲಂ** = ಬಲಿಷ್ಠನಾದ, **ಹಿಡಿಂಬಂ** = ಹಿಡಿಂಬನನ್ನು, **ಹರೇಃ** = ಶ್ರೀಕೃಷ್ಣನ, **ಪಿತಾ** = ತಂದೆಯಾದ ವಸುದೇವ, **ಉಗ್ರಸೇನಕಃ** = ಉಗ್ರಸೇನರು, **ಶರಾನ್** = ಬಾಣಗಳನ್ನು, **ಕ್ಷಿಪನ್** = ಎಸೆಯುತ್ತ, **ಯಯೌ** = ಹೋದರು.

ತಾತ್ಪರ್ಯ :- ಯಾದವರ ಸೈನ್ಯವನ್ನು ತನ್ನ ಶಕ್ತಿಯಿಂದ ಹಿಡಿದು ತಿನ್ನುತ್ತಿದ್ದ ಉದ್ಧತನಾದ ಹಿಡಿಂಬನನ್ನು ವಸುದೇವ ಮತ್ತು ಉಗ್ರಸೇನರು ಬಾಣಗಳನ್ನೆಸೆಯುತ್ತ ಇದಿರಿಸಿದರು.

**ತಯೋೀ ರಥೌ ಸಹಾಯುಧೌ ಪ್ರಭಕ್ಷ್ಯ ರಾಕ್ಷಸೋ ಬಲೀ ।**
**ಪ್ರಗೃಹ್ಯ ತಾವಭಾಷತ ಪ್ರಯಾತಮಾಶು ಮೇ ಮುಖಮ್ ॥ ೨೬೦ ॥**

ಪದಚ್ಛೇದ :- ತಯೋಃ, ರಥೌ, ಸಹಾಯುಧೌ, ಪ್ರಭಕ್ಷ್ಯ, ರಾಕ್ಷಸಃ, ಬಲೀ । ಪ್ರಗೃಹ್ಯ, ತೌ, ಅಭಾಷತ, ಪ್ರಯಾತಮ್, ಆಶು, ಮೇ, ಮುಖಮ್ ॥

**ಅರ್ಥ** :- ಬಲೀ = ಬಲಿಷ್ಠನಾದ, ರಾಕ್ಷಸಃ = ರಾಕ್ಷಸನು, ಸಹಾಯುಧೌ = ಆಯುಧ ಸಹಿತವಾಗಿ, ತಯೋಃ = ಅವರ, ರಥೌ = ರಥವನ್ನು, ಪ್ರಭಕ್ಷ್ಯ = ಭಕ್ಷಿಸಿ, ತೌ = ಅವರನ್ನು, ಪ್ರಗೃಹ್ಯ = ಹಿಡಿದು, ಆಯು = ಬೇಗನೇ, ಮೇ = ನನ್ನ, ಮುಖಂ = ಬಾಯಿಯನ್ನು, ಪ್ರಯಾತಂ = ಪ್ರವೇಶಿಸಿ, ಅಭಾಷತ = ಹೇಳಿದ.

ತಾತ್ಪರ್ಯ :- ಪ್ರಬಲನಾದ ರಾಕ್ಷಸನು ಅವರ ರಥಗಳನ್ನು ಆಯುಧ ಸಮೇತ ಭಕ್ಷಿಸಿ ಅವರನ್ನು ಹಿಡಿದು ಹೇಳಿದ, ಬೇಗನೆ ನನ್ನ ಬಾಯಿಯನ್ನು ಸೇರಿಕೊಳ್ಳಿ ಎಂದು.

**ತದಾ ಗದಾವರಾಯುಧಃ ಸಹೈವ ಹಂಸಭೂಭೃತಾ ।**
**ಪ್ರಯುಧ್ಯಮಾನ ಆಯಯೌ ವಿಹಾಯ ತಂ ಹಲಾಯುಧಃ ॥ ೨೬೧ ॥**

ಪದಚ್ಛೇದ :- ತದಾ, ಗದಾವರಾಯುಧಃ, ಸಹ, ಏವ, ಹಂಸಭೂಭೃತಾ, ಪ್ರಯುಧ್ಯಮಾನಃ, ಆಯಯೌ, ವಿಹಾಯ, ತಂ, ಹಲಾಯುಧಃ ॥

**ಅರ್ಥ** :- ತದಾ = ಆಗ, ಗದಾವರಾಯುಧಃ = ಉತ್ತಮವಾದ ಗದಾಯುಧ ಧರಿಸಿ, ಹಂಸಭೂಭೃತಾ ಸಹ ಏವ = ಹಂಸರಾಜನೊಡನೆ, ಪ್ರಯುಧ್ಯಮಾನಃ = ಯುದ್ಧ ಮಾಡುತ್ತಿದ್ದ, ಹಲಾಯುಧಃ = ಬಲರಾಮನು, ತಂ = ಹಂಸರಾಜನನ್ನು, ವಿದಾಯ = ಬಿಟ್ಟು, ಆಯಯೌ = ಬಂದನು.

**ತಾತ್ಪರ್ಯ** :- ಆ ಸಂದರ್ಭದಲ್ಲಿ ಉತ್ತಮವಾದ ಗದೆಯಿಂದ ಹಂಸ-ರಾಜನೊಡನೆ ಯುದ್ಧ ಮಾಡುತ್ತಿದ್ದ ಬಲರಾಮನು, ಅವನನ್ನು ಬಿಟ್ಟು ಬಂದನು.

**ತಮಾಗತಂ ಸಮೀಕ್ಷ್ಯ ತೌ ವಿಹಾಯ ರಾಕ್ಷಸಾಧಿಪಃ ।**
**ಉಪೇತ್ಯ ಮುಷ್ಟಿನಾಽಹನದ್ ಬಲಂ ಸ ವಕ್ಷಸಿ ಕ್ರುಧಾ ॥ ೨೬೨ ॥**

**ಪದಚ್ಛೇದ** :- ತಮ್, ಆಗತಂ, ಸಮೀಕ್ಷ್ಯ, ತೌ, ವಿಹಾಯ, ರಾಕ್ಷಸಾಧಿಪಃ । ಉಪೇತ್ಯ, ಮುಷ್ಟಿನಾ, ಅಹನತ್, ಬಲಂ, ಸಃ, ವಕ್ಷಸಿ, ಕ್ರುಧಾ ॥

**ಅರ್ಥ** :- **ಆಗತಂ** = ಬಂದ, **ತಂ** = ಆ ಬಲರಾಮನನ್ನು, **ಸಮೀಕ್ಷ್ಯ** = ಕಂಡು, **ರಾಕ್ಷಸಾಧಿಪಃ** = ರಾಕ್ಷಸಾಧಿಪನು, **ತೌ** = ಅವರನ್ನು, **ವಿಹಾಯ** = ಬಿಟ್ಟು, **ಉಪೇತ್ಯ** = ಸಮೀಪಿಸಿ, **ಕ್ರುಧಾ** = ಕೋಪದಿಂದ, **ಸಃ** = ಆ ರಾಕ್ಷಸಾಧಿಪನು, **ಮುಷ್ಟಿನಾ** = ಮುಷ್ಟಿಯಿಂದ, **ಬಲಂ** = ಬಲರಾಮನನ್ನು, **ವಕ್ಷಸಿ** = ಎದೆಯಲ್ಲಿ, **ಅಹನತ್** = ಪ್ರಹರಿಸಿದನು.

**ತಾತ್ಪರ್ಯ** :- ಬಲರಾಮ ಬಂದದನ್ನು ಕಂಡು ರಾಕ್ಷಸಾಧಿಪ ಅವರನ್ನು ಬಿಟ್ಟು ಬಂದು ಕ್ರೋಧದಿಂದ ಬಲರಾಮನನ್ನು ಎದೆಯಲ್ಲಿ ಮುಷ್ಟಿಯಿಂದ ತಿವಿದನು.

**ಉಭೌ ಹಿ ಬಾಹುಶಾಲಿನಾವಯುಧ್ಯತಾಂ ಚ ಮುಷ್ಟಿಭಿಃ ।**
**ಚಿರಂ ಪ್ರಯುಧ್ಯ ತಂ ಬಲೋಽಗ್ರಹೀತ್ ಸ ಜಂಘಯೋರ್ವಿಭುಃ ॥ ೨೬೩ ॥**

**ಪದಚ್ಛೇದ** :- ಉಭೌ, ಹಿ, ಬಾಹುಶಾಲಿನೌ, ಅಯುಧ್ಯತಾಂ, ಚ, ಮುಷ್ಟಿಭಿಃ । ಚಿರಂ, ಪ್ರಯುಧ್ಯ, ತಂ, ಬಲಃ, ಅಗ್ರಹೀತ್, ಸಃ, ಜಂಘಯೋಃ, ವಿಭುಃ ॥

**ಅರ್ಥ** :- **ಉಭೌ ಹಿ** = ಇಬ್ಬರೂ, **ಬಾಹುಶಾಲಿನೌ** = ಬಾಹುಶಾಲಿಗಳು, **ಮುಷ್ಟಿಭಿಃ** = ಮುಷ್ಟಿಗಳಿಂದ, **ಅಯುಧ್ಯತಾಂ** = ಯುದ್ಧ ಮಾಡಿದ, **ಚ** = ಮತ್ತು, **ಚಿರಂ** = ಬಹಳ ಕಾಲ, **ಪ್ರಯುಧ್ಯ** = ಯುದ್ಧ ಮಾಡಿ, **ವಿಭುಃ** = ಸಮರ್ಥನಾದ, **ಸಃ** = ಆ, **ಬಲಃ** = ಬಲರಾಮನು, **ತಂ** = ಅವನನ್ನು, **ಜಂಘಯೋಃ** = ಮೊಣಕಾಲುಗಳಲ್ಲಿ, **ಅಗ್ರಹೀತ್** = ಹಿಡಿದ.

**ತಾತ್ಪರ್ಯ** :- ಇಬ್ಬರೂ ಬಾಹುಶಾಲಿಗಳು ಮುಷ್ಟಿ ಕಾಳಗ ಮಾಡಿದರು. ಬಹಳ ಹೊತ್ತು ಯುದ್ಧ ಮಾಡಿದ ಬಳಿಕ ಸಮರ್ಥನಾದ ಬಲರಾಮ ರಾಕ್ಷಸನನ್ನು ಮೊಣಕಾಲುಗಳಲ್ಲಿ ಹಿಡಿದ.

**ಅಥೈನಮುದ್ಧತಂ ಬಲಾದ್ ಬಲಃ ಸ ದೂರಮಾಕ್ಷಿಪತ್ ।**
**ಪಪಾತ ಪಾದಯೋಜನೇ ಸ ನಾಽಜಗಾಮ ತಂ ಪುನಃ ॥ ೨೬೪ ॥**

**ಪದಚ್ಛೇದ** :- ಅಥ, ಏನಮ್, ಉದ್ಧತಂ, ಬಲಾತ್, ಬಲಃ, ಸಃ, ದೂರಂ, ಆಕ್ಷಿಪತ್ । ಪಪಾತ, ಪಾದಯೋಜನೇ, ಸಃ, ನ, ಆಜಗಾಮ, ತಂ, ಪುನಃ ॥

**ಅರ್ಥ** :- **ಅಥ** = ಅನಂತರ, **ಉದ್ಧತಂ** = ಉದ್ಧತನಾದ, **ಏನಂ** = ರಾಕ್ಷಸನನ್ನು, **ಸಃ** = ಆ, **ಬಲಃ** = ಬಲರಾಮನು, **ಬಲಾತ್** = ತನ್ನ ಶಕ್ತಿಯಿಂದ, **ದೂರಃ** = ಬಹಳ ದೂರ, **ಆಕ್ಷಿಪತ್** = ಎಸೆದನು, **ಸಃ** = ಆ ರಾಕ್ಷಸನು, **ಪಾದಯೋಜನೇ** = ಕಾಲು ಯೋಜನದಷ್ಟು ದೂರದಲ್ಲಿ, **ಪಪಾತ್** = ಬಿದ್ದನು, **ತಂ** = ಆ ಬಲರಾಮನನ್ನು ಕುರಿತು, **ಪುನಃ** = ತಿರುಗಿ, **ನ ಆಜಗಾಮ** = ಬರಲಿಲ್ಲ.

**ತಾತ್ಪರ್ಯ** :- ಬಲರಾಮನು ಕೊಬ್ಬಿದ ರಾಕ್ಷಸನನ್ನು ತನ್ನ ಶಕ್ತಿಯಿಂದ ದೂರ ಎಸೆದ, ರಾಕ್ಷಸನಾದರು ಕಾಲು ಯೋಜನದಷ್ಟು ದೂರದಲ್ಲಿ ಬಿದ್ದ, ಮತ್ತೆ ತಿರುಗಿ ಬಲರಾಮನ ಹತ್ತಿರ ಬರಲಿಲ್ಲ.

**ವಿಹಾಯ ಸೈನಿಕಾಂಶ್ಚ ತೌ ನೃಪೌ ಯಯೌ ವನಾಯ ಸಃ ।**
**ನಿಹತ್ಯ ತಸ್ಯ ರಾಕ್ಷಸಾನ್ ಹಲಾಯುಧೋ ನನಾದ ಹ ॥ ೨೬೫ ॥**

**ಪದಚ್ಛೇದ** :- ವಿಹಾಯ, ಸೈನಿಕಾನ್ ಚ, ತೌ, ನೃಪೌ, ಯಯೌ, ವನಾಯ, ಸಃ । ನಿಹತ್ಯ, ತಸ್ಯ, ರಾಕ್ಷಸಾನ್, ಹಲಾಯುಧಃ, ನನಾದ, ಹ ॥

**ಅರ್ಥ** :- **ಸಃ** = ಆ ಹಿಡಿಂಬನು, **ಸೈನಿಕಾನ್** = ತನ್ನ ಸೈನಿಕರನ್ನು, **ಚ** = ಮತ್ತು, **ತೌ** = ಆ, **ನೃಪೌ** = ಹಂಸಡಿಭಿಕರನ್ನು, **ವಿದಾಯ** = ಬಿಟ್ಟು, **ವನಾಯ** = ಕಾಡಿಗೆ, **ಯಯೌ** = ಹೋದನು, **ಹಲಾಯುಧಃ** = ಬಲರಾಮನು, **ತಸ್ಯ** = ಹಿಡಿಂಬನ, **ರಾಕ್ಷಸಾನ್** = ರಾಕ್ಷಸರನ್ನು, **ನಿಹತ್ಯ** = ಕೊಂದು, **ನನಾದ ಹ** = ಸಿಂಹನಾದಗೈದರು.

**ತಾತ್ಪರ್ಯ** :- ಹಿಡಿಂಬ ತನ್ನ ಸೈನಿಕರನ್ನು ಹಾಗೂ ಹಂಸಡಿಭಿಕರನ್ನು ಬಿಟ್ಟು ಕಾಡಿಗೆ ಓಡಿ ಹೋದ, ಇತ್ತ ಬಲರಾಮ ಅವನ ರಾಕ್ಷಸರನ್ನು ಕೊಂದು ಸಿಂಹನಾದ ಮಾಡಿದ.

**ಗದಸ್ತು ಸಾಲ್ವಭೂಭೃತಾ ವಯೋಗತೇನ ಯೋಧಯನ್ ।**
**ವಿವಾಹನಂ ನಿರಾಯುಧಂ ಚಕಾರ ಸೋಽಪ್ಯಪಾದ್ರವತ್ ॥ ೨೬೬ ॥**

**ಪದಚ್ಛೇದ** :- ಗದಃ, ತು, ಸಾಲ್ವಭೂಭೃತಾಃ, ವಯೋಗತೇನ, ಯೋಧಯನ್ । ವಿವಾಹನಂ, ನಿರಾಯುಧಂ, ಚಕಾರ, ಸಃ, ಅಪಿ, ಅಪಾದ್ರವತ್ ॥

**ಅರ್ಥ** :- **ಗತಃ ತು** = ಗದನಾದರೂ, **ವಯೋಗತೇನ** = ವಯೋವೃದ್ಧನಾದ, **ಸಾಲ್ವಭೂಭೃತಾ** = ಸಾಲ್ವರಾಜನೊಂದಿಗೆ, **ಯೋಧಯನ್** = ಹೋರಾಡುತ್ತ, **ವಿವಾಹನಂ** = ವಿರಥನನ್ನಾಗಿ, **ನಿರಾಯುಧಂ** = ಆಯುಧ ರಹಿತನನ್ನಾಗಿ, **ಚಕಾರ** = ಮಾಡಿದನು, **ಸಃ ಅಪಿ** = ಸಾಲ್ವರಾಜನಾದರೂ, **ಅಪಾದ್ರವತ್** = ಪಲಾಯನ ಮಾಡಿದನು.

**ತಾತ್ಪರ್ಯ** :- ಗದನು, ವಯೋವೃದ್ಧನಾದ ಸಾಲ್ವರಾಜನೊಡನೆ ಹೋರಾಡುತ್ತ ಅವನನ್ನು ವಿರಥನನ್ನಾಗಿ ನಿರಾಯುಧನನ್ನಾಗಿ ಮಾಡಿದಾಗ ಸಾಲ್ವರಾಜನು ಓಡಿಹೋದ.

**ಸುತೇನ ತಸ್ಯ ಕನ್ಯಸಾ ಯುಯೋಧ ಸಾತ್ಯಕೀ ರಥೀ ।**
**ವರಾಸ್ತ್ರಶಸ್ತ್ರಯೋಧಿನೌ ವಿಜಹ್ರತುಶ್ಚ ತಾವುಭೌ ॥ ೨೬೭ ॥**

**ಪದಚ್ಛೇದ** :- ಸುತೇನ, ತಸ್ಯ, ಕನ್ಯಸಾ, ಯುಯೋಧ, ಸಾತ್ಯಕೀ, ರಥೀ । ವರಾಸ್ತ್ರಶಸ್ತ್ರಯೋಧಿನೌ, ವಿಜಹ್ರತುಃ, ಚ, ತೌ, ಉಭೌ ॥

**ಅರ್ಥ** :- **ತಸ್ಯ** = ಆ, **ಕನ್ಯಸಾ ಸುತೇನ** = ಡಿಭಿಕನೊಂದಿಗೆ, **ರಥೀ** = ರಥಾರೂಢನಾದ, **ಸಾತ್ಯಕೀ** = ಸಾತ್ಯಕಿಯು, **ಯುಯೋಧ** = ಯುದ್ಧ ಮಾಡಿದನು, **ಚ** = ಮತ್ತು, **ತೌ** = ಆ, **ಉಭೌ** = ಇಬ್ಬರು, **ವರಾಸ್ತ್ರ** = ಶಸ್ತ್ರ **ಯೋಧಿನೌ** = ಉತ್ತಮ ಅಸ್ತ್ರ ಶಸ್ತ್ರಗಳಿಂದ ಹೋರಾಡುತ್ತ, **ವಿಜಹ್ರತುಃ** = ವಿಹರಿಸಿದರು.

ತಾತ್ಪರ್ಯ :- ರಥದಲ್ಲಿ ಕುಳಿತು ಬಂದ ಸಾತ್ಯಕಿ ಡಿಭಿಕನೊಂದಿಗೆ ಹೋರಾಡಿದ. ಇಬ್ಬರು ಉತ್ತಮ ಅಸ್ತ್ರಶಸ್ತ್ರಗಳಿಂದ ಹೋರಾಡುತ್ತ ಕ್ರೀಡಿಸಿದರು.

**ಚಿರಂ ಪ್ರಯುಧ್ಯ ಸಾತ್ಯಕಿಃ ಸ ಹಂಸಕನ್ಯಸಾ ಬಲೀ ।**
**ಶತಂ ಸಪಂಚಕಂ ರಣೇ ಚಕರ್ತ ತಸ್ಯ ಧನ್ವನಾಮ್ ॥ ೨೬೮ ॥**

ಪದಚ್ಛೇದ :- ಚಿರಂ, ಪ್ರಯುಧ್ಯ, ಸಾತ್ಯಕಿಃ, ಸಃ, ಹಂಸಕನ್ಯಸಾ, ಬಲೀ । ಶತಂ, ಸಪಂಚಕಂ, ರಣೇ, ಚಕರ್ತ, ತಸ್ಯ, ಧನ್ವಿನಾಮ್ ॥

ಅರ್ಥ :- ಬಲೀ = ಬಲಿಷ್ಠನಾದ, ಸಃ = ಆ, ಸಾತ್ಯಕಿಃ = ಸಾತ್ಯಕಿಯು, ಚಿರಂ = ಬಹಳ ಕಾಲ, ಹಂಸಕನ್ಯಸಾ = ಡಿಭಿಕನೊಂದಿಗೆ, ಪ್ರಯುಧ್ಯ = ಯುದ್ಧ ಮಾಡಿ, ರಣೇ = ರಣರಂಗದಲ್ಲಿ, ಶತಂ ಸಪಂಚಕಂ = ಒಂದುನೂರ ಐದುಮಂದಿ, ತಸ್ಯ = ಅವನ, ಧನ್ವಿನಾಂ = ಧನುರ್ಧಾರಿಗಳನ್ನು, ಚಕರ್ತ = ನಾಶಪಡಿಸಿದನು.

ತಾತ್ಪರ್ಯ :- ಪ್ರಬಲನಾದ ಸಾತ್ಯಕಿ ಬಹಳ ಹೊತ್ತಿನವರೆಗೆ ಡಿಭಿಕನೊಂದಿಗೆ ಯುದ್ಧಮಾಡಿ ಅವನ ಕಡೆಯ ಒಂದುನೂರ ಐದು ಮಂದಿ ಧನುರ್ಧಾರಿಗಳನ್ನು ಸಂಹರಿಸಿದನು.

**ಸ ಖಡ್ಗಚರ್ಮಭೃದ್ ರಣೇಽಭ್ಯಯಾತ್ ಸುತಾತ್ಮಜಂ ಶಿನೇಃ ।**
**ಸ ಚೈನಮಭ್ಯಯಾತ್ ತಥಾ ವರಾಸಿಚರ್ಮಭೃದ್ ವಿಭೀಃ ॥ ೨೬೯ ॥**

ಪದಚ್ಛೇದ :- ಸಃ, ಖಡ್ಗಚರ್ಮಭೃತ್, ರಣೇ, ಅಭ್ಯಯಾತ್, ಸುತಾತ್ಮಜಂ, ಶಿನೇಃ । ಸ, ಚ, ಏನಮ್, ಅಭ್ಯಯಾತ್, ತಥಾ, ವರಾಸಿ, ಚರ್ಮಭೃತ್, ವಿಭೀಃ ॥

ಅರ್ಥ :- ಸಃ = ಆ ಡಿಭಿಕನು, ರಣೇ = ಯುದ್ಧದಲ್ಲಿ, ಖಡ್ಗ ಚರ್ಮಭೃತ್ = ಕತ್ತಿ ಗುರಾಣಿ ಹಿಡಿದು, ಶಿನೇಃ ಸುತಾತ್ಮಜಂ = ಸಾತ್ಯಕಿಯನ್ನು, ಅಭ್ಯಯಾತ್ = ಇದಿರಿಸಿದ, ತಥಾ = ಹಾಗೆಯೆ, ಏನಂ = ಡಿಭಿಕನನ್ನು, ವಿಭೀಃ = ಭಯರಹಿತನಾದ, ಸ ಚ = ಸಾತ್ಯಕಿಯಾದರೂ, ವರಾಸಿ ಚರ್ಮಭೃತ್ = ಉತ್ತಮವಾದ ಕತ್ತಿ ಗುರಾಣಿಗಳನ್ನು ಹಿಡಿದು, ಅಭ್ಯಯಾತ್ = ಇದಿರಿಸಿದನು.

**ತಾತ್ಪರ್ಯ** :- ಡಿಭಿಕ ಕತ್ತಿ ಗುರಾಣಿ ಹಿಡಿದು ಯುದ್ಧದಲ್ಲಿ ಸಾತ್ಯಕಿ-ಯನ್ನಿದಿರಿಸಿದ, ಭರರಹಿತನಾದ ಸಾತ್ಯಕಿಯೂ ಉತ್ತಮವಾದ ಕತ್ತಿ ಗುರಾಣಿ-ಗಳನ್ನು ಹಿಡಿದು ಡಿಭಿಕನನ್ನು ಇದಿರಿಸಿದ.

**ದ್ವಿಷೋಡಶಪ್ರಭೇದಕಂ ವರಾಸಿಯುದ್ಧಮಶ್ರಮೌ ।**
**ಪ್ರದರ್ಶ್ಯ ನಿರ್ವಿಶೇಷಕಾವುಭೌ ವ್ಯವಸ್ಥಿತೌ ಚಿರಮ್ ॥ ೨೭೦ ॥**

ಪದಚ್ಛೇದ :- **ದ್ವಿಷೋಡಶ ಪ್ರಭೇದಕಂ, ವರಾಸಿಯುದ್ಧಮ್, ಅಶ್ರಮೌ । ಪ್ರದರ್ಶ್ಯ, ನಿರ್ವಿಶೇಷಿಕೌ, ಉಭೌ, ವ್ಯವಸ್ಥಿತೌ, ಚಿರಮ್ ॥**

**ಅರ್ಥ** :- **ದ್ವಿಷೋಡಶ ಪ್ರಭೇದಕಂ** = ೩೨ ಬಗೆಯ, **ವರಾಸಿಯುದ್ಧಂ** = ಉತ್ತಮವಾದ ಕತ್ತಿಯಿಂದ ಯುದ್ಧವನ್ನು, **ಅಶ್ರಮೌ** = ಶ್ರಮವಿಲ್ಲದೆ, **ಚಿರಂ** = ಬಹಳ ಕಾಲ, **ಉಭೌ** = ಇಬ್ಬರು, **ಪ್ರದರ್ಶ್ಯ** = ತೋರಿಸಿ, **ನಿರ್ವಿಶೇಷಕೌ** = ಇಬ್ಬರು ಸೋಲದೆ, **ವ್ಯವಸ್ಥಿತೌ** = ಒಂದೇ ರೀತಿ ನಿಂತರು.

**ತಾತ್ಪರ್ಯ** :- ಮೂವತ್ತೆರಡು ಬಗೆಯ ಶ್ರೇಷ್ಠವಾದ ಕತ್ತಿ ಕಾಳಗವನ್ನು ಆಯಾಸವಿಲ್ಲದೆ ಬಹಳ ಹೋತ್ತು ಪ್ರದರ್ಶಿಸಿ ಇಬ್ಬರೂ ಸೋಲದೆ ಒಂದೇ ರೀತಿ ನಿಂತರು.

**ಪರಸ್ಪರಾಂತರೇಷಿಣೌ ನಚಾಂತರಂ ವ್ಯಪಶ್ಯತಾಮ್ ।**
**ತತೋ ವಿಹಾಯ ಸಂಗರಂ ಗತೌ ನಿರರ್ಥಕಂ ತ್ವಿತಿ ॥ ೨೭೧ ॥**

ಪದಚ್ಛೇದ :- **ಪರಸ್ಪರಾಂತರೇಷಿಣೌ, ನ, ಚ, ಅಂತರಂ, ವ್ಯಪಶ್ಯತಾಮ್ । ತತಃ, ವಿಹಾಯ, ಸಂಗರಂ, ಗತೌ, ನಿರರ್ಥಕಂ, ತು, ಇತಿ ॥**

**ಅರ್ಥ** :- **ಪರಸ್ಪರಾಂತರೇಷಿಣೌ** = ಪರಸ್ಪರ ಸೋಲಿಸಲು ಅವಕಾಶವನ್ನು ಹುಡುಕಿಯೂ, **ಅಂತರಂ** = ಅವಕಾಶವು, **ನ ಚ ವ್ಯಪಶ್ಯತಾಂ** = ಕಾಣದೆ ಹೋದರು, **ತತಃ** = ಅನಂತರ, **ಸಂಗರಂ** = ಯುದ್ಧವನ್ನು, **ನಿರರ್ಥಕಂ** = ನಿರರ್ಥಕ, **ಇತಿ ತು** = ಎಂಬುದಾಗಿ, **ವಿಹಾಯ** = ಬಿಟ್ಟು, **ಗತೌ** = ಹೋದರು.

**ತಾತ್ಪರ್ಯ** :- ಪರಸ್ಪರವಾಗಿ ಒಬ್ಬರೊಬ್ಬರನ್ನು ಸೋಲಿಸಲು ಮಾರ್ಗವನ್ನು ಹುಡುಕಿ ಕಾಣದೆ ಹೋದಾಗ ಯುದ್ಧ ಮಾಡುವುದು ವ್ಯರ್ಥವೆಂದು ತಿಳಿದು ಯುದ್ಧ ಬಿಟ್ಟು ಹೊರ ನಡೆದರು.

**ತತಃ ಸ ಹಂಸಸಂಯುತೋ ಜಗಾಮ ಯೋದ್ಧುಮಚ್ಯುತಮ್ ।**
**ಕ್ಷಣೇನ ತೌ ನಿರಾಯುಧೌ ಚಕಾರ ಕೇಶವಃ ಶರೈಃ ॥ ೨೭೨ ॥**

ಪದಚ್ಛೇದ :- ತತಃ, ಸಃ, ಹಂಸಯುತಃ, ಜಗಾಮ, ಯೋದ್ಧುಮ್, ಅಚ್ಯುತಮ್ । ಕ್ಷಣೇನ, ತೌ, ನಿರಾಯುಧೌ, ಚಕಾರ, ಕೇಶವಃ, ಶರೈಃ ॥

**ಅರ್ಥ** :- **ತತಃ** = ಅನಂತರ, **ಸಃ** = ಡಿಭಿಕನು, **ಹಂಸಯುತಃ** = ಹಂಸನೊಂದಿಗೆ, **ಅಚ್ಯುತಂ** = ಶ್ರೀಕೃಷ್ಣನನ್ನು, **ಯೋದ್ಧುಂ** = ಯುದ್ಧ ಮಾಡಲು, **ಜಗಾಮ** = ಹೋದನು, **ಕೇಶವಃ** = ಶ್ರೀಕೃಷ್ಣನು, **ತೌ** = ಅವರಿಬ್ಬರನ್ನು, **ಶರೈಃ** = ಬಾಣಗಳಿಂದ, **ಕ್ಷಣೇನ** = ಕ್ಷಣ ಮಾತ್ರದಿಂದ, **ನಿರಾಯುಧೌ** = ಆಯುಧರಹಿತರನ್ನಾಗಿ, **ಚಕಾರ** = ಮಾಡಿದನು.

**ತಾತ್ಪರ್ಯ** :- ಬಳಿಕ ಹಂಸನೊಂದಿಗೆ ಡಿಭಿಕನು ಕೃಷ್ಣನ ಬಳಿ ಯುದ್ಧ ಮಾಡಲು ಹೋದನು. ಆಗ ಶ್ರೀ ಕೃಷ್ಣನು ಅವರೀರ್ವರನ್ನು ಬಾಣಗಳಿಂದ ತಕ್ಷಣವೇ ನಿರಾಯುಧರನ್ನಾಗಿ ಮಾಡಿದ.

**ಹತಂ ಚ ಸೈನ್ಯಮೇತಯೋಶ್ಚತುರ್ಥಭಾಗಶೇಷಿತಮ್ ।**
**ಕ್ಷಣೇನ ಕೇಶವೇನ ತದ್ಭಯಾದಪೇಯತುಶ್ಚತೌ ॥ ೨೭೩ ॥**

ಪದಚ್ಛೇದ :- ಹತಂ, ಚ, ಸೈನ್ಯಮ್, ಏತಯೋಃ, ಚತುರ್ಥಭಾಗಶೇಷಿತಮ್ ಕ್ಷಣೇನ, ಕೇಶವೇನ, ತದ್ಭಯಾತ್, ಉಪೇಯತುಃ, ಚ, ತೌ ॥

**ಅರ್ಥ** :- **ಚ** = ಮತ್ತು, **ಕ್ಷಣೇನ** = ತಕ್ಷಣ, **ಕೇಶವೇನ** = ಕೃಷ್ಣನಿಂದ, **ಏತಯೋಃ** = ಹಂಸಡಿಭಿಕರ, **ಹತಂ** = ನಾಶಮಾಡಲ್ಪಟ್ಟ, **ಸೈನ್ಯಂ** = ಸೈನ್ಯವು, **ಚತುರ್ಥಭಾಗಶೇಷಿತಮ್** = ಕಾಲುಭಾಗ ಮಾತ್ರ ಉಳಿಯಿತು, **ಚ** = ಮತ್ತು, **ತೌ** = ಅವರಿಬ್ಬರು, **ಉಪೇಯತುಃ** = ಪಲಾಯನ ಮಾಡಿದರು.

**ತಾತ್ಪರ್ಯ** :- ಹಂಸಡಿಭಿಕರ ಸೈನ್ಯ ಕೃಷ್ಣನಿಂದ ತಕ್ಷಣವೆ ನಾಶವಾಗಿ ಕಾಲುಭಾಗ ಮಾತ್ರ ಉಳಿಯಿತು. ಆಗ ಅವರು ಕೃಷ್ಣನಿಗೆ ಹೆದರಿ ಪಲಾಯನ ಮಾಡಿದರು.

ಸ ಪುಷ್ಕರೇಕ್ಷಣಸ್ತದಾ ಸುರೈರ್ನುತೋಽಥ ಪುಷ್ಕರೇ ।
ಉವಾಸ ತಾಂ ನಿಶಾಂ ಪ್ರಭುಃ ಸಯಾದವೋಽಮಿತಪ್ರಭಃ ॥ ೨೭೪ ॥

ಪದಚ್ಛೇದ :- ಸಃ, ಪುಷ್ಕರೇ, ಕ್ಷಣಃ, ತದಾ, ಸುರೈಃ, ನುತಃ, ಅಥ, ಪುಷ್ಕರೇ । ಉವಾಸ, ತಾಂ, ನಿಶಾಂ, ಪ್ರಭುಃ, ಸಯಾದವಃ, ಅಮಿತಪ್ರಭಃ ॥

ಅರ್ಥ :- ಅಥ = ಅನಂತರ, ಅಮಿತ ಪ್ರಭಃ = ಅಮಿತವಾದ ಕಾಂತಿಯುಳ್ಳ, ಪ್ರಭುಃ = ಸ್ವಾಮಿಯಾದ, ಪುಷ್ಕರೇಕ್ಷಣ = ಕಮಲದಂತೆ ಕಣ್ಣುಳ್ಳ, ಸಃ = ಆ ಶ್ರೀಕೃಷ್ಣನು, ತದಾ = ಆಗ, ಸುರೈಃ = ದೇವತೆಗಳಿಂದ, ನುತಃ = ಹೊಗಳಿಸಿಕೊಂಡು, ತಾಂ = ಆ, ನಿಶಾಂ = ರಾತ್ರಿಯನ್ನು, ಸಯಾದವಃ = ಯಾದವರೊಂದಿಗೆ, ಪುಷ್ಕರೇ = ಪುಷ್ಕರದಲ್ಲಿ, ಉವಾಸ = ವಾಸ ಮಾಡಿದರು.

ತಾತ್ಪರ್ಯ :- ಎಣಿಸಲು ಅಸಾಧ್ಯವಾದ ಕಾಂತಿಯುಳ್ಳ ಸ್ವಾಮಿಯಾದ ಶ್ರೀಕೃಷ್ಣನು ದೇವತೆಗಳಿಂದ ಸ್ತುತಿಸಲ್ಪಟ್ಟು ಯಾದವ ಜೊತೆಗೆ ಪುಷ್ಕರದಲ್ಲಿ ವಾಸಮಾಡಿದ.

ಪರೇ ದಿನೇ ಜನಾರ್ದನೋ ನೃಪಾತ್ಮಜೋ ಪ್ರವಿದ್ರುತೌ ।
ಯಮಸ್ವಸುಸ್ತಟೇ ಪ್ರಭುಃ ಸಮಾಸಸಾದ ಪೃಷ್ಠತಃ ॥ ೨೭೫ ॥

ಪದಚ್ಛೇದ :- ಪರೇ, ದಿನೇ, ಜನಾರ್ದನಃ, ನೃಪಾತ್ಮಜಃ, ಪ್ರವಿದ್ರುತೌ । ಯಮಸು, ಅಸುಃ, ತಟೇ, ಪ್ರಭುಃ, ಸಮಾಸಸಾದ, ಪೃಷ್ಠತಃ ॥

ಅರ್ಥ :- ಪ್ರವಿದ್ರುತೌ = ಓಡಿಹೋದ, ನೃಪಾತ್ಮಜಾ = ಹಂಸಡಿಭಿಕರನ್ನು, ಪರೇ ದಿನೇ = ಮರುದಿನದಲ್ಲಿ, ಪ್ರಭುಃ = ಸ್ವಾಮಿಯಾದ, ಜನಾರ್ದನಃ = ಶ್ರೀಕೃಷ್ಣನು, ಯಮಸು = ಯಮುನಾನದಿಯ, ತಟೇ = ತೀರದಲ್ಲಿ, ಅಸುಃ = ಕಂಡು, ಪೃಷ್ಠತಃ = ಹಿಂಭಾಗದಿಂದ, ಸಮಾಸಸಾದ = ಸಮೀಪಿಸಿದ.

ತಾತ್ಪರ್ಯ :- ಓಡಿಹೋದ ಹಂಸಡಿಭಿಕರನ್ನು ಮರುದಿನ ಶ್ರೀಕೃಷ್ಣನು ಯಮುನಾನದೀ ತೀರದಲ್ಲಿ ಕಂಡು ಬೆನ್ನಟ್ಟಿದ.

ಸ ರೌಹಿಣೇಯಸಂಯುತಃ ಸಮನ್ವಿತಶ್ಚ ಸೇನಯಾ ।
ಸ್ವಶಿಷ್ಟಸೇನಯಾ ವೃತೌ ಪಲಾಯಿನಾವವಾರಯತ್ ॥ ೨೭೬ ॥

ಪದಚ್ಛೇದ :- ಸಃ, ರೌಹಿಣೇಯಸಂಯುತಃ, ಸಮನ್ವಿತಃ, ಚ, ಸೇನಯಾ ।
ಸ್ವಶಿಷ್ಟಸೇನಯಾ, ವೃತೌ, ಪಲಾಯಿನೌ, ಅವಾರಯತ್ ॥

ಅರ್ಥ :- ಚ = ಮತ್ತು, ಸೇನಯಾ = ಸೈನ್ಯದಿಂದ, ಸಮನ್ವಿತಃ = ಕೂಡಿದ, ರೌಹಿಣೇಯಸಂಯುತಃ = ಬಲರಾಮಯುಕ್ತನಾದ, ಸಃ = ಆ ಕೃಷ್ಣನು, ಸ್ವಶಿಷ್ಟಸೇನಯಾ = ತನ್ನ ಅಳಿದುಳಿದ ಸೈನ್ಯದಿಂದ, ವೃತೌ = ಕೂಡಿ, ಪಲಾಯನೌ = ಪಲಾಯನ ಮಾಡುತ್ತಿದ್ದ ಹಂಸಡಿಭಿಕರನ್ನು, ಅವಾರಯತ್ = ತಡೆದು.

ತಾತ್ಪರ್ಯ :- ಅಳಿದುಳಿದ ಸೈನ್ಯದೊಂದಿಗೆ ಓಡುತ್ತಿದ್ದ ಹಂಸಡಿಭಿಕರನ್ನು, ಬಲರಾಮ ಹಾಗೂ ಸೈನ್ಯದಿಂದ ಕೂಡಿದ ಶ್ರೀಕೃಷ್ಣನು ತಡೆದ.

**ನಿವೃತ್ಯ ತೌ ಸ್ವಸೇನಯಾ ಶರೋತ್ತಮೈರ್ವವರ್ಷತುಃ ।**
**ಸುಕೋಪಿತೌ ಸಮಸ್ತಶೋ ಯದೂನವಾರ್ಯಪೌರುಷೌ ॥ ೨೭೭ ॥**

ಪದಚ್ಛೇದ :- ನಿವೃತ್ಯ, ತೌ, ಸ್ವಸೇನಯಾ, ಶರೋತ್ತಮೈಃ, ವವರ್ಷತುಃ ।
ಸುಕೋಪಿತೌ, ಸಮಸ್ತಶಃ, ಯದೂನ್, ಅವಾರ್ಯಪೌರುಷೌ ॥

ಅರ್ಥ :- ಅವಾರ್ಯಪೌರುಷೌ = ತಡೆಯಲಾಗದ ಪೌರುಷವುಳ್ಳ, ಸುಕೋಪಿತೌ = ತುಂಬಾ ಕೋಪಗೊಂಡ, ತೌ = ಆ ಹಂಸಡಿಭಿಕರು, ಸ್ವಸೇನಯಾ = ತನ್ನ ಸೇನೆಯೊಂದಿಗೆ, ನಿವೃತ್ಯ = ಹಿಂತಿರುಗಿ, ಸಮಸ್ತಃ = ಎಲ್ಲಾ, ಯದೂನ್ = ಯಾದವರನ್ನು, ಶರೋತ್ತಮೈಃ = ಉತ್ತಮವಾದ ಬಾಣಗಳಿಂದ, ವವರ್ಷತುಃ = ಮಳೆಗರೆದರು.

ತಾತ್ಪರ್ಯ :- ತಡೆಯಲು ಅಸಾಧ್ಯವಾದ ಪೌರುಷವುಳ್ಳ ಹಂಸಡಿಭಿಕರು ಬಹಳ ಕೋಪಗೊಂಡು ತಮ್ಮ ಸೈನ್ಯದೊಡನೆ ಹಿಂತಿರುಗಿ ಎಲ್ಲ ಯಾದವರ ಮೇಲೆ ಉತ್ತಮ ಬಾಣಗಳ ಮಳೆಗರೆದರು.

**ಅಥಾಽಸಸಾದ ಹಂಸಕೋ ಹಲಾಯುಧಂ ಮಹಾಧನುಃ ।**
**ಅನಂತರೋಽಸ್ಯ ಸಾತ್ಯಕಿಂ ಗದಂ ಚ ಸರ್ವಸೈನಿಕಾನ್ ॥ ೨೭೮ ॥**

ಪದಚ್ಛೇದ :- ಅಥ, ಆಸಸಾದ, ಹಂಸಕಃ, ಹಲಾಯುಧಂ, ಮಹಾಧನುಃ ।
ಅನಂತರಃ, ಅಸ್ಯ, ಸಾತ್ಯಕಿಂ, ಗದಾಂ, ಚ, ಸರ್ವಸೈನಿಕಾನ್ ॥

**ಅರ್ಥ** :- **ಅಥ** = ಅನಂತರ, **ಮಹಾಧನುಃ** = ಮಹಾಧನುರ್ಧಾರಿಯಾದ, **ಹಂಸಕಃ** = ಹಂಸನು, **ಹಲಾಯುಧಂ** = ಬಲರಾಮನನ್ನು, **ಆಸಸಾದ** = ಇದಿರಿಸಿದ, **ಅನಂತಃ** = ಡಿಭಿಕನು, **ಸಾತ್ಯಕಿಂ** = ಸಾತ್ಯಕಿಯನ್ನು, **ಚ** = ಮತ್ತು, **ಗದಂ** = ಗದನನ್ನು, **ಅಸ್ಯ** = ಇವನ, **ಸರ್ವ ಸೈನಿಕಾನ್** = ಎಲ್ಲಾ ಸೈನಿಕರನ್ನು, **ಆಸಸಾದ** = ಇದಿರಿಸಿದನು.

**ತಾತ್ಪರ್ಯ** :- ಮಹಾಧನುರ್ಧಾರಿ ಹಂಸ ಬಲರಾಮನನ್ನು ಇದಿರಿಸಿದ. ಡಿಭಿಕನು ಸಾತ್ಯಕಿಯನ್ನು ಗದನನ್ನು ಎಲ್ಲಾ ಸೈನಿಕರನ್ನು ಇದಿರಿಸಿದ.

**ಸ ಸಾತ್ಯಕಿಂ ನಿರಾಯುಧಂ ವಿವಾಹನಂ ವಿವರ್ಮಕಮ್ ।**
**ವ್ಯಧಾದ್ ಗದಂ ಚ ತೌ ರಣಂ ವಿಹಾಯ ಹಾಪಜಗ್ಮತುಃ ॥ ೨೭೯ ॥**

**ಪದಚ್ಛೇದ** :- **ಸಃ, ಸಾತ್ಯಕಿಂ, ನಿರಾಯುಧಂ, ವಿವಾಹನಂ, ವಿವರ್ಮಕಮ್ । ವ್ಯಧಾತ್, ಗಧಂ, ಚ, ತೌ, ರಣಂ, ವಿಹಾಯ, ಹಾ, ಅಪಜಗ್ಮತುಃ ॥**

**ಅರ್ಥ** :- **ಸಃ** = ಡಿಭಿಕನು, **ಸಾತ್ಯಕಿಂ** = ಸಾತ್ಯಕಿಯನ್ನು, **ಚ** = ಮತ್ತು, **ಗಧಂ** = ಗಧನನ್ನು, **ನಿರಾಯುಧಂ** = ಆಯುಧ ರಹಿತನನ್ನಾಗಿ, **ವಿವಾಹನಂ** = ವಾಹನರಹಿತನನ್ನಾಗಿ, **ವಿವರ್ಮಕಂ** = ಕವಚರಹಿತನನ್ನಾಗಿ, **ವ್ಯಧಾತ್** = ಮಾಡಿದ, **ತೌ** = ಅವರಿಬ್ಬರು, **ರಣಂ** = ಯುದ್ಧವನ್ನು, **ವಿಹಾಯ** = ಬಿಟ್ಟು, **ಅಪಜಗ್ಮತುಃ** = ದೂರ ಸರಿದರು, **ಹಾ** = ಆಶ್ಚರ್ಯ.

**ತಾತ್ಪರ್ಯ** :- ಡಿಭಿಕ ಸಾತ್ಯಕಿಯನ್ನು ಗಧನನ್ನು ನಿರಾಯುಧ ರಥ ಕವಚರಹಿತನನ್ನಾಗಿ ಮಾಡಿದಾಗ ಅವರಿಬ್ಬರು ಯುದ್ಧವನ್ನು ಬಿಟ್ಟು ದೂರ ಸರಿದರು.

**ವಿಧೂಯ ಸೈನಿಕಾಂಶ್ಚ ಸ ಪ್ರಗೃಹ್ಯ ಚಾಪಮಾತತಮ್ ।**
**ಹರಿಂ ಜಗಾಮ ಚೋನ್ನದನ್ ಮಹಾಸ್ತ್ರಶಸ್ತ್ರವರ್ಷಣಃ ॥ ೨೮೦ ॥**

**ಪದಚ್ಛೇದ** :- **ವಿಧೂಯ, ಸೈನಿಕಾನ್, ಚ, ಸಃ, ಪ್ರಗೃಹ್ಯ, ಚಾಪಮ್, ಆತತಮ್ । ಹರಿಂ, ಜಗಾಮ, ಚೋನ್ನದನ್, ಮಹಾಸ್ತ್ರಶಸ್ತ್ರವರ್ಷಣಃ ॥**

**ಅರ್ಥ** :- **ಚ** = ಮತ್ತು, **ಸಃ** = ಆ ಡಿಭಿಕನು, **ಸೈನಿಕಾನ್** = ಯಾದವರ ಸೈನಿಕರನ್ನು, **ವಿಧೂಯ** = ದೂರ ಮಾಡಿ, **ಆತತಂ** = ದೊಡ್ಡ, **ಚಾಪಂ** =

ಬಿಲ್ಲನ್ನು, ಪ್ರಗೃಹ್ಯ = ಹಿಡಿದು, ಮಹಾಸ್ತ್ರಶಸ್ತ್ರವರ್ಷಣಃ = ದೊಡ್ಡ ದೊಡ್ಡ ಅಸ್ತ್ರಶಸ್ತ್ರಗಳನ್ನು ಮಳೆಗರೆಯುತ್ತ, ಚೋನ್ನವನ್ = ಸಿಂಹನಾದ ಮಾಡುತ್ತ, ಹರಿಂ = ಹರಿಯನ್ನು ಕುರಿತು, ಜಗಾಮ = ಹೋದನು.

**ತಾತ್ಪರ್ಯ :-** ಡಿಭಿಕ, ಯಾದವರ ಸೈನಿಕರನ್ನು ಓಡಿಸಿ ಬಲು ದೊಡ್ಡ ಬಿಲ್ಲನ್ನು ಹಿಡಿದು ಮಹಾ ಅಸ್ತ್ರಶಸ್ತ್ರಗಳನ್ನು ಮಳೆಗರೆಯುತ್ತ ಸಿಂಹನಾದ ಮಾಡುತ್ತ ಕೃಷ್ಣನ ಮೇಲೆ ಹೋದನು.

**ತಮಾಶು ಕೇಶವೋಽರಿಹಾ ಸಮಸ್ತಸಾಧನೋಜ್ಝಿತಮ್ ।**
**ಕ್ಷಣಾಚ್ಚಕಾರ ಸೋಽಪ್ಯಗಾದ್ ವಿಸೃಜ್ಯ ತಂ ಹಲಾಯುಧಮ್ ॥ ೨೮೧ ॥**

**ಪದಚ್ಛೇದ :-** ತಮ್, ಆಶು, ಕೇಶವಃ, ಅರಿಹಾ, ಸಮಸ್ತಸಾಧನೋಜ್ಝಿತಮ್ । ಕ್ಷಣಾತ್, ಚಕಾರ, ಸಃ, ಅಪಿ, ಅಗಾತ್, ವಿಸೃಜ್ಯ, ತಂ, ಹಲಾಯುಧಮ್ ॥

**ಅರ್ಥ :-** ಅರಿಹಾ = ಶತ್ರುನಾಶಕನಾದ, ಕೇಶವಃ = ಕೃಷ್ಣನು, ತಂ = ಅವನನ್ನು, ಸಮಸ್ತಸಾಧನೋಜ್ಝಿತಂ = ಎಲ್ಲಾ ಸಾಧನ ರಹಿತನನ್ನಾಗಿ, ಕ್ಷಣಾತ್ = ಕ್ಷಣಕಾಲದಲ್ಲಿ, ಚಕಾರ = ಮಾಡಿದನು, ಸಃ ಅಪಿ = ಆ ಡಿಭಿಕನಾದರೂ, ತಂ = ಕೃಷ್ಣನನ್ನು, ವಿಸೃಜ್ಯ = ಬಿಟ್ಟು, ಹಲಾಯುಧಂ = ಬಲರಾಮನನ್ನು ಕುರಿತು, ಅಗಾತ್ = ಹೋದನು.

**ತಾತ್ಪರ್ಯ :-** ಶತ್ರು ಸಂಹಾರಕನಾದ ಶ್ರೀಕೃಷ್ಣ ಡಿಭಿಕನ ಎಲ್ಲಾ ಆಯುಧ ನಾಶವನ್ನು ಬೇಗನೆ ಮಾಡಿದಾಗ, ಡಿಭಿಕ ಕೃಷ್ಣನನ್ನು ಬಿಟ್ಟು ಬಲರಾಮನ ಹತ್ತಿರಕ್ಕೆ ಹೋದ.

**ಹಲಾಯುಧೋ ನಿರಾಯುಧಂ ವಿಧಾಯ ಹಂಸಮೋಜಸಾ ।**
**ವಿಕೃಷ್ಟಚಾಪ ಆಗತಂ ದದರ್ಶ ತಸ್ಯ ಚಾನುಜಮ್ ॥ ೨೮೨ ॥**

**ಪದಚ್ಛೇದ :-** ಹಲಾಯುಧಃ, ನಿರಾಯುಧಂ, ವಿಧಾಯ, ಹಂಸಮ್, ಓಜಸಾ । ವಿಕೃಷ್ಟಚಾಪಂ, ಆಗತಂ, ದದರ್ಶ, ತಸ್ಯ, ಚ, ಅನುಜಮ್ ॥

**ಅರ್ಥ :-** ಹಲಾಯುಧಃ = ಬಲರಾಮನು, ಓಜಸಾ = ತನ್ನ ಶಕ್ತಿಯಿಂದ, ಹಂಸಂ = ಹಂಸನನ್ನು, ನಿರಾಯುಧಂ = ಆಯುಧ ರಹಿತನನ್ನಾಗಿ, ವಿಧಾಯ

= ಮಾಡಿದ, ಚ = ಮತ್ತು, ವಿಕೃಷ್ಟಚಾಪಂ = ಬಿಲ್ಲನ್ನು ಹಿಡಿದು, ಆಗತಂ = ಬಂದ, ತಸ್ಯ = ಹಂಸನ, ಅನುಜಂ = ತಮ್ಮನಾದ ಡಿಭಿಕನನ್ನು, ದದರ್ಶ = ಕಂಡನು.

**ತಾತ್ಪರ್ಯ :-** ಆ ಕಡೆ ಬಲರಾಮ ಹಂಸನನ್ನು ತನ್ನ ಸಾಮರ್ಥ್ಯದಿಂದ ಸೋಲಿಸಿ ಆಯುಧರಹಿತನನ್ನಾಗಿ ಮಾಡಿ ಬಿಲ್ಲನ್ನು ಹಿಡಿದು ಎದೆ ಏರಿಸಿ ಬಂದಿದ್ದ ಡಿಭಿಕನನ್ನು ನೋಡಿದ.

**ಸ ಹಂಸ ಆಶು ಕಾರ್ಮುಕಂ ಪುನಃ ಪ್ರಗೃಹ್ಯ ತಂ ಬಲಮ್ ।**
**ಯದಾऽऽಸಸಾದ ಕೇಶವೋ ನ್ಯವಾರಯತ್ ತಮೋಜಸಾ ॥ ೨೮೩ ॥**

**ಪದಚ್ಛೇದ :- ಸಃ, ಹಂಸಃ, ಆಶು, ಕಾರ್ಮುಕಂ, ಪುನಃ, ಪ್ರಗೃಹ್ಯ, ತಂ, ಬಲಮ್ । ಯದಾ, ಆಸಸಾದ, ಕೇಶವಃ, ನ್ಯವಾರಯತ್, ತಮ್, ಓಜಸಾ ॥**

**ಅರ್ಥ :-** ಸಃ = ಆ, ಹಂಸಃ = ಹಂಸನು, ಆಶು = ಬೇಗನೆ, ಕಾರ್ಮುಖಂ = ಬಿಲ್ಲನ್ನು, ಪ್ರಗೃಹ್ಯ = ಹಿಡಿದು, ಪುನಃ = ಮತ್ತೆ, ತಂ = ಆ, ಬಲಂ = ಬಲರಾಮುನನ್ನು ಕುರಿತು, ಅಸಸಾದ = ಸಮೀಪಿಸಿದನು, ಕೇಶವಃ = ಶ್ರೀಕೃಷ್ಣನು, ಓಜಸಾ = ತನ್ನ ಬಲದಿಂದ, ತಂ = ಆ ಹಂಸನನ್ನು, ನ್ಯವಾರಯತ್ = ತಡೆದನು.

**ತಾತ್ಪರ್ಯ :-** ಹಂಸ ಬೇಗನೆ ಬಿಲ್ಲು ಹಿಡಿದು ಪುನಃ ಬಲರಾಮನ ಹತ್ತಿರ ಬರುತ್ತಿದ್ದಂತೆ ಶ್ರೀಕೃಷ್ಣ ಅವನನ್ನು ಬಲವಾಗಿ ತನ್ನ ಸಾಮರ್ಥ್ಯದಿಂದ ತಡೆದ.

**ಶಿನೇಃ ಸುತಾತ್ಮಜೋऽಪ್ಯಸೌ ವಿಹಾಯ ಹಂಸಕಾನುಜಮ್ ।**
**ರಥಾಂತರಂ ಸಮಾಸ್ಥಿತೋ ಜಗಾಮ ತಾತಮಸ್ಯ ಚ ॥ ೨೮೪ ॥**

**ಪದಚ್ಛೇದ :- ಶಿನೇಃ, ಸುತಾತ್ಮಜಃ, ಅಪಿ, ಅಸೌ, ವಿಹಾಯ, ಹಂಸಕಾನುಜಮ್ । ರಥಾಂತರಂ, ಸಮಾಸ್ಥಿತಃ, ಜಗಾಮ, ತಾತಮ್, ಅಸ್ಯ, ಚ ॥**

**ಅರ್ಥ :-** ಶಿನೇಃ = ಶಿನಿಯ, ಸುತಾತ್ಮಜಃ = ಮಗನಾದ, ಅಸೌ ಅಪಿ = ಸಾತ್ಯಕಿಯೂ ಕೂಡ, ಹಂಸಕಾನುಜಂ = ಹಂಸನ ತಮ್ಮನಾದ ಡಿಭಿಕನನ್ನು, ವಿಹಾಯ = ಬಿಟ್ಟು, ರಥಾಂತರಂ = ಬೇರೆ ರಥವನ್ನು ಏರಿ, ಅಸ್ಯ = ಈ, ತಾತಂ = ಬ್ರಹ್ಮದತ್ತನನ್ನು ಕುರಿತು, ಜಗಾಮ = ಹೋದನು.

ತಾತ್ಪರ್ಯ :- ಸಾತ್ಯಕಿಯೂ ಕೂಡ ಡಿಭಿಕನನ್ನು ಬಿಟ್ಟು ಬೇರೆ ರಥದಲ್ಲಿ ಕುಳಿತು ಬ್ರಹ್ಮದತ್ತನನ್ನು ಕುರಿತು ಹೋದನು.

**ವಯೋಗತಃ ಪಿತಾ ತಯೋರ್ಯುಯೋಧ ತೇನ ವೃಷ್ಣಿನಾ ।**
**ಶರಂ ಚ ಕಂಠಕೂಬರೇ ವ್ಯಸರ್ಜಯತ್ ಸ ಸಾತ್ಯಕೇಃ ॥ ೨೮೫ ॥**

ಪದಚ್ಛೇದ :- ವಯೋಗತಃ, ಪಿತಾ, ತಯೋಃ, ಯುಯೋಧ, ತೇನ, ವೃಷ್ಣಿನಾ । ಶರಂ, ಚ, ಕಂಠಕೂಬರೇ, ವ್ಯಸರ್ಜಯತ್, ಸಃ, ಸಾತ್ಯಕೇಃ ॥

ಅರ್ಥ :- ವಯೋಗತಃ = ತಯೋವೃದ್ಧನಾದ, ತಯೋಃ = ಹಂಸಡಿಭಿಕರ, ಪಿತಾ = ತಂದೆಯಾದ ಬ್ರಹ್ಮದತ್ತನು, ತೇನ ವೃಷ್ಣಿನಾ = ಸಾತ್ಯಕಿಯೊಡನೆ, ಯಯೋಧ = ಯುದ್ಧ ಮಾಡಿದನು, ಚ = ಮತ್ತು, ಸಃ = ಆ ಬ್ರಹ್ಮದತ್ತನು, ಸಾತ್ಯಕೇಃ = ಸಾತ್ಯಕಿಯ, ಕಂಠಕೂಬರೇ = ಕುತ್ತಿಗೆ ಎದೆಗಳ ನಡುವಿನ ಭಾಗಕ್ಕೆ, ಶರಂ = ಬಾಣವನ್ನು, ವ್ಯಸರ್ಜಯತ್ = ಪ್ರಯೋಗಿಸಿದನು.

ತಾತ್ಪರ್ಯ :- ವಯಸ್ಸಿನಲ್ಲಿ ವೃದ್ಧನಾದ ಬ್ರಹ್ಮದತ್ತ ಸಾತ್ಯಕಿಯ ಜೊತೆಗೆ ಹೋರಾಡಿ ಅವನ ಕುತ್ತಿಗೆ ಹಾಗು ಎದೆಗಳ ಮಧ್ಯಭಾಗಕ್ಕೆ ಬಾಣ ಎಸೆದ.

**ಸ ಸಾತ್ಯಕಿರ್ದೃಢಾಹತೋ ಜಗಾಮ ಮೋಹಮಾಶು ಚ ।**
**ಸುಲಬ್ಧಸಂಜ್ಞ ಉತ್ಥಿತಃ ಸಮಾದದೇಽರ್ಧಚಂದ್ರಕಮ್ ॥ ೨೮೬ ॥**

ಪದಚ್ಛೇದ :- ಸಃ, ಸಾತ್ಯಕಿಃ, ದೃಢಾಹತಃ, ಜಗಾಮ, ಮೋಹಮ್, ಆಶು, ಚ । ಸುಲಬ್ಧಸಂಜ್ಞಃ, ಉತ್ಥಿತಃ, ಸಮಾದದೇ, ಅರ್ಧಚಂದ್ರಕಮ್ ॥

ಅರ್ಥ :- ದೃಢಾಹತಃ = ಪ್ರಬಲವಾಗಿ ಹೊಡೆಯಲ್ಪಟ್ಟ, ಸಃ = ಆ, ಸಾತ್ಯಕಿಃ = ಸಾತ್ಯಕಿಯು, ಆಶು = ಬೇಗನೆ, ಮೋಹಂ = ಮೂರ್ಛೆಯನ್ನು, ಜಗಾಮ = ಹೊಂದಿದನು, ಚ = ಮತ್ತು, ಸುಲಬ್ಧಸಂಜ್ಞಃ = ಹೊಂದಲ್ಪಟ್ಟ ಎಚ್ಚರವುಳ್ಳ, ಉತ್ಥಿತಃ = ಎದ್ದು, ಅರ್ಧಚಂದ್ರಕಂ = ಅರ್ಧಚಂದ್ರಾಕಾರದ ಬಾಣವನ್ನು, ಸಮಾದದೇ = ಎತ್ತಿಕೊಂಡನು.

ತಾತ್ಪರ್ಯ :- ಪ್ರಬಲವಾಗಿ ಹೊಡೆದ ಏಟಿನಿಂದ ಸಾತ್ಯಕಿಯು ಮೂರ್ಛೆ ಹೊಂದಿ, ಬೇಗನೆ ಪ್ರಜ್ಞೆತಂದುಕೊಂಡು ಮೇಲೆದ್ದು ಅರ್ಧಚಂದ್ರಾಕಾರದ ಬಾಣವನ್ನು ಹೊಡೆಯಲು ಕೈಗೆ ಎತ್ತಿಕೊಂಡ.

**ಸ ತೇನ ತಚ್ಛಿರೋ ಬಲೀ ಚಕರ್ತ ಶುಕ್ಲಮೂರ್ಧಜಮ್ ।**
**ಯದಂಬಯಾಽಭಿಕಾಮಿತಂ ಪುರಾ ಪಪಾತ ತತ್ ಕ್ಷಿತೌ ॥ ೨೮೭ ॥**

**ಪದಚ್ಛೇದ :-** ಸಃ, ತೇನ, ತತ್, ಶಿರಃ, ಬಲೀ, ಚಕರ್ತ, ಶುಕ್ಲಮೂರ್ಧಜಮ್ ।
ಯದಂಬಯಾಕಾಮಿತಂ, ಪುರಾ, ಪಪಾತ, ತತ್, ಪಿತೌ ॥

**ಅರ್ಥ :-** ಬಲೀ = ಬಲಿಷ್ಠನಾದ, ಸಃ = ಆ ಸಾತ್ಯಕಿಯು, ತೇನ = ಆ ಬಾಣದಿಂದ, ಶುಕ್ಲಮೂರ್ಧಜಂ = ಬಿಳಿಕೂದಲಿನ, ತಚ್ಛಿರಃ = ಬ್ರಹ್ಮದತ್ತನ ತಲೆಯನ್ನು, ಚಕರ್ತ = ಕತ್ತರಿಸಿದ, ಪುರಾ = ಹಿಂದೆ, ಯದಂಬಯಾಕಾಮಿತಂ = ಯಾವ ಅಂಬೆಯಿಂದ ಬಯಸಲ್ಪಟ್ಟಿತೋ, ತತ್ = ಅದು, ಕ್ಷಿತೌ = ಭೂಮಿಯಲ್ಲಿ, ಪಪಾತ = ಬಿದ್ದಿತು.

**ತಾತ್ಪರ್ಯ :-** ಬಲಶಾಲಿಯಾದ ಸಾತ್ಯಕಿಯು ಅರ್ಧಚಂದ್ರಾಕೃತಿ ಬಾಣದಿಂದ ಬಿಳಿ ಕೂದಲಿನ ಬ್ರಹ್ಮದತ್ತನ ತಲೆಯನ್ನು ಕತ್ತರಿಸಿದ, ಹಿಂದೆ ಕಾಶಿರಾಜನ ಮಗಳಾದ, ಅಂಬೆ ಸಾಲ್ವ ಬ್ರಹ್ಮದತ್ತನನ್ನು ಮನಸ್ಸಿನಿಂದ ಬಯಸಿದ್ದಳು ಅಂತ ತಲೆ ಈಗ ಭೂಮಿಯಲ್ಲಿ ಬಿದ್ದಿತು.

**ನದಂಶ್ಚ ಸಾತ್ಯಕಿರ್ಹರೇರ್ಜಗಾಮ ಪಾರ್ಶ್ವಮುದ್ಧತಃ ।**
**ಬಲೋಽಪಿ ಹಂಸಕಾನುಜಂ ಯುಯೋಧ ಸೇನಯಾ ಯುತಮ್ ॥ ೨೮೮ ॥**

**ಪದಚ್ಛೇದ :-** ನದನ್, ಚ, ಸಾತ್ಯಕಿಃ, ಹರೇಃ, ಜಗಾಮ, ಪಾರ್ಶ್ವಮ್, ಉದ್ಧತಃ ।
ಬಲಃ, ಅಪಿ, ಹಂಸಕಾನುಜಂ, ಯುಯೋಧ, ಸೇನಯಾ, ಯುತಮ್ ॥

**ಅರ್ಥ :-** ಸಾತ್ಯಕಿಃ = ಸಾತ್ಯಕಿಯು, ಉದ್ಧತಃ = ಉದ್ಧತನಾಗಿ, ಚ = ಮತ್ತು, ನದನ್ = ಸಿಂಹನಾದ ಮಾಡುತ್ತಾ, ಹರೇಃ = ಕೃಷ್ಣನ, ಪಾರ್ಶ್ವಮ್ = ಹತ್ತಿರ, ಜಗಾಮ = ಹೋದನು, ಬಲಃ ಅಪಿ = ಬಲರಾಮನೂ ಕೂಡ, ಸೇನಯಾ ಯುತಂ = ಸೇನೆಯೊಂದಿಗೆ ಕೂಡಿದ, ಹಂಸಕಾನುಜಂ = ಹಂಸನ ತಮ್ಮನಾದ ಡಿಭಿಕನನ್ನು ಕುರಿತು, ಯುಯೋಧ = ಯುದ್ಧ ಮಾಡಿದನು.

**ತಾತ್ಪರ್ಯ :-** ಸಾತ್ಯಕಿ ದರ್ಪದಿಂದ ಸಿಂಹನಾದ ಮಾಡುತ್ತ ಕೃಷ್ಣನ ಬಳಿಗೆ ಹೋದ, ಬಲರಾಮ ಸೇನಾ ಸಹಿತನಾದ ಡಿಭಿಕನೊಂದಿಗೆ ಕಾದಾಡಿದ.

ಹರಿಸ್ತು ಹಂಸಮುಲ್ಬಣ್ಯೈಃ ಶರೈಃ ಸಮರ್ದಯನ್ ಬಲಮ್ ।
ಜಘಾನ ತಸ್ಯ ಸರ್ವಶೋ ನ ಕಶ್ಚಿದತ್ರ ಶೇಷಿತಃ ॥ ೨೮೯ ॥

ಪದಚ್ಛೇದ :– ಹರಿಃ, ತು, ಹಂಸಮ್, ಉಲ್ಬಣ್ಯೈಃ, ಶರೈಃ, ಸಮರ್ದಯನ್, ಬಲಮ್ । ಜಘಾನ, ತಸ್ಯ, ಸರ್ವಶಃ, ನ, ಕಶ್ಚಿತ್, ಅತ್ರ, ಶೇಷಿತಃ ॥

ಅರ್ಥ :- ಹರಿಃ ತು = ಕೃಷ್ಣನಾದರೂ, ಬಲಂ = ಪ್ರಬಲನಾದ, ಹಂಸಂ = ಹಂಸನನ್ನು, ಉಲ್ಬಣ್ಯೈಃ = ಉಗ್ರನಾದ, ಶರೈಃ = ಬಾಣಗಳಿಂದ, ಸಮರ್ದಯನ್ = ಗಾಯಗೊಳಿಸುತ್ತಾ, ತಸ್ಯ = ಅವನ, ಸರ್ವಶಃ = ಎಲ್ಲಾ ಸೈನ್ಯವನ್ನು, ಜಘಾನ = ಕೊಂದ, ಕಶ್ಚಿತ್ = ಒಬ್ಬರೂ, ಅತ್ರ = ಅದರಲ್ಲಿ ನಶೇಷಿತಃ = ಉಳಿಯಲಿಲ್ಲ.

ತಾತ್ಪರ್ಯ :- ಶ್ರೀಕೃಷ್ಣ ಹಂಸನನ್ನು ಉಗ್ರವಾದ ಬಾಣಗಳಿಂದ ಚೆನ್ನಾಗಿ ಗಾಯಗೊಳಿಸಿ ಅವನ ಸೈನ್ಯವನ್ನು ಪೂರ್ಣವಾಗಿ ನಾಶಪಡಿಸಿದ, ಅದರಲ್ಲಿ ಯಾರೊಬ್ಬರೂ ಉಳಿಯಲಿಲ್ಲ.

ಸ ಏಕ ಏವ ಕೇಶವಂ ಮಹಾಸ್ತ್ರಮುಕ್ ಸಸಾರ ಹ ।
ನಿವಾರ್ಯ ತಾನಿ ಸರ್ವಶೋ ಹರಿರ್ನಿಜಾಸ್ತ್ರಮಾದದೇ ॥ ೨೯೦ ॥

ಪದಚ್ಛೇದ :– ಸಃ, ಏಕಃ, ಏವ, ಕೇಶವಂ, ಮಹಾಸ್ತ್ರಮುಕ್, ಸಸಾರ, ಹ । ನಿವಾರ್ಯ, ತಾನಿ, ಸರ್ವಶಃ, ಹರಿಃ, ನಿಜಾಸ್ತ್ರಮ್, ಆದದೇ ॥

ಅರ್ಥ :- ಸಃ = ಆ ಹಂಸನು, ಏಕಃ ಏವ = ಏಕಾಂಗಿಯಾಗಿಯೇ, ಕೇಶವಂ = ಶ್ರೀಕೃಷ್ಣನನ್ನು, ಮಹಾಸ್ತ್ರಮುಕ್ = ಮಹಾಸ್ತ್ರಗಳನ್ನು ಪ್ರಯೋಗಿಸುತ್ತ, ಸಸಾರ = ಇದರಿಸಿದ, ಹ = ಆಶ್ಚರ್ಯ, ಹರಿಃ = ಶ್ರೀಕೃಷ್ಣನು, ತಾನಿ = ಆ, ಸರ್ವಶಃ = ಎಲ್ಲಾ ಅಸ್ತ್ರಗಳನ್ನು, ನಿವಾರ್ಯ = ತಡೆದು, ನಿಜಾಸ್ತ್ರಂ = ತನ್ನ ಅಸ್ತ್ರವಾದ ವೈಷ್ಣವಾಸ್ತ್ರವನ್ನು, ಆದದೇ = ಎತ್ತಿಕೊಂಡ.

ತಾತ್ಪರ್ಯ :- ಹಂಸನು ಒಬ್ಬನೇ ಆದರೂ ಮಹಾಮಹಾ ಅಸ್ತ್ರಗಳನ್ನು ಪ್ರಯೋಗ ಮಾಡಿ ಹರಿಗೆ ಎದುರಾಗಿ ನಿಂತ, ಶ್ರೀಕೃಷ್ಣನು ಆ ಎಲ್ಲಾ ಅಸ್ತ್ರಗಳನ್ನು ತಡೆದು ತನ್ನ ವೈಷ್ಣವಾಸ್ತ್ರವನ್ನು ಎತ್ತಿಕೊಂಡ.

**ಸ ವೈಷ್ಣವಾಸ್ತ್ರಮುದ್ಯತಂ ನಿರೀಕ್ಷ್ಯ ಯಾನತೋ ಮಹೀಮ್ ।**
**ಗತಃ ಪರಾದ್ರವದ್ ಭಯಾತ್ ಪಪಾತ ಯಾಮುನೋದಕೇ ॥ ೨೯೧ ॥**

**ಪದಚ್ಛೇದ :- ಸಃ, ವೈಷ್ಣವಾಸ್ತ್ರಮ್, ಉದ್ಯತಂ, ನಿರೀಕ್ಷ್ಯ, ಯಾನತಃ, ಮಹೀಮ್ । ಗತಃ, ಪರಾದ್ರವತ್, ಭಯಾತ್, ಪಪಾತ, ಯಮುಮೋದಕೇ ॥**

**ಅರ್ಥ** :- **ಸಃ** = ಹಂಸನು, **ವೈಷ್ಣವಾಸ್ತ್ರಂ** = ವೈಷ್ಣವಾಸ್ತ್ರವನ್ನು, **ಉದ್ಯತಂ** = ಬರುವುದನ್ನು, **ನಿರೀಕ್ಷ್ಯ** = ನೋಡಿ, **ಯಾನತಃ** = ರಥದಿಂದ, **ಮಹೀಂ** = ಭೂಮಿಯನ್ನು ಕುರಿತು, **ಗತಃ** = ಧುಮುಕಿ, **ಪರಾದ್ರವತ್** = ಓಡಿದನು, **ಭಯಾತ್** = ಹೆದರಿಕೆಯಿಂದ, **ಯಮುನೋದಕೇ** = ಯಮುನೆಯ ನೀರಿನಲ್ಲಿ, **ಪಪಾತ** = ಬಿದ್ದನು.

**ತಾತ್ಪರ್ಯ** :- ವೈಷ್ಣವಾಸ್ತ್ರ ಹೊರಡುವುದನ್ನು ಕಂಡು ಭಯದಿಂದ ಹಂಸ ರಥದಿಂದ ನೆಲಕ್ಕೆ ಧುಮುಕಿ ಓಡಿ, ಭಯದಿಂದ ಯಮುನೆಯ ನೀರಿನಲ್ಲಿ ಹಾರಿದ.

**ವರಾಸ್ತ್ರಪಾಣಿರೀಶ್ವರಃ ಪದಾಽಹನಚ್ಛಿರಸ್ಯಮುಮ್ ।**
**ಸ ಮೂರ್ಛಿತೋ ಮುಖೇಽಪತನ್ಮಹಾಭುಜಂಗಮಸ್ಯ ಹಿ ॥ ೨೯೨ ॥**

**ಪದಚ್ಛೇದ** :- ವರಾಸ್ತ್ರಪಾಣಿರೀಶ್ವರಃ, ಪದಾ, ಅಹನತ್, ಶಿರಸ್ಯ, ಅಮುಮ್ । ಸಃ, ಮೂರ್ಛಿತಃ, ಮುಖೇ, ಅಪತತ್, ಮಹಾಭುಜಗಮಸ್ಯ, ಹಿ ॥

**ಅರ್ಥ** :- **ವರಾಸ್ತ್ರಪಾಣಿರೀಶ್ವರಃ** = ಉತ್ತಮವಾದ ಅಸ್ತ್ರಗಳನ್ನು ಕೈಯಲ್ಲಿ ಧರಿಸಿರುವ ಶ್ರೀಕೃಷ್ಣನು, **ಪದಾ** = ಕಾಲಿನಿಂದ, **ಅಮುಂ** = ಇವನ, **ಶಿರಸ್ಯ** = ತಲೆಗೆ, **ಅಹನತ್** = ಪ್ರಹರಿಸಿದ, **ಸಃ** = ಹಂಸನು, **ಮೂರ್ಛಿತಃ** = ಮೂರ್ಛಿತನಾಗಿ, **ಮಹಾಭುಜಂಗಮಸ್ಯ** = ದೊಡ್ಡ ಹಾವಿನ, **ಮುಖೇ** = ಬಾಯಲ್ಲಿ, **ಅಪತತ್** = ಬಿದ್ದ.

**ತಾತ್ಪರ್ಯ** :- ಶ್ರೀಕೃಷ್ಣ ಉತ್ತಮ ಅಸ್ತ್ರಗಳನ್ನು ಕೈಯಲ್ಲಿ ಧರಿಸಿ ಕಾಲಿನಿಂದ ಹಂಸನನ್ನು ಒದ್ದ, ಹಂಸ ಮೂರ್ಚಿತನಾಗಿ ದೊಡ್ಡ ಹಾವಿನ ಬಾಯಲ್ಲಿ ಬಿದ್ದ.

**ಸ ಧಾರ್ತರಾಷ್ಟ್ರಕೋದರೇ ಯಥಾ ತಮೋಽಂಧಮೇಯಿವಾನ್ ।**
**ತಥಾ ಸುದುಃಖಸಂಯುತೋ ವಸನ್ ಮನೋಃ ಪರಂ ಮ್ರಿಯೇತ್ ॥ ೨೯೩ ॥**

**ಪದಚ್ಛೇದ :– ಸಃ, ಧಾರ್ತರಾಷ್ಟ್ರಕೋದರೇ, ಯಥಾ, ತಮಃ, ಅಂಧಮ್, ಏಯಿವಾನ್ । ತಥಾ, ಸುದುಃಖಸಂಯುತಃ, ವಸನ್, ಮನೋಃ, ಪರಂ, ಮ್ರಿಯೇತ್ ॥**

**ಅರ್ಥ :–** **ಸಃ** = ಹಂಸನು, **ಧಾರ್ತರಾಷ್ಟ್ರಕೋದರೇ** = ಧಾರ್ತರಾಷ್ಟ್ರ ಎಂಬ ಮಹಾನಾಗನ ಹೊಟ್ಟೆಯಲ್ಲಿ, **ಯಥಾ** = ಯಾವ ರೀತಿಯಾಗಿ, **ಅಂಧಂ ತಮಃ** = ಅಂಧಃತಮಸ್ಸನ್ನು, **ಏಯಿವಾನ್** = ಹೊಂದಿದನು, **ತಥಾ** = ಹಾಗೆಯೆ, **ಸುದುಃಖಸಂಯುತಃ** = ಬಹು ದುಃಖಯುಕ್ತನಾಗಿ, **ವಸನ್** = ವಾಸಮಾಡುತ್ತಾ, **ಮನೋಃ** = ಈ ಮನ್ವಂತರದ, **ಪರಂ** = ಕೊನೆಗೆ, **ಮ್ರಿಯೇತ್** = ಸಾಯುತ್ತಾನೆ.

**ತಾತ್ಪರ್ಯ :–** ಹಂಸ ಧೃತರಾಷ್ಟ್ರ ಎಂಬ ಮಹಾನಾಗನ ಹೊಟ್ಟೆಯಲ್ಲಿ ಸೇರಿ ಅಂಧಃತಮಸ್ಸನ್ನು ಹೊಂದಿದವನಂತೆ ಬಹು ದುಃಖಯುಕ್ತನಾಗಿ ಈ ಮನ್ವಂತರದ ಕೊನೆಯಲ್ಲಿ ಸಾಯುತ್ತಾನೆ.

**ತತೋಽಂಧಮೇವ ತತ್ ತಮೋ ಹರೇರ್ದ್ವಿಡೇತಿ ನಿಶ್ಚಯಾತ್ ।**
**ತದಾಽಸ್ಯ ಚಾನುಜೋಽಗ್ರಜಂ ವಿಮಾರ್ಗಯನ್ ಜಲೇಽಪತತ್ ॥ ೨೯೪ ॥**

**ಪದಚ್ಛೇದ :– ತತಃ, ಅಂಧಂ, ಏವ, ತತ್, ತಮಃ, ಹರೇಃ, ದ್ವಿಟ್, ಇತಿ, ನಿಶ್ಚಯಾತ್ । ತದಾ, ಅಸ್ಯ, ಚ, ಅನುಜಃ, ಅಗ್ರಜಂ, ವಿಮಾರ್ಗಯನ್, ಜಲೇ, ಅಪತತ್ ॥**

**ಅರ್ಥ :–** **ತತಃ** = ಅನಂತರ, **ಅಂಧಂ ಏವ** = ಅಂಧಃ ತಮಸ್ಸು, **ನಿಶ್ಚಯಾತ್** = ನಿಶ್ಚಯವಾಗಿ, **ಹರೇಃ** = ಶ್ರೀಹರಿಯ, **ದ್ವಿಟ್** = ದ್ವೇಷಿಗಳಿಗೆ, **ತತ್ ತಮಃ** = ಆ ತಮಸ್ಸು, **ಚ** = ಮತ್ತು, **ತದಾ** = ಆಗ, **ಅನುಜಃ** = ತಮ್ಮನಾದ ಡಿಭಿಕನು, **ಅಗ್ರಜಂ** = ಅಣ್ಣನಾದ ಹಂಸನನ್ನು, **ವಿಮಾರ್ಗಯನ್** = ಹುಡುಕುತ್ತಾ, **ಜಲೇ** = ನೀರಿನಲ್ಲಿ, **ಅಪತತ್** = ಬಿದ್ದನು.

**ತಾತ್ಪರ್ಯ :–** ಬಳಿಕ ಆ ವಿಷ್ಣುದ್ವೇಷಿಗೆ ನಿಶ್ಚಯವಾಗಿ ಅಂಧಃತಮಸ್ಸಿನ ಪ್ರಾಪ್ತಿ. ತಮ್ಮನಾದ ಡಿಭಿಕನು ಅಣ್ಣನನ್ನು ಹುಡುಕುತ್ತಾ ನೀರಿನಲ್ಲಿ ಬಿದ್ದನು.

**ವಿಹಾಯ ರೋಹಿಣೀಸುತಂ ಜಲೇ ನಿಮಜ್ಯ ಮಾರ್ಗಯನ್ ।**
**ಅಪಶ್ಯಮಾನ ಆತ್ಮನೋ ವ್ಯಪಾಟಯಚ್ಚ ಕಾಕುದಮ್ ॥ ೨೯೫ ॥**

**ಪದಚ್ಛೇದ :- ವಿಹಾಯ, ರೋಹಿಣಿಸುತಂ, ಜಲೇ, ನಿಮಜ್ಯ, ಮಾರ್ಗಯನ್ । ಅಪಶ್ಯಮಾನಃ, ಆತ್ಮನಃ, ವ್ಯಪಾಟಯತ್, ಚ, ಕಾಕುದಮ್ ॥**

**ಅರ್ಥ :- ರೋಹಿಣೇಸುತಂ** = ರೋಹಿಣಿಯ ಮಗನಾದ ಬಲರಾಮನನ್ನು, **ವಿದಾಯ** = ಬಿಟ್ಟು, **ಜಲೇ** = ನೀರಿನಲ್ಲಿ, **ನಿಮಜ್ಯ** = ಮುಳುಗಿ, **ಚ** = ಮತ್ತು, **ಮಾರ್ಗಯನ್** = ಹುಡುಕುತ್ತ, **ಅಪಶ್ಯಮಾನಃ** = ಕಾಣದೆ ಇರುವಾಗ, **ಆತ್ಮನಃ** = ತನ್ನ, **ಕಾಕುದಮ್** = ಕಿರುನಾಲಿಗೆಯನ್ನು, **ವ್ಯಪಾಟಯತ್** = ಕಿತ್ತುಕೊಂಡನು.

**ತಾತ್ಪರ್ಯ :-** ಡಿಭಿಕನು ಬಲರಾಮನನ್ನು ಬಿಟ್ಟು ನೀರಿನಲ್ಲಿ ಮುಳುಗಿ ಅಣ್ಣನನ್ನು ಹುಡುಕುತ್ತ ಕಾಣದೇ ಹೋದಾಗ ತನ್ನ ಕಿರುನಾಲಿಗೆಯನ್ನು ಕಿತ್ತುಕೊಂಡನು.

**ವಿಹಾಯ ದೇಹಮುಲ್ಬಣಂ ತಮೋऽವತಾರ್ಯ ಚಾಗ್ರಜಮ್ ।**
**ಪ್ರತೀಕ್ಷಮಾಣ ಉಲ್ಬಣಂ ಸಮತ್ತಿ ತತ್ ಸುಖೇತರಮ್ ॥ ೨೯೬ ॥**

**ಪದಚ್ಛೇದ :- ವಿಹಾಯ, ದೇಹಮ್, ಉಲ್ಬಣಂ, ತಮಃ, ಅವತಾರ್ಯ, ಚ, ಅಗ್ರಜಮ್ । ಪ್ರತಾಪಮಾಣಃ, ಉಲ್ಬಣಂ, ಸಮತ್ತಿ, ತತ್, ಸುಖೇತರಮ್ ॥**

**ಅರ್ಥ :- ದೇಹಂ** = ಶರೀರವನ್ನು, **ವಿಹಾಯ** = ಬಿಟ್ಟು, **ಉಲ್ಬಣಂ** = ಭಯಂಕರವಾದ, **ತಮಃ** = ತಮಸ್ಸನ್ನು, **ಅವತಾರ್ಯ** = ಇಳಿದು, **ಚ** = ಮತ್ತು, **ಅಗ್ರಜಂ** = ಅಣ್ಣನಾದ ಹಂಸನನ್ನು, **ಪ್ರತಾಪಮಾಣಃ** = ನಿರೀಕ್ಷಿಸುತ್ತಾ, **ಉಲ್ಬಣಂ** = ಭಯಂಕರವಾದ, **ತತ್** = ಆ, **ಸುಖೇತರಂ** = ಸುಖಕ್ಕಿಂತಲು ಭಿನ್ನವಾದ ದುಃಖವನ್ನು, **ಸಮತ್ತಿ** = ಅನುಭವಿಸುತ್ತಾನೆ.

**ತಾತ್ಪರ್ಯ :-** ಡಿಭಿಕ ಶರೀರವನ್ನು ತ್ಯಾಗ ಮಾಡಿ ಭಯಂಕರವಾದ ತಮಸ್ಸಿನಲ್ಲಿ ಇಳಿದು ಅಣ್ಣನನ್ನು ಹುಡುಕುತ್ತಾ ಭಯಂಕರವಾದ ದುಃಖವನ್ನು ಉಣ್ಣುತ್ತಾನೆ.

**ತತೋ ಹರಿರ್ಬಲೈರ್ಯುತೋ ಬಲಾನ್ವಿತೋ ಮುನೀಶ್ವರೈಃ ।**
**ಸಮಂ ಕುಶಸ್ಥಲೀಂ ಯಯೌ ಸ್ತುತಃ ಕಶಂಕರಾದಿಭಿಃ ॥ ೨೯೭ ॥**

ಪದಚ್ಛೇದ :- ತತಃ, ಹರಿಃ, ಬಲ್ಯೈಃ, ಯುತಃ, ಬಲಾನ್ವಿತಃ, ಮುನೀಶ್ವರೈಃ । ಸಮಂ, ಕುಶಸ್ಥಲೀಂ, ಯಯೌ, ಸ್ತುತಃ, ಕ, ಶಂಕರಾದಿಭಿಃ ॥

**ಅರ್ಥ** :- **ತತಃ** = ಅನಂತರ, **ಹರಿಃ** = ಶ್ರೀಕೃಷ್ಣನು, **ಬಲ್ಯೈಃ** = ಬಲರಾಮ- ನಿಂದ, **ಬಲಾನ್ವಿತಃ** = ಸೇನೆಯಿಂದ, **ಮುನೀಶ್ವರೈಃ** = ಮುನಿಗಳಿಂದ, **ಯುತಃ** = ಕೂಡಿ, **ಕ** = ಬ್ರಹ್ಮ, **ಶಂಕರಾದಿಭಿಃ** = ರುದ್ರನೇ ಮೊದಲಾದ ದೇವತೆಗಳಿಂದ, **ಸ್ತುತಃ** = ಸ್ತುತಿಸಲ್ಪಟ್ಟವನಾಗಿ, **ಕುಶಸ್ಥಲೀಂ** = ದ್ವಾರಕೆಗೆ, **ಯಯೌ** = ತೆರಳಿದ.

**ತಾತ್ಪರ್ಯ** :- ಬಳಿಕ ಶ್ರೀಕೃಷ್ಣ ಸೈನ್ಯ ಸಮೇತನಾಗಿ ಬಲರಾಮನಿಂದ ಯತೀಶ್ವರರಿಂದ ಕೂಡಿಕೊಂಡು ಬ್ರಹ್ಮರುದ್ರಾದಿ ದೇವತೆಗಳಿಂದ ಹೊಗಳಿಸಿ- ಕೊಳ್ಳುತ್ತಾ ದ್ವಾರಕೆಗೆ ತೆರಳಿದ.

**ಸ್ವಕೀಯಪಾದಪಲ್ಲವಾಶ್ರಯಂ ಜನಂ ಪ್ರಹರ್ಷಯನ್ ।**
**ಉವಾಸ ನಿತ್ಯಸತ್ಸುಖಾರ್ಣವೋ ರಮಾಪತಿರ್ಗೃಹೇ ॥ ೨೯೮ ॥**

ಪದಚ್ಛೇದ :- ಸ್ವಕೀಯಪಾದಪಲ್ಲವಾಶ್ರಯಂ, ಜನಂ, ಪ್ರಹರ್ಷಯನ್ । ಉವಾಸ, ನಿತ್ಯಸತ್ಸುಖಾರ್ಣವಃ, ರಮಾಪತಿಃ, ಗೃಹೇ ॥

**ಅರ್ಥ** :- **ಸ್ವಕೀಯ ಪಾದಪಲ್ಲವಾಶ್ರಯಂ** = ಚಿಗುರೆಲೆಯಂಥ ತನ್ನ ಪಾದವನ್ನು ಆಶ್ರಯಿಸಿದ, **ಜನಂ** = ಜನರನ್ನು, **ಪ್ರಹರ್ಷಯನ್** = ಸಂತೋಷಪಡಿಸುತ್ತಾ, **ನಿತ್ಯಸತ್ಸುಖಾರ್ಣವಃ** = ನಿತ್ಯವಾದ, ದುಃಖ ಅಸಂಭಿನ್ನ ಸುಖಸಾಗರನಾದ, **ರಮಾಪತಿಃ** = ಲಕ್ಷ್ಮೀಪತಿಯಾದ ಶ್ರೀಕೃಷ್ಣನು, **ಗೃಹೇ** = ಮನೆಯಲ್ಲಿ, **ಉವಾಸ** = ವಾಸ ಮಾಡಿದನು.

**ತಾತ್ಪರ್ಯ** :- ಚಿಗುರೆಲೆಯಂಥ ತನ್ನ ಪಾದಕಮಲಗಳನ್ನು ಆಶ್ರಯಿಸಿದ ಭಕ್ತರಿಗೆ ಸಂತೋಷವನ್ನು ನೀಡುತ್ತ ನಿತ್ಯವಾದ ದುಃಖದ ಲವಲೇಶವೂ ಇಲ್ಲದ ಸುಖದಿಂದ ಸಾಗರದಂತೆ ಇರುವ ಶ್ರೀಕೃಷ್ಣ ಮನೆಯಲ್ಲಿ ವಾಸ ಮಾಡಿದ.

ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ
ಶ್ರೀಮಹಾಭಾರತತಾತ್ಪರ್ಯನಿರ್ಣಯೇ
ಹಂಸಡಿಭಕವಧೋನಾಮ ಸಪ್ತದಶೋಽಧ್ಯಾಯಃ

# ಅಧ್ಯಾಯ - 18

ಭೀಮಾರ್ಜುನದಿಗ್ವಿಜಯಃ

**ಯದಾ ರಾಮಾದವಾಪ್ತಾನಿ ದಿವ್ಯಾಸ್ತ್ರಾಣಿ ಪ್ರಪೇದಿರೇ ।**
**ದ್ರೋಣಾತ್ ಕುಮಾರಾಸ್ತೇಷ್ವಾಸೀತ್ ಸರ್ವೇಷ್ವಪ್ಯಧಿಕೋಽರ್ಜುನಃ ॥ ೧ ॥**

**ಅರ್ಥ** :- **ಯದಾ** = ಯಾವಾಗ, **ಕುಮಾರಾಃ** = ಧರ್ಮರಾಜಾದಿ ರಾಜಕುಮಾರರು, **ರಾಮಾತ್** = ಪರಶುರಾಮರಿಂದ, **ಅವಾಪ್ತಾನಿಃ** = ಹೊಂದಿದ, **ದಿವ್ಯಾಸ್ತ್ರಾಣಿ** = ಅನೇಕ ದಿವ್ಯಾಸ್ತ್ರಗಳನ್ನು, **ದ್ರೋಣಾತ್** = ದ್ರೋಣಾಚಾರ್ಯರಿಂದ, **ಪ್ರಪೇದಿರೇ** = ಹೊಂದಿದರೋ, (ತದಾ = ಆಗ), **ತೇಷು ಸರ್ವೇಷ್ವಪಿ** = ಆ ಎಲ್ಲಾ ರಾಜಕುಮಾರರಲ್ಲಿ, **ಅರ್ಜುನಃ** = ಅರ್ಜುನನು, **ಅಧಿಕಃ** = ಅಸ್ತ್ರವಿದ್ಯೆ ಪ್ರವೀಣನು, **ಆಸೀತ್** = ಆದನು.

**ತಾತ್ಪರ್ಯ** :- ದ್ರೋಣಾಚಾರ್ಯರು ತಾವು ಅನೇಕ ವರ್ಷಗಳ ಕಾಲ ತಮ್ಮ ಗುರುಗಳಾದ ಪರಶುರಾಮ ದೇವರಿಂದ ಕಲಿತ ಅನೇಕ ಪ್ರಬಲವಾದ ಅಸ್ತ್ರ ವಿದ್ಯೆಗಳನ್ನೆಲ್ಲಾ ಆ ಹಸ್ತಿನಾವತಿಯಲ್ಲಿ ಧರ್ಮರಾಜಾದಿ ರಾಜಕುಮಾರರಿಗೆ ಕಲಿಸಿದಾಗ ಆ ಎಲ್ಲ ರಾಜಕುಮಾರರಲ್ಲಿಯೂ ಅರ್ಜುನನು ಮಾತ್ರ ಹೆಚ್ಚು ಅಸ್ತ್ರ ವಿದ್ಯಾಪಾರಂಗತನಾದ. ಭೀಷ್ಮಾಚಾರ್ಯರ ಪ್ರಾರ್ಥನೆಯಂತೆ ದ್ರೋಣಾ ಚಾರ್ಯರು ಹಸ್ತಿನಾವತಿಯ ರಾಜಕುಮಾರರಿಗೆಲ್ಲಾ ಅಸ್ತ್ರವಿದ್ಯೆಯನ್ನು ಕಲಿಸಲು ಪ್ರಾರಂಭಿಸಿದರು. ದ್ರೋಣಾಚಾರ್ಯರು ತಾವು ಪರಶುರಾಮ ದೇವರಿಂದ ತಾವು ಕಲಿತ ಅನೇಕ ದಿವ್ಯಾಸ್ತ್ರಗಳನ್ನು ಆ ರಾಜಕುಮಾರರಿಗೆ ಕಲಿಸಿದರು. ಅವರಲ್ಲಿ ಅರ್ಜುನನು ಬಹಳ ನಿಷ್ಠೆಯಿಂದ ಆ ವಿದ್ಯೆಗಳನ್ನು ಕಲೆತು ಆ ರಾಜಕುಮಾರರಲ್ಲಿ ಉತ್ತಮ ಅಸ್ತ್ರ ವಿದ್ಯಾಪಾರಂಗತನಾದನು.

**ನಿಜಪ್ರತಿಭಯಾ ಜಾನನ್ ಸರ್ವಾಸ್ತ್ರಾಣಿ ತತೋಽಧಿಕಮ್ ।**
**ನಾಸ್ತ್ರಯುದ್ಧಂ ಕ್ವಚಿದ್ ಭೀಮೋ ಮನ್ಯತೇ ಧರ್ಮಮಂಜಸಾ ॥ ೨ ॥**

**ಅರ್ಥ** :- **ಭೀಮಃ** = ಭೀಮಸೇನ ದೇವರು, **ನಿಜ ಪ್ರತಿಭಯಾ** = ತಮ್ಮ ಸ್ವಾಭಾವಿಕವಾದ ಸಾಮರ್ಥ್ಯದಿಂದಲೇ, **ಸರ್ವಾಸ್ತ್ರಾಣಿ** = ಎಲ್ಲಾ ದಿವ್ಯಾಸ್ತ್ರ ಗಳನ್ನು, **ತತಃ** = ಆ ಅರ್ಜುನನಿಗಿಂತಲೂ, **ಅಧಿಕಂ** = ಹೆಚ್ಚಾಗಿ, **ಜಾನನ್**

**(ಅಪಿ)** = ತಿಳಿದವನಾದರೂ, **ಕ್ವಚಿತ್** = ಎಲ್ಲಿಯೂ, **ಅಸ್ತ್ರಯುದ್ಧಂ** = ಅಸ್ತ್ರ ಯುದ್ಧವನ್ನು, **ಅಂಜಸಾ ಧರ್ಮಂ** = ಉತ್ತಮವಾದ ಧರ್ಮವೆಂದು, **ನ ಮನ್ಯತೆ** = ತಿಳಿಯಲಿಲ್ಲ.

**ತಾತ್ಪರ್ಯ :-** ಆ ಎಲ್ಲಾ ರಾಜಕುಮಾರರಲ್ಲಿ ಭೀಮನು ಮಾತ್ರ ಸ್ವತಃ ಭಗವಂತನ ಅನುಗ್ರಹದಿಂದ ಪ್ರಾಪ್ತವಾದ ಜ್ಞಾನದಿಂದ ಎಲ್ಲಾ ಅಸ್ತ್ರಗಳನ್ನು ಅರ್ಜುನನಿಗಿಂತಲೂ ಚೆನ್ನಾಗಿ ತಿಳಿದಿದ್ದರೂ. ಅದು ಪರಿಶುದ್ಧ ಭಾಗವತ ಧರ್ಮವಲ್ಲ ಎಂದು ಅದನ್ನು ಆಶ್ರಯಿಸಲಿಲ್ಲ. ಆ ರಾಜಕುಮಾರರಲ್ಲಿ ಶ್ರೇಷ್ಠವಾದ ಭೀಮನಿರುವಾಗ ಹೇಗೆ ಅರ್ಜುನ ಅಸ್ತ್ರ ವಿದ್ಯಾಪಾರಂಗತನೆನಿಸಿದ ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಈ ಶ್ಲೋಕದಲ್ಲಿ ಉತ್ತರ ಕೊಡುತ್ತಾ ಭಗವಂತನ ಅನುಗ್ರಹ ಪ್ರಾಪ್ತವಾದ ಸ್ವಾಭಾವಿಕ ಪ್ರತಿಭೆಯಿಂದ ಅರ್ಜುನನಿಗಿಂತಲೂ ಮಿಗಿಲಾಗಿ ತಿಳಿದಿದ್ದರೂ ಅದು ತನಗೆ ಯೋಗ್ಯವಾದ ಶುದ್ಧ ಭಾಗವತ ಧರ್ಮವಲ್ಲ ಎಂದು ಅಸ್ತ್ರವಿದ್ಯೆಯನ್ನು ಆಶ್ರಯಿಸಿಲ್ಲ ಎಂದು ಭಾವ. ಹಾಗಾದರೆ ಗುರುಪ್ರಸಾದದಿಂದ ಲಭ್ಯವಾದ ಜ್ಞಾನದಲ್ಲಿ ಅರ್ಜುನ ಶ್ರೇಷ್ಠನಾದರೆ ಭಗವತ್ ಪ್ರಸಾದದಿಂದ ಲಭ್ಯವಾದ ಜ್ಞಾನದಲ್ಲಿ ಯಾವತ್ತಿಗೂ ಭೀಮನೇ ಶ್ರೇಷ್ಠ ಎಂದು ಭಾವ.

**ನಹಿ ಭಾಗವತೋ ಧರ್ಮೋ ದೇವತಾಭ್ಯುಪಯಾಚನಮ್ ।**
**ಜ್ಞಾನಭಕ್ತೀ ಹರೇಸ್ತೃಪ್ತಿಂ ವಿನಾ ವಿಷ್ಣೋರಪಿ ಕ್ವಚಿತ್ ॥ ೩ ॥**

**ನಾऽಕಾಂಕ್ಷ್ಯಂ ಕಿಮುತಾನ್ಯೇಭ್ಯೋ ಹ್ಯಸ್ತ್ರಂ ಕಾಮ್ಯಫಲಪ್ರದಮ್ ।**
**ಶುದ್ಧೇ ಭಾಗವತೇ ಧರ್ಮೇ ನಿರತೋ ಯದ್ ವೃಕೋದರಃ ॥ ೪ ॥**

**ಅರ್ಥ :- ದೇವತಾಭ್ಯು ಯಾಚನವ್** = ದೇವತಾ ಪ್ರಾರ್ಥನೆ ರೂಪವಾದ (ಅಸ್ತ್ರವಿದ್ಯೆಯು), **ಭಾಗವತೋ ಧರ್ಮಃ** = ಪರಮ ಭಾಗವತ ಧರ್ಮವು, **ನ** = ಅಲ್ಲ, **ಹಿ** = ಯಾಕೆಂದರೆ, **ಜ್ಞಾನಭಕ್ತೀ** = ಪರಮಾತ್ಮನ ಜ್ಞಾನ ಹಾಗೂ ಭಕ್ತಿಯನ್ನು, **ತೃಪ್ತಿ** = ಭಗವದೇತರ ವಿಷಯದಲ್ಲಿ ಅಲಂಬುದ್ಧಿಯನ್ನು, **ವಿನಾ** = ಬಿಟ್ಟು, **ಕ್ವಚಿತ್** = ಎಲ್ಲಿಯೂ, **ವಿಷ್ಣೋರಪಿ** = ವಿಷ್ಣುವಿನಲ್ಲಿಯೂ. **ನಾಕಾರಿಷ್ಯಂ** = ಬಯಸಲು ಯೊಗ್ಯವಲ್ಲ ಎಂದ ಮೇಲೆ, **ಅನ್ಯೇಭ್ಯೋ** = ಬೇರೆಯವರಿಂದ, **ಕಾಮ್ಯಫಲ ಪ್ರದಮ್** = ಕಾಮ್ಯಫಲವನ್ನು ಕೊಡುವ,

**ಅಸ್ತ್ರಂ** = ಅಸ್ತ್ರವಿದ್ಯೆಯು, **ನಾಕಾಂಕ್ಷ್ಯಂ** = ಬಯಸಲು ಯೋಗ್ಯವಲ್ಲ ಎಂದು, **ಕಿಮುತ** = ಹೇಳಬೇಕೇನು?, **ಯತ್** = ಯಾವ ಕಾರಣದಿಂದ, **ವೃಕೋದರಃ** = ಭೀಮಸೇನನು, **ಶುದ್ಧೇ ಭಾಗವತೇ ಧರ್ಮೇ** = ಪರಿಶುದ್ಧವಾದ ಭಾಗವತ ಧರ್ಮದಲ್ಲಿ, **ನಿರತಃ** = ಆಸಕ್ತನು.

**ತಾತ್ಪರ್ಯ** :- ಅಸ್ತ್ರವಿದ್ಯೆಯು ಅಸ್ತ್ರಾಭಿಮಾನ ದೇವತಾ ಪ್ರಾರ್ಥನಾ ರೂಪವಾದದ್ದು. ಆದ್ದರಿಂದ ಪರಮ ಭಾಗವತೋತ್ತಮರಾದ ಭೀಮಸೇನ ದೇವರು. ಅಂತಹ ವಿದ್ಯೆಯನ್ನು ಆಶ್ರಯಿಸಲಿಲ್ಲ. ಯಾಕೆಂದರೆ ಭೀಮಸೇನ ದೇವರು ಜ್ಞಾನ, ಭಕ್ತಿ, ವೈರಾಗ್ಯವನ್ನು ಬಿಟ್ಟು ಭಗವಂತನಲ್ಲಿ ಬಿಟ್ಟು ಬೇರೆ ದೇವತೆಗಳಲ್ಲಿ ಎಂದೂ ಬೇಡಿದವರಲ್ಲ ಎಂದ ಮೇಲೆ ಇತರರ ಸಂಹಾರಕ್ಕಾಗಿ ಬೇರೆ ದೇವತೆಗಳನ್ನು ಪ್ರಾರ್ಥಿಸುವುದು ಎಲ್ಲಿಯದು? ಆದ್ದರಿಂದ ಭೀಮಸೇನ ದೇವರು ಕಾಮ್ಯಫಲಪ್ರದವಾದ ಈ ಅಸ್ತ್ರವಿದ್ಯೆಯನ್ನು ಆಶ್ರಯಿಸಲಿಲ್ಲ ಎಂಬುದು ಯುಕ್ತವೇ ಆಗಿದೆ.

**ನ ಕಾಮ್ಯಕರ್ಮಕೃತ್ ತಸ್ಮಾನ್ನಾಯಾಚದ್ ದೇವಮಾನುಷಾನ್ ।**
**ನ ಹರಿಶ್ಚಾರ್ಥಿತಸ್ತೇನ ಕದಾಚಿತ್ ಕಾಮಲಿಪ್ಸಯಾ ॥ ೫ ॥**

**ಭಿಕ್ಷಾಮಟಂಶ್ಚ ಹುಂಕಾರಾತ್ ಕರವದ್ ವೈಶ್ಯತೋಽಗ್ರಹೀತ್ ।**
**ನಾನ್ಯದೇವಾ ಸತಾಸ್ತೇನ ವಾಸುದೇವಾನ್ನ ಪೂಜಿತಾಃ ॥ ೬ ॥**

**ಅರ್ಥ** :- **ಯತ್** = ಶುದ್ಧ ಭಾಗವತ ಧರ್ಮದಲ್ಲಿ ನಿರತನಾಗಿರುವುದ ರಿಂದಲೇ, **ನ ಕಾಮ್ಯಕರ್ಮಕೃತ್** = ಕಾಮ್ಯ ಕರ್ಮವನ್ನು ಮಾಡಿದವರಲ್ಲ, **ತಸ್ಮಾತ್** = ಆದ್ದರಿಂದ, **ದೇವಮಾನುಷಾನ್** = ದೇವತೆಗಳು ಅಥವಾ ಮನುಷ್ಯರನ್ನಾಗಲಿ, ನ **ಅಯಾಚತ** = ಬೇಡಲಿಲ್ಲ, **ಹರಿಶ್ಚ** = ಶ್ರೀಹರಿಯೂ ಕೂಡ, **ತೇನ** = ಆ ಭೀಮ ಸೇನದೇವರಿಂದ, **ಕದಾಚಿತ್** = ಯಾವಾಗಲೂ, **ಕಾಮ್ಯಲಿಪ್ಸಯಾ** = ಫಲಾಪೇಕ್ಷಿಯಾಗಿ, ನ **ಅರ್ಥಿತಃ** = ಪ್ರಾರ್ಥಿಸಲ್ಪಡಲಿಲ್ಲ, **ಚ** = ಮತ್ತು, **ಭಿಕ್ಷಾಂ ಅಟನ್** = ಭಿಕ್ಷೆಯನ್ನು ಬೇಡುವಾಗ, **ಹುಂಕಾರಾತ್** = ಹುಂಕಾರದಿಂದ, **ವೈಶ್ಯತಃ** = ವೈಶ್ಯನಿಂದ, **ಕರವತ್** = ಕಂದಾಯದಂತೆ, **ಅಗ್ರಹೀತ್** = ಸ್ವೀಕರಿಸಿದನು, (ಏವಂ = ಈ ರೀತಿಯಾಗಿ), **ತೇನ** = ಆ ಭೀಮಸೇನದೇವರಿಂದ, **ಅನ್ಯದೇವಾಃ** = ಪರಮಾತ್ಮೇತರ ದೇವತೆಗಳು, **ನ ನತಾಃ**

= ನಮಸ್ಕರಿಸಲ್ಪಡಲಿಲ್ಲ, ವಾಸುದೇವಾತ್ = ವಾಸುದೇವನಿಗಿಂತ, ಅನ್ಯದೇವಾ ನ ಪೂಜಿತಾ = ಬೇರೆ ದೇವತೆಗಳು ಪೂಜಿಸಲ್ಪಡಲಿಲ್ಲ.

ತಾತ್ಪರ್ಯ :- ಅಸ್ತ್ರವಿದ್ಯೆ ಅದು ಕಾಮ್ಯಕರ್ಮ. ಅಂತಹ ಕಾಮ್ಯಕರ್ಮವನ್ನು ಎಂದಿಗೂ ಮಾಡದ ಭೀಮಸೇನ ದೇವರು ಮನುಷ್ಯರ ಹತ್ತಿರ ಅಥವಾ ಹರಿಯಲ್ಲಿಯೇ ಆಗಲಿ ಕಾಮ್ಯಫಲಾಪೇಕ್ಷೆಗಳಾಗಿ ಎಂದೂ ಏನನ್ನು ಬೇಡದವರು. ಇಂತಹ ದೇವತಾ ಪ್ರಾರ್ಥನಾ ರೂಪವಾದ ಕಾಮ್ಯಫಲವನ್ನು ದೇವತೆಗಳಲ್ಲಾಗಲಿ, ಮನುಷ್ಯರಲ್ಲಾಗಲಿ ಬೇಡಲಿಲ್ಲ ಎಂದು ಹೇಳಬೇಕೇನು? ಅಂತಹ ಭೀಮಸೇನ ದೇವರು ಭಿಕ್ಷಾಟನೆ ಮಾಡುವಾಗಲೂ ವೈಶ್ಯರು ಕರವನ್ನು ವಸೂಲಿ ಮಾಡುವಂತೆ ಹುಂಕಾರದಿಂದ ಸ್ವೀಕರಿಸಿದರೆ ಹೊರತು ಅಲ್ಲೂ ಯಾರನ್ನು ಬೇಡಲಿಲ್ಲ. ಹೀಗೆ ಭೀಮ ತಾನು ಹರಿಯನ್ನು ಬಿಟ್ಟು ತನಗಿಂತ ಕೆಳಗಿನ ದೇವತೆಗಳಿಗೆ ಎಂದು ನಮಸ್ಕಾರ ಪೂಜಾದಿಗಳನ್ನು ಮಾಡುತ್ತಿರಲಿಲ್ಲ.

ವಿ. :- ಯುದ್ಧದಲ್ಲಿ ಅಸ್ತ್ರಗಳ ಬಳಕೆ ಮಾಡುವುದೆಂದರೆ – ಆ ಅಸ್ತ್ರಗಳನ್ನು ಬಿಡುವ ಸಂದರ್ಭದಲ್ಲಿ ಇತರ ದೇವತೆಗಳನ್ನು ಶತ್ರು ಸಂಹಾರಕ್ಕಾಗಿ ಪ್ರಾರ್ಥಿಸುವುದು. ಇದು ಅನ್ಯದೇವತೋಪಾಸನೆ ಹಾಗೆ ಕಾಮ್ಯ ಕರ್ಮವೂ ಹೌದು. ಪರಮ ಭಾಗವತೋತ್ತಮನಾದ ಭೀಮ ಎಂದೂ ಅಂತಹ ಕರ್ಮವನ್ನು ಮಾಡುವವನಲ್ಲ. ಮತ್ತು ಸ್ವತಃ ತಾನು ಸರ್ವಜ್ಞನಾದ್ದರಿಂದ ಅಸ್ತ್ರವಿದ್ಯೆಯನ್ನು ಬಲ್ಲ. ಆದ್ದರಿಂದ ದೇವತೆಗಳಲ್ಲಾಗಲಿ ಮನುಷ್ಯರಲ್ಲಾಗಲಿ ಬೇಡುವುದೆಲ್ಲಿ ಬಂತು. ಏಕಚಕ್ರಾ ನಗರದಲ್ಲಿಯೂ ಪಾಂಡವರು ಬ್ರಾಹ್ಮಣ ವೇಷದಿಂದ ಭೀಕ್ಷಾಟನೆ ಮಾಡುವಾಗ ಭೀಮನು ಮಾತ್ರ ಬೇಡುತ್ತಿರಲಿಲ್ಲ. ಏಕೆಂದರೆ ಭೀಮ ಮೊದಲಿಗೆ ಬಕಾಸುರನನ್ನು ಕೊಂದ ಕಾರಣ ತಾನು ರಾಜನಂತೆ ಅಧಿಪತಿ ಎಂದೆನಿಸಿದ್ದ. ಆದ್ದರಿಂದ ವೈಶ್ಯರಂತೆ ಭಿಕ್ಷಾಟನೆ ಸಂದರ್ಭದಲ್ಲಿ ಮನೆ ಮುಂದೆ ನಿಂತು ಹುಂಕರಿಸಿದರೆ ಎಲ್ಲಾ ಜನರು ಭಯ ಭಕ್ತಿಗಳಿಂದ ಭಿಕ್ಷೆಯನ್ನು ಹಾಕುತ್ತಿದ್ದರು. ಹೀಗೆ ಅಲ್ಲಿಯೂ ರಾಜ ಮರ್ಯಾದೆಯೇ ಹೊರತು ಯಾಚಕವೃತ್ತಿ ಇಲ್ಲ ಎಂದು ಭಾವ.

**ನ ಪ್ರತೀಪಂ ಹರೇಃ ಕ್ವಾಪಿ ಸ ಕರೋತಿ ಕಥಂಚನ ।**
**ಅನುಪಸ್ಕರಿಣೋ ಯುದ್ಧೇ ನಾಭಿಯಾತಿ ಹ್ಯುಪಸ್ಕರೀ ।। ೭ ।।**

**ಅರ್ಥ :- ಸಃ** = ಆ ಭೀಮಸೇನ ದೇವರು, **ಕ್ವಾಪಿ** = ಎಲ್ಲಿಯೂ, **ಕಥಂಚನ** = ಯಾವ ರೀತಿಯಿಂದಲೂ, **ಪ್ರತೀಪಂ** = ವಿರೋಧವನ್ನು, **ನ ಕರೋತಿ** = ಮಾಡಲಿಲ್ಲ, **ಯುದ್ಧೇ** = ಯುದ್ಧದಲ್ಲಿ, **ಅನುಪಸ್ಕಾರಿಣ** = ನಿರಾಯುಧರ ಮೇಲೆ, (**ಸ್ವಯಂ** = ತಾನು), **ಹ್ಯುಪಸ್ಕರೀ** = ಸಾಯುಧನಾಗಿ, **ನಾಭಿಯಾತಿ** = ಹೋಗಲಿಲ್ಲ.

**ನಾಪಯಾತಿ ಯುಧಃ ಕ್ವಾಪಿ ನ ಕ್ವಚಿಚ್ಛದ್ಮ ಚಾಽಚರೇತ್ ।**
**ನೈವೋರ್ಧ್ವದೈಹಿಕಾನುಜ್ಞಾಮವೈಷ್ಣವಕೃತೇಽಕರೋತ್ ।**
**ನ ಕರೋತಿ ಸ್ವಯಂ ನೈಷಾಂ ಪ್ರಿಯಮಪ್ಯಾಚರೇತ್ ಕ್ವಚಿತ್ ॥ ೮ ॥**

**ಅರ್ಥ :- ಯುಧಃ** = ಯುದ್ಧದಿಂದ, **ಕ್ವಾಪಿ** = ಎಂದಿಗೂ, **ನಾಪಯಾತಿ** = ಹಿಂತಿರುಗಲಿಲ್ಲ, **ಚ** = ಮತ್ತು, **ಕ್ವಚಿತ್** = ಎಲ್ಲಿಯೂ, **ನ ಛದ್ಮ ಆಚರೇತ್** = ಕಪಟವನ್ನಾಚರಿಸಲಿಲ್ಲ, **ಅವೈಷ್ಣವ ಕೃತೇ** = ವಿಷ್ಣು ದ್ವೇಷಿಗಳಿಗೆ **ಊರ್ಧ್ವದೈಹಿಕಾನುಜ್ಞಾಮ್** = ಅಂತ್ಯಕ್ರಿಯೆಗೆ ಅನುಮತಿಯನ್ನು, **ನ ಅಕರೋತ್** = ಮಾಡಲಿಲ್ಲ, **ಸ್ವಯಂ ಚ** = ಸ್ವತಃ ತಾನೂ ಕೂಡ, **ನ ಕರೋತಿ** = ಮಾಡುತ್ತಿರಲಿಲ್ಲ, **ಏಷಾಂ** = ಇಂತಹ ವಿಷ್ಣು ದ್ವೇಷಿಗಳಿಗೆ, **ಕ್ವಚಿತ್** = ಎಲ್ಲಿಯೂ, **ಪ್ರಿಯಮಪಿ** = ಇಷ್ಟವಾದದ್ದನ್ನು, **ನ ಆಚರೇತ್** = ಮಾಡಲಿಲ್ಲ.

**ತಾತ್ಪರ್ಯ :-** ಭೀಮಸೇನ ದೇವರ ಧರ್ಮ ಪರಿಪಾಲನೆಯ ಕ್ರಮ ಇಡೀ ಜಗತ್ತೇ ಪಾಠ ಕಲಿಯುವ ಹಾಗೆ ಇತ್ತು. ಎಂದೂ ಹರಿ ಇಚ್ಛೆಗೆ ವಿರುದ್ಧವಾಗಿ ನಡೆಯುತ್ತಿರಲಿಲ್ಲ. ಸ್ವತಃ ತಾವು ನಿರಾಯುಧರ ಮೇಲೆ ಸಾಯುಧರಾಗಿ ಆಕ್ರಮಣ ಮಾಡುವ ಕಪಟ ಯುದ್ಧವನ್ನು ಎಂದೂ ಆಚರಿಸಲಿಲ್ಲ. ಹಾಗೆ ಎಂಥಾ ಸಂದರ್ಭದಲ್ಲೂ ಯುದ್ಧ ವಿಮುಖರಾಗಿ ಓಡಿ ಹೋಗಲಿಲ್ಲ. ಹೀಗೆ ಯುದ್ಧ ಧರ್ಮದಲ್ಲಿ ತಮ್ಮ ನಿಷ್ಠೆಯನ್ನು ಜಗತ್ತಿಗೆ ತೋರಿದರೆ ತಮ್ಮ ಜೀವನದಲ್ಲಿ ಎಂದೂ ವಿಷ್ಣು ವೈಷ್ಣವ ದ್ವೇಷಿಗಳಿಗೆ ಸದ್ಗತಿಯಾಗಬಾರದೆಂದು ಅವರವರ ಅಂತ್ಯಕ್ರಿಯೆಗೂ ಅನುಮತಿಯನ್ನು ನೀಡದೆ ತಾನೂ ಸ್ವತಃ ಮಾಡದೆ ಅವರಿಗೆ ಯೋಗ್ಯವಾದ ಅಂಧತಮಸ್ಸನ್ನು ಕಲ್ಪಿಸುವ ಮೂಲಕ ಸಮಸ್ತ ಜಗತ್ತಿಗೆ ತನ್ನ ಭಾಗವತ ಧರ್ಮ ನಿಷ್ಠೆಯನ್ನು ತೋರಿಸಿದರು.

**ಸಖ್ಯಂ ನಾವೈಷ್ಣವೈಶ್ಚಕ್ರೇ ಪ್ರತೀಪಂ ವೈಷ್ಣವೇ ನಚ ।**
**ಪರೋಕ್ಷೇಽಪಿ ಹರೇರ್ನಿಂದಾಕೃತೋ ಜಿಹ್ವಾಂ ಭಿನತ್ತಿ ಚ ॥ ೯ ॥**

**ಅರ್ಥ** :- **ಚ** = ಮತ್ತು, **ಅವೈಷ್ಣವೈಃ** = ವಿಷ್ಣು ದ್ವೇಷಿಗಳೊಡನೆ, **ಸಖ್ಯಂ** = ಸ್ನೇಹವನ್ನು, **ಚ** = ಮತ್ತು, **ವೈಷ್ಣವೇ** = ವೈಷ್ಣವರಲ್ಲಿ, **ಪ್ರತೀಪಂ** = ವಿರೋಧವನ್ನು, **ನ ಚಕ್ರೇ** = ಮಾಡಲಿಲ್ಲ, **ಚ** = ಮತ್ತು, **ಪರೋಕ್ಷೇಽಪಿ** = ಪ್ರತ್ಯಕ್ಷದಲ್ಲಾಗಲಿ, ಪರೋಕ್ಷದಲ್ಲಾಗಲಿ, **ಹರೇರ್ನಿಂದಾ ಕೃತಃ** = ಹರಿ ನಿಂದನೆಯನ್ನು ಮಾಡಿದವರ, **ಜಿಹ್ವಾಂ** = ನಾಲಿಗೆಯನ್ನು, **ಭಿನತ್ತಿ** = ಭೇದಿಸಿದನು.

**ಪ್ರತೀಪಕಾರಿಣೋ ಹಂತಿ ವಿಷ್ಣೋರ್ವೈರ್ನಾನಜೀಘನತ್ ।**
**ನ ಸಂಶಯಂ ಕದಾಽಪ್ಯೇಷ ಧರ್ಮೇ ಜ್ಞಾನೇಽಪಿ ವಾಽಕರೋತ್ ॥ ೧೦ ॥**

**ಅರ್ಥ** :- **ವಿಷ್ಣೋಃ** = ಶ್ರೀಹರಿಯ, **ಪ್ರತೀಪಕಾರಿಣಃ** = ದ್ವೇಷವನ್ನು ಮಾಡುವವರನ್ನು, **(ಸ್ವಯಂ) ಹಂತಿ** = (ತಾನು) ಸ್ವತಃ ಕೊಂದನು, **ಏತಾನ್** = ಅನೇಕ ನೀಚ ಕರ್ಮಗಳನ್ನು ಮಾಡಿದ ಅವೈಷ್ಣವರನ್ನು, **(ಪರೈಃ) ಅಜೀಘನತ್** = (ಬೇರೆಯವರಿಂದ) ಕೊಲ್ಲಿಸಿದನು, **(ಏವಮ್** = ಈ ರೀತಿಯಾಗಿ), **ಏಷಃ** = ಈ ಭೀಮಸೇನ ದೇವರು, **ಕದಾಪಿ** = ಯಾವ ಸಂದರ್ಭದಲ್ಲೂ, **ಧರ್ಮೇ** = ಶುದ್ಧ ಭಾಗವತ ಧರ್ಮದ ವಿಷಯದಲ್ಲಿ, **ಜ್ಞಾನೇಪಿವಾ ಹರಿಸರ್ವೋತ್ತಮತ್ವಾದಿ** :- ಜ್ಞಾನದ ವಿಷಯದಲ್ಲಾಗಲಿ, **ನ ಸಂಶಯಂ ಅಕರೋತ್** = ಸಂದೇಹ ಪಡುತ್ತಿರಲಿಲ್ಲ.

**ತಾತ್ಪರ್ಯ** :- ಭೀಮಸೇನ ದೇವರು ತಮ್ಮ ಜೀವನದಲ್ಲಿ ವೈಷ್ಣವರ ಜೊತೆ ಸ್ನೇಹ ಮಾಡದೇ ತಮ್ಮ ಎದುರಲ್ಲಾಗಲಿ ಹಿಂದಿನಿಂದಾಗಲಿ ವಿಷ್ಣು ವೈಷ್ಣವರ ನಿಂದನೆಯನ್ನು ಮಾಡಿದವರ ನಾಲಿಗೆಯನ್ನು ಭೇದಿಸುತ್ತಿದ್ದರು, ಇದು ಪರಮ ಭಾಗವತ ಧರ್ಮ.

**ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯವಾ ।**
**ತತೋ ಸಾ ಪೈತಿ ಯಃ ಸೋಽಪಿ ಯತ್ಯಧಃ ಸುಕೃತಾಚ್ಯುತಃ ॥**

**ತಾತ್ಪರ್ಯ** :- ಎಂದು ಹೇಳಿದಂತೆ ಪರಮಾತ್ಮನ ನಿಂದನೆಯನ್ನು ಕೇಳಬಾರದು. ಶಕ್ಯವಿದ್ದರೆ ಆ ನಿಂದೆಯನ್ನು ತಡೆಯಬೇಕು. ಇಲ್ಲದಿದ್ದರೆ ಅಲ್ಲಿಂದ ಎದ್ದು ಹೋಗಬೇಕು. ಆದರೆ ಭೀಮ ತಾನು ಸರ್ವಶಕ್ತನಾದ್ದರಿಂದ ನಿಂದನೆಯನ್ನು ತಡೆಯುತ್ತಿದ್ದ. ಅವರನ್ನು ತಾನು ಸಂಹರಿಸಿ

ಬೇರೆಯವರಿಂದಲೂ ಅಂತಹಾ ನೀಚರನ್ನು ಸಂಹಾರ ಮಾಡಿಸುತ್ತಿದ್ದ. ಹೇಗೆ ಭೀಮನಿಗೆ ಶುದ್ಧ ಭಾಗವತಧರ್ಮ ವಿಷಯದಲ್ಲಿ ಹರಿಸರ್ವೋತ್ತಮತ್ವಾದಿಗಳ ವಿಷಯದಲ್ಲಾಗಲೀ ಎಂದೂ ಸಂದೇಹವಿಲ್ಲದೆ ತನ್ನ ನಡುವಳಿಕೆಯಿಂದ ಇತರರಿಗೆ ಆದರ್ಶ ಪ್ರಾಯನಾಗಿದ್ದ.

**ವಿದ್ಯೋಪಜೀವನಂ ನೈಷ ಚಕಾರಾಽಪದ್ಯಪಿ ಕ್ವಚಿತ್ ।**
**ಅತೋ ನ ಧರ್ಮನಹುಷೌ ಪ್ರತ್ಯುವಾಚ ಕಥಂಚನ ॥ ೧೧ ॥**

**ಅರ್ಥ :- ಕ್ವಚಿತ್** = ಎಂದಿಗೂ, **ಆಪದ್ಯಪಿ** = ಆಪತ್ತಿನಲ್ಲಿಯೂ, **ವಿದ್ಯೋಪ ಜೀವನಂ** = ವಿದ್ಯೆಯಿಂದ ಜೀವನವನ್ನು, **ನ ಚಕಾರ** = ಮಾಡಲಿಲ್ಲ, **ಅತ ಏವ** = ಆದ್ದರಿಂದಲೇ, **ಧರ್ಮ ನಹುಷೌ** = ಯಮ ಧರ್ಮರಾಜನ ಮತ್ತು ನಹುಷನ ಪ್ರಶ್ನೆಗಳಿಗೆ, **ಕಥಂಚನ** = ಯಾವ ರೀತಿಯಿಂದಲೂ, **ನ ಪ್ರತ್ಯುವಾಚ** = ಪ್ರತ್ಯುತ್ತರವನ್ನು ಕೊಡಲಿಲ್ಲ.

**ತಾತ್ಪರ್ಯ :-** ಪರಮಭಾಗವತೋತ್ತಮನಾದ ಭೀಮನು ವಿದ್ಯೋಪಜೀವನವನ್ನು ಮಾಡಲು ಬಯಸುತ್ತಿರಲಿಲ್ಲ. ಆದ್ದರಿಂದಲೇ ಹಿಂದೆ ಯಮನ ಪ್ರಶ್ನೆಗಳಿಗಾಗಿ ನಹುಷನ ಪ್ರಶ್ನೆಗಳಿಗಾಗಲಿ ಉತ್ತರಿಸಲಿಲ್ಲ. ಹಿಂದೆ ಪಾಂಡವರನ್ನು ಯಮದೇವರು ಪರೀಕ್ಷಿಸ ಬಯಸಿ ಯಕ್ಷರೂಪದಿಂದ ತನ್ನ ಕೊಳಕ್ಕೆ ನೀರನ್ನು ಕುಡಿಯಲು ಬಂದ ಪಾಂಡವರನ್ನು ಪ್ರಶ್ನೆ ಕೇಳಿದಾಗ ಭೀಮನು ಉತ್ತರ ಗೊತ್ತಿದ್ದರು ವಿದ್ಯೋಪಜೀವನವನ್ನು ಮಾಡಬಾರದೆಂದು ಉತ್ತರಿಸಲಿಲ್ಲ. ಹಾಗೆ ಅಗಸ್ತ್ಯರ ಶಾಪದಿಂದ ಅಜಗರನಾಗಿ ಬಿದ್ದ ನಹುಷನು ವನವಾಸಕಾಲದಲ್ಲಿ ಭೀಮನನ್ನು ಹಿಡಿದು ಕೆಲವು ಪ್ರಶ್ನೆಕೇಳಿದ. ಆಗ ಭೀಮನು ಸ್ವತಃ ಉತ್ತರ ಗೊತ್ತಿದ್ದರೂ ಉತ್ತರಿಸಲಿಲ್ಲ.

**ಆಜ್ಞಯೈವ ಹರೇರ್ದ್ರೌಣೇರಸ್ತ್ರಾಣ್ಯಸ್ತ್ರೈರಶಾತಯತ್ ।**
**ಅದೃಶ್ಯೋಽಲಂಬುಸೋ ಭಗ್ನೋ ನಾನ್ಯತ್ರ ತು ಕಥಂಚನ ॥ ೧೨ ॥**

**ಅರ್ಥ :- ದ್ರೌಣೇ** = ಅಶ್ವತ್ಥಾಮಾಚಾರ್ಯರ, **ಅಸ್ತ್ರಾಣಿ** = ಅಸ್ತ್ರಗಳನ್ನು, **ಹರೇಃ ಆಜ್ಞಯೈವ** = ಕೃಷ್ಣ ಪರಮಾತ್ಮನ ಆಜ್ಞೆಯಿಂದಲೇ, **ಅಸ್ತ್ರ** = ಪುತ್ಯಸ್ತ್ರಗಳಿಂದ, **ಅಶಾಮಯತ್** = ಶಮನಗೊಳಿಸಿದನು, **ಅದೃಶ್ಯ** = ಅದೃಶ್ಯನಾದ, **ಅಲಂಬುಸಃ** = ಅಲಂಬುಸನೆಂಬ ರಾಕ್ಷಸನು, **ಭಗ್ನಃ** =

(ಆಜ್ಞೆಯಿಂದಲೇ ಅಸ್ತ್ರಗಳಿಂದ) ಪರಾಜಿತನಾದನು, **ಅನ್ಯತ್ರ ತು** = ಬೇರೆ ಸಂದರ್ಭದಲ್ಲಿ, **ನ ಕಥಂಚನ** = ಯಾವ ರೀತಿಯಿಂದಲೂ ಅಸ್ತ್ರಯುದ್ಧ ಮಾಡಲಿಲ್ಲ.

**ತಾತ್ಪರ್ಯ** :- ಮಹಾಭಾರತದ ಯುದ್ಧದಲ್ಲಿ ಭೀಮನು ಅಶ್ವತ್ಥಾಮಾಚಾರ್ಯರ ಅಸ್ತ್ರಗಳನ್ನು ತಾನೂ ಅಸ್ತ್ರಗಳಿಂದ ಎದರುಸುತ್ತಾನೆ. ಹಾಗೇ ಅದೃಶ್ಯವಾಗಿ ಯುದ್ಧ ಮಾಡುತ್ತಿದ್ದ ಅಲಂಬುಸನನ್ನೂ ಅಸ್ತ್ರಗಳಿಂದ ಪರಾಭವಗೊಳಿದ. ಅದು ಹರಿಯಾಜ್ಞೆ ಇರೋದರಿಂದಲೇ ಹೊರತು ಇನ್ನಿತರ ಸಂದರ್ಭಗಳಲ್ಲಿ ಸರ್ವಥಾ ಅಸ್ತ್ರಯುದ್ಧ ಮಾಡಲಿಲ್ಲ.

ಭೀಮ ಅಶ್ವತ್ಥಾಮರ ಅದ್ಭುತವಾದ ಅಸ್ತ್ರಯುದ್ಧವನ್ನು ಕಂಡು ಸಿದ್ದರು ಹೊಗಳುತ್ತಾರೆ.

ಪದಚ್ಛೇದ :- **ಅಹೋ, ಜ್ಞಾನೇನ, ಸಂಪನ್ನೌ, ಉಭೌ, ಬ್ರಾಹ್ಮಣ, ಕ್ಷತ್ರಿಯೌ, ಅಜ್ಞಯಾ, ಏವ, ಹರೇಃ, ದ್ರೋಣೇ, ಅಸ್ತ್ರಾಣಿ, ಅಸ್ತ್ರೈಃ, ಅಶಾಮಯತ್, ಅದೃಶ್ಯಃ, ಅಲಂಬುಸಃ, ಭಗ್ನಃ, ನ, ಅನ್ಯತ್ರ ತು, ಕಥಂಚನ.**

**ನಹ್ಯಸ್ತ್ರಯುದ್ಧೇ ಸದೃಶೋ ದ್ರೌಣೇರಸ್ತ್ಯರ್ಜುನಾದೃತೇ ।**
**ಸರ್ವವಿತ್ತ್ವಂ ತತೋ ಭೀಮೇ ಪ್ರದರ್ಶಯಿತುಮೀಶ್ವರಃ ।**
**ಅದಾದಾಜ್ಞಾಮಸ್ತ್ರಯುದ್ಧೇ ತಥೈವಾಲಂಬುಸಂ ಪ್ರತಿ ॥ ೧೩ ॥**

ಪದಚ್ಛೇದ :- **ನ, ಹಿ, ಅಸ್ತ್ರಯುದ್ಧೇ, ಸದೃಶಃ, ದ್ರೌಣೇಃ, ಅಸ್ತಿ, ಅರ್ಜುನಾತ್, ಋತೇ, ಸರ್ವವಿತ್ತ್ವಂ, ತತಃ, ಭೀಮೆ, ಪ್ರದರ್ಶಯಿತುಂ, ಈಶ್ವರಃ, ಆದಾತ್, ಆಜ್ಞಾಂ, ಅಸ್ತ್ರಯುದ್ಧೇ, ತಥಾ, ಏವ, ಅಲಂಬುಸಂ, ಪ್ರತಿ.**

**ಅರ್ಥ** :- **ದ್ರೌಣೇ** = ಅಶ್ವತ್ಥಾಮಾಚಾರ್ಯರಿಗೆ, **ಅಸ್ತ್ರಯುದ್ಧೇ** = ಅಸ್ತ್ರಯುದ್ಧದಲ್ಲಿ, **ಅರ್ಜುನಾದೃತೇ** = ಅರ್ಜುನನನ್ನು ಬಿಟ್ಟು, **ನ ಸದೃಶಃ ಅಸ್ತಿ** = ಸಮನಾದವ ಮತ್ತೊಬ್ಬನಿಲ್ಲ, **ತತಃ** = ಆದ್ದರಿಂದ, **ಭೀಮೆ** = ಭೀಮನಲ್ಲಿ, **ಸರ್ವವಿತ್ತ್ವಂ** = ಸರ್ವಜ್ಞತ್ವವನ್ನು, **ಪ್ರದರ್ಶಯಿತುಂ** = ಜಗತ್ತಿಗೆ ತೋರಿಸಲು, **ಈಶ್ವರಃ** = ಶ್ರೀಕೃಷ್ಣನು, **ತಥೈವ** = ಅಶ್ವತ್ಥಾಮನಂತೆ, **ಅಲಂಬುಸಂ ಪ್ರತಿ** = ಅಲಂಬುಸನೊಡನೆ, **ಅಸ್ತ್ರಯುದ್ಧೇ ಅಸ್ತ್ರ** = ಯುದ್ಧದ ವಿಷಯದಲ್ಲಿ, **ಅಜ್ಞಾಂ** = ಅಪ್ಪಣೆಯನ್ನು, **ಅದಾತ್** = ಕೊಟ್ಟನು.

**ತಾತ್ಪರ್ಯ** :- ಅಸ್ತ್ರಯುದ್ಧದಲ್ಲಿ ಅರ್ಜುನನಿಗೆ ಸಮನಾದವನನ್ನು ಇನ್ನೊಬ್ಬ ಇಲ್ಲ ಎಂದು ಲೋಕವೇ ಭಾವಿಸಿತ್ತು. ಆದ್ದರಿಂದ ಅರ್ಜುನನಿಗಿಂತಲೂ ಭೀಮನಲ್ಲಿ ಹೆಚ್ಚಿನ ಸರ್ವಜ್ಞತ್ವವನ್ನು ಲೋಕಕ್ಕೆ ತೋರಿಸಲು ಶ್ರೀಕೃಷ್ಣನೇ ಅಶ್ವತ್ಥಾಮ ಮತ್ತು ಅಲಂಬುಸರೊಡನೆ ಅಸ್ತ್ರಯುದ್ಧ ಮಾಡಲು ಶ್ರೀಕೃಷ್ಣ ಆಜ್ಞಾಪಿಸಿದ್ದ.

**ಪ್ರತ್ಯಕ್ಷೀಭೂತದೇವೇಷು ಬಂಧುಜ್ಯೇಷ್ಠೇಷು ವಾ ನತಿಮ್ ।**
**ಮರ್ಯಾದಾಸ್ಥಿತಯೇಽಶಾಸದ್ ಭಗವಾನ್ ಪುರುಷೋತ್ತಮಃ ॥ ೧೪ ॥**

**ಅರ್ಥ** :- **ಪ್ರತ್ಯಕ್ಷೀಭೂತ ದೇವೇಷು** = ಕಣ್ಣಿಗೆ ಕಾಣುವ ದೇವತೆಗಳಲ್ಲಿ, **ಬಂಧುಜ್ಯೇಷ್ಠೇಷು** = ಹಿರಿಯರಾದ ಬಂಧುಗಳಲ್ಲಿಯಾದರೂ, **ನತಿಮ್** = ನಮಸ್ಕರಿಸುವಿಕೆಯನ್ನು, **ಮರ್ಯದಾ ಸ್ಥಿತಯೇ** = ಲೋಕ ವ್ಯವಸ್ಥೆಗಾಗಿ, **(ಸ್ವಯಂ) ಭಗವಾನ್** = ಷಡ್ಗುಣೈಶ್ವರ್ಯ ಸಂಪನ್ನನಾದ, **ಪುರುಷೋತ್ತಮಃ** = ಶ್ರೀಕೃಷ್ಣನು, **ಅಶಿಕ್ಷಯತ್** = ಲೋಕಕ್ಕೆ ಶಿಕ್ಷಣವನ್ನು ನೀಡಿದ.

**ತಾತ್ಪರ್ಯ** :- ಶ್ರೀಕೃಷ್ಣನೇ ಪ್ರತ್ಯಕ್ಷರಾಗಿ ಬರುವ ದೇವತೆಗಳಲ್ಲಿ ಗುರುಹಿರಿಯರಲ್ಲಿ ನಮಸ್ಕಾರ ಸಲ್ಲಿಸುವದನ್ನು ಲೋಕಮರ್ಯಾದೆಯು ಉಳಿವೆಗಾಗಿ ತಾನೇ ಮಾಡಿ, ತೋರಿಸಿ ಅವರಲ್ಲಿ ಇರುವ ತನಗೆ ತಾನೇ ನಮಿಸುತ್ತಿದ್ದ.

**ತತ್ರಾಪಿ ವಿಷ್ಣುಮೇವಾಸೌ ನಮೇನ್ನಾನ್ಯಂ ಕಥಂಚನ ।**
**ಆಜ್ಞಯೈವಾಸ್ತ್ರದೇವಾಂಶ್ಚ ಪ್ರೇರಯಾಮಾಸ ನಾರ್ಥನಾತ್ ॥ ೧೫ ॥**

**ಅರ್ಥ** :- **ಅಸೌ** = ಈ ಭೀಮಸೇನದೇವರು, ತತ್ರಾಪಿ = ಪ್ರತ್ಯಕ್ಷರಾದ ದೇವತೆಗಳಲ್ಲಿ ಹಾಗೂ ಹಿರಿಯರಾದ ಯುಧಿಷ್ಠಿರಾದಿಗಳಲ್ಲಿ, **ವಿಷ್ಣುಮೇವ** = ಅಂತರ್ಯಾಮಿಯಾದ ಶ್ರೀಕೃಷ್ಣನನ್ನು, **ನಮೇತ್** = ನಮಿಸುತ್ತಿದ್ದನು, **ಅನ್ಯಂ** = ಇತರರನ್ನು, **ಕಥಂಚನ** = ಯಾವ ರೀತಿಯಿಂದಲೂ, **ನ ನಮೇತ್** = ನಮಿಸುತ್ತಿರಲಿಲ್ಲ, **ಚ** = ಮತ್ತು **ಅಸ್ತ್ರದೇವಾನ್** = (ಅಸ್ತ್ರಯುದ್ಧದಲ್ಲಿ) ಅಸ್ತ್ರಾಭಿಮಾನಿ ದೇವತೆಗಳನ್ನು, **ಆಜ್ಞಯೈವ** = ಭೃತ್ಯರಿಗೆ ಮಾಡುವ ಆಜ್ಞೆಯಂತೆ, **ಪ್ರೇರಯಾಮಾಸ** = ಪ್ರೇರಿಸುತ್ತಿದ್ದನು, **ನ ಅರ್ಥನಾತ್** = ಹೊರತು ಪ್ರಾರ್ಥಿಸಲಿಲ್ಲ.

ತಾತ್ಪರ್ಯ :- ಭೀಮಸೇನ ದೇವರು ಅಸ್ತ್ರಯುದ್ಧ ಕಲಿಯಬೇಕಾದರೆ ದ್ರೋಣಾಚಾರ್ಯರೇ ಮೊದಲಾದವರಲ್ಲಿ ಶ್ರೀಹರಿಯನ್ನೇ ಕಂಡು ಅವನಿಗೆ ನಮಿಸುತ್ತಿದ್ದ. ಇನ್ನು ರುದ್ರಾದಿಗಳೇ ಮೊದಲಾದ ಅಸ್ತ್ರಾಭಿಮಾನಿ ದೇವತೆಗಳನ್ನು ಕೂಡ ಶತ್ರು ನಿಗ್ರಹಕ್ಕೆ ರಾಜರು ಭೃತ್ಯರಿಗೆ ಆಜ್ಞೆ ಮಾಡುವಂತೆ ಆಜ್ಞೆ ಮಾಡಿಯೇ ಕಳಿಸುತ್ತಿದ್ದ ಪ್ರಾರ್ಥನೆ ಮಾಡಿ ಅಲ್ಲ.

ಹಾಗಾದರೆ ಸದಾ ಅಸ್ತ್ರಯುದ್ಧವನ್ನೇ ಮಾಡಬಹುದಿತ್ತಲ್ಲಾ ಎಂದರೆ ನಾರಾಯಣ ದ್ವಿಟ್ ತದನು ಬಂದಿ ನಿಗ್ರಹವನ್ನು ಸದಾ ತಾನೇ ಮಾಡಬೇಕೆಂದು ಯುದ್ಧ ಮಾಡುತ್ತಿದ್ದ. ಕಾರಣಾಂತರದಿಂದ ಕೆಲವೊಮ್ಮೆ ಮಾತ್ರ ಇನ್ನೊಬ್ಬರನ್ನು ಅಸ್ತ್ರದೇವತೆಗಳ ಮೂಲಕ ಕೆಲಸ ಮಾಡಿಸಿದ.

**ಅನ್ವೇನಮೇವ ತದ್ಧರ್ಮೇ ಕೃಷ್ಣೈಕಾ ಸಂಸ್ಥಿತಾ ಸದಾ ।**
**ಧೃತರಾಷ್ಟ್ರಾದಪಿ ವರಂ ತತೋ ನಾSತ್ಮಾರ್ಥಮಗ್ರಹೀತ್ ॥ ೧೬ ॥**

**ಪದಚ್ಛೇದ :- ಅನು, ಏನಂ, ಏವ, ತತ್, ಧರ್ಮೇ, ಕೃಷ್ಣಾ, ಏಕಾ, ಸ್ವಸ್ಥಿತಾ, ಸದಾ, ಧೃತರಾಷ್ಟ್ರಾತ್, ಅಪಿ, ವರಂ, ತತಃ, ನ, ಆತ್ಮಾರ್ಥಂ, ಅಗ್ರಹೀತ್.**

**ಅರ್ಥ** :- **ತದ್ಧರ್ಮೇ** = ಭೀಮನ ನಂತರ ಶುದ್ಧ ಭಾಗವತ ಧರ್ಮದಲ್ಲಿ, **ಸದಾ ಸಂಸ್ಥಿತಾ** = ಯಾವಾಗಲೂ ರತಳಾದ, ... = ದ್ರೌಪದಿಯೊಬ್ಬಳೆ, **ಏನಮೇವ** = ಈ ಭೀಮಸೇನ ದೇವರನ್ನೇ, **ಅನು (ಸಂಸ್ಥಿತಾ)** = ಅನುಸರಿಸುತ್ತಿದ್ದಳು, **ತತಃ** = ಆದ್ದರಿಂದಲೇ, **ಧೃತರಾಷ್ಟ್ರಾದಪಿ** = ಧೃತರಾಷ್ಟ್ರನಿಂದಲೂ ಕೂಡ, **ವರಂ** = ವರವನ್ನು, **ಆತ್ಮಾರ್ಥಂ** = ತನಗೋಸ್ಕರ, **ನ ಅಗ್ರಹೀತ್** = ಸ್ವೀಕರಿಸಲಿಲ್ಲ.

ತಾತ್ಪರ್ಯ :- ಹೀಗೆ ಭೀಮನ ನಂತರ ಅವನನ್ನು ಅನುಸರಿಸಿದವಳು ಭಾಗವತೋತ್ತಮಳಾದ ದ್ರೌಪದೀದೇವಿ ಅವಳು ಸದಾ ವಿಷ್ಣು ಪ್ರೀತಿಕರವಾದ ಧರ್ಮದಲ್ಲಿ ಸದಾ ಇರುತ್ತಿದ್ದವಳು, ಧೃತರಾಷ್ಟ್ರನಿಂದಲೂ ಅವಳು ತನಗಾಗಿ ವರವನ್ನು ಪಡೆಯಲಿಲ್ಲ. ವಸ್ತುತಃ ಮೊದಲನೇ ಜೂಜಿನ ಸೋಲಿನ ನಂತರ ಭೀಮನ ಭಯದಿಂದ ಧೃತರಾಷ್ಟ್ರ ದ್ರೌಪದಿಯಲ್ಲಿ ವರವನ್ನು ಬೇಡು ಎಂದಾಗ ದ್ರೌಪದಿ ರಾಜ್ಯಸಮೇತ ಪಾಂಡವರನ್ನು ಬಿಡಲು ಕೇಳಿದಳು. ಇದು ಭಾಗವತ ಧರ್ಮಕ್ಕೆ ವಿರುದ್ಧವಲ್ಲ, ಜೂಜಾಟ ಅಧರ್ಮವಾದ್ದರಿಂದ ಅದರ ಸೋಲು

ಸೋಲೇ, ಅಲ್ಲ. ಆದ್ದರಿಂದ ತನ್ನದ್ದನ್ನು ತಾನು ಕೇಳಿದಳಷ್ಟೆ. ಆದ್ದರಿಂದ ಭಾಗವತ ಧರ್ಮಕ್ಕೆ ಚ್ಯುತಿಯಿಲ್ಲ.

**ನಾಶಪದ್ ಧಾರ್ತರಾಷ್ಟ್ರಾಂಶ್ಚ ಮಹಾಪದ್ಯಪಿ ಸಾ ತತಃ ।**
**ನ ವಾಚಾ ಮನಸಾ ವಾಽಪಿ ಪ್ರತೀಪಂ ಕೇಶವೇಽಚರತ್ ॥ ೧೭ ॥**

**ಪದಚ್ಛೇದ :- ನ, ಅಶಪತ್, ಧಾತ್ರ್ಯರಾಷ್ಟ್ರಾನ್, ಚ, ಮಹಾಪದ್ಯಪಿ, ಸಾ, ತತಃ, ನ, ವಾಚಾ, ಮನಸಾ, ವಾ, ಅಪಿ, ಪ್ರತೀಪಂ, ಕೇಶವೇ, ಅಚರತ್, ಅನ್ಯೇ, ಭಾಗವತತ್ವೇ, ಅಪಿ, ಭಿನ್ನಧರ್ಮಾಃ, ಕ್ವಚಿತ್, ಕ್ವಚಿತ್.**

**ಅರ್ಥ :-** **ಸಾ** = ಆ ದ್ರೌಪದೀ ದೇವಿಯು, **ತತಃ** = ವಿಷ್ಣುಧರ್ಮದಲ್ಲಿ ನಿರತಳಾದ್ದರಿಂದ, **ಮಹಾಪದ್ಯಪಿ** = ಮಹಾ ಆಪತ್ತಿನ ಸಂದರ್ಭದಲ್ಲೂ, **ಧಾರ್ತರಾಷ್ಟ್ರಾಂ** = ಕೌರವರನ್ನು, **ನ ಅಶಪದ್** = ಶಪಿಸಲಿಲ್ಲ, **ವಾಚಾ** = ಮಾತಿನಿಂದ, **ಮನಸಾ ವಾಪಿ** = ಮನಸ್ಸಿನಿಂದಲೂ ಕೂಡ, **ಕೇಶವೇ** = ಶ್ರೀ ಕೃಷ್ಣನಲ್ಲಿ, **ಪ್ರತೀಪಂ** = ವಿರೋಧವನ್ನು, **ನ ಅಚರತ್** = ಮಾಡಲಿಲ್ಲ.

**ತಾತ್ಪರ್ಯ :-** ದ್ರೌಪದೀ ದೇವಿ ಭಾಗವತ ಧರ್ಮದಲ್ಲಿ ಭೀಮನನ್ನು ಅನುಸರಿಸಿದಳಾದ್ದರಿಂದ ಎಂಥಾ ಆಪತ್ತಿನಲ್ಲಿಯೂ ಕೌರವರನ್ನು ಶಪಿಸಲಿಲ್ಲ. ಹೀಗೆ ಮಾತಿನಿಂದಾಗಲಿ ಮನಸ್ಸಿನಿಂದಾಗಲಿ ಪರಮಾತ್ಮನಿಗೆ ವಿರುದ್ಧವಾಗಿ ಎಂದೂ ನಡೆದುಕೊಳ್ಳಲಿಲ್ಲ. ಬೇರೆಯವರು ವಿಷ್ಣುಭಕ್ತರೇ ಆಗಿದ್ದರೂ ಭಾಗವತ ಧರ್ಮಕ್ಕೆ ವಿರುದ್ಧವಾಗಿ ಕೆಲವೊಮ್ಮೆ ನಡೆದಿದ್ದುಂಟು. ಇದಂತು ಮಹದಾಶ್ಚರ್ಯಂ ಸಭಾಮಧ್ಯೆ ವೃಕೋದರ ಸ್ವಭಾರ್ಯಾಯೈ ದ್ರುಹ್ಯತೋಪಿ ಸ್ನೇಹೇ ಸ್ನೇಹೇನ ಕೇಶವೆ ಎಂದು ವಾದಿರಾಜರು ಹೇಳಿದಂತೆ ಭೀಮನು ತನ್ನ ಹೆಂಡತಿಯ ವಸ್ತ್ರಾಪಹಾರದ ಸಂದರ್ಭದಲ್ಲಿಯೂ ಪರಮಾತ್ಮ ಅಕ್ಷಯಾಂಬರ ವನ್ನೀಡುವ ಸಂಕಲ್ಪವನ್ನು ತಿಳಿದು ಸುಮ್ಮನಿದ್ದ ದ್ರೌಪದೀಯು ಶಪಿಸದೇ ಸುಮ್ಮನಿದ್ದಳು.

**ಅನ್ಯೇ ಭಾಗವತತ್ವೇಽಪಿ ಖಿನ್ನಧರ್ಮಾಃ ಕ್ವಚಿತ್ಕ್ವಚಿತ್ ।**
**ಅಪಮೇನೇಽರ್ಜುನಃ ಕೃಷ್ಣಂ ವಿಪ್ರಸ್ಯ ಶಿಶುರಕ್ಷಣೇ ।**
**ಸ್ಯಮಂತಕಾರ್ಥೇ ರಾಮೋಽಪಿ ಕೃಷ್ಣಸ್ಯ ವಿಮನಾಽಭವತ್ ॥ ೧೮ ॥**

**ಅರ್ಥ** :- **ಅನ್ಯೆ** = ಬಲರಾಮರೇ ಮೊದಲಾದವರು, **ಭಾಗವತತ್ವೇಪಿ** = ಭಗವದ್ ಭಕ್ತರಾಗಿದ್ದರೂ ಕೂಡ, **ಕ್ವಚಿತ್ ಕ್ವಚಿತ್** = ಕೆಲವೊಂದು ಸಂದರ್ಭದಲ್ಲಿ, **ಚ್ಚಿನ್ನಧರ್ಮಾ** = ಭಾಗವತ ವಿರುದ್ಧ ಧರ್ಮವುಳ್ಳವರಾಗಿದ್ದರು, **ರಾಮೋಽಪಿ** = ಬಲರಾಮನೂ ಕೂಡ, **ಸ್ಯಮಂತಕಾರ್ಥೆ** = ಸ್ಯಂಮಂತಕ ಮಣಿಯ ಉದ್ದೇಶವಾಗಿ, **ಕೃಷ್ಣಸ್ಯ** = (ವಿಷಯೇ) ಕೃಷ್ಣನ ವಿಷಯದಲ್ಲಿ, **ವಿಮನಾಃ** = ವೈಮನಸ್ಯ ಉಳ್ಳವನು, **ಅಭವತ್** = ಆದನು, **ಅರ್ಜುನಃ** = ಅರ್ಜುನನು, **ವಿಪ್ರಸ್ಯ** = ಬ್ರಾಹ್ಮಣನ, **ಶಿಶುರಕ್ಷಣೆ** = ಅವನ ಮಗಳ ರಕ್ಷಣೆಯಲ್ಲಿ, **ಕೃಷ್ಣಃ** = ಕೃಷ್ಣನನ್ನು, **ಅವಮೇನೆ** = ಅವಮಾನಿಸಿದನು.

**ತಾತ್ಪರ್ಯ** :- ಸತ್ರಾಜಿತನನ್ನು ಕೊಂದ ಶತಧನ್ವ ಕೃಷ್ಣ ತನ್ನನ್ನು ಬೆನ್ನಟ್ಟಿ ಬರುವೆನೆಂದು ಸ್ಯಮಂತಕ ಮಣಿಯನ್ನು ಅಕ್ರೂರನ ಕೈಯಲ್ಲಿಟ್ಟು ಮಿಥಿಲೆಗೆ ಓಡಿ ಹೋಗುತ್ತಾನೆ. ಕೃಷ್ಣ ಅವನನ್ನು ಹಿಡಿದರೂ ಮಣಿ ಸಿಗಲಿಲ್ಲ ಎಂದು ಬಲರಾಮನಿಗೆ ಹೇಳಿದರೂ ಅವನು ನಂಬಲೇ ಇಲ್ಲ. ಕೃಷ್ಣನೇ ತೆಗೆದಿರಬಹುದೆಂದು ನಂಬಿದ್ದ. ಅರ್ಜುನನು ಬ್ರಾಹ್ಮಣನ ಮಕ್ಕಳು ಅದೃಶ್ಯರಾದಾಗ ಬಲರಾಮ ಕೃಷ್ಣರಿಗಿಂತಲೂ ನಾನೇ ನಿಮ್ಮ ಮಕ್ಕಳನ್ನು ಕಾಪಾಡಬಲ್ಲೇ ಎಂದು ಕೃಷ್ಣನನ್ನು ಅವಮಾನಿಸಿದ.

**ಪ್ರದ್ಯುಮ್ನ ಉದ್ಧವಃ ಸಾಂಬೋಽನಿರುದ್ಧಾದ್ಯಾಶ್ಚ ಸರ್ವಶಃ ।**
**ಹರೇರಿಷ್ಟಂ ಸುಭದ್ರಾಯಾಃ ಫಲ್ಗುನೇ ದಾನಮಂಜಸಾ ।**
**ಜ್ಞಾತ್ವಾಽಪಿ ರುರುಧುಃ ಸಮ್ಯಕ್ ಸಾತ್ಯಕಿಃ ಕೃಷ್ಣಸಮ್ಮಿತಮ್ ॥ ೨೦ ॥**

**ಅರ್ಥ** :- **ಪ್ರದ್ಯುಮ್ನಃ** = ಪ್ರದ್ಯುಮ್ನನು, **ಉದ್ಧವಃ** = ಉದ್ಧವನು, **ಸಾಂಬಃ** = ಸಾಂಬನು, **ಚ** = ಮತ್ತು, **ಅನಿರುದ್ಧಾದ್ಯಾಃ ಸರ್ವಶ** = ಅನಿರುದ್ಧನೇ ಮೊದಲಾದವರೆಲ್ಲರೂ, **ಸುಭದ್ರಾಯಾ** = ಸುಭದ್ರೆಯ, **ಫಲ್ಗುನೇ** = ಅರ್ಜುನನಿಗೆ, **ದಾನಂ** = ಕನ್ಯಾದಾನವನ್ನು ನೀಡಲು, **ಹರೇ** = ಶ್ರೀಕೃಷ್ಣನಿಗೆ, **ಇಷ್ಟಂ** = ಸಮ್ಮತವೆಂದು, **ಅಂಜಸಾ** = ಚೆನ್ನಾಗಿ, **ಜ್ಞಾತ್ವಾಪಿ** = ತಿಳಿದರೂ ಕೂಡ, .... **ರುರುಧುಃ** = ಪ್ರತಿರೋಧವನ್ನು ಮಾಡಿದರು.

**ಕದಾಚಿನ್ಮನ್ಯತೇ ಪಾರ್ಥಂ ಧರ್ಮಜೋಽಪಿ ನರಂ ಹರಿಮ್ ।**
**ಮತ್ವಾಽಬಿಭೇಜ್ಜರಾಸಂಧವಧೇ ಕೃಷ್ಣಮುದೀರಿತುಮ್ ॥ ೨೧ ॥**

**ಅರ್ಥ :- ಕದಾಚಿತ್** = ಕೆಲವೊಮ್ಮೆ, **ಸಾತ್ಯಕಿ** = ಸಾತ್ಯಕಿಯು, **ಪಾರ್ಥ** = ಅರ್ಜುನನನ್ನು, **ಕೃಷ್ಣಸಮ್ಮಿತಮ್** = ಕೃಷ್ಣನಿಗೆ ಸಮನಾಗೆ, **ಮನ್ಯತೇ** = ತಿಳಿಯುತ್ತಿದ್ದನು, **ಧರ್ಮೋಽಪಿ** = ಧರ್ಮರಾಜನೂ ಕೂಡ, **ಹರಿ** = ಶ್ರೀಕೃಷ್ಣನನ್ನು, **ನಂ** = ಮಾನವನನ್ನಾಗಿ, **ಮತ್ವಾ** = ತಿಳಿದು, **ಜರಾಸಂಧವಧೆ** = ಜರಾಸಂಧನ ಸಂಹಾರದ ವಿಷಯದಲ್ಲಿ, **ಕೃಷ್ಣಮ್** = ಶ್ರೀಕೃಷ್ಣನನ್ನು, **ಉದೀರಿತುಮ್** = ಕಳುಹಿಸಲು, **ಅಬಿಭೇತ್** = ಹೆದರಿದನು.

**ತಾತ್ಪರ್ಯ :-** ಪ್ರದ್ಯುಮ್ನ ಉದ್ಧವ ಸಾಂಬ ಅನಿರುದ್ಧ ಮೊದಲಾದವರೆಲ್ಲವೂ ಸುಭದ್ರೆಯನ್ನು ಅರ್ಜುನನಿಗೆ ಕೊಡಬೇಕೆಂದು ಕೃಷ್ಣನ ಸಂಕಲ್ಪವನ್ನು ತಿಳಿದೂ ಅನೇಕ ಬಾರಿ ವಿರೋಧ ಮಾಡಿದರು. ಸಾತ್ಯಕಿ ಕೆಲವೊಮ್ಮೆ ಕೃಷ್ಣನಿಗೆ ತಾನೂ ಸಮನೆಂದು ಭಾವಿಸಿದ ಧರ್ಮರಾಜನೂ ಕೃಷ್ಣನನ್ನು ಸಾಮಾನ್ಯ ಮಾನವನೆಂದು ತಿಳಿದು ಜರಾಸಂಧನನ್ನು ಕೊಲ್ಲಲು ಹೊಗಬೇಡ ಎಂದ.

**ಬಂಧನಂ ಶಂಕಮಾನೋ ಹಿ ಕೃಷ್ಣಸ್ಯ ವಿದುರೋಽಪಿತು ।**
**ಕೌರವೇಯಸಭಾಮಧ್ಯೇ ನಾವತಾರಮರೋಚಯತ್ ॥ ೨೨ ॥**

**ಅರ್ಥ :- ಕೃಷ್ಣಸ್ಯ** = ಶ್ರೀ ಕೃಷ್ಣನ, **ಬಂಧನಂ** = ಬಂಧಿಸುವಿಕೆಯನ್ನು, **ಶಂಕಮಾನಃ** = ಶಂಕಿಸುವ, **ವಿದುರೋಽಪಿ** = ವಿದುರನೂ ಕೂಡ, **ಕೌರವೇಯ ಸಭಾಮಧ್ಯೇ** = ಕೌರವರ ಸಭಾಮಧ್ಯದಲ್ಲಿ, **ಅವತಾರಂ** = ಪ್ರವೇಶ ಮಾಡುವುದನ್ನು, **ನ ಅರೋಚಯತ್** = ಇಚ್ಛಿಸಲಿಲ್ಲ.

**ತಾತ್ಪರ್ಯ :-** ಧರ್ಮರಾಜನ ರಾಜಸೂಯಕ್ಕೆ ಪಶ್ಚಿಮ ದೇಶಗಳ ದಿಗ್ವಿಜಯಕ್ಕೆ ಹೊರಟ ನಕುಲ ಕೃಷ್ಣನಿಗೂ ಕಪ್ಪ ಕೊಡಬೇಕೆಂದು ಹೇಳಿ ಕಳುಹಿಸಿದ. ಹಾಗೆ ಸಹದೇವನೂ ಕೂಡ ಕುರುಕುಲ ಕ್ಷಯವಾದಾಗ ಕೃಷ್ಣನ ಬುದ್ಧಿ ಇಷ್ಟೇ ಎಂದು ಅವಮಾನಿಸಿದ. ರಾಜನೀತಿಯನ್ನು ಕೃಷ್ಣನಿಗಿಂತ ತಾನು ಮೇಲೆಂದು ಬಗೆದ.

**ನಕುಲಃ ಕರದಾನಾಯ ಪ್ರೇಷಯಾಮಾಸ ಕೇಶವೇ ।**
**ಅವಮೇನೇ ಹರೇರ್ಬುದ್ಧಿಂ ಸಹದೇವಃ ಕುಲಕ್ಷಯಾತ್ ॥ ೨೩ ॥**

ಪದಚ್ಛೇದ :- ನಕುಲಃ, ಕರದಾನಾಯ, ಪ್ರೇಶಯಾಮಾಸ, ಕೇಶವೇ, ಅವಮೇನೇ, ಹರೇರ್ಬುದ್ಧಿಂ, ಸಹದೇವಃ, ಕುಲಕ್ಷಯಾತ್

ಅರ್ಥ :- ನಕುಲಃ = ನಕುಲನು, ಕೇಶವೇ = ಶ್ರೀ ಕೃಷ್ಣನಲ್ಲಿ, ಕರದಾನಾಯ = ಕಪ್ಪಕಾಣಿಕೆಗಾಗಿ, ಪ್ರೇಷಯಾಮಾಸ = ಹೇಳಿ ಕಳುಹಿಸಿದನು, ಸಹದೇವಃ = ಸಹದೇವನು, ಕುಲಕ್ಷಯಾತ್ = ಕುರುಕುಲ ನಾಶದಿಂದ, ಹರೇಃ = ಶ್ರೀ ಕೃಷ್ಣನ, ಬುದ್ಧಿಂ = ಚಾತುರ್ಯವನ್ನು, ಅವಮೇನೆ = ಅವಮಾನಿಸಿದನು.

ದೇವಕೀವಸುದೇವಾದ್ಯಾ ಮೇನಿರೇ ಮಾನುಷಂ ಹರಿಮ್ ।
ಭೀಷ್ಮಸ್ತು ಭಾರ್ಗವಂ ರಾಮಮವಮೇನೇ ಯುಯೋಧ ಚ ॥ ೨೪ ॥

ಪದಚ್ಛೇದ :- ದೇವಕೀವಸುದೇವಾದ್ಯಾಃ, ಮೇನಿರೇ, ಮಾನುಷಂ, ಹರಿಮ್ । ಭೀಷ್ಮಃ ತು, ಭಾರ್ಗವಂ, ರಾಮಃ, ಅವಮೇನೇ, ಯುಯೋಧ, ಚ ॥

ಅರ್ಥ :- ದೇವಕೀ ವಸುದೇವಾದ್ಯಾಃ = ದೇವಕೀ ವಸುದೇವರೇ ಮೊದಲಾದವರು, ಹರಿಮ್ = ಶ್ರೀಕೃಷ್ಣನನ್ನು, ಮಾನುಷಂ = ಮನುಷ್ಯನನ್ನಾಗಿ, ಮೇನಿರೇ = ತಿಳಿದರು, ಭೀಷ್ಮಸ್ತು = ಭೀಷ್ಮಾಚಾರ್ಯರಾದರೂ, ಭಾರ್ಗವಂ ರಾಮಂ = ಪರಶುರಾಮದೇವರನ್ನು, ಅವಮೇನೆ = ಅವಮಾನಿಸಿದರು, ಯುಯೋಧ ಚ = ಯುದ್ಧ ಮಾಡಿದರೂ ಕೂಡ.

ತಾತ್ಪರ್ಯ :- ದೇವಕೀ ವಸುದೇವರೇ ಮೊದಲಾದವರೂ ಕೂಡ ಪರಮಾತ್ಮನನ್ನು ಮನುಷ್ಯನೆಂದೇ ಭಾವಿಸಿದ್ದರು. ಭೀಷ್ಮರೂ ಕೂಡ ಅಂಬೆಯನ್ನು ಮದುವೆಯಾಗು ಎಂದು ಪರಶುರಾಮ ದೇವರು ಹೇಳಿದರೂ ಒಪ್ಪದೆ ಅವರೊಡನೆ ಯುದ್ಧ ಮಾಡಿ ಗುರುವನ್ನು ಸೋಲಿಸಿದನೆಂದುಕೊಂಡರು.

ದ್ರೋಣಕರ್ಣದ್ರೌಣಿಕೃಪಾಃ ಕೃಷ್ಣಾಭಾವೇ ಮನೋ ದಧುಃ ।
ದೇವಾಃ ಶಿವಾದ್ಯಾ ಅಪಿತು ವಿರೋಧಂ ಚಕ್ರಿರೇ ಕ್ವಚಿತ್ ॥ ೨೫ ॥

ಪದಚ್ಛೇದ :- ದ್ರೋಣ ಕರ್ಣ ದ್ರೌಣಿ ಕೃಪಾಃ, ಕೃಷ್ಣಾಭಾವೇ, ಮನೋ, ದಧುಃ । ದೇವಾಃ, ಶಿವಾದ್ಯಾಃ, ಅಪಿ, ತು, ವಿರೋಧಂ, ಚಕ್ರಿರೇ, ಕ್ವಚಿತ್ ॥

**ಅರ್ಥ** :- **ದ್ರೋಣ ಕರ್ಣ ದ್ರೌಣಿ ಕೃಪಾಃ** = ದ್ರೋಣಾಚಾರ್ಯರು, ಕರ್ಣ ಅಶ್ವತ್ಥಾಮಾಚಾರ್ಯರು, ಕೃಪಾಚಾರ್ಯರು ಮೊದಲಾದವರು, **ಕೃಷ್ಣಾಭಾವೇ** = ಕೃಷ್ಣನ ಇಲ್ಲದಿರುವಿಕೆಯಲ್ಲಿ, **ಮನಃ** = ಮನಸ್ಸನ್ನು, **ದಧುಃ** = ಮಾಡಿದರು, **ಶಿವಾದ್ಯಾಃ** = ರುದ್ರದೇವರೇ ಮೊದಲಾದ, **ದೇವಾಃ ಅಪಿ** = ದೇವತೆಗಳೂ ಕೂಡ, **ಕ್ವಚಿತ್** = ಕೆಲವೊಮ್ಮೆ, **ವಿರೋಧಂ** = ವಿರೋಧವನ್ನು **ಚಕ್ರಿರೇ** = ಮಾಡಿದರು.

**ತಾತ್ಪರ್ಯ** :- ಹಾಗೆ ದ್ರೋಣ ಕರ್ಣ ಅಶ್ವತ್ಥಾಮ ಕೃಪಾಚಾರ್ಯರೇ ಮೊದಲಾದವರು ಅರ್ಜುನನ ಸಾರಥಿಯಾದ ಕೃಷ್ಣನನ್ನು ಇಲ್ಲದಂತೆ ಮಾಡಬೇಕೆಂದು ಬಯಸಿದ್ದರು. ರುದ್ರಾದಿ ದೇವತೆಗಳೂ ಕೂಡ ಗೋವರ್ಧನೋದ್ಧಾರ ಪಾರಿಜಾತಾಪಹಣ ಮೊದಲಾದ ಸಂದರ್ಭದಲ್ಲಿ ಅಜ್ಞಾನದಿಂದ ಕೃಷ್ಣನೊಡನೆ ಯುದ್ಧ ಮಾಡಿದರು.

**ಋಷಿಮಾನುಷಗಂಧರ್ವಾ ವಕ್ತವ್ಯಾಃ ಕಿಮತಃ ಪರಮ್ ।**
**ಜನ್ಮಜನ್ಮಾಂತರೇऽಜ್ಞಾನಾದವಜಾನಂತಿ ಯತ್ ಸದಾ ॥ ೨೬ ॥**

ಪದಚ್ಛೇದ :- **ಋಷಿ ಮಾನುಷ ಗಂಧರ್ವಾ, ವಕ್ತವ್ಯಾಃ, ತಿಮತಃ, ಪರಮ್ । ಜನ್ಮ ಜನ್ಮಾಂತರಾಜ್ಞಾನಾತ್, ಅವಜಾನಂತಿ, ಯತ್, ಸದಾ ॥**

**ಅರ್ಥ** :- **ಋಷಿ ಮಾನುಷ ಗಂಧರ್ವಾಃ** = ಋಷಿಗಳು ಮನುಷ್ಯರು ಗಂಧರ್ವರೇ ಮೊದಲಾದವರ ಬಗ್ಗೆ, **ವಕ್ತವ್ಯಾಃ** = ಹೇಳಬೇಕಾದದ್ದು, **ಕಿಮುತ** = ಏನಿದೆ?, **ಯತ್** = ಯಾವ ಕಾರಣದಿಂದ, **ಜನ್ಮ ಜನ್ಮಾಂತ- ರಾಜ್ಞಾನಾದ್** = ಜನ್ಮ ಜನ್ಮಾಂತರಗಳ ಅಜ್ಞಾನದಿಂದ, **ಸದಾ** = ಯಾವಾಗಲೂ, **ಅವಜಾನಂತಿ** = ತಿರಸ್ಕರಿಸುತ್ತಾರೆ.

**ತಾತ್ಪರ್ಯ** :- ಹೀಗೆ ಉತ್ತಮರಾದ ದೇವತೆಗಳಿಗೆ ಕೃಷ್ಣನ ಬಗ್ಗೆ ಅನ್ಯಥಾ ಜ್ಞಾನವಿದ್ದರೆ ಇನ್ನು ಅನಾದಿಯಾದ ಜನ್ಮಗಳಲ್ಲಿ ಇರುವ ಅನಾದಿಯಾದ ಅಜ್ಞಾನದಿಂದ ಕೂಡಿರುವ ಋಷಿಗಳು ಮನುಷ್ಯ ಗಂಧರ್ವರ ಬಗ್ಗೆ ಏನು ಹೇಳಬೇಕು.

**ತಸ್ಮಾದೇಕೋ ವಾಯುರೇವ ಧರ್ಮೇ ಭಾಗವತೇ ಸ್ಥಿರಃ ।**
**ಲಕ್ಷ್ಮೀಃ ಸರಸ್ವತೀ ಚೇತಿ ಪರಶುಕ್ಲತ್ರಯಂ ಶ್ರುತಮ್ ॥ ೨೭ ॥**

ಪದಚ್ಛೇದ :- ತಸ್ಮಾತ್, ಏಕಃ, ವಾಯುಃ, ಏವ, ಧರ್ಮೇ, ಭಾಗವತೇ, ಸ್ಥಿತಃ । ಲಕ್ಷ್ಮೀಃ, ಸರಸ್ವತೀ, ಚೇ, ಇತಿ, ಪರಶುಕ್ಲತ್ರಯಂ, ಸ್ಮೃತಮ್ ॥

ಅರ್ಥ :- ತಸ್ಮಾತ್ = ಆದ್ದರಿಂದ, ಏಕ ವಾಯುದೇವ = ವಾಯುದೇವರೊಬ್ಬರೆ, ಭಾಗವತೇ ಧರ್ಮೇ = ಶುದ್ಧ ಭಾಗವತ ಧರ್ಮದಲ್ಲಿ, ಸ್ಥಿತಃ = ನಿರತರಾಗಿರುವವರು, (ತಸ್ಮಾತ್) ಲಕ್ಷ್ಮೀ = ಮಹಾಲಕ್ಷ್ಮೀದೇವಿಯು, ಸರಸ್ವತೀ ಚ = ಸರಸ್ವತೀಯೂ ಕೂಡ, ಪರಶುಕ್ಲತ್ರಯಂ ಇತಿ = ಪರಶುಕ್ಲತ್ರಯರೆಂದು, ಸ್ಮೃತಮ್ = ಸ್ಮೃತಿ ಸಿದ್ಧವಾಗಿದೆ.

ತಾತ್ಪರ್ಯ :- ಆದ್ದರಿಂದ ವಾಯುದೇವರು ಮಾತ್ರ ಸದಾ ಭಾಗವತ ಧರ್ಮದಲ್ಲಿ ನಿರತರಾದವರು. ಹಾಗೆ ಋಜುಗಳಾದ ಲಕ್ಷ್ಮೀ ಸರಸ್ವತಿಯರೂ ಕೂಡ ಸದಾ ವಿಷ್ಣು ಧರ್ಮದಲ್ಲೇ ನಿರತರಾದವರು. ಇಲ್ಲಿ ವಾಯು ಪದದಿಂದ ಬ್ರಹ್ಮ ಮತ್ತು ಇತರ ಋಜುಯೋಗಿಗಳನ್ನು ಸರಸ್ವತೀ ಪದದಿಂದ ಭಾರತೀ ಇತರ ಋಜುಪತ್ನಿಯರನ್ನೂ ಗ್ರಹಿಸಬೇಕೆಂದು ಸೂಚಿಸಿದ್ದಾರೆ.

ಸರ್ವಮೇತಚ್ಚ ಕಥಿತಂ ತತ್ರತತ್ರಾಮಿತಾತ್ಮನಾ ।
ವ್ಯಾಸೇನೈವ ಪುರಾಣೇಷು ಭಾರತೇ ಚ ಸ್ವಸಂವಿದಾ ॥ ೨೮ ॥

ಪದಚ್ಛೇದ :- ಸರ್ವಮೇತತ್ ಚ, ಕಥಿತಂ, ತತ್ರ, ತತ್ರಾ, ಅಮಿತಾತ್ಮನಾ । ವ್ಯಾಸೇನ, ಏವ, ಪುರಾಣೇಷು, ಭಾರತೇ ಚ, ಸ್ವಸಂವಿದಾ ॥

ಅರ್ಥ :- ಏತಚ್ಚ ಸರ್ವಂ = ಈ ಎಲ್ಲಾ ವಿಷಯಗಳೂ, ಅಮಿತಾತ್ಮನಾ = ನಿತ್ಯರಾದ (ಸರ್ವಜ್ಞರಾದ), ವ್ಯಾಸೇನೈವ = ವೇದವ್ಯಾಸರಿಂದಲೇ, ಪುರಾಣೇಷು = ಪುರಾಣಗಳಲ್ಲಿ, ಭಾರತೇ ಚ = ಮಹಾಭಾರತದಲ್ಲಿಯೂ, ತತ್ರ ತತ್ರ = ಅಲ್ಲಲ್ಲಿ, ಸ್ವಸಂವಿದಾ = ತಮ್ಮ ಸ್ವರೂಪಭೂತಜ್ಞಾನದಿಂದಲೇ, ಕಥಿತಂ = ಹೇಳಲ್ಪಟ್ಟಿದೆ.

ತಾತ್ಪರ್ಯ :- ಈ ಸೂಕ್ಷ್ಮವಾದ ವಿಷಯವನ್ನೆಲ್ಲಾ ಸರ್ವಜ್ಞ ತಮರಾದ ವೇದವ್ಯಾಸರು ತಮ್ಮ ಪುರಾಣಾದಿಗಳಲ್ಲಿ ತಮ್ಮ ಸ್ವರೂಪ ಜ್ಞಾನದಿಂದ ಹೇಳಿದ್ದಾರೆ. ಸ್ವಕಪೋಲ ಕಲ್ಪಿತವಲ್ಲ.

**ಅರ್ಥ :- ದ್ರೋಣ ಕರ್ಣ ದ್ರೌಣಿ ಕೃಪಾಃ** = ದ್ರೋಣಾಚಾರ್ಯರು, ಕರ್ಣ ಅಶ್ವತ್ಥಾಮಾಚಾರ್ಯರು, ಕೃಪಾಚಾರ್ಯರು ಮೊದಲಾದವರು, **ಕೃಷ್ಣಾಭಾವೇ** = ಕೃಷ್ಣನ ಇಲ್ಲದಿರುವಿಕೆಯಲ್ಲಿ, **ಮನಃ** = ಮನಸ್ಸನ್ನು, **ದಧುಃ** = ಮಾಡಿದರು, **ಶಿವಾದ್ಯಾಃ** = ರುದ್ರದೇವರೇ ಮೊದಲಾದ, **ದೇವಾಃ ಅಪಿ** = ದೇವತೆಗಳೂ ಕೂಡ, **ಕ್ವಚಿತ್** = ಕೆಲವೊಮ್ಮೆ, **ವಿರೋಧಂ** = ವಿರೋಧವನ್ನು **ಚಕ್ರಿರೇ** = ಮಾಡಿದರು.

**ತಾತ್ಪರ್ಯ :-** ಹಾಗೆ ದ್ರೋಣ ಕರ್ಣ ಅಶ್ವತ್ಥಾಮ ಕೃಪಾಚಾರ್ಯರೇ ಮೊದಲಾದವರು ಅರ್ಜುನನ ಸಾರಥಿಯಾದ ಕೃಷ್ಣನನ್ನು ಇಲ್ಲದಂತೆ ಮಾಡಬೇಕೆಂದು ಬಯಸಿದ್ದರು. ರುದ್ರಾದಿ ದೇವತೆಗಳೂ ಕೂಡ ಗೋವರ್ಧನೋದ್ಧಾರ ಪಾರಿಜಾತಾಪಹಣ ಮೊದಲಾದ ಸಂದರ್ಭದಲ್ಲಿ ಅಜ್ಞಾನದಿಂದ ಕೃಷ್ಣನೊಡನೆ ಯುದ್ಧ ಮಾಡಿದರು.

**ಋಷಿಮಾನುಷಗಂಧರ್ವಾ ವಕ್ತವ್ಯಾಃ ಕಿಮತಃ ಪರಮ್ ।**
**ಜನ್ಮಜನ್ಮಾಂತರೇಽಜ್ಞಾನಾದವಜಾನಂತಿ ಯತ್ ಸದಾ ॥ ೨೬ ॥**

**ಪದಚ್ಛೇದ :- ಋಷಿ ಮಾನುಷ ಗಂಧರ್ವಾ, ವಕ್ತವ್ಯಾಃ, ಕಿಮತಃ, ಪರಮ್ । ಜನ್ಮ ಜನ್ಮಾಂತರಾಜ್ಞಾನಾತ್, ಅವಜಾನಂತಿ, ಯತ್, ಸದಾ ॥**

**ಅರ್ಥ :- ಋಷಿ ಮಾನುಷ ಗಂಧರ್ವಾಃ** = ಋಷಿಗಳು ಮನುಷ್ಯರು ಗಂಧರ್ವರೇ ಮೊದಲಾದವರ ಬಗ್ಗೆ, **ವಕ್ತವ್ಯಾಃ** = ಹೇಳಬೇಕಾದದ್ದು, **ಕಿಮುತ** = ಏನಿದೆ?, **ಯತ್** = ಯಾವ ಕಾರಣದಿಂದ, **ಜನ್ಮ ಜನ್ಮಾಂತ- ರಾಜ್ಞಾನಾದ್** = ಜನ್ಮ ಜನ್ಮಾಂತರಗಳ ಅಜ್ಞಾನದಿಂದ, **ಸದಾ** = ಯಾವಾಗಲೂ, **ಅವಜಾನಂತಿ** = ತಿರಸ್ಕರಿಸುತ್ತಾರೆ.

**ತಾತ್ಪರ್ಯ :-** ಹೀಗೆ ಉತ್ತಮರಾದ ದೇವತೆಗಳಿಗೆ ಕೃಷ್ಣನ ಬಗ್ಗೆ ಅನ್ಯಥಾ ಜ್ಞಾನವಿದ್ದರೆ ಇನ್ನು ಅನಾದಿಯಾದ ಜನ್ಮಗಳಲ್ಲಿ ಇರುವ ಅನಾದಿಯಾದ ಅಜ್ಞಾನದಿಂದ ಕೂಡಿರುವ ಋಷಿಗಳು ಮನುಷ್ಯ ಗಂಧರ್ವರ ಬಗ್ಗೆ ಏನು ಹೇಳಬೇಕು.

**ತಸ್ಮಾದೇಕೋ ವಾಯುರೇವ ಧರ್ಮೇ ಭಾಗವತೇ ಸ್ಥಿರಃ ।**
**ಲಕ್ಷ್ಮೀಃ ಸರಸ್ವತೀ ಚೇತಿ ಪರಮುಕ್ತತ್ರಯಂ ಶ್ರುತಮ್ ॥ ೨೭ ॥**

ಪದಚ್ಛೇದ :- ತಸ್ಮಾತ್, ಏಕಃ, ವಾಯುಃ, ಏವ, ಧರ್ಮೇ, ಭಾಗವತೇ, ಸ್ಥಿತಃ । ಲಕ್ಷ್ಮೀಃ, ಸರಸ್ವತೀ, ಚೇ, ಇತಿ, ಪರಶುಕ್ಲತ್ರಯಂ, ಸ್ಮೃತಮ್ ॥

**ಅರ್ಥ** :- **ತಸ್ಮಾತ್** = ಆದ್ದರಿಂದ, **ಏಕ ವಾಯುದೇವ** = ವಾಯುದೇವರೊಬ್ಬರೆ, **ಭಾಗವತೇ ಧರ್ಮೇ** = ಶುದ್ಧ ಭಾಗವತ ಧರ್ಮದಲ್ಲಿ, **ಸ್ಥಿತಃ** = ನಿರತರಾಗಿರುವರು, **(ತಸ್ಮಾತ್) ಲಕ್ಷ್ಮೀ** = ಮಹಾಲಕ್ಷ್ಮೀದೇವಿಯು, **ಸರಸ್ವತೀ ಚ** = ಸರಸ್ವತೀಯೂ ಕೂಡ, **ಪರಶುಕ್ಲತ್ರಯಂ ಇತಿ** = ಪರಶುಕ್ಲತ್ರಯರೆಂದು, **ಸ್ಮೃತಮ್** = ಸ್ಮೃತಿ ಸಿದ್ಧವಾಗಿದೆ.

**ತಾತ್ಪರ್ಯ** :- ಆದ್ದರಿಂದ ವಾಯುದೇವರು ಮಾತ್ರ ಸದಾ ಭಾಗವತ ಧರ್ಮದಲ್ಲಿ ನಿರತರಾದವರು. ಹಾಗೆ ಋಜುಗಳಾದ ಲಕ್ಷ್ಮೀ ಸರಸ್ವತಿಯರೂ ಕೂಡ ಸದಾ ವಿಷ್ಣು ಧರ್ಮದಲ್ಲೇ ನಿರತರಾದವರು. ಇಲ್ಲಿ ವಾಯು ಪದದಿಂದ ಬ್ರಹ್ಮ ಮತ್ತು ಇತರ ಋಜುಯೋಗಿಗಳನ್ನು ಸರಸ್ವತೀ ಪದದಿಂದ ಭಾರತೀ ಇತರ ಋಜುಪತ್ನಿಯರನ್ನೂ ಗ್ರಹಿಸಬೇಕೆಂದು ಸೂಚಿಸಿದ್ದಾರೆ.

**ಸರ್ವಮೇತಚ್ಚ ಕಥಿತಂ ತತ್ರತತ್ರಾಮಿತಾತ್ಮನಾ ।**
**ವ್ಯಾಸೇನೈವ ಪುರಾಣೇಷು ಭಾರತೇ ಚ ಸ್ವಸಂವಿದಾ ॥ ೨೮ ॥**

ಪದಚ್ಛೇದ :- ಸರ್ವಮೇತತ್ ಚ, ಕಥಿತಂ, ತತ್ರ, ತತ್ರಾ, ಅಮಿತಾತ್ಮನಾ । ವ್ಯಾಸೇನ, ಏವ, ಪುರಾಣೇಷು, ಭಾರತೇ ಚ, ಸ್ವಸಂವಿದಾ ॥

**ಅರ್ಥ** :- **ಏತಚ್ಚ ಸರ್ವಂ** = ಈ ಎಲ್ಲಾ ವಿಷಯಗಳೂ, **ಅಮಿತಾತ್ಮನಾ** = ನಿತ್ಯರಾದ (ಸರ್ವಜ್ಞರಾದ), **ವ್ಯಾಸೇನೈವ** = ವೇದವ್ಯಾಸರಿಂದಲೇ, **ಪುರಾಣೇಷು** = ಪುರಾಣಗಳಲ್ಲಿ, **ಭಾರತೇ ಚ** = ಮಹಾಭಾರತದಲ್ಲಿಯೂ, **ತತ್ರ ತತ್ರ** = ಅಲ್ಲಲ್ಲಿ, **ಸ್ವಸಂವಿದಾ** = ತಮ್ಮ ಸ್ವರೂಪಭೂತಜ್ಞಾನದಿಂದಲೇ, **ಕಥಿತಂ** = ಹೇಳಲ್ಪಟ್ಟಿದೆ.

**ತಾತ್ಪರ್ಯ** :- ಈ ಸೂಕ್ಷ್ಮವಾದ ವಿಷಯವನ್ನೆಲ್ಲಾ ಸರ್ವಜ್ಞ ತಮರಾದ ವೇದವ್ಯಾಸರು ತಮ್ಮ ಪುರಾಣಾದಿಗಳಲ್ಲಿ ತಮ್ಮ ಸ್ವರೂಪ ಜ್ಞಾನದಿಂದ ಹೇಳಿದ್ದಾರೆ. ಸ್ವಕಪೋಲ ಕಲ್ಪಿತವಲ್ಲ.

**ಯದಾ ತೇ ಸರ್ವಶಸ್ತ್ರಾಸ್ತ್ರವೇದಿನೋ ರಾಜಪುತ್ರಕಾಃ ।**
**ಬಭೂವೂ ರಂಗಮಧ್ಯೇ ತಾನ್ ಭಾರದ್ವಜೋऽಪ್ಯದರ್ಶಯತ್ ॥ ೨೯ ॥**

**ಪದಚ್ಛೇದ :-** ತದಾ, ತೇ, ಸರ್ವಶಸ್ತ್ರಾಸ್ತ್ರವೇದಿನಃ, ರಾಜಪುತ್ರಕಾಃ । ಬಭೂವುಃ, ರಂಗಮಧ್ಯೇ, ತಾನ್, ಭಾರದ್ವಾಜಃ, ವ್ಯದರ್ಶಯತ್ ॥

**ಅರ್ಥ :-** **ಯದಾ** = ಯಾವಾಗ, **ತೇ ರಾಜ ಪುತ್ರಕಾಃ** = ಆ ರಾಜಕುಮಾರರು, **ಸರ್ವಶಸ್ತ್ರಾಸ್ತ್ರ ವೇದಿನಃ** = ಸಕಲ ಶಸ್ತ್ರ ಮತ್ತು ಶಾಸ್ತ್ರಗಳಲ್ಲಿ ಪ್ರಾವೀಣ್ಯವನ್ನು, **ಬಭೂವುಃ** = ಪಡೆದರೋ, (**ತದಾ** = ಆಗ), **ಭಾರದ್ವಾಜಃ** = ದ್ರೋಣಾಚಾರ್ಯರು, **ತಾನ್ಃ** = ಆ ರಾಜಕುಮಾರರ ಆ ವಿದ್ಯೆಗಳನ್ನು, **ರಂಗಮಧ್ಯೇಃ** = ರಂಗಸ್ಥಳದ ಮಧ್ಯದಲ್ಲಿ, **ವ್ಯದರ್ಶಯತ್** = ಪ್ರದರ್ಶಿಸಿದರು.

**ತಾತ್ಪರ್ಯ :-** ಹೀಗೆ ದ್ರೋಣಾಚಾರ್ಯರಲ್ಲಿ ಎಲ್ಲಾ ರಾಜಕುಮಾರರು ಅಸ್ತ್ರವಿದ್ಯೆಯನ್ನು ಕಲಿತು ಪಾರಂಗತರಾಗಿ ಅವರ ಅಸ್ತ್ರ ವಿದ್ಯೆಯನ್ನು ರಂಗಸ್ಥಳದ ನಡುವೆ ಪ್ರದರ್ಶಿಸಿದರು.

**ರಕ್ತಚಂದನಸತ್ಪುಷ್ಪವಸ್ತ್ರಶಸ್ತ್ರಗುಳೋದನೈಃ ।**
**ಸಂಪೂಜ್ಯ ಭಾರ್ಗವಂ ರಾಮಮನುಜಜ್ಞೇ ಕುಮಾರಕಾನ್ ॥ ೩೦ ॥**

**ಪದಚ್ಛೇದ :-** ರಕ್ತ ಚಂದನ, ಸತ್ಪುಷ್ಪ ವಸ್ತ್ರ ಶಸ್ತ್ರ ಗುಡೋದನೈಃ, ಸಂಪೂಜ್ಯ, ಭಾರ್ಗವಂ, ರಾಮಮ್, ಅನುಜಜ್ಞೆ, ಕುಮಾರಕಾನ್ ॥

**ಅರ್ಥ :-** **ರಕ್ತಚಂದನ** = ಕೆಂಪು ಬಣ್ಣದ ಸುಗಂಧ ಪ್ರಾಯವಾದ, **ಸತ್ಪುಷ್ಪಃ** = ಒಳ್ಳೆಯ ಹೂಗಳಿಂದ, **ವಸ್ತ್ರ-ಶಸ್ತ್ರ ಗುಡೋದನೈಃ** = ಬಟ್ಟೆ ಆಯುಧಗಳು ಹಾಗೆ ಬೆಲ್ಲದಿಂದ ಕೂಡಿದ ಭಕ್ಷ್ಯಗಳಿಂದ, **ಭಾರ್ಗವಂ ರಾಮಂ** = ಪರಶುರಾಮದೇವರನ್ನು, **ಸಂಪೂಜ್ಯ** = ಪೂಜಿಸಿ, **ಕುಮಾರಾನ್** = ರಾಜಕುಮಾರರಿಗೆ, **ಅನುಜಜ್ಞೆ** = ವಿದ್ಯಾ ಪ್ರದರ್ಶನೆ ಮಾಡಲು ಆಜ್ಞೆ ಮಾಡಿದರು.

**ತಾತ್ಪರ್ಯ :-** ಅಸ್ತ್ರ ವಿದ್ಯಾ ಪ್ರಾರಂಭದಲ್ಲಿ ದ್ರೋಣಾಚಾರ್ಯರು ತಮ್ಮ ಶಿಷ್ಯರುಗಳಿಗೆ ಸುಮಧುರವಾದ ಕೆಂಪು ಹೂಗಳು ಹಾಗೂ ಆಯುಧಗಳು ಮತ್ತು

ಭಕ್ಷ್ಯ, ಭೋಜ್ಯಗಳಿಂದ ತಮ್ಮ ಗುರುಗಳಾದ ಪರಶುರಾಮ ದೇವರನ್ನು ಪೂಜಿಸಿ ಅಸ್ತ್ರ ವಿದ್ಯೆಯನ್ನು ಪ್ರದರ್ಶಿಸಲು ಆಜ್ಞಾಪಿಸಿದರು.

**ತೇ ಭೀಷ್ಮದ್ರೋಣವಿದುರಗಾಂಧಾರೀಧೃತರಾಷ್ಟ್ರಕಾನ್ ।**
**ಸರಾಜಮಂಡಲಾನ್ ನತ್ವಾ ಕುಂತೀಂ ಚಾದರ್ಶಯನ್ ಶ್ರಮಮ್ ॥ ೩೧ ॥**

**ಪದಚ್ಛೇದ :-** ತೇ, ಭೀಷ್ಮ ದ್ರೋಣವಿದುರಗಾಂಧಾರೀಧೃತರಾಷ್ಟ್ರಕಾನ್ । ಸರಾಜ ಮಂಡಲಾನ್, ನತ್ವಾ, ಕುಂತೀಂ, ಚ, ಅದರ್ಶಯತ್, ಶ್ರಮಮ್ ॥

**ಅರ್ಥ :- ತೇ** = ಆ ರಾಜ ಕುಮಾರರು, **ಭೀಷ್ಮದ್ರೋಣ ವಿದುರ ಗಾಂಧಾರಿ ಧೃತರಾಷ್ಟ್ರಕಾನ್** = ಭೀಷ್ಮ ದ್ರೋಣ ವಿದುರ ಗಾಂಧಾರಿ ಧೃತರಾಷ್ಟ್ರರೇ ಮೊದಲಾದ ಹಿರಿಯರನ್ನು, **ಸರಾಜ ಮಂಡಲಾನ್** = ರಾಜರ ಸಮೂಹವನ್ನು, **ಚ** = ಮತ್ತು, **ಕುಂತೀಂ** = ಕುಂತೀ ದೇವಿಯನ್ನು, **ನತ್ವಾ** = ನಮಿಸಿ, **ಶ್ರಮಮ್** = ತಾವು ಕಲಿತ ವಿದ್ಯೆಯನ್ನು, **ಅದರ್ಶಯತ್** = ಪ್ರದರ್ಶಿಸಿದರು.

**ತಾತ್ಪರ್ಯ :-** ದ್ರೋಣಾಚಾರ್ಯರ ಅಪ್ಪಣೆಯಂತೆ ಆ ಎಲ್ಲಾ ರಾಜಕುಮಾರರು ಪರಶುರಾಮ ದೇವರನ್ನು ನಮಿಸಿ ನಂತರ ಭೀಷ್ಮ ದ್ರೋಣ ವಿದುರ ಗಾಂಧಾರಿ ದೃತರಾಷ್ಟರನ್ನೂ ಹಾಗೆ ಕುಂತೀಯನ್ನು ಹಾಗೆ ರಾಜರುಗಳ ಸಮೂಹವನ್ನು ನಮಿಸಿ ತಾವು ಕಲಿತ ವಿದ್ಯೆಯನ್ನು ಪ್ರದರ್ಶಿಸಿದರು.

**ಸರ್ವೈಃ ಪ್ರದರ್ಶಿತೇಽಸ್ತ್ರೇ ತು ದ್ರೋಣಾದಾತ್ತಮಹಾಸ್ತ್ರವಿತ್ ।**
**ದ್ರೌಣಿರಸ್ತ್ರಾಣ್ಯಮೇಯಾನಿ ದರ್ಶಯಾಮಾಸ ಚಾಧಿಕಮ್ ॥ ೩೨ ॥**

**ಪದಚ್ಛೇದ :-** ಸರ್ವೈಃ, ಪ್ರದರ್ಶಿತೇ, ಅಸ್ತ್ರೇ, ತು, ದ್ರೋಣಾತ್ ಆತ್ತಮಹಾಸ್ತ್ರವಿತ್, ದ್ರೌಣಿಃ, ಅಸ್ತ್ರಾಣಿ, ಅಮೇಯಾನಿ, ದರ್ಶಯಾಮಾಸ, ಚ, ಅಧಿಕಮ್ ॥

**ಅರ್ಥ :- ಸರ್ವೈಃ** = ಎಲ್ಲಾ ರಾಜಕುಮಾರರಿಂದಲೂ, **ಅಸ್ತ್ರೇ** = ಅಸ್ತ್ರ ವಿದ್ಯೆಯು, **ಪ್ರದರ್ಶಿತೇ** = ಪ್ರದರ್ಶಿಸಲು, **ದ್ರೋಣಾದಾತ್ತವ್** = ದ್ರೋಣರಿಂದ ಉಪದಿಷ್ಟವಾದ ಅಸ್ತ್ರಗಳಿಂದ, **ಮಹಾಸ್ತ್ರವಿತ್** = ಶ್ರೇಷ್ಠ ಅಸ್ತ್ರವಿದ್ಯಾ ಪಾರಂಗತನಾಗಿದ್ದ, **ದ್ರೌಣಿಃ** = ಅಶ್ವತ್ಥಾಮನು, **ಅಧಿಕಂ** = ಎಲ್ಲರಿಗಿಂತಲೂ ಅಧಿಕವಾಗಿ, **ಅಮೇಯಾನಿ** = ಅಸಾಧಾರಣವಾದ, **ಅಸ್ತ್ರಾಣಿ** = ಅಸ್ತ್ರಗಳನ್ನು, **ಪ್ರದರ್ಶಯಾಮಾಸ** = ಪ್ರದರ್ಶಿಸಿದನು.

**ತಾತ್ಪರ್ಯ** :- ಹೀಗೆ ಎಲ್ಲಾ ರಾಜಕುಮಾರರು ಅಸ್ತ್ರ ವಿದ್ಯೆಯನ್ನು ಪ್ರದರ್ಶಿಸಲು ಎಲ್ಲಾ ರಾಜಕುಮಾರರಲ್ಲಿ ದ್ರೋಣರಿಂದ ಮಹಾಸ್ತ್ರಗಳನ್ನು ಕಲಿತಿದ್ದ ಅಶ್ವತ್ಥಾಮರು ಎಲ್ಲರಿಗಿಂತಲೂ ಅಧಿಕವಾಗಿ ಅಪರಿಮಿತ ಅಸ್ತ್ರಗಳನ್ನು ಪ್ರದರ್ಶಿಸಿದ.

**ತತೋಽಪ್ಯತಿತರಾಂ ಪಾರ್ಥೋ ದಿವ್ಯಾಸ್ತ್ರಾಣಿ ವ್ಯದರ್ಶಯತ್ ।**
**ಅವಿಧ್ಯನ್ಮಶಕೇ ಪಾದೇ ಪಕ್ಷಿಣಃ ಪಕ್ಷ್ಮ ಏವ ಚ ।**
**ಏವಮಾದೀನಿ ಚಿತ್ರಾಣಿ ಬಹೂನ್ಯೇಷ ವ್ಯದರ್ಶಯತ್ ॥ ೩೩ ॥**

ಪದಚ್ಛೇದ :- **ತತಃ, ಅಪಿ, ಅತಿತರಾಂ, ಪಾರ್ಥಃ, ದಿವ್ಯಾಸ್ತ್ರಾಣಿ, ವ್ಯದರ್ಶಯತ್ । ಅವಿಧ್ಯತ್, ಮಶಕೇ, ಪಾದೇ, ಪಕ್ಷಿಣಃ, ಪಕ್ಷ್ಮ, ಏವ, ಚ, ಏವಂ, ಆದೀನಿ, ಚಿತ್ರಾಣಿ, ಬಹೂನಿ, ಏಷ, ವ್ಯದರ್ಶಯತ್ ॥**

**ಅರ್ಥ** :- **ತತಃ** = ಆ ಅಶ್ವತ್ಥಾಮನಿಗಿಂತಲೂ, **ಪಾರ್ಥಃ** = ಅರ್ಜುನನು, **ಅತಿತರಾಂ** = ಅತ್ಯಂತ ಶ್ರೇಷ್ಠವಾದ, **ದಿವ್ಯಾಸ್ತ್ರಾಣಿ** = ದಿವ್ಯಾಸ್ತ್ರಗಳನ್ನು, **ವ್ಯದರ್ಶಯತ್** = ಪ್ರದರ್ಶಿಸಿದನು, **ಅವಿಧ್ಯತ್** = ಹಾರುವ, **ಮಶಕೇ** = ಸೊಣದ, **ಪಾದೇ** = ಕಾಲಿನಲ್ಲಿ , **ಚ** = ಮತ್ತು, **ಪಕ್ಷಿಣಃ** = ಹಕ್ಕಿಯ, **ಪಕ್ಷ್ಮ** = ರೆಕ್ಕೆಗಳಲ್ಲಿ ಬಿಡುವ ಬಾಣಗಳಿಂದ , **ಏವಮಾದೀನಿ** = ಇವೇ ಮೊದಲಾದ, **ಬಹೂನಿ ಚಿತ್ರಾಣಿ** = ಬಹಳ ಆಶ್ಚರ್ಯಕರವಾದ ಕೌಶಲವನ್ನು, **ಏಷಃ** = ಈ ಅರ್ಜುನನು, **ವ್ಯದರ್ಶಯತ್** = ಪ್ರದರ್ಶಿಸಿದನು.

**ತಾತ್ಪರ್ಯ** :- ಅರ್ಜುನನು ಅಶ್ವತ್ಥಾಮರಿಗಿಂತಲೂ ಅಧಿಕವಾದ. ಅಸ್ತ್ರವಿದ್ಯೆಗಳನ್ನು ಪ್ರದರ್ಶಿಸಿದ ಅದು ಹೇಗೆಂದರೆ ದೂರದಲ್ಲಿರುವ ಹಕ್ಕಿಯ ಕಣ್ಣಿನ ರೆಪ್ಪೆಗೂ ಗುರಿಯಿಟ್ಟು ಬಾಣ ಹೊಡೆಯುವುದು ಹಾಗೆ ಹಾರುವ ಸೊಣದ ಕಾಲಿಗೂ ಗುರಿಇಟ್ಟು ಬಾಣ ಬಿಡುವುದು ಇವೇ ಮೊದಲಾದ ಬಹಳ ಆಶ್ಚರ್ಯಕರ ಅಸ್ತ್ರವಿದ್ಯೆಯನ್ನು ಪ್ರದರ್ಶಿಸಿದ.

**ತದೈವ ಕರ್ಣ ಆಗತ್ಯ ರಾಮೋಪಾತ್ತಾಸ್ತ್ರಸಂಪದಮ್ ।**
**ದರ್ಶಯನ್ನಧಿಕಃ ಪಾರ್ಥಾದಭೂದ್ ರಾಜನ್ಯಸಂಸದಿ ॥ ೩೪ ॥**

ಪದಚ್ಛೇದ :- **ತದಾ, ಏವ, ಕರ್ಣಃ, ಆಗತ್ಯ, ರಾಮೋಪಾತ್ತಾತ್, ಅಸ್ತ್ರ ಸಂಪದಮ್, ದರ್ಶಯನ್, ಅಧಿಕಃ, ಪಾರ್ಥಾತ್ ಅಭೂತ್, ರಾಜನ್ಯ ಸಂಸದಿ ॥**

**ಅರ್ಥ** :- **ತದೈವ** = ಅದೇ ಸಮಯದಲ್ಲಿ, **ಕರ್ಣಃ** = ಕರ್ಣನು, **ಆಗತ್ಯ** = ಬಂದು, **ರಾಮೋಪಾತ್ತ** = ಪರಶುರಾಮದೇವರಿಂದ ಪಡೆದ, **ಅಸ್ತ್ರಸಂಪದಂ** = ಅಸ್ತ್ರ ಸಂಪತ್ತನ್ನು, **ರಾಜನ್ಯ ಸಂಸದಿ** = ರಾಜರ ಸಭೆಯ ಮಧ್ಯದಲ್ಲಿ, **ದರ್ಶಯನ್** = ತೋರಿಸಿದವನಾಗಿ, **ಪಾರ್ಥಾತ್** = ಅರ್ಜುನನಿಗಿಂತ, **ಅಧಿಕ ಅಭೂತ್** = ಮೇಲೆನಿಸಿದ.

**ತಾತ್ಪರ್ಯ** :- ಅದೇ ಸಮಯದಲ್ಲಿ ಕುಂತಿಯ ಜೇಷ್ಠ ಪುತ್ರನಾದ ಕರ್ಣನು ಸಾಕ್ಷಾತ್ ಪರಶುರಾಮ ದೇವರಿಂದ ಕಲಿತ ಅಸ್ತ್ರ ವಿದ್ಯೆಯನ್ನು ರಾಜರ ಸಮ್ಮುಖದಲ್ಲಿ ಪ್ರದರ್ಶಿಸಿಸಿ ಅರ್ಜುನನಿಗಿಂತಲೂ ಮೇಲೆನಿಸಿದ.

**ಕುಂತೀ ನಿಜಂ ಸುತಂ ಜ್ಞಾತ್ವಾ ಲಜ್ಜಯಾ ನಾವದಚ್ಚ ತಮ್ ।**
**ಪಾರ್ಥೋಽಸಹಂಸ್ತಂ ಯುದ್ಧಾಯೈವಾಽಹ್ವಯಾಮಾಸ ಸಂಸದಿ ॥ ೩೫ ॥**

**ಪದಚ್ಛೇದ** :- ಕುಂತೀ, ನಿಜಂ, ಸುತಂ, ಜ್ಞಾತ್ವಾ, ಲಜ್ಜಯಾ, ನವದತ್ ಚತಮ್ ।
ಪಾರ್ಥಃ ಅಸಹನ್ ತಂ, ಯುದ್ಧಾಯ ಆಹ್ವಯಾಮಾಸ, ಸಂಸದಿ ॥

**ಅರ್ಥ** :- **ಕುಂತಿ** = ಕುಂತೀ ದೇವಿಯ, **ನಿಜಂ ಸುತಂ** = ತನ್ನ ಮಗನಾದ ಕರ್ಣನನ್ನು, **ಜ್ಞಾತ್ವಾ** = ತಿಳಿದೂ, **ಲಜ್ಜಯಾ** = ನಾಚಿಕೆಯಿಂದ, **ತಂ** = ನಮಸ್ಕರಿಸುವ ಆ ಕರ್ಣನನ್ನು, **ನಾವದತ್** = ಮಾತನಾಡಿಸಲಿಲ್ಲ, **ಪಾರ್ಥಃ** = ಅರ್ಜುನನು, **ಅಸಹನ್** = ಕರ್ಣನ ಆಧಿಕ್ಯವನ್ನು ಸಹಿಸದವನಾಗಿ, **ತಂ** = ಆ ಕರ್ಣನನ್ನು, **ಸಂಸದಿ** = ಸಭೆಯಲ್ಲಿ, **ಯುದ್ಧಾಯೈ** = ಯುದ್ಧಕ್ಕಾಗಿ, **ಆಹ್ವಯಾಮಾಸ** = ಆಹ್ವಾನಿಸಿದನು.

**ತಾತ್ಪರ್ಯ** :- ಕುಂತೀದೇವಿಯು ಕರ್ಣನನ್ನು ತನ್ನ ಮಗನೆಂದು ತಿಳಿದರೂ ನಾಚಿಕೆಯಿಂದ ಮಗನೆಂದು ಕರೆದು ಮಾತನಾಡಿಸಲಿಲ್ಲ, ಅರ್ಜುನ ಕೂಡ ಪಾಂಡಿತ್ಯವನ್ನು ಸಹಿಸದೆ, ಸಭೆಯಲ್ಲಿಯೇ ಅವನನ್ನು ಯುದ್ಧಕ್ಕೆ ಕರೆದ.

**ರಣಾಯಾಕ್ಷತ್ರಿಯಾಹ್ವಾನಂ ಜಾನನ್ ಧರ್ಮಪ್ರತೀಪಕಮ್ ।**
**ಭೀಮೋ ನಿವಾರ್ಯ ಬೀಭತ್ಸುಂ ಕರ್ಣಾಯಾದಾತ್ ಪ್ರತೋದಕಮ್ ॥೩೬॥**

**ಪದಚ್ಛೇದ** :- ರಣಾಯ, ಕ್ಷತ್ರಿಯಾಹ್ವಾನಂ, ಜಾನನ್, ಧರ್ಮಪ್ರತೀಪಕಮ್ ।
ಭೀಮಃ, ನಿವಾರ್ಯ, ಭೀಭತ್ಸುಂ ಕರ್ಣಾಯ, ಅದಾತ್, ಪ್ರತೋದಕಮ್ ॥

**ಅರ್ಥ** :- **ಭೀಮ** = ಭೀಮನು, **ರಣಾಯ** = ಯುದ್ಧಕ್ಕಾಗಿ, **ಅಕ್ಷತ್ರಿಯಾಹ್ವಾನಂ** = ಕ್ಷತ್ರಿಯನಲ್ಲದ ಕರ್ಣನ ಕರೆಯುವಿಕೆಯನ್ನು, **ಧರ್ಮ ಪ್ರತೀಪಕಮ್** = ಧರ್ಮ ವಿರುದ್ಧವಾದದ್ದು ಎಂದು, **ಜಾನನ್ ಅಪಿ** = ತಿಳಿದವನಾಗಿ, **ಭೀಭತ್ಸುಂ** = ಅರ್ಜುನನನ್ನು, **ನಿವಾರ್ಯ** = ತಡೆದು, **ಕರ್ಣಾಯ** = ಕರ್ಣನಿಗೆ, **ಪ್ರತೋದಕಮ್** = ಚಾವಟಿಯನ್ನು, **ಅದಾತ್** = ಕೊಟ್ಟನು.

**ತಾತ್ಪರ್ಯ** :- ಆ ಸಮಯದಲ್ಲಿ ಭೀಮ ಕ್ಷತ್ರಿಯನಲ್ಲದ ಸೂತ ಪುತ್ರನಾದ ಕರ್ಣನನ್ನು ಯುದ್ಧಕ್ಕೆ ಕರೆಯುವುದು ಧರ್ಮ ವಿರುದ್ಧವಾಗುವುದು ಎಂದು ಅರ್ಜುನನನ್ನು ತಡೆದುನಿಲ್ಲಿಸಿ ಕರ್ಣನ ಕೈಗೆ ತಾನೇ (ಚಾಬುಕವನ್ನು) ಚಾವಟಿಯನ್ನು ಕೊಟ್ಟ.

**ಅಕ್ಷತ್ರಸಂಸ್ಕಾರಯುತೋ ಜಾತೋಽಪಿ ಕ್ಷತ್ರಿಯೇ ಕುಲೇ ।**
**ನ ಕ್ಷತ್ರಿಯೋ ಹಿ ಭವತಿ ಯಥಾ ವ್ರಾತ್ಯೋ ದ್ವಿಜೋತ್ತಮಃ ॥ ೩೭ ॥**

**ಪದಚ್ಛೇದ** :- **ಅಕ್ಷತ್ರಸಂಸ್ಕಾರ ಯುತೋ, ಜಾತಃ, ಅಪಿ, ಕ್ಷತ್ರಿಯೇ, ಕುಲೇ । ನ, ಕ್ಷತ್ರಿಯಃ, ಹಿ, ಭವತಿ, ಯಥಾ, ವ್ರಾತ್ಯೋ, ದ್ವಿಜೋತ್ತಮಃ ॥**

**ಅರ್ಥ** :- **ಯಾಥಾ** = ಯಾವ ರೀತಿಯಿಂದ, **ವ್ರಾತ್ಯ** = ಸಂಸ್ಕಾರವಿಲ್ಲದ ಬ್ರಹ್ಮಣನೂ, **ದ್ವಿಜೋತ್ತಮಃ** = ಬ್ರಾಹ್ಮಣ ಶ್ರೇಷ್ಠವಾಗುವುದಿಲ್ಲವೋ, **ಜಾತೋಽಪಿ** = ಹುಟ್ಟಿದರೂ ಕೂಡ, **ಅಕ್ಷತ್ರ ಸಂಸ್ಕಾರ ಯತ** = ಕ್ಷತ್ರಿಯ ಸಂಸ್ಕಾರವಿಲ್ಲದವನು, **ನ ಕ್ಷತ್ರಿಯಃ ಭವತಿ** = ಕ್ಷತ್ರಿಯನಾಗುವದಿಲ್ಲ, **ಹಿ** = ಪ್ರಸಿದ್ಧವು.

**ತಾತ್ಪರ್ಯ** :- ಭೀಮ ಕರ್ಣ ಯಾವ ರೀತಿ ಬ್ರಾಹ್ಮಣನಾಗಿ ಹುಟ್ಟಿಯೂ ಉಪನಯನಾದಿ ಸಂಸ್ಕಾರ ವಿಲ್ಲದಿದ್ದರೆ ಅವನು ಬ್ರಾಹ್ಮಣನಾಗುವುದಿಲ್ಲವೋ ಹಾಗೆ ಕ್ಷತ್ರಿಯ ಕುಲದಲ್ಲಿ ಹುಟ್ಟಿದರೂ ಅದರ ಸಂಸ್ಕಾರವಿಲ್ಲದಿದ್ದರೆ ಕ್ಷತ್ರಿಯನಾಗುವುದಿಲ್ಲ ಎಂದು ಅವನಿಗೆ ಛಾವಟಿಯನ್ನು ನೀಡಿದ.

**ನಿರುತ್ತರೇ ಕೃತೇ ಕರ್ಣೇ ಭೀಮೇನೈವ ಸುಯೋಧನಃ ।**
**ಅಭ್ಯಷೇಚಯದಂಗೇಷು ರಾಜಾನಂ ಪಿತ್ರನುಜ್ಞಯಾ ॥ ೩೮ ॥**

ಪದಚ್ಛೇದ :- ನಿರುತ್ತರೇ, ಕೃತೇ, ಕರ್ಣೇ, ಭೀಮೇನ, ಏವ ಸುಯೋಧನಃ । ಅಭ್ಯಷೇಚಯತ್, ಅಂಗೇಷು, ರಾಜಾನಂ, ಪ್ರಿತ್ರನುಜ್ಞಯಾ ॥

ಅರ್ಥ :- ಭೀಮೇನ = ಭೀಮನಿಂದ, ಕರ್ಣೇ = ಕರ್ಣನು, ನಿರುತ್ತರೇ ಕೃತೆ = ಉತ್ತರವಿಲ್ಲದವನಂತೆ ಮಾಡಲು, ಸುಯೋಧನಃ = ದುರ್ಯೋಧನನು, ಪ್ರಿತ್ರನುಜ್ಞಯಾ = ತಂದೆಯಾದ ಧೃತರಾಷ್ಟನ ಅಪ್ಪಣೆಯಿಂದ, ಅಂಗೇಷು = ಅಂಗರಾಜ್ಯದಲ್ಲಿ, ರಾಜಾನಂ = ರಾಜನನ್ನಾಗಿ, ಅಭ್ಯಷೇಚಯತ್ = ಅಭಿಷೇಕ ಮಾಡಿದನು.

ಧೃತರಾಷ್ಟ್ರಃ ಪಕ್ಷಪಾತಾತ್ ಪುತ್ರಸ್ಯಾನುವಶೋಽಭವತ್ ॥ ೩೯ ॥

ಪದಚ್ಛೇದ :- ಧೃತರಾಷ್ಟ್ರ, ಪಕ್ಷಪಾತಾತ್, ಪುತ್ರಸ್ಯಾನು ವಶೋಭವತ್ ।

ಅರ್ಥ :- ಧೃತರಾಷ್ಟ್ರ = ಧೃತರಾಷ್ಟನು, ಪಕ್ಷಪಾತಾತ್ = ಪಕ್ಷಪಾತದಿಂದ, ಪುತ್ರಸ್ಯ = ಮಗನಾದ ದುರ್ಯೋಧನನ, ಅನುವಶೋಽಭವತ್ = ವಶನಾಗಿದ್ದ.

ತಾತ್ಪರ್ಯ :- ಹೀಗೆ ಭೀಮ ಕರ್ಣನಿಗೆ ಹೇಳಿದಾಗ ನಿರುತ್ತರನಾದ ಕರ್ಣನಿಗೆ ಪಟ್ಟಾಭಿಷೇಕ ಮಾಡಿದರೆ ಆಗ ಯುದ್ಧ ಮಾಡಲು ಅರ್ಹನಾಗುತ್ತಾನೆ ಎಂದು ದುರ್ಯೋಧನ ಧೃತರಾಷ್ಟನ ಅಪ್ಪಣೆ ಪಡೆದು ಕರ್ಣನನ್ನು ಅಂಗರಾಜ್ಯದಲ್ಲಿ ರಾಜನನ್ನಾಗಿ ಮಾಡಿದ. ಧೃತರಾಷ್ಟ ಮಗನ ಮೇಲಿನ ಪಕ್ಷಪಾತದಿಂದ ಅವನಿಗೆ ವಶನಾಗಿ ಅವನಿಗೆ ಒಪ್ಪಿಗೆಯನ್ನು ನೀಡಿದ.

ಅಭಿಷಿಕ್ತೇ ತದಾ ಕರ್ಣೇ ಪ್ರಾಯಾದಧಿರಥಃ ಪಿತಾ ।
ಸರ್ವರಾಜಸದೋಮಧ್ಯೇ ವವಂದೇ ತಂ ವೃಷಾ ತದಾ ।
ತುತುಷುಃ ಕರ್ಮಣಾ ತಸ್ಯ ಸಂತಃ ಸರ್ವೇ ಸಮಾಗತಾಃ ॥ ೪೦ ॥

ಪದಚ್ಛೇದ :- ಅಭಿಷಿಕೇ, ತದಾ, ಕರ್ನೇ, ಪ್ರಾದೂತ್, ಅಧಿರಥಃ, ಪಿತಾ, ಸರ್ವರಾಜಸದಃ, ಮಧ್ಯೇ, ವವಂದೇ, ತಂ, ವೃಷಾ, ತದಾ । ತುತುಷುಃ, ಕರ್ಮಣಾ, ತಸ್ಯ, ಸಂತಃ, ಸರ್ವೇ, ಸಮಾಗತಾಃ ॥

ಅರ್ಥ :- ತದಾ = ಆಗ, ಕರ್ಣೆ = ಕರ್ಣನು, ಅಭಿಷಿಕ್ತೇ = ಅಭಿಷಿಕ್ತನಾಗಲು, ಅಧಿರಥಃ = ಅಧಿರಥನಾದ, ಪಿತಾ = ತಂದೆಯು,

**ಪ್ರಾಯಾತ್** = ಪುತ್ರ ಪ್ರೇಮದಿಂದ ಬಂದನು. **ಸರ್ವರಾಜಸದಃ** = ಎಲ್ಲಾ ರಾಜರ ಸಭೆಯ, **ಮಧ್ಯೆ** = ಮಧ್ಯದಲ್ಲಿ, **ವೃಷಾ** = ಕರ್ಣನು, **ವವಂದೇ** = ನಮಸ್ಕರಿಸಿದನು, **ತದಾ** = ಆಗ, **ತಸ್ಯ** = ಆ ಕರ್ಣನ, **ಕರ್ಮಣಾ** = ನಡತೆಯಿಂದ, **ಸರ್ವೇ ಸಮಾಗತಾ ಸಂತಃ** = ನೆರೆದಿದ್ದ ಎಲ್ಲಾ ಸಜ್ಜನರು, **ತುತುಷುಃ** = ಸಂತುಷ್ಟರಾದರು.

**ತಾತ್ಪರ್ಯ** :- ಕರ್ಣನ ಪಟ್ಟಾಭಿಷೇಕದ ನಂತರ ಅವನ ಸಾಕು ತಂದೆಯಾದ ಅಧಿರಥ ಬಂದ. ಆಗ ಕರ್ಣ ತನ್ನ ತಂದೆ ಒಬ್ಬ ಸೂತನೆಂದು ಸಂಕೋಚ ಪಡದೇ ಸಾಕಿದ ತಂದೆ ಎಂಬ ಗೌರವದಿಂದ ಎಲ್ಲ ರಾಜರ ನಡುವೇ ಆ ಅಧಿರಥನನ್ನು ನಮಿಸಿದ. ಕರ್ಣನ ಈ ಸದ್ಗುಣಕ್ಕೆ ಸಜ್ಜನರೆಲ್ಲರೂ ಸಂತುಷ್ಟರಾದರು.

**ಭೀಮದುರ್ಯೋಧನೌ ತತ್ರ ಶಿಕ್ಷಾಸಂದರ್ಶನಚ್ಛಲಾತ್ ।**
**ಸಮಾದಾಯ ಗದೇ ಗುರ್ವೀ ಸಂರಂಭಾದಭ್ಯುದೀಯತುಃ ॥ ೪೧ ॥**

**ಪದಚ್ಛೇದ** :- **ಭೀಮಃ, ದುರ್ಯೋಧನ, ತತ್ರ, ಶಿಕ್ಷಾ, ಸಂದರ್ಶನಾತ್, ಛಲಾತ್ । ಸಮಾದಾಯ, ಗದೇ, ಗುರ್ವೀ, ಸಂರಂಭಾತ್, ಅಭ್ಯುದೀಯತುಃ ॥**

**ಅರ್ಥ** :- **ತತ್ರ** = ಆ ಸಮಯದಲ್ಲಿ, **ಭೀಮ ದುರ್ಯೋಧನೌ** = ಭೀಮ ಮತ್ತು ದುರ್ಯೋಧನರು, **ಶಿಕ್ಷಾ ಸಂದರ್ಶನ ಚ್ಛಲಾತ್** = ಅಭ್ಯಾಸ ಕೌಶಲವನ್ನು ತೋರಿಸುವ ನೆಪದಿಂದ, **ಸಂರಂಭಾತ್** = ಕೋಪದಿಂದ, **ಗುರ್ವೀ** = ಭಾರವಾದ, **ಗದೇ** = ಎರಡು ಗದೆಗಳನ್ನು, **ಸಮಾದಾಯ** = ತೆಗೆದುಕೊಂಡು, **ಅಭ್ಯುದೀಯತುಃ** = ಪರಸ್ಪರ ಎದುರಾದರು.

**ತಾತ್ಪರ್ಯ** :- ಹೀಗೆ ಇತರರು ಅಸ್ತ್ರವಿದ್ಯೆಗಳನ್ನು ಪ್ರದರ್ಶಿಸಿದಾಗ ತಮ್ಮ ವಿದ್ಯಾಭ್ಯಾಸ ಕೌಶಲ ಪ್ರದರ್ಶನದ ನೆಪದಿಂದ ಭೀಮ ದುರ್ಯೋಧನರು ಭಾರವಾದ ಗದೆಯನ್ನೆತ್ತಿಕೊಂಡು ಕೋಪದಿಂದ ಪರಸ್ಪರ ಎದುರಾದರು.

**ದೇವಾಸುರಮನುಷ್ಯಾದಿ ಜಗದೇತಚ್ಚರಾಚರಮ್ ।**
**ಸರ್ವಂ ತದಾ ದ್ವಿಧಾ ಭೂತಂ ಭೀಮದುರ್ಯೋಧನಾಶ್ರಯಾತ್ ॥ ೪೨ ॥**

ಪದಚ್ಛೇದ :- ದೇವಾಸುರ, ಮನುಷ್ಯಾದಿ, ಜಗತ್, ಏತತ್, ಚರಾಚರಮ್ । ಸರ್ವಂ, ತದಾ, ದ್ವಿಧಾಭೂತಂ, ಭೀಮದುರ್ಯೋಧನಾಶ್ರಯಾತ್ ॥

ಅರ್ಥ :- ತದಾ = ಆಗ, ದೇವಾಸುರ ಮನುಷ್ಯಾದಿ = ದೇವತೆಗಳು - ಅಸುರರು ಮನುಷ್ಯರೇ ಮೊದಲಾದ, ಏತತ್ ಚರಾಚರಂ ಜಗತ್ = ಚರಾಚರಾತ್ಮಕವಾದ ಈ ಜಗತ್ತು, ಸರ್ವಂ = ಎಲ್ಲವೂ, ಭೀಮ ದುರ್ಯೋಧನಾಶ್ರಯಾತ್ = ಭೀಮ, ಮತ್ತು ದುರ್ಯೋಧನನ ಪಕ್ಷವನ್ನು ಆಶ್ರಯಿಸುವ ಮೂಲಕ, ದ್ವಿಧಾ ಭೂತಂ = ಎರಡು ವಿಭಾಗವಾಯಿತು.

ತಾತ್ಪರ್ಯ :- ಆ ಸಂದರ್ಭದಲ್ಲಿ ಭೀಮನ ಪಕ್ಷವನ್ನು ದೇವತೆಗಳು ದುರ್ಯೋಧನನ ಪಕ್ಷವನ್ನು ದಾನವರು ಸೇರಿದರು ಹೀಗೆ ಚರಾಚರಾತ್ಮಕ ಜಗತ್ತೆಲ್ಲವೂ ಎರಡು ತಂಡಗಳಾದವು.

ದೇವಾ ದೇವಾನುಕೂಲಾಶ್ಚ ಭೀಮಮೇವ ಸಮಾಶ್ರಿತಾಃ ।
ಅಸುರಾ ಆಸುರಾಶ್ಚೈವ ದುರ್ಯೋಧನಸಮಾಶ್ರಯಾಃ ॥ ೪೩ ॥

ಪದಚ್ಛೇದ :- ದೇವಾಃ, ದೇವಾನುಕೂಲಾಃ ಚ, ಭೀಮಂ, ಏವ, ಸಮಾಶ್ರಿತಾಃ । ಅಸುರಾಃ, ಆಸುರಾಃ ಚ, ಏವ, ದುರ್ಯೋಧನಃ, ಸಮಾಶ್ರಯಾತಿ ॥

ಅರ್ಥ :- ದೇವಾಃ = ದೇವತೆಗಳು, ದೇವಾನುಕೂಲಾಶ್ಚ = ದೇವತೆಗಳಿಗೆ ಅನುಕೂಲರಾದ (ಗಂಧರ್ವಾದಿಗಳು)ವರೂ ಕೂಡ, ಭೀಮಮೇವ = ಭೀಮನನ್ನೇ, ಸಮಾಶ್ರಿತಾ = ಆಶ್ರಯಿಸಿದರು, ಅಸುರಾಃ = ದೈತ್ಯರು, ಆಸುರಾಶ್ಚೈವ = ದೈತ್ಯಪಕ್ಷಪಾತಿಗಳೂ ಕೂಡ, ದುರ್ಯೋಧನ ಸಮಾಶ್ರಯಾಃ = ದುರ್ಯೋಧನನ ಪಕ್ಷವನ್ನು ಆಶ್ರಯಿಸಿದರು.

ತಾತ್ಪರ್ಯ :- ದೇವತೆಗಳೆಲ್ಲರೂ ಭೀಮನ ಪಕ್ಷ ಸೇರಿದ್ದರಿಂದ ದೇವತೆಗಳಿಗೆ ಅನುಕೂಲರಾದವರೂ ಕೂಡ ಭೀಮನ ಪಕ್ಷವನ್ನೇ ಸೇರಿದರು. ಹಾಗೆ ಅಸುರರೂ ಅಸುರರಿಗೆ ಅನುಕೂಲರಾದವರೂ ಕೂಡ ದುರ್ಯೋಧನ ಪಕ್ಷವನ್ನು ಆಶ್ರಯಿಸಿದರು.

ದ್ವಿಧಾಭೂತಾ ಮಾನುಷಾಶ್ಚ ದೇವಾಸುರವಿಭೇದತಃ ।
ಜಯ ಭೀಮ ಮಹಾಬಾಹೋ ಜಯ ದುರ್ಯೋಧನೇತಿ ಚ ॥ ೪೪ ॥

ಪದಚ್ಛೇದ :– ದ್ವಿಧಾ ಭೂತಾಃ, ಮನುಷ್ಯಾಃ, ಚ, ದೇವಾಸುರಃ, ವಿಭೇದತಃ । ಜಯ, ಭೀಮಃ, ಮಹಾಬಾಹೋ, ಜಯ, ದುರ್ಯೋಧನ, ಇತಿ, ಚ ॥

ಅರ್ಥ :- ಮನುಷ್ಯಾಶ್ಚ = ಮನುಷ್ಯರಾದರೂ, ದೇವಾಸುರ ವಿಭೇದತಃ = ದೇವತೆಗಳು ದೈತ್ಯರ ವಿಭಾಗದಿಂದ ಅವರ ಸ್ವಭಾವಕ್ಕನುಸಾರವಾಗಿ, ದ್ವಿಧಾಭೂತಾಃ = ಎರಡು ತಂಡಗಳಾಗಿ, ಮಹಾಬಾಹೋ = ದೊಡ್ಡ ಬಾಹು ಉಳ್ಳ, ಭೀಮ = ಭೀಮನೇ ನಿನಗೆ, ಜಯ = ಜಯವಾಗಲಿ, ಮಹಾಬಾಹು = ದೊಡ್ಡ ಬಾಹುಉಳ್ಳ, ದುರ್ಯೋಧನ = ದುರ್ಯೋಧನನೇ, ಜಯ = ಜಯವಾಗಲಿ, ಇತಿ = ಎಂದು

ತಾತ್ಪರ್ಯ :- ಮಾನವರಲ್ಲಿಯೂ ಕೂಡ ದೇವ ಸ್ವಭಾವದ ಜನರು ಭೀಮನ ಪಕ್ಷವನ್ನಾಶ್ರಯಿಸಿ ಮಹಾಬಾಹು ಭೀಮ ನಿನಗೆ ಜಯವಾಗಲಿ ಎಂದು ಹಾಗೆ ಅಸುರ ಸ್ವಭಾವದ ಮಾನವರು ದುರ್ಯೋಧನನಿಗೆ ಜಯವಾಗಲಿ ಎಂದರು.

ಹುಂಕಾರಾಂಶ್ಚೈವ ಛಟ್ಕಾರಾಂಶ್ಚಕ್ರುರ್ದೇವಾಸುರಾ ಅಪಿ ।
ದೃಷ್ಟ್ವಾ ಜಗತ್ ಸುಸಂರಬ್ಧಂ ದ್ರೋಣೋಽಥ ದ್ವಿಜಸತ್ತಮಃ ॥ ೪೫ ॥

ಪದಚ್ಛೇದ :– ಹುಂಕಾರಾನ್, ಚ ಏವ, ಷಟ್ಕಾರಾನ್, ಶ್ಚಕ್ರು, ದೇವಾಸುರಾಃ, ಅಪಿ । ದೃಷ್ಟ್ವಾ, ಜಗತ್, ಸುಸಂರಂಬ್ಧಂ, ದ್ರೋಣೇ, ಅಥ, ದ್ವಿಜಸತ್ತಮಃ ॥

ಅರ್ಥ :- ದೇವಾಸುರಾಃ ಅಪಿ = ದೇವ ದಾನವರೂ ಕೂಡ ಪರಸ್ಪರ, ಸಿಂಹ ಹುಂಕಾರಾನ್ = ಸಿಂಹಗರ್ಜನೆಯನ್ನು, ಚ = ಮತ್ತು, ಛಟ್ಕಾರಾ = ಭುಜ ತಟ್ಟಿಕೊಳ್ಳುವಿಕೆಯನ್ನು, ಚಕ್ರುಃ = ಮಾಡಿದರು, ಅಥ = ಅನಂತರ, ಸುಸಂರಬ್ಧಂ = ಉದ್ವೇಗಗೊಂಡು, ಜಗತ್ = ಜಗತ್ತನ್ನು, ದೃಷ್ಟ್ವಾ = ನೋಡಿ, ದ್ವಿಜಸತ್ತಮಃ = ಬ್ರಾಹ್ಮಣ ಶ್ರೇಷ್ಠನಾದ, ದ್ರೋಣಃ = ದ್ರೋಣನು.

ನೇದಂ ಜಗದ್ ವಿನಶ್ಯೇತ ಭೀಮದುರ್ಯೋಧನಾಶ್ರಯಾತ್ ।
ಇತಿ ಪುತ್ರೇಣ ತೌ ವೀರೌ ನ್ಯವಾರಯದರಿಂದಮೌ ॥ ೪೬ ॥

ಪದಚ್ಛೇದ :– ನ, ಇದಂ, ಜಗತ್, ವಿನಶ್ಯೇತ, ಭೀಮದುರ್ಯೋಧನಾಶ್ರಯಾತ್ । ಇತಿ, ಪುತ್ರೇಣ, ತೌ, ವೀರೌ, ನ್ಯವಾರಯತ್, ಅರಿಂದಮೌ ॥

ಅರ್ಥ :- ಜಗತ್ = ಸಮಸ್ತ ಪ್ರಪಂಚವು, ಭೀಮ ದುರ್ಯೋಧನಾಶ್ರಯಾತ್ = ಭೀಮ ಮತ್ತು ದುರ್ಯೋಧನ ಪಕ್ಷವನ್ನಾಶ್ರಯಿಸಿ, ನ ವಿನಶ್ಯೇತ = ನಾಶವಾಗಬಾರದು, ಇತಿ = ಎಂದು, ಪುತ್ರೇಣ = ಮಗನಾದ ಅಶ್ವತ್ಥಾಮನಿಂದ, ಅರಿಂದಮೌ = ಶತ್ರು ಸಂಹಾರಕರಾದ, ವೀರೌ = ಪರಾಕ್ರಮಶಾಲಿಗಳಾದ, ತೌ = ಆ ಭೀಮ ದುರ್ಯೋಧನರನ್ನು, ನ್ಯವಾರಯತ್ = ತಡೆದನು.

ತಾತ್ಪರ್ಯ :- ಹೀಗೆ ಜಗತ್ತಿನಲ್ಲಿರುವ ದೇವತೆಗಳು ಅಸುರರೂ ಕೋಪದಿಂದ ಭುಜವನ್ನು ತಟ್ಟಿಕೊಂಡು ಸಿಂಹನಾದ ಮಾಡಿದರು. ಇಂತಹ ಇವರ ಉದ್ವೇಗದಿಂದ ಜಗತ್ತು ನಾಶವಾಗದಿರಲಿ ಎಂದು ಅಶ್ವತ್ಥಾಮರ ಮೂಲಕ ದ್ರೋಣಾಚಾರ್ಯರು ಈ ಇಬ್ಬರು ವೀರರನ್ನು ತಡೆದರು.

**ಸ್ವಕೀಯಾಯಾಂಸ್ವಕೀಯಾಯಾಂ ಯೋಗ್ಯತಾಯಾಂ ನತು ಕ್ವಚಿತ್ ।**
**ಯುವಯೋಃ ಸಮ ಇತ್ಯುಕ್ತ್ವಾ ದ್ರೌಣಿರೇತೌ ನ್ಯವಾರಯತ್ ॥ ೪೭ ॥**

ಪದಚ್ಛೇದ :- ಸ್ವಕೀಯಾಯಾಂ, ಸ್ವಕೀಯಾಯಾಂ, ಯಾಗ್ಯತಾಯಾಂ, ನ, ತು, ಕ್ವಚಿತ್, ಯುವಯೋಃ, ಸಮಃ, ಇತ್ಯುಕ್ತ್ವಾ, ದ್ರೌಣಿಃ, ಏತೌ, ನ್ಯವಾರಯತ್ ॥

ಅರ್ಥ :- ದ್ರೌಣಿಃ = ಅಶ್ವತ್ಥಾಮನು, ಸ್ವಕೀಯಾಯಾಂ ಸ್ವಕೀಯಾಯಾಂ = ನಿಮ್ಮ ನಿಮ್ಮ, ಯೋಗ್ಯತಾಯಾಂ = ಯೋಗ್ಯತೆಯಲ್ಲಿ, ನ ಕ್ವಚಿತ್ (ಸಮಃ) = ಯಾರೂ ಸಮರಿಲ್ಲ, ಯುವಯೋಃ = ನಿಮ್ಮಿಬ್ಬರ ಯೋಗ್ಯತೆಯಲ್ಲಿ ನೀವೇ, ಸಮಃ = ಸಮರು, ಇತ್ಯುಕ್ತ್ವಾ = ಈ ರೀತಿಯಾಗಿ ಹೇಳಿ, ನ್ಯವಾರಯತ್ = ತಡೆದನು.

ತಾತ್ಪರ್ಯ :- ಸಾತ್ವಿಕರಲ್ಲಿ ಭೀಮನಿಗೆ ಸಮಾನರಿಲ್ಲ ತಾಮಸರಲ್ಲಿ ದುರ್ಯೋಧನನಿಗೆ ಸಮರಿಲ್ಲ ಎಂದು ಅಶ್ವತ್ಥಾಮನ ಆಶಯ.

**ದ್ರೋಣಾಜ್ಞಯಾ ವಾರಿತೌ ತೌ ಯಯತುಃ ಸ್ವಂಸ್ವಮಾಲಯಮ್ ॥ ೪೮ ॥**

ಪದಚ್ಛೇದ :- ದ್ರೋಣಾಜ್ಞಯಾ, ವಾರಿತೌ, ತೌ, ಯಯತುಃ, ಸ್ವಂ, ಸ್ವಮಾಲಯಮ್ ।

**ಅರ್ಥ** :- **ದ್ರೋಣಾಜ್ಞಯಾ** = ದ್ರೋಣರ ಅಪ್ಪಣೆಯಂತೆ, **ವಾರಿತೌ** = ತಡೆಯಲ್ಪಟ್ಟ, **ತೌ** = ಆ ಭೀಮ ದುರ್ಯೋಧನರು, **ಸ್ವಂ ಸ್ವಮಾಲಯಮ್** = ತಮ್ಮ ತಮ್ಮ ಮನೆಯನ್ನು ಕುರಿತು, **ಯಯತುಂ** = ಹೋದರು.

**ತಾತ್ಪರ್ಯ** :- ದ್ರೋಣರ ಅಪ್ಪಣೆಯಂತೆ ಅಶ್ವತ್ಥಾಮರು ನಿಮ್ಮ ನಿಮ್ಮ ಯೋಗ್ಯತೆಯಲ್ಲಿ ನಿಮಗೆ ಸರಿಸಮಾನರಾದವರು ಯಾರೂ ಇಲ್ಲ ಎಂದು ತಡೆದರು. ನಂತರ ಭೀಮ ದುರ್ಯೋಧನರು ತಮ್ಮ ನಿವಾಸಕ್ಕೆ ತೆರಳಿದರು.

**ಸುರಾಸುರಾನ್ ಸುಸಂರಬ್ಧಾನ್ ಕಾಲೇನ ದ್ರಕ್ಷ್ಯಥೇತಿ ಚ ।**
**ಬ್ರಹ್ಮಾ ನಿವಾರ್ಯ ಸಸುರೋ ಯಯೌ ಸೇಶಃ ಸ್ವಮಾಲಯಮ್ ॥ ೪೯ ॥**

**ಪದಚ್ಛೇದ** :- ಸರಾಸುರಾನ್, ಸುಸಂರಬ್ಧಾನ್, ಕಾಲೇನ, ದ್ರಕ್ಷ್ಯಥ, ಇತಿ, ಚ । ಬ್ರಹ್ಮಾ, ನಿವಾರ್ಯ, ಸಸುರಃ, ಯಯೌ, ಸಃ, ಈಶಃ, ಸ್ವಮಾಲಯಮ್ ॥

**ಅರ್ಥ** :- ಬ್ರಹ್ಮಾ = ಚತುರ್ಮುಖ ಬ್ರಹ್ಮದೇವರು, **ಸುಸಂರಬ್ಧಾನ್** = ಉದ್ವಿಗ್ನಗೊಂಡ, **ಸುರಾಸುರಾನ್** = ದೇವ ದಾನವರನ್ನು, **ಕಾಲೇನ** = ಸ್ವಲ್ಪ ಸಮಯದ ನಂತರ, **ದ್ರಕ್ಷ್ಯಥ** = (ಯುದ್ಧವನ್ನು) ನೋಡುವಿರಿ, **ಇತಿ** = ಎಂದು, **ನಿವಾರ್ಯ** = ತಡೆದು, **ಸಸುರಃ** = ದೇವತೆಗಳಿಂದ ಕೂಡಿದ, **ಸೇಶಃ** = ರುದ್ರದೇವರಿಂದ ಕೂಡಿ, **ಸ್ವಮಾಲಯಮ್** = ತಮ್ಮ ಲೋಕವನ್ನು ಕುರಿತು, **ಯಯೌ** = ಹೋದರು.

**ತಾತ್ಪರ್ಯ** :- ಆ ಸಮಯದಲ್ಲಿ ಆಕಾಶದಲ್ಲಿ ದೇವಾಸುರರಲ್ಲಿಯೂ ಆಕ್ರೋಶಗೊಂಡಿದ್ದರು. ಅವರನ್ನು ಸ್ವಲ್ಪಕಾಲಾನಂತರ ಇವರ ಪರಸ್ಪರ ಯುದ್ಧವನ್ನೂ ಜಯಾಪಜಯಗಳನ್ನು ನೋಡುವಿರಿ ಎನ್ನುತ್ತ ಬ್ರಹ್ಮದೇವರು ರುದ್ರದೇವನಿಂದೊಡಗೂಡಿ ತಮ್ಮ ಲೋಕಕ್ಕೆ ಹಿಂತಿರುಗಿದರು. ವಸ್ತುತಃ ಭೀಮ ಕೌರವರನ್ನು ಈ ಸಮಯದಲ್ಲಿ ಕೊಲ್ಲಲು ಹರಿ ಇಚ್ಛೆ ಇಲ್ಲ ಎಂದು ಹಿಂದೆ ಸರಿದ. ದುರ್ಯೋಧನನು ಭೀಮನ ಭಯದಿಂದಲೇ ಹಿಂದೆ ಸರಿದ.

**ಕರ್ಣಂ ಹಸ್ತೇ ಪ್ರಗೃಹ್ಯೈವ ಧಾರ್ತರಾಷ್ಟ್ರೋ ಗೃಹಂ ಯಯೌ ।**
**ಪಾರ್ಥಂ ಹಸ್ತೇ ಪ್ರಗೃಹ್ಯೈವ ಭೀಮಃ ಪ್ರಾಯಾತ್ ಸ್ವಮಾಲಯಮ್ ॥ ೫೦ ॥**

ಪದಚ್ಛೇದ :- ಕರ್ಣಂ, ಹಸ್ತೇ, ಪ್ರಗೃಹ್ಯ, ಏವ, ಧಾರ್ತರಾಷ್ಟ್ರಃ, ಗೃಹಂ, ಯಯೌ, ಪಾರ್ಥಂ, ಹಸ್ತೇ, ಪ್ರಗೃಹ್ಯ, ಏವ, ಭೀಮಃ, ಪ್ರಾಯಾತ್, ಸ್ವಮ್ ಆಲಯಮ್ ॥

ಅರ್ಥ :- ಧಾರ್ತರಾಷ್ಟ್ರಃ = ದುರ್ಯೋಧನನು, ಕರ್ಣಂ = ಕರ್ಣನನ್ನು, ಹಸ್ತೇ = ಕೈಯಲ್ಲಿ, ಪ್ರಗೃಹ್ಯೈವ = ಹಿಡಿದುಕೊಂಡೇ, ಗೃಹಂ = ಮನೆಯನ್ನು ಕುರಿತು, ಯಯೌ = ಹೊದನು, ಪಾರ್ಥಂ = ಅರ್ಜುನನ್ನು, ಹಸ್ತೇ = ಕೈಯಲ್ಲಿ, ಪ್ರಗೃಹ್ಯೈವ = ಹಿಡಿದುಕೊಂಡೆ, ಭೀಮಃ = ಭೀಮನು, ಸ್ವಮಾಲಯಮ್ = ತನ್ನ ಮಂದಿರವನ್ನು ಕುರಿತು, ಪ್ರಾಯಾತ್ = ಹೊದನು.

ತಾತ್ಪರ್ಯ :- ಹೀಗೆ ಭೀಮನು ಹಿಂದಿರುಗಬೇಕಾದರೆ ಅರ್ಜುನನ ಕೈ ಹಿಡಿದು ಕರೆದುಕೊಂಡು ಹೋದ. ಅದನ್ನು ನೋಡಿ ದುರ್ಯೋಧನನೂ ಕುಡ ಕರ್ಣನ ಕೈಯನ್ನು ಹಿಡಿದೆ ಹಿಂತಿರುಗಿದ.

ಪಾರ್ಥೇನ ಕರ್ಣೋ ಹಂತವ್ಯ ಇತ್ಯಾಸೀದ್ ಭೀಮನಿಶ್ಚಯಃ ।
ವೈಪರೀತ್ಯೇನ ತಸ್ಯಾऽಸೀದ್ ದುರ್ಯೋಧನವಿನಿಶ್ಚಯಃ ॥ ೫೦ ॥

ಪದಚ್ಛೇದ :- ಪಾರ್ಥೇನ, ಕರ್ಣಃ, ಹಂತವ್ಯಃ, ಇತಿ, ಆಸೀತ್, ಭೀಮನಿಶ್ಚಯಃ, ವೈಪರೀತ್ಯೇನ, ತಸ್ಯ, ಅಸೀತ್, ದುರ್ಯೋಧನವಿನಿಶ್ಚಯ ॥

ತದರ್ಥಂ ನೀತಿಮತುಲಾಂ ಚಕ್ರತುಸ್ತಾವುಭಾವಪಿ ॥ ೫೨ ॥

ಪದಚ್ಛೇದ :- ತದರ್ಥಂ, ನೀತಿಂ ಅತುಲಾಂ, ಚಕ್ರತುಃ, ತೌ, ಉಭೌ, ಅಪಿ ॥

ಅರ್ಥ :- ಪಾರ್ಥೇನ = ಅರ್ಜುನನಿಂದ, ಕರ್ಣಃ = ಕರ್ಣನು, ಹಂತವ್ಯಃ = ಹತನಾಗಬೇಕು, ಇತಿ = ಈ ರೀತಿಯಾಗಿ, ಭೀಮನಿಶ್ಚಯಃ = ಭೀಮನ ನಿರ್ಣಯವು, ಆಸೀತ್ = ಆಗಿತ್ತು, ತಸ್ಯ ವೈಪರೀತ್ಯೇನ = ಅದಕ್ಕೆ ವಿಪರೀತವಾಗಿ, ದುರ್ಯೊಧನವಿನಿಶ್ಚಯಃ = ದುರ್ಯೋಧನನ ನಿರ್ಣಯವು, ಆಸೀತ್ = ಆಗಿತ್ತು, ತದರ್ಥಂ = ಅವರಿಬ್ಬರ ಪರಸ್ಪರ ಸಂಹಾರಕ್ಕಾಗಿ, ಉಭಾವಪಿ = ಇಬ್ಬರೂ ಕೂಡ, ಅತುಲಾಂ = ಅಸದೃಶವಾದ, ನೀತಿಂ = ಉಪಾಯವನ್ನು, ಚಕ್ರುಃ = ಮಾಡಿದರು.

ತಾತ್ಪರ್ಯ :- ಭೀಮನು ಅರ್ಜುನನಿಂದ ಕರ್ಣನನ್ನು ಹತ ಮಾಡಿಸಬೇಕೆಂದು ನಿಶ್ಚಯಿಸಿದ್ದ. ಅದಕ್ಕೆ ಪ್ರತಿಯಾಗಿ ಕರ್ಣನಿಂದಲೇ ಅರ್ಜುನನನ್ನು ಕೊಲ್ಲಿಸಬೇಕೆಂದು ನಿಶ್ಚಯಿಸಿದ್ದ. ಅದಕ್ಕಾಗಿ ಅವರಿಬ್ಬರೂ ಉತ್ತಮವಾದ ಉಪಾಯಗಳನ್ನು ಮಾಡಿದ್ದರು.

**ತಥೋತ್ಕರ್ಷೇ ಫಲ್ಗುನಸ್ಯ ಯಶಸೋ ವಿಜಯಸ್ಯ ಚ ।**
**ಉದ್ಯೋಗ ಆಸೀದ್ ಭೀಮಸ್ಯ ಧಾರ್ತರಾಷ್ಟ್ರಸ್ಯ ಚಾನ್ಯಥಾ ॥ ೫೩ ॥**

ಪದಚ್ಛೇದ :- ತಥಾ, ಉತ್ಕರ್ಷೇ, ಪಲ್ಗುನಸ್ಯ, ಯಶಸಃ, ವಿಜಯಸ್ಯ, ಚ, **ಉದ್ಯೋಗಃ, ಆಸೀದ್, ವೀಮಸ್ಯ, ದಾರ್ತರಾಷ್ಟ್ರಸ್ಯ, ಚ, ಅನ್ಯಥಾ ॥**

**ಅರ್ಥ** :- **ಫಲ್ಗುನಸ್ಯ** = ಅರ್ಜುನನ, **ಯಶಸಃ** = ಯಶಸ್ಸಿನ, **ಚ** = ಮತ್ತು, **ವಿಜಯಸ್ಯ** = ವಿಜಯದ, **ಉತ್ಕರ್ಷೆ** = ಅಭಿವೃದ್ಧಿಗಾಗಿ, **ಭೀಮಸ್ಯ** = ಭೀಮನ, **ಉದ್ಯೋಗಃ** = ವ್ಯಾಪಾರವು, **ಆಸೀತ್** = ಇತ್ತು, **ಚ** = ಮತ್ತು, **ಅನ್ಯಥಾ** = ಕರ್ಣನ ವಿಜಯಾದಿಗಳ, ಉತ್ಕರ್ಷದ ವ್ಯಾಪಾರದಲ್ಲಿ, **ಧಾರ್ತರಾಷ್ಟ್ರಸ್ಯ** = ದುರ್ಯೋಧನನ, **ಉದ್ಯೋಗಃ** = ವ್ಯಾಪಾರವು, **ಆಸೀತ್** = ಇತ್ತು.

ತಾತ್ಪರ್ಯ :- ಅದರಲ್ಲಿ ಅರ್ಜುನನಿಗೆ ವಿಶೇಷವಾದ ಯಶಸ್ಸು ಮತ್ತು ವಿಜಯ ದಿನೇ ದಿನೇ ಹೆಚ್ಚುವಂತೆ ಭೀಮ ಪ್ರಯತ್ನ ನಡೆಸಿದ್ದ. ಕರ್ಣನಿಗೆ ಹೆಚ್ಚು ವಿಜಯ ದೊರೆಯಲೆಂದು ದುರ್ಯೋಧನನ ಪ್ರಯತ್ನ ನಡೆದಿತ್ತು.

**ಭೀಮಾರ್ಥಂ ಕೇಶವೋಽನ್ಯೇ ಚ ದೇವಾಃ ಫಲ್ಗುನಪಕ್ಷಿಣಃ ।**
**ಆಸನ್ ಯಥೈವ ರಾಮಾದ್ಯಾಃ ಸಂಗ್ರಹೇಣ ಹನೂಮತಃ ।**
**ಸುರಾಃ ಸುಗ್ರೀವಪಕ್ಷಸ್ಥಾಃ ಪೂರ್ವಮಾಸಂಸ್ತಥೈವ ಹಿ ॥ ೫೪ ॥**

ಪದಚ್ಛೇದ :- **ಭೀಮಾರ್ಥಂ, ಕೇಶವ, ಅನ್ಯೇ, ಚ, ದೇವಾಃ, ಫಲ್ಗುನಪಕ್ಷಿಣಃ, ಆಸನ್, ಯಥಾ, ಏವ, ರಾಮಾದ್ಯಾಃ, ಸಂಗ್ರಹೇಣ, ಹನೂಮತಃ, ಸುರಾಃ, ಸುಗ್ರೀವ ಪಕ್ಷಸ್ಥಾಃ, ಪೂರ್ವಮ್ ಆಸುಃ, ತಥಾ, ಏವ, ಹಿ ॥**

**ಅರ್ಥ** :- **ಯಥಾ** = ಯಾವ ರೀತಿ, **ಪೂರ್ವಂ** = ಕೃತಯುಗದಲ್ಲಿ, **ಹನೂಮತಃ** = ಹನುಮಂತನ, **ಸಂಗ್ರಹೇಣ** = ತನ್ನವನೆಂದು ಸ್ವೀಕಾರದಿಂದ,

ರಾಮಾದ್ಯಾಃ ಸುರಾಃ = ಶ್ರೀರಾಮನೇ ಮೊದಲಾದ ದೇವತೆಗಳು, ಸುಗ್ರೀವ ಪಕ್ಷಸ್ಥಾಂ = ಸುಗ್ರೀವನ ಪಕ್ಷದಲ್ಲಿ, ಆಸುಃ = ಇದ್ದರೋ, ತಥೈವ = ಹಾಗೆಯೇ, ಭೀಮಾರ್ಥಂ = ಭೀಮನಿಗೋಸ್ಕರ, ಕೇಶವ = ಶ್ರೀಕೃಷ್ಣ, ಚ = ಮತ್ತು, ಅನ್ಯೇ ದೇವಾಃ = ಇತರ ದೇವತೆಗಳು, ಫಲ್ಗುನ ಪಕ್ಷಿಣಃ = ಅರ್ಜುನ ಪಕ್ಷಪಾತಿಗಳು, ಆಸುಃ = ಆಗಿದ್ದರು.

ತಾತ್ಪರ್ಯ :- ತ್ರೇತಾಯುಗದಲ್ಲಿ ಹನುಮಂತನ ಪರಿಗ್ರಹಿಸಿದನೆಂದು ರಾಮನೇ ಮೊದಲಾದ ದೇವತೆಗಳು ಸುಗ್ರೀವನ ಪಕ್ಷವನ್ನಾಶ್ರಯಿಸಿ ಅವನಿಗೆ ಸಹಾಯ ಮಾಡಿದರು. ಹಾಗೆ ದ್ವಾಪರಯುಗ ಭೀಮನ ಸಂತೋಷಕ್ಕಾಗಿ ಕೃಷ್ಣನೂ ಹಾಗೆ ಇತರ ದೇವತೆಗಳು ಅರ್ಜುನನ ಪಕ್ಷವನ್ನು ಆಶ್ರಯಿಸಿದರು.

**ತದರ್ಥಮೇವ ಭೀಮಸ್ಯ ಹ್ಯನುಜತ್ವಂ ಸುರೇಶ್ವರಃ ।**
**ಆಪ ಪೂರ್ವಾನುತಾಪೇನ ತೇನ ಭೀಮಸ್ತಥಾऽಕರೋತ್ ॥ ೫೫ ॥**

ಪದಚ್ಛೇದ :- ತದರ್ಥಮೇವ, ಏವ, ಭೀಮಸ್ಯ, ಹ್ಯನುಜತ್ವಂ, ಸುರೇಶ್ವರಃ, ಆಪ, ಪೂರ್ವನುತಾಪೇನ, ತೇನ, ಭೀಮ, ತಥಾ, ಅಕರೋತ್ ॥

ಅರ್ಥ :- ತದರ್ಥಮೇವ = ಪರಮಾತ್ಮನ ಅನುಗ್ರಹಕ್ಕಾಗಿಯೇ, ಪೂರ್ವಾನು- ತಾಪೇನ = ಹಿಂದಿನ ವಿರೋಧ ಮಾಡಿದ್ದರ ಪ್ರಾಯಶ್ಚಿತ್ತದಿಂದ, ಸುರೇಶ್ವರ = ದೇವತೆಗಳ ಒಡೆಯನಾದ ಇಂದ್ರನು, ಭೀಮಸ್ಯ = ಭೀಮನ, ಅನುಜತ್ವಂ = ಸಹೋದರ ಭಾವವನ್ನು, ಆಪ = ಹೊಂದಿದನು, ತೇನ = ಆದ್ದರಿಂದ, ಭೀಮ = ಭೀಮನು, ತಥಾಕರೋತ್ = ಪ್ರೀತಿಯಿಂದ ಅಭಯವನ್ನಿತ್ತನು.

ತಾತ್ಪರ್ಯ :- ಹಿಂದೆ ತ್ರೇತಾಯುಗದಲ್ಲಿ ಇಂದ್ರ ವಾಲಿಯಾಗಿ ಅವತರಿಸಿದ್ದರಿಂದ ಹನುಮಂತನ ಸಹಕಾರವಿಲ್ಲದ ಕಾರಣ ರಾಮನಿಂದ ಹತನಾದ ಆದ್ದರಿಂದ ಪುನಃ ಪಶ್ಚಾತ್ತಾಪದಿಂದ ಇಂದ್ರ ಭೀಮನ ತಮ್ಮನಾಗಿ ಅವತರಿಸಿದ. ಆದ್ದರಿಂದ ಭೀಮ ಅವನಿಗೆ ಅಭಯವನ್ನಿತ್ತ.

**ದುರ್ಯೋಧನಾರ್ಥಂ ಕರ್ಣಸ್ಯ ಪಕ್ಷಿಣೋ ದೈತ್ಯದಾನವಾಃ ।**
**ಆಸುಃ ಸರ್ವೇ ಗ್ಲಹಾವೇತಾವಾಸತುಃ ಕರ್ಣಫಲ್ಗುನೌ ॥ ೫೬ ॥**

**ಪದಚ್ಛೇದ :– ದುರ್ಯೋಧನಾರ್ಥಂ, ಕರ್ಣಸ್ಯ, ಪಕ್ಷಿಣಃ, ದೈತ್ಯದಾನವಾಃ, ಆಸುಃ, ಸರ್ವೇ, ಗ್ರಹೌ, ಏತೌ, ಆಸತುಃ, ಕರ್ಣಫಲ್ಗುನೌ ।**

**ಅರ್ಥ :- ದುರ್ಯೋಧನಾರ್ಥಂ** = ದುರ್ಯೋಧನನ ಪ್ರೀತಿಗಾಗಿ, **ಸರ್ವೇ ದೈತ್ಯ ದಾನವಾಃ** = ದೈತ್ಯ ದಾನವರೆಲ್ಲರೂ, **ಕರ್ಣಸ್ಯ** = ಕರ್ಣನ, **ಪಕ್ಷಿಣಃ** = ಪಕ್ಷಪಾತಿಗಳು, **ಆಸುಃ** = ಆದರು, (ಏವಂ = ರೀತಿಯಾಗಿ), **ಏತೌ** = ಕರ್ಣ, **ಫಲ್ಗುನೌ** = ಕರ್ಣಾರ್ಜುನರು, **ಗ್ಲಹೌ ಆಸತುಃ** = ಪಣವಾದರು.

**ತಾತ್ಪರ್ಯ :-** ದುರ್ಯೋಧನನ ಸಂತೋಷಕ್ಕಾಗಿ ದೈತ್ಯ ದಾನವರೆಲ್ಲರೂ ಕರ್ಣನ ಪಕ್ಷವನ್ನು ಆಶ್ರಯಿಸಿದರು. ಹೀಗೆ ಯುದ್ಧವೆಂಬ ಜೂಜಿನಲ್ಲಿ ಕರ್ಣಾರ್ಜುನರು ಪಣವಾದರು.

**ಅಥ ಪೃಷ್ಟೋ ದಕ್ಷಿಣಾರ್ಥಂ ದ್ರೋಣ ಆಹ ಕುಮಾರಕಾನ್ ।**
**ಬಧ್ವಾ ಪಾಂಚಾಲರಾಜಾನಂ ದತ್ತೇತ್ಯೂಚುಸ್ತಥೇತಿ ತೇ ॥ ೫೭ ॥**

**ಪದಚ್ಛೇದ :– ಅಥ, ಪೃಷ್ಟಃ, ದಕ್ಷಿಣಾರ್ಥಂ, ದ್ರೋಣಃ, ಆಹ, ಕುಮಾರಕಾನ್, ಬಧ್ವಾ, ಪಾಂಚಾಲರಾಜಾನಂ, ದತ್ತ, ಇತಿ, ಊಚುಃ, ತಥಾ, ಇತಿ, ತೇ ॥**

**ಅರ್ಥ :- ಅಥ** = ಅನಂತರ, **ದ್ರೋಣ** = ದ್ರೋಣಾಚಾರ್ಯರು, **ದಕ್ಷಿಣಾರ್ಥಂ** = ಗುರುದಕ್ಷಿಣೆಗಾಗಿ, **ಪೃಷ್ಟ** = ಕೇಳಲು, **ಕುಮಾರಕಾನ್** = ರಾಜಕುಮಾರರನ್ನು ಕುರಿತು, **ಪಾಂಚಾಲ ರಾಜಾನಂ** = ಪಾಂಚಾಲ ದೇಶದ ರಾಜನನ್ನು, **ಬಧ್ವಾ** = ಬಂಧಿಸಿ, **ದತ್ತ** = ಗುರುದಕ್ಷಿಣೆಯನ್ನು ಕೊಡಿರಿ, **ಇತಿ** = ಎಂದು, **ಆಹ** = ಹೇಳಿದನು, **ತೇ** = ಆ ರಾಜಕುಮಾರರು, **ತಥೇತಿ** = ಹಾಗೇ ಆಗಲಿ ಎಂದು, **ಊಚುಃ** = ಹೇಳಿದರು.

**ತಾತ್ಪರ್ಯ :-** ಅನಂತರ ಕೌರವ ಪಾಂಡವರಿಗೆ ವಿದ್ಯೋಪದೇಶಗೈವ ದ್ರೋಣಾಚಾರ್ಯರಿಗೆ ಶಿಷ್ಯರು ಗುರುದಕ್ಷಿಣೆ ಏನು ಬೇಕೆಂದು ಕೇಳಲು ದ್ರೋಣರು ತನ್ನ ಬಾಲ್ಯ ಮಿತ್ರನಾದ ಪಾಂಚಾಲ ದೇಶದ ರಾಜನನ್ನು ಸೆರೆ ಹಿಡಿದು ತನ್ನಿರಿ ಎಂದಾಗ ಕುಮಾರರು ಹಾಗೆ ಆಗಲಿ ಎಂದರು.

**ತೇ ಧಾರ್ತರಾಷ್ಟ್ರಾಃ ಕರ್ಣೇನ ಸಹಿತಾಃ ಪಾಂಡವಾ ಅಪಿ ।**
**ಯಯುದ್ರೋಣೇನ ಸಹಿತಾಃ ಪಾಂಚಾಲನಗರಂ ಪ್ರತಿ ॥ ೫೮ ॥**

ಪದಚ್ಛೇದ :- ತೇ, ಧಾರ್ತರಾಷ್ಟ್ರಾಃ, ಕರ್ಣೇನ, ಸಹಿತಾಃ, ಪಾಂಡವಾಃ, ಅಪಿ, ಯಯುಃ, ದ್ರೋಣೇನ, ಸಹಿತಾಃ, ಪಾಂಚಾಲನಗರಂ, ಪ್ರತಿ ॥

**ಅಥಾಽಹ ಭೀಮಃ ಸಾಮರ್ಥ್ಯವಿವೇಕಾಭೀಪ್ಸಯಾ ಗುರುಮ್ ॥ ೫೯ ॥**

ಪದಚ್ಛೇದ :- ಅಥ, ಆಹ, ಭೀಮಃ, ಸಾಮರ್ಥ್ಯವಿವೇಕಾಭೀಪ್ಸಯಾ, ಗುರುಮ್ ॥

**ಅರ್ಥ :- ಕರ್ಣೇನ ಸಹಿತಾಃ** = ಕರ್ಣನಿಂದ ಕೂಡಿದ, **ತೇ ಧಾರ್ತರಾಷ್ಟ್ರಾಃ** = ಆ ಕೌರವರು, **ಪಾಂಡವಾಃ ಅಪಿ** = ಪಾಂಡವರೂ ಕೂಡ, **ದ್ರೋಣೇನ ಸಹಿತಾ** = ದ್ರೋಣರಿಂದ ಕೂಡಿಕೊಂಡು, **ಪಾಂಚಾಲನಗರಂ ಪ್ರತಿ** = ಪಾಂಚಾಲ ದೇಶವನ್ನು ಕುರಿತು, **ಯಯುಃ** = ಹೋದರು, **ಅಥ** = ಅನಂತರ, **ಭೀಮಃ** = ಭೀಮನು, **ಸಾಮರ್ಥ್ಯ ವಿವೇಕಾಭೀಪ್ಸಯಾ** = ರಾಜಕುಮಾರರ ಸಾಮರ್ಥ್ಯ ಜಗತ್ತಿಗೆ ತಿಳಿಯಲೆಂದು, **ಗುರುಮ್** = ದ್ರೋಣರನ್ನು ಕುರಿತು, **ಆಹ** = ಹೇಳಿದನು.

**ತಾತ್ಪರ್ಯ :-** ಕರ್ಣ ಸಹಿತರಾದ ಕೌರವರೂ ಪಾಂಡವರೂ ದ್ರೋಣಾಚಾರ್ಯರಿಂದ ಕೂಡಿ ಪಾಂಚಾಲ ನಗರಕ್ಕೆ ಹೋದರು. ಅಲ್ಲಿ ಭೀಮನೇ ಕೌರವ ಪಾಂಡವರಲ್ಲಿ ಸಮರ್ಥರಾದವರು ಯಾರು ಎಂಬುದನ್ನು ಜಗತ್ತಿಗೆ ತಿಳಿಸಲು ದ್ರೋಣರನ್ನು ಕುರಿತು ಮುಂದೆ ಹೇಳಿದ ರೀತಿಯಲ್ಲಿ ಹೇಳಿದನು.

**ಗರ್ವ ಏಷ ಕುಮಾರಾಣಾಮನಿವಾರ್ಯೋ ದ್ವಿಜೋತ್ತಮ ।**
**ಗಚ್ಛಂತ್ವೇತೇಽಗ್ರತೋ ನೈಷಾಂ ವಶಗೋ ದ್ರುಪದೋ ಭವೇತ್ ॥ ೬೦ ॥**

ಪದಚ್ಛೇದ :- ಗರ್ವಃ, ಏಷಃ, ಕುಮಾರಾಣಾಂ, ಅನಿವಾರ್ಯಃ, ದ್ವಿಜೋತ್ತಮಃ, ಗಚ್ಛಂತು, ಏತೇ, ಅಗ್ರತಃ, ನ, ಏಷಾಂ, ವಶಗೋ, ದುಪದಃ, ಭವೇತ್ ॥

**ಅರ್ಥ :- ಹೇ ದ್ವಿಜೋತ್ತಮ** = ಬ್ರಾಹ್ಮಣೋತ್ತಮರೇ, **ಏಷಃ ಕುಮಾರಾಣಾಂ** = ಈ ಕೌರವ ರಾಜಕುಮಾರರ, **ಗರ್ವಃ** = ಅಹಂಕಾರವು, **ಅನಿವಾರ್ಯಃ** = ತಡೆಯಲಸಾಧ್ಯ, **(ಅತ) ತೇ** = ಆ ಕೌರವ ರಾಜಕುಮಾರರೇ, **ಅಗ್ರತಃ** = ಮುಂದೆ, **ಗಚ್ಛಂತು** = ಹೋಗಲಿ, **ಏಷಾಂ** = ಈ ಕೌರವರ ರಾಜಕುಮಾರರಿಗೆ, **ದ್ರುಪದಃ** = ದ್ರುಪದರಾಜನು, **ನ ವಶಗಃ ಭವೇತ್** = ವಶನಾಗುವದಿಲ್ಲ.

**ತಾತ್ಪರ್ಯ** :- ಬ್ರಾಹ್ಮಣ ಶ್ರೇಷ್ಠರಾದ ಗುರುಗಳೇ ಈ ಕೌರವರ ದುರಹಂಕಾರ ತಡೆಯಲು ಅಸಾಧ್ಯವಾಗಿದೆ. ಆದ್ದರಿಂದ ಅವರೇ ಮುಂದೆ ಹೋಗಲಿ. ಆದರೆ ದ್ರುಪದರಾಜ ಅವರಿಗೆ ವಶನಾಗುವವನಲ್ಲ ಎಂದನು.

**ನಿವೃತ್ತೇಷ್ವಕೃತಾರ್ಥೇಷು ವಯಂ ಬಧ್ವಾ ರಿಪುಂ ತವ ।**
**ಆನಯಾಮ ನ ಸಂದೇಹ ಇತಿ ತಸ್ಥೌ ಸಸೋದರಃ ॥ ೬೧ ॥**

**ಪದಚ್ಛೇದ** :- **ನಿವೃತ್ತೇಷು, ಅಕೃತಾರ್ಥೇಷು, ವಯಂ, ಬಧ್ವಾ, ರಿಪುಂ, ತವ, ಆನಯಾಮ, ನ, ಸಂದೇಹಃ, ಇತಿ, ತಸ್ಥೌ ಸಸೋದರಃ ॥**

**ಅರ್ಥ** :- **ಅಕೃತಾರ್ಥೇಷು** = ತಮ್ಮ ಕಾರ್ಯದಲ್ಲಿ ಕೃತಾರ್ಥರಾಗದೇ, **ನಿವೃತ್ತೇಷು** = ಹಿಂತಿರುಗಲು, **ವಯಂ** = ನಾವು, **ತವ** = ನಿಮ್ಮ, **ರಿಪುಂ** = ಶತ್ರುವನ್ನು, **ಬದ್ವಾ** = ಬಂಧಿಸಿ, **ಆನಯಾಮ** = ತರುವೆವು, **ಸಂದೇಹಃ ನಃ** = ಸಂಶಯ ಬೇಡ, **ಇತಿ** = ಎಂದು, **ಸಸೋದರಃ** = ಸೋದರರ ಸಹಿತನಾಗಿ, **ತಸ್ಥೌ** = ನಿಂತನು.

**ತಾತ್ಪರ್ಯ** :- ಅವರು ತಮ್ಮ ಕಾರ್ಯದಲ್ಲಿ ಸೋಲುವುದು ನಿಶ್ಚಿತ. ಆದ್ದರಿಂದ ಸೋತು ಹಿಂತಿರುಗಿದಾಗ ನಾವು ಹೋಗಿ ನಿಮ್ಮ ಶತ್ರುವಾದ ದ್ರುಪದನನ್ನು ಕಟ್ಟಿ ತರುವೆವು. ಇದರಲ್ಲಿ ಸಂದೇಹ ಬೇಡ ಎಂದು ಹೇಳಿ ಪಾಂಡವರೊಡನೆ ಪಾಂಚಲದೇಶದ ಹೊರಗೆ ಉಳಿದ ಭೀಮ.

**ಸದ್ರೋಣಕೇಷು ಪಾರ್ಥೇಷು ಸ್ಥಿತೇಷ್ವನ್ಯೇ ಸಸೂತಜಾಃ ।**
**ಯಯುರಾತ್ತಪ್ರಹರಣಾಃ ಪಾಂಚಾಲಾಂತಃಪುರಂ ದ್ರುತಮ್ ॥ ೬೨ ॥**

**ಪದಚ್ಛೇದ** :- **ಸದ್ರೋಣಕೇಷು, ಪಾರ್ಥೇಷು, ಸ್ಥಿತೇಷು, ಅನ್ಯೇ, ಸಸೂತಜಾಃ, ಯಯು, ಆತ್ತ ಪ್ರಹರಣಾಃ, ಪಾಂಚಾಲಾಂತಪುರಂ, ದ್ರುತಮ್ ॥**

**ಅರ್ಥ** :- **ಸದ್ರೋಣಕೇಷು** = ದ್ರೋಣರಿಂದ ಸಹಿತರಾದ, **ಪಾರ್ಥೇಷು** = ಅರ್ಜುನನೇ ಮೊದಲಾದ ಪಾಂಡವರು, **ಸ್ಥಿತೇಷು** = ನಿಲ್ಲಲು, **ಅನ್ಯೇ** = ಕೌರವರು, **ಸಸೂತಜಾಃ** = ಕರ್ಣನಿಂದ ಕೂಡಿಕೊಂಡು, **ಆತ್ತ ಪ್ರಹರಣಾಃ** = ಆಯುಧವನ್ನು ಹಿಡಿದವರಾಗಿ, **ದ್ರುತಮ್** = ಬೇಗನೇ, **ಪಾಂಚಾಲಾಂತ ಪುರಮ್** = ಪಾಂಚಾಲ ದೇಶದ ಅಂತಃಪುರವನ್ನು ಕುರಿತು, **ಯಯುಃ** = ಹೋದರು.

ತಾತ್ಪರ್ಯ :- ಹೀಗೆ ದ್ರೋಣಾಚಾರ್ಯರಿಂದ ಸಹಿತರಾದ ಪಾಂಡವರು ಪಾಂಚಾಲ ದೇಶದ ಹೊರಗುಳಿದಾಗ ಕೌರವರೆಲ್ಲರು ಉತ್ಸಾಹದಿಂದ ಆಯುಧ ಎತ್ತಿಕೊಂಡು ಪಾಂಚಾಲರಾಜನ ಪಟ್ಟಣದೊಳಗೆ ಬೇಗನೆ ನುಗ್ಗಿದರು.

**ಕುಮಾರಾನ್ ಗ್ರಹಣೇಪ್ಸೂಂಸ್ತಾನುಪಯಾತಾನುದೀಕ್ಷ್ಯ ಸಃ ।**
**ಅಕ್ಷೋಹಿಣೀತ್ರಿತಯಯುಜ್ ನಿಸ್ಸೃತೋ ದ್ರುಪದೋ ಗೃಹಾತ್ ॥ ೬೩ ॥**

ಪದಚ್ಛೇದ :- ಕುಮಾರಾನ್, ಗ್ರಹಣೇಪ್ಸೂನ್, ಉಪಯಾತಾನ್, ಉದೀಕ್ಷ್ಯ, ಸಃ, ಅಕ್ಷೌಹಿಣೀತ್ರಿತಯಯುಕ್, ನಿಸ್ಸೃತಃ, ದ್ರುಪದಃ, ಗೃಹಾತ್ ॥

ಅರ್ಥ :- ಸಃ = ಆ ದ್ರುಪದನು, ಗ್ರಹಣೇಪ್ಸೂನ್ = ತನ್ನನ್ನು ಬಂಧಿಸುವ ಇಚ್ಛೆಯಿಂದ, ಉಪಯಾತಾನ್ = ಬರುತ್ತಿರುವ, ತಾನ್ ಕುಮಾರಾನ್ = ಆ ಕೌರವ ರಾಜಕುಮಾರರನ್ನು, ಉದೀಕ್ಷ್ಯ = ನೋಡಿ, ಅಕ್ಷೌಹಿಣೀ ತ್ರಿತಯಯುತ್ = ಮೂರು, ಅಕ್ಷೌಹಿಣೀ = ಸಮೇತನಾಗಿ, ದ್ರುಪದಃ = ದೃಪದನು, ಗೃಹಾತ್ = ತನ್ನ ಅಂತಪುರದಿಂದ, ನಿಸ್ಸೃತಃ = ಹೊರಟನು.

ತಾತ್ಪರ್ಯ :- ಕೌರವ ರಾಜಕುಮಾರರು ತನ್ನನ್ನು ಸೆರೆಹಿಡಿಯಲು ಬರುತ್ತಿದ್ದಾರೆ ಎಂದು ತಿಳಿದು ದ್ರುಪದ ಮಹಾರಾಜ ಮೂರು ಅಕ್ಷೌಹಿಣೀ ಸೈನ್ಯ ಸಮೇತನಾಗಿ ಅರಮನೆಯಿಂದ ಹೊರಗೆ ಹೊರಟನು.

**ತೇ ಶರೈರಭಿವರ್ಷಂತಃ ಪರಿವಾರ್ಯ ಕುಮಾರಕಾನ್ ।**
**ಅರ್ದಯಾಮಾಸುರುದ್ವೃತ್ತಾನ್ ಸ್ತ್ರಿಯೋ ಬಾಲಾಶ್ಚ ಸರ್ವಶಃ ॥ ೬೪ ॥**

ಪದಚ್ಛೇದ :- ತೇ, ಶರೈಃ, ಅಭಿವರ್ಷಂತಃ, ಪರಿವಾರ್ಯ, ಕುಮಾರಕಾನ್, ಅದ್ಯಯಾಮಾಸುಃ, ಉದ್ವೃತ್ತಾನ್, ಸ್ತ್ರಿಯಃ, ಬಾಲಾಃ, ಚ, ಸರ್ವಶಃ ॥

ಅರ್ಥ :- ತೇ = ಆ ಪಾಂಚಾಲರು, ಶರೈಃ = ಬಾಣಗಳಿಂದ, ಅಭಿವರ್ಷಂತಃ = ಮಳೆ ಸುರಿಸುತ್ತಿರುವ, ಕುಮಾರಾನ್ = ಕೌರವ ರಾಜಕುಮಾರರನ್ನು, ಉದ್ವೃತ್ತಾನ್ = ಅಹಂಕಾರದಿಂದ ಉನ್ಮತ್ತರಾದ, ಕುಮಾರಾನ್ = ಕೌರವ ರಾಜಕುಮಾರರನ್ನು, ಸ್ತ್ರಿಯಃ = ಆ ದೇಶದ ಹೆಂಗಸರು, ಚ = ಮತ್ತು, ಬಾಲಾಶ್ಚ = ಬಾಲಕರೂ ಕೂಡ, ಪರಿವಾರ್ಯ = ಸುತ್ತುವರೆದು, ಅರ್ದಯಾಮಾಸುಃ = ಚೆನ್ನಾಗಿ ಪೀಡಿಸಿದರು.

ತಾತ್ಪರ್ಯ :- ಪಾಂಚಾಲದೇಶದ ಸೈನಿಕರು ಈ ಕೌರವ ರಾಜಕುಮಾರರನ್ನು ಸುತ್ತುವರೆದು ಬಣಗಳ ಮಳೆಗರೆಯುತ್ತಾ ಪೀಡಿಸಿದರು. ಅಷ್ಟು ಮಾತ್ರವಲ್ಲದೆ ಈ ಉನ್ನತ್ತರಾದ ಕುಮಾರರನ್ನು ಆ ದೇಶದ ಹೆಂಗಸರು ಹಾಗೆ ಮಕ್ಕಳೂ ಕೂಡ ಪೀಡಿಸಿದರು.

**ಹರ್ಮ್ಯಸಂಸ್ಥಾಃ ಸ್ತ್ರಿಯೋ ಬಾಲಲಾ ಗ್ರಾವಭಿರ್ಮುಸಲೈರಪಿ ।**
**ಅತ್ಯರ್ಥಮರ್ದಯಾಮಾಸುಃ ಕುಮಾರಾನ್ ಸುಸುಖೇಧಿತಾನ್ ॥ ೬೫ ॥**

ಪದಚ್ಛೇದ :- ಹರ್ಮ್ಯಸಂಸ್ಥಾ, ಸ್ತ್ರಿಯಃ, ಬಾಲಾಃ, ಗ್ಲಾವಭಿ, ಮುಸಲೈಃ, ಅಪಿ, ಅತ್ಯರ್ಥಂ ಅರ್ದಯಾ ಮಾಸುಃ, ಕುಮಾರಾನ್, ಸುಸುಖೈಧಿತಾನ್ ॥

ಅರ್ಥ :- **ಸುಸುಖೈಧಿತಾನ್** = ಸುಖವಾಗಿ ಬೆಳೆದ, **ಕುಮಾರಾನ್** = ಕೌರವ ರಾಜಕುಮಾರರನ್ನು, **ಹರ್ಮ್ಯಸಂಸ್ಥಾ** = ಉಪ್ಪರಿಗೆಯಲ್ಲಿ ನಿಂತ, **ಸ್ತ್ರಿಯಃ** = ಹೆಂಗಸರು, **ಬಾಲಾಃ** = ಬಾಲಕರೂ ಕೂಡ, **ಗ್ಲಾವಾಭಿಃ** = ಕಲ್ಲುಗಳಿಂದ, **ಮುಸಲೈರಪಿ** = ಒನಕೆಗಳಿಂದಲೂ, **ಅತ್ಯರ್ಥಂ** = ಬಹಳವಾಗಿ, **ಅರ್ದಯಾಮಾಸುಃ** = ಮರ್ದನ ಮಾಡಿದರು.

ತಾತ್ಪರ್ಯ :- ಆ ಪಾಂಚಾಲ ದೇಶದ ಸ್ತ್ರೀಯರು ಅರಮನೆಯ ಉಪ್ಪರಿಕೆಗಳಲ್ಲಿ ನಿಂತು ಸುಖವಾಗಿ ಬೇಳೆದ ಈ ಕೌರವ ರಾಜಕುಮಾರರಿಗೆ ಕಲ್ಲು ಮತ್ತು ಒನಕೆಗಳಿಂದ ಚನ್ನಾಗಿ ಪೀಡಿಸಿದರು.

**ದ್ರುಪದಸ್ಯ ವರೋ ಹ್ಯಸ್ತಿ ಸೂರ್ಯದತ್ತಸ್ತಪೋಬಲಾತ್ ।**
**ಆ ಯೋಜನಾತ್ ಪುರಮುಪ ನ ತ್ವಾ ಜೇಷ್ಯತಿ ಕಶ್ಚನ ॥ ೬೬ ॥**

ಪದಚ್ಛೇದ :- ದ್ರುಪದಸ್ಯ, ವರೋ, ಹಿ, ಅಸ್ತಿ, ಸೂರ್ಯದತ್ತಃ, ತಪೋಬಲಾತ್, ಆಯೋಜನಾತ್, ಪುರಂ, ಉಪ, ನ, ತ್ವಾಂ, ಜೇಷ್ಯತಿ, ಕಶ್ಚನ ॥

ಅರ್ಥ :- **ಪುರಮುಪ** = ಪಟ್ಟಣದ ಸಮೀಪ, **ಆ ಯೋಜನಾತ್** = ಒಂದು ಯೋಜನ ಪರ್ಯಂತ, **ತ್ವಾಂ** = ನಿನ್ನನ್ನು, **ಕಶ್ಚನ** = ಯಾರೂ ಸಹ, **ನ ಜೇಷ್ಯತಿ** = ಗೆಲ್ಲಲಾರರು, **ಇತಿ** = ಎಂದು, **ದ್ರುಪದಸ್ಯ** = ದ್ರುಪದ ರಾಜನಿಗೆ, **ತಪೋಬಲಾತ್** = ತಪಸ್ಸಿನ ಸಾಮರ್ಥ್ಯದಿಂದ, **ಸೂರ್ಯದತ್ತಃ** = ಸೂರ್ಯನಿಂದ ಕೊಡಲ್ಪಟ್ಟ, **ವರಃ** = ವರವು, **ಅಸ್ತಿ** = ಇದೆ.

ತಾತ್ಪರ್ಯ :- ಈ ರೀತಿ ಪಾಂಚಾಲದೇಶದಲ್ಲಿ ಕೌರವರು ಪರಾಜಿತರಾದುದಕ್ಕೆ ಆಚಾರ್ಯರು ಕಾರಣವನ್ನು ಹೇಳುತ್ತಿದ್ದಾರೆ. ದ್ರುಪದನ ತಪಸ್ಸನ್ನು ಮೆಚ್ಚಿ ನಿನ್ನ ದೇಶದ ಸಮೀಪದಲ್ಲಿ ಬಂದು ಯೋಜನದೊಳಗೆ ನಿನ್ನನ್ನು ಯಾರೂ ಗೆಲ್ಲಲಾರರು ಎಂದು ಸೂರ್ಯನು ವರವನ್ನು ನೀಡಿದ್ದನು. ಇದನ್ನು ತಿಳಿಯದೇ ಕೌರವರು ಒಳಗೆ ಪ್ರವೇಶಿಸಿದ್ದಕ್ಕೆ ಪರಾಜಿತರಾದರು.

**ಇತಿ ತೇನ ವರೇಣೈವ ಸುಖಸಂವರ್ಧಿತಾಶ್ಚ ತೇ ।**
**ಭಗ್ನಾಃ ಕುಮಾರಾ ಆವೃತ್ಯ ದುದ್ರುರ್ವುರ್ಯತ್ರ ಪಾಂಡವಾಃ ॥ ೬೭ ॥**

**ಪದಚ್ಛೇದ** :- **ಇತಿ, ತೇನ, ವರೇಣ, ಏವ, ಸುಖ ಸಂವರ್ಧಿತಾ, ಚ, ತೇ, ಭಗ್ನಾಃ, ಕುಮಾರಾಃ, ಆವೃತ್ಯ, ದುದ್ರುವುಃ, ಯತ್ರ, ಪಾಂಡವಾಃ ॥**

**ಅರ್ಥ** :- **ಇತಿ** = ಈ ರೀತಿಯಾಗಿ, **ತೇನ ವರೇಣೈವ** = ಆ ಸೂರ್ಯನ ವರದಿಂದಲೇ, **ಸುಖಸಂವರ್ಧಿತಾಶ್ಚ** = ಸುಖವಾಗಿ ಬೆಳೆದವರಾದರೂ, **ಭಗ್ನಾಃ** = ಪರಾಜಿತರಾದ, **ತೇ ಕುಮಾರಾಃ** = ಆ ಕೌರವ ರಾಜಕುಮಾರರು, **ಆವೃತ್ಯ** = ಹಿಂತಿರುಗಿ, **ಯತ್ರ ಪಾಂಡವಾಃ** = ಎಲ್ಲಿ ಪಾಂಡವರಿದ್ದರೋ ಅಲ್ಲಿ, **ದುದ್ರುವುಃ** = ಓಡಿ ಬಂದರು.

ತಾತ್ಪರ್ಯ :- ಆ ವರ ಬಲದಿಂದಲೇ ಸುಖವಾಗಿ ಬೆಳೆಸಲ್ಪಟ್ಟ ಕುಮಾರರು ಪರಾಜಿತರಾಗಿ ಹಿಂತಿರುಗಿ ಪಾಂಡವರಿದ್ದಲ್ಲಿಗೆ ಧಾವಿಸಿದರು.

**ಸ್ತ್ರೀಬಾಲವೃದ್ಧಸಹಿತೈಃ ಪಾಂಚಾಲೈರಪ್ಯನುದ್ರುತಾಃ ।**
**ಭೀಮಾರ್ಜುನೇತಿ ವಾಶಂತೋ ಯಯುರ್ಯತ್ರ ಸ್ಮ ಪಾಂಡವಾಃ ॥ ೬೮ ॥**

**ಪದಚ್ಛೇದ** :- **ಸ್ತ್ರೀಬಾಲವೃದ್ಧಸಹಿತೈಃ, ಪಾಂಚಾಲೈಃ, ಅಪಿ, ಅನುದ್ರುತಾಃ, ಭೀಮಾರ್ಜುನ, ಇತಿ, ವಾಂಶಂತ, ಯಯುಃ, ಯತ್ರ, ಸ್ಮ, ಪಾಂಡವಾಃ ॥**

**ಅರ್ಥ** :- **ಸ್ತ್ರೀಬಾಲವೃದ್ಧಸಹಿತೈಃ** = ಸ್ತ್ರೀಯರು ಬಾಲಕರು ವೃದ್ಧರಿಂದ ಸಹಿತರಾದ, **ಪಾಂಚಾಲೈರಪಿ** = ಪಾಂಚಾಲ ದೇಶದವರಿಂದಲೂ, **ಅನುದ್ರುತಾಃ** = ಹಿಂಬಾಲಿಸಿ ಓಡಿ ಬಂದವರಾಗಿ, **ಭೀಮಾರ್ಜುನ ಇತಿ** = ಹೇ ಭೀಮ ಹೇ ಅರ್ಜುನ ಎಂದು, **ವಾಶಂತಃ** = ಗಟ್ಟಿಯಾಗಿ ಕೂಗುತ್ತಾ, **ಯತ್ರ ಸ್ಮ ಪಾಂಡವಾ** = ಎಲ್ಲಿ ಪಾಂಡವರಿದ್ದರೋ ಅಲ್ಲಿಗೆ, **ಯಯುಃ** = ಹೋದರು.

ತಾತ್ಪರ್ಯ :- ಹೆಂಗಸರು ಮಕ್ಕಳು ಮುದಕರಿಂದೊಡಗೂಡಿ ಪಾಂಚಾಲರು ಬೆನ್ನಟ್ಟಿ ಬರುತ್ತಿದ್ದಂತೆ ಭೀಮ! ಅರ್ಜುನ! ಕಾಪಾಡಿ ಎಂದು ಕೂಗುತ್ತ ಪಾಂಡವರಿದ್ದಲ್ಲಿಗೆ ಓಡಿದರು ಕುಮಾರರು. ಸೂರ್ಯನ ವರವಾದ್ದರಿಂದ ಸೂರ್ಯಾಂಶನಾದ ಕರ್ಣನಿಗೆ ಅದನ್ನು ಮೀರಲಾಗಲಿಲ್ಲ. ದುರ್ಯೋಧನಾದಿಗಳು ಬಲಿಷ್ಟ. ಅಸುರರಾಗಿದ್ದರೂ ಮನುಷ್ಯರಾಗಿ ಹುಟ್ಟಿದ್ದರಿಂದ ಶಕ್ತಿಹ್ರಾಸವಾಗಿತ್ತು. ಅದರಿಂದ ಸೂರ್ಯನ ವರ ಬಲದಿಂದ ಹೆಂಗಸರು ಮಕ್ಕಳು ಅವರನ್ನು ಪೀಡಿಸಿದರು.

**ತಾನ್ ಪ್ರಭಗ್ನಾನ್ ಸಮಾಲೋಕ್ಯ ಭೀಮಃ ಪ್ರಹರತಾಂ ವರಃ ।**
**ಆರುರೋಹ ರಥಂ ವೀರಃ ಪುರ ಆತ್ತಶರಾಸನಃ ॥ ೬೯ ॥**

**ಪದಚ್ಛೇದ :- ತಾನ್, ಪ್ರಭಗ್ನಾನ್, ಸಮಾಲೋಕ್ಯ, ಭೀಮಃ, ಪ್ರಹರತಾಂ, ವರಃ, ಆರುರೋಹ, ರಥಂ, ವೀರಃ, ಪುರಃ, ಆತ್ತಶರಾಸನಃ ॥**

**ಅರ್ಥ** :- **ಪ್ರಭಗ್ನಾನ್** = ಪರಾಜಿತರಾದ, **ತಾನ್** = ಆ ಕೌರವರನ್ನು, **ಸಮಾಲೋಕ್ಯ** = ನೋಡಿ, **ಪ್ರಹರತಾಂ** = ಯುದ್ಧ ಮಾಡುವವರಲ್ಲಿ, **ವರಃ** = ಶ್ರೇಷ್ಠನಾದ, **ವೀರಃ** = ಪರಾಕ್ರಮಶಾಲಿಯಾದ, **ಭೀಮಃ** = ಭೀಮನು, **ಆತ್ತ ಶರಾಸನಃ** = ಬಿಲ್ಲು ಬಾಣಗಳನ್ನು ಹಿಡಿದವನಾಗಿ, **ಪುರ** = ಮುಂಭಾಗದಲ್ಲಿ, **ರಥಂ** = ರಥವನ್ನು, **ಆರುರೋಹ** = ಏರಿದನು.

ತಾತ್ಪರ್ಯ :- ಕುಮಾರರು ಬಹಳ ಪರಾಜಿತರಾದುದನ್ನು ಕಂಡು ಯೋಧರಲ್ಲಿ ಶ್ರೇಷ್ಠನಾದ ವೀರ ಭೀಮಸೇನ ಬಿಲ್ಲು ಬಾಣ ಹಿಡಿದು ಮುಂಭಾಗದಲ್ಲಿ ರಥವೇರಿದ.

**ತಮನ್ವಯಾದಿಂದ್ರಸುತೋ ಯಮೌ ತಸ್ಯೈವ ಚಕ್ರಯೋಃ ।**
**ಯುಧಿಷ್ಠಿರಸ್ತು ದ್ರೋಣೇನ ಸಹ ತಸ್ಥೌ ನಿರೀಕ್ಷಕಃ ॥ ೭೦ ॥**

**ಪದಚ್ಛೇದ :- ತಮನ್ವಯಾತ್, ಇಂದ್ರ ಸೂನುಃ, ಯಮೌ, ತಸ್ಯ ಏವ, ಚಕ್ರಯೋಃ, ಯುಧಿಷ್ಠಿರಃ ತು, ದ್ರೋಣೇನ, ಸಹ, ತಸ್ಥೌ, ನಿರೀಕ್ಷಕಃ ॥**

**ಅರ್ಥ** :- **ತಂ** = ಆ ಭೀಮನನ್ನು, **ಇಂದ್ರಸೂನುಃ** = ಇಂದ್ರನ ಮಗನಾದ ಅರ್ಜುನನು, **ಅನ್ವಯಾತ್** = ಅನುಸರಿಸಿದನು, **ತಸ್ಯೈವ** = ಆ ಅರ್ಜುನ

ರಥದ, ಚಕ್ರಯೋಃ = ಚಕ್ರಗಳ ರಕ್ಷಕರಾಗಿ, ಯಮೌ = ನಕುಲ ಸಹದೇವರು, ಅನ್ವಯಾತ್ = ಅನುಸರಿಸಿದರು, ಯುಧಿಷ್ಠಿರಸ್ತು = ಧರ್ಮರಾಜನಾದರೋ, ದ್ರೋಣೇನ ಸಹ = ದ್ರೋಣನೊಂದಿಗೆ, ನಿರೀಕ್ಷಕಃ = ಯುದ್ಧನಿರೀಕ್ಷಕನಾಗಿ, ತಸ್ಥೌ = ನಿಂತನು.

ತಾತ್ಪರ್ಯ :- ಅವನ ಹಿಂದೆ ಅರ್ಜುನ ರಥವೇರಿ ಹೊರಟ. ಯುದಿಷ್ಠಿರ ದ್ರೋಣನೊಂದಿಗೆ ಯುದ್ಧ ನಿರೀಕ್ಷಕನಾಗಿ ನಿಂತ.

**ಆಯಾಂತಮಗ್ರತೋ ದೃಷ್ಟ್ವಾ ಭೀಮಮಾತ್ತಶರಾಸನಮ್ ।**
**ದುದ್ರುವುಃ ಸರ್ವಪಾಂಚಾಲಾಃ ವಿವಿಶುಃ ಪುರಮೇವ ಚ ॥ ೭೦ ॥**

ಪದಚ್ಛೇದ :- ಆಯಾಂತಂ, ಅಗ್ರತಃ, ದೃಷ್ಟ್ವಾ, ಭೀಮ್, ಆತ್ತಶರಾಸನಮ್, ದುದ್ರುವುಃ, ಸರ್ವಪಾಂಚಾಲಾಃ, ವಿವಿಶುಃ, ಪುರಂ, ಏವ, ಚ ॥

ಅರ್ಥ :- ಶರಾಸನಮ್ = ಬಿಲ್ಲು ಬಾಣವನ್ನು, ಆತ್ತ = ಧಾರಣೆ ಮಾಡಿ, ಅಗ್ರತಃ = ಎದುರಿಗೆ, ಆಯಾಂತಂ = ಬರುತ್ತಿರುವ, ಭೀಮಂ = ಭೀಮನನ್ನು, ದೃಷ್ಟ್ವಾ = ನೋಡಿ, ಸರ್ವ ಪಾಂಚಾಲಾಃ = ಎಲ್ಲಾ ಪಾಂಚಾಲರೂ, ದುದ್ರುವುಃ = ಓಡಿದರು, ಪುರಮೇವ = ತಮ್ಮ ಪಟ್ಟಣವನ್ನೇ, ವಿವಿಶುಃ = ಪ್ರವೇಶ ಮಾಡಿದರು.

ತಾತ್ಪರ್ಯ :- ಪಾಂಡವರ ಸೇನೆಯ ಮುಂಭಾಗದಲ್ಲಿ ಬಿಲ್ಲು ಬಾಣಗಳನ್ನು ಹಿಡಿದು ಭೀಮ ಬರುತ್ತಿರುವುದನ್ನು ನೋಡಿ ಪಾಂಚಾಲದೇಶದ ಸೈನಿಕರು ಭಯದಿಂದ ಓಡಿ ತಮ್ಮ ಪಟ್ಟಣವನ್ನು ಸೇರಿದರು.

**ದ್ರುಪದಸ್ತ್ವಭ್ಯಯಾದ್ ಭೀಮಂ ಸಪುತ್ರಃ ಸಾರಸೇನಯಾ ।**
**ಚಕ್ರರಕ್ಷೌ ತು ತಸ್ಯಾऽಸ್ತಾಂ ಯುಧಾಮನ್ಯೂತ್ತಮೌಜಸೌ ॥ ೭೨ ॥**

ಪದಚ್ಛೇದ :- ದುಪದ: ತು ಅಭಿಯಾದ್ ಭೀಮಂ ಸುಪುತ್ರಃ, ಸಹ, ಸೇನಯಾ । ಚಕ್ರರಕ್ಶೌ ಚ ತಸ್ಯಾಸ್ತಾಂ, ಯುಧಾಮನ್ಯೂತ್ತಮೌಜಸೌ ॥

ಅರ್ಥ :- ದ್ರುಪದಸ್ತು = ದ್ರುಪದನಾದರೂ ಸಪುತ್ರಃ ಸಹ = ತನ್ನ ಮಕ್ಕಳಿಂದ ಕೂಡಿದ ಸೇನಯಾ = ಸೇನೆಯಿಂದ ಭೀಮಂ = ಭೀಮನನ್ನು,

**ಅಭಿಯಾತ್** = ಎದುರಿಸಿದನು, **ತಸ್ಯ** = ಆ ದ್ರುಪದ ರಾಜನಿಗೆ, **ಯುಧಾಮನ್ಯೂತ್ತಮೌಜಸೌ** = ಯುಧಾಮನ್ಯು ಮತ್ತು ಉತ್ತಮೌಜರು, **ಚಕ್ರರಕ್ಷೌ** = ಅವನ ರಥದ ಚಕ್ರದ ರಕ್ಷಕರು, **ಆಸ್ತಾಂ** = ಆಗಿದ್ದರು.

**ತಾತ್ಪರ್ಯ** :- ಆದರೆ ದ್ರುಪದ ಮಹಾರಾಜ ಧೈರ್ಯದಿಂದ ತನ್ನ ಮಕ್ಕಳಿಂದ ಕೂಡಿ ಪಾಂಡವರ ಸೈನ್ಯವನ್ನು ಎದುರಿಸಿದ. ಅವನಿಗೆ ಯುಧಾಮನ್ಯು ಮತ್ತು ಉತ್ತಮೌಜರು ಚಕ್ರ ರಕ್ಷಕರಾಗಿದ್ದರು.

**ಧಾತ್ರ್ಯರ್ಯಮಾವೇಶಯುತೌ ವಿಶ್ವಾವಸುಪರಾವಸೂ ।**
**ಸುತೌ ತಸ್ಯ ಮಹಾವೀರ್ಯೌ ಸತ್ಯಜಿತ್ ಪೃಷ್ಠತೋಽಭವತ್ ॥ ೭೩ ॥**

**ಪದಚ್ಛೇದ** :- ಧಾತ್ರ್ಯರ್ಯಮಾವೇಶಯುತೌ, ವಿಶ್ವಾಮಸುಪರಾವಸೂ । ಸುತಾ, ತಸ್ಯ, ಮಹಾವೀರ್ಯೌ, ಸತ್ಯಜಿತ್, ಪೃಷ್ಠತಃ ಅಭವತ್ ॥

**ಅರ್ಥ** :- **ತಸ್ಯ** = ಆ ದ್ರುಪದ ರಾಜನ, **ಸುತಾಃ** = ಮಕ್ಕಳಿಬ್ಬರು, **ಧಾತ್ರ್ಯರ್ಯಮಾವೇಶಯುತೌ** = ಧಾತೃ ಮತ್ತು ಅರ್ಯಮರೆಂಬ ಆದಿತ್ಯರ ಆವೇಶಯುಕ್ತರಾದ ವಿಶ್ವಾವಸು, **ಪರಾವಸೂಃ** = ವಿಶ್ವಾವಸು ಪರಾವಸುಗಳೆಂಬ ಗಂಧರ್ವರು, **ಮಹಾವೀರ್ಯೌ** = ಇಬ್ಬರು ಮಹಾ ಪರಾಕ್ರಮಶಾಲಿಗಳು, **ಪೃಷ್ಠತಃ** = ಅವರ ರಥದ ಹಿಂದೆ, **ಸತ್ಯಜಿತ್** = ಸತ್ಯಜಿತ್ ಎಂಬುವನು **ಅಭವತ್** = ರಕ್ಷಕನಾಗಿ ಇದ್ದನು.

**ತಾತ್ಪರ್ಯ** :- ಈ ಇಬ್ಬರು ದ್ರುಪದನ ಪುರು ಧಾತೃ, ಅರ್ಯಮರೆಂಬ ಆದಿತ್ಯರ ಆವೇಶಯುಕ್ತರಾದ ವಿಶ್ವಾವಸು ಪರಾವಸುಗಳೆಂಬ ಗಂಧರ್ವರು ಮಹಾಪರಾಕ್ರಮ ಶಾಲಿಗಳಾಗಿದ್ದರು. ಇವರ ರಥದ ಹಿಂದೆ ರಕ್ಷಕನಾಗಿ ಸತ್ಯಜಿತ್ ಇದ್ದನು.

**ಸ ಮಿತ್ರಾಂಶಯುತೋ ವೀರಶ್ಚಿತ್ರಸೇನೋ ಮಹಾರಥಃ ।**
**ಅಗ್ರತಸ್ತು ಶಿಖಂಡ್ಯಾಗಾದ್ ರಥೋದಾರಃ ಶರಾನ್ ಕ್ಷಿಪನ್ ॥ ೭೪ ॥**

**ಪದಚ್ಛೇದ** :- ಸಃ ಮಿತ್ರಾಂಶಯುತಃ, ವೀರಃ, ಚಿತ್ರಸೇನಃ, ಮಹಾರಥಃ । ಅಗ್ರತಃ, ತು, ಶಿಖಂಡೀ, ಆಗಾತ್, ರಥೋಧಾರಃ, ಶರಾನ್, ಕ್ಷಿಪನ್ ॥

**ಅರ್ಥ** :- **ಸಃ** = ಆ ಸತ್ಯಜಿತನು, **ಮಿತ್ರಾಂಶಯುತಃ** = ಮಿತ್ರನೆಂಬ ಆದಿತ್ಯನ ಅಂಶದಿಂದ ಯುಕ್ತನಾದ, **ಚಿತ್ರಸೇನಃ** = ಚಿತ್ರಸೇನನೆಂಬ ಗಂಧರ್ವನು, **ವೀರಃ** = ಪರಾಕ್ರಮಶಾಲಿಯಾದ, **ಮಹಾರಥಃ** = ಮಹಾರಥನು, ಅಗ್ರತಸ್ತು, ಮುಂಭಾಗದಲ್ಲಿ ಯಾದರೂ, **ರಥೋದಾರಃ** = ಶ್ರೇಷ್ಠ ರಥದಿಂದ, **ಶರಾನ್** = ಬಾಣಗಳನ್ನು, **ಕ್ಷಿಪನ್** = ಎಸೆಯುತ್ತಾ, **ಶಿಖಂಡೀ** = ಶಿಖಂಡಿಯು, **ಆಗಾತ್** = ಬಂದನು.

**ತಾತ್ಪರ್ಯ** :- ಸತ್ಯಜಿತ್ ಮಿತ್ರನೆಂಬ ಆದಿತ್ಯನ ಅಂಶದಿಂದ ಯುಕ್ತನಾದ ಚಿತ್ರಸೇನ ಎಂಬ ಗಂಧರ್ವ ವೀರನು. ಮಹಾರಥನಾಗಿದ್ದ. ಮುಂಭಾಗದಲ್ಲಿ ಶ್ರೇಷ್ಠವಾದ ರಥದಲ್ಲಿ ಬಾಣಗಳ ಮಳೆಗೈಯುತ್ತಾ ಶಿಖಂಡಿಯು ಬಂದನು.

**ಜನಮೇಜಯಸ್ತಮನ್ವೇವ ಪೂರ್ವಂ ಚಿತ್ರರಥೋ ಹಿ ಯಃ ।**
**ತ್ವಷ್ಟುರಾವೇಶಸಂಯುಕ್ತಃ ಸ ಶರಾನಭ್ಯವರ್ಷತ ॥ ೭೫ ॥**

**ಪದಚ್ಛೇದ** :- ಜನಮೇಜಯಃ, ತಂ, ಅನು, ಏವ, ಪೂರ್ವಂ ಚಿತ್ರರಥಃ, ಹಿ, ಯಃ । ತ್ವಷ್ಟುಃ ಆವೇಶ ಸಂಯುಕ್ತಃ, ಸಃ, ಶರಾನ್, ಅಭ್ಯವರ್ಷತ ।

**ಅರ್ಥ** :- **ಯಃ** = ಯಾವ ಜನಮೇಜಯನು, **ಪೂರ್ವಂ** = ಹಿಂದೆ, **ಚಿತ್ರರಥಃ** = ಚಿತ್ರರಥನೆಂಬ ಗಂಧರ್ವನು, **ತ್ವಷ್ಟ್ರುರಾವೇಶ ಸಂಯುಕ್ತಃ** = ತ್ವಷ್ಟ್ರುವಿನ ಆವೇಶದಿಂದ ಕೂಡಿದ, **ಜಯಮೇಜಯಃ** = ಜನಮೇಜಯನು, **ತಂ** = ಆ ಶಿಖಂಡಿಯನ್ನು, **ಅನ್ವೇವ** = ಅನುಸರಿಸಿಯೇ, **ಶರಾನ್** = ಬಾಣಗಳನ್ನು, **ಅಭ್ಯವರ್ಷತ** = ಸುರಿಸಿದನು.

**ತಾತ್ಪರ್ಯ** :- ಶಿಖಂಡಿಯ ಹಿಂದೆ ಜನಮೇಜಯ ರಾಜನು ಬಾಣಗಳನ್ನು ಬಿಡುತ್ತಿದ್ದ. ಅವನು ಚಿತ್ರರಥನೆಂಬ ಗಂಧರ್ವಂ ತ್ವಷ್ಟ್ರು ಎಂಬ ಆದಿತ್ಯನ ಆವೇಶದಿಂದ ಕೂಡಿದ್ದ.

**ತಾವುಭೌ ವಿರಥೌ ಕೃತ್ವಾ ವಿಚಾಪೌ ಚ ವಿವರ್ಮಕೌ ।**
**ಭೀಮೋ ಜಘಾನ ತಾಂ ಸೇನಾಂ ಸವಾಜಿರಥಕುಂಜರಾಮ್ ॥ ೭೬ ॥**

**ಪದಚ್ಛೇದ** :- ಪದಚ್ಛೇದ :- ತೌ, ಉಭೌ, ವಿರಥೌ, ಕೃತ್ವಾ, ವಿಚಾಪೌ, ಚ, ವಿವರ್ಮಕೌ । ಭೀಮಃ, ಜಘಾನ, ತಾಂ, ಸೇನಾಂ, ಸವಾಜಿರಥಕುಂಜರಾಮ್ ॥

**ಅರ್ಥ :- ಭೀಮಃ** = ಭೀಮನು, **ತಾವುಭೌ** = ಆ ಶಿಖಂಡಿ ಜನಮೇಜಯರನ್ನು, **ವಿರಥೌ** = ರಥವಿಲ್ಲದವರನ್ನಾಗಿ, **ಚ** = ಮತ್ತು, **ವಿಚಾಪೌ** = ಬಿಲ್ಲುಗಳಿಲ್ಲದವರನ್ನಾಗಿ, **ವಿವರ್ಮಕೌ** = ಕವಚರಹಿತರನ್ನಾಗಿ, **ಕೃತ್ವಾ** = ಮಾಡಿ **ಸವಾಜಿರಥಕುಂಜರಮ್** = ಅಶ್ವರಥಗಜಗಳಿಂದ ಕೂಡಿದ, **ತಾಂ ಸೇನಾಂ** = ಅವರಿಬ್ಬರ ಸೇನೆಯನ್ನು, **ಜಘಾನ** = ಕೊಂದನು.

ತಾತ್ಪರ್ಯ :- ಆ ಶಿಖಂಡಿ ಮತ್ತು ಜನಮೇಜಯರ ರಥಗಳನ್ನು ಭೀಮ ಮುರಿದು ಬಿಲ್ಲನ್ನೂ ಕಡಿದ. ಹಾಗೆ ಕವಚಗಳನ್ನು ಭೇದಿಸಿದ. ಹೀಗೆ ಅಶ್ವ, ರಥ, ಗಜ, ಕುದುರೆಗಳಿಂದ ಕೂಡಿದ ಆ ಸೈನ್ಯವನ್ನು ಭೀಮ ಸಂಹರಿಸಿದ.

**ಅಥೈನವ ಶರವರ್ಷೇಣ ಯುಧಾಮನ್ಯೂತ್ತಮೌಜಸೌ ।**
**ಅಭೀಯತುಸ್ತೌ ವಿರಥೌ ಚಕ್ರೇ ಭೀಮೋ ನಿರಾಯುಧೌ ॥ ೭೭ ॥**

ಪದಚ್ಛೇದ :- **ಅಥ ಏನಂ, ಏವಂ, ಶರವರ್ಷೇಣ, ಯುಧಾಮನ್ಯೂತ್ತ ಮೌಜಸೌ । ಅಭೀಯತುಃ ತೌ, ವಿರಥೌ, ಚಕ್ರೇ, ಭೀಮಃ, ನಿರಾಯುಧೌ ॥**

**ಅರ್ಥ :- ಅಥ** = ಅನಂತರ, **ಏನಂ** = ಈ ಭೀಮಸೇನ ದೇವರನ್ನು, **ಯುಧಾಮನ್ಯೂತ್ತಮೌಜಸೌ** = ಯುಧಾಮನ್ಯು ಮತ್ತು ಉತ್ತಮೌಜರು, **ಶರವರ್ಷೇಣ** = ಬಾಣಗಳ ಮಳೆಯಿಂದ **ಅಭೀಯತುಃ** = ಎದುರಿಸಿದರು, **ತೌ** = ಅವರಿಬ್ಬರನ್ನು **ಭೀಮಃ** = ಭೀಮನು, **ವಿರಥೌ** = ರಥವಿಲ್ಲದವರನ್ನಾಗಿ, **ನಿರಾಯುಧೌ** = ಆಯುಧವಿಲ್ಲದವರನ್ನಾಗಿ **ಚಕ್ರೇ** = ಮಾಡಿದರು.

ತಾತ್ಪರ್ಯ :- ಭೀಮನ ಇಂತಹ ಪರಾಕ್ರಮುವನ್ನು ನೋಡಿ ಯುಧಾಮನ್ಯು - ಉತ್ತಮೌಜರು ಭೀಮನಿಗೆ ಬಾಣಗಳ ಮಳೆಗೈದರು. ಭೀಮನ ಮೇಲೆ ಅವರಿಬ್ಬರನ್ನು ನಿರಥಿಕರನ್ನಾಗಿ ನಿರಾಯುಧರನ್ನಾಗಿ ಮಾಡಿದ.

**ಹಸ್ತಪ್ರಾಪ್ತಂ ಚ ಪಾಂಚಾಲಂ ನಾಗ್ರಹೀತ್ ಸ ವೃಕೋದರಃ ।**
**ಗುರ್ವರ್ಥಾಮರ್ಜುನಸ್ಯೋರ್ವೀಂ ಪ್ರತಿಜ್ಞಾಂ ಕರ್ತುಮಪ್ಯೃತಾಮ್ ।**
**ಮಾನಭಂಗಾಯ ಕರ್ಣಸ್ಯ ಪಾರ್ಥಮೇವ ನ್ಯಯೋಜಯತ್ ॥ ೭೮ ॥**

ಪದಚ್ಛೇದ :- **ಹಸ್ತಪ್ರಾಪ್ತಂ, ಚ, ಪಾಂಚಾಲಂ, ನ ಅಗ್ರಹೀತ್, ಸಃ, ವೃಕೋದರಃ । ಗುರ್ವರ್ಥಂ, ಅರ್ಜುನಸ್ಯ ಉರ್ವೀಂ, ಪ್ರತಿಜ್ಞಾಂ, ಕರ್ತುಂ, ಅಪೃಷ್ಟತಾಂ, ಮಾನಭಂಗಾಯ, ಕರ್ಣಸ್ಯ, ಪಾರ್ಥಂ, ಏವ, ನ್ಯಯೋಜಯತ್ ।**

**ಅರ್ಥ** :- **ಸಃ ವೃಕೋದರಃ** = ಆ ಭೀಮಸೇನನು, **ಹಸ್ತಪ್ರಾಪ್ತಃ** = ಕೈಯಿಗೆ ಸಿಕ್ಕ **ಪಾಂಚಾಲಂ** = ಪಾಂಚಾಲದೇಶದ ರಾಜನಾದ, ದ್ರುಪದನನ್ನು, **ನಾಗ್ರಹೀತ್** = ಹಿಡಿಯಲಿಲ್ಲ, **ಗುರ್ವರ್ಥಂ** = ದ್ರೋಣಾಚಾರ್ಯರಿಗಾಗಿ, **ಅರ್ಜುನಸ್ಯ** = ಅರ್ಜುನನ, **ಉರ್ವೀಂ** = ಮಹತ್ತರವಾದ, **ಪ್ರತಿಜ್ಞಾಂ** = ಪ್ರತಿಜ್ಞೆಯನ್ನು, **ಋತಾಮ್** = ಸತ್ಯವನ್ನಾಗಿ, **ಕರ್ತುಂ** = ಮಾಡಲು, **ಕರ್ಣಸ್ಯ** = ಕರ್ಣನ, **ಮಾನಭಂಗಾಯ** = ಮಾನ ಕಳೆಯುವುದಕ್ಕಾಗಿ, **ಪಾರ್ಥಮೇವ** = ಅರ್ಜುನನನ್ನೇ, **ನ್ಯಯೋಜಯತ್** = ನಿಯೋಜಿಸಿದನು.

**ತಾತ್ಪರ್ಯ** :- ಹೀಗೆ ಯುದ್ಧ ಮಾಡುತ್ತಿದ್ದ ಭೀಮನಿಗೆ ದ್ರುಪದ ಸಿಕ್ಕರೂ ಸೆರೆ ಹಿಡಿಯಲಿಲ್ಲ. ಗುರು ದ್ರೋಣರಿಗಾಗಿ ಅರ್ಜುನ ಮಾಡಿದ್ದ ಪ್ರತಿಜ್ಞೆಯನ್ನು ಸತ್ಯಗೊಳಿಸಲು ಹಾಗೆ ಅರ್ಜುನನ ಪ್ರತಿಸ್ಪರ್ಧಿಯಾದ ಕರ್ಣನ ಮಾನ ಕಳೆಯಲು ಅರ್ಜುನನಿಗೆ ದ್ರುಪದನನ್ನು ಹಿಡಿಯಲು ಹೇಳಿದ.

**ಸ ಶರಾನ್ ಕ್ಷಿಪತಸ್ತಸ್ಯ ಪಾಂಚಾಲಸ್ಯಾರ್ಜುನೋ ದ್ರುತಮ್ ।**
**ಪುಪ್ಲುವೇ ಸ್ಯಂದನೇ ಚಾಪಂ ಛಿತ್ವಾ ತಂ ಚಾಗ್ರಹೀತ್ ಕ್ಷಣಾತ್ ॥ ೭೯ ॥**

**ಪದಚ್ಛೇದ** :- ಸಃ, ಶರಾನ್, ಕ್ಷಿಪತ್ತಃ, ತಸ್ಯ, ಪಾಂಚಾಲಸ್ಯ, ಅರ್ಜುನಃ, ದ್ರುತಮ್ । ಪುಪ್ಲವೇ, ಸ್ಯಂದನೇ, ಚಾಪಂ, ಛಿತ್ವಾ, ತಂ, ಚ, ಅಗ್ರಹೀತ್, ಕ್ಷಣಾತ್ ॥

**ಅರ್ಥ** :- **ಸಃ ಅರ್ಜುನಃ** = ಆ ಅರ್ಜುನನು, **ಶರಾನ್** = ಭಾಗಗಳನ್ನು, **ಕ್ಷಿಪತಃ** = ಎಸೆಯುತ್ತಿರುವ, **ತಸ್ಯ ಪಾಂಚಾಲಸ್ಯ** = ಆ ಪಾಂಚಾಲ ರಾಜನಾದ ದ್ರುಪದನ, **ಸ್ಯಂದನೇ** = ರಥದಲ್ಲಿ, **ದ್ರುತಮ್** = ಬೇಗನೇ, **ಪಪ್ಲುವೇ** = ಹಾರಿದನು, **ಚಾಪರಿ** = ಬಿಲ್ಲನ್ನು, **ಛಿತ್ವಾ** = ಮುರಿದು, **ಕ್ಷಣಾತ್** = ಕ್ಷಣದಲ್ಲಿಯೇ, **ತಂ** = ಆ ದ್ರುಪದನನ್ನು, **ಅಗ್ರಹೀತ್** = ಹಿಡಿದನು.

**ತಾತ್ಪರ್ಯ** :- ಭೀಮನ ಮಾತಿನಂತೆ ಅರ್ಜುನ ದ್ರುಪದನ ಬಾಣಗಳನ್ನೂ ಲೆಕ್ಕಿಸದೇ ಅವನ ರಥದೊಳಗೆ ಹಾರಿ ಅವನ ಬಿಲ್ಲುಗಳನ್ನು ಮುರಿದು ಕ್ಷಣದಲ್ಲಿಯೇ ಅವನನ್ನು ಸೆರೆ ಹಿಡಿದ.

**ಸಿಂಹೋ ಮೃಗಮಿವಾऽದಾಯ ಸ್ವರಥೇ ಚಾಭಿಪೇತಿವಾನ್ ।**
**ಅಥ ಪ್ರಕುಪಿತಂ ಸೈನ್ಯಂ ಫಲ್ಗುನಂ ಪರ್ಯವಾರಯತ್ ॥ ೮೦ ॥**

**ಪದಚ್ಛೇದ :– ಸಿಂಹಃ, ಮೃಗಮ್, ಇವ, ಆದಾಯ, ಸ್ವರಥಂ, ಚ, ಚಾಭಿಪೇದಿವಾನ್ । ಅಥ, ಪ್ರಕುಪಿತಂ, ಸೈನ್ಯಂ, ಫಲ್ಗುನಂ, ಪರ್ಯವಾರಯತ್ ॥**

**ಅರ್ಥ :-** **ಸಿಂಹಃ** = ಸಿಂಹವು, **ಮೃಗಮಿವ** = ಜಿಂಕೆಯನ್ನು ಎಂಬಂತೆ, **ಆದಾಯ** = ದ್ರುಪದನನ್ನು ಕರೆತಂದು, **ಸ್ವರಥಂ** = ತನ್ನ ರಥವನ್ನು, **ಅಭಿಪೇದಿವಾನ್** = ಹಾರಿದನು, **ಅಥ** = ಅನಂತರ, **ಪ್ರಕುಪಿತಂ** = ಅತ್ಯಂತ ಕೋಪಗೊಂಡ, **ಸೈನ್ಯಂ** = ಸೈನ್ಯವು, **ಫಲ್ಗುನಂ** = ಅರ್ಜುನನನ್ನು, **ಪರ್ಯವಾರಯತ್** = ಸುತ್ತುವರೆಯಿತು.

**ತಾತ್ಪರ್ಯ :-** ಸಿಂಹ ಜಿಂಕೆಯನ್ನು ತರುವಂತೆ ಅರ್ಜುನ ದ್ರುಪದನನ್ನು ಹಿಡಿದು ತನ್ನ ರಥವನ್ನೇರಿದ, ಇದರಿಂದ ಉದ್ವಿಗ್ನ ಕೈಗೊಂಡ ದ್ರುಪದನ ಸೈನ್ಯ ಅರ್ಜುನನ ರಥವನ್ನು ಸುತ್ತುವರೆಯಿತು.

**ಜಘಾನ ಭೀಮಸ್ತರಸಾ ತತ್ ಸೈನ್ಯಂ ಶರವೃಷ್ಟಿಭಿಃ ।**
**ಅಥ ಸತ್ಯಜಿದಭ್ಯಾಗಾತ್ ಪಾರ್ಥಂ ಮುಂಚನ್ ಶರಾನ್ ಬಹೂನ್ ॥೮೧॥**

**ಪದಚ್ಛೇದ :– ಜಘಾನ, ಭೀಮಃ, ತರಸಾ, ತತ, ಸೈನ್ಯಂ, ಶರವೃಷ್ಟಿಭಿಃ । ಅಥ, ಸತ್ಯಜಿತ್, ಅಭ್ಯಗಾತ್, ಪಾರ್ಥಂ, ಮುಂಚನ್, ಶರನ್, ಬಹೂನ್ ॥**

**ಅರ್ಥ :-** **ಭೀಮಃ** = ಭೀಮನು, **ತಿರಸಾ** = ಬೇಗನೆ **ತತ್ಸೈನ್ಯಂ** = ಆ ಪಾಂಚಾಲ ಸೈನ್ಯವನ್ನು **ಶಿರವೃಷ್ಟಿಭಿಃ** = ಬಾಣಗಳ ಮಳೆಯಿಂದ, **ಜಘಾನ** = ಕೊಂದನು, **ಅಥ** = ಅನಂತರ, **ಸತ್ಯಜಿತ್** = ಸತ್ಯಜಿತ್ ಎಂಬುವನು, **ಬಹೂನ್** = ಬಹಳ, **ಶರಾನ್** = ಬಾಣಗಳನ್ನು, **ಪಾರ್ಥಂ** = ಅರ್ಜುನನನ್ನು, **ಅಭಿಗಾತ್** = ಎದುರಾದನು.

**ತಾತ್ಪರ್ಯ :-** ಭೀಮ ಆ ಎಲ್ಲ ಸೈನ್ಯವನ್ನು ಬಾಣಗಳ ಮಳೆಯಿಂದ ಬೇಗನೇ ಸಂಹರಿಸಿದ. ಆಗ ಸತ್ಯಜಿತ್ ಭೀಮನನ್ನು ಎದುರಿಸದೇ ಅರ್ಜುನನ ಮುಂದೆ ಬಂದ.

**ತಮರ್ಜುನಃ ಕ್ಷಣೇನೈವ ಚಕ್ರೇ ವಿರಥಕಾರ್ಮುಕಮ್ ।**
**ಘ್ನಂತಂ ಭೀಮಂ ಪುನಃ ಸೈನ್ಯಮರ್ಜುನಃ ಪ್ರಾಹ ಮಾ ಭವಾನ್ ॥ ೮೨ ॥**

ಪದಚ್ಛೇದ :– ತಂ, ಅರ್ಜುನಃ, ಕ್ಷಣೇನ, ಏವ, ಚಕ್ರೇ, ವಿರಥ ಕಾರ್ಮುಕಮ್ ।
ಘ್ನಂತಂ, ಭೀಮಂ, ಪುನಃ, ಸೈನ್ಯಂ, ಅರ್ಜುನಃ, ಪ್ರಾಹ, ಮಾ, ಭವಾನ್ ॥

**ಅರ್ಥ** :- **ಅರ್ಜುನಃ** = ಅರ್ಜುನನು, **ತಂ** = ಆ ಸತ್ಯಜಿತ್‌ನನ್ನು, **ಕ್ಷಣೇನೈವ** = ಕ್ಷಣದಲ್ಲಿಯೇ, **ವಿರಥಃ ಕಾರ್ಮುಕಮ್** = ರಥವಿಲ್ಲದವನನ್ನಾಗಿ, ಬಾಣವಿಲ್ಲದವನನ್ನಾಗಿ, **ಚಕ್ರೇ** = ಮಾಡಿದನು, **ಸೈನ್ಯಂ** = ಸೈನ್ಯವನ್ನು, **ಘ್ನಂತಂ** = ಸಂಹರಿಸುತ್ತಿರುವ, **ಭೀಮಂ** = ಭೀಮನನ್ನು ಕುರಿತು, **ಪ್ರಾಹ** = ಹೇಳಿದನು.

**ತಾತ್ಪರ್ಯ** :- ಅರ್ಜುನ ಅವನನ್ನು ಕ್ಷಣದಲ್ಲಿ ವಿರಥನನ್ನಾಗಿ ಮಾಡಿದ. ಇತ್ತ ಭೀಮ ದ್ರುಪದನ ಸೈನ್ಯವನ್ನು ನಾಶಮಾಡುತ್ತಿರುವುದನ್ನು ನೋಡಿ ಅರ್ಜುನನು ವನು– ದ್ರುಪದನ ಸೈನ್ಯವನ್ನು ಸಂಪೂರ್ಣ ನಾಶ ಮಾಡಬೇಡ.

**ಸೇನಾಮರ್ಹತಿ ರಾಜ್ಞೋಽಸ್ಯ ವೀರ ಹಂತುಮಶೇಷತಃ ।**
**ಸಂಬಂಧಯೋಗ್ಯಸ್ತಾತಸ್ಯ ಸಖಾಽಯಂ ನಃ ಸುಧಾರ್ಮಿಕಃ ॥ ೮೩ ॥**

ಪದಚ್ಛೇದ :– ಸೇನಾಂ, ಅರ್ಹತಿ, ರಾಜ್ಞೋಃ, ಅಸ್ಯ, ವೀರ, ಹಂತುಂ, ಅಶೇಷತಃ ।
ಸಂಬಂಧ ಯೋಗ್ಯಾ, ಸ್ಯಾತ್, ಅಸ್ತ, ಸಖಾಯಂ, ನಃ, ಸುಧಾರ್ಮಿಕಃ ॥

**ಅರ್ಥ** :- **ವೀರಃ** = ವೀರನಾದ ಭೀಮನೇ, **ಅಸ್ಯ ರಾಜ್ಞಃ** = ಈ ದ್ರುಪದ ರಾಜನ, **ಸೇನಾಂ** = ಸೇನೆಯನ್ನು **ಅಶೇಷತಃ** = ಸಂಪೂರ್ಣವಾಗಿ, **ಹಂತುಂ** = ನಾಶಮಾಡಲು, **ಭವಾನ್** = ನೀನು, **ಮಾ ಅರ್ಹತಿ** = ಯೋಗ್ಯವಲ್ಲ, **ಸುಧಾರ್ಮಿಕಃ** = ಒಳ್ಳೆ ಧಾರ್ಮಿಕನಾದವನು, **ನಃ** = ನಮ್ಮ, **ತಾತಸ್ಯ** = ತಂದೆಯ, **ಸಖಾಯಂ** = ಸ್ನೇಹಿತನೂ ಕೂಡ, (**ಅತಃ** = ಆದ್ದರಿಂದ), **ಸಂಬಂಧ ಯೋಗ್ಯಃ** = ವಿವಾಹ ಸಂಬಂಧಕ್ಕೂ ಯೋಗ್ಯನು.

**ತಾತ್ಪರ್ಯ** :- ಆ ರಾಜನ ಸೈನ್ಯವನ್ನು ಪೂರ್ತಿಯಾಗಿ ಸಂಹರಿಸುವುದು ಬೇಡ. ಅವನು ಧಾರ್ಮಿಕ. ನಮ್ಮ ತಂದೆಯ ಸ್ನೇಹಿತನೂ ಕೂಡ. ಅಷ್ಟೇ ಅಲ್ಲದೇ ನಮಗೆ ಮುಂದೆ ವಿವಾಹ ಸಂಬಂಧಕ್ಕೆ ಯೋಗ್ಯ.

**ನೇಷ್ಯಾಮ ಏನಮೇವಾತೋ ಗುರೋರ್ವಚನಗೌರವಾತ್ ।**
**ಸ್ನೇಹಪಾಶಂ ತತಶ್ಚಕ್ರೇ ಬೀಭತ್ಸು ದ್ರುಪದೋಽಧಿಕಮ್ ॥ ೮೪ ॥**

**ಪದಚ್ಛೇದ :– ನೇಷ್ಯಾಮಃ, ಏನಂ, ಏವ, ಅತಃ, ಗುರೋಃ, ವಚನ, ಸೌರವಾತ್ । ಸ್ನೇಹಪಾಶಂ, ತತಃ, ಚಕ್ರೇ, ಭೀಭತ್ಸೌ, ದ್ರುಪದಃ, ಅಧಿಕಮ್ ॥**

**ಅರ್ಥ :- ಅತಃ** = ಆದ್ದರಿಂದ, **ಗುರೋಃ** = ಗುರುಗಳಾದ, ದ್ರೋಣಾಚಾರ್ಯರ, **ವಚನ ಗೌರವಾತ್** = ಮಾತಿನ ಗೌರವದಿಂದ, **ಏನಮೇವ** = ಈ ದ್ರುಪದನನ್ನು ಮಾತ್ರ, **ನೇಷ್ಯಾಮಃ** = ಕರೆದೊಯ್ಯೋಣ, **ತತಃ** = ಆದ್ದರಿಂದ, **ದ್ರುಪದಃ** = ದ್ರುಪದ ರಾಜನು, **ಭೀಭತ್ಸೌ** = ಅರ್ಜುನನಲ್ಲಿ, **ಅಧಿಕಮ್** = ಹೆಚ್ಚಾದ, **ಸ್ನೇಹಪಾಶಂ** = ಸ್ನೇಹಾಭಿಮಾನವನ್ನು, **ಚಕ್ರೇ** = ಮಾಡಿದನು.

**ತಾತ್ಪರ್ಯ :-** ಆದ್ದರಿಂದ ನಾವು ಗುರುಗಳ ಮಾತಿನಲ್ಲಿ ಗೌರವಭಾವದಿಂದ ದ್ರುಪದನನ್ನು ಮಾತ್ರ ಹಿಡಿದು ಒಯ್ಯೋಣ ಎಂದು ಭೀಮನಲ್ಲಿ ಹೇಳಿದ. ಅಂದಿನಿಂದ ದ್ರುಪದ ಅರ್ಜುನನಲ್ಲಿ ಅಧಿಕವಾಗಿ ಸ್ನೇಹವನ್ನಿಟ್ಟುಕೊಂಡ. ಹೀಗೆ ಅರ್ಜುನನಲ್ಲಿ ದ್ರುಪದನಿಗೆ ಹೆಚ್ಚು ಪ್ರೀತಿ ಬೆಳೆದು ಅವನಿಗಾಗಿ ದ್ರೌಪದಿಗೆ ಜನ್ಮ ನೀಡಬೇಕು ಎಂಬ ದೂರಾಲೋಚನೆಯಿಂದ ಭೀಮ, ದ್ರುಪದನ ಸೈನ್ಯವನ್ನು ನಿರ್ದಾಕ್ಷಿಣ್ಯದಿಂದ ಕೊಲ್ಲಲು ಮುಂದಾದ. ಆ ಮೂಲಕ ಸೂರ್ಯನ ವರ ತನ್ನನ್ನು ಏನೂ ಮಾಡಲಾರದು ಎಂದು ತೋರಿಸಿದ. ಮನುಷ್ಯನಾಗಿ ಹುಟ್ಟಿದರೂ ಅವನಿಗೆ ಮೂಲರೂಪದ ಶಕ್ತಿ ಜ್ಞಾನಾದಿಗಳೇ ಇರುತ್ತವೆ.

**ತತಃ ಸೇನಾಂ ವಿಹಾಯೈವ ಭೀಮೋ ಬೀಭತ್ಸುಮನ್ವಯಾತ್ ।**
**ಮುಕ್ತಾ ಕಥಂಚಿದ್ ಭೀಮಾಸ್ಯಾತ್ ಸಾ ಸೇನಾ ದುದ್ರುವೇ ಭಯಾತ್ ॥ ೮೫ ॥**

ಪದಚ್ಛೇದ :– ತತಃ, ಸೇನಾಂ, ವಿಹಾಯ ಏವ, ಭೀಮಃ, ಭೀಭತ್ಸುಂ, ಅನ್ವಗಾತ್ । ಮುಕ್ತಾಃ, ಕಥಂ ಚಿತ್, ಭೀಮಾಸ್ಯಾತ್, ಸಾ, ಸೇನಾ, ದುದ್ರುವೇ, ಭಯಾತ್ ॥

**ಅರ್ಥ :- ತತಃ** = ಅನಂತರ, **ಭೀಮಃ** = ಭೀಮನು, **ಸೇನಾಂ** = ದ್ರುಪದನ ಸೈನ್ಯವನ್ನು, **ವಿಹಾಯ** = ಬಿಟ್ಟು, **ಭೀಭತ್ಸುಮ್** - ಅರ್ಜುನನನ್ನು, **ಅನ್ವಗಾತ್** = ಅನುಸರಿಸಿದನು, **ಸೇನಾ** = ಸೇನೆಯು, **ಕಥಂಚಿತ್ ಭೀಮಾಸ್ಯಾತ್** = ಭೀಮನ ಬಾಯಿಂದ, **ಮುಕ್ತ್ವಾ** = ಬಿಡುಗಡೆಗೊಂಡಿದ್ದಾಗಿ, **ಭಯಾತ್** = ಭಯದಿಂದ, **ದುದ್ರುವೇ** = ಪಲಾಯನ ಮಾಡಿತು.

**ತಾತ್ಪರ್ಯ** :- ಹೀಗೆ ಹೇಳಿದಾಗ ಭೀಮ ಆ ದ್ರುಪದನ ಸೈನ್ಯವನ್ನು ಬಿಟ್ಟು ಅರ್ಜುನನನ್ನು ಹಿಂಬಾಲಿಸಿದ. ಹೀಗೆ ಭೀಮನಿಂದ ಹೇಗೋ ತಪ್ಪಿಸಿಕೊಂಡ ಸೈನ್ಯವು ಪಲಾಯನ ಮಾಡಿತು.

**ದ್ರುಪದಂ ಸ್ಥಾಪಯಾಮಾಸಾಥಾರ್ಜುನೋ ದ್ರೋಣಸನ್ನಿಧೌ ।**
**ಪಪ್ರಚ್ಛೈನಂ ತದಾ ದ್ರೋಣಸಖ್ಯಮಸ್ತ್ಯುತ ನೇತಿ ಹ ॥ ೮೬ ॥**

**ಪದಚ್ಛೇದ** :- ದ್ರುಪದಂ,, ಸ್ಥಾಪಯಾಮಾಸ, ಅಥ, ಅರ್ಜುನಃ, ದ್ರೋಣ ಸನ್ನಿಧೌ । ಪಪ್ರಚ್ಛ, ಏನಂ, ತದಾ, ದ್ರೋಣಃ, ಸಖ್ಯಂ, ಅಸ್ತಿ, ಉತ, ನ, ಇತಿ, ವಾ ॥

**ಅರ್ಥ** :- **ಅಥ** = ಅನಂತರ, **ಅರ್ಜುನಃ** = ಅರ್ಜುನನು, **ದ್ರೋಣ ಸನ್ನಿಧೌ** = ದ್ರೋಣಾಚಾರ್ಯರ ಸಮೀಪದಲ್ಲಿ, **ದ್ರುಪದಂ** = ದ್ರುಪದ ರಾಜನನ್ನು, **ಸ್ಥಾಪಯಾಮಾಸ** = ನಿಲ್ಲಿಸಿದನು, **ತದಾ** = ಆಗ, **ದ್ರೋಣಃ** = ದ್ರೋಣಾಚಾರ್ಯರು, **ಏನಂ** = ಈ ದ್ರುಪದನನ್ನು, **ಸಖ್ಯಂ** = ನಮ್ಮಿಬ್ಬರ ಸ್ನೇಹವು, **ಅಸ್ತಿವಾ** = ಇದೆಯೋ, **ಉತ ನ** = ಅಥವಾ ಇಲ್ಲವೋ, **ಇತಿ** = ಎಂದು, **ಪಪ್ರಚ್ಛ** = ಕೇಳಿದರು.

**ತಾತ್ಪರ್ಯ** :- ಅರ್ಜುನ ಆ ದ್ರುಪದ ರಾಜನನ್ನು ದ್ರೋಣರ ಬಳಿ ತಂದು ನಿಲ್ಲಿಸಿದ, ಆಗ ದ್ರೋಣಾಚಾರ್ಯರು ಹೇ ದ್ರುಪದ ಈಗ ನಮ್ಮೊಳಗೆ ಸಖ್ಯವಿದೆಯೇ ಇಲ್ಲವೇ ಹೇಳು ಎಂದರು.

**ಅಸ್ತೀದಾನೀಮಿತಿ ಪ್ರಾಹ ದ್ರುಪದೋಽಂಗಿರಸಾಂ ವರಮ್ ।**
**ಅಥಾಽಹ ದ್ರುಪದಂ ದ್ರೋಣಃ ಸಖ್ಯಮಿಚ್ಛೇಽಕ್ಷಯಂ ತವ ॥ ೮೭ ॥**

**ಪದಚ್ಛೇದ** :- ಅಸ್ತಿ, ಇದಾನೀಂ, ಇತಿ, ಪ್ರಾಹ, ದ್ರುಪದಃ, ಅಂಗೀರಸಾಂ, ವರಮ್ । ಅಥ, ಆಹ, ದ್ರುಪದಂ, ದ್ರೋಣಃ, ಸಖ್ಯಂ, ಇಚ್ಛೇ, ಅಕ್ಷಯಂ, ತವ ॥

**ಅರ್ಥ** :- **ದ್ರುಪದಃ** = ದ್ರುಪದ ರಾಜನು, **ಇದಾನೀಂ** = ಈಗ, **ಅಸ್ತಿ** = ಇದೆ, **ಇತಿ** = ಎಂದು, **ಅಂಗೀರಸಾಂ** = ದ್ರೋಣರನ್ನು ಕುರಿತು, **ಪ್ರಾಹ** = ಹೇಳಿದನು, **ಅಥಃ** = ಅನಂತರ, **ದ್ರೋಣಃ** = ದ್ರೋಣಾಚಾರ್ಯರು, **ದ್ರುಪದಂ** = ದ್ರುಪದನನ್ನು ಕುರಿತು, **ತವಃ** = ನಿನ್ನ **ವರಮ್** = ಶ್ರೇಷ್ಠವಾದ, **ಅಕ್ಷಯಂ** = ನಾಶವಿಲ್ಲದ, **ಸಖ್ಯಂ** = ಸ್ನೇಹವನ್ನು, **ಇಚ್ಛೆ** = ಬಯಸುವೆ.

**ತಾತ್ಪರ್ಯ** :- ಆಗ ನಾಚಿಕೆಯಿಂದ ತಲೆ ತಗ್ಗಿಸಿದ ದ್ರುಪದನು ಈಗ ಇದೆ ಎಂದಾಗ ನಿನ್ನ ಶಾಶ್ವತವಾದ ಸ್ನೇಹವನ್ನೇ ನಾನು ಬಯಸುವೆನು. ನಿನ್ನ ರಾಜ್ಯ ಸಂಪತ್ತುಗಳನ್ನಲ್ಲ ಎಂದರು.

**ನಹ್ಯರಾಜ್ಞಾ ಭವೇತ್ ಸಖ್ಯಂ ತವೇತೀದಂ ಕೃತಂ ಮಯಾ ।**
**ನ ವಿಪ್ರಧರ್ಮೋ ಯದ್ ಯುದ್ಧಮತಸ್ತ್ವಂ ನ ಮಯಾ ಧೃತಃ ॥ ೮೮ ॥**

**ಪದಚ್ಛೇದ** :- ನ, ಹಿ, ಅರಾಜ್ಞಃ, ಭವೇತ್, ಸಖ್ಯಂ, ತವ, ಇತಿ, ಇದಂ, ಕೃತಂ, ಮಯಾ। ನ, ವಿಪ್ರಧರ್ಮಃ, ಯದಿ, ಯುದ್ಧಂ, ಅತಃ, ತ್ವಂ, ನ, ಮಯಾ, ಧೃತಃ ॥

**ಅರ್ಥ** :- **ಅರಾಜ್ಞಃ** = ರಾಜನಲ್ಲದವನೊಡನೆ, **ಸಖ್ಯಃ** = ಸ್ನೇಹವು, **ತವ** = ನಿನಗೆ, **ನಭವತಿ** = ಆಗುವುದಿಲ್ಲ, **ಇತಿ** = ಎಂದು, **ಇದಂ** = ಈ ಕಾರ್ಯವು, **ಮಯಾ** = ನನ್ನಿಂದ, **ಕೃತಂ** = ಮಾಡಲ್ಪಟ್ಟಿವೆ, **ಯತ್** = ಈ ಯಾವ, **ಯುದ್ಧಂ** = ಯುದ್ಧವು, **ನ ವಿಪ್ರಧರ್ಮಃ** = ಬ್ರಾಹ್ಮಣನ ಧರ್ಮವಲ್ಲ, **ಅತಃ** = ಆದ್ದರಿಂದ, **ತ್ವಂ** = ನೀನು, **ಮಯಾ** = ನನ್ನಿಂದ, **ನ ಧೃತಃ** = ನೇರವಾಗಿ ಹಿಡಿಯಲಿಲ್ಲ.

**ತಾತ್ಪರ್ಯ** :- ಹೇ ದ್ರುಪದ ನೀನು ಹಿಂದೆ ರಾಜನಲ್ಲದವನೊಡನೆ ನನ್ನ ಸಖ್ಯವಿಲ್ಲ ಎಂದು ನೀನು ಹೇಳಿದ್ದಿ. ಆದ್ದರಿಂದ ಈ ಕಾರ್ಯ ಮಾಡಿದೆ. ಅದನ್ನು ನಾನು ಬ್ರಾಹ್ಮಣನಾದ್ದರಿಂದ ನಾನೇ ನಿನ್ನನ್ನು ವಶಪಡಿಸಿಕೊಳ್ಳಲಿಲ್ಲ ಎಂದ.

**ಶಿಷ್ಯೈರೇತತ್ ಕಾರಿತಂ ಮೇ ತವ ಸಖ್ಯಮಭೀಪ್ಸತಾ ।**
**ಅತಃ ಸಖ್ಯಾರ್ಥಮೇವಾದ್ಯ ತ್ವದ್ರಾಜ್ಯಾರ್ಧೋ ಹೃತೋ ಮಯಾ ॥ ೮೯ ॥**

**ಪದಚ್ಛೇದ** :- ಶಿಷ್ಯೈಃ, ಏತತ್, ಕಾರಿತಂ, ಮೇ, ತವ, ಸಖ್ಯಂ, ಅಭೀಪ್ಸತಾ । ಅತಃ, ಸಖ್ಯಾರ್ಥಂ, ಏವ ಅದ್ಯ, ತ್ವದ್‌ರಾಜ್ಯಾರ್ಧಃ, ಹೃತಃ ಮಯಾ ॥

**ಅರ್ಥ** :- **ಶಿಷ್ಯೈಃ** = ಶಿಷ್ಯರಾದ ಪಾಂಡವರಿಂದ, **ಏತತ್** = ಈ ಕಾರ್ಯವನ್ನು, **ಕಾರಿತಂ** = ಮಾಡಿಸಿಕೊಂಡೆ, **ಮೇ** = ನನಗೆ, **ತವ** = ನಿನ್ನ, **ಸಖ್ಯಂ** = ಸ್ನೇಹವನ್ನು **ಅಭೀಪ್ಸತಾ** = ಬಯಸಿದವನಾಗಿ, **ಅತಃ** = ಆದ್ದರಿಂದ **ಸಖ್ಯಾರ್ಥಮೇವ** = ಸ್ನೇಹಕ್ಕಾಗಿಯೇ, **ಅದ್ಯ** = ಇಂದು, **ಮಯಾ** = ನನ್ನಿಂದ, **ತದ್ರಾಜ್ಞ್ಯಾರ್ಧಃ** = ನಿನ್ನ ರಾಜ್ಯದ ಒಂದು ಭಾಗವನ್ನು, **ಹೃತಃ** = ಅಪಹರಿಸಿದ್ದೇನೆ.

ತಾತ್ಪರ್ಯ :- ನಿನ್ನ ಸಖ್ಯವನ್ನು ಬಯಸಿಯೇ ನನ್ನ ಶಿಷ್ಯರಿಂದ ನಿನ್ನ ರಾಜ್ಯದ ಒಂದು ಭಾಗವನ್ನು ಅಪಹರಿಸಿದೆನೇ ಹೊರತು ನಿನ್ನ ರಾಜ್ಯದ ಮೇಲಿನ ಆಸೆಯಿಂದಲ್ಲ ಎಂದನು.

**ಗಂಗಾಯಾ ದಕ್ಷಿಣೇ ಕೂಲೇ ತ್ವಂ ರಾಜೈವೋತ್ತರೇ ತ್ವಹಮ್ ।**
**ನಹ್ಯರಾಜತ್ವ ಏಕಸ್ಯ ಸಖ್ಯಂ ಸ್ಯಾದಾವಯೋಃ ಸಖೇ ॥ ೯೦ ॥**

ಪದಚ್ಛೇದ :- ಗಂಗಾಯಾಃ, ದಕ್ಷಿಣೇ, ಕೂಲೇ, ತ್ವಂ, ರಾಜಾ ಏವ, ಉತ್ತರೇ, ತು, ಅಹಮ್ । ನ, ಹಿ, ಅರಾಜತ್ವೇ, ಏಕಸ್ಯ, ಸಖ್ಯಂ, ಆವಯೋಃ, ಸಖೆ ॥

ಅರ್ಥ :- **ಸಖೇ** = ಎಲೈ ಮಿತ್ರನೇ, **ತ್ವಂ** = ನೀನು, **ಗಂಗಾಯಾಃ** = ಗಂಗೆಯ, **ದಕ್ಷಿಣೆ ಕೂಲೇ** = ದಕ್ಷಿಣ ಪ್ರಾಂತ್ಯದಲ್ಲಿ, **ರಾಜೈವ** = ರಾಜನು, **ಉತ್ತರೇತು** = ಗಂಗೆಯ ಉತ್ತರ ಪ್ರಾಂತ್ಯದಲ್ಲಿ, **ಅಹಂ** = ನಾನು ರಾಜನು, **ಆವಯೋಃ** = ನಮ್ಮಿಬ್ಬರೊಳಗೆ **ಏಕಸ್ಯ** = ಒಬ್ಬನಿಗೆ, **ಅರಾಜತ್ವೆ** = ರಾಜನಲ್ಲದಿದ್ದರೆ, **ಸಖ್ಯಂ** = ಸ್ನೇಹವು, **ನ ಸ್ಯಾತ್** = ಆಗಲಾರದಷ್ಟೆ.

ತಾತ್ಪರ್ಯ :- ಆದ್ದರಿಂದ ಗಂಗೆಯ ದಕ್ಷಿಣ ತೀರದಲ್ಲಿ ನೀನೇ ರಾಜನಾಗು. ಉತ್ತರದಲ್ಲಿ ನಾನು ರಾಜನಾಗುವೆ. ಆಗ ಮಾತ್ರ ನಮ್ಮಿಬ್ಬರ ಸಖ್ಯ ಚಿರಕಾಲ ಉಳಿಯುವುದು. ಏಕೆಂದರೆ ನಮ್ಮಿಬ್ಬರಲ್ಲಿ ಒಬ್ಬರು ರಾಜನಲ್ಲದಿದ್ದರು ನಮ್ಮ ಸಖ್ಯ ಚಿರಕಾಲ ಉಳಿಯದು ತಾನೇ?

**ಇತ್ಯುಕ್ತ್ವೋನ್ಮುಚ್ಯ ತಂ ದ್ರೋಣೋ ರಾಜ್ಯಾರ್ಧಂ ಗೃಹ್ಯ ಚಾಮುತಃ ।**
**ಯಯೌ ಶಿಷ್ಯೈರ್ನಾಗಪುರಂ ನ್ಯವಸತ್ ಸುಖಮತ್ರ ಚ ॥ ೯೧ ॥**

ಪದಚ್ಛೇದ :- ಇತಿ, ಉಕ್ತ್ವಾ, ಉನ್ಮುಚ್ಯ, ತಂ, ದ್ರೋಣಃ, ರಾಜ್ಯಾರ್ಧಂ, ಗೃಹ್ಯ, ಚ, ಅಮುತಃ । ಯಯೌ, ಶಿಷ್ಯೇ, ನಾಗಪುರಂ, ನ್ಯವಸತ್, ಸುಖಂ, ಅತ್ರ, ಚ ॥

ಅರ್ಥ :- **ದ್ರೋಣಃ** = ದ್ರೋಣಾಚಾರ್ಯರು, **ಇತ್ಯುಕ್ತ್ವಾ** = ಈ ರೀತಿಯಾಗಿ ಹೇಳಿ, **ತಂ** = ದ್ರುಪದನನ್ನು, **ಉನ್ಮುಚ್ಯ** = ಬಿಟ್ಟು, **ಅಮುತಃ** = ಈ ದ್ರುಪದನಿಂದ, **ರಾಜ್ಯಾರ್ಧಂ** = ರಾಜ್ಯದ ಒಂದು ಭಾಗವನ್ನು, **ಗೃಹ್ಯ** = ಸ್ವೀಕರಿಸಿ, **ಶಿಷ್ಯೈಃ** = ಶಿಷ್ಯರಿಂದ ಕೂಡಿ, **ನಾಗಪುರಂ** = ಹಸ್ತಿನಾವತಿಯನ್ನು ಕುರಿತು, **ಯಯೌ** = ಹೋದರು, **ಅತ್ರ** = ಈ ಹಸ್ತಿನಾವತಿಯಲ್ಲಿ, **ಸುಖಂ** = ಸುಖವಾಗಿ, **ನ್ಯ ವಸತ್** = ವಾಸ ಮಾಡಿದರು.

ತಾತ್ಪರ್ಯ :- ಹೀಗೆ ದ್ರೋಣಾಚಾರ್ಯರು ಹೇಳಿ ಆ ದ್ರುಪದನನ್ನು - ಬಂಧಮುಕ್ತನನ್ನಾಗಿ ಮಾಡಿದರು. ನಂತರ ಅವನ ರಾಜ್ಯದ ಒಂದು ಭಾಗವನ್ನು ಸ್ವೀಕರಿಸಿ ಶಿಷ್ಯರೊಡನೆ ಹಸ್ತಿನಾವತಿಗೆ ಹೋಗಿ ಅಲ್ಲಿ ಸುಖವಾಗಿ ವಾಸ ಮಾಡಿದರು. ದ್ರೋಣರು ಬಯಸಿದ್ದರೆ ಗಂಗೆಯ ಉತ್ತರ ತೀರದಲ್ಲೇ ತಮ್ಮ ರಾಜ್ಯ ಆಳಬಹುದಿತ್ತು. ಆದರೆ ಅವರ ಹೆಸರಿನಲ್ಲಿ ದ್ರುಪದನೇ ರಾಜ್ಯವಾಳಿದನೆಂದು ಕಾಣುತ್ತದೆ.

ಬ್ರಾಹ್ಮಣ್ಯತ್ಯಾಗಭೀರುಃ ಸ ನ ಗೃಹ್ಣನ್ ಧನುರಪ್ಯಸೌ ।
ಧಾರ್ತರಾಷ್ಟ್ರೈಸ್ತು ಭೀಮಸ್ಯ ಭಯಾತ್ ಪಾದೌ ಪ್ರಣಮ್ಯ ಚ ॥ ೯೨ ॥

ಪದಚ್ಛೇದ :- ಬ್ರಾಹ್ಮಣ್ಯತ್ಯಾಗಭೀರುಃ, ಸನ್, ನ ಅಗೃಹ್ಣಾದ್, ಧನುಃ, ಅಪಿ, ಅಸೌ, ಧಾರ್ತರಾಷ್ಟ್ರೈಃ, ತು, ಭೀಮಸ್ಯ, ಭಯಾತ್, ಪಾದೌ, ಪ್ರಣಮ್ಯ ಚ ॥

ಶರಣಾರ್ಥಂ ಯಾಚಿತತ್ವಾತ್ ಸಪುತ್ರೋ ಯುಯುಧೇ ಪರೈಃ ।
ಏವಂ ಹರೀಚ್ಛಯೈವಾಸೌ ಕ್ಷಾತ್ರಂ ಧರ್ಮಮುಪೇಯಿವಾನ್ ॥ ೯೩ ॥

ಪದಚ್ಛೇದ :- ಶರಣಾರ್ಥಂ, ಯಾಚಿತತ್ವಾತ್, ಸುಪುತ್ರಃ, ಯುಯುಧೇ, ಪರೈಃ । ಏವಂ, ಹರೀಚ್ಛಯಾ, ಏವ, ಅಸೌ, ಕ್ಷಾತ್ರಂ, ಧರ್ಮಂ, ಉಪೇಯಿವಾನ್ ॥

ಅರ್ಥ :- ಅಸೌ = ಈ ದ್ರೋಣರು, ಬ್ರಾಹ್ಮಣ್ಯತ್ಯಾಗಭೀರುಃ ಸನ್ = ಬ್ರಾಹ್ಮಣ್ಯ ಪರಿತ್ಯಾಗದ ಭಯದಿಂದ, ಧನುರಪಿ = ಧನಸ್ಸನ್ನೂ ಕೂಡ, ನಾಗೃಹ್ಣನ್ = ಎತ್ತಿಕೊಳ್ಳಲಿಲ್ಲ, ಧಾರ್ತರಾಷ್ಟ್ರೈಸ್ತು = ಕೌರವರು, ಭೀಮಸ್ಯ = ಭೀಮನ, ಭಯಾತ್ = ಭಯದಿಂದ, ಪಾದೌ = ಪಾದದಲ್ಲಿ, ಪ್ರಣಮ್ಯ = ನಮಸ್ಕರಿಸಿ, ಶರಣಾರ್ಥಂ = ರಕ್ಷಣೆಗಾಗಿ, ಯಾಚಿತತ್ವಾತ್ = ಬೇಡಿದ್ದರಿಂದ, ಸುಪುತ್ರ = ಅಶ್ವತ್ಥಾಮರಿಂದ ಕೂಡಿದ ದ್ರೋಣಾಚಾರ್ಯರು, ಪರೈಃ = ಪಾಂಡವರೊಂದಿಗೆ, ಯುಯುಧೇ = ಯುದ್ಧ ಮಾಡಿದರು, ಏವಂ = ಈ ರೀತಿಯಾಗಿ ಹರೀಚ್ಛಯೈವ = ಹರಿ ಇಚ್ಛೆಯಿಂದಲೇ, ಅಸೌ = ದ್ರೋಣಾಚಾರ್ಯರು ಕ್ಷಾತ್ರಂ = ಕ್ಷತ್ರಿಯ ಧರ್ಮವನ್ನು, ಉಪೇಯಿವಾನ್ = ಕೈಗೊಂಡರು.

ತಾತ್ಪರ್ಯ :- ಧನುಸ್ಸನ್ನು ಹಿಡಿದರೆ ಬ್ರಾಹ್ಮಣ್ಯವನ್ನು ಬಿಟ್ಟಂತಾಗುವುದೆಂದು ದ್ರೋಣರು ಎಂದೂ ಸ್ವತಃ ಬಿಲ್ಲನ್ನೆತ್ತಲಿಲ್ಲ. ಕೊನೆಗೆ ಕೌರವರು ಭೀಮನ

ಭಯದಿಂದ ಕಾಲಿಗೆ ಬಿದ್ದು ರಕ್ಷಣೆಗಾಗಿ ಬೇಡಿದ್ದರಿಂದ ಹರಿ ಇಚ್ಛೆಯೂ ಹಾಗೆ ಇರುವುದನ್ನು ತಿಳಿದೇ ಅಶ್ವತ್ಥಾಮರಿಂದ ಕೂಡಿಕೊಂಡು ಕ್ಷಾತ್ರಧರ್ಮವನ್ನು ಸ್ವೀಕರಿಸಿ, ಯುದ್ಧವನ್ನು ಮಾಡಿದರು. ಹೀಗೆ ಶರಣಾಗತ ರಕ್ಷಕರಾಗಿಯೇ ದ್ರೋಣರು ಯುದ್ಧ ಮಾಡಿದರು. ಪರಮಾತ್ಮನ ಇಚ್ಛೆಯೂ ಹಾಗೆ ಇತ್ತು. ಆದ್ದರಿಂದ ಅವರು ಪಾಂಡವರೊಡನೆ ಯುದ್ಧ ಮಾಡಿದರೂ ಅವರಿಗೆ ಪಾಪ ಬರಲಿಲ್ಲ.

**ದ್ರುಪದಸ್ತು ದಿವಾರಾತ್ರಂ ತಪ್ಯಮಾನಃ ಪರಾಭವಾತ್ ।**
**ಭೀಮಾರ್ಜುನಬಲಂ ದೃಷ್ಟ್ವಾ ಚೇಚ್ಛನ್ ಪಾಂಡವಸಂಶ್ರಯಮ್ ॥ ೯೪ ॥**

**ಪದಚ್ಛೇದ :- ದ್ರುಪದಃ ತು, ದಿವಾರಾತ್ರಂ, ತಪ್ಯಮಾನಃ, ಪರಾಭವಾತ್ ।**
**ಭೀಮಾರ್ಜುನಬಲಂ, ದೃಷ್ಟ್ವಾ, ಚ, ಐಚ್ಛತ್, ಪಾಂಡವ ಸಂಶ್ರಯಮ್ ॥**

**ಸಂಬಂಧೀತ್ಯರ್ಜುನವಚಶ್ಚಿಕೀರ್ಷುಃ ಸತ್ಯಮೇವ ಚ ।**
**ಮಾರ್ದವಂ ಚಾರ್ಜುನೇ ದೃಷ್ಟ್ವಾ ಸುತಾಮೈಚ್ಛತ್ ತದರ್ಥತಃ ॥ ೯೫ ॥**

**ಪದಚ್ಛೇದ :- ಸಂಬಂಧೀ, ಇತಿ, ಅರ್ಜುನವಚಃ, ಚಿಕೀರ್ಷುಃ, ಸತ್ಯಂ ಏವ, ಚ ।**
**ಮಾರ್ದವಂ, ಚ, ಅರ್ಜುನೇ, ದೃಷ್ಟ್ವಾ, ಸುತಾಂ, ಐಚ್ಛತ್, ತದರ್ಥತಃ ॥**

**ಅರ್ಥ :- ದ್ರುಪದಸ್ತು** = ದ್ರುಪದನಾದರೂ, **ದಿವಾರಾತ್ರಂ** = ಹಗಲೂ ರಾತ್ರೀ, **ಪರಾಭವಾತ್** = ದ್ರೋಣರಿಂದಾದ ಪರಾಜಯದಿಂದ, **ತಪ್ಯಮಾನಃ** = ಪರಿತಪಿಸುವವನಾಗಿ, **ಭೀಮಾರ್ಜುನ ಬಲಂ** = ಭೀಮ ಮತ್ತು ಅರ್ಜುನರ ಬಲವನ್ನು, **ದೃಷ್ಟ್ವಾ** = ನೋಡಿ, **ಪಾಂಡವ ಸಂಶ್ರಯಮ್** = ಪಾಂಡವರ ಆಶ್ರಯವನ್ನು, **ಐಚ್ಛತ್** = ಇಚ್ಛಿಸಿದನು, **ಸಂಬಂಧೀ** = ಸಂಬಂಧಕ್ಕೆ ಯೋಗ್ಯನೆಂದು, **ಅರ್ಜುನ ವಚಃ** = ಅರ್ಜುನನ ಮಾತನ್ನು, **ಸತ್ಯಮ್** = ಸತ್ಯವನ್ನು, **ಚಿಕೀರ್ಷುಃ ಏವ** = ಮಾಡಲು ಇಚ್ಛೆಯಿಂದಲೇ, **ಅರ್ಜುನೇ** = ಅರ್ಜುನನಲ್ಲಿ, **ಮಾರ್ದವಂ** = ಮೃದುಭಾವವನ್ನು, **ದೃಷ್ಟ್ವಾ** = ನೋಡಿ **ತದರ್ಥತಃ** = ಆ ಅರ್ಜುನನಿಗೋಸ್ಕರ, **ಸುತಾಂ** = ಮಗಳನ್ನು, **ಐಚ್ಛತ್** = ಇಚ್ಛಿಸಿದನು.

ತಾತ್ಪರ್ಯ :- ದ್ರೋಣರಿಂದ ಪರಾಭವಗೊಂಡ ದ್ರುಪದ ದ್ರೋಣರಿಂದ ಉಂಟಾದ ಅವಮಾನದಿಂದ ಹಗಲಿರುಳು ಪರಿತಪಿಸುತ್ತಿದ್ದ. ಆದರೂ ಈ

ಸಂದರ್ಭದಲ್ಲಿ ಭೀಮಾರ್ಜುನರ ಬಲವನ್ನು ಕಂಡು ಅವರ ಆಶ್ರಯ ಪಡೆಯಲು ಬಯಸಿದ್ದ. ಹಾಗೆ ತಾನು ಸಂಬಂಧಕ್ಕೆ ಯೋಗ್ಯನೆಂಬ ಅರ್ಜುನನ ಮೃದುಸ್ವಭಾವದ ಮಾತಿಗೆ ಮೆಚ್ಚಿ ಅದನ್ನು ನಿಜ ಮಾಡಲು ಅವನಿಗಾಗಿ ಒಬ್ಬ ಉತ್ತಮಳಾದ ಮಗಳನ್ನು ಪಡೆಯ ಬಯಸಿದ.

**ಪುತ್ರಂ ಚ ದ್ರೋಣಹಂತಾರಮಿಚ್ಛನ್ ವಿಪ್ರವರೌ ಯಯೌ ।**
**ಯಾಜೋಪಯಾಜಾವಾನೀಯಾಥಾರ್ಬುದೇನ ಗವಾಂ ನೃಪಃ ॥ ೯೬ ॥**

**ಪದಚ್ಛೇದ :- ಪುತ್ರಂ, ಚ, ದ್ರೋಣ ಹಂತಾರ, ಇಚ್ಛನ್, ವಿಪ್ರವರೌ, ಯಯೌ । ಯಾಜೋಪಯಾಜೌ, ಆನೀಯ, ಅಥ, ಅರ್ಬುದೇನ, ಗವಾಂ, ನೃಪಃ ॥**

**ಚಕಾರೇಷ್ಟಿಂ ತು ತದ್ಭಾರ್ಯಾ ದ್ವಿಜಾಭ್ಯಾಮತ್ರ ಚಾಽಹುತಾ ।**
**ದ್ರುಪದಾತ್ ಸುತಲಬ್ಧ್ಯರ್ಥಂ ಸಾಽಹಂಕಾರಾದ್ ವ್ಯಳಂಬಯತ್ ॥೯೭॥**

**ಪದಚ್ಛೇದ :- ಚಕಾರ, ಇಷ್ಟಿಂ ಚ, ತದ್ಭಾರ್ಯಾ, ದ್ವಿಜಾಭ್ಯಾಂ, ಅತ್ರ, ಚ, ಆಹ ತಾ, । ದ್ರುಪದಾತ್, ಸುತ ಲಬ್ಧ್ಯರ್ಥಂ, ಸಾಹಂ ಕಾರಾದ್, ವ್ಯಲಂಬಯತ್ ॥**

**ಅರ್ಥ** :- **ನೃಪ** = ದ್ರುಪದ ರಾಜನು, **ದ್ರೋಣ ಹಂತಾರಂ** = ದ್ರೋಣನನ್ನು ಸಂಹರಿಸುವ, **ಪುತ್ರಂ** = ಮಗನನ್ನು, **ಇಚ್ಛನ್** = ಬಯಸಿದವನಾಗಿ, **ವಿಪ್ರವರೌ** = ಬ್ರಾಹ್ಮಣ ಶ್ರೇಷ್ಠರಾದ, **ಯಾಜೋಪಯಾಜೌ** = ಯಾಜೋಪಯಾಜರನ್ನು, **ಆನೀಯ** = ಕರೆಸಿ **ಅಬುದೇನ** = ಹತ್ತುಕೋಟಿ, **ಗವಾಂ** = ಗೋದಾನವನ್ನು, **ಚ** = ಮತ್ತು, **ಇಷ್ಟಿಂ** = ಯಾಗವನ್ನು, **ಚಕಾರ** = ಮಾಡಿದನು, **ದ್ರುಪದಾತ್** = ದ್ರುಪದ ರಾಜನಿಂದ **ಸುತ ಲಬ್ಧ್ಯರ್ಥಂ** = ಪುತ್ರ ಸಂತಾನಕ್ಕೋಸ್ಕರ, **ದ್ವಿಜಾಭ್ಯಾಂ** = ಯಾಜ ಉಪಯಾಜರಿಂದ, **ಅತ್ರ** = ಈ ಯಾಗ ಮಂಟಪಕ್ಕೆ, **ಆಹೂತಾಃ** = ಕರೆಸಲ್ಪಟ್ಟ, **ತದ್ಭಾರ್ಯಾ** = ಆ ದ್ರುಪದ ರಾಣಿಯು **ಸಾಹಂಕಾರಾದ್** = ಅಂಹಂಕಾರದಿಂದ, **ವ್ಯಲಂಬಯತ್** = ತಡ ಮಾಡಿದಳು.

**ತಾತ್ಪರ್ಯ** :- ದ್ರೋಣರ ಮೇಲಿನ ದ್ವೇಷದಿಂದ ದ್ರೋಣರನ್ನು ಕೊಲ್ಲಬಲ್ಲ ಒಬ್ಬ ಮಗನನ್ನು, ಪಡೆಯ ಬಯಸಿ ಹತ್ತು ಕೋಟಿ ಗೋದಾನವನ್ನು ಮಾಡಿ ಯಾಜ ಉಪಯಾಜರೆಂಬ ಬ್ರಾಹ್ಮಣರನ್ನು ಕರೆಸಿ ಪುತ್ರೇಷ್ಟಿಯನ್ನು

ಮಾಡಿದ. ಆಗ ಬ್ರಾಹ್ಮಣರು ರಾಣಿಗೆ ದ್ರುಪದನಿಂದ ಮಗುವಾಗುವಂತೆ ಆಶೀರ್ವದಿಸಲು ಬರಹೇಳಿದಾಗ ಅಹಂಕಾರದಿಂದ ವಿಲಂಬ ಮಾಡಿದಳು.

ವಿ. ಯಜ್ಞದ ಹವಿಃ ಶೇಷವನ್ನು ಉಣಲು ಬರಹೇಳಿದರೇ. ತಾನು ಗರ್ಭಧರಿಸಿದರೆ ಮಾತ್ರ ದ್ರುಪದನಿಗೆ ಮಕ್ಕಳು. ಈ ಯಾಗದಿಂದಲ್ಲ ಎಂಬ ಅಹಂಕಾರ. ಹಾಗೆ ಬ್ರಾಹ್ಮಣರನ್ನು ತಾನು ಹತ್ತು ಕೋಟಿ ಗೋವುಗಳಿಂದ ಕೊಂಡುಕೊಂಡೆವು ಎಂಬ ಅಹಂಕಾರದಿಂದ ವಿಲಂಬ ಮಾಡಿದಳು.

**ಕಿಮೇತಯೇತ್ಯವಜ್ಞಾಯ ತಾವುಭೌ ವಿಪ್ರಸತ್ತಮೌ ।**
**ಅಜುಹ್ವತಾಂ ತತ್ ಪುತ್ರಾರ್ಥಂ ಪತ್ನ್ಯಾಃ ಪ್ರಾಶ್ಯಂ ಹವಿಸ್ತದಾ ॥ ೯೮ ॥**

ಪದಚ್ಛೇದ :- ಕಿಂ, ಏತಯಾ, ಇತಿ ಅವಜ್ಞಾಯ, ತೌ, ಉಭೌ, ವಿಪ್ರ ಸತ್ತಮೌ । ಅಜುಹ್ವತಾಂ, ತತ್‌ಪುತ್ರಾರ್ಥಂ, ಪತ್ನ್ಯಾ, ಪ್ರಾಶ್ಯಂ, ಹವಿಃ, ತದಾ ॥

**ಅರ್ಥ** :- ವಿಪ್ರಸತ್ತಮೌ = ಬ್ರಾಹ್ಮಣ ಶ್ರೇಷ್ಠರಾದ **ತೌ** = ಆ ಯಾಜ **ಉಪಯಾಜರು** = ಏತಯಾ ಕಿಂ = ಈ ರಾಣಿಯಿಂದೇನು, ಇತಿ = ಎಂದು, **ಅವಜ್ಞಾಯ** = ತಿರಸ್ಕರಿಸಿ, ತತ್ಪುತ್ರಾರ್ಥಂ = ಆ ದ್ರುಪದನ ಸಂತಾನಕ್ಕಾಗಿ, ಪತ್ನ್ಯಾ = ಹೆಂಡತಿಯಿಂದ, ಪ್ರಾಶ್ಯಂ = ಕುಡಿಯಲು ಯೋಗ್ಯವಾದ, ಹವಿಃ = ಹವಿಸ್ಸನ್ನು ತದಾ = ಆಗ **ಅಜುಹ್ವತಾಂ** = ಅಗ್ನಿಯಲ್ಲಿ ಹೋಮಿಸಿದರು.

**ತಾತ್ಪರ್ಯ** :- ಆಗ ಕೋಪದಿಂದ ಕೂಡಿದ ಆ ಯಾಜ ಉಪಯಾಜರು ಈ ರಾಣಿಯಿಂದ ಆಗಬೇಕಾದ್ದೇನು ಇಲ್ಲ ಎಂದು ದ್ರುಪದನ ಪತ್ನಿ ಸೇವಿಸಬೇಕಾದ ಆ ಹವಿಃಶೇಷವನ್ನೂ ಕೂಡ ಅಗ್ನಿಯಲ್ಲಿಯೇ ಮಂತ್ರ ಪೂರ್ವಕವಾಗಿ ಹೋಮಿಸಿದರು.

**ಹುತೇ ಹವಿಷಿ ಮಂತ್ರಾಭ್ಯಾಂ ವೈಷ್ಣವಾಭ್ಯಾಂ ತದೈವ ಹಿ ।**
**ದೀಪ್ತಾಂಗಾರನಿಭೋ ವಹ್ನಿಃ ಕುಂಡಮಧ್ಯಾತ್ ಸಮುತ್ಥಿತಃ ॥ ೯೯ ॥**

ಪದಚ್ಛೇದ :- ಹುತೇ, ಹವಿಷಿ, ಮಂತ್ರಾಭ್ಯಾಂ, ವೈಷ್ಣವಾಭ್ಯಾಂ, ತದಾ ಏವ, ಹಿ । ದೀಪ್ತಾಂಗಾರನಿ ಭಃ, ವಹ್ನಿಃ, ಕುಂಡಮಧ್ಯಾತ್, ಸಮುತ್ಥಿತಃ ॥

**ಕಿರೀಟೀ ಕುಂಡಲೀ ದೀಪ್ತೋ ಹೇಮಮಾಲೀ ವರಾಸಿಮಾನ್ ।**
**ರಥೇನಾಽದಿತ್ಯವರ್ಣೇನ ನದನ್ ದ್ರುಪದಮಾದ್ರವತ್ ॥ ೧೦೦ ॥**

ಪದಚ್ಛೇದ :- **ಕಿರೀಟೀ, ಕುಂಡಲೀ, ದೀಪ್ತಃ, ಹೇಮಮಾಲೀ, ವರಾಸಿಮಾನ್ । ರಥೇನ, ಆದಿತ್ಯವರ್ಣೇನ, ನದನ್, ದ್ರುಪದಂ, ಆದ್ರವತ್ ॥**

**ಅರ್ಥ** :- **ವೈಷ್ಣವಾಭ್ಯಾಂ** = ವೈಷ್ಣವ, ಸಂಬಂಧಿಯಾದ, **ಮಂತ್ರಾಭ್ಯಾಂ** = ಮಂತ್ರಗಳಿಂದ, **ಹವಿಷೀ** = ಹವಿಸ್ಸು, **ಹುತೇ ಸತಿ** = ಹೋಮಿಸಲು, **ತದೈವ** = ಕ್ಷಣದಲ್ಲಿಯೇ, **ದೀಪ್ತ** = ಪ್ರಕಾಶ ಮಾನವಾದ, **ಅಂಗಾರನಿಭಃ** = ಕೆಂಡದಂತಹ ಮೈಬಣ್ಣದ, **ವಹ್ನಿಃ** = ಅಗ್ನಿಯು, **ಕುಂಡಮಧ್ಯಾತ್** = ಅಗ್ನಿಕುಂಡದ ಮಧ್ಯದಿಂದ, **ಸಮುತ್ಥಿತಃ** = ಎದ್ದವನಾಗಿ, **ಕಿರೀಟ** = ಕಿರೀಟ, **ಕುಂಡಲಿ** = ಕುಂಡಲಗಳುಳ್ಳ, **ದೀಪ್ತಃ** = ಪ್ರಕಾಶ ಮಾನವಾದ, **ಹೇಮಮಾಲಿ** = ಬಂಗಾರದ ಹಾರಗಳುಳ್ಳ, **ವರಾಸಿಮಾನ್** = ಶ್ರೇಷ್ಠವಾದ, ಖಡ್ಗವನ್ನು ಹಿಡಿದು, **ಆದಿತ್ಯವರ್ಣೇನ** = ಸೂರ್ಯನ ಬಣ್ಣದಂತೆ ಪ್ರಕಾಶಿಸುವ, **ರಥೇನ** = ರಥದಿಂದ, **ನದನ್** = ಸಿಂಹನಾದವನ್ನು ಮಾಡುತ್ತಾ, **ದ್ರುಪದಂ** = ದ್ರುಪದರಾಜನನ್ನು, **ಆದ್ರವತ್** = ಸಮೀಪಿಸಿದನು.

**ತಾತ್ಪರ್ಯ** :- ಯಾಜ ಉಪಯಾಜರು ಹೋಮಿಸಿದ ಆ ವೈಷ್ಣವ ಮಂತ್ರಗಳ ಪ್ರಭಾವದಿಂದ ಆ ಹೋಮ ಕುಂಡದಿಂದಲೇ ಉರಿಯುವ ಕೆಂಡದಂತ ಮೈಬಣ್ಣದ ಕಿರೀಟ ಕುಂಡಲಗಳನ್ನು ಚಿನ್ನದ ಹಾರವನ್ನೂ ಧರಿಸಿ ಖಡ್ಗವನ್ನು ಹಿಡಿದ ಅಗ್ನಿದೇವ ಎದ್ದು ಬಂದು ಸಿಂಹನಾದ ಮಾಡುತ್ತಾ ದ್ರುಪದನನ್ನು ಸಮೀಪಿಸಿದ.

**ಧೃಷ್ಟತ್ವಾದ್ ದ್ಯೋತನತ್ವಾಚ್ಚ ಧೃಷ್ಟದ್ಯುಮ್ನ ಇತೀರಿತಃ ।**
**ಮುನಿಭಿರ್ದ್ರುಪದೇನಾಪಿ ಸರ್ವವೇದಾರ್ಥತತ್ತ್ವವಿತ್ ॥ ೧೦೧ ॥**

ಪದಚ್ಛೇದ :- **ಧೃಷ್ಟತ್ವಾತ್, ದ್ಯೋತನತ್ವಾತ್ ಚ, ದೃಷ್ಟದ್ಯುಮ್ನ, ಇತಿ, ಈರಿತಃ । ಮುನಿಭಿಃ, ದ್ರುಪದೇನ, ಅಪಿ, ಸರ್ವವೇದಾರ್ಥ, ತತ್ವವಿತ್ತಾ ॥**

**ಅರ್ಥ** :- **ಧೃಷ್ಟತ್ವಾತ್** = ಶತ್ರುದಮನದಲ್ಲಿ ದಿಟ್ಟತನ ವಿರುವುದರಿಂದ, **ದ್ಯೋತನತ್ವಾಚ** = ಕಾಂತಿಯುಕ್ತನಾಗಿದ್ದರಿಂದಲೂ **ಧೃಷ್ಟದ್ಯುಮ್ನ** =

ಧೃಷ್ಟದ್ಯುಮ್ನನೆಂದು, ಮುನಿಭಿಃ = ಮುನಿಗಳಿಂದ ದ್ರುಪದೇನಾಪಿ = ದ್ರುಪದನಿಂದಲೂ, ಈರಿತಃ = ಕರೆಸಿಕೊಂಡ, (ಸಃ = ಅವನು), ಸರ್ವ ವೇದಾರ್ಥ = ಎಲ್ಲಾ ವೇದಾರ್ಥಗಳ, ತತ್ವವಿತ್ = ತತ್ವವನ್ನು ತಿಳಿದಿದ್ದ.

ತಾತ್ಪರ್ಯ :- ಹೀಗೆ ಅಗ್ನಿಕುಂಡದಿಂದ ಬಂದ ಈ ಅಗ್ನಿದೇವನನ್ನು ನೋಡಿ ಧೃಷ್ಟ, ದಿಟ್ಟತನವಿರುವವನಾದ್ದರಿಂದ ಹಾಗೂ ಉತ್ತಮವಾದ ಕಾಂತಿಯುಳ್ಳವನಾದ್ದರಿಂದ ದ್ಯುಮ್ನ ಎಂದು ದೃಷ್ಟದ್ಯುಮ್ನ ಎಂದು ದ್ರುಪದನು ಹಾಗೆ ಋಷಿಗಳೂ ಕರೆದರು. ಅವನು ಸರ್ವವೇದಾರ್ಥ ವೇತ್ತನಾಗಿದ್ದ.

ಅನ್ವೇನಂ ಭಾರತೀ ಸಾಕ್ಷಾದ್ ವೇದಿಮಧ್ಯಾತ್ ಸಮುತ್ಥಿತಾ ।
ಪ್ರಾಣೋ ಹಿ ಭರತೋ ನಾಮ ಸರ್ವಸ್ಯ ಭರಣಾಚ್ಛ್ರುತಃ ॥ ೧೦೨ ॥

ಪದಚ್ಛೇದ :- ಅನು, ಏನಂ, ಭಾರತೀ, ಸಾಕ್ಷಾತ್, ವೇದಿಮಧ್ಯಾತ್, ಸಮುತ್ಥಿತಾ । ಪ್ರಾಣಃ ಹಿ, ಭರತೋ, ನಾಮ, ಸರ್ವಸ್ಯ, ಭರಣಾತ್, ಶ್ರುತಃ ॥

ಅರ್ಥ :- ಏನಂ = ಈ ದೃಷ್ಟದ್ಯುಮ್ನನನ್ನು, ಅನು = ಅನುಸರಿಸಿ, ಸಾಕ್ಷಾತ್ = ಸಾಕ್ಷಾತ್, ಭಾರತೀ = ಭಾರತೀ ದೇವಿಯು, ವೇದಿಮಧ್ಯಾತ್ = ಯಜ್ಞ ವೇದಿಕೆಯ ಮಧ್ಯದಿಂದ, ಸಮುತ್ಥಿತಾಃ = ಎದ್ದು ಬಂದಳು. ಸರ್ವಸ್ಯ = ಎಲ್ಲರ ಭರಣಾತ್ = ರಕ್ಷಕರಾದ್ದರಿಂದ, ಪ್ರಾಣಃ = ವಾಯುದೇವರು ಭರತೋ ನಾಮ = ಭರತನೆಂಬ ಹೆಸರಿನಿಂದ, ಶ್ರುತಃ = ಪ್ರಸಿದ್ಧರಾಗಿದ್ದಾರೆ.

ತದ್ಭಾರ್ಯಾ ಭಾರತೀ ನಾಮ ವೇದರೂಪಾ ಸರಸ್ವತೀ ।
ಶಂರೂಪಮಾಶ್ರಿತಾ ವಾಯುಂ ಶ್ರೀರಿತ್ಯೇವ ಚ ಕೀರ್ತಿತಾ ॥ ೧೦೩ ॥

ಪದಚ್ಛೇದ :- ತಸ್ಯ, ಭಾರ್ಯಾ, ಭಾರತೀ, ನಾಮ, ವೇದರೂಪಾ, ಸರಸ್ವತೀ । ಶಂ ರೂಪಂ, ಆಶ್ರಿತಾ, ವಾಯುಂ, ಶ್ರೀಃ, ಇತಿ, ಏವ, ಚ, ಕೀರ್ತಿತಾ ॥

ಅರ್ಥ :- ತದ್ಭಾರ್ಯಾ = ಅಂತಹ ಭರಣನಾಮರಾದ ವಾಯುದೇವರ ಪತ್ನಿಯಾದ, ಭಾರತೀನಾಮ = ಭಾರತೀ ಎಂಬ ಹೆಸರಿನ ವೇದರೂಪಾ = ವೇದಾಭಿಮಾನಿಯಾದ, ಸರಸ್ವತೀ = ಸರಸ್ವತಿಯು, ಚ = ಮತ್ತು, ಶಂರೂಪಂ = ಸುಖರೂಪನಾದ, ವಾಯುಂ = ವಾಯುವನ್ನು, ಆಶ್ರಿತಾ = ಆಶ್ರಯಿಸಿದ,

ಆ ಭಾರತೀದೇವಿಯೇ **ಶ್ರೀರಿತ್ಯೇವ** = ಶ್ರೀ ಎಂಬ ಹೆಸರಿನಿಂದಲೂ **ಕೀರ್ತಿತಾ** = ಕರೆಸಿಕೊಂಡಿದ್ದಾರೆ.

**ತಾತ್ಪರ್ಯ :-** ಹೀಗೆ ಧೃಷ್ಟದ್ಯುಮ್ನ ಬಂದ ನಂತರ ಸಾಕ್ಷಾತ್ ಭಾರತೀದೇವಿಯೇ ದ್ರೌಪದಿಯಾಗಿ ಯಜ್ಞ ವೇದಿಕೆಯಿಂದ ಎದ್ದು ಬಂದಳು. ಎಲ್ಲರ ಉಸಿರಾಟಗಳನ್ನು ಮಾಡಿಸುವ ಮೂಲಕ ರಕ್ಷಿಸುವುದರಿಂದ ಭರತ ಎಂಬ ಹೆಸರುಳ್ಳವರು ವಾಯುದೇವರು. ಅವರ ಪತ್ನಿಯಾದ್ದರಿಂದ ಇವಳಿಗೆ ಭಾರತೀ ಎಂದು ಹೆಸರು. ಮತ್ತೆ ಅವಳೇ ವೇದಾಭಿಮಾನಿನಿಯಾದ್ದರಿಂದ ಸರಸ್ವತೀ ಶಬ್ದವಾಚ್ಯಳು. ಹಾಗೆ ಸುಖರೂಪನಾದ ವಾಯುವನ್ನು ಆಶ್ರಯಿಸಿದ್ದರಿಂದ ಶ್ರೀ ಎಂದೂ ಅವಳೇ ಕರೆಸಿಕೊಂಡಿದ್ದಾಳೆ.

**ಆವೇಶಯುಕ್ತಾ ಶಚ್ಯಾಶ್ಚ ಶ್ಯಾಮಲಾಯಾಸ್ತಥೋಷಸಃ ।**
**ತಾಶ್ಚೇಂದ್ರಧರ್ಮನಾಸತ್ಯಸಂಶ್ರಯಾಚ್ಛ್ರಿಯ ಈರಿತಾಃ ॥ ೧೦೪ ॥**

**ಪದಚ್ಛೇದ :- ಆವೇಶಯುಕ್ತಾ, ಶಚ್ಯಾಃ ಚ, ಶ್ಯಾಮಲಾಯಾಃ, ತಥಾ, ಉಷಸಃ । ತಾಃ, ಚ, ಇಂದ್ರಧರ್ಮನಾಸತ್ಯಸಂಶ್ರಯಾತ್, ಶ್ರಿಯಃ, ಈರಿತಾಃ ।**

**ಅರ್ಥ :- ತಥಾ** = ಹಾಗೆ, **ಶಚ್ಯಾಃ** = ಶಚೀ ದೇವಿಯ **ಶ್ಯಾಮಲಾಯಾಃ** = ಶಾಮಲಾದೇವಿಯ, **ಉಷಸ** = ಉಷಾದೇವಿಯ **ಆವೇಶಯುಕ್ತಾಃ** ಆವೇಶದಿಂದ ಕೂಡಿದ್ದಳು. (**ಅತಃ** = ಆದ್ದರಿಂದ) **ತಾಶ್ಚ** = ದ್ರೌಪದಿಯಲ್ಲಿ ಆವಿಷ್ಕರಾದ, ಶಚೀ, ಶ್ಯಾಮಲೆ, ಉಷೆಯರು, **ಇಂದ್ರಧರ್ಮ ನಾಸತ್ಯ ಸಂಶ್ರಯಾತ್** = ಕ್ರಮವಾಗಿ ಇಂದ್ರ ಯಮಧರ್ಮ ನಾಸತ್ಯ ಎಂಬ ಅಶ್ವಿನೀ ದೇವತೆಗಳನ್ನು ಆಶ್ರಯಿಸಿದ್ದರಿಂದ **ಶ್ರಿಯಃ** = ಶ್ರೀ ಎಂದು **ಈರಿತಾಃ** = ಕರೆಸಿಕೊಂಡಿದ್ದಾರೆ.

**ತಾತ್ಪರ್ಯ :-** ಅಗ್ನಿಯಿಂದ ಉದ್ಭವಿಸಿದ ಈ ದ್ರೌಪದಿಯಲ್ಲಿ ಶಚಿ-ಶ್ಯಾಮಲೆ ಉಷೆಯ ಆವೇಶ ಇತ್ತು. ಆದ್ದರಿಂದ ಶಚೀ, ಶ್ಯಾಮಲೆ, ಉಷೆಯರೂ ಕೂಡ ಇಂದ್ರ ಧರ್ಮ ಅಶ್ವಿನೀ ದೇವತೆಗಳನ್ನು ಆಶ್ರಯಿಸಿದ್ದರಿಂದ ಶ್ರೀ ಎನಿಸಿದ್ದಾರೆ. ಶಚಿ ಶ್ಯಾಮಲೆ ಮುಂತಾದವರು ಅವರ ಪತಿಗಳು ಬೇರೆ ಬೇರೆ ಮನ್ವಂತರಗಳಲ್ಲಿ ಇಂದ್ರ ಪದವಿಯನ್ನಾಳಿದಾಗ ತಾವು ರಾಣಿಯರಾಗಿ ಸ್ವರ್ಗ ಶ್ರೀ ಎನಿಸಿದ್ದಾರೆ. ಭಾರತೀ ದೇವಿಯು ಮಾತ್ರ ಸುಖರೂಪರಾದ ವಾಯು ದೇವರನ್ನು ಆಶ್ರಯಿಸಿದ್ದರಿಂದ ಶ್ರೀ ಎನಿಸಿದ್ದಾಳೆ.

ಸಾ ಕೃಷ್ಣಾ ನಾಮತಶ್ಚಾಽಽಸೀದುತ್‌ಕೃಷ್ಟತ್ವಾದ್ಧಿ ಯೋಷಿತಾಮ್ ।
ಕೃಷ್ಣಾ ಸಾ ವರ್ಣತಶ್ಚಾಽಽಸೀದುತ್‌ಕೃಷ್ಟಾನಂದಿನೀ ಚ ಸಾ ॥ ೧೦೫ ॥

ಪದಚ್ಛೇದ :- ಸಾ, ಕೃಷ್ಣಾ, ನಾಮತಃ, ಚ, ಆಸೀತ್, ಉತ್ಕೃಷ್ಟತ್ವಾತ್, ಹಿ, ಯೋಷಿತಾಮ್ । ಕೃಷ್ಣಾ, ಸಾ, ವರ್ಣತಃ, ಚ, ಆಸೀತ್, ಉತ್ಕೃಷ್ಟಾ, ನಂದಿನೀ, ಚ, ಸಾ ॥

ಅರ್ಥ :- ಸಾಃ = ಆ ದ್ರೌಪದಿಯು, ಯೋಷಿತಾಮ್ = ಸ್ತ್ರೀಯರಲ್ಲಿ, ಉತ್ಕೃಷ್ಟತ್ವಾತ್ = ಶ್ರೇಷ್ಠಳಾದ್ದರಿಂದ, ಕೃಷ್ಣಾ ನಾಮ ತಃ = ಕೃಷ್ಣಾ ಎಂಬ ಹೆಸರಿನವಳು ಆಸೀತ್ = ಆಗಿದ್ದಳು, ಚ = ಮತ್ತು, ವರ್ಣತಃ = ಬಣ್ಣದಿಂದಲೂ, ಸಾ = ಆ ದ್ರೌಪದಿಯು ಕೃಷ್ಣಾ = ಕೃಷ್ಣಾ ಎಂಬ ಹೆಸರಿನವಳು, ಚ = ಮತ್ತು, ಸಾ = ಆ ದ್ರೌಪದಿಯು ಉತ್ಕೃಷ್ಟಾ = ಉತ್‌ಕೃಷ್ಟವಾದ, ಆನಂದಿನೀ = ಆನಂದ ಉಳ್ಳವಳಾದ್ದರಿಂದ, ಕೃಷ್ಣಾ = ಕೃಷ್ಣಾ ಎಂಬ ಹೆಸರಿನವಳು, ಆಸೀತ್ = ಆಗಿದ್ದಳು.

ತಾತ್ಪರ್ಯ :- ಆ ದ್ರೌಪದೀ ದೇವಿಯು ಸಕಲಸ್ತ್ರೀಯರಲ್ಲಿ ಉತ್ಕೃಷ್ಟಳಾದ್ದ- ರಿಂದ ಕೃಷ್ಣಾ ಎಂಬ ಹೆಸರು ಇತ್ತು. ಹಾಗೆ ವರ್ಣದಿಂದಲೂ ಕೃಷ್ಣೆ ಆಗಿದ್ದಳು. ಉತ್ಕೃಷ್ಟವಾದ ಆನಂದ ಉಳ್ಳವಳಾಗಿದ್ದರಿಂದಲೂ ಕೃಷ್ಣಾ ಎಂದೆನಿಸಿದಳು.

ಉತ್ = ಉಪಸರ್ಗ, ಯುಕ್ತವಾದ ಕೃಷ್ಣಾ ಎಂಬಲ್ಲಿ ಟಕಾರಣೆ ಣಕಾರ ಬಂದರೆ ಕೃಷ್ಣಾ ಎಂದಾಗುವುದು. ''ಸರ್ವ ಯೋಷಿದ್ವರಾ ಕೃಷ್ಣಾ'' ಎನ್ನುತ್ತದೆ ಮಹಾಭಾರತ. ಹಾಗೆ ಣಶ್ಚ ನಿರ್ವೃತಿವಾಚಕಃ ಎಂಬಂತೆ ಣಕಾರಕ್ಕೆ ಆನಂದ ಎಂದು ಅರ್ಥ. ಉತ್‌ಕೃಷ್ = ಉತ್‌ಕೃಷ್ಟವಾದ ಣ = ಆನಂದ ಉಳ್ಳವಳು ಎಂದು ಅರ್ಥ. ಉಳಿದ ದೇವಿಯರು, ಕೃಷ್ಣವರ್ಣ ಪ್ರಯುಕ್ತ ಕೃಷ್ಣೆಯರು.

ಉತ್ಪತ್ತಿತಶ್ಚ ಸರ್ವಜ್ಞಾ ಸರ್ವಾಭರಣಭೂಷಿತಾ ।
ಸಂಪ್ರಾಪ್ತಯೌವನೈವಾಽಽಸೀದಜರಾ ಲೋಕಸುಂದರೀ ॥ ೧೦೬ ॥

ಪದಚ್ಛೇದ :- ಉತ್ಪತ್ತಿಃ, ಚ, ಸರ್ವಜ್ಞಾ, ಸರ್ವಾಭರಣಭೂಷಿತಾ । ಸಂಪ್ರಾಪ್ತಯಾವನಾ ಏವ, ಆಸೀತ್, ಅಜರಾ, ಲೋಕಸುಂದರೀ ॥

**ಅರ್ಥ :- ಉತ್ಪತ್ತಿತಃ** = ಹುಟ್ಟಿನಿಂದಲೂ, **ಸರ್ವಜ್ಞಾ** = ಸರ್ವಜ್ಞಳು, **ಸರ್ವಾಭರಣಭೂಷಿತಾ** = ಸರ್ವಾಲಂಕಾರ ಭೂಷಿತಳು, **ಸಂಪ್ರಾಪ್ತ ಯೌವನಾ** = ಪ್ರಾಪ್ತವಾದ ಯೌವನವುಳ್ಳವಳು, **ಅಜರಾ** = ಮುಪ್ಪಿಲ್ಲದವಳು, **ಲೋಕ ಸುಂದರೀ** = ಲೋಕ ಸುಂದರಿಯು, **ಆಸೀತ್** = ಆಗಿದ್ದಳು.

**ತಾತ್ಪರ್ಯ :-** ದ್ರೌಪದೀ ದೇವಿ ಹುಟ್ಟಿನಿಂದಲೂ ಸರ್ವಜ್ಞಳೂ, ಸರ್ವಾಭರಣ ಭೂಷಿತಳು. ಮುಪ್ಪಿಲ್ಲದವಳೂ, ಯೌವನ ಭರಿತಳೂ, ಲೋಕ ಸುಂದರಿಯೂ ಆಗಿದ್ದಳು.

**ಉಮಾಂಶಯುಕ್ತಾಽತಿತರಾಂ ಸರ್ವಲಕ್ಷಣಸಂಯುತಾ ॥ ೧೦೭ ॥**

**ಪದಚ್ಛೇದ :- ಉಮಾಂಶಯುಕ್ತಾ, ನಿತರಾಂ, ಸರ್ವಲಕ್ಷಣ, ಸಂಯುತಾ ।**

**ಪೂರ್ವಂ ಹ್ಯುಮಾ ಚ ದೇವ್ಯಸ್ತಾಃ ಕದಾಚಿದ್ ಭರ್ತೃಭಿರ್ಯುತಾಃ ।**
**ವಿಲಾಸಂ ದರ್ಶಯಾಮಾಸುರ್ಬ್ರಹ್ಮಣಃ ಪಶ್ಯತೋಽಧಿಕಮ್ ॥ ೧೦೮ ॥**

**ಪದಚ್ಛೇದ :- ಪೂರ್ವಂ, ಹ, ಉಮಾ, ಚ, ದೇವ್ಯಃ, ತಾಃ, ಕದಾಚಿತ್, ಭೃರ್ತೃಭಿಃ, ಯುತಾಃ । ವಿಲಾಸಂ, ದರ್ಶಯಾಮಾಸುಃ ಬ್ರಹ್ಮಣಃ, ಪಶ್ಯ, ವೇತ್ತಿ, ಅಧಿಕಮ್ ॥**

**ಅರ್ಥ :- ಉಮಾಂಶ ಯುಕ್ತಾ** = ಪಾರ್ವತೀ ದೇವಿಯ ಅಂಶದಿಂದ, ಯುಕ್ತಳಾಗಿ **ಸರ್ವಲಕ್ಷಣ ಸಂಯುತಾ** = ಸಕಲ ಸಲ್ಲಕ್ಷಣಗಳಿಂದ ಯುಕ್ತಳಾಗಿದ್ದಳು. **ಪೂರ್ವಂ** = ಹಿಂದೆ, **ಉಮಾ** = ಪಾರ್ವತೀ ದೇವಿಯು, **ಚ** = ಮತ್ತು, **ತಾಃ ದೇವ್ಯ** = ಆ ಶಚೀ ಮುಂತಾದ ದೇವಿಯರು, **ಕದಾಚಿತ್** = ಒಮ್ಮೆ **ಭತೃಭಿರ್ಯುತಾಃ** = ತಮ್ಮ ತಮ್ಮ ಗಂಡಂದಿರಿಂದ ಕೂಡಿದವರಾಗಿ, **ಬ್ರಹ್ಮಣಃ** = ಚತುರ್ಮುಖ ಬ್ರಹ್ಮದೇವರು, **ಪಶ್ಯತಃ** = ನೋಡುವಾಗಲೇ, **ಅಧಿಕಂ** = ಹೆಚ್ಚಾಗಿ, **ವಿಲಾಸಂ** = ಹಾವ ಭಾವಗಳನ್ನು **ದರ್ಶಯಾಮಾಸುಃ** = ತೋರಿಸಿದರು.

**ತಾತ್ಪರ್ಯ :-** ಆ ದ್ರೌಪದೀ ದೇವಿಯಲ್ಲಿ ಪಾರ್ವತಿಯ ಒಂದು ಅಂಶವೂ ಇತ್ತು. ಹೀಗೆ ದ್ರೌಪದಿಯು ಬಲು ಚೆನ್ನಾಗಿ ಸಕಲ ಲಕ್ಷಣಗಳಿಂದಲೂ ಕೂಡಿದ್ದಳು. ಹಿಂದೆ ಪಾರ್ವತೀ ಶಚೀ ಮುಂತಾದ ದೇವಿಯರು ಬ್ರಹ್ಮದೇವರು ನೋಡುತ್ತಿದ್ದಂತೆಯೇ ತಮ್ಮ ತಮ್ಮ ಪತಿಗಳೊಡನೆ ಮಾನವರಂತೆ ವಿಲಾಸವನ್ನು

ಪ್ರದರ್ಶಿಸಿದರು. ಈ ಮೂಲಕ ಹಿರಿಯರ ಮುಂದೆ ಚಿಕ್ಕವರು ಎಷ್ಟು ಎಚ್ಚರಿಕೆಯಿಂದ ಇರಬೇಕು ಎಂಬುದನ್ನು ತಿಳಿಸಿದರು.

**ಶಶಾಪ ತಾಸ್ತದಾ ಬ್ರಹ್ಮಾ ಮಾನುಷೀಂ ಯೋನಿಮಾಪ್ಸ್ಯಥ ।**
**ತತ್ರಾನ್ಯಗಾಶ್ಚ ಭವತೇತ್ಯೇವಂ ಶಪ್ತಾಃ ಸುರಾಂಗನಾಃ ॥ ೧೦೯ ॥**

ಪದಚ್ಛೇದ :- ಶಶಾಪ, ತಾಃ, ತದಾ, ಬ್ರಹ್ಮಾ ಮಾನುಷೀಂ, ಯೋನಿಮ್, ಆಪ್ಸ್ಯಥ । ತತ್ರ, ಅನ್ಯಗಾ, ಚ, ಭವತ, ಇತಿ, ಏವಂ, ಶಪ್ತಾಃ, ಸುರಾಂಗನಾಃ ॥

**ವಿಚಾರ್ಯ ಭಾರತೀಮೇತ್ಯ ಸರ್ವಮಸ್ಯೈ ನಿವೇದ್ಯ ಚ ।**
**ಸಹಸ್ರವತ್ಸರಂ ಚೈನಾಂ ಶುಶ್ರೂಷಿತ್ವಾ ಬಭಾಷಿರೇ ॥ ೧೧೦ ॥**

ಪದಚ್ಛೇದ :- ವಿಚಾರ್ಯ, ಭಾರತೀ, ಏತ್ಯ, ಸರ್ವಂ, ಅಸ್ಮೈ, ನಿವೇದ್ಯ, ಚ । ಸಹಸ್ರವತ್ಸರಂ, ಚ, ಏನಾಂ, ಶುಶ್ರೂಷಿತ್ವಾ, ಬಭಾಷಿಪೀರೇ ॥

ಅರ್ಥ :- ತದಾ = ಆ ಸಮಯದಲ್ಲಿ, ಬ್ರಹ್ಮಾ = ಬ್ರಹ್ಮನ, ಮಾನುಷೀಂ ಯೋನಿಂ = ಮನುಷ್ಯ ಜನ್ಮವನ್ನು, ಆಪ್ಸ್ಯಥ = ಹೊಂದಿರಿ, ತತ್ರ = ಮನುಷ್ಯ ಜನ್ಮದಲ್ಲಿ, ಅನ್ಯಗಾಶ್ಚ ಭವತ = ಪರ ಪುರುಷ ಸ್ಪರ್ಶಿಗಳಾಗಿರಿ, ಇತಿ = ಎಂದು, ಶಪ್ತಾಃ = ಶಾಪಗ್ರಸ್ತರಾದ, ಸುರಾಂಗನಾಃ = ಆ ದೇವತೆಗಳ ಪತ್ನಿಯರು, ಏನಾಂ = ಈ ಭಾರತೀ ದೇವಿಯನ್ನು, ಸಹಸ್ರ ವತ್ಸರಂ = ಸಾವಿರ ವರ್ಷಗಳ ಕಾಲ, ಶುಶ್ರೂಷಿತ್ವಾ = ಸೇವೆ ಮಾಡಿ, ಬಭಾಷಿರೇ = ಹೇಳಿದರು.

ತಾತ್ಪರ್ಯ :- ಆಗ ಕೋಪಗೊಂಡ ಬ್ರಹ್ಮದೇವರು ಶಚಿ ಶ್ಯಾಮಲೆ ಮುಂತಾದವರಿಗೆ ನೀವು ಮನುಷ್ಯ ಜನ್ಮವನ್ನು ಹೊಂದಿಲ್ಲ. ಪರಪುರುಷರ ಸ್ಪರ್ಶಿಗಳಾಗಿರಿ ಎಂದು ಶಪಿಸಿದರು. ಹೇಗೆ ಶಪ್ತರಾದ ಆ ದೇವತಾ ಸ್ತ್ರೀಯರು ವಿಚಾರ ಮಾಡಿ ಭಾರತೀ ದೇವಿಯ ಬಳಿಗೆ ಬಂದು ಎಲ್ಲವನ್ನೂ ಹೇಳಿಕೊಂಡು ಸಾವಿರ ವರ್ಷಗಳ ಕಾಲ ಸೇವೆ ಮಾಡಿ ಅವಳಲ್ಲಿ ಪ್ರಾರ್ಥನೆ ಮಾಡಿದರು.

**ದೇವಿ ನೋ ಮಾನುಷಂ ಪ್ರಾಪ್ಯಮನ್ಯಗಾತ್ವಂ ಚ ಸರ್ವಥಾ ।**
**ತಥಾಽಪಿ ಮಾರುತಾದನ್ಯಂ ನ ಸ್ಪೃಶೇಮ ಕಥಂಚನ ॥ ೧೧೧ ॥**

ಪದಚ್ಛೇದ :- ದೇವಿ, ಯಃ, ಮಾನುಷಂ, ಪ್ರಾಪ್ಯಮ್, ಅನ್ಯಗಾತ್ವಂ, ಚ, ಸರ್ವಥಾ ತತ್ರ, ಅಪಿ, ಮಾರುತಾತ್, ಅನ್ಯಂ, ನ, ಸ್ಪೃಶೇಮ, ತಥಂಚನ ॥

**ಅರ್ಥ** :- **ದೇವಿ** = ದೇವಿಯೇ, **ನಃ** = ನಮಗೆ **ಮಾನುಷಂ** = ಮನುಷ್ಯ ಜನ್ಮವನ್ನು, **ಪ್ರಾಪ್ಯ** = ಹೊಂದಿ, **ಚ** = ಮತ್ತು, **ಅನ್ಯಗಾತ್ವಂ** = ಪರಪುರುಷರ ಸ್ಪರ್ಶವು, **ಸರ್ವಥಾ** = ಖಂಡಿತವಾಗಿ, (ಆಗಲಿದೆ) **ತತ್ರಾಽಪಿ** = ಆ ಮನುಷ್ಯ ಜನ್ಮದಲ್ಲಿಯೂ, **ಮಾರುತಾದನ್ಯಂ** = ವಾಯುದೇವರನ್ನು ಬಿಟ್ಟು ಬೇರೆಯಾರನ್ನೂ, **ಕಥಂಚನ** = ಯಾವ ರೀತಿಯಿಂದಲೂ, **ನ ಸ್ಪಶೇಮ** = ಸ್ಪರ್ಶಿಸಲಾರೆವು.

**ತಾತ್ಪರ್ಯ** :- ದೇವಿ ಬ್ರಹ್ಮದೇವರ ಶಾಪದಂತೆ ನಮಗೆ ಮನುಷ್ಯ ಜನ್ಮ ಬರಲಿದೆ. ಪರಪುರುಷರ ಸ್ಪರ್ಶವೂ ಉಂಟಾಗಲಿದೆ. ಆದ್ದರಿಂದ ವಾಯುದೇವರನ್ನು ಬಿಟ್ಟು ನಾವು ಬೇರೆಯವರನ್ನು ಯಾವ ರೀತಿಯಿಂದಲೂ ಸ್ಪರ್ಶಿಸಲಾರೆವು ಎಂದು ಪ್ರಾರ್ಥಿಸಿಕೊಂಡರು. ಪರ ಪುರುಷರ ಸ್ಪರ್ಶವಾಗಲಿ ಎಂದೇ ಬ್ರಹ್ಮದೇವರ ಶಾಪವಿತ್ತೇ ಹೊರತು ಪರಪುರುಷರ ಸಂಗವಾಗಲಿ ಎಂದಲ್ಲ. ಆದರೆ, ಮನುಷ್ಯರ ಸ್ಪರ್ಶವೂ ದೇವತೆಗಳಿಗೆ ಒಂದು ಮಹಾದೋಷ. ಆದ್ದರಿಂದ ವಾಯುದೇವರಿಗೆ ಇವರೆಲ್ಲ ಸೊಸೆಯ ಸ್ಥಾನದಲ್ಲಿರುವವರು. ಆದ್ದರಿಂದ ವಾಯುದೇವರು ತಮ್ಮನ್ನು ಸ್ಪರ್ಶಿಸಿದರೂ ತಂದೆ ಮಗಳನ್ನು ಸ್ಪರ್ಶಿಸುವಂತೆ ದೋಷವಾಗುವುದಿಲ್ಲ ಎಂಬ ಅಭಿಪ್ರಾಯದಿಂದ ವಾಯುವನ್ನು ಹೊರತು ಅನ್ಯರನ್ನು ಸ್ಪರ್ಶಿಸಲಾರೆವು ಎನ್ನುತ್ತಿದ್ದಾರೆ.

**ಬ್ರಹ್ಮಣೈವ ಚ ಶಪ್ತಾಃ ಸ್ಮ ಪೂರ್ವಂ ಚಾನ್ಯತ್ರ ಲೀಲಯಾ ।**
**ಏಕದೇಹತ್ವಮಾಪ್ಯೈನಂ ಯದಾ ವಂಚಯಿತುಂ ಗತಾಃ ॥ ೧೧೨ ॥**

ಪದಚ್ಛೇದ :- ಬ್ರಹ್ಮಣಾ, ಏವ, ಚ, ಶಪ್ತಾಃ, ಸ್ಮಃ, ಪೂರ್ವಂ, ಚ, ಅನ್ಯತ್ರ, ಲೀಲಯಾ । ಏಕದೇಹತ್ವಂ, ಆಪ್ಯ, ಏನಂ, ಯದಾ, ವಂಚಯಿತುಂ, ಗತಾಃ ॥

**ಅರ್ಥ** :- **ಪೂರ್ವಂ** = ಹಿಂದೆ, **ಅನ್ಯತ್ರ** = ಬೇರೆ ಸಮಯದಲ್ಲಿ, **ಲೀಲಯಾ** = ಕ್ರೀಡೆಯಿಂದ, **ಏಕದೇಹತ್ವಂ** = ಒಂದೇ ದೇಹವನು, **ಆಪ್ಯ** = ಹೊಂದಿ, **ಏನಂ** = ಈ ಬ್ರಹ್ಮದೇವರನ್ನು **ವಂಚಯಿತುಂ** = ವಂಚಿಸಲು, **ಯದಾ** = ಯಾವಾಗ, **ಗತಾಃ** = ಹೋದೆವೋ, **ತದಾ** = ಆಗ, **ಬ್ರಹ್ಮಣೈವ** = ಬ್ರಹ್ಮದೇವರಿಂದಲೇ, **ಶಪ್ತಾ ಸ್ಮಃ** = ಶಪ್ತರಾದೆವು.

ತಾತ್ಪರ್ಯ :- ಹಾಗೆ ಹಿಂದೆ ನಾವು ಇನ್ನೊಂದು ಸಂದರ್ಭದಲ್ಲಿ ವಿನೋದದಿಂದ ಒಂದೇ ದೇಹದಲ್ಲಿ ನಾವು ನಾಲ್ವರೂ ಇದ್ದು, ಬ್ರಹ್ಮನ ಮುಂದೆ ನಡೆದಾಡಬೇಕು. ಆಗ ಅದು ಬ್ರಹ್ಮನಿಗೆ ತಿಳಿಯುದಿಲ್ಲ. ನಾವು ನಗಬೇಕು ಎಂದು ಬ್ರಹ್ಮದೇವರಿಗೆ ವಂಚಿಸಲು ಹೋದಾಗ ಶಪ್ತರಾದೆವು.

**ಏಕದೇಹಾ ಮಾನುಷತ್ವಮಾಪ್ಸ್ಯಥ ತ್ರಿಶ ಉದ್ಧತಾಃ ।**
**ತ್ರಿಶೋ ಮದ್ವಂಚನಾಯೇತಾ ಇತಿ ತೇನೋದಿತಾ ವಯಮ್ ॥ ೧೧೩ ॥**

**ಪದಚ್ಛೇದ :- ಏಕದೇಹಾ, ಮಾನುಷತ್ವಂ, ಆಪ್ಸ್ಯಥ, ತ್ರಿಶಃ, ಉದ್ಧತಾಃ । ತ್ರಿಶಃ, ಮದ್ವಂಚನಾಯ, ಏತಾಃ, ಇತಿ, ತೇನ, ಉದಿತಾಃ, ವಯಮ್ ॥**

**ಅರ್ಥ** :- **ಉದ್ಧತಾಃ** = ಉದ್ಧತರಾಗಿ, **ತ್ರಿಶಃ** = ಮೂರು ಬಾರಿ, **ಮದ್ವಂಚನಾಯ** = ನನ್ನನ್ನು ವಂಚಿಸುವ ಉದ್ದೇಶದಿಂದ, **ಇತಾಃ** = ಬಂದಂತಹ ನೀವು, **ತ್ರಿಶಃ** = ಮೂರು ಬಾರಿ, **ಏಕದೇಹಾ** = ಒಂದೇ ದೇಹವುಳ್ಳವರಾಗಿ, **ಮಾನುಷತ್ವಂ** = ಮನುಷ್ಯದೇಹವನ್ನು, **ಆಪ್ಸ್ಯಥ** = ಹೊಂದಿರಿ, **ಇತಿ** = ಎಂದು, **ತೇನ** = ಆ ಬ್ರಹ್ಮದೇವರಿಂದ, **ವಯಮ್** = ನಾವು **ಉದಿತಾ** = ಹೇಳಲ್ಪಟ್ಟವು.

ತಾತ್ಪರ್ಯ :- ಹೇ ದೇವಿಯರೇ ನೀವು ಉದ್ಧತರಾಗಿ ಮೂರು ಬಾರಿ ನನ್ನನ್ನು ವಂಚಿಸಲು ಬಂದಿರುವಿರಿ. ಆದ್ದರಿಂದ ಯಾವ ರೀತಿಯಲ್ಲಿ ಒಂದೇ ದೇಹದಲ್ಲಿ ನನ್ನನ್ನು ವಂಚಿಸಿದಿರೋ ಹಾಗೆ ಒಂದೇ ದೇಹದಲ್ಲಿ ಮೂರು ಬಾರಿ ಮನುಷ್ಯ ಜನ್ಮವನ್ನು ಪಡೆಯಿರಿ ಎಂದು ಶಾಪ ನೀಡಿದ್ದರು. ಒಮ್ಮೆ ವಂಚನೆ ಮಾಡಿದಾಗ ವಿನೋದವೆಂದು ಬ್ರಹ್ಮ ಸುಮ್ಮನಿದ್ದ. ಎರಡನೇ ಬಾರಿಯೂ ಸಹನೆ ಮಾಡಿದ. ಮೂರನೇ ಬಾರಿ ಕೋಪಗೊಂಡು ಶಪಿಸಿದ.

**ಅತಸ್ತ್ವಯ್ಯೈಕದೇಹತ್ವಮಿಚ್ಛಾಮೋ ದೇವಿ ಜನ್ಮಸು ।**
**ಚತುರ್ಷ್ವಪಿ ಯತೋಽಸ್ಮಾಕಂ ಶಾಪದ್ವಯನಿಮಿತ್ತತಃ ॥ ೧೧೪ ॥**

**ಪದಚ್ಛೇದ :- ಅತಃ, ತ್ವಯಾ, ಏಕದೇಹತ್ವಂ, ಇಚ್ಛಾಮಃ, ದೇವಿ, ಜನ್ಮಸು, ಚತುರ್ಷ, ಅಪಿ, ಯತೋಽಸ್ಮಾಕಂ, ಶಾಪದ್ವಯನಿಮಿತ್ತತಃ ॥**

**ಚತುರ್ಜನ್ಮ ಭವೇದ್ ಭೂಮೌ ತ್ವಾಂ ನಾನ್ಯೋ ಮಾರುತಾದ್ ವ್ರಜೇತ್**
**ನಿಯಮೋಽಯಂ ಹರೇರ್ಯಸ್ಮಾದನಾದಿರ್ನಿತ್ಯ ಏವ ಚ ॥ ೧೧೫ ॥**

ಪದಚ್ಛೇದ :- **ಚತುರ್ಜನ್ಮ ಭವೇತ್, ಭೂಮೌ, ತ್ವಾಂ, ನಾನ್ಯೋಃ, ಮಾರುಪಾದ, ವ್ರಜೇತ್, ನಿಯಮೇವ ಅಯಂ, ಹರೇಃ, ಯಸ್ಮಾದ್, ಆನಾರಿನಿತ್ರ, ಏವ, ಚ ॥**

**ಅರ್ಥ** :- **ದೇವಿ** = ದೇವಿಯೇ, **ಯತಃ** = ಯಾವ ಕಾರಣದಿಂದ, **ಅಸ್ಮಾಕಂ** = ನಮ್ಮ ಶಾಪದ್ವಯ ನಿಮಿತ್ತತಃ = ಎರಡು ಶಾಪಗಳ ನಿಮಿತ್ತದಿಂದ, **ಭೂಮೌ** = ಭೂಮಿಯಲ್ಲಿ **ಚತುರ್ಜನ್ಮ** = ನಾಲ್ಕು ಜನ್ಮಗಳು, **ಭವೇತ್** = ಆಗಬೇಕು, **ಅತಃ** = ಆದ್ದರಿಂದ, **ಚತುರ್ಷ್ವಪಿ ಜನ್ಮಸು** = ನಾಲ್ಕೂ ಜನ್ಮಗಳಲ್ಲಿಯೂ, **ತ್ವಯಾ** = ನಿನ್ನಿಂದ, **ಏಕದೇಹತ್ವಂ** = ಒಂದೇ ಶರೀರದಲ್ಲಿ ಜನಿಸುವಿಕೆಯನ್ನು **ಇಚ್ಛಾಮಃ** = ಬಯಸುವೆವು, **ಯಸ್ಮಾತ್** = ಯಾವ ಕಾರಣದಿಂದ, **ತ್ವಾಂ** = ನಿನ್ನನ್ನು, **ಮಾರುತಾತ್** = ವಾಯುದೇವರಿಗಿಂತ, **ಅನ್ಯಃ** = ಬೇರೆಯವರು, **ನ ವ್ರಜೇತ್** = ಹೊಂದಲಾರರು. **ಅಯಂ** = ಇದು, **ಹರೇಃ** = ಆ ಹರಿಯ, **ಅನಾದಿ ನಿತ್ಯಂ** = ಅನಾದಿ ನಿತ್ಯವಾದ, **ನಿಯಮಃ ಏವ** = ನಿಯಮವೇ ಸರಿ.

**ತಾತ್ಪರ್ಯ** :- ಹೇ ಭಾರತೀದೇವಿಯೇ ನಮಗೆ ಬ್ರಹ್ಮದೇವರ ಎರಡು ಶಾಪವಿರುವುದರಿಂದ ನಾಲ್ಕು ಜನ್ಮಗಳು ಭೂಮಿಯಲ್ಲಿ ಸಂಭವಿಸುವ ಪ್ರಯುಕ್ತ ಆ ನಾಲ್ಕೂ ಜನ್ಮಗಳಲ್ಲಿಯೂ ನಿನ್ನ ಜೊತೆ ಒಂದೇ ದೇಹದಲ್ಲಿ ಜನಿಸಲು ನಾವು ಬಯಸುವೆವು. ಏಕೆಂದರೆ ನಿನ್ನನ್ನು ವಾಯುವಿಗಿಂತ ಬೇರೆ ಯಾರು ಹೊಂದಲಾರರು. ಇದು ಹರಿಯೇ ಮಾಡಿರುವ ಅನಾದಿ ನಿತ್ಯವಾದ ನಿಯಮ.

ವಿ.ವಿ. : ಇಲ್ಲಿ ವಾದಿರಾಜರು ಒಂದು ಸೂಕ್ಷ್ಮವಾದ ಪ್ರಶ್ನೆಯನ್ನು, ತೆಗೆದುಕೊಂಡು ಬಹಳ ಸುಂದರವಾಗಿ ಉತ್ತರ ನೀಡಿದ್ದಾರೆ. ಏನೆಂದರೆ ಭಾರತೀ ದೇವಿಯಲ್ಲಿ ಆ ದೇವಿಯರು ನಾಲ್ಕು ಜನ್ಮಗಳಲ್ಲಿ, ಏಕದೇಹತ್ವವನ್ನು ಪ್ರಾರ್ಥಿಸುತ್ತಿದ್ದಾರೆ. ಮೂರು ಬಾರಿ ಏಕದೇಹದಲ್ಲಿ ಬ್ರಹ್ಮನನ್ನು ವಂಚಿಸಿದ್ದರಿಂದ ಮೂರು ಬಾರಿ ಏಕದೇಹಿಗಳಾಗಿ ಹುಟ್ಟಿರೆಂದು ಶಾಪವೇ ಹೊರತು ಆ ಜನ್ಮಗಳಲ್ಲಿ ಪರಪುರುಷರ ಸ್ಪರ್ಶವಾಗಲಿ ಎಂದಲ್ಲ. ಹಾಗಾದರೆ ಆ ಮೂರು ಜನ್ಮಗಳಲ್ಲಿ ಭಾರತೀದೇವಿಯನ್ನು ಜೊತೆಗೆ ಜನಿಸಲು ಪ್ರಾರ್ಥಿಸಿದ್ದೇಕೆ? ಹಾಗೆ ನಾಲ್ಕನೇ

ಜನ್ಮದಲ್ಲಿ ಪರಪುರುಷರ ಸ್ಪರ್ಶರೂಪವಾದ ಶಾಪವಿದ್ದರೂ ಏಕದೇಹತ್ವ ರೂಪ ಶಾಪವಿಲ್ಲ. ಅದು ಹಿಂದಿನ ಜನ್ಮಗಳಿಗೆ ಆ ಶಾಪವು ಅನ್ವಯವಾಗುತ್ತದೆ. ಹಾಗಾದರೆ ನಾಲ್ಕನೇ ಜನ್ಮದಲ್ಲಿ ಏಕದೇಹತ್ವವನ್ನು ಏಕೆ ಬಯಸಿದರು ಎಂದು ಎರಡು ಪ್ರಶ್ನೆಗಳು ಉದ್ಭವಿಸುತ್ತವೆ.

ಅದಕ್ಕೆ ವಾದಿರಾಜರು.

ಮೊದಲಿನ ಮೂರು ಜನ್ಮಗಳಲ್ಲಿ ಪರ ಪುರುಷರ ಸ್ಪರ್ಶರೂಪವಾದ ಶಾಪವಿಲ್ಲದಿದ್ದರೂ ದೇವತಾ ಸ್ತ್ರೀಯರಾದ್ದರಿಂದ ಮನೋಹರವಾದ ರೂಪವನ್ನು ಧರಿಸುವುದರಿಂದ ರಾವಣಾದಿ ಸ್ತ್ರೀಲಂಪಟರು ಬಲಾತ್ಕಾರದಿಂದ ಸ್ಪರ್ಶಿಸಬಹುದೆಂದು ಭೀತಿಯಿಂದ ಭಾರತಿಯೂ ತಮ್ಮ ಜೊತೆಗೆ ಜನಿಸಲಿ ಎಂದು ಬೇಡಿಕೊಂಡರು. ಇನ್ನು, ನಾಲ್ಕನೇ ಜನ್ಮದಲ್ಲಿ ತಮಗಾಗಿ ಭಾರತಿ ವಾಯುಗಳು, ಅನೇಕ ಶರೀರದಲ್ಲಿ ಜನಿಸುವಂತೆ ಮಾಡುವುದು ಅನುಚಿತ ಎಂದು ಹಿಂದಿನ ಮೂರು ಜನ್ಮದಲ್ಲಿ ಅಭ್ಯಾಸವಾಗಿದ್ದ - ಆ ಏಕದೇಹತ್ವವನ್ನೇ ಬೇಡಿದರು. ಹಾಗೆ ಮುಂದೆ ಎಲ್ಲಾದೇವಿಯರು ಏಕದೇಹದಿಂದ ತಪಸ್ಸನ್ನಾಚರಿಸಿ ರುದ್ರನಿಂದ ಪತಿಪ್ರಾಪ್ತಿಯನ್ನು ಬೇಡಿದ್ದರಿಂದ ರುದ್ರದೇವರೂ ಕೂಡ ಏಕದೇಹದಲ್ಲಿಯೇ ಪತಿ ಪ್ರಾಪ್ತಿ ಆಗಲೆಂದು ವರವನ್ನಿತ್ತ. ಆದ್ದರಿಂದಲೂ ದ್ರೌಪದೀ ದೇಹದಲ್ಲಿ ಏಕದೇಹತ್ವ ಉಂಟಾಯಿತು.

**ಅತಸ್ತ್ವಯೈಕದೇಹಾನ್ನೋ ನಾನ್ಯ ಆಪ್ನೋತಿ ಮಾರುತಾತ್ ।**
**ಇತೀರಿತೇ ತಥೇತ್ಯುಕ್ತ್ವಾ ಪಾರ್ವತ್ಯಾದಿಯುತೈವ ಸಾ ।**
**ವಿಪ್ರಕನ್ಯಾಽಭವತ್ ತತ್ರ ಚತಸ್ರಃ ಪಾರ್ವತೀಯುತಾಃ ॥ ೧೧೬ ॥**

**ಪದಚ್ಛೇದ :- ಅತಃ, ತ್ವಯಾ, ಏಕದೇಹಾಃ, ತ್ವ, ನಃ, ನಾನ್ಯಃ, ಆಪ್ನೋತಿ, ಮಾರುತಾತ್ । ಇತಿ, ಈರಿತೇ, ತಥಾ, ಇತಿ, ಉಕ್ತ್ವಾ, ಪಾರ್ವತ್ಯಾದಿಯುತಾ, ಏವ, ಸಾ, ವಿಪ್ರಕನ್ಯಾ, ಅಭವತ್, ತತ್ರ, ಚತಸ್ರಃ, ಪಾರ್ವತೀಯುತಾಃ ।**

**ಏಕದೇಹಸ್ಥಿತಾಶ್ಚಕ್ರುರ್ಗಿರೀಶಾಯ ತಪೋ ಮಹತ್ ।**
**ತದ್ದೇಹಸ್ಥಾ ಭಾರತೀ ತು ರುದ್ರದೇಹಸ್ಥಿತಂ ಹರಿಮ್ ।**
**ತೋಷಯಾಮಾಸ ತಪಸಾ ಕರ್ಮೈಕ್ಯಾರ್ಥಂ ಧೃತವ್ರತಾ ॥ ೧೧೭ ॥**

ಪದಚ್ಛೇದ :- ಏಕದೇಹಸ್ಥಿತಾಃ, ಚಕ್ರುಃ, ಗೌರೀಶಾಯ, ತಪಃ, ಮಹತ್, ತದ್ದೇಹಸ್ಥಾಃ, ಭಾರತೀ, ತು, ರುದ್ರದೇಹ ಸ್ಥಿತಮ್, ಹರಿಮ್ । ತೋಷಯಾಮಾಸ, ತಪಸಾ, ಕರ್ಮೈಕ್ಯಾರ್ಥಂ, ಧೃತವ್ರತಾ ॥

ಅರ್ಥ :- ತತ್ರ = ಆ ಬ್ರಾಹ್ಮಣ ಜನ್ಮದಲ್ಲಿ, ಪಾರ್ವತ್ಯಾದಿಯುತಾಃ = ಪಾರ್ವತೀ ಮೊದಲಾದವರಿಂದ ಸಹಿತರಾದ, ಚತಸ್ರಃ = ನಾಲ್ವರು. ಏಕದೇಹಸ್ಥಿತಾಃ = ಒಂದೇ ಶರೀರದಲ್ಲಿದ್ದವರಾಗಿ ಗಿರೀಶಾಯ = ರುದ್ರದೇವರನ್ನು ಕುರಿತು, ಮಹತ್ = ದೊಡ್ಡದಾದ ತಪಃ = ತಪಸ್ಸನ್ನು, ಚಕ್ರುಃ = ಮಾಡಿದರು. ತದ್ದೇಹಸ್ಥಾ = ಆ ಶರೀರದಲ್ಲಿರುವ ಭಾರತೀ ತು = ಭಾರತೀ ದೇವಿಯಾದರೂ ರುದ್ರದೇಹಸ್ಥಿತಂ = ರುದ್ರದೇವರಲ್ಲಿರುವ ಹರಿಮ್ = ಹರಿಯನ್ನು ಕರ್ಮೈಕ್ಯಾರ್ಥಂ = ಮಾಡುವ ಕರ್ಮದ ಏಕತೆಗಾಗಿ, ತಪಸಾ = ತಪಸ್ಸಿನಿಂದ, ಧೃತವ್ರತಾ = ವ್ರತನಿಷ್ಠಳಾಗಿ, ತೋಷಯಾಮಾಸ = ಸಂತೋಷ ಪಡಿಸಿದಳು.

ತಾತ್ಪರ್ಯ :- ಆ ಬ್ರಾಹ್ಮಣನ ಜನ್ಮದಲ್ಲಿ ಪಾರ್ವತೀ ಮುಂತಾದ ನಾಲ್ವರು ದೇವಿಯರು ಏಕದೇಹಿಗಳಾಗಿ ಶಿವನನ್ನು ಒಲಿಸಿಕೊಳ್ಳಲು ದೊಡ್ಡ ತಪಸ್ಸನ್ನು ಮಾಡಿದರು. ಕರ್ಮೈಕ್ಯಕ್ಕಾಗಿ ಆ ದೇಹದಲ್ಲಿದ್ದ ಭಾರತಿಯು ವ್ರತನಿಷ್ಠಳಾಗಿ ಶಿವನ ಶರೀರದಲ್ಲಿದ್ದ ಹರಿಯನ್ನೇ ಒಲಿಸಿಕೊಂಡಳು. ಭಾರತೀದೇವಿ ಕರ್ಮೈಕ್ಯಕ್ಕಾಗಿ ಮಾತ್ರ ತಪಸ್ಸು ಮಾಡಿದ್ದಳು. ಶಚೀ ಮೊದಲಾದವರ ಹಾಗೆ ಭಾರತೀದೇವಿಯರ ಪತಿಪ್ರಾಪ್ತಿ ಒಂದೇ ಆದ್ದರಿಂದ ಕರ್ಮೈಕ್ಯ ಆದರೆ ಭಾರತೀ ದೇವಿ ಶಿವನಲ್ಲಿರುವ ಭಗವಂತನನ್ನೆ ಬೇಡಿದಳು. ಇತರರು ನೇರ ಶಿವನನ್ನೇ ವರವನ್ನು ಬೇಡಿದರು.

ತಸ್ಯೈ ಸ ರುದ್ರದೇಹಸ್ಥೋ ಹರಿಃ ಪ್ರಾದಾದ್ ವರಂ ಪ್ರಭುಃ ।
ಅನಂತತೋಷಣಂ ವಿಷ್ಣೋಃ ಸ್ವಭರ್ತ್ರಾ ಸಹ ಜನ್ಮಸು ॥ ೧೧೮ ॥

ಪದಚ್ಛೇದ :- ತಸ್ಯೈ, ಸಃ, ರುದ್ರದೇಹಸ್ಥಃ, ಹರಿಃ ಪ್ರದಾತ್, ವರಂ, ಪ್ರಭುಃ, ಅನಂತತೋಷಣ, ವಿಷ್ಣೋಃ, ಸ್ವಭರ್ತ್ರಾ, ಸಹ, ಜನ್ಮಸು ।

ಸರ್ವೇಷ್ವಪೀತಿ ಚಾನ್ಯಾಸಾಂ ದದೌ ಶಂಕರ ಏವ ಚ ।
ವರಂ ಸ್ವಭರ್ತೃಸಂಯೋಗಂ ಮಾನುಷೇಷ್ವಪಿ ಜನ್ಮಸು ॥ ೧೧೯ ॥

ಪದಚ್ಛೇದ :- ಸರ್ವೇಷು, ಅಪಿ, ಇತಿ, ಚ, ಅನ್ಯಾಸಾಂ, ದದೌ, ಶಂಕರಃ, ಏವ, ಚ, ವರಂ, ಸ್ವಭರ್ತೃಸಂಯೋಗಂ, ಮಾನುಷೇಷು, ಅಪಿ, ಜನ್ಮಸು.

**ಅರ್ಥ** :- **ಪ್ರಭುಃ** = ಸಮರ್ಥನಾದ, **ರುದ್ರದೇಹಸ್ಥಃ** = ರುದ್ರನ ಶರೀರದಲ್ಲಿರುವ, **ಸಃ** = ಹರಿಯು, **ತಸ್ಯೈ** = ಆ ಭಾರತೀ ದೇವಿಗೆ, **ಸರ್ವೇಷ್ವಪಿ** = ಎಲ್ಲಾ, **ಜನ್ಮಸು** = ಜನ್ಮಗಳಲ್ಲಿಯೂ, **ಸ್ವಭರ್ತಾ ಸಹ** = ಪತಿಯೊಂದಿಗೆ, **ವಿಷ್ಣೋಃ** = ವಿಷ್ಣುವಿಗೆ **ಅನಂತ ತೋಷಣಂ** = (**ಕರೋಷಿ**) ತುಂಬಾ ಸಂತೋಷ ಪಡಿಸುವಿ, **ಅನ್ಯಾಸಾಮ್** = ಇತರ ದೇವಿಯರಿಗೆ, **ಶಂಕರಃ** = ರುದ್ರದೇವರು, **ಮಾನುಷೇಷು ಜನ್ಮಸು** = ಮನುಷ್ಯ ಜನ್ಮದ ಮಧ್ಯದಲ್ಲಿ, **ಸ್ವಭರ್ತೃಸಂಯೋಗಂ** = ತಮ್ಮ ತಮ್ಮ ಪತಿಗಳ ಸಮಾಗಮದ, **ವರಂ** = ವರವನ್ನು, **ಪ್ರದಾತ್** = ಕೊಟ್ಟರು.

ತಾತ್ಪರ್ಯ :- ರುದ್ರನ ಕುರಿತು ತಪಸ್ಸನ್ನಾಚರಿಸಿದ, ಪಾರ್ವತೀ ಮೊದಲಾದ ದೇವಿಯರಲ್ಲಿ ಭಾರತೀದೇವಿಗೆ ಮಾತ್ರ ರುದ್ರ ದೇವರ ಶರೀರದಲ್ಲಿದ್ದ ಪರಮಾತ್ಮನೇ ಎಲ್ಲಾ ಜನ್ಮಗಳಲ್ಲಿಯೂ ನೀನು ನಿನ್ನ ಪತಿಯೊಂದಿಗೆ ನನ್ನನ್ನು ಸಂತೋಷಪಡಿಸುವಿ ಎಂದು ವರ ನೀಡಿದ. ಬೇರೇ ದೇವಿಯರಿಗೆ ರುದ್ರ ದೇವರೇ ನಿಮ್ಮ ಅನೇಕ ಮನುಷ್ಯ ಜನ್ಮದಲ್ಲಿ ಒಂದು ಜನ್ಮದಲ್ಲಿ ಮಾತ್ರ ನಿಮ್ಮ ನಿಮ್ಮ ಪತಿಯ ಸಮಾಗಮವನ್ನು ಹೊಂದುವಿರಿ. ಎರಡು ವರ ನೀಡಿದ. ಪರಮ ಭಾಗವತೋತ್ತಮಳಾದ ಭಾರತೀ ದೇವಿಯು ಭಗವಂತನಲ್ಲಿ ಕಾಮ್ಯವರವನ್ನು ಬೇಡಲಾರಳು. ಅದಕ್ಕೆ ಪತಿಯೊಂದಿಗೆ ನಿನ್ನ ಆರಾಧನೆಯನ್ನು ಮಾಡುವ ಅವಕಾಶವನ್ನು ಬೇಡಿದ್ದಳು. ರುದ್ರದೇವರಲ್ಲಿರುವ ಶ್ರೀಹರಿ ಅದನ್ನೇ ಅವಳಿಗೆ ನೀಡಿದ. ಉಳಿದವರಿಗೆ ಕೇವಲ ಪತಿ ಪ್ರಾಪ್ತಿ.

**ತತಸ್ತದೈವ ದೇಹಂ ತಾ ವಿಸೃಜ್ಯ ನಳನಂದಿನೀ ।**
**ಬಭೂವುರಿಂದ್ರಸೇನೇತಿ ದೇಹೈಕ್ಯೇನ ಸುಸಂಗತಾಃ ॥ ೧೨೦ ॥**

ಪದಚ್ಛೇದ :- ತತಃ, ತದಾ, ಏವ, ದೇಹಂ, ತಾಃ, ವಿಸೃಜ್ಯ, ನಲ, ನಂದಿನೀ, ಬಭೂವುಃ, ಇಂದ್ರಸೇನಾ, ಇತಿ, ದೇಹಕ್ಯೇನ, ಸುಸಂಗತಾಃ?

**ಅರ್ಥ** :- **ತತಃ** = ಆ ವರವನ್ನು, ಪಡೆದ ನಂತರ, **ತಾಃ** = ಆ ದೇವಿಯರು, **ತದೈವ** = ಕೂಡಲೇ **ದೇಹಂ** = ಆ ಬ್ರಾಹ್ಮಣಕಾನ್ಯಾ =

ಶರೀರವನ್ನು ವಿಸೃಜ್ಯ = ಬಿಟ್ಟು (ದೇಹೈಕ್ಯೇನ = ಏಕದೇಹಿಗಳಾಗಿಯೇ), **ಸುಸಂಗತಾಃ** = ಒಂದೇ ಬುದ್ಧಿಯುಳ್ಳವರಾಗಿ, ಇಂದ್ರಸೇನಾ = ಇಂದ್ರಸೇನಾ ಎಂಬ ಹೆಸರಿನವರಾಗಿ **ಬಭೂವು** = ಹುಟ್ಟಿದರು.

**ತಾತ್ಪರ್ಯ** :- ಹೀಗೆ ಆ ವರವನ್ನು ಪಡೆದ ಆ ದೇವಿಯರು ಆ ಬ್ರಾಹ್ಮಣದೇಹವನ್ನು ಕನ್ಯೆಯರಾಗಿಯೇ ತ್ಯಜಿಸಿ ಮುಂದಿನ ಶರೀರ ದಲ್ಲಿ ನಲರಾಜನ ಕುಮಾರಿಯಾಗಿ ಹುಟ್ಟಿ ಆ ದೇಹವನ್ನು ತ್ಯಜಿಸಿ ಪುನಃ ಅವನಿಗೆ ಇಂದ್ರಸೇನಾ ಎಂಬ ಹೆಸರಿನಿಂದ - ಹುಟ್ಟಿದರು ಎಂದು ವಾದಿರಾಜೀಯದಲ್ಲಿದೆ.

**ತದಾಽಽಸೀನ್ಮುದ್ಗಲೋ ನಾಮ ಮುನಿಸ್ತಪಸಿ ಸಂಸ್ಥಿತಃ ।**
**ಚಕಮೇ ಪುತ್ರಿಕಾಂ ಬ್ರಹ್ಮೇತ್ಯಶೃಣೋತ್ ಸ ಕಥಾಂತರೇ ॥ ೧೨೧ ॥**

**ಪದಚ್ಛೇದ :– ತದಾ, ಆಸೀತ್, ಮುದ್ಗಲಃ, ನಾಮ, ಮುನಿ, ತಪಸಿ, ಸಂಸ್ಥಿತಃ, ಚಕಮೇ, ಪುತ್ರಿಕಾಂ, ಬ್ರಹ್ಮ ಇತಿ, ಅಶೃಣೋತ್, ಸಃ, ಕಥಾಂತರೇ.**

**ಅರ್ಥ** :- **ತದಾ** = ಆಗ, **ತಪಸಿ ಸಂಸ್ಥಿತಃ** = ತಪಸ್ಸಿನಲ್ಲಿ ನಿರತನಾದ, **ಮುದ್ಗಲನಾಮ** = ಮುದ್ಗಲ ಎಂಬ ಹೆಸರಿನ, **ಮುನಿಃ** = ಋಷಿಯ, **ಆಸೀತ್** = ಇದ್ದನು, **ಸಃ** = ಅವನು, **ಕಥಾಂತರ** = ಒಂದು ಕಥೆಯಲ್ಲಿ, **ಬ್ರಹ್ಮ** = ಬ್ರಹ್ಮನು, **ಪುತ್ರಿಕಾಂ** = ಮಗಳನ್ನು, **ಚಕಮೇ** = ಮೋಹಿಸಿದನು, **ಇತಿ** = ಎಂದು, **ಅಶೃಣೋತ್** = ಕೇಳಿದನು.

**ತಾತ್ಪರ್ಯ** :- ಆಗ ಮುದ್ಗಲ ಎಂಬ ಋಷಿ ತಪಸ್ಸನ್ನು ಆಚರಿಸುತ್ತಿದ್ದ ಅವನು ಬ್ರಹ್ಮನು ತನ್ನ ಮಗಳನ್ನು ಮೋಹಿಸಿದನೆಂದು ಯಾವುದೋ ಒಂದು ಕಥೆಯಲ್ಲಿ ಕೇಳಿದ.

**ಅಪಾಹಸತ್ ಸೋಽಬ್ಜಯೋನಿಂ ಶಶಾಪೈನಂ ಚತುರ್ಮುಖಃ ।**
**ಭಾರತ್ಯಾದ್ಯಾಃ ಪಂಚ ದೇವೀರ್ಗಚ್ಛ ಮಾನಿನ್ನಭೂತಯೇ ॥ ೧೨೨ ॥**

**ಅರ್ಥ** :- **ಸಃ** = ಆ ಮುದ್ಗಲನು, **ಅಬ್ಜಯೋನಿಃ** = ಬ್ರಹ್ಮನನ್ನು, **ಅಪಾಹಸತ್** = ಅಪಹಾಸ ಮಾಡಿದನು, **ಚತುರ್ಮುಖ** = ಬ್ರಹ್ಮನು, **ಏನಂ** = ಈ ಮುದ್ಗಲನನ್ನು, **ಹೇ ಮಾನಿನ್** = ಎಲೈ ಅಹಂಕಾರಿಯೇ, **ಅಭೂತಯೇ**

= ನರಕಾದ್ಯನುರ್ಥಕ್ಕೋಸ್ಕರ, **ಭಾರತ್ಯಾದ್ಯಾಃ** = ಭಾರತೀದೇವಿಯೇ ಮೊದಲಾದ, **ಪಂಚದೇವೀ** = ಐದು ಮಂದಿ ದೇವಿಯರನ್ನು, **ಗಚ್ಛ** = ಸಂಗಮಾಡು, **ಇತಿ** = ಎಂದು, **ಶಶಾಪ** = ಶಪಿಸಿದನು.

ತಾತ್ಪರ್ಯ :- ಪರಮಾತ್ಮನ ಆಜ್ಞೆಯಂತೆ ಅಸುರಜನ ಮೋಹಕ್ಕಾಗಿ ಮುದ್ಗಲನ ಮಗಳನ್ನು ಮೋಹಿಸಿದಂತೆ ತೋರಿಕೊಂಡ ಬ್ರಹ್ಮನಿಗೆ ಅಸುರಾವೇಶದಿಂದ ನೀನು ಹೇಗೆ ಮೋಹ ಪರವಶನಾಗೋದೇ ಎಂದು ಅಪಹಾಸ್ಯಗೈದ. ಅದಕ್ಕೆ ಬ್ರಹ್ಮನು ಸೋತ್ತಮರ ಸಂಗವನ್ನು ಹೊಂದುವ ಮೂಲಕ ನರಕಾದ್ಯನರ್ಥವನ್ನು ಹೊಂದು ಎಂದು ಶಪಿಸಿದ.

**ಇತೀರಿತಸ್ತಂ ತಪಸಾ ತೋಷಯಾಮಾಸ ಮುದ್ಗಲಃ ।**
**ಶಾಪಾನುಗ್ರಹಮಸ್ಯಾಥ ಚಕ್ರೇ ಕಂಜಸಮುದ್ಭವಃ ॥ ೧೨೩ ॥**

ಪದಚ್ಛೇದ :- ಇತಿ, ಈರಿತಃ, ತಂ, ತಪಸಾ, ತೋಷಯಾಮಾಸ, ಮುದ್ಗಲಂ, ಶಾಪಾನುಗ್ರಹಂ, ಅಸ್ಯ, ಅಥ, ಚಕ್ರೇ, ಕಂಜಸಮುದ್ಭವಃ.

ಅರ್ಥ :- **ಇತಿ** = ಈ ರೀತಿಯಾಗಿ, **ಈರಿತಃ** = ಹೇಳಲ್ಪಟ್ಟವನಾದ, **ಮುದ್ಗಲಃ** = ಮುದ್ಗಲನು, **ತಪಸಾ** = ತಪಸ್ಸಿನಿಂದ, **ತಂ** = ಆ ಬ್ರಹ್ಮನನ್ನು **ತೋಷಯಾಮಾಸ** = ಸಂತೋಷಪಡಿಸಿದನು, **ಅಥ** = ಅನಂತರ, **ಕಂಜಸಮುದ್ಭವಃ** = ಬ್ರಹ್ಮನು, **ಅಸ್ಯ** = ಈ ಮುದ್ಗಲನಿಗೆ, **ಶಾಪಾನುಗ್ರಹಂ** = ಶಾಪದ ನಂತರ ಮಾಡುವ ಅನುಗ್ರಹವನ್ನು, **ಚಕ್ರೇ** = ಮಾಡಿದನು.

ತಾತ್ಪರ್ಯ :- ಶಾಪದಿಂದ ಚಕಿತನಾದ ಮುದ್ಗಲನು ಪುನಃ ಅನೇಕ ವರ್ಷಗಳ ಕಾಲ ತಪಸ್ಸನ್ನಾಚರಿಸಿ ಬ್ರಹ್ಮನನ್ನು ಸಂತೋಷಪಡಿಸಿ ಶಾಪಕ್ಕೆ ಪ್ರತಿಯಾಗಿ ಮುಂದೆ ಹೇಳಿದ ರೀತಿಯಲ್ಲಿ ಅನುಗ್ರಹವನ್ನು ಸಂಪಾದಿಸಿದ.

**ನ ತ್ವಂ ಯಾಸ್ಯಸಿ ತಾ ದೇವೀ ಮಾರುತಸ್ತ್ವಚ್ಛರೀರಗಃ ।**
**ಯಾಸ್ಯತಿ ತ್ವಂ ಸದಾ ಮೂರ್ಛಾಂ ಗತೋ ನೈವ ವಿಬುಧ್ಯಸೇ ॥ ೧೨೪ ॥**

ಪದಚ್ಛೇದ :- ನ, ತ್ವಂ, ಯಾಸ್ಸಸಿ, ತಾಃ, ದೇವೀಃ, ಮಾರುವ, ತ್ವತ್, ಶರೀರಃ, ಯಾಸ್ಸತಿ, ತ್ವಂ, ತದಾ, ಮೂರ್ಛಾಂ, ಗತಃ, ನ, ಏವ, ವಿಬುಧ್ಯತೇ ।

**ಅರ್ಥ** :- **ತದಾ** = ಆಗ, **ತ್ವಂ** = ನೀನು, **ಮೂರ್ಛಾಂ ನ ತ** = ಮೂರ್ಛೆಯನ್ನು ಹೊಂದಿದವನಾಗಿ, **ನೈವ ವಿಬುಧ್ಯ ಸೇ** = ಉಳಿಯುವುದಿಲ್ಲ, **ತ್ವಂ** = ನೀನು, **ತಾ ದೇವೀ** = ಆ ಎಲ್ಲ ದೇವಿಯರ (ಸಂಗವನ್ನು), **ನ ಯಾಸ್ಯಸಿ** = ಮಾಡುವುದಿಲ್ಲ, **ತ್ವತ್** = ನೀನು, **ಶರೀರಃ** = ಶರೀರದಲ್ಲಿ ಇರುವ, **ಮರುತ** = ವಾಯು ದೇವರು ಅವರನ್ನು, **ಯಾ ಸ್ಮೃತಿ** = ಹೊಂದುತ್ತಾರೆ.

**ತಾತ್ಪರ್ಯ** :- ಅವನ ತಪಸ್ಸಿಗೆ ಮೆಚ್ಚಿದ ಬ್ರಹ್ಮನು ಪುನಃ ಅವನಿಗೆ ನೀನು ಆ ಎಲ್ಲಾ ದೇವಿಯರ ಸಂಗವನ್ನು ಮಾಡುವುದಿಲ್ಲ. ಹೊರತು ನಿನ್ನ ಶರೀರದಲ್ಲಿರುವ ವಾಯುದೇವರು ಆ ಇಂದ್ರಸೇನೆಯ ಸಂಗ ಮಾಡುತ್ತಾರೆ. ಆಗ ನೀನು ಮೂರ್ಛಾವಸ್ಥೆಯಲ್ಲಿರುವಿ, ಆದ್ದರಿಂದ ನಿನಗೆ ಏನು ತಿಳಿಯುವುದಿಲ್ಲ.

**ನಚ ಪಾಪಂ ತತಸ್ತೇ ಸ್ಯಾದಿತ್ಯುಕ್ತೇ ಚೈನಮಾವಿಶತ್ ।**
**ಮಾರುತೋಽಥೇಂದ್ರಸೇನಾಂ ಚ ಗೃಹೀತ್ವಾಽಥಾಭವದ್ ಗೃಹೀ ॥ ೧೨೫ ॥**

**ಪದಚ್ಛೇದ :– ನ, ಚ, ಪಾಪಂ, ತತಃ, ತೇ, ಸ್ಯಾತ್, ಇತಿ, ಉಕ್ತೇ, ಚ, ಏನಂ, ಆವಿಶತ್, ಮಾರುತಃ, ಅಥ, ಇಂದ್ರಸೇನಾಂ, ತ, ಗೃಹೇತ್ವಾ, ಅಥ, ಅಭವತ್ ಗೃಹೇ ।**

**ಅರ್ಥ** :- **ತತ** = ಅದರಿಂದ, **ತೇ** = ನಿನಗೆ, **ಪಾಪಂ** = ಪಾಪವು, **ನ ಚ ಸ್ಯಾತ್** = ಬರಲಾರದು, **ಇತಿ** = ಎಂದು, **ಉಕ್ತೇ** = ಹೇಳಲು, **ಏನಂ** = ಈ ಮುದ್ಗಲನನ್ನು, **ಮಾರುತಃ** = ವಾಯುದೇವರು **ಆವಿಶತ್** = ಪ್ರವೇಶಿಸಿದರು. **ಅಥ** = ಅನಂತರ, **ಇಂದ್ರಸೇನಾಂ** = ಇಂದ್ರಸೇನೆಯನ್ನು, **ಗೃಹೀತ್ವಾ** = ಮದುವೆಯಾಗಲು, **ಗೃಹೇ** = ಗೃಹಸ್ಥಾಶ್ರಮಿಯು, **ಅಭವತ್** = ಆದನು.

**ತಾತ್ಪರ್ಯ** :- ಬ್ರಹ್ಮನು ಮುದ್ಗಲನಿಗೆ ಈ ರೀತಿಯಾಗಿ ಸ್ವೋತ್ತಮರ ಸಂಗದಿಂದ ಬರುವ ಪಾಪದ ಪರಿಹಾರವನ್ನು ತಿಳಿಸುತ್ತಾನೆ. ಆಗಲೇ ವಾಯುದೇವರು ಇವನ ಶರೀರವನ್ನು, ಪ್ರವೇಶಿಸುತ್ತಾರೆ. ನಂತರ ಮುದ್ಗಲನು ಇಂದ್ರಸೇನೆಯನ್ನು ಮದುವೆಯಾಗಿ ಗೃಹಸ್ಥಾಶ್ರಮಿಯಾಗುತ್ತಾನೆ.

**ರೇಮೇ ಚ ಸ ತಯಾ ಸಾರ್ಧಂ ದೀರ್ಘಕಾಲಂ ಜಗತ್ಪ್ರಭುಃ ।**
**ತತೋ ಮುದ್ಗಲಮುದ್ಬೋಧ್ಯ ಯಯೌ ಚ ಸ್ವಂ ನಿಕೇತನಮ್ ॥ ೧೨೬ ॥**

**ಪದಚ್ಛೇದ :-** ರೇಮೇ, ಚ, ಸ, ತಯಾ, ಸಾರ್ಧಂ, ದೀರ್ಘಕಾಲಂ, ಜಗತ್ಪ್ರಭುಃ, ತತಃ, ಮುದ್ಗಲಂ, ಉದ್ಬೋಧ್ಯ, ಯಯೌ, ಚ, ಸ್ವಂ, ನಿಕೇತನಮ್ ।

**ಅರ್ಥ :-** **ಜಗತ್ಪ್ರಭುಃ** = ಜಗತ್ತಿಗೆ ಸ್ವಾಮಿಯಾದ, **ಸಃ** = ಆ ವಾಯುದೇವನು, **ದೀರ್ಘಕಾಲಂ** = ಬಹಳಕಾಲ, **ತಯಾ ಸಾರ್ಧಂ** = ಆ ಇಂದ್ರಸೇನೆಯೊಡನೆ, **ರೇಮೆ** = ವಿಹರಿಸಿದನು, **ತತಃ** = ಅನಂತರ, **ಮುದ್ಗಲಂ** = ಮುದ್ಗಲನನ್ನು, **ಉದ್ಬೋಧ್ಯ** = ಎಚ್ಚರಿಸಿ, **ಸ್ವಂ** = ತನ್ನ, **ನಿಕೇತನಂ** = ಲೋಕವನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ :-** ಹೀಗೆ ವಾಯುದೇವರು ಮುದ್ಗಲನ ಶರೀರದಲ್ಲಿ ಅನೇಕ ವರ್ಷಗಳ ಕಾಲ ಇಂದ್ರಸೇನೆಯೊಡನೆ ವಿಹರಿಸಿ ಆ ಸಮಯದಲ್ಲಿ ಮೂರ್ಛಾವಸ್ಥೆಯಲ್ಲಿರುವ ಮುದ್ಗಲನನ್ನು ಎಚ್ಚರಗೊಳಿಸಿ ತಮ್ಮ ಲೋಕಕ್ಕೆ ತೆರಳಿದರು.

**ತತೋ ದೇಶಾಂತರಂ ಗತ್ವಾ ತಪಶ್ಚಕ್ರೇ ಸ ಮುದ್ಗಲಃ ।**
**ಸೇಂದ್ರಸೇನಾ ವಿಯುಕ್ತಾಽಥ ಭರ್ತ್ರಾ ಚಕ್ರೇ ಮಹತ್ ತಪಃ ॥ ೧೨೭ ॥**

**ಪದಚ್ಛೇದ :-** ತತಃ, ದೇಶಾಂತರಂ, ಗತ್ವಾ, ತಪಃ, ಚಕ್ರೇ, ಸಃ, ಮುದ್ಗಲಃ, ಇಂದ್ರಸೇನಾ, ವಿಮುಕ್ತಾ, ಅಥ, ಬರ್ತ್ರಾ, ಚಕ್ರೇ, ಮಹತ್, ತಪಃ ॥

**ಅರ್ಥ :-** **ತತಃ** = ಅನಂತರ, **ಸಃ** = ಆ, **ಮುದ್ಗಲಃ** = ಮುದ್ಗಲನು, **ದೇಶಾಂತರಂ** = ಬೇರೆ ದೇಶವನ್ನು, **ಗತ್ವಾ** = ಹೋಗಿ, **ತಪಃ** = ತಪಸ್ಸನ್ನು, **ಚಕ್ರೇ** = ಮಾಡಿದನು, **ಅಥ** = ಅನಂತರ, **ಭರ್ತ್ರಾ** = ಗಂಡನಿಂದ, **ವಿಯುಕ್ತಾ** = ವಿಯುಕ್ತಳಾದ, **ಇಂದ್ರಸೇನಾ** = ಇಂದ್ರಸೇನೆಯು, **ಮಹತ್ತಪಃ** = ಶ್ರೇಷ್ಠತಪಸ್ಸನ್ನು, **ಚಕ್ರೇ** = ಮಾಡಿದಳು.

**ತಾತ್ಪರ್ಯ :-** ಹೀಗೆ ಮುದ್ಗಲನು ಅನೇಕ ವರ್ಷಗಳ ಕಾಲ ಇಂದ್ರಸೇನೆಯೊಡನೆ ಇದ್ದು ನಂತರ ದೇಶಾಂತರಕ್ಕೆ ಹೋಗಿ ತಪಸ್ಸನ್ನಾಚರಿಸಿದ. ಇತ್ತ ಇಂದ್ರಸೇನೆಯೂ ಪತಿಯಿಂದ ವಿಯುಕ್ತಳಾಗಿ ತಪಸ್ಸನ್ನಾಚರಿಸಿದಳು.

**ತದ್ದೇಹಗಾ ಭಾರತೀ ತು ಕೇಶವಂ ಶಂಕರೇ ಸ್ಥಿತಮ್ ।**
**ತೋಷಯಾಮಾಸ ತಪಸಾ ಕರ್ಮೈಕ್ಯಾರ್ಥಂ ಹಿ ಪೂರ್ವವತ್ ॥ ೧೨೮ ॥**

**ಪದಚ್ಛೇದ :- ತತ್, ದೇಹಗಾ, ಭಾರತೀ, ತು, ಕೇಶವಂ, ಶಂಕರೇ, ಸ್ಥಿತಮ್, ತೋಷಯಾಮಾಸ, ತಪಸಾ, ಕರ್ಮೈಕ್ಯಾರ್ಥಂ, ಹಿ, ಪೂರ್ವವತ್.**

**ಅರ್ಥ :- ತತ್ ದೇಹಗಾ** = ಆ ಇಂದ್ರಸೇನೆಯಲ್ಲಿರುವ, **ಭಾರತೀ** = ಭಾರತೀದೇವಿಯ, **ಶಂಕರೇ** = ಶಿವನಲ್ಲಿ, **ಸ್ಥಿತಮ್** = ಇರುವ, **ಕೇಶವಂ** = ನಾರಾಯಣನನ್ನು, **ಪೂರ್ವವತ್** = ಹಿಂದಿನಂತೆ, **ಕರ್ಮೈಕ್ಯಾರ್ಥಂ** = ಕರ್ಮದ ಏಕತೆಗೋಸ್ಕರ, **ತಪಸಾ** = ತಪಸ್ಸಿನಿಂದ, **ತೋಷಯಾಮಾಸ** = ಸಂತೋಷ ಪಡಿಸಿದಳು.

**ತಾತ್ಪರ್ಯ :-** ಇಂದ್ರಸೇನೆಯ ಶರೀರದಲ್ಲಿದ್ದ ಶಚೀ ಮುಂತಾದ ದೇವಿಯರು ರುದ್ರದೇವರನ್ನು ಕುರಿತು ತಪಸ್ಸು ಮಾಡಿ ತಮ್ಮ ತಮ್ಮ ಪತಿ ಪ್ರಾಪ್ತಿಗಾಗಿ ವರವನ್ನು ಬೇಡಿದರು. ಆದರೆ ಜೀವೋತ್ತಮಳಾದ ಭಾರತೀ ದೇವಿ ಶ್ರೀಹರಿಯನ್ನು ಬಿಟ್ಟು ಬೇರೆ ಯಾರಿಂದಲೂ ಯಾಚಿಸಲಾರಳಾದ್ದರಿಂದ ರುದ್ರನಲ್ಲಿರುವ ಶ್ರೀ ಹರಿಯನ್ನೇ ಪತಿಪ್ರಾಪ್ತಿಗಾಗಿಯೇ ಪ್ರಾರ್ಥಿಸಿದಳು.

**ಉಮಾದ್ಯಾ ರೌದ್ರಮೇವಾತ್ರ ತಪಶ್ಚಕ್ರುರ್ಯಥಾ ಪುರಾ ।**
**ಪ್ರತ್ಯಕ್ಷೇ ಚ ಶಿವೇ ಜಾತೇ ತದ್ದೇಹಸ್ಥೇ ಚ ಕೇಶವೇ ॥ ೧೨೯ ॥**

**ಪದಚ್ಛೇದ :- ಉಮಾ, ಆದ್ಯಾ, ರೌದ್ರಂ, ಏವ, ಅತ್ರ, ತಪಃ, ಚಿತ್ತುಃ, ಯಥಾ, ಪುರಾ, ಪ್ರತ್ಯಕ್ಷೇ, ಚ, ಶಿವೇ, ಜಾತೇ, ತದ್ದೇಹಸ್ಥೇ, ಚ, ಕೇಶವೇ.**

**ಪೃಥಕ್‌ಪೃಥಕ್ ಸ್ವಭರ್ತ್ರಾಪ್ತ್ಯೈ ತಾಃ ಪಂಚಾಪ್ಯೇಕದೇಹಗಾಃ ।**
**ಪ್ರಾರ್ಥಯಾಮಾಸುರಭವತ್ ಪಂಚಕೃತ್ವೋ ವಚೋ ಹಿ ತತ್ ॥ ೧೩೦ ॥**

**ಪದಚ್ಛೇದ :- ಪೃಥಕ್, ಪೃಥಕ್, ಸ್ತಭತ್ರಾಪ್ತ್ಯೈ, ತಾಃ, ಪಂಚಾ ಅಪಿ, ಏಕದೇಹಗಾಃ, ಪ್ರಾರ್ಥಯಾಮಾಸು, ಅಭವತ್, ಪಂಚಕೃತ್ವ, ವಚ, ಹೇ, ತತ್.**

**ಅರ್ಥ :- ಉಮಾದ್ಯಾಪಿ** = ಪಾರ್ವತೀದೇವಿಯೇ ಮೊದಲಾದ ದೇವಿಯರು, **ಅತ್ರ** = ಈ ಇಂದ್ರಸೇನೆಯ ದೇಹದಲ್ಲಿ, **ಪುರಾಯಥಾ** =

ಹಿಂದಿನಂತೆಯೇ **ರೌದ್ರಮೇವ** = ರುದ್ರಸಂಬಂಧಿಯಾದ, **ತಪಃ** = ತಪಸ್ಸನ್ನು, **ಕುರ್ಯುಃ** = ಮಾಡಿದರು, **ಶಿವೇ** = ವಟುರೂಪಿಯಾದ ಶಿವನು, **ಚ** = ಮತ್ತು, ಆ ವಟುರೂಪಿಯಲ್ಲಿರುವ, **ಕೇಶವೇ** = ಶ್ರೀಹರಿಯು, **ಪ್ರತ್ಯಕ್ಷೇ ಜಾತೇ** = ಪ್ರತ್ಯಕ್ಷನಾಗಲು, **ಏಕದೇಹಗಾ** = ಒಂದೇ ಶರೀರದಲ್ಲಿರುವ, **ಏತಾಃ ಪಂಚಾಪಿ** = ಈ ಐದು ಮಂದಿ ದೇವಿಯರೂ ಕೂಡಿ, **ಸ್ವಭರ್ತ್ರಾರ್ಥ್ಯೈಃ** = ತಮ್ಮ ಪತಿಯರಿಗೋಸ್ಕರ **ಪೃಥಕ್ - ಪೃಥಕ್** = ಪ್ರತ್ಯೇಕವಾಗಿ, **ಪ್ರಾರ್ಥಯಾಮಾಸುಃ** = ಪ್ರಾರ್ಥನೆ ಮಾಡಿದರು, **ತತ್ ವಚಃ** = ಆ ಪ್ರಾರ್ಥನೆಯ ಮಾತು, **ಪಂಚಕೃತ್ವ ಅಭವತ್** = ಐದು ಬಾರಿ ಆಯಿತು (ಕೇಳಿಸಿತು).

**ತಾತ್ಪರ್ಯ** :- ಶಚೀ ಶ್ಯಾಮಲ ಮುಂತಾದ ದೇವತಾಸ್ತ್ರೀಯರು ವಿಪ್ರ ಬ್ರಾಹ್ಮಣ ಶರೀರದಲ್ಲಿ ರುದ್ರನನ್ನು ಕುರಿತು ತಪಸ್ಸನ್ನು ಆಚರಿಸಿ ಮುಂದಿನ ಜನ್ಮದಲ್ಲಿ ಪತಿ ಪ್ರಾಪ್ತಿಗಾಗಿ ವರವನ್ನು ಬೇಡಿದರು. . .... ಮನತ್ತು ಇಂದ್ರಸೇನಾ ... ಶಚಿ ಮುಂತಾದವರಿಗೆ ಪತಿಪ್ರಾಪ್ತಿ ಆಗಲಿಲ್ಲ. ಆದ್ದರಿಂದ ದ್ರೌಪದೀ ಜನ್ಮದಲ್ಲಾದರೂ ಆಗಲಿ ಎಂದು ಪ್ರಾಯಃ ರುದ್ರದೇವರನ್ನು ಕುರಿತು ತಪಸ್ಸನ್ನಾಚರಿಸಿದರೆ ಮೂಲರೂಪಿಯಾದ ರುದ್ರನು ಅವನ ಅಂತರ್ಗತನಾಗಿ ಶ್ರೀಹರಿಯು ಪ್ರತ್ಯಕ್ಷನಾದ ಆಗ ಒಂದೇ ದೇಹದಲ್ಲಿ ಇದ್ದ ಈ ದೇವಿಯರು ಪ್ರತ್ಯೇಕವಾಗಿ ಪ್ರತಿಪ್ರಾಪ್ತಿಯನ್ನು ಪ್ರಾರ್ಥಿಸಿದ್ದರಿಂದ ಆ ದೇಹದಿಂದ ರುದ್ರನಿಗೆ ಐದು ಬಾರಿ ಕೇಳಿಸಿತು.

**ಶಿವದೇಹಸ್ಥಿತೋ ವಿಷ್ಣುರ್ಭಾರತ್ಯೈ ತು ದದೌ ಪತಿಮ್ ।**
**ಅನ್ಯಾಸಾಂ ಶಿವ ಏವಾಥ ಪ್ರದದೌ ಚತುರಃ ಪತೀನ್ ॥ ೧೩೨ ॥**

ಪದಚ್ಛೇದ :- ಶಿವದೇಹಸ್ಥಿತಃ, ವಿಷ್ಣು., ಭಾರತ್ಯೋ., ತು, ದದೌ, ಪತಿಮ್, ಅನ್ಯಾಸಾಂ, ಶಿವಃ, ಏವ, ಅಥ, ಪ್ರದದೌ, ಚತುರಃ ಪ್ರತೀನ್ ।

**ಅರ್ಥ** :- **ಅಥಃ** = ಅನಂತರ, **ಶಿವದೇಹಸ್ಥಿತಃ** = ಶಿವನ ಶರೀರದಲ್ಲಿ ಇರುವ, **ವಿಷ್ಣುಃ** = ನಾರಾಯಣನು, **ಭಾರತ್ಯೈ** = ಭಾರತೀದೇವಿಗೆ **ಪತಿಮ್** = ಗಂಡನನ್ನು (ಪತಿಪ್ರಾಪ್ತಿರೂಪ ವರವನ್ನು) **ದದೌ** = ಕೊಟ್ಟನು. **ಅನ್ಯಾಸಾಂ** = ಇತರ ದೇವಿಯರಿಗೆ **ಶಿವ ಏವ** = ರುದ್ರದೇವರೇ **ಚತುರಃ** = ನಾಲ್ಕು **ಪತೀನ್** = ಗಂಡಂದಿರನ್ನು (ವರವನ್ನು) **ಪ್ರದದೌ** = ಕೊಟ್ಟನು.

**ತಾತ್ಪರ್ಯ** :- ಒಂದೇ ದೇಹದಲ್ಲಿ ಇದ್ದು ಭಾರತೀ ಸಹಿತರಾದ ಶಚೀದೇವಿಯರು, ತಪಸ್ಸನ್ನಾಚರಿಸಿದರು. ಆ ಶರೀರದಲ್ಲಿದ್ದ ಭಾರತೀದೇವಿಗೆ ಮಾತ್ರ ರುದ್ರದೇವರಲ್ಲಿ ಇರುವ ಶ್ರೀಹರಿಯೇ ಪತಿ ಪ್ರಾಪ್ತಿರೂಪ ವರವನ್ನು ಕರುಣಿಸಿದ, ಆ ದೇಹದಲ್ಲಿರುವ ಇತರ ದೇವಿಯರಿಗೆ ರುದ್ರದೇವರೇ ನಾಲ್ಕು ಪತಿಗಳನ್ನು ವರವಾಗಿ ಕರುಣಿಸಿದರು.

**ದೇವ್ಯಶ್ಚತಸ್ರಸ್ತು ತದಾ ದತ್ತಮಾತ್ರೇ ವರೇಽಮುನಾ ।**
**ದೇವಾನಾಮವತಾರಾರ್ಥಂ ಪಂಚ ದೇವ್ಯಃ ಸ್ಮ ಇತ್ಯಥ ।**
**ನಾಜಾನನ್ನೇಕದೇಹತ್ವಾಚ್ಚಿದ್ಯೋಗಾತ್ ಕ್ಷೀರನೀರವತ್ ॥ ೧೩೩ ॥**

ಪದಚ್ಛೇದ :- ದೇವ್ಯಃ, ಚತಸ್ರಃ, ತು, ತದಾ ದತ್ತಮಾತ್ರೇ, ವರೇ, ಅಮುನಾ, ದೇವಾನಾಂ, ಅವತಾರಾರ್ಥಂ, ಪಂಚದೇವ್ಯಃ, ಸ್ಮ, ಇತಿ, ಅಥ, ನ, ಅಜಾನನ್, ಏಕದೇಹತ್ವಾತ್, ಚಿದ್‌ಯೋಗಾತ್, ಕ್ಷೀರನೀರವತ್.

**ಅರ್ಥ** :- **ಅಮುನಾ** = ಈ ರುದ್ರದೇವನಿಂದ, **ವರೇ** = ವರವು, **ದತ್ತಮಾತ್ರೇ** = ಕೊಡಲ್ಪಟ್ಟಾಗ, **ಚತಸ್ರಃ** = ನಾಲ್ಕು, **ದೇವ್ಯಃ ತು** = ದೇವಿಯರಾದರೂ, **ದೇವಾನಾಂ** = ದೇವತೆಗಳ, **ಅವತಾರಾರ್ಥಂ** = ಅವತಾರಕ್ಕೋಸ್ಕರ, **ಪಂಚದೇವ್ಯಃ, ಸ್ಮಃ** = ಐದು ಮಂದಿ ಬೇರೆ ದೇವಿಯರು, **ಇತಿ**, ಎಂದು **ಏಕದೇಹತ್ವಾತ್**, ಒಂದೇ ಶರೀರವಿರುವುದರಿಂದ, **ಕ್ಷೀರ ನೀರವತ್** = ಹಾಲು ನೀರಿನಂತೆ, **ಚಿದ್‌ಯೋಗಾತ್** = ಚೇತನಗಳ ಸಂಬಂಧ ಇರುವುದರಿಂದ, **ನ ಅಜಾನನ್** = ತಿಳಿಯಲಿಲ್ಲ.

**ತಾತ್ಪರ್ಯ** :- ಒಂದೇ ದೇಹದ ಸಂಬಂಧ ಐದು ಮಂದಿ ದೇವಿಯರಿಗೆ ಇರುವುದರಿಂದ ಹಾಲು ನೀರಿನಂತೆ ಚೇತನದ ಸಂಬಂಧ ಇರುವುದರಿಂದ ಪ್ರತಿಯೊಬ್ಬರು ನಾವು ನಮ್ಮ ನಮ್ಮ ಪತಿಗಳಿಗಾಗಿ ಹುಟ್ಟಿದವರು ನಾವು ಐದು ಮಂದಿ ಒಂದೇ ಶರೀರದಲ್ಲಿ ಇದ್ದೇವೆ ಎಂಬುದನ್ನು ಮರೆತು ಭಾರತೀದೇವಿಯ ಹೊರತಾಗಿ ಎಲ್ಲರೂ ಇದು ನನ್ನದೊಂದೇ ಶರೀರ ಎಂಬ ಭ್ರಾಂತಿ ಉಳ್ಳವರಾಗಿದ್ದರು ಎಂದು ಭಾವ.

**ತಾಃ ಶ್ರುತ್ವಾ ಸ್ವಪತಿಂ ದೇವಿ ನಚಿರಾತ್ ಪ್ರಾಪ್ಸ್ಯಸೀತಿ ಚ ।**
**ವಿಷ್ಣೂಕ್ತಂ ಶಂಕರೋಕ್ತಂ ಚ ಚತ್ವಾರಃ ಪತಯಃ ಪೃಥಕ್ ।**

 

**ಭವಿಷ್ಯಂತೀತ್ಯಥೈಕಸ್ಯಾ ಮೇನಿರೇ ಪಂಚಭರ್ತೃತಾಮ್ ॥ ೧೩೪ ॥**

ಪದಚ್ಛೇದ :- ತಾಃ, ಶ್ರುತ್ವಾ, ಸ್ವಪತಿಂ, ದೇವೀ, ನ, ಚಿರಾತ್, ಪ್ರಾಪ್ಸ್ಯಸಿ, ಇತಿ, ಚ, ಉಕ್ತಂ, ಶಂಕರೋಕ್ತಂ, ಚ, ಚತ್ವಾರಃ, ಪತಯಃ, ಪೃಥಕ್, ಭವಿಷ್ಯಂತ, ತಥಾ, ಏತಸ್ಯಾಂ, ಮೇನಿರೆ, ಪಂಚಭರ್ತೃತಾಮ್.

**ಅರ್ಥ** :- **ದೇವಿ** = ದೇವಿಯೇ, **ಸ್ವಪತಿಂ** = ನಿನ್ನ ಗಂಡನನ್ನು, **ನ ಚಿರಾತ್** = ಶೀಘ್ರದಲ್ಲಿಯೇ, **ಪ್ರಾಪ್ಸ್ಯಸಿ** = ಹೊಂದುವಿ, **ಇತಿ** = ಎಂದು **ವಿಷ್ಣೂಕ್ತಂ** = ಶ್ರೀಹರಿಯಿಂದ ಹೇಳಿದ್ದನು, **ಚ** = ಮತ್ತು, **ಪೃಥಕ್** = ಪ್ರತ್ಯೇಕವಾಗಿ, **ಚತ್ವಾರ** = ನಾಲ್ಕು, **ಪತಯಃ** = ಗಂಡಂದಿರು, **ಭವಿಷ್ಯಂತಿ** = ಆಗುತ್ತಾರೆ, **ಇತಿ** = ಎಂಬ **ಶಂಕರೋಕ್ತಂ ಚ** = ಶಂಕರನ ಮಾತನ್ನೂ, **ಶೃತ್ವಾ** = ಕೇಳಿ, **ತಾಃ** = ಆ ದೇವಿಯರು, **ಏಕಸ್ಯಾಂ** = ಒಬ್ಬಳಿಗೇ, **ಪಂಚ ಭರ್ತೃತಾಮ್** = ಐದು ಮಂದಿ ಗಂಡಂದಿರೆಂದು, **ಮೇನಿರೆ** = ತಿಳಿದರು.

**ತಾತ್ಪರ್ಯ** :- ಆ ಇಂದ್ರಸೇನೆಯಲ್ಲಿರುವ ದೇವಿಯರು ತಪಸ್ಸು ಮಾಡಿದಾಗ ಶ್ರೀಹರಿಯ ಇಂದ್ರಸೇನೆಯಲ್ಲಿರುವ ಭಾರತೀದೇವಿಗೆ ನೀನು ಶೀಘ್ರದಲ್ಲಿಯೇ ನಿನ್ನ ಪತಿಯನ್ನು ಹೊಂದುವಿ ಎಂದನು. ಹಾಗೆ ರುದ್ರನೂ ನಾಲ್ಕು ಮಂದಿಗೆ ಪ್ರತ್ಯೇಕವಾಗಿ ಪತಿ ಸಿಗುವನು ಎಂದು ನಾಲ್ಕು ಬಾರಿ ಹೇಳಿದಾಗ ತಮ್ಮದೇ ಶರೀರವೆಂಬ ಭ್ರಾಂತಿಯಲ್ಲಿದ್ದ ಆ ನಾಲ್ಕು ಮಂದಿ ಒಬ್ಬಳಿಗೆ ಐದು ಮಂದಿ ಪತಿಯಂದಿರು ಎಂದು ಭ್ರಾಂತಿಗೊಂಡರು.

**ರುರುದುಶ್ಚೈಕದೇಹಸ್ಥಾ ಏಕೈವಾಹಮಿತಿ ಸ್ಥಿತಾಃ ।**
**ಅಥಾಭ್ಯಾಗಾನ್ಮಹೇಂದ್ರೋಽತ್ರ ಸೋಽಬ್ರವೀತ್ ತಾಂ ವರಸ್ತ್ರಿಯಮ್ ॥ ೧೩೫ ॥**

ಪದಚ್ಛೇದ :- ರುರುದುಃ, ಚ, ಏಕದೇಹಸ್ಥಾಃ, ಏಕಾ, ಏವ, ಅಹಂ, ಇತಿ, ಸ್ಥಿತಾಃ, ಮಹೇಂದ್ರಃ, ಅತ್ರ, ಸಃ, ಅಬ್ರವೀತ್, ತಾಂ, ಅಥ, ಅಭ್ಯಗ್ನಾತ್, ವರಸ್ತ್ರಿಯಮ್.

**ಕಿಮರ್ಥಂ ರೋದಿಷೀತ್ಯೇವ ಸಾಽಬ್ರವೀದ್ ವಟುರೂಪಿಣಮ್ ।**
**ಶಂಕರಂ ದರ್ಶಯಿತ್ವೈವ ಪಂಚಭರ್ತೃತ್ವಮೇಷ ಮೇ ॥ ೧೩೬ ॥**

**ಪದಚ್ಛೇದ :- ಕಿಮರ್ಥಂ, ರೋದಷಿ, ಇತಿ, ಏವ, ಸಾ, ಅಬ್ರವೀತ್, ವಟುರೂಪಿಣಮ್, ಶಂಕರಂ, ದರ್ಶಯಿತ್ವಾ, ಏವ, ಪಂಚಭರ್ತೃತ್ವಂ, ಏಷಃ, ಮೇ.**

**ವರಾರ್ಥಮರ್ಥಿತಃ ಪ್ರಾದಾದಿತಿ ತಂ ಶಿವ ಇತ್ಯಥ ।**
**ಅಜಾನನ್ ಶಕ್ರ ಆಹೋಚ್ಚೈಃ ಕಿಮೇತದ್ ಭುವನತ್ರಯೇ ।**
**ಮತ್ಪಾಲಿತೇ ಯೋಷಿತಂ ತ್ವಂ ವೃಥಾ ಶಪಸಿ ದುರ್ಮತೇ ॥ ೧೩೭ ॥**

**ಪದಚ್ಛೇದ :- ವರಾರ್ಥಂ, ಅರ್ಥಿತಃ, ಪ್ರಾದಾತ್, ಇತಿ, ತಂ, ಶಿವಃ, ಇತಿ, ಅಥ, ಅಜಾನನ್, ಶಕ್ರಃ, ಆಹ, ಉಚ್ಚೈಃ, ಕಿಂ, ಏತತ್, ಭುವನತ್ರಯೇ, ಮತ್ಪಾಲಿತೇ, ಯೋಷಿತಂ = ತ್ವಂ, ವೃಥಾ, ಶಪಸಿ, ದುರ್ಮತೇ.**

**ಅರ್ಥ :- ಏಕದೇಹಸ್ಥಾ** = ಒಂದೇ ದೇಹದಲ್ಲಿರುವ ಆ ದೇವಿಯರು, **ಏಕೈವ ಅಹಂ ಸ್ಥಿತಾ** = ನಾನೊಬ್ಬಳೇ ಈ ಶರೀರದಲ್ಲಿರುವವಳು, **ಇತಿ** = ಎಂದು, **ರುರುದುಃ** = ದುಃಖಿಸಿದರು, **ಅಥ** = ಅನಂತರ, **ತತ್ರ** = ಇಲ್ಲಿಗೆ, **ಮಹೇಂದ್ರಃ** = ದೇವೇಂದ್ರನು, **ಅಭ್ಯಗಾತ್** = ಬಂದನು, **ಸಃ** = ಆ ದೇವೇಂದ್ರನು, **ವರಸ್ತ್ರಿಯಾಮ್** = ಉತ್ತಮಳಾದ, **ತಾಂ** = ಆ ಸ್ತ್ರೀಯನ್ನು (ಇಂದ್ರಸೇನೆಯನ್ನು) ಕುರಿತು, **ಕಿಮರ್ಥಂ** = ಏತಕ್ಕೋಸ್ಕರ, **ರೋದಿಷೀ** = ಅಳುತ್ತಿರುವಿ, **ಇತಿ** = ಎಂದು, **ಅಬ್ರವೀತ್** = ಕೇಳಿದನು, **ಸಾ** = ಆ ಇಂದ್ರಸೇನೆಯು, **ವಟುರೂಪಿಣಂ** = ವಟುರೂಪಿಯಾದ, **ಶಂಕರಂ** = ರುದ್ರನನ್ನು, **ದರ್ಶಯಿತ್ವಾ** = ತೋರಿಸಿ, **ವರಾರ್ಥಂ** = ಪತಿಗಾಗಿ, **ಅರ್ಥಿತಃ** = ಪ್ರಾರ್ಥಿಸಲ್ಪಟ್ಟ, **ಮೇ** = ನನಗೆ, **ಏಷಃ** = ಈ ರುದ್ರನು **ಪಂಚಭರ್ತೃತ್ವಂ** = ಐದು ಮಂದಿ ಗಂಡಂದಿರನ್ನು, **ಪ್ರಾದಾತ್** = ಕೊಟ್ಟನು, **ಇತಿ** = ಎಂದು, **ಅಬ್ರವೀತ್** = ಹೇಳಿದಳು, **ಅಥ** = ಅನಂತರ, **ತಂ** = ಆ ವಟುರೂಪಿಯನ್ನು, **ಶಿವ ಇತಿ** = ಶಿವನೆಂದು, **ಅಜಾನನ್** = ತಿಳಿಯದೇ, **ಶಕ್ರಃ** = ಇಂದ್ರನು, **ದುರ್ಮತೇ** = ದುರ್ಬುದ್ಧಿಯುಳ್ಳವನೇ, **ಮತ್ಪಾಲಿತೆ** = ನನ್ನಿಂದ ಕಾಪಾಡಲ್ಪಟ್ಟ, **ಭುವನತ್ರಯೇ** = ಮೂರು ಲೋಕದಲ್ಲಿ, **ತ್ವಂ** = ನೀನು, **ಯೋಷಿತಂ** = ಸ್ತ್ರೀಯನ್ನು, **ವೃಥಾ** = ವ್ಯರ್ಥವಾಗಿ **ಶಪಿಸಿ** = ಶಪಿಸುತ್ತಿರುವಿ, **ಇತಿ** = ಎಂದು, **ಉಚ್ಚೈಃ** = ಗಟ್ಟಿಯಾಗಿ, **ಆಹ** = ಹೇಳಿದನು.

**ತಾತ್ಪರ್ಯ :-** ಆ ಇಂದ್ರಸೇನೆಯಲ್ಲಿರುವ ದೇವಿಯರು ಈ ದೇಹದಲ್ಲಿ ಇರುವುದು ನಾವೊಬ್ಬರೆ ಎಂದು ಭ್ರಮಿಸಿ ನಮಗೆ ಐದು ಮಂದಿ

ಗಂಡಂದಿರನ್ನು ನೀಡಿದ ಎಂದು ದುಃಖಿಸುತ್ತಿದ್ದರು. ಆಗ ಇಂದ್ರ ಬಂದು ಕಾರಣವನ್ನು ಕೇಳಿದಾಗ ನಾವು ಪತಿಪ್ರಾಪ್ತಿಗಾಗಿ ವರ ಬೇಡಿದಾಗ ಐದು ಮಂದಿ ಪತಿಗಳಾಗುವರು ಎಂದು ವರ ನೀಡಿದ ಎಂದಳು. ಆಗ ಆ ವಟುರೂಪಿಯಾದವನು ಶಿವನೆಂದು ತಿಳಿಯದೇ ಇಂದ್ರನು ಗಟ್ಟಿಯಾಗಿ ನನ್ನ ಪಾಲನೆಯಲ್ಲಿ ಇರುವ ಈ ಅಮಾಯಕ ಸ್ತ್ರೀಗೆ ವಿನಾಕಾರಣ ವರರೂಪವಾದ ಈ ಶಾಪವನ್ನು ಏಕೆ ಕೊಟ್ಟೆ? ಎಂದು ಗದುರಿಸಿ ಕೇಳಿದ.

ವಿ.ವಿ. ಆ ಇಂದ್ರಸೇನೆಯಲ್ಲಿಯ ಪಾರ್ವತೀ ದೇವಿಯೇ ಮೊದಲಾದವರು ಒಬ್ಬಳಿಗೆ ಅನೇಕ ಪತಿಯರು ಅದು ವ್ಯಭಿಚಾರಕ್ಕೆ ಸಮಾನವೆಂದು ಅತ್ತರು. ಭಾರತೀದೇವಿಯು ಮಾತ್ರ ಅಜ್ಞ ಲೋಕಾಪವಾದದ ಭಯದಿಂದ ಕಣ್ಣೀರಿಟ್ಟಳು. ಹೊರತು ಶೋಕದಿಂದಲ್ಲ. ಏಕೆಂದರೆ ಮಹಾಭಾರತದಲ್ಲಿ ನೈಮಿಷಾರಣ್ಯದಲ್ಲಿ ದೇವತೆಗಳು ಸತ್ರಯಾಗ ನಡೆಸುವ ಸಂದರ್ಭವಲ್ಲಿ ಗಂಗಾನದಿಯಲ್ಲಿ ಬಂಗಾರದ ಕಮಲಗಳು ತೇಲಿ ಬಂದಿದ್ದು ನೋಡಿ ಆಶ್ಚರ್ಯದಿಂದ ಇಂದ್ರ ಅದರ ಮೂಲವನ್ನು ಹುಡುಕಿ ಬಂದಾಗ ಇಂದ್ರಸೇನೆ ಜಲಪಾನಕ್ಕೆ ಬಂದು ಕಣ್ಣೀರಿಡುತ್ತಿದ್ದಳು ಎಂದು ಈ ಪ್ರಸಂಗವನ್ನು ಉಲ್ಲೇಖ ಮಾಡಿದೆ.

ಇದರಿಂದ ಅವಳ ಕಣ್ಣೀರು ಶೋಕದ ಕಣ್ಣೀರು ಆಗಿದ್ದರೆ ಅದು ಬಂಗಾರದ ಕಮಲಗಳಾಗಿ ತೇಲುತ್ತಿರಲಿಲ್ಲ. ಆದ್ದರಿಂದ ಅದು ಶೋಕವಿಲ್ಲದೇ ಭಾರತೀ ದೇವಿಯೇ ಹರಿಸಿದ ಕಣ್ಣೀರೆಂದು ಇದರಿಂದ ಸಿದ್ಧವಾಗುತ್ತದೆ ಎಂದು ವಾದಿರಾಜರು ನಿರೂಪಿಸಿದ್ದಾರೆ. ಇನ್ನು ರುದ್ರದೇವರು ಅವರು ಪತಿಂದೇಹಿ ಎಂದು ಕೇಳಿದಾಗ ರುದ್ರನ ವರದಿಂದ ಇಂದ್ರಸೇನೆಯನ್ನು ಸಮಾಧಾನ ಪಡಿಸುತ್ತಾ ನೀನು ಒಬ್ಬಳೇ ಆಗಿದ್ದರೆ ನೀನು ಒಮ್ಮೆ ಮಾತ್ರ ಪತಿಂದೇಹಿ ಎಂದು ಕೇಳುತ್ತಿದ್ದಿ. ಆದರೆ ನೀನು ಅನೇಕ ಬಾರಿ ಕೇಳಿದ್ದರಿಂದ ನಿನ್ನಲ್ಲೇ ಅನೇಕ ಮಂದಿಯರು ಇರುವುದು ಸೂಚಿತವಾಗುತ್ತಿದೆ. ಆದಕ್ಕೆ ಅನುಗುಣವಾಗಿ ಅವರವರ ಪತಿ ಪ್ರಾಪ್ತಿಯನ್ನು ಅನುಗ್ರಹಿಸಿ ಅದು ಅವರಿಗೆ ಧರ್ಮವೇ ಆಗುತ್ತದೆ ಎಂದು ವಾದಿರಾಜರು ತಿಳಿಸಿದ್ದಾರೆ.

**ಇತೀರಿತೇ ಶಿವಃ ಪ್ರಾಹ ಪತ ಮಾನುಷ್ಯಮಾಪ್ನುಹಿ ।**
**ಅಸ್ಯಾಶ್ಚ ಭರ್ತಾ ಭವಸಿ ತ್ವಾಮೇವೈಷಾ ವರಿಷ್ಯತಿ ॥ ೧೩೮ ॥**

**ಪದಚ್ಛೇದ :- ಇತಿ, ಈರಿತೇ, ಶಿವಃ, ಪ್ರಾಹ, ಪತ, ಮಾನುಷಂ, ಆಪ್ನುಹಿ, ಅಸ್ಯಾಃ, ಚ, ಭರ್ತಾ, ಭವಸಿ, ತ್ವಾಂ, ಏವ, ಏಷಾ, ವರಿಷ್ಯತಿ.**

**ಅರ್ಥ :- ಇತಿ** = ಈ ರೀತಿಯಾಗಿ ಇಂದ್ರ ಹೇಳಿದಾಗ, **ಶಿವಃ** = ಶಿವನು, **ಪತ** = ಸ್ವರ್ಗದಿಂದ ಚ್ಯುತನಾಗು, **ಮಾನುಷಂ** = ಮನುಷ್ಯ ಜನ್ಮವನ್ನು, **ಆಪ್ನುಹಿ** = ಹೊಂದು, **ಅತ್ರ** = ಈ ಮನುಷ್ಯ ಜನ್ಮದಲ್ಲಿ, **ಅಸ್ಯಾಃ** = ಇವಳಿಗೆ **ಭರ್ತಾ** = ಗಂಡನು, **ಭವಸಿ** = ಆಗುವಿ, **ಏಷಾ** = ಇವಳು, **ತ್ವಾಂ** = ನಿನ್ನನ್ನು, **ವರಿಷ್ಯತಿ** = ವರಿಸುವಳು, **ಇತಿ** = ಎಂದು **ಪ್ರಾಹ** = ಹೇಳಿದನು.

**ತಾತ್ಪರ್ಯ :-** ಹೀಗೆ ಇಂದ್ರದೇವರು ಹೇಳಿದಾಗ ರುದ್ರದೇವರು ಕೋಪದಿಂದ ನಾನು ಯಾರೆಂದು ತಿಳಿಯದೇ ಮಾತನಾಡಿದ್ದಿ ನೀನು ಸ್ವರ್ಗದಿಂದ ಚ್ಯುತನಾಗಿ ಮಾನವನಾಗಿ ಹುಟ್ಟಿ ಅಲ್ಲಿ ಇವಳು ನಿನ್ನನ್ನು ವರಿಸುವುದರಿಂದ ನೀನೇ ಇವಳಿಗೆ ಗಂಡನಾಗುವಿ ಎಂದನು.

**ಪಶ್ಯಾತ್ರ ಮದವಜ್ಞಾನಾತ್ ಪತಿತಾಂಸ್ತ್ವಾದೃಶಾನ್ ಸುರಾನ್ ।**
**ಗಿರೇರಧಸ್ತಾದಸ್ಯೈವೇತ್ಯುಕ್ತೋಽಸೌ ಪಾಕಶಾಸನಃ ।**
**ಉದ್ಬಬರ್ಹ ಗಿರಿಂ ತಂ ತು ದದರ್ಶಾತ್ರ ಚ ತಾನ್ ಸುರಾನ್ ॥ ೧೩೯ ॥**

**ಪದಚ್ಛೇದ :- ಪಶ್ಯ, ಅತ್ರ, ಮದವಜ್ಞಾನಾತ್, ಪತಿತಾನ್, ತ್ವಾದೃಶಾನ್, ಸುರಾನ್, ಗಿರೇಃ, ಅಧಸ್ತಾತ್, ಅಸ್ಯ, ಏವ, ಇತಿ, ಉಕ್ತಃ, ಅಸೌ, ಪಾಕಶಾಸನಃ, ಉದ್ಬಬರ್ಹ, ಗಿರಿಂ, ತಂ, ತು, ದದರ್ಶ, ಅತ್ರ, ಚ, ತಾನ್, ಸುರಾನ್.**

**ಅರ್ಥ :- ಮದವಜ್ಞಾನಾತ್** = ನನ್ನನ್ನು ಅವಮಾನಿಸಿದ್ದರಿಂದ, **ತ್ವಾದೃಶಾನ್** = ನಿನ್ನಂಥಹ, **ಸುರಾನ್** = ದೇವತೆಗಳನ್ನು, **ಅತ್ರ ಗಿರೇಃ ಅಧಸ್ತಾತ್** = ಈ ಪರ್ವತದ ಕೆಳಭಾಗದಲ್ಲಿ, **ಪಶ್ಯ** = ನೋಡು, **ಇತಿ** = ಎಂದು, **ಉಕ್ತಃ** = ಹೇಳಲ್ಪಟ್ಟವನಾಗಿ, **ಅಸೌ** = ಈ, **ಪಾಕಶಾಸನಃ** = ಇಂದ್ರನು, **ತಂ ಗಿರಿಂ** = ಆ ಪರ್ವತವನ್ನು **ಉದ್ಬಬರ್ಹ** = ಎತ್ತಿದನು, **ಅತ್ರ** = ಇಲ್ಲಿ, **ತಾನ್ ಸುರಾನ್** = ಆ ದೇವತೆಗಳನ್ನು, **ದದರ್ಶ** = ನೋಡಿದನು.

**ತಾತ್ಪರ್ಯ :-** ಎಲೈ ಇಂದ್ರನೇ ನಿನ್ನಂತಹ ನನ್ನನ್ನು ಅವಮಾನಿಸಿದ್ದರಿಂದ ಫಲವನ್ನು ಈ ಪರ್ವತದ ಕೆಳಗೆ ನೋಡು ಎಂದು ಆಗ ಇಂದ್ರನು ಪರ್ವತವನ್ನು ಎತ್ತಿದಾಗ ಅಲ್ಲಿ ಅನೇಕ ದೇವತೆಗಳನ್ನು ಕಂಡನು.

**ಪೂರ್ವೇಂದ್ರಾನ್ ಮಾರುತವೃಷನಾಸತ್ಯಾಂಶ್ಚತುರಃ ಸ್ಥಿತಾನ್ ।**
**ಮಾನುಷೇಷ್ವವತಾರಾಯ ಮಂತ್ರಂ ರಹಸಿ ಕುರ್ವತಃ ॥ ೧೪೦ ॥**

ಪದಚ್ಛೇದ :– **ಪೂರ್ವೇಂದ್ರಾನ್, ಮಾರುತವೃಷನಾಸತ್ಯಾನ್, ಚತುರಃ, ಸ್ಥಿತಾನ್, ಮಾನುಷೇಷು, ಅವತಾರಾಯ, ಮಂತ್ರಂ, ರಹಸಿ, ಕುರ್ವತಃ.**

**ಅರ್ಥ** :- **ಮಾರುತ** = ವಾಯುದೇವರು, **ವೃಷ** = ಯಮದೇವರು, **ನಾಸತ್ಯಾನ್** = ಇಬ್ಬರು ಅಶ್ವಿನೀ ದೇವತೆಗಳು **ಚತುರಸ್ಥಿತಾನ್** = ಈ ನಾಲ್ಕು ಮಂದಿ **ಪೂರ್ವೇಂದ್ರಾನ್** = ಹಿಂದಿನ ಮನ್ವಂತರಗಳ ಇಂದ್ರನನ್ನು, **ಮಾನುಷೇಷು** = ಮಾನವರಾಗಿ, **ಅವತಾರಾಯ** = ಅವತರಿಸಲು, **ರಹಸಿ** = ಏಕಾಂತದಲ್ಲಿ, **ಮಂತ್ರಂ** = ಸಮಾಲೋಚನೆಯನ್ನು, **ಕುರ್ವತಃ** = ಮಾಡುತ್ತಿರುವುದನ್ನು (ದದರ್ಶ = ನೋಡಿದನು)

**ತಾತ್ಪರ್ಯ** :- ಇಂದ್ರನು ಬೆಟ್ಟವನ್ನು ತೆಗೆದಾಗ ಆಗ ಅಲ್ಲಿ ಸ್ವಾರೋಚಿಷ ಮನ್ವಂತರದ ರೋಚನ ನಾಮಕ ವಾಯು ಉತ್ತಮ ಮನ್ವಂತರದ ಇಂದ್ರಜಿತ್ ನಾಮಕ ಯಮ, ರೈವತ, ತಾಪಸ, ಮನ್ವಂತರಗಳ, ತ್ರಿಶಿಖ ಮತ್ತು ವಿಭು, ನಾಮಕರಾದ ಅಶ್ವಿನೀ ದೇವತೆಗಳು, ಇವರೆಲ್ಲರು ಭೂಮಿಯಲ್ಲಿ ತಾವು ಅವತರಿಸಲು ಸಮಾಲೋಚನೆ ನಡೆಸಿದ್ದರು. ಅವರನ್ನು ಇಂದ್ರ ಕಂಡ.

**ತತೋ ವರೇಣ್ಯಂ ವರದಂ ವಿಷ್ಣುಂ ಪ್ರಾಪ್ಯ ಸ ವಾಸವಃ ।**
**ತತ್ಪ್ರಸಾದಾನ್ನರಾಂಶೇನ ಯುಕ್ತೋ ಭೂಮಾವಜಾಯತ ॥ ೧೪೧ ॥**

ಪದಚ್ಛೇದ :– **ತತಃ, ವರೇಣ್ಯಂ, ವರದಂ, ವಿಷ್ಣುಂ, ಪ್ರಾಪ್ಯ, ಸಃ, ವಾಸವಃ, ತತ್ಪ್ರಸಾದಾತ್, ನರಾಂಶೇನ ಯುಕ್ತಃ, ಭೂಮೌ, ಅಜಾಯತ.**

**ಅರ್ಥ** :- **ತತಃ** = ಅನಂತರ, **ಸಃ** = ಆ, **ವಾಸವಃ** = ಇಂದ್ರನು, **ವರೇಣ್ಯಂ** = ಸರ್ವೋತ್ತಮನಾದ, **ವರದಂ** = ವರವನ್ನು ಕೊಡುವ, **ವಿಷ್ಣುಂ** = ಶ್ರೀಹರಿಯನ್ನು ಪ್ರಾಪ್ಯ (ತಪಸ್ಸಿನಿಂದ) ಹೊಂದಿ, **ತತ್ಪ್ರಸಾದಾತ್** = ಅವನ ಅನುಗ್ರಹದಿಂದ, **ನರಾಂಶೇನ** = ನರಾಂಶದಿಂದ, **ಯುಕ್ತಃ** = ಯುಕ್ತನಾಗಿ, **ಭೂಮೌ** = ಭೂಮಿಯಲ್ಲಿ, **ಅಜಾಯತ** = ಹುಟ್ಟಿದನು.

ತಾತ್ಪರ್ಯ :- ಹೀಗೆ ಶಿವನ ಶಾಪದಿಂದ ಖಿನ್ನನಾದ ಇಂದ್ರನು ಸರ್ವೋತ್ತಮನಾದ ಶ್ರೀಹರಿಯನ್ನು ಅನೇಕ ವರ್ಷಗಳ ಕಾಲ ತಪಸ್ಸನ್ನಾಚರಿಸಿ ಒಲಿಸಿಕೊಂಡು ನಂದನೆಂಬ ಮುನಿಯು ವಿಷ್ಣು, ವಾಯು, ಅನಂತ ಇವರ ಅಂಶನಿಂದ ಕೂಡಿದವನಾಗಿ ಇಂದ್ರನು ಅರ್ಜುನನಾಗಿ ಭೂಮಿಯಲ್ಲಿ ಅವತರಿಸಿದ.

**ಮದವಜ್ಞಾನಿಮಿತ್ತೇನ ಪತಿತಾ ಇತಿ ತಾನ್ ಸುರಾನ್ ।**
**ಮಾರುತಾದೀನ್ ಮೃಷಾಽವಾದೀರಿತಿ ಬ್ರಹ್ಮಾ ಶಿವಂ ತದಾ ॥ ೧೪೨ ॥**

**ಪದಚ್ಛೇದ :- ಮದವಜ್ಞಾನಿಮಿತ್ರೇನ, ಪತಿತಾ, ಇತಿ, ತಾನ್, ಸುರಾನ್, ಮಾರುತಾದೀನ್, ಮೃಷಾ, ಅವಾದೀ, ಇತಿ, ಬ್ರಹ್ಮಾ ಶಿವಂ, ತದಾ.**

**ಶಶಾಪ ಮಾನುಷೇಷು ತ್ವಂ ಕ್ಷಿಪ್ರಂ ಜಾತಃ ಪರಾಭವಮ್ ।**
**ಶಕ್ರಾನ್ನರತನೋರ್ಯಾಸಿ ಯಸ್ಮೈ ತ್ವಂ ತು ಮೃಷಾಽವದಃ ॥ ೧೪೩ ॥**

**ಪದಚ್ಛೇದ :- ಶಶಾಪ, ಮಾನುಷೇಷು, ತ್ವಂ, ಕ್ಷಿಪ್ರಂ, ಜಾತಃ, ಪರಾಭವಮ್, ಶಕ್ರಾತ್, ನರತನೋಃ, ಯಾಸಿ, ಯಸ್ಮೈ, ತ್ವಂ, ತು, ಮೃಷಾವದಃ.**

**ಅರ್ಥ** :- **ಮದವಜ್ಞಾನಿಮಿತ್ತೇನ** = ನನ್ನ ತಿರಸ್ಕಾರದಿಂದ ನಿಮಿತ್ತದಿಂದ, **ಮಾರುತಾದೀನ್** = ವಾಯುವೇ ಮೊದಲಾದ ತಾನ್, **ಸುರಾನ್** = ಆ ದೇವತೆಗಳನ್ನು **ಪತಿತಾಃ** = ಬಿದ್ದವರು, **ಇತಿ** = ಎಂದು, **ಮೃಷಾ** = ಸುಳ್ಳನ್ನು, **ಅವಾದಿ** = ಹೇಳಿರುವಿ, **ಇತಿ** = ಎಂದು, **ಬ್ರಹ್ಮಾ** = ಬ್ರಹ್ಮನು, **ಶಿವಂ** = ಶಿವನನ್ನು, **ತದಾ** = ಆಗ, **ಯಸ್ಮೈ** = ಯಾವ, ಇಂದ್ರನಲ್ಲಿ, **ತ್ವಂ** = ನೀನು, **ಮೃಷಾವದಃ** = ಸುಳ್ಳನ್ನು ಹೇಳಿದ್ದೀಯ. **ತ್ವಂ** = ನೀನು, **ಕ್ಷಿಪ್ರಂ** = ಶೀಘ್ರವಾಗಿ, **ಮನುಷ್ಯೇಷು** = ಮನುಷ್ಯ ಜನ್ಮದಲ್ಲಿ, **ಜಾತಃ** = ಹುಟ್ಟಿದವನಾಗಿ, **ಶಕ್ರಾತ್** = ಇಂದ್ರನಿಂದ, **ಪರಾಭವಮ್** = ಪರಾಜಯವನ್ನು, **ಯಾಸಿ** = ಹೊಂದುವಿ, **ಇತಿ** = ಎಂದು, **ಶಶಾಪ** = ಶಪಿಸಿದನು.

ತಾತ್ಪರ್ಯ :- ಹೇ ಇಂದ್ರನೇ ಪರ್ವತದ ಕೆಳಗಿದ್ದ ಆ ದೇವತೆಗಳನ್ನು ತೋರಿಸಿ, ಇವರು, ನನ್ನ ಅಪಮಾನವನ್ನು ಮಾಡಿದ ಫಲವನ್ನು ಅನುಭವಿಸುತ್ತಿರುವವರು ಎಂದು ಇಂದ್ರನಿಗೆ ಸುಳ್ಳನ್ನು ಹೇಳಿದ್ದ. ಆದ್ದರಿಂದ

ನೀನೂ ಮನುಷ್ಯಜನ್ಮದಲ್ಲಿ ಹುಟ್ಟಿ, ಅದೇ ಇಂದ್ರನಿಂದಲೇ ಪರಾಜಯವನ್ನು ಹೊಂದು ಎಂದು ಬ್ರಹ್ಮದೇವರು ಶಪಿಸಿದರು.

**ಮಚ್ಛಪ್ತಾನಾಂ ಚ ದೇವೀನಾಮವಿಚಾರ್ಯ ಮಯಾ ಯತಃ ।**
**ಪತಿಯೋಗವರಂ ಪ್ರಾದಾ ನಾವಾಪ್ಸ್ಯತಿ ತತಃ ಪ್ರಿಯಾಮ್ ॥ ೧೪೪ ॥**

ಪದಚ್ಛೇದ :– ಮಚ್ಛಪ್ತಾನಾಂ, ಚ, ದೇವೀನಾಂ, ಅವಿಚಾರ್ಯ, ಮಯಾ, ಯತಃ, ಪತಿಯೋಗವರಂ, ಪ್ರಾದಾತ್ ನ, ಅವಾಪ್ಸ್ಯಸಿ, ತತಃ ಪ್ರಿಯಾಮ್.

**ಮಾನುಷೇಷು ತತಃ ಪಶ್ಚಾದ್ ಭಾರತೀದೇಹನಿರ್ಗತಾಮ್ ।**
**ಸ್ವಲೋಕೇ ಪ್ರಾಪ್ಸ್ಯಸಿ ಸ್ವಾರ್ಥೇ ವರೋಽಯಂ ತೇ ಮೃಷಾ ಭವೇತ್**
**॥ ೧೪೫ ॥**

ಪದಚ್ಛೇದ :– ಮಾನುಷೇಷು, ತತಃ, ಪಶ್ಚಾತ್, ಭಾರತೀದೇಹನಿರ್ಗತಾಮ್, ಸ್ವಲೋಕೇ, ಪ್ರಾಪ್ಸ್ಯಸಿ, ಸ್ವಾರ್ಥೇ, ವರಃ, ಅಯಂ, ತೇ, ಮೃಷಾ, ಭವೇತ್.

**ಅರ್ಥ** :- **ಚ** = ಮತ್ತು, **ಮಚ್ಛಪ್ತಾನಾಂ** = ನನ್ನಿಂದ ಶಪ್ತರಾದ, **ದೇವೀನಾಂ** = ಶಚ್ಯಾದಿ ದೇವಿಯರಿಗೆ, **ಮಯಾ** = ನನ್ನಿಂದ, **ಅವಿಚಾರ್ಯ** = ವಿಚಾರಿಸದೇನೇ, **ಯತಃ** = ಯಾವ ಕಾರಣದಿಂದ, **ಪತಿಯೋಗವರಂ** = ಪತಿಪ್ರಾಪ್ತಿ ರೂಪವಾದ ವರವನ್ನು, **ಪ್ರಾದಾತ್** = ಕೊಟ್ಟಿರುವೆಯೋ, **ತತಃ** = ಆ ಕಾರಣದಿಂದ, **ಮಾನುಷೇಷು** = ಮನುಷ್ಯ ಜನ್ಮದಲ್ಲಿ, **ಪ್ರಿಯಾಮ್** = ನಿನ್ನ ಹೆಂಡತಿಯಾದ ಉಮೆಯನ್ನು, **ನ ಅವಾಪ್ಸ್ಯಸಿ** = ಹೊಂದುವುದಿಲ್ಲ, **ಭಾರತೀದೇಹ ನಿರ್ಗತಾಮ್** = ಭಾರತೀ ದೇಹದಿಂದ ನಿರ್ಗಮಿಸಿದ ಬಳಿಕ, **ಸ್ವಲೋಕೆ** = ನಿನ್ನಲೋಕದಲ್ಲಿಯೇ **ಪ್ರಾಪ್ಸ್ಯಸಿ** = ಹೊಂದುವಿ, **ತೇ** = ಆ ದೇವಿಯರಿಗೆ ಕೊಟ್ಟ, **ಅಯಂ ವರಃ** = ಈ ಪತಿಪ್ರಾಪ್ತಿರೂಪವಾದ ವರವು **ಸ್ವಾರ್ಥೇಃ** = ನಿನ್ನ ವಿಷಯದಲ್ಲಿ **ಮೃಷಾಭವೇತ್** = ವಿಫಲವಾಗಲಿ.

**ತಾತ್ಪರ್ಯ** :- ಹೇ ಇಂದ್ರನೇ ನೀನು ಮಾಡಿದ ಇನ್ನೊಂದು ಅಪರಾಧವೇನೆಂದರೆ ನಾನು ಶಾಪ ನೀಡಿದ ದೇವಿಯರಿಗೆ ನನ್ನಲ್ಲಿ ವಿಚಾರ ಮಾಡದೇ ಅವರವರ ಪತಿಪ್ರಾಪ್ತಿರೂಪ ವರವನ್ನು ನೀಡಿದಿ. ಆದರಿಂದ ನೀನು ಮನುಷ್ಯನಾಗಿ ಅವತರಿಸಿದಾಗ ನೀನು ನನ್ನ ಸತಿಯನ್ನು ಹೊಂದದೇ

**ತಾತ್ಪರ್ಯ** :- ಹೀಗೆ ಶಿವನ ಶಾಪದಿಂದ ಖಿನ್ನನಾದ ಇಂದ್ರನು ಸರ್ವೋತ್ತಮನಾದ ಶ್ರೀಹರಿಯನ್ನು ಅನೇಕ ವರ್ಷಗಳ ಕಾಲ ತಪಸ್ಸನ್ನಾಚರಿಸಿ ಒಲಿಸಿಕೊಂಡು ನಂದನೆಂಬ ಮುನಿಯು ವಿಷ್ಣು, ವಾಯು, ಅನಂತ ಇವರ ಅಂಶನಿಂದ ಕೂಡಿದವನಾಗಿ ಇಂದ್ರನು ಅರ್ಜುನನಾಗಿ ಭೂಮಿಯಲ್ಲಿ ಅವತರಿಸಿದ.

**ಮದವಜ್ಞಾನಿಮಿತ್ತೇನ ಪತಿತಾ ಇತಿ ತಾನ್ ಸುರಾನ್ ।**
**ಮಾರುತಾದೀನ್ ಮೃಷಾऽವಾದೀರಿತಿ ಬ್ರಹ್ಮಾ ಶಿವಂ ತದಾ ॥ ೧೪೨ ॥**

**ಪದಚ್ಛೇದ** :- **ಮದವಜ್ಞಾನಿಮಿತ್ರೇನ, ಪತಿತಾ, ಇತಿ, ತಾನ್, ಸುರಾನ್, ಮಾರುತಾದೀನ್, ಮೃಷಾ, ಅವಾದೀ, ಇತಿ, ಬ್ರಹ್ಮಾ ಶಿವಂ, ತದಾ.**

**ಶಶಾಪ ಮಾನುಷೇಷು ತ್ವಂ ಕ್ಷಿಪ್ರಂ ಜಾತಃ ಪರಾಭವಮ್ ।**
**ಶಕ್ರಾನ್ನರತನೋರ್ಯಾಸಿ ಯಸ್ಮೈ ತ್ವಂ ತು ಮೃಷಾऽವದಃ ॥ ೧೪೩ ॥**

**ಪದಚ್ಛೇದ** :- **ಶಶಾಪ, ಮಾನುಷೇಷು, ತ್ವಂ, ಕ್ಷಿಪ್ರಂ, ಜಾತಃ, ಪರಾಭವಮ್, ಶಕ್ರಾತ್, ನರತನೋಃ, ಯಾಸಿ, ಯಸ್ಮೈ, ತ್ವಂ, ತು, ಮೃಷಾವದಃ.**

**ಅರ್ಥ** :- **ಮದವಜ್ಞಾನಿಮಿತ್ತೇನ** = ನನ್ನ ತಿರಸ್ಕಾರದಿಂದ ನಿಮಿತ್ತದಿಂದ, **ಮಾರುತಾದೀನ್** = ವಾಯುವೇ ಮೊದಲಾದ ತಾನ್, **ಸುರಾನ್** = ಆ ದೇವತೆಗಳನ್ನು **ಪತಿತಾಃ** = ಬಿದ್ದವರು, **ಇತಿ** = ಎಂದು, **ಮೃಷಾ** = ಸುಳ್ಳನ್ನು, **ಅವಾದಿ** = ಹೇಳಿರುವಿ, **ಇತಿ** = ಎಂದು, **ಬ್ರಹ್ಮಾ** = ಬ್ರಹ್ಮನು, **ಶಿವಂ** = ಶಿವನನ್ನು, **ತದಾ** = ಆಗ, **ಯಸ್ಮೈ** = ಯಾವ, ಇಂದ್ರನಲ್ಲಿ, **ತ್ವಂ** = ನೀನು, **ಮೃಷಾವದಃ** = ಸುಳ್ಳನ್ನು ಹೇಳಿದ್ದೀಯ. **ತ್ವಂ** = ನೀನು, **ಕ್ಷಿಪ್ರಂ** = ಶೀಘ್ರವಾಗಿ, **ಮನುಷ್ಯೇಷು** = ಮನುಷ್ಯ ಜನ್ಮದಲ್ಲಿ, **ಜಾತಃ** = ಹುಟ್ಟಿದವನಾಗಿ, **ಶಕ್ರಾತ್** = ಇಂದ್ರನಿಂದ, **ಪರಾಭವಮ್** = ಪರಾಜಯವನ್ನು, **ಯಾಸಿ** = ಹೊಂದುವಿ, **ಇತಿ** = ಎಂದು, **ಶಶಾಪ** = ಶಪಿಸಿದನು.

**ತಾತ್ಪರ್ಯ** :- ಹೇ ಇಂದ್ರನೇ ಪರ್ವತದ ಕೆಳಗಿದ್ದ ಆ ದೇವತೆಗಳನ್ನು ತೋರಿಸಿ, ಇವರು, ನನ್ನ ಅಪಮಾನವನ್ನು ಮಾಡಿದ ಫಲವನ್ನು ಅನುಭವಿಸುತ್ತಿರುವವರು ಎಂದು ಇಂದ್ರನಿಗೆ ಸುಳ್ಳನ್ನು ಹೇಳಿದ್ದ. ಆದ್ದರಿಂದ

ನೀನೂ ಮನುಷ್ಯಜನ್ಮದಲ್ಲಿ ಹುಟ್ಟಿ, ಅದೇ ಇಂದ್ರನಿಂದಲೇ ಪರಾಜಯವನ್ನು ಹೊಂದು ಎಂದು ಬ್ರಹ್ಮದೇವರು ಶಪಿಸಿದರು.

**ಮಚ್ಛಪ್ತಾನಾಂ ಚ ದೇವೀನಾಮವಿಚಾರ್ಯ ಮಯಾ ಯತಃ ।**
**ಪತಿಯೋಗವರಂ ಪ್ರಾದಾ ನಾವಾಪ್ಸ್ಯತಿ ತತಃ ಪ್ರಿಯಾಮ್ ॥ ೧೪೪ ॥**

**ಪದಚ್ಛೇದ :- ಮಚ್ಛಪ್ತಾನಾಂ, ಚ, ದೇವೀನಾಂ, ಅವಿಚಾರ್ಯ, ಮಯಾ, ಯತಃ, ಪತಿಯೋಗವರಂ, ಪ್ರಾದಾತ್ ನ, ಅವಾಪ್ಸ್ಯಸಿ, ತತಃ ಪ್ರಿಯಾಮ್.**

**ಮಾನುಷೇಷು ತತಃ ಪಶ್ಚಾದ್ ಭಾರತೀದೇಹನಿರ್ಗತಾಮ್ ।**
**ಸ್ವಲೋಕೇ ಪ್ರಾಪ್ಸ್ಯಸಿ ಸ್ವಾರ್ಥೇ ವರೋಽಯಂ ತೇ ಮೃಷಾ ಭವೇತ್ ॥ ೧೪೫ ॥**

**ಪದಚ್ಛೇದ :- ಮಾನುಷೇಷು, ತತಃ, ಪಶ್ಚಾತ್, ಭಾರತೀದೇಹನಿರ್ಗತಾಮ್, ಸ್ವಲೋಕೇ, ಪ್ರಾಪ್ಸ್ಯಸಿ, ಸ್ವಾರ್ಥೇ, ವರಃ, ಅಯಂ, ತೇ, ಮೃಷಾ, ಭವೇತ್.**

**ಅರ್ಥ :-** ಚ = ಮತ್ತು, **ಮಚ್ಛಪ್ತಾನಾಂ** = ನನ್ನಿಂದ ಶಪ್ತರಾದ, **ದೇವೀನಾಂ** = ಶಚ್ಯಾದಿ ದೇವಿಯರಿಗೆ, **ಮಯಾ** = ನನ್ನಿಂದ, **ಅವಿಚಾರ್ಯ** = ವಿಚಾರಿಸದೇನೇ, **ಯತಃ** = ಯಾವ ಕಾರಣದಿಂದ, **ಪತಿಯೋಗವರಂ** = ಪತಿಪ್ರಾಪ್ತಿ ರೂಪವಾದ ವರವನ್ನು, **ಪ್ರಾದಾತ್** = ಕೊಟ್ಟಿರುವೆಯೋ, **ತತಃ** = ಆ ಕಾರಣದಿಂದ, **ಮಾನುಷೇಷು** = ಮನುಷ್ಯ ಜನ್ಮದಲ್ಲಿ, **ಪ್ರಿಯಾಮ್** = ನಿನ್ನ ಹೆಂಡತಿಯಾದ ಉಮೆಯನ್ನು, **ನ ಅವಾಪ್ಸ್ಯಸಿ** = ಹೊಂದುವುದಿಲ್ಲ, **ಭಾರತೀದೇಹ ನಿರ್ಗತಾಮ್** = ಭಾರತೀ ದೇಹದಿಂದ ನಿರ್ಗಮಿಸಿದ ಬಳಿಕ, **ಸ್ವಲೋಕೆ** = ನಿನ್ನಲೋಕದಲ್ಲಿಯೇ **ಪ್ರಾಪ್ಸ್ಯಸಿ** = ಹೊಂದುವಿ, **ತೇ** = ಆ ದೇವಿಯರಿಗೆ ಕೊಟ್ಟ, **ಅಯಂ ವರಃ** = ಈ ಪತಿಪ್ರಾಪ್ತಿರೂಪವಾದ ವರವು **ಸ್ವಾರ್ಥೇಃ** = ನಿನ್ನ ವಿಷಯದಲ್ಲಿ **ಮೃಷಾಭವೇತ್** = ವಿಫಲವಾಗಲಿ.

**ತಾತ್ಪರ್ಯ :-** ಹೇ ಇಂದ್ರನೇ ನೀನು ಮಾಡಿದ ಇನ್ನೊಂದು ಅಪರಾಧವೇನೆಂದರೆ ನಾನು ಶಾಪ ನೀಡಿದ ದೇವಿಯರಿಗೆ ನನ್ನಲ್ಲಿ ವಿಚಾರ ಮಾಡದೇ ಅವರವರ ಪತಿಪ್ರಾಪ್ತಿರೂಪ ವರವನ್ನು ನೀಡಿದಿ. ಆದರಿಂದ ನೀನು ಮನುಷ್ಯನಾಗಿ ಅವತರಿಸಿದಾಗ ನೀನು ನನ್ನ ಸತಿಯನ್ನು ಹೊಂದದೇ

ಇರುವವನಾಗು. ನಿನ್ನ ಸತಿಯು ಭಾರತೀದೇವಿಯ ಶರೀರದಲ್ಲಿ ಇದ್ದರೂ ನಿನಗೆ ಅವಳು ಸಿಗದಿರಲಿ. ಆ ದೇಹದಿಂದ ಬಿಟ್ಟಮೇಲೆ ನಿನ್ನ ಲೋಕದಲ್ಲೇ ಅವಳು ನಿನ್ನನ್ನು ಹೊಂದಲ್ಲ. ಆದ್ದರಿಂದ ನೀನು ಆ ದೇವಿಯರಿಗೆ ನೀಡಿದ ವರವೇ ನಿನ್ನ ವಿಷಯದಲ್ಲಿ ವಿಪರೀತವಾಗಲಿ ಎಂದು ಶಪಿಸಿದರು. ಇಂತಹ ಬ್ರಹ್ಮಶಾಪವಿರುವುದರಿಂದಲೇ ಶಿವನು ಅಶ್ವತ್ಥಾಮನಾಗಿ ಹುಟ್ಟಿಯೂ ಬ್ರಹ್ಮಚಾರಿಯಾಗಿಯೇ ಅರ್ಜುನನಿಂದಲೇ ಸೋಲುವಂತೆ ಆಯಿತು.

**ಏಷಾ ಸಾ ದ್ರೌಪದೀ ನಾಮ ಪಂಚದೇವೀತನುರ್ಭವೇತ್ ।**
**ಮೃಷಾ ವಾಗ್ ಯೇಷು ತೇ ಪ್ರೋಕ್ತಾ ಮಾರುತಾದ್ಯಾಸ್ತು ತೇಽಖಿಲಾಃ**
**॥ ೧೪೬ ॥**

**ಪದಚ್ಛೇದ :- ಏಷಾ, ಸಾ, ದ್ರೌಪದೀ, ನಾಮ, ಪಂಚದೇವೀತನುಃ, ಭವೇತ್, ಮೃಷಾ, ವಾಕ್, ಯೇಷು, ತೇ, ಪ್ರೋಕ್ತಾ, ಮಾರುತಾದ್ಯಾಃ, ತು, ತೇ, ಅಖಿಲಾಃ.**

**ತಾಸಾಂ ಪತಿತ್ವಮಾಪ್ಸ್ಯಂತಿ ಭಾರತ್ಯೈವ ತು ಪಾರ್ವತೀ ।**
**ಸಂಯುಕ್ತಾ ವ್ಯವಹಾರೇಷು ಪ್ರವರ್ತೇತ ನಚಾನ್ಯಥಾ ॥ ೧೪೭ ॥**

**ಪದಚ್ಛೇದ :- ತಾಸಾಂ, ಪತಿತ್ವಂ, ಆಪ್ಸ್ಯಂತಿ, ಭಾರತ್ಯಾ, ಏವ, ತು, ಪಾರ್ವತೀ, ಸಂಯುಕ್ತಾ, ವ್ಯವಹಾರೇಷು, ಪ್ರವರ್ತತೇ, ನ, ಚ, ಅನ್ಯಥಾ.**

**ಅರ್ಥ** :- **ಸಾ** = ಆ ಇಂದ್ರಸೇನೆಯು, **ಪಂಚದೇವೀ ತನುಃ** = ಐದು ದೇವಿಯರ ಅವತಾರ ಭೂತಳಾಗಿ, **ದ್ರೌಪದೀನಾಮ** = ದ್ರೌಪದೀ ಎಂದು ಹೆಸರಿರುವಳಾಗಿ, **ಬವೇತ್** = ಜನಿಸಿದಳು, (**ತ್ವಂ** = ನೀನು) **ಯೇಷು** = ಯಾರ ವಿಷಯದಲ್ಲಿ, **ಮೃಷಾವಾಕ್ ಪ್ರೋಕ್ತಾ** = ಸುಳ್ಳು ಮಾತನ್ನಾಡಿದೆಯೋ, **ತೇಃ** = ಆ **ಮಾರುತಾದ್ಯಾಃ** = ವಾಯುವೇ ಮೊದಲಾದವರು, **ಅಖಿಲಾಃ** = ಎಲ್ಲರೂ, **ತಾಸಾಂ** = ಆ ದೇವಿಯರ, **ಪತಿತ್ವಂ ಆಪ್ಸ್ಯಂತಿ** = ಗಂಡಂದಿರಾಗುವರು, **ಪಾರ್ವತೀ ತು** = ಪಾರ್ವತೀ ದೇವಿಯಾದರೂ, **ಭಾರತ್ಯೈವ** = ಭಾರತಿ ದೇವಿಯ ಶರೀರದಿಂದ, **ಸಂಯುಕ್ತಾ** = ಕೂಡಿದವಳಾಗಿ, **ವ್ಯವಹಾರೇಷು** = ವ್ಯವಹಾರಗಳಲ್ಲಿ **ಪ್ರವರ್ತಂತೆ** = ಪ್ರವೃತ್ತಿ ಮಾಡುವಳು, **ಅನ್ಯಥಾ** = ಪಾತಿವ್ರತ್ಯಕ್ಕೆ = ಭಂಗವಿರುವ, ವ್ಯವಹಾರದಲ್ಲಿ, **ನ** = ಅಲ್ಲ.

ತಾತ್ಪರ್ಯ :- ಎಲೈ ಶಿವನೇ ಐದು ಮಂದಿ ದೇವಿಯರ ಆವೇಶವುಳ್ಳ ಈ ಇಂದ್ರಸೇನೆಯೇ ಮುಂದೆ ದ್ರೌಪದಿಯಾಗಿ ಅವತರಿಸುವಳು. ನೀನು ವಾಯು ಮೊದಲಾದವರ ವಿಷಯದಲ್ಲಿ ಸುಳ್ಳಾಡಿದ ಪ್ರಭಾವದಿಂದ ಅವರ ಆ ಶರೀರದಲ್ಲಿರುವ ದೇವಿಯರ ಪತಿಗಳಾಗುವರು. ನಿನ್ನ ಪತ್ನಿ ಪಾರ್ವತೀದೇವಿಯು ಮಾತ್ರ ನನ್ನ ಶಾಪಕ್ಕನುಸಾರವಾಗಿ ದ್ರೌಪದಿಯ ಶರೀರದಲ್ಲಿದ್ದರೂ ಪಾತಿವ್ರತ್ಯ ಭಂಗ ಆಗದೇ ಇರುವ ಹಾಗೆ ಅವರೊಡನೆ ವ್ಯವಹರಿಸುವಳು.

ಏತೇ ಹಿ ಮಾರುತಾದ್ಯಾಸ್ತೇ ದೇವಕಾರ್ಯಾರ್ಥಗೌರವಾತ್ ।
ಜಾತಾ ಇತಿ ಶ್ರುತಿಸ್ತತ್ರ ನಾವಜ್ಞಾ ತೇಽತ್ರ ಕಾರಣಮ್ ॥ ೧೪೮ ॥

ಪದಚ್ಛೇದ :- ಏತೇ, ಹಿ, ಮಾರುತಾದ್ಯಾಃ, ತೇ, ದೇವಕಾರ್ಯಾರ್ಥಃ ಗೌರವಾತ್, ಜಾತಾ, ಇತಿ, ಶ್ರುತಿಃ, ತತ್ರ, ನ, ಅವಜ್ಞಾ, ತೇ, ಅತ್ರ, ಕಾರಣಮ್.

ಅರ್ಥ :- ಏತೇ ಮಾರುತಾದ್ಯಾಃ = ಈ ವಾಯುವೇ ಮುಂತಾದ ದೇವತೆಗಳು, ದೇವಕಾರ್ಯಾರ್ಥಃ = ಪರಮಾತ್ಮನ ಕಾರ್ಯರೂಪವಾದ ಫಲದಲ್ಲಿ ಸೌರವಾತ್ = ಆದರದಿಂದ, ಜಾತಾಃ = ಹುಟ್ಟಿದ್ದಾರೆ. ಇತಿ ಎಂದು ಶ್ರುತಿಃ = ಶ್ರುತಿಯು ಅಸ್ತಿ = ಇದೆ. ಅತ್ರ = ಈ ವಿಷಯದಲ್ಲಿ, ತೇ = ನಿನ್ನ, ಅವಜ್ಞಾ = ಅಪಮಾನವು, ನ ಕಾರಣಮ್ = ಕಾರಣವಲ್ಲ.

ತಾತ್ಪರ್ಯ :- ನೀನು ಪರ್ವತದ ಕೆಳಗಿರುವ ಆ ದೇವತೆಗಳು ಪರಮಾತ್ಮ ಕಾರ್ಯದಲ್ಲಿ ತಮ್ಮ ಸೇವೆಯನ್ನು ಸಲ್ಲಿಸಲು ಆದರದಿಂದ ಭೂಮಿಯಲ್ಲಿ ಅವತಾರ ಮಾಡಿದ್ದಾರೆ ಹೊರತು ನಿನ್ನ ಅಪಮಾನದ ಪಾಪದಿಂದಲ್ಲ ಎಂದನು ಬ್ರಹ್ಮ.

ದೀರ್ಘಕಾಲಂ ಮನುಷ್ಯೇಷು ತತಸ್ತ್ವಂ ಸ್ಥಿತಿಮಾಪ್ಸ್ಯಸಿ ।
ಇತ್ಯುಕ್ತ್ವಾ ಪ್ರಯಯೌ ಬ್ರಹ್ಮಾ ಸೋಽಶ್ವತ್ಥಾಮಾ ಶಿವೋಽಭವತ್ ।
ಪಂಚದೇವೀತನುಸ್ತ್ವೇಷಾ ದ್ರೌಪದೀ ನಾಮ ಚಾಭವತ್ ॥ ೧೪೯ ॥

ಪದಚ್ಛೇದ :- ದೀರ್ಘಕಾಲಂ, ಮನುಷ್ಯೇಷು, ತತಃ, ತ್ವಂ, ಸ್ಥಿತಿಂ, ಆಪ್ಸ್ಯಸಿ, ಇತಿ, ಉಕ್ತ್ವಾ, ಪ್ರಯಯೌ, ಬ್ರಹ್ಮಾ, ಸಃ, ಅಶ್ವತ್ಥಾಮಾ, ಶಿವಃ, ಅಭೂತ್, ಪಂಚದೇವೀತನುಃ, ತು, ಏಷಾ, ದ್ರೌಪದೀ, ನಾಮ, ಚ, ಅಭವತ್.

**ಅರ್ಥ :- ತತಃ** ಆದ್ದರಿಂದ, **ತ್ವಂ** = ನೀನು, **ದೀರ್ಘಕಾಲಂ** = ದೀರ್ಘಕಾಲದವರೆಗೂ, **ಮಾನುಷ್ಯೇಷು** = ಮಾನವನಾಗಿ, **ಸ್ಥಿತಿಂ** = ಸ್ಥಿತಿಯನ್ನು **ಆಪ್ಸ್ಯಸಿ** = ಹೊಂದುತ್ತೀಯ, **ಇತಿ** = ಎಂದು, **ಉಕ್ತ್ವಾ** = ಹೇಳಿ, **ಬ್ರಹ್ಮಾ** = ಬ್ರಹ್ಮನು, **ಪ್ರಯಯೌ** = ಹೊರಟು ಹೋದನು. **ಸಃ** = **ಶಿವಃ,** ಆ ಶಿವನು, **ಅಶ್ವತ್ಥಾಮಾ** = ಅಶ್ವತ್ಥಾಮನಾಗಿ, **ಅಭವತ್** = ಹುಟ್ಟಿದನು, **ಏಷಾ** = ಈ ಇಂದ್ರಸೇನೆಯು, **ಪಂಚದೇವೀ ತನುಃ** = ಐದು ದೇವಿಯರ ಅವತಾರ ಭೂತಳಾದ **ದ್ರೌಪದೀನಾಮ** = ದ್ರೌಪದೀ ಎಂಬ ಹೆಸರಿನಿಂದ **ಅಭವತ್** = ಹುಟ್ಟಿದಳು.

**ತಾತ್ಪರ್ಯ :-** ಹೀಗೆ ಬ್ರಹ್ಮದೇವರು ರುದ್ರದೇವರಿಗೆ ನೀನು ದೀರ್ಘ ಕಾಲದವರೆಗೂ ಮಾನವನಾಗಿ ಇರು ಎಂದು ಶಪಿಸಿ ಹೊರಟುಹೋದರು. ನಂತರ ಬ್ರಹ್ಮದೇವರ ಮಾತಿನಂತೆ ರುದ್ರದೇವರೇ ಅಶ್ವತ್ಥಾಮರಾಗಿ ಅವತರಿಸಿ ಅನೇಕ ವರ್ಷಗಳವರೆಗೂ, ಚಿರಂಜೀವಿಗಳಾಗಿ ಭೂಮಿಯಲ್ಲಿಯೇ ಇದ್ದರು. ಮತ್ತು ಈ ಇಂದ್ರಸೇನೆಯೇ ಮುಂದೆ ಐದು ದೇವಿಯರ ಆವೇಶಯುಕ್ತಳಾಗಿ ದ್ರೌಪದಿಯಾಗಿ ಅವತರಿಸಿದಳು.

**ವೇದೇಷು ಸಪುರಾಣೇಷು ಭಾರತೇ ಚಾವಗಮ್ಯತೇ ।**
**ಉಕ್ತೋಽರ್ಥಃ ಸರ್ವ ಏವಾಯಂ ತಥಾ ಪೂರ್ವೋದಿತಾಶ್ಚಯೇ ॥೧೫೦॥**

**ಪದಚ್ಛೇದ :- ವೇದೇಷು, ಸ ಪುರಾಣೇಷು, ಭಾರತೇ, ಚ, ಅವಗಮ್ಯತೇ, ಉಕ್ತಃ, ಅರ್ಥಃ, ಸರ್ವಃ, ಏವ, ಅಯಂ, ಯಥಾ, ಪೂರ್ವೋದಿತಾಃ, ಚ, ಯೇ.**

**ಅರ್ಥ :- ಅಯಂ** = ಈ, **ಉಕ್ತಃ ಸರ್ವ ಏವಃ** = ಹೇಳಿದ ಪ್ರಮೇಯವೆಲ್ಲವೂ, **ತಥಾ** = ಹಾಗೆಯೇ, **ಯೇ** = ಯಾವ, **ಪೂರ್ವೋದಿತಾಃ** = ಹಿಂದೆ ಹೇಳಿದ ಪ್ರಮೇಯಗಳೆಲ್ಲವೂ, **ವೇದೇಷು** = ವೇದಗಳಲ್ಲಿ **ಸಪುರಾಣೇಷು** = ಅನೇಕ ಪುರಾಣಗಳಲ್ಲಿ **ಭಾರತೇ ಚ** = ಮಹಾಭಾರತದಲ್ಲಿಯೂ **ಅವಗಮ್ಯತೆ** ತಿಳಿಯಲ್ಪಡುತ್ತದೆ.

**ತಾತ್ಪರ್ಯ :-** ಮಹಾಭಾರತದಲ್ಲಿ (ಆದಿ.೧೮೧-೧೪) ಶ್ರೀ ವೇದ ವ್ಯಾಸರು ದ್ರುಪದನನ್ನು ಕುರಿತು ಶಚ್ಯಾರಿಗಳು ಹೇಳುತ್ತಾ ಹೇ ದ್ರುಪದ, ಭಾರತೀದೇವಿ, ಶಚ್ಯಾರಿಗಳು ಪಂಚಪತಿತ್ವವನ್ನು ಹೊಂದಿಯೂ ತಮ್ಮ

ಪಾತಿವ್ರತ್ಯವನ್ನು ಉಳಿಸುವುದಕ್ಕಾಗಿ ದ್ರೌಪದಿಯ ರೂಪದಿಂದ ನಿನ್ನ ಮಗಳಾಗಿ ಅವತರಿಸಿದ್ದಾಳೆ ಎಂದಿದೆ. ಆದ್ದರಿಂದ ನಾವು ಹೇಳಿದ ಪ್ರಮೇಯವೆಲ್ಲವೂ ವೇದ, ಪುರಾಣ, ಮಹಾಭಾರತಾದಿಗಳಿಂದ ಸಿದ್ಧವಾದದ್ದು ಎಂದು ನಿಶ್ಚಯಿಸುತ್ತಿದ್ದಾರೆ.

**ಮುಮುದಃ ಸರ್ವಪಾಂಚಾಲಾ ಜಾತಯೋಃ ಸುತಯೋಸ್ತಯೋಃ ॥೧೫೨॥**

ಪದಚ್ಛೇದ :- ಮುಮುದುಃ, ಸರ್ವಪಂಚಾಲಾಃ, ಜಾತಯೋಃ, ಸುತಯೋಃ, ತಯೋಃ.

**ಮಾನುಷಾನ್ನೋಪಭೋಗೇನ ಸಂಸರ್ಗಾನ್ಮಾನುಷೇಷು ಚ ।**
**ಮನುಷ್ಯಪುತ್ರತಾಯಾಶ್ಚ ಭಾವೋ ಮಾನುಷ ಏತಯೋಃ ।**
**ಅಭೂನ್ನಾತಿತರಾಮಾಸೀತ್ ತದಯೋನಿತ್ವಹೇತುತಃ ॥ ೧೫೩ ॥**

ಪದಚ್ಛೇದ :- ಮಾನುಷಾನ್ನೋಪಭೋಗೇನ, ಸಂಸರ್ಗಾತ್, ಮಾನುಷೇಷು, ಚ, ಮನುಷ್ಯಪುತ್ರತಾಯಾಃ, ಚ, ಭಾವಃ, ಮಾನುಷಃ, ಏತಯೋಃ, ಅಭೂತ್, ನ, ಅತಿತರಾಮ್, ಆಸೀತ್, ತತ್, ಅಯೋನಿತ್ವಹೇತುಃ.

**ಅರ್ಥ** :- **ಜಾತಯೋಃ** = ಹುಟ್ಟಿದಂತಹ, **ತಯೋಃ** = ಆ, **ಸಂತಿಯೋಃ** = ದ್ರುಪದನ ಮಕ್ಕಳ ವಿಷಯದಲ್ಲಿ **ಸರ್ವಪಾಂಚಾಲಃ** = ಎಲ್ಲ ಪಾಂಚಾಲ ದೇಶದ ಜನರು, **ಮುಮುದುಃ** = ಸಂತೋಷಪಟ್ಟರು, **ಮಾನುಷನ್ನೋಪಭೋಗೇನ** = ಮನುಷ್ಯರ ಅನ್ನ ಉಂಡುದರಿಂದ **ಮಾನುಷೇಷು** = ಮನುಷ್ಯರಲ್ಲಿ **ಸಂಸರ್ಗಾತ್ ಚ** = ಸಹವಾಸದಿಂದಲೂ ಕೂಡ, **ಏತಯೋಃ** = ದ್ರುಪದನ ಮಕ್ಕಳಲ್ಲಿ , **ಮಾನುಷಃ** = ಮಾನುಷ್ಯ ಸಂಬಂಧಿಯಾದ, **ಮನುಷ್ಯ ಪುತ್ರತಾಯಾಃ** = ಮನುಷ್ಯ ಪುತ್ರತ್ವವೆಂಬ, **ಭಾವಃ** = ಸಹಜ ಧರ್ಮವು, **ಅಭೂತ್** = ಸ್ವಲ್ಪವಾಗಿ ಇದ್ದಿತು, **ತದಯೋನಿತ್ವ ಹೇತುತಃ** = ಮನುಷ್ಯ ಯೋನಿಯಲ್ಲಿ ಹುಟ್ಟಿರದ ಕಾರಣದಿಂದ, **ಅತಿತರಾಮ್** = ಬಹಳವಾಗಿ, **ನಾಸೀತ್** = ಇರಲಿಲ್ಲ.

**ತಾತ್ಪರ್ಯ** :- ದ್ರುಪದನಿಗೆ ಮಕ್ಕಳು ಹುಟ್ಟಿದ ವಿಷಯ ತಿಳಿದು ಎಲ್ಲಾ ಪಾಂಚಾಲದೇಶದ ಜನರು ಸಂತೋಷಪಟ್ಟರು. ದೃಷ್ಟದ್ಯುಮ್ನ ಅಗ್ನಿ

ಕುಂಡದಿಂದ, ದ್ರೌಪದಿಯಲ್ಲಿ ವೇದಿಕೆಯಿಂದ ಪ್ರಾದುರ್ಭವಿಸಿದ್ದರಿಂದ ಅಯೋನಿಜರು. ದ್ರೌಪದಿ ಮನುಷ್ಯಳಾಗಿ ಹುಟ್ಟಿರುವುದಕ್ಕೆ ಬ್ರಹ್ಮನ ಶಾಪ ನಿಮಿತ್ತ. ಮನುಷ್ಯರ ಅನ್ನ ಉಂಡಿದ್ದರಿಂದ ಮನುಷ್ಯರ ಸಹವಾಸದಿಂದ, ಅವರಲ್ಲಿ ಸ್ವಲ್ಪವಾಗಿ ಮನುಷ್ಯಸ್ವಭಾವ ಕಂಡು ಬಂದಿತು. ಬೇರೆ ದೇವತೆಗಳಿಂದ ಬಹಳವಾಗಿ ಇರಲಿಲ್ಲ. ಇದರಿಂಗ ಬ್ರಹ್ಮನ ಶಾಪವೂ ಫಲಿಸಿದಂತಾಯಿತು.

**ಯಾಜೋಪಯಾಜೌ ತಾವೇವ ದಯಿತಾ ದ್ರುಪದಸ್ಯ ಸಾ ।**
**ಮಾತೃಸ್ನೇಹಾರ್ಥಮನಯೋರ್ಯಯಾಚೇ ದದತುಶ್ಚ ತೌ ॥ ೧೫೪ ॥**

**ಪದಚ್ಛೇದ :– ಯಾಜೋಪಯಾಜೌ, ತೌ, ಏವ, ದಯಿತಾ, ದ್ರುಪದಸ್ಯ, ಚ, ಮಾತೃ ಸ್ನೇಹಾರ್ಥಮ್, ಅನಯೋಃ, ಯಯಾಚೇ, ದದತುಃ, ಚ, ತೌ.**

**ಅರ್ಥ** :– **ದ್ರುಪದಸ್ಯ** = ದ್ರುಪದರಾಜನ, **ದಯಿತಾ ಚ** = ಪತ್ನಿಯಾದರೂ, **ಅನಯೋಃ** = ಈ ಮಕ್ಕಳಿಗೆ ಮಾತ್ರ **ಸ್ನೇಹಾರ್ಥಂ** = ತನ್ನಲ್ಲಿ ಮಾತೃಸ್ನೇಹ ಉಂಟಾಗಲೆಂದು, **ತೌ** = ಆ, **ಯಾಚೋಪಜಾ ಏವ** = ಯಾಚೋಪಯಾಜರನ್ನೇ, **ಯಯಾಚೇ** = ಬೇಡಿದಳು, **ತೌಚ** = ಅವರಾದರೂ, **ದದತುಃ** = ಆ ಅಭೀಷ್ಟವನ್ನು ನೀಡಿದರು.

**ತಾತ್ಪರ್ಯ** :– ಅಯೋನಿಜರಾದ್ದರಿಂದ ಈ ಇಬ್ಬರು ಮಕ್ಕಳು ತನ್ನಲ್ಲಿ ಮಾತೃಭಾವನೆಯನ್ನು ತೋರದಿರಬಹುದೆಂಬ ಭಯದಿಂದ, ತನ್ನಲ್ಲಿ ಅವರಿಗೆ ಮಾತ್ರ ಸ್ನೇಹ ಉಂಟಾಗಬೇಕೆಂದು, ಅನುಗ್ರಹಿಸಲು ಯಾಜೋಪಯಾಜರನ್ನು ಬೇಡಿದಳು. ಅವರು ಹಾಗೇ ಆಗಲೆಂದು ಅನುಗ್ರಹಿಸಿದರು.

**ಜಾತಮಾತ್ಮನಿಹಂತಾರಂ ಭಾರದ್ವಜೋ ನಿಶಮ್ಯ ತಮ್ ।**
**ಯಶೋರ್ಥಮಸ್ತ್ರಾಣಿ ದದಾವಗ್ರಹೀತ್ ಸೋಽಪಿ ಲೋಭತಃ ।**
**ರಾಮಾಸ್ತ್ರಾಣಾಂ ದುರ್ಲಭತ್ವಾತ್ ತ್ರಿದಶೇಷ್ವಪಿ ವೀರ್ಯವಾನ್ ॥ ೧೫೫ ॥**

**ಪದಚ್ಛೇದ :– ಜಾತಂ, ಆತ್ಮನಿಹಂತಾರಂ, ಭಾರದ್ವಾಜಃ, ನಿರಿಯ್ಯ, ತಮ್, ಯಶೋಽರ್ಥಮ್, ಅಸ್ತ್ರಾಣಿ, ದದೌ, ಅಗ್ರಹೀತ್, ಸಃ, ಅಪಿ, ಲೋಭತಃ, ರಾಮಾಸ್ತ್ರಾಣಾಮ್, ದುರ್ಲಭತ್ವಾತ್, ತ್ರಿದಶೇಷು, ಅಪಿ, ವೀರ್ಯವಾನ್.**

**ಅರ್ಥ** :- **ಭಾರದ್ವಾಜಃ** = ದ್ರೋಣರು, **ತಮ್** = ಧೃಷ್ಟದ್ಯುಮ್ನನನ್ನು, **ಆತ್ಮನಿಹಂತಾರಂ** = ತನ್ನನ್ನು ಕೊಲ್ಲುವುದಕ್ಕಾಗಿ, **ಜಾತವ್** = ಹುಟ್ಟಿರುವಿನೆಂದು, **ನಿಶಮ್ಯ** = ಕೇಳಿಯೂ, **ಯಶೋಽರ್ಥಂ** = ಯಶಸ್ಸಿಗಾಗಿ, **ಅಸ್ತ್ರಾಣಿ** = ಅಸ್ತ್ರಗಳನ್ನು, **ದದೌ** = ಉಪದೇಶಿಸಿದರು, **ಸಃ** = ಆ ದುಷ್ಟದ್ಯುಮ್ನನು, **ತ್ರಿದಶೇಷು** = ಮೂರು ಲೋಕಗಳಲ್ಲಿ, **ವೀರ್ಯವಾನ್ ಅಪಿ** = ಪರಾಕ್ರಮಶಾಲಿಯಾದರೂ, **ರಾಮಾಸ್ತ್ರಾಣಾಮ್** = ಪರಶುರಾಮರ ಅಸ್ತ್ರಗಳು **ದುರ್ಲಭತ್ವಾತ್** = ದುರ್ಲಭವೆಂಬ ಕಾರಣದಿಂದ, **ಲೋಭತ** = ಲೋಭದಿಂದ, **ಅಗ್ರಹೀತ್** = ಪಡೆದನು.

**ತಾತ್ಪರ್ಯ** :- ತನ್ನನ್ನು ಕೊಲ್ಲುವುದಕ್ಕಾಗಿಯೇ ಇವನು ಹುಟ್ಟಿದ್ದಾನೆ ಎಂದು ತಿಳಿದರೂ ದೃಷ್ಟದ್ಯುಮ್ನನಿಗೆ ಅಸ್ತ್ರವಿದ್ಯೆಯನ್ನು ದ್ರೋಣಾಚಾರ್ಯರು ಉಪದೇಶ ಮಾಡಿದರು. ಇದಕ್ಕೆ ಅವರಿಗೆ ಯಶಸ್ಸು ದೊರೆಯುವುದೆಂದು. ಸ್ವತಃ ದೃಷ್ಟದ್ಯುಮ್ನನು ಪರಾಕ್ರಮಿಯಾದರೂ, ಪರಶುರಾಮರಿಂದ ಪಡೆದ ಈ ಅಸ್ತ್ರಗಳ ಲಾಭವು ತನಗೆ ಆಗುವುದಿಲ್ಲವೆಂಬ ಲೋಭದಿಂದ ಆ ಅಸ್ತ್ರವಿದ್ಯೆಯನ್ನು ಅವರಿಂದ ಸ್ವೀಕರಿಸಿದನು.

**ಭೀಮಾರ್ಜುನಾಭ್ಯಾಂ ಬದ್ಧಂ ತಂ ಶ್ರುತ್ವಾ ಪಾಂಚಾಲಭೂಪತಿಮ್ ।**
**ಪ್ರಾಹಿಣೋತ್ ಕೃತವರ್ಮಾಣಂ ಪಾಂಡವಾನಾಂ ಜನಾರ್ದನಃ ॥ ೧೫೬ ॥**

**ಪದಚ್ಛೇದ** :- ಭೀಮಾರ್ಜುನಾಭ್ಯಾಮ್, ಬದ್ಧಂ, ತಂ, ಶ್ರುತ್ವಾ, ಪಾಂಚಾಲಭೂಪತಿಮ್, ಪ್ರಾಹಿಣೋತ್, ಕೃತವರ್ಮಾಣಮ್, ಪಾಂಡವಾನಾಮ್, ಜನಾರ್ದನಃ.

**ಅರ್ಥ** :- **ತಂ** = ಆ, **ಪಾಂಚಾಲಭೂಪತಿಮ್** = ದ್ರುಪದರಾಜನನ್ನು, **ಭೀಮಾರ್ಜುನಾಭ್ಯಾಂ** = ಭೀಮಾರ್ಜುನರಿಂದ, **ಬದ್ಧಂ** = ಬಂಧಿತನಾಗಿದ್ದನೆಂದು, **ಶ್ರುತ್ವಾ** = ಕೇಳಿ, **ಜನಾರ್ದನಃ** = ಶ್ರೀಕೃಷ್ಣನು, **ಕೃತವರ್ಮಾಣಂ** = ಕೃತವರ್ಮನನ್ನು, **ಪಾಂಡವಾನಾಮ್** = ಪಾಂಡವರ ಬಳಿಗೆ, **ಪ್ರಾಹಿಣೋತ್** = ಕಳುಹಿಸಿದನು.

**ಪಾಂಡವೇಷ್ವತುಲಾಂ ಪ್ರೀತಿಂ ಲೋಕೇ ಖ್ಯಾಪಯಿತುಂ ಪ್ರಭುಃ ॥ ೧೫೭ ॥**

**ಪದಚ್ಛೇದ :- ಪಾಂಡವೇಷು, ಅತುಲಾಂ, ಪ್ರೀತಿಮ್, ಲೋಕೇ, ಖ್ಯಾಪಯಿತುಮ್, ಪ್ರಭುಃ.**

**ಅರ್ಥ :- ಪಾಂಡವೇಷು** = ಪಾಂಡವರಲ್ಲಿ (ತನಗಿರುವ), **ಅತುಲಾಮ್** = ಅಸದೃಶವಾದ, **ಪ್ರೀತಿಮ್** = ಪ್ರೀತಿಯನ್ನು, **ಲೋಕೇ** = ಜಗತ್ತಿನಲ್ಲಿ, **ಖ್ಯಾಪಯಿತುಮ್** = ಪ್ರಸಿದ್ಧಿಗೊಳಿಸಲು, **ಪ್ರಭುಃ** = ಶ್ರೀಕೃಷ್ಣನು (ಹಾಗೆ ಮಾಡಿದನು).

**ತಾತ್ಪರ್ಯ :-** ಪಾಂಡವರಲ್ಲಿ ತನಗೆ ವಿಷ್ಣುಪ್ರೀತಿ ಇದೆಯೆಂದು ಜಗತ್ತಿಗೆ ತೋರಿಸಲು ಕೃತವರ್ಮನನ್ನು ಪಾಂಡವರ ಬಳಿಗೆ ಕಳುಹಿಸಿದನು.

**ಸ ಮಾನ್ಯ ಪಾಂಡವಾನ್ ಸೋऽಪಿ ಶೂರಾನುಜಸುತಾಸುತಃ ।**
**ತೈರ್ಮಾನಿತಃ ಕೃಷ್ಣಭಕ್ತ್ಯಾ ಭ್ರಾತೃತ್ವಾಚ್ಚ ಹರಿಂ ಯಯೌ ॥ ೧೫೮ ॥**

**ಪದಚ್ಛೇದ :- ಸನ್ಮಾನ್ಯ, ಪಾಂಡವಾನ್, ಸಃ, ಅಪಿ, ಶೂರಾನುಜ ಸುತಾಸುತಃ, ತೈಃ, ಮಾನಿತಃ, ಕೃಷ್ಣಭಕ್ತ್ಯಾ, ಭ್ರಾತೃತ್ವಾತ್, ಚ, ಹರಿಮ್, ಯಯೌ.**

**ಅರ್ಥ :- ಶೂರಾನುಜ ಸುತಾಸುತಃ** = ಶೂರಸೇನ ರಾಜನ ತಮ್ಮನ ಮಗಳ ಮಗನಾದ, **ಸೋऽಪಿ** = ಆ ಕೃತವರ್ಮನಾದರೂ, **ಪಾಂಡವಾನ್** = ಪಾಂಡವರನ್ನು, **ಸನ್ಮಾನ್ಯ** = ಸನ್ಮಾನಿಸಿ, **ಕೃಷ್ಣಭಕ್ತ್ಯಾ** = ಕೃಷ್ಣನ ಮೇಲಿನ ಭಕ್ತಿಯಿಂದ, **ಭ್ರಾತೃತ್ವಾಚ್ಚ** = ಪಾಂಡವರ ಸೋದರನಾದ್ದರಿಂದಲೂ, **ತ್ವ** = ಅವರಿಂದ, **ಮಾನಿತಃ (ಸನ್)** = ಸತ್ಕರಿಸಲ್ಪಟ್ಟವನಾಗಿ, **ಹರಿಮ್** = ಕೃಷ್ಣನನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ :-** ಮೊದಲು ಕೃತವರ್ಮನು ಪಾಂಡವರನ್ನು ಸನ್ಮಾನಿಸಿದ ನಂತರ ಪಾಂಡವರು ಕೃಷ್ಣನು ಕಳುಹಿಸಿದವನು ಎಂದು ಅವನ ಮೇಲಿನ ಭಕ್ತಿ ಭಾವದಿಂದ ಮತ್ತು ತಮಗೆ ಸೋದರನೆಂಬ ಭಾವದಿಂದ ಅವನನ್ನು ಸತ್ಕರಿಸಿದರು. ನಂತರ ಅವನು ಕೃಷ್ಣನ ಬಳಿಗೆ ಮರಳಿದನು

**ತತಃ ಪ್ರಭೃತಿ ಸಂತ್ಯಜ್ಯ ದೇವಪಕ್ಷಾ ಜರಾಸುತಮ್ ।**
**ಪಾಂಡವಾನಾಶ್ರಿತಾ ಭೂಪಾ ಜ್ಞಾತ್ವಾ ಭೈಮಾರ್ಜುನಂ ಬಲಮ್ ।**
**ವಿಶೇಷತಶ್ಚ ಕೃಷ್ಣಸ್ಯ ವಿಜ್ಞಾಯ ಸ್ನೇಹಮೇಷು ಹಿ ॥ ೧೫೯ ॥**

ಪದಚ್ಛೇದ :- ತತಃ, ಪ್ರಭೃತಿ, ಸಂತ್ಯಜ್ಯ, ದೇವಪಕ್ಷಾಃ, ಜರಾಸುತಿಮ್, ಪಾಂಡವಾನ್, ಆಶ್ರಿತಾಃ, ಭೂಪಾಃ, ಜಾತ್ವಾ, ಭೀಮಾರ್ಜುನಂ, ಬಲಮ್, ವಿಶೇಷತಃ, ಚ, ಕೃಷ್ಣಸ್ಯ, ವಿಜ್ಞಾಯ, ಸ್ನೇಹಮ್, ಏಷು, ಹಿ.

ಅರ್ಥ :- ತತಃ ಪ್ರಭೃತಿ = ಅಂದಿನಿಂದ, ದೇವಪಕ್ಷಾಃ = ದೇವತೆಗಳ ಪಕ್ಷದವರಾದ, ಭೂಪಾಃ = ರಾಜರುಗಳು, ಜರಾಸುತಮ್ = ಜರಾಸಂಧನನ್ನು, ಸಂತ್ಯಜ್ಯ = ತೊರೆದು, ಭೀಮಾರ್ಜುನ ಬಲಮ್ = ಭೀಮಾರ್ಜುನರ ಬಲವನ್ನು, ಜ್ಞಾತ್ವಾ = ತಿಳಿದು, ವಿಶೇಷತಃ, ಚ = ಮತ್ತು, ವಿಶೇಷವಾಗಿ, ಕೃಷ್ಣಸ್ಯ = ಕೃಷ್ಣನ, ಏಷು = ಪಾಂಡವರಲ್ಲಿ, ಸ್ನೇಹಮ್ = ಪ್ರೀತಿಯನ್ನು, ವಿಜ್ಞಾಯ = ತಿಳಿದು, ಪಾಂಡವಾನ್ = ಪಾಂಡವರನ್ನು, ಆಶ್ರಿತಾಃ ಹಿ = ಆಶ್ರಯಿಸಿದರಷ್ಟೇ.

ತಾತ್ಪರ್ಯ :- ಅಂದಿನಿಂದ ದೇವಪಕ್ಷದವರಾದ ರಾಜರು ಭೀಮಾರ್ಜುನರ ಬಲವನ್ನು ಮತ್ತು ಪಾಂಡವರಲ್ಲಿ ಕೃಷ್ಣನಿಗಿರುವ ಪ್ರೀತಿಯನ್ನು ತಿಳಿದು ಜರಾಸಂಧನ ಪಕ್ಷವನ್ನು ಬಿಟ್ಟು, ಪಾಂಡವರನ್ನು ಆಶ್ರಯಿಸಿದರು.

ಪರಾಜಿತಾಶ್ಚ ಬಹುಶಃ ಕೃಷ್ಣೇನಾಚಿಂತ್ಯಕರ್ಮಣಾ ॥ ೧೬೦ ॥

ಪದಚ್ಛೇದ :- ಪರಾಜಿತಾಃ, ಚ, ಬಹುಶಃ, ಕೃಷ್ಣೇನ, ಅಚಿಂತ್ಯಕರ್ಮಣಾ.

ಅರ್ಥ :- ತೇ = ಅವರೆಲ್ಲರೂ, ಬಹುಶಃ = ಬಹಳ ಸಾರಿ, ಅಚಿಂತ್ಯ-ಕರ್ಮಣಾ = ಅಚಿಂತ್ಯಕಾರ್ಯಗಳನ್ನು ಮಾಡುವ, ಕೃಷ್ಣೇನ = ಕೃಷ್ಣನಿಂದ, ಪರಾಜಿತಾಃ ಚ = ಈ ಹಿಂದೆ ಪರಾಜಿತರಾಗಿದ್ದರೂ,

ತಾತ್ಪರ್ಯ :- ಪಾಂಡವರನ್ನು ಆಶ್ರಯಿಸಿದ ಈ ರಾಜರೆಲ್ಲ ಈ ಮೊದಲೇ ಅಚಿಂತ್ಯಶಕ್ತಿಯುಳ್ಳ ಕೃಷ್ಣನಿಂದ ಅನೇಕ ಬಾರಿ ಪರಾಜಿತರಾಗಿದ್ದರು.

ಪ್ರತಾಪಾದ್ಧ್ಯೇವ ತೇ ಪೂರ್ವಂ ಜರಾಸಂಧವಶಂ ಗತಾಃ ॥ ೧೬೧ ॥

ಪದಚ್ಛೇದ :- ಪ್ರತಾಪಾತ್, ಏವ, ತೇ, ಪೂರ್ವಂ, ಜರಾಸಂಧವಶಂ, ಗತಾಃ.

**ಅರ್ಥ** :- **ತೇ** = ಅವರೆಲ್ಲರೂ, **ಪೂರ್ವಂ** = ಮೊದಲು, **ಪ್ರತಾಪಾದೇವ** = ಜರಾಸಂಧನ ಪರಾಕ್ರಮದಿಂದಲೇ (ಹೆದರಿ), **ಜರಾಸಂಧವಶಂ** = ಜರಾಸಂಧನ ಅಧೀನತೆಯನ್ನು, **ಗತಾಃ** = ಹೊಂದಿದ್ದರು.

**ತಾತ್ಪರ್ಯ** :- ಈ ಎಲ್ಲ ರಾಜರೂ ಜರಾಸಂಧನ ಪರಾಕ್ರಮಕ್ಕೆ ಹೆದರಿ ಅವನ ವಶದಲ್ಲಿ ಇದ್ದರು.

**ನ ಸ್ನೇಹಾತ್ ತದ್ ಬಲಂ ಜ್ಞಾತ್ವಾ ಪಾರ್ಥಾನಾಂ ಕೇಶವಸ್ಯ ಚ ।**
**ಜನ್ಮಾಂತರಾಭ್ಯಾಸವಶಾತ್ ಸ್ನಿಗ್ಧಾಃ ಕೃಷ್ಣೇ ಚ ಪಾಂಡುಷು ।**
**ಜರಾಸಂಧಭಯಂ ತ್ಯಕ್ತ್ವಾ ತಾನೇವ ಚ ಸಮಾಶ್ರಿತಾಃ ॥ ೧೬೨ ॥**

**ಪದಚ್ಛೇದ** :- ನ, ಸ್ನೇಹಾತ್, ತತ್, ಬಲಂ, ಜ್ಞಾತ್ವಾ, ಪಾರ್ಥಾನಾಮ್, ಕೇಶವಸ್ಯ, ಚ, ಜನ್ಮಾಂತರಾಭ್ಯಾಸವಶಾತ್, ಸ್ನಿಗ್ಧಾಃ, ಕೃಷ್ಣೇ, ಚ, ಪಾಂಡುಷು, ಜರಾಸಂಧಭಯಂ, ತ್ಯಕ್ತ್ವಾ, ತಾನ್, ಏವ, ಚ, ಸಮಾಶ್ರಿತಾಃ.

**ಅರ್ಥ** :- **ನ ಸ್ನೇಹಾತ್** = ಸ್ನೇಹದ ಕಾರಣದಿಂದಲ್ಲ. (ಜರಾಸಂಧನಲ್ಲಿ ಸ್ನೇಹ ಇರುವ ಕಾರಣ ಅವನ ಆಶ್ರಯದಲ್ಲಿರಲಿಲ್ಲ. ಹೊರತಾಗಿ ಭಯದಿಂದ), **ಪಾರ್ಥಾನಾಂ** = ಪಾಂಡವರ, **ಚ** = ಮತ್ತು, **ಕೇಶವಸ್ಯ** = ಕೃಷ್ಣನ, **ಬಲಂ** = ಬಲವನ್ನು, **ಜ್ಞಾತ್ವಾ** = ತಿಳಿದು **ಜನ್ಮಾಂತರಾಭ್ಯಾಸವಶಾತ್** = ಜನ್ಮಾಂತರದ ಅಭ್ಯಾಸದ ಕಾರಣದಿಂದ, **ಕೃಷ್ಣೇ** = ಕೃಷ್ಣನಲ್ಲಿ, **ಪಾಂಡುಷು** = ಪಾಂಡವರಲ್ಲಿಯೂ, **ಸ್ನಿಗ್ಧಾಃ** = ಸ್ನೇಹವುಳ್ಳವರಾಗಿ, **ಜರಾಸಂಧಭಯಂ** = ಜರಾಸಂಧನ ಭಯವನ್ನು, **ತ್ಯಕ್ತ್ವಾ** = ಬಿಟ್ಟು, **ತಾನೇವ ಚ** = ಆ ಪಾಂಡವರನ್ನೇ, **ಸಮಾಶ್ರಿತಾಃ** = ಆಶ್ರಯಿಸಿದರು.

**ತಾತ್ಪರ್ಯ** :- ರಾಜರುಗಳು ಜನ್ಮಾಂತರದ ಸಂಸ್ಕಾರದಿಂದ ಶ್ರೀಕೃಷ್ಣನಲ್ಲಿ ಪಾಂಡವರಲ್ಲಿಯೂ ಸ್ನೇಹವಿದ್ದ ಕಾರಣ, ಪಾಂಡವರ ಮತ್ತು ಕೃಷ್ಣನ ಬಲವನ್ನು ತಿಳಿದು, ಜರಾಸಂಧನ ಭಯದಿಂದ ಮುಕ್ತರಾಗಿ ಪಾಂಡವರನ್ನೇ ಆಶ್ರಯಿಸಿದರು.

**ಅಪಿ ತಂ ಬಹುಶಃ ಕೃಷ್ಣವಿಜಿತಂ ನೈವ ತತ್ಯಜುಃ ।**
**ಅಸುರಾಃ ಪೂರ್ವಸಂಸ್ಕಾರಾತ್ ಸಂಸ್ಕಾರೋ ಬಲವಾನ್ ಯತಃ ॥೧೬೩॥**

ಪದಚ್ಛೇದ :- ಅಪಿ, ತಂ, ಬಹುಶಃ, ಕೃಷ್ಣವಿಜಿತಂ, ನ, ಏವ, ತತ್ಯಜುಃ, ಅಸುರಾಃ, ಪೂರ್ವಸಂಸ್ಕಾರಾತ್, ಸಂಸ್ಕಾರಃ, ಬಲವಾನ್, ಯತಃ.

ಅರ್ಥ :- ಅಸುರಾಃ = ಅಸುರರು, ತಂ = ಜರಾಸಂಧನನ್ನು, ಬಹುಶಃ = ಅನೇಕ ಬಾರಿ, ಕೃಷ್ಣವಿಜಿತಮಪಿ = ಕೃಷ್ಣನಿಂದ ಪರಾಜಿತನಾದರೂ, ಪೂರ್ವಜನ್ಮ ಸಂಸ್ಕಾರಾತ್ = ಪೂರ್ವಜನ್ಮ ಸಂಸ್ಕಾರದಿಂದ, ನೈವತತ್ಯಜುಃ = ಬಿಡಲಿಲ್ಲ, ಯತಃ = ಏಕೆಂದರೆ, ಸಂಸ್ಕಾರಃ = ಸಂಸ್ಕಾರವು, ಬಲವಾನ್ = ಬಲವಾದದ್ದು.

ತಾತ್ಪರ್ಯ :- ಅನೇಕ ಬಾರಿ ಕೃಷ್ಣನು ಜರಾಸಂಧನನ್ನು ಯುದ್ಧದಲ್ಲಿ ಸೋಲಿಸಿದ್ದರೂ, ಜರಾಸಂಧನನ್ನು ಪೂರ್ವಜನ್ಮದ ಸಂಸ್ಕಾರದಿಂದ ಅಸುರರು ಬಿಟ್ಟಿರಲಿಲ್ಲ. ಏಕೆಂದರೆ ಆ ಸಂಸ್ಕಾರವು ಅಷ್ಟು ಬಲವಾಗಿ ಇರುತ್ತದೆ.

ದೇವಾ ಹಿ ಕಾರಣಾದನ್ಯಾನಾಶ್ರಯಂತೋಽಪಿ ನಾಽಂತರಮ್ ।
ಸ್ನೇಹಂ ತ್ಯಜಂತಿ ದೈವೇಷು ತಥಾಽನ್ಯೇಽನ್ಯೇಷ್ವಪಿ ಸ್ಫುಟಮ್ ॥ ೧೬೪ ॥

ಪದಚ್ಛೇದ :- ದೇವಾಃ, ಹಿ, ಕಾರಣಾತ್, ಅನ್ಯಾನ, ಆಶ್ರಯಂತಃ, ಅಡಿ, ನ, ಅಂತರಮ್, ಸ್ನೇಹಂ, ತ್ಯಜಂತಿ, ದೇವೇಷು, ತಥಾ, ಅನ್ಯೇಷು, ಅಪಿ, ಚ, ಸ್ಫುಟಮ್.

ಅರ್ಥ :- ದೇವಾಃ = ದೇವತೆಗಳು, ಕಾರಣಾತ್ = ಕಾರಣಾಂತರದಿಂದ, ಅನ್ಯಾನ್ = ಅಸುರರನ್ನು, ಆಶ್ರಯಂತೋಽಪಿ = ಆಶ್ರಯಿಸಿದರೂ, ದೇವೇಽಪಿ = ದೇವತೆಗಳಲ್ಲಿ, ಆಂತರಮ್ = ಅಂತರಂಗದ, ಸ್ನೇಹಮ್ = ಸ್ನೇಹವನ್ನು, ನ ತ್ಯಜಂತಿ = ಬಿಡಲಾರರಷ್ಟೇ, ತಥಾ = ಅದೇ ರೀತಿ, ಅನ್ಯೇಷ್ವಪಿ ಚ = ದೈತ್ಯರಲ್ಲಿಯೂ ಇದು, ಸ್ಫುಟಮ್ = ಸ್ಪಷ್ಟವಾಗಿದೆ.

ತಾತ್ಪರ್ಯ :- ದೇವತೆಗಳು ಬೇರೆ ಕಾರಣಗಳಿಂದ ಅಸುರ ಮೊದಲಾದವರನ್ನು ಆಶ್ರಯಿಸಿದರೂ ದೇವತೆಗಳಲ್ಲಿನ ಆಂತರ್ಯದ ಸ್ನೇಹವನ್ನು ತೊರೆಯುವುದಿಲ್ಲ. ಅದರಂತೆ ಅಸುರರೂ, ಅಸುರರ ಮೇಲಿನ ಸ್ನೇಹವನ್ನು ಬಿಡುವುದಿಲ್ಲ.

ಧೃತರಾಷ್ಟ್ರೋ ಬಲಂ ಜ್ಞಾತ್ವಾ ಬಹುಶೋ ಭೀಮಪಾರ್ಥಯೋಃ ।
ದೈವತ್ವಾಚ್ಚ ಸ್ವಭಾವೇನ ಜ್ಯೇಷ್ಠತ್ವಾದ್ ಧರ್ಮಜಸ್ಯ ಚ ।
ಸುಪ್ರೀತ ಏವ ತಂ ಚಕ್ರೇ ಯೌವರಾಜ್ಯಾಭಿಷೇಕಿಣಮ್ ॥ ೧೬೫ ॥

**ಪದಚ್ಛೇದ :- ಧೃತರಾಷ್ಟ್ರಃ, ಬಲಂ, ಜ್ಞಾತ್ವಾ, ಬಹುಶಃ, ಭೀಮ ಪಾರ್ಥಯೋಃ, ದೇವತ್ವಾತ್, ಚ, ಸ್ವಭಾವೇನ, ಜ್ಯೇಷ್ಠತ್ವಾತ್, ಧರ್ಮಜಸ್ಯ, ಚ, ಸುಪ್ರೀತಃ, ಏವ, ತಂ, ಚಕ್ರೇ, ಯೌವರಾಜ್ಯೇ, ಅಭಿಷೇಕಿಣಮ್.**

**ಅರ್ಥ :- ಧೃತರಾಷ್ಟ್ರಃ** = ಧೃತರಾಷ್ಟ್ರನು, **ಭೀಮಪಾರ್ಥಯೋಃ** = ಭೀಮಾರ್ಜುನರ, **ಬಲಂ** = ಬಲವನ್ನು, **ಬಹುಶಃ** = ಅನೇಕ ಪ್ರಸಂಗಗಳಲ್ಲಿ, **ಜ್ಞಾತ್ವಾ** = ತಿಳಿದು, **ಚ** = ಮತ್ತು **ಸ್ವಭಾವೇನ** = ಸ್ವಭಾವದಿಂದಲೂ, **ದೇವತ್ವಾತ್** = ದೇವತೆಯಾದ್ದರಿಂದ, **ಚ** = ಮತ್ತು, **ಜ್ಯೇಷ್ಠತ್ವಾತ್** = ಹಿರಿಯವನಾದ್ದರಿಂದಲೂ, **ಧರ್ಮಜಸ್ಯ** = ಧರ್ಮರಾಜನಿಗೆ, **ಸುಪ್ರೀತಃ ಏವ** = ಸಂತೋಷದಿಂದಲೇ **ಯೌವರಾಜ್ಯೇ** = ಯುವರಾಜ ಪದವಿಯಲ್ಲಿ, **ಅಭಿಷೇಕಮ್** = ಪಟ್ಟಾಭಿಷೇಕವನ್ನು, **ಚಕ್ರೇ** = ಮಾಡಿದನು.

**ತಾತ್ಪರ್ಯ :-** ಧೃತರಾಷ್ಟ್ರನಿಗೆ ಅನೇಕ ಪ್ರಸಂಗಗಳಲ್ಲಿ ಭೀಮಾರ್ಜುನರ ಬಲವನ್ನು ತಿಳಿದವನಾದ್ದರಿಂದ ಒಂದು ವೇಳೆ ಧರ್ಮರಾಜನಿಗೆ ಯೌವರಾಜ್ಯ ಪಟ್ಟವನ್ನು ಕಟ್ಟದಿದ್ದರೆ, ತನ್ನ ಮಕ್ಕಳಿಗೆ ಆಗುವ ಅಪಾಯವನ್ನು ಚಿಂತಿಸಿ ಸ್ವಭಾವದಿಂದಲೂ ದೇವತೆಯಾಗಿದ್ದು ಮಕ್ಕಳಲ್ಲಿ ಜ್ಯೇಷ್ಠನಾದ ಧರ್ಮರಾಜನಿಗೆ ಸಂತೋಷದಿಂದಲೇ ಪಟ್ಟಾಭಿಷೇಕ ಮಾಡಿದನು.

**ಭೀಮಾರ್ಜುನಾವಥೋ ಜಿತ್ವಾ ಸರ್ವದಿಕ್ಷು ಚ ಭೂಪತೀನ್ ।**
**ಚಕ್ರತುಃ ಕರದಾನ್ ಸರ್ವಾನ್ ಧೃತರಾಷ್ಟ್ರಸ್ಯ ದುರ್ಜಯೌ ॥ ೧೬೬ ॥**

**ಪದಚ್ಛೇದ :- ಭೀಮಾರ್ಜುನೌ, ಅಥ, ಜಿತ್ವಾ, ಸರ್ವದಿಕ್ಷು, ಚ, ಭೂ ಪತೀನ್, ಚಕ್ರತುಃ, ಕರದಾನ್, ಸರ್ವಾನ್, ಧೃತರಾಷ್ಟ್ರಸ್ಯ, ದುರ್ಜಯೌ.**

**ಅರ್ಥ :- ಅಥ** = ಅನಂತರ, **ದುರ್ಜಯೌ** = ಯಾರಿಂದಲೂ ಸೋಲಿಸಲು ಅಸಾಧ್ಯರಾದ, **ಭೀಮಾರ್ಜುನೌ** = ಭೀಮಾರ್ಜುನರು, **ಸರ್ವದಿಕ್ಷು** = ಎಲ್ಲಾ ದಿಕ್ಕುಗಳಲ್ಲಿ ಇರುವ **ಭೂಪತೀನ್** = ರಾಜರನ್ನು, **ಜಿತ್ವಾ** = ಗೆದ್ದು, **ಸರ್ವಾನ್** = ಎಲ್ಲಾ **ಕರದಾನ್** = ಕಪ್ಪಕಾಣಿಕೆಗಳನ್ನು ಧೃತರಾಷ್ಟ್ರಸ್ಯ, ಧೃತರಾಷ್ಟ್ರನಿಗೆ **ಚಕ್ರತುಃ** = ನೀಡಿದರು.

ತಾತ್ಪರ್ಯ :- ಧರ್ಮರಾಜನು, ಯೌವರಾಜ್ಯದಲ್ಲಿ ಪಟ್ಟಾಭಿಷಿಕ್ತನಾದ ನಂತರ ಅಜೇಯರಾದ ಭೀಮಾರ್ಜುನರು ಎಲ್ಲಾ ದಿಕ್ಕುಗಳಲ್ಲಿರುವ ದುಷ್ಟರಾದ ರಾಜರನ್ನು ಸೋಲಿಸಿ ಅವರು ಕೊಡುವಂತಹ ಕರವನ್ನೆಲ್ಲಾ ಧೃತರಾಷ್ಟ್ರನಿಗೆ ತಂದು ಒಪ್ಪಿಸಿದರು.

**ತಯೋಃ ಪ್ರೀತೋऽಭವತ್ ಸೋऽಪಿ ಪೌರಜಾನಪದಾಸ್ತಥಾ ।**
**ಭೀಷ್ಮದ್ರೋಣಮುಖಾಃ ಸರ್ವೇऽಪ್ಯತಿಮಾನುಷಕರ್ಮಣಾ ॥ ೧೬೭ ॥**

**ಪದಚ್ಛೇದ :- ತಯೋಃ, ಪ್ರೀತಃ, ಅಭವತ್, ಸಃ, ಅಪಿ, ಪೌರಜನಪದಾಃ, ತಥಾ, ಭೀಷ್ಮದ್ರೋಣಮುಖಾಃ, ಸರ್ವೇ, ಅಪಿ, ಅತಿಮಾನುಷಕರ್ಮಣಾ.**

**ಅರ್ಥ** :- **ತಯೋಃ** = ಆ ಭೀಮಾರ್ಜುನರ, **ಅತಿಮಾನುಷಕರ್ಮಣಾ** = ಅತಿ ಮಾನುಷವಾದ ಕರ್ಮದಿಂದ, **ಸರ್ವೇ** = ಎಲ್ಲಾ, **ಪೌರಜನಾಃ** = ಪಟ್ಟಣದ ಜನರು, **ಭೀಷ್ಮದ್ರೋಣ ಮುಖಾಃ** = ಭೀಷ್ಮದ್ರೋಣರೇ ಮೊದಲಾದವರು, **ಧೃತರಾಷ್ಟ್ರೋಪಿ** = ಧೃತರಾಷ್ಟ್ರನೂ ಸಹ, **ಪ್ರೀತಃ** = ಅಭವತ್, ಸಂತೋಷಗೊಂಡನು.

ತಾತ್ಪರ್ಯ :- ಹೀಗೆ ಅತಿಮಾನುಷವಾದ ಕೆಲಸಗಳನ್ನು ಮಾಡಿದ ಭೀಮಾರ್ಜುನರನ್ನು ಅವರ ಕೆಲಸಗಳನ್ನು ನೋಡಿ ಧೃತರಾಷ್ಟ್ರ ಭೀಷ್ಮದ್ರೋಣರು ಹಾಗೆ ಪಟ್ಟಣಿಗರು ಎಲ್ಲರು ತುಂಬಾ ಸಂತೋಷಪಟ್ಟರು.

**ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ಶ್ರೀಮಹಾಭಾರತತಾತ್ಪರ್ಯನಿರ್ಣಯೇ**
**ಭೀಮಾರ್ಜುನದಿಗ್ವಿಜಯೋ ನಾಮ**
**ಅಷ್ಟಾದಶೋऽಧ್ಯಾಯಃ**

# ಅಧ್ಯಾಯ - 19

ಪಾಂಡವಪಾಶ್ಯಲಾಭಃ

ಓಂ ॥ ಏವಂ ಶುಭೋಚ್ಚಗುಣವತ್ಸು ಜನಾರ್ದನೇನ
ಯುಕ್ತೇಷು ಪಾಂಡುಷು ಚರತ್ಸ್ವಧಿಕಂ ಶುಭಾನಿ ।
ನಾಸ್ತಿಕ್ಯನೀತಿಮಖಿಲಾಂ ಗುರುದೇವತಾದಿ-
ಸತ್ಸ್ವಂಜಸೈವ ಜಗೃಹುರ್ಧೃತರಾಷ್ಟ್ರಪುತ್ರಾಃ ॥ ೧ ॥

ಪದಚ್ಛೇದ :- ಏವಂ, ಶುಭೋಚ್ಚಗುಣವತ್ಸು, ಜನಾರ್ದನೇನ, ಯುಕ್ತೇಷು, ಪಾಂಡುಷು, ಚರತ್ಸು, ಅಧಿಕಂ, ಶುಭಾನಿ, ನಾಸ್ತಿಕ್ಯನೀತಿಂ, ಅತುಲಾಂ, ಗುರುದೇವತಾದಿಸತ್ಸು, ಅಂಜಸಾ, ಏವ, ಜಗೃಹುಃ, ಧೃತರಾಷ್ಟ್ರಪುತ್ರಾಃ ।

ಅರ್ಥ :- ಏವಂ = ಈ ರೀತಿಯಾಗಿ, ಶುಭೋಚ್ಚಗುಣವತ್ಸು = ಶುಭ - ಮಂಗಳಕರವಾದ, ಉಚ್ಚ - ಶ್ರೇಷ್ಠವಾದ, ಗುಣವತ್ಸು - ಗುಣಗಳುಳ್ಳ, ಜನಾರ್ದನೇನ = ಕೃಷ್ಣನಿಂದ, ಯುಕ್ತೇಷು = ಕೂಡಿದ, ಪಾಂಡುಷು = ಪಾಂಡವರು, ಶುಭಾನಿ = ಸತ್ಕರ್ಮಗಳನ್ನು, ಅಧಿಕಂ = ಬಹಳವಾಗಿ, ಚರತ್ಸು ಸತ್ಸು = ಮಾಡುತ್ತಿರಲು, ಧೃತರಾಷ್ಟ್ರಪುತ್ರಾಃ = ಧೃತರಾಷ್ಟ್ರನ ಮಕ್ಕಳಾದ ಕೌರವರು, ಗುರುದೇವತಾದಿಸತ್ಸು = ಗುರು - ಗುರುಗಳು, ದೇವತಾದಿ - ದೇವತೆಗಳೇ ಮೊದಲಾಗಿ ಉಳ್ಳ, ಸತ್ಸು - ಸಜ್ಜನರಲ್ಲಿ, ಅತುಲಾಂ = ಅಸದೃಶವಾದ, ನಾಸ್ತಿಕ್ಯನೀತಿಂ = ನಾಸ್ತಿಕ್ಯದ ನೀತಿಯನ್ನು, ಅಂಜಸಾ ಏವ = ಚೆನ್ನಾಗಿಯೇ, ಜಗೃಹುಃ = ಸ್ವೀಕರಿಸಿದರು.

ತಾತ್ಪರ್ಯ :- ಮಂಗಳಕರವಾದ ಶ್ರೇಷ್ಠಗುಣಗಳನ್ನು ಹೊಂದಿರುವ ಪಾಂಡವರು ಶ್ರೀಕೃಷ್ಣನಿಂದ ಕೂಡಿಕೊಂಡು ಸತ್ಕರ್ಮಗಳನ್ನು ಮಾಡುತ್ತಿರಲಾಗಿ ಕೌರವರು ಗುರುಗಳಿಲ್ಲ, ದೇವರಿಲ್ಲ ಎಂದು ಪ್ರತಿಪಾದಿಸುವ ನಾಸ್ತಿಕ್ಯನೀತಿಯನ್ನು ಚೆನ್ನಾಗಿ ಉಪದೇಶ ಪಡೆದರು.

ನಾಮ್ನಾ ಕಲಿಂಗ ಇತಿ ಚಾಽಸುರಕೋ ದ್ವಿಜೋಽಭೂ-
ಚ್ಛಿಷ್ಯಃ ಸುರೇತರಗುರೋಃ ಶಕುನೇರ್ಗುರುಃ ಸಃ ।

ನೀತಿಂ ಸ ಕುತ್ಸಿತತಮಾಂ ಧೃತರಾಷ್ಟ್ರಪುತ್ರೇ-
ಷ್ವಾಧಾದ್ ರಹೋ ವಚನತಃ ಶಕುನೇಃ ಸಮಸ್ತಾಮ್ ॥ ೨ ॥

ಪದಚ್ಛೇದ :- ನಾಮ್ನಾ, ಕಲಿಂಗಃ, ಇತಿ, ಚ, ಅಸುರಕಃ, ದ್ವಿಜಃ, ಅಭೂತ್, ಶಿಷ್ಯಃ, ಸುರೇತರಗುರೋಃ, ಶಕುನೇ, ಗುರುಃ, ಸಃ, ನೀತಿಂ, ಸಃ, ಕುತ್ಸಿತತಮಾಂ, ಧೃತರಾಷ್ಟ್ರಪುತ್ರೇಷು, ಆಧಾತ್, ರಹಃ, ವಚನತಃ, ಶಕುನೇಃ, ಸಮಸ್ತಾಂ ।

ಅರ್ಥ :- ಯಃ = ಯಾವನು, ಅಸುರಕಃ = ದೈತ್ಯಸ್ವಭಾವನಾದ, ದ್ವಿಜಃ = ಬ್ರಾಹ್ಮನಾದ, ನಾಮ್ನಾ = ಹೆಸರಿನಿಂದ, ಕಲಿಂಗಃ ಇತಿ = ಕಲಿಂಗ ಎಂದು ಪ್ರಸಿದ್ಧನಾದವನಿದ್ದನೋ, ಸಃ = ಅವನು, ಸುರೇತರಗುರೋಃ = ಸುರೇತರ - ದೈತ್ಯರ, ಗುರೋಃ - ಗುರುವಾದ ಶುಕ್ರಾಚಾರ್ಯರ, ಶಿಷ್ಯಃ = ಶಿಷ್ಯನು, ಚ = ಮತ್ತು, ಶಕುನೇಃ = ಶಕುನಿಯ, ಗುರುಃ = ಗುರುವು, ಅಭೂತ್ = ಆಗಿದ್ದನು, ಸಃ = ಅವನು, ಶಕುನೇಃ = ಶಕುನಿಯ, ವಚನತಃ = ಮಾತಿನಿಂದ, ರಹಃ = ರಹಸ್ಯದಲ್ಲಿ, ಧೃತರಾಷ್ಟ್ರಪುತ್ರೇಷು = ಧೃತರಾಷ್ಟ್ರನ ಮಕ್ಕಳಾದ ಕೌರವರಲ್ಲಿ, ಸಮಸ್ತಾಂ = ಸಂಪೂರ್ಣವಾದ, ಕುತ್ಸಿತತಮಾಂ = ಬಹಳ ಕೆಟ್ಟದಾದ, ನೀತಿಂ = ನಾಸ್ತಿಕ್ಯ ನೀತಿಯನ್ನು, ಆಧಾತ್ = ಉಪದೇಶಿಸಿದನು.

ತಾತ್ಪರ್ಯ :- ಕಲಿಂಗನೆಂಬುವವನು ದೈತ್ಯಸ್ವಭಾವದ ಬ್ರಾಹ್ಮಣನಾಗಿದ್ದನು. ಇವನು ದೈತ್ಯಗುರುವಾದ ಶುಕ್ರಾಚಾರ್ಯರಿಗೆ ಶಿಷ್ಯನು ಶಕುನಿಯ ಗುರುವೂ ಆಗಿದ್ದನು. ಶಕುನಿಯ ಮಾತಿನಂತೆ ರಹಸ್ಯದಲ್ಲಿ ಕೆಟ್ಟದಾದ ನಾಸ್ತಿಕ್ಯನೀತಿಯನ್ನು ಕೌರವರಿಗೆ ಉಪದೇಶಿಸಿದನು.

ಛದ್ಮೈವ ಯತ್ರ ಪರಮಂ ನ ಸುರಾಶ್ಚ ಪೂಜ್ಯಾಃ
ಸ್ವಾರ್ಥೇನ ವಂಚನಕೃತೇ ಜಗತೋಽಖಿಲಂ ಚ ।
ಧರ್ಮಾದಿಕಾರ್ಯಮಪಿ ಯಸ್ಯ ಮಹೋಪಧಿಃ ಸ್ಯಾತ್
ಶ್ರೇಷ್ಠಃ ಸ ಏವ ನಿಖಿಲಾಸುರದೈತ್ಯಸಂಘಾತ್ ॥ ೩ ॥

ಪದಚ್ಛೇದ :- ಛದ್ಮ, ಏವ, ಯತ್ರ, ಪರಮಂ, ನ, ಸುರಾಃ, ಚ, ಪೂಜ್ಯಾಃ, ಸ್ವಾರ್ಥೇನ, ವಂಚನಕೃತೇ, ಜಗತಃ, ಅಖಿಲಂ, ಚ, ಧರ್ಮಾದಿಕಾರ್ಯಂ, ಅಪಿ, ಯಸ್ಯ, ಮಹೋಪಧಿಃ, ಸ್ಯಾತ್, ಶ್ರೇಷ್ಠಃ, ಸಃ, ಏವ, ನಿಖಿಲಾಸುರದೈತ್ಯಸಂಘಾತ್ ।

**ಅರ್ಥ** :- **ಯತ್ರ** = ಯಾವ ನಾಸ್ತಿಕ್ಯನೀತಿಯಲ್ಲಿ, **ಛದ್ಮ ಏವ** = ವಂಚನೆಯೇ, **ಪರಮಂ** = ಮುಖ್ಯ ಪ್ರತಿಪಾದ್ಯವಾದ್ದು, **ಸುರಾಃ** = ದೇವತೆಗಳು, **ನ ಪೂಜ್ಯಾಃ** = ಪೂಜಿಸಲು ಯೋಗ್ಯರಾದವರಲ್ಲ, **ಸ್ವಾರ್ಥೇನ ಚ** = ಸ್ವಾರ್ಥ ಸಾಧನೆಗಾಗಿಯಾದರೂ, **ಪೂಜ್ಯಾಃ** = ಪೂಜಿಸಲು ಯೋಗ್ಯರಾದವರು, **ಚ** = ಮತ್ತು, **ಜಗತಃ** = ಪ್ರಪಂಚದ, **ವಂಚನಕೃತೇ** = ವಂಚನೆಗಾಗಿ, **ಅಖಿಲಂ** = ಎಲ್ಲ, **ಧರ್ಮಾದಿ ಅಪಿ** = ಧರ್ಮ ಮೊದಲಾದವೂ ಕೂಡ, **ಕಾರ್ಯಂ** = ಮಾಡಲ್ಪಡಬೇಕು.

**ಇತ್ಯಾದಿಕುತ್ಸಿತತಮಾಂ ಜಗೃಹುಃ ಸ್ಮ ವಿದ್ಯಾ-**
**ಮಜ್ಞಾತ ಏವ ಧೃತರಾಷ್ಟ್ರಮುಖ್ಯೈಃ ಸಮಸ್ತೈಃ ।**
**ತೇಷಾಂ ಸ್ವಭಾವಬಲತೋ ರುಚಿತಾ ಚ ಸೈವ**
**ವಿಸ್ತಾರಿತಾ ಚ ನಿಜಬುದ್ಧಿಬಲಾದತೋಽಪಿ ॥ ೪ ॥**

**ಪದಚ್ಛೇದ** :- **ಇತ್ಯಾದಿಕುತ್ಸಿತತಮಾಂ, ಜಗೃಹುಃ, ಸ್ಮ, ವಿದ್ಯಾಂ, ಅಜ್ಞಾತೇ, ಏವ, ಧೃತರಾಷ್ಟ್ರಮುಖ್ಯೈಃ, ಸಮಸ್ತೈಃ, ತೇಷಾಂ, ಸ್ವಭಾವಬಲತಃ, ರುಚಿತಾ, ಚ, ಸಾ, ಏವ, ವಿಸ್ತಾರಿತಾ, ಚ, ನಿಜಬುದ್ಧಿಬಲಾತ್, ಅತಃ, ಅಪಿ, ಚ ।**

**ಅರ್ಥ** :- **ಇತ್ಯಾದಿಕುತ್ಸಿತತಮಾಂ** = ಇತ್ಯಾದಿ - ಇವೇ ಮೊದಲಾಗಿವುಳ್ಳ, **ಕುತ್ಸಿತತಮಾಂ** - ಬಹಳ ಕೆಟ್ಟದಾದ, **ವಿದ್ಯಾಂ** = ನಾಸ್ತಿಕ್ಯ ವಿದ್ಯೆಯನ್ನು, **ಧೃತರಾಷ್ಟ್ರಮುಖ್ಯೈಃ** = ಧೃತರಾಷ್ಟ್ರನೇ ಮೊದಲಾದವರಿಂದ, **ಅಜ್ಞಾತೇ ಏವ** = ತಿಳಿಯಲ್ಪಡದೇ ಇರುತ್ತಿರಲು (ಏಕಾಂತದಲ್ಲಿ), **ಜಗೃಹುಃ ಸ್ಮ** = ಸ್ವೀಕರಿಸಿದರು, **ತೇಷಾಂ** = ಆ ದುರ್ಯೋಧನಾದಿಗಳ, **ಸ್ವಭಾವಬಲತಃ** = ಯೋಗ್ಯತೆಯ ಬಲದಿಂದ, **ರುಚಿತಾ ಚ** = ರುಚಿಸಲ್ಪಟ್ಟಿತ್ತೂ ಕೂಡ, **ಸಾ ಏವ** = ಆ ನಾಸ್ತಿಕ್ಯ ನೀತಿಯೇ, **ಅತಃ ಅಪಿ** = ಗುರುಗಳಿಂದ ಹೇಳಲ್ಪಟ್ಟಿದ್ದಕ್ಕಿಂತಲೂ ಕಲಿಂಗನಿಗಿಂತಲೂ, **ನಿಜಬುದ್ಧಿಬಲತಃ** = ತಮ್ಮ ಬುದ್ಧಿಯ ಸಾಮರ್ಥ್ಯದಿಂದ, **ವಿಸ್ತಾರಿತಾ** = ವಿಸ್ತಾರಗೊಳಿಸಲ್ಪಟ್ಟಿತು.

**ತಾತ್ಪರ್ಯ** :- ಇದೇ ಮೊದಲಾದ ಬಹಳ ಕೆಟ್ಟದಾದ ನಾಸ್ತಿಕ್ಯ ನೀತಿಯನ್ನು ಧೃತರಾಷ್ಟ್ರ ಮೊದಲಾದ ಯಾರಿಗೂ ತಿಳಿಯದಂತೆ ಏಕಾಂತ ಸ್ಥಳದಲ್ಲಿ ಸ್ವೀಕರಿಸಿದರು. ಆ ನಾಸ್ತಿಕ್ಯನೀತಿ ದುರ್ಯೋಧನಾದಿಗಳ ಯೋಗ್ಯತೆಯಂತೆ

ಶುಚಿಸಿತು. ತಮ್ಮ ಬುದ್ಧಿ ಬಲದಿಂದ ಗುರುಗಳು ಹೇಳಿಕೊಟ್ಟದ್ದಕ್ಕಿಂತಲೂ ಹೆಚ್ಚಾಗಿ ಅಥವಾ ಕಲಿಂಗನಿಗಿಂತಲೂ ಹೆಚ್ಚಾಗಿ ಪ್ರಚಾರಕ್ಕೆ ತಂದರು.

**ಸಂಪೂರ್ಣದುರ್ಮತಿರಥೋ ಧೃತರಾಷ್ಟ್ರಸೂನು-**
**ಸ್ತಾತಪ್ಯಮಾನಹೃದಯೋ ನಿಖಿಲಾನ್ಯಹಾನಿ ।**
**ದೃಷ್ಟ್ವಾ ಶ್ರಿಯಂ ಪರಮಿಕಾಂ ವಿಜಯಂ ಚ ಪಾರ್ಥೇ-**
**ಷ್ವಾಹೇದಮೇತ್ಯ ಪಿತರಂ ಸಹ ಸೌಬಲೇನ ॥ ೫ ॥**

**ಪದಚ್ಛೇದ :- ಸಂಪೂರ್ಣದುರ್ಮತಿಃ, ಅಥೋ, ಧೃತರಾಷ್ಟ್ರಸೂನುಃ, ತಾತಪ್ಯಮಾನಹೃದಯಃ, ನಿಖಿಲಾನಿ, ಅಹಾನಿ, ದೃಷ್ಟ್ವಾ, ಶ್ರಿಯಂ, ಪರಮಿಕಾಂ, ವಿಜಯಂ, ಚ, ಪಾರ್ಥೇಷು, ಆಹ, ಇದಂ, ಏತ್ಯ, ಪಿತರಂ, ಸಹ, ಸೌಬಲೇನ ।**

**ಅರ್ಥ :- ಅಥೋ** = ಕಲಿಂಗನಿಂದ ನಾಸ್ತಿಕ್ಯನೀತಿಯನ್ನು ಉಪದೇಶ ಪಡೆದನಂತರ, **ಸಂಪೂರ್ಣದುರ್ಮತಿಃ** = ಪರಿಪೂರ್ಣವಾದ ದುರ್ಬುದ್ಧಿಯುಳ್ಳ, **ಧೃತರಾಷ್ಟ್ರಸೂನುಃ** = ಧೃತರಾಷ್ಟ್ರನ ಮಗನಾದ ದುರ್ಯೋಧನನು, **ಪಾರ್ಥೇಷು** = ಪಾಂಡವರಲ್ಲಿ, **ಪರಮಿಕಾಂ** = ಉತ್ತಮವಾದ, **ಶ್ರಿಯಂ** = ಸಂಪತ್ತನ್ನು, **ವಿಜಯಂ ಚ** = ಜಯವನ್ನೂ, **ದೃಷ್ಟ್ವಾ** = ನೋಡಿ, **ನಿಖಿಲಾನಿ ಅಹಾನಿ** = ಎಲ್ಲ ಕಾಲಗಳಲ್ಲಿಯೂ, **ತಾತಪ್ಯಮಾನ ಹೃದಯಃ** = ಬಹಳವಾಗಿ ದುಃಖಿಸುತ್ತಿರುವ ಮನುಸ್ಸುಳ್ಳವನಾಗಿ, **ಸೌಬಲೇನ ಸಹ** = ಶಕುನಿಯೊಂದಿಗೆ, **ಪಿತರಂ** = ತಂದೆಯನ್ನು, **ಏತ್ಯ** = ಹೊಂದಿ, **ಇದಂ** = ಈ ಮಾತನ್ನು, **ಆಹ** = ಹೇಳಿದನು.

ತಾತ್ಪರ್ಯ :- ಕಲಿಂಗನಿಂದ ನಾಸ್ತಿಕ್ಯ ನೀತಿಯನ್ನು ಉಪದೇಶ ಪಡೆದ ನಂತರ ದುರ್ಯೋಧನನು ಮತ್ತಷ್ಟು ದುರ್ಬುದ್ಧಿಯನ್ನು ಹೊಂದಿದ. ಪಾಂಡವರಿಗೆ ಬಂದಿರುವ ಉತ್ತಮ ಸಂಪತ್ತು ಜಯವನ್ನೂ ಕಂಡು ಪ್ರತಿನಿತ್ಯ ದುಃಖಗೊಂಡ ಮನಸ್ಸುಳ್ಳವನಾಗಿ ಶಕುನಿಯೊಂದಿಗೆ ತಂದೆಯ ಸಮೀಪಕ್ಕೆ ಬಂದು ಈ ಮಾತನ್ನು ಹೇಳಿದನು.

**ಜ್ಯೇಷ್ಠಸ್ಯ ತೇಽಪಿ ಹಿ ವಯಂ ಹೃದಯಪ್ರಜಾತಾ**
**ನಾರ್ಹತ್ವಮೇವ ಗಮಿತಾ ಭವತ್ಯೆವ ರಾಜ್ಯೇ ।**

**ಭ್ರಾತುಃ ಕನೀಯಸ ಉತಾಪಿ ಹಿ ದಾರಜಾತಾ**
**ಅನ್ಯೈಃ ಶ್ಚ ರಾಜ್ಯಪದವೀಂ ಭವತೈವ ನೀತಾಃ ॥ ೬ ॥**

**ಪದಚ್ಛೇದ :-** ಜ್ಯೇಷ್ಠಸ್ಯ, ತೇ, ಅಪಿ, ಹಿ, ವಯಂ, ಹೃದಯಪ್ರಜಾತಾಃ, ನ, ಅರ್ಹತ್ವಂ, ಏವ, ಗಮಿತಾಃ, ಭವತಾ, ಏವ, ರಾಜ್ಯೇ, ಭ್ರಾತುಃ, ಕನೀಯಸಃ, ಉತ, ಅಪಿ, ಹಿ, ದಾರಜಾತಾಃ, ಅನ್ಯೈಃ, ಚ, ರಾಜ್ಯಪದವೀಂ, ಭವತಾ, ಏವ, ನೀತಾಃ ।

**ಅರ್ಥ :-** **ಜ್ಯೇಷ್ಠಸ್ಯ** = ಹಿರಿಯನಾದ, **ತೇ ಅಪಿ** = ನಿನಗಾದರೂ, **ವಯಂ** = ನಾವು, **ಹೃದಯಪ್ರಜಾತಾಃ ಹಿ** = ಔರಸಪುತ್ರರರಷ್ಟೇ!, **ಭವತಾ ಏವ** = ನಿನ್ನಿಂದಲೇ, **ರಾಜ್ಯೇ** = ರಾಜ್ಯದಲ್ಲಿ, **ಅರ್ಹತ್ವಂ** = ಯೋಗ್ಯತೆಯು, **ನ ಗಮಿತಾಃ ಏವ** = ಹೊಂದಿಸಲ್ಪಡಲೇ ಇಲ್ಲ, **ಕನೀಯಸಃ** = ಕಿರಿಯನಾದ, **ಭ್ರಾತುಃ** = ತಮ್ಮನಾದ ಪಾಂಡುವಿಗೆ, **ಉತ ಅಪಿ** = ಅದರಲ್ಲಿಯೂ, **ಅನ್ಯೈಃ** = ಬೇರೆಯವರಿಂದ, **ದಾರಜಾತಾಃ ಚ** = ಹೆಂಡತಿಯಾದ ಕುಂತಿಯಲ್ಲಿ ಹುಟ್ಟಿದ ಪಾಂಡವರಾದರೂ, **ಭವತಾ ಏವ** = ನಿನ್ನಿಂದಲೇ, **ರಾಜ್ಯಪದವೀಂ** = ಯುವರಾಜನ ಸ್ಥಾನವನ್ನು, **ನೀತಾಃ** = ಹೊಂದಿಸಲ್ಪಟ್ಟರು.

**ತಾತ್ಪರ್ಯ :-** ನಾವು ಹಿರಿಯನಾದ ನಿನಗೆ ಔರಸಪುತ್ರರು. ನೀನೇ ನಮಗೆ ರಾಜ್ಯದಲ್ಲಿ ಯುವರಾಜರಾಗುವ ಯೋಗ್ಯತೆಯನ್ನು ಕೊಡಲಿಲ್ಲ. ಆದರೇ ನಿನ್ನ ಕಿರಿಯ ತಮ್ಮನಿಗೆ ಅದರಲ್ಲಿಯೂ ಬೇರೆಯವರಿಂದ ಅವನ ಹೆಂಡತಿಯಲ್ಲಿ ಹುಟ್ಟಿದ ಪಾಂಡವರಿಗೆ ಯುವರಾಜರ ಸ್ಥಾನವನ್ನು ಕೊಟ್ಟಿರುವಿ.

**ರಾಜ್ಯಂ ಮಹಚ್ಚ ಸಮವಾಪ್ಸ್ಯತಿ ಧರ್ಮಸೂನು-**
**ಸ್ತ್ವತ್ತೋಽಥವಾಽನುಜಬಲಾತ್ ಪ್ರಸಭಂ ವಯಂ ತು ।**
**ದಾಸಾ ಭವೇಮ ನಿಜತಂತುಭಿರೇವ ಸಾಕಂ**
**ಕುಂತೀಸುತಸ್ಯ ಪರತೋಽಪಿ ತದನ್ವಯಸ್ಯ ॥ ೭ ॥**

**ಪದಚ್ಛೇದ :-** ರಾಜ್ಯಂ, ಮಹತ್, ಚ, ಸಮವಾಪ್ಸ್ಯತಿ, ಧರ್ಮಸೂನುಃ, ತ್ವತ್ತಃ, ಅಥವಾ, ಅನುಜಬಲಾತ್, ಪ್ರಸಭಂ, ವಯಂ, ತು, ದಾಸಾಃ, ಭವೇಮ, ನಿಜತಂತುಭಿಃ, ಏವ, ಸಾಕಂ, ಕುಂತೀಸುತಸ್ಯ, ಪರತಃ, ಅಪಿ, ತದನ್ವಯಸ್ಯ ।

**ಅರ್ಥ** :- **ಧರ್ಮಸೂನುಃ** = ಯಮಧರ್ಮನ ಮಗನಾದ ಯುಧಿಷ್ಠಿರನು, **ತ್ವತ್ತಃ** = ನಿನ್ನ ದೆಸೆಯಿಂದ (ನಿನ್ನ ಅನುಗ್ರಹದಿಂದ), **ಅಥವಾ** = ಅಥವಾ, **ಅನುಜಬಲಾತ್** = ತಮ್ಮಂದಿರ ಸಾಮರ್ಥ್ಯದಿಂದ, **ಪ್ರಸಭಂ** = ಬಲಾತ್ಕಾರವಾಗಿ, **ಮಹತ್** = ದೊಡ್ಡದಾದ, **ರಾಜ್ಯಂ ಚ** = ಸಾಮ್ರಾಜ್ಯವನ್ನೂ ಕೂಡ, **ಸಮವಾಪ್ಸ್ಯತಿ** = ಹೊಂದುತ್ತಾನೆ, **ವಯಂ ತು** = ನಾವಾದರೂ, **ನಿಜತಂತುಭಿಃ ಸಾಕಂ** = ನಮ್ಮ ಸಂತತಿಯವರೊಂದಿಗೆ, **ದಾಸಾಃ ಏವ** = ದಾಸರೇ, **ಭವೇಮ** = ಆಗುತ್ತೇವೆ, **ಪರತಃ ಅಪಿ** = ನಮ್ಮ ಅನಂತರದಲ್ಲಿಯಾದರೂ, **ತದನ್ವಯಸ್ಯ** = ಧರ್ಮರಾಜನ ವಂಶಕ್ಕೇ ನಮ್ಮ ಸಂತಿಯು ದಾಸವಾಗಬೇಕಾಗುತ್ತದೆ.

**ತಾತ್ಪರ್ಯ** :- ಧರ್ಮರಾಜನು ನಿನ್ನ ಅನುಗ್ರಹದಿಂದಲೊ ಅಥವಾ ತಮ್ಮಂದಿರ ಸಾಮರ್ಥ್ಯದಿಂದ ಬಲಾತ್ಕಾರವಾಗಿಯಾಗಲೀ ಈ ದೊಡ್ಡ ಸಾಮ್ರಾಜ್ಯವನ್ನು ಮುಂದೆ ಪಡೆಯುತ್ತಾನೆ. ನಾವೂ ನಮ್ಮ ಸಂತತಿಯೂ ಅವನಿಗೆ ದಾಸರಾಗಬೇಕು. ನಮ್ಮ ನಂತರದ ಕಾಲದಲ್ಲಿಯೂ ನಮ್ಮ ಮುಂದಿನ ಪೀಳಿಗೆ ಅವರ ವಂಶಕ್ಕೆ ದಾಸರಾಗಬೇಕಾಗುತ್ತದೆ.

**ನಾಽತ್ಮಾರ್ಥಮಸ್ತಿ ಮಮ ದುಃಖಮಥಾತಿಶುದ್ಧ-**
**ಲೋಕಪ್ರಸಿದ್ಧಯಶಸಸ್ತವ ಕೀರ್ತಿನಾಶಃ ।**
**ಅಸ್ಮನ್ನಿಮಿತ್ತ ಇತಿ ದುಃಖಮತೋ ಹಿ ಸರ್ವೇಽ-**
**ಪೀಚ್ಛಾಮ ಮರ್ತುಮಥ ನಃ ಕುರು ಚಾಪ್ಯನುಜ್ಞಾಮ್ ॥ ೮ ॥**

ಪದಚ್ಛೇದ :- ನ, **ಆತ್ಮಾರ್ಥಂ, ಅಸ್ತಿ, ಮಮ, ದುಃಖಂ, ಅಥ, ಅತಿಶುದ್ಧಲೋಕಪ್ರಸಿದ್ಧಯಶಸಃ, ತವ, ಕೀರ್ತಿನಾಶಃ, ಅಸ್ಮನ್ನಿಮಿತ್ತಃ, ಇತಿ, ದುಃಖಂ, ಅತಃ, ಹಿ, ಸರ್ವೇ, ಅಪಿ, ಇಚ್ಛಾಮ, ಮರ್ತುಂ, ಅಥ, ನಃ, ಕುರು, ಚ, ಅಪಿ, ಅನುಜ್ಞಾಂ ।**

**ಅರ್ಥ** :- **ಆತ್ಮಾರ್ಥಂ** = ನನಗಾಗಿ (ನನ್ನ ರಾಜ್ಯಪ್ರಾಪ್ತಿಗಾಗಿ), **ಮಮ** = ನನಗೆ, **ದುಃಖಂ** = ದುಃಖವು, **ನಾಸ್ತಿ** = ಇಲ್ಲ, **ಅಥ (ಅಪಿ)** = ಹಾಗಿದ್ದರೂ **ಅತಿಶುದ್ಧಲೋಕ, ಪ್ರಸಿದ್ಧಯಶಸಃ** = ಅತಿಶುದ್ಧ ಅತಿ ನಿರ್ಮಲವಾದ, **ಲೋಕ** = ಜಗತ್ತಿನಲ್ಲಿ, **ಪ್ರಸಿದ್ಧ** = ಪ್ರಸಿದ್ಧವಾದ, **ಯಶಸಃ** = ಕೀರ್ತಿಯುಳ್ಳ, **ತವ** =

ನಿನಗೆ, **ಕೀರ್ತಿನಾಶಃ** = ಕೀರ್ತಿಯ ನಾಶವು, **ಅಸ್ಮನ್ನಿಮಿತ್ತಃ** = ನಾವೇ ಕಾರಣವಾಗಿವುಳ್ಳದ್ದು (ನಮ್ಮಿಂದಾಗಿ ಆಗುತ್ತಿರುವುದು), **ಇತಿ** = ಎಂದು, **ದುಃಖಂ ಹಿ** = ದುಃಖವು ಅಷ್ಟೇ!, **ಅತಃ** = ಆದ್ದರಿಂದ, **ಸರ್ವೇ ಅಪಿ** = ಎಲ್ಲರೂ, **ಮರ್ತುಂ** = ಸಾಯಲು, **ಇಚ್ಛಾಮ** = ಬಯಸುತ್ತಿರುವೆವು, **ಅಥ** = ಆದ್ದರಿಂದ, **ನಃ** = ನಮಗೆ, **ಅನುಜ್ಞಾಂ ಅಪಿ ಚ** = ಅಪ್ಪಣೆಯನ್ನಾದರೂ, **ಕುರು** = ಮಾಡು.

**ತಾತ್ಪರ್ಯ** :- ನನಗೆ ನನಗಾಗಿ ದುಃಖವಿಲ್ಲ. ಆದರೆ ಲೋಕದಲ್ಲಿ ನಿಷ್ಕಳಂಕವಾದ ಬಹಳ ಪ್ರಸಿದ್ಧವಾದ ನಿನ್ನ ಕೀರ್ತಿಯು ನಮ್ಮಿಂದ ನಾಶವಾಗುತ್ತದೆ ಎಂಬುದಕ್ಕಾಗಿಯೇ ದುಃಖ. ಆದ್ದರಿಂದ ನಾವೆಲ್ಲರೂ ಸಾಯಲು ಅಪೇಕ್ಷಿಸುತ್ತಿದ್ದೇವೆ. ಅದಕ್ಕೆ ಅಪ್ಪಣೆಯನ್ನು ಕೊಡು.

**ಏವಂ ಸ್ವಪುತ್ರವಚನಂ ಸ ನಿಶಮ್ಯ ರಾಜಾ**
**ಪ್ರೋವಾಚ ನಾನುಗುಣಮೇತದಹೋ ಮನಸ್ತೇ ।**
**ಕೋ ನಾಮ ಪಾಂಡುತನಯೇಷು ಗುಣೋತ್ತಮೇಷು**
**ಪ್ರೀತಿಂ ನ ಯಾತಿ ನಿಜವೀರ್ಯಭವೋಚ್ಚಯೇಷು ॥ ೯ ॥**

**ಪದಚ್ಛೇದ** :- ಏವಂ, ಸ್ವಪುತ್ರವಚನಂ, ಸಃ, ನಿಶಮ್ಯ, ರಾಜಾ, ಪ್ರೋವಾಚ, ನ, ಅನುಗುಣಮ್, ಏತತ್, ಅಹೋ, ಮನಃ, ತೇ, ಕಃ, ನಾಮ, ಪಾಂಡುತನಯೇಷು, ಗುಣೋತ್ತಮೇಷು, ಪ್ರೀತಿಮ್, ನ, ಯಾತಿ, ನಿಜವೀರ್ಯಭವೋಚ್ಚಯೇಷು ।

**ಅರ್ಥ** :- **ಏವಂ** = ಈ ರೀತಿಯಾಗಿ, **ಸ್ವಪುತ್ರವಚನಂ** = ಸ್ವ - ತನ್ನ, ಪುತ್ರ - ಮಗನ, ವಚನಂ - ಮಾತನ್ನು, **ನಿಶಮ್ಯ** = ಕೇಳಿ, **ಸಃ** = ಆ, **ರಾಜಾ** = ರಾಜನಾದ ಧೃತರಾಷ್ಟ್ರನು, **ಪ್ರೋವಾಚ** = ಹೇಳಿದನು, **ತೇ** = ನಿನ್ನ, **ಏತತ್** = ಈ, **ಮನಃ** = ಮನಸ್ಸು (ಅಭಿಪ್ರಾಯವು), **ನ ಅನುಗುಣಂ** = ಶ್ರೇಯಸ್ಸಿಗೆ ಅನುಕೂಲವಾಗಿರುವುದಲ್ಲ, **ಅಹೋ** = ಆಶ್ಚರ್ಯವು, **ಗುಣೋತ್ತಮೇಷು** = ಉತ್ತಮವಾದ ಗುಣಗಳುಳ್ಳ, **ನಿಜವೀರ್ಯಭವೋಚ್ಚಯೇಷು** = ನಿಜ - ತಮ್ಮ, ವೀರ್ಯ - ಪರಾಕ್ರಮದಿಂದ, ಭವ - ಉಂಟಾದ, **ಉಚ್ಚಯೇಷು** - ಸಂಪತ್ತುಳ್ಳ, **ಪಾಂಡುತನಯೇಷು** = ಪಾಂಡವರಲ್ಲಿ, **ಕೋ ನಾಮ** = ಯಾರು ತಾನೆ, **ಪ್ರೀತಿಂ** = ಪ್ರೀತಿಯನ್ನು, **ನ ಯಾತಿ** = ಹೊಂದುವುದಿಲ್ಲ.

ತಾತ್ಪರ್ಯ :- ಈ ರೀತಿಯಾಗಿ ಮಗನ ಮಾತನ್ನು ಕೇಳಿದ ಧೃತರಾಷ್ಟ್ರನು ಹೇಳಿದನು. ನಿನ್ನ ಈ ಅಭಿಪ್ರಾಯವು ಸರಿಯಾದುದಲ್ಲ. ಉತ್ತಮವಾದ ಗುಣಗಳನ್ನು ಹೊಂದಿರುವ ತಮ್ಮ ಪರಾಕ್ರಮದಿ ಸಂಪತ್ತನ್ನು ಗಳಿಸಿರುವ ಪಾಂಡವರಲ್ಲಿ ಯಾರು ತಾನೇ ಪ್ರೀತಿ ಮಾಡುವುದಿಲ್ಲ ?

**ತೇ ಹಿ ಸ್ವಬಾಹುಬಲತೋಽಖಿಲಭೂಪಭೂತಿಂ**
**ಮಯ್ಯಾಕೃಷಂತಿ ನಚ ವಃ ಪ್ರತಿಷೇಧಕಾಸ್ತೇ ।**
**ತಸ್ಮಾಚ್ಛಮಂ ವ್ರಜ ಶುಭಾಯ ಕುಲಸ್ಯ ತಾತ**
**ಕ್ಷೇಮಾಯ ನೋ ಭವತಿ ವೋ ಬಲವದ್ವಿರೋಧಃ ॥ ೧೦ ॥**

ಪದಚ್ಛೇದ :- **ತೇ, ಹಿ, ಸ್ವಬಾಹುಬಲತಃ, ಅಖಿಲಭೂಪಭೂತಿಮ್, ಮಯಿ, ಆಕೃಷಂತಿ, ನ, ಚ, ವಃ, ಪ್ರತಿಷೇಧಕಾಃ, ತೇ, ತಸ್ಮಾತ್, ಶಮಮ್, ವ್ರಜ, ಶುಭಾಯ, ಕುಲಸ್ಯ, ತಾತ, ಕ್ಷೇಮಾಯ, ನೋ, ಭವತಿ, ವಃ, ಬಲವದ್ವಿರೋಧಃ ।**

ಅರ್ಥ :- **ತೇ ಹಿ** = ಆ ಪಾಂಡವರಾದರೂ, **ಸ್ವಬಾಹುಬಲತಃ** = **ಸ್ವ** - ತಮ್ಮ, **ಬಾಹು** - ಭುಜಗಳ, **ಬಲತಃ** - ಸಾಮರ್ಥ್ಯದಿಂದ, **ಅಖಿಲಭೂಪಭೂತಿಂ** = **ಅಖಿಲ** - ಎಲ್ಲ, **ಭೂಪ** - ರಾಜರುಗಳ, **ಭೂತಿಂ** - ಸಂಪತ್ತನ್ನು, **ಮಯಿ** = ನನ್ನಲ್ಲಿ, **ಆಕೃಷಂತಿ** = ಸೆಳೆಯುತ್ತಿದ್ದಾರೆ, **ಚ** = ಮತ್ತು, **ತೇ** = ಅವರು, **ವಃ** = ನಮಗೆ, **ನ ಪ್ರತಿಷೇಧಕಾಃ** = ವಿರೋಧಿಗಳಲ್ಲ, **ತಾತ** = ಮಗನೇ!, **ತಸ್ಮಾತ್** = ಆದ್ದರಿಂದ, **ಕುಲಸ್ಯ** = ವಂಶದ, **ಶುಭಾಯ** = ಒಳಿತಿಗಾಗಿ, **ಶಮಂ** = ಶಾಂತಿಯನ್ನು, **ವ್ರಜ** = ಹೊಂದು, **ವಃ** = ನಮಗೆ, **ಬಲವದ್ವಿರೋಧಃ** = ಬಲಿಷ್ಠರೊಂದಿಗೆ ವಿರೋಧವು, **ಕ್ಷೇಮಾಯ** = ಮಂಗಳಕ್ಕಾಗಿ, **ನೋ ಭವತಿ** = ಆಗುವುದಿಲ್ಲ.

ತಾತ್ಪರ್ಯ :- ಪಾಂಡವರು ತಮ್ಮ ಭುಜಬಲದಿಂದ ಎಲ್ಲಾ ರಾಜರಲ್ಲಿರುವ ಸಂಪತ್ತನ್ನು ನನ್ನ ಬಳಿಗೆ ಸೆಳೆಯುತ್ತಿದ್ದಾರೆ. ನಮಗೆ ವಿರೋಧಿ- ಗಳಂತೂ ಅಲ್ಲ. ಆದ್ದರಿಂದ ಮಗನೇ! ನಮ್ಮ ವಂಶದ ಒಳಿತಿಗಾಗಿ ಶಾಂತನಾಗು. ಬಲಿಷ್ಠರೊಡನೆ ವಿರೋಧ ಮಾಡುವುದರಿಂದ ನಮಗೆ ಮಂಗಳವಾಗುವುದಿಲ್ಲ.

**ಏವಂ ಬ್ರುವತ್ಯಪಿ ನೃಪೇ ಪುನರಾಹ ಪಾಪ**
**ಆಶ್ರಿತ್ಯ ಸೌಬಲಮತಂ ಯದಿ ನೈವ ಪಾರ್ಥಾನ್ ।**

**ಅನ್ಯತ್ರ ಯಾಪಯಸಿ ನಾಗಪುರಾತ್ ಪರೇತಾನ್**
**ದೃಷ್ಟ್ವಾಽಖಿಲಾನಪಿ ಹಿ ನೋ ಮುದಮೇಹಿ ಪಾರ್ಥೈಃ ॥ ೧೧ ॥**

ಪದಚ್ಛೇದ :- ಏವಂ, ಬ್ರುವತಿ, ಅಪಿ, ನೃಪೇ, ಪುನಃ, ಆಹ, ಪಾಪಃ, ಆಶ್ರಿತ್ಯ, ಸೌಬಲಮತಂ, ಯದಿ, ನ, ಏವ, ಪಾರ್ಥಾನ್, ಅನ್ಯತ್ರ, ಯಾಪಯಸಿ, ನಾಗಪುರಾತ್, ಪರೇತಾನ್, ದೃಷ್ಟ್ವಾ, ಅಖಿಲಾನ್, ಅಪಿ, ಹಿ, ನಃ, ಮುದಂ, ಏಹಿ, ಪಾರ್ಥೈಃ ।

**ಅರ್ಥ** :- **ನೃಪೇ** = ರಾಜನಾದ ಧೃತರಾಷ್ಟ್ರನು, **ಏವಂ** = ಈ ರೀತಿಯಾಗಿ, **ಬ್ರುವತಿ ಸತಿ ಅಪಿ** = ಹೇಳುತ್ತಿದ್ದರೂ, **ಪಾಪಃ** = ಪಾಪಿಷ್ಠನಾದ ದುರ್ಯೋಧನನು, **ಸೌಬಲಮತಂ** = ಶಕುನಿಯ ಅಭಿಪ್ರಾಯವನ್ನು, **ಆಶ್ರಿತ್ಯ** = ಅನುಸರಿಸಿ, **ಪುನಃ** = ಮತ್ತೆ, **ಆಹ** = ಹೇಳಿದನು, **ಯದಿ** = ಒಂದುವೇಳೆ, **ಪಾರ್ಥಾನ್** = ಪಾಂಡವರನ್ನು, **ನಾಗಪುರಾತ್** = ಹಸ್ತಿನಾಪಟ್ಟಣದಿಂದ, **ಅನ್ಯತ್ರ** = ಬೇರೆ ಕಡೆಗೆ, **ನ ಯಾಪಯಸಿ** = ಕಳುಹಿಸುವುದಿಲ್ಲವಾದರೆ, **ಪರೇತಾನ್** = ಪರಲೋಕವನ್ನು ಹೊಂದಿದ, **ಅಖಿಲಾನ್** = ಎಲ್ಲ, **ನಃ** = ನಮ್ಮನ್ನು, **ದೃಷ್ಟ್ವಾ** = ನೋಡಿ, **ಪಾರ್ಥೈಃ ಸಹ** = ಪಾಂಡವರೊಂದಿಗೆ, **ಮುದಂ** = ಸಂತೋಷವನ್ನು, **ಏಹಿ** = ಹೊಂದು, **ಹಿ** = ಇದು ನಿಶ್ಚಯ.

**ತಾತ್ಪರ್ಯ** :- ಧೃತರಾಷ್ಟ್ರನು ಹೀಗೆ ಹೇಳಿದರೂ ಪಾಪಿಯಾದ ದುರ್ಯೋಧನನು ಮತ್ತೆ ಹೇಳುತ್ತಾನೆ - ನೀನು ಪಾಂಡವರನ್ನು ಹಸ್ತಿನಾಪಟ್ಟಣದಿಂದ ಬೇರೆಕಡೆಗೆ ಕಳುಹಿಸುವುದಿಲ್ಲವಾದರೆ, ಮೃತರಾದ ನಮ್ಮನ್ನೆಲ್ಲರನ್ನೂ ನೋಡಿ ಪಾಂಡವರೊಂದಿಗೇ ಇದ್ದು ಸಂತೋಷವಾಗಿರು.

**ಏವಂ ನಿಶಮ್ಯ ಗದಿತಂ ಸುತಹಾರ್ದಪಾಶೈ-**
**ರಾಕೃಷ್ಯತಾಽಶು ಸ ನೃಪೋಽರಿಧರೇಚ್ಛಯೈವ ।**
**ಪ್ರೋವಾಚ ಪುತ್ರಮಪಿ ತೇ ಬಲಿನೋ ಹಿ ಪಾರ್ಥಾಃ**
**ಶಕ್ಯಾಃ ಪುರಾತ್ತು ನ ಚ ಯಾಪಯಿತುಂ ಕಥಂಚಿತ್ ॥ ೧೨ ॥**

ಪದಚ್ಛೇದ :- ಏವಂ, ನಿಶಮ್ಯ, ಗದಿತಂ, ಸುತಹಾರ್ದಪಾಶೈಃ, ಆಕೃಷ್ಯತ, ಆಶು, ಸಃ, ನೃಪಃ, ಅರಿಧರೇಚ್ಛಯಾ, ಏವ, ಪ್ರೋವಾಚ, ಪುತ್ರಂ, ಅಪಿ, ತೇ, ಬಲಿನಃ, ಹಿ, ಪಾರ್ಥಾಃ, ಶಕ್ಯಾಃ, ಪುರಾತ್, ತು, ನ, ಚ, ಯಾಪಯಿತುಂ, ಸಮರ್ಥಾಃ ।

**ಅರ್ಥ** :- **ಏವಂ** = ಈ ರೀತಿಯಾಗಿ, **ಗದಿತಂ** = ಮಗನಿಂದ ಹೇಳಲ್ಪಟ್ಟದನ್ನು, **ನಿಶಮ್ಯ** = ಕೇಳಿ, **ಸಃ** = ಆ, **ನೃಪಃ** = ರಾಜನಾದ ಧೃತರಾಷ್ಟ್ರನು, **ಅರಿಧರೇಚ್ಛಯಾ ಏವ** = ಅರಿ - ಚಕ್ರವನ್ನು, ಧರ - ಧರಿಸಿರುವ ಪರಮಾತ್ಮನ, **ಇಚ್ಛಯಾ ಏವ** - ಇಚ್ಛೆಯಿಂದಲೇ, **ಸುತಹಾರ್ದಪಾಶೈಃ** = ಸುತ - ಮಗನ, **ಹಾರ್ದ** - ಪ್ರೀತಿಯ, **ಪಾಶೈಃ** - ಪಾಶಗಳಿಂದ, **ಆಶು** = ಕೂಡಲೆ, **ಆಕೃಷ್ಯತ** = ಸೆಳೆಯಲ್ಪಟ್ಟನು, **ಪುತ್ರಂ ಅಪಿ** = ಮಗನನ್ನೂ ಕುರಿತು, **ಪ್ರೋವಾಚ** = ಹೇಳಿದನು, (**ತನಯ** = ಮಗನೇ!) **ಬಲಿನಃ** = ಬಲಿಷ್ಠರಾದ, **ತೇ** = ಆ, **ಪಾರ್ಥಾಃ** = ಪಾಂಡವರು, **ಪುರಾತ್** = ಹಸ್ತಿನಾಪಟ್ಟಣದಿಂದ, **ಕಥಂಚಿತ್** = ಯಾವ ರೀತಿಯಿಂದಲೂ, **ಯಾಪಯಿತುಂ** = ಹೊರಹಾಕಲು, **ನ ಚ ಶಕ್ಯಾಃ** = ಸಮರ್ಥರಾಗುವುದಿಲ್ಲ.

**ತಾತ್ಪರ್ಯ** :- ಈ ರೀತಿಯಾಗಿ ಮಗನು ಹೇಳಿದ್ದನ್ನು ಕೇಳಿ ಧೃತರಾಷ್ಟ್ರನು ಭಗವಂತನ ಇಚ್ಛೆಯಿಂದಲೇ ಮಗನ ಪ್ರೇಮಪಾಶಗಳಿಂದ ಆಕೃಷ್ಟನಾಗಿದ್ದಾನೆ. ಮಗನಿಗೆ ಹೇಳಿದನು - ಮಗನೇ! ಬಲಿಷ್ಟರಾದ ಪಾಂಡವರನ್ನು ಹಸ್ತಿನಾಪುರದಿಂದ ಹೊರಹಾಕುವುದು ಯಾವ ರೀತಿಯಿಂದಲೂ ಸಾಧ್ಯವಾಗಲಾರದು.

**ಇತ್ಯುಕ್ತ ಆಹ ಪಿತರಂ ಶಕುನಿಂ ನಿರೀಕ್ಷ್ಯ ।**
**ಸೃಷ್ಟೋ ಮಯಾ ವಿಧಿರಿಹಾದ್ಯ ಶೃಣುಷ್ವ ತಂ ಚ ।**
**ಆಸಂಸ್ತ್ರಯೋದಶ ಸಮಾ ನಗರಂ ಪ್ರವಿಷ್ಟೇ-**
**ಷ್ವೇತೇಷು ತಾವದಯಮೇವ ವಿಧಿರ್ಮಯೇಷ್ಟಃ ॥ ೧೩ ॥**

ಪದಚ್ಛೇದ :- ಇತಿ, ಉಕ್ತಃ, ಆಹ, ಪಿತರಂ, ಶಕುನಿಂ, ನಿರೀಕ್ಷ್ಯ, ಸೃಷ್ಟಃ, ಮಯಾ, ವಿಧಿಃ, ಇಹ, ಅದ್ಯ, ಶೃಣುಷ್ವ, ತಂ, ಚ, ಆಸನ್, ತ್ರಯೋದಶ, ಸಮಾಃ, ನಗರಂ, ಪ್ರವಿಷ್ಟೇಷು, ಏತೇಷು, ತಾವತ್, ಅಯಂ, ಏವ, ವಿಧಿಃ, ಮಯಾ, ಇಷ್ಟಃ।

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತಃ** = ಹೇಳಲ್ಪಟ್ಟ ದುರ್ಯೋಧನನು, **ಶಕುನಿಂ** = ಶಕುನಿಯನ್ನು, **ನಿರೀಕ್ಷ್ಯ** = ನೋಡಿ, **ಪಿತರಂ** = ತಂದೆಯನ್ನು ಕುರಿತು, **ಆಹ** = ಹೇಳಿದನು, **ಇಹ** = ಪಾಂಡವರನ್ನು ನಗರದಿಂದ ಹೊರಹಾಕುವ ವಿಷಯದಲ್ಲಿ, **ಮಯಾ** = ನನ್ನಿಂದ, **ವಿಧಿಃ** =

ಉಪಾಯವು, **ಸೃಷ್ಟಃ** = ಯೋಚಿಸಲ್ಪಟ್ಟಿದೆ, **ತಂ ಚ** = ಆ ಉಪಾಯವನ್ನಾದರೂ, **ಅದ್ಯ** = ಇಂದು, **ಶೃಣುಷ್ವ** = ಕೇಳು, **ನಗರಂ** = ಹಸ್ತಿನಾಪುರವನ್ನು, **ಪ್ರವಿಷ್ಟೇಷು ಸತ್ಸು** = ಪ್ರವೇಶಿಸುತ್ತಿರಲು, **ತ್ರಯೋದಶ** = ಹದಿಮೂರು, **ಮಾಸಾಃ** = ವರ್ಷಗಳು, **ಆಸನ್** = ಆದವು, **ತಾವತ್** = ಆಗಲೇ, **ಮಯಾ** = ನನ್ನಿಂದ, **ಏಷಃ** = ಈ, **ವಿಧಿಃ** = ಉಪಾಯವು, **ಇಷ್ಟಃ** = ಯೋಚಿಸಲ್ಪಟ್ಟಿತು.

**ತಾತ್ಪರ್ಯ** :- ತಂದೆಯ ಮಾತನ್ನು ಆಲಿಸಿದ ದುರ್ಯೋಧನನು ಶಕುನಿಯ ಮುಖವನ್ನು ನೋಡಿ ತಂದೆಗೆ ಹೇಳುತ್ತಾನೆ. ನಾನೊಂದು ಉಪಾಯವನ್ನು ಮಾಡಿದ್ದೇನೆ ಅದನ್ನು ಈಗ ಕೇಳು. ಹಸ್ತಿನಾಪುರಕ್ಕೆ ಪಾಂಡವರು ಬಂದು ಹದಿಮೂರು ವರ್ಷಗಳಾದವು. ಆವಾಗಲೇ ನಾನು ಈ ಉಪಾಯವನ್ನು ಯೋಚಿಸಿದ್ದೆ.

**ದ್ರೌಣೇರ್ಹಿ ನಾಸ್ತಿ ಸದೃಶೋ ಬಲವಾನ್ ಪ್ರತಾಪೀ**
**ಸೋऽಯಂ ಮಯಾ ಬಹುವಿಧೈಃ ಪರಮೈರುಪಾಯೈಃ ।**
**ನೀತೋ ವಶಂ ವಶಗತೋऽಸ್ಯ ಚ ಮಾತುಲೇನ**
**ಸಾಕಂ ಪಿತಾ ತಮನು ಚೈಷ ನದೀಪ್ರಸೂತಃ ॥ ೧೪ ॥**

**ಪದಚ್ಛೇದ** :- ದ್ರೌಣೇಃ, ಹಿ, ನಾಸ್ತಿ, ಸದೃಶಃ, ಬಲವಾನ್, ಪ್ರತಾಪೀ, ಸಃ, ಅಯಂ, ಮಯಾ, ಬಹುವಿಧೈಃ, ಪರಮೈಃ, ಉಪಾಯೈಃ, ನೀತಃ, ವಶಂ, ವಶಗತಃ, ಅಸ್ಯ, ಚ, ಮಾತುಲೇನ, ಸಾಕಂ, ಪಿತಾ, ತಂ, ಅನು, ಚ, ಏಷಃ, ನದೀಪ್ರಸೂತಃ ।

**ಅರ್ಥ** :- **ದ್ರೌಣೇಃ** = ಅಶ್ವತ್ಥಾಮನಿಗೆ, **ಸದೃಶಃ** = ಸಮಾನನಾದ, **ಬಲವಾನ್** = ಬಲಿಷ್ಠನು, **ಪ್ರತಾಪೀ** = ಪರಾಕ್ರಮವುಳ್ಳವನು, **ನಾಸ್ತಿ ಹಿ** = ಇಲ್ಲವಷ್ಟೇ!, **ಸಃ ಅಯಂ** = ಅಂತಹ ಅಶ್ವತ್ಥಾಮನು, **ಮಯಾ** = ನನ್ನಿಂದ, **ಬಹುವಿಧೈಃ** = ಅನೇಕ ಬಗೆಯಾದ, **ಪರಮೈಃ** = ಉತ್ತಮವಾದ, **ಉಪಾಯೈಃ** = ಉಪಾಯಗಳಿಂದ, **ವಶಂ** = ಅಧೀನತ್ವವನ್ನು, **ನೀತಃ** = ಹೊಂದಿಸಲ್ಪಟ್ಟಿದ್ದಾನೆ, **ಅಸ್ಯ** = ಈ ಅಶ್ವತ್ಥಾಮ, **ಪಿತಾ ಚ** = ತಂದೆಯಾದ ದ್ರೋಣನಾದರೂ, **ಮಾತುಲೇನ ಸಾಕಂ** = ಸೋದರಮಾವನಾದ ಕೃಪಾಚಾರ್ಯನೊಂದಿಗೆ, **ವಶಗತಃ** = ಅಧೀನನಾಗಿರುವನು, **ಏಷಃ** = ಈ,

**ನದೀಪ್ರಸೂತಃ ಚ** = ಭೀಷ್ಮನಾದರೂ, **ತಂ** = ಆ ದ್ರೋಣಾಚಾರ್ಯರನ್ನು, **ಅನು(ವರ್ತತೇ)** = ಅನುಸರಿಸಿರುತ್ತಾನೆ.

**ತಾತ್ಪರ್ಯ :-** ಅಶ್ವತ್ಥಾಮನಿಗೆ ಸಮಾನನಾದ ಬಲಿಷ್ಠನು, ಪರಾಕ್ರಮಿಯು ಯಾರೂ ಇಲ್ಲ. ಅಂತಹ ಅಶ್ವತ್ಥಾಮನನ್ನು ಅನೇಕ ಉತ್ತಮ ಉಪಾಯಗಳಿಂದ ಅಧೀನನನ್ನಾಗಿ ಮಾಡಿಕೊಂಡಿದ್ದೇನೆ. ಇನ್ನು ಇವನ ತಂದೆಯಾದ ದ್ರೋಣಾಚಾರ್ಯರು ಕೃಪಾಚಾರ್ಯರೊಂದಿಗೆ ನಮ್ಮ ಅಧೀನವಾಗಿಯೇ ಇದ್ದಾರೆ. ಇನ್ನು ಭೀಷ್ಮನು ಯಾವಾಗಲೂ ಈ ದ್ರೋಣಾಚಾರ್ಯರನ್ನೇ ಅನುಸರಿಸಿಕೊಂಡಿರುತ್ತಾರೆ.

**ಏವಂ ಹಿ ಸೈನಿಕಗಣಾ ಅಪಿ ದಾನಮಾನ್ಯೈಃ**
**ಪ್ರಾಯೋ ವಶಂ ಮಮ ಗತಾ ಅಪಿ ಚೈಷ ಕರ್ಣಃ ।**
**ಅಸ್ತ್ರೇ ಬಲೇऽಪ್ಯಧಿಕ ಏವ ಸುರೇಂದ್ರಸೂನೋ-**
**ರ್ಜೇಷ್ಯೇ ಚ ಮಂತ್ರಬಲತಸ್ತ್ವಹಮೇವ ಭೀಮಮ್ ॥ ೧೫ ॥**

**ಪದಚ್ಛೇದ :- ಏವಂ, ಹಿ, ಸೈನಿಕಗಣಾಃ, ಅಪಿ, ದಾನಮಾನ್ಯೈಃ, ಪ್ರಾಯಃ, ವಶಂ, ಮಮ, ಗತಾಃ, ಅಪಿ, ಚ, ಏಷಃ, ಕರ್ಣಃ, ಅಸ್ತ್ರೇ, ಬಲೇ, ಅಪಿ, ಅಧಿಕಃ, ಏವ, ಸುರೇಂದ್ರಸೂನೋಃ, ಜೇಷ್ಯೇ, ಚ, ಮಂತ್ರಬಲತಃ, ತು, ಅಹಂ, ಏವ, ಭೀಮಂ ।**

**ಅರ್ಥ :- ಏವಂ ಹಿ** = ಇದೇ ರೀತಿಯಾಗಿ, **ಸೈನಿಕಗಣಾಃ ಅಪಿ** = ಸೈನಿಕರ ಸಮೂಹಗಳೂ, **ದಾನಮಾನ್ಯೈಃ** = ಸತ್ಕಾರಗಳಿಂದ ಮತ್ತು ಪ್ರಶಂಸೆಗಳಿಂದ, **ಪ್ರಾಯಃ** = ಹೆಚ್ಚಾಗಿ, **ಮಮ** = ನನ್ನ, **ವಶಂ** = ಅಧೀನತ್ವವನ್ನು, **ಗತಾಃ** = ಹೊಂದಿದ್ದಾರೆ, **ಅಪಿ ಚ** = ಮತ್ತೂ ಕೂಡ, **ಏಷಃ** = ಈ, **ಕರ್ಣಃ** = ಕರ್ಣನು, **ಅಸ್ತ್ರೇ** = ಅಸ್ತ್ರದಲ್ಲಿ, **ಬಲೇ ಅಪಿ** = ಬಲದಲ್ಲಿಯೂ, **ನರೇಂದ್ರಸೂನೋಃ** = ಅರ್ಜುನನಿಗಿಂತ, **ಅಧಿಕಃ ಏವ** = ಉತ್ತಮನೇ ಆಗಿದ್ದಾನೆ, **ಭೀಮಂ ತು** = ಭೀಮನನ್ನಾದರೂ, **ಅಹಂ ಏವ** = ನಾನೇ, **ಮಂತ್ರಬಲತಃ** = ಮಂತ್ರದ ಬಲದಿಂದ, **ಜೇಷ್ಯೇ** = ಗೆಲ್ಲುತ್ತೇನೆ.

**ತಾತ್ಪರ್ಯ :-** ಇದೇ ರೀತಿ ಸೈನಿಕ ಸಮೂಹಗಳನ್ನು ಸತ್ಕಾರಗಳಿಂದ ಸನ್ಮಾನಗಳಿಂದ ಹೆಚ್ಚಾಗಿ ನನ್ನ ವಶಮಾಡಿಕೊಂಡಿದ್ದೇನೆ. ಕರ್ಣನು ಅಸ್ತ್ರಗಳಲ್ಲಿ ಬಲದಲ್ಲಿ ಅರ್ಜುನನಿಗಿಂತ ಉತ್ತಮನೇ ಆಗಿದ್ದಾನೆ. ಇನ್ನು ಭೀಮನನ್ನಂತೂ ಮಂತ್ರಬಲದಿಂದ ನಾನೇ ಗೆದ್ದು ಬಿಡುತ್ತೇನೆ.

ತ್ರಿಂಶಚ್ಛತಂ ಪರಮಕಾಃ ಸುರದುರ್ಲಭಾಶ್ಚ
ದುರ್ವಾಸಸೋ ಹಿ ಮನವೋಽದ್ಯ ಮಯಾ ಗೃಹೀತಾಃ ।
ಅನ್ಯತ್ರ ತೇ ಪ್ರವಿಹಿತಾ ನಹಿ ವೀರ್ಯವಂತಃ
ಸ್ಯುರ್ಭೀಮ ಇತ್ಯಹಮಮೂನ್ ನ ನಿಯೋಜಯಾಮಿ ॥ ೧೬ ॥

ಪದಚ್ಛೇದ :- ತ್ರಿಂಶಚ್ಛತಂ, ಪರಮಕಾಃ, ಸುರದುರ್ಲಭಾಃ, ಚ, ದುರ್ವಾಸಸಃ, ಹಿ, ಮನವಃ, ಅದ್ಯ, ಮಯಾ, ಗೃಹೀತಾಃ, ಅನ್ಯತ್ರ, ತೇ, ಪ್ರವಿಹಿತಾಃ, ನ, ಹಿ, ವೀರ್ಯವಂತಃ, ಸ್ಯುಃ, ಭೀಮೇ, ಇತಿ, ಅಹಂ, ಅಮೂನ್, ನ, ನಿಯೋಜಯಾಮಿ ।

ಅರ್ಥ :- ಸುರದುರ್ಲಭಾಃ = ದೇವತೆಗಳಿಂದಲೂ ಹೊಂದಲು ಅಶಕ್ಯವಾದ, ಪರಮಕಾಃ = ಉತ್ತಮಗಳಾದ, ತ್ರಿಂಶಚ್ಛತಂ = ನೂರಮೂವತ್ತು (ಮೂರು ಸಾವಿರ), ಮನವಃ ಚ = ಮಂತ್ರಗಳಾದರೂ, ಮಯಾ = ನನ್ನಿಂದ, ದುರ್ವಾಸಸಃ = ದುರ್ವಾಸರ ದೆಸೆಯಿಂದ, ಅದ್ಯ = ಈಗ, ಗೃಹೀತಾಃ = ಸ್ವೀಕರಿಸಲ್ಪಟ್ಟಿವೆ, ಅನ್ಯತ್ರ = ಬೇರೆ ಕಡೆಯಲ್ಲಿ, ಪ್ರವಿಹಿತಾಃ = ಪ್ರಯೋಗಿಸಲ್ಪಟ್ಟ, ತೇ ಹಿ = ಆ ಮಂತ್ರಗಳಾದರೂ, ಭೀಮೇ = ಭೀಮನಲ್ಲಿ, ವೀರ್ಯವಂತಃ = ಸಾಮರ್ಥ್ಯವುಳ್ಳವುಗಳು (ಪ್ರಯೋಜನವುಳ್ಳವುಗಳು), ನ ಸ್ಯುಃ = ಆಗಲಾರವು, ಇತಿ = ಎಂಬ ಕಾರಣದಿಂದ, ಅಮೂನ್ = ಈ ಮಂತ್ರಗಳನ್ನು, ನ ನಿಯೋಜಯಾಮಿ = ಪ್ರಯೋಗಿಸುತ್ತಿಲ್ಲ.

ತಾತ್ಪರ್ಯ :- ದೇವತೆಗಳಿಂದಲೂ ಹೊಂದಲು ಶಕ್ಯವಲ್ಲದ ಉತ್ತಮವಾದ ನೂರಮೂವತ್ತು ಮಂತ್ರಗಳನ್ನು ನಾನು ದೂರ್ವಾಸರಿಂದ ಪಡೆದಿದ್ದೇನೆ. ಬೇರೆ ಕಡೆ ಪ್ರಯೋಗಿಸಿದರೆ ಅವು ಮುಂದೆ ಭೀಮನ ಮೇಲೆ ಪ್ರಯೋಜನಕಾರಿಗಳು ಆಗಲಾರವೆಂಬ ಕಾರಣದಿಂದ ನಾನು ಈ ಮಂತ್ರಗಳನ್ನು ಎಲ್ಲಿಯೂ ಪ್ರಯೋಗಿಸುತ್ತಿಲ್ಲ.

ತೇ ವೀರ್ಯದಾ ವಿಜಯದಾ ಅಪಿ ವಹ್ನಿವಾರಿ-
ಸ್ತಂಭಾದಿದಾಃ ಸಕಲದೇವನಿಕಾಯರೋಧಾಃ ।
ವೃಷ್ಟ್ಯಾದ್ಯಭೀಪ್ಸಿತಸಮಸ್ತಕರಾ ಅಮೂಭಿ-
ರ್ಜೇಷ್ಯಾಮಿ ಭೀಮಮಮುಮೇಕಮಯಾತಯಾಮೈಃ ॥ ೧೭ ॥

**ಪದಚ್ಛೇದ** :- ತೇ, ವೀರ್ಯದಾಃ, ವಿಜಯದಾಃ, ಅಪಿ, ವಹ್ನಿವಾರಿಸ್ತಂಭಾದಿದಾಃ, ಸಕಲದೇವನಿಕಾಯರೋಧಾಃ, ವೃಷ್ಟ್ಯಾದ್ಯಭೀಪ್ಸಿತಸಮಸ್ತಕರಾಃ, ಅಮೂಭಿಃ, ಜೇಷ್ಯಾಮಿ, ಭೀಮಂ, ಅಮುಂ, ಏಕಂ, ಅಯಾತಯಾಮೈಃ ।

**ಅರ್ಥ** :- ತೇ = ಆ ಮಂತ್ರಗಳು, **ವೀರ್ಯದಾಃ** = ಪರಾಕ್ರಮವನ್ನು ಕೊಡತಕ್ಕವುಗಳು, **ವಿಜಯದಾಃ** = ವಿಜಯವನ್ನು ಕೊಡುವವುಗಳು, **ಅಪಿ** = ಮತ್ತು, **ವಹ್ನಿವಾರಿಸ್ತಂಭಾದಿದಾಃ** = ವಹ್ನಿ - ಬೆಂಕಿಯ, ಜಲ - ನೀರಿನ, ಸ್ತಂಭಾದಿ - ಸ್ತಂಭನವೇ ಮೊದಲಾದದ್ದನ್ನು, ದಾಃ - ಕೊಡುವವುಗಳು, **ಸಕಲದೇವನಿಕಾಯರೋಧಾಃ** = ಸಕಲ - ಎಲ್ಲ, ದೇವ - ದೇವತೆಗಳ, ನಿಕಾಯ - ಸಮೂಹವನ್ನು, ರೋಧಾಃ - ತಡೆಯ ತಕ್ಕವುಗಳು, **ವೃಷ್ಟ್ಯಾದ್ಯಭೀಪ್ಸಿತಸಮಸ್ತಕರಾಃ** = ವೃಷ್ಟ್ಯಾದಿ - ಮಳೆಯೇ ಮೊದಲಾದ, ಅಭೀಪ್ಸಿತ - ಬಯಸಿದ, ಸಮಸ್ತ - ಎಲ್ಲವನ್ನೂ, ಕರಾಃ - ಉಂಟು ಮಾಡುವವುಗಳು, **ಅಯಾತಯಾಮೈಃ** = ಕಳೆದುಕೊಳ್ಳದ ಸಾಮರ್ಥ್ಯವುಳ್ಳ, **ಅಮೂಭಿಃ** = ಈ ಮಂತ್ರಗಳಿಂದ, **ಏಕಂ** = ಒಬ್ಬನಾದ, **ಅಮುಂ** = ಈ, **ಭೀಮಂ** = ಭೀಮನನ್ನು, **ಜೇಷ್ಯಾಮಿ** = ಗೆಲ್ಲುತ್ತೇನೆ.

**ತಾತ್ಪರ್ಯ** :- ದುರ್ವಾಸರು ಉಪದೇಶಿಸಿದ ಈ ಮಂತ್ರಗಳು ವೀರ್ಯದಾಕಗಳು, ಜಯದಾಯಕಗಳು, ಅಗ್ನಿಸಂಭನ, ಜಲಸ್ತಂಭನ ಮುಂತಾದವುಗಳನ್ನು ಕೊಡುವವುಗಳು ಎಲ್ಲ ದೇವತೆಗಳ ಸಮೂಹವನ್ನು ತಡೆದಿಡಬಲ್ಲವು. ಮಳೆ ಮೊದಲಾದ ಎಲ್ಲ ಅಭೀಷ್ಟಗಳನ್ನು ಕೊಡುವವುಗಳು ಸಾಮರ್ಥ್ಯವನ್ನು ಕಳೆದುಕೊಳ್ಳದ ಈ ಮಂತ್ರಗಳಿಂದ ಭೀಮನೊಬ್ಬನನ್ನು ಗೆಲ್ಲುತ್ತೇನೆ.

**ಸೌಹಾರ್ದಮೇಷು ಯದಿಚಾಽತಿತರಾಂ ಕರೋಷಿ**
**ತತ್ರಾಪಿ ನೈವ ಹಿ ಮಯಾ ಕ್ರಿಯತೇ ವಿರೋಧಃ ।**
**ವತ್ಸ್ಯಂತು ವಾರಣವತೇ ಭವತು ಸ್ಮ ರಾಷ್ಟ್ರಂ**
**ತೇಷಾಂ ತದೇವ ಮಮ ನಾಗಪುರಂ ತ್ವದರ್ಥೇ ॥ ೧೮ ॥**

**ಪದಚ್ಛೇದ** :- ಸೌಹಾರ್ದಂ, ಏಷು, ಯದಿ, ಚ, ಅತಿತರಾಂ, ಕರೋಷಿ, ತತ್ರ, ಅಪಿ, ನ, ಏವ, ಹಿ, ಮಯಾ, ಕ್ರಿಯತೇ, ವಿರೋಧಃ, ವತ್ಸ್ಯಂತು, ವಾರಣವತೇ, ಭವತು, ಸ್ಮ, ರಾಷ್ಟ್ರಂ, ತೇಷಾಂ, ತತ್, ಏವ, ಮಮ, ನಾಗಪುರಂ, ತ್ವದರ್ಥೇ ।

**ಅರ್ಥ** :- **ಯದಿ** = ಒಂದುವೇಳೆ, **ಏಷು ಚ** = ಈ ಪಾಂಡವರಲ್ಲಿ ಆದರೂ, **ಅತಿತರಾಂ** = ಬಹಳವಾಗಿ, **ಸೌಹಾರ್ದಂ** = ಸ್ನೇಹವನ್ನು, **ಕರೋಷಿ ಚೇತ್** = ಮಾಡುವಿಯಾದರೆ, **ತತ್ರ ಅಪಿ** = ಆ ವಿಷಯದಲ್ಲಿಯೂ, **ಮಯಾ** - ನನ್ನಿಂದ, **ವಿರೋಧಃ** = ವಿರೋಧವು, **ನಕ್ರಿಯತೇ ಏವ** = ಮಾಡಲ್ಪಡುವುದೇ ಇಲ್ಲ, **ವಾರಣಾವತೇ** = ವಾರಣಾವತದಲ್ಲಿ, **ವತ್ಸ್ಯಂತು** = ವಾಸಮಾಡಲಿ, **ತೇಷಾಂ** = ಆ ಪಾಂಡವರಿಗೆ, **ತದೇವ** = ಆ, **ವಾರಣಾವತವೇ ರಾಜ್ಯಂ** = ರಾಜ್ಯವು, **ಭವತುಸ್ಮ** = ಆಗಲಿ, **ತ್ವದರ್ಥೇ** = ನಿನ್ನ ಸಂತೋಷಕ್ಕಾಗಿ, **ಮಮ** = ನನಗೆ, **ತತ್** = ಆ, **ನಾಗಪುರಂ ಏವ** = ಹಸ್ತಿನಪಟ್ಟಣವೇ, **ಭವತು** = ಇರಲಿ.

**ತಾತ್ಪರ್ಯ** :- ನೀನು ಪಾಂಡವರಲ್ಲಿ ಬಹಳ ಸ್ನೇಹ ಮಾಡುತ್ತೀಯೆಂದಾರೆ ಮಾಡು. ನಾನು ಆ ವಿಷಯದಲ್ಲೂ ವಿರೋಧ ಮಾಡುವುದಿಲ್ಲ. ಆದರೆ ಪಾಂಡವರು ವಾರಣಾವತದಲ್ಲಿ ವಾಸಮಾಡಲಿ. ಅದೇ ಅವರ ರಾಜ್ಯವಾಗಲಿ. ನಿನ್ನ ಸಂತೋಷಕ್ಕಾಗಿ ಹಸ್ತಿನಪಟ್ಟಣವು ನನ್ನದಾಗಿರಲಿ.

**ಏವಂ ಸ್ವಪುತ್ರಪರಿಪಾಲನತೋ ಯಶಸ್ತೇ**
**ಭೂಯಾದ್ ವಿನಶ್ಯತಿ ಪರಪ್ರಸವಾತಿಪುಷ್ಟೌ ।**
**ಜಾತೇ ಬಲೇ ತವ ವಿರೋಧಕೃತಶ್ಚ ತೇ ಸ್ಯುಃ**
**ಸ್ವಾರ್ಥಂ ಹಿ ತಾವದನುಯಾಂತ್ಯಪಿ ಕೇವಲಂ ತ್ವಾಮ್ ॥ ೧೯ ॥**

**ಪದಚ್ಛೇದ** :- **ಏವಂ, ಸ್ವಪುತ್ರಪರಿಪಾಲನತಃ, ಯಶಃ, ತೇ, ಭೂಯಾತ್, ವಿನಶ್ಯತಿ, ಪರಪ್ರಸವಾತಿಪುಷ್ಟೌ, ಜಾತೇ, ಬಲೇ, ತವ, ವಿರೋಧಕೃತಃ, ಚ, ತೇ, ಸ್ಯುಃ, ಸ್ವಾರ್ಥಂ, ಹಿ, ತಾವತ್, ಅನುಯಾಂತಿ, ಅಪಿ, ಕೇವಲಂ, ತ್ವಾಂ ।**

**ಅರ್ಥ** :- **ಏವಂ** = ಈ ರೀತಿಯಾಗಿ, **ಸ್ವಪುತ್ರಪರಿಪಾಲನತಃ** = **ಸ್ವ** - ತನ್ನ (ನಿನ್ನ), **ಪುತ್ರ** - ಮಕ್ಕಳ, **ಪರಿಪಾಲನತಃ** - ರಕ್ಷಿಸುವುದರಿಂದ, **ತೇ** = ನಿನಗೆ, **ಯಶಃ** = ಕೀರ್ತಿಯು, **ಭೂಯಾತ್** = ಉಂಟಾಗಲಿ, **ಪರಪ್ರಸವಾತಿಪ್ರಷ್ಟೌ** = **ಪರ** - ಬೇರೆಯವರಿಂದ, **ಪ್ರಸವ** - ಹುಟ್ಟುಳ್ಳ ಪಾಂಡವರ, **ಅತಿಪುಷ್ಟೌ** - ಅಭಿವೃದ್ಧಿಯಾದಲ್ಲಿ, **ತೇ** = ನಿನ್ನ, **ಯಶಃ** = ಕೀರ್ತಿಯು, **ವಿನಶ್ಯತಿ** = ನಾಶವಾಗುತ್ತದೆ, **ತೇ** = ಆ ಪಾಂಡವರು, **ಬಲೇ** = ಬಲವು, **ಜಾತೇ ಸತಿ** = ಬೆಳೆಯುತ್ತಿರಲು, **ತೇ** = ನಿನಗೆ, **ವಿರೋಧಕೃತಃ ಚ** =

ವಿರೋಧವನ್ನು ಮಾಡುವವರೂ, **ಸ್ಯುಃ** = ಆಗುತ್ತಾರೆ, **ಕೇವಲಂ ಸ್ವಾರ್ಥಂ ಹಿ** = ಬರೀ ಸ್ವಾರ್ಥವೇ ಆಗಿದೆ, **ತಾವತ್** = ಅಷ್ಟಕ್ಕಾಗಿಯೇ, **ತ್ವಾಂ ಅಪಿ** = ನಿನ್ನನ್ನೂ ಕೂಡ, **ಅನುಯಾಂತಿ** = ಅನುಸರಿಸುತ್ತಿದ್ದಾರೆ.

ತಾತ್ಪರ್ಯ :- ಈ ರೀತಿಯಾಗಿ ನಿನ್ನ ಮಕ್ಕಳನ್ನು ರಕ್ಷಿಸುವುದರಿಂದ ನಿನಗೆ ಕೀರ್ತಿ ಬರುತ್ತದೆ. ಬೇರೆಯವರಿಗೆ ಹುಟ್ಟಿದ ಮಕ್ಕಳನ್ನು ಬೆಳೆಸಿದರೆ ಕೀರ್ತಿನಾಶವಾಗುತ್ತದೆ. ಬಲ ಬೆಳೆದ ಮೇಲೆ ಪಾಂಡವರು ನಿನ್ನ ವಿರೋಧವನ್ನು ಮಾಡುತ್ತಾರೆ. ಇದೆಲ್ಲವೂ ಪಾಂಡವರ ಸ್ವಾರ್ಥವೇ ಆಗಿದೆ. ಆ ಸ್ವಾರ್ಥಕ್ಕಾಗಿ ಅವರು ನಿನ್ನನ್ನು ಅನುಸರಿಸಿಕೊಂಡಿರುವ ಹಾಗೆ ನಟಿಸುತ್ತಿದ್ದಾರೆ.

**ಕ್ಷತ್ತೈಕ ಏವ ಸತತಂ ಪರಿಪೋಷಕೋಽಲಂ**
**ತೇಷಾಂ ಮಮ ದ್ವಿಡಥ ಮಂತ್ರಬಲಾದಮುಷ್ಯ ।**
**ಪೌರಾಶ್ಚ ಜಾನಪದಕಾಃ ಸತತಂ ದ್ವಿಷಂತಿ**
**ಮಾಂ ತೇಷ್ವತೀವ ದೃಢಸೌಹೃದಚೇತಸಶ್ಚ ॥ ೨೦ ॥**

ಪದಚ್ಛೇದ :- **ಕ್ಷತ್ತಾ, ಏಕಃ, ಏವ, ಸತತಂ, ಪರಿಪೋಷಕಃ, ಅಲಂ, ತೇಷಾಂ, ಮಮ, ದ್ವಿಟ್, ಅಥ, ಮಂತ್ರಬಲಾತ್, ಅಮುಷ್ಯ, ಪೌರಾಃ, ಚ, ಜಾನಪದಕಾಃ, ಸತತಂ, ದ್ವಿಷಂತಿ, ಮಾಂ, ತೇಷು, ಅತೀವ, ದೃಢಸೌಹೃದಚೇತಸಃ, ಚ ।**

ಅರ್ಥ :- **ಕ್ಷತ್ತಾ ಏಕಃ ಏವ** = ವಿದುರನೊಬ್ಬನೇ, **ಸತತಂ** = ಯಾವಾಗಲೂ, **ತೇಷಾಂ** = ಆ ಪಾಂಡವರ, **ಅಲಂ** = ಚೆನ್ನಾಗಿ, **ಪರಿತೋಷಕಃ** = ಪೋಷಣೆ ಮಾಡುವವನು, **ಅಥ** = ಆದ್ದರಿಂದ, **ಮಮ** = ನನ್ನ, **ದ್ವಿಟ್** = ದ್ವೇಷಿಯಾಗಿದ್ದಾನೆ, **ಅಮುಷ್ಯ** = ಈ ವಿದುರನ, **ಮಂತ್ರಬಲಾತ್** = ಗುಟ್ಟಾಗಿ ಮಾಡಿದ ಪ್ರಚಾರದ ಬಲದಿಂದ, **ಪೌರಾಃ** = ಪಟ್ಟಣಿಗರು, **ಚ** = ಮತ್ತು, **ಜನಪದಕಾಃ** = ಹಳ್ಳಿಯ ಜನರೂ, **ಸತತಂ** = ಯಾವಾಗಲೂ, **ಮಾಂ** = ನನ್ನನ್ನು, **ದ್ವಿಷಂತಿ** = ದ್ವೇಷಿಸುತ್ತಾರೆ, **ತೇಷು** = ಆ ಪಾಂಡವರಲ್ಲಿ, **ಅತೀವ** = ಬಹಳ, **ದೃಢಸೌಹೃದಯಚೇತಸಃ ಚ** = **ದೃಢ** - ಗಟ್ಟಿಯಾಗಿ, **ಸೌಹೃದ** - ಸ್ನೇಹದಿಂದ ಕೂಡಿದ, **ಚೇತಸಃ ಚ** = ಮನಸ್ಸುಳ್ಳವರೂ ಆಗಿದ್ದಾರೆ.

ತಾತ್ಪರ್ಯ :- ವಿದುರನೊಬ್ಬನೇ ಪಾಂಡವರನ್ನು ಚೆನ್ನಾಗಿ ಪೋಷಿಸುತ್ತಾನೆ. ನನ್ನನ್ನು ದ್ವೇಷಿಸುತ್ತಾನೆ. ಅವನು ಮಾಡುವ ಅಪಪ್ರಚಾರದಿಂದ ಪಟ್ಟಣಿಗರು,

ಗ್ರಾಮಸ್ಥರೂ ನನ್ನನ್ನು ದ್ವೇಷಮಾಡುತ್ತಿದ್ದಾರೆ ಪಾಂಡವರಲ್ಲಿ ದೃಢವಾಗಿ ಸ್ನೇಹಪೂರ್ಣ ಮನಸ್ಸಿನವರಾಗಿದ್ದಾರೆ.

**ಏತೇಷು ದೂರಗಮಿತೇಷು ನಿರಾಶ್ರಯತ್ವಾತ್**
**ಮಾಮೇವ ದುರ್ಬಲತಯಾ ಪರಿತಃ ಶ್ರಯಂತೇ ।**
**ಭೀಷ್ಮಾದಯಶ್ಚ ನಹಿ ತನ್ನಿಕಟೇ ವಿರೋಧಂ**
**ಕುರ್ಯುರ್ವಿನಶ್ಯತಿ ಗತೇಷು ಹಿ ಸೌಹೃದಂ ತತ್ ॥ ೨೧ ॥**

**ಪದಚ್ಛೇದ :- ಏತೇಷು, ದೂರಗಮಿತೇಷು, ನಿರಾಶ್ರಯತ್ವಾತ್, ಮಾಮೇವ, ದುರ್ಬಲತಯಾ, ಪರಿತಃಶ್ರಯಂತೇ, ಭೀಷ್ಮಾದಯಃ, ಚ, ತನ್ನಿಕಟೇ, ವಿರೋಧಂ, ಕುರ್ಯುಃ, ವಿನಶ್ಯತಿ, ನ, ಹಿ, ಗತೇಷು, ಹಿ, ಸೌಹೃದಂ, ತತ್ ।**

**ಅರ್ಥ :- ಏತೇಷು** = ಈ ಪಾಂಡವರು, **ದೂರಗಮಿತೇಷು** = ದೂರವಾಗುತ್ತಿರಲು (ವಾರಣಾವತಕ್ಕೆ ಹೋಗಲು), (ಜನಾಃ = ಜನರು), **ನಿರಾಶ್ರಯತ್ವಾತ್** = ಆಶ್ರಯವಿಲ್ಲದವರಾದ, **ದುರ್ಬಲತಯಾ** = ದುರ್ಬಲರಾದ್ದರಿಂದ, **ಮಾಮೇವ** = ನನ್ನನ್ನೆ, **ಪರಿತಃಶ್ರಯಂತೆ** = ಸುತ್ತಲೂ ಆಶ್ರಯಿಸುತ್ತಾರೆ, **ಚ** = ಮತ್ತು, **ಭೀಷ್ಮಾದಯಃ** = ಭೀಷ್ಮಾಚಾರ್ಯರು ಮೊದಲಾದವರು, **ತನ್ನಿಕಟೇ** = ಆ ಪಾಂಡವರಲ್ಲಿ, **ವಿರೋಧಂ** = ವಿರೋಧವನ್ನು, **ನಕುರ್ಯುಃ** = ಮಾಡುವುದಿಲ್ಲ, **ಹಿ** = ನಿಶ್ಚಯವಾಗಿಯೂ, **ಏತೇಷು** = ಈ ಪಾಂಡವರು, **ಗತೇಷು** = ದೂರಹೊಗುತ್ತಿರಲು, **ಹಿ** = ನಿಶ್ಚಯವಾಗಿಯೂ, **ತತ್** = ಆ, **ಸೌಹೃದಂ** = ಸೌಹಾರ್ದವು, **ವಿನಶ್ಯತಿ** = ಕಡಿಮೆಯಾಗುತ್ತದೆ.

**ತಾತ್ಪರ್ಯ :-** ಪಾಂಡವರು ದೂರದಲ್ಲಿರುವ ವಾರಣಾವತಕ್ಕೆ ಹೋದರೆ ಜನರು ಆಸರೆ ಇಲ್ಲದೆ ದುರ್ಬಲರಾಗುವುದರಿಂದ ನನ್ನನ್ನೆ ಆಶ್ರಯಿಸುತ್ತಾರೆ, ಭೀಷ್ಮಾದಿಗಳು ಪಾಂಡವರನ್ನು ದ್ವೇಷಿಸುವುದಿಲ್ಲ, ಆದರೆ ಪಾಂಡವರು ದೂರ ಹೋದರೆ ಅವರಲ್ಲಿ ಸೌಹಾರ್ದವು ಕಡಿಮೆಯಾಗುತ್ತದೆ.

**ಭೇದಃ ಕುಲಸ್ಯ ಭವಿತಾ ಕುಲನಾಶಹೇತು-**
**ರಸ್ಮಾಭಿರೇಷು ಸಹಿತೇಷು ಪುರೇ ವಸತ್ಸು ।**

ತಸ್ಮಾದುಪಾಯಬಲತಃ ಪ್ರತಿಯಾತನೀಯಾ-
ಸ್ತೇ ವಾರಣಾವತಮಿತೋ ವಿಹಿತೋಽಪ್ಯುಪಾಯಃ ॥ ೨೨ ॥

ಪದಚ್ಛೇದ :- ಭೇದಃ, ಕುಲಸ್ಯ, ಭವಿತಾ, ಕುಲನಾಶಹೇತುಃ, ಅಸ್ಮಾಭಿಃ, ಏಷು, ಸಹಿತೇಷು, ಪುರೇ, ವಸತ್ಸು, ತಸ್ಮಾತ್, ಉಪಾಯಬಲತಃ, ಪ್ರತಿಯಾತನೀಯಾಃ, ತೇ, ವಾರಣಾವತಂ, ಇತಃ, ವಿಹಿತಃ, ಅಪೌ, ಉಪಾಯಃ.

ಅರ್ಥ :- ಅಸ್ಮಾಭಿಃ = ನಮ್ಮಿಂದ, ಪುರೇ = ಹಸ್ತಿನಾವತಿಯಲ್ಲಿ, ಏಷುಸಹಿತೇಷು = ಈ ಪಾಂಡವರಿಂದ ಸಹಿತವಾಗಿ, ವಸತ್ಸು = ವಾಸಮಾಡಲು, ಕುಲಸ್ಯ = ವಂಶದ, ಭೇದಃ = ಒಡಕು, ಭವಿತಾ = ಉಂಟಾಗುತ್ತದೆ, ಸಃ = ಆ ಒಡಕು, ಕುಲನಾಶಹೇತುಃ = ಕುಲ - ವಂಶದ, ನಾಶ - ನಾಶಕ್ಕೆ, ಹೇತುಃ - ಕಾರಣವು, ಭವಿತಾ = ಆಗುತ್ತದೆ, ತಸ್ಮಾತ್ = ಆದ್ದರಿಂದ, ಉಪಾಯಬಲತಃ = ಉಪಾಯ - ಉಪಾಯದ, ಬಲತಃ = ಬಲದಿಂದ, ತೇ = ಆ ಪಾಂಡವರು, ಇತಃ = ಈ ಹಸ್ತಿನಾವತಿಯಿಂದ, ವಾರಣಾವತಂ = ವಾರಣಾವತವನ್ನು ಕುರಿತು, ಪ್ರತಿಯಾತನೀಯಾಃ = ಕಳಿಸಲ್ಪಡಬೇಕು, (ತದರ್ಥಂ = ಅದಕ್ಕಾಗಿ) ಉಪಾಯೊಽಪಿ = ಉಪಾಯವೂ, ವಿಹಿತಃ = ಮಾಡಲ್ಪಟ್ಟಿದೆ.

ತಾತ್ಪರ್ಯ :- ಪಾಂಡವರು ನಮ್ಮೊಡನೆ ಹಸ್ತಿನಾವತಿಯಲ್ಲೇ ಇದ್ದರೆ, ಮನೆತನದಲ್ಲಿ ಒಡಕು ಉಂಟಾಗುವುದು ನಿಶ್ಚಿತ. ಆ ಒಡಕು ಕುಲನಾಶಕ್ಕೆ ಕಾರಣವಾಗುತ್ತದೆ. ಆದ್ದರಿಂದ ಉಪಾಯಬಲದಿಂದ ಆ ಪಾಂಡವರನ್ನು ಹಸ್ತಿನಾವತಿಯಿಂದ ದೂರದಲ್ಲಿರುವ ವಾರಣಾವತಕ್ಕೆ ಕಳಿಸಬೇಕು ಅದಕ್ಕೆ ಒಂದು ಉಪಾಯವನ್ನು ಮಾಡಿದ್ದೇನೆ.

ವಿಷ್ಣುರ್ಜಯಂತ ಇತಿ ಶಂಭುಸಹಾಯ ಆಸ್ತೇ
ದೇವೋತ್ಸವಶ್ಚ ಸುಮಹಾನ್ ಭವಿತಾಽತ್ರ ಸುಷ್ಮು ।
ಭಕ್ತಾಶ್ಚ ತೇ ಹಿ ನಿತರಾಮರಿಶಂಖಪಾಣೌ
ತ್ವಚ್ಚೋದಿತಾಃ ಸಮುಪಯಾಂತಿ ತಮುತ್ಸವಂ ದ್ರಾಕ್ ॥ ೨೩ ॥

ಪದಚ್ಛೇದ :- ವಿಷ್ಣುಃ, ಜಯಂತಃ, ಇತಿ, ಶಂಭುಸಹಾಯಃ, ಆಸ್ತೆ, ದೇವೋತ್ಸವಃ, ಚ, ಸುಮಹಾನ್, ಭವಿತಾ, ಅತ್ರ, ಸುಷ್ಮು, ಭಕ್ತೌಃ, ಚ, ತೇ, ಹೇ, ನಿತರಾಂ, ಅರಿಶಂಖಪಾಣೌ, ತ್ವಚ್ಚೋದಿತಾಃ, ಸಮುಪಯಾಂತಿ, ತಂ, ಉತ್ಸವಂ, ದ್ರಾಕ್.

**ಅರ್ಥ** :- **ಅತ್ರ** = ಈ ವಾರಣಾವತದಲ್ಲಿ, **ಶಂಭುಸಹಾಯಃ** = ಜಯಂತೇಶ್ವರನಾದ, **ವಿಷ್ಣುಃ** = ನಾರಾಯಣನು, **ಜಯಂತ ಇತಿ** = ಜಯಂತ ಎಂಬ ಲಿಂಗರೂಪದಿಂದ, **ಆಸ್ತೇ** = ನೆಲೆಸಿದ್ದಾನೆ, **ತತ್ರ** = ಅಲ್ಲಿ, **ದೇವೋತ್ಸವಃ** = ದೇವರ ಮಹೋತ್ಸವವು, **ಸುಷ್ಠು** = ವಿಧಿಪೂರ್ವಕವಾಗಿ, **ಸುಮಹಾನ್** = ನಯನ ಮನೋಹರವಾಗಿ, **ಭವಿತಾ** = ನಡೆಯುತ್ತದೆ, **ತೇ** = ಆ ಪಾಂಡವರು, **ನಿತರಾಂ** = ಬಹಳವಾಗಿ, **ಅರಿಶಂಖಪಾಣೌ** = ಚಕ್ರ ಶಂಖವನ್ನು ಧರಿಸಿರುವ ವಿಷ್ಣುವಿನ ವಿಷಯದಲ್ಲಿ, **ಭಕ್ತಾಃ** = ಬಹಳ ಭಕ್ತಿಯುಳ್ಳವರು, **ಚ** = ಆದ್ದರಿಂದ, **ತ್ವಚೋದಿತಾಃ** = **ತ್ವತ್** - ನಿನ್ನಿಂದ (ಧೃತರಾಷ್ಟ್ರನಿಂದ), **ಚೋದಿತಾಃ** = ಪ್ರೇರಿಸಲ್ಪಟ್ಟ ಪಾಂಡವರು, **ತಂ** = ಆ, **ಉತ್ಸವಂ** = ಉತ್ಸವವನ್ನು ಕುರಿತು, **ದ್ರಾಕ್** = ಕೂಡಲೆ, **ಸಮುಪಯಾಂತಿ ಚ** = ಹೊರಡುತ್ತಾರೆ ಅಷ್ಟೇ.

**ತಾತ್ಪರ್ಯ** :- ವಾರಣಾವತದಲ್ಲಿ ಜಯಂತೇಶ್ವರನಾದ ಮಹಾವಿಷ್ಣುವು ಜಯಂತ ಎಂಬ ಹೆಸರಿನಿಂದ ಲಿಂಗ ರೂಪದಲ್ಲಿ ನೆಲೆಸಿದ್ದಾನೆ. ಅಲ್ಲಿ ದೇವರಿಗೆ ನಯನ ಮನೋಹರವಾದ, ವಿಧಿಪೂರ್ವಕವಾದ ಉತ್ಸವವು ಚೆನ್ನಾಗಿ ನಡೆಯುತ್ತದೆ. ಪಾಂಡವರು ವಿಷ್ಣುವಿನಲ್ಲಿ ಬಹಳ ಭಕ್ತಿಯುಳ್ಳವರು. ಆದ್ದರಿಂದ ನೀನು ಹೇಳಿದರೆ ಅವರು ಆ ಉತ್ಸವಕ್ಕೆ ಬೇಗ ಹೊರಡುತ್ತಾರೆ.

**ಅಜ್ಞಾಪ್ಯ ಮತ್ಪುರುಷತಾಂ ಪುರುಷೈರ್ಮದೀಯೈ-**
**ರ್ಮಧ್ಯಸ್ಥವದ್ ಬಹುಗುಣಾ ಉದಿತಾಶ್ಚ ತತ್ರ ।**
**ತೇಷಾಂ ಪುರೋಽತ್ರ ಗಮನಾಭಿರುಚಶ್ಚ ಜಾತಾ**
**ದ್ರಷ್ಟುಂ ಪುರಂ ಬಹುಗುಣಂ ನನು ಪಾಂಡವಾನಾಮ್ ॥ ೨೪ ॥**

ಪದಚ್ಛೇದ :- **ಅಜ್ಞಾಪ್ಯ, ಮತ್ಪುರುಷತಾಂ, ಪುರುಷೈಃ, ಮದೀಯೈ, ಮಧ್ಯಸ್ಥವತ್, ಬಹುಗುಣಾಃ, ಉದಿತಾಃ, ಚ, ತತ್ರ, ತೇಷಾಂ, ಪುರಃ, ಅತ್ರ, ಗಮನಾಭಿರುಚಃ, ಚ ಜಾತಾ ದ್ರಷ್ಟುಂ, ಪುರಂ, ಬಹುಗುಣಾಂ, ನನು, ಪಾಂಡವಾನಾಮ್ ।**

ಅರ್ಥ :- **ಮದೀಯೈಃ** = ನನ್ನ ಸಂಬಂಧಿಯಾದ, **ಪುರುಷೈಃ** = ಜನರಿಂದ, **ಮತ್ಪುರುಷತಾಂ** = ನನ್ನ ಪುರುಷರೆಂಬುದನ್ನು, **ಅಜ್ಞಾಪ್ಯ** = ತಿಳಿಸದೆ, **ಮಧ್ಯಸ್ಥವತ್** = ಮಧ್ಯಸ್ಥರಂತೆ, (ಸ್ಥಿತ್ವಾ = ಇದ್ದು), **ತತ್ರ ಚ** = ಆ ವಾರಣಾವತದ ವಿಷಯದಲ್ಲಿ ಆದರೂ, **ತೇಷಾಂ** = ಆ ಪಾಂಡವರ, **ಪುರಃ** =

ಎದುರಿನಲ್ಲಿ, ಬಹುಗುಣಾಃ = ಬಹಳ ಗುಣಗಳು, ಉದಿತಾಃ = ಹೇಳಲ್ಪಟ್ಟಿವೆ, ಅತ್ರ = ಈ ವಾರಣಾವತಕ್ಕೆ ಹೋಗುವ ವಿಷಯದಲ್ಲಿ, ಪಾಂಡವಾನಾಂ = ಪಾಂಡವರಿಗೆ, ಬಹುಗುಣಂ = ಬಹುಗುಣವುಳ್ಳ, ಪುರಂ = ಪಟ್ಟಣವಾದ ವಾರಣಾವತವನ್ನು, ದ್ರಷ್ಟುಂ = ನೋಡಲು, ಗಮನಾಭಿರುಚಿಶ್ಚ = ಹೋಗುವ ಉತ್ಸುಕತೆಯು, ಜಾತಾನನು = ಉಂಟಾಗಿದೆಯಷ್ಟೆ.

ತಾತ್ಪರ್ಯ :- ನನ್ನ ಕಡೆಯ ಜನರು, ನನ್ನವರೆಂದು ತೋರಿಕೊಳ್ಳದೆ ಮಧ್ಯಸ್ಥರಂತೆ ಇದ್ದು, ಪಾಂಡವರ ಮುಂದೆ ವಾರಣಾವತಾರವನ್ನು ಅದರ ಗುಣಗಳನ್ನು ಚೆನ್ನಾಗಿ ಹೊಗಳಿದ್ದಾರೆ. ಆದ್ದರಿಂದ ಪಾಂಡವರಿಗೆ ಬಹಳ ಗುಣವಿರುವ ಆ ಪಟ್ಟಣವನ್ನು ನೋಡಲು ಹೋಗುವ ಉತ್ಸಾಹವೂ ಬಂದಿದೆ.

ಇತ್ಯುಕ್ತವತ್ಯಥ ಸುತೇ ಸ ತಥೇತ್ಯುವಾಚ
ಪ್ರಾಪ್ತೇಷು ಪಾಂಡುತನಯೇಷು ತಥೈವ ಚೋಚೇ ।
ಜ್ಞಾತ್ವೈವ ತೇಽಪಿ ನೃಪತೇರ್ಹೃದಯಂ ಸಮಸ್ತಂ
ಜಗ್ಮುಃ ಪಿತೇತಿ ಪೃಥಯಾ ಸಹ ನೀತಿಹೇತೋಃ ॥ ೨೫ ॥

ಪದಚ್ಛೇದ :- ಇತಿ, ಉಕ್ತವತಿ, ಅಥ, ಸುತೇ, ಸಃ, ತಥಾ, ಇತಿ, ಉವಾಚ, ಪ್ರಾಪ್ತೇಷು, ಪಾಂಡುತನಯೇಷು, ತಥಾ, ಏವ, ಚ, ಊಚೇ, ಜ್ಞಾತ್ವಾ, ಏವ, ತೇ, ಅಪಿ, ನೃಪತೇಃ, ಹೃದಯಂ, ಸಮಸ್ತಂ, ಜಗ್ಮುಃ, ಪಿತಾ, ಇತಿ, ಪೃಥಯಾ, ಸಹ, ನೀತಿಹೇತೋಃ ।

ಅರ್ಥ :- ಅಥ = ಅನಂತರ, ಸುತೇ = ಮಗನಾದ ದುರ್ಯೋಧನನು, ಇತಿ = ಈ ರೀತಿಯಾಗಿ, ಉಕ್ತವತಿ (ಸತಿ) = ಹೇಳುತ್ತಿರಲು, ಸ = ಆ ಧೃತರಾಷ್ಟ್ರನು, ತಥಾ = ಹಾಗೇಯೇ ಆಗಲಿ, ಇತಿ = ಎಂದು, ಉವಾಚ = ಹೇಳಿದನು, ಚ = ಮತ್ತು, ಪಾಂಡುತನಯೇಷು = ಪಾಂಡುರಾಜನ ಮಕ್ಕಳಾದ ಪಾಂಡವರು, ಪ್ರಾಪ್ತೇಷು = ಬರುತ್ತಿರಲು, ತಥೈವ = ದುರ್ಯೋಧನ ಹೇಳಿದಂತೆಯೇ, ಊಚೇ = ಹೇಳಿದನು, ತೇಽಪಿ = ಆ ಪಾಂಡವರಾದರೂ, ನೃಪತೇಃ = ರಾಜನಾದ ಧೃತರಾಷ್ಟ್ರನ, ಸಮಸ್ತಂ = ಎಲ್ಲ ರೀತಿಯ, ಹೃದಯಂ = ಅಭಿಪ್ರಾಯವನ್ನು, ಚ = ಮತ್ತು, ಪಿತಾ ಇತಿ = ತಂದೆ ಎಂದು, ಜ್ಞಾತ್ವಾ = ತಿಳಿದು, ನೀತಿಹೇತೋಃ = ನೀತಿಯನ್ನು ಪಾಲಿಸಲು, ಪೃಥಯಾ ಸಹ ಏವ = ತಾಯಿಯಾದ ಕುಂತಿಯೊಂದಿಗೆ, ಜಗ್ಮುಃ = ಹೋದರು.

ತಾತ್ಪರ್ಯ :- ದುರ್ಯೋಧನ ಹಿಂದೆ ಹೇಳಿದಂತೆ ಹೇಳಿದಾಗ ಹಾಗೆ ಆಗಲಿ ಎಂದು ಧೃತರಾಷ್ಟ್ರನು ಪಾಂಡವರು ಬಂದಾಗ ಹಾಗೇ ಹೇಳಿದನು. ಆ ಪಾಂಡವರು ಅವನ ಅಭಿಪ್ರಾಯವನ್ನೆಲ್ಲ ತಿಳಿದು ಅವನು ತಮಗೆ ತಂದೆ ಎಂದು ತಿಳಿದು ನೀತಿಯ ಪಾಲನೆಗಾಗಿ ಕುಂತಿಯೊಂದಿಗೆ ವಾರಣಾವತಕ್ಕೆ ತೆರಳಿದರು.

**ಭೀಮಸ್ತದಾ ಹ ಭವಿತಾಽತ್ರ ಹಿ ಭೈಕ್ಷಚಾರ**
**ಇತ್ಯೇವ ಸಮ್ಯಗನುವಿದ್ಯ ನಿಜಂ ನ ಕರ್ಮ ।**
**ತ್ಯಾಜ್ಯಂ ತ್ವಿತಿ ಪ್ರತಿಜಗಾದ ನಿಜಾಗ್ರಜಾಯ**
**ಯಾಮೋ ವಯಂ ನತು ಗೃಹಾತ್ ಸ ಹಿ ನಃ ಸ್ವಧರ್ಮಃ ॥ ೨೬ ॥**

ಪದಚ್ಛೇದ :- **ಭೀಮಃ, ತದಾ, ಆಹ, ಭವಿತಾ, ಅತ್ರ, ಹಿ, ಭೈಕ್ಷಚಾರಃ, ಇತಿ, ಏವ, ಸಮ್ಯಕ್, ಅನುವಿದ್ಯ, ನಿಜಂ, ನ, ಕರ್ಮ, ತ್ಯಾಜ್ಯಂ, ತು, ಇತಿ, ಪ್ರತಿಜಗಾದ, ನಿಜಾಗ್ರಜಾಯ, ಯಾಮಃ, ವಯಂ, ನ, ತು, ಗೃಹಾತ್, ಸಃ, ಹಿ, ನಃ, ಸ್ವಧರ್ಮಃ ।**

**ಅರ್ಥ** :- **ತದಾ** = ಆಗ, **ಭೀಮಃ** = ಭೀಮಸೇನನು, **ಆಹ** = ಹೇಳಿದನು, **ವಯಂ** = ನಾವು, **ಗೃಹಾತ್** = ಮನೆಯಿಂದ (ಹೊರಗೆ ಹೋದರೆ), **ಭೈಕ್ಷಚಾರಃ** = ಭಿಕ್ಷಾಟನೆಯು, **ಹಿ** = ನಿಶ್ಚಯವಾಗಿ, **ಭವಿತಾ** = ಆಗುತ್ತದೆ, **ತು** = ಆದರೆ, **ಸಃ** = ಆ ಭಿಕ್ಷಾಟನೆಯು, **ನಃ** = (ಕ್ಷತ್ರಿಯರಾದ) ನಮಗೆ, **ಸ್ವಧರ್ಮಃ** = ಯೋಗ್ಯಧರ್ಮವು, **ನ** = ಅಲ್ಲ, **ಹಿ** = ಆದ್ದರಿಂದ, **ನಿಜಂ** = ನಮ್ಮದಾದ, **ಕರ್ಮ** = ಧರ್ಮವು, **ನ ತ್ಯಾಜ್ಯಂ** = ಬಿಡಲ್ಪಡಬಾರದು, **ಇತ್ಯೇವ** = ಇದೇ ಮೊದಲಾದ ರೀತಿಯಲ್ಲಿ, **ಸಮಗನುವಿದ್ಯ** = ಚೆನ್ನಾಗಿ ಅರಿತು, **ಅತ್ರ** = ಊರುಬಿಟ್ಟು ಹೋಗುವ ವಿಷಯದಲ್ಲಿ, **ನಿಜಾಗ್ರಜಾಯ** = ತನ್ನ ಅಣ್ಣನಾದ ಧರ್ಮರಾಜನಿಗೆ, **ಇತಿ** = ಮುಂದೆ ಹೇಳುವ ರೀತಿಯಲ್ಲಿ, **ಪ್ರತಿಜಗಾದ** = ಹೇಳಿದನು.

ತಾತ್ಪರ್ಯ :- ಆಗ ಭೀಮನು ಹೇಳಿದನು ನಾವು ವಾರಣಾವತಕ್ಕೆ ಹೋದರೆ, ಭಿಕ್ಷೆ ಬೇಡ ಬೇಕಾಗುತ್ತದೆ. ಆದ್ದರಿಂದ ನಾವು ಊರು ಬಿಡಬಾರದು, ಭಿಕ್ಷೆ ಬೇಡುವುದು ನಮ್ಮ ಧರ್ಮವೂ ಅಲ್ಲ ನಮ್ಮ ಧರ್ಮವನ್ನು ಬಿಡಬಾರದು ಎಂದು ಚೆನ್ನಾಗಿ ತಿಳಿದು ಅಣ್ಣನಾದ ಯುಧಿಷ್ಠಿರನಿಗೆ ಈ ರೀತಿಯಾಗಿ ಹೇಳಿದನು.

ನಿಷ್ಕಾಸಯಂತಿ ಯದಿ ನೋ ನಿಜಧರ್ಮಸಂಸ್ಥಾನ್
ಯೋತ್ಸ್ಯಾಮಹೇಽತ್ರ ನಹಿ ದಸ್ಯುವಧೋಽಪ್ಯಧರ್ಮಃ ।
ಇತ್ಯೂಚಿವಾಂಸಮಮುಮಾಹ ಚ ಧರ್ಮಸೂನುಃ
ಕೀರ್ತಿರ್ವಿನಶ್ಯತಿ ಹಿ ನೋ ಗುರುಭಿರ್ವಿರೋಧೇ ॥ ೨೭ ॥

ಪದಚ್ಛೇದ :- ನಿಷ್ಕಾಸಯಂತಿ, ಯದಿ, ನಃ, ನಿಜಧರ್ಮಸಂಸ್ಥಾನ್, ಯೋತ್ಸ್ಯಾಮಹೇ, ಅತ್ರ, ನ, ಹಿ, ದಸ್ಯುವಧಃ, ಅಪಿ, ಅಧರ್ಮಃ, ಇತಿ, ಊಚಿವಾಂಸಂ, ಅಮುಂ, ಆಹ, ಚ, ಧರ್ಮಸೂನುಃ, ಕೀರ್ತಿಃ, ವಿನಶ್ಯತಿ, ಹಿ, ನಃ, ಗುರುಭಿ, ವಿರೋಧೇ ।

ಅರ್ಥ :- ಯದಿ = ಒಂದುವೇಳೆ, ನಿಜಧರ್ಮಸಂಸ್ಥಾನ್ = ನಿಜ - ನಮ್ಮದ್ದಾದ, ಧರ್ಮ - ಧರ್ಮದಲ್ಲಿ, ಸಂಸ್ಥಾನ್ = ನಿಷ್ಠರಾದ, ನಃ = ನಮ್ಮನ್ನು, ನಿಷ್ಕಾಸಯಂತಿ = ಹೊರಗೆ ಕಳಿಸುವುದಾದರೆ, ಅತ್ರ = ಇಲ್ಲಿಯೇ, ಯೋತ್ಸ್ಯಾಮಹೇ = ಯುದ್ಧ ಮಾಡುತ್ತೇವೆ, ಹಿ = ನಿಶ್ಚಯವಾಗಿಯೂ, ದಸ್ಯುವಧಃ = ದುಷ್ಟರ ಸಂಹಾರವು (ದುರ್ಯೋಧನಾದಿಗಳ ಸಂಹಾರವು), ನಾಪ್ಯಧರ್ಮಃ = ಅಧರ್ಮವಲ್ಲವಷ್ಟೆ, ಇತಿ = ಈ ರೀತಿಯಲ್ಲಿ, ಊಚಿವಾಂಸಂ = ಹೇಳುತ್ತಿರುವ, ಅಮುಂ = ಈ ಭೀಮನನ್ನು ಕುರಿತು, ಧರ್ಮಸೂನುಃ = ಯುಧಿಷ್ಠಿರನು, ಗುರುಭಿಃ = ಹಿರಿಯರೊಂದಿಗೆ, ವಿರೋಧೇ = ವಿರೋಧವಾಗಲು, ನಃ = ನಮ್ಮ, ಕೀರ್ತಿ = ಕೀರ್ತಿಯು, ಹಿ = ನಿಶ್ಚಯವಾಗಿ, ವಿನಶ್ಯತಿ = ನಾಶ ಹೊಂದುತ್ತದೆ, ಇತಿ ಚ = ಈ ರೀತಿಯಾಗಿ, ಆಹ = ಹೇಳಿದನು.

ತಾತ್ಪರ್ಯ :- ಸ್ವಧರ್ಮ ಪರಿಪಾಲಕರಾದ ನಮ್ಮನ್ನು ಅವರು ಹೊರಗೆ ತಳ್ಳುವುದಾದರೆ ನಾವು ಇಲ್ಲಿಯೇ ಯುದ್ಧ ಮಾಡೋಣ. ದುಷ್ಟರನ್ನು ಸಂಹರಿಸುವುದು ಅಧರ್ಮವೇನಲ್ಲ? ಹೀಗೆ ಭೀಮಹೇಳಲು ಧರ್ಮರಾಜನು ಗುರುಹಿರಿಯರೊಡನೆ ವಿರೋಧವು ಮಾಡಿದರೆ ನಮ್ಮ ಕೀರ್ತಿಯು ನಾಶವಾಗುತ್ತದೆ. ಎಂದು ಹೇಳಿದನು.

ಇತ್ಯುಕ್ತವಾಕ್ಯಮಮುಮಗ್ರಜಮನ್ವಗಾತ್ ಸ
ಭೀಮಃ ಪ್ರದರ್ಶ್ಯ ನಿಜಧರ್ಮಮಥಾನುವೃತ್ತ್ಯೈ ।

**ದೋಷೋ ಭವೇದುಭಯತೋ ಯತ ಏವ ತೇನ**
**ವಾಚ್ಯಃ ಸ್ವಧರ್ಮ ಉತ ನ ಸ್ಥಿತಿರತ್ರ ಕಾರ್ಯಾ ॥ ೨೮ ॥**

**ಪದಚ್ಛೇದ :- ಇತಿ, ಉಕ್ತವಾಕ್ಯಂ, ಅಮುಂ, ಅಗ್ರಜಂ, ಅನ್ವಗಾತ್, ಸಃ ಭೀಮಃ, ಪ್ರದರ್ಶ್ಯ, ನಿಜಧರ್ಮಂ, ಅಧಾನುವೃತ್ತ್ಯೈ, ದೋಷಃ, ಭವೇತ್, ಉಭಯತಃ, ಯತಃ, ಏವ, ತೇನ, ವಾಚ್ಯಃ, ಸ್ವಧರ್ಮಃ ಉತ, ನ, ಸ್ಥಿತಿಃ, ಅತ್ರ, ಕಾರ್ಯಾ ।**

**ಅರ್ಥ :-** **ಸಃ** = ಆ, **ಭೀಮಃ** = ಭೀಮನು, **ಇತಿ** = ಈ ರೀತಿಯಾಗಿ, **ನಿಜಧರ್ಮಂ** = ನಿಜ - ತಮ್ಮ, **ಧರ್ಮಂ** - ಧರ್ಮವನ್ನು, **ಪ್ರದರ್ಶ್ಯ** = ತೋರಿಸಿ, **ಅಥ** = ಅನಂತರ, **ಉಕ್ತವಾಕ್ಯಂ** = ಹೇಳಲ್ಪಟ್ಟ ಮಾತುಳ್ಳ, **ಅಮುಂ** = ಈ, **ಅಗ್ರಜಂ** = ಅಣ್ಣನಾದ ಯುಧಿಷ್ಠಿರನನ್ನು, **ಅಧಾನುವೃತ್ತ್ಯೈ** = ಅನುಸರಿಸುವುದಕ್ಕಾಗಿ, **ಅನ್ವಗಾತ್** = ಹಿಂಬಾಲಿಸಿದನು, **ಉಭಯತಃ** = ಎರಡು ವಿಧದಿಂದಲೂ, **ದೋಷಃ** = ದೋಷವು, **ಭವೇದೇವ** = ಆಗುತ್ತದೆಯೋ, **ಯತಃ** = ಯಾವ ಕಾರಣದಿಂದ, **ತೇನ** = ಆದ್ದರಿಂದ, **ಸ್ವಧರ್ಮಃ** = ತಮ್ಮ ಧರ್ಮವು, **ವಾಚ್ಯಃ** = ಹೇಳಲ್ಪಡಬೇಕು, **ಯತಃ** = ಆದರೆ (ಅಣ್ಣನ ಮಾತಿಗೆ ವಿರುದ್ಧವಾಗಿ), **ಅತ್ರ** = ಇಲ್ಲಿಯೇ, **ಸ್ಥಿತಿ** = ಇರುವಿಕೆಯು, **ನ ಕಾರ್ಯಾ** = ಮಾಡಲ್ಪಡಬಾರದು.

**ತಾತ್ಪರ್ಯ :-** ಈ ರೀತಿಯಾಗಿ ಅಣ್ಣನು ಹೇಳಿದಾಗ ಭೀಮಸೇನ ಅಣ್ಣನ ಅಪ್ಪಣೆ ಎಂದು ಅಂಗೀಕರಿಸಿ ಅಣ್ಣನನ್ನೇ ಹಿಂಬಾಲಿಸಿ ಹೋದನು. ಆದ್ದರಿಂದ ಮೊದಲು ಸ್ವಧರ್ಮವನ್ನು ಹೇಳಿದನು. ಏಕೆಂದರೆ ಸ್ವಧರ್ಮ ತಿಳಿದೂ ಹೇಳದಿರುವುದು ದೋಷವಾಗುತ್ತದೆ. ಹಾಗೆಯೇ ಅಣ್ಣನ ಮಾತು ಮೀರುವುದೂ ದೋಷವಾಗುತ್ತದೆ. ಆದ್ದರಿಂದ ತನ್ನ ಧರ್ಮವನ್ನು ತಿಳಿಸಬೇಕು ಹಾಗೇ ಅಣ್ಣನ ಮಾತನ್ನು ಮೀರಿ ಹಸ್ತಿನಾವತಿಯಲ್ಲಿಯೇ ಇರಬಾರದು.

**ಕೀರ್ತ್ಯರ್ಥಮೇವ ನಿಜಧರ್ಮಪರಿಪ್ರಹಾಣೇ**
**ಪ್ರಾಪ್ತೇಽಗ್ರಜಸ್ಯ ವಚನಾತ್ ಪ್ರವಿಹಾತುಮೇವ ।**
**ಭೀಮಸ್ಯ ದೋಷಮುಭಯಂ ಪ್ರತಿಹಂತುಮೀಶೋ**
**ಜ್ಯೇಷ್ಠಂ ಚಕಾರ ಹರಿರತ್ರ ಸುತಂ ವೃಷಸ್ಯ ॥ ೨೯ ॥**

ಪದಚ್ಛೇದ :- ಕೀರ್ತ್ಯರ್ಥಮ್ ಏವ, ನಿಜಧರ್ಮಪರಿಪ್ರಹಾಣೇ, ಪ್ರಾಪ್ತೇ, ಅಗ್ರಜಸ್ಯ, ವಚನಾತ್, ಪ್ರವಿಹಾತುಮ್, ಏವ, ಈಶಃಹರಿಃ, ಅತ್ರ ಭೀಮಸ್ಯ, ದೋಷಂ, ಉಭಯಂ, ಪ್ರವಿಹಂತುಂ, ಈಶಃ, ಜ್ಯೇಷ್ಠಂ, ಚಕಾರ, ಹರಿಃ, ಸುತಂ, ವೃಕ್ಷಸ್ಯ ।

**ಅರ್ಥ** :- **ಕೀರ್ತ್ಯರ್ಥಮೇವ** = ಕೀರ್ತಿಗಾಗಿಯೇ, **ನಿಜಧರ್ಮ ಪರಿಪ್ರಹಾಣೇ** = ನಿಜ - ತಮ್ಮ, ಧರ್ಮ - ಧರ್ಮದ, ಪರಿಪ್ರಹಾಣೇ - ಪರಿತ್ಯಾಗವು, **ಪ್ರಾಪ್ತೇ** = ಒದಗಿಬಂದರೆ, **ಅಗ್ರಜಸ್ಯ** = ಅಣ್ಣನಾದ ಧರ್ಮರಾಜನ, **ವಚನಾತ್** = ಮಾತಿನಿಂದ, **ಪ್ರವಿಹಾತುಮೇವ** = ಬಿಡುವುದಕ್ಕಾಗಿಯೇ, **ಈಶಃ** = ಪ್ರಭುವಾದ, **ಹರಿಃ** = ಶ್ರೀಹರಿಯು, **ಅತ್ರ** = ಇಲ್ಲಿ, **ಭೀಮಸ್ಯ** = ಭೀಮಸೇನನಿಗೆ, **ಉಭಯಂ** = ಎರಡು ವಿಧವಾದ, **ದೋಷಂ** = ದೋಷವನ್ನು, **ಪ್ರವಿಹಂತುಮ್** = ಪರಿಹರಿಸಲು, **ವೃಷಸ್ಯ** = ಯಮನ, **ಸುತಂ** = ಮಗನಾದ ಧರ್ಮರಾಜನನ್ನು, **ಜೇಷ್ಠ** = ಹಿರಿಯಣ್ಣನನ್ನಾಗಿ, **ಚಕಾರ** = ಮಾಡಿದನು.

**ತಾತ್ಪರ್ಯ** :- ಕೀರ್ತಿಗಾಗಿ ಸ್ವಧರ್ಮವನ್ನು ಬಿಡಬೇಕಾಗಿ ಬಂದಾಗ, ಅಣ್ಣನ ಮಾತಿನಿಂದಲೇ ಬಿಡಬೇಕು. ಹೀಗೆ ಎರಡು ದೋಷವನ್ನು ಪರಿಹರಿಸಿಕೊಳ್ಳಬೇಕೆಂದೇ ಶ್ರೀಹರಿ ಧರ್ಮರಾಜನನ್ನು ಭೀಮನಿಗೆ ಅಣ್ಣನನ್ನಾಗಿ ಹುಟ್ಟಿಸಿದ.

**ಹಂತವ್ಯತಾಮುಪಗತೇಷು ಸುಯೋಧನಾದಿ-**
**ಷ್ವನ್ಯೋಽಪಧಾನ್ನಹಿ ಭವೇನ್ನಿಜಧರ್ಮ ಏವ ।**
**ಪೂರ್ವಂ ವಧೇ ನಹಿ ಸಮಸ್ತಶ ಏವ ದೋಷಾ-**
**ಸ್ತೇಷಾಂ ಪ್ರಯಾಂತಿ ವಿವೃತಿಂ ಚ ತದರ್ಥತೋಽಪಿ ॥ ೩೦ ॥**

ಪದಚ್ಛೇದ :- ಹಂತವ್ಯತಾಂ, ಉಪಗತೇಷು, ಸುಯೋಧನಾದಿಷು, ಅನ್ಯಃ, ವಧಾತ್, ನ, ಹಿ, ಭವೇತ್, ನಿಜಧರ್ಮಃ, ಏವ, ಪೂರ್ವಂ, ವಧೇ, ನ, ಹಿ, ಸಮಸ್ತಶಃ, ಏವ, ದೋಷಾಃ, ತೇಷಾಂ, ಪ್ರಯಾಂತಿ, ವಿವೃತಿಂ, ಚ ತದರ್ಥತಃ, ಅಪಿ ।

**ಅರ್ಥ** :- **ಸುಯೋಧನಾದಿಷು** = ದುರ್ಯೋಧನಾದಿಗಳು, **ಉಪಗತೇಷು** = (ದುಷ್ಟಕಾರ್ಯಗಳನ್ನು) ಮಾಡಿಕೊಂಡಿರುತ್ತಿರಲು, **ಹಂತವ್ಯ ತಾಂ** = ಕೊಲ್ಲಲ್ಪಡಲಿ, **ಹಿ** = ನಿಶ್ಚಯವಾಗಿಯೂ, **ವಧಾತ್** =

ಕೊಲ್ಲುವುದಕ್ಕಿಂತಲು, **ಅನ್ಯಃ** = ಬೇರೆ, **ನಿಜಧರ್ಮಃ** = ಸ್ವ ಧರ್ಮವು, **ನಭವೇದೇವ** = ಇರುವುದಿಲ್ಲವಷ್ಟೇ, **ಅಪಿ** = ಆದರೂ, **ಪೂರ್ವಂ** = ಮೊದಲೇ, **ವಧೇ** = ಕೊಂದರೆ, **ತೇಷಾಂ** = ಆ ದುರ್ಯೋಧನಾದಿಗಳ, **ದೋಷಾಃ** = ದೋಷಗಳು, **ಸಮಸ್ತಷಃ** = ಎಲ್ಲೆಡೆಯಲ್ಲೂ, **ವಿವೃತಿಂ** = ವ್ಯಾಪ್ತಿಯನ್ನು, **ನಪ್ರಯಾತಿಂ** = ಹೊಂದುವುದಿಲ್ಲ, **ತದರ್ಥತಶ್ಚ** = ಆದ್ದರಿಂದಲೂ, **ವೃಷಸ್ಯಸುತಂ** = ಧರ್ಮರಾಜನನ್ನು, **ಜೇಷ್ಠಂ** = ಅಣ್ಣನನ್ನಾಗಿ, **ಚಕಾರ** = ಮಾಡಿದನು.

ತಾತ್ಪರ್ಯ :- ದುರ್ಯೋಧನಾದಿಗಳು ಕೊಲ್ಲಲು ಅರ್ಹರೆನಿಸಿರುವಾಗ, ಕೊಲ್ಲುವುದು ಬಿಟ್ಟು ಬೇರೆನೂ ಸ್ವಧರ್ಮವಾಗುವುದಿಲ್ಲ, ಆದರೂ ಮೊದಲಿಗೇ ಕೊಂದರೆ ಅವರ ಎಲ್ಲ ದುರ್ಗುಣಗಳು ಬೆಳಕಿಗೆ ಬರುವುದಿಲ್ಲ. ಆದಕ್ಕಾಗಿ ಶ್ರೀಹರಿ ಧರ್ಮರಾಜನನ್ನು ಅಣ್ಣನಾಗಿ ಹುಟ್ಟಿಸಿದ.

**ಕ್ಷತ್ತಾಽಥ ಚಾಽಹ ಸುವಚೋಽಂತ್ಯಜಭಾಷಯೈವ**
**ಧರ್ಮಾತ್ಮಜಂ ವಿಷಹುತಾಶಭಯಾತ್ ಪ್ರತೀತಾಃ ।**
**ಆಧ್ವಂ ತ್ವಿತಿ ಸ್ಮ ಸ ತಥೇತಿ ವಚೋಽಪ್ಯುದೀರ್ಯ**
**ಪ್ರಾಯಾಚ್ಚ ವಾರಣಾವತಂ ಪೃಥಯಾಽನುಜೈಶ್ಚ ॥ ೩೧ ॥**

ಪದಚ್ಛೇದ :- **ಕ್ಷತ್ತಾ, ಅಥ, ಚ, ಆಹ, ಸುವಚಃ, ಅಂತ್ಯಜಭಾಷಯ್ಯೆವ, ಧರ್ಮಾತ್ಮಜಂ, ವಿಷಹುತಾಶಭಯಾತ್, ಪ್ರತೀತಾಃ, ಆಧ್ವಂ, ತು, ಇತಿ, ಸ್ಮ, ಸಃ, ತಥಾ, ಇತಿ, ವಚಃ, ಅಪಿ, ಉದೀರ್ಯ, ಪ್ರಾಯಾತ್, ಚ ವಾರಣಾವತಂ, ಪೃಥಯಾ, ಅನುಜೈಃ, ಚ ।**

ಅರ್ಥ :- **ಅಥ** = ಅನಂತರ, **ಕ್ಷತ್ತಾ** = ವಿಧುರನು, **ಧರ್ಮಾತ್ಮಜಂ** = ಧರ್ಮರಾಜನನ್ನು ಕುರಿತು, **ಅಂತ್ಯಜಭಾಷಯೈವ** = ಅಂತ್ಯಜ ಭಾಷೆಯಿಂದಲೇ (ನಿಗೂಢವಾಗಿ), **ವಿಷಹುತಾಶಭಯಾತ್** = ವಿಷ - ವಿಷದ, ಹುತಾಶ - ಅಗ್ನಿಗಳ, ಭಯಾತ್ - ಭಯದಿಂದ (ಬಾಧೆಯಿಂದ), **ಪ್ರತೀತಾಃ** = ಎಚ್ಚರದಿಂದ, **ಆಧ್ವಂತು** = ಇರಬೇಕಷ್ಟೆ, **ಇತಿ** = ಈ ರೀತಿಯಾಗಿ, **ವಚಃ** = ಒಳ್ಳೆಯ ಮಾತನ್ನು, **ಆಹ** = ಹೇಳಿದನು, **ಸಃ** = ಆ ಧರ್ಮರಾಜನು, **ತಥಾ** = ಹಾಗೆಯೇ ಆಗಲಿ, **ಇತಿ** = ಎಂದು, **ವಚಃ** = ಮಾತನ್ನು, **ಅಭ್ಯುದೀರ್ಯ** =

ಹೇಳಿ, ಚ = ಮತ್ತು, ಪೃಥಯಾ = ಕುಂತಿಯಿಂದ, ಅನುಜೈಶ್ಚ = ತಮ್ಮಂದಿರೊಂದಿಗೆ ಕೂಡಿಕೊಂಡು, ವಾರಣಾವತಂ = ವಾರಣಾವತವನ್ನು ಕುರಿತು, ಪ್ರಾಯಾತ್ = ಹೊರಟು ಹೋದನು.

**ತಾತ್ಪರ್ಯ** :- ವಿದುರನು ಪಾಂಡವರಿಗೆ ಅಂತ್ಯಜ ಭಾಷೆಯಿಂದ ವಿಷ ಅಗ್ನಿಗಳ ಭಾದೆಯಿಂದ ಎಚ್ಚರದಿಂದಿರಿ ಎಂದು ಒಳ್ಳೆಯ ಮಾತನ್ನು ಹೇಳಿದನು. ಧರ್ಮರಾಜನು ಹಾಗೆಯೇ ಆಗಲಿ ಎಂದು ಹೇಳಿ ಕುಂತಿ ಹಾಗೂ ತಮ್ಮಂದಿರೊಂದಿಗೆ ವಾರಣಾವತಕ್ಕೆ ಹೋದನು.

**ತಾನ್ ಹಂತುಮೇವ ಚ ತದಾ ಧೃತರಾಷ್ಟ್ರಸೂನು-**
**ರ್ಲಾಕ್ಷಾಗೃಹಂ ಸಪದಿ ಕಾಂಚನರತ್ನಗೂಢಮ್ ।**
**ಕೃತ್ವಾಽಭ್ಯಯಾತಯದಮುತ್ರ ಹಿ ವಿಷ್ಣುಪದ್ಯಾ**
**ಸ್ವಾಮಾತ್ಯಮೇವ ಚ ಪುರೋಚನನಾಮಧೇಯಮ್ ॥ ೩೨ ॥**

**ಪದಚ್ಛೇದ** :- ತಾನ್, ಹಂತುಂ, ಏವ, ಚ, ತದಾ, ಧೃತರಾಷ್ಟ್ರಸೂನುಃ, ಲಾಕ್ಷಾಗೃಹಂ ಸಪದಿ, ಕಾಂಚನರತ್ನಗೂಢಂ, ಕೃತ್ವಾ, ಅಭ್ಯಯಾತಯತ್, ಅಮುತ್ರ, ಹಿ, ವಿಷ್ಣುಪದ್ಯಾ, ಸ್ವಾಮಾತ್ಯಂ, ಏವ, ಚ ಪುರೋಚನ ನಾಮಧೇಯಮ್

**ಅರ್ಥ** :- ತದಾ = ಆಗ, **ಧೃತರಾಷ್ಟ್ರ ಸೂನುಃ** = ಧೃತರಾಷ್ಟ್ರನ ಮಗನಾದ ದುರ್ಯೋಧನನು, **ಅಮುತ್ರ** = ಈ ವಾರಣಾವತದಲ್ಲಿ, **ತಾನ್** = ಆ ಪಾಂಡವರನ್ನು, **ಹಿ** = ನಿಶ್ಚಯವಾಗಿಯೂ, **ಹಂತುಮೇವ** = ಕೊಲ್ಲುವುದಕ್ಕಾಗಿಯೇ, **ಸಪದಿ** = ಕೂಡಲೇ, **ಕಾಂಚನರತ್ನಗೂಢಂ** = ಕಾಂಚನ - ಚಿನ್ನ, **ರತ್ನ** = ರತ್ನವೂ ಇವುಗಳಿಂದ, **ಗೂಢಂ** = ಆವೃತಗೊಂಡ, **ಲಾಕ್ಷಾಂಗೃಹಂ** = ಅರಗಿನ ಮನೆಯನ್ನು, **ಕೃತ್ವಾ ಚ** = ಸಿದ್ಧಪಡಿಸಿ, **ಪುರೋಚನನಾಮಧೇಯಂ** = ಪುರೋಚನ ಎಂಬ ಹೆಸರಿನ, **ಸ್ವಾಮಾತ್ಯಂ** = ತನ್ನ ಮಂತ್ರಿಯನ್ನು, **ವಿಷ್ಣು ಪದ್ಯಾ ಏವ** = ಗಂಗಾನದಿಯ ಮಾರ್ಗದಿಂದಲೇ, **ಅಭ್ಯಯಾತಯೇತ್** = ಕಳುಹಿಸಿದನು.

**ತಾತ್ಪರ್ಯ** :- ದುರ್ಯೋಧನನು ಪಾಂಡವರನ್ನು ಕೊಲ್ಲುವ ಉದ್ದೇಶದಿಂದಲೇ ಚಿನ್ನ ರತ್ನಗಳಿಂದ ಆವೃತಗೊಂಡ ಅರಗಿನ ಮನೆಯನ್ನು

ಕೂಡಲೇ ಸಿದ್ಧಪಡಿಸಿ ಗಂಗಾನದಿಯ ಮಾರ್ಗದಿಂದ, ಪಾಂಡವರೊಂದಿಗೆ ಪುರೋಚನವೆಂಬ ತನ್ನ ಮಂತ್ರಿಯನ್ನು ಕಳುಹಿಸಿದನು.

**ಪೂರ್ವಂ ಪ್ರಹಸ್ತ ಇತಿ ಯಸ್ತ್ವಭವತ್ ಸುಪಾಪಃ**
**ಸೋಽಭ್ಯೇತ್ಯ ಪಾಂಡುತನಯಾನಭವಚ್ಚ ಮಂತ್ರೀ ।**
**ದುರ್ಯೋಧನಂ ಪ್ರತಿವಿಹಾಯ ಭವತ್ಸಕಾಶ-**
**ಮಾಯಾತ ಇತ್ಯವದದೇಷು ಸ ಕೂಟವಾಕ್ಯಮ್ ॥ ೩೩ ॥**

ಪದಚ್ಛೇದ :- ಪೂರ್ವಂ, ಪ್ರಹಸ್ತಃ, ಇತಿ, ಯಃ, ತು, ಅಭವತ್, ಸುಪಾಪಃ, ಸಃ, ಅಭ್ಯೇತ್ಯ, ಪಾಂಡುತನಯಾನ್, ಅಭವತ್, ಚ, ಮಂತ್ರೀ, ದುರ್ಯೋಧನಂ, ಪ್ರತಿವಿಹಾಯ, ಭವತ್ಸಕಾಶಂ, ಆಯಾತಃ ಇತಿ ಅವದತ್, ಏಷು, ಸಃ, ಕೂಟವಾಕ್ಯಮ್ ।

ಅರ್ಥ :- **ಯಃ** = ಯಾವ ಪುರೋಚನನು, **ಪೂರ್ವಂ** = ಹಿಂದೆ (ರಾಮಾಯಣ ಕಾಲದಲ್ಲಿ), **ಪ್ರಹಸ್ತಃ** = ಪ್ರಹಸ್ತನು, **ಇತಿ** = ಎಂದು, **ಅಭವತ್** = ಇದ್ದನೋ, **ಸುಪಾಪಃ** = ಪಾಪಿಷ್ಟನಾದ, **ಸಃ** = ಆ ಪುರೋಚನನು, **ಪಾಂಡುತನಯಾನ್** = ಪಾಂಡುರಾಜನ ಮಕ್ಕಳಾದ ಪಾಂಡವರನ್ನು, **ಅಭ್ಯೇತ್ಯ** = ಹೊಂದಿ, **ದುರ್ಯೋಧನಂ** = ದುರ್ಯೋಧನನನ್ನು, **ಪ್ರತಿವಿಹಾಯ** = ಬಿಟ್ಟು, **ಭವತ್ಸಕಾಶಂ** = ನಿಮ್ಮ ಬಳಿಗೆ, **ಆಯಾತಃ** = ಬಂದಿರುವೆನು, **ಇತಿ** = ಎಂದು, **ಏಷ** = ಈ ಪಾಂಡವರಲ್ಲಿ, **ಕೂಟವಾಕ್ಯಂ** = ಕಪಟ ಮಾತನ್ನು, **ಅವದತ್** = ಹೇಳಿದನು, **ಚ** = ಮತ್ತು, **ಮಂತ್ರೀ** = ಮಂತ್ರಿಯಾಗಿಯೂ, **ಅಭವತ್** = ಆದನು.

ತಾತ್ಪರ್ಯ :- ಆ ಪುರೋಚನ ಹಿಂದೆ ಪ್ರಹಸ್ತನೆಂಬ ಮಹಾಪಾಪಿ. ಅವನು ಪಾಂಡವರ ಬಳಿಗೆ ಬಂದು 'ದುರ್ಯೋಧನನನ್ನು ಬಿಟ್ಟು ನಿಮ್ಮಲ್ಲಿಗೆ ಬಂದಿದ್ದೇನೆ' ಎಂದು ಕಪಟದ ಮಾತನ್ನಾಡಿದ ಅವರಿಗೆ ಮಂತ್ರಿಯಾದ.

**ದಿವ್ಯಂ ಗೃಹಂ ಚ ಭವತಾಂ ಹಿ ಮಯೋಪನೀತಂ**
**ಪ್ರೀತ್ಯೈವ ಪಾಪಮನುಯಾತುಮಹಂ ನ ಶಕ್ತಃ ।**
**ಯುಷ್ಮಾಸು ಧರ್ಮಧೃತಿಮತ್ಸು ಸದಾ ನಿವತ್ಸ್ಯ**
**ಇತ್ಯೂಚಿವಾಂಸಮಮುಮಾಹುರಹೋ ಸುಭದ್ರಮ್ ॥ ೩೪ ॥**

ಪದಚ್ಛೇದ :- ದಿವ್ಯಂ, ಗೃಹಂ, ಚ, ಭವತಾಂ, ಹಿ, ಮಯಾ, ಉಪನೀತಂ, ಪ್ರೀತ್ಯಾ, ಏವ, ಪಾಪಂ, ಅನುಯಾತುಂ, ಅಹಂ, ನ ಶಕ್ತಃ, ಯುಷ್ಮಾಸು, ಸದಾ, ನಿವತ್ಸ್ಯೇ, ಇತಿ, ಊಚಿವಾಂಸಂ, ಅಮುಂ, ಆಹುಃ, ಅಹಃ, ಸುಭದ್ರಮ್ ।

**ಅರ್ಥ** :- **ಮಯಾ** = ನನ್ನಿಂದ, **ಭವತಾಂ** = ನಿಮಗೆ, **ದಿವ್ಯಂ** = ದಿವ್ಯವಾದ, **ಗೃಹಂ** = ಮನೆಯು, **ಪ್ರೀತ್ಯೈವ** = ಪ್ರೀತಿಯಿಂದಲೇ, **ಉಪನೀತಂ** = ಕಟ್ಟಿಸಲ್ಪಟ್ಟಿದೆ, **ಅಹಂ** = ನಾನು, **ಪಾಪಂ** = ಪಾಪಿಷ್ಟನಾದ ದುರ್ಯೋಧನನನ್ನು, **ಅನುಯಾತುಂ** = ಅನುಸರಿಸಲು, **ನಶಕ್ತಃ** = ಸಮರ್ಥನಾಗಿಲ್ಲ, **ಧರ್ಮಧೃತಿಮತ್ಸು** = ಧರ್ಮದಲ್ಲಿ ಧೃತಿಗೆಡದ ಆಸಕ್ತಿಯುಳ್ಳ, **ಯುಷ್ಮಾಸು** = ನಿಮ್ಮಲ್ಲಿಯೇ, **ಸದಾ** = ಯಾವಾಗಲೂ, **ನಿವತ್ಸ್ಯೇ** = ವಾಸಿಸುತ್ತೇನೆ, **ಇತಿ** = ಈ ರೀತಿಯಾಗಿ, **ಊಚಿವಾಂಸಂ** = ಹೇಳುತ್ತಿರುವ, **ಅಮುಂ** = ಈ ಪುರೋಚನನನ್ನು ಕುರಿತು, **ಅಹೋ** = ಆಶ್ಚರ್ಯವು, **ಸುಭದ್ರಂ** = ಬಹಳ ಒಳ್ಳೆಯದಾಯಿತು, **ಇತಿ** = ಎಂದು, **ಆಹುಃ** = ಹೇಳಿದರು.

**ತಾತ್ಪರ್ಯ** :- ದಿವ್ಯವಾದ ಮನೆಯೊಂದನ್ನು ನಿಮಗಾಗಿಯೇ ಪ್ರೀತಿಯಿಂದ ಕಟ್ಟಿಸಿರುವೆನು. ಪಾಪಿಯಾದ ದುರ್ಯೋಧನನನ್ನು ಅನುಸರಿಸಲು ನನ್ನಿಂದಾಗುವುದಿಲ್ಲ. ಧರ್ಮದಲ್ಲಿ ಆಸಕ್ತಿಯುಳ್ಳ ನಿಮ್ಮಲ್ಲಿಯೇ ನಾನು ಸದಾ ಇರುತ್ತೇನೆ ಎಂದು ಪುರೋಚನನು ಹೇಳಿದಾಗ, ಪಾಂಡವರು ಆಶ್ಚರ್ಯ! ಬಹಳ ಒಳ್ಳೆಯದಾಯಿತು ಎಂದರು.

**ದೃಷ್ಟ್ವೈವ ಜಾತುಷಗೃಹಂ ವಸಯಾ ಸಮೇತಂ**
**ತದ್ಗಂಧತೋ ವೃಷಸುತಃ ಪವಮಾನಜಾತಮ್ ।**
**ತಂ ಚಾತಿಪಾಪಮವದತ್ ಸುಮುಖ್ಯೆಷ ಪಾಪೋ**
**ಹಂತುಂ ನ ಇಚ್ಛತಿ ಸದಾ ಭವ ಚ ಪ್ರತೀತಃ ।। ೩೫ ।।**

ಪದಚ್ಛೇದ :- ದೃಷ್ಟ್ವಾ, ಏವ, ಜಾತುಷಗೃಹಂ, ವಸಯಾ, ಸಮೇತಂ, ತದ್ಗಂಧತಃ, ವೃಷಸುತಃ, ಪವಮಾನಜಾತಮ್, ತಂ, ಚ, ಅತಿಪಾಪಂ, ಅವದತ್, ಸುಮುಖ, ಏಷಃ, ಪಾಪಃ, ಹಚುಂ, ನಃ, ಇಚ್ಛತಿ, ಸದಾ, ಭವ, ಚ ಪ್ರತೀತಃ ।

**ಅರ್ಥ** :- **ವೃಷಸುತಃ** = ಧರ್ಮರಾಜನು, **ವಸಯಾಸಮೇತಂ** = ಮೀನಿನ ಕೊಬ್ಬಿನ್ನಿಂದ ಕೂಡಿರುವ, **ಜಾತುಷಗೃಹಂ** = ಅರಗಿನ ಮನೆಯನ್ನು

ಕೂಡಲೇ ಸಿದ್ಧಪಡಿಸಿ ಗಂಗಾನದಿಯ ಮಾರ್ಗದಿಂದ, ಪಾಂಡವರೊಂದಿಗೆ ಪುರೋಚನವೆಂಬ ತನ್ನ ಮಂತ್ರಿಯನ್ನು ಕಳುಹಿಸಿದನು.

**ಪೂರ್ವಂ ಪ್ರಹಸ್ತ ಇತಿ ಯಸ್ತ್ವಭವತ್ ಸುಪಾಪಃ**
**ಸೋಽಭ್ಯೇತ್ಯ ಪಾಂಡುತನಯಾನಭವಚ್ಚ ಮಂತ್ರೀ ।**
**ದುರ್ಯೋಧನಂ ಪ್ರತಿವಿಹಾಯ ಭವತ್ಸಕಾಶ-**
**ಮಾಯಾತ ಇತ್ಯವದದೇಷು ಸ ಕೂಟವಾಕ್ಯಮ್ ॥ ೩೩ ॥**

ಪದಚ್ಛೇದ :- ಪೂರ್ವಂ, ಪ್ರಹಸ್ತಃ, ಇತಿ, ಯಃ, ತು, ಅಭವತ್, ಸುಪಾಪಃ, ಸಃ, ಅಭ್ಯೇತ್ಯ, ಪಾಂಡುತನಯಾನ್, ಅಭವತ್, ಚ, ಮಂತ್ರೀ, ದುರ್ಯೋಧನಂ, ಪ್ರತಿವಿಹಾಯ, ಭವತ್ಸಕಾಶಂ, ಆಯಾತಃ ಇತಿ ಅವದತ್, ಏಷು, ಸಃ, ಕೂಟವಾಕ್ಯಮ್ ।

**ಅರ್ಥ** :- **ಯಃ** = ಯಾವ ಪುರೋಚನನು, **ಪೂರ್ವಂ** = ಹಿಂದೆ (ರಾಮಾಯಣ ಕಾಲದಲ್ಲಿ), **ಪ್ರಹಸ್ತಃ** = ಪ್ರಹಸ್ತನು, **ಇತಿ** = ಎಂದು, **ಅಭವತ್** = ಇದ್ದನೋ, **ಸುಪಾಪಃ** = ಪಾಪಿಷ್ಟನಾದ, **ಸಃ** = ಆ ಪುರೋಚನನು, **ಪಾಂಡುತನಯಾನ್** = ಪಾಂಡುರಾಜನ ಮಕ್ಕಳಾದ ಪಾಂಡವರನ್ನು, **ಅಭ್ಯೇತ್ಯ** = ಹೊಂದಿ, **ದುರ್ಯೋಧನಂ** = ದುರ್ಯೋಧನನನ್ನು, **ಪ್ರತಿವಿಹಾಯ** = ಬಿಟ್ಟು, **ಭವತ್ಸಕಾಶಂ** = ನಿಮ್ಮ ಬಳಿಗೆ, **ಆಯಾತಃ** = ಬಂದಿರುವೆನು, **ಇತಿ** = ಎಂದು, **ಏಷ** = ಈ ಪಾಂಡವರಲ್ಲಿ, **ಕೂಟವಾಕ್ಯಂ** = ಕಪಟ ಮಾತನ್ನು, **ಅವದತ್** = ಹೇಳಿದನು, **ಚ** = ಮತ್ತು, **ಮಂತ್ರೀ** = ಮಂತ್ರಿಯಾಗಿಯೂ, **ಅಭವತ್** = ಆದನು.

**ತಾತ್ಪರ್ಯ** :- ಆ ಪುರೋಚನ ಹಿಂದೆ ಪ್ರಹಸ್ತನೆಂಬ ಮಹಾಪಾಪಿ. ಅವನು ಪಾಂಡವರ ಬಳಿಗೆ ಬಂದು 'ದುರ್ಯೋಧನನನ್ನು ಬಿಟ್ಟು ನಿಮ್ಮಲ್ಲಿಗೆ ಬಂದಿದ್ದೇನೆ' ಎಂದು ಕಪಟದ ಮಾತನ್ನಾಡಿದ ಅವರಿಗೆ ಮಂತ್ರಿಯಾದ.

**ದಿವ್ಯಂ ಗೃಹಂ ಚ ಭವತಾಂ ಹಿ ಮಯೋಪನೀತಂ**
**ಪ್ರೀತ್ಯೈವ ಪಾಪಮನುಯಾತುಮಹಂ ನ ಶಕ್ತಃ ।**
**ಯುಷ್ಮಾಸು ಧರ್ಮಧೃತಿಮತ್ಸು ಸದಾ ನಿವತ್ಸ್ಯ**
**ಇತ್ಯೂಚಿವಾಂಸಮಮುಮಾಹುರಹೋ ಸುಭದ್ರಮ್ ॥ ೩೪ ॥**

ಪದಚ್ಛೇದ :- ದಿವ್ಯಂ, ಗೃಹಂ, ಚ, ಭವತಾಂ, ಹಿ, ಮಯಾ, ಉಪನೀತಂ, ಪ್ರೀತ್ಯಾ, ಏವ, ಪಾಪಂ, ಅನುಯಾತುಂ, ಅಹಂ, ನ ಶಕ್ತಃ, ಯುಷ್ಮಾಸು, ಸದಾ, ನಿವತ್ಸ್ಯೇ, ಇತಿ, ಊಚಿವಾಂಸಂ, ಅಮುಂ, ಆಹುಃ, ಅಹಃ, ಸುಭದ್ರಮ್ ।

ಅರ್ಥ :- ಮಯಾ = ನನ್ನಿಂದ, ಭವತಾಂ = ನಿಮಗೆ, ದಿವ್ಯಂ = ದಿವ್ಯವಾದ, ಗೃಹಂ = ಮನೆಯು, ಪ್ರೀತ್ಯೈವ = ಪ್ರೀತಿಯಿಂದಲೇ, ಉಪನೀತಂ = ಕಟ್ಟಿಸಲ್ಪಟ್ಟಿದೆ, ಅಹಂ = ನಾನು, ಪಾಪಂ = ಪಾಪಿಷ್ಟನಾದ ದುರ್ಯೋಧನನನ್ನು, ಅನುಯಾತುಂ = ಅನುಸರಿಸಲು, ನಶಕ್ತಃ = ಸಮರ್ಥನಾಗಿಲ್ಲ, ಧರ್ಮಧೃತಿಮತ್ಸು = ಧರ್ಮದಲ್ಲಿ ಧೃತಿಗೆಡದ ಆಸಕ್ತಿಯುಳ್ಳ, ಯುಷ್ಮಾಸು = ನಿಮ್ಮಲ್ಲಿಯೇ, ಸದಾ = ಯಾವಾಗಲೂ, ನಿವತ್ಸೇ = ವಾಸಿಸುತ್ತೇನೆ, ಇತಿ = ಈ ರೀತಿಯಾಗಿ, ಊಚಿವಾಂಸಂ = ಹೇಳುತ್ತಿರುವ, ಅಮುಂ = ಈ ಪುರೋಚನನನ್ನು ಕುರಿತು, ಅಹೋ = ಆಶ್ಚರ್ಯವು, ಸುಭದ್ರಂ = ಬಹಳ ಒಳ್ಳೆಯದಾಯಿತು, ಇತಿ = ಎಂದು, ಆಹುಃ = ಹೇಳಿದರು.

ತಾತ್ಪರ್ಯ :- ದಿವ್ಯವಾದ ಮನೆಯೊಂದನ್ನು ನಿಮಗಾಗಿಯೇ ಪ್ರೀತಿಯಿಂದ ಕಟ್ಟಿಸಿರುವೆನು. ಪಾಪಿಯಾದ ದುರ್ಯೋಧನನನ್ನು ಅನುಸರಿಸಲು ನನ್ನಿಂದಾಗುವುದಿಲ್ಲ. ಧರ್ಮದಲ್ಲಿ ಆಸಕ್ತಿಯುಳ್ಳ ನಿಮ್ಮಲ್ಲಿಯೇ ನಾನು ಸದಾ ಇರುತ್ತೇನೆ ಎಂದು ಪುರೋಚನನು ಹೇಳಿದಾಗ, ಪಾಂಡವರು ಆಶ್ಚರ್ಯ! ಬಹಳ ಒಳ್ಳೆಯದಾಯಿತು ಎಂದರು.

ದೃಷ್ಟ್ವೈವ ಜಾತುಷಗೃಹಂ ವಸಯಾ ಸಮೇತಂ
ತದ್ಗಂಧತೋ ವೃಷಸುತಃ ಪವಮಾನಜಾತಮ್ ।
ತಂ ಚಾತಿಪಾಪಮವದತ್ ಸುಮುಖ್ಯೈಷ ಪಾಪೋ
ಹಂತುಂ ನ ಇಚ್ಛತಿ ಸದಾ ಭವ ಚ ಪ್ರತೀತಃ ॥ ೩೫ ॥

ಪದಚ್ಛೇದ :- ದೃಷ್ಟ್ವಾ, ಏವ, ಜಾತುಷಗೃಹಂ, ವಸಯಾ, ಸಮೇತಂ, ತದ್ಗಂಧತಃ, ವೃಷಸುತಃ, ಪವಮಾನಜಾತಮ್, ತಂ, ಚ, ಅತಿಪಾಪಂ, ಅವದತ್, ಸುಮುಖಿ, ಏಷಃ, ಪಾಪಃ, ಹಚುಂ, ನಃ, ಇಚ್ಛತಿ, ಸದಾ, ಭವ, ಚ ಪ್ರತೀತಃ ।

ಅರ್ಥ :- ವೃಷಸುತಃ = ಧರ್ಮರಾಜನು, ವಸಯಾಸಮೇತಂ = ಮೀನಿನ ಕೊಬ್ಬಿನ್ನಿಂದ ಕೂಡಿರುವ, ಜಾತುಷಗೃಹಂ = ಅರಗಿನ ಮನೆಯನ್ನು

(ಅರಗುಗಳಿಂದ ಮಾಡಿದ ಮನೆಯನ್ನು), **ತದ್ಗಂಧತಃ** = ಅದರ ವಾಸನೆಯಿಂದ, **ದೃಷ್ಟ್ವಾ ಏವ** = ತಿಳಿದೇ, **ಪವಮಾನಜಾತಂ** = ವಾಯುಪುತ್ರನಾದ ಭೀಮನನ್ನು ಕುರಿತು, **ತಂ ಚ** = ಆ ಪುರೋಚನನನ್ನು, **ಅತಿಪಾಪಂ** = ಅತ್ಯಂತ ಪಾಪಿಷ್ಟನನ್ನಾಗಿ, **ಅವದತ್** = ಹೇಳಿದನು, **ಸುಮುಖ** = ಮಂಗಳ ಮುಖದವನಾದ ಭೀಮಸೇನನೇ, **ಏಷಃ** = ಈ, **ಪಾಪಃ** = ಪಾಪಿಷ್ಟನಾದ ಪುರೋಚನನು, **ಹಂತುಂ** = ಕೊಲ್ಲಲು, **ಇಚ್ಛತಿ** = ಬಯಸುತ್ತಾನೆ, **ಸದಾ** = ಯಾವಾಗಲೂ, **ಪ್ರತೀತಶ್ಚ** = ಎಚ್ಚರದಿಂದಲೇ, **ಭವ** = ಇರು.

**ತಾತ್ಪರ್ಯ** :- ಮೀನಿನ ಕೊಬ್ಬು, ಅರಗುಗಳಿಂದ ಮಾಡಿದ ಮನೆಯನ್ನು, ಅದರ ವಾಸನೆಯಿಂದಲೇ ತಿಳಿದ ಧರ್ಮರಾಜನು ಭೀಮನನ್ನು ಕುರಿತು ಹೇಳಿದನು. ''ಈ ಪುರೋಚನನು ಮಹಾಪಾಪಿಷ್ಟ''. ''ಕಲ್ಯಾಣ ಮುಖನಾದ ಭೀಮಸೇನನೇ, ಈ ಪಾಪಿ ನಮ್ಮನ್ನು ಕೊಲ್ಲಲು ಬಯಸಿದ್ದಾನೆ. ನೀನು ಸದಾ ಜಾಗ್ರತೆಯಿಂದಿರು.''

**ಕ್ಷತ್ತಾಽಥ ನೀತಿಬಲತೋಽಖಿಲಲೋಕವೃತ್ತಂ**
**ಜಾನನ್ ಸ್ವಚಾರಮುಖತಃ ಖನಕಾಯ ಚೋಚೇ ।**
**ಉಕ್ತ್ವೈವ ಧರ್ಮತನಯಾಯ ಮದೀಯವಾಕ್ಯಂ**
**ಪೂರ್ವೋಕ್ತಮಾಶು ಕುರು ತತ್ರ ಬಿಲಂ ಸುದೂರಮ್ ॥ ೩೬ ॥**

ಪದಚ್ಛೇದ :- **ಕ್ಷತ್ತ, ಅಥ, ನೀತಿಬಲತಃ, ಅಖಿಲಲೋಕವೃತ್ತಂ ಜಾನನ್, ಸ್ವಚಾರ ಮುಖತಃ, ಖನಕಾಯ, ಚ, ಊಚೇ, ಉಕ್ತ್ವಾ, ಏವ, ಧರ್ಮತನಯಾಯ, ಮದೀಯವಾಕ್ಯಂ, ಪೂರ್ವೋಕ್ತಂ, ಆಶು, ಕುರು, ತತ್ರ, ಬಿಲಂ, ಸೂದೂರಮ್ ।**

**ಅರ್ಥ** :- **ಅಥ** = ಅನಂತರ, **ಕ್ಷತ್ತಾ** = ವಿಧುರನು, **ಸ್ವಚಾರಮುಖತಃ** = ತನ್ನ ಗೂಢಚಾರರ ಮೂಲಕ, **ಚ** = ಮತ್ತು, **ನೀತಿಬಲತಃ** = ನೀತಿ ಬಲದಿಂದ, **ಅಖಿಲಲೋಕವೃತ್ತಂ** = ಎಲ್ಲಾ ಪಿತೂರಿಯನ್ನು, **ಜಾನನ್** = ತಿಳಿದವನಾಗಿ, **ಖನಕಾಯ** = ಭೂಮಿ ಅಗಿಯುವವನಿಗೆ, **ಪೂರ್ವೋಕ್ತಂ** = ಹಿಂದೆ ಹೇಳಲ್ಪಟ್ಟ, **ಮದೀಯವಾಕ್ಯಂ** = ನನ್ನ ಸಂಬಂಧಿಯಾದ ಮಾತನ್ನು, **ಧರ್ಮತನಯಾಯ** = ಧರ್ಮರಾಜನಿಗೆ, **ಉಕ್ತ್ವಾ** = ಹೇಳಿ, **ಆಶು ಏವ** = ಕೂಡಲೇ, **ತತ್ರ** = ಆ ವಾರಣಾವತದಲ್ಲಿ, **ಸುದೂರಂ** = ಬಹಳ ದೂರದವರೆಗೆ, **ಬಿಲಂ** = ಸುರಂಗ ಮಾರ್ಗವನ್ನು, **ಕುರು** = ಸಿದ್ಧಪಡಿಸು, **ಇತಿ** = ಎಂದು, **ಊಚೆ** = ಹೇಳಿದನು.

ತಾತ್ಪರ್ಯ :- ವಿಧುರನು ತನ್ನ ನೀತಿಯ ಬಲದಿಂದ, ಹಾಗೂ ಗೂಢಚಾರರ ಮುಖದಿಂದ ಎಲ್ಲರ ಪಿತೂರಿಯನ್ನು ತಿಳಿದು ನೆಲ ಅಗಿಯುವ ಕೆಲಸದವರಿಗೆ ಹಿಂದೆ ಹೇಳಿದ ಮಾತನ್ನು ಪುನಃ ಉಚ್ಚರಿಸಿ ನನ್ನ ಮಾತನ್ನು ಧರ್ಮರಾಜರಿಗೆ ಹೇಳಿ ಬಹಳ ಬೇಗನೆ ಆ ವಾರಣಾವತದಲ್ಲಿ ಬಹಳ ದೂರದವರೆಗೆ ಸುರಂಗ ಮಾರ್ಗವನ್ನು ನಿರ್ಮಿಸು ಎಂದು ಹೇಳಿದನು.

**ಚಕ್ರೇ ಸ ಚೈವಮಥ ವರ್ತ್ಮ ವೃತಿಚ್ಛಲೇನ**
**ದ್ವಾರಂ ಚ ತಸ್ಯ ಸ ಪಿಧಾಯ ಯಯೌ ಗೃಹಂ ಸ್ವಮ್ ।**
**ಭೀಮಃ ಪುರೋಚನ ಉಭಾವಪಿ ತೌ ವಧಾಯ**
**ಚ್ಛಿದ್ರಾರ್ಥಿನೌ ಮಿಥ ಉತೋಷತುರಬ್ದಕಾರ್ಧಮ್ ॥ ೩೭ ॥**

**ಪದಚ್ಛೇದ :- ಚಕ್ರೆ, ಸ, ಚ,ಏವಂ, ಅಥ, ವರ್ತ್ಮ, ವೃತಿಚ್ಛಲೇನ, ದ್ವಾರಂ, ಚ, ತಸ್ಯ, ಸಃ, ಪಿಧಾಯ, ಯಯೌ, ಗೃಹಂ, ಸ್ವಮ್, ಭೀಮಃ, ಪುರೋಚನಃ, ಉಭೌ, ಅಪಿ, ತೌ, ವಧಾಯ, ಚಿದ್ರಾರ್ಥಿನೌ, ಮಿಥಃ, ಉತೋಷತುಃ, ಅಬ್ದಕಾರ್ಧಮ್ ।**

**ಅರ್ಥ** :- **ಅಥ** = ಅನಂತರ, **ಸಚ** = ಆ ನೆಲ ಅಗಿಯುವವನು, **ವೃತಿಚ್ಛಲೇನ** = ಪ್ರಾಕಾರ ನಿರ್ಮಾಣ ಮಾಡುವ ನೆಪದಿಂದ, **ವರ್ತ್ಮ** = ಸುರಂಗವನ್ನು, **ಪಿಧಾಯ** = ಮಾಡಿ, **ಚ** = ಮತ್ತು, **ತಸ್ಯ** = ಆ ಸುರಂಗಕ್ಕೆ, **ದ್ವಾರಂ** = ಬಾಗಿಲನ್ನು, **ಪಿಧಾಯ** = ಮಾಡಿ, **ಸಃ** = ಆ ನೆಲ ಅಗಿಯುವವನು, **ಸ್ವಂ** = ತನ್ನ, **ಗೃಹಂ** = ಮನೆಯನ್ನು ಕುರಿತು, **ಯಯೌ** = ಹೋದನು, **ಭೀಮಃ** = ಭೀಮನು, **ಪುರೋಚನಃ** = ಪುರೋಚನನು, **ಉಭಾವಪಿತೌ** = ಅವರಿಬ್ಬರೂ ಕೂಡ, **ಮಿಥಃ** = ಪರಸ್ಪರವಾಗಿ, **ಛಿದ್ರಾರ್ಥಿನೌ** = ಕೊಲ್ಲುವ ಇಚ್ಛೆಯುಳ್ಳವರಾಗಿ, **ಅಬ್ದಕಾರ್ಧಂ** = ಅರ್ಧ ವರ್ಷಗಳ ಕಾಲ, **ವಧಾಯ** = ಕೊಲ್ಲುವುದಕ್ಕಾಗಿ, **ಉತೋಷತುಃ** = ಕಾಲ ಕಳೆದರು.

ತಾತ್ಪರ್ಯ :- ಅನಂತರ ನೆಲ ಅಗಿಯುವವನು ಪ್ರಾಕಾರ ನಿರ್ಮಾಣ ಮಾಡುವ ನೆಪದಿಂದ, ವಿಧುರ ಹೇಳಿದಂತೆ ಒಂದು ಸುರಂಗ ಮಾರ್ಗವನ್ನು ಮಾಡಿ, ಅದಕ್ಕೆ ಬಾಗಿಲನ್ನೂ ಮಾಡಿ ಮುಚ್ಚಿ, ತನ್ನ ಮನೆಗೆ ಹೊರಟು ಹೋದನು. ಭೀಮ ಪುರೋಚನರಿಬ್ಬರೂ, ಪರಸ್ಪರ ಕೊಲ್ಲುವ ಅವಕಾಶಕ್ಕೆ ಕಾಯುತ್ತಾ, ಅರ್ಧ ವರ್ಷ ಕಾಲ ಕಳೆದರು.

ತಸ್ಯಾಗ್ರಜಾ ಚ ಸಹಿತಾ ಸುತಪಂಚಕೇನ
ತತ್ರಾಽಗಮತ್ ತದನು ಮಾರುತಿರೇಷ ಕಾಲಃ ।
ಇತ್ಥಂ ವಿಚಿಂತ್ಯ ಸ ನಿಶಾಮ್ಯ ಚ ತಾನ್ ಪ್ರಸುಪ್ತಾನ್
ಭ್ರಾತೃಂಶ್ಚ ಮಾತರಮಥಾಽಶು ಬಿಲೇ ನ್ಯಧಾತ್ ಪ್ರಾಕ್ ॥ ೩೮ ॥

ಪದಚ್ಛೇದ :- ತಸ್ಯ, ಅಗ್ರಜಾ, ಚ, ಸಹಿತಾ, ಸುತಪಂಚಕೇನ, ತತ್ರ, ಅಗಮತ್, ತದನು, ಮಾರುತಿಃ, ಏಷಃ, ಕಾಲಃ, ಇತ್ಥಂ, ವಿಚಿಂತ್ಯ, ಸಃ, ನಿಶಾಮ್ಯ, ಚ, ತಾನ್, ಪ್ರಸುಪ್ತಾನ್, ಭ್ರಾತೄನ್, ಮಾತರಂ, ಅಥ, ಆಶು, ಬಿಲೇ, ನ್ಯಧಾತ್, ಪ್ರಾಕ್ ।

ಅರ್ಥ :- ತದನು = ಅನಂತರ, ತಸ್ಯ = ಆ ಪುರೋಚನನ, ಸುತಪಂಚಕೇನ ಸಹಿತಾ = ಐದು ಮಕ್ಕಳಿಂದ ಕೂಡಿರುವ, ಅಗ್ರಜಾ = ಪುರೋಚನನ ಸಹೋದರಿಯು, ತತ್ರ = ಅಲ್ಲಿಗೆ, ಅಗಮತ್ = ಬಂದಳು, ಏಷಃ = ಇದೆ, ಕಾಲಃ = ಸರಿಯಾದ ಕಾಲವು, ಇತ್ಥಂ = ಈ ರೀತಿಯಾಗಿ, ವಿಚಿಂತ್ಯ = ಆಲೋಚಿಸಿ, ಸಃ = ಆ, ಮಾರುತಿಃ = ಭೀಮಸೇನನು, ಆಶು = ಕೂಡಲೇ, ಚ = ಮತ್ತು, ಪ್ರಸುಪ್ತಾನ್ = ಮಲಗಿರುವ, ತಾನ್ = ಆ ಪುರೋಚನಾದಿಗಳನ್ನು, ನಿಶಾಮ್ಯ = ನೋಡಿ, ಭ್ರಾತೃಂಶ್ಚ = ಸಹೋದರರನ್ನೂ ಕೂಡ, ಅಥ = ಅನಂತರ, ಮಾತರಂ = ತಾಯಿಯನ್ನು, ಪ್ರಾಕ್ = ಮೊದಲು, ಬಿಲೆ = ಸುರಂಗ ಮಾರ್ಗದಲ್ಲಿ, ನ್ಯಧಾತ್ = ಇರಿಸಿದನು.

ತಾತ್ಪರ್ಯ :- ಅನಂತರ ಪುರೋಚನನ ಅಕ್ಕ ತನ್ನ ಐದು ಮಕ್ಕಳೊಂದಿಗೆ ಅಲ್ಲಿಗೆ ಬಂದಳು. ಇದೇ ಸರಿಯಾದ ಸಮಯವೆಂದು ಭೀಮ ನಿಶ್ಚಯಿಸಿ ನಿದ್ರಿಸುತ್ತಿರುವ ಪುರೋಚನಾದಿಗಳನ್ನು ನೋಡಿ ಮೊದಲಿಗೆ ಸೋದರರನ್ನೂ, ತಾಯಿಯನ್ನು ಸುರಂಗ ಮಾರ್ಗದಲ್ಲಿ ಇರಿಸಿದ.

ತಂ ಭಾಗಿನೇಯಸಹಿತಂ ಭಗಿನೀಂ ಚ ತಸ್ಯ
ಪಾಪಾಂ ದದಾಹ ಸಗೃಹಾಂ ಪವಮಾನಸೂನುಃ ।
ಸಾಽಪ್ಯಾಗತಾ ಹಿ ಗರಳೇನ ನಿಹಂತುಮೇತಾನ್
ಭೀಮಸ್ಯ ಪೂರ್ವಭುಜಿತೋ ನ ಶಶಾಕ ಚೈತತ್ ॥ ೩೯ ॥

ಪದಚ್ಛೇದ :- ತಂ, ಭಾಗಿನೇಯ ಸಹಿತಂ, ಭಗಿನೀಂ, ಚ, ತಸ್ಯ, ಪಾಪಾಂ, ದದಾಹ, ಸಗೃಹಾಂ, ಪವಮಾನಸೂನುಃ, ಸಾ, ಅಪಿ, ಆಗತಾ, ಹಿ, ಗರಳೇನ, ನಿಹಂತುಂ, ಏತಾನ್, ಭೀಮಸ್ಯ, ಪೂರ್ವಭುಜಿತೋ, ನ, ಶಶಾಕ, ಏತತ್ ।

**ಅರ್ಥ** :- **ಭಾಗಿನೇಯ ಸಹಿತಂ** = ಅಕ್ಕನ ಮಕ್ಕಳಿಂದ ಸಹಿತನಾದ, **ತಂ** = ಆ ಪುರೋಚನನನ್ನು, **ಚ** = ಮತ್ತು, **ತಸ್ಯ** = ಆ ಪುರೋಚನನ, **ಪಾಪಾಂ** = ಪಾಪಿಷ್ಟಳಾದ, **ಭಗಿನೀಂ** = ಅಕ್ಕಳನ್ನು, **ಸಗೃಹಾಂ** = ಮನೆ ಸಹಿತವಾಗಿ, **ಪವಮಾನ ಸೂನುಃ** = ಭೀಮಸೇನನು, **ದದಾಹ** = ಸುಟ್ಟನು, **ಸಾಪಿ** = ಆ ಪುರೋಚನನ ಅಕ್ಕಳಾದರೂ, **ಏತಾನ್** = ಈ ಪಾಂಡವರನ್ನು, **ಗರಳೇನ** = ವಿಷದಿಂದ, **ಹಿ** = ನಿಶ್ಚಯವಾಗಿ, **ನಿಹಂತುಂ** = ಕೊಲ್ಲಲು, **ಆಗತಾ** = ಬಂದಿರುವಳು, **ಭೀಮಸ್ಯ** = ಭೀಮನ, **ಪೂರ್ವ ಭುಜಿತಃ ಚ** = ಮೊದಲು ಉಣ್ಣುವಿಕೆಯಿಂದಲೇ, **ಏತತ್** = ಈ ಕೊಲ್ಲುವ ಕೆಲಸವು, **ನಶಶಾಕ** = ಶಕ್ಯವಾಗಲಿಲ್ಲ.

**ತಾತ್ಪರ್ಯ** :- ಅನಂತರ ಪುರೋಚನನ ಅಕ್ಕನ ಮಕ್ಕಳ ಸಹಿತನಾದ ಪುರೋಚನನನ್ನು, ಪಾಪಿಷ್ಟಳಾದ ಅವನಕ್ಕಳನ್ನು ಮನೆ ಸಹಿತವಾಗಿ ಭೀಮಸೇನನು ಎಲ್ಲರನ್ನೂ ಸುಟ್ಟನು. ಅವಳು ಬಂದದ್ದು ಪಾಂಡವರನ್ನು ವಿಷವಿಕ್ಕಿ ಕೊಲ್ಲುವುದಕ್ಕಾಗಿ ಭೀಮನು ಮೊದಲು ಉಣ್ಣುತ್ತಿದ್ದರಿಂದ ಇದು ಸಾಧ್ಯವಾಗಲಿಲ್ಲ.

**ತಪ್ತಂ ತಯಾ ಸಸುತಯಾ ಚ ತಪೋ ನಿತಾಂತಂ**
**ಸ್ಯಾಂ ಸೂನುಭಿಃ ಸಹ ಬಲಾದದಿತಿಸ್ತಥಾಽಬ್ದಾತ್ ।**
**ತಸ್ಯಾ ಅದಾಚ್ಚ ಗಿರಿಶೋ ಯದಿ ಪುತ್ರಕೈಸ್ತ್ವಂ**
**ಯುಕ್ತಾ ನ ಯಾಸಿ ಮೃತಿಮೇಷ ವರಸ್ತವೇತಿ ॥ ೪೦ ॥**

**ಪದಚ್ಛೇದ** :- **ತಪ್ತಂ, ತಯಾ, ಸಸುತಯಾ, ಚ, ತಪಃ, ನಿತಾಂತಂ, ಸ್ಯಾಂ, ಸೂನುಭಿಃ, ಸಹ, ಬಲಾತ್, ಅದಿತಿಃ, ತಥಾ, ಅಭ್ಯಾತ್, ತಸ್ಯಾಃ, ಅದಾತ್, ಚ, ಗಿರಿಶಃ, ಯದಿ, ಪುತ್ರಕೈಃ, ತ್ವಂ, ಯುಕ್ತಾ, ನ, ಯಾಸಿ, ಮೃತಿಂ, ಏಷಃ, ವರಃ, ತವ, ಏತಿ ।**

**ಅರ್ಥ** :- **ಬಲಾತ್** = ತಪೋ ಬಲದಿಂದ, **ಸೂನುಭಿಃ** = ಸಹ ಮಕ್ಕಳೊಂದಿಗೆ (ದೇವತೆಗಳೊಂದಿಗೆ), **ಅದಿತಿಃ** = ಅದಿತಿಯು, **ಸ್ಯಾಂ** = ಆಗುತ್ತೇನೆ, **ಚ** = ಹೀಗೆಂದು, **ನಿತಾಂತಂ** = ಬಹಳವಾಗಿ, **ಸಸುತಯಾ** = ಮಕ್ಕಳಿಂದ ಸಹಿತಳಾದ, **ತಯಾ** = ಆ ಬೇಡಿಕೆಯಿಂದ, **ತಪಃ** = ತಪಸ್ಸು, **ತಪ್ತಂ** = ಮಾಡಲ್ಪಟ್ಟಿತು, **ತಥಾ** = ಆ ರೀತಿಯಿಂದಾಗಿ, **ಅಬ್ದಾತ್** = ಒಂದು ವರ್ಷ

ಕಳೆದಾಗ, ತಸ್ಯಾಃ ಚ = ಅವಳಿಗಾದರೂ, ಗಿರಿಶಃ = ರುದ್ರನು, ಯದಿ = ಒಂದು ವೇಳೆ, ತ್ವಂ = ನೀ, ಪುತ್ರಕೈಃ = ಮಕ್ಕಳೊಂದಿಗೆ, ಯುಕ್ತಾಂ = ಸಹಿತಳಾಗಿ, ಮೃತಿಂ = ಮರಣವನ್ನು, ನಯಾಸಿ = ಹೊಂದದಿದ್ದರೆ, ತರ್ಹಿ = ಆ ಪಕ್ಷದಲ್ಲಿ, ಏಷಃ = ಈ, ವರಃ = ವರವು, ತವ = ನಿನಗೆ, ಇತಿ = ಎಂದು, ಅದಾತ್ = ಕೊಟ್ಟನು.

ತಾತ್ಪರ್ಯ :- ಆ ಬೇಡಿತಿಯ (ಪುರೋಚನನ ಅಕ್ಕಳು) ತಪೋ ಬಲದಿಂದ ಅದಿತಿಯಾಗಬೇಕು. ದೇವತೆಗಳು ನನ್ನ ಮಕ್ಕಳಾಗಬೇಕು ಎಂದು ತನ್ನ ಮಕ್ಕಳೊಂದಿಗೆ ಬಹಳ ತಪಸ್ಸು ಮಾಡಿದಳು. ಒಂದು ವರ್ಷ ಕಳೆದಾಗ ಶಿವನು ಪ್ರತ್ಯಕ್ಷನಾಗಿ, ''ನೀನು ನಿನ್ನ ಮಕ್ಕಳೊಂದಿಗೆ ಸಾಯದಿದ್ದರೆ, ನಿನ್ನ ಅಭೀಷ್ಟವು ಸಿದ್ಧಿಸುವುದು'' ಎಂದು ವರವಿತ್ತನು.

**ಜಾನನ್ನಿದಂ ಸಕಲಮೇವ ಸ ಭೀಮಸೇನೋ**
**ಹತ್ವಾ ಸುತೈಃ ಸಹ ಕುಬುದ್ಧಿಮಿಮಾಂ ಹಿ ತಂ ಚ ।**
**ಭ್ರಾತೄಂಶ್ಚ ಮಾತರಮುದೂಹ್ಯ ಯಯೌ ಬಿಲಾತ್ ಸ**
**ನಿರ್ಗತ್ಯ ಭೀತಿವಶತೋಽಬಲತಾಂ ಪ್ರಯಾತಾನ್ ॥ ೪೧ ॥**

ಪದಚ್ಛೇದ :- ಜಾನನ್, ಇದಂ, ಸಕಲಂ, ಏವ, ಸಃ, ಭೀಮಸೇನಃ ಹತ್ವಾ, ಸುತೈಃ, ಸಹ, ಕುಬುದ್ಧಿಂ, ಇಮಾಂ, ಹಿ, ತಂ, ಚ, ಭ್ರಾತೄನ್, ಮಾತರಂ, ಉದೂಹ್ಯ, ಯಯೌ, ಬಿಲಾತ್, ಸಃ, ನಿರ್ಗತ್ಯ, ಭೀತಿವಶತ್, ಅಮಲತಾಂ, ಪ್ರಯಾತಾನ್ ।

ಅರ್ಥ :- ಇದಂ = ಈ, ಸಕಲಮೇವ = ಎಲ್ಲವನ್ನು, ಜಾನನ್ = ತಿಳಿದ, ಭೀಮಸೇನಃ = ಭೀಮಸೇನನು, ಸುತೈಃಸಹ = ಮಕ್ಕಳೊಂದಿಗೆ, ಕುಬುದ್ಧಿಂ = ದುಷ್ಟಬುದ್ಧಿಯುಳ್ಳ, ಇಮಾಂ = ಈ ಬೇಡಿತಿಯನ್ನು, ತಂ ಚ = ಆ ಪುರೋಚನನನ್ನು, ಹತ್ವಾ = ಕೊಂದು, ಭೀತಿವಶತಃ = ಹೆದರಿಕೆಯಿಂದ, ಅಬಲತಾಂ = ಬಲಗುಂದಿರುವ, ಪ್ರಯಾತಾನ್ = ಹೊರಟಿರುವ, ಭ್ರಾತೄಂಶ್ಚ = ಸಹೋದರರನ್ನು, ಚ = ಮತ್ತು, ಮಾತರಂ = ತಾಯಿಯನ್ನು, ಉದೂಹ್ಯ = ಹೊತ್ತುಕೊಂಡು, ಸಃ = ಆ ಭೀಮನು, ಬಿಲಾತ್ = ಸುರಂಗಮಾರ್ಗದಿಂದ, ಯಯೌ = ಹೋದನು.

ತಾತ್ಪರ್ಯ :- ಎಲ್ಲ ವಿಷಯವನ್ನು ತಿಳಿದ ಭೀಮನು ಆ ಬೇಡಿತಿಯನ್ನು ಮಕ್ಕಳೊಂದಿಗೆ ಹಾಗೆ ಪುರೋಚನನನ್ನು ಕೊಂದು, ಸೋದರರನ್ನು ತಾಯಿಯನ್ನು ಅವರು ಬಲಗುಂದಿದ್ದರಿಂದ ಹೊತ್ತುಕೊಂಡೇ ಸುರಂಗಮಾರ್ಗದಿಂದ ಹೊರಗೆ ನಡೆದನು.

ಜ್ಞಾತ್ವಾಪುರೋಚನವಧಂ ಯದಿ ಭೀಷ್ಮಮುಖ್ಯೈ-
ರ್ವೈಚಿತ್ರವೀರ್ಯತನಯಾ ಅಭಿಯೋಧಯೇಯುಃ ।
ಕಿಂ ನೋ ಭವೇದಿತಿ ಭಯಂ ಸುಮಹದ್ ವಿವೇಶ
ಭೀಮಂತ ಹ್ವರ್ತೇ ಚ ತನಯಾನ್ ಸಕಲಾನ್ ಪೃಥಾಯಾಃ ॥ ೪೨ ॥

ಪದಚ್ಛೇದ :- ಜ್ಞಾತ್ವಾ, ಪುರೋಚನವಧಂ, ಯದಿ, ಭೀಷ್ಮಮುಖ್ಯೈಃ, ವೈಚಿತ್ರವೀರ್ಯತನಯಾ, ಅಭಿಯೋದಯೇಯುಃ, ಕಿಂ, ನಃ, ಭವೇತ್, ಇತಿ, ಭಯಂ, ಸುಮಹತ್, ವಿಶೇಶ, ಭೀಮಂ, ತು, ಋತೇ, ಚ, ತಸ್ಯಸೂನ್, ಸಕಲಾನ್, ಪೃಥಾಯಾಃ ।

ಅರ್ಥ :- ಪುರೋಚನವಧಂ = ಪುರೋಚನನ ವಧೆಯನ್ನು, ಜ್ಞಾತ್ವಾ = ತಿಳಿದು, ಯದಿ = ಒಂದುವೇಳೆ, ಭೀಷ್ಮಮುಖ್ಯೈಃ = ಭೀಷ್ಮ ಮೊದಲಾದವರಿಂದ ಕೂಡಿಕೊಂಡು, ವೈಚಿತ್ರವೀರ್ಯತನಯಾಃ = ದುರ್ಯೋಧನಾದಿಗಳು, **ಅಭಿಯೋಧಯೇಯುಃ** = ಯುದ್ಧ ಮಾಡಿದರೆ, **ತರ್ಹಿ** = ಆ ಪಕ್ಷದಲ್ಲಿ, **ನಃ** = ನಮಗೆ, **ಕಿಂ** = ಏನು, **ಭವೇತ್** = ಆದೀತು, **ಇತಿ** = ಎಂದು, **ತು** = ಆದರೆ, **ಭೀಮಂ ಋತೇ** = ಭೀಮನನ್ನು ಹೊರತುಪಡಿಸಿ, **ಪೃಥಾಯಾಃ** = ಕುಂತಿಯ, **ಸಕಲಾನ್** = ಎಲ್ಲಾ, **ತನಯಾನ್ ಚ** = ಮಕ್ಕಳನ್ನು, **ಸುಮಹತ್** = ಬಹಳವಾದ, **ಭಯಂ** = ಹೆದರಿಕೆಯು, **ವಿವೇಶ** = ಪ್ರವೇಶಿಸಿತು.

**ತಾತ್ಪರ್ಯ** :- ಪುರೋಚನನ ಸಾವನ್ನು ತಿಳಿದ ಕೌರವರು ಭೀಷ್ಮಾದಿ- ಗಳೊಂದಿಗೆ ಒಂದುವೇಳೆ ಯುದ್ಧಕ್ಕೆ ಬಂದರೆ ಆಗ ನಮ್ಮ ಗತಿಯೇನು? ಎಂಬ ಭಯವು ಭೀಮನನ್ನು ಬಿಟ್ಟು ಕುಂತಿಯ ಎಲ್ಲ ಮಕ್ಕಳನ್ನು ಪ್ರವೇಶಿಸಿತು.

ಭೀಮೋಽಭಯೋಽಪಿ ಗುರುಭಿಃ ಸ್ವಮುಖೇನ ಯುದ್ಧ-
ಮಪ್ರೀಯಮಾಣ ಉತ ಧರ್ಮಜವಾಕ್ಯಹೇತೋಃ ।

**ಊಹ್ಯೈವ ತಾನಪಿ ಯಯೌ ದ್ಯುನದೀಂ ಚ ತೀರ್ತ್ವಾ**
**ಕ್ಷತ್ತ್ರಾಽತಿಸೃಷ್ಟಮಧಿರುಹ್ಯ ಜಲಪ್ರಯಾಣಮ್ ॥ ೪೩ ॥**

**ಪದಚ್ಛೇದ :-** ಭೀಮಃ, ಅಭಯಃ, ಅಪಿ, ಗುರುಭಿಃ, ಸ್ವಮುಖೇನ, ಯುದ್ಧಂ, ಅಪ್ರಿಯಮಾಣಃ, ಉತ, ಧರ್ಮಜವಾಕ್ಯಹೇತೋಃ, ಊಹ್ಯ, ಏವ, ತಾನ್, ಅಪಿ, ಯಯೌ, ದ್ಯುನದೀಂ, ಚ, ತೀರ್ತ್ವಾ, ಕ್ಷತ್ತ್ರಾ ಅತಿಸೃಷ್ಟಂ, ಅಧಿರುಹ್ಯ, ಜಲಪ್ರಯಾಣಮ್ ।

**ಅರ್ಥ :- ಅಭಯೋಽಪಿ** = ಭಯರಹಿತನಾಗಿದ್ದರೂ, **ಭೀಮಃ** = ಭೀಮನು, **ಗುರುಭಿಃ** = ಗುರುಹಿರಿಯರೊಂದಿಗೆ, **ಸ್ವಮುಖೇನ** = ನೇರವಾಗಿ, **ಯುದ್ಧಂ** = ಯುದ್ಧವನ್ನು, **ಅಪ್ರಿಯಮಾಣಃ** = ಇಷ್ಟಪಡದವನಾಗಿ, **ಉತ** = ಆದ್ದರಿಂದ, **ಧರ್ಮರಾಜ ವಾಕ್ಯಹೇತೋಃ** = ಧರ್ಮರಾಜನ ಮಾತಿನಂದೆ, **ತಾನ್ ಅಪಿ** = ಆ ಸಹೋದರರನ್ನು, **ಊಹ್ಯೈವ** = ಹೊತ್ತುಕೊಂಡೇ, **ಕ್ಷತ್ತ್ರಾತಿಸೃಷ್ಟಂ** = ವಿದುರನಿಂದ ಕೊಡಲ್ಪಟ್ಟ (ನೌಕೆಯನ್ನು) **ಅಧಿರುಹ್ಯ** = ಏರಿ, **ದ್ಯುನದೀಂ ಚ** = ಗಂಗಾನದಿಯನ್ನು, **ತೀರ್ತ್ವಾ** = ದಾಟಿ, **ಜಲಪ್ರಯಾಣಂ** = ಜಲಪ್ರಯಾಣವನ್ನು, **ಯಯೌ** = ಮಾಡಿದನು.

**ತಾತ್ಪರ್ಯ :-** ಭೀಮನು ಭಯರಹಿತನಾಗಿದ್ದರೂ ಗುರುಹಿರಿಯರೊಡನೆ ನೇರವಾಗಿ ಯುದ್ಧ ಮಾಡಲು ಇಚ್ಛೆಯಿಲ್ಲದವನಾಗೀ ಧರ್ಮರಾಜನು ಹೇಳಿದಂತೆ ಭೀಮನು ಅವರನ್ನು ಹೋತ್ತುಕೊಂಡು ವಿದುರ ಕಳಿಸಿದ ನೌಕೆಯನ್ನೇರಿ ಪ್ರಯಾಣಿಸಿದನು.

**ವಿಶ್ವಾಸಿತಾ ವಿದುರಪೂರ್ವವಚೋಭಿರೇವ**
**ದಾಶೋದಿತಾಭಿರಧಿರುಹ್ಯ ಚ ಭೀಮಪೃಷ್ಠಮ್ ।**
**ಸರ್ವೇ ಯಯುರ್ವನಮಥಾಭ್ಯುದಿತೇ ಚ ಸೂರ್ಯೇ**
**ದೃಷ್ಟ್ವೈವ ಸಪ್ತ ಮೃತಕಾನರುದಂಶ್ಚ ಪೌರಾಃ ॥ ೪೪ ॥**

**ಪದಚ್ಛೇದ :-** ವಿಶ್ವಾಸಿತಾ, ವಿದುರಪೂರ್ವವಾಚೋಭಿಃ, ಏವ, ದಾಶೋದಿತಾಭಿಃ, ಅಧಿರುಹ್ಯ, ಚ, ಭೀಮಪೃಷ್ಠಂ, ಸರ್ವೇ, ಯಯುಃ, ಏವಂ, ಅಥ, ಅಭ್ಯುದಿತೇ, ಚ ಸೂರ್ಯೇ, ದೃಷ್ಟ್ವಾ, ಏವ, ಸಪ್ತಮೃತಕಾನ್, ಅರುದನ್, ಚ ಪೌರಾಃ ।

**ಅರ್ಥ** :- **ವಿದುರಪೂರ್ವ ವಚೋಭಿಃ** = (ಅಂಬಿಗರಿಂದ ಹೇಳಿಸಿದ) ವಿದುರನ ಮೊದಲ ಮಾತುಗಳಿಂದ, **ದಾಶೋದಿತಾಭಿಃ** = ಬೆಸ್ತರಿಂದ ಹೇಳಲ್ಪಟ್ಟ ಮಾತುಗಳಿಂದ, **ವಿಶ್ವಾಸಿತಾಃ** = ನಂಬಿದವರಾಗಿ, **ಸರ್ವೇ** = ಎಲ್ಲರೂ, **ಭೀಮಪೃಷ್ಠಂ** = ಭೀಮನ ಬೆನ್ನನ್ನು, **ಅಧಿರುಹ್ಯ ಏವ** = ಏರಿಯೋ, **ವನಂ** = ಕಾಡನ್ನು ಕುರಿತು, **ಯಯುಃ** = ಹೋದರು, **ಸೂರ್ಯೇ** = ಸೂರ್ಯನು, **ಅಭ್ಯುದಿತೇಸತಿ** = ಉದಯಿಸುತ್ತಿರಲು, **ಪೌರಾಃ** = ಪಟ್ಟಣಿಗರು, **ಸಪ್ತಮೃತಕಾನ್** = ಏಳುಜನ ಸತ್ತವರನ್ನು, **ದೃಷ್ಟ್ವಾ** = ನೋಡಿ, **ಅರುದನ್** = ಅತ್ತರು.

**ತಾತ್ಪರ್ಯ** :- ಅಂಬಿಗರಿಂದ ಹಾಗೂ ವಿದುರನಿಂದ ಹಿಂದೆ ಹೇಳಿದ ಮಾತನ್ನು ಕೇಳಿ ವಿಶ್ವಾಸಗೊಂಡು ಎಲ್ಲರು ಭೀಮನ ಹೆಗಲನ್ನು ಏರಿ ಕಾಡಿಗೆ ಹೋದರು, ಸೂರ್ಯ ಉದಯಿಸಿದಾಗ ಏಳು ಮಂದಿ ಸತ್ತದ್ದನ್ನು ಕಂಡು ಪಟ್ಟಣಿಗರು ಅತ್ತರು.

**ಹಾ ಪಾಂಡವಾನದಹದೇಷ ಹಿ ಧಾರ್ತರಾಷ್ಟ್ರೋ**
**ಧರ್ಮಸ್ಥಿತಾನ್ ಕುಮತಿರೇವ ಪುರೋಚನೇನ ।**
**ಸೋಽಪ್ಯೇಷ ದಗ್ಧ ಇಹ ದೈವವಶಾತ್ ಸುಪಾಪಃ**
**ಕೋ ನಾಮ ಸತ್ಸು ವಿಷಮಃ ಪ್ರಭವೇತ್ ಸುಖಾಯ ।। ೪೫ ।।**

**ಪದಚ್ಛೇದ** :- **ಹಾ, ಪಾಂಡವಾನ್, ಅದಹತ್, ಏಷಃ, ಹಿ, ಧಾರ್ತರಾಷ್ಟ್ರಃ, ಧರ್ಮಸ್ಥಿತಾನ್, ಕುಮತಿಃ, ಏವ, ಪುರೋಚನೇನ, ಸಃ, ಅಪಿ, ಏಷಃ, ದಗ್ಧಃ, ಇಹ, ದೈವವಶಾತ್, ಸುಪಾಪಃ, ಕಃ ನಾಮ, ಸತ್ಸು, ವಿಷಮಃ, ಪ್ರಭವೇತ್, ಸುಖಾಯ ।**

**ಅರ್ಥ** :- **ಹಾ** = ಅಯ್ಯೋ, **ಏಷಃ** = ಈ, **ಕುಮತಿಃ** = ದುಷ್ಟಬುದ್ಧಿಯುಳ್ಳ, **ಧಾರ್ತರಾಷ್ಟ್ರಃ ಏವ** = ದುರ್ಯೋಧನನೇ, **ಧರ್ಮಸ್ಥಿತಾನ್** = ಧರ್ಮಿಷ್ಠರಾದ, **ಪಾಂಡವಾನ್** = ಪಾಂಡವರನ್ನು, **ಪುರೋಚನೇನ** = ಪುರೋಚನನಿಂದ, **ಅದಹತ್** = ಸುಡಿಸಿದನು, **ದೈವವಶಾತ್** = ದೈವವಶದಿಂದ (ಆಕಸ್ಮಿಕವಾಗಿ), **ಸುಪಾಪಃ** = ಮಹಾಪಾಪಿಷ್ಠನಾದ, **ಸೊಽಪ್ಯೇಷಃ** = ಆ ಪುರೋಚನನು, **ಇಹ** = ಈ ಅಗ್ನಿಯಲ್ಲಿ, **ದಗ್ಧಃ** = ಸುಡಲ್ಪಟ್ಟನು, **ಸತ್ಸು** = ಸಜ್ಜನರಾದ ಪಾಂಡವರಲ್ಲಿ, **ವಿಷಮಃ** = ದ್ರೋಹ

**ಬಗೆಯುವವನು, ಕೋನಾಮ** = ಯಾರು ತಾನೆ, **ಸುಖಾಯ ಪ್ರಭವೇತ್** = ಸುಖ ಹೊಂದಿಯಾನು.

**ತಾತ್ಪರ್ಯ** :- ಅಯ್ಯೋ ದುಷ್ಟ ಬುದ್ಧಿಯ ದುರ್ಯೋಧನ ಧರ್ಮಿಷ್ಠರಾದ ಪಾಂಡವರನ್ನು ಪುರೋಚನನಿಂದ ಕೊಲ್ಲಿಸಿದನು. ಪಾಪಿಯಾದ ಪುರೋಚನನೂ ದೈವವಶದಿಂದ ಇಲ್ಲಿ ಸುಟ್ಟುಹೋದನು. ಸಜ್ಜನರಿಗೆ ದ್ರೋಹ ಮಾಡುವವನು ಯಾರು ತಾನೆ ಸುಖವಾಗಿರುತ್ತಾರೆ ? ಎಂದು ಪಟ್ಟಣಿಗರು ಹೇಳಿದರು.

**ಪೌರೇಭ್ಯ ಏವ ನಿಖಿಲೇನ ಚ ಭೀಷ್ಮಮುಖ್ಯಾ**
**ವೈಚಿತ್ರವೀರ್ಯಸಹಿತಾಸ್ತು ನಿಶಮ್ಯ ಹೇತಿ ।**
**ಊಚುಃ ಸುದುಃಖಿತಧಿಯೋಽಥ ಸುಯೋಧನಾದ್ಯಾಃ**
**ಕ್ಷತ್ತಾ ಮೃಷೈವ ರುರುದುರ್ಯುಯುಜುಶ್ಚ ಕರ್ಮ ॥ ೪೬ ॥**

**ಪದಚ್ಛೇದ** :- ಪೌರೇಭ್ಯಃ, ಏವ, ನಿಖಿಲೇನ, ಚ, ಭೀಷ್ಮಮುಖ್ಯಾ, ವೈಚಿತ್ರವೀರ್ಯ ಸಹಿತಾಃ, ತು, ನಿಶಮ್ಯ, ಹೇತಿ, ಊಚುಃ, ಸದುಃಖಿತಧಿಯಃ, ಅಥ, ಸುಯೋದನಾದ್ಯಾಃ, ಕ್ಷತ್ತಾ, ಮೃಷ್ಟವ, ರುರುದುಃ, ಯುಯುಜುಃ ।

**ಅರ್ಥ** :- **ಅಥ** = ಅನಂತರ, **ನಿಖಿಲಂ** = ಎಲ್ಲ ವೃತ್ತಾಂತವನ್ನು, **ಪೌರೇಭ್ಯ ಏವ** = ಪಟ್ಟಣಿಗರಿಂದಲೇ, **ನಿಶಮ್ಯ** = ಕೇಳಿ, **ವೈಚಿತ್ರ್ಯವೀರ್ಯಸಹಿತಾಃ** = ಧೃತರಾಷ್ಟ್ರನಿಂದ ಸಹಿತರಾದ, **ಸುದುಃಖಿಧಿಯಃ** = ಭಿನ್ನ ಮನಸ್ಕರಾದ, **ಭೀಷ್ಮ ಮುಖ್ಯಾಃ** = ಭೀಷ್ಮ ಪ್ರಮುಖರು, **ಹಾ** = ಅಯ್ಯೋ, **ಇತಿ** = ಎಂದು, **ಊಚುಃ** = ಹೇಳಿದರು, **ತು** = ಆದರೆ, **ಸುಯೋಧನಾದ್ಯಾಃ** = ದುರ್ಯೋಧನಾದಿಗಳು, **ಚ** = ಮತ್ತು, **ಕ್ಷತ್ತಾ** = ವಿದುರನು, **ಮೃಷೈವ** = ಸುಳ್ಳಾಗಿವೇ (ಸುಮ್ಮನೆ), **ರುರುದುಃ** = ಅತ್ತರು, **ಚ** = ಮತ್ತು, **ಕರ್ಮ** = ಉತ್ತರ ಕ್ರಿಯೆಯನ್ನು, **ಯುಯುಜುಃ** = ಮಾಡಿದರು.

**ತಾತ್ಪರ್ಯ** :- ಪಟ್ಟಣಿಗರಿಂದಲೇ ಎಲ್ಲ ವಾರ್ತೆಯನ್ನು ತಿಳಿದ ಭೀಷ್ಮಾದಿಗಳೂ ಧೃತರಾಷ್ಟ್ರನೂ ಅಯ್ಯೋ ಎಂದರು ಭಿನ್ನ ಮನಸ್ಕರೂ ಆದರು. ಆದರೆ ದುರ್ಯೋಧನಾದಿಗಳು ಮತ್ತು ವಿದುರನು ಅತ್ತಂತೆ ನಡೆಸಿದರು. ಉತ್ತರಕ್ರಿಯೆಯನ್ನು ಮಾಡಿದರು.

ಭೀಮೋಽಪ್ಯುದೂಹ್ಯ ವನಮಾಪ ಹಿಡಿಂಬಕಸ್ಯ
ಭ್ರಾತೄನ್ ಪೃಥಾಂ ಚ ತೃಷಿತೈರಭಿಯಾಚಿತಶ್ಚ ।
ಪಾನೀಯಮುತ್ತರಪಟೇಽಂಬುಜಪತ್ರನದ್ಧಂ
ದೂರಾದುದೂಹ್ಯ ದದೃಶೇ ಸ್ವಪತೋಽಥ ತಾಂಶ್ಚ ॥ ೪೭ ॥

ಪದಚ್ಛೇದ :- ಭೀಮಃ, ಅಪಿ, ಉದೂಹ್ಯ, ವನಂ, ಆಪ, ಹಿಡಿಂಬಕಸ್ಯ, ಭ್ರಾತೄನ್, ಪೃಥಾಂ, ಚ, ತೃಷಿತೈಃ, ಅಭಿಯಾಚಿತಃ, ಚ, ಪಾನೀಯಂ, ಉತ್ತರಪಟೇ, ಅಂಭುಜಪತ್ರನದ್ಧಂ, ದೂರಾತ್, ಉದೂಹ್ಯ, ದದೃಶೇ, ಸ್ವಪತಃ, ಅಥ, ತಾನ್, ಚ ।

ಅರ್ಥ :- ಭೀಮಃ = ಭೀಮನು, ಭ್ರಾತೃನ್ = ಸಹೋದರರನ್ನು, ಪೃಥಾಂ ಚ = ಕುಂತಿಯನ್ನು, ಊದುಹ್ಯ = ಹೊತ್ತುಕೊಂಡು, ಹಿಡಿಂಬಕಸ್ಯ = ಹಿಡಿಂಬಕನ, ವನಂ = ಕಾಡನ್ನು, ಆಪ = ಹೊಂದಿದನು, ಚ = ಮತ್ತು, ತೃಷಿತೈ = ಬಾಯಾರಿದ್ದರಿಂದ, ಅಭಿಯಾಚಿತಃ = (ನೀರನ್ನು) ಬೇಡಿದವನಾಗಿ, ಬೇಡಿದ್ದರಿಂದ ಅಂಬುಜಪತ್ರನದ್ಧ = ಕಮಲದ ಎಲೆಯಲ್ಲಿ ಹಿಡಿಯಲ್ಪಟ್ಟ, ಪಾನೀಯಂ = ನೀರನ್ನು, ಉತ್ತರಪಟೇ = ಉತ್ತರೀಯೆದಲ್ಲಿ, ಉದೂಹ್ಯ = ಹೋತ್ತು ತಂದು, ಅಥ ಚ = ಅನಂತರ, ಸ್ವಪತಃ = ಮಲಗಿರುವ, ತಾನ್ = ಆ ಸಹೋದರರನ್ನು, ದೂರಾತ್ = ದೂರದಿಂದಲೇ, ದದೃಶೇ = ನೋಡಿದನು.

ತಾತ್ಪರ್ಯ :- ಭೀಮನು ಸೋದರರನ್ನು ಕುಂತಿಯನ್ನು ಹೋತ್ತು ಹಿಡಿಂಬಕ ವನಕ್ಕೆ ಬಂದನು. ಅವರು ಬಾಯಾರಿ ನೀರು ಬೇಡಿದಾಗ ತಾವರೆ ಎಲೆಯಲ್ಲಿ ಹೋತ್ತು ತಂದ ಅನಂತರ ಮಲಗಿ ನಿದ್ರಿಸುತ್ತಿದ್ದ ಸಹೋದರರನ್ನು ಸ್ವಲ್ಪ ದೂರದಿಂದ ನೋಡಿದನು.

ರಕ್ಷಾರ್ಥಮೇವ ಪರಿಜಾಗ್ರತಿ ಭೀಮಸೇನೇ
ರಕ್ಷಃ ಸ್ವಸಾರಮಭಿಯಾಪಯತೇ ಹಿಡಿಂಬೀಮ್ ।
ಸಾ ರೂಪಮೇತ್ಯ ಶುಭಮೇವ ದದರ್ಶ ಭೀಮಂ
ಸಾಕ್ಷಾತ್ ಸಮಸ್ತಶುಭಲಕ್ಷಣಸಾರಭೂತಮ್ ॥ ೪೮ ॥

ಪದಚ್ಛೇದ :- ರಕ್ಷಾರ್ಥಂ, ಏವ, ಪರಿಜಾಗ್ರತಿ, ಭೀಮಸೇನೇ, ರಕ್ಷಃ, ಸ್ವಸಾರಂ, ಅಭಿಯಾಪಯತೇ, ಹಿಡಿಂಬೀಮ್, ಸಾ, ರೂಪಂ ಏತ್ಯ, ಶುಭಮೇವ, ದದರ್ಶ, ಭೀಮಂ, ಸಾಕ್ಷಾತ್, ಸಮಸ್ತ ಶುಭಲಕ್ಷಣಸಾರಭೂತಂ ।

**ಅರ್ಥ** :- (ತೇಷಾಂ = ಆ ಸಹೋದರರ), **ರಕ್ಷಾರ್ಥಮೇವ** = ರಕ್ಷಣೆಗಾಗಿಯೇ, **ಭೀಮಸೇನೇ** = ಭೀಮನು, **ಪರಿಜಾಗ್ರತಿ** = ಎಚ್ಚರದಿಂದಿರಲು, **ರಕ್ಷಃ** = ರಾಕ್ಷಸನಾದ ಹಿಡಿಂಬಕನು, **ಸ್ವಸಾರಂ** = ತನಗೆ, ಇಷ್ಟವಾದ ಮಾಂಸವನ್ನು, (**ಆನೇತುಂ** = ತರಲು), **ಹಿಡಿಂಬೀಂ** = ತಂಗಿಯಾದ ಹಿಡಿಂಬೆಯನ್ನು, **ಅಭಿಯಾಪಯತೇ** = ಕಳಿಹಿಸುತ್ತಾನೆ, **ಸಾ** = ಆ ಹಿಡಿಂಬೆಯಾದರೂ, **ಶುಭಮೇವ** = ಸುಂದರವಾದ, **ರೂಪಂ** = ರೂಪವನ್ನು, **ಏತ್ಯ** = ಹೊಂದಿ, **ಸಾಕ್ಷಾತ್** = ಸಾಕ್ಷಾತಾಗಿ, **ಸಮಸ್ತಶುಭ ಲಕ್ಷಣ ಸಾರಭೂತಂ** = **ಸಮಸ್ತ** - ಎಲ್ಲಾ, **ಶುಭ** - ಮಂಗಳಕರವಾದ, **ಲಕ್ಷಣ** - ಲಕ್ಷಣಗಳ, **ಸಾರಭೂತಂ** - ಸಾರನಾದ, **ಭೀಮಂ** = ಭೀಮಸೇನನನ್ನು, **ದದರ್ಶ** = ನೋಡಿದಳು.

**ತಾತ್ಪರ್ಯ** :- ಪಾಂಡವರ ರಕ್ಷಣೆಗಾಗಿ ಭೀಮನು ಎಚ್ಚೆತ್ತು ಕುಳಿತಾಗ ಹಿಡಿಂಬ ರಾಕ್ಷಸನು ನರಮಾಂಸಕ್ಕಾಗಿ ತಂಗಿಯಾದ ಹಿಡಿಂಬೆಯನ್ನು ಕಳುಹಿಸಿದನು. ಅವಳಾದರೂ ಸುಂದರವಾದ ರೂಪವನ್ನು ಪಡೆದು ಸಾಕ್ಷಾತ್ ಎಲ್ಲ ಮಂಗಳಕರ ಲಕ್ಷಣ ಸಾರಭೂತನಾದ ಭೀಮನನ್ನು ಕಂಡಳು.

**ಸಾ ರಾಕ್ಷಸೀತನುಮವಾಪ ಸುರೇಂದ್ರಲೋಕ-**
**ಶ್ರೀರೇವ ಶಕ್ರದಯಿತಾ ತ್ವಪರೈವ ಶಚ್ಯಾಃ ।**
**ಶಾಪಾತ್ ಸ್ಪೃಧಾ ಪತಿಮವಾಪ್ಯ ಚ ಮಾರುತಂ ಸಾ**
**ಪ್ರಾಪ್ತುಂ ನಿಜಾಂ ತನುಮಯಾಚತ ಭೀಮಸೇನಮ್ ॥ ೪೯ ॥**

ಪದಚ್ಛೇದ :- ಸಾ, ರಾಕ್ಷಸೀತನುಂ, ಅವಾಪ, ಸುರೇಂದ್ರಲೋಕ ಶ್ರೀರೇವ, ಶಕ್ರದಯಿತಾ, ಅಪರಾ, ಏವ, ಶಚ್ಯಾಃ, ಶಾಪಾತ್, ಸ್ಪೃಧಾ, ಪತಿಂ, ಅವಾಪ್ಯ, ಚ, ಮಾರುತಂ, ಸಾ, ಪ್ರಾಪ್ತುಂ, ನಿಜಾಂ, ತನುಂ, ಅಯಾಚತ, ಭೀಮಸೇನಂ ।

**ಅರ್ಥ** :- **ಸಾ** = ಆ ಹಿಡಿಂಬೆಯು, **ಶಚ್ಯಾಃ** = ಶಚೀದೇವಿಗೆ, **ಅಪರಾ** = ಇನ್ನೊಬ್ಬ, **ಶಕ್ರದಯಿತಾ** = ಇಂದ್ರನ ಹೆಂಡತಿಯು, **ಸುರೇಂದ್ರಲೋಕಶ್ರೀರೇವ** = **ಸುರೇಂದ್ರಲೋಕ** - ದೇವಲೋಕದ, **ಶ್ರೀರೇವ** = ಸಂಪತ್ತಿಗೆ ಅಭಿಮಾನಿಯು, **ಶಚ್ಯಾಃ** = ಶಚೀದೇವಿಯ, **ಪತಿಂ** = ಗಂಡನಾದ ಇಂದ್ರನನ್ನು, **ಸ್ಪೃಧಾ** = ಸ್ಪರ್ಧೆಯಿಂದ, **ಪತಿಂ** = ಗಂಡನನ್ನಾಗಿ, **ಅವಾಪ್ಯ** = ಹೊಂದಿ,

**ಶಚ್ಯಾಃ** = ಶಚೀದೇವಿಯ, **ಶಾಪಾತ್** = ಶಾಪದಿಂದ, **ರಾಕ್ಷಸತನುಂ** = ರಾಕ್ಷಸ ಶರೀರವನ್ನು, **ಅವಾಪ** = ಹೊಂದಿದಳು, **ಸಾಚ** = ಅವಳಾದರೂ, **ನಿಜಾಂ** = ತನ್ನದ್ದಾದ, **ತನುಂ** = ದೇವತಾ ಶರೀರವನ್ನು, **ಪ್ರಾಪ್ತುಂ** = ಹೊಂದಲು, **ಮಾರುತಿಂ** = ವಾಯುಪುತ್ರನಾದ, **ಭೀಮಸೇನಂ** = ಭೀಮಸೇನನನ್ನು, **ಪತಿಂ** = ಗಂಡನನ್ನಾಗಿ, **ಅಯಾಚತ** = ಬೇಡಿದಳು.

**ತಾತ್ಪರ್ಯ** :- ಹಿಂದೆ ಹಿಡಿಂಬೆಯು ದೇವಲೋಕದ ಸಂಪತ್ತಿಗೆ ಅಭಿಮಾನಿನಿಯಾದ ಶ್ರೀ ಎಂಬ ಅಪ್ಸರೆಯು. ಅವಳು ಇಂದ್ರನ ಪತ್ನಿಯಾಗಿ ಶಚಿಯೊಡನೆ ಸ್ಪರ್ಧಿಸಿದ್ದರಿಂದ, ಶಚಿಯ ಶಾಪದಿಂದ ರಾಕ್ಷಸ ಜನ್ಮ ಪಡೆದಳು. ಈಗ ಭೀಮನನ್ನು ಪತಿಯನ್ನಾಗಿ ಪಡೆದು, ತನ್ನ ನಿಜ ರೂಪವನ್ನು ಹೊಂದುವ ಉದ್ದೇಶದಿಂದ ಭೀಮನನ್ನು ಬೇಡಿದಳು.

**ತಾಂ ಭೀಮ ಆಹ ಕಮನೀಯತನುಂ ನ ಪೂರ್ವಂ**
**ಜ್ಯೇಷ್ಠಾದುಪೈಮಿ ವನಿತಾಂ ನಹಿ ಧರ್ಮ ಏಷಃ ।**
**ಸಾ ಚಾಽಹ ಕಾಮವಶಗಾ ಪುನರೇತದೇವ**
**ಸ್ವಾವೇಶಯುಗ್ಘಿ ಮರುದಗ್ರ್ಯಪರಿಗ್ರಹಸ್ಯ ॥ ೫೦ ॥**

**ಪದಚ್ಛೇದ** :– ತಾಂ, ಭೀಮ, ಆಹ, ಕಮನೀಯತನುಂ, ನ ಪೂರ್ವಂ, ಜ್ಯೇಷ್ಠಾತ್, ಉಪೈಮಿ, ನ, ಹಿ, ಧರ್ಮ, ಏಷಃ, ಸಾ, ಚ, ಆಹ, ಕಾಮವಶಗಾ, ಪುನಃ, ಏತತ್, ಏವ, ಸ್ವಾವೇಶ, ಯುಕ್, ಹಿ, ಮರುದಗ್ರ್ಯ, ಪರಿಗ್ರಹಸ್ಯ ।

**ಅರ್ಥ** :- **ಭೀಮಃ** = ಭೀಮನು, **ಕಮನೀಯ ತನುಂ** = ಸುಂದರವಾದ ದೇಹವುಳ್ಳ, **ತಾಂ** = ಆ ಹಿಡಿಂಬಿಯನ್ನು ಕುರಿತು, **ಆಹ** = ಹೇಳಿದನು, **ಜ್ಯೇಷ್ಠಾತ್** = ಹಿರಿಯ ಅಣ್ಣನಿಗಿಂತಲೂ, **ಪೂರ್ವಂ** = ಮೊದಲು, **ವನಿತಾಂ** = (ಯಾವ) ಹೆಣ್ಣನ್ನು, **ನ ಉಪೈಮಿ** = ಮದುವೆಯಾಗಲಾರೆ, **ಏಷ ಹಿ** = ಅದು, **ಧರ್ಮಃ ನ** = ಧರ್ಮವಲ್ಲ, **ಸಾ ಚ** = ಆ ಹಿಡಂಬಿಯಾದರೋ, **ಕಾಮವಶಗಾ** = ಕಾಮಪರವಶಳಾಗಿ, **ಪುನಃ ಏವ** = ಮತ್ತೆ, **ಏತದೇವ** = ಹೇಳಿದ್ದನ್ನೇ, **ಆಹ** = ಹೇಳತೊಡಗಿದಳು, **ಹಿ** = ಏಕೆಂದರೆ, **ಮರುದಗ್ರ್ಯ** = ಮುಖ್ಯಪ್ರಾಣನ, **ಪರಿಗೃಹಸ್ಯ** = ಹೆಂಡತಿಯ (ಭಾರತೀದೇವಿಯ), **ಸ್ವಾವೇಶಯುಕ್** = ಆವೇಶ ಯುಕ್ತಳಾಗಿದ್ದಳು.

ತಾತ್ಪರ್ಯ :- ಸುಂದರವಾದ ಹಿಡಿಂಬಿಗೆ ಭೀಮನು ಹೇಳಿದನು. ಹಿರಿಯನಾದ ಅಣ್ಣನಿಗಿಂತ ಮುಂಚೆ ಯಾವ ಹೆಣ್ಣನ್ನು ಮದುವೆಯಾಗಲಾರೆ. ಅದು ಧರ್ಮವೂ ಅಲ್ಲ ಆದರೂ ಹಿಡಿಂಬಿ ಕಾಮವಶಳಾಗಿ ಪುನಃ ಹೇಳಿದ್ದನ್ನೇ ಹೇಳತೊಡಗಿದಳು. ಏಕೆಂದರೆ ಅವಳು ಭಾರತೀದೇವಿಯ ಆವೇಶಯುಕ್ತಳಾಗಿದ್ದಳು.

ಸಾ ಭಾರತೀ ವರಮಿಮಂ ಪ್ರದದಾವಮುಷ್ಯೈ
ಸ್ವಾವೇಷಮಾತ್ಮದಯಿತಸ್ಯ ಚ ಸಂಗಮೇನ ।
ಶಾಪಾದ್ ವಿಮುಕ್ತಿಮತಿತೀವ್ರತಪಃಪ್ರಸನ್ನಾ
ತೇನಾಽಹ ಸಾ ನಿಜತನುಂ ಪವಮಾನಸೂನೋಃ ॥ ೫೧ ॥

ಪದಚ್ಛೇದ :- ಸಾ, ಭಾರತೀ, ವರಂ, ಇಮಂ, ಪ್ರದದಾ, ಅಮುಷ್ಯೈ, ಸ್ವಾವೇಶಂ, ಆತ್ಮದಯಿತಸ್ಯ, ಚ, ಸಂಗಮೇನ, ಶಾಪಾತ್, ವಿಮುಕ್ತಿಂ, ಅತಿ ತೀವ್ರತಪಃ, ಪ್ರಸನ್ನಾ, ತೇನ, ಆಹ, ಸಾ, ನಿಜತನುಂ, ಪವಮಾನಸೂನುಃ ।

ಅರ್ಥ :- ಅತಿತೀವ್ರ = ಅತ್ಯಂತ ತೀವ್ರವಾದ, ತಪಃ = ತಪಸ್ಸಿನಿಂದ, ಪ್ರಸನ್ನಾ = ಪ್ರಸನ್ನಳಾದ, ಸಾ ಭಾರತೀ = ಆ ಭಾರತೀ ದೇವಿಯು, ಅಮುಷ್ಯೈ = ಹಿಡಿಂಮಿಗೆ, ಸ್ವಾವೇಶಂ = ತನ್ನ ಆವೇಶ ರೂಪವಾದ, ಚ = ಮತ್ತು, ಆತ್ಮದಯಿತಸ್ಯ = ತನ್ನ ಗಂಡನಾದ ವಾಯುವಿನ, ಸಂಗಮೇನ = ಅಂಗಸಂಗದಿಂದ, ಶಾಪಾತ್ = ಶಾಪದಿಂದ, ವಿಮುಕ್ತಿಂ = ವಿಮುಕ್ತಿ ರೂಪವಾದ, ಇಮಂ ವರಂ = ಈ ವರವನ್ನು, ಪ್ರದದೌ = ಕೊಟ್ಟಳು, ತೇನ = ಆದ್ದರಿಂದ, ಸಾ = ಆ ಹಿಡಿಂಬೆಯು, ಪವಮಾನ ಸೂನೋಃ = ಭೀಮನ ಬಳಿ, ನಿಜತನುಂ = ತನ್ನ ರೂಪವನ್ನ (ಪಡೆಯಲು), ಆಹ = ಬೇಡಿದಳು.

ತಾತ್ಪರ್ಯ :- ಹಿಂದೆ ಹಿಡಿಂಬೆಯ ತೀವ್ರವಾದ ತಪಸ್ಸಿಗೆ ಒಲಿದು, ಭಾರತೀದೇವಿ ನಿನ್ನಲ್ಲಿ ನನ್ನ ಆವೇಶ ಬರುತ್ತದೆ. ಆಗ ನನ್ನ ಪತಿಯ ಅಂಗಸಂಗದಿಂದ ಶಾಪ ವಿಮುಕ್ತಿಯಾಗುತ್ತದೆ ಎಂದು ವರಕೊಟ್ಟಳು. ಆದ್ದರಿಂದ ತನ್ನ ರೂಪ ಪಡೆಯುವುದಕ್ಕಾಗಿ ಅವಳು ಪುನಃ ಭೀಮನನ್ನು ಬೇಡಿದಳು.

ಜ್ಞಾನಂ ಚ ನೈಜಮಭಿದರ್ಶಯಿತುಂ ಪುನಶ್ಚ
ಪ್ರಾಹೇಶ್ವರೋಽಖಿಲಜಗದ್ಗುರುರಿಂದಿರೇಶಃ ।

**ವ್ಯಾವಸ್ವರೂಪ ಇಹ ಚೇತ್ಯ ಪರಶ್ವ ಏವ**
**ಮಾಂ ತೇ ಪ್ರದಾಸ್ಯತಿ ತದಾ ಪ್ರಕರೋಷಿ ಮೇಽರ್ಥ್ಯಮ್ ॥ ೫೨ ॥**

ಪದಚ್ಛೇದ :- **ಜ್ಞಾನಂ, ಚ, ನೈಜಂ, ಅಭಿದರ್ಶಯಿತುಂ, ಪುನಶ್ಚ, ಪ್ರಾಹ, ಈಶ್ವರಃ, ಅಖಿಲಜಗದ್‌ಗುರುಃ, ಇಂದಿರೇಶಃ, ವ್ಯಾಸಸ್ವರೂಪಃ, ಇಹ, ಚ, ಏತ್ಯ, ಪರಶ್ವಃ, ಏವ, ಮಾಂ ತೇ, ಪ್ರದಾಸ್ಯತಿ, ತದಾ, ಪ್ರಕರೋಷಿ, ಮೇ, ಅರ್ಥ್ಯಮ್ ।**

**ಅರ್ಥ :- ನೈಜಂ** = ತನ್ನದಾದ (ಸ್ವಾಭಾವಿಕವಾದ), **ಜ್ಞಾನಂ** = ದಿವ್ಯ ಜ್ಞಾನವನ್ನು, **ಅಭಿದರ್ಶಯಿತುಂ** = ಪ್ರದರ್ಶಿಸಲು, **ಪುನಶ್ಚ** = ಮತ್ತೇ, **ಪ್ರಾಹ** = ಹೇಳಿದಳು, **ಅಖಿಲ** = ಸಕಲ, **ಜಗತ್** = ಜಗತ್ತಿಗೆ, **ಗುರುಃ** = ಗುರುವಾದ, **ಚ** = ಮತ್ತು, **ಈಶ್ವರಃ** = ಒಡೆಯನಾದ, **ವ್ಯಾಸರೂಪಃ** = ವ್ಯಾಸರೂಪೀ, **ಇಂದಿರೇಶಃ** = ಶ್ರೀಹರಿಯು, **ಇಹ ಚ** = ಇಲ್ಲಿಗೆ, **ಪರಶ್ವಃ ಏವ ಚ** = ನಾಡಿದ್ದೇ, **ಏತ್ಯ** = ಬಂದು, **ಮಾಂ** = ನನ್ನನ್ನು, **ತೇ** = ನಿನಗೆ, **ಪ್ರದಾಸ್ಯತಿ** = ನೀಡುವನು, **ತದಾ** = ಆಗ, **ಮೇ** = ನನ್ನ, **ಅರ್ಥ್ಯಂ** = ಬಯಕೆಯನ್ನು, **ಪ್ರಕರೋಷಿ** = ನಡೆಸಿಕೊಡುವಿ.

**ತಾತ್ಪರ್ಯ :-** ಹಿಡಿಂಬಿ ತನ್ನ ಸ್ವಾಭಾವಿಕವಾದ ದಿವ್ಯಜ್ಞಾನವನ್ನು ಪ್ರಕಟಿಸಲು ಮತ್ತೆ ಹೇಳಿದಳು. ಸಕಲ ಜಗತ್ತಿಗೆ ಗುರು, ಒಡೆಯನಾದ ವ್ಯಾಸರೂಪಿ ಶ್ರೀಹರಿ ಇಲ್ಲಿಗೆ ನಾಳಿದ್ದೇ ಬಂದು ನನ್ನನ್ನು ನಿನಗೆ ನೀಡುವನು. ಆಗ ನೀನೆ ನನ್ನ ಅಭೀಷ್ಟವನ್ನು ನಡೆಸಿಕೊಡುವಿ.

**ಕಾಲೇ ತದೈವ ಕುಪಿತಃ ಪ್ರಯಯೌ ಹಿಡಿಂಬೋ**
**ಭೀಮಂ ನಿಹಂತುಮಪಿ ತಾಂ ಚ ನಿಜಸ್ವಸಾರಮ್ ।**
**ಭಕ್ಷಾರ್ಥಮೇವ ಹಿ ಪುರಾ ಸ ತು ತಾಂ ನ್ಯಯುಂಕ್ತ**
**ನೇತುಂ ಚ ತಾನಥ ಸಮಾಸದದಾಶು ಭೀಮಮ್ ॥ ೫೩ ॥**

ಪದಚ್ಛೇದ :- **ಕಾಲೇ, ತದಾ, ಏವ, ಕುಪಿತಃ, ಪ್ರಯಯೌ, ಹಿಡಿಂಬಃ, ಭೀಮಂ, ನಿಹಂತುಂ, ಅಪಿ, ತಾಂ, ಚ, ನಿಜಸ್ವಸಾರಂ, ಭಕ್ಷಾರ್ಥಂ, ಏವ, ಹಿ, ಪುರಾ, ಸ ತು ತಾಂ ನ್ಯಯುಂಕ್ತ, ನೇತುಂ, ಚ, ತಾನ್, ಅದ, ಸಮಾಸದತ್, ಆಶು, ಭೀಮಮ್ ।**

**ಅರ್ಥ :-** ತದಾ ಏವ = ಅದೇ, **ಕಾಲೇ** = ಸಮಯದಲ್ಲೇ, **ಕುಪಿತಃ** = ಕುಪಿತನಾದ, **ಹಿಡಿಂಬಃ** = ಹಿಡಿಂಬನು, **ಭೀಮಂ** = ಭೀಮನನ್ನು, **ಚ** = ಮತ್ತು,

**ನಿಜಸ್ವಸಾರಂ** = ತನ್ನ ತಂಗಿಯನ್ನು, **ನಿಹಂತುಂ** = ಕೊಲ್ಲಲು ಹೊರಟನು, **ಹಿ** = ಏಕೆಂದರೆ, **ಸಃ ತು** = ಹಿಡಿಂಬನು, **ಭಕ್ಷಾರ್ಥಂ** = ತಿನ್ನಲು, **ತಾನ್** = ಪಾಂಡವರನ್ನು, **ನೇತುಂ ನವ** = ತರಲೆಂದೇ, **ತಾಂ** = ಹಿಡಿಂಬಿಯನ್ನು, **ಪುರಾನ್ಯಯುಂಕ್ತ** = ಹಿಂದೆ ಕಳುಹಿಸಿದ್ದ, **ಅಥ ಚ** = ಅವಳು ಬರದೆ ಇದ್ದದ್ದನ್ನು ಕಂಡು, **ಆಶು** = ಕೂಡಲೇ, **ಭೀಮಂ ಪ್ರತಿ** = ಭೀಮನೊಡೆಗೆ, **ಸಮಾಸದತ್** = ಬಂದನು.

**ತಾತ್ಪರ್ಯ** :- ಅದೇ ಸಮಯದಲ್ಲೇ ಕೋಪಗೊಂಡ ಹಿಡಿಂಬನು ಭೀಮ ಮತ್ತು ತನ್ನ ತಂಗಿಯನ್ನು ಕೊಲ್ಲಲು ಹೊರಟನು. ಏಕೆಂದರೆ ತನ್ನ ಭಕ್ಷಣೆಗೊಸ್ಕರ ತನ್ನ ತಂಗಿಗೆ ಪಾಂಡವರನ್ನು ತರಲು ಹೇಳಿ ಕಳುಹಿಸಿದನು. ಅವಳಾದರೂ ಸುಂದರವಾದ ವೇಷವನ್ನು ಧರಿಸಿ ಅವರ ಬಳಿಗೆ ಹೋದಳು ಅದಕ್ಕೆ ಕೋಪಗೊಂಡ ಹಿಡಿಂಬರು ಭೀಮ ಮತ್ತು ತನ್ನ ತಂಗಿಯನ್ನು ಕೊಲ್ಲಲು ಹೋದಳು.

**ಸಾ ಭೀಮಮೇವ ಶರಣಂ ಪ್ರಜಗಾಮ ತಾಂ ಚ**
**ಭ್ರಾತೃಂಶ್ಚ ಮಾತರಮಥಾವಿತುಮಭ್ಯಯಾತ್ ತಮ್ ।**
**ಭೀಮಃ ಸುದೂರಮಪಕೃಷ್ಯ ಸಹೋದರಾಣಾಂ**
**ನಿದ್ರಾಪ್ರಭಂಗಭಯತೋ ಯುಯುಧೇಽಮುನಾ ಚ ॥ ೫೪ ॥**

**ಪದಚ್ಛೇದ** :- ಸಾ, ಭೀಮಂ, ಏವ, ಶರಣಂ, ಪ್ರಜಗಾಮ, ತಾಂ, ಚ ಭ್ರಾತೃಂ, ಚ, ಮಾತರಂ, ಅಥ, ಅವಿತುಂ, ಅಭ್ರಯಾತ್, ತಂ, ಭೀಮಃ, ಸುದೂರು, ಅಪಕೃಷ್ಯ, ಸಹೋದರಾಣಾಂ, ನಿದ್ರಾಪಭಂಗಭಯತಃ, ಯುಯುದೇ, ಅಮುನಾ, ಚ ।

**ಅರ್ಥ** :- **ಸಾ** = ಹಿಡಿಂಬಿಯು, **ಭೀಮಂ ಏವ** = ಭೀಮನನ್ನೇ, **ಶರಣಂ** = ಮೊರೆ, **ಪ್ರಜಾಗಾಮ** = ಹೋದಳು, **ಭೀಮಃ** = ಭೀಮನು, **ತಾಂ ಚ** = ಹಿಡಿಂಬಿಯನ್ನು, **ಭ್ರಾತೃನ್ ಚ** = ಸೋದರರನ್ನೂ ಮತ್ತು, **ಅಥಮಾತರಂ** = ತಾಯಿಯನ್ನೂ ಕೂಡ, **ಅವಿತುಂ** = ರಕ್ಷಿಸಲು, **ಅಭ್ಯಯಾತ್** = ಆಕ್ರಮಿಸಿದನು, **ಸಹೋದರಾಣಾಂ** = ಸೋದರರಿಗೆ, **ನಿದ್ರಾಪ್ರಭಂಗ ಭಯತಃ** = ನಿದ್ರಾಭಂಗವಾದೀತೆಂದು ಭಯದಿಂದ, **ತಂ** = ಹಿಡಿಂಬನನ್ನು, **ಸುದೂರಂ** = ಬಲುದೂರಕ್ಕೆ, **ಅಪಕೃಷ್ಯ** = ಸೆಳೆದೊಯ್ದು, **ಚ** = ಮತ್ತು, **ಅಮುನಾ** = ಹಿಡಿಂಬನೊಂದಿಗೆ, **ಯುಯುಧೇ** = ಹೋರಾಟಕ್ಕೆ ಇಳಿದ.

ತಾತ್ಪರ್ಯ :- ಹಿಡಿಂಬಿ ಭೀಮನನ್ನೇ ಶರಣುಹೋದಳು. ಭೀಮ ಹಿಡಿಂಬಿಯನ್ನೂ, ತನ್ನ ಸೋದರರನ್ನೂ ತಾಯಿಯನ್ನೂ ಕಾಪಾಡುವುದಕ್ಕಾಗಿ ಹಿಡಿಂಬನ ಮೇಲೆ ಆಕ್ರಮಿಸಿದ. ಸೋದರರಿಗೆ ನಿದ್ರಾಭಂಗವಾದೀತೆಂದು ಭಯದಿಂದ ಅವನನ್ನು ಬಲುದೂರಕ್ಕೆ ಸೆಳೆದು ಯುದ್ಧಕ್ಕೆ ಇಳಿದ.

ತೌ ಮುಷ್ಟಿಭಿಸ್ತರುಭಿರಶ್ಮಭಿರದ್ರಿಭಿಶ್ಚ
ಯಧ್ವಾ ನಿತಾಂತರವತಃ ಪ್ರತಿಬೋಧಿತಾಂಸ್ತಾನ್ ।
ಸಂಚಕ್ರತುಸ್ತದನು ಸೋದರಸಂಭ್ರಮಂ ತಂ
ದೃಷ್ಟ್ವೈವ ಮಾರುತಿರಹನ್ನುರಸಿ ಸ್ಮ ರಕ್ಷಃ ॥ ೫೫ ॥

ಪದಚ್ಛೇದ :- ತೌ, ಮುಷ್ಟಿಭಿಃ, ತರುಭಿಃ, ಅಶ್ಮಭಿಃ, ಅದ್ರಿಭಿಃ, ಚ, ಯುಧ್ವಾ, ನಿತಾಂತರವತಃ, ಪ್ರತಿಭೋದಿತಾನ್, ತಾನ್, ಸಂಚಕ್ರತುಃ, ತದನು, ಸೋದರ ಸಂಭಮಂ, ತಂ, ದೃಷ್ಟ್ವಾ, ಏವ, ಮಾರುತಿಃ, ಅಹನ್, ಉರಸಿ, ಸ್ಮ, ರಕ್ಷ।

ಅರ್ಥ :- ತೌ = ಭೀಮ ಹಿಡಿಂಬರಿಬ್ಬರೂ, ಮುಷ್ಟಿಭಿಃ = ಮುಷ್ಟಿಗಳಿಂದ, ತರುಭಿಃ = ಮರಗಳಿಂದ, ಅಶ್ಮಭಿಃ = ಕಲ್ಲುಗಳಿಂದ, ಅದ್ರಿಭಿಃ ಚ = ಬೆಟ್ಟಗಳಿಂದ, ಯುದ್ಧಾ = ಯುದ್ಧ ಮಾಡಿ, ನಿತಾಂತರವತಃ = ಜೋರಾದ ಶಬ್ದದಿಂದ, ತಾನ್ = ಪಾಂಡವರನ್ನು, ಪ್ರತಿಬೋಧಿತಾನ್ = ಎಚ್ಚತ್ತವರನ್ನಾಗಿ, ಸಂಚಕ್ರತುಃ = ಮಾಡಿದರು, ತದನು = ಅನಂತರ, ತಂ ಸೋದರಸಂಭ್ರಮಂ = ಆ ಸೋದರರ ಭಯವನ್ನು, ದೃಷ್ಟ್ವಾ = ಕಂಡು, ಮಾರುತಿಃ = ಭೀಮನು, ರಕ್ಷಃ = ರಾಕ್ಷಸನನ್ನು, ಉರಸಿ = ಎದೆಯಲ್ಲಿ, ಅಹನ್ ಸ್ಮಾ = ಗುದ್ದಿದನು.

ತಾತ್ಪರ್ಯ :- ಭೀಮ ಹಿಡಿಂಬರಿಬ್ಬರೂ ಮುಷ್ಟಿಗಳಿಂದ ಮರಗಳಿಂದ ಕಲ್ಲುಗಳಿಂದ ಯುದ್ಧ ಮಾಡಿ ಆ ದೊಡ್ಡ ಶಬ್ದದಿಂದ ಪಾಂಡವರು ಎಚ್ಚೆತ್ತುಕೊಳ್ಳುವಂತೆ ಮಾಡಿದರು. ಬಳಿಕ ಸೋದರರು ಭಯವನ್ನು ಕಂಡು ಒಡನೆ ಭೀಮ ರಾಕ್ಷಸನ ಎದೆಗೆ ಗುದ್ದಿದ.

ತದ್ ಭೀಮಬಾಹುಬಲತಾಡಿತಮೀಶವಾಕ್ಯಾತ್
ಸರ್ವೈರಜೇಯಮಪಿ ಭೂಮಿತಳೇ ಪಪಾತ ।
ವಕ್ತ್ರಸ್ರವದ್ಬಹುಲಶೋಣಿತಮಾಪ ಮೃತ್ಯುಂ
ಪ್ರಾಯಾತ್ ತಮೋಽಂಧಮಪಿ ನಿತ್ಯಮಥ ಕ್ರಮೇಣ ॥ ೫೬ ॥

**ಪದಚ್ಛೇದ :- ತತ್, ಭೀಮ ಬಾಹುಬಲತಾಡಿತಂ, ಈಶವಾಕ್ಯಾತ್, ಸರ್ವೈಃ, ಅಜೇಯಂ, ಅಪಿ, ಭೂಮಿತಲೇ, ಪಪಾತ, ವಕ್ತ್ರಸ್ರವದ್ಬಹುಲಶೋಣಿತಂ, ಆಪ, ಮೃತ್ಯುಂ, ಪ್ರಾಯಾತ್ ತಮಃ, ಅಂಧಂ, ಅಪಿ, ನಿತ್ಯಂ, ಅಧಃ, ಕ್ರಮೇಣ ।**

**ಅರ್ಥ :- ತತ್** = ಹಿಡಿಂಬರಾಕ್ಷಸನು, **ಈಶವಾಕ್ಯಾತ್** = ಶಿವನ ವರದಿಂದ **ಸರ್ವೈಃ** = ಎಲ್ಲರಿಂದಲೂ, **ಅಜೇಯಮಪಿ** = ಅಜ್ಞೇಯ ನಾಗಿದ್ದರೂ, **ಭೀಮಸ್ಯ** = ಭೀಮನ, **ಬಾಹುಬಲೇನ** = ತೋಳಿನ ಬಲದಿಂದ, **ತಾಡಿತಂ** = ಪೆಟ್ಟು ತಿಂದವನಾಗಿ, **ಭೂಮಿತಲೆ** = ನೆಲದ ಮೇಲೆ, **ಪಪಾತ** = ಬಿದ್ದನು, **ವಕ್ತ್ರೇನ** = ಬಾಯಿಂದ, **ಸ್ರವತ್** = ಸುರಿಯಲ್ಪಟ್ಟ, **ಬಹುಲ** = ಬಹಳವಾದ, **ಶೋಣಿತಂ** = ರಕ್ತವುಳ್ಳ ಹಿಡಿಂಬನು, **ಮೃತ್ಯುಂ** = ಸಾವನ್ನು, **ಆಪ** = ಹೊಂದಿದನು, **ಕ್ರಮೇಣ** = ಕ್ರಮೇಣ, **ಅಥ** = ನರಕಾದಿ ಅನರ್ಥಗಳನ್ನು ಅನುಭವಿಸಿ ನಂತರ, **ನಿತ್ಯಂ** = ನಿತ್ಯವಾದ, **ಅಂಧಂತಮಪಿ** = ಅಂಧಂತಮಸ್ಸನ್ನೂ ಕೂಡ, **ಪ್ರಾಯಾತ್** = ಹೊಂದಿದರು.

**ತಾತ್ಪರ್ಯ** :- ಹಿಡಿಂಬ ಶಿವನ ವರದಿಂದ ಸರ್ವರಿಗೂ ಅಜೇಯನಾಗಿದ್ದರೂ ಭೀಮನ ಬಾಹುಬಲದಿಂದ ಹೊಡೆತ ತಿಂದು ನೆಲದ ಮೇಲೆ ಬಿದ್ದನು. ಬಾಯಿಂದ ಬಹಳ ರಕ್ತಕಾರಿ ಸತ್ತ. ಕ್ರಮೇಣ ನರಕಾದಿ ಅನರ್ಥಗಳನ್ನು ಅನುಭವಿಸಿ ಕೊನೆಯಲ್ಲಿ ನಿತ್ಯವಾದ ಅಂಧಂತಮವನ್ನು ಹೊಂದಿದ.

**ಹತ್ವೈವ ಶರ್ವವರರಕ್ಷಿತರಾಕ್ಷಸಂ ತಂ
ಸರ್ವೈರವಧ್ಯಮಪಿ ಸೋದರಮಾತೃದಯುಕ್ತಃ ।
ಭೀಮೋ ಯಯೌ ತನು ಸಾ ಪ್ರಯಯೌ ಹಿಡಿಂಬೀ
ಕುಂತೀಂ ಯುಧಿಷ್ಠಿರಮಥಾಸ್ಯ ಕೃತೇ ಯಯಾಚೇ ॥ ೫೭ ॥**

**ಪದಚ್ಛೇದ :- ಹತ್ವಾ, ಏವ, ಶರ್ವವರರಕ್ಷಿತರಾಕ್ಷಸಂ, ತಂ, ಸರ್ವೈಃ, ಅವಧ್ಯಂ, ಅಪಿ, ಸೋದರಮಾತೃಯುಕ್ತಃ, ಭೀಮಃ, ಯಯೌ, ತದನು, ಸಾ, ಪ್ರಯಯೌ, ಹಿಡಿಂಬೀ, ಕುಂತೀಂ, ಯುಧಿಷ್ಠಿರಂ, ಅಥ, ಅಸ್ಯ, ಕೃತೇ, ಯಯಾಚೇ ।**

**ಅರ್ಥ** :- **ಶರ್ವ** = ಶಿವನ, **ವರೇನ** = ವರದಿಂದ, **ರಕ್ಷಿತ** = ರಕ್ಷಿಸಲ್ಪಟ್ಟ, **ರಾಕ್ಷಸಂ** = ರಾಕ್ಷಸನಾದ, **ಸರ್ವೈಃ** = ಎಲ್ಲರಿಂದಲೂ, **ಅವಧ್ಯಂ ಅಪಿ** =

ಅವಧ್ಯನಾದರೂ ಕೂಡ, ತಂ = ಆ ಹಿಡಿಂಬನನ್ನು, **ಹತ್ವಾ ಏವ** = ಕೊಂದಕೂಡಲೇ, **ಸೋದರ** = ಸೋದರರಿಂದ ಮತ್ತು, **ಮಾತೃಯುಕ್ತಃ** = ತಾಯಿಂದಲೂ ಕೂಡಿಕೊಂಡು, **ಭೀಮಃ** = ಭೀಮನು, **ಯಯೌ** = ಮುನ್ನಡೆದನು, **ಸಾ ಹಿಡಿಂಬೀ** = ಆ ಹಿಡಿಂಬಿಯು, **ತದನು** = ಅನಂತರ ಭೀಮನ ಹಿಂದೆ, **ಪ್ರಯಯೌ** = ನಡೆದಳು, **ಅಥ** = ನಂತರ, **ತಸ್ಯ ಕೃತೇ** = ಭೀಮನಿಗೋಸ್ಕರ, **ಕುಂತೀಂ** = ಕುಂತಿಯನ್ನು, **ಯುಧಿಷ್ಠಿರಂ** = ಯುಧಿಷ್ಠಿರನನ್ನು, **ಯಯಾಚೇ** = ಬೇಡಿದಳು.

**ತಾತ್ಪರ್ಯ** :- ಶಿವನ ವರದಿಂದ ರಕ್ಷಿತನಾಗಿದ್ದು ಸರ್ವರಿಗೂ ಅವಧ್ಯನೆನಿಸಿದ್ದ ಆ ರಾಕ್ಷಸನನ್ನು ಕೊಂದು ಸೋದರರಿಂದಲೂ ತಾಯಿ ಯಿಂದಲೂ ಕೂಡಿ ಭೀಮ ಮುಂದೆ ನಡೆದ. ಹಿಡಿಂಬಿ ಅವನ ಹಿಂದೆಯೇ ನಡೆದಳು. ಭೀಮನಿಗಾಗಿ ಕುಂತಿಯನ್ನು ಧರ್ಮರಾಜನನ್ನು ಬೇಡಿದಳು.

**ತಾಭ್ಯಾಮನೂಕ್ತಮಪಿ ಯನ್ನ ಕರೋತಿ ಭೀಮಃ**
**ಪ್ರಾದುರ್ಬಭೂವ ನಿಖಿಲೋರುಗುಣಾಭಿಪೂರ್ಣಃ ।**
**ವ್ಯಾಸಾತ್ಮಕೋ ಹರಿರನಂತಸುಖಾಂಬುರಾಶಿಃ**
**ವಿದ್ಯಾಮರೀಚಿವಿತತಃ ಸಕಲೋತ್ತಮೋಽಲಮ್ ॥ ೫೮ ॥**

**ಪದಚ್ಛೇದ** :- ತಾಭ್ಯಾಂ, ಅನೂಕ್ತಂ, ಅಪಿ, ಯತ್, ನ, ಕರೋತಿ, ಭೀಮಃ, ಪ್ರಾದುರ್ಭಭೂವ, ನಿಖಿಲೋರುಗುಣಾಭಿಪೂರ್ಣಃ, ವ್ಯಾಸಾತ್ಮಕಃ, ಹರಿಃ, ಅನಂತಸುಖಾಂಬುರಾಶಿಃ, ವಿದ್ಯಾಮರೀಚಿವಿತತಃ, ಸತಲೋತ್ತಮಃ, ಅಲಮ್ ।

**ಅರ್ಥ** :- **ತಾಭ್ಯಾಂ** = ಕುಂತಿ ಯುಧಿಷ್ಠಿರರಿಂದ, **ಅನೂಕ್ತಮಪಿ** = ಪುನಃ ಪುನಃ ಹೇಳಲ್ಪಟ್ಟರೂ, **ಭೀಮಃ** = ಭೀಮನು, **ಯತ್** = ಯಾವಾಗ, **ನ ಕರೋತಿ** = ಸ್ವಿಕಾರ ಮಾಡಲಿಲ್ಲವೊ (ಆಗ), **ನಿಖಿಲೋರುಗುಣಾಭಿಪೂರ್ಣಃ** = ಸಕಲ ಮಹಾಗುಣಪೂರ್ಣನಾದ, **ಅನಂತ ಸುಖಾಂಬುರಾಶಿಃ** = ಅನಂತಸುಖ ಸಾಗರನಾದ, **ವಿದ್ಯಾಮರೀಚಿ ವಿತತಃ** = ಜ್ಞಾನ ಕಿರಣಗಳಿಂದ ವ್ಯಾಪ್ತನಾದ, **ಸಕಲೋತ್ತಮಃ** = ಸರ್ವೋತ್ತಮನಾದ, **ವ್ಯಾಸಾತ್ಮಕಃ** = ವ್ಯಾಸರೂಪಿಯಾದ, **ಹರಿಃ** = ಶ್ರೀಹರಿಯು, **ಅಲಂ** = ಚೆನ್ನಾಗಿ, **ಪ್ರಾದುರ್ಭಭೂವ** = ಪ್ರಕಟನಾದನು.

ತಾತ್ಪರ್ಯ :- ಕುಂತಿ ಯುಧಿಷ್ಠಿರರು ಪುನಃ ಪುನಃ ಹೇಳಿದರೂ ಭೀಮ ಕೇಳದಿದ್ದಾಗ ಸಕಲ ಮಹಾಗುಣಪೂರ್ಣ ಅನಂತ ಸುಖಸಾಗರ ಜ್ಞಾನಪ್ರಕಾಶ ವ್ಯಾಪ್ತ ಸರ್ವೋತ್ತಮನಾದ ವ್ಯಾಸರೂಪಿ ಶ್ರೀಹರಿ ಪ್ರತ್ಯಕ್ಷನಾದನು.

ದೃಷ್ಟ್ವೈವ ತಂ ಪರಮಮೋದಿನ ಆಶು ಪಾರ್ಥಾ
ಮಾತ್ರಾ ಸಹೈವ ಪರಿಪೂಜ್ಯ ಗುರುಂ ವಿರಿಂಚೇಃ ।
ಉಲ್ಲಾಳಿತಾಶ್ಚ ಹರಿಣಾ ಪರಮಾತಿಹಾರ್ದ-
ಪ್ರೋತ್ಫುಲ್ಲಪದ್ಮನಯನೇನ ತದೋಪವಿಷ್ಟಾಃ ॥ ೫೯ ॥

ಪದಚ್ಛೇದ :- ದೃಷ್ಟ್ವಾ, ಏವ, ತಂ, ಪರಮಮೋದಿನಃ, ಆಶು, ಪಾರ್ಥಃ, ಮಾತ್ರಾ, ಸಹ, ಏವ, ಪರಿಪೂಜ್ಯ, ಗುರುವಿರಿಂಚೇಃ, ಉಲ್ಲಾಲಿತಾಃ, ಚ, ಹರಿಣಾ, ಪರಮಾರ್ತಿಹಾರ್ದ ಪ್ರೋತ್ಫುಲ್ಲಪದ್ಮ ನಯನೇನ, ತಾದಾ ಉಪವಿಷ್ಟಾಃ ।

ಅರ್ಥ :- ವಿರಿಂಚೇಃ ಏವ = ಬ್ರಹ್ಮನಿಗೂ, ಗುರುಂ = ಗುರುಗಳಾದ, ತಂ = ಆ ವ್ಯಾಸರನ್ನು, ದೃಷ್ಟ್ವಾ ಏವ = ಕಂಡಕೂಡಲೆ, ಪರಮಮೋದಿನಃ = ಪರಮಾನಂದಗೊಂಡ, ಪಾರ್ಥಾಃ = ಪಾಂಡವರು, ಮಾತ್ರಾ ಸಹ ಏವ = ತಾಯಿಂದಲೂ ಕೂಡಿಕೊಂಡು, ಆಶು = ಕೂಡಲೆ, ಪರಿಪೂಜ್ಯ = ಸತ್ಕರಿಸಿ, ಪರಮ = ಅತ್ಯಂತ, ಅತಿಹಾರ್ದ = ಪರಮ ಸ್ನೇಹದಿಂದ, ಪ್ರೋತ್ಫಲ್ಲ = ಅರಳಲ್ಪಟ್ಟ, ಪದ್ಮ = ಕಮಲಗಳಂತೆ, ನಯನೇನ = ಕಣ್ಣುಗಳುಳ್ಳ, ಹರಿಣಾ = ಶ್ರೀ ಹರಿಯಿಂದ, ಉಲ್ಲಾಲಿತಾಃ = ಲಾಲಿತರಾಗಿ, ತದಾ = ಆಗ, ಉಪವಿಷ್ಟಾಃ = ಕುಳಿತರು.

ತಾತ್ಪರ್ಯ :- ಬ್ರಹ್ಮನಿಗೂ ಗುರುವಾದ ಆ ವ್ಯಾಸರನ್ನು ಕಂಡೊಡನೆಯೆ ಪರಮಾನಂದಗೊಂಡು ಪಾರ್ಥರೂ ಕುಂತಿಯೂ ಅವರನ್ನು ಬೇಗನೆ ಚೆನ್ನಾಗಿ ಸತ್ಕರಿಸಿದರು. ಪರಮಪ್ರೀತಿಯಿಂದ ಅರಳಿದ ತಾವರೆ ಕಣ್ಣಿನ ಆ ಹರಿಯಿಂದ ಚೆನ್ನಾಗಿ ಲಾಲಿತರಾಗಿ ಕುಳಿತರು.

ತಾನ್ ಭಕ್ತಿನಮ್ರಶಿರಸಃ ಸಮುದೀಕ್ಷ್ಯ ಕೃಷ್ಣೋ
ಭೀಮಂ ಜಗಾದ ನತ ಆಶು ಹಿಡಿಂಬಯಾ ಚ ।
ಏತಾಂ ಗೃಹಾಣ ಯುವತೀಂ ಸುರಸದ್ಮಶೋಭಾಂ
ಜಾತೇ ಸುತೇ ಸಹಸುತಾ ಪ್ರತಿಯಾತು ಚೈಷಾ ॥ ೬೦ ॥

ಪದಚ್ಛೇದ :- ತಾನ್, ಭಕ್ತಿನಮ್ರಹಿಸಃ, ಸಮುದೀಕ್ಷ್ಯ, ಕೃಷ್ಣಃ, ಭೀಮಂ, ಜಗಾದ, ನತ್, ಆಶು, ಹಿಡಿಂಬಯಾ, ಚ, ಏತಾಂ, ಗೃಹಾಣ, ಯುವತೀಂ, ಸುರಸದ್ಮಶೋಭಾಂ, ಜಾತೇ, ಸುತೇ, ಸಹುಸುತಾ, ಪ್ರತಿಯಾತು, ಚ, ಏಷಾ ।

ಅರ್ಥ :- ಭಕ್ತಿ = ಭಕ್ತಿಯಿಂದ, ನಮ್ರ = ಬಾಗಿದ, ಶಿರಸಃ = ತಲೆಯುಳ್ಳ, ತಾನ್ = ಅವರನ್ನು, ಸಮುದೀಕ್ಷ್ಯ = ನೋಡಿ, ಹಿಡಿಂಬಯಾ ಚ = ಹಿಡಿಂಬಿಯಿಂದಲೂ, ನತಃ = ನಮಸ್ಕರಿಸಲ್ಪಟ್ಟ, ಕೃಷ್ಣಃ = ವ್ಯಾಸರು, ಭೀಮಂ = ಭೀಮನನ್ನು ಕುರಿತು, ಜಗಾದ = ಹೇಳಿದರು. ಆಶು = ಕೂಡಲೆ, ಸುರಸದ್ಮಶೋಭಾಂ = ಸ್ವರ್ಗಲೋಕದ ಕಾಂತಿರೂಪಳಾದ, ಏತಾಂ ಯುವತೀಂ = ಈ ಯುವತಿಯನ್ನು, ಗೃಹಾಣ = ಸ್ವೀಕರಿಸು, ಚ = ಮತ್ತು, ಸುತೇ = ಮಗನು, ಜಾತೆ = ಹುಟ್ಟುತ್ತಿರಲು, ಏಷಾ = ಹಿಡಿಂಬಿಯು, ಸಹಸುತಾ = ಮಗನಿಂದ ಕೂಡಿದವಳಾಗಿ, ಪ್ರತಿಯಾತು = ಹೋಗಲಿ.

ತಾತ್ಪರ್ಯ :- ಪಾಂಡವರು ಭಕ್ತಿಯಿಂದ ತಲೆಬಾಗಿದರು. ಹಿಡಿಂಬಿಯೂ ನಮಿಸಿದಳು. ವ್ಯಾಸರನ್ನು ಅದನ್ನು ಕಂಡು ಭೀಮನಿಗೆ ದೇವಲೋಕ ಶ್ರೀರೂಪಳಾದ ಈಕೆಯನ್ನು ಭಾರ್ಯೆಯಾಗಿ ಸ್ವೀಕರಿಸಲು, ಒಬ್ಬ ಮಗ ಹುಟ್ಟಿದೊಡನೆ ಮಗನೊಂದಿಗೆ ಅವಳು ಹೊರಟು ಹೋಗಲಿ ಎಂದರು.

ಏವಂ ಬ್ರುವತ್ಯಗಣಿತೋರುಗುಣೇ ರಮೇಶ
ಓಮಿತ್ಯುದೀರ್ಯ ಕೃತವಾಂಶ್ಚ ತಥೈವ ಭೀಮಃ ।
ಸ್ಕಂಧೇನ ಚೋಹ್ಯ ವಿಬುಧಾಚರಿತಪ್ರದೇಶಾನ್
ಭೀಮಂ ಪ್ರಯಾತ್ಯುದಯ ಏವ ರವೇರ್ಹಿಡಿಂಬೀ ॥ ೬೧ ॥

ಪದಚ್ಛೇದ :- ಏವಂ, ಬ್ರುವತಿ, ಅಗಣಿತೋರುಗುಣೇ, ರಮೇಶಃ, ಓಂ, ಇತಿ, ಉದೀರ್ಯ, ಕೃತವಾನ್, ಚ, ತಥಾ, ಏವ, ಭೀಮಃ, ಸ್ಕಂಧೇನ, ಚ, ಉಹ್ಯ, ವಿಬುಧಾಚರಿತಪ್ರದೇಶಾನ್, ಭೀಮಂ, ಪ್ರಯಾತಿ, ಉದಯೇ, ಏವ, ರವೇಃ, ಹಿಡಿಂಬೀ ।

ಅರ್ಥ :- ಅಗಣಿತೋರುಗುಣೇ = ಅಗಣಿತ ಮಹಾಗುಣ ಶಾಲಿಯಾದ, ರಮೇಶ = ಇಂದಿರೇಶನು, ಏವಂ = ಹೀಗೆ, ಬ್ರುವತಿ (ಸತಿ) = ನುಡಿದಾಗ, ಭೀಮಃ = ಭೀಮನು, ಓಂ ಇತಿ = ಆಗಲಿ ಎಂದು, ಉದೀರ್ಯ = ಹೇಳಿ,

**ತಥಾ ಏವ** = ಹಾಗೆಯೇ, **ಕೃತವಾನ್** = ಮಾಡಿದನು, **ಹಿಡಿಂಬೀ** = ಹಿಡಿಂಬಿಯು, **ರವೇಃ** = ಸೂರ್ಯನ, **ಉದಯೇ ಏವ** = ಉದಯವಾದೊಡನೆ, **ಭೀಮಂ** = ಭೀಮನನ್ನು, **ಸ್ಕಂಧೇನ** = ಭುಜದದಿಂದ, **ಉಹ್ಯ** = ಹೊತ್ತು, **ವಿಬುಧಾಚರಿತ ಪ್ರದೇಶಾನ್** = ದೇವತೆಗಳ ಸಂಚಾರದಿಂದ ಕೂಡಿದ ಉದ್ಯಾನವನ್ನು ಕುರಿತು, **ಪ್ರಯಾತಿ** = ಪ್ರಣಯಕ್ಕಾಗಿ ಹೋಗುತ್ತಿದ್ದಳು.

**ತಾತ್ಪರ್ಯ** :- ಅಗಣಿತ ಮಹಾಗುಣಶಾಲಿಯಾದ ಇಂದಿರೇಶ ಹೀಗೆ ನುಡಿದಾಗ ಭೀಮ 'ಆಗಲಿ' ಎನ್ನುತ್ತ ಅದೇ ರೀತಿ ಮಾಡಿದ. ಅಂದಿನಿಂದ ಹಿಡಿಂಬೆ ಪ್ರತಿದಿನ ಸೂರ್ಯೋದಯವಾದೊಡನೆ ಭೀಮನನ್ನು ಹೆಗಲಮೇಲೆ ಹೊತ್ತು ದೇವತೆಗಳ ಸಂಚಾರಕ್ಕೆ ಯೋಗ್ಯವಾದ ಪ್ರದೇಶಗಳಿಗೆ ವಿಹಾರಕ್ಕಾಗಿ ಹೋಗುತ್ತಿದ್ದಳು.

**ಸಾ ನಂದನಾದಿಷು ವನೇಷು ವಿಹೃತ್ಯ ತೇನ**
**ಸಾಯಂ ಪ್ರಯಾತಿ ಪೃಥಯಾ ಸಹಿತಾಂಶ್ಚ ಪಾರ್ಥಾನ್ ।**
**ಏವಂ ಯಯಾವಪಿ ತಯೋರಿಹ ವತ್ಸರಾರ್ಧೋ**
**ಜಾತಶ್ಚ ಸೂನುರತಿವೀರ್ಯಬಲೋಪಪನ್ನಃ ॥ ೬೨ ॥**

ಪದಚ್ಛೇದ :- ಸಾ, ನಂದನಾದಿಷ್ವ, ವನೇಷು, ವಿಹೃತ್ಯ, ತೇನ, ಸಾಯಂ, ಪ್ರಯಾತಿ, ಪೃಥಯಾ, ಸಹಿತಾನ್, ಚ, ಪಾರ್ಥಾನ್, ಏವಂ, ಯಯೌ, ಅಪಿ, ತಯೋಃ, ಇಹ, ವತ್ಸರಾರ್ಧಃ, ಜಾತಃ ಚ, ಸೂನುಃ, ಅತಿವೀರ್ಯಬಲೋಪಪನ್ನಃ ।

**ಅರ್ಥ** :- **ಸಾ** = ಆ ಹಿಡಿಂಬಿಯು, **ನಂದನಾದಿಷು** = ಇಂದ್ರನ ನಂದನವನ ಮುಂತಾದ, **ವನೇಷು** = ಉದ್ಯಾನಗಳಲ್ಲಿ, **ತೇನ** = ಭೀಮನಿಂದ ಕೂಡಿಕೊಂಡು, **ವಿಹೃತ್ಯ** = ವಿಹರಿಸಿ, **ಸಾಯಂ** = ಸಾಯಂಕಾಲದಲ್ಲಿ, **ಪೃಥಯಾ** = ಕುಂತಿಯಿಂದ, **ಸಹಿತಾನ್ ಚ** = ಕೂಡಿದ, **ಪಾರ್ಥಾನ್** = ಪಾರ್ಥರನ್ನು, **ಪ್ರಯಾತಿ** = ಬರುತ್ತಿದ್ದಳು, **ಇಹ** = ವನದಲ್ಲಿ, **ಏವಂ** = ಈ ರೀತಿಯಾಗಿ ವಿಹರಿಸಲು, **ವತ್ಸರಾರ್ಧಃ ಅಪಿ** = ಏಳು ತಿಂಗಳು, **ಯಯೌ** = ಕಳೆಯಿತು, **ತಯೋಃ ಚ** = ಅವರಿಬ್ಬರಿಗೆ, **ಅತಿವೀರ್ಯ** = ಅತ್ಯಂತ ವೀರ್ಯ ಮತ್ತು, **ಬಲೋಪಪನ್ನ** = ಬಲದಿಂದ ಕೂಡಿದ, **ಸೂನುಃ** = ಮಗನು, **ಜಾತಃ** = ಹುಟ್ಟಿದನು.

ತಾತ್ಪರ್ಯ :- ಹಿಡಿಂಬೆ ನಂದನವನ ಮುಂತಾದ ಉದ್ಯಾನಗಳಲ್ಲಿ ಭೀಮನೊಂದಿಗೆ ವಿಹರಿಸಿ ಸಂಜೆಯ ಹೊತ್ತಿಗೆ ಕುಂತಿ ಪಾಂಡವರು ಇದ್ದೆಡೆಗೆ ಹಿಂತಿರುಗುತ್ತಿದ್ದಳು. ಹೀಗೆ ಏಳು (ಕೆಲ ವ್ಯಾಖ್ಯಾನಕಾರರ ಪ್ರಕಾರ ಆರು ತಿಂಗಳು), ಕಳೆದವು. ಅವರಿಗೆ ಅತಿ ವೀರ್ಯ ಮತ್ತು ಬಲಯುಕ್ತನಾದ ಒಬ್ಬ ಮಗ ಹುಟ್ಟಿದ.

**ದೇವೋಽಪಿ ರಾಕ್ಷಸತನುರ್ನಿರ್‌ಋತಿಃ ಪುರಾಯ**
**ಆವೇಶಯುಕ್ಚ ಗಿರಿಶಸ್ಯ ಘಟೋತ್ಕಚಾಖ್ಯಃ ।**
**ಪೂರ್ವಂ ಘಟೋಪಮಮಮುಷ್ಯ ಶಿರೋಬಭೂವ**
**ಕೇಶಾ ನಿಮೇಷತ ಉದಾಸುರತೋ ಹಿನಾಮ ॥ ೬೩ ॥**

**ಪದಚ್ಛೇದ :–** ದೇವಃ, ಅಪಿ, ರಾಕ್ಷಸತನುಃ, ನಿರ್ಋತಿಃ, ಪುರಾಯ, ಆವೇಶಯುಕ್, ಚ, ಗಿರಿಶಸ್ಯ, ಘಟೋತ್ಕಚಾಖ್ಯಃ, ಪೂರ್ವಂ, ಘಟೋಪಮಮ್, ಅಮುಷ್ಯ, ಶಿರಃ, ಬಭೂವ, ಕೇಶಾಃ, ನಿಮೇಷತಃ, ಉದಾಸುಃ, ಅತಃ, ಹೇ, ನಾಮ ।

**ಅರ್ಥ :-** **ಪುರಾ** = ಹಿಂದೆ, **ಯಃ** = ಯಾವ, **ದೇವಃ ಅಪಿ** = ದೇವತೆಯಾಗಿದ್ದೂ, **ರಾಕ್ಷಸತನುಃ** = ರಾಕ್ಷಸ ಶರೀರವುಳ್ಳ, **ನಿರ್ಋತಿಃ** = ನಿರ್ಋತಿಯಾಗಿದ್ದನೋ, **ಗಿರಿಶಸ್ಯ** = (ಅವನೇ) ಶಿವನ, **ಆವೇಶಯುಕ್ ಚ** = ಆವೇಶಯುಕ್ತನಾಗಿ, **ಘಟೋತ್ಕಚಾಖ್ಯಃ** = ಘಟೋತ್ಕಚಾ ಎಂಬ ಹೆಸರುಳ್ಳವನಾದ (ಮಗನು ಹುಟ್ಟಿದನು), **ಪೂರ್ವಂ** = ಹುಟ್ಟಿದಾಗ, **ಅಮುಷ್ಯ** = ಮಗನಾದ ಘಟೋತ್ಕಚನಿಗೆ, **ಘಟೋಪಮಂ** = ಘಟದಂತೆ ಇರುವ, **ಶಿರಃ** = ತಲೆಯು, **ಬಭೂವ** = ಇತ್ತು, **ನಿಮೇಶತಃ** = ನಿಮಿಷ ಪರಿಮಿತ ಕಾಲದಿಂದ, **ಕೇಶಾಃ** = ಕೂದಲುಗಳು, **ಉದಾಸುಃ** = ಬೆಳೆದವು, **ಅತಃ** = ಅದರಿಂದ, **ಹಿ** = ಘಟೋತ್ಕಚ ಎಂಬ, **ನಾಮ** = ಹೆಸರು (ಬಂದಿತು).

ತಾತ್ಪರ್ಯ :- ಹಿಂದೆ ದೇವತೆಯಾಗಿದ್ದರೂ ರಾಕ್ಷಸ ದೇಹವೊಂದಿದ್ದ ನಿರ್ಋತಿಯು ಈಗ ಶಿವನ ಆವೇಶಹೊಂದಿ ಘಟೋತ್ಕಚ ಎಂಬ ಹೆಸರಿನಿಂದ ಹುಟ್ಟಿದ, ಹುಟ್ಟಿದಾಗ ತಲೆಯು ಮಡಿಕೆಯಂತೆ ಇತ್ತು, ಕೂದಲು ಇರಲಿಲ್ಲ, ನಿಮಿಷ ಮಾತ್ರದಲ್ಲಿ ಕೂದಲು ಬೆಳೆಯಿತು, ಅದರಿಂದ ಅವನಿಗೆ ಆ ಹೆಸರು ಬಂದಿತು.

**ಜಾತೇ ಸುತೇ ಸಮಯತೋ ಭಗವತ್ಕೃತಾತ್ ಸ**
**ಭೀಮೋ ಜಗಾದ ಸಸುತಾಂ ಗಮನಾಯ ತಾಂ ಚ ।**
**ಸ್ಮೃತ್ಯಾಽಭಿಯಾನ ಉಭಯೋರಪಿ ಸಾ ಪ್ರತಿಜ್ಞಾಂ**
**ತೇಷಾಂ ವಿಧಾಯ ಚ ಯಯೌ ಸುರಲೋಕಮೇವ ॥ ೬೪ ॥**

ಪದಚ್ಛೇದ :- **ಜಾತೇ, ಸುತೇ, ಸಮಯತಃ, ಭಗವತ್ಕೃತಾತ್, ಸಃ, ಭೀಮಃ, ಜಗಾದ, ಸಸುತಾಂ, ಗಮನಾಯ, ತಾಂ, ಚ, ಸ್ಮೃತ್ಯಾ, ಅಭಿಯಾನ್, ಉಭಯೋಃ, ಅಪಿ, ಸಾ, ಪ್ರತಿಜ್ಞಾಂ, ತೇಷಾಂ, ವಿಧಾಯ, ಚ, ಯಯೌ, ಸುರಲೋಕಂ, ಏವ ।**

**ಅರ್ಥ :- ಜಾತೇ ಸುತೇ** = ಮಗನು ಹುಟ್ಟಿದಾಗ ಎಂಬ ಮಾತಿನಂತೆ, **ಭಗವತ್ಕೃತಾತ್** = ಶ್ರೀವ್ಯಾಸರಿಂದ ಮಾಡಲ್ಪಟ್ಟ, **ಸಮಯತಃ** = ನಿಯಮದಿಂದ, **ಸಃ** = ಆ, **ಭೀಮಃ** = ಭೀಮನು, **ತಾಂ** = ಹಿಡಿಂಬಿಯನ್ನು, **ಸ ಸುತಾಂ ಚ** = ಮಗನಿಂದಲೂ ಕೂಡಿದವಳಾಗಿ, **ಗುಮುನಾಯ** = ಹೋಗಲು, **ಜಗಾದ** = ಹೇಳಿದನು, **ಸ್ಮೃತ್ಯಾ** = ಸ್ಮರಣೆಯಿಂದ, **ಉಭಯೋಃ ಅಪಿ** = ತಾಯಿ ಮಗ ಇಬ್ಬರೂ ಕೂಡ, **ಅಭಿಯಾನೆ** = ಬರುವ ವಿಷಯದಲ್ಲಿ, **ತೇಷಾಂ** = ಅವರಿಗೆ, **ಪ್ರತಿಜ್ಞಾಂ** = ಮಾತನ್ನು, **ವಿಧಾಯ** = ಕೊಟ್ಟು, **ಚ** = ಮತ್ತು, **ಸಾ** = ಆ ಹಿಡಿಂಬಿಯ, **ಸುರಲೋಕ** = ಸುರ ಲೋಕವನ್ನು ಕುರಿತು, **ಯಯೌ** = ಹೋದಳು.

**ತಾತ್ಪರ್ಯ :-** ಮಗ ಹುಟ್ಟಿದಾಗ ಮಗನೊಂದಿಗೆ ಹೋಗಲಿ ಎಂಬ ವ್ಯಾಸರ ವಚನದಂತೆ, ಭೀಮನು ಹಿಡಿಂಬಿಗೆ ಮಗನೊಂದಿಗೆ ಹೋಗಲಿ ಎಂಬ ಆಜ್ಞೆ ಮಾಡಿದ. ನೆನೆದಾಗ ತಾಯಿ ಮಕ್ಕಳಿಬ್ಬರೂ ಬರುವದೆಂದು ಪಾಂಡವರಿಗೆ ಮಾತುಕೊಟ್ಟು ಅವಳು ದೇವಲೋಕಕ್ಕೆ ಹೊರಟು ಹೋದಳು.

**ವ್ಯಾಸೋಽಪಿ ಪಾಂಡುತನಯೈಃ ಸಹಿತೋ ಬಕಸ್ಯ**
**ರೌದ್ರಾದ್ ವರಾಜ್ಜಯವಧಾಪಗತಸ್ಯ ನಿತ್ಯಮ್ ।**
**ಯಾತೋ ವಧಾಯ ಪರಮಾಗಣಿತೋರುಧಾಮಾ**
**ಪೂರ್ಣಾಕ್ಷಯೋರುಸುಖ ಆಶು ತದೈಕಚಕ್ರಾಮ್ ॥ ೬೫ ॥**

ಪದಚ್ಛೇದ :- **ವ್ಯಾಸಃ, ಅಪಿ, ಪಾಂಡುತನಯೈಃ, ಸಹಿತಃ, ಬಕಸ್ಯ, ರೌದ್ರಾತ್, ವರಾತ್, ಜಯವಧಾಪಗತಸ್ಯ, ನಿತ್ಯಂ, ಯಾತಃ, ವಧಾಯ, ಪರಮಾಗಣಿತೋರುಧಾಮಾ, ಪೂರ್ಣಾಕ್ಷಯೋರು ಸುಖಃ, ಆಶು, ತದೈಕಚಕ್ರಾಂ ।**

**ಅರ್ಥ** :- **ಪರಮ** = ಉತ್ತಮವಾದ, **ಅಗಣಿತ** = ಅಸಂಖ್ಯ, **ಉರು** = ಮಹಾ, **ಧಾಮಾ** = ಪ್ರಕಾಶವುಳ್ಳ, **ಪೂರ್ಣ** = ಪೂರ್ಣವಾದ, **ಅಕ್ಷಯ** = ಕ್ಷಯವಿಲ್ಲದ, **ಉರು** = ಮಹಾ, **ಸುಖಃ** = ಸುಖವುಳ್ಳ, **ವ್ಯಾಸಃ ಅಪಿ** = ವ್ಯಾಸರೂ ಕೂಡ, **ಪಾಂಡುತನಯಃ** = ಪಾಂಡವರೊಂದಿಗೆ, **ಸಹಿತಃ** = ಕೂಡಿಕೊಂಡು, **ರೌದ್ರಾತ್** = ರುದ್ರನಿಂದ ಕೊಡಲ್ಪಟ್ಟ, **ವರಾತ್** = ವರದಿಂದ, **ನಿತ್ಯಂ** = ಎಂದೂ, **ಜಯವಧಾಪಗತಸ್ಯ** = ಪರಾಭವ ಮರಣರಹಿತನಾದ, **ಬಕಸ್ಯ** = ಬಕಾಸುರನ, **ವಧಾಯ** = ಸಂಹಾರಕ್ಕೆ, **ಆಶು** = ಬೇಗನೆ, **ತದ್ವೈಕಚಕ್ರಾಂ** = ಆ ಎಕ ಚಕ್ರವನ್ನು ಕುರಿತು, **ಯಾತಃ** = ಹೋದರು.

**ತಾತ್ಪರ್ಯ** :- ಉತ್ತಮ ಅಸಂಖ್ಯ ಮಹಾಪ್ರಕಾಶಶಾಲಿ ಪೂರ್ಣ ಅಕ್ಷಯ ಮಹಾಸುಖಶಾಲಿಯಾದ ವ್ಯಾಸರು ಶಿವವರದಿಂದ ಎಂದೂ ಪರಾಭವ ಮರಣರಹಿತನಾದ ಬಕನ ಸಂಹಾರಕ್ಕಾಗಿ ಪಾಂಡವರೊಂದಿಗೆ ಎಕಚಕ್ರನಗರಕ್ಕೆ ಹೋದರು.

**ತಾನ್ ಬ್ರಾಹ್ಮಣಸ್ಯ ಚ ಗೃಹೇ ಪ್ರಣಿಧಾಯ ಕೃಷ್ಣಃ**
**ಶಿಷ್ಯ ಮಮೈತ ಇತಿ ವಿಪ್ರಕುಮಾರರೂಪಾನ್ ।**
**ಆಯಾಮಿ ಕಾಲ ಇತಿ ತಾನನುಶಾಸ್ಯ ಚಾಯಾತ್**
**ತೇ ತತ್ರ ವಾಸಮಥ ಚಕ್ರುರನೂಚ್ಯ ವೇದಾನ್ ॥ ೬೬ ॥**

**ಪದಚ್ಛೇದ** :- ತಾನ್, ಬ್ರಾಹ್ಮಣಸ್ಯ, ಚ, ಗ್ರಹೇ, ಪಣಿಧಾಯ, ಕೃಷ್ಣಃ, ಶಿಷ್ಯಃ, ಮಮ, ಏತೆ, ಇತಿ ವಿಪ್ರಕುಮಾರರೂಪಾನ್, ಆಯಾಮಿ, ಕಾಲ, ಇತಿ, ತಾನ್, ಅನುಶಾಸ್ಯ, ಚ ಆಯಾತ್, ತೇ, ತತ್ರ, ವಾಸಂ, ಅಥ, ಚಕ್ರು, ಅನೂಚ್ಯವೇದಾನ್ ।

**ಅರ್ಥ** :- **ವಿಪ್ರಕುಮಾರ ರೂಪಾನ್** = ಬ್ರಾಹ್ಮಣ ವೇಷಧರಿಸಿದ್ದ, **ತಾನ್** = ಪಾಂಡವರನ್ನು, **ಕೃಷ್ಣ** = ವೇದವ್ಯಾಸರು, **ಏತೇ** = ಇವರು, **ಮಮ** = ನನ್ನ, **ಶಿಷ್ಯಾಃ** = ಶಿಷ್ಯರು, **ಇತಿ** = ಎಂದು, **ಬ್ರಾಹ್ಮಣಸ್ಯ ಚ** = ಬ್ರಾಹ್ಮಣೋತ್ತಮನ, **ಗೃಹೇ** = ಮನೆಯಲ್ಲಿ, **ಪ್ರಣಿಧಾಯ** = ಇರಿಸಿ, **ಕಾಲೇ** = ಯೋಗ್ಯಕಾಲದಲ್ಲಿ, **ಆಯಾಮಿ** = ಬರುತ್ತೇನೆ, **ಇತಿ** = ಎಂದ, **ಅನುಶಾಸ್ಯ** = ಆಜ್ಞಾಪಿಸಿ, **ಅಯಾತ್** = ಹೋದರು, **ಅಥ** = ಅನಂತರ, **ತತ್ರ** = ಅಲ್ಲಿ, **ವೇದಾನ್** = ವೇದಗಳನ್ನು, **ಅನೂಚ್ಯ** = ಪಾರಾಯಣ ಮಾಡುತ್ತ, **ತೇ** = ಪಾಂಡವರು, **ವಾಸಂ** = ವಾಸವನ್ನು, **ಚಕ್ರುಃ** = ಮಾಡಿದರು.

**ತಾತ್ಪರ್ಯ :-** ಬ್ರಾಹ್ಮಣಕುಮಾರರ ವೇಷ ಧರಿಸಿದ್ದ ಪಾಂಡವರನ್ನು ವೇದವ್ಯಾಸರು ಇವರು ನನ್ನ ಶಿಷ್ಯರು ಎಂದು ಒಬ್ಬ ಬ್ರಾಹ್ಮಣ ಶ್ರೇಷ್ಠನ ಮನೆಯಲ್ಲಿ ಇರಿಸಿ. ಯೋಗ್ಯ ಕಾಲದಲ್ಲಿ ತಿರುಗಿ ಬರುತ್ತೇನೆ ಎಂದು ಹೇಳಿ ಹೋದರು. ಪಾಂಡವರು ಅಲ್ಲಿ ವೇದ ಪಾರಾಯಣ ಮಾಡುತ್ತ ವಾಸ ಮಾಡಿದರು.

**ಭಿಕ್ಷಾಮಟತ್ಸು ಸತತಂ ಪ್ರತಿಹುಂಕೃತೇನ**
**ಭೀಮೇ ವಿಶಾಂ ಸದನ ಏವ ಗೃಹಪ್ರಮಾಣಮ್ ।**
**ಭಾಂಡಂ ಕುಲಾಲವಿಹಿತಂ ಪ್ರತಿಗೃಹ್ಯ ಗಚ್ಛ-**
**ತ್ಯಾಶಂಕಯಾಽವಗಮನಸ್ಯ ತಮಾಹ ಧರ್ಮಃ ॥ ೬೭ ॥**

**ಪದಚ್ಛೇದ :-** ಭಿಕ್ಷಾಂ, ಅಟತ್ಸು ಸತತಂ ಪ್ರತಿಹುಂಕೃತೇನ, ಭೀಮೇ, ವಿಶಾಂ, ಸದನ, ಏವ, ಗೃಹಪ್ರಮಾಣಂ, ಭಾಂಡಂ, ಕುಲಾಲವಿಹಿತಂ, ಪ್ರತಿಗ್ರಹ್ಯ, ಗಚ್ಛತಿ, ಆಶಂಕಯಾ, ಅವಗಮನಸ್ಯ, ತಂ, ಆಹ, ಧರ್ಮಃ ।

**ಅರ್ಥ :-** **ಭಿಕ್ಷಾಂ ಅಟತ್ಸು** = ಪಾಂಡವರು ಭಿಕ್ಷಾಟನೆ ಮಾಡುತ್ತಿರಲು, **ಭೀಮೇ** = ಭೀಮನು, **ಸತತಂ** = ಯಾವಾಗಲೂ, **ಕುಲಾಲವಿಹಿತಂ** = ಕುಂಬಾರನಿಂದ ನಿರ್ಮಿತವಾದ, **ಗೃಹಪ್ರಮಾಣಂ** = ಮನೆಯಷ್ಟು ದೊಡ್ಡದಾದ, **ಭಾಂಡಂ** = ಮಡಿಕೆಯನ್ನು, **ಪ್ರತಿಗ್ರಹ್ಯ** = ಹಿಡಿದು, **ವಿಶಾಂ** = ವೈಶ್ಯರ, ಸದನೇ ಏವ ಮನೆಯಲ್ಲಿ, **ಪ್ರತಿಹುಂಕೃತೇನ** = ಪ್ರತಿ ಪ್ರತಿಹುಂಕಾರ ಮಾಡುವುದರಿಂದ, (ಮಾಡುತ್ತಾ) **ಗಚ್ಛತಿ(ಸತಿ)** = ಹೋಗುತ್ತಿರಲು, **ಅವಗಮನಸ್ಯ** = ಪಾಂಡವರೆಂದು ತಿಳಿಯುವ, **ಆಶಂಕಯಾ** = ಸಂದೇಹದಿಂದ, **ಧರ್ಮಃ** = ಧರ್ಮರಾಜನು, **ತಂ** = ಭೀಮನನ್ನು ಕುರಿತು, **ಆಹ** = ಹೇಳಿದನು.

**ತಾತ್ಪರ್ಯ :-** ಪಾಂಡವರು ಭಿಕ್ಷೆಗಾಗಿ ಅಲೆಯುತ್ತಿದ್ದಾಗ ಭೀಮನು ಯಾವಾಗಲೂ ಕುಂಬಾರ ಮಾಡಿಕೊಟ್ಟಿದ್ದ ಒಂದು ಮನೆಯಷ್ಟು ದೊಡ್ಡದಾದ ಮಡಿಕೆಯನ್ನು, ಹಿಡಿದು, ವೈಶ್ಯರ ಮನೆಗೆ ಭಿಕ್ಷೆಗೆ ಹೋಗುತ್ತಿದ್ದ. ಆಗ ಅವನು ಮಾಡುತ್ತಿದ್ದ ಪ್ರತಿ ಹುಂಕಾರದಿಂದಲೂ ಇವರು ಪಾಂಡವರು ಎಂದು ಜನ ತಿಳಿದಾರೆಂಬ ಭಯದಿಂದ ಧರ್ಮರಾಜ ಭೀಮನಿಗೆ ಹೇಳಿದ.

ಸ್ಥೂಲಂ ಹಿ ಸದ್ಮ ಪೃಥಿವೀಸಹಿತಂ ತ್ವರಕ್ಷ
ಉದ್ಧೃತ್ಯ ವಹ್ನಿಮುಖತಸ್ತದು ಚೈಕದೋಷ್ಣಾ ।
ಭಾಂಡಂ ತದರ್ಥಮುರು ಕುಂಭಕರೇಣ ದತ್ತಂ
ಭಿಕ್ಷಾಂ ಚ ತೇನ ಚರಸಿ ಪ್ರತಿಹುಂಕೃತೇನ ॥ ೬೮ ॥

ಪದಚ್ಛೇದ :- ಸ್ಥೂಲಂ, ಹಿ, ಸದ್ಮ, ಪ್ರಥಿವೀ ಸಹಿತಂ, ತು, ಅರಕ್ಷಃ, ಉದ್ಧೃತ್ಯ, ವಹ್ನಿಮುಖಃ, ತದು, ಚ, ಏತದೋಷ್ಣಾ, ಭಾಂಡಂ, ತದರ್ಥಂ, ಉರು, ಕುಂಭಕರೇಣ, ದತ್ತಂ, ಭಿಕ್ಷಾಂ, ಚ ತೇನ, ಚರಸಿ, ಪ್ರತಿಹುಂಕೃತೇನ ।

ಅರ್ಥ :- ಸ್ಥೂಲಂ ಚ = ಭಾರವಾದ, ಸದ್ಮತು = ಮನೆಯನ್ನಾದರೋ, ತದೇಕ ದೋಷ್ಣಾ = ನಿನ್ನ ಒಂದೇ ಕೈಯಿಂದ, ಪೃಥಿವೀಸಹಿತಂ = ಭೂಮಿ ಸಹಿತವಾಗಿ, ಉದ್ಧೃತ್ಯ = ಎತ್ತಿ, ಮಹ್ನಿ ಮುಖತಃ = ಅಗ್ನಿ ಮುಖದಿಂದ, ಅರಕ್ಷಃ = ರಕ್ಷಿಸಿದಿ, ತದರ್ಥ = ಅದಕ್ಕೊಸ್ಕರ, ಕುಂಭಕರೇಣ = ಕುಂಬಾರನಿಂದ, ಉರು = ದೊಡ್ಡದಾದ ಭಾಂಡಂ = ಘಟವು, ದತ್ತಂ = ಕೊಡಲ್ಪಟ್ಟಿತು, ತೇನ = ಘಟದಿಂದ, ಪ್ರತಿಹುಂಕೃತೇನ ಚ = ಪ್ರತಿಯೊಂದು ಹುಂಕಾರದಿಂದಲೂ, ಭಿಕ್ಷಾಂ ಚರಸಿ = ಭಿಕ್ಷಾಟನೆ ಮಾಡುತ್ತಿರುವಿ.

ತಾತ್ಪರ್ಯ :- ಒಂದು ದೊಡ್ಡ ಮನೆಯನ್ನು ಅದು ಇದ್ದ ಸ್ಥಳ ಸಹಿತವಾಗಿ ಒಂದು ಕೈಯಿಂದೆತ್ತಿ ಅಗ್ನಿಮುಖದಿಂದ ರಕ್ಷಿಸಿದಿ. ಅದಕ್ಕೆ ಮನೆಯೊಡಯನಾದ ಕುಂಬಾರ ಮನೆಯಷ್ಟು ದೊಡ್ಡ ಮಡಿಕೆ ಮಾಡಿಕೊಟ್ಟ ನೀನು ಪ್ರತಿಯೊಂದು ಹುಂಕಾರದಿಂದಲೂ ಆ ಮಡಿಕೆಯಿಂದ ಭಿಕ್ಷಾಟನೆ ಮಾಡುತ್ತಿರುವಿ.

ಧರ್ಮಸ್ಯ ತೇ ಸುನಿಯತೇರ್ಬಲತಶ್ಚ ಬೋಧೋ
ಭೂಯಾತ್ ಸುಯೋಧನಜನಸ್ಯ ತತೋ ಭಯಂ ಮೇ ।
ಮಾತ್ರಾ ಸಹೈವ ವಸ ಫಲ್ಗುನಪೂರ್ವಕೈಸ್ತ್ವ-
ಮಾನೀತಮೇವ ಪರಿಭುಂಕ್ಷ್ವ ನತು ವ್ರಜೇಥಾಃ ॥ ೬೯ ॥

ಪದಚ್ಛೇದ :- ಧರ್ಮಸ್ಯ, ತೇ ಸುನಿಯತೇ, ಬಲತ, ಚ, ಬೋಧಃ, ಭೂಯಾತಿ, ಸುಯೋಧನಜನಸ್ಯ, ತತಃ, ಭಯಂ, ಮೇ, ಮಾತ್ರಾ, ಸಹ, ಏವ, ವಸ, ಫಲ್ಗುನಪೂರ್ವಕೈ, ತ್ವಂ, ಆನೀತಂ, ಏವ ಪರಿಭುಂಕ್ತ್ವ, ನ, ತು, ವ್ರಜೇಥಾಃ ।

**ಅರ್ಥ** :- **ತೇ** = ನಿನ್ನ, **ಧರ್ಮಸ್ಯ** = ಧರ್ಮದ, **ಸುನಿಯತೇಃ** = ನಿಷ್ಠೆಯಿಂದ, **ಬಲತಃ ಚ** = ಬಲದಿಂದಲೂ, **ಸುಯೋಧನಜನಸ್ಯ** = ದುರ್ಯೋಧನನ ಗೂಢಾಚಾರರಿಗೆ, **ಬೋಧಃ** = ತಿಳುವಳಿಕೆಯು, **ಭೂಯಾತ್** = ಆಗೀತು, **ತತಃ** = ಅನಂತರ, **ಮೇ** = ನನಗೆ, **ಭಯಂ** = ಭಯವು, **ತ್ವಂ** = ನೀನು, **ಮಾತ್ರಸಹ ಏವ** = ತಾಯಿಯೊಂದಿಗೇ, **ವಸ** = ಇರು, **ಫಲ್ಗುನಪೂರ್ವಕೈಃ** = ಅರ್ಜುನ ಮುಂತಾದವರಿಂದ, **ಆನೀತಂ ಏವ** = ತಂದಂತಹ ಭಿಕ್ಷೆಯನ್ನು, **ಪರಿಭುಂಕ್ಷ್ವ** = ತಿನ್ನು, **ನತು ವ್ರಜೇಥಾಃ** = ಭಿಕ್ಷೆಗೆ ಹೋಗಬೇಡ.

**ತಾತ್ಪರ್ಯ** :- ನಿನ್ನ ಧರ್ಮನಿಷ್ಠೆಯಿಂದಲೂ ಬಲದಿಂದಲೂ ದುರ್ಯೋಧನನ ಗೂಢಚಾರರಿಗೆ ನಮ್ಮ ಬಗ್ಗೆ ಸುಳಿವು ಸಿಗಬಹುದೆಂದು ಅದರಿಂದ ನನಗೆ ಭಯ ಉಂಟಾಗಿದೆ. ನೀನು ತಾಯಿಯೊಂದಿಗೆ ಇರು. ಅರ್ಜುನಾದಿಗಳು ತರುವ ಅನ್ನವನ್ನೇ ಉಣ್ಣು ಹೋಗಬೇಡ.

**ಇತ್ಯುಕ್ತ ಆಶು ಸ ಚಕಾರ ತಥೈವ ಭೀಮ-**
**ಸ್ತೇಽಪಿ ಸ್ವಧರ್ಮಪರಿರಕ್ಷಣಹೇತುಮೌನಾಃ ।**
**ಭಿಕ್ಷಾಂ ಚರಂತ್ಯಥ ಚತುರ್ಷ್ವಪಿ ತೇಷು ಯಾತೇ-**
**ಷ್ವೇಕತ್ರ ಮಾತೃಸಹಿತಃ ಸ ಕದಾಚಿದಾಸ್ತೇ ॥ ೭೦ ॥**

**ಪದಚ್ಛೇದ :- ಇತಿ, ಉಕ್ತೇ, ಆಶು, ಸ, ಚಕಾರ, ತಥಾ, ಏವ, ಭೀಮಃ, ತೇ, ಅಪಿ, ಸ್ವಧರ್ಮ ಪರಿರಕ್ಷಣ ಹೇತುಮೌನಾಃ, ಭಿಕ್ಷಾಂ, ಚರಂತಿ, ಅಥ, ಚತುರ್ಷ, ಅಪಿ, ತೇಷು, ಯಾತೇಷು, ಏಕತ್ರ, ಮಾತ್ರ ಸಹಿತಃ, ಸಃ, ಕತಾಚಿತ್, ಆಸ್ತೇ ।**

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತೇ** = ಧರ್ಮರಾಜನು ಹೇಳುತ್ತಿರಲು, **ಸಃ ಭೀಮಃ** = ಆ ಭೀಮನು, **ಆಶು** = ಒಡನೆಯೇ, **ತಥಾ ಏವ** = ಹಾಗೆಯೇ, **ಚಕಾರ** = ಮಾಡಿದನು, **ತೇ ಅಪಿ** = ಉಳಿದ ನಾಲ್ವರಾಜರೂ, **ಸ್ವಧರ್ಮ** = ತಮ್ಮ ಧರ್ಮದ, **ಪರಿರಕ್ಷಣ ಹೇತು** = ರಕ್ಷಣೆಯ ಕಾರಣದಿಂದ, **ಮೌನಾಃ** = ಮೌನ ಉಳ್ಳವರಾಗಿ, **ಭಿಕ್ಷಾಂ ಚರಂತಿ** = ಭಿಕ್ಷಾಟನೆ ಮಾಡಿದರು, **ಅಥ ಕದಾಚಿತ್** = ಬಳಿಕ ಒಂದುದಿನ, **ತೇಷು ಚತುರ್ಷು ಅಪಿ** = ನಾಲ್ವರೂ ಕೂಡ, **ಏಕತ್ರಯಾತೇಷು** = ಒಂದು ಕಡೆ ಭಿಕ್ಷೆಗೆ ಹೋಗುತ್ತಿರಲು, **ಸಃ** = ಭೀಮನು, **ಮಾತ್ರಾಸಹ** = ತಾಯಿಯೊಂದಿಗೆ, **ಆಸ್ತೇ** = ಕುಳಿತನು.

ತಾತ್ಪರ್ಯ :- ಧರ್ಮರಾಜ ಹೀಗೆ ಹೇಳಿದಾಗ ಭೀಮ ಒಡನೆಯೆ ಹಾಗೇ ಮಾಡಿದ. ಉಳಿದವರು ತಮ್ಮ ಕ್ಷತ್ರಿಯ ಧರ್ಮದ ರಕ್ಷಣೆಗಾಗಿ ಮೌನದಿಂದಿದ್ದು ಭಿಕ್ಷಾಟನೆ ಮಾಡುತ್ತಿದ್ದರು ಬಳಿಕ ಒಮ್ಮೆ ನಾಲ್ವರೂ ಭಿಕ್ಷಾಟನೆಗೆ ಹೋಗಿದ್ದಾಗ ಭೀಮನೊಬ್ಬನೇ ತಾಯಿಯೊಂದಿಗೆ ಕುಳಿತಿದ್ದ.

ತತ್ಕಾಲ ಏವ ರುದಿತಂ ನಿಜವಾಸಹೇತೋ-
ರ್ವಿಪ್ರಸ್ಯ ದಾರಸಹಿತಸ್ಯ ನಿಶಮ್ಯ ಭೀಮಃ ।
ಸ್ತ್ರೀಬಾಲಸಂಯುತಗೃಹೇ ಶಿಶುಲಾಳನಾದೌ
ಲಜ್ಜೇದಿತಿ ಸ್ಮ ಜನನೀಮವದನ್ನಚಾಗಾತ್ ॥ ೭೦ ॥

ಪದಚ್ಛೇದ :– ತತ್ಕಾಲ, ಏವ, ರುದಿತಂ, ನಿಜವಾಸಹೇತೋಃ, ವಿಪ್ರಸ್ಯ, ದಾರಸಹಿತಸ್ಯ, ನಿಶಮ್ಯ, ಭೀಮಃ, ಸ್ತ್ರೀ, ಬಾಲಸಂಯುತ ಗೃಹೇ, ಶಿಶುಲಾಳನಾದೌ, ಲಜ್ಜೇತ್, ಇತಿ, ಸ್ಮ, ಜನನೀಂ, ಅವದತ್, ನ, ಚ, ಆಗಾತ್ ।

ಅರ್ಥ :- ತತ್ಕಾಲೇ ಏವ = ಅದೇ ಸಮಯದಲ್ಲಿ, ನಿಜವಾಸಹೇತೋಃ = ತಾವು ವಾಸವಾಗಿದ್ದ ಮನೆಯೊಡೆಯನಾದ, **ದಾರಸಹಿತಸ್ಯ** = ಹೆಂಡತಿಯೊಂದಿಗೆ, ವಿಪ್ರಸ್ಯ = ಬ್ರಾಹ್ಮಣನ, **ರುದಿತಂ** = ಅಳುವನ್ನು, **ಭೀಮಃ** = ಭೀಮನು, **ನಿಶಮ್ಯ** = ಕೇಳಿ, **ಬಾಲಸಂಯುತಗೃಹೇ** = ಮಗುವಿನಿಂದ ಕೂಡಿದಂತಹ ಮನೆಯಲ್ಲಿ, **ಸ್ತ್ರೀ** = ಹೆಂಗಸು, **ಶಿಶುಲಾಲನಾದೌ** = ಮಗುವಿನ ಲಾಲನಾದಿಗಳಲ್ಲಿ, **ಲಜ್ಜೇತ್ ಇತಿ** = ಲಜ್ಜೆ ಪಡಬಹುದೆಂದು, **ಜನನೀಂ** = ತಾಯಿಯನ್ನು ಕುರಿತು, **ಅವದತ್** = (ಹೋಗಲು) ಹೇಳಿದನು, **ನ ಅಗಾತ್ ಚ** = ತಾನು ಹೋಗಲಿಲ್ಲ.

ತಾತ್ಪರ್ಯ :- ಅದೇ ಸಮಯದಲ್ಲಿ ತಾವು ವಾಸವಾಗಿದ್ದ ಮನೆಯೊಡೆಯ ಬ್ರಾಹ್ಮಣ ಪತ್ನಿಯೊಂದಿಗೆ ಅಳುತ್ತಿದ್ದುದನ್ನು ಕೇಳಿ ಭೀಮ ಮಕ್ಕಳಿರುವ ಮನೆಯಲ್ಲಿ ಹೆಂಗಸು ಮಗುವಿನ ಲಾಲನಾದಿಗಳಲ್ಲಿ ಲಜ್ಜೆಪಡಬಹುದೆಂದು ತಾಯಿಯನ್ನೆ ಕಳಿಸಿದ ತಾನು ಹೋಗಲಿಲ್ಲ.

ಜಾನೀಹಿ ವಿಪ್ರರುದಿತಂ ಕುತ ಇತ್ಯತಶ್ಚ-
ಯೋಗ್ಯಂ ವಿಧಾಸ್ಯ ಇತಿ ಸಾ ಪ್ರಯಯೌ ಚ ಶೀಘ್ರಮ್ ।

ಸಾ ಸಂವೃತೈವ ಸಕಲಂ ವಚನಂ ಗೃಹೇಽಸ್ಯ
ಶುಶ್ರಾವ ವಿಪ್ರವರ ಆಹ ತದಾ ಪ್ರಿಯಾಂ ಸಃ ॥ ೭೨ ॥

ಪದಚ್ಛೇದ :- ಜಾನೀಹಿ, ವಿಪ್ರರುದಿತಂ, ಕುತಃ, ಇತಿ, ಅತಃ, ಚ, ಯೋಗ್ಯಂ, ವಿಧಾಸ್ಯ, ಇತಿ, ಸಾ, ಪ್ರಯಯೌ, ಚ ಶೀಘ್ರಂ, ಸಾ, ಸಂವೃತಾ, ಏವ, ಸಕಲಂ, ವಚನಂ, ಗೃಹೆ, ಅಸ್ಯ, ಶುಶ್ರಾವ, ವಿಪ್ರವರ, ಆಹ, ತದಾ, ಪ್ರಿಯಾಂ, ಸಃ ।

ಅರ್ಥ :- ವಿಪ್ರರುದಿತಂ = ವಿಪ್ರನ ಅಳುವಿಕೆಯು, ಕುತಃ = ಯಾವ ಕಾರಣಕ್ಕಾಗಿ, ಇತಿ = ಎಂದು, ಜಾನೀಹಿ = ತಿಳಿ, ಅತಃ = ಅಳುವಿನ ಕಾರಣ ತಿಳಿಯುವುದರಿಂದ, ಯೋಗ್ಯಂ ಚ = ಯೋಗ್ಯ ಪ್ರತೀಕಾರವನ್ನು, ವಿಧಾಸ್ಯೇ = ಮಾಡುತ್ತೇನೆ, ಇತಿ = ಎಂದನು, ಸಾ ಚ = ಕುಂತಿಯು, ಶೀಘ್ರಂ = ಬೇಗನೆ, ಪ್ರಯಯೌ = ಹೋದಳು, ಸಾ ಸಂವೃತಾ ಏವ = ಅವಳು ಅಡಗಿಯೇ, ಗೃಹೇ = ಮನೆಯಲ್ಲಿ, ಅಸ್ಯ = ಅವನ, ಸಕಲಂ ವಚನಂ = ಎಲ್ಲಾ ಮಾತನ್ನು, ಶುಶ್ರಾವ = ಕೇಳಿಸಿಕೊಂಡಳು, ತದಾ = ಆಗ, ವಿಪ್ರವರಃ ಸಃ = ಆ ಬ್ರಾಹ್ಮಣ ಶ್ರೇಷ್ಠನು, ಪ್ರಿಯಾಂ = ಹೆಂಡತಿಯನ್ನು ಕುರಿತು, ಆಹ = ಹೇಳಿದನು.

ತಾತ್ಪರ್ಯ :- ಬ್ರಾಹ್ಮಣ ಯಾವ ಕಾರಣದಿಂದ ಅಳುತ್ತಿದ್ದಾನೆ ಎಂಬುದನ್ನು ತಿಳಿದುಕೋ ಅದಕ್ಕೆ ತಕ್ಕ ಪರಿಹಾರವನ್ನು ನಾನು ಮಾಡುತ್ತೇನೆಂದು ಹೇಳಿ ಭೀಮ ಕುಂತಿಯನ್ನು ಕಳಿಸಿದ ಕುಂತಿಯು ಮರೆಯಲ್ಲಿ ನಿಂತು ಮನೆಯೊಳಗೆ ಬ್ರಾಹ್ಮಣನಾಡಿದ ಎಲ್ಲ ಮಾತುಗಳನ್ನೂ ಕೇಳಿದಳು. ಬ್ರಾಹ್ಮಣ ತನ್ನ ಪತ್ನಿಗೆ ಹೀಗೆ ಹೇಳುತ್ತಿದ್ದ.

ದಾತವ್ಯ ಏವ ಹಿ ಕರೋಽದ್ಯ ಚ ರಕ್ಷಸೋಽಸ್ಯ
ಸಾಕ್ಷಾದ್ ಬಕಸ್ಯ ಗಿರಿಸನ್ನಿಭಭಕ್ಷ್ಯ ಭೋಜ್ಯಃ ।
ಪುಂಸಾಽನಸಾ ಚ ಸಹಿತಾನಡುಹಾ ಪುಮಾಂಸ್ತು
ನೈವಾಸ್ತಿ ನೋಽಪ್ರದದತಾಂ ಚ ಸಮಸ್ತನಾಶಃ ॥ ೭೩ ॥

ಪದಚ್ಛೇದ :- ದಾತವ್ಯ, ಏವ, ಹಿ, ಕರಃ, ಅದ್ಯ, ರಕ್ಷಸಃ, ಅಸ್ಯ, ಸಾಕ್ಷಾದ್, ಬಕಸ್ಯ, ಗಿರಿಸನ್ನಿಭ ಭಕ್ಷ್ಯ, ಭೋಜ್ಯ, ಪುಂಸಾ, ಅನಸಾ, ಚ ಸಹಿತಃ ಆನಡುಹಾ, ಪುಮಾನ್, ತು, ನ, ಏವ, ಅಸ್ತಿ, ನಃ, ಅಪ್ರದದತಾಂ, ಚ, ಸಮಸ್ತನಾಶಃ ।

**ಅರ್ಥ** :- **ಸಾಕ್ಷಾತ್** = ಸಾಕ್ಷಾತ್ತಾಗಿ, **ಗಿರಿಸನ್ನಿಭಭಕ್ಷ್ಯಭೋಜ್ಯಃ** = ಬೆಟ್ಟದಷ್ಟು ಗಾತ್ರದ ಭಕ್ಷ್ಯಭೋಜ್ಯಗಳು, **ಅನಸಾ** = ಬಂಡಿಯೊಂದಿಗೆ, **ಅನುಡುಹಾ** = ಎತ್ತಿನೊಂದಿಗೆ, **ಚ** = ಮತ್ತು, **ಪುಂಸಾ ಸಹಿತಃ** = ಮನುಷ್ಯನೊಂದಿಗೆ ಕೂಡಿಕೊಂಡು, **ಅಧ್ಯಏವ** = ಇಂದೇ, **ರಾಕ್ಷಸಸ್ಯ**, **ಬಕಸ್ಯ** = ಬಕಾಸುರನಿಗೆ, **ಕರಃ** = ಕಪ್ಪವಾಗಿ, **ದಾತವ್ಯಃ ಹಿ** = ಕೊಡಲ್ಪಡಬೇಕಿದೆ, **ಪ್ರಮಾನ್ ತು** = ಮನುಷ್ಯನಾದರೋ, **ನೈವ ಅಸ್ತಿ** = ನಮಲ್ಲಿ ಇಲ್ಲ, **ಚ** = ಮತ್ತು, **ನಃ ಅಪ್ರದದತಾಂ** = ಕೊಡದಿದ್ದರೆ ನಮಗೆ, **ಸಮಸ್ತನಾಶಃ** = ಸರ್ವನಾಶ ನಿಶ್ಚಿತ.

**ತಾತ್ಪರ್ಯ** :- ಬೆಟ್ಟದಷ್ಟು ಗಾತ್ರದ ಭಕ್ಷ್ಯಭೋಜ್ಜಗಳನ್ನು ಬಂಡಿಯಲ್ಲಿ ತುಂಬಿ ಎತ್ತುಗಳು ಮತ್ತು ಮನುಷ್ಯನೊಂದಿಗೆ ನಾವು ಇಂದೇ ಬಕ ರಾಕ್ಷಸನಿಗೆ ಕಪ್ಪವಾಗಿ ಕೊಡಬೇಕಾಗಿದೆ ನಮ್ಮಲ್ಲಿ ಮನುಷ್ಯನಿಲ್ಲ ಆದರೆ ಕೊಡದಿದ್ದರೆ ಸರ್ವನಾಶ ನಿಶ್ಚಿತ.

**ಅನ್ಯತ್ರ ಯಾಮ ಇತಿ ಪೂರ್ವಮುದಾಹೃತಂ ಮೇ**
**ನೈತತ್ ಪ್ರಿಯೇ ತವ ಮನೋಗತಮಾಸ ತೇನ ।**
**ಯಾಸ್ಯಾಮಿ ರಾಕ್ಷಸಮುಖಂ ಸ್ವಯಮೇವ ಮರ್ತುಂ**
**ಭಾರ್ಯೈನಮಾಹ ನ ಭವಾನಹಮತ್ರ ಯಾಮಿ ॥ ೭೪ ॥**

**ಪದಚ್ಛೇದ :– ಅನ್ಯತ್ರ, ಯಾಮಃ, ಇತಿ, ಪೂರ್ವಂ, ಉದಾಹುತಂ, ಮೇ, ನ, ಏತತ್, ಪ್ರಿಯೇ, ತವ, ಮನೋಗತಂ, ಆಸ, ತೇನ, ಯಾಸ್ಯಾಮಿ, ರಾಕ್ಷಸಮುಖಂ, ಸ್ವಯಂ, ಏವ, ಮರ್ತುಂ, ಭಾರ್ಯಾ, ಏನಂ, ಆಹ, ನ, ಭವಾನ್, ಅಹಂ, ಅತ್ರಯಾಮಿ ।**

**ಅರ್ಥ** :- **ಅನ್ಯತ್ರ** = ಬೇರೆಕಡೆ, **ಯಾಮಃ** = ಹೋಗೋಣ, **ಇತಿ** = ಎಂದು, **ಪೂರ್ವಂ** = ಹಿಂದೆ (ಹೇಳಿದ), **ಮೇ** = ನನ್ನ, **ಉದಾಹೃತಂ** = ಮಾತು, **ಪ್ರಿಯೇ** = ಪ್ರಿಯೆ, **ಏತತ್** = ಅದು, **ತವ** = ನಿನ್ನ, **ಮನೋಗತಂ** = ಸಂಕಲ್ಪಕ್ಕೆ, **ನ ಆಸ** = ಬರಲಿಲ್ಲ, **ತೇನ** = ಅದರಿಂದ, **ಸ್ವಯಮೇವ** = ನಾನೇ, **ಮರ್ತುಂ** = ಸಾಯಲು, **ರಾಕ್ಷಸಮುಖಂ** = ರಾಕ್ಷಸನ ಬಾಯಿಗೆ, **ಯಾಸ್ಯಾಮಿ** = ಬೀಳುವೆ (ಆಗ), **ಭಾರ್ಯಾ** = ಹೆಂಡತಿಯು, **ಏನಂ** = ಗಂಡನನ್ನು ಕುರಿತು, **ಆಹ** = ಹೇಳಿದಳು, **ನಭವಾನ್** = ನೀನಲ್ಲ, **ಅಹಂ** = ನಾನು, **ಅತ್ರ** = ಅಲ್ಲಿಗೆ, **ಯಾಮಿ** = ಹೋಗುತ್ತೇನೆ.

**ತಾತ್ಪರ್ಯ :-** ನಾವು ಬೇರೆ ಕಡೆಗೆ ಹೋಗೋಣ ಎಂದು ನಾನು ಹಿಂದೆ ಹೇಳಿದೆ. ಪ್ರಿಯೆ ಅದು ನಿನ್ನ ಮನಸ್ಸಿಗೆ ಬರಲಿಲ್ಲ ಅದರಿಂದ ಈಗ ನಾನೇ ಸಾಯಲು ರಾಕ್ಷಸನ ಬಾಯಿಗೆ ಬೀಳುವೆ ಎಂದ. ನೀನಲ್ಲ ನಾನು ಹೋಗುವೆನು ಎಂದಳು ಪತ್ನಿ.

**ಅರ್ಥೇ ತವಾದ್ಯ ತನುಸಂತ್ಯಜನಾದಹಂ ಸ್ಯಾಂ**
**ಲೋಕೇ ಸತೀಪ್ರಚರಿತೇ ತದೃತೇ ತ್ವಧಶ್ಚ ।**
**ಕನ್ಯಾऽऽಹ ಚೈನಮಹಮೇವ ನ ಕನ್ಯಯಾऽರ್ಥ**
**ಇತ್ಯುಕ್ತ ಆಹ ಧಿಗಿತಿ ಸ್ಮ ಸ ವಿಪ್ರವರ್ಯಃ ॥ ೭೫ ॥**

**ಪದಚ್ಛೇದ :–** ಅರ್ಥೇ, ತವ, ಅದ್ಯ, ತನುಸಂತ್ಯಜನಾತ್, ಅಹಂ, ಸ್ಯಾಂ, ಲೋಕೇ, ಸತೀ ಪ್ರಚರಿತೆ, ತದೃತೇ, ತು, ಅಧಶ್ಚ ಕನ್ಯಾ, ಆಹ, ಚ, ಏನಂ, ಅಹಮೇವ, ನ, ಕನ್ಯಯಾ, ಅರ್ಥಃ, ಇತಿ, ಉಕ್ತಃ, ಆಹ, ಧಿಗಿತಿ, ಸ್ಮ ಸಃ, ವಿಪ್ರವರ್ಗ ।

**ಅರ್ಥ :-** **ತವಾರ್ಥೇ ತು** = ನಿನಗಾಗಿಯಾದರು, **ಅಹಂ** = ನಾನು, **ಅದ್ಯ** = ಇಂದು, **ತನುಸಂತ್ಯಜನಾತ್** = ಶರೀರತ್ಯಾಗದಿಂದ, **ಸತೀಪ್ರಚರಿತೇ** = ಪತಿವ್ರತೆಯರ, **ಲೋಕೇ** = ಲೋಕದಲ್ಲಿ, **ಸ್ಯಾಂ** = ಇರುತ್ತೇನೆ, **ತದೃತೇ** = ಹಾಗಲ್ಲದಿದ್ದರೆ, **ಅಧಶ್ಚ** = ಅಧೋಲೋಕವನ್ನು, **ಸ್ಯಾಂ** = ಹೊಂದುತ್ತೇನೆ, **ಕನ್ಯಾಚ** = ಮಗಳಾದರೂ, **ಏನಂ** = ಈ ಬ್ರಾಹ್ಮಣನನ್ನು ಕುರಿತು, **ಅಹಂ** = ನಾನು, **ಏಮಿ** = ಹೋಗುತ್ತೇನೆ, **ಕನ್ಯಯಾ** = ಕನ್ಯೆಯಿಂದ, **ನ ಅರ್ಥಃ** = ಪ್ರಯೋಜನವಿಲ್ಲ, **ಇತಿ** = ಎಂದು, **ಆಹ** = ಹೇಳಿದಳು, **ಇತ್ಯುಕ್ತಃ** = ಈ ರೀತಿ ಹೇಳಲ್ಪಟ್ಟ, **ಸಃ** = ಆ, **ವಿಪ್ರವರ್ಯಃ** = ಬ್ರಾಹ್ಮಣನು, **ದಿಗಿತಿ** = ಧಿಕ್ಕಾರವೆಂದು, **ಆಹಸ್ಮ** = ಹೇಳಿದನಷ್ಟೆ.

**ತಾತ್ಪರ್ಯ :-** 'ನಿನಗಾಗಿ ನಾನೀಗ ಶರೀರ ತ್ಯಾಗ ಮಾಡಿದರೆ ನಾನು ಪತಿವ್ರತೆ ಎಂಬ ಕೀರ್ತಿ ಹೊಂದಬಲ್ಲೆ ಪತಿವ್ರತೆಯರ ಲೋಕವನ್ನೂ ಹೊಂದಬಲ್ಲೆ. ಇಲ್ಲದಿದ್ದರೆ ಅಧೋಲೋಕವನ್ನು ಪಡೆಯಬೇಕಾದೀತು', ಎಂದಳು ಪತ್ನಿ. ಆಗ ಮಗಳು ತಂದೆಗೆ ಹೇಳಿದಳು, 'ನಾನು ಹೋಗುವೆನು. ಕನ್ಯೆಯಿಂದ ಏನು ಪ್ರಯೋಜನ ಇಲ್ಲ ತಾನೆ?' ಬ್ರಾಹ್ಮಣನೆಂದ 'ಛೀ, ಹಾಗೆನ್ನಬೇಡ'.

ಕನ್ಯೋದಿತಾ ಬತ ಕುಲದ್ವಯತಾರಿಣೇತಿ
ಜಾಯಾ ಸಖೇತಿ ವಚನಂ ಶ್ರುತಿಗಂ ಸುತಶ್ಚ ।
ಆತ್ಮೈವ ತೇನ ನತು ಜೀವನಹೇತುತೋऽಹಂ
ಧೀಪೂರ್ವಕಂ ನ್ರಶನಕೇ ಪ್ರತಿಪಾದಯಾಮಿ ॥ ೭೬ ॥

ಪದಚ್ಛೇದ :- ಕನ್ಯಾ, ಉದಿತಾ, ಬತ, ಕುಲದ್ವಯತಾರಿಣೀ, ಇತಿ, ಜಾಯಾ, ಸಖಾ, ಇತಿ, ವಚನಂ, ಶ್ರುತಿಗಂಶ್ರುತಃ, ಚ, ಆತ್ಮೈವ, ತೇನ, ನ, ತು, ಜೀವನಹೇತುತಃ, ಅಂಕಂ, ಧೀಪೋರ್ವಕಂ, ನ್ರಶನಕೆ, ಪ್ರತಿಪಾದಯಾಮಿ ।

ಅರ್ಥ :- ಬತ = ಅಯ್ಯೋ, ಕನ್ಯಾ = ಕನ್ಯೆಯು, ಕುಲದ್ವಯತಾರಿಣೀ = ಎರಡು ಕುಲವನ್ನು ಉದ್ಧರಿಸುವವಳು, ಇತಿ = ಎಂದು, ಉದಿತಾ = ಹೇಳಲ್ಪಟ್ಟಿದ್ದಾಳೆ, ಜಾಯಾ = ಹೆಂಡತಿಯು, ಸಖಾ = ಗೆಳತಿಯು, ಇತಿ = ಎಂದು, ಶ್ರುತಿಗಂ = ವೇದದಲ್ಲಿರುವ, ವಚನಂ = ಮಾತು, ಚ = ಮತ್ತು, ಸುತಃ = ಮಗನು, ಆತ್ಮೈವ = ತಾನೇ, ತೇನ = ಆದ್ದರಿಂದ, ಅಹಂ = ನಾನು, ಜೀವನ ಹೇತುತಃ = ಬದುಕುವುದಕ್ಕಾಗಿ, ಧೀಪೂರ್ವಕಂ = ಬುದ್ಧಿಪೂರ್ವಕವಾಗಿ, ನ್ರಶನಕೇ = ಬಕನಬಾಯಿಗೆ, ನಪ್ರತಿಪಾದಯಾಮಿ = ಕಳುಹಿಸುವುದಿಲ್ಲ.

ತಾತ್ಪರ್ಯ :- ಕನ್ಯೆ 'ಎರಡೂ ಕುಲಗಳನ್ನು ಉದ್ಧರಿಸುವವಳು' ಎಂದು ವರ್ಣಿತಳಾಗಿದ್ದಾಳೆ. ಪತ್ನಿಯು ಸಖಿ ಎನ್ನುವ ವಚನ ಶ್ರುತಿಯಲ್ಲಿದೆ. ಮಗನೆಂದರೆ ತನ್ನದೇ ಆದ ಇನ್ನೊಂದು ರೂಪ. ಅದರಿಂದ ನನ್ನ ಪ್ರಾಣ ರಕ್ಷಣೆಗಾಗಿ ತಿಳಿದೂ ತಿಳಿದೂ ನಿಮ್ಮನ್ನು ನರಭಕ್ಷಕನ ಬಾಯಿಗೆ ಕೊಡಲಾರೆ.

ಏವಂ ರುದತ್ಸು ಸಹಿತೇಷು ಕುಮಾರಕೋऽಸ್ಯ
ಪ್ರಾಹ ಸ್ವಹಸ್ತಗತೃಣಂ ಪ್ರತಿದರ್ಶ್ಯ ಚೈಷಾಮ್ ।
ಏತೇನ ರಾಕ್ಷಸಮಹಂ ನಿಹನಿಷ್ಯ ಏವೇ-
ತ್ಯುಕ್ತೇ ಸುವಾಕ್ಯಮನು ಸಾ ಪ್ರವಿವೇಶ ಕುಂತೀ ॥ ೭೭ ॥

ಪದಚ್ಛೇದ :- ಏವಂ, ರುದತ್ಸು, ಸಹಿತೇಷು, ಕುಮಾರಕಃ, ಅಸ್ಯ, ಪ್ರಾಹ, ಸ್ವಹಸ್ತಗತೃಣಂ, ಪ್ರತಿದರ್ಶ್ಯ, ಚ, ಏಷಾಂ, ಏತೇನ, ರಾಕ್ಷಸಂ, ಅಂಕಂ, ನಿಹನಿಷ್ಯೆ, ಏವ, ಇತಿ, ಉಕ್ತೇ, ಸುವಾಕ್ಯಂ, ಅನು, ಸಾ, ಪ್ರವಿವೇಶ, ಕುಂತೀ ।

ಅರ್ಥ :- ಏವಂ = ಈ ರೀತಿಯಾಗಿ, ರುದತ್ಸು ಸಹಿತೇಷು = ಒಟ್ಟಿಗೆ ಅಳುತ್ತಿರಲು, ಅಸ್ಯ = ಈ ಬ್ರಾಹ್ಮಣನ, ಕುಮಾರಕಃ = ಮಗನು, ಸ್ವಹಸ್ತಗತೃಣಂ = ತನ್ನ ಕೈಯಲ್ಲಿರುವ ಹುಲ್ಲನ್ನು, ಪ್ರತಿದರ್ಶ್ಯ ಚ = ತೋರಿಸಿಯಾದರು, ಏತೇನ = ಈ ಹುಲ್ಲು ಕಡ್ಡಿಯಿಂದ, ರಾಕ್ಷಸಂ = ರಾಕ್ಷಸನಾದ ಬಕನನ್ನು, ಅಹಂ = ನಾನು, ನಿಹನಿಷ್ಯ ಏವ = ಕೊಲ್ಲುತ್ತೇನೆಯಷ್ಟೆ, ಇತಿ = ಈ ರೀತಿಯಾಗಿ, ಉಕ್ತೆ = ಹೇಳುತ್ತಿರಲು, ಏಷಾಂ = ಈ ನಿಮಗೆ, ಸುವಾಕ್ಯಂ ಅನು = ಶುಭಸೂಚಕ ಮಾತಷ್ಟೆ, ಇತಿ = ಎಂದು, ಸಾ = ಆ, ಕುಂತೀ = ಕುಂತಿಯು, ಪ್ರವಿವೇಶ = (ಒಳ) ಪ್ರವೇಶಿಸಿದಳು.

ತಾತ್ಪರ್ಯ :- ಹೀಗೆ ಎಲ್ಲರೂ ಕೂಡಿ ಅಳುತ್ತಿದ್ದಾಗ ಎಳೆಯ ವಯಸ್ಸಿನ ಮಗ ತನ್ನ ಕೈಯಲ್ಲಿ ಒಂದು ಹುಲ್ಲು ಕಡ್ಡಿಯನ್ನು ಎತ್ತಿ ತೋರಿಸಿ 'ಈ ಹುಲ್ಲುಕಡ್ಡಿಯಿಂದ ನಾನು ರಾಕ್ಷಸನನ್ನು ಕೊಲ್ಲುವೆ' ಎಂದ. ಈ ಮಾತು ಶುಭಶಕುನವೆಂದು ಕುಂತಿ ಕೂಡಲೆ ಒಳಗೆ ಪ್ರವೇಶಿಸಿದಳು.

ಪೃಷ್ಟಸ್ತಯಾಽಽಹ ಸ ತು ವಿಪ್ರವರೋ ಬಕಸ್ಯ
ವೀರ್ಯಂ ಬಲಂ ಚ ದಿತಿಜಾರಿಭಿರಪ್ಯಸಹ್ಯಮ್ ।
ಸಂವತ್ಸರತ್ರಯಯುತೇ ದಶಕೇ ಕರಂ ಚ
ಪ್ರಾತಿಸ್ವಿಕಂ ದಶಮುಖಸ್ಯ ಚ ಮಾತುಲಸ್ಯ ॥ ೭೮ ॥

ಪದಚ್ಛೇದ :- ಪೃಷ್ಟಃ, ತಯಾ, ಆಹ, ಸ, ತು, ವಿಪ್ರವರಃ, ಬಕಸ್ಯ, ವೀರ್ಯಂ, ಬಲಂ, ಚ, ದಿತಿಜಾರಿಭಿಃ, ಅಪಿ, ಅಸಹ್ಯಮ್, ಸಂವತ್ಸರತ್ರಯಯುತೆ, ದಶಕೇ, ಕರಂ, ಚ, ಪ್ರಾತಿಸ್ವಿಕಂ, ದಶಮುಖಸ್ಯ, ಚ, ಮಾತುಲಸ್ಯ ।

ಅರ್ಥ :- ತಯಾತು = ಆ ಕುಂತಿಯಿಂದಲಾದರು, ಪೃಷ್ಟಃ = ಕೇಳಲ್ಪಟ್ಟ, ಸಃ = ಆ, ವಿಪ್ರವರಃ = ಬ್ರಾಹ್ಮಣನು, ದಶಮುಖಸ್ಯ = ರಾವಣನ, ಮಾತುಲಸ್ಯ = ಸೋದರಮಾವನಾದ, ಬಕಸ್ಯ = ಬಕನ, ವೀರ್ಯಂ = ಪರಾಕ್ರಮವನ್ನು, ಬಲಂ = ಬಲವನ್ನು, ಚ = ಮತ್ತು, ದಿತಿಜಾರಿಭಿಃ = ದೇವತೆಗಳಿಂದಲೂ, ಅಸಹ್ಯಂ = ಎದುರಿಸಲಾಗದ್ದನ್ನು, ಸಂವತ್ಸರತ್ರಯಯುತೇ ದಶಕೇ = ಹದಿಮೂರು ವರ್ಷದಿಂದಲೂ, ಪ್ರಾತಿಸ್ವಿಕಂ = ಸರದಿಯಾಗಿ, ಕರಂಚ = ಕರವನ್ನು (ಕೊಡುವಿಕೆಯನ್ನು), ಆಹ = ಹೇಳಿದನು.

**ತಾತ್ಪರ್ಯ** :- ಕುಂತಿ ಕೇಳಿದಾಗ ಆ ಬ್ರಾಹ್ಮಣೋತ್ತಮ ದೇವತೆಗಳಿಗೂ ಇದಿರಿಸಲಾಗದಂಥ ಬಕನ ವೀರ್ಯಪರಾಕ್ರಮಗಳನ್ನೂ ಅವನು ರಾವಣನ ಸೋದನ ಮಾವನಾಗಿದ್ದುದನ್ನೂ ಹದಿಮೂರು ವರ್ಷಗಳಿಂದಲೂ ಪ್ರತಿದಿನ ಸರದಿಯಂತೆ ಒಂದೊಂದು ಮನೆಯವರು ಅವನಿಗೆ ಕೊಡಬೇಕಾಗಿದ್ದ ಕಪ್ಪವನ್ನೂ ವಿವರಿಸಿದ.

**ಶ್ರುತ್ವಾ ತಮುಗ್ರಬಲಮತ್ಯುರುವೀರ್ಯಮೇವ**
**ರಾಮಾಯಣೇ ರಘುವರೋರುಶರಾತಿಭೀತಮ್ ।**
**ವಿಷ್ಟಂ ಬಿಲೇಷ್ವಥ ನೃಪಾನ್ ವಶಮಾಶು ಕೃತ್ವಾ**
**ಭೀತ್ಯೈವ ತೈಸ್ತದನು ದತ್ತಕರಂ ನನಂದ ॥ ೭೯ ॥**

**ಪದಚ್ಛೇದ** :- **ಶ್ರುತ್ವಾ, ತಂ, ಉಗ್ರಬಲಂ, ಅತಿ, ಉರುವೀರ್ಯಮ್, ಏವ, ರಾಮಾಯಣೇ, ರಘುವರೋರುಶರಾತಿಭೀತಮ್, ವಿಷ್ಟಮ್, ಬಿಲೇಷು, ಅಥ, ನೃಪಾನ್, ವಶಂ, ಆಶು ಕೃತ್ವಾ, ಭೀತ್ಯಾ, ಏವ, ತೈಃ, ತದನು, ದತ್ತಕರಂ, ನನಂದಃ ।**

**ಅರ್ಥ** :- **ಉಗ್ರಬಲಂ** = ಬಹಳ ಬಲವುಳ್ಳ, **ಅತ್ಯುರುವೀರ್ಯಂ** = ಬಹಳ ಪರಾಕ್ರಮವುಳ್ಳ, **ರಾಮಾಯಣೇ** = ರಾಮಾಯಣಕಾಲದಲ್ಲಿ, **ರಘುವರೋರುಶರಾತಿಭೀತಂ** = ರಘುವರ - ರಘೂತ್ತಮನಾದ ರಾಮನ, **ಉರುಶರ** - ಬಹಳವಾದ ಬಾಣಗಳಿಂದ, **ಅತಿಭೀತಂ** - ಹೆದರಿದವನಾಗಿ, **ಬಿಲೇಷು** = ಗುಹೆಗಳಲ್ಲಿ, **ವಿಷ್ಟಂ** = ಪ್ರವೇಶಿಸಿದವನನ್ನಾಗಿ, **ಅಥ** = ಅನಂತರ, **ನೃಪಾನ್** = ರಾಜರನ್ನು, **ಆಶು** = ಕೂಡಲೇ, **ವಶಂ** = ವಶವನ್ನಾಗಿ, **ಕೃತ್ವಾ** = ಮಾಡಿ, **ಭಿತ್ಯೈವ** = ಹೆದರಿಕೆಯಿಂದಲೆ, **ತೈಃ** = ಆ ರಾಜರಿಂದ, **ತದನು** = ಅವನನ್ನು ಅನುಸರಿಸಿ, **ದತ್ತಕರಂ** = ಕರವನ್ನ ಕೊಟ್ಟವನನ್ನಾಗಿ, **ಶ್ರುತ್ವಾ** = ಕೇಳಿ, **ನನಂದ** = ಸಂತೋಷಪಟ್ಟಳು.

**ತಾತ್ಪರ್ಯ** :- 'ಬಕ ಭಯಂಕರ ಬಲ ಉಳ್ಳವ, ಅತ್ಯಂತ ಮಹಾ ಪರಾಕ್ರಮಶಾಲಿ. ರಾಮಾಯಣ ಕಾಲದಲ್ಲಿ ಶ್ರೀ ರಾಮನ ಮಹಾಬಾಣಕ್ಕೆ ಬಲುಭೀತನಾಗಿ, ಗುಹೆಯೊಳಗೆ ಅಡುಗಿದವ. ಬಳಿಕ ಈಗ ರಾಜಗುರುಗಳನ್ನು ತನ್ನ ವಶಮಾಡಿಕೊಂಡು ಅವರಿಂದ ತನಗಿಷ್ಟವಾದ ಕಪ್ಪವನ್ನು ತೆಗೆದುಕೊಳ್ಳುತ್ತಿದ್ದಾನೆ ಅವರು ಭೀತಿಯಿಂದ ಕೊಡುತ್ತಿದ್ದಾರೆ' ಎಂದು ಬ್ರಾಹ್ಮಣ ಹೇಳಿದ್ದನ್ನು ಕೇಳಿ ಕುಂತಿ ಆನಂದಪಟ್ಟಳು.

ಏವಂ ಬಲಾಢ್ಯಮಮುಮಾಶು ನಿಹತ್ಯ ಭೀಮಃ
ಕೀರ್ತಿಂ ಚ ಧರ್ಮಮಧಿಕಂ ಪ್ರತಿಯಾಸ್ಯತೀಹ ।
ಸರ್ವೇ ವಯಂ ಚ ತಮನು ಪ್ರಗೃಹೀತಧರ್ಮಾ
ಯಾಸ್ಯಾಮ ಇತ್ಯವದದಾಶು ಧರಾಸುರಂ ತಮ್ ॥ ೮೦ ॥

ಪದಚ್ಛೇದ :- ಏವಂ, ಬಲಾಢ್ಯಂ, ಅಮುಂ, ಆಶು, ನಿಹತ್ಯ, ಭೀಮಃ, ಕೀರ್ತಿಂ, ಚ ಧರ್ಮಂ, ಅಧಿಕಂ, ಪ್ರತಿಯಾಸ್ಯತಿ, ಇಹ, ಸರ್ವೇ, ವಯಂ, ಚ, ತಂ, ಅನು, ವಿಗೃಹೀತಧರ್ಮಾಃ, ಯಾಸ್ಯಾಮಃ, ಇತಿ, ಅವದತ್, ಆಶುಧರಾಸುರಂ, ತಂ ।

**ಅರ್ಥ** :- ಏವಂ = ಈ ರೀತಿಯಾಗಿ, **ಬಲಾಢ್ಯಂ** = ಬಲವಂತನಾದ, ಧರಾಸುರಂ = ಲೋಕಕಂಟಕನಾದ, ತಂ = ಆ ಬಕನನ್ನು, **ಆಶು** = ಕೂಡಲೇ, **ಭೀಮಃ** = ಭೀಮನು, **ನಿಹತ್ಯ** = ಕೊಂದು, **ಕೀರ್ತಿಂ** = ಕೀರ್ತಿಯನ್ನು, **ಚ** = ಮತ್ತು, **ಅಧಿಕಂ** = ಬಹಳವಾದ, **ಧರ್ಮಂ** = ಪುಣ್ಯವನ್ನು, **ಪ್ರಯಾಸ್ವತಿ** = ಹೊಂದುತ್ತಾನೆ, **ಇಹ** = ಈ ವಿಷಯದಲ್ಲಿ, **ವಯಂ** = ನಾವು, **ಸರ್ವೇ** = ಎಲ್ಲರೂ, **ತಮನು** = ಆ ಭೀಮನನ್ನು ಆಶ್ರಯಿಸೋಣ, **ಪ್ರಗೃಹೀತಧರ್ಮಾಃ** = ಪುಣ್ಯವನ್ನು ಸಂಪಾದಿಸಿದವರು, **ಯಾಸ್ಯಾಮಃ** = ಆಗೋಣ, **ಇತಿ** = ಹೀಗೆ, **ಆಶು** = ಕೂಡಲೇ, **ತಂ** = ಆ ಬ್ರಾಹ್ಮಣನನ್ನು ಕುರಿತು, **ಅವದತ್** = ಹೇಳಿದಳು.

ತಾತ್ಪರ್ಯ :- ಇಂತಹ ಬಲಾಢ್ಯನಾದ ಬಕನನ್ನು ಕೊಂದು ಭೀಮ ಬೇಗನೆ ಅಧಿಕ ಕೀರ್ತಿಯನ್ನು ಪುಣ್ಯವನ್ನೂ ಗಳಿಸುತ್ತಾನೆ. ನಾವೂ ಅವನಿಗೆ ಸಹಕರಿಸಿ ಪುಣ್ಯಭಾಗಿಗಳಾಗಿ ಕೀರ್ತಿಯನ್ನೂ, ಪುಣ್ಯವನ್ನೂ ಗಳಿಸೋಣ ಎಂದು ಕುಂತಿ ಆಲೋಚಿಸಿ ಒಡನೆ ಬ್ರಾಹ್ಮಣನಿಗೆ ಹೇಳಿದಳು.

ಸಂತಿ ಸ್ಮ ವಿಪ್ರವರ ಪಂಚ ಸುತಾ ಮಮಾದ್ಯ
ತೇಷ್ವೇಕ ಏವ ನರವೈರಿಮುಖಾಯ ಯಾತು ।
ಇತ್ಯುಕ್ತ ಆಹ ಸ ನ ತೇ ಸುತವಧ್ಯಯಾಽಹಂ
ಪಾಪೋ ಭವಾನಿ ತವ ಹಂತ ಮನೋಽತಿಧೀರಮ್ ॥ ೮೧ ॥

ಪದಚ್ಛೇದ :- ಸಂತಿ, ಸ್ಮ, ವಿಪ್ರವರ, ಪಂಚ ಸುತಾಃ, ಮಮ, ಅದ್ಯ, ತೇಷು, ಏಕಃ, ಏವ, ನರವೈರಿಮುಖಾಯ, ಯಾತು, ಇತಿ, ಉಕ್ತಃ, ಆಹ, ಸಃ, ನ, ತೇ, ಸುತಾವಧ್ಯಯಾ, ಅಹಂ, ಪಾಪಃ, ಭವಾನಿ, ತವ, ಹಂತ, ಮನಃ, ಅತಿಧೀರಂ ।

**ಅರ್ಥ** :- **ವಿಪ್ರವರ** = ಬ್ರಾಹ್ಮಣ ಶ್ರೇಷ್ಠನೇ, **ಅದ್ಯ** = ಇಂದು, **ಮಮ** = ನನಗೆ, **ಪಂಚ** = ಐದು, **ಸುತಾಃ** = ಮಕ್ಕಳು, **ಸಂತಿಸ್ಮ** = ಇದ್ದಾರೆಯಷ್ಟೆ, **ತೇಷು** = ಅವರಲ್ಲಿ, **ಏಕಃ ಏವ** = ಒಬ್ಬನೇ, **ವರವೈರಿಮುಖಾಯ** = ರಾಕ್ಷಸನ ಬಾಯಿಗೆ, **ಯಾತು** = ಹೋಗಲಿ, **ಇತ್ಯುಕ್ತಃ** = ಹೀಗೆ ಹೇಳಲ್ಪಟ್ಟ, **ಸಃ** = ಆ ಬ್ರಾಹ್ಮನು, **ಅಹಂ** = ನಾನು, **ತೇ** = ನಿನ್ನ, **ಸುತವಧ್ಯಯಾ** = ಮಗನನ್ನು ಕೊಂದದ್ದರಿಂದ, **ಪಾಪಃ** = ಪಾಪಿಯು, **ನಭವಾಮಿ** = ಆಗುವುದಿಲ್ಲ, **ತವ** = ನಿನ್ನ, **ಮನೋತಿಧೀರಂ** = ಮನೋಧೈರ್ಯವು, **ಹಂತ** = ಅಬ್ಬಬ್ಬಾ.

**ತಾತ್ಪರ್ಯ** :- 'ಬ್ರಾಹ್ಮಣೋತ್ತಮ, ನನಗೆ ಈಗ ಐದು ಮಂದಿ ಮಕ್ಕಳಿದ್ದಾರೆ. ಅವರಲ್ಲಿ ಒಬ್ಬ ರಾಕ್ಷಸನ ಬಾಯಿಗೆ ಹೋಗಲಿ' ಎಂದು ಕುಂತಿ ಹೇಳಿದಾಗ ಬ್ರಾಹ್ಮಣನೆಂದ, 'ನಿನ್ನ ಮಗನನ್ನು ಕೊಲ್ಲಿಸಿ ನಾನು ಪಾಪಕ್ಕೆ ಗುರಿಯಾಗಲಾರೆ, ಏನಿದ್ದರೂ ನಿನ್ನದು ಕಲ್ಲೆದೆಯೇ ಸರಿ!'.

**ಉಕ್ತೈವಮಾಹ ಚ ಪೃಥಾ ತನಯೇ ಮದೀಯೇ**
**ವಿದ್ಯಾಽಸ್ತಿ ದಿಕ್‌ಪತಿಭಿರಪ್ಯವಿಷಹ್ಯರೂಪಾ ।**
**ಉಕ್ತೋಽಪಿ ನೋ ಗುರುಭಿರೇಷ ನಿಯುಂಕ್ತ ಏತಾಂ**
**ವಧ್ಯಸ್ತಥಾಽಪಿ ನ ಸುರಾಸುರಪಾಲಕೈಶ್ಚ ॥ ೮೨ ॥**

**ಪದಚ್ಛೇದ :– ಉಕ್ತ್ವಾ, ಏವಂ, ಆಹ, ಚ, ಪೃಥಾ, ತನಯೇ, ಮದೀಯೇ, ವಿದ್ಯಾ, ಅಸ್ತಿ, ದಿಕ್‌ಪತಿಭಿಃ, ಅಪಿ, ಅವಿಷಹ್ಯ ರೂಪಾ, ಉಕ್ತಃ, ಅಪಿ, ನಃ, ಗುರುಭಿಃ, ಏಷಃ, ನಿಯುಂಕ್ತ, ಪಾತಾಂ ವಧ್ಯಃ, ತಥ್, ಅಪಿ, ನ, ಸುರಾಸುರವಾಲಕೈಃ, ಚ ।**

**ಅರ್ಥ** :- **ಉಕ್ತೈನಂ** = ಈ ರೀತಿ ಹೇಳಿದ ಬ್ರಾಹ್ಮಣನನ್ನು, **ಪೃಥಾ** = ಕುಂತಿಯು, **ಆಹ** = ಹೇಳಿದಳು, **ಮದೀಯೇ** = ನನ್ನ ಸಂಬಂಧಿಯಾದ, **ತನಯೇ** = ಮಗನಾದ ಭೀಮನಲ್ಲಿ, **ದಿಕ್ಪತಿಭಿಃ ಅಪಿ** = ದಿಗಭಿಮಾನಿಗಳಾದ ಇಂದ್ರಾದಿ ದೇವತೆಗಳಿಂದಲೂ, **ಅವಿಷಹ್ಯರೂಪಾ** = ಎದುರಿಸಲಾಗದ, **ವಿದ್ಯಾ** = (ಮಂತ್ರವು) ಜ್ಞಾನವು, **ಅಸ್ತಿ** = ಇದೆ, **ಏಷಃ** = ಈ ಭೀಮನು, **ಗುರುಭಿಃ** = ಗುರುಗಳಿಂದ, **ಉಕ್ತಃ ಅಪಿ** = ಹೇಳಲ್ಪಟ್ಟಿದ್ದರೂ, **ಏತಾಂ** = ಈ ಮಂತ್ರವನ್ನು ಈ ವಿದ್ಯೆಯನ್ನು, **ಸೋನಿಯುಂಕ್ತ** = ಪ್ರಯೋಗಿಸುವುದಿಲ್ಲ, **ತಥಾಪಿ** = ಹಾಗಿದ್ದರೂ, **ಸುರಾಸುರಪಾಲಕೈಃ** = ದೇವಾಧಿಪತಿಗಳಿಂದಾಗಲಿ, ಅಸುರಾಧಿ ಪತಿಗಳಿಂದಾಗಲಿ, **ನವಧ್ಯಃ** = ವಧಿಸಲ್ಪಡುವುದಿಲ್ಲ.

ತಾತ್ಪರ್ಯ :- ಬ್ರಾಹ್ಮಣ ಹೀಗೆ ಹೇಳಿದಾಗ ಕುಂತಿ ಹೇಳಿದಳು, 'ನನ್ನ ಮಗನಲ್ಲಿ ದಿಕ್ಪಾಲಕರಾದ ಇಂದ್ರಾದಿ ದೇವತೆಗಳಿಗೂ ಇದಿರಿಸಲಾಗದಂಥ ಮಂತ್ರ ಬಲವಿದೆ. ಗುರುಗಳು ಹೇಳಿದರೂ ಇವನು ಮಂತ್ರವನ್ನು ಎಂದೂ ಆತ್ಮರಕ್ಷಣೆಗೆ ಬಳಸಿಕೊಳ್ಳುವುದಿಲ್ಲ. ಆದರೂ ದೇವಾಧಿಪತಿಗಳಿಂದಾಗಲಿ ದಾನವೇಂದ್ರರಿಂದಾಗಲಿ ಎಂದೂ ವಧ್ಯನು ಆಗುವುದಿಲ್ಲ.

**ಉಕ್ತ್ವೈವಮೇತ್ಯ ನಿಖಿಲಂ ಚ ಜಗಾದ ಭೀಮ**
**ಉದ್ಧರ್ಷ ಆಸ ಸ ನಿಶಮ್ಯ ಮಹಾಸ್ವಧರ್ಮಮ್ ।**
**ಪ್ರಾಪ್ತಂ ವಿಲೋಕ್ಯ ತಮತೀವ ವಿಘೂರ್ಣನೇತ್ರಂ**
**ದೃಷ್ಟ್ವಾ ಜಗಾದ ಯಮಸೂನುರುಪೇತ್ಯ ಚಾನ್ಯೈಃ ॥ ೮೩ ॥**

**ಪದಚ್ಛೇದ :– ಉಕ್ತ್ವಾ, ಏವಂ, ಏತ್ಯ, ನಿಖಿಲಂ, ಚ, ಜಗಾದ, ಭೀಮಃ, ಉದ್ಧರ್ಷಃ, ಆಸ, ತಃ, ನಿಶಮ್ಯ, ಮಹಾಸ್ವಧರ್ಮಂ, ಪಾಪ್ತಂ, ವಿಲೋಕ್ಯ, ತಂ, ಅತೀವ, ವಿಘೂರ್ಣನೇತ್ರಂ, ದೃಷ್ಟ್ವಾ, ಜಗಾದ, ಯಮಸೂನುಃ, ಉಪೇತ್ಯ, ಚ, ಅನ್ಯೈಃ ।**

**ಅರ್ಥ** :- ಏವಂ = ಈ ರೀತಿಯಾಗಿ, **ಉಕ್ತ್ವಾ** = ಹೇಳಿ, **ಭೀಮಂ** = ಭೀಮನನ್ನು, ಏತ್ಯ = ಹೊಂದಿ, **ನಿಖಿಲಂ ಚ** = ಎಲ್ಲವನ್ನು, **ಜಗಾದ** = ಹೇಳಿದಳು, ನಿಶಮ್ಯಚ = ಅದನ್ನು ಕೇಳಿಯಾದರೂ, ಸಃ = ಆ ಭೀಮನು, ಪ್ರಾಪ್ತಂ = ಹೊಂದಲ್ಪಟ್ಟ, ಮಹಾಸ್ವಧರ್ಮಂ = ದೊಡ್ಡದಾದ ತನ್ನ ಪುಣ್ಯವನ್ನು, **ವಿಲೋಕ್ಯ** = ನೋಡಿ, **ಉದ್ಧರ್ಷಃ** = ಸಂತೋಷಗೊಂಡವನು, **ಆಸ** = ಆದನು, **ಯಮಸೂನುಃ** = ಧರ್ಮರಾಜನು, **ಅನ್ಯೈಃಚ** = ಅರ್ಜುನಾದಿಗಳಿಂದ, **ಉಪೇತ್ಯ** = ಒಂಹದು, **ಅತೀವ** = ಬಹಳವಾಗಿ, **ವಿಘೂರ್ಣನೇತ್ರಂ** = ಹಿಗ್ಗಿದ ಕಣ್ಣುಗಳುಳ್ಳ, **ತಂ** = ಆ ಭೀಮನನ್ನು, **ದೃಷ್ಟ್ವಾ** = ಕಂಡು, **ಜಗಾದ** = ಹೇಳಿದನು.

ತಾತ್ಪರ್ಯ :- ಕುಂತಿ ಬ್ರಾಹ್ಮಣನಿಗೆ ಹೀಗೆ ಹೇಳಿ, ಭೀಮನ ಬಳಿಗೆ ಬಂದು ಎಲ್ಲವನ್ನು ಹೇಳಿದಳು. ಭೀಮ ತಾಯಿಯ ಮಾತನ್ನು ಕೇಳಿ ತನಗೆ ಮಹತ್ತಾದ ಸ್ವಧರ್ಮ ಸಾಧನೆಯ ಅವಕಾಶ ಲಭಿಸಿತೆಂದು ತಿಳಿದು ಹಿರಿ ಹಿರಿ ಹಿಗ್ಗಿದ. ಧರ್ಮರಾಜ ಅರ್ಜುನಾದಿಗಳೊಂದಿಗೆ ಬಂದು ಭೀಮನ ಕಣ್ಣುಗಳು ಹಿಗ್ಗಿನಿಂದ ಸುತ್ತುತ್ತಿರುವುದನ್ನು ಕಂಡು ತಾಯಿಯ ಮುಂದೆ ಪ್ರಶ್ನೆ ಮಾಡಿದ.

ಮಾತಃ ಕಿಮೇಷ ಮುದಿತೋಽತಿತರಾಮಿತಿ ಸ್ಮ
ತಸ್ಮೈ ಚ ಸಾ ನಿಖಿಲಮಾಹ ಸ ಚಾಬ್ರವೀತ್ ತಾಮ್ ।
ಕಷ್ಟಂ ತ್ವಯಾ ಕೃತಮಹೋ ಬಲಮೇವ ಯಸ್ಯ
ಸರ್ವೇ ಶ್ರಿತಾ ವಯಮಮುಂ ಚ ನಿಹಂಸಿ ಭೀಮಮ್ ॥ ೮೪ ॥

ಪದಚ್ಛೇದ :- ಮಾತಃ, ಕಂ, ಪಾಷಃ, ಮುದಿತಃ, ಅತಿತರಾಂ, ಇತಿ, ಸಾ, ತಸ್ಯೈ, ಚ, ಸಾ, ನಿಖಿಲಂ, ಆಹ, ಸಃ, ಚ, ಅಬ್ರವೀತ್, ತಾಂ, ಕಷ್ಟಂ, ತ್ವಯಾ, ಕೃತಂ, ಅಹಃ, ಬಲಂ, ಏವ, ಯಸ್ಯ, ಸರ್ವೇ, ಶ್ರಿತಾ, ವಯಂ, ಅಮುಂ, ಚ, ನಿಹಂಸಿ, ಭೀಮಂ ।

ಅರ್ಥ :- ಮಾತಃ = ತಾಯಿಯೇ (ಕುಂತಿಯೇ), ಏಷಃ = ಈ ಭೀಮನು, ಕಿಂ = ಏತಕ್ಕಾಗಿ, ನಿತರಾಂ = ಬಹಳವಾಗಿ, ಮುದಿತಃ ಸ್ಮ = ಸಂತೋಷಗೊಂಡವನಾಗಿದ್ದಾನೆ, ಇತಿ = ಎಂದು, ಸಾ = ಆ ಕುಂತಿಯು, ತಸ್ಮೈ ಚ = ಆ ಧರ್ಮರಾಜನಿಗಾದರೂ, ನಿಖಿಲಂ = ಎಲ್ಲವನ್ನೂ, ಆಹ = ಹೇಳಿದಳು, ಸ ಚ = ಆ ಧರ್ಮರಾಜನಾದರು, ತಾಂ = ಆ ಕುಂತಿಯನ್ನು ಕುರಿತು, ಅಹೋ = ಅಯ್ಯೋ, ಕಷ್ಟಂ = ಕಷ್ಟವು, ತ್ವಯಾ = ನಿನ್ನಿಂದ, ಕೃತಂ = ಮಾಡಲ್ಪಟ್ಟಿತು, ಯಸ್ಯ = ಯಾವ ಭೀಮನ, ಬಲಮೇವ = ಬಲವನ್ನೆ, ವಯಂ = ನಾವು, ಸರ್ವೇ = ಎಲ್ಲರು, ಶ್ರಿತಾಃ = ಆಶ್ರಯಿಸಿದ್ದೇವೆ, ಅಮುಂ = ಈ, ಭೀಮಂ = ಭೀಮನನ್ನು, ನಿಹಂಸಿ = ಕೊಲ್ಲುತ್ತಿ.

ತಾತ್ಪರ್ಯ :- 'ಅಮ್ಮ ಭೀಮ ಏಕೆ ಬಹಳ ಹಿಗ್ಗಿದ್ದಾನೆ?' ಎಂದು ಧರ್ಮರಾಜ ಕೇಳಿದ. ಆಗ ಕುಂತಿ ಅವನಿಗೆ ಎಲ್ಲವನ್ನೂ ವಿವರಿಸಿದಳು. ಅವನು ಹೇಳಿದ, 'ಆಶ್ಚರ್ಯ! ನೀನೀಗ ಎಂಥ ಅಪಾಯದ ಕಾರ್ಯಕ್ಕೆ ತೊಡಗಿರುವೆ! ಯಾರ ಬಲವನ್ನೇ ನಾವೆಲ್ಲರೂ ಅವಲಂಬಿಸಿರುವೆವೋ ಆ ಭೀಮನನ್ನೇ ಕೊಲ್ಲಿಸುತ್ತಿರುವೆಯಲ್ಲ!

ಯದ್ಬಾಹುವೀರ್ಯಪರಮಾಶ್ರಯತೋ ಹಿ ರಾಜ್ಯ-
ಮಿಚ್ಛಾಮ ಏವ ನಿಖಿಲಾರಿವಧಂ ಸ್ವಧರ್ಮಮ್ ।
ಸೋಽಯಂ ತ್ವಯಾಽದ್ಯ ನಿಶಿಚಾರಿಮುಖಾಯ ಮಾತಃ
ಪ್ರಸ್ಥಾಪ್ಯತೇ ವದ ಮಮಾಽಸು ಕಯೈವ ಬುದ್ಧ್ಯಾ ॥ ೮೫ ॥

ಪದಚ್ಛೇದ :- ಯದ್ಬಾಹುವೀರ್ಯ, ಪರಮಾಶ್ರಯತಃ, ಹಿ, ರಾಜ್ಯಂ, ಇಚ್ಛಾಮ, ಏವ, ನಿಖಿಲಾರಿವಧಂ, ಸ್ವಧರ್ಮಂ, ಸಃ, ಅಯಂ, ತ್ವಯಾ, ಅದ್ಯ, ನಿಶಿಚಾರಿ ಮುಖಾಯ, ಮಾತಃ, ಪ್ರಸ್ಥಾಪ್ಯತೇ, ವದ, ಮಮ, ಆಶು, ತಯಾ, ಏವ, ಬುದ್ಧ್ಯಾ ।

**ಅರ್ಥ** :- **ಮಾತಃ** = ತಾಯಿಯಾದ ಕುಂತಿಯೇ, **ಯದ್ಬಾಹುವೀರ್ಯ ಪರಮಾಶ್ರಯತಃ** = **ಯತ್** - ಯಾವ ಭೀಮನ, **ಬಾಹುವೀರ್ಯ** - ಬಾಹುವಿನ ಪರಾಕ್ರಮದ, **ಪರಮಾಶ್ರಯತಃ** - ಉತ್ತಮವಾದ ಆಶ್ರಯದಿಂದ, **ಹಿ** - ನಿಶ್ಚಯವಾಗಿ, **ರಾಜ್ಯಂ** = ರಾಜ್ಯವನ್ನು, **ನಿಖಿಲಾರಿವಧಂ** = ಎಲ್ಲ ಶತ್ರುಗಳ ನಾಶವನ್ನು, **ಸ್ವಧರ್ಮಂ** = ನಮ್ಮ ಧರ್ಮವನ್ನು, **ಇಚ್ಛಾಮಃ** = ಹೊಂದಲು ಇಚ್ಛಿಸುತ್ತೇವೆ, **ಸೋಽಯಂ** = ಅಂತಹ ಈ ಭೀಮನು, **ತ್ವಯಾ** = ನಿನ್ನಿಂದ, **ಅದ್ಯ** = ಇಂದು, **ನಿಶಿಚಾರಿ ಮುಖಾಯ** = ಬಕ ರಾಕ್ಷಸನ ಬಾಯಿಗೆ, **ಪ್ರಸ್ಥಾಪ್ಯತೇ** = ಕಳಿಸಲ್ಪಡುತ್ತಿದೆ, **ಕಯಾ** = ಯಾವ, **ಬುದ್ಧ್ಯಾ** = (ತಿಳುವಳಿಕೆಯಿಂದ) ಬುದ್ಧಿಯಿಂದ (ಧೈರ್ಯದಿಂದ), (**ಏವಂ** = ಈ ರೀತಿಯಾಗಿ ಕಳಿಸಲ್ಪಡುತ್ತಿದೆ), **ಮಮ** = ನನಗೆ, **ಆಶು ಏವ** = ಕೂಡಲೇ, **ವದ** = ಹೇಳು.

**ತಾತ್ಪರ್ಯ** :- ಯಾರ ಭುಜ ಪರಾಕ್ರಮದ ಉತ್ತಮವಾದ ಆಶ್ರಯದಿಂದ ರಾಜ್ಯವನ್ನು ಎಲ್ಲ ಶತ್ರುಗಳನ್ನು ನಮ್ಮ ಧರ್ಮವನ್ನು ಹೊಂದಲು ಬಯಸಿದ್ದೇವೆ ಅಂತಹ ಭೀಮನು ನಿನ್ನಿಂದ ಬಕನ ಬಾಯಿಗೆ ಆಹಾರವಾಗಿ ಕಳಿಸಲ್ಪಡುತ್ತಿದ್ದಾನೆ. ತಾಯಿಯೇ ಯಾವ ಅಭಿಪ್ರಾಯದಿಂದ ನೀನು ಹೀಗೆ ಮಾಡುತ್ತಿರುವೆ ಹೇಳು.

**ಇತ್ಯುಕ್ತವಂತಮಮುಮಾಹ ಸುಧೀರಬುದ್ಧಿಃ**
**ಕುಂತೀ ನ ಪುತ್ರಕ ನಿಹಂತುಮಯಂ ಹಿ ಶಕ್ಯಃ ।**
**ಸರ್ವೈಃ ಸುರೈರಸುರಯೋನಿಭಿರಪ್ಯನೇನ**
**ಚೂರ್ಣೀಕೃತೋ ಹಿ ಶತಶೃಂಗಗಿರೀಃ ಪ್ರಸೂತ್ಯಾಮ್ ॥ ೮೬ ॥**

ಪದಚ್ಛೇದ :- ಇತ್ಯುಕ್ತವಂತಂ, ಅಮುಂ, ಆಹ, ಸುಧೀರಬುದ್ಧಿಃ, ಕುಂತೀ, ನ, ಪುತ್ರಕ, ನಿಹಂತುಂ, ಅಯಂ, ಹಿ, ಶಕ್ಯಃ, ಸರ್ವೈಃ, ಸುರೈಃ, ಅಸುರಯೋನಿಭಿಃ, ಅಪಿ, ಅನೇನ, ಚೂರ್ಣೀಕೃತಃ, ಹಿ, ಶತಶೃಂಗಗಿರೀಃ, ಪ್ರಸೂತ್ಯಾಮ್ ।

**ಅರ್ಥ** :- **ಇತ್ಯುಕ್ತವಂತಂ** = ಈ ರೀತಿಯಾಗಿ ಹೇಳಿದ, **ಅಮುಂ** = ಈ ಧರ್ಮರಾಜನನ್ನು ಕುರಿತು, **ಸುಧೀರಬುದ್ಧಿಃ** = ಒಳ್ಳೆಯ ಪರಾಕ್ರಮ ಬುದ್ಧಿಯುಳ್ಳ, **ಕುಂತೀ** = ಕುಂತಿಯು, **ಆಹ** = ಹೇಳಿದಳು, **ಪುತ್ರಕ** = ಮಗನೇ (ಧರ್ಮರಾಜನೇ), **ಅಯಂ** = ಈ ಭೀಮನನ್ನು, **ಸರ್ವೈಃ** = ಎಲ್ಲಾ, **ಸುರೈಃ** = ದೇವತೆಗಳಿಂದ, **ಅಪಿ** = ಮತ್ತು, **ಅಸುರಯೋನಿಭಿಃ** = ರಾಕ್ಷಸರಿಂದಲೂ, **ಹಿ** = ನಿಶ್ಚಯವಾಗಿ, **ನಿಹಂತುಂ** = ಕೊಲ್ಲಲು, **ನಶಕ್ಯಃ** = ಸಾಧ್ಯವಿಲ್ಲ, **ಅನೇನ** = ಈ ಭೀಮನಿಂದ, **ಪ್ರಸೂತ್ಯಾಂ** = ಹುಟ್ಟುವ ಕಾಲದಲ್ಲೆ, **ಶತಶೃಂಗಗಿರೀಃ** = ಶತಶೃಂಗಪರ್ವತವು, **ಚೂರ್ಣಿಕೃತಃ ಹಿ** = ಪುಡಿಮಾಡಲ್ಪಟ್ಟಿದೆಯಷ್ಟೆ.

**ತಾತ್ಪರ್ಯ** :- ಈ ರೀತಿಹೇಳಿದ ಧರ್ಮರಾಜನಿಗೆ ಧೀರಬುದ್ಧಿಯಿರುವ ಕುಂತಿಯು ಭೀಮನನ್ನು ಯಾವ ದೇವತೆಗಳು ಅಸುರರೂ ಕೊಲ್ಲಲು ಸಾಧ್ಯವಿಲ್ಲ ಏಕೆಂದರೆ ಈ ಭೀಮನು ಹುಟ್ಟಿದಾಗಲೆ ಶತಶೃಂಗ ಪರ್ವತವನ್ನು ಪುಡಿಗಟ್ಟಿದ್ದಾನೆ.

**ಏಷ ಸ್ವಯಂ ಹಿ ಮರುದೇವ ನರಾತ್ಮಕೋಽಭೂತ್**
**ಕೋ ನಾಮ ಹಂತುಮಿಮಮಾಪ್ತಬಲೋ ಜಗತ್ಸು ।**
**ಇತ್ಯೇವಮಸ್ತ್ವಿತಿ ಸ ತಾಮವದತ್ ಪರೇದ್ಯು-**
**ರ್ಭೀಮೋ ಜಗಾಮ ಶಕಟೇನ ಕೃತೋರುಭೋಗಃ ॥ ೮೭ ॥**

**ಪದಚ್ಛೇದ** :– ಏಷಃ, ಸ್ವಯಂ, ಹಿ, ಮರುದೇವ, ನರಾತ್ಮಕಃ, ಅಭೂತ್, ತಃ, ನಾಮ, ಹಂತುಂ, ಇಮಂ, ಆಪ್ತಬಲಃ, ಜಗತ್ಸು, ಇತಿ, ಏವಂ, ಅಸ್ತು, ಇತಿ, ಸಃ, ತಾಮ್, ಅವದತ್, ಪರೇಮ್ಯುಃ, ಭೀಮಃ, ಜಗಾಮ, ಶಕಟೇನ, ಕೃತೋರುಭೋಗಃ ।

**ಅರ್ಥ** :- **ಏಷಃ** = ಈ ಭೀಮನು, **ಸ್ವಯಂ ಹಿ** = ಸ್ವತಃ, **ಮರುದೇವ** = ವಾಯುದೇವನೆ, **ನರಾತ್ಮಕಃ** = ಮನುಷ್ಯನಾಗಿ, **ಅಭೂತ್** = ಅವತರಿಸಿದ್ದಾನೆ, **ಜಗತ್ಸು** = ಪ್ರಪಂಚದಲ್ಲಿ, **ಇಮಂ** = ಈ ವಾಯುವಾದ ಭೀಮನನ್ನು, **ಹಂತುಂ** = ಕೊಲ್ಲಲು, **ಕೋನಾಮ** = ಯಾರುತಾನೆ, **ಆಪ್ತಬಲಃ** = ಹೊಂದಲ್ಪಟ್ಟ ಬಲವುಳ್ಳವನು, **ಇತಿ** = ಈ ರೀತಿಯಾಗಿ, (**ಪೃಥಾ** = ಕುಂತಿಯು), **ಅವದತ್** = ಹೇಳಿದಳು, **ಏವಂ** = ಹಾಗಾದರೆ, **ಅಸ್ತು** = ಹಾಗೇ ಆಗಲಿ, **ಇತಿ** = ಎಂದು, **ಸಃ** = ಆ ಧರ್ಮರಾಜನು, **ಅವದತ್** = ಹೇಳಿದನು, **ಪರೇದ್ಯುಃ** = ಮರುದಿವಸ, **ಭೀಮಃ** = ಭೀಮನು, **ಕೃತೋರುಭೋಗಃ** = ಕೃತ

- ಹೊಂದಲ್ಪಟ್ಟ, **ಉರುಭೋಗಃ** - ಬಹಳ ಭೋಗಗಳುಳ್ಳವನಾಗಿ, **ಶಕಟೇನ ಸಹ** = ಬಂಡಿಯೊಂದಿಗೆ, **ಜಗಾಮ** = ಹೋದನು.

**ತಾತ್ಪರ್ಯ** :- ಭೀಮನು ಸಾಕ್ಷಾತ್ ವಾಯುವೇ ಆಗಿದ್ದಾನೆ. ಮನುಷ್ಯನಾಗಿ ಅವತರಿಸಿದ್ದಾನೆ. ಇವನನ್ನು ಕೊಲ್ಲಲು ಜಗತ್ತಿನಲ್ಲಿ ಯಾರು ತಾನೆ ಸಮರ್ಥರು? ಎಂದಳು ಕುಂತಿ. ಹಾಗಾದರೆ ಹಾಗೇ ಆಗಲಿ ಎಂದನು ಯುಧಿಷ್ಠಿರನು ಮರುದಿನ ಭೀಮ ಎಲ್ಲ ಭೋಗಗಳನ್ನು ಮಾಡಿ ಮುಗಿಸಿ (ಅಭ್ಯಂಗ ಸ್ನಾನಾದಿಗಳನ್ನು) ಬಂಡಿಯನ್ನು ಹೊಡೆದುಕೊಂಡು ಕಾಡಿಗೆ ಹೋದನು.

**ಗತ್ವಾ ತ್ವರನ್ ಬಕವನಸ್ಯ ಸಕಾಶ ಆಶು**
**ಭೀಮಃ ಸ ಪಾಯಸಸುಭಕ್ಷ್ಯಪಯೋಘಟಾದ್ಯೈಃ ।**
**ಯುಕ್ತಂ ಚ ಶೈಲನಿಭಮುತ್ತಮಮನ್ನರಾಶಿಂ**
**ಸ್ಪರ್ಶಾತ್ ಪುರೈವ ನರಭಕ್ಷಿತುರತ್ತುಮೈಚ್ಛತ್ ॥ ೮೮ ॥**

**ಪದಚ್ಛೇದ** :- **ಗತ್ವಾ, ತ್ವರನ್, ಬಕವನಸ್ಯ, ಸಕಾಶ, ಆಶು, ಭೀಮಃ, ಸಃ, ಪಾಯಸಸುಭಕ್ಷ್ಯ ಪಯೋಘಟಾದ್ಯಃ, ಯುಕ್ತಂ, ಚ, ಶೈಲ ನಿಭಂ, ಉತ್ತಮಂ, ಅನ್ನರಾಶಿಂ, ಸ್ಪರ್ಶಾತ್, ಪುರಾ, ಏವ, ನರಭಕ್ಷಿತುಃ, ಅತ್ತುಂ, ಐಚ್ಛತ್ ।**

**ಅರ್ಥ** :- **ಭೀಮಃ** = ಭೀಮನು, **ಆಶು** = ಕೂಡಲೇ, **ಬಕವನಸ್ಯ** = ಬಕವನದ, **ಸಕಾಶಂ** = ಸಮೀಪಕ್ಕೆ, **ತ್ವರನ್** = ವೇಗವಾಗಿ, **ಗತ್ವಾ** = ಹೋಗಿ, **ಸುಪಾಯಸಸುಭಕ್ಷ್ಯ ಪಯೋಘವಾದ್ವೈಃ** = ಸುಪಾಯಸ - ಒಳ್ಳೆಯಪಾಯಸ, **ಸುಭಕ್ಷ್ಯ** = ಒಳ್ಳೆಯ ಭಕ್ಷ್ಯಗಳು, **ಪಯೋಘಟಾದ್ಯೈಃ** = ಹಾಲು ತುಂಬದ ಕೊಡಗಳಿಂದ, **ಯುಕ್ತಂ** = ಸಹಿತವಾಗಿ, **ಶೈಲನಿಭಂ** = ಪರ್ವತಸದೃಶವಾದ, **ಉತ್ತಮಂ** = ಪವಿತ್ರವಾದ, **ಅನ್ನರಾಶಿಂ** = ಅನ್ನ ಸಮೂಹವನ್ನು, **ನರಭಕ್ಷಿತುಃ** = ರಾಕ್ಷಸನಾದ ಬಕನ, **ಸ್ಪರ್ಶಾತ್** = ಸ್ಪರ್ಶಕ್ಕಿಂತ, **ಪುರೈವ** = ಮೊದಲೇ, **ಅತ್ತುಂ** = ತಿನ್ನಲು, **ಐಚ್ಛತ್** = ಇಚ್ಛಿಸಿದನು.

**ತಾತ್ಪರ್ಯ** :- ಭೀಮನು ಕೂಡಲೇ ಬಕಾಸುರನಿದ್ದ ಕಾಡಿಗೆ ಹೋಗಿ ಒಳ್ಳೆಯ ಪಾಯಸ ಒಳ್ಳೆಯಭಕ್ಷ್ಯ ತುಂಬಿದ ಕೊಡದ ಹಾಲಿನಿಂದ ಸಹಿತವಾಗಿ ಪರ್ವತಸದೃಶವಾದ ಎಲ್ಲಾ ಉತ್ತಮವಾದ ಅನ್ನರಾಶಿಯನ್ನು ಅಸುರಸ್ಪರ್ಶಕ್ಕಿಂತ ಮೊದಲೇ ತಿನ್ನಲು ಇಚ್ಛಿಸಿದನು.

ತೇನೈವ ಚಾನ್ನಸಮಿತೌ ಪರಿಭುಜ್ಯಮಾನ
ಉತ್ಪಾಟ್ಯ ವೃಕ್ಷಮಮುಮಾದ್ರವದಾಶು ರಕ್ಷಃ ।
ವಾಮೇನ ಮಾರುತಿರಪೋಹ್ಯ ತದಾ ಪ್ರಹಾರಾನ್
ಹಸ್ತೇನ ಭೋಜ್ಯಮಖಿಲಂ ಸಹಭಕ್ಷ್ಯಮಾದತ್ ॥ ೮೯ ॥

ಪದಚ್ಛೇದ :- ತೇನ, ಏವ, ಚ, ಅನ್ನಸಿಮತೌ, ಪರಿಭುಜ್ಯಮಾಮಾನಃ, ಉತ್ಪಾಟ್ಯ, ವೃಕ್ಷಂ, ಅಮುಂ, ಆದ್ರವತ್, ಆಶು, ರಕ್ಷಃ, ವಾಮೇನ, ಮಾರುತಿಃ, ಅಪೋಹ್ಯ, ತದಾ, ಪ್ರಹಾರಾನ್, ಹಸ್ತೇನ, ಭೋಜ್ಯಂ, ಅಖಿಲಂ, ಸಹ ಭಕ್ಷ್ಯಂ, ಆದತ್ ।

ಅರ್ಥ :- ತೇನೈವ = ಆ ಭೀಮನಿಂದಲೇ, ಅನ್ನಸಮಿತೌ = ಅನ್ನರಾಶಿಯು, ಪರಿಭುಜ್ಯಮಾನೇ (ಸತಿ) = ಭುಂಜಿಸುತ್ತಿರಲು, ರಕ್ಷಃ = ರಾಕ್ಷಸನಾದ ಬಕಾಸುರನು, ವೃಕ್ಷಂ = ಮರವನ್ನು, ಉತ್ಪಾಟ್ಯ = ಕಿತ್ತು, ಅಮುಂ = ಈ ಭೀಮನನ್ನು ಕುರಿತು, ಆಶು = ಕೂಡಲೆ, ಆದ್ರವತ್ = ಪ್ರಹಾರ ಮಾಡಿದನು, ತದಾ = ಆಗ, ಮಾರುತಿಃ = ಭೀಮನು, ಪ್ರಹಾರಾನ್ = ಆ ಪ್ರಹಾರಗಳನ್ನು, ವಾಮೇನ ಹಸ್ತೇನ = ಎಡಗೈಯಿಂದ, ಅಪೋಹ್ಯ = ತಡೆದು, ಸಹಭಕ್ಷ್ಯಂ ಚ = ಭಕ್ಷ್ಯದಿಂದ ಸಹಿತವಾದ, ಅಖಿಲಂ = ಎಲ್ಲಾ, ಭೋಜ್ಯಂ = ಊಟವನ್ನು, ಆದತ್ = ಉಂಡನು.

ತಾತ್ಪರ್ಯ :- ಆ ಭೀಮನು ಎಲ್ಲ ಅನ್ನರಾಶಿಯನ್ನು ತಿನ್ನುವುದನ್ನು ನೋಡಿ ರಾಕ್ಷಸನು ಮರವನ್ನು ಕಿತ್ತು ಭೀಮನ ಮೇಲೆ ಪ್ರಹಾರ ಮಾಡಿದನು. ಆದರೆ ಭೀಮನು ಆ ಪ್ರಹಾರವನ್ನು ಎಡಗೈಯಿಂದ ತಡೆದು, ಭಕ್ಷ್ಯಸಹಿತವಾಗಿ ಎಲ್ಲ ಭೋಜ್ಯವನ್ನು ಉಂಡನು.

ಪೀತ್ವಾ ಪಯೋ ತ್ವರಿತ ಏನಮವೀಕ್ಷಮಾಣ
ಆಚಮ್ಯ ತೇನ ಯುಯುಧೇ ಗುರುವೃಕ್ಷಶೈಲೈಃ ।
ತೇನಾಽಹತೋಽಥ ಬಹುಭಿರ್ಗಿರಿಭಿರ್ಬಲೇನ
ಜಗ್ರಾಹ ಚೈನಮಥ ಭೂಮಿತಳೇ ಪಿಪೇಷ ॥ ೯೦ ॥

ಪದಚ್ಛೇದ :- ಪೀತ್ವಾ, ಪಯಃ, ತ್ವರಿತಃ, ಏನಂ, ಅವೀಕ್ಷಮಾಣಃ, ಆಚಮ್ಯ, ತೇನ, ಯುಯುಧೇ, ಗುರುವೃಕ್ಷಶೈಲೈಃ, ತೇನ, ಆಹತಃ, ಅಥ, ಬಹುಭಿಃ, ಗಿರಿಭಿಃ, ಬಲೇನ, ಜಗ್ರಾಹ, ಚ, ಏನಂ, ಅಥ, ಭೂಮಿತಳೇ, ಪಿಪೇಷ ।

**ಅರ್ಥ** :- **ಸಃ** = ಆ ಭೀಮನು, **ಏನಂ** = ಈ ಬಕನನ್ನು, **ಅವೀಕ್ಷಮಾಣಃ** = ನೋಡದವನಾಗಿ, **ಅತ್ವರಿತಃ** = ನಿಧಾನವಾಗಿ, **ಪಯಃ** = ಹಾಲನ್ನು, **ಪೀತ್ವಾ** = ಕುಡಿದು, **ಆಚಮ್ಯ** = ಆಚಮನ ಮಾಡಿ, **ತೇನ** = ಆ ಬಕನೊಂದಿಗೆ, **ಯುಯುಧೇ** = ಯುದ್ಧ ಮಾಡಿದನು, **ತೇನ** = ಆ ಬಕನಿಂದ, **ಗುರುವೃಕ್ಷಶೈಲೈಃ** = **ಗುರು** - ದೊಡ್ಡದಾದ, **ವೃಕ್ಷ** - ಮರಗಳು, **ಶೈಲೈಃ** - ಪರ್ವತಗಳು ಇವುಗಳಿಂದ, **ಬಹುಭಿಃ** = ಬಹಳವಾದ, **ಗಿರಿಭಿಃ** = ಪರ್ವತಗಳಿಂದ, **ಆಹತಃ** = ಹೊಡೆಯಲ್ಪಟ್ಟ, (ಸಃ = ಆ ಭೀಮನು), **ಅಥ** = ಅನಂತರ, **ಬಲೇನ** = ಬಾಹುಬಲದಿಂದ, ಏನಂ = ಈ ಬಕನನ್ನು, **ಜಗ್ರಾಹ** = ಹಿಡಿದನು, **ಅಥ ಚ** = ಅನಂತರವಾದರೂ, **ಭೂಮಿತಲೇ** = ಭೂಮಿಯಲ್ಲಿ, **ಪಿಪೇಷ** = ಕೆಡವಿದನು.

**ತಾತ್ಪರ್ಯ** :- ಈ ಭೀಮನು ಈ ಬಕನನ್ನು ನೋಡಿದರೂ ನೋಡದಂತೆ ನಿಧಾನವಾಗಿ ಹಾಲನ್ನು ಕುಡಿದು ಆಚಮನ ಮಾಡಿ ಆ ಬಕನೊಂದಿಗೆ ಯುದ್ಧ ಮಾಡಿದನು. ಆ ಬಕನು ದೊಡ್ಡದಾದ ಮರಪರ್ವತಗಳಿಂದ ಹೊಡೆದನು ಆಗ ಭೀಮನು ತನ್ನ ಬಾಹುಬಲದಿಂದ ಆ ಬಕನನ್ನು ಹಿಡಿದು ನೆಲದಲ್ಲಿ ಕೆಡವಿದನು.

**ಆಕ್ರಮ್ಯ ಪಾದಮಪಿ ಪಾದತಳೇನ ತಸ್ಯ**
**ದೋರ್ಭ್ಯಾಂ ಪ್ರಗಜಹ್ಯ ಚ ಪರಂ ವಿದದಾರ ಭೀಮಃ ।**
**ಮೃತ್ವಾ ಸ ಚೋರು ತಮ ಏವ ಜಗಾಮ ಪಾಪೋ**
**ವಿಷ್ಣುದ್ವಿಡೇವ ಹಿ ಶನೈರನಿವೃತ್ತಿ ಚೋಗ್ರಮ್ ॥ ೯೧ ॥**

ಪದಚ್ಛೇದ :- ಆಕ್ರಮುಸಿ, ಪಾದಂ, ಅಪಿ, ಪಾದತಳೇನ, ತಸ್ಯ, ದೋರ್ಭ್ಯಾಂ, ಪ್ರಗಜಹ್ಯ, ಚ, ಪರಂ, ವಿದದಾರ, ಮೃತ್ವಾ, ಸಃ, ಚೋರುತಮಃ, ಏವ, ಜಗಾಮ, ಪಾಪಃ, ವಿಷ್ಣುದ್ವಿಡೇವ, ಹಿ, ಶನೈಃ, ಅನಿವೃತ್ತಿ, ಚ, ಉಗ್ರಮ್ ।

**ಅರ್ಥ** :- **ಭೀಮಃ** = ಭೀಮನು, **ಪಾದತಲೇನಃ** = ಪಾದತಲದಿಂದ, **ತಸ್ಯ** = ಆ ಬಕನ, **ಪಾದಂ** = ಕಾಲನ್ನು, **ಆಕ್ರಮ್ಯ** = ಹಿಡಿದು (ಒತ್ತಿ), **ದೋರ್ಭ್ಯಾಂ** = ಎರಡು ಕೈಗಳಿಂದ, **ಪರಂ** = ಮತ್ತೊಂದು, **ಪಾದಂ** = ಕಾಲನ್ನು, **ಪ್ರಗೃಹ್ಯ** = ಹಿಡಿದು, **ವಿದದಾರ** = ಸೀಳಿದನು, **ಮೃತ್ವಾ** = ಕೊಂದು, **ವಿಷ್ಣುದ್ವಿಡೇವ** = ವಿಷ್ಣುದ್ವೇಷಿಯೇ ಆದ, **ಹಿ** = ನಿಶ್ಚಯವಾಗಿಯೂ, **ಪಾಪಃ** = ಪಾಪಿಯಾದ, **ಸಃ** = ಆ ಬಕನು, **ಶನೈಃ** = ಮೆಲ್ಲನೆ, **ಅನಿವೃತ್ತಿ** = ಹಿಂದಿರುಗಿ

ಬರಲಾಗದ, **ಚ** = ಮತ್ತು, **ಉಗ್ರಂ** = ಘೋರವಾದ, **ಉರುತಮ ಏವ** = ಮಹಾತಮಸ್ಸನ್ನೆ, **ಜಗಾಮ** = ಹೊಂದಿದನು.

**ತಾತ್ಪರ್ಯ** :- ಭೀಮನು ತನ್ನ ಒಂದು ಪಾದದಿಂದ ಆ ಬಕನ ಒಂದು ಕಾಲನ್ನು ಒತ್ತಿ ಹಿಡಿದು ಎರಡು ಕೈಗಳಿಂದ ಮತ್ತೊಂದು ಕಾಲನ್ನು ಹಿಡಿದು ಸೀಳಿದನು. ಅವನು ಸತ್ತು ವಿಷ್ಣುದ್ವೇಷಿಯೂ ಪಾಪಿಯೂ ಆದ್ದರಿಂದ ಹಿಂದಿರುಗಿಬರಲಾಗದ ಮಹಾತಮಸ್ಸನ್ನು ನಿಧಾನವಾಗಿ ಹೋಗಿ ಸೇರಿದನು.

**ಹತ್ವಾ ತಮಕ್ಷತಬಲೋ ಜಗದಂತಕಂ ಸ**
**ಯೋ ರಾಕ್ಷಸೋ ನ ವಶ ಆಸ ಜರಾಸುತಸ್ಯ ।**
**ಭೌಮಸ್ಯ ಪೂರ್ವಮಪಿ ನೋ ಭರತಸ್ಯ ರಾಜ್ಞೋ**
**ಭೀಮೋ ನ್ಯಧಾಪಯದಮುಷ್ಯ ಶರೀರಮಗ್ರೇ ॥ ೬೨ ॥**

**ಪದಚ್ಛೇದ** :- **ಹತ್ವಾ, ತಂ, ಅಕ್ಷತಬಲಃ, ಜಗದಂತಕಂ, ಸಃ, ಯಃ, ರಾಕ್ಷಸಃ, ನ, ವಶಃ, ಆಸ, ಜರಾಸುತಸ್ಯ, ಭೌಮಸ್ಯ, ಪೂರ್ವಂ, ಅವ, ನಃ, ಭರತಸ್ಯ, ರಾಜ್ಞಃ, ಭೀಮಃ, ನ್ಯಧಾಪಯತ್, ಅಮುಷ್ಯ, ಶರೀರಂ, ಅಗ್ರೇ ।**

**ಅರ್ಥ** :- **ಯಃ** = ಯಾವ, **ರಾಕ್ಷಸಃ** = ಬಕರಾಕ್ಷಸನು, **ಜರಾಸುತಸ್ಯ** = ಜರಾಸಂಧನ, **ವಶಃ** = ವಶನು, **ನ ಆಸ** = ಆಗಿರಲಿಲ್ಲವೋ, **ಭೌಮಸ್ಯ** = ನರಕಾಸುರನ, **ವಶಃ** = ವಶನು, **ನ ಆಸ** = ಆಗಿರಲಿಲ್ಲವೋ, **ಪೂರ್ವಂ** = ಮೊದಲು, **ರಾಜ್ಞಃ** = ರಾಜನಾದ, **ಭರತಸ್ಯ** = ದುಃಷ್ಯಂತನ ಮಗನಾದ) ಭರತನ, **ವಶಃ** = ವಶನು, **ನೋ ಆಸ** = ಆಗಿರಲಿಲ್ಲವೋ, **ತಂ** = ಅಂತಹ, **ಜಗದಂತಕಂ** = ಲೋಕಕಂಟಕನಾದ ಬಕನನ್ನು, **ಅಕ್ಷತ ಬಲಃ** = ಅಕ್ಷಯ ಬಲಶಾಲಿಯಾದ, **ಸಃ** = ಆ, **ಭೀಮಃ** = ಭೀಮನು, **ತಂ** = ಆ ಬಕನನ್ನು, **ಹತ್ವಾ** = ಕೊಂದು, **ಅಮುಷ್ಯ** = ಈ ಬಕನ, **ಶರೀರಂ** = ದೇಹವನ್ನು (ಶವವನ್ನು), **ಅಮುಷ್ಯ** = ಈ ಏಕಚಕ್ರನಗರದ, **ಅಗ್ರೆ** = ಮುಂಭಾಗದಲ್ಲಿ, **ನ್ಯಧಾಪಯತ್** = ಇರಿಸಿದನು.

**ತಾತ್ಪರ್ಯ** :- ಯಾವ ಬಕಾಸುರನನ್ನು ಜರಾಸಂಧನು ಹಾಗೂ ನರಕಾಸುರನು ವಶಪಡಿಸಿಕೊಳ್ಳಲಿಲ್ಲವೋ ಮತ್ತು ರಾಜನಾದ ಭರತನಿಗೂ ವಶಪಡಿಸಿಕೊಳ್ಳಲಾಗಲಿಲ್ಲವೋ ಅಂತಹ ಬಕನನ್ನು ಅಕ್ಷಯ ಬಲವಂತನಾದ

ಭೀಮನು ಕೊಂದು ಏಕಚಕ್ರನಗರದ ಮುಂಭಾಗದಲ್ಲಿ ಅವನ ಶವನ್ನು ಇರಿಸಿದನು.

ದ್ವಾರ್ಯೇವ ತತ್ ಪ್ರತಿನಿಧಾಯ ಪುನಃ ಸ ಭೀಮಃ
ಸ್ನಾತ್ವಾ ಜಗಾಮ ನಿಜಸೋದರಪಾರ್ಶ್ವಮೇವ ।
ಶ್ರುತ್ವಾಽಸ್ಯ ಕರ್ಮ ಪರಮಂ ತುತುಷುಃ ಸಮೇತಾ
ಮಾತ್ರಾ ಚ ತೇ ತದನುವವ್ರುರತಃ ಪುರಸ್ಥಾಃ ॥ ೯೩ ॥

ಪದಚ್ಛೇದ :- ದ್ವಾರ್ಯೇವ, ತತ್, ಪ್ರತಿನಿಧಾಯ, ಪುನಃ, ಸಃ, ಭೀಮಃ, ಸ್ನಾತ್ವಾ, ಜಗಾಮ, ನಿಜಸೋದರಪಾರ್ಶ್ವಂ, ಏವ, ಶ್ರುತ್ವಾ, ಅಸ್ಯ, ಕರ್ಮ, ಪರಮಂ, ತತುಷುಃ, ಸಮೇತಾ, ಚ, ತೇ, ತದನು, ವವ್ರುಃ, ಅತಃ, ಪುರಸ್ಥಾಃ ।

ಅರ್ಥ :- ಸಃ = ಆ, ಭೀಮಃ = ಭೀಮನು, ತತ್ = ಆ ಬಕನ ಶವವನ್ನು, ಪುರಃ = ಏಕಚಕ್ರ ನಗರದ, ದ್ವಾರ್ಯೇವ = ದ್ವಾರದಲ್ಲಿಯೇ, ಪ್ರತಿನಿಧಾಯ = ಇರಿಸಿ, ಸ್ನಾತ್ವಾ ಏವ = ಸ್ನಾನ ಮಾಡಿಯೇ, ನಿಜಸೋದರಪಾರ್ಶ್ವಂ = ತನ್ನ ಸೋದರರ ಹತ್ತಿರಕ್ಕೆ, ಜಗಾಮ = ಹೋದನು, ತದನು = ಅನಂತರ, ಮಾತ್ರಾಸಮೇತಾಃ = ತಾಯಿಯಾದ ಕುಂತಿಯಿಂದ ಕೂಡಿದ, ಭೀತಿಯುತಾಃ = ಹೆದರಿಕೆಯಿಂದ ಕೂಡಿದ, ಪುರಸ್ಥಾಶ್ಚ = ಊರಿನವರೂ ಕೂಡ, ತಸ್ಯ = ಆ ಭೀಮನ, ಕರ್ಮ = ಕೆಲಸವನ್ನು, ಶ್ರುತ್ವಾ = ಕೇಳಿ, ಪರಮಂ = ಬಹಳವಾಗಿ, ತುತುಷುಃ = ಸಂತೋಷಗೊಂಡರು.

ತಾತ್ಪರ್ಯ :- ಆ ಭೀಮನು ಬಕನ ಶವವನ್ನು ಊರಿನ ದ್ವಾರದಲ್ಲಿ ಇರಿಸಿ ಸ್ನಾನಮಾಡಿ ತನ್ನ ಸೋದರರ ಬಳಿಗೆ ಹೋದ ನಂತರ ಕುಂತಿಯಿಂದ ಸಹಿತರಾದ ಹೆದರಿದ ಊರಿನ ನಾಗರಿಕರು ಆ ಭೀಮನ ಕೆಲಸವನ್ನು ಕೇಳಿ ಬಹಳ ಸಂತೋಷಪಟ್ಟರು.

ದೃಷ್ಟ್ವೈವ ರಾಕ್ಷಸಶರೀರಮುರು ಪ್ರಭೀತಾ
ಜ್ಞಾತ್ವೈವ ಹೇತುಭಿರಥ ಕ್ರಮಶೋ ಮೃತಂ ಚ ।
ವಿಪ್ರಸ್ಯ ತಸ್ಯ ವಚನಾದಪಿ ಭೀಮಸೇನ-
ಭಗ್ನಂ ನಿಶಮ್ಯ ಪರಮಂ ತುತುಷುಶ್ಚ ತಸ್ಮೈ ॥ ೯೪ ॥

ಪದಚ್ಛೇದ :- ದೃಷ್ಟ್ವಾ, ಏವ, ರಾಕ್ಷಸ ಶರೀರಂ, ಉರು, ಪ್ರಭೀತಾ, ಜ್ಞಾತ್ವಾ, ಏವ, ಹೇತುಭಿಃ, ಅಥ, ಕ್ರಮಶಃ, ಮಂತಂ, ಚ, ವಿಪ್ರಸ್ಯ, ತಸ್ಯ, ವಚನಾತ್, ಅಪಿ, ಭೀಮಸೇನಭಗ್ನಂ, ನಿಶಮ್ಯ, ಪರಮಂ, ತುತುಷುಃ, ಚ, ತಸ್ಮೈ ।

ಅರ್ಥ :- ರಾಕ್ಷಸಶರೀರಂ = ಬಕಾಸುರನ ಶರೀರವನ್ನು, ದೃಷ್ಟ್ವಾ ಏವ = ನೋಡಿಯೇ, ಉರುಪ್ರಭೀತಾಃ = ಬಹಳ ಹೆದರಿದರು, ಅಥ = ಅನಂತರ, ಹೇತುಭಿಃ = (ಬೇರೆ ಬೇರೆ) ಕಾರಣಗಳಿಂದ (ಕಲ್ಲು ಹೊಡೆಯುವುದು ಮೊದಲಾದವುಗಳಿಂದ), ಕ್ರಮಶಃ = ಕ್ರಮವಾಗಿ, ಮೃತಂ ಚ = ಸತ್ತವನನ್ನಾಗಿ, ಜ್ಞಾತ್ವಾ = ತಿಳಿದು, ತಸ್ಯ = ಆ, ವಿಪ್ರಸ್ಯ = ಬ್ರಾಹ್ಮಣನ, ವಚನಾದೇವ = ಮಾತಿನಿಂದಲೇ, ಅಪಿ = ಮತ್ತು, ಭೀಮಸೇನಭಗ್ನಂ = ಭೀಮಸೇನನಿಂದ ಸಂಹರಿಸಲ್ಪಟ್ಟವನನ್ನಾಗಿ, ನಿಶಮ್ಯ = ಕೇಳಿ, ಚ = ಮತ್ತು, ತಸ್ಮೈ = ಆ ಭೀಮನ ಬಗ್ಗೆ, ಪರಮಂ = ಬಹಳವಾಗಿ, ತುತುಷುಃ = ಸಂತೋಷಗೊಂಡರು.

ತಾತ್ಪರ್ಯ :- ಪೌರರು ಬಕಾಸುರನ ಶರೀರವನ್ನು ನೋಡಿಯೇ ಹೆದರಿದರು ನಂತರ ಕಲ್ಲು ಹೊಡೆಯುವುದು ಮೊದಲಾದ ಕೃತ್ಯದಿಂದ ಆ ಬಕನನ್ನು ಸತ್ತವನನ್ನಾಗಿ ತಿಳಿದು. ಆ ಬ್ರಾಹ್ಮಣನ ಮಾತಿನಿಂದ ಹಾಗೂ ಭೀಮನಿಂದ ಆ ಬಕನು ಸತ್ತನೆಂದು ತಿಳಿದು, ಆ ಭೀಮನ ಬಗ್ಗೆ ಎಲ್ಲರು ಬಹಳ ಸಂತೋಷ ವ್ಯಕ್ತಪಡಿಸಿದರು.

ಅನ್ನಾತ್ಮಕಂ ಕರಮಮುಷ್ಯ ಚ ಸಂಪ್ರಚಕ್ರುಃ
ಸೋಽಪ್ಯೇತಮಾಶು ನರಸಿಂಹವಪುರ್ಧರಸ್ಯ ।
ಚಕ್ರೇ ಹರೇಸ್ತದನು ಸತ್ಯವತೀಸುತಸ್ಯ
ವಿಷ್ಣೋರ್ಹಿ ವಾಕ್‌ಪ್ರಚುದಿತಾಃ ಪ್ರಯಯುಸ್ತತಶ್ಚ ॥ ೯೫ ॥

ಪದಚ್ಛೇದ :- ಅನ್ನಾತ್ಮಕಂ, ಕರ, ಅಮುಷ್ಯ, ಚ, ಸಂಪ್ರಚಕ್ರುಃ, ಸಃ, ಅಪಿ, ಏತಂ, ಆಶು, ನರಸಿಂಹವಪುರ್ಧರಸ್ಯ, ಚಕ್ರೇ, ಹರೇಃ, ತದನು, ಸತ್ಯವತೀ ಸುತಸ್ಯ, ವಿಷ್ಣೋಃ, ಹಿ, ವಾಕ್ ವಾಚೋದಿತಾಃ, ಪ್ರಯಯುಃ, ತತಃ, ಚ ।

ಅರ್ಥ :- ಅಮುಷ್ಯ = ಈ ಭೀಮನಿಗೆ, ಅನ್ನಾತ್ಮಕಂ = ಅನ್ನವೆಂಬ, ಕರಂ = ತೆರಿಗೆಯನ್ನು, ಪೌರಾಃ = ಪಟ್ಟಣಿಗರು, ಸಂಪ್ರಚಕ್ರುಃ = ಕೊಟ್ಟರು, ಸೋಽಪಿ = ಆ ಭೀಮನಾದರು, ಏನಂ = ಈ ಅನ್ನವೆಂಬ ಕರವನ್ನು, ಆಶು = ಕೂಡಲೇ,

**ನರಸಿಂಹವಪುರ್ಧರಸ್ಯ** = ನರಸಿಂಹರೂಪಿಯಾದ, **ಹರೇಃ** = ಶ್ರೀಹರಿಗೆ, **ಚಕ್ರೇ** = ನಿವೇದಿಸಿದನು, **ತದನು** = ಅನಂತರ, **ಸತ್ಯವತೀಸುತಸ್ಯ** = ಸತ್ಯವತೀ ದೇವಿಯ ಮಗನಾದ ವೇದವ್ಯಾಸರೂಪಿಯಾದ, **ವಿಷ್ಣೋಃ** = ಶ್ರೀಹರಿಯ, **ವಾಕ್ಪ್ರಚುದಿತಾಃ ಹಿ** = ಮಾತಿನಿಂದ ಪ್ರೇರಿತರಾದ ಪಾಂಡವರು, **ತತಃ** = ಅಲ್ಲಿಂದ, **ಪ್ರಯಯುಶ್ಚ** = ಮುನ್ನಡೆದರು.

**ತಾತ್ಪರ್ಯ** :- ಪಟ್ಟಣಿಗರು ಭೀಮನಿಗೆ ಅನ್ನವೆಂಬ ತೆರಿಗೆಯನ್ನು ಕೊಟ್ಟರು. ಆ ಭೀಮನು ಆ ಅನ್ನವನ್ನು ಕೂಡಲೇ ನರಸಿಂಹ ದೇಹ ಧರಿಸಿರುವ ಶ್ರೀಹರಿಗೆ ನಿವೇದಿಸಿದನು, ಅನಂತರ ವೇದವ್ಯಾಸರ ಮಾತಿನಂತೆ ಅಲ್ಲಿಂದ ಮುನ್ನಡೆದರು.

**ಉತ್ಪತ್ತಿಪೂರ್ವಕಕಥಾಂ ದ್ರುಪದಾತ್ಮಜಾಯಾ**
**ವ್ಯಾಸೋ ಹ್ಯನೂಚ್ಯ ಜಗತಾಂ ಗುರುರೀಶ್ವರೇಶಃ ।**
**ಯಾತೇತ್ಯಚೋದಯದಥಾಪ್ಯಪರೇ ದ್ವಿಜಾಗ್ರ್ಯಾ-**
**ಸ್ತಾನ್ ಬ್ರಾಹ್ಮಣಾ ಇತಿ ಭುಜಿರ್ಭವತೀತಿ ಚೋಚುಃ ॥ ೯೬ ॥**

**ಪದಚ್ಛೇದ** :- **ಉತ್ಪತ್ತಿ, ಪೂರ್ವಕ ಕಥಾಂ, ದ್ರುಪದಾತ್ಮಜಾಯಾಃ, ವ್ಯಾಸಃ, ಹ, ಅನೂಚ್ಯ, ಜಗತಾಂ, ಗುರುಃ, ಈಶ್ವರೇಶಃ, ಇತಿ, ಅಚೋದಯಾತ್, ಅಥ, ಅಪಿ, ಅಪರೇ, ದ್ವಿಜಾಗ್ರ್ಯಾಃ, ತಾನ್, ಬ್ರಾಹ್ಮಣಾಃ, ಇತಿ, ಭುಜಿಃ, ಭವತಿ, ಇತಿ, ಚ, ಊಚುಃ ।**

**ಅರ್ಥ** :- **ಜಗತಾಂ** = ಜಗತ್ತಿನ, **ಗುರುಃ** = ಗುರುಗಳಾದ, **ಚ** = ಮತ್ತು, **ಈಶ್ವರಃ** = ಒಡೆಯರಾದ, **ವ್ಯಾಸಃ** = ವೇದವ್ಯಾಸರು, **ದ್ರುಪದಾತ್ಮಜಾಯಾಃ** = ದ್ರುಪದನ ಮಗಳಾದ ದ್ರೌಪದಿಯ, **ಉತ್ಪತ್ತಿಪೂರ್ವಕಥಾಂ** = ಹುಟ್ಟು ಮೊದಲಾದ ಕಥೆಯನ್ನು, **ಹ್ಯನೂಚ್ಯ** = ಚೆನ್ನಾಗಿ ಹೇಳಿ, **ಯಾತ** = ಹೋಗಿರಿ, **ಇತಿ** = ಎಂದು, **ಅಚೋದಯತ್** = ಪ್ರೇರಿಸಿದರು, **ಅಥ** = ಅನಂತರ, **ಅಪರೇ** = ಬೇರೆ, **ದ್ವಿಜಾಗ್ರ್ಯಾಃ** = ಬ್ರಾಹ್ಮಣ ಶ್ರೇಷ್ಠರು, **ತಾನ್** = ಆ ಪಾಂಡವರನ್ನು, **ಬ್ರಾಹ್ಮಣಾಃ ಇತಿ** = ಬ್ರಾಹ್ಮಣರೆಂದು (ತಿಳಿದು), **ಭುಜಿಃ** = ಊಟವು, **ಭವಿತಾ** = ಆಗುತ್ತದೆ, **ಇತಿ** = ಎಂದು, **ಊಚುಃ** = ಹೇಳಿದರು.

ತಾತ್ಪರ್ಯ :- ಜಗದ್ಗುರುಗಳು ಜಗದೊಡೆಯನು ಆದ ವ್ಯಾಸರು ದ್ರೌಪದೀದೇವಿಯ ಹುಟ್ಟು ಮೊದಲಾದ ಕಥೆಯನ್ನು ಚೆನ್ನಾಗಿ ಹೇಳಿ ಮುನ್ನಡೆಯಿರಿ ಎಂದರು. ಅನಂತರ ಬೇರೆ ಬ್ರಾಹ್ಮಣಶ್ರೇಷ್ಠರು ಆ ಪಾಂಡವರನ್ನು ಬ್ರಾಹ್ಮಣರೆಂದು ತಿಳಿದು ಊಟವಿರುತ್ತದೆ ಬನ್ನಿ ಹೋಗೋಣವೆಂದರು.

**ಪೂರ್ವಂ ಹಿ ಪಾರ್ಷತ ಇಮಾನ್ ಜತುಗೇಹದಗ್ಧಾನ್**
**ಶ್ರುತ್ವಾಽತಿದುಃಖಿತಮನಾಃ ಪುನರೇವ ಮಂತ್ರಃ ।**
**ಯಾಜೋಪಯಾಜಮುನಿಸ್ಸೃತ ಏವಮೇಷ**
**ನಾಸತ್ಯತಾರ್ಹ ಇತಿ ಜೀವನಮೇಷು ಮೇನೇ ॥ ೯೭ ॥**

ಪದಚ್ಛೇದ :- ಪೂರ್ವಂ, ಹಿ, ಪಾರ್ಷತ, ಇಮಾನ್, ಜತುಗೇಹ ದಗ್ಧಾನ್, ಶ್ರುತ್ವಾ, ಅತಿ ದುಃಖಿತಮನಾಃ, ಪುನಃ, ಏವ, ಮಂತ್ರಃ, ಯಾಜೋಪಯಾಜಮುನಿಸ್ಸೃತಃ, ಏವಂ, ಏಷಃ, ನ, ಅಸತ್ಯತಾರ್ಹಃ, ಇತಿ, ಜೀವನಂ, ಏಷ, ಮೇನೇ ।

ಅರ್ಥ :- **ಪಾರ್ಷತಃ** = ದ್ರುಪದನು, **ಪೂರ್ವಂ ಹಿ** = ಮೊದಲು, **ಜತುಗೇಹದಗ್ಧಾನ್** = ಲಾಕ್ಷಾಗೃಹದಲ್ಲಿ ಸುಡಲ್ಪಟ್ಟ, **ಇಮಾನ್** = ಈ ಪಾಂಡವರನ್ನು, **ಶ್ರುತ್ವಾ** = ಕೇಳಿ, **ಅತಿದುಃಖಿತಮನಾಃ** = ಅತ್ಯಂತ ಖಿನ್ನವಾದ ಮನಸುಳ್ಳವನಾಗಿ, **ಪುನರೇವ** = ಅನಂತರ, **ಯಾಜೋಪಯಾಜ ಮುಖನಿಸ್ಸತಃ** = ಯಾಜ ಮತ್ತು ಉಪಯಾಜರ ಬಾಯಿಂದ ಹೊರಹೊಮ್ಮಿದ, **ಏಷಃ** = ಈ, **ಮಂತ್ರಃ** = ಮಂತ್ರವು, **ನ ಅಪತ್ಯತಾರ್ಹಃ** = ಸುಳ್ಳಾಗಲು ಸಾಧ್ಯವಿಲ್ಲ, **ಇತಿ** = ಎಂದು, **ಏಷು** = ಈ ಪಾಂಡವರ ವಿಷಯದಲ್ಲಿ, **ಜೀವನಂ** = ಬದುಕಿರುವಿಕೆಯನ್ನು, **ಮೇನೇ** = (ನಿಶ್ಚಯಿಸಿದನು) ತಿಳಿದನು.

ತಾತ್ಪರ್ಯ :- ದ್ರುಪದನು ಮೊದಲು ಪಾಂಡವರು ಲಾಕ್ಷಾಗೃಹದಲ್ಲಿ ಸತ್ತರೆಂದು ತಿಳಿದು ಅನಂತರ ಯಾಜೋಪಯಾಜ ಪುರೋಹಿತರ ಮುಖದಿಂದ ಹೊರಬಂದ ಮಂತ್ರವು ಸುಳ್ಳಾಗಲಾರದು ಎಂದು ತಿಳಿದು ಪಾಂಡವರು ಇನ್ನೂ ಬದುಕಿದ್ದಾರೆ ಎಂದು ನಿಶ್ಚಯಿಸಿದನು.

**ಯತ್ರಕ್ವಚಿತ್ ಪ್ರತಿವಸಂತಿ ನಿಲೀನರೂಪಾಃ**
**ಪಾರ್ಥಾ ಇತಿ ಸ್ಮ ಸ ತು ಫಲ್ಗುನಕಾರಣೇನ ।**

**ಚಕ್ರೇ ಸ್ವಯಂಬರವಿಘೋಷಣಮಾಶು ರಾಜಾ-**
**ತ್ವನ್ಯೈರಧಾರ್ಯಧನುರೀಶವರಾಚ್ಚ ಚಕ್ರೇ ॥ ೯೮ ॥**

**ಪದಚ್ಛೇದ :-** ಯತಾಕ್ವಚಿತ್, ಪ್ರತಿವಸಂತಿ, ನಿಲೀನರೂಪಾಃ, ವಾರ್ಥಾಃ, ಇತಿ, ಸ್ಮ ಸಃ, ತು, ಫಲ್ಗುಣಕಾರಣೇನ, ಚಕ್ರೇ, ಸ್ವಯಂಬರವಿಘೋಷಣಂ, ಆಶು, ರಾಜಾ, ತು, ಅನ್ಯೈಃ, ಅಧಾರ್ಯಧನುರೀಶ ವರಾತ್, ಚ, ಚಕ್ರೇ ।

**ಅರ್ಥ :-** ಪಾರ್ಥಾಃ = ಪಾಂಡವರು, **ಯತ್ರಕ್ವಚಿತ್** = ಎಲ್ಲಿಯಾದರೊಂದೆಡೆ, ನೀಲೀನರೂಪಾಃ = ಮಾರು ವೇಷಧರಿಸಿದವರಾಗಿ, **ಪ್ರತಿವಸಂತಿಸ್ಮ** = (ಬದುಕಿದ್ದಾರಷ್ಟೆ) ವಾಸವಾಗಿದ್ದಾರಷ್ಟೆ, **ಇತಿ** = ಎಂದು, **ಸಃ** = ಆ, **ರಾಜಾ** = ರಾಜನಾದ ದ್ರುಪದನು, **ಆಶು** = ಕೂಡಲೇ, **ಫಲ್ಗುನಕಾರಣೇನ** = ಅರ್ಜುನನ ನಿಮಿತ್ತದಿಂದ, **ಸ್ವಯಂ ವರ ಘೋಷಣಂ** = ಸ್ವಯಂ ವರದ ಘೋಷಣೆಯನ್ನು, **ಚಕ್ರೇ** = ಮಾಡಿದನು, **ತು** = ಆದರೆ, **ಅನ್ಯೈಃ** = (ಅರ್ಜುನನ್ನು ಹೊರತುಪಡಿಸಿ) ಬೇರೆಯವರಿಂದ, **ಅಧಾರ್ಯ ಧನುಃ** = ಎತ್ತಲಾಗದ ಧನಸ್ಸನ್ನು, **ಈಶವರಾಚ್ಚ** = ರುದ್ರನ ವರದಿಂದಲೇ, **ಚಕ್ರೇ** = ಪಡೆದಿದ್ದರು.

**ತಾತ್ಪರ್ಯ :-** ಪಾಂಡವರು ಎಲ್ಲಿಯಾದರೂ ಮಾರುವೇಷದಿಂದ ಇರುತ್ತಾರೆ ಎಂದು ತಿಳಿದು ದ್ರುಪದರಾಜನು ಕೂಡಲೆ ಅರ್ಜುನನಿಗಾಗಿ ಸ್ವಯಂವರ ಘೋಷಣೆ ಮಾಡಿದನು. ಅರ್ಜುನ ಹೊರತುಪಡಿಸಿ ಬೇರೆಯಾರಿಗೂ ಎತ್ತಲಾಗದ ಧನುಸ್ಸನ್ನು ರುದ್ರನ ವರದಿಂದ ಪಡೆದಿದ್ದನು.

**ತತ್ಕಾಲ ಏವ ವಾಸುದೇವಸುತೋಽಪಿ ಕೃಷ್ಣಃ**
**ಸಂಪೂರ್ಣನೈಜಪರಿಬೋಧತ ಏವ ಸರ್ವಮ್ ।**
**ಜಾನನ್ನಪಿ ಸ್ಮ ಹಲಿನಾ ಸಹಿತೋ ಜಗಾಮ**
**ಪಾರ್ಥಾನ್ ನಿಶಮ್ಯ ಚ ಮೃತಾನಥ ಕುಲ್ಯಹೇತೋಃ ॥ ೯೯ ॥**

**ಪದಚ್ಛೇದ :-** ತತ್ಕಾಲಃ, ಏವ, ವಾಸುದೇವ, ಸುತಃ, ಅಪಿ, ಕೃಷ್ಣಃ, ಸಂಪೂರ್ಣನೈಜಪರಿಬೋಧತಃ, ಏವ, ಸರ್ವಂ, ಜಾನನ್, ಅಪಿ, ಸ್ಮ ಹಲಿನಾ, ಸಹಿತಃ, ಜಗಾಮ, ವಾರ್ಥಾನ್, ನಿಶಮ್ಯ, ಚ, ಮೃತಾನ್, ಅಥ, ಕುಲ್ಯಹೇತೋಃ ।

**ಅರ್ಥ** :- **ತತ್ಕಾಲೇ ಏವ** = ಅದೇ ಕಾಲದಲ್ಲಿಯೇ, **ವಸುದೇವಸುತಃ** = ವಸುದೇವನ ಮಗನಾದ, **ಕೃಷ್ಣೋಽಪಿ** = ಕೃಷ್ಣನೂ ಕೂಡ, **ಸಂಪೂರ್ಣ ನೈಜಪರಿಬೋಧತಃ ಏವ** = ಪೂರ್ಣವಾದ ಸ್ವಾಭಾವಿಕವಾದ ಜ್ಞಾನದಿಂದಲೇ, **ಸರ್ವಂ** = ಎಲ್ಲವನ್ನು, **ಜಾನನ್ ಅಪಿ** = ತಿಳಿದಿದ್ದರೂ, **ಅಥ** = ಅನಂತರ, **ಪಾರ್ಥಾನ್** = ಪಾಂಡವರನ್ನು, **ಮೃತಾನ್** = ಸತ್ತವರನ್ನಾಗಿ, **ನಿಶಮ್ಯ** = ಕೇಳಿ, **ಕುಲ್ಯಹೇತೋಃ** = ಕುಲಧರ್ಮಾಚರಣೆಗಾಗಿ, **ಹಲಿನಾಸಹಿತಃ** = ಬಲರಾಮನಿಂದ ಸಹಿತನಾಗಿ, **ಜಗಾಮಸ್ಮ** = ಹೋದನು.

**ತಾತ್ಪರ್ಯ** :- ಅದೇ ಸಮಯದಲ್ಲಿ ವಸುದೇವನ ಮಗನಾದ ಕೃಷ್ಣನು ಪೂರ್ಣವಾದ ತನ್ನ ಜ್ಞಾನದಿಂದಲೇ ಎಲ್ಲವನ್ನು ತಿಳಿದವನಾಗಿದ್ದರೂ ಅನಂತರ ಆ ಪಾಂಡವರನ್ನು ಸತ್ತಿದ್ದಾರೆ ಎಂದು ಕೇಳಿ ಕುಲಧರ್ಮಾಚರಣೆಗಾಗಿ ಬಲರಾಮನಿಂದ ಸಹಿತವಾಗಿ ಹೋದನು.

**ಸ ಪ್ರಾಪ್ಯ ಹಸ್ತಿನಪುರಂ ಧೃತರಾಷ್ಟ್ರಪುತ್ರಾನ್**
**ಸಂವಂಚಯಂಸ್ತದನುಸಾರಿಕಥಾಶ್ಚ ಕೃತ್ವಾ ।**
**ಭೀಷ್ಮಾದಿಭಿಃ ಪರಿಗತೋಽಪ್ರಿಯವಜ್ಜಗಾಮ**
**ದ್ವಾರಾವತೀಮುದಿತಪೂರ್ಣಸುನಿತ್ಯಸೌಖ್ಯಃ ॥ ೧೦೦ ॥**

**ಪದಚ್ಛೇದ** :- ಸಃ, ಪ್ರಾಪ್ಯ, ಹಸ್ತಿನಪುರಂ, ಧೃತರಾಷ್ಟ್ರ, ಪುತ್ರಾನ್, ಸಂವಂಚಯನ್, ತದನುಸಾರಿಕಥಾಃ, ಚ, ಕೃತ್ವಾ, ಭೀಷ್ಮಾದಿಭಿಃ, ಪರಿಗತೈಃ, ಪ್ರಿಯಮ್, ಜಗಾಮ, ದ್ವಾರಾವತೀಂ, ಉದಿತ ಪೂರ್ಣಸುನಿತ್ಯಸೌಖ್ಯಃ।

**ಅರ್ಥ** :- (**ಕೃಷ್ಣಃ** = ಶ್ರೀ ಕೃಷ್ಣನು), **ಹಸ್ತಿನಪುರಂ** = ಹಸ್ತಿನಾವತಿಯನ್ನು, **ಸಂಪ್ರಾಪ್ಯ** = ಹೊಂದಿ, **ಭೀಷ್ಮಾದಿಭಿಃ** = ಭೀಷ್ಮಾದಿಗಳೊಂದಿಗೆ, **ಪರಿಗತಃ** = (ಆವೃತನಾದವನಾಗಿ) ಕೂಡಿದವನಾಗಿ, **ಧೃತರಾಷ್ಟ್ರಪುತ್ರಾನ್** = ದುರ್ಯೋಧನಾದಿಗಳನ್ನು, **ಸಂವಂಚಯನ್** = ಚೆನ್ನಾಗಿ ವಂಚಿಸುತ್ತಾ, **ತದನುಸಾರಿಕಥಾಃ** = ಆ ಪಾಂಡವರು ಸತ್ತರು ಎಂಬುದಕ್ಕೆ ಪೂರಕವಾದ ಕಥೆಗಳನ್ನು, **ಕೃತ್ವಾ** = ಮಾಡಿ (ಕಟ್ಟಿ), **ಉದಿತಪೂರ್ಣಸುನಿತ್ಯ ಸೌಖ್ಯಃ ಅಪಿ** = ಉದಿತಪೂರ್ಣವಾದ ನಿತ್ಯವೂ ಒಳ್ಳೆಯ ಸುಖವುಳ್ಳವನಾದರೂ, **ಅಪ್ರಿಯವತ್** = ಅಪ್ರಿಯ ಘಟನೆ ಎಂದು ನೊಂದವನಂತೆ, **ದ್ವಾರಾವತೀಂ** = ದ್ವಾರಾವತಿಗೆ, **ಜಗಾಮ** = ಹೋದನು.

ತಾತ್ಪರ್ಯ :- ಶ್ರೀಕೃಷ್ಣನು ಹಸ್ತಿನಾವತಿಗೆ ಬಂದು ಭೀಷ್ಮಾದಿಗಳೊಂದಿಗೆ ಕೂಡಿಕೊಂಡು ದುರ್ಯೋಧನಾದಿಗಳನ್ನು ವಂಚಿಸುತ್ತಾ ಅದಕ್ಕೆ ಪೂರಕವಾದ ಕಥೆಯನ್ನು ಹೇಳಿ, ಉದಿತಪೂರ್ಣ ನಿತ್ಯಸುಖವುಳ್ಳವನಾದರೂ ಅಪ್ರಿಯ ಘಟನೆ ಎಂಬಂತೆ ನಟಿಸುತ್ತಾ ದ್ವಾರಾವತಿಗೆ ಹೋದನು.

**ತಸ್ಯಾಂತರೇ ಹೃದಿಕಸೂನುರನಂತರಂ ಸ್ವಂ**
**ಶ್ವಾಫಲ್ಗಿಬುದ್ಧಿಬಲಮಾಶ್ರಿತ ಇತ್ಯುವಾಚ ।**
**ಸತ್ರಾಜಿದೇಷ ಹಿ ಪುರಾ ಪ್ರತಿಜಜ್ಞ ಏನಾಮ್**
**ಅಸ್ಮತ್ಕೃತೇ ಸ್ವತನಯಾಂ ಮಣಿನಾ ಸಹೈವ ॥ ೧೦೧ ॥**

ಪದಚ್ಛೇದ :- **ತಸ್ಯ, ಅಂತರೇ, ಹೃದಿಕಸೂನುಃ, ಅನಂತರಂ, ಸ್ವಂ, ಶ್ವಾಫಲ್ಗಿಬುದ್ಧಿಬಲಂ, ಆಶ್ರಿತ, ಇತಿ, ಉವಾಚ, ಸತ್ರಾಜಿತ್, ಏಷಃ, ಹಿ, ಪುರಾ, ಪ್ರತಿಜಜ್ಞಃ, ಏನಾಂ, ಅಸ್ಮಾತ್, ಕೃತೇ, ಸ್ವತನಯಾಂ, ಮಣಿನಾ, ಸಹ, ಏವ ।**

ಅರ್ಥ :- **ತಸ್ಯಾಂತರೇ** = ಈ ಮಧ್ಯದಲ್ಲಿ, **ಹೃದಿಕಸೂನುಃ** = ಹೃದಿಕನ ಮಗನಾದ ಕೃತವರ್ಮನು, **ಸ್ವಂ** = ತನ್ನ, **ಅನಂತರಂ** = ತಮ್ಮನಾದ ಶತಧನ್ವನಿಗೆ, **ಶ್ವಾಫಲ್ಕಿಬುದ್ಧಿಬಲಂ** = ಅಕ್ರೂರನ ಬುದ್ಧಿಬಲವನ್ನು, **ಆಶ್ರಿತಃ ಸನ್** = ಆಶ್ರಯಿಸಿ, **ಏಷ** = ಈ ಯಾವ, **ಸತ್ರಾಜಿತಃ** = ಸತ್ರಾಜಿತನು, **ಪುರ** = ಹಿಂದೆ, **ಏನಾಂ** = ಈ, **ಸ್ವತನಯಾಂ** = ತನ್ನ ಮಗಳಾದ ಸತ್ಯಭಾಮೆಯನ್ನು, **ಮಣಿನಾ ಸಹ ಏವ** = ಮಣಿಯ (ಸ್ಯಮಂತಕ) ಜೊತೆಗೆ, **ಮತ್ಕೃತೇ** = ನನಗೆ ಕೊಡುತ್ತೇನೆ (ಎಂದು) **ಪ್ರತಿಜಜ್ಞೆ** = ಪ್ರತಿಜ್ಞೆಯನ್ನು ಮಾಡಿದ್ದನು, **ಇತಿ** = ಎಂದು, **ಉವಾಚ** = ಹೇಳಿದನು.

ತಾತ್ಪರ್ಯ :- ಹೃದಿಕನ ಮಗನಾದ ಕೃತವರ್ಮನು ತನ್ನ ತಮ್ಮನಾದ ಶತಧನ್ವನ ಮುಂದೆ ಈ ಸತ್ರಾಜಿತನು ಸ್ಯಮಂತಕ ಮಣಿಯ ಜೊತೆಗೆ ತನ್ನ ಮಗಳಾದ ಸತ್ಯಭಾಮೆಯನ್ನು ನನಗೆ ಕೊಡುತ್ತೇನೆ ಎಂದು ಪ್ರತಿಜ್ಞೆ ಮಾಡಿದ್ದನು ಎಂದು ಹೇಳಿದನು.

**ಸರ್ವಾಂಶ್ಚ ಸಃ ಪುನರಸಾವವಮತ್ಯ ಕೃಷ್ಣಾ-**
**ಯಾದಾತ್ ಸುತಾಂ ಜಹಿ ಚ ತಂ ನಿಶಿ ಪಾಪಬುದ್ಧಿಮ್ ।**

ಆದಾಯ ರತ್ನಮುಪಯಾಹಿ ಚ ನೌ ವಿರೋಧೇ
ಕೃಷ್ಣಸ್ಯ ದಾನಪತಿನಾ ಸಹ ಸಾಹ್ಯಮೇಮಿ ॥ ೧೦೨ ॥

ಪದಚ್ಛೇದ :- ಸರ್ವಾನ್, ಚ, ಪುನಃ, ಅಸೌ, ಅವಮತ್ಯ, ಕೃಷ್ಣಾಯ, ಅದಾತ್, ಸುತಾಂ, ಜಹಿ, ಚ, ತಂ, ನಿಶಿ, ಪಾಪಬುದ್ಧಿಂ, ಆದಾಯ, ರತ್ನಂ, ಉಪಯಾಹಿ, ಚ, ನೌ, ವಿರೋಧೇ, ಕೃಷ್ಣಸ್ಯ, ದಾನಪತಿನ್, ಸಹ, ಸಾಹ್ಯಂ, ಏಮಿ ।

**ಅರ್ಥ** :- **ಪುನಃ** = ಆದರೆ, **ಅಸೌ** = ಈ ಸತ್ರಾಜಿತನು, **ಸರ್ವಾಂ ನಃ** = ನಮ್ಮನ್ನೆಲ್ಲಾ, **ಅವಮತ್ಯ** = ಕಡೆಗಾಣಿಸಿ, **ಕೃಷ್ಣಾಯ** = ಶ್ರೀ ಕೃಷ್ಣನಿಗೆ, **ಸುತಾಂ** = ಮಗಳಾದ ಸತ್ಯಭಾಮೆಯನ್ನು, **ಅದಾತ್** = ಕೊಟ್ಟನು, **ಪಾಪಬುದ್ಧಿಮ್** = ಪಾಪಿಯಾದ, **ತಂ** = ಸತ್ರಾಜಿತನನ್ನು, **ನಿಶಿ** = ರಾತ್ರಿಯಲ್ಲಿ, **ಜಹಿ** = ಕೊಲ್ಲು, **ಚ** = ಮತ್ತು, **ರತ್ನಂ** = ಸ್ಯಮಂತಕಮಣಿಯನ್ನು, **ಆದಾಯ** = ತೆಗೆದುಕೊಂಡು **ಉಪಯಾಹಿ** = ಮರಳಿ ಬಾ, **ಚ** = ಮತ್ತು, **ನೌ** = ನಮಗೆ, **ಕೃಷ್ಣಸ್ಯ** = ಕೃಷ್ಣನ, **ವಿರೋಧೇ (ಪ್ರಾಪ್ತೆ ಸತಿ)** = ವಿರೋಧ (ಯುದ್ಧ) ಒದಗಿದರೆ, **ದಾನಪತಿನಾ** = ಅಕ್ರೂರನ, **ಸಹ** = ಜೊತೆಗೆ, **ಸಾಹ್ಯಂ** = ನಿನ್ನ ಸಹಾಯಕ್ಕೆ, **ಏಮಿ** = ಬರುವೆ.

**ತಾತ್ಪರ್ಯ** :- ಆದರೆ ಈ ಸತ್ರಾಜಿತನು ನಮ್ಮನ್ನು ಮೋಸಗೊಳಿಸಿ ಸತ್ಯಭಾಮೆಯನ್ನು ಶ್ರೀಕೃಷ್ಣನಿಗೆ ಕೊಟ್ಟು ಮದುವೇ ಮಾಡಿದ ವಂಚಕ. ಇವನನ್ನು ರಾತ್ರಿಯಲ್ಲಿ ಕೊಂದು ಮಣಿಯ ಜೊತೆ ಮರಳಿ ಬಾ, ಒಂದು ವೇಳೆ ಶ್ರೀಕೃಷ್ಣನು ಯುದ್ಧಕ್ಕೆ ಬಂದರೆ ಅಕ್ರೂರನ ಜೊತೆಗೆ ನಾನೂ ನಿನ್ನ ಸಹಾಯಕ್ಕೆ ಬರುತ್ತೇನೆ.

ಇತ್ಯುಕ್ತ ಆಶು ಕುಮತಿಃ ಸ ಹಿ ಪೂರ್ವದೇಹೇ
ದೈತ್ಯೋ ಯತಸ್ತದಕರೋದಥ ಸತ್ಯಭಾಮಾ ।
ಆನಂದಸಂವಿದಪಿ ಲೋಕವಿಡಂಬನಾಯ
ತದ್ ದೇಹಮಸ್ಯ ತಿಲಜೇ ಪತಿಮಭ್ಯುಪಾಗಾತ್ ॥ ೧೦೩ ॥

ಪದಚ್ಛೇದ :- ಇತಿ, ಉಕ್ತಃ, ಆಶು, ಕುಮತಿಃ, ಸಃ, ಹಿ, ಪೂರ್ವದೇಹೇ, ದೈತ್ಯಃ, ಯತಃ, ತತ್, ಅಕರೋತ್, ಅಥ, ಸತ್ಯಭಾಮಾ, ಆನಂದ ಸಂವಿತ್, ಅಪೆ, ಲೋಕವಿಡಂಬನಾಯ, ತದ್, ದೇಹಂ, ಅಸ್ಯ, ತಿಲಜೇ, ಪತಿಂ, ಅಭ್ಯುಪಾಗಾತ್ ।

**ಅರ್ಥ** :- **ಇತಿ** = ಈ ಪ್ರಕಾರವಾಗಿ, **ಉಕ್ತಃ** = ಹೇಳಿಸಿಕೊಳ್ಳಲ್ಪಟ್ಟ, **ಕುಮತಿಃ** = ಕೆಟ್ಟಬುದ್ಧಿಯುಳ್ಳ, **ಸಃ** = ಆ ಶತಧನ್ವನು, **ಯತಃ** = ಯಾವ ಕಾರಣದಿಂದ, **ಪೂರ್ವದೇಹೇ** = ಹಿಂದಿನ ಜನ್ಮದಲ್ಲಿ, **ದೈತ್ಯಃ** = ದೈತ್ಯನಾಗಿದ್ದನೋ, **ಅತಃ** = ಆ ಕಾರಣದಿಂದ, **ಆಶು** = ಬೇಗನೆ, **ತತ್** = ಆ ಕೆಲಸ (ಸತ್ರಾಜಿತನ ಸಂಹಾರ)ವನ್ನು, **ಅಕರೋತ್** = ಮಾಡಿದನು, **ಅಥ** = ಅನಂತರದಲ್ಲಿ, **ಸತ್ಯಭಾಮಾ** = ಸತ್ಯಭಾಮೆಯು, **ಆನಂದಸಂವಿತ್ ಅಪಿ** = ಜ್ಞಾನಾನಂದಸ್ವರೂಪಳಾದರೂ, **ಲೋಕವಿಡಂಬನಾಯ** = ಲೋಕವಿಡಂಬನೆಗೆಂದು, **ಅಸ್ಯ** = ಈ ಸತ್ರಾಜಿತನ, **ತದ್ದೇಹಂ** = ಆ ದೇಹವನ್ನು, **ತಿಲಜೆ** = ಎಳ್ಳಿನ ಎಣ್ಣೆಯಲ್ಲಿರಿಸಿ, **ಪತಿ** = ಸ್ವಾಮಿಯಾದ (ಗಂಡನಾದ) ಕೃಷ್ಣನನ್ನು, **ಅಭ್ಯುಪಾಗಾತ್** = ಸಮೀಪಿಸಿದಳು.

**ತಾತ್ಪರ್ಯ** :- ದುಷ್ಟಬುದ್ಧಿಯುಳ್ಳ ಶತಧನ್ವನು ಈ ಮಾತುಗಳನ್ನು ಕೇಳಿ ಕೋಪಗೊಂಡು ಸತ್ರಾಜೀತನನ್ನು ಬೇಗನೆ ಕೊಂದನು. ಇದಕ್ಕೆ ಇವನು ಹಿಂದಿನ ಜನ್ಮದಲ್ಲಿ ದೈತ್ಯನಾದುದ್ದೇ ಕಾರಣ. ಜ್ಞಾನಾನಂದಾತ್ಮಕ ಸ್ವರೂಪಳಾದ ಸತ್ಯಭಾಮೆಯು ಇವೆಲ್ಲವನ್ನು ತಿಳಿದಿದ್ದರೂ ಲೋಕವಿಡಂಬನೆಗಾಗಿ ತನ್ನ ತಂದೆಯ ಶರೀರವನ್ನು ಎಳ್ಳೆಣ್ಣೆಯಲ್ಲಿ ಜೋಪಾನ ಮಾಡಿ ತನ್ನ ಪತಿಯಾದ ಶ್ರೀಕೃಷ್ಣನ ಬಳಿ ತೆರಳಿದಳು.

**ಶ್ರುತ್ವಾ ತದೀಯವಚನಂ ಭಗವಾನ್ ಪುರೀಂ ಸ್ವಾ-**
**ಮಾಯಾತ ಏವ ತು ನಿಶಮ್ಯ ಮಹೋತ್ಸವಂ ತಮ್ ।**
**ಪಾಂಚಾಲರಾಜಪುರುಷೋದಿತಮಾಶು ವೃಷ್ಣಿ-**
**ವರ್ಯೈರಗಾನ್ಮುಸಲಿನಾ ಸಹ ತತ್ಪುರೀಂ ಚ ॥ ೧೦೪ ॥**

ಪದಚ್ಛೇದ :- ಶ್ರುತ್ವಾ, ತದೀಯವಚನಂ, ಭಗವಾನ್, ಪುರೀಂ, ಸ್ವಾಂ, ಆಯಾತ, ಏವ, ತು, ನಿಶಮ್ಯ, ಮಹೋತ್ಸವಂ, ತಂ, ಪಾಂಚಾಲರಾಜ ಪುರುಷೋದಿತಂ, ಆಶು, ವೃಷ್ಣಿವರ್ಯೈಃ, ಅಗಾತ್, ಮುಸಲಿನಾ, ಸಹ, ತತ್ಪುರೀಂ, ಚ ।

**ಅರ್ಥ** :- **ತದೀಯವಚನಂ** = ಸತ್ಯಭಾಮೆಯ ಮಾತನ್ನು, **ಶ್ರುತ್ವಾ** = ಕೇಳಿ, **ಭಗವಾನ್** = ಶ್ರೀಕೃಷ್ಣನು, **ಸ್ವಾಂ** = ತನ್ನ, **ಪುರೀಂ** = ಪಟ್ಟಣವನ್ನು ಕುರಿತು, **ಆಯಾತ ಏವ** = ಬಂದನು, **ತು** = ಅಷ್ಟರಲ್ಲೇ,

**ಪಾಂಚಾಲರಾಜಪುರುಷೋದಿತಂ** = ಪಾಂಚಾಲರಾಜನ ದೂತರಿಂದ ಹೇಳಿದ, **ತವಮ್** = ಆ ಯಾವ, **ಮಹೋತ್ಸವಂ** = ದ್ರೌಪದಿಯ ಸ್ವಯಂವರ ಮಹೋತ್ಸವದ ವಾರ್ತೆಯನ್ನು, **ನಿಶಮ್ಯ** = ಕೇಳಿ, **ವೃಷ್ಣಿವರ್ಯೈಃ** = ಯಾದವ ಶ್ರೇಷ್ಠರಿಂದ, **ಚ** = ಮತ್ತು, **ಮುಸಲಿನಾ** = ಬಲರಾಮನಿಂದ, **ಸಹ** = ಕೂಡಿಕೊಂಡು, **ತತ್ಪುರೀಂ** = ದ್ರುಪದನ ಪಟ್ಟಣಕ್ಕೆ, **ಅಗಾತ್** = ತೆರಳಿದನು.

**ತಾತ್ಪರ್ಯ** :- ಸತ್ಯಭಾಮೆಯ ಮಾತನ್ನು ಕೇಳಿ ತನ್ನ ಪಟ್ಟಣಕ್ಕೆ ಮರಳಿದ ಅನಂತರ ದ್ರುಪದನ ದೂತರು ಹೇಳಿದ ದ್ರೌಪದೀ ಸ್ವಯಂವರದ ಸುದ್ದಿಯನ್ನು ಕೇಳಿ ಯಾದವರು ಹಾಗೂ ಬಲರಾಮನ ಜೊತೆಗೂಡಿ ಪಾಂಚಾಲದೇಶಕ್ಕೆ ಶ್ರೀ ಕೃಷ್ಣನು ಹೋದನು.

**ಭೀಮೋಽಪಿ ರುದ್ರವರರಕ್ಷಿತರಾಕ್ಷಸಂ ತಂ**
**ಹತ್ವಾ ತೃಣೋಪಮತಯಾ ಹರಿಭಕ್ತವಂದ್ಯಃ ।**
**ಉಷ್ಯಾಥ ತತ್ರ ಕತಿಚಿದ್ದಿನಮಚ್ಯುತಸ್ಯ**
**ವ್ಯಾಸಾತ್ಮನೋ ವಚನತಃ ಪ್ರಯಯೌ ನಿಜೈಶ್ಚ ॥ ೧೦೫ ॥**

**ಪದಚ್ಛೇದ** :- **ಭೀಮಃ, ಅಪಿ, ರುದ್ರವರರಕ್ಷಿತರಾಕ್ಷಸಂ, ತಂ, ಹತ್ವಾ, ತೃಣೋಪಮತಯಾ, ಹರಿಭಕ್ತವಂದ್ಯಃ, ಉಷ್ಯ, ಅಥ, ತತ್ರ, ಕತಿಚಿತ್, ದಿನಂ, ಅಚ್ಯುತಸ್ಯ, ವ್ಯಾಸಾತ್ಮನಃ, ವಚನತಃ, ಪ್ರಯಯೌ, ನಿಜೈಃ, ಚ ।**

**ಅರ್ಥ** :- **ಹರಿಭಕ್ತವಂದ್ಯಃ** = ಹರಿಭಕ್ತರಿಂದ ವಂದ್ಯನಾದ, **ಭೀಮಃ ಅಪಿ** = ಭೀಮನಾದರೂ, **ತಂ** = ಆ ಯಾವ, **ರುದ್ರವರರಕ್ಷಿತರಾಕ್ಷಸಂ** = ರುದ್ರದೇವರ ವರಬಲದಿಂದ ರಕ್ಷಿತನಾದ ಬಕಾಸುರನೆಂಬ ರಾಕ್ಷಸನನ್ನು, **ತೃಣೋಪಮತಯಾ** = ಹುಲ್ಲುಕಡ್ಡಿಯಂತೆ, **ಹತ್ವಾ** = ಸಂಹಾರ ಮಾಡಿ, **ಅಥ** = ಅನಂತರ, **ತತ್ರ** = ಏಕಚಕ್ರ ನಗರದಲ್ಲಿ, **ಕತಿಚಿತ್** = ಕೆಲವು, **ದಿನಂ** = ದಿನ, **ಉಷ್ಯ** = ವಾಸಿಸಿ, **ಅಚ್ಯುತಸ್ಯ** = ಯಾವ ರೀತಿಯಾದ ಚ್ಯುತಿ ಇಲ್ಲದ, **ವ್ಯಾಸಾತ್ಮನಃ** = ವೇದವ್ಯಾಸದೇವರ, **ವಚನತಃ** = ಮಾತಿನಂತೆ, **ನಿಜೈಃ** = ತನ್ನವರಿಂದ, (**ಸಹ** = ಕೂಡಿಕೊಂಡು), **ಪ್ರಯಯೌ** = ಹೊರಟನು.

**ತಾತ್ಪರ್ಯ** :- ಸಕಲ ಹರಿಭಕ್ತರಿಂದ ವಂದ್ಯನಾದ ಬಲಭೀಮನು ಶಿವನ ವರಬಲವುಳ್ಳ ಬಕಾಸುರನನ್ನು ಸಂಹಾರ ಮಾಡಿ ಏಕಚಕ್ರನಗರದಲ್ಲಿ ಕೆಲ

ದಿನಗಳು ಇದ್ದು ವೇದವ್ಯಾಸದೇವರ ಆದೇಶದಂತೆ ಅಲ್ಲಿಂದ ತನ್ನವರ ಜೊತೆಗೂಡಿ ಹೊರಟನು.

ಮಾಂಗಲ್ಯಮೇತದತುಲಂ ಪ್ರತಿಯಾತ ಶೀಘ್ರಂ
ಪಾಂಚಾಲಕಾನ್ ಪರಮಭೋಜನಮತ್ರ ಸಿಧ್ಯೇತ್ ।
ವಿಪ್ರೈರಿತಸ್ತತ ಇತೀರಿತವಾಕ್ಯಮೇತೇ
ಶೃಣ್ವಂತ ಏವ ಪರಿಚಕ್ರಮುರುತ್ತರಾಶಾಮ್ ॥ ೧೦೬ ॥

ಪದಚ್ಛೇದ :- ಮಾಂಗಲ್ಯಂ, ಏತತ್, ಅತುಲಂ, ಪ್ರತಿಯಾತ, ಶೀಘ್ರಂ, ಪಾಂಚಾಲಕಾನ್, ಪರಮಭೋಜನಂ, ಅತ್ರ, ಸಿಧ್ಯೇತ್, ವಿಪ್ರೈಃ, ಇತಸ್ತತಃ, ಇತಿ, ಈರಿತಂ, ವಾಕ್ಯಂ, ಏತೇ, ಶೃಣ್ವಂತ, ಏವ, ಪರಿಚಕ್ರಮುಃ, ಉತ್ತರಾಶಾಮ್ ।

ಅರ್ಥ :- ಏತತ್ = ಇದು, ಅತುಲಂ = ಅನುಪಮವಾದ, ಮಾಂಗಲ್ಯಂ = ಮಂಗಳಕಾರ್ಯವು, ಶೀಘ್ರಂ = ಬೇಗನೆ, ಪಾಂಚಾಲಕಾನ್ = ಪಾಂಚಾಲದೇಶಕ್ಕೆ, ಪ್ರತಿಯಾತ = ನಡೆಯಿರಿ, ಅತ್ರ = ಇಲ್ಲಿ, ಪರಮಭೋಜನಂ = ಶ್ರೇಷ್ಠವಾದ ಭೋಜನವು, ಸಿಧ್ಯೇತ್ = ದೊರೆಯಬಹುದು, ಇತಿ = ಎಂದು, ಇತಸ್ತತಃ = ಇತ್ತ ಅತ್ತ, ವಿಪ್ರೈಃ = ಬ್ರಾಹ್ಮಣರಿಂದ, ಈರಿತಂ = ಹೇಳಲ್ಪಟ್ಟ, ವಾಕ್ಯಂ = ಮಾತನ್ನು, ಏತೇ = ಪಾಂಡವರು, ಶೃಣ್ವಂತ ಏವ = ಕೇಳುವವರಾಗಿ, ಉತ್ತರಾಶಾಮ್ = ಉತ್ತರ ದಿಕ್ಕನ್ನು ಕುರಿತು, ಪರಿಚಕ್ರಮುಃ = ನಡೆದರು.

ತಾತ್ಪರ್ಯ :- ಪಾಂಚಾಲ ದೇಶದಲ್ಲಿ ಮಂಗಳಕಾರ್ಯವು ನಡೆಯುತ್ತಿದೆ. ಆದ್ದರಿಂದ ''ನಮಗೆ ಮೃಷ್ಟಾನ್ನ ಭೋಜನ ಸಿಗಬಹುದು ನಡೆಯಿರಿ'' ಎಂದು ಅತ್ತ ಇತ್ತ ಮಾತನಾಡುತ್ತಿರುವ ಬ್ರಾಹ್ಮಣರ ಮಾತುಗಳನ್ನು ಕೇಳಿ ಪಾಂಡವರು ಉತ್ತರದಿಕ್ಕಿಗೆ ಪ್ರಯಾಣವನ್ನು ಬೆಳೆಸಿದರು.

ಷಣ್ಣಾಂ ಚ ಮಧ್ಯಗಮುದೀರ್ಣಭುಜಂ ವಿಶಾಲ-
ವಕ್ಷಸ್ಥಲಂ ಬಹುಪೌರುಷಲಕ್ಷಣಂ ಚ ।
ದೃಷ್ಟ್ವೈವ ಮಾರುತಿಮಸಾವುಪಲಪ್ಸ್ಯತೀಹ
ಕೃಷ್ಣಾಮಿತಿ ಸ್ಮ ಚ ವಚಃ ಪ್ರವದಂತಿ ವಿಪ್ರಾಃ ॥ ೧೦೭ ॥

ಪದಚ್ಛೇದ :- ಷಣ್ಣಾಂ, ಚ, ಮಧ್ಯಗಂ, ಉದೀರ್ಣಭುಜಂ, ವಿಶಾಲ- ವಕ್ಷಃಸ್ಥಲಂ, ಬಹುಲಪೌರುಷಲಕ್ಷಣಂ, ಚ, ದೃಷ್ಟ್ವಾ, ಏವ, ಮಾರುತಿಂ, ಅಸೌ, ಉಪಲಪ್ಸ್ಯತಿ, ಇಹ, ಕೃಷ್ಣಾಂ, ಇತಿ, ಸ್ಮ ಚ, ವಚಃ, ಪ್ರವದಂತಿ, ವಿಪ್ರಾಃ ।

**ಅರ್ಥ :- ಷಣ್ಣಾಂ ಚ** = ಆರು ಜನರ, **ಮಧ್ಯಗಂ** = ಮಧ್ಯದಲ್ಲಿ ಇರುವ, **ಉದೀರ್ಣಭುಜಂ** = ತುಂಬಿದ ತೋಳುಗಳುಳ್ಳ, **ವಿಶಾಲವಕ್ಷಃಸ್ಥಲಂ** = ವಿಶಾಲವಾದ ವಕ್ಷಃಸ್ಥಳವುಳ್ಳ, **ಚ** = ಮತ್ತು, **ಬಹುಲಪೌರುಷಲಕ್ಷಣಂ** = ಪೂರ್ಣವಾದ ಪುರುಷ ಲಕ್ಷಣಗಳನ್ನು ಹೊಂದಿದ, **ಮಾರುತಿಂ** = ಭೀಮನನ್ನು, **ದೃಷ್ಟ್ವಾ ಏವ** = ನೋಡುತ್ತಲೇ, **ವಿಪ್ರಾಃ** = ಬ್ರಾಹ್ಮಣರು, **ಅಸೌ** = ಇವನೇ, **ಇಹ** = ಇಲ್ಲಿ, **ಕೃಷ್ಣಾಂ** = ದ್ರೌಪದಿಯನ್ನು, **ಉಪಲಪ್ಸ್ಯತಿ** = ಹೊಂದುತ್ತಾನೆ, **ಇತಿ** = ಎಂದು, **ವಚಃ** = ಮಾತನ್ನು, **ಪ್ರವದಂತಿ ಸ್ಮ** = ಹೇಳಿದರು.

**ತಾತ್ಪರ್ಯ** :- ಆರು ಜನ ಮಧ್ಯದಲ್ಲಿ ತುಂಬು ತೋಳುಗಳುಳ್ಳ ವಿಶಾಲವಾದ ಎದೆಯುಳ್ಳ ಪರಿಪೂರ್ಣ ಪುರುಷರ ಲಕ್ಷಣದಿಂದ ಕೂಡಿದ ಭೀಮನನ್ನು ನೋಡಿ ಬ್ರಾಹ್ಮಣರು ಇವನೆ ಸ್ವಯಂವರದಲ್ಲಿ ದ್ರೌಪದಿಯನ್ನು ಪಡೆಯುವನು ಎಂದು ಭವಿಷ್ಯವನ್ನು ನುಡಿದರು.

**ರಾತ್ರೌ ದಿವಾ ಚ ಸತತಂ ಪಥಿ ಗಚ್ಛಮಾನಾಃ**
**ಪ್ರಾಪುಃ ಕದಾಚಿದಥ ವಿಷ್ಣುಪದೀಂ ನಿಶಾಯಾಮ್ ।**
**ಸರ್ವಾಂಶ್ಚ ರಕ್ಷಿತುಮಗಾದಿಹ ಪೃಷ್ಠತಸ್ತು**
**ಭೀಮೋಽಗ್ರ ಏವ ಶತಮನ್ಯುಸುತೋಽಂತರಾಽನ್ಯೇ ॥ ೧೦೮ ॥**

ಪದಚ್ಛೇದ :- ರಾತ್ರೌ, ದಿವಾ, ಚ, ಸತತಂ, ಪಥಿ, ಗಚ್ಛಮಾನಾಃ, ಪ್ರಾಪುಃ, ಕದಾಚಿತ್, ಅಥ, ವಿಷ್ಣುಪದೀಂ, ನಿಶಾಯಾಮ್, ಸರ್ವಾನ್, ಚ, ರಕ್ಷಿತುಂ, ಅಗಾತ್, ಇಹ, ಪೃಷ್ಠತಃ, ಚ, ಭೀಮಃ, ಅಗ್ರಃ, ಏವ, ಶತಮನ್ಯುಸುತಃ, ಅಂತರೇ, ಅನ್ಯೇ ।

**ಅರ್ಥ :- ಅಥ** = ಅನಂತರ, **ದಿವಾ** = ಹಗಲು, **ಚ** = ಮತ್ತು, **ರಾತ್ರೌ** = ರಾತ್ರಿಯಲ್ಲಿ, **ಸತತಂ** = ನಿರಂತರವಾಗಿ, **ಪಥಿ** = ದಾರಿಯಲ್ಲಿ, **ಗಚ್ಛಮಾನಾಃ** = ಸಾಗುತ್ತಾ ಪಾಂಡವರು, **ಕದಾಚಿತ್** = ಒಮ್ಮೆ, **ನಿಶಾಯಾಮ್** = ರಾತ್ರಿಯಲ್ಲಿ, **ವಿಷ್ಣುಪದೀಂ** = ಗಂಗಾನದಿಯನ್ನು, **ಪ್ರಾಪುಃ** = ಹೊಂದಿದರು, **ಇಹ** = ಇಲ್ಲಿ, **ಭೀಮಃ** = ಭೀಮನು, **ಸರ್ವಾನ್** = ಎಲ್ಲರನ್ನು, **ರಕ್ಷಿತುಂ** =

ದಿನಗಳು ಇದ್ದು ವೇದವ್ಯಾಸದೇವರ ಆದೇಶದಂತೆ ಅಲ್ಲಿಂದ ತನ್ನವರ ಜೊತೆಗೂಡಿ ಹೊರಟನು.

ಮಾಂಗಲ್ಯಮೇತದತುಲಂ ಪ್ರತಿಯಾತ ಶೀಘ್ರಂ
ಪಾಂಚಾಲಕಾನ್ ಪರಮಭೋಜನಮತ್ರ ಸಿಧ್ಯೇತ್ ।
ವಿಪ್ರೈರಿತಸ್ತತ ಇತೀರಿತವಾಕ್ಯಮೇತೇ
ಶೃಣ್ವಂತ ಏವ ಪರಿಚಕ್ರಮುರುತ್ತರಾಶಾಮ್ ॥ ೧೦೬ ॥

ಪದಚ್ಛೇದ :- ಮಾಂಗಲ್ಯಂ, ಏತತ್, ಅತುಲಂ, ಪ್ರತಿಯಾತ, ಶೀಘ್ರಂ, ಪಾಂಚಾಲಕಾನ್, ಪರಮಭೋಜನಂ, ಅತ್ರ, ಸಿಧ್ಯೇತ್, ವಿಪ್ರೈಃ, ಇತಸ್ತತಃ, ಇತಿ, ಈರಿತಂ, ವಾಕ್ಯಂ, ಏತೇ, ಶೃಣ್ವಂತ, ಏವ, ಪರಿಚಕ್ರಮುಃ, ಉತ್ತರಾಶಾಮ್ ।

ಅರ್ಥ :- ಏತತ್ = ಇದು, ಅತುಲಂ = ಅನುಪಮವಾದ, ಮಾಂಗಲ್ಯಂ = ಮಂಗಳಕಾರ್ಯವು, ಶೀಘ್ರಂ = ಬೇಗನೆ, ಪಾಂಚಾಲಕಾನ್ = ಪಾಂಚಾಲದೇಶಕ್ಕೆ, ಪ್ರತಿಯಾತ = ನಡೆಯಿರಿ, ಅತ್ರ = ಇಲ್ಲಿ, ಪರಮಭೋಜನಂ = ಶ್ರೇಷ್ಠವಾದ ಭೋಜನವು, ಸಿಧ್ಯೇತ್ = ದೊರೆಯಬಹುದು, ಇತಿ = ಎಂದು, ಇತಸ್ತತಃ = ಇತ್ತ ಅತ್ತ, ವಿಪ್ರೈಃ = ಬ್ರಾಹ್ಮಣರಿಂದ, ಈರಿತಂ = ಹೇಳಲ್ಪಟ್ಟ, ವಾಕ್ಯಂ = ಮಾತನ್ನು, ಏತೇ = ಪಾಂಡವರು, ಶೃಣ್ವಂತ ಏವ = ಕೇಳುವವರಾಗಿ, ಉತ್ತರಾಶಾಮ್ = ಉತ್ತರ ದಿಕ್ಕನ್ನು ಕುರಿತು, ಪರಿಚಕ್ರಮುಃ = ನಡೆದರು.

ತಾತ್ಪರ್ಯ :- ಪಾಂಚಾಲ ದೇಶದಲ್ಲಿ ಮಂಗಳಕಾರ್ಯವು ನಡೆಯುತ್ತಿದೆ. ಆದ್ದರಿಂದ ''ನಮಗೆ ಮೃಷ್ಟಾನ್ನ ಭೋಜನ ಸಿಗಬಹುದು ನಡೆಯಿರಿ'' ಎಂದು ಅತ್ತ ಇತ್ತ ಮಾತನಾಡುತ್ತಿರುವ ಬ್ರಾಹ್ಮಣರ ಮಾತುಗಳನ್ನು ಕೇಳಿ ಪಾಂಡವರು ಉತ್ತರದಿಕ್ಕಿಗೆ ಪ್ರಯಾಣವನ್ನು ಬೆಳೆಸಿದರು.

ಷಣ್ಣಾಂ ಚ ಮಧ್ಯಗಮುದೀರ್ಣಭುಜಂ ವಿಶಾಲ-
ವಕ್ಷಸ್ಥಲಂ ಬಹುಪೌರುಷಲಕ್ಷಣಂ ಚ ।
ದೃಷ್ಟ್ವೈವ ಮಾರುತಿಮಸಾವುಪಲಪ್ಸ್ಯತೀಹ
ಕೃಷ್ಣಾಮಿತಿ ಸ್ಮ ಚ ವಚಃ ಪ್ರವದಂತಿ ವಿಪ್ರಾಃ ॥ ೧೦೭ ॥

ಪದಚ್ಛೇದ :- ಷಣ್ಣಾಂ, ಚ, ಮಧ್ಯಗಂ, ಉದೀರ್ಣಭುಜಂ, ವಿಶಾಲ- ವಕ್ಷಃಸ್ಥಲಂ, ಬಹುಲಪೌರುಷಲಕ್ಷಣಂ, ಚ, ದೃಷ್ಟ್ವಾ, ಏವ, ಮಾರುತಿಂ, ಅಸೌ, ಉಪಲಪ್ಸ್ಯತಿ, ಇಹ, ಕೃಷ್ಣಾಂ, ಇತಿ, ಸ್ಮ ಚ, ವಚಃ, ಪ್ರವದಂತಿ, ವಿಪ್ರಾಃ ।

ಅರ್ಥ :- ಷಣ್ಣಾಂ ಚ = ಆರು ಜನರ, ಮಧ್ಯಗಂ = ಮಧ್ಯದಲ್ಲಿ ಇರುವ, ಉದೀರ್ಣಭುಜಂ = ತುಂಬಿದ ತೋಳುಗಳುಳ್ಳ, ವಿಶಾಲವಕ್ಷಃಸ್ಥಲಂ = ವಿಶಾಲವಾದ ವಕ್ಷಃಸ್ಥಳವುಳ್ಳ, ಚ = ಮತ್ತು, ಬಹುಲಪೌರುಷಲಕ್ಷಣಂ = ಪೂರ್ಣವಾದ ಪುರುಷ ಲಕ್ಷಣಗಳನ್ನು ಹೊಂದಿದ, ಮಾರುತಿಂ = ಭೀಮನನ್ನು, ದೃಷ್ಟ್ವಾ ಏವ = ನೋಡುತ್ತಲೇ, ವಿಪ್ರಾಃ = ಬ್ರಾಹ್ಮಣರು, ಅಸೌ = ಇವನೇ, ಇಹ = ಇಲ್ಲಿ, ಕೃಷ್ಣಾಂ = ದ್ರೌಪದಿಯನ್ನು, ಉಪಲಪ್ಸ್ಯತಿ = ಹೊಂದುತ್ತಾನೆ, ಇತಿ = ಎಂದು, ವಚಃ = ಮಾತನ್ನು, ಪ್ರವದಂತಿ ಸ್ಮ = ಹೇಳಿದರು.

ತಾತ್ಪರ್ಯ :- ಆರು ಜನ ಮಧ್ಯದಲ್ಲಿ ತುಂಬು ತೋಳುಗಳುಳ್ಳ ವಿಶಾಲವಾದ ಎದೆಯುಳ್ಳ ಪರಿಪೂರ್ಣ ಪುರುಷರ ಲಕ್ಷಣದಿಂದ ಕೂಡಿದ ಭೀಮನನ್ನು ನೋಡಿ ಬ್ರಾಹ್ಮಣರು ಇವನೆ ಸ್ವಯಂವರದಲ್ಲಿ ದ್ರೌಪದಿಯನ್ನು ಪಡೆಯುವವನು ಎಂದು ಭವಿಷ್ಯವನ್ನು ನುಡಿದರು.

**ರಾತ್ರೌ ದಿವಾ ಚ ಸತತಂ ಪಥಿ ಗಚ್ಛಮಾನಾಃ**
**ಪ್ರಾಪುಃ ಕದಾಚಿದಥ ವಿಷ್ಣುಪದೀಂ ನಿಶಾಯಾಮ್ ।**
**ಸರ್ವಾಂಶ್ಚ ರಕ್ಷಿತುಮಗಾದಿಹ ಪೃಷ್ಠತಸ್ತು**
**ಭೀಮೋಽಗ್ರ ಏವ ಶತಮನ್ಯುಸುತೋಽಂತರಾಽನ್ಯೇ ॥ ೧೦೮ ॥**

ಪದಚ್ಛೇದ :- ರಾತ್ರೌ, ದಿವಾ, ಚ, ಸತತಂ, ಪಥಿ, ಗಚ್ಛಮಾನಾಃ, ಪ್ರಾಪುಃ, ಕದಾಚಿತ್, ಅಥ, ವಿಷ್ಣುಪದೀಂ, ನಿಶಾಯಾಮ್, ಸರ್ವಾನ್, ಚ, ರಕ್ಷಿತುಂ, ಅಗಾತ್, ಇಹ, ಪೃಷ್ಠತಃ, ಚ, ಭೀಮಃ, ಅಗ್ರಃ, ಏವ, ಶತಮನ್ಯುಸುತಃ, ಅಂತರೇ, ಅನ್ಯೇ ।

ಅರ್ಥ :- ಅಥ = ಅನಂತರ, ದಿವಾ = ಹಗಲು, ಚ = ಮತ್ತು, ರಾತ್ರೌ = ರಾತ್ರಿಯಲ್ಲಿ, ಸತತಂ = ನಿರಂತರವಾಗಿ, ಪಥಿ = ದಾರಿಯಲ್ಲಿ, ಗಚ್ಛಮಾನಾಃ = ಸಾಗುತ್ತಾ ಪಾಂಡವರು, ಕದಾಚಿತ್ = ಒಮ್ಮೆ, ನಿಶಾಯಾಮ್ = ರಾತ್ರಿಯಲ್ಲಿ, ವಿಷ್ಣುಪದೀಂ = ಗಂಗಾನದಿಯನ್ನು, ಪ್ರಾಪುಃ = ಹೊಂದಿದರು, ಇಹ = ಇಲ್ಲಿ, ಭೀಮಃ = ಭೀಮನು, ಸರ್ವಾನ್ = ಎಲ್ಲರನ್ನು, ರಕ್ಷಿತುಂ =

ರಕ್ಷಿಸುವ ಸಲುವಾಗಿ, **ಪೃಷ್ಠತಃ** = ಹಿಂಬದಿಯಲ್ಲಿ, **ಅಗಾತ್** = ನಡೆದನು, **ಅಗ್ರಃ** = ಮುಂದೆ, **ಶತಮನ್ಯುಸುತಃ** = ಇಂದ್ರನ ಮಗನಾದ ಅರ್ಜುನನು, (**ಅಗಾತ್** = ನಡೆದನು), **ಚ** = ಮತ್ತು, **ಅನ್ಯೇ** = ಉಳಿದವರು, **ಅಂತರೇ** = ಮಧ್ಯದಲ್ಲಿ (ನಡೆದರು.)

**ತಾತ್ಪರ್ಯ** :- ಬಹುದೂರದ ಪಾಂಚಾಲದೇಶಕ್ಕೆ ಮುಟ್ಟಲು ಹಗಲು ರಾತ್ರಿ ಸಂಚಾರ ಮಾಡುತ್ತಿರುವ ಪಾಂಡವರು ಒಮ್ಮೆ ರಾತ್ರಿಯಲ್ಲಿ ಗಂಗಾ ಸಮೀಪಕ್ಕೆ ಬಂದರು. ಅಲ್ಲಿ ಎಲ್ಲರ ರಕ್ಷಣೆಗಾಗಿ ಹಿಂದೆ ಭೀಮ, ಮುಂದೆ ಅರ್ಜುನ ಹಾಗೂ ಮಧ್ಯದಲ್ಲಿ ಉಳಿದವರು ಹೆಜ್ಜೆ ಹಾಕಿದರು.

**ಪ್ರಾಪ್ತೇ ತದೋಲ್ಮುಕಧರೇಽರ್ಜುನ ಏವ ಗಂಗಾಂ**
**ಗಂಧರ್ವರಾಜ ಇಹ ಚಿತ್ರರಥೋಽರ್ಧರಾತ್ರೇ ।**
**ದೃಷ್ಟ್ವೈವ ವಿಪ್ರರಹಿತಾನುದಕಾಂತರಸ್ಥಃ**
**ಕ್ಷತ್ರಾತ್ಮಜಾ ಇತಿ ಹಿ ಧರ್ಷಯಿತುಂ ಸ ಚಾಽಗಾತ್ ॥ ೧೦೯ ॥**

**ಪದಚ್ಛೇದ** :- ಪ್ರಾಪ್ತೇ, ತದಾ, ಉಲ್ಮುಕಧರೇ, ಅರ್ಜುನೇ, ಏವ, ಗಂಗಾಂ, ಗಂಧರ್ವರಾಜಃ, ಇಹ, ಚಿತ್ರರಥಃ, ಅರ್ಧರಾತ್ರೇ, ದೃಷ್ಟ್ವಾ, ಏವ, ವಿಪ್ರರಹಿತಾನ್, ಉಪಕಾಂತರಸ್ಥಃ, ಕ್ಷತ್ರಾತ್ಮಜಾಃ, ಇತಿ, ಹಿ, ಘರ್ಷಯಿತುಂ, ಸ, ಚ, ಅಗಾತ್ ।

**ಅರ್ಥ** :- **ತದಾ** = ಆಗ, **ಉಲ್ಮುಕಧರೆ** = ಪಂಜನ್ನು ಹಿಡಿದ ಕೈಯುಳ್ಳ, **ಅರ್ಜುನ ಏವ** = ಅರ್ಜುನನು, **ಗಂಗಾಂ** = ಗಂಗೆಯನ್ನು, **ಪ್ರಾಪ್ತೇ ಸತಿ** = ಹೊಂದಲು, **ಇಹ** = ಅಲ್ಲಿ, **ಅರ್ಧರಾತ್ರೆ** = ಅರ್ಧರಾತ್ರಿಯಲ್ಲಿ, **ಉದಕಾಂತರಸ್ಥಃ** = ನೀರಿನಲ್ಲಿದ್ದ, **ಗಂಧರ್ವರಾಜಃ** = ಗಂಧರ್ವರಾಜನಾದ, **ಚಿತ್ರರಥಃ** = ಚಿತ್ರರಥನು, **ವಿಪ್ರರಹಿತಾನ್** = ಜೊತೆಯಲ್ಲಿ ಬ್ರಾಹ್ಮಣರಿಲ್ಲದ ಪಾಂಡವರನ್ನು, **ದೃಷ್ಟ್ವಾ ಏವ** = ನೋಡಿಯೇ, **ಕ್ಷತ್ರಾತ್ಮಜಾಃ** = ಕ್ಷತ್ರಿಯರು, **ಇತಿ** = ಎಂದು (ತಿಳಿದು), **ಘರ್ಷಯಿತುಂ** = ಹೋರಾಟ ಮಾಡಲು, **ಸಃ** = ಅವನು, **ಅಗಾತ್** = ಬಂದನು, **ಹಿ** = ನಿಶ್ಚಯ.

**ತಾತ್ಪರ್ಯ** :- ಪಂಜುಹಿಡಿದು ಮುಂದೆ ಸಾಗುತ್ತಿರುವ ಅರ್ಜುನನು ಗಂಗೆಯನ್ನು ಸಮೀಪಿಸಿದನು. ನದಿಯಲ್ಲಿ ನಿಂತಿದ್ದ ಗಂಧರ್ವರಾಜನಾದ ಚಿತ್ರರಥನು ಮಧ್ಯರಾತ್ರಿಯಲ್ಲಿ ಬ್ರಾಹ್ಮಣರು ಜೊತೆಯಲ್ಲಿ ಇಲ್ಲದ್ದ

ಪಾಂಡವರನ್ನು ನೋಡಿ ಇವರು ಕ್ಷತ್ರಿಯರು ಎಂದು ತಿಳಿದು ಯುದ್ಧವನ್ನು ಮಾಡಲು ಧಾವಿಸಿದನು.

ಹಂತಾಽಸ್ಮಿ ವೋ ಹ್ಯುಪಗತಾನುದಕಾಂತಮಸ್ಯಾ
ನದ್ಯಾಶ್ಚ ಮರ್ತ್ಯಚರಣಾಯ ನಿಷಿದ್ಧಕಾಲೇ ।
ಇತ್ಥಂ ವದಂತಮಮುಮಾಹ ಸುರೇಂದ್ರಸೂನು-
ಗಂಧರ್ವ ನಾಸ್ತ್ರವಿದುಷಾಂ ಭಯಮಸ್ತಿ ತೇಽದ್ಯ ॥ ೧೧೦ ॥

ಪದಚ್ಛೇದ :- ಹಂತಾ, ಅಸ್ಮಿ, ವಃ, ಹಿ, ಉಪಗತಾನ್, ಉದಕಾಂತಂ, ಅಸ್ಯಾಃ, ನದ್ಯಾಃ, ಚ, ಮರ್ತ್ಯಚರಣಾಯ, ನಿಷಿದ್ಧಕಾಲೇ, ಇತ್ಥಂ, ವದಂತಂ, ಅಮುಂ, ಆಹ, ಸುರೇಂದ್ರಸೂನುಃ, ಗಂಧರ್ವಃ, ನ, ಅಸ್ತ್ರವಿದುಷಾಂ, ಭಯಂ, ಅಸ್ತಿ, ತೇ, ಅದ್ಯ ।

ಅರ್ಥ :- ಮರ್ತ್ಯಚರಣಾಯ = ಮನುಷ್ಯರ ಸಂಚಾರಕ್ಕೆ, ನಿಷಿದ್ಧಕಾಲೇ = ವಿಹಿತವಲ್ಲ ಈ ಕಾಲ(ರಾತ್ರಿ)ದಲ್ಲಿ, ಅಸ್ಯಾಃ = ಈ, ನದ್ಯಾಃ = ಗಂಗಾನದಿಯ, ಉದಕಾಂತಂ = ಸಮೀಪಕ್ಕೆ, ಉಪಗತಾನ್ = ಬಂದಿರುವ, ವಃ = ನಿಮ್ಮನ್ನು, ಹಂತಾ = ಕೊಲ್ಲುವನು, ಅಸ್ಮಿ = ಆಗಿದ್ದೇನೆ, ಇತ್ಥಂ = ಎಂದು, ವದಂತಂ = ಹೇಳುತ್ತಿರುವ, ಅಮುಂ = ಚಿತ್ರರಥನನ್ನು ಕುರಿತು, ಸುರೇಂದ್ರಸೂನುಃ = ಇಂದ್ರನ ಮಗನಾದ ಅರ್ಜುನನು, ಗಂಧರ್ವ = ಗಂಧರ್ವನೇ, ಅಸ್ತ್ರವಿದುಷಾಂ = ಅಸ್ತ್ರಬಲ್ಲ ನಮಗೆ, ಅದ್ಯ = ಈಗ, ತೇ = ನಿನ್ನ, ಭಯಂ = ಭಯವು, ನ ಅಸ್ತಿ = ಇಲ್ಲ, ಇತಿ = ಎಂದು, ಆಹ = ಹೇಳಿದನು.

ತಾತ್ಪರ್ಯ :- ಮನುಷ್ಯ ಸಂಚಾರಕ್ಕೆ ಯೋಗ್ಯವಲ್ಲದ ನಡುರಾತ್ರಿಯಲ್ಲಿ ಈ ಗಂಗಾನದಿಯ ಸಮೀಪಕ್ಕೆ ಬಂದ ನಿಮ್ಮನ್ನು ಕೊಲ್ಲುತ್ತೇನೆ ಎಂದು ಹೇಳುತ್ತಿರುವ ಚಿತ್ರರಥನನ್ನು ಅರ್ಜುನನು ಹೇ ಗಂಧರ್ವ ಅಸ್ತ್ರವನ್ನು ತಿಳಿದ ನಮಗೆ ನಿನ್ನ ಭಯ ಎಲ್ಲಿ ಎಂದು ನುಡಿದನು.

ಸರ್ವಂ ಹಿ ಫೇನವದಿದಂ ಬಹುಲಂ ಬಲಂ ತೇ
ನಾರ್ಥಪ್ರದಂ ಭವತಿ ಚಾಸ್ತ್ರವಿದಿ ಪ್ರಯುಕ್ತಮ್ ।
ಇತ್ಯುಕ್ತವಂತಮಮುಮುತ್ತಮಯಾನಸಂಸ್ಥೋ
ಬಾಣಾನ್ ಕ್ಷಿಪನ್ನಭಿಸಸಾರ ಸುರೇಂದ್ರಭೃತ್ಯಃ ॥ ೧೧೧ ॥

ಪದಚ್ಛೇದ :- ಸರ್ವಂ, ಹಿ, ಫೇನವತ್, ಇದಂ, ಬಹುಲಂ, ಬಲಂ, ತೇ, ನಾರ್ಥಪ್ರದಂ, ಭವತಿ, ಚ, ಅಸ್ತ್ರವಿಧಿ, ಪ್ರಯುಕ್ತಮ್, ಇತಿ, ಉಕ್ತವಂತಂ, ಅಮುಂ, ಉತ್ತಮಯಾನಸಂಸ್ಥಃ, ಬಾಣಾನ್, ಕ್ಷಿಪನ್, ಅಭಿಸಸಾರ, ಸುರೇಂದ್ರಭೃತ್ಯಃ ।

ಅರ್ಥ :- ತೇ = ನಿನ್ನ, ಇದಂ = ಈ, ಬಹುಲಂ = ಅಪಾರವಾದ, ಸರ್ವಂ = ಎಲ್ಲ, ಬಲಂ = ಬಲವು, ಅಸ್ತ್ರವಿದಿ = ಅಸ್ತ್ರಜ್ಞರಲ್ಲಿ, ಪ್ರಯುಕ್ತಮ್ = ಪ್ರಯೋಗಿಸಲು, ಫೇನವತ್ = ನೀರಿನ ಮೇಲಿರುವ ನೊರೆಯಂತೆ, ನಾರ್ಥಪ್ರದಂ = ವ್ಯರ್ಥವು, ಭವತಿ = ಆಗುತ್ತದೆ, ಇತಿ = ಎಂದು, ಉಕ್ತವಂತಂ = ಹೇಳುತ್ತಿರುವ, ಅಮುಂ = ಅರ್ಜುನನನ್ನು ಕುರಿತು, ಉತ್ತಮಯಾನಸಂಸ್ಥಃ = ಉತ್ತಮವಾದ ರಥದಲ್ಲಿ ಕುಳಿತಿರುವ, ಸುರೇಂದ್ರಭೃತ್ಯಃ = ಇಂದ್ರನ ಸೇವಕನಾದ ಗಂಧರ್ವನು, ಬಾಣಾನ್ = ಬಾಣಗಳನ್ನು, ಕ್ಷಿಪನ್ = ಎಸೆಯುತ್ತಾ, ಅಭಿಸಸಾರ = ಮೇಲೇರಿ ಬಂದನು.

ತಾತ್ಪರ್ಯ :- ಅಸ್ತ್ರಜ್ಞರಲ್ಲಿ ಬಲವನ್ನು ಪ್ರಯೋಗಿಸಲು ನಿನ್ನ ಸಾಮರ್ಥ್ಯವೆಲ್ಲಾ ನೀರಿನ ಮೇಲಿನ ನೊರೆಯಂತೆ ನಿರರ್ಥಕವಾಗುತ್ತದೆ ಎಂದು ಅರ್ಜುನ ನುಡಿದ. ಅವನ ಮೇಲೆ ಉತ್ತಮರಲ್ಲಿ ಕುಳಿತ ಇಂದ್ರಭೃತ್ಯನಾದ ಚಿತ್ರರಥಗಂಧರ್ವನು ಬಾಣಗಳನ್ನು ಎಸೆಯುತ್ತ ಮೇಲೇರಿ ಬಂದನು.

ಆಗ್ನೇಯಮಸ್ತ್ರಮಭಿಮಂತ್ರ್ಯ ತದೋಲ್ಮುಕೇ ಸ
ಚಿಕ್ಷೇಪ ಶಕ್ರತನಯೋಽಸ್ಯ ರಥಶ್ಚ ದಗ್ಧಃ ।
ತಂ ಚಾಗ್ನಿನಾ ಪರಿಗೃಹೀತಮಭಿಪ್ರಗೃಹ್ಯ
ಕೇಶೇಷು ಸಂಚಕರ್ಷಾಽಶು ಸುರೇಂದ್ರಸೂನುಃ ॥ ೧೧೨ ॥

ಪದಚ್ಛೇದ :- ಆಗ್ನೇಯಂ, ಅಸ್ತ್ರಂ, ಅಭಿಮಂತ್ರ್ಯ, ತದಾ, ಉಲ್ಮುಕೇ, ಸಃ, ಚಿಕ್ಷೇಪ, ಶಕ್ರತನಯಃ, ಅಸ್ಯ, ರಥಃ, ಚ, ದಗ್ಧಃ, ತಂ, ಚ, ಅಗ್ನಿನಾ, ಪರಿಗೃಹೀತಂ, ಅಭಿಪ್ರಗೃಹ್ಯ, ಕೇಶೇಷು, ಸಂಚಕರ್ಷ, ಆಶು, ಸುರೇಂದ್ರಸೂನುಃ ।

ಅರ್ಥ :- ಸಃ = ಆ, ಶಕ್ರತನಯಃ = ಅರ್ಜುನನು, ತದಾ = ಆಗ, ಉಲ್ಮುಕೇ = ಪಂಜಿನಲ್ಲಿ, ಆಗ್ನೇಯಂ = ಅಗ್ನಿಸಂಬಂಧಿಯಾದ, ಅಸ್ತ್ರಂ = ಅಸ್ತ್ರವನ್ನು, ಅಭಿಮಂತ್ರ್ಯ = ಅಭಿಮಂತ್ರಿಸಿ, ಅಸ್ಯ = ಅವನ ಮೇಲೆ, ಚಿಕ್ಷೇಪ = ಹಾಕಿದನು (ಎಸೆದನು), ಚ = ಮತ್ತು, ರಥಃ = ರಥವು, ದಗ್ಧಃ = ಸುಟ್ಟು

ಹೋಯಿತು, ಚ = ಮತ್ತು, ಅಗ್ನಿನಾ = ಅಗ್ನಿಯಿಂದ, ಪರಿಗೃಹೀತಂ = ಸುತ್ತುವರೆಯಲ್ಪಟ್ಟ, ತಂ = ಆ ಚಿತ್ರರಥ ಗಂಧರ್ವನ, ಕೇಶೇಷು = ಕೂದಲುಗಳನ್ನು, ಅಭಿಪ್ರಗೃಹ್ಯ = ಹಿಡಿದು, ಆಶು = ಬೇಗನೆ, ಸುರೇಂದ್ರಸೂನುಃ = ಅರ್ಜುನನು, ಸಂಚಕರ್ಷ = ಎಳೆದನು.

ತಾತ್ಪರ್ಯ :- ಪಂಜಿನಲ್ಲಿ ಆಗ್ನೇಯಾಸ್ತ್ರವನ್ನು ಅಭಿಮಂತ್ರಿಸಿ ಅರ್ಜುನನು ಚಿತ್ರರಥಗಂಧರ್ವನ ಮೇಲೆ ಎಸೆದ. ಅದು ಅವನ ರಥವನ್ನು ಸುಟ್ಟಿತು. ಮತ್ತು ಅವನನ್ನು ಅಗ್ನಿಯು ಆವರಿಸಿತು. ಆಗ ಗಂಧರ್ವನ ತಲೆ ಕೂದಲುಗಳನ್ನು ಹಿಡಿದು ಎಳೆದನು.

**ಪಾರ್ಥೇನ ಸಂಧರ್ಷಿತಃ ಶರಣಂ ಜಗಾಮ**
**ಧರ್ಮಾತ್ಮಜಂ ತಮಪಿ ಸೋಽಥ ನಿಜಾಸ್ತ್ರಮುಗ್ರಮ್ ।**
**ಸಂಜಹ್ರ ಏವ ತತ ಆಸ ಚ ನಾಮತೋಽಸಾ-**
**ವಂಗಾರವರ್ಣ ಇತಿ ವರ್ಣವಿಪರ್ಯಯೇಣ ॥ ೧೧೩ ॥**

**ಪದಚ್ಛೇದ :-** ಪಾರ್ಥೇನ, ಸಂಧರ್ಷಿತಃ, ಶರಣಂ, ಜಗಾಮ, ಧರ್ಮಾತ್ಮಜಂ, ತಂ, ಅಪಿ, ಸಃ, ಅಥ, ನಿಜಾಸ್ತ್ರಂ, ಉಗ್ರಂ, ಸಂಜಹ್ರೇ, ಏವ, ತತ, ಆಸ, ಚ, ನಾಮತಃ, ಅಸೌ, ಅಂಗಾರವರ್ಣಃ, ಇತಿ, ವರ್ಣವಿಪರ್ಯಯೇಣ ।

ಅರ್ಥ :- ಪಾರ್ಥೇನ = ಅರ್ಜುನನಿಂದ, ಸಂಧರ್ಷಿತಃ = ಪರಾಭವಗೊಂಡ, ಸಃ = ಚಿತ್ರರಥಗಂಧರ್ವನು, ಧರ್ಮಾತ್ಮಜಂ = ಧರ್ಮರಾಜನನ್ನು, ತಂ ಚ = ಅರ್ಜುನನನ್ನು ಕೂಡ, ಶರಣಂ ಜಗಾಮ = ಶರಣು ಹೊಕ್ಕ, ಅಥ = ಅನಂತರದಲ್ಲಿ, ಉಗ್ರಮ್ = ಉಗ್ರವಾದ, ನಿಜಾಸ್ತ್ರಂ = ತನ್ನ ಅಸ್ತ್ರವನ್ನು, ಸಂಜಹ್ರೇ ಏವ = ಉಪಸಂಹರಿಸಿದನು, ತತಃ = ಆ ಕಾರಣದಿಂದ, ವರ್ಣವಿಪರ್ಯಯೇಣ = ಮೈಬಣ್ಣದ ಬದಲಾವಣೆಯಿಂದ, ಅಸೌ = ಚಿತ್ರರಥನು, ನಾಮತಃ = ಹೆಸರಿನಿಂದ, ಅಂಗಾರವರ್ಣ = ಅಂಗಾರವರ್ಣ, ಇತಿ = ಎಂದು, ಆಸ = ಆದನು.

ತಾತ್ಪರ್ಯ :- ಅರ್ಜುನನಿಗೆ ಸೋತು ಧರ್ಮರಾಜ ಅರ್ಜುನರಿಗೆ ಶರಣಾದ ಚಿತ್ರರಥನು, ಅನಂತರ ತನ್ನ ಅಸ್ತ್ರವನ್ನು ಅರ್ಜುನನು ಉಪಸಂಹಾರ ಮಾಡಿದ. ಇದರಿಂದ ಮೈಬಣ್ಣ ಬದಲಾದ ಚಿತ್ರರಥನಿಗೆ ಅಂದಿನಿಂದ ಅಂಗಾರವರ್ಣ ಎಂದು ಹೆಸರಾಯಿತು.

ಗಂಧರ್ವ ಉಲ್ಬಣಸುರಕ್ತತನುಃ ಸ ಭೂತ್ವಾ
ಸ್ವರ್ಣಾವದಾತ ಉತ ಪೂರ್ವಮುಪೇತ್ಯ ಸಖ್ಯಮ್ ।
ಪಾರ್ಥೇನ ದುರ್ಲಭಮಹಾಸ್ತ್ರಮಿದಂ ಯಯಾಚೇ
ಜಾನನ್ನಪಿ ಸ್ಮ ನಹಿ ತಾದೃಶಮೇಷ ವೇದ ॥ ೧೧೪ ॥

ಪದಚ್ಛೇದ :- ಗಂಧರ್ವಃ, ಉಲ್ಬಣಸುರಕ್ತತನುಃ, ಸಃ, ಭೂತ್ವಾ, ಸ್ವರ್ಣಾವದಾತಃ, ಉತ, ಪೂರ್ವಂ, ಉಪೇತ್ಯ, ಸಖ್ಯಂ, ಪಾರ್ಥೇನ, ದುರ್ಲಭಮಹಾಸ್ತ್ರಂ, ಇದಂ, ಯಯಾಚೇ, ಜಾನನ್, ಅಪಿ, ಸ್ಮ, ನ, ಹಿ, ತಾದೃಶಂ, ಏಷಃ, ವೇದ ।

ಅರ್ಥ :- ಸಃ = ಆ ಯಾವ, ಗಂಧರ್ವಃ = ಚಿತ್ರರಥ ಗಂಧರ್ವನು, ಪೂರ್ವಂ = ಹಿಂದೆ, ಉಲ್ಬಣಸುರಕ್ತತನುಃ = ಕಡುಕೆಂಪಾದ ಶರೀರವುಳ್ಳವನು, ಭೂತ್ವಾ = ಆಗಿ, ಸ್ವರ್ಣಾವದಾತಃ = ಚಿನ್ನದಂತೆ ಸ್ವಚ್ಛವರ್ಣದವನಾಗಿದ್ದನು, ಉತ = ಬಳಿಕ, ಪಾರ್ಥೇನ = ಅರ್ಜುನನಿಂದ, ಸಖ್ಯಂ = ಗೆಳೆತನವನ್ನು, ಉಪೇತ್ಯ = ಹೊಂದಿ, ಇದಂ = ಈ, ದುರ್ಲಭ ಮಹಾಸ್ತ್ರಂ = ದುರ್ಲಭವಾದ ಅಸ್ತ್ರವನ್ನು, ಯಯಾಚೇ = (ತಿಳಿಸಿಕೊಡು ಎಂದು) ಪ್ರಾರ್ಥಿಸಿದನು, ಜಾನನ್ ಅಪಿ = ಅಸ್ತ್ರವನ್ನು ತಿಳಿದವನಾಗಿದ್ದರು ಕೂಡ, ಏಷಃ = ಇವನು, ತಾದೃಶಂ = ಹಾಗೆ (ಅರ್ಜುನ ಪ್ರಯೋಗಿಸಿದ ಅಸ್ತ್ರ ವೈಖರಿಯನ್ನು), ನ ವೇದಸ್ಮ = ತಿಳಿದಿರಲಿಲ್ಲ, ಹಿ = ನಿಶ್ಚಯವು.

ತಾತ್ಪರ್ಯ :- ಚಿತ್ರರಥ ಗಂಧರ್ವನೆ ಹಿಂದೆ ಕಡುಕೆಂಪಾದ ಮೈಬಣ್ಣದಿಂದ ಬಂಗಾರದಂತೆ ಹೊಳೆಯುತ್ತಿದ್ದನು. ಅನಂತರದಲ್ಲಿ ಅರ್ಜುನನ ಸ್ನೇಹವನ್ನು ಬೆಳೆಸಿ ಅರ್ಜುನನ ಅಸ್ತ್ರಪ್ರಯೋಗದ ವೈಖರಿಯನ್ನು ಕಂಡು ಆಚ್ಚರಿಯಿಂದ ಅಸ್ತ್ರವನ್ನು ತಿಳಿದಿದ್ದರೂ ಅದನ್ನು ತನಗೆ ತಿಳಿಸಿಕೊಡು ಎಂದು ಗಂಧರ್ವನು ಅರ್ಜುನನನ್ನು ಬೇಡಿದನು.

ವಿದ್ಯಾ ಸುಶಿಕ್ಷಿತತಮಾ ಹಿ ಸುರೇಂದ್ರಸೂನೌ
ತಾಮಸ್ಯ ಚಾಪದದದಸಾವಪಿ ಕಾಲತೋಽಸ್ಮೈ ।
ಗಂಧರ್ವಗಾಮವದದನ್ಯಗದೃಶ್ಯವಿದ್ಯಾಂ
ಪಶ್ಚಾದಿತಿ ಸ್ಮ ಪುರುಹೂತಸುತಸ್ಯ ವಾಕ್ಯಾತ್ ॥ ೧೧೫ ॥

ಪದಚ್ಛೇದ :- ವಿದ್ಯಾ, ಸುಶಿಕ್ಷಿತತಮಾ, ಹಿ, ಸುರೇಂದ್ರಸೂನೌ, ತಾಂ, ಅಸ್ಯ, ಚ, ಅವದತ್, ಅಸೌ, ಅಪಿ, ಕಾಲತಃ, ಅಸ್ಮೈ, ಗಂಧರ್ವಗಾಂ, ಅವದತ್, ಅನ್ವಕ್, ಅದೃಶ್ಯವಿದ್ಯಾಂ, ಪಶ್ಚಾತ್, ಇತಿ, ಸ್ಮ ಪುರುಹೂತಸುತಸ್ಯ, ವಾಕ್ಯಾತ್ ।

**ಅರ್ಥ** :- **ಸುರೇಂದ್ರಸೂನೌ** = ದೇವೇಂದ್ರನ ಮಗನಾದ ಅರ್ಜುನನಲ್ಲಿ, **ವಿದ್ಯಾ** = ವಿದ್ಯೆಯು, **ಸುಶಿಕ್ಷಿತತಮಾ** = ಅತ್ಯಂತ ಮಿಗಿಲಾಗಿ ಸಿದ್ಧಿಸಿತ್ತು, **ಹಿ** = ನಿಶ್ಚಯವು, **ಅತಃ** = ಆದ್ದರಿಂದ, **ಅಸೌ** = ಅರ್ಜುನನು, **ತಾಂ** = ಆ ಆಗ್ನೇಯಾಸ್ತ್ರ ವಿದ್ಯೆಯನ್ನು, **ಅಸ್ಯ** = ಈ ಗಂಧರ್ವನಿಗೆ, **ಅವದತ್** = ಉಪದೇಶಿಸಿದನು, **ಅಸೌ ಅಪಿ** = ಗಂಧರ್ವನಾದರೂ ಕೂಡ, **ಗಂಧರ್ವಗಾಂ** = ಗಂಧರ್ವರಲ್ಲಿ ಇರುವ, **ಅದೃಶ್ಯವಿದ್ಯಾಂ** = ಅದೃಶ್ಯವಾಗುವ ವಿದ್ಯೆಯನ್ನು, **ಅಸ್ಮೈ** = ಈ ಯಾವ ಅರ್ಜುನನಿಗೆ, **ಕಾಲತಃ** = ಕಾಲಾಂತರದಲ್ಲಿ, **ಅನ್ವಕ್** = ಅನುಕೂಲವಾಗುವ ರೀತಯಲ್ಲಿ, **ಅವದತ್** = ಹೇಳಿದನು, **ಪಶ್ಚಾತ್** = ಕಾಲಾಂತರದಲ್ಲಿ (ಪಡೆಯುತ್ತೇನೆ), **ಇತಿ** = ಎಂಬ, **ಪುರುಹೂತಸುತಸ್ಯ** = ಅರ್ಜುನನ, **ವಾಕ್ಯಾತ್** = ವಾಕ್ಯದಿಂದ (ಹಾಗೆ ಕಾಲಾಂತರದಲ್ಲಿ ಅದೃಷ್ಟ ವಿದ್ಯೆಯನ್ನು ಕೊಟ್ಟನು ಎಂದು ಅಭಿಪ್ರಾಯ).

**ತಾತ್ಪರ್ಯ** :- ಸುಶಿಕ್ಷಿತನಾದ ಅರ್ಜುನನಿಂದ ಆಗ್ನೇಯಾಸ್ತ್ರ ವಿದ್ಯೆಯನ್ನು ಚಿತ್ರರಥನು ಪಡೆದನು. ಅದಕ್ಕೆ ಪ್ರತಿಯಾಗಿ ಗಂಧರ್ವರಲ್ಲಿ ಇರುವ ಅೃದಷ್ಟವಾಗುವ ವಿದ್ಯೆಯನ್ನು ಅರ್ಜುನನು ಅಪ್ಪಣೆಯಂತೆ ಕಾಲಾಂತರದಲ್ಲಿ ನೀಡಿದನು.

**ಆಧಿಕ್ಯತಃ ಸ್ವಗತಸಂವಿದ ಏವ ಸಾಮ್ಯೇ**
**ನೈವೇಚ್ಛತಿ ಸ್ಮ ನಿಮಯಂ ಸ ಧನಂಜಯೋಽತ್ರ ।**
**ಧರ್ಮಾರ್ಥಮೇವ ಸ ತು ತಾಂ ಪರಿದಾಯ ತಸ್ಮೈ**
**ಕಾಲೇನ ಸಂವಿದಮಮುಷ್ಯ ಚ ಧರ್ಮತೋಽಯಾತ್ ॥ ೧೧೬ ॥**

ಪದಚ್ಛೇದ :- ಆಧಿಕ್ಯತಃ, ಸ್ವಗತಸಂವಿದಃ, ಏವ, ಸಾಮ್ಯೇ, ನ, ಏವ, ಇಚ್ಛತಿ, ಸ್ಮ ನಿಯಮಂ, ಸಃ, ಧನಂಜಯಃ, ಅತ್ರ, ಧರ್ಮಾರ್ಥಂ, ಏವ, ಸಃ, ತು, ತಾಂ, ಪರಿದಾಯ, ತಸ್ಮೈ, ಕಾಲೇನ, ಸಂವಿತ್, ಅಮುಷ್ಯ, ಚ, ಧರ್ಮತಃ, ಅಯಾತ್ ।

**ಅರ್ಥ :- ಸ್ವಗತಸಂವಿದಃ** = ತನ್ನ ವಿದ್ಯೆಗೆ, **ಅಧಿಕ್ಯತಃ ಏವ** = (ಗಂಧರ್ವನ ವಿದ್ಯೆಗಿಂತಲೂ) ಅಧಿಕ್ಯವಿರುವುದರಿಂದಲೇ, **ಸಃ** = ಆ ಯಾವ, **ಧನಂಜಯಃ** = ಅರ್ಜುನನು, **ಸಾಮ್ಯೇ ಸತಿ** = ಸಾಮ್ಯವಿರಲು (ಮಾಡಬಹುದಾದ), **ನಿಯಮಂ** = ದಾನ-ಆದಾನ ರೂಪವಾದ ವಿನಿಮಯವನ್ನು, **ಅತ್ರ** = ಇಲ್ಲಿ, **ನ ಇಚ್ಛತಿ ಸ್ಮ ಏವ** = ಇಚ್ಛಿಸಲಿಲ್ಲ, **ಸಃ ತು** = ಅರ್ಜುನನಾದರೂ, **ತಾಂ** = ಆ ವಿದ್ಯೆಯನ್ನು, **ಧರ್ಮಾರ್ಥಂ ಏವ** = ಕೇವಲ ಪುಣ್ಯಕ್ಕಾಗಿಯೇ, **ತಸ್ಮೈ** = ಚಿತ್ರರಥಗಂಧರ್ವನಿಗೆ, **ಪರಿದಾಯ** = ಕೊಟ್ಟು, **ಕಾಲೇನ** = ಕಾಲಾಂತರದಲ್ಲಿ, **ಅಮುಷ್ಯ** = ಈ ಗಂಧರ್ವನ, **ಸಂವಿದಂ** = ವಿದ್ಯೆಯನ್ನು, **ಧರ್ಮತಃ** = ಧರ್ಮದಿಂದಲೇ, **ಅಯಾತ್** = ಪಡೆದನು.

**ತಾತ್ಪರ್ಯ :-** ತನ್ನಲ್ಲಿ ಇರುವ ವಿದ್ಯೆಯು ಗಂಧರ್ವನ ವಿದ್ಯೆಗಿಂತ ಮಿಗಿಲು. ಆದ್ದರಿಂದ ವಿದ್ಯೆಯಲ್ಲಿ ಸಾಮ್ಯತೆಯು ಇರಲು ಮಾತ್ರ ದಾನ-ಆದಾನ ರೂಪವಾದ ವಿನಿಮಯವು ಕೂಡುತ್ತದೆ ಎಂದು ವಿನಿಮಯವನ್ನು ಅರ್ಜುನನು ಈ ಸಂದರ್ಭದಲ್ಲಿ ಇಚ್ಛಿಸಲಿಲ್ಲ. ಆದರೆ ಕೇವಲ ಪುಣ್ಯಕ್ಕಾಗಿ ಗಂಧರ್ವನಿಗೆ ವಿದ್ಯೆಯನ್ನು ನೀಡಿದನು. ಕಾಲಾಂತರದಲ್ಲಿ ಧರ್ಮ ಮಾರ್ಗದಿಂದ ಆ ವಿದ್ಯೆಯನ್ನು ಪಡೆದನು.

**ಪಾರ್ಥೇನ ಸೋಽಪಿ ಬಹುಲಾಶ್ಚ ಕಥಾಃ ಕಥಿತ್ವಾ**
**ಧೌಮ್ಯಸ್ಯ ಸಂಗ್ರಹಣಮಾಹ ಪುರೋಹಿತತ್ವೇ ।**
**ದಾಸ್ಯಾಮಿ ದಿವ್ಯತುರಗಾನಿತಿ ಸೋಽರ್ಜುನಾಯ**
**ವಾಚಂ ನಿಗದ್ಯ ದಿವಮಾರುಹದಪ್ಯಗುಸ್ತೇ ॥ ೧೧೭ ॥**

ಪದಚ್ಛೇದ :- ಪಾರ್ಥೇನ, ಸಃ, ಅಪಿ, ಬಹುಲಾಃ, ಚ, ಕಥಾಃ, ಕಥಿತ್ವಾ, ಧೌಮ್ಯಸ್ಯ, ಸಂಗ್ರಹಣಂ, ಆಹ, ಪುರೋಹಿತತ್ವೇ, ದಾಸ್ಯಾಮಿ, ದಿವ್ಯತುರಗಾನಿ, ಇತಿ, ಸಃ, ಅರ್ಜುನಾಯ, ವಾಚಂ, ನಿಗದ್ಯ, ದಿವಂ, ಆರುಹತ್, ಅಪಿ, ಅಗುಃ, ತೇ ।

**ಅರ್ಥ :- ಸಃ ಅಪಿ** = ಆ ಚಿತ್ರರಥನಾದರೂ, **ಪಾರ್ಥೇನ ಸಹ** = ಅರ್ಜುನನೊಂದಿಗೆ, **ಬಹುಲಾಃ** = ಬಹಳ, **ಕಥಾಃ** = ಕಥೆಗಳನ್ನು (ವಸಿಷ್ಠಾಖ್ಯಾನ ತಪತಿ ಸಂವರ್ಣರ ಕಥೆಗಳನ್ನು), **ಕಥಿತ್ವಾ** = ಹೇಳಿ, **ಪುರೋಹಿತತ್ವೇ** = ಪುರೋಹಿತರನ್ನಾಗಿ, **ಧೌಮ್ಯಸ್ಯ** = ಧೌಮ್ಯಾಚಾರ್ಯರನ್ನು,

**ಸಂಗ್ರಹಣಂ** = ನಿಯೋಜಿಸಿಕೊಳ್ಳಲು, **ಆಹ** = ಹೇಳಿದನು, **ಸಃ** = ಆ ಗಂಧರ್ವನು, **ದಿವ್ಯತುರಗಾನ್** = ದಿವ್ಯವಾದ ಕುದುರೆಗಳನ್ನು, **ದಾಸ್ಯಾಮಿ** = ಮುಂದೊಮ್ಮೆ ಕೊಡುತ್ತೇನೆ, **ಇತಿ** = ಎಂದು, **ವಾಚಂ** = ಮಾತನ್ನು, **ನಿಗದ್ಯ** = ಹೇಳಿ (ಮಾತುಕೊಟ್ಟು), **ದಿವಂ** = ಆಕಾಶಕ್ಕೆ, **ಆರುಹತ್** = ಹಾರಿದನು (ಏರಿದನು), **ತೇऽಪಿ** = ಪಾಂಡವರೂ ಕೂಡ, **ಅಗುಃ** = ಮುಂದೆ ಸಾಗಿದರು.

ತಾತ್ಪರ್ಯ :- ಚಿತ್ರರಥನು ಅರ್ಜುನನಿಗೆ ಅನೇಕ ಕಥೆಗಳನ್ನು ಹೇಳಿ ಧೌಮ್ಯಾಚಾರ್ಯರನ್ನು ಕುಲ ಪುರೋಹಿತರನ್ನಾಗಿ ಮಾಡಿಕೊಳ್ಳಲು ಹೇಳಿದನು. ಮತ್ತು ನಿನಗೆ ದಿವ್ಯವಾದ ಕುದುರೆಗಳನ್ನು ಕಾಲಾಂತರದಲ್ಲಿ ಕೊಡುವೆಯೆಂದು ಅರ್ಜುನನ ಮಾತನ್ನು ಕೊಟ್ಟು ಆಕಾಶಕ್ಕೆ ಹಾರಿದನು. ಅನಂತರ ಪಾಂಡವರು ಅಲ್ಲಿಂದ ಮುಂದೆ ಪ್ರಯಾಣ ಬೆಳೆಸಿದರು.

**ತೇ ಧೌಮ್ಯಮಾಪ್ಯ ಚ ಪುರೋಧಸಮುತ್ತಮಜ್ಞಂ**
**ವಿಪ್ರಾತ್ಮಜೋಪಮತಯಾ ವಿವಿಶುಃ ಪುರಂ ಚ ।**
**ಪಾಂಚಾಲಕಸ್ಯ ನಿಖಿಲಾಂ ದದೃಶುಶ್ಚ ತತ್ರ**
**ಮೂರ್ಧಾಭಿಷಿಕ್ತಸಮಿತಿಂ ಸಮಲಂಕೃತಾಂ ಚ ॥ ೧೧೮ ॥**

**ಪದಚ್ಛೇದ :- ತೇ, ಧೌಮ್ಯಂ, ಆಪ್ಯ, ಚ, ಪುರೋಧಸಂ, ಉತ್ತಮಜ್ಞಂ, ವಿಪ್ರಾತ್ಮಜೋಪಮತಯಾ, ವಿವಿಶುಃ, ಪುರಂ, ಚ, ಪಾಂಚಾಲಕಸ್ಯ, ನಿಖಿಲಾಂ, ದದೃಶುಃ, ಚ, ತೇ, ಅತ್ರ, ಮೂರ್ಧಾಭಿಷಿಕ್ತಸಮಿತಿಂ, ಸಮಲಂಕೃತಾಂ, ಚ ।**

ತಾತ್ಪರ್ಯ :- **ತೇ** = ಆ ಪಾಂಡವರು, **ಉತ್ತಮಜ್ಞಂ** = ಉತ್ತಮ ಜ್ಞಾನಿಯಾದ, **ಪುರೋಧಸಂ** = ಪುರೋಹಿತರಾದ, **ಧೌಮ್ಯಂ ಚ** = ಧೌಮ್ಯಾಚಾರ್ಯರನ್ನು, **ಆಪ್ಯ** = ಹೊಂದಿ, **ವಿಪ್ರಾತ್ಮಜೋಪಮತಯಾ** = ಬ್ರಾಹ್ಮಣ ಕುಮಾರರಂತೆ, **ಪಾಂಚಾಲಕಸ್ಯ** = ದ್ರುಪದನ, **ಪುರೀಂ ಚ** = ಪುರವನ್ನು, **ವಿವಿಶುಃ** = ಪ್ರವೇಶಿಸಿದರು, **ತೇ** = ಆ ಪಾಂಡವರು, **ಅತ್ರ** = ದ್ರುಪದನ ಸಭೆಯಲ್ಲಿ, **ಸಮಲಂಕೃತಾಂ** = ಅಲಂಕರಿಸಿದ, **ನಿಖಿಲಾಂ** = ಎಲ್ಲ, **ಮೂರ್ಧಾಭಿಷಿಕ್ತಸಮಿತಿಂ ಚ** = ರಾಜರ ಸಮೂಹವನ್ನು, **ದದೃಶುಃ** = ಕಂಡರು.

ತಾತ್ಪರ್ಯ :- ಆ ಪಾಂಡವರು ಉತ್ತಮಜ್ಞಾನಿಗಳಾದ ಕುಲಪುರೋಹಿತ ರಾದ ಧೌಮ್ಯರನ್ನು ಸೇರಿದರು. ಬ್ರಾಹ್ಮಣ ಕುಮಾರರಂತೆ ದ್ರುಪದನ

ಪಟ್ಟಣವನ್ನು ಪ್ರವೇಶಮಾಡಿದ ಪಾಂಡವರು ಅಲ್ಲಿ ನೆರದಿದ್ದ ಎಲ್ಲ ರಾಜ-ಮಹಾರಾಜರನ್ನು ಕಂಡರು.

ರಾಜನ್ಯಮಂಡಲಮುದೀಕ್ಷ್ಯ ಸುಪೂರ್ಣಮತ್ರ
ಕೃಷ್ಣಾಂ ಪ್ರಗೃಹ್ಯ ಸಹಜಃ ಪ್ರಗೃಹೀತಮಾಲಾಮ್ ।
ತೇಷಾಂ ಚ ಮಧ್ಯಮಗಮತ್ ಕುಲವೀರ್ಯಸಂಪದ್-
ಯುಕ್ತಾಂ ವಿಭೂತಿಮಥ ಚಾऽಹ ಸಮಸ್ತರಾಜ್ಞಾಮ್ ॥ ೧೧೯ ॥

ಪದಚ್ಛೇದ :- ರಾಜನ್ಯಮಂಡಲಂ, ಉದೀಕ್ಷ್ಯ, ಸುಪೂರ್ಣಂ, ಅತ್ರ, ಕೃಷ್ಣಾಂ, ಪ್ರಗೃಹ್ಯ, ಸಹಜಃ, ಪ್ರಗೃಹೀತಮಾಲಾಂ, ತೇಷಾಂ, ಚ, ಮಧ್ಯಂ, ಅಗಮತ್, ಕುಲವೀರ್ಯಸಂಪದ್ಯುಕ್ತಾಂ, ವಿಭೂತಿಂ, ಅಥ, ಚ, ಆಹ, ಸಮಸ್ತರಾಜ್ಞಾಮ್ ।

**ಅರ್ಥ** :- **ಸಹಜಃ** = ತಮ್ಮನಾದ ಧೃಷ್ಟದ್ಯುಮ್ನನು, **ಅತ್ರ** = ಈ ಸಭೆಯಲ್ಲಿ, **ಸಂಪೂರ್ಣಂ** = ತುಂಬಿದ, **ರಾಜನ್ಯಮಂಡಲಂ** = ರಾಜರ ಸಮೂಹವನ್ನು, **ಉದೀಕ್ಷ್ಯ** = ನೋಡಿ, **ಪ್ರಗೃಹೀತಮಾಲಾಂ** = ಕೈಯಲ್ಲಿ ಮಾಲೆಯನ್ನು ಹಿಡಿದ, **ಕೃಷ್ಣಾಂ** = ದ್ರೌಪದಿಯನ್ನು, **ಪ್ರಗೃಹ್ಯ** = ಕರೆದುಕೊಂಡು, **ತೇಷಾಂ ಚ** = ಆ ರಾಜರ, **ಮಧ್ಯಂ** = ಮಧ್ಯಕ್ಕೆ, **ಅಗಮತ** = ಬಂದನು, **ಅಥ** = ಅನಂತರ, **ಕುಲವೀರ್ಯಸಂಪದ್ಯುಕ್ತಾಂ** = ಕುಲ ಬಲ ಮೊದಲಾದ ಸಂಪತ್ತಿನಿಂದ ಕೂಡಿದ, **ಸಮಸ್ತರಾಜ್ಞಾಂ ಚ** = ಎಲ್ಲ ರಾಜರ, **ವಿಭೂತಿಂ** = ವೈಭವವನ್ನು, **ಆಹ** = ಹೇಳಿದನು.

**ತಾತ್ಪರ್ಯ** :- ಧೃಷ್ಟದ್ಯುಮ್ನ ಕಿಕ್ಕಿರಿದು ತುಂಬಿದ ರಾಜರುಗಳ ಗುಂಪನ್ನು ಕಂಡು ಮಾಲೆಯನ್ನು ಕೈಯಲ್ಲಿ ಹಿಡಿದ ತಂಗಿ ದ್ರೌಪದಿಯನ್ನು ಕರೆದುಕೊಂಡು ರಾಜರ ಮಧ್ಯಕ್ಕೆ ಬಂದನು. ಅನಂತರ ಎಲ್ಲ ರಾಜರ ತಲ ಬಲ ಮೊದಲಾದ ವೈಭವವನ್ನು ದ್ರೌಪದಿಗೆ ವರ್ಣಿಸಿದನು.

ತಾಂಶ್ಚ ಪ್ರದರ್ಶ್ಯ ಸಕಲಾನ್ ಸ ಹುತಾಶನಾಂಶ-
ಶ್ಚಾಪಂ ಚ ತತ್ ಪ್ರತಿನಿಧಾಯ ಸಪಂಚಬಾಣಮ್ ।
ಆಹಾಭಿಭಾಷ್ಯ ಸಕಲಾನ್ ನೃಪತೀನಥೋಚ್ಚೈ-
ರ್ದೀಪ್ಯದ್ದುತಾಶನವಪುರ್ಘನತುಲ್ಯಘೋಷಃ ॥ ೧೨೦ ॥

ಪದಚ್ಛೇದ :- ತಾನ್, ಚ, ಪ್ರದರ್ಶ್ಯ, ಸಕಲಾನ್, ಸಃ, ಹುತಾಶನಾಂಶಃ, ಚಾಪಂ, ಚ, ತತ್, ಪ್ರತಿನಿಧಾಯ, ಸಪಂಚಬಾಣಮ್, ಆಹ, ಅಭಿಭಾಷ್ಯ, ಸಕಲಾನ್, ನೃಪತೀನ್, ಅಥ, ಉಚ್ಚೈಃ, ದೀಪ್ಯದ್ದುತಾಶನವಪುಃ, ಘನತುಲ್ಯಘೋಷಃ।

ಅರ್ಥ :- ಹುತಾಶನಾಂಶಃ = ಅಗ್ನಿಯ ಅವತಾರನಾದ, ಸಃ = ಧೃಷ್ಟದ್ಯುಮ್ನನು, ತಾನ್ ಚ ಸಕಲಾನ್ = ಆ ಎಲ್ಲಾ ರಾಜರನ್ನು, ಪ್ರದರ್ಶ್ಯ = ತೋರಿಸಿ, ಸಪಂಚಬಾಣಂ = ಪಂಚಬಾಣಗಳಿಂದ ಕೂಡಿದ, ತತ್ = ಆ, ಚಾಪಂ = ಬಿಲ್ಲನ್ನು, ಪ್ರತಿನಿಧಾಯ = ತಂದಿರಿಸಿ, ಅಥ = ಅನಂತರ, ದೀಪ್ಯದ್ಧುತಾಶನವಪುಃ = ಜ್ವಲಿಸುವ ಅಗ್ನಿಯಂತೆ ಹೊಳೆಯುವ ಶರೀರವುಳ್ಳ, ಘನತುಲ್ಯಘೋಷಃ = ಮೋಡದಂತೆ ಗಂಭೀರವಾದ ಧ್ವನಿಯುಳ್ಳ ಧೃಷ್ಟದ್ಯುಮ್ನನು, ಸಕಲಾನ್ = ಎಲ್ಲ, ನೃಪತೀನ್ = ರಾಜರನ್ನು, ಅಭಿಬಾಷ್ಯ = ಅಭಿಮುಖರನ್ನಾಗಿ ಮಾಡಿ, ಉಚ್ಚೈಃ = ಜೋರಾಗಿ, ಆಹ = ಹೇಳಿದನು.

ತಾತ್ಪರ್ಯ :- ಎಲ್ಲರನ್ನು ದ್ರೌಪದಿಗೆ ತೋರಿಸಿ ಪಂಚ ಬಾಣಗಳಿಂದ ಕೂಡಿದ ಆ ಬಿಲ್ಲನ್ನು ರಾಜರ ಮುಂದಿಟ್ಟು ಅಗ್ನಿ ಅವತಾರಿಯಾದ ಅಗ್ನಿಯಂತೆ ಪ್ರಜ್ವಲಿಸುವ ದೇಹವುಳ್ಳ ಧೃಷ್ಟದ್ಯುಮ್ನನು ಗಂಭೀರವಾದ ಧ್ವನಿಯಿಂದ ರಾಜರನ್ನು ಕುರಿತು ಜೋರಾಗಿ ಮಾತನಾಡಿದನು.

ಏತೇನ ಕಾರ್ಮುಕವರೇಣ ತರೂಪರಿಸ್ಥ
ಮತ್ಸ್ಯಾವಭಾಸಮುದಕೇ ಪ್ರತಿವೀಕ್ಷ್ಯ ಯೇನ ।
ಏತೈಃ ಶರೈಃ ಪ್ರತಿಹತೋ ಭವತೀಹ ಮತ್ಸ್ಯಃ
ಕೃಷ್ಣಾಽನುಯಾಸ್ಯತಿ ತಮದ್ಯ ನರೇಂದ್ರವೀರಾಃ ॥ ೧೨೧ ॥

ಪದಚ್ಛೇದ :- ಏತೇನ, ಕಾರ್ಮುಕವರೇಣ, ತರೂಪರಿಸ್ಥ, ಮತ್ಸ್ಯಾವಭಾಸಂ, ಉದಕೇ, ಪ್ರತಿವೀಕ್ಷ್ಯ, ಯೇನ, ಏತೈಃ, ಶರೈಃ, ಪ್ರತಿಹತಃ, ಭವತಿ, ಇಹ, ಮತ್ಸ್ಯಃ, ಕೃಷ್ಣಾ, ಅನುಯಾಸ್ಯತಿ, ತಂ, ಅದ್ಯ, ನರೇಂದ್ರವೀರಾಃ।

ಅರ್ಥ :- ಹೇ ನರೇಂದ್ರವೀರಾಃ = ಎಲೈ ನರೇಂದ್ರವೀರರೆ!, ಏತೇನ = ಈ, ಕಾರ್ಮುಕವರೇಣ = ಶ್ರೇಷ್ಠವಾದ ಬಿಲ್ಲಿನಿಂದ, ತರೂಪರಿಸ್ಥ ಮತ್ಸ್ಯಾವಭಾಸಂ = ಮರದ ಮೇಲಿನ ಮತ್ಸ್ಯದ ಪ್ರತಿಬಿಂಬವನ್ನು, ಉದಕೇ = ನೀರಿನಲ್ಲಿ, ಪ್ರತಿವೀಕ್ಷ್ಯ = ನೋಡಿ, ಏತೈಃ = ಈ ಐದು, ಶರೈಃ =

ಬಾಣಗಳಿಂದ, **ಯೇನ** = ಯಾರಿಂದ, **ಇಹ** = ಇಲ್ಲಿ, **ಮತ್ಸ್ಯಃ** = ಮತ್ಸ್ಯವು, **ಪ್ರತಿಹತಃ ಭವತಿ** = ಬೀಳಿಸುವುದೋ, **ತಂ** = ಅವನನ್ನು, **ಅದ್ಯ** = ಇಂದು, **ಕೃಷ್ಣಾ** = ದ್ರೌಪದಿಯು, **ಅನುಯಾಸ್ಯತಿ** = ಹಿಂಬಾಲಿಸುತ್ತಾಳೆ.

**ತಾತ್ಪರ್ಯ** :- ಎಲೈ ನರೇಂದ್ರವೀರರೆ! ಈ ಬಿಲ್ಲಿನಿಂದ ಮರದ ಮೇಲಿರುವ ಮತ್ಸ್ಯದ ಪ್ರತಿಬಿಂಬವನ್ನು ನೀರಿನಲ್ಲಿ ನೋಡಿ ಈ ಐದು ಬಾಣಗಳಿಂದ ಯಾರು ಆ ಮತ್ಸ್ಯವನ್ನು ಹೊಡೆದು ಉರುಳಿಸುತ್ತಾರೋ ಅವನನ್ನು ದ್ರೌಪದಿಯು ಹಿಂಬಾಲಿಸುತ್ತಾಳೆ.

**ಇತ್ಯಸ್ಯ ವಾಕ್ಯಮನು ಸರ್ವನರೇಂದ್ರಪುತ್ರಾ**
**ಉತ್ತಸ್ಥುರುದ್ಧತಮದಾಶ್ಚಲಕುಂಡಲಾಸ್ಯಾಃ ।**
**ಅಸ್ತ್ರಂ ಬಲಂ ಚ ಬಹು ನೈಜಮಭೀಕ್ಷಮಾಣಾಃ**
**ಸ್ಪರ್ಧಂತ ಏವ ಚ ಮಿಥಃ ಸಮಲಂಕೃತಾಂಗಾಃ ॥ ೧೨೨ ॥**

**ಪದಚ್ಛೇದ** :- ಇತಿ, ಅಸ್ಯ, ವಾಕ್ಯಂ, ಅನು, ಸರ್ವನರೇಂದ್ರಪುತ್ರಾಃ, ಉತ್ತಸ್ಥುಃ, ಉದ್ಧತಮದಾಃ, ಚಲಕುಂಡಲಾಸ್ಯಾಃ, ಅಸ್ತ್ರಂ, ಬಲಂ, ಚ, ಬಹು, ನೈಜಂ, ಅಭೀಕ್ಷಮಾಣಾಃ, ಸ್ಪರ್ಧಂತಃ, ಏವ, ಚ, ಮಿಥಃ, ಸಮಲಂಕೃತಾಂಗಾಃ ।

**ಅರ್ಥ** :- **ಇತಿ** = ಈ ಪ್ರಕಾರವಾಗಿ, **ಅಸ್ಯ** = ಧೃಷ್ಟದ್ಯುಮ್ನನ, **ವಾಕ್ಯಂ** = ಮಾತನ್ನು, **ಅನು** = ಅನುಸರಿಸಿ, **ಉದ್ಧತಮದಾಃ** = ಬಹಳ ಗರ್ವಿತರಾದ, **ನೈಜಂ** = ಸ್ವಾಭಾವಿಕವಾದ, **ಅಸ್ತ್ರಂ** = ಅಸ್ತ್ರವನ್ನು, **ಚ** = ಮತ್ತು, **ಬಲಂ** = ಬಾಹುಬಲವನ್ನು, **ಬಹು** = ಶ್ರೇಷ್ಠವೆಂದು, **ಅಭೀಕ್ಷಮಾಣಾಃ** = ತಿಳಿದವರಾಗಿ, **ಸಮಲಂಕೃತಾಂಗಾಃ** = ಅಲಂಕೃತರಾದ, **ಚಲಕುಂಡಲಾಸ್ಯಾಃ** = ಓಲಾಡುತ್ತಿರುವ ಕರ್ಣಕುಂಡಲ ಸಹಿತವಾದ ಮುಖವುಳ್ಳ, **ಸರ್ವನರೇಂದ್ರಪುತ್ರಾಃ** = ಎಲ್ಲ ರಾಜಕುಮಾರರು, **ಮಿಥಃ** = ಪರಸ್ಪರವಾಗಿ, **ಸ್ಪರ್ಧಂತಃ ಏವ ಚ** = ನಾನು ಮೊದಲು ನಾನು ಮೊದಲು ಎಂದು ಸ್ಪರ್ಧೆಯನ್ನು ಮಾಡುವರಾಗಿ, **ಉತ್ತಸ್ಥುಃ** = ಮೇಲೆದ್ದರು.

**ತಾತ್ಪರ್ಯ** :- ಧೃಷ್ಟದ್ಯುಮ್ನನ ಮಾತನ್ನು ಕೇಳಿ ಎಲ್ಲ ಮದೋನ್ಮತ್ತರಾದ ರಾಜಕುಮಾರರು ತಮ್ಮ ನಿಜ ಅಸ್ತ್ರ ಮತ್ತು ಬಾಹು ಬಲವನ್ನು ಹೆಚ್ಚೆಂದು ತಿಳಿದು ಪರಸ್ಪರವಾಗಿ ಸ್ಪರ್ಧೆಗಿಳಿದು ಎದ್ದುನಿಂತರು ಆಗ ಅವರ ಕರ್ಣಕುಂಡಲಗಳು ಚದುರಿದವು.

ಕೇಚಿನ್ನಿರೀಕ್ಷ್ಯ ಧನುರೇತ್ಯ ನ ಮೇ ಸುಶಕ್ಯ-
ಮಿತ್ಯೇವ ಚಾಪಯಯುರನ್ಯ ಉತ ಪ್ರಚಾಲ್ಯ ।
ತತ್ರಾऽಸಸಾದ ಶಿಶುಪಾಲ ಉರುಪ್ರತಾಪಃ
ಸಂಗೃಹ್ಯ ತತ್ ಸಮಧಿರೋಪಣಯತ್ನ ಆಸೀತ್ ॥ ೧೨೩ ॥

ಪದಚ್ಛೇದ :- ಕೇಚಿತ್, ನಿರೀಕ್ಷ್ಯ, ಧನುಃ, ಏತ್ಯ, ನ, ಮೇ, ಸುಶಕ್ಯಂ, ಇತಿ, ಏವ, ಚ, ಅಪಯಯುಃ, ಅನ್ಯೇ, ಉತ, ಪ್ರಚಾಲ್ಯ, ತತ್ರ, ಆಸಸಾದ, ಶಿಶುಪಾಲಃ, ಉರುಪ್ರತಾಪಃ, ಸಂಗೃಹ್ಯ, ತತ್, ಸಮಧಿರೋಪಣಯತ್ನಃ, ಆಸೀತ್ ।

ಅರ್ಥ :- ಕೇಚಿತ್ = ಕೆಲವರು, ಧನುಃ = ಧನುಸ್ಸನ್ನು, ಏತ್ಯ = ಹೊಂದಿ, ನಿರೀಕ್ಷ್ಯ ಏವ = ನೋಡಿಯೇ, ಮೇ = ನಮಗೆ, ಸುಶಕ್ಯಂ = ಸುಲಭವು, ನ = ಅಲ್ಲ, ಇತಿ = ಎಂದು, ಅಪಯಯುಃ = ಮರಳಿ ಹೋದರು, ಉತ = ಮತ್ತೆ, ಅನ್ಯೇ = ಕೆಲವರು, ಪ್ರಚಾಲ್ಯ = ಅಲುಗಾಡಿಸಿ, ಅಪಯಯು = ಮರಳಿಹೋದರು, ತತ್ರ = ಅವರ ಮಧ್ಯದಲ್ಲಿ, ಉರುಪ್ರತಾಪಃ = ಮಹಾಪ್ರತಾಪಿಯಾದ, ಶಿಶುಪಾಲಃ = ಶಿಶುಪಾಲನು, ತತ್ = ಆ ಬಿಲ್ಲನ್ನು, ಸಂಗೃಹ್ಯ = ಹಿಡಿದು (ಎತ್ತಿ), ಸಮಧಿರೋಪಣಯತ್ನಃ = ಬಾಗಿಸಿ ಕಟ್ಟುವ ಯತ್ನವುಳ್ಳವನು, ಆಸೀತ್ = ಆದನು.

ತಾತ್ಪರ್ಯ :- ಕೆಲವರು ಬಿಲ್ಲನ್ನು ನೋಡಿಯೇ ಇದು ನಮಗೆ ಸಾಧ್ಯವಿಲ್ಲ ಎಂದು ಭಾವಿಸಿ ಮರಳಿದರು. ಇನ್ನು ಕೆಲವರು ಅದರ ಬಳಿ ಬಂದು ಅಲುಗಾಡಿಸಿ ಅಸಾಧ್ಯವೆಂದು ತಿಳಿದು ಮರಳಿದರು. ಇವರ ಮಧ್ಯದಲ್ಲಿ ಉಗ್ರಪ್ರತಾಪಿಯಾದ ಶಿಶುಪಾಲನು, ಆ ಬಿಲ್ಲನ್ನು ಎತ್ತಿ ಬಾಗಿಸಿ ಕಟ್ಟುವ ಪ್ರಯತ್ನದಲ್ಲಿ ತೊಡಗಿದನು.

ಮಾಷಾಂತರಾಯ ಸ ಚಕರ್ಷ ಯದೈವ ಕೋಟ್ಯಾ
ಉನ್ನಮ್ಯ ತತ್ ಪ್ರತಿಜಘಾನ ತಮೇವ ಚಾऽಶು ।
ಅನ್ಯತ್ರ ಫಲ್ಗುನತ ಏತದಶಕ್ಯಮೇವೇ-
ತ್ಯಂಜೋ ಗಿರೀಶವರತಃ ಸ ಯಯೌ ಚ ಭಗ್ನಃ ॥ ೧೨೪ ॥

ಪದಚ್ಛೇದ :- ಮಾಷಾಂತರಾಯ, ಸಃ, ಚಕರ್ಷ, ಯದಾ, ಏವ, ಕೋಟ್ಯಾಃ, ಉನ್ನಮ್ಯ, ತತ್, ಪ್ರತಿಜಘಾನ, ತಂ, ಏವ, ಚ, ಆಶು, ಅನ್ಯತ್ರ, ಫಲ್ಗುನತಃ, ಏತತ್, ಅಶಕ್ಯಂ, ಏವ, ಇತಿ, ಅಂಜಃ, ಗಿರೀಶವರತಃ, ಸಃ, ಯಯೌ, ಚ, ಭಗ್ನಃ ।

**ಅರ್ಥ** :- **ಯದಾ** = ಯಾವಾಗ, **ಸಃ** = ಶಿಶುಪಾಲನು, **ಕೋಟ್ಯಾಃ** = ಬಿಲ್ಲಿನ ತುದಿಯನ್ನು, **ಮಾಷಾಂತರಾಯ** = ಒಂದು ಉದ್ದಿನ ಕಾಳಿನಷ್ಟು ಅಂತರ ಉಳ್ಳದ್ದಾಗಿ, **ಚಕರ್ಷ** = ಎಳೆದನೋ, **ತದಾ** = ಆಗ, **ತತ್** = ಆ ಧನಸ್ಸು, **ಉನ್ನಮ್ಯ** = ಸೆಟೆದು, **ಆಶು** = ಬೇಗನೆ, **ತಂ ಏವ** = ಅವನನ್ನೆ, ಪ್ರತಿಜಘಾನ ಅಪ್ಪಳಿಸಿತು, **ಫಲ್ಗುನತಃ** = ಅರ್ಜುನನಿಂದ, **ಅನ್ಯತ್ರ** = ಬೇರೆಯವರಿಗೆ, **ಏತತ್** = ಇದು, **ಅಶಕ್ಯಂ ಏವ** = ಅಸಾಧ್ಯವೇ, **ಇತಿ** = ಎಂಬ, **ಗಿರೀಶವರತಃ** = ಶಿವನವರದಿಂದ, **ಅಂಜಃ** = ಚೆನ್ನಾಗಿ, **ಭಗ್ನಃ** = ಸೋತ, **ಸಃ** = ಶಿಶುಪಾಲನು, **ಯಯೌ** = ಹೊರಟನು.

**ತಾತ್ಪರ್ಯ** :- ಯಾವಾಗ ಶಿಶುಪಾಲನು ತನ್ನ ಎದೆಗೂ ಬಿಲ್ಲಿನ ತುದಿಗೂ ಕೇವಲ ಉದ್ದಿನ ಕಾಳಿನಷ್ಟು ಅಂತರದಲ್ಲಿ ಬಿಲ್ಲಿನ ತುದಿಯನ್ನು ಎಳೆದನೋ ಆಗ ಅದು ಅವನಿಗೆ ಅಪ್ಪಳಿಸಿತು. ಅರ್ಜುನನನ್ನು ಬಿಟ್ಟು ಬೇರೆಯವರಿಂದ ಈ ಕಾರ್ಯವು ಅಸಾಧ್ಯ ಎಂಬ ಶಿವನ ವರದಿಂದ ಸ್ಪರ್ಧೆಯಲ್ಲಿ ಚೆನ್ನಾಗಿ ಸೋತ ಶಿಶುಪಾಲನು ಹಿಂದಿರುಗಿದ.

**ಮದ್ರೇಶ ಏತ್ಯ ಚಕೃಷೇ ಸ್ಥವಿರೋಽಪಿ ವೀರ್ಯಾತ್**
**ಚೇದೀಶತೋಽಪ್ಯಧಿಕಮೇವ ಸ ಮುದ್ಗಮಾತ್ರೇ ।**
**ಶಿಷ್ಟೇಽಮುನಾ ಪ್ರತಿಹತಃ ಸ ಯಯಾವಶಕ್ಯಂ**
**ಮತ್ವಾಽತ್ಮನಸ್ತದನು ಭೂಪತಯೋ ವಿಷಣ್ಣಾಃ ॥ ೧೨೫ ॥**

ಪದಚ್ಛೇದ :- ಮದ್ರೇಶಃ, ಏತ್ಯ, ಚಕೃಷೇ, ಸ್ಥವಿರಃ, ಅಪಿ, ವೀರ್ಯಾತ್, ಚೇದೀಶತಃ, ಅಪಿ, ಅಧಿಕಂ, ಏವ, ಸ, ಮುದ್ಗಮಾತ್ರೇ, ಶಿಷ್ಟೇ, ಅಮುನಾ, ಪ್ರತಿಹತಃ, ಸಃ, ಯಯೌ, ಅಶಕ್ಯಂ, ಮತ್ವಾ, ಆತ್ಮನಃ, ತದನು, ಭೂಪತಯಃ, ವಿಷಣ್ಣಾಃ ।

**ಅರ್ಥ** :- **ಸ್ಥವಿರಃ ಅಪಿ** = ವೃದ್ಧನಾಗಿದ್ದರೂ, **ಮದ್ರೇಶಃ** = ಶಲ್ಯನು, **ಏತ್ಯ** = ಬಿಲ್ಲಿನ ಸಮೀಪಕ್ಕೆ ಬಂದು, **ಚೇದೀಶತಃ** = ಶಿಶುಪಾಲನಿಗಿಂತಲು, **ಅಧಿಕಂ ಏವ** = ಹೆಚ್ಚಾಗಿಯೇ, **ವೀರ್ಯಾತ್** = ಸಾಮರ್ಥ್ಯದಿಂದ, **ಚಕೃಷೇ** = ಎಳೆದನು, **ಮುದ್ಗಮಾತ್ರೇ** = ಕೇವಲ ಹೆಸರಿನ ಕಾಳಿನಷ್ಟು ಅಂತರವು, **ಶಿಷ್ಟೇ ಸತಿ** = ಉಳಿದಿರಲು, **ಅಮುನಾ** = ಈ ಬಿಲ್ಲಿನಿಂದ, **ಪ್ರತಿಹತಃ** = ಹೊಡಿಸಿಕೊಳ್ಳಲ್ಪಟ್ಟ, **ಸಃ** = ಆ ಶಲ್ಯನು, **ಆತ್ಮನಃ** = ನನಗೆ, **ಅಶಕ್ಯಂ** =

ಅಸಾಧ್ಯವೆಂದು, ಮತ್ವಾ = ತಿಳಿದು, ಯಯೌ = ಹೊರಟನು, ತದನು = ಅವರಿಬ್ಬರು ಹೊರಟಮೇಲೆ, ಭೂಪತಯಃ = ರಾಜರುಗಳು, ವಿಷಣ್ಣಾಃ = ಖಿನ್ನರಾದರು.

ತಾತ್ಪರ್ಯ :- ಮುದುಕನಾದರು ಶಲ್ಯನು ಶಿಶುಪಾಲನಿಗಿಂತಲು ಹೆಚ್ಚಾಗಿಯೇ ಪರಾಕ್ರಮದಿಂದ ಆ ಬಿಲ್ಲನ್ನು ಬಗ್ಗಿಸಿದನು. ಆದರೆ ತನಗು ಮತ್ತು ಬಿಲ್ಲಿನ ತುದಿಗೂ ಒಂದು ಹೆಸರಿನ ಕಾಳಿನಷ್ಟು ಅಂತರವಿರಲು ಆ ಬಿಲ್ಲು ಅಪ್ಪಳಿಸಿತು. ಅಶಕ್ಯವೆಂದು ತಿಳಿದ ಶಲ್ಯನು ಅಲ್ಲಿಂದ ಹೊರಟನು. ಹೀಗೆ ಇವರಿಬ್ಬರು ಹೊರಟ ಮೇಲೆ ಅಲ್ಲಿ ಉಳಿದ ರಾಜರುಗಳು ಖಿನ್ನರಾದರು.

**ಸನ್ನೇಷು ಭೂಪತಿಷು ಮಾಗಧ ಆಸಸಾದ**
**ಸೋಽವಜ್ಞಯೈವ ಬಲವೀರ್ಯಮದೇನ ದೃಪ್ತಃ ।**
**ಚಾಪಂ ಚಕರ್ಷ ಚಲಪಾದತಲೋ ಬಲೇನ**
**ಶಿಷ್ಟೇ ಸ ಸರ್ಷಪಮಿತೇಽಭಿಹತೋಽಮುನೈವ ॥ ೧೨೬ ॥**

ಪದಚ್ಛೇದ :– ಸನ್ನೇಷು, ಭೂಪತಿಷು, ಮಾಗಧಃ, ಆಸಸಾದ, ಸಃ, ಅವಜ್ಞಯಾ, ಏವ, ಬಲವೀರ್ಯಮದೇನ, ದೃಪ್ತಃ, ಚಾಪಂ, ಚಕರ್ಷ, ಚಲಪಾದತಲಃ, ಬಲೇನ, ಶಿಷ್ಟೇ, ಸ, ಸಃ, ಸರ್ಷಪಮಿತೇ, ಅಭಿಹತಃ, ಅಮುನಾ, ಏವ ।

**ಅರ್ಥ** :- **ಭೂಪತಿಷು** = ರಾಜರುಗಳು, **ಸನ್ನೇಷು ಸತ್ಸು** = ಶಾಂತರಾಗಿರಲು, **ಮಾಗಧಃ** = ಜರಾಸಂಧನು, **ಆಸಸಾದ** = ಬಂದನು, **ಬಲವೀರ್ಯಮದೇನ** = ಬಲ ಹಾಗೂ ಸಾಮರ್ಥ್ಯಗಳ ಸೊಕ್ಕಿನಿಂದ, **ದೃಪ್ತಃ** = ಕೊಬ್ಬಿದ, **ಸಃ** = ಅವನು, **ಅವಜ್ಞಯಾ ಏವ** = ತಿರಸ್ಕಾರ ಭಾವನೆಯಿಂದಲೇ, **ಬಲೇನ** = ದರ್ಪದಿಂದ, **ಚಾಪಂ** = ಬಿಲ್ಲನ್ನು, **ಚಕರ್ಷ** = ಎಳೆದನು, **ಚಲಪಾದತಲಃ** = ಅದುರಿದ ಅಂಗಾಲುಗಳುಳ್ಳ, **ಸಃ** = ಆ ಜರಾಸಂಧನು, **ಸರ್ಷಪಮಿತೇ** = ಸಾಸುವೇ ಕಾಳಿನಷ್ಟು, **ಶಿಷ್ಟೇ ಸತಿ** = ಅಂತರವು ಉಳಿದಿರಲು, **ಅಮುನಾ ಏವ** = ಬಿಲ್ಲಿನಿಂದಲೇ, **ಅಭಿಹತಃ** = ಹೊಡಿಸಿಕೊಳ್ಳಲ್ಪಟ್ಟನು.

ತಾತ್ಪರ್ಯ :- ಎಲ್ಲ ರಾಜರು ಶಾಂತರಾಗಿರಲು ಮೇಲೆದ್ದ ಉನ್ಮತ್ತನಾದ ಜರಾಸಂಧನು ತಿರಸ್ಕಾರ ಬುದ್ಧಿಯಿಂದ ಬಲವಿಟ್ಟು ಬಿಲ್ಲನ್ನು ಎಳೆದನು. ಅಂಗಾಲುಗಳು ಅದುರಿದವು. ತನಗೂ ಮತ್ತು ಬಿಲ್ಲಿನ ತುದಿಗೂ ಒಂದು ಸಾಸುವೇ ಕಾಳಿನಷ್ಟು ಅಂತರವಿರಲು ಬಿಲ್ಲು ಅವನನ್ನು ಜೋರಾಗಿ ಅಪ್ಪಳಿಸಿತು.

**ಜಾನುನ್ಯಮುಷ್ಯ ಧರಣೀಂ ಯಯತುಸ್ತದೈವ**
**ದರ್ಪೇಣ ಚಾಸ್ಥಿರಪದಃಸ್ಥಿತಿಮಾತ್ರಹೇತೋಃ ।**
**ರೌದ್ರಾದ್ ವರಾತ್ ಸ ಜಡತಾಂ ಗಮಿತೋಽಥ ರಾಜಾ**
**ರಾಜ್ಞಾಂ ಮುಖಾನ್ಯನಭಿವೀಕ್ಷ್ಯ ಯಯೌ ಸ್ವರಾಷ್ಟ್ರಮ್ ॥ ೧೨೭ ॥**

**ಪದಚ್ಛೇದ :-** ಜಾನುನಿ, ಅಮುಷ್ಯ, ಧರಣೀಂ, ಯಯತುಃ, ತದಾ, ಏವ, ದರ್ಪೇಣ, ಚ, ಅಸ್ಥಿರಪದಸ್ಥಿತಿಮಾತ್ರಹೇತೋಃ, ರೌದ್ರಾತ್, ವರಾತ್, ಸಃ, ಜಡತಾಂ, ಗಮಿತಃ, ಅಥ, ರಾಜಾ, ರಾಜ್ಞಾಂ, ಮುಖಾನಿ, ಅನಭಿವೀಕ್ಷ್ಯ, ಯಯೌ, ಸ್ವರಾಷ್ಟ್ರಂ ।

**ಅರ್ಥ :-** ತದಾ ಏವ = ಆ ಸಮಯದಲ್ಲಿಯೇ, **ದರ್ಪೇಣ** = ಗರ್ವದಿಂದ, **ಅಸ್ಥಿರಪದಸ್ಥಿತಿಮಾತ್ರಹೇತೋಃ** = ನಿಲ್ಲಲು ತ್ರಾಣವಿಲ್ಲದ ಕಾಲುಗಳಿಂದ ಕೇವಲ ನಿಲ್ಲಲು ಪ್ರಯತ್ನ ಮಾಡುವುದರಿಂದ, **ಅಮುಷ್ಯ** = ಈ ಜರಾಸಂಧನ, **ಜಾನುನಿ** = ಎರಡು ಮೊಳಕಾಲುಗಳು, **ಧರಣೀಂ** = ಭೂಮಿಗೆ, **ಯಯತುಃ** = ಕುಸಿದವು, **ಅಥ** = ಅನಂತರ, **ರೌದ್ರಾತ್** = ಶಿವನ, **ವರಾತ್** = ವರದಿಂದ, **ಜಡತಾಂ** = ಜಡಭಾವವನ್ನು, **ಗಮಿತಃ** = ಹೊಂದಿದ, **ರಾಜಾ** = ರಾಜನಾದ, **ಸಃ** = ಆ ಜರಾಸಂಧನು, **ರಾಜ್ಞಾಂ** = ರಾಜರ, **ಮುಖಾನಿ** = ಮುಖಗಳನ್ನು, **ಅನಭಿವೀಕ್ಷ್ಯ** = ನೋಡದಲೇ, **ಸ್ವರಾಷ್ಟ್ರಂ** = ತನ್ನ ರಾಜ್ಯಕ್ಕೆ, **ಯಯೌ** = ಹೊರಟನು.

**ತಾತ್ಪರ್ಯ :-** ಕಾಲುಗಳಲ್ಲಿ ನಿಲ್ಲಲು ಸಾಮರ್ಥ್ಯವಿಲ್ಲದಿದ್ದರು ನಿಲ್ಲಲು ಹೋದ ಕಾರಣ ಜರಾಸಂಧನ ಮೊಳಕಾಲುಗಳೆರಡು ಭೂಮಿಗೆ ಕುಸಿದವು. ಶಿವನ ವರಬಲದಿಂದ ಜಡತ್ವವನ್ನು ಹೊಂದಿದ ಅವನು ಯಾರ ಮುಖವನ್ನು ನೋಡದೆ ತನ್ನ ದೇಶಕ್ಕೆ ಮರಳಿದನು.

**ಪ್ರಾಯೋ ಗತಾಸ್ತಮನು ಭೂಪತಯೋಽಥ ಕರ್ಣೋ**
**ದುರ್ಯೋಧನಾರ್ಥಮನುಗೃಹ್ಯ ಧನುಶ್ಚಕರ್ಷ ।**
**ರಾಮಾದುಪಾತ್ತಶುಭಶಿಕ್ಷಿತಮಾತ್ರತೋಽಸೌ**
**ರೋಮಾವಶಿಷ್ಟಮಕರೋದ್ ಧನುಷೋಽಂತಮಾಶು ॥ ೧೨೮ ॥**

ಪದಚ್ಛೇದ :- ಪ್ರಾಯಃ, ಗತಾಃ, ತದನು, ಭೂಪತಯಃ, ಅಥ, ಕರ್ಣಃ, ದುರ್ಯೋಧನಾರ್ಥಂ, ಅನುಗೃಹ್ಯ, ಧನುಃ, ಚಕರ್ಷ, ರಾಮಾತ್, ಉಪಾತ್ತ ಶುಭಶಿಕ್ಷಿತಮಾತ್ರತಃ, ಅಸೌ, ರೋವಾವಶಿಷ್ಟಂ, ಅಕರೋತ್, ಧನುಷಃ, ಅಂತಂ, ಆಶು ।

**ಅರ್ಥ** :- **ತದನು** = ಜರಾಸಂಧನನ್ನು ಅನುಸರಿಸಿ, **ಪ್ರಾಯಃ** = ಬಹುಮಟ್ಟಿಗೆ, **ಭೂಪತಯಃ** = ರಾಜರು, **ಗತಾಃ** = ಮರಳಿದರು, **ಅಥ** = ಅನಂತರ, **ಕರ್ಣಃ** = ಕರ್ಣನು, **ದುರ್ಯೋಧನಾರ್ಥಂ** = ದುರ್ಯೋಧನನ ಸಲುವಾಗಿ, **ಧನುಃ** = ಬಿಲ್ಲನ್ನು, **ಅನುಗೃಹ್ಯ** = ಎತ್ತಿ, **ಚಕರ್ಷ** = ಎಳೆದನು, **ರಾಮಾತ್** = ಪರಶುರಾಮದೇವರ ದೆಸೆಯಿಂದ, **ಉಪಾತ್ತಶುಭಶಿಕ್ಷಿತಮಾತ್ರತಃ** = ಪಡೆದ ಶುಭ ಶಿಕ್ಷಣದ ಫಲವಾಗಿ, **ಅಸೌ** = ಕರ್ಣನು, **ಆಶು** = ಬೇಗನೆ, **ಧನುಷಃ** = ಬಿಲ್ಲಿನ, **ಅಂತಂ** = ತುದಿಯನ್ನು, **ರೋಮಾವಶಿಷ್ಟಂ** = ಒಂದು ಕೂದಲೆಳೆಯಷ್ಟು ಅಂತರ ಉಳ್ಳದ್ದಾಗಿ, **ಅಕರೋತ್** = ಮಾಡಿದನು.

ತಾತ್ಪರ್ಯ :- ಸೋತ ಜರಾಸಂಧನನ್ನು ಅನುಸರಿಸಿ ಬಹುಮಟ್ಟಿಗೆ ಎಲ್ಲ ರಾಜರು ತೆರಳಿದರು. ಅನಂತರದಲ್ಲಿ ದುರ್ಯೋಧನನ ಸಲುವಾಗಿ ಕರ್ಣನು ಆ ಬಿಲ್ಲನ್ನು ಎತ್ತಿ ಬಾಗಿಸಿದನು. ಪರಶುರಾಮದೇವರ ಅನುಗ್ರಹದಿಂದ ಪಡೆದ ಶುಭ ವಿದ್ಯೆಯ ಫಲವಾಗಿ ಬಿಲ್ಲ ತುದಿಯನ್ನು ಪೂರ್ಣ ಮಾಡಲು ಒಂದು ಕೂದಲೆಳೆಯಷ್ಟು ಮಾತ್ರ ಅಂತರ ಉಳಿಯಿತು.

**ತಸ್ಮಿಂಶ್ಚ ತೇನ ವಿಹತೇ ಪ್ರತಿಸನ್ನಿವೃತ್ತೇ**
**ಭೀಮಾರ್ಜುನೌ ದ್ವಿಜಸದಸ್ಯುಪಸನ್ನಿವಿಷ್ಟೌ ।**
**ಉತ್ತಸ್ಥತೂ ರವಿಶಶಿಪ್ರತಿಮಾನರೂಪೌ**
**ವಿಪ್ರೇಷು ತತ್ರ ಚ ಭಿಯಾ ವಿನಿವಾರಯತ್ಸು ॥ ೧೨೯ ॥**

ಪದಚ್ಛೇದ :- ತಸ್ಮಿಂನ್, ಚ, ತೇನ, ವಿಹತೇ, ಪ್ರತಿಸನ್ನಿವೃತ್ತೇ, ಭೀಮಾರ್ಜುನೌ, ದ್ವಿಜಸದಸಿ, ಉಪಸನ್ನಿವಿಷ್ಟೌ, ಉತ್ತಸ್ಥತುಃ, ರವಿಶಶಿಪ್ರತಿಮಾನರೂಪೌ, ವಿಪ್ರೇಷು, ತತ್ರ, ಚ, ಭಿಯಾ, ವಿನಿವಾರಯತ್ಸು।

**ಅರ್ಥ** :- **ತೇನ** = ಬಿಲ್ಲಿನಿಂದ, **ವಿಹತೇ** = ಪೆಟ್ಟನ್ನು ತಿಂದ, **ತಸ್ಮಿನ್ ಚ** = ಕರ್ಣನೂ ಕೂಡ, **ಪ್ರತಿಸನ್ನಿವೃತ್ತೇ ಸತಿ** = ಮರಳಿ ಹೋಗಲು, **ದ್ವಿಜಸದನಿ** =

ಬ್ರಾಹ್ಮಣರ ಸಭೆಯಲ್ಲಿ, **ಉಪಸನ್ನಿವಿಷ್ಟೌ** = ಕುಳಿತ, **ರವಿಶಶಿಪ್ರತಿಮಾನರೂಪೌ** = ಸೂರ್ಯಚಂದ್ರರಂತೆ ಕಂಗೊಳಿಸುತ್ತಿರುವ, **ಭೀಮಾರ್ಜುನೌ** = ಭೀಮಾರ್ಜುನರು, **ತತ್ರ** = ಆ ಸಭೆಯಲ್ಲಿ, **ಭಿಯಾ** = ಭಯದಿಂದ, **ವಿಪ್ರೇಷು** = ಬ್ರಾಹ್ಮಣರು, **ವಿನಿವಾರಯತ್ಸು ಸತ್ಸು** = ತಡೆಯುತ್ತಿರಲು, **ಉತ್ತಸ್ಥತುಃ** = ಮೇಲೆದ್ದು ನಿಂತರು.

**ತಾತ್ಪರ್ಯ** :- ಹೀಗೆ ಸೋತು ಮನೆಯ ಹಾದಿಯನ್ನು ಕರ್ಣ ದುರ್ಯೋಧನಾದಿಗಳು ಹಿಡಿಯಲು ಅನಂತರ ಬ್ರಾಹ್ಮಣರ ಸಭೆಯಲ್ಲಿ ಸೂರ್ಯ ಚಂದ್ರರಂತೆ ಕಂಗೊಳಿಸುತ್ತಿದ್ದ ಭೀಮಾರ್ಜುನರು ಭಯದಿಂದ ಬ್ರಾಹ್ಮಣರು ತಡೆದರೂ ಸಹ ಮೇಲೆದ್ದು ನಿಂತರು.

**ವಿಪ್ರಾಶ್ಚ ಕೇಚಿದತಿಯುಕ್ತಮಿಮೌ ಹಿ ವೀರೌ**
**ದೇವೋಪಮಾವಿತಿ ವಚೋ ಜಗದುಸ್ತತಸ್ತೌ ।**
**ದೃಷ್ಟ್ವೈವ ಕೃಷ್ಣಮುಖಪಂಕಜಮಾಶು ಚಾಪ-**
**ಸಾನ್ನಿಧ್ಯಮಾಯಯತುರುತ್ತಮವೀರ್ಯಸಾರೌ ॥ ೧೩೦ ॥**

**ಪದಚ್ಛೇದ** :- **ವಿಪ್ರಾಃ, ಚ, ಕೇಚಿತ್, ಅತಿಯುಕ್ತಂ, ಇಮೌ, ಚ, ವೀರೌ, ದೇವೋಪಮೌ, ಇತಿ, ವಚಃ, ಜಗದುಃ, ತತಃ, ತೌ, ದೃಷ್ಟ್ವಾ, ಏವ, ಕೃಷ್ಣಮುಖ ಪಂಕಜಂ, ಆಶು, ಚಾಪಸಾನ್ನಿಧ್ಯಂ, ಆಯಯತುಃ, ಉತ್ತಮವೀರ್ಯಸಾರೌ ।**

**ಅರ್ಥ** :- **ಕೇಚಿತ್** = ಕೆಲವು, **ವಿಪ್ರಾಃ ಚ** = ಬ್ರಾಹ್ಮಣರೂ, **ಅತಿಯುಕ್ತಂ** = ಇವರಿಬ್ಬರು ಎದ್ದದು ಅತ್ಯಂತ ಯುಕ್ತವು, **ಚ** = ಮತ್ತು, **ಇಮೌ** = ಇವರಿಬ್ಬರು, **ದೇವೋಪಮೌ** = ದೇವತೆಗಳಿಗೆ ಸದೃಶರಾದ, **ವೀರೌ** = ಪರಾಕ್ರಮಿಗಳು, **ಇತಿ** = ಎಂದು, **ವಚಃ** = ಮಾತನ್ನು, **ಜಗದುಃ** = ಆಡಿದರು, **ತತಃ** = ಅನಂತರ, **ತೌ** = ಆ ಯಾವ, **ಉತ್ತಮ ವೀರ್ಯಸಾರೌ** = ಉತ್ತಮ ಪರಾಕ್ರಮಶಾಲಿಗಳಾದ ಭೀಮಾರ್ಜುನರು, **ಕೃಷ್ಣಮುಖಪಂಕಜಂ** = ಶ್ರೀಕೃಷ್ಣನ ಮುಖಕಮಲವನ್ನು, **ದೃಷ್ಟ್ವಾ ಏವ** = ನೋಡಿಯೇ, **ಆಶು** = ಬೇಗನೆ, **ಚಾಪಸಾನ್ನಿಧನ್** = ಬಿಲ್ಲಿನ ಹತ್ತಿರಕ್ಕೆ, **ಆಯಯತುಃ** = ಬಂದರು.

**ತಾತ್ಪರ್ಯ** :- ಸಭೆಯಲ್ಲಿ ಇದ್ದ ಕೆಲವು ಬ್ರಾಹ್ಮಣರು ಭೀಮಾರ್ಜುನರು ಎದ್ದದು ಅತ್ಯಂತ ಯುಕ್ತವು ದೇವತೆಗಳಿಗೆ ಸಮಾನ ಬಲ ಉಳ್ಳವರು ಇವರು

ಎಂದು ಪರಸ್ಪರವಾಗಿ ಮಾತನಾಡಿಕೊಂಡರು ಅನಂತರದಲ್ಲಿ ಭೀಮಾರ್ಜುನರು ಶ್ರೀಕೃಷ್ಣನ ಮುಖವನ್ನು ನೋಡಿ ಅವನ ಆಜ್ಞೆಯಂತೆ ಆ ಬಿಲ್ಲಿನ ಹತ್ತಿರಕ್ಕೆ ಬಂದರು.

**ತತ್ರಾರ್ಜುನಃ ಪವನಜಾತ್ ಪ್ರಿಯತೋಽಪ್ಯನುಜ್ಞಾ-**
**ಮಾದಾಯ ಕೇಶವಮಜಂ ಮನಸಾ ಪ್ರಣಮ್ಯ ।**
**ಕೃತ್ವಾ ಗುಣಾನ್ವಿತಮದೋ ಧನುರಶ್ರಮೇಣ**
**ಯಂತ್ರಾಂತರೇಣ ಸ ಶರೈರಧುನೋಚ್ಚ ಲಕ್ಷಮ್ ॥ ೧೩೧ ॥**

**ಪದಚ್ಛೇದ :- ತತ್ರ, ಅರ್ಜುನಃ, ಪವನಜಾತ್, ಪ್ರಿಯತಃ, ಅಪಿ, ಅನು, ಜ್ಞಾಂ, ಆದಾಯ, ಕೇಶವಂ, ಅಜಂ, ಮನಸಾ, ಪ್ರಣಮ್ಯ, ಕೃತ್ವಾ, ಗುಣಾನ್ವಿತಂ, ಅದಃ, ಧನುಃ, ಅಶ್ರಮೇಣ, ಯಂತ್ರಾಂತರೇಣ, ಸಃ, ಶರೈಃ, ಅಧುನೋತ್, ಚ, ಲಕ್ಷ್ಯಂ ।**

**ಅರ್ಥ :-** ತತ್ರ = ಲಕ್ಷ್ಯವನ್ನು ಭೇದಿಸುವ ವಿಷಯದಲ್ಲಿ, **ಅರ್ಜುನಃ** = ಅರ್ಜುನನು, **ಪ್ರಿಯತಃ** = ಪ್ರಿಯನಾದ, **ಪವನಜಾತ್** = ಭೀಮನಿಂದ, **ಅನುಜ್ಞಾಂ ಅಪಿ** = ಆಜ್ಞೆಯನ್ನು, **ಆದಾಯ** = ತೆಗೆದುಕೊಂಡು, **ಅಜಂ** = ಜನ್ಮರಹಿತನಾದ, **ಕೇಶವಂ** = ಶ್ರೀಕೃಷ್ಣನನ್ನು, **ಮನಸಾ** = ಮನಸ್ಸಿನಲ್ಲಿ, **ಪ್ರಣಮ್ಯ** = ನಮಸ್ಕರಿಸಿ, **ಗುಣಾನ್ವಿತಂ** = ಹಗ್ಗದಿಂದ ಕೂಡಿದ, **ಧನುಃ** = ಬಿಲ್ಲನ್ನು, **ಅದಃ ಕೃತ್ವಾ** = ಬಾಗಿಸಿ, **ಸಃ** = ಅರ್ಜುನನು, **ಅಶ್ರಮೇಣ** = ಅನಾಯಾಸವಾಗಿ, **ಯಂತ್ರಾಂತರೇಣ** = ಯಂತ್ರದ ಮಧ್ಯ ರಂಧ್ರದ ಮೂಲಕ, **ಶರೈಃ** = ಐದು ಬಾಣಗಳಿಂದ, **ಲಕ್ಷ್ಯಂ** = ಲಕ್ಷ್ಯವನ್ನು, **ಅಧುನೋತ್** = ಭೇದಿಸಿದನು.

**ತಾತ್ಪರ್ಯ :-** ಅಲ್ಲಿ ಭೀಮನ ಆಜ್ಞೆಯನ್ನು ಪಡೆದು ಶ್ರೀಕೃಷ್ಣನಿಗೆ ಮನಸ್ಸಿನಲ್ಲಿ ನಮಿಸಿ ಬಿಲ್ಲನು ಬಗ್ಗಿಸಿ ಹಗ್ಗ ಕಟ್ಟಿ ಹೆಗ್ಗಲನ್ನು ಎರಿಸಿದನು. ಅನಂತರ ಯಂತ್ರದ ಮಧ್ಯರಂಧ್ರದ ಮೂಲಕ ಐದು ಬಾಣಗಳಿಂದ ಲಕ್ಷ್ಯವನ್ನು ಭೇದಿಸಿದನು.

**ಕೃಷ್ಣಾ ತದಾಽಸ್ಯ ವಿದಧೇ ನವಕಂಜಮಾಲಾಂ**
**ಮಧ್ಯೇ ಚ ತಾಂ ಪ್ರತಿವಿಧಾಯ ನರೇಂದ್ರಪುತ್ರೌ ।**
**ಭೀಮಾರ್ಜುನೌ ಯಯತುರಚ್ಯುತಮಾಭಿನಮ್ಯ**
**ಕ್ಷುಬ್ಧಃ ತದಾ ನೃಪವರಾಬ್ಧಿರಿಮಾವಧಾವತ್ ॥ ೧೩೨ ॥**

ಪದಚ್ಛೇದ :- ಕೃಷ್ಣಾ, ತದಾ, ಅಸ್ಯ, ವಿದಧೇ, ನವಕಂಜಮಾಲಾಂ, ಮಧ್ಯೇ, ಚ, ತಾಂ, ಪ್ರತಿನಿಧಾಯ, ನರೇಂದ್ರಪುತ್ರೌ, ಭೀಮಾರ್ಜುನೌ, ಯಯತುಃ, ಅಚುತಂ, ಅಭಿನಮ್ಯ, ಕ್ಷುಬ್ಧಃ, ತದಾ, ನೃಪವರಾಬ್ಧಿಃ, ಇಮೌ, ಅಧಾವತ್ ।

ಅರ್ಥ :- ತದಾ = ಆಗ, ಅಸ್ಯ = ಅರ್ಜುನನಿಗೆ, ಕೃಷ್ಣಾ = ದ್ರೌಪದಿಯು, ನವಕಂಜಮಾಲಾಂ = ನೂತನ ಕಮಲದ ಹಾರವನ್ನು, ವಿದಧೇ = ಹಾಕಿದಳು, ತಾಂ ಚ = ಅವಳನ್ನು, ಮಧ್ಯೇ = ಮಧ್ಯದಲ್ಲಿ, ಪ್ರತಿನಿಧಾಯ = ಇರಿಸಿ, ನರೇಂದ್ರಪುತ್ರೌ = ರಾಜಕುಮಾರರಾದ, ಭೀಮಾರ್ಜುನೌ = ಭೀಮಾರ್ಜುನರು, ಅಚುತಂ = ಶ್ರೀ ಕೃಷ್ಣನನ್ನು, ಅಭಿನಮ್ಯ = ನಮಸ್ಕರಿಸಿ, ಯಯತುಃ = ಹೊರಟರು, ತದಾ = ಆಗ, ಕ್ಷುಬ್ಧಃ = ಕ್ಷೋಭೆಗೊಂಡ, ನೃಪವರಾಬ್ಧಿಃ = ರಾಜರೆಂಬ ಸಮುದ್ರವು, ಇಮೌ = ಭೀಮಾರ್ಜುನರ ಕಡೆಗೆ, ಅಧಾವತ್ = ಧಾವಿಸಿತು.

ತಾತ್ಪರ್ಯ :- ಆಗ ದ್ರೌಪದಿಯು ನೂತನಕಮಲ ಮಾಲೆಯನ್ನು ಅರ್ಜುನನ ಕೊರಳಿಗೆ ಹಾಕಿದಳು. ಆ ದ್ರೌಪದಿಯನು ಮಧ್ಯದಲ್ಲಿ ಇರಿಸಿ ಭೀಮಾರ್ಜುನರು ಶ್ರೀಕೃಷ್ಣನಿಗೆ ನಮಸ್ಕರಿಸಿ ತೆರಳಿದರು. ಆಗ ಎಲ್ಲ ರಾಜರು ಭೀಮಾರ್ಜುನನ ಮೇಲೆ ಕೋಪದಿಂದ ಎರಗಿಬಂದರು.

ದ್ರಷ್ಟುಂ ಹಿ ಕೇವಲಗತಿರ್ನತು ಕನ್ಯಕಾಯಾ
ಅರ್ಥೇ ನ ಚಾಪಮಿಹ ವೃಷ್ಣಿವರಾಃ ಸ್ಪೃಶಂತು ।
ಇತ್ಯಾಜ್ಞಯೈವ ವರಚಕ್ರಧರಸ್ಯ ಲಿಪ್ಸಾ-
ಮಪ್ಯತ್ರ ಚಕ್ರುರಿಹ ನೈವ ಯದುಪ್ರವೀರಾಃ ॥ ೧೩೩ ॥

ಪದಚ್ಛೇದ :- ದ್ರಷ್ಟುಂ, ಚ, ಕೇವಲಗತಿಃ, ನ, ತು, ಕನ್ಯಕಾಯಾಃ, ಅರ್ಥೇ, ನ, ಚಾಪಂ, ಇಹ, ವೃಷ್ಣಿವರಾಃ, ಸ್ಪೃಶಂತು, ಇತಿ, ಆಜ್ಞಯಾ, ಏವ, ವರಚಕ್ರಧರಸ್ಯ, ಲಿಪ್ಸಾಂ, ಅಪಿ, ಅತ್ರ, ಚಕ್ರುಃ, ಇಹ, ನೈವ, ಯದುಪ್ರವೀರಾಃ ।

ಅರ್ಥ :- ಹೇ ವೃಷ್ಣಿವರಾಃ = ವೃಷ್ಣಿವಂಶದಲ್ಲಿಯ ವೀರರೇ!, ದ್ರಷ್ಟುಂ ಚ = ನೋಡುವ ಸಲುವಾಗಿ, ಕೇವಲಗತಿಃ = ಮಾತ್ರ ಹೋಗುತ್ತಿರುವುದು, ತು = ಹೊರತು, ಕನ್ಯಕಾಯಾಃ = ದ್ರೌಪದಿಯ (ಕನ್ಯೆಯ), ಅರ್ಥೇ = ಸಲುವಾಗಿ, ನ = ಅಲ್ಲ, ಇಹ = ಈ ಸ್ವಯಂವರದಲ್ಲಿ, ಚಾಪಂ = ಬಿಲ್ಲನ್ನು,

ನ ಸ್ಪೃಶಂತು = ಮುಟ್ಟಬೇಡಿರಿ, ಇತಿ = ಎಂಬ, ವರಚಕ್ರಧರಸ್ಯ = ಚಕ್ರಧಾರಿಯಾದ ಶ್ರೀಕೃಷ್ಣನ, ಆಜ್ಞಯಾ ಏವ = ಕೇವಲ ಆಜ್ಞೆಯಿಂದ, ಇಹ = ಸ್ವಯಂ ವರದಲ್ಲಿ, ಅತ್ರ = ಧನುಸ್ಸನ್ನು ಪೂರೈಸಿ ಪಣವನ್ನು ಗೆಲ್ಲುವ ವಿಷಯದಲ್ಲಿ, ಯದುಪ್ರವೀರಾಃ = ಯಾದವರು, ಲಿಪ್ಸಾಂ ಅಪಿ = ಅಪೇಕ್ಷೆಯನ್ನೂ ಕೂಡ, ನೈವ ಚಕ್ರುಃ = ಮಾಡಲಿಲ್ಲ.

ತಾತ್ಪರ್ಯ :- ನಾವು ಕೇವಲ ಸ್ವಯಂವರವನ್ನು ನೋಡಲು ಹೋಗುತ್ತಿರುವುದು ದ್ರೌಪದಿಯ ಸಲುವಾಗಿ ಅಲ್ಲ ಎಂದು ಶ್ರೀಕೃಷ್ಣನು ಸಕಲ ಯಾದವರಿಗೆ ಆಜ್ಞೆಯನ್ನು ಮಾಡಿದನು. ಆದ್ದರಿಂದ ಎಲ್ಲ ಯಾದವರು ಸ್ವಯಂವರದಲ್ಲಿ ಪಣವನ್ನು ಗೆಲ್ಲುವ ಇಚ್ಛೆಯನ್ನೂ ಕೂಡ ಮಾಡಲಿಲ್ಲ.

**ಭೀಮಸ್ತು ರಾಜಸಮಿತಿಂ ಪ್ರತಿಸಂಪ್ರಯಾತಾಂ**
**ದೃಷ್ಟ್ವೈವ ಯೋಜನದಶೋಚ್ಛ್ರಯಮಾಶು ವೃಕ್ಷಮ್ ।**
**ಆರುಜ್ಯ ಸರ್ವನೃಪತೀನಭಿತೋಽಹ್ಯತಿಷ್ಠದ್**
**ದೃಷ್ಟ್ವಾ ಪಲಾಯನಪರಾಶ್ಚ ಬಭೂವುರೇತೇ ॥ ೧೩೪ ॥**

ಪದಚ್ಛೇದ :– ಭೀಮಃ, ತು, ರಾಜಸಮಿತಿಂ, ಪ್ರತಿಸಂಪ್ರಯಾತಾಂ, ದೃಷ್ಟ್ವಾ, ಏವ, ಯೋಜನದಶೋಚ್ಛ್ರಯಂ, ಆಶು, ವೃಕ್ಷಮ್, ಆರುಜ್ಯ, ಸರ್ವನೃಪತೀನ್, ಅಭಿತಃ, ಹಿ, ಅತಿಷ್ಠತ್, ದೃಷ್ಟ್ವಾ, ಪಲಾಯನಪರಾಃ, ಚ, ಬಭೂವುಃ, ಏತೇ ।

ಅರ್ಥ :- **ಭೀಮಸ್ತು** = ಭೀಮನಾದರೂ, **ಪ್ರತಿಸಂಪ್ರಯಾತಾಂ** = ತಮ್ಮ ಮೇಲೆ ನುಗ್ಗಿ ಬರುತ್ತಿರುವ, **ರಾಜಸಮಿತಿಂ** = ರಾಜರ ಗುಂಪನ್ನು, **ದೃಷ್ಟ್ವಾ ಏವ** = ನೋಡಿಯೇ, **ಆಶು** = ಬೇಗನೆ, **ಯೋಜನದಶೋಚ್ಛ್ರಯಂ** = ಹತ್ತು ಯೋಜನ ಎತ್ತರದ, **ವೃಕ್ಷಮ್** = ಮರವನ್ನು, **ಆರುಜ್ಯ** = ಕಿತ್ತು, **ಸರ್ವನೃಪತೀನ್** = ಎಲ್ಲ ರಾಜರ, **ಅಭಿತಃ** = ಎದುರಿಗೆ, **ಅತಿಷ್ಠತ್** = ನಿಂತನು, **ಏತೆ ಚ** = ಈ ರಾಜರು, **ದೃಷ್ಟ್ವಾ** = ಭೀಮನನ್ನು ನೋಡಿ, **ಪಲಾಯನ ಪರಾಃ** = ಪಲಾಯನ ಮಾಡುವುದರಲ್ಲಿ ಆಸಕ್ತರು, **ಬಭೂವುಃ** = ಆದರು.

ತಾತ್ಪರ್ಯ :- ಯುದ್ಧಕ್ಕಾಗಿ ಬರುತ್ತಿರುವ ರಾಜರ ಗುಂಪನ್ನು ನೋಡಿ ಭೀಮನು ಹತ್ತುಯೋಜನ ಎತ್ತರವಿರುವ ಮರವನ್ನು ಕಿತ್ತು ಅವರ ಮುಂದೆ ಬಂದು ನಿಂತನು. ಅದನ್ನು ನೋಡಿ ಎಲ್ಲರಾಜರು ಅಲ್ಲಿಂದ ಓಡಿದರು.

**ಭೀಮೋಽಯಮೇಷ ಪುರುಹೂತಸುತೋಽನ್ಯ ಏತೇ**
**ಪಾರ್ಥಾ ಇತಿ ಸ್ಮ ಹಲಿನೇ ಹರಿರಭ್ಯವೋಚತ್ ।**
**ದೃಷ್ಟ್ವೈವ ಸೋಽಪಿ ಮುದಮಾಪ ಶಿನೇಶ್ಚ ಪೌತ್ರಃ**
**ಖಡ್ಗಂ ಪ್ರಗೃಹ್ಯ ಹರ್ಷಾತ್ ಪರಿಪುಪ್ಲುವೇಽತ್ರ ॥ ೧೩೫ ॥**

**ಪದಚ್ಛೇದ :-** ಭೀಮಃ, ಅಯಂ, ಏಷಃ, ಪುರುಹೂತಸುತಃ, ಅನ್ಯ, ಏತೇ, ಪಾರ್ಥಾಃ, ಇತಿ, ಸ್ಮ ಹಲಿನೇ, ಹರಿಃ, ಅಭ್ಯವೋಚನತ್, ದೃಷ್ಟ್ವಾ, ಏವ, ಸಃ, ಅಪಿ, ಮುದಂ, ಆಪ, ಶಿನೇಃ, ಚ, ಪೌತ್ರಃ, ಖಡ್ಗಂ, ಪ್ರಗೃಹ್ಯ, ಹರ್ಷಾತ್, ಪರಿಪುಪ್ಲುವೇ, ಅತ್ರ ।

**ಅರ್ಥ :-** **ಅಯಂ** = ಇವನು, **ಭೀಮಃ** = ಭೀಮನು, **ಏಷಃ** = ಇವನು, **ಪುರುಹೂತಸುತಃ** = ಇಂದ್ರನ ಮಗನಾದ ಅರ್ಜುನನು, **ಅನ್ಯೇ** = ಇನ್ನುಳಿದ, **ಏತೇ** = ಇವರು, **ಪಾರ್ಥಾಃ** = ಪಾಂಡವರು, **ಇತಿ** = ಎಂದು, **ಹರಿ** = ಶ್ರೀಕೃಷ್ಣನು, **ಹಲಿನೇ** = ಬಲರಾಮನಿಗೆ, **ಅಭ್ಯವೋಚತ್ ಸ್ಮ** = ಹೇಳಿದನು, **ದೃಷ್ಟ್ವಾ ಏವ** = ನೋಡಿಯೇ, **ಸಃ ಅಪಿ** = ಬಲರಾಮನೂ ಕೂಡ, **ಮುದಂ** = ಸಂತೋಷವನ್ನು, **ಆಪ** = ಹೊಂದಿದನು, **ಚ** = ಮತ್ತು, **ಶಿನೇಃ** = ಶಿನಿಯ, **ಪೌತ್ರಃ** = ಮೊಮ್ಮಗನಾದ ಸಾತ್ಯಕಿಯು, **ಅತ್ರ** = ಸ್ವಯಂವರದಲ್ಲಿ, **ಖಡ್ಗಂ** = ಖಡ್ಗವನ್ನು, **ಪ್ರಗೃಹ್ಯ** = ಹಿಡಿದು, **ಹರ್ಷಾತ್** = ಸಂತೋಷದಿಂಹದ, **ಪರಿಪುಪ್ಲುವೇ** = ಕುಣಿದಾಡಿದನು.

**ತಾತ್ಪರ್ಯ :-** ಇವನು ಭೀಮ, ಇವನು ಅರ್ಜುನ ಉಳಿದವರು ಪಾಂಡವರು ಎಂದು ಶ್ರೀಕೃಷ್ಣನು ಬಲರಾಮನಿಗೆ ಹೇಳಲು ಬಲರಾಮನು ಅವರನ್ನು ನೋಡಿ ಸಂತೋಷಪಟ್ಟನು. ಶಿನಿಯ ಮೊಮ್ಮಗನಾದ ಸಾತ್ಯಕಿಯು ಸಂತೋಷದಿಂದ ಖಡ್ಗವನ್ನು ಹಿಡಿದು ಕುಣಿದಾಡತೊಡಗಿದ.

**ಪ್ರೀತೇಷು ಸರ್ವಯದುಷು ಪ್ರಪಲಾಯಿತೇಷು**
**ದುರ್ಯೋಧನಾದಿನೃಪತಿಷ್ವಖಿಲೇಷು ಭೀಮಾತ್ ।**
**ಕರ್ಣೋಽಭ್ಯಯಾದ್ಧರಿಹಯಾತ್ಮಜಮಾಶು ಮದ್ರ-**
**ರಾಜೋ ಜಗಾಮ ಪವನಾತ್ಮಜಮೇವ ವೀರಃ ॥ ೧೩೬ ॥**

ಪ್ರೀತೇಷು, ಸರ್ವಯದುಷು, ಪ್ರಪಲಾಯಿತೇಷು, ದುರ್ಯೋಧನಾದಿನೃಪತಿಷು, ಅಖಿಲೇಷು, ಭೀಮಾತ್, ಕರ್ಣಃ, ಅಭ್ಯಯಾತ್, ಹರಿಹಯಾತ್ಮಜಂ, ಆಶು, ಮದ್ರರಾಜಃ, ಜಗಾಮ, ಪವನಾತ್ಮಜಂ, ಏವ, ವೀರಃ ।

**ಅರ್ಥ :- ಸರ್ವಯದುಷು** = ಎಲ್ಲ ಯಾದವರು, **ಪ್ರೀತೇಷು** = ಪ್ರೀತರಾಗಲು, **ಭೀಮಾತ್** = ಭೀಮನಿಂದ, **ಅಖಿಲೇಷು ನೃಪತಿಷು** = ದುರ್ಯೋಧನಾದಿರಾಜರು, **ಪ್ರಪಲಾಯಿತೇಷು ಸತ್ಸು** = ಓಡಿಹೋಗಲು, **ಕರ್ಣಃ** = ಕರ್ಣನು, **ಆಶು** = ಬೇಗನೆ, **ಹರಿಹಯಾತ್ಮಜಂ** = ಇಂದ್ರನ ಮಗನಾದ ಅರ್ಜುನನನ್ನು, **ಅಭ್ಯಯಾತ್** = ಎದುರಿಸಿದನು, **ವೀರಃ** = ಪರಾಕ್ರಮಿಯಾದ, **ಮದ್ರರಾಜಃ** = ಮದ್ರರಾಜನಾದ ಶಲ್ಯನು, **ಪವನಾತ್ಮಜಂ ಏವ** = ಭೀಮನನ್ನು ಕುರಿತು, **ಜಗಾಮ** = ಹೋದನು.

**ತಾತ್ಪರ್ಯ :-** ಯಾದವರೆಲ್ಲ ಈ ಪ್ರಸಂಗವನ್ನು ನೋಡಿ ಸಂತೋಷಪಟ್ಟರು, ದುರ್ಯೋಧನಾದಿಗಳು ಓಡಿದರು, ಶಲ್ಯ ಕರ್ಣರು ಭೀಮಾರ್ಜುನರ ಮೇಲೆ ಎರಗಿದರು.

**ವಿಪ್ರೇಷು ದಂಡಪಟದರ್ಭಮಹಾಜಿನಾನಿ**
**ಕೋಪಾತ್ ಕ್ಷಿಪತ್ಸು ನ ವಿನಾಶನಮತ್ರ ಭೂಯಾತ್ ।**
**ಕ್ಷತ್ರಸ್ಯ ವೈರತ ಇತಿ ದ್ರುಪದೇ ಚ ಕೃಷ್ಣಂ**
**ವಿಪ್ರಾಂಶ್ಚ ಯಾಚತಿ ಸ ಮಾರುತಿರಾರ ಶಲ್ಯಮ್ ॥ ೧೩೭ ॥**

**ಪದಚ್ಛೇದ :- ವಿಪ್ರೇಷು, ದಂಡಪಟದರ್ಭಮಹಾಜಿನಾನಿ, ಕೋಪಾತ್, ಕ್ಷಿಪತ್ಸು, ನ, ವಿನಾಶನಂ, ಅತ್ರ, ಭೂಯಾತ್, ಕ್ಷತ್ರಸ್ಯ, ವೈರತಃ, ಇತಿ, ದ್ರುಪದೇ, ಚ, ಕೃಷ್ಣಂ, ವಿಪ್ರಾನ್, ಚ, ಯಾಚತಿ, ಸಃ, ಮಾರುತಿಃ, ಆರ, ಶಲ್ಯಂ ।**

**ಅರ್ಥ :- ವಿಪ್ರೇಷು** = ಬ್ರಾಹ್ಮಣರು, **ಕೋಪಾತ್** = ಕೋಪದಿಂದ, **ದಂಡಪಟದರ್ಭಮಹಾಜಿನಾನಿ** = ದಂಡ, ಪಂಚೆ, ದರ್ಭೆ, ದೊಡ್ಡ ದೊಡ್ಡ ಕೃಷ್ಣಾಜಿನಗಳನ್ನು, **ಕ್ಷಿಪತ್ಸು ಸತ್ಸು** = ಎಸೆಯುತ್ತಿರಲು, **ದ್ರುಪದೇ** = ದ್ರುಪದನು, **ಕ್ಷತ್ರಸ್ಯ** = ಕ್ಷತ್ರಿಯರ, **ವೈರತಃ** = ವೈರದಿಂದಾಗಿ, **ಅತ್ರ** = ಇಲ್ಲಿ, **ವಿನಾಶಂ** = ಲೋಕನಾಶವು, **ನ ಭೂಯಾತ್** = ಆಗುವುದು ಬೇಡ, **ಇತಿ** = ಎಂದು, **ಕೃಷ್ಣಂ** = ಕೃಷ್ಣನನ್ನು, **ಚ** = ಮತ್ತು, **ವಿಪ್ರಾನ್** = ಬ್ರಾಹ್ಮಣರನ್ನು, **ಯಾಚತಿಸತಿ** = ಪ್ರಾರ್ಥಿಸುತ್ತಿರಲು, **ಸ ಮಾರುತಿಃ** = ಭೀಮನು, **ಶಲ್ಯಂ** = ಶಲ್ಯನ ಬಳಿಗೆ, **ಆರ** = ಬಂದನು.

**ತಾತ್ಪರ್ಯ** :- ಬ್ರಾಹ್ಮಣರು ಕೋಪದಿಂದ ದಂಡ, ವಸ್ತ್ರ ಅಜಿನ, ದರ್ಭೆಗಳನ್ನು ಬಿಸಾಡಿದರು, ಅದನ್ನು ಕಂಡು ದ್ರುಪದನು ಲೋಕನಾಶವಾಗ ಬಾರದೆಂದು ಕೃಷ್ಣ ಮತ್ತು ಬ್ರಾಹ್ಮಣರನ್ನು ಪ್ರಾರ್ಥಿಸಿದನು. ಇತ್ತ ಭೀಮನು ಶಲ್ಯನ ಬಳಿ ಬಂದನು.

**ವೃಕ್ಷಂ ತ್ವಸೌ ಪ್ರತಿನಿಧಾಯ ಚ ಮದ್ರರಾಜಂ**
**ದೋರ್ಭ್ಯಾಂ ಪ್ರಗೃಹ್ಯ ಜವತೋ ಗಗನೇ ನಿಧಾಯ ।**
**ಬಂಧುತ್ವತೋ ಭುವಿ ಶನೈರದಧಾತ್ ಸ ತಸ್ಯ**
**ವಿಜ್ಞಾಯ ವೀರ್ಯಮಗಮನ್ನಿಜರಾಜಧಾನೀಮ್ ॥ ೧೩೮ ॥**

**ಪದಚ್ಛೇದ** :- **ವೃಕ್ಷಂ, ತು, ಅಸೌ, ಪ್ರತಿನಿಧಾಯ, ಚ, ಮದ್ರರಾಜಂ, ದೋರ್ಭ್ಯಾಂ, ಪ್ರಗೃಹ್ಯ, ಜವತಃ, ಗಗನೇ, ನಿಧಾಯ, ಬಂಧುತ್ವತಃ, ಭುವಿ, ಶನೈಃ, ಅದಧಾತ್, ಸ, ತಸ್ಯ, ವಿಜ್ಞಾಯ, ವೀರ್ಯಂ, ಅಗಮತ್, ನಿಜರಾಜಧಾನೀಮ್ ।**

**ಅರ್ಥ** :- **ಅಸೌ ತು** = ಭೀಮನಾದರು, **ವೃಕ್ಷಂ** = ವೃಕ್ಷವನ್ನು, (**ಭುವಿ** = ಭೂಮಿಯಲ್ಲಿ), **ಪ್ರತಿನಿದಾಯ** = ಇಟ್ಟು, **ಮದ್ರರಾಜಂ** = ಶಲ್ಯನನ್ನು, **ದೋರ್ಭ್ಯಾಂ** = ಎರಡು ಕೈಗಳಿಂದ, **ಪ್ರಗೃಹ್ಯ** = ಹಿಡಿದು, **ಜವತಃ** = ವೇಗದಿಂದ, **ಗಗನೆ** = ಆಕಾಶಕ್ಕೆ, **ನಿಧಾಯ** = ತೂರಿ, **ಬಂಧುತ್ವತಃ** = ಬಂಧುವೆಂಬ ಕಾರಣದಿಂದ, **ಶನೈಃ** = ಮೆಲ್ಲನೇ, **ಭುವಿ** = ನೆಲದ ಮೇಲೆ, **ಅದಧಾತ್** = ಇಳಿಸಿದನು, **ಸಃ** = ಶಲ್ಯನು, **ತಸ್ಯ** = ಆ ಭೀಮನ, **ವೀರ್ಯಂ** = ಸಾಮರ್ಥ್ಯವನ್ನು, **ವಿಜ್ಞಾಯ** = ತಿಳಿದು, **ನಿಜರಾಜಧಾನೀಂ** = ತನ್ನ ರಾಜಧಾನಿಗೆ, **ಅಗಮತ್** = ತೆರಳಿದನು.

**ತಾತ್ಪರ್ಯ** :- ಹಿಂದಿನಂತೆ ಭೀಮನು ದೊಡ್ಡ ಮರವೊಂದನ್ನು ಶಲ್ಯನ ಮುಂದೆ ಕಿತ್ತಿಟ್ಟು ಅವನನ್ನು ಎರಡು ಕೈಗಳಿಂದ ಹಿಡಿದು ಆಕಾಶಕ್ಕೆ ತೂರಿದನು. ಅನಂತರ ಭೂವಿಗೆ ಇಳಿಸುವಾಗ ತನ್ನ ಬಂಧು ಎಂಬ ಕಾರಣದಿಂದ ಮೆಲ್ಲನೇ ಇಳಿಸಿದನು. ಇದರಿಂದ ಭೀಮನ ಪರಾಕ್ರಮವನ್ನು ತಿಳಿದು ಶಲ್ಯನು ತನ್ನ ರಾಜ್ಯಕ್ಕೆ ತೆರಳಿದನು.

**ಪಾರ್ಥೋಽಪಿ ತೇನ ಧನುಷಾ ಯುಯುಧೇ ಸ್ಮ ಕರ್ಣಂ**
**ಸೋಽಪ್ಯಸ್ತ್ರಬಾಹುಬಲಮಾವಿರಮುತ್ರ ಚಕ್ರೇ ।**

ತೌ ಧನ್ವಿನಾಮನುಪಮೌ ಚಿರಮಸ್ಯತಾಂ ಚ
ಸೂರ್ಯಾತ್ಮಜೋಽತ್ರ ವಚನಂ ವ್ಯಥಿತೋ ಬಭಾಷೇ ॥ ೧೩೯ ॥

ಪದಚ್ಛೇದ :- ಪಾರ್ಥಃ, ಅಪಿ, ತೇನ, ಧನುಷಾ, ಯುಯುಧೇ, ಸ್ಮ, ಕರ್ಣಂ, ಸಃ, ಅಪಿ, ಅತ್ರ, ಬಾಹುಬಲಂ, ಆವಿಃ, ಅಮುತ್ರ, ಚಕ್ರೇ, ತೌ, ಧನ್ವಿನಾಂ, ಅನುಪಮೌ, ಚಿರಂ, ಅಸ್ಯತಾಂ, ಚ, ಸೂರ್ಯಾತ್ಮಜಃ, ಅತ್ರ, ವಚನಂ, ವ್ಯಥಿತಃ, ಬಭಾಷೇ ।

ಅರ್ಥ :- ಪಾರ್ಥಃ ಅಪಿ = ಅರ್ಜುನನಾದರೂ, ತೇನ = ಆ, ಧನುಷಾ = ಬಿಲ್ಲಿನಿಂದ, ಕರ್ಣಂ = ಕರ್ಣನೊಂದಿಗೆ, ಯುಯುಧೇ ಸ್ಮ = ಯುದ್ಧಮಾಡಿದನು, ಸಃ ಅಪಿ = ಆ ಕರ್ಣನೂ ಕೂಡ, ಅತ್ರ = ಯುದ್ಧದಲ್ಲಿ, ಅಮುತ್ರ = ಅರ್ಜುನನ ವಿಷಯದಲ್ಲಿ, ಬಾಹುಬಲಂ = ಬಾಹುಬಲವನ್ನು, ಆವಿಃ = ಪ್ರಕಟಿಸಿದನು, ಧನ್ವಿನಾಂ = ಬಿಲ್ಲುಗಾರರ ಮಧ್ಯದಲ್ಲಿ, ಅನುಪಮೌ = ಅಸದೃಶರಾದ, ತೌ = ಕರ್ಣಾರ್ಜುನರು, ಚಿರಂ = ಬಹಳ ಕಾಲದವರೆಗೂ, ಅಸ್ಯತಾಂ = ಪರಸ್ಪರವಾಗಿ ಬಾಣಗಳಿಂದ ಹೊಡದಾಡಿದರು, ಚ = ಮತ್ತು, ಅತ್ರ = ಇಲ್ಲಿ, ವ್ಯಥಿತಃ = ವ್ಯಥೆಗೊಂಡ, ಸೂರ್ಯಾತ್ಮಜಃ = ಕರ್ಣನು, ವಚನಂ = ಮಾತನ್ನು, ಬಭಾಷೇ = ಆಡಿದನು.

ತಾತ್ಪರ್ಯ :- ಅರ್ಜುನನನ್ನು ಸ್ವಯಂವರದಲ್ಲಿ ಹೆಗಲೇರಿಸಿದ ಬಿಲ್ಲಿನಿಂದಲೇ ಕರ್ಣನ ಜೊತೆಗೆ ಯುದ್ಧಕ್ಕೆ ನಿಂತ, ಕರ್ಣನು ಸಹ ತನ್ನ ಬಲ ಪ್ರದರ್ಶನವನ್ನು ಮಾಡಿದ. ಹೀಗೆ ಇಬ್ಬರು ಬಹುಕಾಲ ಬಾಣಗಳಿಂದ ಹೊಡೆದಾಡಿದರು. ಕೊನೆಯಲ್ಲಿ ವ್ಯಥೆಗೊಂಡ ಕರ್ಣನು ಅರ್ಜುನನಿಗೆ ಹೀಗೆ ಹೇಳಿದನು.

ತ್ವಂ ಫಲ್ಗುನೋ ಹರಿಹಯೋ ದ್ವಿಜಸತ್ತಮೋ ವಾ
ಮೂರ್ತಂ ನ ಮೇ ಪ್ರಮುಖತಃ ಸ್ಥಿತಿಮನ್ಯ ಈಷ್ಟೇ ।
ಯೋ ವಾಽಸ್ಮಿ ಕೋಽಪಿ ಯದಿ ತೇ ಕ್ಷಮಮದ್ಯ ಬಾಣಾನ್
ಮುಂಚಾನ್ಯಥೇಹಿ ರಣತಸ್ತ್ವಿತಿ ಪಾರ್ಥ ಆಹ ॥ ೧೪೦ ॥

ಪದಚ್ಛೇದ :- ತ್ವಂ, ಫಲ್ಗುನಃ, ಹರಿಹಯಃ, ದ್ವಿಜಸತ್ತಮಃ, ವಾ, ಮೂರ್ತಂ, ನ, ಮೇ, ಪ್ರಮುಖತಃ, ಸ್ಥಿತಿಂ, ಅನ್ಯಃ, ಈಷ್ಟೇ, ಯಃ, ವಾ, ಅಸ್ಮಿ, ಕಃ, ಅಪಿ, ಯದಿ, ತೇ, ಕ್ಷಮಂ, ಅದ್ಯ, ಬಾಣಾನ್, ಮುಂಚ, ಅನ್ಯಥಾ, ಏಹಿ, ರಣತಃ, ತು, ಇತಿ, ಪಾರ್ಥ, ಆಹ ।

**ಅರ್ಥ** :- **ತ್ವಂ** = ನೀನು, **ಫಲ್ಗುನಃ** = ಅರ್ಜುನನೋ!, **ಹರಿಹಯಃ** = ಇಂದ್ರನೋ, **ವಾ** = ಅಥವಾ, **ಮೂರ್ತಂ** = ದೇಹಧಾರಣೆ ಮಾಡಿ ನಿಂತಿರುವ, **ದ್ವಿಜಸತ್ತಮಃ** = ಬ್ರಾಹ್ಮಣರ ತಪಸ್ಸೋ?, **ಅಸ್ಯ**ಃ = ಮತ್ತಾರು, **ಮೇ** = ನನ್ನ, **ಪ್ರಮುಖತಃ** = ಮುಂದೆ, **ಸ್ಥಿತಿಂ** = ನಿಲ್ಲಲು, **ನ ಈಷ್ಟೇ** = ಸಮರ್ಥರಲ್ಲ, **ಯೋ ವಾ ಕೋಽಪಿ** = ನೀನು ಹೇಳಿದವರ ಮಧ್ಯದಲ್ಲಿ ಯಾರಾದರು, **ಅಸ್ಮಿ** = ಆಗಿರಲಿ, **ಯದಿ** = ಒಂದುವೇಳೆ, **ತೇ** = ನಿನಗೆ (**ಯೋದ್ಧುಂ** = ಯುದ್ಧ ಮಾಡಲು), **ಕ್ಷಮಂ** = ಸಾಮರ್ಥ್ಯವು, **ಚೇತ್** = ಇದ್ದರೆ?, (**ತರ್ಹಿ** = ಆಗ), **ಬಾಣಾನ್** = ಬಾಣಗಳನ್ನು, **ಮುಂಚ** = ಬಿಡು, **ಅನ್ಯಥಾ** = ಇಲ್ಲವಾದರೇ, **ರಣತಃ** = ಯುದ್ಧದಿಂದ, **ಏಹಿ** = ಹೋಗು, **ಇತಿ** = ಎಂದು, **ಪಾರ್ಥ** = ಅರ್ಜುನನು, **ಆಹ** = ಹೇಳಿದನು.

**ತಾತ್ಪರ್ಯ** :- ನೀನು ಅರ್ಜುನನೋ ಇಂದ್ರನೋ ಅಥವಾ ಎಲ್ಲ ಬ್ರಾಹ್ಮಣರ ತಪಸ್ಸೋ? ಎಂದು ಕರ್ಣನು ಅರ್ಜುನನನ್ನು ಕೇಳಲು ನಾನು ಯಾರಾದರಾಗಿರಲಿ ನಿನಗೆ ಸಾಮರ್ಥ್ಯವಿದ್ದರೆ ಯುದ್ಧ ಮಾಡು ಇಲ್ಲವಾದರೆ ಯುದ್ಧದಿಂದ ನಿವೃತ್ತನಾಗು ಎಂದು ಅರ್ಜುನನು ಹೇಳಿದನು.

**ಕಾರ್ಯಂ ನ ಮೇ ದ್ವಿಜವರ್ಯೈಃ ಪ್ರತಿಯೋಧನೇನೇ-**
**ತ್ಯುಕ್ತ್ವಾ ಯಯೌ ರವಿಸುತಃ ಸ ಸುಯೋಧನಾದ್ಯೈಃ ।**
**ನಾಗಾಹ್ವಯಂ ಪುರಮಥ ದ್ರುಪದಾತ್ಮಜಾಂ ತಾ-**
**ಮಾದಾಯ ಚಾರ್ಜುನಯುತಃ ಪ್ರಯಯೌ ಸ ಭೀಮಃ ॥ ೧೪೧ ॥**

ಪದಚ್ಛೇದ :- ಕಾರ್ಯಂ, ನ, ಮೇ, ದ್ವಿಜವರ್ಯೈಃ, ಪ್ರತಿಯೋಧನೇನ, ಇತಿ, ಉಕ್ತ್ವಾ, ಯಯೌ, ರವಿಸುತಃ, ಸಃ, ಸುಯೋಧನಾದ್ಯೈಃ, ನಾಗಾಹ್ವಯಂ, ಪುರಂ, ಅಥ, ದ್ರುಪದಾತ್ಮಜಾಂ, ತಾಂ, ಆದಾಯ, ಚ, ಅರ್ಜುನಯುತಃ, ಪ್ರಯಯೌ, ಸ, ಭೀಮಃ।

**ಅರ್ಥ** :- **ದ್ವಿಜವರ್ಯೈಃ** = ಬ್ರಾಹ್ಮಣೋತ್ತಮರ ಜೊತೆ, **ಪ್ರತಿರೋಧನೇನ** = ಜಗಳವಾಡುವುದರಿಂದ, **ಮೇ** = ನನಗೆ, **ಕಾರ್ಯಂ** = ಪ್ರಯೋಜನವು, **ನ** = ಇಲ್ಲ, **ಇತಿ** = ಎಂದು, **ಉಕ್ತ್ವಾ** = ಹೇಳಿ, **ಸಃ** = ಆ, **ರವಿಸುತಃ** = ಕರ್ಣನು, **ಸುಯೋಧನಾದ್ಯೈಃ** = ದುರ್ಯೋಧನಾದಿಗಳ ಜೊತೆಗೆ, **ನಾಗಾಹ್ವಯಂ ಪುರಂ**

= ಅಸ್ತಿನಾಪುರಕ್ಕೆ, **ಯಯೌ** = ಹೋದನು, **ಅಥ** = ಅನಂತರ, **ತಾಂ** = ಆ, **ದ್ರುಪದಾತ್ಮಜಾಂ** = ದ್ರೌಪದಿಯನ್ನು, **ಆದಾಯ** = ಕರೆದುಕೊಂಡು, **ಅರ್ಜುನಯುತಃ** = ಅರ್ಜುನನಿಂದ ಕೂಡಿದ, **ಸಃ** = ಆ, **ಭೀಮಃ** = ಭೀಮನು, **ಪ್ರಯಯೌ** = ಹೊರಟನು.

ತಾತ್ಪರ್ಯ :- ಬ್ರಾಹ್ಮಣರ ಜೊತೆ ಕಾದಾಡುವದರಿಂದ ನನಗೇನು ಆಗಬೇಕಾಗಿಲ್ಲ ಎಂದು ದುರ್ಯೋಧನಾದಿಗಳ ಜೊತೆಗೂಡಿ ಕರ್ಣನು ಹಸ್ತಿನಾಪಟ್ಟಣಕ್ಕೆ ತೆರಳಿದನು. ಅನಂತರ ಭೀಮನು ಅರ್ಜುನನಿಂದ ಕೂಡಿಕೊಂಡು ದ್ರೌಪದಿಯನ್ನು ಕರೆದುಕೊಂಡು ಹೊರಟನು.

**ಅಗ್ರೇऽಶ್ವಿಪುತ್ರಸಹಿತಃ ಸ ತು ಧರ್ಮಸೂನುಃ**
**ಪ್ರಾಯಾತ್ ಕುಲಾಲಗೃಹಮನ್ವಪಿ ಭೀಮಪಾರ್ಥೌ ।**
**ಭಿಕ್ಷೇತಿ ತೈರಭಿಹಿತೇ ಪ್ರಜಗಾದ ಕುಂತೀ**
**ಭುಂಗ್ಧ್ವಂ ಸಮಸ್ತಶ ಇತಿ ಪ್ರದದರ್ಶ ಕನ್ಯಾಮ್ ॥ ೧೪೨ ॥**

**ಪದಚ್ಛೇದ :- ಅಗ್ರೆ, ಅಶ್ವಿಪುತ್ರಸಹಿತಃ, ಸಃ, ತು, ಧರ್ಮಸೂನುಃ, ಪ್ರಾಯಾತ್, ಕುಲಾಲಗೃಹಂ, ಅನು, ಅಪಿ, ಭೀಮಪಾರ್ಥೌ, ಭಿಕ್ಷಾ, ಇತಿ, ತೈಃ, ಅಭಿಹಿತೇ, ಪ್ರಜಗಾದ, ಕುಂತೀ, ಭುಙ್ಧ್ವಂ, ಸಮಸ್ತಶಃ, ಇತಿ, ಪ್ರದದರ್ಶಾ, ಕನ್ಯಾಂ ।**

**ಅರ್ಥ** :- **ಅಗ್ರೆ** = ಮೊದಲಿಗೆ, **ಅಶ್ವಿಪುತ್ರಸಹಿತಃ** = ಪುತ್ರರಾದ ನಕುಲ ಸಹದೇವರಿಂದ ಕೂಡಿದ, **ಸಃ** = ಆ, **ಧರ್ಮಸೂನುಃ ತು** = ಧರ್ಮರಾಜನಾದರೂ, **ಕುಲಾಲಗೃಹಂ** = ಕುಂಬಾರನ ಮನೆಗೆ, **ಪ್ರಾಯಾತ್** = ಹೊದನು, **ಅನು ಅಪಿ** = ಅನಂತರದಲ್ಲಿ, **ಭೀಮಪಾರ್ಥೌ** = ಭೀಮಾರ್ಜುನರು, **ಪ್ರಾಯಾತ್** = ಹೊರಟರು, **ತೈಃ** = ಅವರಿಂದ, **ಭಿಕ್ಷಾ** = ''ಭಿಕ್ಷೆಯು'', **ಇತಿ** = ಎಂದು, **ಅಭಿಹಿತೇ** = ಹೇಳಲು, **ಕುಂತೀ** = ಕುಂತಿಯು, **ಸಮಸ್ತಶಃ** = ಎಲ್ಲರಿಂದಲೂ, **ಭುಙ್ಧ್ವಂ** = ತಿನ್ನಲ್ಪಡಲಿ, **ಇತಿ** = ಎಂದು, **ಪ್ರಜಗಾದ** = ಹೇಳಿದಳು, (ಅನಂತರ), **ಕನ್ಯಾಂ** = ದ್ರೌಪದಿಯನ್ನು, **ಪ್ರದದರ್ಶ** = ನೋಡಿದಳು.

ತಾತ್ಪರ್ಯ :- ಮೊದಲಿಗೆ ಧರ್ಮರಾಜನು ನಕುಲ ಸಹದೇವರಿಂದ ಕೂಡಿಕೊಂಡು ಕುಂಬಾರನ ಮನೆಗೆ ಹೋಗಿದ್ದನು ಅನಂತರ ಭೀಮಾರ್ಜುನರು

ಹೋಗಿದ್ದರು. ಮರಳಿಬಂದ ಭೀಮಾರ್ಜುನರು ''ಭಿಕ್ಷೆ'' ಎಂದು ಹೇಳಲು ಕುಂತಿಯು ಎಲ್ಲರು ಉಣ್ಣಿರಿ ಎಂದು ಹೇಳಿ ಅನಂತರದಲ್ಲಿ ದ್ರೌಪದಿಯನ್ನು ನೋಡಿದಳು.

ಪ್ರಾಮಾದಿಕಂ ಚ ವಚನಂ ನ ಮೃಷಾ ತಯೋಕ್ತಂ
ಪ್ರಾಯೋ ಹಿ ತೇನ ಕಥಮೇತದಿತಿ ಸ್ಮ ಚಿಂತಾ ।
ತೇಷಾಂ ಬಭೂವ ವಸುದೇವಸುತೋ ಹರಿಶ್ಚ
ತತ್ರಾಽಜಗಾಮ ಪರಮೇಣ ಹಿ ಸೌಹೃದೇನ ॥ ೧೪೩ ॥

ಪದಚ್ಛೇದ :- ಪ್ರಾಮಾದಿಕಂ, ಚ, ವಚನಂ, ನ, ಮೃಷಾ, ತಯಾ, ಉಕ್ತಂ, ಪ್ರಾಯಃ, ಹಿ, ತೇನ, ಕಥಂ, ಎತತ್, ಇತಿ, ಸ್ಮ ಚಿಂತಾ, ತೇಷಾಂ, ಬಭೂವ, ವಸುದೇವಸುತಃ, ಹರಿಃ, ಚ, ತತ್ರ, ಆಜಗಾಮ, ಪರಮೇಣ, ಹಿ, ಸೌಹೃದೇನ ।

ಅರ್ಥ :- ಪ್ರಾಯಃ = ಸಾಮಾನ್ಯವಾಗಿ, ತಯಾ = ಕುಂತಿಯಿಂದ, ಉಕ್ತಂ = ಹೇಳಿದ, ವಚನಂ = ಮಾತು, ಪ್ರಾಮಾದಿಕಂ ಚ = ಪ್ರಾಮಾದಿಕವಾಗಿಯೂ, ಮೃಷಾ ನ = ಸುಳ್ಳಾಗುವುದಿಲ್ಲ, ತೇನ = ಆದ್ದರಿಂದ, ಏತತ್ = ಈ ರೀತಿಯಾಗಿ ಹೇಳಿದ್ದು, ಕಥಂ = ಹೇಗೆ, ಇತಿ = ಎಂದು, ತೇಷಾಂ = ಅವರಿಗೆ (ಭೀಮಾರ್ಜುನರಿಗೆ), ಚಿಂತಾ = ಚಿಂತೆಯು, ಬಭೂವ ಸ್ಮ = ಉಂಟಾಯಿತು, ತದಾ = ಆಗ, ತತ್ರ = ಅಲ್ಲಿಗೆ, ಪರಮೇಣ = ಅತ್ಯಂತ, ಸೌಹೃದೇನ = ಸ್ನೇಹದಿಂದ, ವಸುದೇವಸುತಃ = ವಸುದೇವನ ಮಗನಾದ, ಹರಿಶ್ಚ = ಶ್ರೀಕೃಷ್ಣನು, ಆಜಗಾಮ = ಬಂದನು.

ತಾತ್ಪರ್ಯ :- ಕುಂತಿಯು ಪ್ರಾಯಶಃ ಪ್ರಾಮಾದಿಕವಾಗಿಯೂ ಸುಳ್ಳು ಮಾತಾಡುವವಳಲ್ಲ ಅಂದಮೇಲೆ ಹೀಗೆ ಹೇಗೆ ಹೇಳಿದಳು ಎಂದು ಎಲ್ಲರು ಚಿಂತಾಕ್ರಾಂತರಾಗಿರಲು ಅತ್ಯಂತ ಸ್ನೇಹದಿಂದ ಶ್ರೀಕೃಷ್ಣನು ಪಾಂಡವರ ಬಳಿ ಬಂದನು.

ಸಂಭಾಷ್ಯ ತೈಃ ಸ ಭಗವಾನಮಿತಾತ್ಮಶಕ್ತಿಃ
ಪ್ರಾಯಾನ್ನಿಜಾಂ ಪುರಮಮಾ ಯದುಭಿಃ ಸಮಸ್ತೈಃ ।
ಜ್ಞಾತುಂ ಚ ತಾನ್ ನಿಶಿ ಸ ತು ದ್ರುಪದಃ ಸ್ವಪುತ್ರಂ
ಪ್ರಾಸ್ಥಾಪಯತ್ ಸ ಚ ನಿಲೀನ ಇಮಾನಪಶ್ಯತ್ ॥ ೧೪೪ ॥

ಪದಚ್ಛೇದ :- ಸಂಭಾಷ್ಯ, ತೈಃ, ಸಃ, ಭಗವಾನ್, ಅಮಿತಾತ್ಮಶಕ್ತಿಃ, ಪ್ರಾಯಾತ್, ನಿಜಾಂ, ಪುರಂ, ಅಮಾ, ಯದುಭಿಃ, ಸಮಸ್ತೈಃ, ಜ್ಞಾತುಂ, ಚ, ತಾನ್, ನಿಶಿ, ಸಃ, ತು, ದ್ರುಪದಃ, ಸ್ವಪುತ್ರಂ, ಪ್ರಸ್ಥಾಪಯತ್, ಸಃ, ಚ, ನಿಲೀನಃ, ಇಮಾನ್, ಅಪಶ್ಯತ್ ।

ಅರ್ಥ :- ತೈಃ (ಸಹ) = ಅವರ ಜೊತೆಗೆ, ಸಂಭಾಷ್ಯ = ಚೆನ್ನಾಗಿ ಮಾತನಾಡಿ, ಅಮಿತಾತ್ಮಶಕ್ತಿ = ಅಚಿಂತ್ಯ ಶಕ್ತಿಯುಳ್ಳ, ಭಗವಾನ್ = ಷಡ್ಗುಣ ಸಂಪದ್ಭರಿತನಾದ, ಸಃ = ಶ್ರೀಕೃಷ್ಣನು, ಸಮಸ್ತೈಃ = ಎಲ್ಲ, ಯದುಭಿಃ = ಯಾದವರಿಂದ, ಅಮಾ = ಕೂಡಿಕೊಂಡು, ನಿಜಂ = ತನ್ನ, ಪುರಂ = ದ್ವಾರಕಾಪಟ್ಟಣಕ್ಕೆ, ಪ್ರಾಯಾತ್ = ಹೊರಟನು, ಸಃ = ಆ, ದ್ರುಪದಃ ತು = ದ್ರುಪದನಾದರೂ, ನಿಶಿ = ರಾತ್ರಿಯಲ್ಲಿ, ತಾನ್ = ಅವರನ್ನು, ಜ್ಞಾತುಂ = ತಿಳಿಯಲು, ಸ್ವಪುತ್ರಂ = ತನ್ನ ಮಗನಾದ ಧೃಷ್ಟದ್ಯುಮ್ನನನ್ನು, ಪ್ರಸ್ಥಾಪಯತ್ = ಕಳುಹಿಸಿದನು, ಸ ಚ = ಅವನಾದರೂ, ನಿಲೀನಃ ಸನ್ = ಅಡಗಿ ಕೊಂಡಿದ್ದವನಾಗಿಯೇ, ಇಮಾನ್ = ಇವರನ್ನು, ಅಪಶ್ಯತ್ = ಗಮನಿಸಿದನು.

ತಾತ್ಪರ್ಯ :- ಶ್ರೀಕೃಷ್ಣನು ಪಾಂಡವರ ಜೊತೆ ಚೆನ್ನಾಗಿ ಮಾತನಾಡಿ ಯಾದವರ ಜೊತೆ ದ್ವಾರಕೆಗೆ ತೆರಳಿದನು. ಅವರು ಯಾರು ಎಂದು ತಿಳಿಯಲು ದ್ರುಪದನು ತನ್ನ ಮಗನಾದ ಧೃಷ್ಟದ್ಯುಮ್ನನನ್ನು ರಾತ್ರಿಯಲ್ಲಿ ಕಳುಹಿಸಿದನು. ಅವನಾದರೂ ಅಡಗಿಕೊಂಡೆ ಅವರನ್ನು ಗಮನಿಸಿದನು.

ಭಿಕ್ಷಾನ್ನಭೋಜಿನ ಉತೋ ಭಗಿನೀಂ ನಿಜಾಂ ಚ
ತತ್ರಾತಿತೃಪ್ತಹೃದಯಾಮಥ ಯುದ್ಧವಾರ್ತಾಮ್ ।
ತೇಷಾಂ ನಿಶಮ್ಯ ನದತಾಂ ಘನವದ್ ಗಭೀರಾಂ
ಕ್ಷತ್ರೋತ್ತಮಾ ಇತಿ ಮತಿಂ ಸ ಚಕಾರ ವೀರಃ ॥ ೧೪೫ ॥

ಪದಚ್ಛೇದ :- ಭಿಕ್ಷಾನ್ನ, ಭೋಜಿನಃ, ಉತಃ, ಭಗಿನೀಂ, ನಿಜಾಂ, ಚ, ತತ್ರ, ಅಪಿ, ತೃಪ್ತಹೃದಯಾಂ, ಅಥ, ಯುದ್ಧವಾರ್ತಾಂ, ತೇಷಾಂ, ನಿಶಮ್ಯ, ನದತಾಂ, ಘನವತ್, ಗಭೀರಂ, ಕ್ಷತ್ರೋತ್ತಮಾಃ, ಇತಿ, ಮತಿಂ, ಸಃ, ಚಕಾರ, ವೀರಃ ।

ಅರ್ಥ :- ತೇಷಾಂ = ಆ ಪಾಂಡವರ, ಭಿಕ್ಷಾನ್ನ ಭೋಜನಃ = ಭಿಕ್ಷಾನ್ನ ಉಣ್ಣುತ್ತಿರುವವರನ್ನು ಉತಃ = ಮತ್ತು ತತ್ರ ಅಪಿ = ಅಲ್ಲಿಯೂ, ತೃಪ್ತ ಹೃದಯಾಂ = ಸಂತೃಪ್ತ ಜೀವನ ಉಳ್ಳ, ನಿಜಾಂ = ತನ್ನ, ಭಗಿನೀಂ =

ಹೋಗಿದ್ದರು. ಮರಳಿಬಂದ ಭೀಮಾರ್ಜುನರು ''ಭಿಕ್ಷೆ'' ಎಂದು ಹೇಳಲು ಕುಂತಿಯು ಎಲ್ಲರು ಉಣ್ಣಿರಿ ಎಂದು ಹೇಳಿ ಅನಂತರದಲ್ಲಿ ದ್ರೌಪದಿಯನ್ನು ನೋಡಿದಳು.

ಪ್ರಾಮಾದಿಕಂ ಚ ವಚನಂ ನ ಮೃಷಾ ತಯೋಕ್ತಂ
ಪ್ರಾಯೋ ಹಿ ತೇನ ಕಥಮೇತದಿತಿ ಸ್ಮ ಚಿಂತಾ ।
ತೇಷಾಂ ಬಭೂವ ವಸುದೇವಸುತೋ ಹರಿಶ್ಚ
ತತ್ರಾऽಜಗಾಮ ಪರಮೇಣ ಹಿ ಸೌಹೃದೇನ ॥ ೧೪೩ ॥

**ಪದಚ್ಛೇದ :-** ಪ್ರಾಮಾದಿಕಂ, ಚ, ವಚನಂ, ನ, ಮೃಷಾ, ತಯಾ, ಉಕ್ತಂ, ಪ್ರಾಯಃ, ಹಿ, ತೇನ, ಕಥಂ, ಎತತ್, ಇತಿ, ಸ್ಮ, ಚಿಂತಾ, ತೇಷಾಂ, ಬಭೂವ, ವಸುದೇವಸುತಃ, ಹರಿಃ, ಚ, ತತ್ರ, ಆಜಗಾಮ, ಪರಮೇಣ, ಹಿ, ಸೌಹೃದೇನ ।

**ಅರ್ಥ :-** **ಪ್ರಾಯಃ** = ಸಾಮಾನ್ಯವಾಗಿ, **ತಯಾ** = ಕುಂತಿಯಿಂದ, **ಉಕ್ತಂ** = ಹೇಳಿದ, **ವಚನಂ** = ಮಾತು, **ಪ್ರಾಮಾದಿಕಂ ಚ** = ಪ್ರಾಮಾದಿಕವಾಗಿಯೂ, **ಮೃಷಾ ನ** = ಸುಳ್ಳಾಗುವುದಿಲ್ಲ, **ತೇನ** = ಆದ್ದರಿಂದ, **ಏತತ್** = ಈ ರೀತಿಯಾಗಿ ಹೇಳಿದ್ದು, **ಕಥಂ** = ಹೇಗೆ, **ಇತಿ** = ಎಂದು, **ತೇಷಾಂ** = ಅವರಿಗೆ (ಭೀಮಾರ್ಜುನರಿಗೆ), **ಚಿಂತಾ** = ಚಿಂತೆಯು, **ಬಭೂವ ಸ್ಮ** = ಉಂಟಾಯಿತು, **ತದಾ** = ಆಗ, **ತತ್ರ** = ಅಲ್ಲಿಗೆ, **ಪರಮೇಣ** = ಅತ್ಯಂತ, **ಸೌಹೃದೇನ** = ಸ್ನೇಹದಿಂದ, **ವಸುದೇವಸುತಃ** = ವಸುದೇವನ ಮಗನಾದ, **ಹರಿಶ್ಚ** = ಶ್ರೀಕೃಷ್ಣನು, **ಆಜಗಾಮ** = ಬಂದನು.

**ತಾತ್ಪರ್ಯ :-** ಕುಂತಿಯು ಪ್ರಾಯಶಃ ಪ್ರಾಮಾದಿಕವಾಗಿಯೂ ಸುಳ್ಳು ಮಾತಾಡುವವಳಲ್ಲ ಅಂದಮೇಲೆ ಹೀಗೆ ಹೇಗೆ ಹೇಳಿದಳು ಎಂದು ಎಲ್ಲರು ಚಿಂತಾಕ್ರಾಂತರಾಗಿರಲು ಅತ್ಯಂತ ಸ್ನೇಹದಿಂದ ಶ್ರೀಕೃಷ್ಣನು ಪಾಂಡವರ ಬಳಿ ಬಂದನು.

ಸಂಭಾಷ್ಯ ತೈಃ ಸ ಭಗವಾನಮಿತಾತ್ಮಶಕ್ತಿಃ
ಪ್ರಾಯಾನ್ನಿಜಾಂ ಪುರಮಮಾ ಯದುಭಿಃ ಸಮಸ್ತೈಃ ।
ಜ್ಞಾತುಂ ಚ ತಾನ್ ನಿಶಿ ಸ ತು ದ್ರುಪದಃ ಸ್ವಪುತ್ರಂ
ಪ್ರಾಸ್ಥಾಪಯತ್ ಸ ಚ ನಿಲೀನ ಇಮಾನಪಶ್ಯತ್ ॥ ೧೪೪ ॥

ಪದಚ್ಛೇದ :- ಸಂಭಾಷ್ಯ, ತೈಃ, ಸಃ, ಭಗವಾನ್, ಅಮಿತಾತ್ಮಶಕ್ತಿಃ, ಪ್ರಾಯಾತ್, ನಿಜಾಂ, ಪುರಂ, ಅಮಾ, ಯದುಭಿಃ, ಸಮಸ್ತೈಃ, ಜ್ಞಾತುಂ, ಚ, ತಾನ್, ನಿಶಿ, ಸಃ, ತು, ದ್ರುಪದಃ, ಸ್ವಪುತ್ರಂ, ಪ್ರಸ್ಥಾಪಯತ್, ಸಃ, ಚ, ನಿಲೀನಃ, ಇಮಾನ್, ಅಪಶ್ಯತ್ ।

ಅರ್ಥ :- ತೈಃ (ಸಹ) = ಅವರ ಜೊತೆಗೆ, ಸಂಭಾಷ್ಯ = ಚೆನ್ನಾಗಿ ಮಾತನಾಡಿ, ಅಮಿತಾತ್ಮಶಕ್ತಿ = ಅಚಿಂತ್ಯ ಶಕ್ತಿಯುಳ್ಳ, ಭಗವಾನ್ = ಷಡ್ಗುಣ ಸಂಪದ್ಭರಿತನಾದ, ಸಃ = ಶ್ರೀಕೃಷ್ಣನು, ಸಮಸ್ತೈಃ = ಎಲ್ಲ, ಯದುಭಿಃ = ಯಾದವರಿಂದ, ಅಮಾ = ಕೂಡಿಕೊಂಡು, ನಿಜಂ = ತನ್ನ, ಪುರಂ = ದ್ವಾರಕಾಪಟ್ಟಣಕ್ಕೆ, ಪ್ರಾಯಾತ್ = ಹೊರಟನು, ಸಃ = ಆ, ದ್ರುಪದಃ ತು = ದ್ರುಪದನಾದರೂ, ನಿಶಿ = ರಾತ್ರಿಯಲ್ಲಿ, ತಾನ್ = ಅವರನ್ನು, ಜ್ಞಾತುಂ = ತಿಳಿಯಲು, ಸ್ವಪುತ್ರಂ = ತನ್ನ ಮಗನಾದ ಧೃಷ್ಟದ್ಯುಮ್ನನನ್ನು, ಪ್ರಸ್ಥಾಪಯತ್ = ಕಳುಹಿಸಿದನು, ಸ ಚ = ಅವನಾದರೂ, ನಿಲೀನಃ ಸನ್ = ಅಡಗಿ ಕೊಂಡಿದ್ದವನಾಗಿಯೇ, ಇಮಾನ್ = ಇವರನ್ನು, ಅಪಶ್ಯತ್ = ಗಮನಿಸಿದನು.

ತಾತ್ಪರ್ಯ :- ಶ್ರೀಕೃಷ್ಣನು ಪಾಂಡವರ ಜೊತೆ ಚೆನ್ನಾಗಿ ಮಾತನಾಡಿ ಯಾದವರ ಜೊತೆ ದ್ವಾರಕೆಗೆ ತೆರಳಿದನು. ಅವರು ಯಾರು ಎಂದು ತಿಳಿಯಲು ದ್ರುಪದನು ತನ್ನ ಮಗನಾದ ಧೃಷ್ಟದ್ಯುಮ್ನನನ್ನು ರಾತ್ರಿಯಲ್ಲಿ ಕಳುಹಿಸಿದನು. ಅವನಾದರೂ ಅಡಗಿಕೊಂಡೆ ಅವರನ್ನು ಗಮನಿಸಿದನು.

ಭಿಕ್ಷಾನ್ನಭೋಜಿನ ಉತೋ ಭಗಿನೀಂ ನಿಜಾಂ ಚ
ತತ್ರಾತಿತೃಪ್ತಹೃದಯಾಮಥ ಯುದ್ಧವಾರ್ತಾಮ್ ।
ತೇಷಾಂ ನಿಶಮ್ಯ ನದತಾಂ ಘನವದ್ ಗಭೀರಾಂ
ಕ್ಷತ್ರೋತ್ತಮಾ ಇತಿ ಮತಿಂ ಸ ಚಕಾರ ವೀರಃ ॥ ೧೪೫ ॥

ಪದಚ್ಛೇದ :- ಭಿಕ್ಷಾನ್ನ, ಭೋಜಿನಃ, ಉತಃ, ಭಗಿನೀಂ, ನಿಜಾಂ, ಚ, ತತ್ರ, ಅಪಿ, ತೃಪ್ತಹೃದಯಾಂ, ಅಥ, ಯುದ್ಧವಾರ್ತಾಂ, ತೇಷಾಂ, ನಿಶಮ್ಯ, ನದತಾಂ, ಘನವತ್, ಗಭೀರಂ, ಕ್ಷತ್ರೋತ್ತಮಾಃ, ಇತಿ, ಮತಿಂ, ಸಃ, ಚಕಾರ, ವೀರಃ ।

ಅರ್ಥ :- ತೇಷಾಂ = ಆ ಪಾಂಡವರ, ಭಿಕ್ಷಾನ್ನ ಭೋಜನಃ = ಭಿಕ್ಷಾನ್ನ ಉಣ್ಣುತ್ತಿರುವವರನ್ನು ಉತಃ = ಮತ್ತು ತತ್ರ ಅಪಿ = ಅಲ್ಲಿಯೂ, ತೃಪ್ತ ಹೃದಯಾಂ = ಸಂತೃಪ್ತ ಜೀವನ ಉಳ್ಳ, ನಿಜಾಂ = ತನ್ನ, ಭಗಿನೀಂ =

ತಂಗಿಯಾದ ದ್ರೌಪದಿಯನ್ನು, **ಅಥ** = ಅನಂತರ, **ಘನವತ್** = ಮೋಡದಂತೆ, **ಗಂಭೀರಂ** = ಗಂಭೀರವಾಗಿ, **ನದತಾಂ** = ಧ್ವನಿಮಾಡುತ್ತಿರುವ, **ಯುದ್ಧವಾರ್ತಾಂ** = ಯುದ್ಧದ ವಾರ್ತೆಯನ್ನು, **ನಿಶಮ್ಯ** = ಕೇಳಿ, **ಸಃ** = ಆ, **ವೀರಃ** = ಪರಾಕ್ರಮಿಯಾದ ಧೃಷ್ಟದ್ಯುಮ್ನನು, **ಕ್ಷತ್ರೋತ್ತಮಾಃ** = ಶ್ರೇಷ್ಠಕ್ಷತ್ರಿಯರು, **ಇತಿ** = ಎಂದು, **ಮತಿಂ ಚಕಾರ** = ತಿಳಿದನು.

**ತಾತ್ಪರ್ಯ** :- ಪಾಂಡವರು ಭಿಕ್ಷಾನ್ನ ಉಣ್ಣುವುದನ್ನು, ತನ್ನ ತಂಗಿಯ ಸಂತೃಪ್ತ ಜೀವನ, ಅವರ ಗಂಭೀರವಾದ ಧ್ವನಿ ಹಾಗೂ ಯುದ್ಧದ ವಾರ್ತೆಯ ಮಾತುಕಥೆಗಳನ್ನು ಕೇಳಿ ಅವರು ಕ್ಷತ್ರಿಯರೇ ಸರಿ ಎಂದು ತೀರ್ಮಾನಕ್ಕೆ ಧೃಷ್ಟದ್ಯುಮ್ನನು ಬಂದನು.

**ಪ್ರಾತಸ್ತು ತಸ್ಯ ಜನಿತುರ್ವಚಸಾ ಪುರೋಧಾ-**
**ಸ್ತಾನ್ ಪ್ರಾಪ್ಯ ಮಂತ್ರವಿಧಿನಾ ಮರುದಾತ್ಮಜೇನ ।**
**ಸಂಪೂಜಿತೋಽತಿವಿದುಷಾ ಪ್ರತಿಗೃಹ್ಯ ತಾಂಶ್ಚ**
**ಪ್ರಾವೇಶಯನ್ನೃಪತಿಗೇಹಮಮೈವ ಮಾತ್ರಾ ॥ ೧೪೬ ॥**

**ಪದಚ್ಛೇದ :- ಪ್ರಾತಃ, ತು, ತಸ್ಯ, ಜನಿತುಃ, ವಚಸಾ, ಪರೋಧಾಃ, ತಾನ್, ಪ್ರಾಪ್ಯ, ಮಂತ್ರವಿಧಿನಾ, ಮರುದಾತ್ಮಜೇನ, ಸಂಪೂಜಿತಃ, ಅತಿವಿದುಷಾ, ಪ್ರತಿಗೃಹ್ಯ, ತಾನ್, ಚ, ಪ್ರಾವೇಶಯನ್, ನೃಪತಿಗೇಹಂ, ಅಮಾ, ಏವ, ಮಾತ್ರಾ ।**

**ಅರ್ಥ** :- **ಪ್ರಾತಃ ತು** = ಬೆಳಗ್ಗೆ, **ತಸ್ಯ** = ಅವನ, **ಜನಿತುಃ** = ತಂದೆ, **ವಚಸಾ** = ಮಾತಿನಿಂದ, **ಪುರೋಧಾಃ** = ಪುರೋಹಿತನು, **ತಾನ್** = ಪಾಂಡವರನ್ನು, **ಪ್ರಾಪ್ಯ** = ಹೊಂದಿ, **ಮಂತ್ರವಿಧಿನಾ** = ಮಂತ್ರೋಕ್ತವಾಗಿ, **ಅತಿ ವಿದುಷಾ** = ಮಹಾಜ್ಞಾನಿಯಾದ, **ಮರುದಾತ್ಮಜೇನ** = ಭೀಮನಿಂದ, **ಸಂಪೂಜಿತಃ ಸನ್** = ಸತ್ಕಾರಮಾಡಿಸಿಕೊಂಡವನಾಗಿ, **ತಾನ್ ಚ** = ಅವರನ್ನು, **ಪ್ರತಿಗೃಹ್ಯ** = ಕರೆದುಕೊಂಡು, **ಮಾತ್ರಾ** = ತಾಯಿಂದ, **ಅಮಾ** = ಕೂಡಿಕೊಂಡು, **ನೃಪತಿಗೇಹಂ ಏವ** = ರಾಜನ ಅರಮನೆಗೆ, **ಪ್ರಾವೇಶಯನ್** = ಪ್ರವೇಶ ಮಾಡಿಸಿದನು.

**ತಾತ್ಪರ್ಯ** :- ಬೆಳಗ್ಗೆ ರಾಜನ ಆಜ್ಞೆಯಂತೆ ಪುರೋಹಿತನು ಪಾಂಡವರ ಬಳಿ ಬಂದನು. ಅಲ್ಲಿ ಭೀಮನಿಂದ ಶಾಸ್ತ್ರೋಕ್ತ ಕ್ರಮದಲ್ಲಿ ಸತ್ಕಾರಗೊಂಡ

ಪುರೋಹಿತನು ತಾಯಿಂದ ಕೂಡಿದ ಪಾಂಡವರನ್ನು ಅರಮನೆಗೆ ಕರೆದುಕೊಂಡು ಹೋದನು.

ತಾನಾಗತಾನ್ ಸಮಭಿಪೂಜ್ಯ ನಿಜಾತ್ಮಜಾಂ ಚ
ವಿಪ್ರಾದಿಯೋಗ್ಯಪೃಥಗುಕ್ತಪದಾರ್ಥಜಾತ್ಯೈಃ ।
ಪೂರ್ಣಾನ್ ಗೃಹಾಂಶ್ಚತುರ ಏವ ದಿದೇಶ ರಾಜಾ
ತತ್ರಾऽಯುಧಾದಿಪರಿಪೂರ್ಣಗೃಹಂ ಚ ತೇऽಗುಃ ॥ ೧೪೭ ॥

ಪದಚ್ಛೇದ :- ತಾನ್, ಆಗತಾನ್, ಸಮಭಿಪೂಜ್ಯ, ನಿಜಾತ್ಮಜಾಂ, ಚ, ವಿಪ್ರಾದಿಯೋಗ್ಯ, ಪೃಥಗುಕ್ತಪದಾರ್ಥಜಾತ್ಯೈಃ, ಪೂರ್ಣಾನ್, ಗೃಹಾನ್, ಚತುರಃ, ಏವ, ದಿದೇಶ, ರಾಜಾ, ತತ್ರ, ಆಯುಧಾದಿ, ಪರಿಪೂರ್ಣಗೃಹಂ, ಚ, ತೇ, ಅಗುಃ ।

**ಅರ್ಥ** :- **ಆಗತಾನ್** = ಬಂದ, **ತಾನ್** = ಆ ಪಾಂಡವರನ್ನು, **ಚ** = ಮತ್ತು, **ನಿಜಾತ್ಮಜಾಂ** = ತನ್ನ ಮಗಳಾದ ದ್ರೌಪದಿಯನ್ನು, **ಸಮಭಿಪೂಜ್ಯ** = ಆದರಿಸಿ, **ವಿಪ್ರಾದಿಯೋಗ್ಯಪೃಥಗುಕ್ತಪದಾರ್ಥ ಜಾತ್ಯೈಃ** = ಬ್ರಾಹ್ಮಣಾದಿಗಳಿಗೆ ಯೋಗ್ಯವಾದ ಪ್ರತ್ಯೇಕವಾದ ವಿಹಿತವಾದ ಪದಾರ್ಥಗಳ ಸಮೂಹದಿಂದ, **ಪೂರ್ಣಾನ್** = ತುಂಬಿದ, **ಚತುರ** = ನಾಲ್ಕು, **ಗೃಹಾನ್ ಏವ** = ಮನೆಗಳನ್ನು, **ರಾಜಾ** = ರಾಜನು, **ದಿದೇಶ** = ತೋರಿಸಿದನು, **ತೇ ಚ** = ಅವರಾದರೂ, **ತತ್ರ** = ಆ ಮನೆಗಳಲ್ಲಿ, **ಆಯುಧಾದಿ ಪರಿಪೂರ್ಣಗೃಹಂ** = ಆಯುಧಾದಿಗಳಿಂದ ಪೂರ್ಣವಾದ ಮನೆಯನ್ನು, **ಅಗುಃ** = ಹೊಕ್ಕರು.

**ತಾತ್ಪರ್ಯ** :- ಬಂದ ಪಾಂಡವರನ್ನು ತನ್ನ ಮಗಳನ್ನು ಆದರಿಸಿ ಬ್ರಾಹ್ಮಣಾದಿಗಳಿಗೆ ಯೋಗ್ಯವಾದ ವಿಹಿತವಾದ ಪದಾರ್ಥಗಳಿಂದ ಕೂಡಿದ ನಾಲ್ಕು ಮನೆಗಳನ್ನು ರಾಜನು ತೋರಿಸಿದನು. ಆದರೆ ಆ ಪಾಂಡವರು ಆಯುಧಾದಿಗಳಿಂದ ತುಂಬಿದ ಮನೆಯನ್ನೇ ಹೊಕ್ಕರು.

ಚೇಷ್ಟಾಸ್ವರಾಕೃತಿವಿವಕ್ಷಿತವೀರ್ಯಶೌರ್ಯ-
ಪ್ರಾಗಲ್ಭ್ಯಪೂರ್ವಕಗುಣೈಃ ಕ್ಷಿತಿಭರ್ತೃಪುತ್ರಾನ್ ।
ವಿಜ್ಞಾಯ ತಾನ್ ದ್ರುಪದ ಏತ್ಯ ಚ ಧರ್ಮಸೂನುಂ
ಪಪ್ರಚ್ಛ ಕೋऽಸಿ ನರವರ್ಯ ವದಸ್ವ ಸತ್ಯಮ್ ॥ ೧೪೮ ॥

**ಪದಚ್ಛೇದ :- ಚೇಷ್ಟಾಸ್ವರಾಕೃತಿವಿವಕ್ಷಿತವೀರ್ಯಶೌರ್ಯ ಪ್ರಾಗಲ್ಭ್ಯಪೂರ್ವಕ ಗುಣೈಃ, ಕ್ಷಿತಿಭರ್ತೃಪುತ್ರಾನ್, ವಿಜ್ಞಾಯ, ತಾನ್, ದ್ರುಪದಃ, ಏತ್ಯ, ಚ, ಧರ್ಮಸೂನುಂ, ಪಪ್ರಚ್ಛ ಕಃ, ಅಸಿ, ನರವರ್ಯ, ವದಸ್ವ, ಸತ್ಯಮ್ ।**

**ಅರ್ಥ :- ಚೇಷ್ಟಾಸ್ವರಾಕೃತಿವಿವಕ್ಷಿತವೀಯಶೌರ್ಯಪ್ರಾಗಲ್ಭ್ಯಪೂರ್ವಕ ಗುಣೈಃ** = ನಡವಳಿಕೆ, ಧ್ವನಿ, ಆಕಾರ, ಸಾಮರ್ಥ್ಯ, ಶೌರ್ಯ, ಧೈರ್ಯ ಮುಂತಾದ ಕ್ಷತ್ರಿಯೋಚಿತವಾದ ಗುಣಗಳಿಂದ, **ಕ್ಷಿತಿಭರ್ತೃ ಪುತ್ರಾನ್** = ರಾಜಕುಮಾರರೆಂದು, **ವಿಜ್ಞಾಯ** = ತಿಳಿದು, **ದ್ರುಪದಃ** = ದ್ರುಪದ ರಾಜನು, **ತಾನ್** = ಪಾಂಡವರನ್ನು, **ಏತ್ಯ** = ಹೊಂದಿ, **ಧರ್ಮ ಸೂನುಂ ಚ** = ಧರ್ಮರಾಜನನ್ನು, **ಹೇ ನರವರ್ಯ** = ಹೇ ನರೋತ್ತಮನೆ!, (**ತ್ವಂ** = ನೀನು), **ಕ** = ಯಾರು, **ಅಸಿ** = ಆಗಿರುವಿ, **ಸತ್ಯಂ** = ಸತ್ಯವನ್ನು, **ವದಸ್ವ** = ಹೇಳು, **ಇತಿ** = ಎಂದು, **ಪಪ್ರಚ್ಛ** = ಪ್ರಶ್ನಿಸಿದನು.

**ತಾತ್ಪರ್ಯ :-** ಪಾಂಡವರ ನಡವಳಿಕೆ, ಧ್ವನಿ, ಆಕಾರ, ಸಾಮರ್ಥ್ಯ ಮೊದಲಾದ ಗುಣಗಳಿಂದ ಇವರು ಕ್ಷತ್ರಿಯರಾದ ರಾಜಕುಮಾರರು ಎಂದು ತಿಳಿದು ಧರ್ಮರಾಜನನ್ನು ಹೇ ನರೋತ್ತಮ ನಿಜ ಹೇಳು ನೀನು ಯಾರು? ಎಂದು ಪ್ರಶ್ನಿಸಿದನು.

**ಸ ಪ್ರಾಹ ಮಂದಹಸಿತಃ ಕಿಮಿಹಾದ್ಯ ರಾಜನ್
ಪೂರ್ವಂ ಹಿ ವರ್ಣವಿಷಯೇ ನ ವಿಶೇಷ ಉಕ್ತಃ ।
ಪುತ್ರೀಕೃತೇ ತವ ಸುತೇನ ತು ಲಕ್ಷ್ಯವೇಧ
ಉಕ್ತೋ ನರೇಂದ್ರಸಮಿತೌ ಸ ಕೃತೋಽಪ್ಯನೇನ ॥ ೧೪೯ ॥**

**ಪದಚ್ಛೇದ :- ಸಃ, ಪ್ರಾಹ, ಮಂದಹಸಿತಃ, ಕಿಂ, ಇಹ, ಅದ್ಯ, ರಾಜನ್, ಪೂರ್ವಂ, ಹಿ, ವರ್ಣವಿಷಯೇ, ನ, ವಿಶೇಷಃ, ಉಕ್ತಃ, ಪುತ್ರೀಕೃತೇ, ತವ, ಸುತೇನ, ತು, ಲಕ್ಷ್ಯವೇಧಃ, ಉಕ್ತಃ, ನರೇಂದ್ರಸಮಿತೌ, ಸಃ, ಕೃತಃ, ಅಪಿ, ಅನೇನ ।**

**ಅರ್ಥ :- ಸಃ** = ಧರ್ಮರಾಜನು, **ಮಂದಹಸಿತಃ ಸನ್** = ನಸುನಗುತ್ತಾ, **ಇಹ ಅದ್ಯ ಕಿಂ** = ಅದೆಲ್ಲಾ ಈಗೇಕೆ, **ರಾಜನ್** = ರಾಜನೇ, **ಪೂರ್ವಂ** = ಹಿಂದೆ, **ವರ್ಣವಿಷಯೇ** = ಬ್ರಾಹ್ಮಣಾದಿ ವರ್ಣವಿಷಯದಲ್ಲಿ, **ವಿಶೇಷಃ** = ವಿಶೇಷವು, **ನ ಉಕ್ತಃ ಹಿ** = ಹೇಳಿರಲಿಲ್ಲವಷ್ಟೆ, **ತವ** = ನಿನ್ನ, **ಸುತೇನ** =

ಮಗನಾದ ಧೃಷ್ಟದ್ಯುಮ್ನನಿಂದ, **ನರೇಂದ್ರಸಮಿತೌ** = ರಾಜರ ಸಭೆಯಲ್ಲಿ, **ಪುತ್ರೀಕೃತೇ** = ನಿನ್ನ ಮಗಳಿಗಾಗಿ, **ಲಕ್ಷ್ಯವೇಧಸ್ತು** = ಲಕ್ಷ್ಯವೇಧ(ಭೇದ)ವನ್ನು ಮಾತ್ರ, **ಉಕ್ತಃ** = ಹೇಳಲ್ಪಟ್ಟಿತು, **ಸಃ ಅಪಿ** = ಆ ಕೆಲಸವು, **ಅನೇನ** = ಈ ನನ್ನ ತಮ್ಮನಿಂದ, **ಕೃತಃ** = ಮಾಡಲ್ಪಟ್ಟಿತು, **ಇತಿ** = ಎಂದು, **ಪ್ರಾಹ** = ಹೇಳಿದನು.

ತಾತ್ಪರ್ಯ :- ರಾಜನ ಪ್ರಶ್ನೆಗೆ ಧರ್ಮರಾಜನು ನಸುನಗುತ್ತಾ ಹೀಗೆ ಉತ್ತರಿಸಿದನು ಹೇ ರಾಜನೆ ಹಿಂದೆ ಸ್ವಯಂವರ ಕಾಲದಲ್ಲಿ ಇಂತಹ ವರ್ಣವೇ ಆಗಿರಬೇಕು ಎಂದು ನೀನು ಹೇಳಿಲ್ಲ ಅಷ್ಟೆ ಅಲ್ಲದೆ ನಿನ್ನ ಮಗನು ನಿನ್ನ ಮಗಳ ಸಲುವಾಗಿ ಸಭೆಯಲ್ಲಿ ಕೇವಲ ಲಕ್ಷ್ಯಭೇದವನ್ನು ಮಾಡಬೇಕೆಂದು ಹೇಳಿದ್ದಾರೆ. ಅದನ್ನು ಈ ನನ್ನ ತಮ್ಮನು ಮಾಡಿದ್ದಾನೆ ಅಷ್ಟೆ.

**ಏವಂ ಬ್ರುವಾಣಮಥ ತಂ ಪೃಥಯಾ ಸಹೈವ**
**ರಾಜಾ ವದೇತಿ ಪುನರೇವ ಯಯಾಚ ಏಷಃ ।**
**ಸರ್ವಂ ಪೃಥಾऽಪ್ಯವದತಾಂ ಸ ಚ ತೇನ ತುಷ್ಟೋ**
**ವಾಚಂ ಜಗಾದ ಕೃತಕೃತ್ಯ ಇಹಾऽಸಮದ್ಯ ॥ ೧೫೦ ॥**

**ಪದಚ್ಛೇದ** :- ಏವಂ, ಬ್ರುವಾಣಂ, ಅಥ, ತಂ, ಪೃಥಯಾ, ಸಹ, ಏವ, ರಾಜಾ, ವದ, ಇತಿ, ಪುನಃ, ಏವ, ಯಯಾಚೆ ಏಷಃ, ಸರ್ವಂ, ಪೃಥಾ, ಅಪಿ, ಅವದತಾಂ, ಸಃ, ಚ, ತೇನ, ತುಷ್ಟಃ, ವಾಚಂ, ಜಗಾದ, ಕೃತಕೃತ್ಯಃ, ಇಹ, ಆಸಂ, ಅದ್ಯ ।

**ಅರ್ಥ** :- **ಅಥ** = ಅನಂತರದಲ್ಲಿ, **ಏವಂ ಬ್ರುವಾಣಂ** = ಹೀಗೆ ಹೇಳುತ್ತಿರುವ, **ತಂ ಏವ** = ಧರ್ಮರಾಜನನ್ನು, **ಪೃಥಯಾ** = ಕುಂತಿಯ, **ಸಹ** = ಜೊತೆಗೆ, **ಏಷಃ** = ಈ ಯಾವ, **ರಾಜಾ** = ದ್ರುಪದನು, **ವದ** = ಹೇಳು, **ಇತಿ** = ಎಂದು, **ಪುನಃ** = ಮತ್ತೆ ಮತ್ತೆ, **ಯಯಾಚೇ ಏವ** = ಪ್ರಾರ್ಥಿಸಿದನು, **ಪೃಥಾ ಅಪಿ** = ಕುಂತಿಯಾದರು, **ಸರ್ವಂ** = ಎಲ್ಲವನ್ನು, **ಅವದತಾಂ** = ಹೇಳಲು, **ತೇನ** = ಅದರಿಂದ, **ತುಷ್ಟಃ** = ಸಂತೋಷಗೊಂಡ, **ಸ ಚ** = ದ್ರುದಪನು, **ಇಹ** = ಇಲ್ಲಿ, **ಅದ್ಯ** = ಈಗ, **ಕೃತಕೃತ್ಯ** = ಕೃತಕೃತ್ಯನು, **ಆಸಂ** = ಆದೆನು, **ಇತಿ** = ಎಂದು, **ವಾಚಂ** = ಮಾತನ್ನು, **ಜಗಾದ** = ಹೇಳಿದನು.

ತಾತ್ಪರ್ಯ :- ದ್ರುಪದನು ಮತ್ತೆ ಮತ್ತೆ ಕುಂತಿಯ ಜೊತೆ ಧರ್ಮರಾಜನನ್ನು ನಿಜವನ್ನು ಹೇಳು ಎಂದು ಪ್ರಾರ್ಥಿಸಲು ಕುಂತಿಯು ಎಲ್ಲ

ನಿಜಸಂಗತಿಯನ್ನು ಹೇಳಿದಳು. ಇದರಿಂದ ಸಂತೋಷಗೊಂಡ ದ್ರುಪದನು ನಾನು ಕೃತಕೃತ್ಯನಾದೆ ಎಂದು ಹೇಳಿದನು.

**ಪಾರ್ಥಾರ್ಥಮೇವ ಹಿ ಮಯ್ಯೈಷ ಕೃತಃ ಪ್ರಯತ್ನ-**
**ಸ್ತ್ವಂ ಫಲ್ಗುನೋಽನ್ಯ ಉತವಾಽದ್ಯ ಕರಂ ಸುತಾಯಾಃ ।**
**ಗೃಹ್ಣಾತ್ವಿತೀರಿತ ಇಮಂ ಸ ತು ಧರ್ಮಸೂನು-**
**ರಾಹ ಸ್ಮ ಸರ್ವ ಇತಿ ಮೇ ಮನಸಿ ಪ್ರರೂಢಮ್ ॥ ೧೫೧ ॥**

ಪದಚ್ಛೇದ :- **ಪಾರ್ಥಾರ್ಥಂ, ಏವ, ಹಿ, ಮಯಾ, ಏಷಃ, ಕೃತಃ, ಪ್ರಯತ್ನಃ, ತ್ವಂ, ಫಲ್ಗುನಃ, ಅನ್ಯೇ, ಉತ, ವಾ, ಅದ್ಯ, ಕರಂ, ಸುತಾಯಾಃ, ಗೃಹ್ಣಾತು, ಇತಿ, ಈರಿತಃ, ಇಮಂ, ಸಃ, ತು, ಧರ್ಮಸೂನುಃ, ಆಹ, ಸ್ಮ, ಸರ್ವಃ, ಇತಿ, ಮೇ, ಮನಸಿ, ಪ್ರರೂಢಂ ।**

**ಅರ್ಥ** :- **ಪಾರ್ಥಾರ್ಥಂ ಏವ** = ಅರ್ಜುನನಿಗಾಗಿ, **ಮಯಾ** = ನನ್ನಿಂದ, **ಏಷಃ** = ಈ ಯಾವ, **ಪ್ರಯತ್ನಃ** = ಪ್ರಯತ್ನವು, **ಕೃತಃ** = ಮಾಡಲ್ಪಟ್ಟಿತು, **ಹಿ** = ನಿಶ್ಚಯ, **ತ್ವಂ** = ನೀನು, **ವಾ** = ಅಥವಾ, **ಫಲ್ಗುನಃ** = ಅರ್ಜುನನೋ?, **ಉತ** = ಅಥವಾ, **ಅನ್ಯೆ** = ಉಳಿದವರೋ?, **ಅದ್ಯ** = ಇಂದು, **ಸುತಾಯಾಃ** = ದ್ರೌಪದಿಯ, **ಕರಂ** = ಕೈಯನ್ನು, **ಗೃಹ್ಣಾತು** = ಹಿಡಿಯಬೇಕು, **ಇತಿ** = ಎಂದು, **ಈರಿತಃ** = ಹೇಳಿಸಿಕೊಳ್ಳಲ್ಪಟ್ಟ, **ಸಃ ಧರ್ಮಸೂನುಃ ತು** = ಆ ಧರ್ಮರಾಜನಾದರೂ, **ಸರ್ವೆ** = ಎಲ್ಲರು, **ಇಮಂ** = ಈ ದ್ರೌಪದಿಯನ್ನು, (ಗೃಹ್ಣೀಮಃ = ಸ್ವಿಕಾರ ಮಾಡುವೆವು), **ಇತಿ** = ಎಂದು, **ಮೆ** = ನನ್ನ, **ಮನಸಿ** = ಮನಸ್ಸಿನಲ್ಲಿ, **ಪ್ರರೂಢಂ** = ನಿಶ್ಚಯವಾಗಿದೆ.

**ತಾತ್ಪರ್ಯ** :- ಅರ್ಜುನನ ಸಲುವಾಗಿಯೇ ಈ ಎಲ್ಲ ಪ್ರಯತ್ನ ಮಾಡಿದ್ದು ಆದ್ದರಿಂದ ನೀನೋ ಅಥವಾ ಅರ್ಜುನ ಅಥವಾ ಉಳಿದವರು ನನ್ನ ಮಗಳ ಪಾಣಿಗ್ರಹಣವನ್ನು ಇಂದು ಮಾಡಬೇಕೆಂದು ದ್ರುಪದನು ಹೇಳಿದನು. ಧರ್ಮರಾಜನು ನಾವೆಲ್ಲರೂ ಇವಳ ಪಾಣಿಗ್ರಹಣವನ್ನು ಮಾಡುತ್ತೇವೆ ಎಂದು ತನ್ನ ಮನಸ್ಸಿನ ನಿಶ್ಚಯವನ್ನು ಹೇಳಿದನು.

**ನಾತ್ರ ಪ್ರಮಾ ಮಮ ಹೃದಿ ಪ್ರತಿಭಾತ್ಯಥಾಪಿ**
**ಧರ್ಮಾಚಲಾ ಮಮ ಮತಿರ್ಹಿ ತದೇವ ಮಾನಮ್ ।**

ಇತ್ಯುಕ್ತವತ್ಯಪಿ ಸಹೈವ ಸುತೇನ ರಾಜಾ
ನೈವೈಚ್ಛದತ್ರ ಭಗವಾನಗಮಚ್ಚ ಕೃಷ್ಣಃ ॥ ೧೫೨ ॥

ಪದಚ್ಛೇದ :- ನ, ಅತ್ರ, ಪ್ರಮಾ, ಮಮ, ಹೃದಿ, ಪ್ರತಿಭಾತಿ, ಅಥಾಪಿ, ಧರ್ಮಾಚಲಾ, ಮಮ, ಮತಿಃ, ಹಿ, ತತ್, ಏವ, ಪ್ರಮಾಣಂ, ಇತಿ, ಉಕ್ತವತಿ, ಅಪಿ, ಸಹ, ಏವ, ಸುತೇನ, ರಾಜಾ, ನ, ಏವ, ಐಚ್ಛತ್, ಅತ್ರ, ಭಗವಾನ್, ಅಗಮತ್, ಚ, ಕೃಷ್ಣಃ।

ಅರ್ಥ :- ಅತ್ರ = ಈ ವಿಷಯದಲ್ಲಿ, ಪ್ರಮಾ = ಪ್ರಮಾಣವು, ಮಮ = ನನ್ನ, ಹೃದಿ = ಮನಸ್ಸಿನಲ್ಲಿ, ನ ಪ್ರತಿಭಾತಿ = ತೋರುತ್ತಿಲ್ಲ, ಅಥಾಪಿ = ಆದರೂ, ಧರ್ಮಾಚಲಾ = ಧರ್ಮದಲ್ಲಿ ಅಚಲನಾದ, ಮಮ = ನನ್ನ, ಮತಿಃ = ಬುದ್ಧಿಯು, ತತ್ ಏವ = ಆ ಬುದ್ಧಿಯೇ, ಪ್ರಮಾಣಂ = ಪ್ರಮಾಣವು, ಇತಿ = ಎಂದು, ಉಕ್ತವತಿ ಅಪಿ = ಹೇಳಿದರೂ ಕೂಡ, ಸುತೇನ = ಮಗನಾದ ಧೃಷ್ಟದ್ಯುಮ್ನನಿಂದ, ಸಹ ಏವ = ಕೂಡಿಕೊಂಡು, ರಾಜಾ = ರಾಜನು, ನ ಏವ ಐಚ್ಛತ್ = ಅಪೇಕ್ಷಿಸಲಿಲ್ಲ, ಅತ್ರ = ಅಲ್ಲಿಗೆ, ಭಗವಾನ್ = ಪೂಜ್ಯನಾದ, ಕೃಷ್ಣಃ ಚ = ವೇದವ್ಯಾಸರು, ಅಗಮತ್ = ಬಂದರು.

ತಾತ್ಪರ್ಯ :- ಐದು ಜನರು ಮದುವೇ ಮಾಡಿಕೊಳ್ಳುವದರಲ್ಲಿ ಪ್ರಮಾಣ ಏನು ಎಂಬುದು ತಿಳಿದಿಲ್ಲ ಆದರೆ. ಧರ್ಮದಲ್ಲಿ ನಿಶ್ಚಲವಾದ ನನ್ನ ಬುದ್ಧಿ ಇಲ್ಲಿ ಪ್ರಮಾಣ ಎಂದು ಧರ್ಮರಾಜನು ಹೇಳಿದನು. ಇದಕ್ಕೆ ಮಗ ಮತ್ತು ಅಪ್ಪ (ದ್ರುಪದ)ರು ಒಪ್ಪಲಿಲ್ಲ ಆ ಸಂದರ್ಭಕ್ಕೆ ಸರಿಯಾಗಿ ಶ್ರೀಕೃಷ್ಣನು ಅಲ್ಲಿಗೆ ಬಂದನು.

ವ್ಯಾಸಂ ತಮೀಕ್ಷ್ಯ ಭಗವಂತಮಗಣ್ಯಪೂರ್ಣ-
ನಿತ್ಯಾವ್ಯಯಾತ್ಮಗುಣಮಾಶು ಸಮಸ್ತ ಏವ ।
ನತ್ವಾಽಭಿಪೂಜ್ಯ ವರಪೀಠಗತಸ್ಯ ಚಾಽಜ್ಞಾ-
ಮಾದಾಯ ಚೋಪವಿವಿಶುಃ ಸಹಿತಾಸ್ತದಂತೇ ॥ ೧೫೩ ॥

ಪದಚ್ಛೇದ :- ವ್ಯಾಸಂ, ತಂ, ವೀಕ್ಷ್ಯ, ಭಗವಂತಂ, ಅಗಣ್ಯ ಪೂರ್ಣನಿತ್ಯಾವ್ಯಯಾತ್ಮಗುಣಂ, ಆಶು, ಸಮಸ್ತಃ, ಏವ, ನತ್ವಾ, ಅಭಿಪೂಜ್ಯ, ವರಪೀಠಗತಸ್ಯ, ಚ, ಆಜ್ಞಾಂ, ಆದಾಯ, ಚ, ಉಪವಿವಿಶುಃ, ಸಹಿತಾಃ, ತದಂತೆ।

**ಅರ್ಥ** :- **ಭಗವಂತಂ** = ಪೂಜ್ಯನಾದ, **ಅಗಣ್ಯಪೂರ್ಣ ನಿತ್ಯಾವ್ಯಯಾತ್ಮಗುಣಂ** = ಅನಂತ, ಪರಿಪೂರ್ಣ, ಅವ್ಯಯ ಆದ ಸ್ವರೂಪ ಭೂತವಾದ ಗುಣಗಳಿಂದ ಕೂಡಿದ, **ತಂ** = ಆ, **ವ್ಯಾಸಂ** = ವೇದವ್ಯಾಸ ದೇವರನ್ನು, **ಈಕ್ಷ್ಯ** = ನೋಡಿ, **ಆಶು** = ಬೇಗನೆ, **ಸಮಸ್ತಃ ಏವ** = ಎಲ್ಲರೂ, **ನತ್ವಾ** = ನಮಸ್ಕಾರ ಮಾಡಿ, **ಅಭಿಪೂಜ್ಯ** = ಪೂಜಿಸಿ, **ವರಪೀಠಗತಸ್ಯ** = ಉತ್ತಮ ಪೀಠದಲ್ಲಿ ಕುಳಿತಿರುವ ವೇದವ್ಯಾಸದೇವರ, **ಆಜ್ಞಾಂ** = ಆಜ್ಞೆಯನ್ನು, **ಆದಾಯ** = ತೆಗೆದುಕೊಂಡು, **ತದಂತೆ** = ವೇದವ್ಯಾಸರ ಬಳಿ, **ಸಹಿತಾಃ ಸಂತಃ** = ಜೊತೆಯಾಗಿ, **ಉಪವಿವಿಶುಃ** = ಕುಳಿತುಕೊಂಡರು.

**ತಾತ್ಪರ್ಯ** :- ಗುಣಪರಿಪೂರ್ಣನಾದ ಭಗವಾನ್ ವೇದವ್ಯಾಸರನ್ನು ಎಲ್ಲರು ಎದ್ದು ನಿಂತು ನಮಸ್ಕರಿಸಿ ಗೌರವಿಸಿದರು. ಬಳಿಕ ಆಸನದಲ್ಲಿ ಕುಳಿತ ವೇದವ್ಯಾಸದೇವರ ಆಜ್ಞೆಯನ್ನು ಪಡೆದು ಜೊತೆಯಲ್ಲಿ ತಮ್ಮ ತಮ್ಮ ಆಸನಗಳಲ್ಲಿ ಎಲ್ಲರೂ ಕುಳಿತರು.

**ಕೃಷ್ಣಸ್ತದಾಽಽಹ ನೃಪತಿಂ ಪ್ರತಿದೇಹಿ ಕನ್ಯಾಂ**
**ಸರ್ವೇಭ್ಯ ಏವ ವೃಷವಾಯುಪುರಂದರಾ ಹಿ ।**
**ನಾಸತ್ಯದಸ್ರಸಹಿತಾ ಇಮ ಏವ ಇಂದ್ರಾಃ**
**ಪೂರ್ವೇ ಚ ಸಂಪ್ರತಿತನಶ್ಚ ಹರೇರ್ಹಿ ಪಶ್ಚಾತ್ ॥ ೧೫೪ ॥**

**ಪದಚ್ಛೇದ** :- ಕೃಷ್ಣಃ, ತದಾ, ಆಹ, ನೃಪತಿಂ, ಪ್ರತಿ, ದೇಹಿ, ಕನ್ಯಾಂ, ಸರ್ವೇಭ್ಯಃ, ಏವ, ವೃಷವಾಯುಪುರಂದರಾಃ, ಹಿ, ನಾಸತ್ಯದಸ್ರಸಹಿತಾಃ, ಇಮೇ, ಏವ, ಇಂದ್ರಾಃ, ಪೂರ್ವೇ, ಚ, ಸಂಪ್ರತಿತನಃ, ಚ, ಹರೇಃ, ಹಿ, ಪಶ್ಚಾತ್ ।

**ಅರ್ಥ** :- **ತದಾ** = ಆಗ, **ಕೃಷ್ಣಃ** = ವೇದವ್ಯಾಸ ದೇವರು, **ಸರ್ವೇಭ್ಯಃ ಏವ** = ಎಲ್ಲರಿಗೂ, **ಕನ್ಯಾಂ** = ಮಗಳನ್ನು, **ಪ್ರತಿದೇಹಿ** = ಕೊಡು, **ನಾಸಸ್ಯದಸ್ರಸಹಿತಾಃ** = ಅಶ್ವಿನೀದೇವತೆಗಳಿಂದು ಕೂಡಿದ, **ವೃಷವಾಯು ಪುರಂದರಾಃ** = ಯಮ, ವಾಯು, ಇಂದ್ರರು, **ಹಿ** ನಿಶ್ಚಯ **ಇಮೇ** = ಇವರು, **ಹರೇಃ** = ಯಜ್ಞನಾಮಕನಾದ ಶ್ರೀಹರಿಯ, **ಪೂರ್ವೇ** = ಹಿಂದೆ, **ಚ** = ಮತ್ತು, **ಪಶ್ಚಾತ್** = ಮುಂದೆ, **ಸಂಪ್ರತಿತನಃ ಚ** = ಈಗಲೂ ಕೂಡ, **ಇಂದ್ರಾಃ ಏವ** = ಇಂದ್ರರೇ ಆಗಿದ್ದಾರೆ, **ಇತಿ** = ಎಂದು, **ನೃಪತಿಂ** = ದ್ರುಪದರಾಜನಿಗೆ, **ಪ್ರಾಹ** = ಹೇಳಿದನು.

ತಾತ್ಪರ್ಯ :- ವೇದವ್ಯಾಸರು ಹೇ ದ್ರುಪದ ನಿನ್ನ ಮಗಳನ್ನು ಇವರೆಲ್ಲರಿಗೂ ಕೊಟ್ಟು ಮದುವೆ ಮಾಡು ಇವರು ಯಮ, ವಾಯು, ಇಂದ್ರ, ಅಶ್ವಿನೀ ದೇವತೆಗಳು ಇವರು ಯಜ್ಞನಾಮಕ ಹರಿಯ ಹಿಂದೆ ಮುಂದೆ ಈಗಲು ಕೂಡ ಇಂದ್ರರಾಗಿದ್ದಾರೆ ಎಂದು ಹೇಳಿದರು.

ಏಷಾಂ ಸ್ತ್ರಿಯಶ್ಚ ನಿಖಿಲಾ ಅಪಿಚೈಕದೇಹಾಃ
ಪುತ್ರೀ ತವೈವ ನ ತತೋಽತ್ರ ವಿರುದ್ಧತಾ ಹಿ ।
ಇತ್ಯುಕ್ತವತ್ಯಪಿ ಯದಾ ದ್ರುಪದಶ್ಚಕಾರ
ಸಂವಾದಿನೀಂ ನ ಧಿಯಮೇನಮಥಾಽಹ ಕೃಷ್ಣಃ ॥ ೧೫೫ ॥

ಪದಚ್ಛೇದ :- ಏಷಾಂ, ಸ್ತ್ರಿಯಃ, ಚ, ನಿಖಿಲಾಃ, ಅಪಿ, ಚ, ಏಕದೇಹಾಃ, ಪುತ್ರೀ, ತವ, ಏವ, ನ, ತತಃ, ಅತ್ರ, ವಿರುದ್ಧತಾ, ಹಿ, ಇತಿ, ಉಕ್ತವತಿ, ಅಪಿ, ತದಾ, ದ್ರುಪದಃ, ಚಕಾರ, ಸಂವಾದಿನೀಂ, ನ, ಧಿಯಂ, ಏನಂ, ಅಥ, ಆಹ, ಕೃಷ್ಣಃ ।

ಅರ್ಥ :- ಏಷಾಂ ಚ = ಇವರ, ನಿಖಿಲಾಃ = ಎಲ್ಲ, ಸ್ತ್ರಿಯಃ ಅಪಿ = ಸ್ತ್ರೀಯರೂ, ಏಕದೇಹಾಃ = ಒಂದು ದೇಹದಲ್ಲಿ ಸೇರಿ, ತವ = ನಿನ್ನ, ಪುತ್ರೀ ಏವ = ಮಗಳಾಗಿರುವುದು, ತತಃ = ಆದ್ದರಿಂದ, ಅತ್ರ = ಇಲ್ಲಿ, ವಿರುದ್ಧತಾ ನ = ಯಾವ ವಿರೋಧವೂ ಇಲ್ಲ, ಹಿ = ನಿಶ್ಚಯ, ಇತಿ = ಎಂದು, ಉಕ್ತವತಿ ಅಪಿ = ಹೇಳಿದರೂ ಕೂಡ, ತದಾ = ಆಗ, ದ್ರುಪದಃ = ದ್ರುಪದನು, ಸಂವಾದಿನೀಂ = ಸಮ್ಮತಿಯಿಂದ ಕೂಡಿದ, ಧಿಯಂ = ಮನಸ್ಸನ್ನು, ನ ಚಕಾರ = ಮಾಡಲಿಲ್ಲ, ಅಥ = ಅನಂತರ, ಏನಂ = ಈ ದ್ರುಪದನನ್ನು ಕುರಿತು, ಕೃಷ್ಣಃ = ವೇದವ್ಯಾಸರು, ಆಹ = ಹೇಳಿದರು.

ತಾತ್ಪರ್ಯ :- ಇವರೆಲ್ಲರ ಹೆಂಡತಿಯರು ಒಂದು ದೇಹದಲ್ಲಿ ಸೇರಿ ನಿನ್ನ ಮಗಳಾಗಿ ಜನಿಸಿದ್ದಾರೆ, ಆದ್ದರಿಂದ ಈ ಐದುಜನರಿಗೆ ನಿನ್ನ ಮಗಳನ್ನು ಕೊಟ್ಟ ಮದುವೆ ಮಾಡುವುದರಲ್ಲಿ ಏನೂ ವಿರೋಧವಿಲ್ಲ ಎಂದು ವೇದವ್ಯಾಸರು ಹೇಳಿದರೂ. ದ್ರುಪದನು ಸಂಮತಿಯನ್ನು ಸೂಚಿಸಲಿಲ್ಲ ಆಗ ಮತ್ತೆ ವೇದವ್ಯಾಸರು ಮಾತನಾಡಿದರು.

ದಿವ್ಯಂ ಹಿ ದರ್ಶನಮಿದಂ ತವ ದತ್ತಮದ್ಯ
ಪಶ್ಯಾಽಶು ಪಾಂಡುತನಯಾನ್ ದಿವಿ ಸಂಸ್ಥಿತಾಂಸ್ತ್ವಮ್ ।

**ಏತಾಂ ಚ ತೇ ದುಹಿತರಂ ಸಹ ತೈಹ ಪೃಥಕ್‌ಸ್ಥಾಂ**
**ತಲ್ಲಕ್ಷಣೈಃ ಸಹ ತತಃ ಕುರು ತೇ ಯಥೇಷ್ಟಮ್ ॥ ೧೫೬ ॥**

**ಪದಚ್ಛೇದ** :- ದಿವ್ಯಂ, ಹಿ, ದರ್ಶನಂ, ಇದಂ, ತವ, ದತ್ತಂ, ಅದ್ಯ, ಪಶ್ಯ, ಆಶು, ಪಾಂಡುತನಯಾನ್, ದಿವಿ, ಸಂಸ್ಥಿತಾನ್, ತ್ವಂ, ಏತಾಂ, ಚ, ತೇ, ದುಹಿತರಂ, ಸಹ, ತೈಃ, ಪೃಥಕ್ಸ್ಥಾಂ, ತಲ್ಲಕ್ಷಣೈಃ, ಸಹ, ತತಃ, ಕುರು, ತೇ, ಯಥೇಷ್ಟಮ್ ।

**ಅರ್ಥ** :- ತವ = ನಿನಗೆ, ಇದಂ = ಈ ಯಾವ, ದಿವ್ಯಂ = ದಿವ್ಯವಾದ, ದರ್ಶನಂ = ಚಕ್ಷುಸ್ಸು, ದತ್ತಂ = ಕೊಡಲ್ಪಟ್ಟಿದೆ, ಅದ್ಯ = ಈಗ, ತ್ವಂ = ನೀನು, ದಿವಿ = ಆಕಾಶದಲ್ಲಿ, ಸಂಸ್ಥಿತಾನ್ = ನಿಂತಿರುವ, ಪಾಂಡುತನಯಾನ್ = ಪಾಂಡವರನ್ನು, ಆಶು = ಬೇಗನೆ, ಪಶ್ಯ = ನೋಡು, ತೇ = ನಿನ್ನ, ಏತಾಂ = ಈ, ದುಹಿತರಂ = ಮಗಳು, ತೈಃ = ಅವರಿಂದ, ಸಹ = ಕೂಡಿಕೊಂಡು, ತಲ್ಲಕ್ಷಣೈಃ = ಶಚ್ಯಾದಿಗಳ ಲಕ್ಷಣಗಳಿಂದ, ಸಹ = ಕೂಡಿಕೊಂಡು, ಪೃಥಕ್ಸ್ಥಾಂ = ಪ್ರತ್ಯೇಕ ಪ್ರತ್ಯೇಕವಾಗಿ ಇರುವುದನ್ನು, ಪಶ್ಯ = ನೋಡು, ತತಃ = ಅನಂತರ, ತೇ = ನಿನಗೆ, ಯಥೇಷ್ಟಂ = ಇಷ್ಟ ಬಂದ ಹಾಗೆ, ಕುರು = ಮಾಡು.

**ತಾತ್ಪರ್ಯ** :- ನಿನಗೆ ದಿವ್ಯವಾದ ಕಣ್ಣನ್ನು ಕೊಟ್ಟಿದ್ದೇನೆ ಆಕಾಶದಲ್ಲಿ ಇರುವ ಪಾಂಡವರನ್ನು ನೋಡು ಅವರ ಜೊತೆಯಲ್ಲಿ ಶಚ್ಯಾದಿ ಲಕ್ಷಣಗಳಿಂದ ಕೂಡಿಕೊಂಡು ಪ್ರತ್ಯೇಕ ಪ್ರತ್ಯೇಕವಾಗಿ ಇರುವ ನಿನ್ನ ಮಗಳನ್ನು ನೋಡು. ಅನಂತರ ನಿನ್ನ ಮನಸ್ಸಿಗೆ ಬಂದ ಹಾಗೆ ಮಾಡು ಎಂದು ವೇದವ್ಯಾಸರು ದ್ರುಪದನಿಗೆ ಹೇಳಿದರು.

**ಇತ್ಯುಕ್ತವಾಕ್ಯಮನು ತಾನ್ ಸ ದದರ್ಶ ರಾಜಾ**
**ಕೃಷ್ಣಪ್ರಸಾದಬಲತೋ ದಿವಿ ತಾದೃಶಾಂಶ್ಚ ।**
**ಏತಾನ್ ನಿಶಾಮ್ಯ ಚರಣೌ ಜಗದೀಶಿತುಶ್ಚ**
**ಭೀತೋ ಜಗಾಮ ಶರಣಂ ತದನಾದರೇಣ ॥ ೧೫೭ ॥**

**ಪದಚ್ಛೇದ** :- ಇತಿ, ಉಕ್ತವಾಕ್ಯಂ, ಅನು, ತಾನ್, ಸಃ, ದದರ್ಶ, ರಾಜಾ, ಕೃಷ್ಣಪ್ರಸಾದಬಲತಃ, ದಿವಿ, ತಾದೃಶಾನ್, ಚ, ಏತಾನ್, ನಿಶಾಮ್ಯ, ಚರಣೌ, ಜಗದೀಶಿತುಃ, ಚ, ಭೀತಃ, ಜಗಾಮ, ಶರಣಂ, ತದನಾದರೇಣ ।

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತವಾಕ್ಯಂ** = ಹೇಳಲ್ಪಟ್ಟ ಮಾತನ್ನು, **ಅನು** = ಅನುಸರಿಸಿ, **ಸಃ** = ಆ, **ರಾಜಾ** = ರಾಜನಾದ ದ್ರುಪದನು, **ಕೃಷ್ಣಪ್ರಸಾದಬಲತಃ** = ವೇದವ್ಯಾಸರ ಅನುಗ್ರಹದ ಬಲದಿಂದ, **ತಾನ್** = ಅವರನ್ನು, **ದದರ್ಶ** = ನೋಡಿದನು, **ಚ** = ಮತ್ತು, **ತಾದೃಶಾನ್** = ಅಂತಹ, **ಏತಾನ್** = ಇವರನ್ನು, **ದಿವಿ** = ದೇವ ಲೋಕದಲ್ಲಿ, **ನಿಶಾಮ್ಯ** = ಕಂಡು, **ಚ** = ಮತ್ತು, **ತದನಾದರೇಣ** = ವೇದವ್ಯಾಸರಲ್ಲಿ ಅನಾದರದಿಂದ, **ಭೀತಃ** = ಭಯಗೊಂಡ, **ಸಃ** = ದ್ರುಪದನು, **ಜಗದೀಶಿತುಃ** = ಜಗತ್ತಿಗೆ ಒಡೆಯನಾದ ಶ್ರೀಕೃಷ್ಣನ, **ಚರಣೌ** = ಎರಡು ಕಾಲುಗಳಿಗೆ, **ಶರಣಂ** = ಮೊರೆಯನ್ನು, **ಜಗಾಮ** = ಹೊಂದಿದನು.

**ತಾತ್ಪರ್ಯ** :- ವೇದವ್ಯಾಸರ ಮಾತಿನಿಂದ ಅನುಗ್ರಹದಿಂದ ಎಲ್ಲ ಪಾಂಡವರನ್ನು ನೋಡಿ ಮೊದಲಿಗೆ ವೇದವ್ಯಾಸರ ಬಗ್ಗೆ ತೋರಿದ ಅನಾದರದಿಂದಾಗಿ ಭಯಗೊಂಡು ದ್ರುಪದನು ಜಗದೊಡೆಯನಾದ ವಾಸಿಷ್ಠ ಕೃಷ್ಣನನ್ನು ಶರಣುಹೊಂದಿದನು.

**ದತ್ವಾಽಭಯಂ ಸ ಭಗವಾನ್ ದ್ರುಪದಸ್ಯ ಕಾರ್ಯೇ**
**ತೇನೋಮಿತಿ ಸ್ಮ ಕಥಿತೇ ಸ್ವಯಮೇವ ಸರ್ವಾಮ್ ।**
**ವೈವಾಹಿಕೀಂ ಕೃತಿಮಥ ವ್ಯದಧಾಚ್ಚ ಧೌಮ್ಯ-**
**ಯುಕ್ತಃ ಕ್ರಮೇಣ ಜಗೃಹುರ್ನಿಖಿಲಾಶ್ಚ ಪಾಣಿಮ್ ॥ ೧೫೮ ॥**

ಪದಚ್ಛೇದ :- ದತ್ವಾ, ಅಭಯಂ, ಸಃ, ಭಗವಾನ್, ದ್ರುಪದಸ್ಯ, ಕಾರ್ಯೇ, ತೇನ, ಓಂ, ಇತಿ, ಸ್ಮ, ಕಥಿತೆ, ಸ್ವಯಂ, ಏವ, ಸರ್ವಾಂ, ವೈವಾಹಿಕೀಂ, ಕೃತಿಂ, ಅಥ, ವ್ಯದಧಾತ್, ಚ, ಧೌಮ್ಯಯುಕ್ತಃ, ಕ್ರಮೇಣ, ಜಗೃಹುಃ, ನಿಖಿಲಾನ್, ಚ, ಪಾಣಿಂ ।

**ಅರ್ಥ** :- **ಸಃ** = ಆ, **ಭಗವಾನ್** = ವೇದವ್ಯಾಸರು, **ಅಭಯಂ** = ಅಭಯವನ್ನು, **ದತ್ವಾ** = ಕೊಟ್ಟು, **ದ್ರುಪದಸ್ಯ** = ದ್ರುಪದನ, **ಕಾರ್ಯೇ** = ಕಾರ್ಯದಲ್ಲಿ, **ತೇನ** = ವೇದವ್ಯಾಸ ದೇವರಿಂದ, **ಓಂ** = (ಓಂ), **ಇತಿ** = ಎಂದು, **ಕಥಿತೆ ಸತಿ** = ಹೇಳಲು, **ಸ್ವಯಂ ಏವ** = ಸ್ವಯಂ ರಾಜನೇ, **ಸರ್ವಾಂ** = ಎಲ್ಲ, **ವೈವಾಹಿಕೀಂ** = ವಿವಾಹ ಸಂಬಂಧಿಯಾದ, **ಕೃತಿಂ** = ಕೆಲಸವನ್ನು, **ವ್ಯದಧಾತ್** = ಮಾಡಿದನು, **ಅಥ** = ಅನಂತರ, **ಧೌಮ್ಯಯುಕ್ತಾಃ** =

ಧೌಮ್ಯರಿಂದ ಕೂಡಿ, ಕ್ರಮೇಣ = ಕ್ರಮವಾಗಿ, ನಿಖಿಲಾನ್ ಚ = ಎಲ್ಲರೂ ಪಾಣಿಂ = ಕೈಯನ್ನು, ಜಗೃಹುಃ = ಹಿಡಿದರು.

ತಾತ್ಪರ್ಯ :- ಭಗವಂತನು ದ್ರುಪದನಿಗೆ ಅಭಯವನ್ನು ಕೊಟ್ಟು ಮುಂದಿನ ಎಲ್ಲ ಕಾರ್ಯಗಳಿಗೆ ಒಪ್ಪಿಗೆಯನ್ನು ಸೂಚಿಸಿದರು. ಅನಂತರ ರಾಜ ದ್ರುಪದ ಎಲ್ಲ ವೈವಾಹಿಕ ಕರ್ಮಗಳನ್ನು ಮಾಡಿದನು. ಅನಂತರ ಪಾಂಡವರು ಕ್ರಮವಾಗಿ ಒಬ್ಬರಾದ ಮೇಲೆ ಒಬ್ಬರು ಪಾಣಿಗ್ರಹಣ ಮಾಡಿದರು.

**ಪಾಂಚಾಲಕೇಷು ಚ ಮಹೋತ್ಸವ ಆಸ ರಾಜಾ**
**ತುಷ್ಟೋಭವತ್ ಸಹ ಸುತೈಃ ಸ್ವಜನೈಶ್ಚ ಸರ್ವೈಃ ।**
**ಪೌರೈಶ್ಚ ಜಾನಪದಿಕೈಶ್ಚ ಯಥೈವ ರಾಮೇ**
**ದತ್ವಾ ಸುತಾಂ ಜನಕ ಆಪ ಮುದಂ ತತೋಽನು ॥ ೧೫೯ ॥**

**ಪದಚ್ಛೇದ :- ಪಾಂಚಾಲಕೇಷು, ಚ, ಮಹೋತ್ಸವಃ, ಆಸ, ರಾಜಾ, ತುಷ್ಟಃ, ಅಭವತ್, ಸಹ, ಸುತೈಃ, ಚ, ನಿಜೈಃ, ಚ, ಸರ್ವೈಃ, ಪೌರೈಃ, ಚ, ಜಾನಪದಿಕೈಃ, ಚ, ಯಥಾ, ಏವ, ರಾಮೇ, ದತ್ವಾ, ಸುತಾಂ, ಜನಕಃ, ಆಪ, ಮುದಂ, ತತಃ, ಅನು ।**

ಅರ್ಥ :- ಪಾಂಚಾಲಕೇಷು ಚ = ಪಾಂಚಾಲದೇಶದಲ್ಲಿ, ಮಹೋತ್ಸವಃ = ಉತ್ಸವವು, ಆಸ = ನಡೆಯಿತು, ರಾಜಾ = ರಾಜನಾದ ದ್ರುಪದನು, ಸುತೈಃ ಚ = ಮಕ್ಕಳಿಂದಲೂ, ನಿಜೈಃ ಚ = ಬಂಧುಗಳಿಂದಲೂ, ಚ = ಮತ್ತು, ಸರ್ವೈಃ = ಎಲ್ಲ, ಪೌರೈಃ = ಪಟ್ಟಣಿಗರಿಂದಲೂ, ಜಾನಪದೈಃ ಚ = ದೇಶವಾಸಿಗಳಿಂದಲೂ, ಸಹ = ಕೂಡಿಕೊಂಡು, ಯಥಾ = ಹೇಗೆ, ರಾಮೇ = ರಾಮನಿಗೆ, ಸುತಾಂ = ಮಗಳಾದ ಸೀತೆಯನ್ನು, ದತ್ವಾ = ಕೊಟ್ಟು, ಜನಕಃ = ಜನಕನು, ಮುದಂ = ಸಂತೋಷವನ್ನು, ಆಪ = ಹೊಂದಿದನೋ, ತತಃ = ಜನಕನಿಂದ, ಅನು = ಅನುಸರಿಸಿ, ತಥಾ = ಹಾಗೆ, ತುಷ್ಟಃ = ಸಂತುಷ್ಟನು, ಅಭವತ್ = ಆದನು.

ತಾತ್ಪರ್ಯ :- ಪಾಂಚಾಲದೇಶದಲ್ಲಿ ವಿವಾಹೋತ್ಸವವು ಆಯಿತು. ಅದರಲ್ಲಿ ತನ್ನ ಮಕ್ಕಳು, ಬಂಧುಗಳು, ಪಟ್ಟಣಿಗರು, ದೇಶಿಯರುಗಳಿಂದ ಕೂಡಿಕೊಂಡು ದ್ರುಪದನು ಸೀತೆಯನ್ನು ರಾಮನಿಗೆ ಕೊಟ್ಟು ಜನಕರಾಜನು ಸಂತೋಷಪಟ್ಟಂತೆ ಸಂತೋಷಪಟ್ಟನು.

ಉದ್ವಾಹ್ಯ ತತ್ರ ನಿವಸತ್ಸು ಚ ಪಾಂಡವೇಷು
ಶ್ರುತ್ವೈವ ರಾಮಸಹಿತಃ ಸಹ ಯಾದವೈಶ್ಚ ।
ಆದಾಯ ಪಾರಿಬರ್ಹಂ ಬಹುಲಂ ಸ ಕೃಷ್ಣ
ಆಯಾನ್ಮುದೈವ ಪೃಥಯಾ ಸಹಿತಾಂಶ್ಚ ಪಾರ್ಥಾನ್ ॥ ೧೬೦ ॥

ಪದಚ್ಛೇದ :- ಉದ್ವಾಹ್ಯ, ತತ್ರ, ನಿವಸತ್ಸು, ಚ, ಪಾಂಡವೇಷು, ಶ್ರುತ್ವಾ, ಏವ, ರಾಮಸಹಿತಃ, ಸಹ, ಯಾದವೈಃ, ಚ, ಆದಾಯ, ಪಾರಿಬರ್ಹಂ, ಬಹುಲಂ ಸಃ, ಕೃಷ್ಣಃ, ಆಯಾತ್, ಮುದಾ, ಏವ, ಪೃಥಯಾ, ಸಹಿತಾನ್, ಚ, ಪಾರ್ಥಾನ್ ।

ಅರ್ಥ :- ಪಾಂಡವೇಷು = ಪಾಂಡವರು, ಉದ್ವಾಹ್ಯ = ಮದುವೆ ಮಾಡಿಕೊಂಡು, ತತ್ರ ಚ = ಅಲ್ಲಿಯೇ, ನಿವಸತ್ಸು = ಇರಲು, ಶೃತ್ವಾ ಏವ = ಕೇಳಿ, ರಾಮಸಹಿತಃ = ಬಲರಾಮನಿಂದ ಕೂಡಿದ, ಚ = ಮತ್ತು, ಯಾದವೈಃ = ಯಾದವರಿಂದ ಕೂಡಿದ, ಸಃ = ಆ, ಕೃಷ್ಣಃ = ಕೃಷ್ಣನು, ಬಹುಲಂ = ಬಹಳ, ಪಾರಿಬರ್ಹಂ = ಉಡುಗೊರೆಗಳನ್ನು, ಆದಾಯ = ತಂದುಕೊಂಡು, ಪೃಥಯಾ = ಕುಂತಿಯಿಂದ, ಸಹಿತಾನ್ = ಕೂಡಿದ, ಪ್ರಾರ್ಥಾನ್ ಚ = ಪಾಂಡವರನ್ನು ಕುರಿತು, ಮುದಾ ಏವ = ಸಂತೋಷದಿಂದ, ಆಯಾತ್ = ಬಂದನು.

ತಾತ್ಪರ್ಯ :- ಪಾಂಡವರು ವಿವಾಹವಾಗಿ ಅಲ್ಲಿಯೇ ವಾಸ ಮಾಡುತ್ತಿರಲು ಸುದ್ದಿಯನ್ನು ತಿಳಿದ ಶ್ರೀಕೃಷ್ಣನು ಬಲರಾಮ ಮತ್ತು ಯಾದವರಿಂದ ಕೂಡಿಕೊಂಡು ಬಹಳ ಉಡುಗೊರೆಗಳನ್ನು ತೆಗೆದುಕೊಂಡು ಕುಂತೀಸಮೇತರಾದ ಪಾಂಡವರ ಬಳಿ ಬಂದನು.

ದೃಷ್ಟ್ವೈವ ತಂ ಮುಮುದುರಾಶು ಕುರುಪ್ರವೀರಾ
ಆಶ್ಲಿಷ್ಯ ಕೃಷ್ಣಮಥ ನೇಮುರಸೌ ಚ ಕೃಷ್ಣಾಮ್ ।
ದೃಷ್ಟ್ವಾ ಪ್ರದಾಯ ಗೃಹಯೋಗ್ಯಸಮಸ್ತಭಾಂಡಂ
ಸೌವರ್ಣಮೇಭ್ಯ ಉರುಭೂಷಣಮಚ್ಯುತೋಽದಾತ್ ॥ ೧೬೧ ॥

ಪದಚ್ಛೇದ :- ದೃಷ್ಟ್ವಾ, ಏವ, ತಂ, ಮುಮುದುಃ, ಆಶು, ಕುರುಪ್ರವೀರಾಃ, ಆಶ್ಲಿಷ್ಯ, ಕೃಷ್ಣಂ, ಅಥ, ನೇಮುಃ, ಅಸೌ, ಚ, ಕೃಷ್ಣಂ, ದೃಷ್ಟ್ವಾ, ಪ್ರದಾಯ, ಗೃಹಯೋಗ್ಯಸಮಸ್ತಭಾಂಡಂ, ಸೌವರ್ಣಂ, ಏಭ್ಯಃ, ಉರುಭೂಷಣಂ, ಅಚ್ಯುತಃ, ಅದಾತ್ ।

**ಅರ್ಥ** :- **ಅಥ** = ಅನಂತರ, **ಕೃಷ್ಣಂ** = ಶ್ರೀಕೃಷ್ಣನನ್ನು, **ದೃಷ್ಟ್ವಾ ಏವ** = ನೋಡಿಯೇ, **ಕುರುಪ್ರವೀರಾಃ** = ಪಾಂಡವರು, **ಮುಮುದುಃ** = ಆನಂದಿಸಿದರು, **ಆಶು** = ಬೇಗನೆ, **ತಂ** = ಅವನನ್ನು, **ಆಶಿಷ್ಯ** = ಆಲಂಗಿಸಿ, **ನೇಮುಃ** = ನಮಸ್ಕರಿಸಿದರು, **ಅಸೌ ಚ ಅಚ್ಯುತಃ** = ಶ್ರೀಕೃಷ್ಣನೂ, **ಕೃಷ್ಣಾಂ** = ದ್ರೌಪದಿಯನ್ನು, **ದೃಷ್ಟ್ವಾ** = ನೋಡಿ **ಗೃಹಯೋಗ್ಯಸಮಸ್ತಭಾಂಡಂ** = ಮನೆಗೆ ಉಪಯುಕ್ತವಾದ ಎಲ್ಲ ಪಾತ್ರೆಗಳನ್ನು, **ಪ್ರದಾಯ** = ಕೊಟ್ಟು, **ಏಭ್ಯಃ** = ಈ ಪಾಂಡವರಿಗೆ, **ಸೌವರ್ಣಂ** = ಬಂಗಾರದ, **ಉರುಭೂಷಣಂ** = ಶ್ರೇಷ್ಠ ಆಭರಣಗಳನ್ನು, **ಅದಾತ್** = ಕೊಟ್ಟನು.

**ತಾತ್ಪರ್ಯ** :- ಅನಂತರ ಶ್ರೀಕೃಷ್ಣನನ್ನು ನೋಡಿ ಪಾಂಡವರು ಸಂತೋಷಪಟ್ಟರು. ಅನಂತರ ಅವನನ್ನು ಅಪ್ಪಿ ನಮಸ್ಕರಿಸಿದರು. ಶ್ರೀಕೃಷ್ಣನು ದ್ರೌಪದಿಯನ್ನು ನೋಡಿ ಮನೆಗೆ ಯೋಗ್ಯವಾದ ಎಲ್ಲ ಪಾತ್ರೆಗಳನ್ನು ಕೊಟ್ಟು ಪಾಂಡವರಿಗೆ ಶ್ರೇಷ್ಠವಾದ ಬಂಗಾರದ ಆಭರಣಗಳನ್ನು ಕೊಟ್ಟನು.

**ದೇವಾಂಗಯೋಗ್ಯಶುಭಕುಂಡಲಹಾರಮೌಲಿ-**
**ಕೇಯೂರವಸ್ತ್ರಸಹಿತಾನ್ಯುರುಭೂಷಣಾನಿ ।**
**ಷಣ್ಣಾಂ ಪೃಥಕ್‌ಪೃಥಗದಾತ್ ಪೃಥಗೇವ ಯೋಗ್ಯಾ-**
**ನ್ಯನ್ಯದ್ ದದಾವಥ ಪಿತೃಷ್ವಸುರಾತ್ಮಯೋಗ್ಯಮ್ ॥ ೧೬೨ ॥**

ಪದಚ್ಛೇದ :- **ದೇವಾಂಗಯೋಗ್ಯ ಶುಭಕುಂಡಲಹಾರಮೌಲಿಕೇಯೂರವಸ್ತ್ರ ಸಹಿತಾನಿ, ಉರುಭೂಷಣಾನಿ, ಷಣ್ಣಾಂ, ಪೃಥಕ್, ಪೃಥಕ್, ಅಧಾತ್, ಪೃಥಗ್, ಏವ, ಯೋಗ್ಯಾನಿ, ಅನ್ಯತ್, ದದೌ, ಅಥ, ಪಿತೃಷ್ವಸುಃ, ಆತ್ಮಯೋಗ್ಯಂ।**

**ಅರ್ಥ** :- **ದೇವಾಂಗಯೋಗ್ಯಶುಭಕುಂಡಲಹಾರಮೌಲಿಕೇಯೂರ ವಸ್ತ್ರಸಹಿತಾನಿ** = ದೇವತೆಗಳ ದೇಹಕ್ಕೆ ಯೋಗ್ಯವಾದ ಮಂಗಲಕರವಾದ ಕರ್ಣಕುಂಡಲ, ಹಾರ, ಕಿರೀಟ, ಕೇಯೂರ, ವಸ್ತ್ರಗಳಿಂದ ಕೂಡಿದ, **ಪೃತಕ್ ಯೋಗ್ಯಾನಿ ಏವ** = ಪ್ರತ್ಯೇಕವಾಗಿ ಯೋಗ್ಯವಾದ, **ಉರುಭೂಷಣಾನಿ** = ಅನೇಕ ಆಭರಣಗಳನ್ನು, **ಷಣ್ಣಾಂ** = ಆರು ಜನರಿಗೆ, **ಪೃಥಕ್ ಪೃಥಕ್** = ಪ್ರತ್ಯೇಕ ಪ್ರತ್ಯೇಕವಾಗಿ, **ಅಧಾತ್** = ಕೊಟ್ಟನು, **ಅಥ** = ಅನಂತರ, **ಪಿತೃಷ್ವಸುಃ** = ಸೋದರತ್ತೆಯಾದ ಕಂತಿಗೂ, **ಆತ್ಮಯೋಗ್ಯ** = ಅವಳಿಗೆ ಯೋಗ್ಯವಾದ, **ಅನ್ಯತ್** = ಬೇರೆ ಆಭರಣವನ್ನು, **ದದೌ** = ಕೊಟ್ಟನು.

ತಾತ್ಪರ್ಯ :- ಶ್ರೀಕೃಷ್ಣನು ದೇವತೆಗಳಿಗೆ ಯೋಗ್ಯವಾದ ಮಂಗಲಕರವಾದ ಕರಣಕುಂಡಲ, ಹಾರ, ಕಿರೀಟ, ಕೇಯೂರ, ವಸ್ತ್ರಗಳಿಂದ ಕೂಡಿದ ಅನೇಕ ಆಭರಣಗಳನ್ನು ಅವರವರಿಗೆ ಯೋಗ್ಯವಾದದ್ದನ್ನು ಪ್ರತ್ಯೇಕ ಪ್ರತ್ಯೇಕವಾಗಿಕೊಟ್ಟ ತನ್ನ ಸೋದರತ್ತೆಯಾದ ಕುಂತಿಗೂ ಪ್ರತ್ಯೇಕವಾಗಿ ಅವಳಿಗೆ ಯೋಗ್ಯವಾದ ಆಭರಣವನ್ನು ಕೊಟ್ಟನು.

**ರತ್ನಾನಿ ಗೋಗಜತುರಂಗರಥಾನ್ ಸುವರ್ಣ-**
**ಭಾರಾನ್ ಬಹೂನಪಿ ದದಾವಥ ಚಾಽಶಿಷೋಽಗ್ರ್ಯಾಃ ।**
**ವ್ಯಾಸೋಽಪ್ಯದಾದಿಹ ಪರತ್ರ ಚ ಪಾರ್ಷತೋಽಪಿ**
**ಭೂಷಾರಥಾಶ್ವಗಜರತ್ನಸುಕಾಂಚನಾನಿ ॥ ೧೬೩ ॥**

**ಪದಚ್ಛೇದ :-** ರತ್ನಾನಿ, ಗೋಗಜತುರಂಗರಥಾನ್, ಸುವರ್ಣಭಾರಾನ್, ಬಹೂನಿ, ಅಪಿ, ದದೌ, ಅಥ, ಚ, ಆಶಿಷಃ, ಅಗ್ರ್ಯಾಃ, ವ್ಯಾಸಃ, ಅಪಿ, ಅದಾತ್, ಇಹ, ಪರತ್ರ, ಚ, ಪಾರ್ಷತಃ, ಅಪಿ, ಭೂಷಾರಥಾಶ್ವಗಜರತ್ನಸುಕಾಂಚನಾನಿ ।

**ಅರ್ಥ :-** (ಸಃ = ಕೃಷ್ಣನು), **ಗೋಗಜತುರಂಗರಥಾನ್** = ಗೋವು, ಗಜ, ಕುದುರೆ, ರಥಗಳನ್ನು, **ಬಹೂನಿ** = ನಾನಾ ಬಗೆಯ, **ರತ್ನಾನಿ** = ರತ್ನಗಳನ್ನು, **ಸುವರ್ಣ ಭಾರಾನ್ ಅಪಿ** = ಸುವರ್ಣ ಭಾರಗಳನ್ನು ಸಹ, **ದದೌ** = ಕೊಟ್ಟನು, **ಅಥ** = ಅನಂತರ, **ವ್ಯಾಸಃ ಅಪಿ** = ವೇದವ್ಯಾಸದೇವರು ಕೂಡ, **ಇಹ** = ಇಲ್ಲಿ, **ಪರತ್ರ ಚ** = ಪರತ್ರದಲ್ಲಿ ಕೂಡ, **ಅಗ್ರ್ಯಾ** = ಶ್ರೇಷ್ಠವಾದ, **ಆಶಿಷಃ** = ಆಶಿರ್ವಾದಗಳನ್ನು, **ಅದಾತ್** = ಮಾಡಿದರು, **ಪಾರ್ಷತಃ ಅಪಿ** = ದ್ರುಪದನೂ ಕೂಡ, **ಭೂಷಾರಥಾಶ್ವಗಜರತ್ನಸುಕಾಂಚನಾನಿ** = ಭೂಷಣ, ರಥ, ಕುದುರೆ, ಆನೆ, ರತ್ನ ಹಾಗೂ ಒಳ್ಳೆಯ ಚಿನ್ನಗಳನ್ನು, **ಅದಾತ್** = ಕೊಟ್ಟನು.

ತಾತ್ಪರ್ಯ :- ಶ್ರೀಕೃಷ್ಣನು ಪಾಂಡವರಿಗೆ ಅನೇಕ ರತ್ನಾದಿಗಳನ್ನು ನೀಡಿದ ವೇದವ್ಯಾಸದೇವರು ಇಹ ಪರತ್ರಗಳಲ್ಲಿ ಶ್ರೇಷ್ಠವಾದ ಆಶೀರ್ವಚನವನ್ನು ನೀಡಿದರು. ದ್ರುಪದನು ಶ್ರೀಕೃಷ್ಣನಂತೆ ಭೂಷಣ, ರಥಾದಿ ಉಡುಗೊರೆಯನ್ನು ಕೊಟ್ಟನು.

ದಾಸೀಶ್ಚ ದಾಸಸಹಿತಾಃ ಶುಭರೂಪವೇಷಾಃ
ಸಾಹಸ್ರಶೋ ದದತುರತ್ರ ಹರಿರ್ನೃಪಶ್ಚ ।
ತಾಸಾಂ ವಿಚಿತ್ರವಸನಾನ್ಯುರುರತ್ನಮಾಲಾಃ
ಪ್ರತ್ಯೇಕಶೋ ದದತುರಪ್ಯುರುಭೂಷಣಾನಿ ॥ ೧೬೪ ॥

ಪದಚ್ಛೇದ :- ದಾಸೀಃ, ಚ, ದಾಸಸಹಿತಾಃ, ಶುಭರೂಪವೇಶಾಃ, ಸಾಹಸ್ರಶಃ, ದದತುಃ, ಅತ್ರ, ಹರಿಃ, ನೃಪಃ, ಚ, ತಾಸಾಂ, ವಿಚಿತ್ರವಸನಾನಿ, ಉರುರತ್ನಮಾಲಾಃ, ಪ್ರತ್ಯೇಕಶಃ, ದದತುಃ, ಅಪಿ, ಉರುಭೂಷಣಾನಿಂ ।

ಅರ್ಥ :- ಶುಭರೂಪವೇಷಾಃ = ಉತ್ತಮವಾದ ವಸ್ತ್ರಾಲಂಕಾರಾದಿ- ಗಳಿಂದ ಅಲಂಕೃತವಾದ ವೇಷವುಳ್ಳ, ದಾಸಸಹಿತಾಃ = ದಾಸರಿಂದ ಕೂಡಿದ, ಸಾಹಸ್ರಶಃ = ಸಾವಿರಗಟ್ಟಲೆ, ದಾಸೀಶ್ಚ = ದಾಸಿಯರನ್ನು ಅತ್ರ = ಈ ಉತ್ಸವದಲ್ಲಿ, ಹರಿಃ = ಕೃಷ್ಣನು, ಚ = ಮತ್ತು, ನೃಪಃ = ರಾಜನಾದ ದ್ರುಪದನು, ದದತುಃ = ಕೊಟ್ಟರು, ತಾಸಾಂ = ಆ ದಾಸಿಯರೆಲ್ಲರಿಗೂ, ಪ್ರತ್ಯೇಕಶಃ = ಪ್ರತ್ಯೇಕ ಪ್ರತ್ಯೇಕವಾಗಿ, ವಿಚಿತ್ರವಸನಾನಿ = ಬಗೆ ಬಗೆಯ ವಸ್ತ್ರಗಳನ್ನು, ಚ = ಮತ್ತು, ಉರುರತ್ನಮಾಲಾಃ = ಶ್ರೇಷ್ಠರತ್ನ ಮಾಲೆಗಳನ್ನು, ಉರುಭೂಷಣಾನಿ ಅಪಿ = ಶ್ರೇಷ್ಠ ಆಭರಣಗಳನ್ನು (ಮಾಲೆಯನ್ನು) ಕೂಡ, ದದತುಃ = ಇಬ್ಬರೂ ಕೊಟ್ಟರು.

ತಾತ್ಪರ್ಯ :- ಉತ್ತಮ ಅಲಂಕಾರದಿಂದ ಕೂಡಿರುವ ದಾಸ ದಾಸಿಯರನ್ನು ಕೃಷ್ಣದ್ರುಪದರು ಪಾಂಡವರಿಗೆ ಕೊಟ್ಟರು. ಆ ದಾಸ ದಾಸಿಯರಿಗೆ ಪ್ರತ್ಯೇಕ ಪ್ರತ್ಯೇಕವಾಗಿ ನಾನಾ ಆಭರಣಗಳು ವಸ್ತ್ರಗಳು ರತ್ನಗಳನ್ನು ಕೃಷ್ಣದ್ರುಪದರು ಕೊಟ್ಟರು.

ಮಾಸಾನ್ ಬಹೂನಪಿ ವಿಹೃತ್ಯ ಸಹೈವ ಪಾರ್ಥೈಃ
ಕೃಷ್ಣೋ ಯಯೌ ಯದುಪುರೀಂ ಸಹಿತೋಽಗ್ರಜೇನ ।
ಅಂತರ್ಹಿತೇ ಭಗವತಿ ಪ್ರತತೋರುಶಕ್ತೌ
ವ್ಯಾಸೇ ಚ ವತ್ಸರಮಿಹೋಷುರಿಮೇ ತು ಪಾರ್ಥಾಃ ॥ ೧೬೫ ॥

ಪದಚ್ಛೇದ :- ಮಾಸಾನ್, ಬಹೂನ್, ಅಪಿ, ವಿಹೃತ್ಯ, ಸಹ, ಏವ, ಪಾರ್ಥೈಃ, ಕೃಷ್ಣಃ, ಯಯೌ, ಯದುಪುರೀಂ, ಸಹಿತಃ, ಅಗ್ರಜೇನ, ಅಂತರ್ಹಿತೇ, ಭಗವತಿ, ಪ್ರತತೋರುಶಕ್ತೌ, ವ್ಯಾಸೇ, ಚ, ವತ್ಸರಂ, ಇಹ, ಊಷುಃ, ಇಮೇ, ಚ, ಪಾರ್ಥಾಃ ।

ಅರ್ಥ :- ಕೃಷ್ಣಃ = ಶ್ರೀಕೃಷ್ಣನು, ಪಾರ್ಥೈಃ = ಪಾಂಡವರಿಂದ, ಸಹ ಏವ = ಕೂಡಿಕೊಂಡು, ಬಹೂನ್ ಅಪಿ ಮಾಸಾನ್ = ಬಹಳ ತಿಂಗಳುಗಳನ್ನು, ವಿಹೃತ್ಯ = ವಿಹಾರಮಾಡಿ (ಕಳೆದು) (ಪಂಚಾಲನಗರದಲ್ಲಿ), ಅಗ್ರಜೇನ = ಬಲರಾಮನಿಂದ, ಸಹಿತಃ = ಕೂಡಿಕೊಂಡು, ಯದುಪುರೀಂ = ದ್ವಾರಕೆಗೆ,

ಯಯೌ = ಹೋದನು, ಪ್ರತತೋರುಶಕ್ತೌ = ಪರಿಪೂರ್ಣಮಹಾಶಕ್ತಿಯ, **ಭಗವತಿ** = ಭಗವಾನ್, **ವ್ಯಾಸೇ ಚ** = ವೇದವ್ಯಾಸರು, **ಅಂತರ್ಹಿತೇ ಸತಿ** = ಅಂತರ್ಧಾನರಾಗಲೂ, **ಇಮೇ** = ಈ, **ಪಾರ್ಥಾಃ ಚ** = ಪಾಂಡವರು, **ವತ್ಸರಂ** = ಒಂದು ವರ್ಷಕಾಲ, **ಇಹ** = ಇಲ್ಲಿಯೇ, **ಊಷುಃ** = ವಾಸಮಾಡಿದರು.

**ತಾತ್ಪರ್ಯ** :- ಶ್ರೀಕೃಷ್ಣನು ಪಾಂಡವರ ಜೊತೆ ಕೆಲವು ತಿಂಗಳ ಕಾಲ ವಿಹಾರ ಮಾಡಿ ಪಾಂಚಾಲದಲ್ಲಿ ಅನಂತರ ಬಲರಾಮನಿಂದ ಕೂಡಿಕೊಂಡು ದ್ವಾರಕೆಗೆ ತೆರಳಿದನು. ಅನಂತರ ಪೂರ್ಣಶಕ್ತಿಯುಳ್ಳ ಭಗವಾನ್ ವೇದವ್ಯಾಸರೂ ಅಂತರ್ಧಾನರಾದರು. ಈ ಎಲ್ಲ ಪಾಂಡವರು ಒಂದು ವರ್ಷಕಾಲ ಈ ಪಾಂಚಾಲದಲ್ಲಿಯೇ ವಾಸಮಾಡಿದರು.

**ವೈಚಿತ್ರವೀರ್ಯತನಯಾಃ ಸಹ ಸೌಬಲೇನ**
**ಕರ್ಣೇನ ಸಿಂಧುಪತಿನಾ ರಥಹಸ್ತಿಯೌಧ್ಯೈಃ ।**
**ಭೂರಿಶ್ರವಃಪ್ರಭೃತಿಭಿಶ್ಚ ಸಹೈವ ಹಂತುಂ**
**ಪಾಂಚಾಲರಾಜಮಗುರೇತ್ಯ ಪುರೀಂ ಪುನಸ್ತೇ ॥ ೧೬೬ ॥**

ಪದಚ್ಛೇದ :- ವೈಚಿತ್ರವೀರ್ಯತನಯಾಃ, ಸಹ, ಸೌಬಲೇನ, ಕರ್ಣೇನ, ಸಿಂಧುಪತಿನಾ, ರಥಹಸ್ತಿಯೌಧ್ಯೈಃ, ಭೂರಿಶ್ರವಪ್ರಭೃತಿಭಿಃ, ಚ, ಸಹ, ಏವ, ಹಂತುಂ, ಪಾಂಚಾಲರಾಜಂ, ಅಗುಃ, ಏತ್ಯ, ಪುರೀಂ, ಪುನಃ, ತೇ ।

**ಅರ್ಥ** :- **ವೈಚಿತ್ರವೀರ್ಯತನಯಾಃ** = ಕೌರವರು, **ಸೌಬಲೇನ** = ಶಕುನಿಯಿಂದ, **ಸಿಂಧುಪತಿನಾ** = ಸೈಂಧವನಿಂದ, **ಕರ್ಣೇನ** = ಕರ್ಣನಿಂದ, **ರಥಹಸ್ತಿಯೌಧ್ಯೈಃ** = ರಥ, ಕುದುರೆ, ಪದಾತಿಗಳಿಂದ, **ಸಹ** = ಕೂಡಿಕೊಂಡು, **ಚ** = ಮತ್ತು, **ಭೂರಿಶ್ರವಪ್ರಭೃತಿಭಿಃ** = ಭೂರಿಶ್ರವತ್ ಮೊದಲಾದವರಿಂದ, **ಸಹ** = ಕೂಡಿ, **ಪುರೀಂ** = ತಮ್ಮ ಹಸ್ತಿನಾಪುರಿಯನ್ನು, **ಏತ್ಯ** = ಹೊಂದಿ, **ಪಾಂಚಾಲರಾಜಂ** = ಪಾಂಚಾಲಕ್ಕೆ ರಾಜನಾದ ದ್ರುಪದನನ್ನು, **ಹಂತುಂ** = ಕೊಲ್ಲಲು, **ಪುನಃ** = ಮತ್ತೆ, **ತೇ** = ಅವರು, **ಅಗುಃ** = ಪಾಂಚಾಲಕ್ಕೆ ಬಂದರು.

**ತಾತ್ಪರ್ಯ** :- ಕೌರವರು ಶಕುನಿ, ಕರ್ಣಾದಿಗಳಿಂದ ಕೂಡಿ ತಮ್ಮ ಹಸ್ತಿನಾಪಟ್ಟಣಕ್ಕೆ ಬಂದು ಮತ್ತೆ ದ್ರುಪದನನ್ನು ಸಂಹಾರ ಮಾಡಲು ಎಲ್ಲರು ಕೂಡಿಕೊಂಡು ಪುನಃ ಪಾಂಚಾಲ ದೇಶಕ್ಕೆ ಬಂದರು.

ತೈರರ್ದಿತೇ ಸ್ವಪುರ ಆಶು ಸ ಸೋಮಕಾನಾಂ
ರಾಜಾ ಸುತೈಃ ಸಹ ಸಸೈನಿಕ ಉದ್ಗತೋಽಭೂತ್ ।
ತೇಷಾಂ ಚ ತಸ್ಯ ಚ ಬಭೂವ ಮಹಾನ್ ವಿಮರ್ದಃ
ಪುತ್ರೌ ಚ ತಸ್ಯ ನಿಹತೌ ವಿಧುತಾಶ್ಚ ಸೇನಾಃ ॥ ೧೬೭ ॥

ಪದಚ್ಛೇದ :- ತೈಃ, ಅರ್ದಿತೇ, ಸ್ವಪುರೇ, ಆಶು, ಸಃ, ಸೋಮಕಾನಾಂ, ರಾಜಾ, ಸುತೈಃ, ಸಹ, ಸಸೈನಿಕಃ, ಉದ್ಗತಃ, ಅಭೂತ್, ತೇಷಾಂ, ಚ, ತಸ್ಯ, ಚ, ಬಭೂವ, ಮಹಾನ್, ವಿಮರ್ದಃ, ಪುತ್ರೌ, ಚ, ತಸ್ಯ, ನಿಹತೌ, ವಿಧುತಾಃ, ಚ, ಸೇನಾಃ ।

ಅರ್ಥ :- ತೈಃ = ಆ ದುರ್ಯೋಧನಾದಿಗಳಿಂದ, ಸ್ವಪುರೇ = ತನ್ನ ಪಟ್ಟಣವು, ಅರ್ದಿತೇ ಸತಿ = ನಾಶಮಾಡುತ್ತಿರಲು, ಆಶು = ಬೇಗನೇ, ಸೋಮಕಾನಾಂ = ಸೋಮಕರರಿಗೆ, ರಾಜಾ = ರಾಜನಾದ ದ್ರುಪದನು, ಸುತೈಃ = ಮಕ್ಕಳಿಂದ, ಸಹ = ಕೂಡಿಕೊಂಡು, ಸಸೈನಿಕಃ = ಸೇನಾ ಸಮೇತನಾಗಿ, ಉದ್ಗತಃ ಅಭೂತ್ = ಹೊರಬಂದನು, ತೇಷಾಂ ಚ = ಅವರಿಗೆ, ತಸ್ಯ ಚ = ಅವನಿಗೆ, ಮಹಾನ್ = ದೊಡ್ಡದಾದ, ವಿಮರ್ದಃ = ಯುದ್ಧವು, ಬಭೂವ = ಆಯಿತು, ತಸ್ಯ = ಆ ದ್ರುಪದನ, ಪುತ್ರೌ ಚ = ಚಿತ್ರ ಚಿತ್ರಕೇತು ಎಂಬ ಇಬ್ಬರು ಮಕ್ಕಳೂ, ನಿಹತೌ = ಮಡಿದರು, ಚ = ಮತ್ತು, ಸೇನಾಃ = ಸೇನೆಯು, ವಿಧುತಾಃ = ಓಡಿಸಲ್ಪಟ್ಟಿತು.

ತಾತ್ಪರ್ಯ :- ದುರ್ಯೋಧನಾದಿಗಳು ದ್ರುಪದನ ಪಟ್ಟಣವನ್ನು ಹಾಳು ಮಾಡುತ್ತಿರಲು ದ್ರುಪದನು ಸಸೈನಿಕವಾಗಿ ಮಕ್ಕಳ ಜೋತೆ ಯುದ್ಧಕ್ಕೆ ಬಂದನು. ಅವರಿಗೂ ಇವನಿಗೂ, ಘೋರ ಯುದ್ಧವಾಯಿತು, ಯುದ್ಧದಲ್ಲಿ ಚಿತ್ರ-ಚಿತ್ರಕೇತು ಎಂಬ ಇಬ್ಬರು ಮಕ್ಕಳು ಮಡಿದರು ಸೇನೆಯು ಓಡಿಹೋಯಿತು.

ಚಿತ್ರೇ ಹತೇ ಸಮರ ಆಶು ಸಚಿತ್ರಕೇತೌ
ಧಾವತ್ಸು ಸೈನಿಕವರೇಷು ಚ ಪಾರ್ಷತಸ್ಯ ।
ಪಾರ್ಥಾ ರಥೈರಭಿಯಯುರ್ಧೃತಚಾಪಬಾಣಾ
ವೈಚಿತ್ರವೀರ್ಯತನಯಾನ್ ರವಿಸೂನುಯುಕ್ತಾನ್ ॥ ೧೬೮ ॥

ಪದಚ್ಛೇದ :- ಚಿತ್ರೇ, ಹತೇ, ಸಮರೆ, ಆಶು, ಸಚಿತ್ರಕೇತೌ, ಧಾವತ್ಸು, ಸೈನಿಕವರೇಷು, ಚ, ಪಾರ್ಷತಸ್ಯ, ಪಾರ್ಥಾಃ, ರಥೈಃ, ಅಭಿಯಯುಃ, ಧೃತಚಾಪಬಾಣಾಃ, ವೈಚಿತ್ರವೀರ್ಯತನಯಾನ್, ರವಿಸೂನುಯುಕ್ತಾನ್ ।

**ಅರ್ಥ** :- **ಸಮರೇ** = ಯುದ್ಧದಲ್ಲಿ, **ಸಚಿತ್ರಕೇತೌ** = ಚಿತ್ರಕೇತುವಿನಿಂದ ಕೂಡಿ, **ಚಿತ್ರೇ** = ಚಿತ್ರನು, **ಹತೇ ಸತಿ** = ಮೃತನಾಗಲೂ, **ಆಶು** = ಬೇಗನೆ, **ಪಾರ್ಷತಸ್ಯ** = ದ್ರುಪದನ, **ಸೈನಿಕವರೇಷು** = ಶ್ರೇಷ್ಠ ಸೈನಿಕರು, **ಧಾವಸ್ಸು ಸತ್ಸು** = ಓಡುತ್ತಿರಲು, **ಧೃತಚಾಪಬಾಣಾಃ** = ಬಿಲ್ಲುಬಾಣಗಳನ್ನು ಹಿಡಿದ, **ಪಾರ್ಥಾಃ** = ಪಾಂಡವರು, **ರವಿಸೂನುಯುಕ್ತಾನ್** = ಕರ್ಣನಿಂದ ಕೂಡಿದ, **ವೈಚಿತ್ರವೀರ್ಯತನಯಾನ್** = ಕೌರವರನ್ನು, **ರಥೈಃ** = ರಥಗಳಿಂದ, **ಅಭಿಯಯುಃ** = ಏರಿ ಬಂದರು.

**ತಾತ್ಪರ್ಯ** :- ಯುದ್ಧದಲ್ಲಿ ಚಿತ್ರ ಚಿತ್ರಕೇತುಗಳು ಮೃತರಾಗಲು, ಎಲ್ಲ ಶ್ರೇಷ್ಠವೀರರೂ ಯುದ್ಧದಿಂದ ಪಲಾಯನ ಮಾಡಿದರು. ಈ ಸಂದರ್ಭದಲ್ಲಿ ಪಾಂಡವರು ಬಿಲ್ಲು ಬಾಣಗಳನ್ನು ಹಿಡಿದು ರಥದಲ್ಲಿ ಕುಳಿತು ಕರ್ಣನಿಂದ ಕೂಡಿದ ಕೌರವರ ಜೊತೆ ಯುದ್ಧ ಮಾಡಲೆಂದು ಬಂದರು.

**ತೈಸ್ತೇಷು ಪಂಚಸು ಸಮಂ ಪ್ರತಿಯೋಧಯತ್ಸು**
**ಭೂರಿಶ್ರವಾಃ ಸರವಿಜೋ ವಿರಥಂ ಚಕಾರ ।**
**ಶಕ್ರಾತ್ಮಜಂ ತದನು ಪರ್ವತಸನ್ನಿಕಾಶಂ**
**ದೋರ್ಭ್ಯಾಂ ತು ಮಾರುತಿರುರುಂ ತರುಮುದ್ವಬರ್ಹ ॥ ೧೬ ॥**

ಪದಚ್ಛೇದ :- **ತೈಃ, ತೇಷು, ಪಂಚಸು, ಸಮಂ, ಪ್ರತಿಯೋಧಯತ್ಸು, ಭೂರಿಶ್ರವಾಃ, ಸರವಿಜಃ, ವಿರಥಂ, ಚಕಾರ, ಶಕ್ರಾತ್ಮಜಂ, ತತ್, ಅನು, ಪರ್ವತಸನ್ನಿಕಾಶಂ, ದೋರ್ಭ್ಯಾಂ, ತು, ಮಾರುತಿಃ, ಉರುಂ, ತರುಂ, ಉದ್ವಬರ್ಹ ।**

**ಅರ್ಥ** :- **ತೈಃ** = ಅವರೊಂದಿಗೆ, **ಸಮಂ** = ಕೂಡಿಕೊಂಡು, **ತೇಷು ಪಂಚಸು** = ಆ ಐದು ಜನ ಪಾಂಡವರು, **ಪ್ರತಿಯೋಧಯತ್ಸು ಸತ್ಸು** = ಯುದ್ಧ ಮಾಡುತ್ತಿರಲು, **ಸರವಿಜಃ** = ಕರ್ಣನಿಂದ ಕೂಡಿದ, **ಭೂರಿಶ್ರವಾಃ** = ಭೂರಿಶ್ರವಸ್ಸ್ಯಾ, **ಶಕ್ರಾತ್ಮಜಂ** = ಅರ್ಜುನನ್ನು, **ವಿರಥಂ** = ವಿರಥನನ್ನಾಗಿ, **ಚಕಾರ** = ಮಾಡಿದನು, **ತತ್ ಅನು** = ಆ ಕ್ಷಣದಲ್ಲಿಯೇ, **ಮಾರುತಿಃ ತು** = ಭೀಮನಾದರೂ, **ದೋರ್ಭ್ಯಾಂ** = ಎರಡು ಕೈಗಳಿಂದ, **ಉರುಂ** = ದೊಡ್ಡದಾದ, **ಪರ್ವತಸನ್ನಿಕಾಶಂ** = ಬೆಟ್ಟದಂತಹ, **ತರುಂ** = ಮರವನ್ನು, **ಉದ್ವಬಹ** = ಕಿತ್ತನು.

**ತಾತ್ಪರ್ಯ** :- ಐದು ಜನ ಪಾಂಡವರು ದುರ್ಯೋಧನಾದಿಗಳ ಜೊತೆ ಯುದ್ಧ ಮಾಡುತ್ತಿರಲು ಭೂರಿಶ್ರಮ ಕರ್ಣರಿಬ್ಬರು ಸೇರಿ ಅರ್ಜುನ ರಥವನ್ನು

ಮುರಿದರು. ಆ ಕ್ಷಣದಲ್ಲಿಯೇ ಭೀಮನು ಪರ್ವತದಂತೆ ದೊಡ್ಡದಾದ ಮರ ಒಂದನ್ನು ಕೈಗಳಿಂದ ಕಿತ್ತಿ ನಿಂತ.

**ಆಯಾಂತಮೀಕ್ಷ್ಯ ತರುಹಸ್ತಮಿಮಂ ಸಮೀರ-**
**ಸೂನುಂ ಸುಯೋಧನಮುಖಾ ನಿಖಿಲಾಃ ಸಕರ್ಣಾಃ ।**
**ಭೂರಿಶ್ರವಾಃ ಶಕುನಿಭೂರಿಜಯದ್ರಥಾಶ್ಚ**
**ಸರ್ವೇಽಪಿ ದುದ್ರುವುರಥೋ ವಿವಿಶುಃ ಪುರಂ ಸ್ವಮ್ ॥ ೧೭೦ ॥**

ಪದಚ್ಛೇದ :- ಆಯಾಂತಂ, ಈಕ್ಷ್ಯ, ತರುಹಸ್ತಂ, ಇಮಂ, ಸಮೀರಸೂನುಂ, ಸುಯೋಧನಮುಖಾಃ, ನಿಖಿಲಾಃ, ಸಕರ್ಣಾಃ, ಭೂರಿಶ್ರವಾಃ, ಶುಕುನಿಭೂರಿ ಜಯದ್ರಥಾಃ, ಚ, ಸರ್ವೇ, ಅಪಿ, ದುದ್ರುವುಃ, ಅಥ, ವಿವಿಶುಃ, ಪುರಂ, ಸ್ವಂ ।

**ಅರ್ಥ** :- **ತರುಹಸ್ತಂ** = ಮರವನ್ನು ಕೈಯಲ್ಲಿ ಹಿಡಿದು, **ಆಯಾಂತಂ** = ಧಾವಿಸುತ್ತಿರುವ, **ಇಮಂ** = ಈ, **ಸಮೀರಸೂನುಂ** = ಭೀಮನನ್ನು, **ಈಕ್ಷ್ಯ** = ನೋಡಿ, **ನಿಖಿಲಾಃ** = ಎಲ್ಲ, **ಸಕರ್ಣಾಃ** = ಕರ್ಣನಿಂದ ಕೂಡಿದ, **ಸುಯೋಧನಮುಖಾ** = ಧುರ್ಯೋಧನನೇ ಮೊದಲಾದ, **ಭೂರಿಶ್ರವಾಃ** = ಭೂರಿಶ್ರವಸ್ಸು, **ಚ** = ಮತ್ತು, **ಶಕುನಿಭೂರಿಜಯದ್ರಥಾಃ** = ಶಕುನಿ, ಭೂರಿ, ಜಯದ್ರಥ ಮೊದಲಾದ, **ಸರ್ವೇ ಅಪಿ** = ಎಲ್ಲರೂ, **ದುದ್ರುವುಃ** = ಓಡಿಹೋದರು, **ಅಥ** = ಅನಂತರ, **ಸ್ವಂ** = ತಮ್ಮ, **ಪುರಂ** = ಪಟ್ಟಣ (ಹಸ್ತಿನಾಪುರ)ವನ್ನು, **ವಿವಿಶುಃ** = ಪ್ರವೇವಿಸಿದರು.

**ತಾತ್ಪರ್ಯ** :- ವೃಕ್ಷವನ್ನು ಹಿಡಿದು ಎದುರಿಗೆ ಬರುತ್ತಿರುವ ಭೀಮನನ್ನು ನೋಡಿ ದುರ್ಯೋಧನ, ಶಕುನಿ, ಭೂರಿ, ಜಯದ್ರಥ, ಕರ್ಣ, ಭೂರಿಶ್ರವಸ್ ಎಲ್ಲರೂ ಕೂಡ ಭಯದಿಂದ ಓಡಿದರು. ಅನಂತರ ತಮ್ಮ ಹಸ್ತಿನಾವತಿಗೆ ಹೋದರು.

**ಜ್ಞಾತ್ವಾ ಸಮಸ್ತಮಪಿ ತದ್ ವಿದುರೋಽಗ್ರಜಂ ಸ್ವಂ**
**ವರ್ಧಂತ ಏವ ತನಯಾ ಭವತೋ ನರೇಂದ್ರ ।**
**ಇತ್ಯಾಹ ಸೋಽಪಿ ಮುದಿತಃ ಸ್ವಸುತೇನ ಕೃಷ್ಣಾ**
**ಪ್ರಾಪ್ತೇತಿ ಭೂಷಣವರಾಣ್ಯದಿಶಚ್ಚ ವಾಸಃ ॥ ೧೭೧ ॥**

ಪದಚ್ಛೇದ :- ಜ್ಞಾತ್ವಾ, ಸಮಸ್ತಂ, ಅಪಿ, ತತ್, ವಿದುರಃ, ಅಗ್ರಜಂ, ಸ್ವಂ, ವರ್ಧಂತಃ, ಏವ, ತನಯಾಃ, ಭವತಃ, ನರೇಂದ್ರ, ಇತಿ, ಆಹ, ಸಃ, ಅಪಿ, ಮುದಿತಃ, ಸ್ವಸುತೇನ, ಕೃಷ್ಣಾ, ಪ್ರಾಪ್ತ, ಇತಿ, ಭೂಷಣವರಾಣಿ, ಅದಿಶತ್, ಚ, ವಾಸಃ ।

**ಅರ್ಥ** :- **ತತ್ ಸಮಸ್ತಂ ಅಪಿ** = ಅದೇಲ್ಲವನ್ನು, **ವಿದುರಃ** = ವಿದುರನು, **ಜ್ಞಾತ್ವಾ** = ತಿಳಿದು, **ಸ್ವಂ** = ತನ್ನ, **ಅಗ್ರಜಂ** = ಅಣ್ಣನಾದ ಧೃತರಾಷ್ಟ್ರನಿಗೆ, **ನರೇಂದ್ರ** = ಹೇ ರಾಜನೇ, **ಭವತಃ** = ನಿನ್ನ, **ತನಯಾಃ** = ಮಕ್ಕಳು, **ವರ್ಧಂತ ಏವ** = ಜಯಶಾಲಿಗಳಾಗಿ ಶೋಭಿಸುತ್ತಿದ್ದಾರೆ, **ಇತಿ** = ಎಂದು, **ಆಹ** = ಹೇಳಿದನು, **ಸಃ ಅಪಿ** = ಆ ದ್ರುಪದನಾದರೂ, **ಕೃಷ್ಣಾ** = ದ್ರೌಪದಿಯು, **ಸ್ವಸುತೇನ** = ತನ್ನ ಮಗನಾದ ದುರ್ಯೋಧನನಿಂದ, **ಪ್ರಾಪ್ತಾ** = ಹೊಂದಲ್ಪಟ್ಟವಳಾಗಿದ್ದಾಳೆ, **ಇತಿ** = ಎಂದು, **ಭೂಷಣವರಾಣಿ** = ಶ್ರೇಷ್ಠ ಆಭರಣಗಳು, **ಚ** = ಮತ್ತು, **ವಾಸಃ** = ವಸ್ತ್ರವನ್ನು, **ಅದಿಶತ್** = ಕೊಟ್ಟನು.

**ತಾತ್ಪರ್ಯ** :- ವಿದುರನು ಈ ಎಲ್ಲ ವಿಷಯವನ್ನು ತಿಳಿದು ತನ್ನ ಅಣ್ಣನಾದ ಧೃತರಾಷ್ಟ್ರನ ಮುಂದೆ ''ನಿನ್ನ ಮಕ್ಕಳು ವಿಜಯಶಾಲಿಗಳಾದರು'' ಎಂದು ಹೇಳಿದನು. ಆದರೆ ಧೃತರಾಷ್ಟ್ರನು ನನ್ನ ಮಗ ದುರ್ಯೋಧನನಿಗೆ ದ್ರೌಪದಿಯು ಸಿಕ್ಕಳು ಎಂದು ಭಾವಿಸಿ ವಿದುರನಿಗೆ ಅನೇಕ ಆಭರಣ ಮತ್ತು ವಸ್ತ್ರಗಳನ್ನು ಕೊಟ್ಟನು.

**ಪಾರ್ಥಾ ಇತಿ ಸ್ಮ ವಿದುರೋಽವದದಾಶು ಸೋಽಪಿ**
**ಸ್ವಾಕಾರಗೂಹನಪರೋ ಯದಿ ತರ್ಹ್ಯತೀವ ।**
**ಭದ್ರಂ ಮೃತಾ ನಹಿ ಪೃಥಾಸಹಿತಾಃ ಸ್ಮ ಪಾರ್ಥಾ-**
**ಸ್ತೇಷಾಂ ಪ್ರವೃತ್ತಿಮಪಿ ಮೇ ವದ ಸರ್ವಶಸ್ತ್ವಮ್ ॥ ೧೭೨ ॥**

**ಪಾರ್ಥಾಃ, ಇತಿ, ಸ್ಮ, ವಿದುರಃ, ಅವದತ್, ಆಶು, ಸಃ, ಅಪಿ, ಸ್ವಾಕಾರಗೂಹನಪರಃ, ಯದಿ, ತರ್ಹಿ, ಅತೀವ, ಭದ್ರಂ, ಮೃತಾಃ, ನ, ಹಿ, ಪೃಥಾಸಹಿತಾಃ, ಸ್ಮ, ಪಾರ್ಥಾಃ, ತೇಷಾಂ, ಪ್ರವೃತ್ತಿಂ, ಅಪಿ, ಮೇ, ವದ, ಸರ್ವಶಃ, ತ್ವಂ ।**

**ಅರ್ಥ** :- **ವಿದುರಃ** = ವಿದುರನು, **ಆಶು** = ಬೇಗನೆ, **ಪಾರ್ಥಾಃ** = ಪಾಂಡವರು, **ಇತಿ** = ಎಂದು, **ಅವದತ್ ಸ್ಮ** = ಹೇಳಿದನು, **ಸ್ವಾಕಾರ ಗೂಹನಪರಃ** = ತನ್ನ ಮನಸ್ಸಿನ ಕೆಟ್ಟ ಭಾವನೆಯನ್ನು ಮರೆಮಾಚಿಕೊಳ್ಳುವ, **ಸಃ ಅಪಿ** = ಆ ಧೃತರಾಷ್ಟ್ರನು, **ಯದಿ** = ಒಂದು ವೇಳೆ ಹಾಗಿದ್ದರೆ, **ತರ್ಹಿ** = ಆಗ, **ಅತೀವ** = ಬಹಳ, **ಭದ್ರಂ** = ಸಂತೋಷವು, **ಪೃಥಾಸಹಿತಾಃ** = ಕುಂತಿಯಿಂದ ಕೂಡಿದ, **ಪಾರ್ಥಾಃ** = ಪಾಂಡವರು, **ಮೃತಾಃ ನ ಹಿ ಸ್ಮ** = ಸಾಯಲಿಲ್ಲವೇ?, **ತೇಷಾಂ** = ಅವರ, **ಸರ್ವಶಃ ಪ್ರವೃತ್ತಿಂ ಅಪಿ** = ವೃತ್ತಾಂತವನ್ನೆಲ್ಲಾ, **ಮೇ** = ನನಗೆ, **ತ್ವಂ** = ನೀನು, **ವದ** = ಹೇಳು.

ತಾತ್ಪರ್ಯ :- ವಿದುರನು "ಪಾಂಡವರು" ಎಂದು ಹೇಳಲು ಧೃತರಾಷ್ಟ್ರನು ತನ್ನ ದುಷ್ಟಭಾವನೆಯನ್ನು ಮರಮಾಚಿ ಹೀಗೆ ಹೇಳಿದ ಒಂದು ವೇಳೆ ಪಾಂಡವರೇ ಎಂದರೇ ಇನ್ನು ಸಂತೋಷ, ಹಾಗಾದರೆ ಕುಂತಿಯಿಂದ ಸಹಿತರಾದ ಪಾಂಡವರು ಸಾಯಲಿಲ್ಲವೇ? ಪಾಂಡವರ ಎಲ್ಲ ಸಮಾಚಾರವನ್ನು ನೀನು ನಿನಗೆ ಹೇಳು.

**ಇತ್ಯುಕ್ತ ಆಹ ವಿದುರಃ ಸ ಹಿಡಿಂಬವಧ್ಯಾ-**
**ಪೂರ್ವಾಂ ಪ್ರವೃತ್ತಿಮಖಿಲಾಮಪಿ ಲಕ್ಷ್ಯವೇಧಮ್ ।**
**ಉದ್ವಾಹಮಪ್ಯಥ ನದೀಜಮುಖಾಶ್ಚ ಸರ್ವೇ**
**ತುಷ್ಟಾ ಬಭೂವುರಪಿ ವತ್ಸರಮೂಷುರೇವಮ್ ॥ ೧೭೩ ॥**

ಪದಚ್ಛೇದ :- **ಇತಿ, ಉಕ್ತಃ, ಆಹ, ವಿದುರಃ, ಸಃ, ಹಿಡಿಂಬವದ್ಯಾಪೂರ್ವಾಂ, ಪ್ರವೃತ್ತಿಂ, ಅಖಿಲಾಂ, ಅಪಿ, ಲಕ್ಷ್ಯವೇಧಂ, ಉದ್ವಾಹಂ, ಅಪಿ, ಅಥ, ನದೀಜಮುಖಾಃ, ಚ, ಸರ್ವೇ, ತುಷ್ಟಾಃ, ಬಭೂವುಃ, ಅಪಿ, ವತ್ಸರಂ, ಊಷುಃ, ಏವಂ ।**

**ಅರ್ಥ** :- **ಇತಿ** = ಈ ರೀತಿ, **ಉಕ್ತಃ** = ಹೇಳಿಸಿಕೊಳ್ಳಲ್ಪಟ್ಟ, **ಸಃ** = ಆ, **ವಿದುರಃ** = ವಿದುರನು, **ಹಿಡಿಂಬವದ್ಯಾಪೂರ್ವಾಂ** = ಹಿಡಿಂಬ ವಧೆಯಿಂದ ಪ್ರಾರಂಭಿಸಿ, **ಲಕ್ಷ್ಯವೇಧಂ ಅಪಿ** = ಲಕ್ಷ್ಯ ಭೇದದವರೆಗೂ, **ಅಖಿಲಾಂ** = ಎಲ್ಲ, **ಪ್ರವೃತ್ತಿಂ** = ವಿಚಾರವನ್ನು, **ಉದ್ವಾಹಂ ಅಪಿ** = ವಿವಾಹವನ್ನೂ, **ಆಹ** = ಹೇಳಿದನು, **ಅಥ** = ಅನಂತರ, **ನದೀಜಮುಖಾಃ ಚ** = ಭೀಷ್ಮ ಮೊದಲಾದವರೆಲ್ಲರೂ, **ಸರ್ವೇ** = ಎಲ್ಲರೂ, **ತುಷ್ಟಾಃ** = ಸಂತುಷ್ಟರು, **ಬಭೂವುಃ** = ಆದರು, **ಏವಂ** = ಈ ರೀತಿಯಾಗಿ, **ವತ್ಸರಂ ಅಪಿ** = ಒಂದು ವರ್ಷವನ್ನು, **ಊಷುಃ** = ಕಳೆದರು.

ತಾತ್ಪರ್ಯ :- ವಿದುರನು ಹಿಡಿಂಬವಧೆಯನ್ನು ಆರಂಭಿಸಿ ಲಕ್ಷ್ಯಭೇದ ವಿವಾಹ ಎಲ್ಲ ವಿಷಯಗಳನ್ನು ಧೃತರಾಷ್ಟ್ರನಿಗೆ ಹೇಳಿದನು. ಇದನ್ನು ಕೇಳಿದ ಭೀಷ್ಮ ಮೊದಲಾದವರು ಬಹಳ ಸಂತೋಷಪಟ್ಟರು. ಹೀಗೆ ಪಾಂಡವರು ಒಂದು ವರ್ಷ ಕಾಲ ಕಳೆದರು.

**ಶ್ರುತ್ವಾಽಥ ಕೃಷ್ಣಮುಪಯಾತಮುರು ಪ್ರದಾಯ**
**ರತ್ನಂ ಚ ಪಾಂಡುತನಯೇಷು ಗತಂ ಪುನಶ್ಚ ।**
**ತಾತಪ್ಯಮಾನಹೃದಯಾಸ್ತು ಸುಯೋಧನಾದ್ಯಾ**
**ಮಂತ್ರಂ ಪ್ರಚಕ್ರುರಥ ಕರ್ಣಮುಖಾ ಯಯುಶ್ಚ ॥ ೧೭೪ ॥**

ಪದಚ್ಛೇದ :- ಶ್ರುತ್ವಾ, ಅಥ, ಕೃಷ್ಣಂ, ಉಪಯಾತಂ, ಉರು, ಪ್ರದಾಯ, ರತ್ನಂ, ಚ, ಪಾಂಡುತನಯೇಷು, ಗತಂ, ಪುನಃ, ಚ, ತತಾಪ್ಯಮಾನಹೃದಯಾಃ, ತು, ಸುತೋಧನಾದ್ಯಾಃ, ಮಂತ್ರಂ, ಪ್ರಚಕ್ರುಃ, ಅಥ, ಕರ್ಣಮುಖಾಃ, ಯಯುಃ, ಚ ।

ಅರ್ಥ :- ಅಥ = ಒಂದು ವರ್ಷ ಕಳೆದನಂತರ, ಉಪಯಾತಂ = ಒಂದು, ಉರು = ಬಹಳವಾಗಿ, ರತ್ನಂ ಚ = ರತ್ನಗಳನ್ನು, ಪಾಂಡತನಯೇಷು = ಪಾಂಡವರಿಗೆ, ಪ್ರದಾಯ = ಕೊಟ್ಟು, ಪುನಃ = ಮತ್ತೆ, ಗತಂ ಚ = ತನ್ನ ಪಟ್ಟಣಕ್ಕೆ ಹೋದ, ಕೃಷ್ಣಂ = ಕೃಷ್ಣನನ್ನು (ಕೃಷ್ಣನ ಸಮಾಚಾರವನ್ನು), ಶ್ರುತ್ವಾ = ಕೇಳಿ, ತಾತಪ್ಯಮಾನಹೃದಯಾಃ = ಸಂಕಟಗೊಂಡ ಮನಸ್ಸುಳ್ಳ, ಸುಯೋಧನಾದ್ಯಾಃ ತು = ದುರ್ಯೋಧನಾದಿಗಳೂ, ಮಂತ್ರಂ = ಮಂತ್ರಾಲೋಚನೆಯನ್ನು, ಪ್ರಚಕ್ರುಃ = ಮಾಡಿದರು, ಚ = ಮತ್ತು, ಅಥ = ಅನಂತರ, ಕರ್ಣಮುಖ್ಯಾಃ = ಕರ್ಣನನ್ನು ಮುಂದೆ ಮಾಡಿಕೊಂಡು, ಯಯುಃ = ಯುದ್ಧಕ್ಕೆ ಹೊರಟರು.

ತಾತ್ಪರ್ಯ :- ಪಾಂಡವರ ಬಳಿ ಬಂದು ಶ್ರೀಕೃಷ್ಣನು ಅಪಾರವಾದ ರತ್ನ ಮೊದಲಾದ ಸಂಪತ್ತನ್ನು ಕೊಟ್ಟು ತನ್ನ ದ್ವಾರಕೆಗೆ ತೆರಳಿದ ವಿಚಾರವನ್ನು ಕೇಳಿ ದುರ್ಯೋಧನಾದಿಗಲು ಮನಸ್ಸಿನಲ್ಲಿಯೇ ಸಂಕಟಪಟ್ಟರು. ಮಂತ್ರಾಲೋಚನೆ ಮಾಡಿದರು. ಅನಂತರ ಕರ್ಣನನ್ನು ಮುಂದಿಟ್ಟುಕೊಂಡು ಮತ್ತೆ ಯುದ್ಧಕ್ಕೆ ಹೊರಟರು.

ಯುದ್ಧಾಯ ತೇಷು ಪುನರೇವ ರಥ್ಯೈಃ ಪ್ರಯಾತೇ-
ಷ್ವಾಹಾಗ್ರಜಂ ಸ ವಿದುರೋऽಪಿ ನದೀಜಮುಖ್ಯಾನ್ ।
ಏತೇ ಹಿ ಪಾಪತಮಚೇತಸ ಏತ್ಯ ಪಾರ್ಥಾನ್
ಯುದ್ಧಾಯ ಮೃತ್ಯುಮುಪಯಾಂತಿ ನ ಸಂಶಯೋऽತ್ರ ॥ ೧೭೫ ॥

ಪದಚ್ಛೇದ :- ಯುದ್ಧಾಯ, ತೇಷು, ಪುನಃ, ಏವ, ರಥ್ಯೈಃ, ಪ್ರಯಾತೇಷು, ಆಹ, ಅಗ್ರಜಂ, ಸಃ, ವಿದುರಃ, ಅಪಿ, ನದೀಜಮುಖ್ಯಾನ್, ಏತೇ, ಹಿ, ಪಾಪತಮಚೇತಸಃ, ಏತ್ಯ, ಪಾರ್ಥಾನ್, ಯುದ್ಧಾಯ, ಮೃತ್ಯುಂ, ಉಪಯಾಂತಿ, ನ, ಸಂಶಯಃ, ಅತ್ರ ।

ಅರ್ಥ :- ತೇಷು = ದುರ್ಯೋಧನಾದಿಗಳು, ಪುನಃ = ಮತ್ತೆ, ಯುದ್ಧಾಯ ಏವ = ಯುದ್ಧಕ್ಕಾಗಿ, ರಥ್ಯೈಃ = (ತಮ್ಮ ತಮ್ಮ) ರಥಗಳಲ್ಲಿ, ಪ್ರಯಾತೇಷು = ತೆರಳಲು, ಸಃ = ಆ, ವಿದುರಃ = ವಿದುರನು, ಅಗ್ರಜಂ =

ಅಣ್ಣನಾದ ಧೃತರಾಷ್ಟನಿಗೆ, **ನದೀಜಮುಖ್ಯಾನ್ ಅಪಿ** = ಭೀಷ್ಮಾದಿಗಳಿಗೂ ಕೂಡ, **ಪಾಪತಮಚೇತಸಃ** = ಅತ್ಯಂತ ಪಾಪಿಗಳಾದ, **ಏತೇ** = ಈ ದುರ್ಯೋಧನಾದಿಗಳು, **ಪಾರ್ಥಾನ್** = ಪಾಂಡವರನ್ನು, **ಯುದ್ಧಾಯ** = ಯುದ್ಧಕ್ಕಾಗಿ, **ಏತ್ಯ** = ಹೊಂದಿ, **ಮೃತ್ಯುಂ** = ಮರಣವನ್ನು, **ಉಪಯಾಂತಿ** = ಹೊಂದುತ್ತಾರೆ, **ಅತ್ರ** = ಈ ವಿಷಯದಲ್ಲಿ, **ಸಂಶಯಃ** = ಸಂದೇಹವು, **ನ** = ಇಲ್ಲ.

**ತಾತ್ಪರ್ಯ** :- ದುರ್ಯೋಧನಾದಿಗಳು ಪಾಂಡವರ ಜೊತೇ ಯುದ್ಧಕ್ಕಾಗಿ ಹೋಗಲು ವಿದುರನು ಧೃತರಾಷ್ಟ ಹಾಗೂ ಭೀಷ್ಮಾದಿಗಳನ್ನು ಕುರಿತು ಹೀಗೆ ಹೇಳಿದನು. ಅತ್ಯಂತ ಪಾಪಿಗಳಾದ ಈ ದುರ್ಯೋಧನಾದಿಗಳು ಪಾಂಡವರ ಜೊತೆ ಯುದ್ಧಕ್ಕಾಗಿ ಹೋಗಿದ್ದಾರೆ. ಇದರಿಂದ ಅವರ ಸಾವು ನಿಶ್ಚಿತ.

**ಭೀಮಾರ್ಜುನೌ ವಿಷಹಿತುಂ ನಹಿ ಕಶ್ಚನಾಸ್ತಿ**
**ಸಾಮರ್ಥ್ಯಯುಕ್ ಸುರವರೇಷ್ವಪಿ ವರ್ಧಿತಾಸ್ತೇ ।**
**ಜ್ಞಾತ್ವೈವ ವತ್ಸರತ ಏವ ಮಹಾನಧರ್ಮ-**
**ಸ್ತೇಷಾಮುಪೇಕ್ಷಣಕೃತಸ್ತದಲಂ ನಿಯುಂಕ್ಷ್ವ ॥ ೧೭೬ ॥**

**ಪದಚ್ಛೇದ** :- **ಭೀಮಾರ್ಜುನೌ, ವಿಷಹಿತುಂ, ನ, ಹಿ, ಕಶ್ಚನ, ಅಸ್ತಿ, ಸಾಮರ್ಥ್ಯಯುಕ್, ಸುರವರೇಷು, ಅಪಿ, ವರ್ಧಿತಾಃ, ಆಸ್ತೇ, ಜ್ಞಾತ್ವಾ, ಏವ, ವತ್ಸರತಃ, ಏವ, ಮಹಾನ್, ಅಧರ್ಮಃ, ತೇಷಾಂ, ಉಪೇಕ್ಷಣಕೃತಃ, ತತ್, ಅಲಂ, ನಿಯುಂಕ್ಷ್ವ ।**

**ಅರ್ಥ** :- **ಭೀಮಾರ್ಜುನೌ** = ಭೀಮಾರ್ಜುನರನ್ನು, **ವಿಷಹಿತುಂ** = ಎದುರಿಸಲು, **ಸಾಮರ್ಥ್ಯಯುಕ್** = ಸಾಮರ್ಥ್ಯಯುಳ್ಳವರು, **ಸುರವರೇಷು ಅಪಿ** = ದೇವತೆಗಳಲ್ಲಿಯೂ ಕೂಡ, **ಕಶ್ಚನ** = ಯಾರು, **ನ ಅಸ್ತಿ** = ಇಲ್ಲ, **ಹಿ** = ನಿಶ್ಚಯವು, **ತೇ** = ಅವರು, **ವರ್ಧಿತಾಃ** = ಬೆಳೆದಿದ್ದಾರೆ, **ಜ್ಞಾತ್ವಾ ಏವ** = (ಅವರ ವಿಚಾರವನ್ನು) ತಿಳಿದು, **ವತ್ಸರತ ಏವ** = ಒಂದು ವರ್ಷ ಕಾಲವಾದರೂ, **ತೇಷಾಂ** = ಪಾಂಡವರ, **ಉಪೇಕ್ಷಣಕೃತಃ** = ಉಪೇಕ್ಷಿಸಿದ ನಿನಗೆ, **ಮಹಾನ್** = ದೊಡ್ಡ, **ಅಧರ್ಮ** = ಅಧರ್ಮವು, **ತತ್** = ಉಪೇಕ್ಷೆಯು, **ಅಲಂ** = ಸಾಕು ಮಾಡು, **ನಿಯುಂಕ್ಷ್ವ** = (ಅವರನ್ನು ಕರೆಯಲು), ಧೂತರನ್ನು ಕಳಿಸು.

**ತಾತ್ಪರ್ಯ** :- ಭೀಮಾರ್ಜುನರ ಮುಂದೆ ನಿಲ್ಲಲೂ ದೇವತೆಗಳ ಮಧ್ಯದಲ್ಲಿಯು ಯಾರಿಗೂ ಸಾಧ್ಯವಿಲ್ಲ, ಅವರು ತುಂಬ ಬೆಳೆದಿದ್ದಾರೆ. ಅವರ ವಿಚಾರವನ್ನು ತಿಳಿದು ಒಂದು ವರ್ಷಕಾಲದವರೆಗೂ ಅವರನ್ನು ನಿರ್ಲಕ್ಷಿಸಿ

ಇರುವುದು ದೊಡ್ಡ ಅಧರ್ಮವು ಇದನ್ನು ಸಾಕುಮಾಡು, ಅವರನು ಕರೆಕಳುಹಲು ಧೂತರನ್ನು ಕಳಿಸು.

ಆನೀತಯೇ ಚ ವಿನಿಯುಜ್ಯ ಸುಸಾಂತ್ವಪೂರ್ವ-
ಮಾನೀಯ ಯೋಜಯ ನೃಪೈಷು ತಥಾऽರ್ಧರಾಜ್ಯಮ್ ।
ಏವಂ ಕೃತಂ ತವ ಭವೇತ್ ಕುಲವೃದ್ಧಯೇ ಹಿ
ಧರ್ಮಾಯ ಚೋಭಯವಿನಾಶಕರೋऽನ್ಯಥಾ ಸ್ಯಾಃ ॥ ೧೭೭ ॥

ಪದಚ್ಛೇದ :- ಆನೀತಯೇ, ಚ, ವಿನಿಯುಜ್ಯ, ಸುಸಾಂತ್ವಪೂರ್ವಂ, ಆನೀಯ, ಯೋಜಯ, ನೃಪ, ಏಷು, ತಥಾ, ಅರ್ಧರಾಜ್ಯಂ, ಏವಂ, ಕೃತೇ, ತವ, ಭವೇತ್, ಕುಲವೃದ್ಧಯೇ, ಹಿ, ಧರ್ಮಾಯ, ಚ, ಉಭಯವಿನಾಶಕರಃ, ಅನ್ಯಥಾ, ಸ್ಯಾಃ ।

ಅರ್ಥ :- ಆನೀತಯೇ = ಪಾಂಡವರನ್ನು ಕರೆತರಲು, ನಿವಿಯುಜ್ಯ = ಆಜ್ಞೆಯನ್ನು ಮಾಡಿ, ಸುಸಾಂತ್ವ ಪೂರ್ವಂ = ಸಮಾಧಾನ ಪೂರ್ವಕವಾಗಿ, ಆನೀಯ = ಕರೆತಂದು, ನೃಪ = ಏಲೋ ರಾಜನೇ, ತಥಾ = ಹಾಗೆಯೇ, ತೇಷು = ಅವರಿಗೆ, ಅರ್ಧರಾಜ್ಯಂ = ಅರ್ಧರಾಜ್ಯವನ್ನು, ಯೋಜಯ = ನೀಡು, ಏವಂ = ಹೀಗೆ, ಕೃತೇ = ಮಾಡಿದರೇ, ತವ = ನಿನ್ನ, ಕುಲವೃದ್ಧಯೇ = ವಂಶದ ಅಭಿವೃದ್ಧಿಯು, ಭವೇತ್ = ಆಗುತ್ತದೆ, ಚ = ಮತ್ತು, ಧರ್ಮಾಯ = ಪುಣ್ಯವೂ, ಭವೇತ್ = ಆಗುತ್ತದೆ, ಅನ್ಯಥಾ = ಇಲ್ಲವಾದಲ್ಲಿ, ಉಭಯವಿನಾಶಕರಃ = ಕುಲ ಮತ್ತು ಧರ್ಮದ ನಾಶವು, ಸ್ಯಾಃ = ಆಗುವುದು.

ತಾತ್ಪರ್ಯ :- ಪಾಂಡವರನ್ನು ಸಮಾಧಾನಪಡಿಸಿ ರಾಜ್ಯಕ್ಕೆ ಕರೆದುಕೊಂಡು ಬಾ, ಅವರಿಗೆ ನ್ಯಾಯವಾಗಿ ಸಿಗಬೇಕಾದ ಅರ್ಧರಾಜ್ಯವನ್ನು ಅವರಿಗೆ ನೀಡು ಹೀಗೆ ಮಾಡಿದರೆ ನಿನ್ನ ಕುಲವೂ ಬೆಳೆಯುವುದು ಪುಣ್ಯವೂ ಸಹ ಬರುತ್ತದೆ ಇಲ್ಲವಾದರೆ ಕುಲ ಮತ್ತು ಪುಣ್ಯಗಳೆರಡೂ ನಾಶವಾಗುತ್ತದೆ.

ಇತ್ಯುಕ್ತವತ್ಯನು ತಥೇತ್ಯವದನ್ನದೀಜೋ
ದ್ರೋಣಃ ಕೃಪಶ್ಚ ವಿದುರಂ ಸ ನೃಪೋऽಪ್ಯುವಾಚ ।
ಯಾಹ್ಯಾನಯೇತಿ ಸ ಚ ವೇಗವತಾ ರಥೇನ
ತತ್ರಾಗಮತ್ ತದನು ತೈರಭಿಪೂಜಿತಶ್ಚ ॥ ೧೭೮ ॥

ಪದಚ್ಛೇದ :- ಇತಿ, ಉಕ್ತವತಿ, ಅನು, ತಥೌ, ಇತಿ, ಅವದತ್, ನದೀಜಃ, ದ್ರೋಣಃ, ಕೃಪಃ, ಚ, ವಿದುರಂ, ಸಃ, ನೃಪಃ, ಅಪಿ, ಉವಾಚ, ಯಾಹಿ, ಆನಯ, ಇತಿ, ಸಃ, ಚ, ವೇಗವತಾ, ರಥೇನ, ತತ್ರ, ಅಗಮತ್, ತದನು, ತೈಃ, ಅಭಿಪೂಜಿತಃ ಚ ।

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತವತಿ ಸತಿ** = ಹೇಳಲು, **ಅನು** = ಅನುಸರಿಸಿ, **ನದೀಜಃ** = ಭೀಷ್ಮನು, **ದ್ರೋಣಃ** = ದ್ರೋಣಾಚಾರ್ಯರು, **ಚ** = ಮತ್ತು, **ಕೃಪಃ** = ಕೃಪಾಚಾರ್ಯರು, **ತಥಾ** = ಹಾಗೆ ಆಗಲಿ, **ಇತಿ** = ಎಂದು, **ಅವದತ್** = ಹೇಳಿದರು, **ಸಃ** = ಆ, **ನೃಪಃ ಅಪಿ** = ರಾಜನಾದರೂ, **ಯಾಹಿ** = ಹೋಗು!, **ಆನಯ** = ಕರೆದುಕೊಂಡು ಬಾ, **ಇತಿ** = ಎಂದು, **ವಿದುರಂ** = ವಿದುರನ್ನು ಕುರಿತು, **ಉವಾಚ** = ಹೇಳಿದನು, **ಸಃ ಚ** = ಆ ವಿದುರನಾದರೂ, **ವೇಗವತಾ** = ಅತ್ಯಂತ ವೇಗವುಳ್ಳ, **ರಥೇನ** = ರಥದಿಂದ, **ತತ್ರ** = ಅಲ್ಲಿಗೆ, **ಅಗಮತ್** = ಹೋದನು, **ಚ** = ಮತ್ತು, **ತದನು** = ಅನಂತರದಲ್ಲಿ, **ತೈಃ** = ಅವರಿಂದ, **ಅಭಿಪೂಜಿತಃ** = ಪೂಜಿಸಲ್ಪಟ್ಟನು.

ತಾತ್ಪರ್ಯ :- ವಿದುರನ ಮಾತಿಗೆ ಭೀಷ್ಮ, ದ್ರೋಣ, ಕೃಪಾದಿಗಳೆಲ್ಲರು ಸಮ್ಮತಿಯನ್ನು ಸೂಚಿಸಿದರು. ಅನಂತರ ಧೃತರಾಷ್ಟ್ರನು ''ಹೋಗು ಅವರನ್ನು ಕರೆದುಕೊಂಡು ಬಾ'' ಎಂದು ಹೇಳಿದನು. ವಿದುರನು ಪಾಂಡವರನ್ನು ಕರೆತರಲು ಅವರ ಬಳಿ ಹೋದನು ಪಾಂಡವರು ವಿದುರನನ್ನು ಪೂಜಿಸಿದರು.

**ತತ್ಕಾಲ ಏವ ವಸುದೇವಸುತಶ್ಚ ಕೃಷ್ಣೋ**
**ವ್ಯಾಸಶ್ಚ ತಾನುಪಸಮೇತ್ಯ ದುರಂತಶಕ್ತೀ ।**
**ಆದಾಯ ಕುಂತಿಸಹಿತಾನ್ ವಿದುರೇಣ ಯುಕ್ತೌ**
**ನಾಗಾಹ್ವಯಂ ಪುರಮಿತಾಂ ಸಹ ಭಾರ್ಯಯೈವ ।। ೧೭೯ ।।**

ಪದಚ್ಛೇದ :- ತತ್ಕಾಲೇ, ಏವ, ವಸುದೇವಸುತಃ, ಚ, ಕೃಷ್ಣಃ, ವ್ಯಾಸಃ, ಚ, ತಾನ್, ಉಪಸಮೇತ್ಯ, ದುರಂತಶಕ್ತೀ, ಆದಾಯ, ಕುಂತಿಸಹಿತಾನ್, ವಿದುರೇಣ, ಯುಕ್ತಃ, ನಾಗಾಹ್ವಯಂ, ಪುರಂ, ಇತಾಂ, ಸಹ, ಭಾರ್ಯಯಾ, ಏವ ।

**ಅರ್ಥ** :- **ತತ್ಕಾಲೇ ಏವ** = ಅದೇ ಸಮಯದಲ್ಲಿ, **ದುರಂತ ಶಕ್ತೀ** = ಅಪಾರ ಶಕ್ತಿಯುಳ್ಳ, **ವಸುದೇವ ಸುತಃ** = ವಸುದೇವನ ಮಗನಾದ, **ಕೃಷ್ಣಃ** = ಕೃಷ್ಣನು, **ಚ** = ಮತ್ತು, **ವ್ಯಾಸಃ** = ವೇದವ್ಯಾಸರೂ, **ತಾನ್** = ಆ ಪಾಂಡವರನ್ನು, **ಉಪಸಮೇತ್ಯ** = ಹೊಂದಿ, **ವಿದುರೇಣ** = ವಿದುರನಿಂದ, **ಯುಕ್ತೌ** = ಕೂಡಿಕೊಂಡು, **ಕುಂತಿ ಸಹಿತಾನ್** = ಕುಂತಿಯ ಜೊತೆಗೆ, **ತಾನ್** = ಪಾಂಡವರನ್ನು, **ಆದಾಯ** = ಕರೆದುಕೊಂಡು, **ಭಾರ್ಯಯಾ** = ಪಾಂಡವರ ಮಡದಿಯಾದ ದ್ರೌಪದಿಯಿಂದ, **ಸಹ ಏವ** = ಕೂಡಿ, **ನಾಗಾಹ್ವಯಂ ಪುರಂ** = ಹಸ್ತಿನಾಪುರಿಗೆ, **ಇತಾಂ** = ಬಂದರು.

ತಾತ್ಪರ್ಯ :- ಅದೇ ಸಮಯಕ್ಕೆ ಅಪಾರ ಶಕ್ತಿಯುಳ್ಳ ಶ್ರೀಕೃಷ್ಣ ಮತ್ತು ವೇದವ್ಯಾಸದೇವರು ಪಾಂಡವರ ಬಳಿ ಬಂದರು. ವಿದುರನ ಜೊತೆಗೆ ಕುಂತಿ ಹಾಗೂ ದ್ರೌಪದಿಯಿಂದ ಕೂಡಿದ ಪಾಂಡವರನ್ನು ಕರೆದುಕೊಂಡು ಹಸ್ತಿನಾಪುರಕ್ಕೆ ಬಂದರು.

ತೇಷ್ವಾಗತೇಷು ಸುಮಹಾನಭವತ್ ಪ್ರಹರ್ಷಃ
ಪೌರಸ್ಯ ಜಾನಪದಿಕಸ್ಯ ಜನಸ್ಯ ಚೋಚ್ಚೈಃ ।
ಭೀಷ್ಮಾದಿಕಾಶ್ಚ ಮುದಿತಾಃ ಪ್ರತಿಪೂಜ್ಯ ಗೇಹ-
ಮಾವೇಶಯನ್ ಸಹ ನೃಪೇಣ ಮಹೋತ್ಸವೇನ ॥ ೧೮೦ ॥

ಪದಚ್ಛೇದ :- ತೇಷು, ಆಗತೇಷು, ಸುಮಹಾನ್, ಅಭವತ್, ಪ್ರಹರ್ಷಃ, ಪೌರಸ್ಯ, ಜಾನಪದಕಸ್ಯ, ಜನಸ್ಯ, ಚ, ಉಚ್ಚೈಃ, ಭೀಷ್ಮಾದಿಕಾಃ, ಚ, ಮುದಿತಾಃ, ಪ್ರತಿಪೂಜ್ಯ, ಗೇಹಂ, ಆವೇಶಯನ್, ಸಹ, ನೃಪೇಣ, ಮಹೋತ್ಸವೇನ ।

ಅರ್ಥ :- ತೇಷು = ಪಾಂಡವರು, ಆಗತೇಷು ಸತ್ಸು = ಬರಲು, ಪೌರಸ್ಯ = ಪಟ್ಟಣಿಗರಿಗೆ, ಜಾನಪದಕಸ್ಯ = ಹಳ್ಳಿಯ, ಜನಸ್ಯ ಚ = ಜನರಿಗೆ, ಸುಮಹಾನ್ = ಬಹಳ, ಪ್ರಹರ್ಷಃ = ಸಂತೋಷವು, ಅಭವತ್ = ಆಯಿತು, ಭೀಷ್ಮಾದಿಕಾಃ ಚ = ಭೀಷ್ಮಾದಿಗಳಾದರೂ, ಉಚ್ಚೈಃ = ಅತ್ಯಂತ, ಮುದಿತಾಃ ಸಂತಃ = ಸಂತೋಷಪಟ್ಟವರಾಗಿ, ನೃಪೇಣ ಸಹ = ರಾಜನ ಜೊತೆಗೆ, ಪ್ರತಿಪೂಜ್ಯ = ಆದರಿಸಿ, ಮಹೋತ್ಸವೇನ = ಮಹಾಸಂಭ್ರಮದಿಂದ, ಗೇಹಂ = ಅರಮನೆಯೊಳಗೆ, ಆವೇಶಯತ್ = ಪ್ರವೇಶ ಮಾಡಿಸಿದರು.

ತಾತ್ಪರ್ಯ :- ಪಾಂಡವರು ಹಸ್ತಿನಾಪುರಕ್ಕೆ ಬರಲು ಅವರನ್ನು ನೋಡಿ ಪಟ್ಟಣಿಗರು ಕುರುದೇಶದ ಎಲ್ಲ ಜನರು ಬಹಳ ಸಂತೋಷಪಟ್ಟರು ಭೀಷ್ಮಾದಿಗಳೂ ಸಹಿತ ಬಹಳ ಸಂತೋಷಪಟ್ಟ ರಾಜ ಧೃತರಾಷ್ಟ್ರನ ಜೊತೆಗೆ ಪಾಂಡವರನ್ನು ಗೌರವಿಸಿ ಮಹಾಸಂಭ್ರಮದಿಂದ ಅರಮನೆಗೆ ಕರೆದುಕೊಂಡು ಹೋದರು.

ಕೃಷ್ಣಾಮಪೂಜಯದತೀವ ಚ ಸೌಬಲೀ ಸಾ
ದುರ್ಯೋಧನಸ್ಯ ದಯಿತಾಸಹಿತಾತ್ರ ತೇಪಿ ।
ಊಷುಸ್ತತಶ್ಚ ನಿಜಪುತ್ರಕದುರ್ವಿನೀತ್ಯಾ
ಕೃಷ್ಣಾನಿಮಿತ್ತಮುರುಭೀತಿತ ಆಹ ಭೀಮಾತ್ ॥ ೧೮೧ ॥

**ಪದಚ್ಛೇದ:-** ಕೃಷ್ಣಾಮ್, ಅಪೂಜಯತ್, ಅತೀವ, ಚ, ಸೌಬಲೀ, ಸಾ, ದುರ್ಯೋಧನಸ್ಯ, ದಯಿತಾಸಹಿತಾ, ಅತ್ರ, ತೇ, ಅಪಿ, ಊಷುಃ, ತತಃ, ಚ, ನಿಜಪುತ್ರಕದುರ್ವಿನೀತ್ಯಾ, ಕೃಷ್ಣಾನಿಮಿತ್ತಮ್, ಉರುಭೀತಿತಃ, ಆಹ, ಭೀಮಾತ್ ।

**ಅರ್ಥ:-** **ಸಾ** = ಆ; **ಸೌಬಲೀ** = ಗಾಂಧಾರಿಯು; **ದುರ್ಯೋಧನಸ್ಯ** = ದುರ್ಯೋಧನನ; **ದಯಿತಾಸಹಿತಾ** = ಹೆಂಡತಿಯಿಂದ ಸಹಿತಳಾಗಿ; **ಕೃಷ್ಣಾಂ** = ದ್ರೌಪದಿಯನ್ನು; **ಅತೀವ** = ಬಹಳವಾಗಿ; **ಅಪೂಜಯತ್** = ಸತ್ಕರಿಸಿದಳು; **ತೇ ಅಪಿ** = ಆ ಪಾಂಡವರಾದರೂ; **ಅತ್ರ** = ಈ ಧೃತರಾಷ್ಟ್ರನ ಮನೆಯಲ್ಲಿ; **ಊಷುಃ** = ವಾಸಮಾಡಿದರು; **ತತಃ ಚ** = ಆ ನಂತರ; ಕೃಷ್ಣಾನಿಮಿತ್ತಾತ್ = ದ್ರೌಪದಿಯ ಕಾರಣದಿಂದ; ನಿಜಪುತ್ರಕದುರ್ವಿನೀತ್ಯಾ = ತನ್ನ ಮಗನಾದ ದುರ್ಯೋಧನನ ಕೆಟ್ಟ ನೀತಿಯ್ಂದ; **ಭೀಮಾತ್** = ಭೀಮನಿಂದ; **ಉರುಭೀತಿತಃ** = ಬಹಳ ಭಯಗೊಂಡು; **ಆಹ** = (ಕುಂತಿಗೆ) ಹೇಳಿದಳು.

**ತಾತ್ಪರ್ಯ:-** ಊರಿಗೆ ಬಂದ ದ್ರೌಪದೀಸಮೇತರಾದ ಪಾಂಡವರನ್ನು ಗಾಂಧಾರಿಯು ದುರ್ಯೋಧನನ ಹೆಂಡತಿಯೊಂದಿಗೆ ಸತ್ಕರಿಸಿದಳು. ಪಾಂಡವರು ಧೃತರಾಷ್ಟ್ರನ ಮನೆಯಲ್ಲಿಯೇ ವಾಸಮಾಡಿದರು. ಆ ನಂತರ ದ್ರೌಪದಿಯಲ್ಲಿ ಮೋಹಗೊಂಡು ತನ್ನ ಮಗ ನಡೆದುಕೊಂಡ ತಪ್ಪು ನಡುವಳಿಕೆಗೆ ಭೀಮನು ಎಲ್ಲಿ ತನ್ನ ಮಗನನ್ನು ಕೊಂದುಹಾಕುವನೋ ಎಂಬ ಭಯದಿಂದ ಕುಂತಿಗೆ ಹೇಳಿದಳು.

**ಕುಂತಿ ಪ್ರಯಾಹಿ ಸಹಿತಾ ಸ್ನುಷಯಾ ಗೃಹಂ ಸ್ವಂ**
**ಭೀಮಾದ್ ಬಿಭೇಮಿ ನಿಜಪುತ್ರಕದುರ್ವಿನೀತ್ಯಾ ।**
**ಕೃಷ್ಣಾ ತ್ರಿಲೋಕವನಿತಾಧಿಕರೂಪಸಾರಾ ಯಸ್ಮಾದಿತಿ**
**ಸ್ಮ ಸಸುತಾ ಪ್ರಯಯೌ ಗೃಹಂ ಸಾ ॥ ೧೮೨ ॥**

**ಪದಚ್ಛೇದ:-** ಕುಂತಿ, ಪ್ರಯಾಹಿ, ಸಹಿತಾ, ಸ್ನುಷಯಾ, ಗೃಹಂ, ಸ್ವಂ, ಭೀಮಾತ್, ಬಿಭೇಮಿ, ನಿಜಪುತ್ರಕದುರ್ವಿನೀತ್ಯಾ, ಕೃಷ್ಣಾ ತ್ರಿಲೋಕವನಿತಾಧಿಕರೂಪಸಾರಾ, ಯಸ್ಮಾತ್, ಇತಿ, ಸ್ಮ, ಸಸುತಾ, ಪ್ರಯಯೌ, ಗೃಹಂ, ಸಾ.

**ಅರ್ಥ:-** **ಕುಂತಿ** = ಎಲೈ ಕುಂತಿಯೇ!; **ಸ್ನುಷಯಾ** = ಸೊಸೆಯಾದ ದ್ರೌಪದಿಯಿಂದ; **ಸಹಿತಾ** = ಸಹಿತಳಾದಿ; **ಸ್ವಂ** = ನಿನ್ನ; **ಗೃಹಂ** = ಮನೆಯನ್ನು ಕುರಿತು; **ಪ್ರಯಾಹಿ** = ಹೊರಡು; **ನಿಜಪುತ್ರಕದುರ್ವಿನೀತ್ಯಾ** = ನನ್ನ ಮಗನ ಕೆಟ್ಟ ನಡುವಳಿಕೆಯಿಂದ; **ಭೀಮಾತ್** = ಭೀಮನ ದೆಸೆಯಿಂದ; **ಬಿಭೇಮಿ** =

ಹೆದರಿದ್ದೇನೆ; **ಯಸ್ಮಾತ್** = ಯಾವ ಕಾರಣದಿಂದ; **ಕೃಷ್ಣಾ** = ದ್ರೌಪದಿಯು; **ತ್ರೈಲೋಕವನಿತಾಧಿಕರೂಪಸಾರಾ** = ಮೂರುಲೋಕದ ಎಲ್ಲಸ್ತ್ರೀಯರ್ಗಿಂತ ಹೆಚ್ಚು ಸೌಂದರ್ಯವುಳ್ಳವಳು; **ಇತಿ** = ಎಂದು(ಹೇಳಿದಳು); **ಸಾ** = ಆ ಕುಂತಿಯು; **ಸಸುತಾ** = ಮಕ್ಕಳೊಂದಿಗೆ; **ಗೃಹಂ** = ತನ್ನ ಮನೆಯನ್ನು ಕುರಿತು; **ಪ್ರಯಯೌ ಸ್ಮ** = ಹೊರಟಳು.

**ತಾತ್ಪರ್ಯ**:- ಕುಂತಿಯೇ! ನೀನು ನಿನ್ನ ಸೊಸೆಯೊಂದಿಗೆ ನಿನ್ನ ಮನೆಗೇ ಹೊರಡು. ಏಕೆಂದರೆ ನಿನ್ನ ಸೊಸೆಯು ಮೂರ್ಲೋಕದ ಎಲ್ಲ ಸ್ತ್ರೀಯರ ಸೌಂದರ್ಯವನ್ನು ಸೇರಿಸಿದರೂ ಅದಕ್ಕಿಂತ ಅಧಿಕಸುಂದರಳು. ದುರ್ನಡತೆಯ ನನ್ನ ಮಗನಾದ ದುರ್ಯೋಧನನು ಮತ್ತೇನು ತಪ್ಪು ಮಾಡಿ ಭೀಮನಿಂದ ಹತನಾಗುವನೋ ಎಂಬ ಭಯ ನನಗೆ ಎಂದು ಹೇಳಿದಳು. ಆಗ ಕುಂತಿಯು ತನ್ನ ಮಕ್ಕಳು ಮತ್ತು ಸೊಸೆಯೊಂದಿಗೆ ತನ್ನ ಮನೆಗೆ ಹೋದಳು.

**ಊಷುಸ್ತಥೈವ ಪರಿವತ್ಸರಪಂಚಕಂ ತೇ**
**ಪಾಂಡೋರ್ಗೃಹೇ ಸುಸುಖಿನೋಖಿಲಭೋಗಯುಕ್ತಾಃ ।**
**ಕೃಷ್ಣಾ ಚ ತೇಷು ಪೃಥಗೇವ ಚತುಃಸ್ವರೂಪಾ**
**ರೇಮೇ ತಥೈಕತನುರಪ್ಯಭಿಮಾನಿಭೇದಾತ್ ॥ ೧೮೩ ॥**

**ಪದಚ್ಛೇದ**:- ಊಷುಃ, ತಥಾ, ಏವ, ಪರಿವತ್ಸರಪಂಚಕಂ, ತೇ, ಪಾಂಡೋಃ, ಗೃಹೇ, ಸುಸುಖಿನಃ, ಅಖಿಲಭೋಗಯುಕ್ತಾಃ, ಕೃಷ್ಣಾ, ಚ, ತೇಷು, ಪೃಥಕ್, ಏವ, ಚತುಃಸ್ವರೂಪಾ, ರೇಮೇ, ತಥಾ, ಏಕತನುಃ, ಅಪಿ, ಅಭಿಮಾನಿಭೇದಾತ್.

**ಅರ್ಥ**:- **ತಥೈವ** = ಹಾಗೆಯೇ; **ತೇ** = ಆ ಪಾಂದವರು; **ಪಾಂಡೋಃ** = ಪಾಂಡುರಾಜನ; **ಗೃಹೇ** = ಮನೆಯಲ್ಲಿ; **ಪರಿವತ್ಸರಪಂಚಕಂ** = ಐದುಪರಿವತ್ಸರಗಳ ಕಾಲ; **ಅಖಿಲಭೋಗಯುಕ್ತಾಃ** = ಎಲ್ಲ ಭೋಗಗಳಿಂದ ಸಹಿತರಾಗಿ; **ಸುಸುಖಿನಃ** = ಶ್ರೇಷ್ಠ ಸುಖವುಳ್ಳವರಾಗಿ; **ಊಷುಃ** = ವಾಸಮಾಡಿದರು; **ಕೃಷ್ಣಾ ಚ** = ದ್ರೌಪದಿಯಾದರೂ; **(ಯದ್ಯಪಿ)** = ನಿಜವಾಗಿಯೂ; **ಏಕತನುಃ** = ಒಂದೇ ಶರೀರವುಳ್ಳವಳು; **ತಥಾಪಿ** = ಆದರೂ ಕೂಡ; **ಅಭಿಮಾನಿಭೇದಾತ್** = ಆ ಶರೀರದ ಅಭಿಮಾನಿಗಳಾದ ಶಚಿಮೊದಲಾದವರ ಭೇದದಿಂದ; **ಪೃಥಕ್ ಏವ** = ಪ್ರತ್ಯೇಕವಾಗಿಯೇ; **ಚತುಃಸ್ವರೂಪಾ** = ನಾಲ್ಕುಸ್ವರೂಪವುಳ್ಳವಳಾಗಿ; **ತೇಷು** = ಆ ಪಾಂಡವರಲ್ಲಿ; **ಪೃಥಕ್ ಏವ** = ಪ್ರತ್ಯೇಕವಾಗಿಯೇ; **ರೇಮೇ** = ರಮಿಸಿದಳು.

**ತಾತ್ಪರ್ಯ**:- ಪಾಂದವರು ಸಕಲಭೋಗಗಳಿಂದ ಸುಖಪಡುತ್ತಾ ಪಾಂಡುರಾಜನ ಮನೆಯಲ್ಲಿಯೇ ಐದು ಪರಿವತ್ಸರಗಳ ಕಾಲ ವಾಸಮಾಡಿದರು. ದ್ರೌಪದಿಗೆ ಒಂದೇಶರೀರವಿದ್ದರೂ ಆ ಶರೀರದಲ್ಲಿ ಅಭಿಮಾನಿಗಳಾಗಿ ಇದ್ದ ಶಚಿಮೊದಲಾದವರು ಬೇರೆಯಾದ್ದರಿಂದ ತಾನೂ ನಾಲ್ಕು ರೂಪಧರಿಸಿ ಪ್ರತ್ಯೇಕವಾಗಿ ಪಾಂದವರೊಂದಿಗೆ ಇದ್ದಳು.

**ವಿಶೇಷವಿಚಾರ**:- ಬೃಹಸ್ಪತಿಯು ಒಂದೊಂದು ರಾಶಿಯಲ್ಲಿದ್ದು ಕಳೆಯುವ ಒಂದು ವರ್ಷಕ್ಕೆ ಪರಿವತ್ಸರ ಎನ್ನುತ್ತಾರೆ-(ಜನಾರ್ದನೀಯ).

**ಕನ್ಯೈವ ಸಾಭವದತಃ ಪ್ರತಿವಾಸರಂ ಚ**
**ಜನ್ಮಾಭವದ್ಧ್ಯಭಿಮತೇಃ ಪೃಥಗೇವ ನಾಶಾತ್ ।**
**ಪ್ರಾಯೋ ಹಿ ನಾಭಿಮತಿನಾಶಮವಾಪ ವಾಣೀ**
**ತಸ್ಮಾನ್ಮರುಚ್ಚ ಸಕಲೇಷ್ವಭಿವಿಷ್ಟ ಆಸೀತ್ ॥ ೧೮೪ ॥**

**ಪದಚ್ಛೇದ:- ಕನ್ಯಾ, ಏವ, ಸಾ, ಅಭವತ್, ಅತಃ, ಪ್ರತಿವಾಸರಂ, ಚ, ಜನ್ಮ, ಅಭವತ್, ಹಿ, ಅಭಿಮತೇಃ, ಪೃಥಕ್, ಏವ, ನಾಶಾತ್, ಪ್ರಾಯಃ, ಹಿ, ನ, ಅಭಿಮತಿನಾಶಮ್, ಅವಾಪ, ವಾಣೀ, ತಸ್ಮಾತ್, ಮರುತ್, ಚ, ಸಕಲೇಷು, ಅಭಿವಿಷ್ಟಃ, ಆಸೀತ್.**

**ಅರ್ಥ**:- **ತತಃ** = ಅನಂತರ; **ಸಾ** = ಆ ದ್ರೌಪದಿಯು; **ಪ್ರತಿವಾಸರಂ ಚ** = ಪ್ರತಿದಿನವೂ; **ಕನ್ಯಾ ಏವ** = ಕನ್ಯೆಯೇ; **ಅಭವತ್** = ಆದಳು; **ಹಿ** = ಏಕೆಂದರೆ; (**ಪ್ರತಿವಾಸರಂ**) = ಪ್ರತಿದಿನವೂ; **ಪೃಥಕ್ ಏವ** = ಪ್ರತ್ಯೇಕವಾಗಿಯೇ; **ಅಭಿಮತೇಃ** = (ಒಳಗಿದ್ದ ದೇವತೆಗಳ) ಅಭಿಮಾನ ನಾಶದಿಂದ; (**ಪೃಥಕ್ ಏವ**) = ಪ್ರತ್ಯೇಕವಾದದ್ದೇ; **ಜನ್ಮ** = ಜನ್ಮವು; **ಅಭವತ್** = ಆಗುತ್ತಿತ್ತು; **ವಾಣೀ** = ಭಾರತಿಯಾದರೂ; **ಪ್ರಾಯೇಣ** = ಸರ್ವಾತ್ಮನಾ; **ಅಭಿಮತಿನಾಶಂ** = ಅಭಿಮಾನದ ನಾಶವನ್ನು; **ನ ಅವಾಪ** = ಹೊಂದಲಿಲ್ಲ; **ಹಿ** = ಆದ್ದರಿಂದಲೇ; **ಮರುತ್ ಚ** = ಮುಖ್ಯಪ್ರಾಣನಾದರೂ; **ಸಕಲೇಷು** = ಯುಧಿಷ್ಠಿರಾದಿ ಎಲ್ಲರಲ್ಲೂ; **ಅಭಿವಿಷ್ಟಃ** = ಪ್ರವೇಶಿಸಿದವರು; **ಆಸೀತ್** = ಆಗಿದ್ದರು.

**ತಾತ್ಪರ್ಯ**:- ದ್ರೌಪದಿಯ ಶರೀರದಲ್ಲಿ ಅಭಿಮಾನಿಗಳಾದ ಶಚ್ಯಾದಿಗಳು ಬೇರೆಯಿದ್ದರೂ ಶರೀರವು ಒಂದೇ ಆದ್ದರಿಂದ ವ್ಯಭಿಚಾರ ದೋಷವಾದೀತು ಎಂಬ ಪ್ರಶ್ನೆಗೆ ಆಚಾರ್ಯರು ಇಲ್ಲಿ ಉತ್ತರಿಸುತ್ತಿದ್ದಾರೆ-

ದ್ರೌಪದಿಗೆ ಪ್ರತಿನಿತ್ಯವೂ ಹಿಂದಿನ ದಿನದ ಶರೀರವು ನಾಶವಾಗಿ ಹೊಸ ಜನ್ಮ ಉಂಟಾಗುತ್ತಿತ್ತು. ಹೇಗೆಂದರೆ ಶರೀರವು ಅದೇ ಇದ್ದರೂ ಆ ಶರೀರಕ್ಕೆ ಹಿಂದಿನ ದಿನ ಇದ್ದ ಶಚ್ಯಾದಿಗಳ ಅಭಿಮಾನವು ನಾಶವಾಗುವುದರಿಂದ ಅವರಿಂದ ಅಭಿಮನ್ಯಮಾನವಾದ ಶರೀರವೂ ನಾಶಗೊಂಡಂತೆ. ಹಾಗಾಗಿ ಪ್ರತಿದಿನವೂ ಅವಳು ಕನ್ಯಯಾಗುತ್ತಿದ್ದಳು.

ಹಾಗಿದ್ದಲ್ಲಿ ಭಾರತೀದೇವಿಯ ಅಭಿಮಾನವೂ ನಾಶವಾಗುತ್ತಿತ್ತೇ? ಎಂದರೆ, ಇಲ್ಲ. ಅವಲ ಅಭಿಮಾನವು ಶರೀರದ ಮೇಲೆ ಸರ್ವಾತ್ಮನಾ ನಾಶವಾಗುತ್ತಿರಲಿಲ್ಲ. ಆದ್ದರಿಂದಲೇ ಮುಖ್ಯಪ್ರಾಣದೇವರು ಯುಧಿಷ್ಠಿರಾದಿಗಳಲ್ಲಿ ಸರ್ವಾತ್ಮನಾ ಪ್ರವೇಶಿಸಿರುತ್ತಿದ್ದರು.

**ಧರ್ಮಾತ್ಮಜಾದಿಷು ಮರುತ್ ಪ್ರತಿವಿಷ್ಟ ಏಷಾಂ**
**ಬುದ್ಧಿಂ ವಿಮೋಹ್ಯ ರಮತೇ ಸತತಂ ತಯಾ ಯತ್ ।**
**ಶುದ್ಧೈವ ಸಾ ಹಿ ತತ ಏವ ದಿನೇದಿನೇ ಚ**
**ಸಮ್ಮೋಹತೋ ಮರಣವದ್ ಭವತೀಹ ಕನ್ಯಾ ॥ ೧೮೫ ॥**

ಪದಚ್ಛೇದ:- **ಧರ್ಮಾತ್ಮಜಾದಿಷು, ಮರುತ್, ಪ್ರತಿವಿಷ್ಟಃ, ಏಷಾಂ, ಬುದ್ಧಿಂ, ವಿಮೋಹ್ಯ, ರಮತೇ, ಸತತಂ, ತಯಾ, ಯತ್, ಶುದ್ಧಾ, ಏವ, ಸಾ, ಹಿ, ತತಃ, ಏವ, ದಿನೇದಿನೇ, ಚ, ಸಮ್ಮೋಹತಃ, ಮರಣವತ್, ಭವತಿ, ಇಹ, ಕನ್ಯಾ.**

**ಅರ್ಥ:-** **ಯತ್** = ಯಾವ ಕಾರಣದಿಂದ; **ಧರ್ಮಾತ್ಮಜಾದಿಷು** = ಯುಧಿಷ್ಠಿರಾದಿಗಳಲ್ಲಿ; **ಪ್ರತಿವಿಷ್ಟಃ** = ಪ್ರವೇಶಿಸಿದ; **ಮರುತ್** = ಮುಖ್ಯಪ್ರಾಣನು; **ಏಷಾಂ** = ಈ ಯುಧಿಷ್ಠಿರಾದಿಗಲ; **ಬುದ್ಧಿಂ** = ಬುದ್ಧಿಯನ್ನು; **ವಿಮೋಹ್ಯ** = (ದ್ರೌಪದಿಯ ವಿಷಯದಲ್ಲಿ) ಭ್ರಮೆಗೊಳಿಸಿ; **ಸತತಂ** = ಯಾವಾಗಲೂ; **ತಯಾ** = ಆ ದ್ರೌಪದಿಯೊಂದಿಗೆ; **ರಮತೇ** = ಕ್ರೀಡಿಸುತ್ತಾರೆ; **ತತಃ ಏವ** = ಆದ್ದರಿಂದಲೇ; **ಸಾ ಹಿ** = ಆ ದ್ರೌಪದಿಯಾದರೂ; **ಶುದ್ಧಾ ಏವ** = ಪರಿಶುದ್ಧಳೇ; **ದಿನೇದಿನೇ ಚ** = ಪ್ರತಿದಿನವೂ; **ಸಮ್ಮೋಹತಃ** = ಅಭಿಮಾನ ಬಿಡುವುದರಿಂದ; **ಇಹ** = ಈ ಶರೀರದಲ್ಲಿ; **ಕನ್ಯಾ** = ಕನ್ಯೆಯೇ; **ಭವತಿ** = ಆಗುತ್ತಾರೆ.

**ತಾತ್ಪರ್ಯ:-** ಭೀಮಸೇನದೇವರು ದ್ರೌಪದಿಯಲ್ಲಿ ರಮಿಸುವ ಪ್ರಕಾರವನ್ನು ಹೇಳುತ್ತಾರೆ- ಮುಖ್ಯಪ್ರಾಣದೇವರು ಯುಧಿಷ್ಠಿರಾದಿಗಳಲ್ಲಿ ಪ್ರವೇಶಿಸಿ ಅವರು ದ್ರೌಪದಿಯ ವಿಷಯದಲ್ಲಿ ತಿಳುವಳಿಕೆಯಿಲ್ಲದಂತೆ

ಮಾಡುತ್ತಾರೆ. ಮತ್ತು ತಾವು ದ್ರೌಪದಿಯೊಂದಿಗೆ ರಮಿಸುತ್ತಾರೆ. ಆದ್ದರಿಂದ ದ್ರೌಪದಿಯು ಪರುಶುದ್ಧಳೇ. ಪ್ರತಿದಿನವೂ ಶಚ್ಯಾದಿಗಳಿಗೆ ಅಭಿಮಾನ ನಾಶವಾಗುವುದರಿಂದ ಮರಣದಂತೆಯೇ ಆಗಿರುತ್ತದೆ.

**ನೋ ಸುಪ್ತಿವತ್ ತ್ವಿದಮತೋನ್ಯವಶತ್ವತೋ ಹಿ**
**ದೇವಸ್ಯ ಸಂಸ್ಮೃತಿತ ಏವ ಹರೇರ್ನ ಮೋಹಃ ।**
**ನಾವೇಶವಚ್ಚ ತತ ಏವ ಮೃತೇಃ ಸ್ವರೂಪಮೇತತ್**
**ತ್ವತಃ ಪ್ರತಿದಿನಂ ಜನನಾದ್ಧಿ ಕನ್ಯಾ ॥ ೧೮೬ ॥**

**ಪದಚ್ಛೇದ:- ನೋ, ಸುಪ್ತಿವತ್, ತು, ಇದಮ್, ಅತಃ, ಅನ್ಯವಶತ್ವತಃ, ಹಿ, ದೇವಸ್ಯ, ಸಂಸ್ಮೃತಿತಃ, ಏವ, ಹರೇಃ, ನ, ಮೋಹಃ, ನ, ಆವೇಶವತ್, ಚ, ತತಃ, ಏವ, ಮೃತೇಃ, ಸ್ವರೂಪಮ್, ಏತತ್, ತು, ಅತಃ, ಪ್ರತಿದಿನಂ, ಜನನಾತ್, ಹಿ, ಕನ್ಯಾ.**

**ಅರ್ಥ:-** **ಹಿ** = ಏಕೆಂದರೆ; **ಇದಂ ತು** = ಈ ಅಭಿಮಾರಾಹಿತ್ಯವಾದರೂ; **ಅನ್ಯವಶತ್ವತಃ** = ಮತ್ತೊಬ್ಬರ ಅಧೀನದಲ್ಲಿರುವುದರಿಂದ; **ಸುಪ್ತಿವತ್ ನೋ** = ಸುಷುಪ್ತಿಯಂತಲ್ಲ; **ದೇವಸ್ಯ** = ಕ್ರೀಡಾದಿಗುನವಿಶಿಷ್ಟನಾದ; **ಹರೇಃ** = ಶ್ರೀಹರಿಯ; **ಸಂಸ್ಮೃತಿತಃ** = ಸ್ಮರಣೆಯಿರುವುದರಿಂದ; **ಮೋಹಃ ನ** = ಮೂರ್ಛೆಯೂ ಅಲ್ಲ; **ತತಃ ಏವ** = ಆ ಕಾರಣದಿಂದಲೇ; **ಆವೇಶವತ್ ಚ** = ಭೂತಾವೇಶದಂತೆಯೂ; **ನ** = ಅಲ್ಲ; **ಏತತ್** = ಇದು; **ಮೃತೇಃ** = ಸಾವಿಗೆ; **ಸ್ವರೂಪಂ** = ಸಮನಾದದ್ದು; **ಅತಃ ತು** = ಆದ್ದರಿಂದಲೇ; **ಪ್ರತಿದಿನಂ** = ಪ್ರತಿಧಿನವೂ; **ಜನನಾತ್** = ಹುಟ್ಟುವುದರಿಂದ; **ಕನ್ಯಾ** = ಕನ್ಯೆಯೇ.

**ತಾತ್ಪರ್ಯ:-** ದ್ರೌಪದಿಯ ಶರೀರದಲ್ಲಿರುವ ಶಚ್ಯಾದಿಗಳು ಅಭಿಮಾನ ಬಿಡುವ ಈ ವಸ್ಥೆಯು ಮರಣಕ್ಕೆ ಸಮಾನವೆಂದು ಸಮರ್ಥಿಸುತ್ತಿದ್ದಾರೆ- ಈ ವಸ್ಥೆಯು ಸುಷುಪ್ತಿಯಲ್ಲ. ಏಕೆಂದರೆ ಸುಷುಪ್ತಿಯಲ್ಲಿ ನಮ್ಮ ಶರೀರವು ಮತ್ತೊಬ್ಬರ ಅಧೀನವಾಗಿರುವುದಿಲ್ಲ. ಆದರೆ ಇಲ್ಲಿ ದ್ರೌಪದಿ ಶರೀರವು ಶಚ್ಯಾದಿಗಳನ್ನು ಬಿಟ್ಟು ಮತ್ತೊಬ್ಬರ ಅಧೀನವಾಗಿದೆ. ಈ ಅವಸ್ಥೆಯು ಮೂರ್ಛೆಯಾಗಲೀ ಭೂತಾವೇಶದಂತಾಗಲೀ ಅಲ್ಲ. ಏಕೆಂದರೆ ಮೂರ್ಛೆಯಲ್ಲಾಗಲೀ ಭೂತಾವೇಶವಿದ್ದಾಗಾಗಲೀ ಹರಿಸ್ಮರಣೆ ಇರುವುದಿಲ್ಲ. ಆದರೆ ಇಲ್ಲಿ ಶಚ್ಯಾದಿಗಳಿಗೆ ಹರಿಸ್ಮರಣೆಯಿದೆ. ಆದ್ದರಿಂದ ಪರಿಶೇಷವಾಗಿ ಮರಣಸದೃಶವೆಂದೇ ಒಪ್ಪಿಕೊಳ್ಳಬೇಕು. ಹೀಗೆ ಪ್ರತಿದಿನವೂ ಮರಣವುಂಟಾಗಿ ಹೊಸ ಜನ್ಮ ಬರುತ್ತಿದ್ದರಿಂದ ದ್ರೌಪದಿಯು ಶುದ್ಧಳೇ ಆಗಿದ್ದಳು.

ಏವಂ ಸ ವಾಯುರನುವಿಷ್ಟಯುಧಿಷ್ಠಿರಾದಿ
ಭೀಮಾತ್ಮನೈವ ರಮತೇ ಸತತಂ ತಯೈಕಃ ।
ಅನ್ಯಾದೃಶಾ ಹಿ ಸುರಭುಕ್ತಿರತೋಽನ್ಯರೂಪಾ
ಮಾನುಷ್ಯಭುಕ್ತಿರಿತಿ ನಾತ್ರ ವಿಚಾರ್ಯಮಸ್ತಿ ॥ ೧೮೭ ॥

ಪದಚ್ಛೇದ:- ಏವಂ, ಸಃ, ವಾಯುಃ, ಅನಿವಿಷ್ಟಯುಧಿಷ್ಠಿರಾದಿಭೀಮಾತ್ಮನಾ, ಏವ, ರಮತೇ, ಸತತಂ, ತಯಾ, ಏಕಃ, ಅನ್ಯಾದೃಶಾ, ಹಿ, ಸುರಭುಕ್ತಿಃ, ಅತಃ, ಅನ್ಯರೂಪಾ, ಮಾನುಷ್ಯಭುಕ್ತಿಃ, ಇತಿ, ನ, ಅತ್ರ, ವಿಚಾರ್ಯಮ್, ಅಸ್ತಿ.

ಅರ್ಥ:- ಏವಂ = ಈ ರೀತಿಯಾಗಿ; ಸಃ = ಆ; ವಾಯುಃ = ಮುಖ್ಯಪ್ರಾಣನು; ಅನುವಿಷ್ಟಯುಧಿಷ್ಠಿರಾದಿಭೀಮಾತ್ಮನಾ ಏವ = ಯುಧಿಷ್ಠಿರಾದಿಗಳಲ್ಲಿ ಪ್ರವೇಶಿಸಿದ ರೂಪಗಳು ಮತ್ತು ಭೀಮರೂಪದಿಂದಲೇ; ಸತತಂ = ಯಾವಾಗಲೂ; ತಯಾ = ಆ ದ್ರೌಪದಿಯೊಂದಿಗೆ; ಏಕಃ = ತಾವೊಬ್ಬರೇ; ರಮತೇ = ವಿಹರಿಸುತ್ತಾರೆ; ಸುರಭುಕ್ತಿಃ = ದೇವತೆಗಳ ರತಿಯು; ಅನ್ಯಾದೃಶಾ = ಬೇರೆ ರೀತಿಯಾದದ್ದು; ಮಾನುಷ್ಯಭುಕ್ತಿಃ = ಮನುಷ್ಯರ ರತಿಯು; ಅನ್ಯರೂಪಾ = ಬೇರೆವಿಧವಾದದ್ದು; ಹಿ = ನಿಶ್ಚಯವು; ಇತಿ = ಆದ್ದರಿಂದ; ಅತ್ರ = ಈ ವಿಷಯದಲ್ಲಿ; ವಿಚಾರ್ಯಂ = ವಿಮರ್ಶಿಸಬೇಕಾದದ್ದು; ನ ಅಸ್ತಿ = ಇರುವುದಿಲ್ಲ.

ತಾತ್ಪರ್ಯ:- ಮುಖ್ಯಪ್ರಾಣದೇವರು ಯುಧಿಷ್ಠಿರಾದಿಗಳಲ್ಲಿ ಒಂದುರೂಪದಿಂದಿದ್ದು ಮತ್ತು ಭೀಮರೂಪದಿಂದ ದ್ರೌಪದಿಯೊಂದಿಗೆ ವಿಹರಿಸುತ್ತಿದ್ದರು. ಆದ್ದರಿಂದ ಯಾವುದೇ ದೋಷವಿಲ್ಲ.

ವಾಯುದೇವರು ಉಧಿಷ್ಠಿರನಲ್ಲಿ ಒಂದುರೂಪದಿಂದಿದ್ದು ಮತ್ತು ಭೀಮರೂಪದಿಂದ ರತಿಯಲ್ಲಿ ತೊದಗುತ್ತಿದ್ದರು. ಭಾರತೀದೇವ್ಯೂ ಕೂಡ ಶ್ಯಾಮಲಾದಿಗಳಲ್ಲಿ ಒಮ್ಮು ರೂಪದಿಂದಿದ್ದು, ದ್ರೌಪದೀರೂಪದಿಂದ್ದು ವಿಹಾರಮಾಡುತ್ತಿದ್ದರು. ಹಾಗಿದ್ದಲ್ಲಿ ಯುಧಿಷ್ಠಿರನಲ್ಲಿ ಯುಧಿಷ್ಠಿರ ಮತ್ತು ವಾಯುದೇವರು ಇರುತ್ತಾರೆ; ದ್ರೌಪದಿಯ ದೇಹದಲ್ಲಿ ಶ್ಯಾಮಲಾ ಮತ್ತು ಭಾರತಿಯರು ಇರುತ್ತಾರೆ ಎಂದಾಯಿತು. ಆಗ ಯುಧಿಷ್ಠಿರನು ಭಾರತೀದೇವಿಯನ್ನು ಬಿಟ್ಟು ತನ್ನ ಸ್ತ್ರೀಯಾದ ಶ್ಯಾಮಲೆಯೊಂದಿಗೆ ಮಾತ್ರ ವಿಹರಿಸುತ್ತಾರೆ ಎನ್ನುವುದು ಹೇಗೆ ಸಾಧ್ಯ? ಎಂದರೆ ಅದಕ್ಕೆ ಆಚಾರ್ಯರು ಉತ್ತರಿಸುತ್ತಾರೆ- ಮನುಷ್ಯರ ಭೋಗಕ್ರಮವನ್ನು ಅನುಸರಿಸಿ ಈ ಪ್ರಶ್ನೆ ಮಾಡಲಾಗಿದೆ. ಮಾನುಷಭೋಗದಲ್ಲಿ ಇದು ಅಸಾಧ್ಯ. ಆದರೆ

ದೇವತಾಭೋಗವು ಬೇರೆರೀತಿಯಾದದ್ದು. ಆದ್ದರಿಂದ ಒಂದೇ ಶರೀರದಲ್ಲಿ ಇಬ್ಬರಿದ್ದರೂ ಯುಧಿಷ್ಠಿರನಿಗೆ ಶ್ಯಾಮಲೆಯೊಂದಿಗೆ ಮಾತ್ರ ಭೋಗ ಎಂದು ಹೇಳಬಹುದು.

**ವಿಶೇಷವಿಚಾರ:-** ಅನುವಿಷ್ಟಾಃ ಯುಧಿಷ್ಠಿರಾದಯಃ ಯೇನ ಸಃ ಅನುವಿಷ್ಟಯುಧಿಷ್ಠಿರಾದಿಃ, ಅನುವಿಷ್ಟಯುಧಿಷ್ಠಿರಾದಿಶ್ಚ ಭೀಮಶ್ಚ ತಾವೇವ. ಆತ್ಮಾ ಸ್ವರೂಪಂ ಯಸ್ಯ ಸಃ - (ಜನಾರ್ದನೀಯ).

**ವಾಸಿಷ್ಠಯಾದವವೃಷಾವಪಿ ಕೇಶವೌ ತೌ**
**ತತ್ರೋಷತುಃ ಪರಮಸೌಹೃದತೋ ಹಿ ತೇಷು ।**
**ತಾಭ್ಯಾಮನಂತಗುಣಪೂರ್ಣಸುಖಾತ್ಮಕಾಭ್ಯಾಂ**
**ಪಾರ್ಥಾಶ್ಚ ತೇ ಮುಮುದಿರೇ ಯುತಸತ್ಕಥಾಭಿಃ ॥ ೧೮೮ ॥**

**ಪದಚ್ಛೇದ:-** ವಾಸಿಷ್ಠಯಾದವವೃಷೌ, ಅಪಿ, ಕೇಶವೌ, ತೌ, ತತ್ರ,, ಊಷತುಃ, ಪರಮಸೌಹೃದತಃ, ಹಿ, ತೇಷು, ತಾಭ್ಯಾಮ್, ಅನಂತಗುಣಪೂರ್ಣ ಸುಖಾತ್ಮಕಾಭ್ಯಾಂ, ಪಾರ್ಥಾಃ, ಚ, ತೇ, ಮುಮುದಿರೇ, ಯುತಸತ್ಕಥಾಭಿಃ.

**ಅರ್ಥ:-** **ವಾಸಿಷ್ಠಯಾದವವೃಷೌ** = ವಸಿಷ್ಠ ಮತ್ತು ಯದುಕುಲೋತ್ಪನ್ನರಾದ; **ತೌ** = ಆ; **ಕೇಶವೌ ಅಪಿ** = ಅ=ಶ್ರೀಹರಿಯ ಅವತಾರರಾದ ವೇದವ್ಯಾಸದೇವರು ಮತ್ತು ಶ್ರೀಕೃಷ್ಣನು; **ತೇಷು** = ಆ ಪಾಂಡವರಲ್ಲಿ; **ಪರಮಸೌಹೃದತಃ ಹಿ** = ಬಹಳ ಪ್ರೀತಿಯಿಂದಲೇ; **ತತ್ರ** = ಪಾಂಡವರ ಮನೆಯಲ್ಲಿ; **ಊಷತುಃ** = ವಾಸಮಾಡಿದರು; **ಅನಂತಗುಣ ಪೂರ್ಣಸುಖಾತ್ಮಕಾಭ್ಯಾಂ** = ಅನಂತಗುಣಗಳಿಂದ ಸುಖಸ್ವರೂಪರಾದ; **ತಾಭ್ಯಾಂ** = ಅವರಿಬ್ಬರಿಂದ ಕೂಡಿದ; **ತೇ** = ಆ; **ಪಾರ್ಥಾಃ ಚ** = ಕುಂತಿಯ ಮಕ್ಕಳಾದರೂ; **ಯುತಸತ್ಕಥಾಭಿಃ** = ಪರಸ್ಪರ ಉತ್ತಮಮಾತುಗಳಿಂದ; **ಮುಮುದಿರೇ** = ಸಂತೋಷಪಟ್ಟರು.

**ತಾತ್ಪರ್ಯ:-** ಆ ಪಾಡವರಲ್ಲಿ ಸ್ನೇಹವಿದ್ದ ವೇದವ್ಯಾಸರು ಮತ್ತು ಶ್ರೀಕೃಷ್ಣನು ಆ ಪಾಂಡವರ ಮನೆಯಲ್ಲಿಯೇ ವಾಸಮಾಡಿದರು. ಅಲ್ಲಿ ಪಾಂದವರಿಗೂ ಕೃಷ್ಣವೇದವ್ಯಾಸರಿಗೂ ಪ್ರಶ್ನೋತ್ತರ ರೂಪವಾದ ಮಾತುಗಳು ನಡೆಯುತ್ತಿತ್ತು. ಅದರಿಂದ ಪಾಂಡವರು ಬಹಳ ಸಂತಸಪಟ್ಟರು.

**ಪೂರ್ವಂ ಹಿ ತೇಷು ವನಗೇಷು ಬಭೂವ**
**ಕಾಶಿರಾಜ್ಞಃ ಸುತಾಕೃತ ಉರುಕ್ಷಿತಿಪಾಲಯೋಗಃ ।**

**ತತ್ರ ಸ್ವಯಂವರಗತಾಂ ಧೃತರಾಷ್ಟ್ರಪುತ್ರಃ**
**ಕನ್ಯಾಂ ಬಲಾಜ್ಜಗೃಹ ಆತ್ಮಬಲಾತಿದೃಪ್ತಃ ॥ ೧೮೯ ॥**

ಪದಚ್ಛೇದ:- ಪೂರ್ವಂ, ಹಿ, ತೇಷು, ವನಗೇಷು, ಬಭೂವ, ಕಾಶಿರಾಜ್ಞಃ, ಸುತಾಕೃತೇ, ಉರುಕ್ಷಿತಿಪಾಲಯೋಗಃ, ತತ್ರ, ಸ್ವಯಂಬರಗತಾಂ, ಧೃತರಾಷ್ಟ್ರಪುತ್ರಃ, ಕನ್ಯಾಂ, ಬಲಾತ್, ಜಗೃಹೇ, ಆತ್ಮಬಲಾತಿದೃಪ್ತಃ.

**ಅರ್ಥ:-** **ಪೂರ್ವಂ ಹಿ** = ಹಿಂದೆ; **ತೇಷು** = ಆ ಪಾಂಡವರು; **ವನಗೇಷು (ಸತ್ಸು)** = ಹಿಡಿಂಬವನದಲ್ಲಿದ್ದಾಗ; **ಕಾಶಿರಾಜ್ಞಃ** = ಕಾಶಿರಾಜನ; **ಸುತಾಕೃತೇ** = ಮಗಳಿಗಾಗಿ; **ಉರುಕ್ಷಿತಿಪಾಲಯೋಗಃ** = ಶ್ರೇಷ್ಠರಾಜರ ಸಮಾಗಮವು; **ಬಭೂವ** = ಉಂಟಾಗಿದ್ದಿತು. **ತತ್ರ** = ಅಲ್ಲಿ; **ಆತ್ಮಬಲಾತಿದೃಪ್ತಃ** = ತನ್ನ ಬಲದಿಂದ ಅತ್ಯಂತ ಕೊಬ್ಬಿದ; **ಧೃತರಾಷ್ಟ್ರಪುತ್ರಃ** = ಧೃತರಾಷ್ಟ್ರನ ಮಗನಾದ ದುರ್ಯೋಧನನು; **ಸ್ವಯಂವರಗತಾಂ** = ಸ್ವಯಂವರದಲ್ಲಿದ್ದ; **ಕನ್ಯಾಂ** = ಕನ್ಯೆಯನ್ನು; **ಬಲಾತ್** = ಬಲಾತ್ಕಾರದಿಂದ; **ಜಗ್ರಾಹ** = ಕರೆದುಕೊಂಡು ಹೋದನು.

**ತಾತ್ಪರ್ಯ:-** ಹಿಂದೆ ಪಾಂಡವರು ಹಿಡಿಂಬವನದಲ್ಲಿದ್ದ ಸಮಯದಲ್ಲಿ ಕಾಸಿರಾಜನ ಮಗಳ ಸ್ವಯಂವರವು ನಡೆದಿತ್ತು. ಶ್ರೇಷ್ಠರಾಜರೆಲ್ಲರೂ ನೆರೆದಿದ್ದರು. ಆಗ ತನ್ನ ಬಲದಿಂದ ಕೊಬ್ಬಿದ್ದ ದುರ್ಯೋಧನನು ಸ್ವಯಂವರ ದಲ್ಲಿದ್ದ ಕನ್ಯೆಯಯನ್ನು ಬಲಾತ್ಕಾರದಿಂದ ಕರೆದುಕೊಂಡುಹೋದನು.

**ಪೂರ್ವಂ ಹಿ ರಾಜಗಣನೇ ಮಗಧಾಧಿರಾಜಃ**
**ಸಂಖ್ಯಾತ ಇತ್ಯತಿರುಷಾ ಪ್ರಗೃಹೀತಕನ್ಯೇ ।**
**ದುರ್ಯೋಧನೇ ನೃಪತಯೋ ಯುಯುಧುಃ**
**ಸ್ಮ ತೇನ ಭಗ್ನಾಶ್ಚ ಕರ್ಣಸಹಿತೇನ ಸಹಾನುಜೇನ ॥ ೧೯೦ ॥**

ಪದಚ್ಛೇದ:- ಪೂರ್ವಂ, ಹಿ, ರಾಜಗಣನೇ, ಮಗಧಾಧಿರಾಜಃ, ಸಂಖ್ಯಾತಃ, ಇತಿ, ಅತಿರುಷಾ, ಪ್ರಗೃಹೀತಕನ್ಯೇ, ದುರ್ಯೋಧನೇ, ನೃಪತಯಃ, ಯುಯುಧುಃ, ಸ್ಮ ತೇನ, ಭಗ್ನಾಃ, ಚ, ಕರ್ನಸಹಿತೇನ, ಸಹಾನುಜೇನ,

**ಅರ್ಥ:-** **ರಾಜಗಣನೇ** = ರಾಜರನ್ನು ಪರಿಗಳಿಸುವ ಸಮಯದಲ್ಲಿ; **ಮಗದಾಧಿರಾಜಃ** = ಮಗಧ ದೇಶದ ರಾಜನಾದ ಜರಾಸಂಧನು; **ಪೂರ್ವಂ** = (ದುರ್ಯೋಧನನಿಗಿಂತ) ಮೊದಲು; **ಸಂಖ್ಯಾತಃ** = ಪರಿಗಣಿತನಾದನು; **ಇತಿ ಹಿ** = ಎಂಬ ಕಾರಣದಿಂದಲೇ; **ಅತಿರುಷಾ** = ಅತ್ಯಂತಸಿಟ್ಟಿನಿಂದ; **ದುರ್ಯೋಧನೇ** = ದುರ್ಯೋಧನನು; **ಪ್ರಗೃಹೀತಕನ್ಯೇ (ಸತಿ)** = ಕನ್ಯೆಯನ್ನು ಕರೆದೊಯ್ಯುತ್ತಿರಲು; **ನೃಪತಯಃ** = ರಾಜರು; **ಯುಯುಧುಃ**

**ಸ್ಮ** = ಯುದ್ಧಮಾಡಿದರು; **ಚ** = ಮತ್ತು; **ಕರ್ಣಸಹಿತೇನ** = ಕರ್ನನಿಂದಸಹಿತನಾದ; **ಸಹಾನುಜೇನ** = ತಮ್ಮಂದಿರಿಂದ ಸಹಿತನಾದ; **ತೇನ** = ಆ ದುರ್ಯೋಧನನಿಂದ; **ಭಗ್ನಾಃ (ಅಭೂವನ್)** = ಸೋತವರಾದರು.

**ತಾತ್ಪರ್ಯ:-** ಸ್ವಯಂವರದಲ್ಲಿ ದುರ್ಯೋಧನನಿಗಿಂತ ಮೊದಲು ಜರಾಸಂಧನನ್ನು ಪರಿಗಣಿಸಿದ್ದು ದುರ್ಯೋಧನನ ಸಿಟ್ಟಿಗೆ ಕಾರಣವಾಯಿತು. ಆದ್ದರಿಂದ ಕನ್ಯೆಯನ್ನು ಅಪಹರಿಸಿದನು. ರಾಜರೆಲ್ಲರೂ ಯುದ್ಧಕ್ಕೆ ಬರಲು ಕರ್ಣ ಮತ್ತು ತಮ್ಮಂದಿರೊಂದಿಗೆ ಸೇರಿ ಅವರನ್ನು ಸೋಲಿಸಿದನು.

**ಭಗ್ನೇಷು ತೇಷು ಪುನರಾತ್ತಶರಾಸನೇಷು**
**ಕರ್ಣೋ ಜಗಾದ ಧೃತರಾಷ್ಟ್ರಸುತಂ ಪ್ರಯಾಹಿ ।**
**ಯುಕ್ತಃ ಸಹೋದರಜನೈರ್ಗುರುಭೀಷ್ಮಮುಖ್ಯಯುಕ್ತಸ್ಯ**
**ತೇ ನ ಪುರಮೇತ್ಯ ಹಿ ಧರ್ಷಣೇಶಾಃ ॥ ೧೯೧ ॥**

**ಪದಚ್ಛೇದ:-** ಭಗ್ನೇಷು, ತೇಷು, ಪುನಃ, ಆತ್ತಶರಾಸನೇಷು, ಕರ್ಣಃ, ಜಗಾದ, ಧೃತರಾಷ್ಟ್ರಸುತಂ, ಪ್ರಯಾಹಿ, ಯುಕ್ತಃ, ಸಹೋದರಜನೈಃ, ಗುರುಭೀಷ್ಮಮುಖ್ಯಯುಕ್ತಸ್ಯ, ತೇ, ನ, ಪುರಮ್, ಏತ್ಯ, ಹಿ, ಧರ್ಷಣೇಶಾಃ.

**ಅರ್ಥ:-** **ಭಗ್ನೇಷು** = ಸೋತಂತಹ; **ತೇಷು** = ಆ ರಾಜರು; **ಪುನಃ** = ಮತ್ತೆ; **ಆತ್ತಶರಾಸನೇಷು (ಸತ್ಸು)** = ಧನುಸ್ಸನ್ನು ಹಿಡಿದವರಾಗಲು; **ಕರ್ಣಃ** = ಕರ್ಣನು; **ಧೃತರಾಷ್ಟ್ರಸುತಂ (ಪ್ರತಿ)** = ಧೃತರಾಷ್ಟ್ರನ ಮಗನಾದ ದುರ್ಯೋಧನನನ್ನು ಕುರಿತು; **ಸಹೋದರಜನೈಃ** = ತಮ್ಮಂದಿರೊಂದಿಗೆ; **ಯುಕ್ತಃ (ಸನ್)** = ಕೂಡಿದವನಾಗಿ; **(ತ್ವಂ)** = ನೀನು; **ಪ್ರಯಾಹಿ** = ಹೊರಡು; **ಪುರಂ** = ನಗರವನ್ನು; **ಏತ್ಯ** = ಹೊಂದಿ; **ಗುರುಭೀಷ್ಮಮುಖ್ಯಯುಕ್ತಸ್ಯ** = ಗುರುಗಳಾದ ದ್ರೋಣಾಚಾರ್ಯರು, ಭೀಷ್ಮಾಚಾರ್ಯರು ಮೊದಲಾದವರೊಂದಿಗೆ ಸಹಿತನಾದ; **ತೇ** = ನಿನ್ನ; **ಧರ್ಷಣೇಶಾಃ ನ** = ಆಕ್ರಮಿಸಲು ಸಮರ್ಥರಾಗುವುದಿಲ್ಲ; **ಹಿ** = ನಿಶ್ಚಯವು; **(ಇತಿ)** = ಎಂದು; **ಜಗಾದ** = ಹೇಳಿದನು.

**ತಾತ್ಪರ್ಯ:-** ಸೋತ ರಾಜರೆಲ್ಲರೂ ಪುನಃ ಬಿಲ್ಲನ್ನು ಹಿಡಿದು ಯುದ್ಧಕ್ಕೆ ಬರಲು ಕರ್ಣನು ದುರ್ಯೋಧನನಿಗೆ ಹೇಳುತ್ತಾನೆ- ತಮ್ಮಂದಿರೊಂದಿಗೆ ನೀನು ಹಸ್ತಿನಾವತಿಗೆ ಹೋಗು. ಅಲ್ಲಿ ಗುರುಗಳಾದ ದ್ರೋಣಾಚಾರ್ಯರು, ಭೀಷ್ಮಾಚಾರ್ಯರು ಇರುವುದರಿಂದ ಈ ರಾಜರು ನಿನ್ನನ್ನು ಎದುರಿಸಲಾಗುವುದಿಲ್ಲ.

ಏಕಾಂತತೋ ಜಯಮವೀಕ್ಷ್ಯ ಚ ನಾನುಯಾತಿ
ಬಾರ್ಹದ್ರಥಃ ಪುರಗತಸ್ಯ ಜಯೇ ನ ನಿಷ್ಠಾ ।
ದ್ರೌಣಿಂ ಚ ರುದ್ರತನುಮೇಷ ಸದಾ ವಿಜಾನನ್
ನೋ ತೇನ ಯುದ್ಧಮಭಿವಾಂಛತಿ ರುದ್ರಭಕ್ತಃ ॥ ೧೯೨ ॥

ಪದಚ್ಛೇದ:- ಏಕಾಂತತಃ, ಜಯಮ್, ಅವೀಕ್ಷ್ಯ, ಚ, ನ, ಅನುಯಾತಿ, ಬಾರ್ಹದ್ರಥಃ, ಪುರಗತಸ್ಯ, ಜಯೇ, ನ, ನಿಷ್ಠಾ, ದ್ರೌಣಿಂ, ಚ, ರುದ್ರತನುಮ್, ಏಷಃ, ಸದಾ, ವಿಜಾನನ್, ನೋ, ತೇನ, ಯುದ್ಧಮ್, ಅಭಿವಾಂಛತಿ, ರುದ್ರಭಕ್ತಃ.

**ಅರ್ಥ:-** **ಬಾರ್ಹದ್ರಥಃ** = ಬೃಹದ್ರಥಸುತನಾದ ಜರಾಸಂಧನು; **ಏಕಾಂತತಃ** = ನಿಶ್ಚಯವಾಗಿ; **ಜಯಮ್** = ಗೆಲುವನ್ನು; **ಅವೀಕ್ಷ್ಯ** = ಕಾಣದೇ; **ನ ಅನುಯಾತಿ** = ಅನುಸರಿಸಿಬರುವುದಿಲ್ಲ; **ಚ** = ಮತ್ತು; **ಪುರಗತಸ್ಯ** = ನಗರದಲ್ಲಿರುವ; **ತೇ** = ನಿನ್ನ (ಮೇಲೆ); **ಜಯೇ** = ಗೆಲುವಿನಲ್ಲಿ; **ನಿಷ್ಠಾ ನ (ಅಸ್ತಿ)** = ನಿಶ್ಚಯವಿಲ್ಲ. **ಚ** = ಮತ್ತು; **ಸದಾ** = ಯಾವಾಗಲೂ; **ರುದ್ರಭಕ್ತಃ** = ಶಿವಭಕ್ತನಾದ; **ಏಷಃ** = ಈ ಜರಾಸಂಧನು; **ದ್ರೌಣಿಂ** = ದ್ರೋಣಸುತನಾದ ಅಶ್ವತ್ಥಾಮನನ್ನು; **ರುದ್ರತನುಂ** = ರುದ್ರನ ಅವತಾರನನ್ನಾಗಿ; **ವಿಜಾನನ್ (ಸನ್)** = ತಿಳಿದವನಾಗಿ; **ತೇನ (ಸಹ)** = ಆ ಅಶ್ವತ್ಥಾಮನೊಂದಿಗೆ; **ಯುದ್ಧಂ** = ಯುದ್ಧವನ್ನು; **ನೋ ಅಭಿವಾಂಛತಿ** = ಬಯಸುವುದಿಲ್ಲ.

**ತಾತ್ಪರ್ಯ:-** ಕರ್ಣನು ದುರ್ಯೋಧನನಿಗೆ ಹೇಳುತ್ತಿದ್ದಾನೆ- ನಗರಕ್ಕೆ ಹೊರಟ ನಿನ್ನನ್ನು ಜರಾಸಂಧನೂ ಅನುಸರಿಸಿ ಬರುವುದಿಲ್ಲ. ಏಕೆಂದರೆ ಅವನಿಗೆ ಗೆಲ್ಲುತ್ತೇನೆಂಬ ನಿಶ್ಚಯವಿಲ್ಲ. ನಗರಕ್ಕೆ ಸೇರಿದಮೇಲೆ ಅದರ್ ದುರ್ಗಮತೆಯನ್ನು ತಿಳಿದು ಗೆಲುವಿನ ನಿಶ್ಚಯವಿಲ್ಲದಿರುವುದರಿಂದ ಬರುವುದಿಲ್ಲ. ಅಷ್ಟೇ ಅಲ್ಲದೆ ಅಲ್ಲಿ ಅಶ್ವತ್ಥಾಮನಿದ್ದಾನೆ. ಅವನು ಶಿವನ ಅವತಾರನೆಂದು ತಿಳಿದ ಮಹಾಶಿವಭಕ್ತನಾದ ಜರಾಸಂಧನು ಅವನೊಂದಿಗೆ ಯುದ್ಧಮಾಡಲು ಬಯಸುವುದಿಲ್ಲ.

ಏಕೋಹಮೇವ ನೃಪತೀನ್ ಪ್ರತಿಯೋಧಯಿಷ್ಯೆ
ಏತೈರ್ಮಯಿ ಪ್ರತಿಜಿತೇಪಿ ನ ತೇಸ್ತ್ಯಕೀರ್ತಿಃ ।
ಏಕಂ ಚ ತೇನುಜಮಿಮೇ ಯದಿ ಪೌರುಷೇಣ
ಗೃಹ್ಣೀಯುರತ್ರ ತವ ಕೀರ್ತಿರುಪೈತಿ ನಾಶಮ್ ॥ ೧೯೩ ॥

ಪದಚ್ಛೇದ:- ಏಕಃ, ಅಹಮ್, ಏವ, ನೃಪತೀನ್, ಪ್ರತಿಯೋಧಯಿಷ್ಯೇ, ಏತೈಃ, ಮಯಿ, ಪ್ರತಿಜಿತೇ, ಅಪಿ, ನ, ತೇ, ಅಸ್ತಿ, ಅಕೀರ್ತಿಃ, ಏಕಂ, ಚ, ತೇ, ಅನುಜಮ್, ಇಮೇ, ಯದಿ, ಪೌರುಷೇಣ, ಗೃಹ್ಣೀಯುಃ, ಅತ್ರ, ತವ, ಕೀರ್ತಿಃ, ಉಪೈತಿ, ನಾಶಮ್.

**ಅರ್ಥ:-** **ಅಹಮ್** = ನಾನು; **ಏಕಃ ಏವ** = ಒಬ್ಬನೇ; **ನೃಪತೀನ್** = ರಾಜರನ್ನು; **ಪ್ರತಿಯೋಧಯಿಷ್ಯೇ** = ಎದುರಿಸುತ್ತೇನೆ. **ಏತ್ಯೈಃ** = ಈ ರಾಜರಿಂದ; **ಮಯಿ** = ನಾನು; **ಪ್ರತಿಜಿತೇ ಅಪಿ** = ಗೆಲ್ಲಲ್ಪಟ್ಟರೂ ಕೂಡ; **ತೇ** = ನಿನಗೆ; **ಅಕೀರ್ತಿಃ** = ಅಪಕೀರ್ತಿಯು; **ನ ಅಸ್ತಿ** = ಉಂಟಾಗುವುದಿಲ್ಲ. **ಯದಿ** = ಒಂದು ವೇಳೆ; **ಅತ್ರ** = ಇಲ್ಲಿ; **ಇಮೇ** = ಈ ರಾಜರು; **ಪೌರುಷೇಣ** = ಪರಾಕ್ರಮದಿಂತ; **ತೇ** = ನಿನ್ನ; **ಏಕಂ ಚ** = ಒಬ್ಬನೇ; **ಅನುಜಂ** = ತಮ್ಮನನ್ನು; **ಗೃಹ್ಣೀಯುಃ** = ಸೆರೆಹಿಡಿದರೆ; **ತವ** = ನಿನ್ನ; **ಕೀರ್ತಿಃ** = ಯಶಸ್ಸು; **ನಾಶಂ** = ನಾಶವನ್ನು; **ಉಪೈತಿ** = ಹೊಂದುತ್ತದೆ.

**ತಾತ್ಪರ್ಯ:-** ಯುದ್ಧಕ್ಕೆ ಬರುತ್ತಿರುವ ಈ ರಾಜರನ್ನು ನಾನು ಎದುರಿಸುತ್ತೇನೆ. ಈ ರಾಜರು ನನ್ನನ್ನು ಗೆದರೂ ನಿನಗೆ ಯಾವ ಅಪಕೀರ್ತಿಯೂ ಬರುವುದಿಲ್ಲ. ಈ ರಾಜರು ತಮ್ಮ ಪೌರುಷದಿಂದ ನಿನ್ನ ತಮ್ಮಂದಿರಲ್ಲಿ ಒಬ್ಬನನ್ನು ಸೆರೆಹಿಡಿದರೂ ನಿನ್ನ ಕೀರ್ತಿಯು ನಾಶವಾಗುತ್ತದೆ.

**ಭೀಷ್ಮಾದಯೋಽಪಿ ನ ಹಿ ಯೋಧಯಿತುಂ**
**ಸಮರ್ಥಾ ರಾಜ್ಞಾ ಹ್ಯನೇನ ತತ ಏವ ಹಿ ಬಾಹ್ಲಿಕೋಸ್ಯ ।**
**ಭೃತ್ಯೋ ಬಭೂವ ನ ತು ಭೀಷ್ಮಮಯಂ ಯುಧೇಗಾದ್**
**ರಾಜಾ ನಹೀತಿ ನ ಚ ತೇನ ವಿರೋಧ ಆಸೀತ್ ॥ ೧೯೪ ॥**

**ಪದಚ್ಛೇದ:–** ಭೀಷ್ಮಾದಯಃ, ಅಪಿ, ನ, ಹಿ, ಯೋಧಯಿತುಂ, ಸಮರ್ಥಾಃ, ರಾಜ್ಞಾ, ಹಿ, ಅನೇನ, ತತಃ, ಏಹಿ, ಹಿ, ಬಾಹ್ಲಿಕಃ, ಅಸ್ಯ, ಭೃತ್ಯಃ, ಬಭೂವ, ನ, ತು, ಭೀಷ್ಮಮ್, ಅಯಂ, ಯುಧೇ, ಅಗಾತ್, ರಾಜಾ, ಹಿ, ಅನೇನ, ನ, ಹಿ, ಇತಿ, ನ, ಚ, ತೇನ, ವಿರೋಧಃ, ಆಸೀತ್.

**ಅರ್ಥ:-** **ಅನೇನ** = ಈ; **ರಾಜ್ಞಾ ಹಿ** = ರಾಜನಾದ ಜರಾಸಂಧನೊಂದಿಗೆ; **ಯೋಧಯಿತುಂ** = ಯುದ್ಧಮಾಡಲು; **ಭೀಷ್ಮಾದಯಃ ಅಪಿ** = ಭೀಷ್ಮಾಚಾರ್ಯರೇ ಮೊದಲಾದವರೂ; **ನ ಶಕ್ತಾಃ ಹಿ** = ಸಮರ್ಥರಲ್ಲವಷ್ಟೆ; **ತತಃ ಏವ** = ಆದ್ದರಿಂದಲೇ; **ಬಾಹ್ಲಿಕಃ** = ಬಾಹ್ಲಿಕನು; **ಅಸ್ಯ** = ಈ ಜರಾಸಂಧನಿಗೆ; **ಭೃತ್ಯಃ** = ಭೃತ್ಯನು; **ಬಭೂವ** = ಆದನು; **ಹಿ** = ಪ್ರಸಿದ್ಧವು; **ರಾಜಾ** = ರಾಜನು; **ನ ಹಿ** = ಅಲ್ಲವಷ್ಟೇ; **ಇತಿ** = ಎಂಬಕಾರಣದಿಂದ; **ಅಯಂ** = ಈ ಜರಾಸಂಧನು; **ಭೀಷ್ಮಂ ತು** = ಭೀಷ್ಮನನ್ನಾದರೂ; **ಯುಧೇ** = ಯುದ್ಧದಲ್ಲಿ; **ನ ಅಗಾತ್** = ಹೊಂದಲಿಲ್ಲ. **ತೇನ ಚ** = ಆದ್ದರಿಂದಲೇ; **ವಿರೋಧಃ** = (ಭೀಷ್ಮಜರಾಸಂಧರಿಗೆ) ವಿರೋಧವು; **ನ ಆಸೀತ್** = ಇರಲಿಲ್ಲ.

ತಾತ್ಪರ್ಯ:- ಭೀಷ್ಮನೂ ಕೂಡ ಜರಾಸಂಧನೊಂದಿಗೆ ಯುದ್ಧಮಾಡಲು ಸಮರ್ಥನಲ್ಲ. ಮಹಾಪರಾಕ್ರಮಿಯಾದ ಬಾಹ್ಲೀಕನೇ ಇವನ ಭೃತ್ಯನಾದನು. ಭೀಷ್ಮನು ರಾಜನಲ್ಲವೆಂಬ ಕಾರಣದಿಂದಷ್ಟೇ ಜರಾಸಂಧನು ಭೀಷ್ಮನೊಂದಿಗೆ ಯುದ್ಧಕ್ಕೆ ಹೋಗಿಲ್ಲ. ಆದ್ದರಿಂದಲೇ ಇವರಿಗೆ ವಿರೋಧದ ಪ್ರಸಂಗವೇ ಬಂದಿರಲಿಲ್ಲ.

**ಇತ್ಯುಕ್ತ ಆಶು ಸ ವಿಮೃಶ್ಯ ಯಯೌ ಪುರಂ**
**ಸ್ವಂ ಕರ್ಣೋಽಪಿ ತೈಃ ಪ್ರತಿಯುಯೋಧ ಜಿಗಾಯ ಚೈನಾನ್ ।**
**ಕರ್ಣಸ್ಯ ವೀರ್ಯಮಗಣಯ್ಯ ಜರಾಸುತೋಽಪಿ**
**ಹ್ಯೇಕೈಕಮೇವ ನೃಪತಿಂ ಸ ದಿದೇಶ ಯೋದ್ಧುಮ್ ॥ ೧೯೫ ॥**

**ಪದಚ್ಛೇದ:– ಇತಿ, ಉಕ್ತಃ, ಆಶು, ಸಃ, ವಿಮೃಶ್ಯ, ಯಯೌ, ಪುರಂ, ಸ್ವಂ, ಕರ್ಣಃ, ಅಪಿ, ತೈಃ, ಪ್ರತಿಯುಯೋಧ, ಜಿಗಾಯ, ಚ, ಏನಾನ್, ಕರ್ಣಸ್ಯ, ವೀರ್ಯಮ್, ಅಗಣಯ್ಯ, ಜರಾಸುತಃ, ಅಪಿ, ಹಿ, ಏಕೈಕಮ್, ಏವ, ನೃಪತಿಂ, ಸಃ, ದಿದೇಶ, ಯೋದ್ಧುಮ್.**

ಅರ್ಥ:- **ಇತಿ** = ಹೀಗೆ; **ಉಕ್ತಃ** = (ಕರ್ಣನಿಂದ) ಹೇಳಲ್ಪಟ್ಟ; **ಸಃ** = ಆ ದುರ್ಯೋಧನನು; **ವಿಮೃಶ್ಯ** = ವಿಮರ್ಶಿಸಿ; **ಆಶು** = ಶೀಘ್ರವಾಗಿ; **ಸ್ವಂ** = ತನ್ನ; **ಪುರಂ (ಪ್ರತಿ)** = ಪಟ್ಟಣವನ್ನು ಕುರಿತು; **ಯಯೌ** = ಹೊರಟನು. **ಕರ್ಣಃ ಅಪಿ** = ಕರ್ಣನೂ ಕೂಡ; **ತೈಃ (ಸಹ)** = ಆ ರಾಜರೊಂದಿಗೆ; **ಪ್ರತಿಯುಯೋಧ** = ಯುದ್ಧಮಾಡಿದನು; **ಚ** = ಮತ್ತು; **ಏನಾನ್** = ಈ ರಾಜರನ್ನು; **ಜಿಗಾಯ** = ಗೆದ್ದನು. **ಜರಾಸುತಃ** = ಜರೆ ಎಂಬ ರಾಕ್ಷಸಿಯ ಮಗನಾದ; **ಸಃ ಅಪಿ** = ಆ ಜರಾಸಂಧನಾದರೂ; **ಕರ್ಣಸ್ಯ** = ಕರ್ಣನ; **ವೀರ್ಯಮ್** = ಪರಾಕ್ರಮವನ್ನು; **ಅಗಣಯ್ಯ** = ಲೆಕ್ಕಿಸದೇ; **ಏಕೈಕಮ್ ಏವ** = ಒಬ್ಬೊಬ್ಬನೇ; **ನೃಪತಿಂ** = ರಾಜನನ್ನು; **ಯೋದ್ಧುಂ** = ಯುದ್ಧಮಾಡಲು; **ದಿದೇಶ ಹಿ** = ಆದೇಶಿಸಿದನಷ್ಟೆ.

ತಾತ್ಪರ್ಯ:- ಹೀಗೆ ಕರ್ಣನು ಹೇಳಲು ಎಲ್ಲವನ್ನೊ ವಿಮರ್ಶಿಸಿ ದುರ್ಯೋಧನನು ತನ್ನ ಪಟ್ಟನಕ್ಕೆ ಹೊರಟನು. ಕರ್ಣನು ರಾಜರನ್ನು ಎದುರಿಸಿ ಗೆದ್ದನು. ಕಾರಣ ಕರ್ಣನ ಪರಾಕ್ರಮವನ್ನು ಲೆಕ್ಕಿಸದ ಜರಾಸಂಧನು ಎಲ್ಲ ರಾಜರೊಗೂ ಎಬ್ಬೊಬ್ಬರಂತೆ ಕರ್ಣನ ಮೇಲೆ ಯುದ್ಧಕ್ಕೆ ಹೋಗಲು ಆದೇಶಿಸಿದ್ದನು.

**ಸರ್ವೇಷು ತೇಷು ವಿಜಿತೇಷ್ವಭಿಜಗ್ಮಿವಾನ್**
**ಸ ಯೋದ್ಧುಂ ಬೃಹದ್ರಥಸುತೋಽಪ್ಯಮುನಾ ರಥೇನ ।**

**ತಂ ಚೈವ ರಾಮವರತೋ ವಿರಥಂ ವಿಶಸ್ತ್ರಂ**
**ಚಕ್ರೇ ಸ ಚೈನಮಥ ಮುಷ್ಟಿಭಿರಭ್ಯುಪೇತೌ ॥ ೧೯೬ ॥**

**ಪದಚ್ಛೇದ:- ಸರ್ವೇಷು, ತೇಷು, ವಿಜಿತೇಷು, ಅಭಿಜಗ್ಮಿವಾನ್, ಸಃ, ಯೋದ್ಧುಂ, ಬೃಹದ್ರಥಸುತಃ, ಅಪಿ, ಅಮುನಾ, ರಥೇನ, ತಂ, ಚ, ಏವ, ರಾಮವರತಃ, ವಿರಥಂ, ವಿಶಸ್ತ್ರಂ, ಚಕ್ರೇ, ಸಃ, ಚ, ಏನಮ್, ಅಥ, ಮುಷ್ಟಿಭಿಃ, ಅಭ್ಯುಪೇತೌ.**

**ಅರ್ಥ:-** **ತೇಷು** = ಆ; **ಸರ್ವೇಷು** = ಎಲ್ಲ ರಾಜರು; **ವಿಜಿತೇಷು (ಸತ್ಸು)** = ಸೋಲಲು; **ಬೃಹದ್ರಥಸುತಃ** = ಬೃಹದ್ರಥನ ಮಗನಾದ; **ಸಃ ಅಪಿ** = ಆ ಜರಾಸಂಧನೂ; **ಅಮುನಾ (ಸಹ)** = ಈ ಕರ್ಣನೊಂದಿಗೆ; **ಯೋದ್ಧುಂ** = ಯುದ್ಧಮಾಡಲು; **ರಥೇನ** = ರಥದಿಂದ; **ಅಭಿಜಗ್ಮಿವಾನ್** = ಹೊರಟನು. **ಸಃ** = ಆ ಕರ್ಣನು; **ರಾಮವರತಃ ಏವ** = ಪರಶುರಾಮನವರದ ಪ್ರಭಾವದಿಂದಲೇ; **ತಂ ಚ** = ಆ ಜರಾಸಂಧನನ್ನೂ; **ವಿರಥಂ** = ರಥರಹಿತನನ್ನಾಗಿಯೂ; **ಶಸ್ತ್ರಂ** = ಶಸ್ತ್ರರಹಿತನನ್ನಾಗಿಯೂ; **ಚಕ್ರೇ** = ಮಾಡಿದನು. **ಸಃ ಚ** = ಆ ಜರಾಸಂಧನೂ; **ಏನಂ** = ಈ ಕರ್ಣನನ್ನು; **ವಿರಥಂ** = ರಥರಹಿತನನ್ನಾಗಿಯೂ; **ವಿಶಸ್ತ್ರಂ** = ಶಸ್ತ್ರರಹಿತನನ್ನಾಗಿಯೂ; **ಚಕ್ರೇ** = ಮಾಡಿದನು. **ಅಥ** = ಆ ನಂತರ; **ಮುಷ್ಟಿಭಿಃ** = ಮುಷ್ಟಿಗಳಿಂದ; **ಅಭ್ಯುಪೇತೌ** = ಯುದ್ಧಮಾಡಿದರು.

**ತಾತ್ಪರ್ಯ:-** ಆ ಎಲ್ಲ ರಾಜರನ್ನು ಕರ್ಣನು ಸೋಲಿಸಿದ ನಂತರ ಜರಾಸಂಧನೇ ಯುದ್ಧಕ್ಕೆ ರಥವನ್ನೇರಿ ಬಂದನು. ಕರ್ಣನು ಪರಶುರಾಮದೇವರ ವರಪ್ರಭಾವದಿಂದ ಜರಾಸಂಧನ ರಥವನ್ನು ಶಸ್ತ್ರವನ್ನು ನಾಶಮಾಡಿದನು. ಜರಾಸಂಧನೂ ಕರ್ನನ ರಥ ಶಸ್ತ್ರಗಳನ್ನು ನಾಶಮಾಡಿದನು. ನಂತರ ಇಬ್ಬರೂ ಮುಷ್ಟಿಯುದ್ಧವನ್ನು ಆರಂಭಿಸಿದರು.

**ಸಂಧೌ ಯದೈವ ಜರಯಾ ಪ್ರತಿಸಂಧಿತಸ್ಯ**
**ಕರ್ಣೋ ಜಘಾನ ನ ಪರತ್ರ ತುತೋಷ ರಾಜಾ ।**
**ನ ಜ್ಞಾತಮೇತದಪಿ ಹೋ ಹಲಿನಾ ತದೇತಜ್ಜ್ಞಾತಮ್**
**ತ್ವಯಾ ಭವ ತತೋ ಮಮ ಭೃತ್ಯ ಏವ ॥ ೧೯೭ ॥**

**ಪದಚ್ಛೇದ:- ಸಂಧೌ, ಯದಾ, ಏವ, ಜರಯಾ, ಪ್ರತಿಸಂದಿತಸ್ಯ, ಕರ್ಣಃ, ಜಘಾನ, ನ, ಪರತ್ರ, ತುತೋಷ, ರಾಜಾ, ನ, ಜ್ಞಾತಮ್, ಏತತ್, ಅಪಿ, ಹೋ, ಹಲಿನಾ, ತತ್, ಏತತ್, ಜ್ಞಾತಂ, ತ್ವಯಾ, ಭವ, ತತಃ, ಮಮ, ಭೃತ್ಯಃ, ಏವ.**

ಅರ್ಥ:- ಯದಾ = ಯಾವಾಗ; ಜರಯಾ = ಯರೆ ಎಂಬ ರಾಕ್ಷಸಿಯಿಂದ; ಪ್ರತಿಸಂದಿತಸ್ಯ = ಪುನಃ ಸೇರಿಸಲ್ಪಟ್ಟ; ಸಂಧೌ ಏವ = ಸಂಧಿಯಲ್ಲೇ; ಕರ್ಣಃ = ಕರ್ಣನು; ಜಘಾನ = ಹೊಡೆದನೋ; ಪರತ್ರ = ಬೇರೆ ಸ್ಥಳದಲ್ಲಿ; ನ ಜಘಾನ = ಹೊಡೆಯಲಿಲ್ಲವೋ; (ತದಾ) = ಆಗ; ರಾಜಾ = ಮಗಧರಾಜನಾದ ಜರಾಸಂಧನು; ತುತೋಷ = ಸಂತುಷ್ಟನಾದನು. ಏತತ್ = ಈ ನನ್ನ ಮರ್ಮಸ್ಥಾನವು; ಹಲಿನಾ ಅಪಿ = ಬಲರಾಮನಿಂದಲೂ; ನ ಜ್ಞಾತಂ = ತಿಳಿಯಲ್ಪಡಲಿಲ್ಲ; ತತ್ ಏತತ್ = ಅಂತಹ ಈ ಮರ್ಮವು; ತ್ವಯಾ = ನಿನ್ನಿಂದ; ಜ್ಞಾತಂ = ತಿಳಿಯಲ್ಪಟ್ಟಿದೆ; ಹೋ = ಆಶ್ಚರ್ಯವು; ತತಃ = ಆದ್ದರಿಂದ; ಮಮ ಏವ = ನನಗೇ; ಭೃತ್ಯಃ = ಭೃತ್ಯನು; ಭವ = ಆಗು;

ತಾತ್ಪರ್ಯ:- ಮುಷ್ಟಿಯುದ್ಧದಲ್ಲಿ ಕರ್ಣನು ಜರಾಸಂಧನ ಮರ್ಮಸ್ಥಾನಕ್ಕೆ ಹೊಡೆಯುತ್ತಿದ್ದನು. ಬೇರೆಡೆ ಹೊಡೆಯುತ್ತಿರಲಿಲ್ಲ. ಎರಡು ತುಂಡಾಗಿ ಹುಟ್ಟಿದ್ದ ಅವನನ್ನು ಜರಾ ಎಂಬ ರಾಕ್ಷಸಿಯು ಸೇರಿಸಿದ್ದಳು. ಸೇರಿಸದ ಆ ಸಂಧಿಯೇ ಅವನ ಮರ್ಮಸ್ಥಾನವಾಗಿದ್ದಿತು. ಸಂತುಷ್ಟನಾದ ಅವನು ಆಶ್ಚರ್ಯದಿಂದ ಹೇಳುತ್ತಾನೆ- ಬಲರಾಮನಿಗೂ ಈ ನನ್ನ ಮರ್ಮ ಸ್ಥಾನ ತಿಳಿದಿಲ್ಲ, ನೀನು ತಿಳಿದಿರುವೆ. ಆದ್ದರಿಂದ ನೀನು ನನ ಭೃತ್ಯನಾಗು.

**ಏವಂವಿಧಂ ಸುಕುಶಲಂ ಬಹುಯುದ್ಧಶೌಂಡಂ**
**ನ ತ್ವಾಂ ಹನಿಷ್ಯ ಉತ ತೇ ಪಿತುರೇವ ಪೂರ್ವಮ್ ।**
**ಬಾಹ್ವೋರ್ಬಲಾದಭಿಹೃತಂ ಹಿ ಮಯಾಂಗರಾಜ್ಯಂ**
**ತತ್ ತ್ವಂ ಗೃಹಾಣ ಯುಧಿ ಕರ್ಮಕರಶ್ಚ ಮೇ ಸ್ಯಾಃ ॥ ೧೯೮ ॥**

ಪದಚ್ಛೇದ:– ಏವಂವಿಧಂ, ಸುಕುಶಲಂ, ಬಹುಯುದ್ಧಶೌಂಡಂ, ನ, ತ್ವಾಂ, ಹನಿಷ್ಯೇ, ಉತ, ತೇ, ಪಿತುಃ, ಏವ, ಪೂರ್ವಂ, ಬಾಹ್ವೋಃ, ಬಲಾತ್, ಅಭಿಹೃತಂ, ಹಿ, ಮಯಾ, ಅಂಗರಾಜ್ಯಂ, ತತ್, ತ್ವಂ, ಗೃಹಾಣ, ಯುಧಿ, ಕರ್ಮಕರಃ, ಚ, ಮೇ, ಸ್ಯಾಃ.

ಅರ್ಥ:- ಏವಂವಿಧಂ = ಈ ರೀತಿಯಾಗಿ; ಸುಕುಶಲಂ = ಅತ್ಯಂತ ದಕ್ಷನಾದ; ಬಹುಯುದ್ಧಶೌಂಡಂ = ಅನೇಕ ಯುದ್ಧಗಳಲ್ಲಿ ಪ್ರವೀಣನಾದ; ತ್ವಾಂ = ನಿನ್ನನ್ನು; ನ ಹನಿಷ್ಯೇ = ಕೊಲ್ಲುವುದಿಲ್ಲ; ಉತ = ಮತ್ತೇನೆಂದರೆ; ಪೂರ್ವಂ = ಹಿಂದೆ; ತೇ = ನಿನ್ನ; ಪಿತುಃ ಏವ = ತಂದೆಯಾದ ಅದಿರಥನಿಂದಲೇ; ಬಾಹ್ವೋಃ = ಬಾಹುಗಳ; ಬಲಾತ್ = ಬಲದಿಂದ; ಮಯಾ = ನನ್ನಿಂದ; ಅಂಗರಾಜ್ಯಂ = ಅಂಗರಾಜ್ಯವು; ಅಭಿಹೃತಮ್ (ಆಸೀತ್) = ಕಿತ್ತುಕೊಳ್ಳಲ್ಪಟ್ಟಿತ್ತು; ತತ್ = ಅದನ್ನು; ತ್ವಂ = ನೀನು; ಗೃಹಾಣ = ಸ್ವೀಕರೀಸು;

**ಚ** = ಮತ್ತು; **ಯುಧಿ** = ಯುದ್ಧದಲ್ಲಿ; **ಮೇ** = ನನಗಾಗಿ; **ಕರ್ಮಕರಃ** = ಕೆಲಸಮಾಡುವವನು; **ಸ್ಯಾಃ** = ಆಗು.

**ತಾತ್ಪರ್ಯ:-** ಜರಾಸಂಧನು ಕರ್ಣನಿಗೆ ಹೇಳುತ್ತಿದ್ದಾನೆ- ಇಂತಹ ದಕ್ಷನಾದ ಅನೇಕಯುದ್ಧಗಳಲ್ಲಿ ಪ್ರವೀಣನಾದ ನಿನ್ನನ್ನು ನಾನು ಕೊಲ್ಲುವುದಿಲ್ಲ. ಅಷ್ಟೇ ಅಲ್ಲದೆ ಹಿಂದೆ ನಾನು ಬಾಹುಬಲದಿಂದ ನಿನ್ನ ತಂದೆಯಿಂದ ಅಮ್ಗ ರಾಜ್ಯವನ್ನು ಕಿತ್ತುಕೊಂಡಿದ್ದೆನು. ಈಗ ನಿನಗೆ ಕೊಡುತ್ತಿದ್ದೇನೆ, ನೀನು ಯುದ್ಧದಲ್ಲಿ ನನಾಗಾಗಿ ಕೆಲಸವನ್ನು ಮಾಡು.

**ಇತ್ಯುಕ್ತ ಆಶು ಸ ತಥೈವ ಚಕಾರ ಕರ್ಣಃ**
**ಪೂರ್ವಂ ಹಿ ತಸ್ಯ ನಿಜರಾಜ್ಯಪದೈಕದೇಶಃ ।**
**ದುರ್ಯೋಧನೇನ ವಿಹಿತೋ ಮಗಧಾಧಿರಾಜಂ**
**ಜಿತ್ವಾ ವೃಕೋದರಹೃತಃ ಪಿತುರೇವ ದತ್ತಃ ॥ ೧೯೯ ॥**

**ಪದಚ್ಛೇದ:-** ಇತಿ, ಉಕ್ತಃ, ಆಶು, ಸ, ತಥಾ, ಏವ, ಚಕಾರ, ಕರ್ಣಃ, ಪೂರ್ವಂ, ಹಿ, ತಸ್ಯ, ನಿಜರಾಜ್ಯಪದೈಕದೇಶಃ, ದುರ್ಯೋಧನೇನ, ವಿಹಿತಃ, ಮಗಧಾಧಿರಾಜಂ, ಜಿತ್ವಾ, ವೃಕೋದರಹೃತಃ, ಪಿತುಃ, ಏವ, ದತ್ತಃ.

**ಅರ್ಥ:-** **ಇತಿ** = ಹೀಗೆ; **ಉಕ್ತಃ** = ಹೇಳಲ್ಪಟ್ಟ; **ಸಃ** = ಆ; **ಕರ್ಣಃ** = ಕರ್ಣನು; **ಆಶು** = ತಡಮಾಡದೇ; **ತಥಾ ಏವ** = ಹಾಗೆಯೇ; **ಚಕಾರ** = ಮಾಡಿದನು; **ಪೂರ್ವಂ ಹಿ** = ಹಿಂದೆ; **ಮಗಧಾಧಿರಾಜಂ** = ಮಗಧದೇಶದ ರಾಜನಾದ ಜರಾಸಂಧನನ್ನು; **ಜಿತ್ವಾ** = ಗೆದ್ದು; **ವೃಕೋದರಹೃತಃ** = ಭೀಮನಿಂದ ಗಳಿಸಲ್ಪಟ್ಟ; **ಪಿತುಃ ಏವ** = ತನ್ನ(ದುರ್ಯೋಧನನ) ತಂದೆಯಾದ ಧೃತರಾಷ್ಟ್ರನಿಗೆ; **ದತ್ತಃ** = ಕೊಡಲ್ಪಟ್ಟ; **ನಿಜರಾಜ್ಯಪದೈಕದೇಶಃ** = ತನ್ನ ಅಂಗರಾಜ್ಯದ ಒಂದು ಪ್ರದೇಶವಷ್ಟೇ; **ದುರ್ಯೋಧನೇನ** = ದುರ್ಯೋಧನ ನಿಂದ; **ವಿಹಿತಃ** = ಕೊಡಲ್ಪಟ್ಟಿತ್ತು.

**ತಾತ್ಪರ್ಯ:-** ಜರಾಸಂಧನು ಹೀಗೆ ಹೇಳಿದಾಗ ಕರ್ಣನು ತಡಮಾಡದೇ ಒಪ್ಪಿಕೊಂಡನು. ದುರ್ಯೋಧನನು ಮೊದಲೇ ಅಂಗರಾಜ್ಯವನ್ನು ಕರ್ಣನಿಗೆ ಕೊಟ್ಟಿದ್ದರಿಂದ ಈಗ ಜರಾಸಂಧನು ಹೇಗೆ ಕೊಟ್ಟನು? ಎಂದರೆ- ಭೀಮಸೇನನು ಜರಾಸಂಧನನ್ನು ಗೆದ್ದು ಅಂಗರಾಜ್ಯದ ಒಂದುಭಾಗವನ್ನು ತನ್ನ ವಶಕ್ಕೆ ಪಡೆದು ಅದನ್ನು ಧೃತರಾಷ್ಟ್ರನಿಗೆ ಕೊಟ್ಟಿದ್ದನು. ಅದನ್ನು ಮಾತ್ರ ದುರ್ಯೋಧಾನು ಈ ಹಿಂದೆ ಕೊಟ್ಟಿದ್ದನು. ಈಗ ಜರಾಸಂಧನು ಉಳಿದ ಭಾಗವನ್ನೂ ಕೊಟ್ಟನು.

ಅಂಗಾಧಿರಾಜ್ಯಮುಪಲಭ್ಯ ಜರಾಸುತಸ್ಯ ಸ್ನೇಹಂ
ಚ ಸೂರ್ಯಸುತ ಆಶು ಕುರೂನ್ ಜಗಾಮ ।
ದೃಷ್ಟ್ವೈವ ತಂ ಮುಮುದಿರೇ ಧೃತರಾಷ್ಟ್ರಪುತ್ರಾ
ನಾನೇನ ತುಲ್ಯಮಧಿಜಗ್ಮುರತೋ ಹರಿಂ ಚ ॥ ೨೦೦ ॥

ಪದಚ್ಛೇದ:- ಅಂಗಾಧಿರಾಜ್ಯಮ್, ಉಪಲಭ್ಯ, ಜರಾಸುತಸ್ಯ, ಸ್ನೇಹಂ, ಚ, ಸೂರ್ಯಸುತಃ, ಆಶು, ಕುರೂನ್, ಜಗಾಮ, ದೃಷ್ಟ್ವಾ, ಏವ, ತಂ, ಮುಮುದಿರೇ, ಧೃತರಾಷ್ಟ್ರಪುತ್ರಾಃ, ನ, ಅನೇನ, ತುಲ್ಯಮ್, ಅಧಿಜಗ್ಮುಃ, ಅತಃ, ಹರಿಂ, ಚ.

ಅರ್ಥ:- ಸೂರ್ಯಸುತಃ = ಸೂರ್ಯನ ಮಗನಾದ ಕರ್ಣನು; ಅಂಗಾಧಿ ರಾಜ್ಯಂ = ಅಂಗದೇಶದ ಒಡೆತನವನ್ನು; ಚ = ಮತ್ತು; ಜರಾಸುತಸ್ಯ = ಜರಾಸಂಧನ; ಸ್ನೇಹಂ = ಗೆಳೆತನವನ್ನು; ಉಪಲಭ್ಯ = ಪಡೆದು; ಆಶು = ಶೀಘ್ರವಾಗಿ; ಕುರೂನ್ = ಕೌರವರನ್ನು ಕುರಿತು; ಜಗಾಮ = ಹೋದನು; ಧೃತರಾಷ್ಟ್ರಪುತ್ರಾಃ = ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳು; ತಂ = ಆ ಕರ್ಣನನ್ನು; ದೃಷ್ಟ್ವಾ ಏವ = ನೋಡಿಯೇ; ಮುಮುದಿರೇ = ಸಂತಸಗೊಂಡರು; ಅನೇನ = ಈ ಕರ್ಣನಿಂದ; ಹರಿಂಚ = ಶ್ರೀಕೃಷ್ಣನನ್ನೂ ಕೂಡ; ತುಲ್ಯಂ = ಸಮನನ್ನಾಗಿ; ನ ಅಧಿಜಗ್ಮುಃ = ತಿಳಿಯಲಿಲ್ಲ.

ತಾತ್ಪರ್ಯ:- ಹೀಗೆ ಅಮ್ಗರಾಜ್ಯಾಧಿಪತ್ಯವನ್ನು ಮತ್ತು ಜರಾಸಂಧನ ಗೆಳೆತನವನ್ನು ಪಡೆದು ಕರ್ಣನು ದುರ್ಯೋಧನಾದಿಗಳ ಬಳಿ ಹೋದನು. ಅವನನ್ನು ನೋಡಿದ ಕೂಡಲೇ ಸಂತಸಗೊಂಡ ದುರ್ಯೋಧನಾದಿಗಳು ಶ್ರೀಕೃಷ್ಣನೂ ಬಲದಲ್ಲಿ ಕರ್ಣನಿಗೆ ಸಮನಲ್ಲವೆಂದು ತಿಳಿದರು.

ಉದ್ವಾಹ್ಯ ಕಾಶಿತನಯಾಂ ಗಿರಿಜಾಧಿವಿಷ್ಟಾಂ
ಸಾಕ್ಷಾನ್ನರೇಷು ಜನಿತಾಂ ಪ್ರಥಮಾಮಲಕ್ಷ್ಮೀಮ್ ।
ತಸ್ಯಾಂ ಸುತಂ ತ್ವಜನಯತ್ ಪುರ ಆಸ ಯೋಕ್ಷಃ
ಕನ್ಯಾಂ ಪುರಾ ಪ್ರಿಯತಮಾಂ ಚ ಷಡಾನನಸ್ಯ ॥ ೨೦೧ ॥

ಪದಚ್ಛೇದ:- ಉದ್ವಾಹ್ಯ, ಕಾಶಿತನಯಾಂ, ಗಿರಿಜಾಧಿವಿಷ್ಟಾಂ, ಸಾಕ್ಷಾತ್, ನರೇಷು, ಜನಿತಾಂ, ಪ್ರಥಮಾಮ್, ಅಲಕ್ಷ್ಮೀಂ, ತಸ್ಯಾಂ, ಸುತಂ, ತು, ಅಜನಯತ್, ಪುರಃ, ಆಸ, ಯಃ, ಅಕ್ಷಃ, ಕನ್ಯಾಂ, ಪುರಾ, ಪ್ರಿಯತಮಾಂ, ಚ, ಷಡಾನನಸ್ಯ.

**ಚ** = ಮತ್ತು; **ಯುಧಿ** = ಯುದ್ಧದಲ್ಲಿ; **ಮೇ** = ನನಗಾಗಿ; **ಕರ್ಮಕರಃ** = ಕೆಲಸಮಾಡುವವನು; **ಸ್ಯಾಃ** = ಆಗು.

**ತಾತ್ಪರ್ಯ:-** ಜರಾಸಂಧನು ಕರ್ಣನಿಗೆ ಹೇಳುತ್ತಿದ್ದಾನೆ- ಇಂತಹ ದಕ್ಷನಾದ ಅನೇಕಯುದ್ಧಗಳಲ್ಲಿ ಪ್ರವೀಣನಾದ ನಿನ್ನನ್ನು ನಾನು ಕೊಲ್ಲುವುದಿಲ್ಲ. ಅಷ್ಟೇ ಅಲ್ಲದೆ ಹಿಂದೆ ನಾನು ಬಾಹುಬಲದಿಂದ ನಿನ್ನ ತಂದೆಯಿಂದ ಅಮ್ಗ ರಾಜ್ಯವನ್ನು ಕಿತ್ತುಕೊಂಡಿದ್ದೆನು. ಈಗ ನಿನಗೆ ಕೊಡುತ್ತಿದ್ದೇನೆ, ನೀನು ಯುದ್ಧದಲ್ಲಿ ನನಾಗಾಗಿ ಕೆಲಸವನ್ನು ಮಾಡು.

**ಇತ್ಯುಕ್ತ ಆಶು ಸ ತಥೈವ ಚಕಾರ ಕರ್ಣಃ**
**ಪೂರ್ವಂ ಹಿ ತಸ್ಯ ನಿಜರಾಜ್ಯಪದ್ಯೈಕದೇಶಃ ।**
**ದುರ್ಯೋಧನೇನ ವಿಹಿತೋ ಮಗಧಾಧಿರಾಜಂ**
**ಜಿತ್ವಾ ವೃಕೋದರಹೃತಃ ಪಿತುರೇವ ದತ್ತಃ ॥ ೧೯ ॥**

**ಪದಚ್ಛೇದ:-** ಇತಿ, ಉಕ್ತಃ, ಆಶು, ಸ, ತಥಾ, ಏವ, ಚಕಾರ, ಕರ್ಣಃ, ಪೂರ್ವಂ, ಹಿ, ತಸ್ಯ, ನಿಜರಾಜ್ಯಪದ್ಯೈಕದೇಶಃ, ದುರ್ಯೋಧನೇನ, ವಿಹಿತಃ, ಮಗಧಾಧಿರಾಜಂ, ಜಿತ್ವಾ, ವೃಕೋದರಹೃತಃ, ಪಿತುಃ, ಏವ, ದತ್ತಃ.

**ಅರ್ಥ:-** **ಇತಿ** = ಹೀಗೆ; **ಉಕ್ತಃ** = ಹೇಳಲ್ಪಟ್ಟ; **ಸಃ** = ಆ; **ಕರ್ಣಃ** = ಕರ್ಣನು; **ಆಶು** = ತಡಮಾಡದೇ; **ತಥಾ ಏವ** = ಹಾಗೆಯೇ; **ಚಕಾರ** = ಮಾಡಿದನು; **ಪೂರ್ವಂ ಹಿ** = ಹಿಂದೆ; **ಮಗಧಾಧಿರಾಜಂ** = ಮಗಧದೇಶದ ರಾಜನಾದ ಜರಾಸಂಧನನ್ನು; **ಜಿತ್ವಾ** = ಗೆದ್ದು; **ವೃಕೋದರಹೃತಃ** = ಭೀಮನಿಂದ ಗಳಿಸಲ್ಪಟ್ಟ; **ಪಿತುಃ ಏವ** = ತನ್ನ(ದುರ್ಯೋಧನನ) ತಂದೆಯಾದ ಧೃತರಾಷ್ಟ್ರನಿಗೆ; **ದತ್ತಃ** = ಕೊಡಲ್ಪಟ್ಟ; **ನಿಜರಾಜ್ಯಪದ್ಯೈಕದೇಶಃ** = ತನ್ನ ಅಂಗರಾಜ್ಯದ ಒಂದು ಪ್ರದೇಶವಷ್ಟೇ; **ದುರ್ಯೋಧನೇನ** = ದುರ್ಯೋಧನ ನಿಂದ; **ವಿಹಿತಃ** = ಕೊಡಲ್ಪಟ್ಟಿತ್ತು.

**ತಾತ್ಪರ್ಯ:-** ಜರಾಸಂಧನು ಹೀಗೆ ಹೇಳಿದಾಗ ಕರ್ಣನು ತಡಮಾಡದೇ ಒಪ್ಪಿಕೊಂಡನು. ದುರ್ಯೋಧನನು ಮೊದಲೇ ಅಂಗರಾಜ್ಯವನ್ನು ಕರ್ಣನಿಗೆ ಕೊಟ್ಟಿದ್ದರಿಂದ ಈಗ ಜರಾಸಂಧನು ಹೇಗೆ ಕೊಟ್ಟನು? ಎಂದರೆ- ಭೀಮಸೇನನು ಜರಾಸಂಧನನ್ನು ಗೆದ್ದು ಅಂಗರಾಜ್ಯದ ಒಂದುಭಾಗವನ್ನು ತನ್ನ ವಶಕ್ಕೆ ಪಡೆದು ಅದನ್ನು ಧೃತರಾಷ್ಟ್ರನಿಗೆ ಕೊಟ್ಟಿದ್ದನು. ಅದನ್ನು ಮಾತ್ರ ದುರ್ಯೋಧಾನು ಈ ಹಿಂದೆ ಕೊಟ್ಟಿದ್ದನು. ಈಗ ಜರಾಸಂಧನು ಉಳಿದ ಭಾಗವನ್ನೂ ಕೊಟ್ಟನು.

ಅಂಗಾಧಿರಾಜ್ಯಮುಪಲಭ್ಯ ಜರಾಸುತಸ್ಯ ಸ್ನೇಹಂ
ಚ ಸೂರ್ಯಸುತ ಆಶು ಕುರೂನ್ ಜಗಾಮ ।
ದೃಷ್ಟ್ವೈವ ತಂ ಮುಮುದಿರೇ ಧೃತರಾಷ್ಟ್ರಪುತ್ರಾ
ನಾನೇನ ತುಲ್ಯಮಧಿಜಗ್ಮುರತೋ ಹರಿಂ ಚ ॥ ೨೦೦ ॥

ಪದಚ್ಛೇದ:- ಅಂಗಾಧಿರಾಜ್ಯಮ್, ಉಪಲಭ್ಯ, ಜರಾಸುತಸ್ಯ, ಸ್ನೇಹಂ, ಚ, ಸೂರ್ಯಸುತಃ, ಆಶು, ಕುರೂನ್, ಜಗಾಮ, ದೃಷ್ಟ್ವಾ, ಏವ, ತಂ, ಮುಮುದಿರೇ, ಧೃತರಾಷ್ಟ್ರಪುತ್ರಾಃ, ನ, ಅನೇನ, ತುಲ್ಯಮ್, ಅಧಿಜಗ್ಮುಃ, ಅತಃ, ಹರಿಂ, ಚ.

ಅರ್ಥ:- ಸೂರ್ಯಸುತಃ = ಸೂರ್ಯನ ಮಗನಾದ ಕರ್ಣನು; ಅಂಗಾಧಿ ರಾಜ್ಯಂ = ಅಂಗದೇಶದ ಒಡೆತನವನ್ನು; ಚ = ಮತ್ತು; ಜರಾಸುತಸ್ಯ = ಜರಾಸಂಧನ; ಸ್ನೇಹಂ = ಗೆಳೆತನವನ್ನು; ಉಪಲಭ್ಯ = ಪಡೆದು; ಆಶು = ಶೀಘ್ರವಾಗಿ; ಕುರೂನ್ = ಕೌರವರನ್ನು ಕುರಿತು; ಜಗಾಮ = ಹೋದನು; ಧೃತರಾಷ್ಟ್ರಪುತ್ರಾಃ = ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳು; ತಂ = ಆ ಕರ್ಣನನ್ನು; ದೃಷ್ಟ್ವಾ ಏವ = ನೋಡಿಯೇ; ಮುಮುದಿರೇ = ಸಂತಸಗೊಂಡರು; ಅನೇನ = ಈ ಕರ್ಣನಿಂದ; ಹರಿಂಚ = ಶ್ರೀಕೃಷ್ಣನಮ್ಮೂ ಕೂಡ; ತುಲ್ಯಂ = ಸಮನನ್ನಾಗಿ; ನ ಅಧಿಜಗ್ಮುಃ = ತಿಳಿಯಲಿಲ್ಲ.

ತಾತ್ಪರ್ಯ:- ಹೀಗೆ ಅಮ್ಗರಾಜ್ಯಾಧಿಪತ್ಯವನ್ನು ಮತ್ತು ಜರಾಸಂಧನ ಗೆಳೆತನವನ್ನು ಪಡೆದು ಕರ್ಣನು ದುರ್ಯೋಧನಾದಿಗಳ ಬಳಿ ಹೋದನು. ಅವನನ್ನು ನೋಡಿದ ಕೂಡಲೇ ಸಂತಸಗೊಂಡ ದುರ್ಯೋಧನಾದಿಗಳು ಶ್ರೀಕೃಷ್ಣನೂ ಬಲದಲ್ಲಿ ಕರ್ಣನಿಗೆ ಸಮನಲ್ಲವೆಂದು ತಿಳಿದರು.

ಉದ್ವಾಹ್ಯ ಕಾಶಿತನಯಾಂ ಗಿರಿಜಾಧಿವಿಷ್ಟಾಂ
ಸಾಕ್ಷಾನ್ನರೇಷು ಜನಿತಾಂ ಪ್ರಥಮಾಮಲಕ್ಷ್ಮೀಮ್ ।
ತಸ್ಯಾಂ ಸುತಂ ತ್ವಜನಯತ್ ಪುರ ಆಸ ಯೋಕ್ಷಃ
ಕನ್ಯಾಂ ಪುರಾ ಪ್ರಿಯತಮಾಂ ಚ ಷಡಾನನಸ್ಯ ॥ ೨೦೧ ॥

ಪದಚ್ಛೇದ:- ಉದ್ವಾಹ್ಯ, ಕಾಶಿತನಯಾಂ, ಗಿರಿಜಾಧಿವಿಷ್ಟಾಂ, ಸಾಕ್ಷಾತ್, ನರೇಷು, ಜನಿತಾಂ, ಪ್ರಥಮಾಮ್, ಅಲಕ್ಷ್ಮೀಂ, ತಸ್ಯಾಂ, ಸುತಂ, ತು, ಅಜನಯತ್, ಪುರಃ, ಆಸ, ಯಃ, ಅಕ್ಷಃ, ಕನ್ಯಾಂ, ಪುರಾ, ಪ್ರಿಯತಮಾಂ, ಚ, ಷಡಾನನಸ್ಯ.

**ಅರ್ಥ**:- (**ಸಃ**) = ಆ ದುರ್ಯೋಧನನು; **ಪ್ರಥಮಾಂ** = ಜ್ಯೇಷ್ಠಳಾದ; **ಸಾಕ್ಷಾತ್** = ಮುಖ್ಯವಾಗಿ; **ಅಲಕ್ಷ್ಮೀಂ** = ಅಲಕ್ಷ್ಮಿಯಾದ; **ಗಿರಿಜಾಧಿವಿಷ್ಟಾಂ** = ಪಾರ್ವತಿಯಿಂದ ಆವೇಶಗೊಂಡ; **ನರೇಷು** = ಮನುಷ್ಯರಲ್ಲಿ; **ಜನಿತಾಂ** = ಹುಟ್ಟಿದ; **ಕಾಶಿತನಯಾಂ** = ಕಾಶಿರಾಜನ ಮಗಳನ್ನು; **ಉದ್ವಾಹ್ಯ** = ಮದುವೆಯಾಗಿ; **ತಸ್ಯಾಂ** = ಅವಳಲ್ಲಿ; **ಪುರಃ** = ಹಿಂದೆ; **ಯಃ ತು** = ಯಾವನಾದರೂ; **ಅಕ್ಷಃ** = ಅಕ್ಷಕುಮಾರನು; **ಆಸ** = ಆಗಿದ್ದನೋ; (**ತಂ**) = ಅವನನ್ನು; **ಸುತಂ** = ಮಗನನ್ನಾಗಿ; **ಚ** = ಮತ್ತು; **ಪುರಾ** = ಹಿಂದೆ; **ಷಡಾನನಸ್ಯ** = ಸ್ಕಂದನ; **ಪ್ರಿಯತಮಾಂ** = ಹೆಂಡತಿಯಾದ ದೇವಸೇನೆಯಿದ್ದಳೋ; (**ತಾಂ**) = ಅವಳನ್ನು; **ಕನ್ಯಾಂ** = ಮಗಳನ್ನಾಗಿ; **ಅಜನಯತ್** = ಹುಟ್ಟಿಸಿದನು.

ತಾತ್ಪರ್ಯ:- ದುರ್ಯೋಧನನು ಕಾಶಿರಾಜನ ಮಗಳನ್ನು ಮದುವೆಯಾದನು. ಸಮುದ್ರಮಥನಕಾಲದಲ್ಲಿ ಲಕ್ಷ್ಮೀದೇವಿಗಿಂತ ಮೊದಲು ಹುಟ್ಟಿದ ಅಲಕ್ಷ್ಮಿಯೇ ಈಗ ಮನುಷ್ಯರಲ್ಲಿ ಕಾಶಿರಾಜನ ಮಗಳಾಗಿ ಹುಟ್ಟಿದ್ದಳು. ಅವಳಲ್ಲಿ ಪಾರ್ವತೀದೇವಿಯ ಆವೇಶವೂ ಇದ್ದಿತು. ಅವಳಲ್ಲಿ ಹಿಂದೆ ಅಕ್ಷಕುಮಾರನಾಗಿದ್ದವನೇ ಮಗನಾಗಿ ಹುಟ್ಟಿದನು. ಮತ್ತು ಸ್ಕಂದನ ಮಡದಿಯಾದ ದೇವಸೇನೆಯು ಮಗಳಾಗಿ ಹುಟ್ಟಿದಳು.

ವಿಶೇಷವಿಚಾರ:- ಅಲಕ್ಷ್ಮಿಯಾದ ದುರ್ಯೋಧನನ ಹೆಂಡತಿಯಲ್ಲಿ ಪಾರ್ವತೀದೇವಿಯ ಆವೇಶವೂ ಇದ್ದಿತು. ಆದ್ದರಿಂದಲೇ ಸಭೆಯಲ್ಲಿ ದ್ರೌಪದೀದೇವಿಗೆ ಅವಮಾನವಾಗುವಾಗ ಅವಳೂ ಅಳುತ್ತಾಳೆ. ಇಲ್ಲದಿದ್ದಲ್ಲಿ ಕಲಿಪತ್ನಿಯಾದ ಅವಳಿಗೆ ದುಃಖ ಹೇಗೆ ಆದೀತು-(ಜನಾರ್ದನೀಯ).

**ಪುತ್ರೋ ಬಭೂವ ಸ ತು ಲಕ್ಷಣನಾಮಧೇಯಃ**
**ಸಾ ಲಕ್ಷಣೇತ್ಯಧಿಕರೂಪಗುಣಾಸ ಕನ್ಯಾ ।**
**ತಸ್ಯಾನುಜಾಶ್ಚ ನಿಜಯೋಗ್ಯಗುಣಾ ಅವಾಪುರ್ಭಾರ್ಯಾಃ**
**ಪುನಶ್ಚ ಸ ಸುಯೋಧನ ಆಪ ಭಾರ್ಯಾಃ ॥ ೨೦೨ ॥**

ಪದಚ್ಛೇದ:- ಪುತ್ರಃ, ಬಭೂವ, ಸಃ, ತು, ಲಕ್ಷಣನಾಮಧೇಯಃ, ಸಾ, ಲಕ್ಷಣಾ, ಇತಿ, ಅಧಿಕರೂಪಗುಣಾ, ಆಸ, ಕನ್ಯಾ, ತಸ್ಯ, ಅನುಜಾಃ, ಚ, ನಿಜಯೋಗ್ಯಗುಣಾಃ, ಅವಾಪುಃ, ಭಾರ್ಯಾಃ, ಪುನಃ, ಚ, ಸಃ, ಸುಯೋಧನಃ, ಆಪ, ಭಾರ್ಯಾಃ.

**ಅರ್ಥ**:- **ಸಃ ತು** = ಆ ಅಕ್ಷಕುಮಾರನಾದರೂ; **ಲಕ್ಷಣನಾಮಧೇಯಃ** = ಲಕ್ಷಣ ಎಂಬ ಹೆಸರುಳ್ಳವನಾಗಿ; **ಪುತ್ರಃ** = (ದುರ್ಯೋಧನನ) ಮಗನಾಗಿ;

ಬಭೂವ = ಹುಟ್ಟಿದನು; ಲಕ್ಷಣಾ ಇತಿ = ಲಕ್ಷಣಾ ಎಂಬ ಹೆಸರಿನ; ಸಾ = ಆ; ಕನ್ಯಾ = ಮಗಳು; ಅಧಿಕರೂಪಗುಣಾ = ಬಹಳ ರೂಪ ಮತ್ತು ಗುಣವುಳ್ಳವಳು; ಆಸ = ಇದ್ದಳು; ತಸ್ಯ = ಆ ದುರ್ಯೋಧನನ; ಅನುಜಾಃ ಚ = ತಮ್ಮಂದಿರಾದರೂ; ನಿಜಯೋಗ್ಯಗುಣಾಃ = ತಮ್ಮ ಯೋಗ್ಯತೆಗನುಗುಣರಾದ; ಭಾರ್ಯಾಃ = ಹೆಂಡತಿಯರನ್ನು; ಅವಾಪುಃ = ಪಡೆದರು; ಸಃ = ಆ; ಸುಯೋಧನಃ = ದುರ್ಯೋಧನನು; ಪುನಃ ಚ = ಮತ್ತೂ ಕೂಡ; ಭಾರ್ಯಾಃ = ಹೆಂಡತಿತರನ್ನು; ಆಪ = ಪಡೆದನು.

ತಾತ್ಪರ್ಯ:- ದುರ್ಯೋಧನನ ಮಗನು ಲಕ್ಷಣ ಎಂದು; ಮಗಳು ಲಕ್ಷಣಾ ಎಂದು. ಆ ಮಗಳು ಅಧಿಕವಾದ ರೂಪವುಳ್ಳವಳೂ ಗುಣವುಳ್ಳವಳೂ ಆಗಿದ್ದಳು. ದುರ್ಯೋಧನನ ತಮ್ಮಂದಿರೂ ತಮ್ಮ ಯೋಗ್ಯತೆಗನುಗುಣವಾಗಿ ಹೆಂಡತಿಯರನ್ನು ಪಡೆದರು. ದುರ್ಯೋಧನನು ಮತ್ತೂ ಹೆಂಡತಿಯರನ್ನು ಪಡೆದನು.

**ಪೂರ್ವಂ ಸುರಾಂತಕ ಇತಿ ಪ್ರಥಿತಃ ಸುತೋಭೂದ್**
**ದುಃಶಾಸನಸ್ಯ ತದನು ಪ್ರತಿತಪ್ಯಮಾನಾಃ ।**
**ದೃಷ್ಟ್ವೈವ ಪಾರ್ಥಬಲವೀರ್ಯಗುಣಾನ್ ಸಮೃದ್ಧಿಂ**
**ತಾಂ ಚೈವ ತೇ ಪ್ರತಿಯಯುಃ ಸ್ಮ ಕಲಿಂಗದೇಶಮ್ ॥ ೨೦೩ ॥**

ಪದಚ್ಛೇದ:- ಪೂರ್ವಂ, ಸುರಾಂತಕಹ್, ಇತಿ, ಪ್ರಥಿತಃ, ಸುತಃ, ಅಭೂತ್, ದುಃಶಾಸನಸ್ಯ, ತದನು, ಪ್ರತಿತಪ್ಯಮಾನಾಃ, ದೃಷ್ಟ್ವಾ, ಏವ, ಪಾರ್ಥಬಲವೀರ್ಯಗುಣಾನ್, ಸಮೃದ್ಧಿಂ, ತಾಂ, ಚ, ಏವ, ತೇಮ್ ಪ್ರತಿಯಯುಃ, ಸ್ಮ ಕಲಿಂಗದೇಶಮ್.

ಅರ್ಥ:- ಪೂರ್ವಂ = ಹಿಂದೆ; ಸುರಾಂತಕಃ ಇತಿ = ಸುರಾಂತಕ ಎಂದು; ಪ್ರಥಿತಃ = ಪ್ರಸಿದ್ಧನಾಗಿದ್ದವನು; ದುಃಶಾಸನಸ್ಯ = ದುಃಶಾಸನನಿಗೆ; ಸುತಃ = ಮಗನು; ಅಭೂತ್ = ಆದನು; ತದನು = ಅನಂತರ; ತೇ = ಆ ದುರ್ಯೋಧನದಿಗಳು; ಪಾರ್ಥಬಲವೀರ್ಯಗುಣಾನ್ = ಪಾಂಡವರ ಪರಾಕ್ರಮಾದಿಗುಣಗಳನ್ನು; ಸಮೃದ್ಧಿಂ = ಬಹಳ ಸಂಪತ್ತನು; ತಾಂ ಚೈವ = ಆ ದ್ರೌಪದಿಯನ್ನೂ ಕೂಡ; ದೃಷ್ಟ್ವಾ ಏವ = ನೋಡಿಯೇ; ಪ್ರತಿತಪ್ಯಮಾನಾಃ = ದುಃಖಗೊಂಡವರಾಗಿ; ಕಲಿಂಗದೇಶಂ = ಕಲಿಂಗದೇಶವನ್ನು ಕುರಿತು; ಪ್ರತಿಯಯುಃ ಸ್ಮ = ಹೊರಟರು.

ತಾತ್ಪರ್ಯ:- ಹಿಂದೆ ಸುರಾಂತಕನೆಂದು ಪ್ರಸಿದ್ಧನಾಗಿದ್ದ ಅಸುರನೇ ದುಃಶಾಸನ ಮಗನಾಗಿ ಹುಟ್ಟಿದನು. ಅನಂತರ ದುರ್ಯೋಧನಾದಿಗಳು ಪಾಂಡವರ ಸಾಮರ್ಥ್ಯವನ್ನು ಸಮೃದ್ಧವಾದ ಸಂಪತ್ತನ್ನು ಹಾಗು ದ್ರೌಪದಿಯನ್ನು ಕಂಡು ಹೊಟ್ಟೆ ಉರಿಯಿಂದ ಬೆಂದುಹೋದರು. ಅವರೆಲ್ಲರೂ ಕಲಿಂಗದೇಶಕ್ಕೆ ಹೋದರು.

ಆಸೀತ್ ಸ್ವಯಂವರ ಉತಾತ್ರ ಕಲಿಂಗರಾಜಪುತ್ರ್ಯಾಃ
ಸುವಜ್ರ ಇತಿ ಯಂ ಪ್ರವದಂತಿ ಭೂಪಾಃ ।
ರೌದ್ರಾತ್ ವರಾದವಿಜಿತಸ್ಯ ಚ ತಸ್ಯ ಕನ್ಯಾಂ
ದೃಪ್ತೋ ಬಲಾತ್ ಸ ಜಗೃಹೇ ಧೃತರಾಷ್ಟ್ರಸೂನುಃ ॥ ೨೦೪ ॥

ಪದಚ್ಛೇದ:- ಆಸೀತ್, ಸ್ವಯಂವರಃ, ಉತ, ಅತ್ರ, ಕಲಿಂಗರಾಜಪುತ್ರ್ಯಾಃ, ಸುವಜ್ರಃ, ಇತಿ, ಯಂ, ಪ್ರವದಂತಿ, ಭೂಪಾಃ, ರೌದ್ರಾತ್, ವರಾತ್, ಅವಿಜಿತಸ್ಯ, ಚ, ತಸ್ಯ, ಕನ್ಯಾಂ, ದೃಪ್ತಃ, ಬಲಾತ್, ಸಃ, ಜಗೃಹೇ, ಧೃತರಾಷ್ಟ್ರಸೂನುಃ.

ಅರ್ಥ:- ತತ್ರ ಉತ = ಆ ಕಲಿಂಗದೇಶದಲ್ಲಿಯಾದರೂ; ಯಂ = ಯಾವಾತನನ್ನು; ಭೂಪಾಃ = ರಾಜರು; ಸುವಜ್ರಃ ಇತಿ = ಸುವಜ್ರನೆಂದು; ಪ್ರವದಂತಿ = ಕರೆಯುತ್ತಿದ್ದರೋ; ಕಲಿಂಗರಾಜಪುತ್ರ್ಯಾಃ = ಅಂತಹಕಲಿಂಗರಾಜನ ಮಗಳ; ಸ್ವಯಂವರಃ = ಸ್ವಯಂವರವು; ಆಸೀತ್ = ಇದ್ದಿತು; ರೌದ್ರಾತ್ = ರುದ್ರದೇವರ; ವರಾತ್ = ವರದಿಂದ; ಅವಿಜಿತಸ್ಯ = ಗೆಲ್ಲಲಾಗದ; ತಸ್ಯ = ಆ ಸುವಜ್ರನ; ಕನ್ಯಾಂ ಚ = ಮಗಳನ್ನಾದರೂ; ದೃಪ್ತಃ = ಗರ್ವಿಯಾದ; ಸಃ = ಆ; ಧೃತರಾಷ್ಟ್ರಸೂನುಃ = ಧೃತರಾಷ್ಟ್ರನ ಮಗನಾದ ದುರ್ಯೋಧನನು; ಬಲಾತ್ = ಬಲಾತ್ಕಾರದಿಂದ; ಜಗೃಹೇ = ಕರೆದುಕೊಂಡು ಹೋದನು.

ತಾತ್ಪರ್ಯ:- ಆ ಕಲಿಂಗದೇಶದಲ್ಲಿ ಸುವಜ್ರನೆಂದು ಪ್ರಸಿದ್ಧನಾದ ಅಲ್ಲಿಯ ರಾಜನ ಮಗಳ ಸ್ವಯಂವರ ಕಾರ್ಯಕ್ರಮವಿದ್ದಿತು. ಆ ಸುವಜ್ರನಿಗೆ ರುದ್ರದೇವರ ವರವಿದ್ದಿತು. ಆದ್ದರಿಂದಲೇ ಅವನು ಅಜೇಯನಾಗಿದ್ದನು. ಆದರೂ ಬಲಾತ್ಕಾರವಾಗಿ ಅವನ ಮಗಳನ್ನು ದುರ್ಯೋಧನನು ಕರೆದುಕೊಂಡು ಹೋದನು.

ತತ್ರಾಥ ರುದ್ರವರತಃ ಸ ಜರಾಸುತೇನ ಯುಕ್ತೋ
ಬಬಂಧ ಚ ಸುಯೋಧನಮಾಶು ಜಿತ್ವಾ ।

ಕರ್ಣಃ ಪರಾದ್ರವದಿಹ ಸ್ಮ ಸುತೇಷು ಪಾಂಡೋಃ
ಯಸ್ಮಾತ್ ಸ್ಪಧಾಗಮದತಃ ಸ ಪರಾಜಿತೋಽಭೂತ್ ॥ ೨೦೫ ॥

ಪದಚ್ಛೇದ:- ತತ್ರ, ಅಥ, ರುದ್ರವರತಃ, ಸಃ, ಜರಾಸುತೇನ, ಯುಕ್ತಃ, ಬಬಂಧ, ಚ, ಸುಯೋಧನಮ್, ಆಶು, ಜಿತ್ವಾ, ಕರ್ಣಃ, ಪರಾದ್ರವತ್, ಇಹ, ಸ್ಮ ಸುತೇಷು, ಪಾಂಡೋಃ, ಯಸ್ಮಾತ್, ಸ್ಪಧಾ, ಅಗಮತ್, ಅತಃ, ಸಃ, ಪರಾಜಿತಃ, ಅಭೂತ್.

**ಅರ್ಥ**:- **ಅಥ** = ಅನಂತರ; **ತತ್ರ** = ಅಲ್ಲಿ; **ಜರಾಸುತೇನ** = ಜರಾಸಂಧನಿಂದ; **ಯುಕ್ತಃ** = ಕೂಡಿದ; **ಸಃ** = ಆ ಸುವಜ್ರನು; **ರುದ್ರವರತಃ** = ರುದ್ರದೇವರ ವರಪ್ರಭಾವದಿಂದ; **ಸುಯೋಧನಂ** = ದುರ್ಯೋಧನನನ್ನು; **ಆಶು** = ಶೀಘ್ರವಾಗಿ; **ಜಿತ್ವಾ** = ಗೆದ್ದು; **ಬಬಂಧ** = ಬಂಧಿಸಿದನು; **ಇಹ** = ಈ ಸಮಯದಲ್ಲಿ; **ಕರ್ಣಃ** = ಕರ್ಣನು; **ಪರಾದ್ರವತ್ ಸ್ಮ** = ಓಡಿಹೋಗಿದ್ದನು; **ಯಸ್ಮಾತ್** = ಏಕೆಂದರೆ; **ಪಾಂಡೋಃ** = ಪಾಂಡುರಾಜನ; **ಸುತೇಷು** = ಮಕ್ಕಳಾದ ಯುಧಿಷ್ಠಿರಾದಿಗಳಲ್ಲಿ; **ಸ್ಪಧಾ** = ಸ್ಪರ್ಧೆಯಿಂದ; **ಅಗಮತ್** = ಹೋಗಿದ್ದನು; **ಪರಾಜಿತಃ ಅಭೂತ್** = ಸೋತನು.

**ತಾತ್ಪರ್ಯ**:- ತನ್ನ ಮಗಳನ್ನು ಅಪಹರಿಸಿದಾಗ ಸುವಜ್ರನು ಜರಾಸಂಧನ ಸಹಾಯದೊಂದಿಗೆ ರುದ್ರದೇವರ ವರಪ್ರಭಾವದಿಂದ ದುರ್ಯೋಧನನನ್ನು ಸೋಲಿಸಿ ಬಂಧಿಸಿದನು. ಕರ್ಣನಾದರೂ ಓಡಿಹೋದನು. ಪಾಂಡವರಲ್ಲಿ ಸ್ಪರ್ಧೆಯಿಂದಷ್ಟೇ ಅವನಿಲ್ಲಿಗೆ ಬಂದಿದ್ದನು. ಆದ್ದರಿಂದ ಸೋತನು.

ದುರ್ಯೋಧನೇಽನುಜಜನ್ಯೈಃ ಸಹ ತೈರ್ಗೃಹೀತೇ
ಭೀಷ್ಮಾಂಬಿಕೇಯವಿದುರಾಗ್ರಜವಾಕ್ಯನುನ್ನಃ ।
ಭೀಮೋ ವಿಜಿತ್ಯ ನೃಪತೀನ್ ಸಜರಾಸುತಾಂಸ್ತಾನ್
ಹತ್ವಾ ಸುವಜ್ರಮಮುಚದ್ ಧೃತರಾಷ್ಟ್ರಪುತ್ರಾನ್ ॥ ೨೦೬ ॥

ಪದಚ್ಛೇದ :- ದುರ್ಯೋಧನೇ, ಅನುಜಜನ್ಯೈಃ, ಸಹ, ತೈಃ, ಗೃಹೀತೇ, ಭೀಷ್ಮಾಂಬಿಕೇಯವಿದುರಾಗ್ರಜವಾಕ್ಯನುನ್ನಃ । ಭೀಮಃ, ವಿಜಿತ್ಯ, ನೃಪತೀನ್, ಸಜರಾಸುತಾನ್, ತಾನ್ ಹತ್ವಾ, ಸುವಜ್ರಮ್, ಅಮುಚತ್, ಧೃತರಾಷ್ಟ್ರಪುತ್ರಾನ್ ॥

**ಅರ್ಥ** :- **ತೈಃ** = ಸುವಜ್ರ, ಜರಾಸಂಧ ಮುಂತಾದ ರಾಜರಿಂದ, **ಅನುಜಜನ್ಯೈಃ ಸಹ** = ತಮ್ಮಂದಿರಿಂದ ಕೂಡಿದ, **ದುರ್ಯೋಧನೇ** = ದುರ್ಯೋಧನನು, **ಗೃಹೀತೇ (ಸತಿ)** = ಹಿಡಿಯಲ್ಪಟ್ಟಿರಲಾಗಿ (ಬಂಧಿಸಲ್ಪಟ್ಟಿರಲಾಗಿ), **ಭೀಷ್ಮಾಂಬಿಕೇಯವಿದುರಾಗ್ರಜವಾಕ್ಯನುನ್ನಃ** = ಭೀಷ್ಮ,

ಧೃತರಾಷ್ಟ್ರ, ವಿದುರ, ಧರ್ಮರಾಜ ಇವರ, ವಾಕ್ಯ = ಮಾತಿನಿಂದ, ನುನ್ನಃ = ಪ್ರೇರೇಪಿಸಲ್ಪಟ್ಟ, ಭೀಮಃ = ಭೀಮಸೇನನು, ಸಜರಾಸುತಾನ್ = ಜರಾಸಂಧನಿಂದ ಕೂಡಿದ, ತಾನ್ = ಆ, ನೃಪತೀನ್ = ರಾಜರನ್ನು, ವಿಜಿತ್ಯ = ಗೆದ್ದು, ಸುವಜ್ರಮ್ = ಸುವಜ್ರರಾಜನನ್ನು, ಹತ್ವಾ = ಕೊಂದು, ಧೃತರಾಷ್ಟ್ರಪುತ್ರಾನ್ = ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನ ಮೊದಲಾದವರನ್ನು, ಅಮುಚತ್ = ಬಂಧನದಿಂದ ಬಿಡಿಸಿದನು.

**ತಾತ್ಪರ್ಯ** :- ಈ ಹಿಂದೆ ಕಾಶಿರಾಜನ ಮಗಳನ್ನು ತನ್ನ ಬಲದ ಅಹಂಕಾರದಿಂದ ಅಪಹರಿಸಿ, ಕರ್ಣಸಹಾಯದಿಂದ ವೈರಿಗಳನ್ನು ಗೆದ್ದು, ಅಲಕ್ಷ್ಮೀಸ್ವರೂಪಳಾದ ಕಾಶಿರಾಜನ ಮಗಳನ್ನು ಮದುವೆಯಾದ. ಕೆಲ ದಿನಗಳ ನಂತರ ಕಲಿಂಗರಾಜನ ಮಗಳ ಸ್ವಯಂವರ ಇದೆ ಎಂದು ತಿಳಿಯಿತು. ದುರ್ಯೋಧನನಿಗೆ ಹಿಂದಿನ ತನ್ನ ಬಲದ ಅಹಂಕಾರದಿಂದ ಸ್ವಯಂವರದಿಂದ ಕಲಿಂಗಪುತ್ರಿಯನ್ನು ಅಪಹರಿಸಲು ಪ್ರಯತ್ನಿಸಿದ. ಆದರೆ ರುದ್ರನ ವರ ಮತ್ತು ಜರಾಸಂಧನ ಸಹಾಯದಿಂದ ಕಲಿಂಗರಾಜ ದುರ್ಯೋಧನ ಮತ್ತು ಅವನ ತಮ್ಮಂದಿರನ್ನು ಬಂಧಿಸಿದ. ಈ ವಿಷಯವನ್ನು ತಿಳಿದ ಭೀಷ್ಮಾಚಾರ್ಯರು, ಧೃತರಾಷ್ಟ್ರ ವಿದುರ ಮತ್ತು ಧರ್ಮರಾಜ ಇವರೆಲ್ಲ ದುರ್ಯೋಧನನನ್ನು ಬಿಡಿಸುವಂತೆ ಭೀಮನಿಗೆ ಹೇಳಿದರು. ಅವನ ಮಾತಿಗೆ ಕಟ್ಟು ಬಿದ್ದ ಭೀಮ ಜರಾಸಂಧ ಮುಂತಾದ ಎಲ್ಲ ರಾಜರನ್ನು ಸೋಲಿಸಿದ. ರುದ್ರವರದಿಂದ ಅಹಂಕಾರಿಯಾದ ಕಲಿಂಗರಾಜನಾದ ಸುವಜ್ರನನ್ನು ಕೊಂದು ದುರ್ಯೋಧನ ಮತ್ತು ಅವನ ತಮ್ಮಂದಿರನ್ನು ಬಂಧನದಿಂದ ಬಿಡಿಸಿದ. (ಮುಂದೆ ಕಲಿಂಗರಾಜನ ಮಗಳನ್ನು ದುರ್ಯೋಧನನೇ ಮದುವೆಯಾಗುತ್ತಾನೆ).

**ತೇಽಪಿ ಸ್ಮ ಕರ್ಣಸಹಿತಾ ಮೃತಕಪ್ರತೀಕಾ**
**ನಾಗಾಹ್ವಯಂ ಪುರಮಥಾಽಯಯುರಪ್ಯಮೀಷಾಮ್ ।**
**ದೃಷ್ಟ್ವಾ ವಿರೋಧಮವದನ್ನೃಪತಿಶ್ಚ ಧರ್ಮ-**
**ಪುತ್ರಂ ಪುರಂದರಕೃತಸ್ಥಲಮಾಶು ಯಾಹಿ ॥ ೨೦೭ ॥**

**ಪದಚ್ಛೇದ** :- ತೇ, ಅಪಿ, ಸ್ಮ, ಕರ್ಣಸಹಿತಾಃ, ಮೃತಕಪ್ರತೀಕಾಃ, ನಾಗಾಹ್ವಯಮ್, ಪುರಮ್, ಅಥ, ಆಯಯುಃ, ಅಪಿ, ಅಮೀಷಾಮ್ । ದೃಷ್ಟ್ವಾ, ವಿರೋಧಮ್, ಅವದತ್, ನೃಪತಿಃ, ಚ, ಧರ್ಮಪುತ್ರಮ್, ಪುರಂದರಕೃತಸ್ಥಲಮ್, ಆಶು, ಯಾಹಿ ॥

**ಅರ್ಥ** :- **ಕರ್ಣಸಹಿತಾಃ** = ಕರ್ಣನಿಂದ ಕೂಡಿದ, **ತೇ ಅಪಿ** = ಆ ದುರ್ಯೋಧನಾದಿಗಳಾದರೋ, **ಮೃತಕಪ್ರತೀಕಾಃ (ಸಂತಃ)** = ಸತ್ತವರಂತೆ

ಆಗಿ (ಜೀವಚ್ಛವಗಳಾಗಿ), **ನಾಗಾಹ್ವಯಂ ಪುರಂ** = ಹಸ್ತಿನಪುರವನ್ನು ಕುರಿತು, **ಆಯಯುಃ ಸ್ಮ** = ಬಂದರು. **ಅಥ ಅಪಿ** = ಹೀಗಿದ್ದರೂ (ಒಂದೇ ನಗರದಲ್ಲಿ ಒಟ್ಟಿಗೆ ಇದ್ದರೂ) **ಅಮೀಷಾಮ್** = ಆ ಕೌರವ-ಪಾಂಡವರ, **ವಿರೋಧಮ್** = ವಿರೋಧವನ್ನು, **ದೃಷ್ಟ್ವಾ** = ನೋಡಿ, **ನೃಪತಿಃ ಚ** = ರಾಜನಾದ ಧೃತರಾಷ್ಟ್ರನು, **ಧರ್ಮಪುತ್ರಮ್** = ಧರ್ಮನ ಮಗನಾದ ಯುಧಿಷ್ಠಿರನನ್ನು ಕುರಿತು, (**ತ್ವಂ** = ನೀನು), **ಆಶು** = ಕೂಡಲೇ, **ಪುರಂದರಕೃತಸ್ಥಲಮ್** = ಇಂದ್ರನಿಂದ ಮಾಡಲ್ಪಟ್ಟ ಸ್ಥಾನವನ್ನು ಕುರಿತು (ಇಂದ್ರಪ್ರಸ್ಥವನ್ನು ಕುರಿತು), **ಯಾಹಿ** = ಹೋಗು'' (**ಇತಿ** = ಈ ರೀತಿ), **ಅವದತ್** = ಹೇಳಿದನು.

**ತಾತ್ಪರ್ಯ** :- ತಮ್ಮ ವಿರೋಧಿಯಾದ ಭೀಮನಿಂದ ನಾವು ರಕ್ಷಿತರಾದೆವೆಂಬ ಅವಮಾನ ಕರ್ಣ, ದುರ್ಯೋಧನಾದಿಗಳನ್ನು ಕಾಡಿತು. ಕಲಿಂಗರಾಜ್ಯದಿಂದ ಅವಮಾನಿತರಾಗಿ ಹೊರಟರು. ಅವಮಾನದಿಂದ ಅವರೆಲ್ಲರ ಮುಖ ಬಾಡಿತ್ತು. ಸತ್ತವರ ಮುಖದಂತೆ ಕಾಂತಿ ಹೀನವಾಗಿತ್ತು. ಜೀವಚ್ಛವಗಳಾಗಿ ದುರ್ಯೋಧನಾದಿಗಳು ಹಸ್ತಿನಾಪುರವನ್ನು ಸೇರಿದರು. ಹಸ್ತಿನಾವತಿಯಲ್ಲಿಯೇ ಕೌರವ-ಪಾಂಡವರಿದ್ದರು. ಪಾಂಡವರಿಂದ ರಕ್ಷಿತನಾದರೂ ಅವನ ಮೇಲಿನ ದ್ವೇಷ ಕಡಿಮೆಯಾಗಿರಲಿಲ್ಲ. ಹೀಗೆ ಒಂದೇ ನಗರದಲ್ಲಿದ್ದರೂ ವಿರೋಧಿಗಳಾದ ತನ್ನ ಮಕ್ಕಳನ್ನು ಮತ್ತು ಪಾಂಡವರನ್ನು ಗಮನಿಸಿ, ಒಂದು ತೀರ್ಮಾನಕ್ಕೆ ಬಂದ. ಪಾಂಡವರಲ್ಲಿ ಹಿರಿಯನಾದ ಧರ್ಮರಾಜನನ್ನು ಕರೆದು ''ನಿನಗೆ ಇಂದ್ರಪ್ರಸ್ಥವನ್ನು ಕೊಡುತ್ತೇನೆ. ಅಲ್ಲಿ ನೀನು ರಾಜನಾಗು. ಕೂಡಲೇ ಹೊರಡು'' ಎಂದನು. ಇಂದ್ರಪ್ರಸ್ಥ ಈಗಿನ ದೆಹಲಿ. ತನ್ನ ಮಕ್ಕಳಿಗೆ ಸರ್ವಸೌಕರ್ಯವಿರುವ ಹಸ್ತಿನಪುರವನ್ನು ಬಿಟ್ಟು, ಪಾಂಡವರಿಗೆ ಇನ್ನೂ ಅಭಿವೃದ್ಧಿ ಕಾಣದ ಇಂದ್ರಪ್ರಸ್ಥವನ್ನು ಕೊಟ್ಟನು.

**ತತ್ರಾರ್ಧರಾಜ್ಯಮನುಭುಂಕ್ಷ್ವ ಸಹಾನುಜೈಸ್ತ್ವಂ**
**ಕೋಶಾರ್ಧಮೇವ ಚ ಗೃಹಾಣ ಪುರಾ ಹಿ ಶಕ್ರಃ ।**
**ತತ್ರಾಭಿಷಿಕ್ತ ಉತ ಕಂಜಭವಾದಿದೇವೈ-**
**ಸ್ತತ್ರಸ್ಥ ಏವ ಸ ಚಕಾರ ಚಿರಂ ಚ ರಾಜ್ಯಮ್ ॥ ೨೦೮ ॥**

ಪದಚ್ಛೇದ :- **ತತ್ರ, ಅರ್ಧರಾಜ್ಯಮ್, ಅನುಭುಂಕ್ಷ್ವ, ಸಹ, ಅನುಜೈಃ, ತ್ವಮ್, ಕೋಶಾರ್ಧಮ್, ಏವ, ಚ, ಗೃಹಾಣ, ಪುರಾ, ಹಿ, ಶಕ್ರಃ । ತತ್ರ, ಅಭಿಷಿಕ್ತಃ, ಉತ, ಕಂಜಭವಾದಿದೇವೈಃ, ತತ್ರಸ್ಥಃ, ಏವ, ಸಃ, ಚಕಾರ, ಚಿರಂ, ಚ ರಾಜ್ಯಮ್ ॥**

**ಅರ್ಥ** :- **ತ್ವಮ್** = ನೀನು, **ತತ್ರ** = ಆ ಇಂದ್ರಪ್ರಸ್ಥದಲ್ಲಿ, **ಅನುಜೈಃ ಸಹ** = ತಮ್ಮಂದಿರೊಡಗೂಡಿ, **ಅರ್ಧರಾಜ್ಯಂ** = ಅರ್ಧರಾಜ್ಯವನ್ನು, **ಅನುಭುಂಕ್ಷ್ವ** = ಅನುಭವಿಸು, **ಚ** = ಮತ್ತು, **ಕೋಶಾರ್ಧಂ** = ಕೋಶದ (ರಾಜ್ಯದ ಸಂಪತ್ತಿನ) ಅರ್ಧಭಾಗವನ್ನು, **ಗೃಹಾಣ** = ತೆಗೆದುಕೋ, **ಪುರಾ** = ಹಿಂದೆ, **ಶಕ್ರಃ** = ಇಂದ್ರನು, **ತತ್ರ** = ಆ ಇಂದ್ರಪ್ರಸ್ಥದಲ್ಲಿ, **ಕಂಜಭವಾದಿದೇವೈಃ** = **ಕಂಜಭವ** = ಕಮಲದಿಂದ ಹುಟ್ಟಿದ ಬ್ರಹ್ಮನೇ ಮೊದಲಾದ, **ದೇವೈಃ** = ದೇವತೆಗಳಿಂದ, **ಅಭಿಷಿಕ್ತಃ** = ಅಭಿಷೇಕಿಸಲ್ಪಟ್ಟಿದ್ದ, **ಹಿ** = ಇದು ಪ್ರಸಿದ್ಧವಾಗಿದೆ, **ಉತ** = ಹಾಗೆಯೇ, **ತತ್ರಸ್ಥಃ ಏವ** = ಇಂದ್ರಪ್ರಸ್ಥದಲ್ಲಿಯೇ ಇರುವವನಾಗಿ, **ಚಿರಂ** = ಬಹಳ ಕಾಲ, **ರಾಜ್ಯಂ ಚ** = ರಾಜ್ಯವನ್ನಾದರೋ, **ಚಕಾರ** = ಆಳಿದನು.

**ತಾತ್ಪರ್ಯ** :- ಧೃತರಾಷ್ಟ್ರ ಧರ್ಮರಾಜನಿಗೆ ಹೇಳುತ್ತಿದ್ದಾನೆ– ''ನೀನು ಇಂದ್ರಪ್ರಸ್ಥಕ್ಕೆ ಹೋಗಿ, ಅಲ್ಲಿ ಅರ್ಧರಾಜ್ಯವನ್ನು ಅನುಭವಿಸು. ಸಂಪತ್ತಿಗಾಗಿ ನಿನಗೆ ನನ್ನ ಕೋಶದಲ್ಲಿನ ಅರ್ಧ ಸಂಪತ್ತನ್ನು ಕೊಡುತ್ತೇನೆ. ಅಲ್ಲಿ ಹೋಗಿ ನಿಮ್ಮ ತಮ್ಮಂದಿರ ಜೊತೆ ಸುಖವಾಗಿರು'' ಹೀಗೆ ಹೇಳಿದ ಧೃತರಾಷ್ಟ್ರನಿಗೆ ಅದು ಅಭಿವೃದ್ಧಿ ಹೊಂದದ ಸ್ಥಳ ಎಂಬ ಧರ್ಮರಾಜ ಹೇಳಬಹುದೆಂಬ ಭಯದಿಂದ ಹೇಳುತ್ತಾನೆ– ''ಅದೇನು ಸಾಮಾನ್ಯ ನಗರ ಅಲ್ಲ. ಈ ಹಿಂದೆ ಬ್ರಹ್ಮ ಮುಂತಾದ ದೇವತೆಗಳು ಆ ಸ್ಥಳದಲ್ಲಿಯೇ ಇಂದ್ರನನ್ನು ರಾಜನನ್ನಾಗಿ ಅಭಿಷೇಕಿಸಿದ್ದರು. ಇಂದ್ರನೂ ಅಲ್ಲಿ ಬಹಳ ಕಾಲ ರಾಜ್ಯವನ್ನು ಆಳಿದ್ದನು'' ಹೀಗೆ ಆ ಸ್ಥಳದ ಹಿರಿಮೆಯನ್ನು ಹೇಳಿ ನಾನು ನಿನಗೆ ಒಳ್ಳೆಯ ಸ್ಥಳವನ್ನೇ ಕೊಟ್ಟಿದ್ದೇನೆ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ.

**ತ್ವಂ ವೀರ ಶಕ್ರಸಮ ಏವ ತತಸ್ತವೈವ**
**ಯೋಗ್ಯಂ ಪುರಂ ತದತ ಆಶ್ವಭಿಷೇಚಯಾಮಿ ।**
**ಇತ್ಯುಕ್ತ ಆಹ ಸ ಯುಧಿಷ್ಠಿರ ಓಮಿತಿ ಸ್ಮ**
**ಚಕ್ರೇಽಭಿಷೇಕಮಪಿ ತಸ್ಯ ಸ ಆಂಬಿಕೇಯಃ ॥ ೨೧೯ ॥**

ಪದಚ್ಛೇದ :– ತ್ವಂ, ವೀರಃ, ಶತ್ರಸಮಃ, ಏವ, ತತಃ, ತವ, ಏವ, ಯೋಗ್ಯಂ, ಪುರಂ, ತತ್, ಅತಃ, ಆಶು, ಅಭಿಷೇಚಯಾಮಿ । ಇತ್ಯುಕ್ತೇ, ಆಹ, ಸಃ, ಯುಧಿಷ್ಠಿರಃ, ಜಮ್, ಇತಿ, ಸ್ಮ, ಚಕ್ರೇ, ಅಭಿಷೇಕಮ್, ಅಪಿ, ತಸ್ಯ, ಸಃ, ಆಂಬಿಕೇಯಃ ॥

**ಅರ್ಥ** :- **ತ್ವಂ** = ನೀನು, **ಶತ್ರುಸಮಃ** = ಇಂದ್ರನಿಗೆ ಸಮನಾದ, **ವೀರಃ ಏವ** = ಪರಾಕ್ರಮೀಯೇ **ತತಃ** = ಆ ಕಾರಣದಿಂದ, **ತವ** = ನಿನಗೆ, **ತತ್** = ಆ **ಯೋಗ್ಯಂ ಪುರಂ** = ಯೋಗ್ಯವಾದ ಇಂದ್ರಪ್ರಸ್ಥನಗರವು, **ಆಶು ಏವ** =

ಕೂಡಲೇ, ಅಭಿಷೇಚಯಾಮಿ = ಅಭಿಷೇಕ ಮಾಡುತ್ತೇನೆ, ಇತ್ಯುಕ್ತೇ = ಧೃತರಾಷ್ಟ್ರನು ಹೀಗೆ ಹೇಳಲು, ಸಃ = ಆ, ಯುಧಿಷ್ಠಿರಃ = ಧರ್ಮರಾಜನು, ಜವಮ್ = ಆಗಲಿ, ಇತಿ = ಎಂದು, ಆಹ ಸ್ಮ = ಹೇಳಿದನು. ಸಃ = ಆ ಆಂಬಿಕೇಯಃ = ಅಂಬಿಕೆಯ ಮಗನಾದ ಧೃತರಾಷ್ಟ್ರನು, ತಸ್ಯ = ಆ ಧರ್ಮರಾಜನ, ಅಭಿಷೇಕಮಪಿ = ಅಭಿಷೇಕವನ್ನು ಕೂಡ, ಚಕ್ರೇ = ಮಾಡಿದನು.

ತಾತ್ಪರ್ಯ :- ಯುಧಿಷ್ಠಿರನಿಗೆ ಧೃತರಾಷ್ಟ್ರ ಹೇಳುತ್ತಾನೆ– ''ಈ ಇಂದ್ರಪ್ರಸ್ಥ ನಿನಗೆ ಯೋಗ್ಯ. ಯಾಕೆಂದರೆ ನೀನು ಇಂದ್ರನಿಗೆ ಸಮನಾದ ಪರಾಕ್ರಮಶಾಲಿ. ಇಂದ್ರ ಆಳಿದ ರಾಜ್ಯವನ್ನು ನೀನು ಆಳುವುದು ಸೂಕ್ತ. ಈ ಕೂಡಲೆ ನಿನ್ನನ್ನು ಇಂದ್ರಪ್ರಸ್ಥದ ರಾಜನನ್ನಾಗಿ ಪಟ್ಟಾಭಿಷೇಕವನ್ನು ಮಾಡುತ್ತೇನೆ'' ಎಂದು ಧರ್ಮರಾಜನೂ ಕೂಡ ಸಮ್ಮತಿ ಸೂಚಿಸುತ್ತಾನೆ. ಅವನ ಸಮ್ಮತಿಯನ್ನೇ ಕಾಯುತ್ತಿದ್ದ ಧೃತರಾಷ್ಟ್ರ ಧರ್ಮರಾಜನಿಗೆ ಅಭಿಷೇಕವನ್ನು ಮಾಡಿದ.

**ತಸ್ಯಾಭಿಷೇಕಮಕರೋತ್ ಪ್ರಥಮಂ ಹಿ ಕೃಷ್ಣೋ**
**ವಾಸಿಷ್ಠನಂದನ ಉರುರ್ಭವ ಚಕ್ರವರ್ತೀ ।**
**ಯಷ್ಟಾSಶ್ವಮೇಧನಿಖಿಲಾತ್ಮಕರಾಜಸೂಯ-**
**ಪೂರ್ವೈರ್ಮಖೈಃ ಸತತಮೇವ ಚ ಧರ್ಮಶೀಲಃ ॥ ೨೧೦ ॥**

ಪದಚ್ಛೇದ :- ತಸ್ಯ, ಅಭಿಷೇಕಮ್, ಅಕರೋತ್, ಪ್ರಥಮಮ್, ಹಿ, ಕೃಷ್ಣಃ, ವಾಸಿಷ್ಠನಂದನಃ, ಉರುಃ, ಭವ, ಚಕ್ರವರ್ತೀ । ಯಷ್ಟಾ, ಅಶ್ವಮೇಧ ನಿಖಿಲಾತ್ಮಕರಾಜಸೂಯಪೂರ್ವೈಃ, ಮಖೈಃ, ಸತತಮ್, ಏವ, ಚ, ಧರ್ಮಶೀಲಃ ॥

ಅರ್ಥ :- ಪ್ರಥಮಮ್ = ಮೊದಲಿಗೆ, ವಾಸಿಷ್ಠನಂದನಃ = ಪರಾಶರರ ಮಗನಾದ, ಕೃಷ್ಣಃ = ವೇದವ್ಯಾಸ ಋಷಿಯು (ತ್ವಂ = ನೀನು), ಸತತಮೇವ = ಎಂದೆಂದಿಗೂ, ಅಶ್ವಮೇಧ...ಪೂರ್ವೈಃ = ಅಶ್ವಮೇಧ = ಅಶ್ವಮೇಧ ಯಾಗ ಮತ್ತು ನಿಖಿಲ = ಎಲ್ಲ, ಯಾಗಾತ್ಮಕ = ಯಜ್ಞದ ಸ್ವರೂಪವಾದ, ರಾಜಸೂಯ = ರಾಜಸೂಯವೇ, ಪೂರ್ವೈಃ = ಮೊದಲಾದ, ಮಖೈಃ = ಯಾಗಗಳಿಂದ, ಯಷ್ಟಾ = ಯಾಗಮಾಡುವವನು, ಚ = ಮತ್ತು, ಧರ್ಮಶೀಲಃ ಸನ್ = ಧರ್ಮಶೀಲನು ಆಗಿ (ಧರ್ಮಮಾರ್ಗದಲ್ಲಿರುವವನಾಗಿ) ಉರುಃ = ಶ್ರೇಷ್ಠನಾದ, ಚಕ್ರವರ್ತೀ = ರಾಜನು, ಭವ = ಆಗು (ಇತಿ = ಈ ರೀತಿಯಾಗಿ), ತಸ್ಯ = ಆ ಧರ್ಮರಾಜನ, ಅಭಿಷೇಕಮ್ = ಪಟ್ಟಾಭಿಷೇಕವನ್ನು, ಅಕರೋತ್ = ಮಾಡಿದನು, ಹಿ = ಇದು ಆನಂದವು.

ತಾತ್ಪರ್ಯ :- ಧರ್ಮರಾಜನಿಗೆ ಮೊದಲ ಅಭಿಷೇಕ ಮಾಡಿದ್ದು, ಆಗಿನ ಕಾಲದ ಸರ್ವಸಮ್ಮತರಾದ, ಜ್ಞಾನಿಗಳಾದ ವೇದವ್ಯಾಸರು. ಅವರು ಧರ್ಮರಾಜನನ್ನು ತುಂಬುಹೃದಯದಿಂದ ಆಶೀರ್ವದಿಸುತ್ತಾರೆ — ''ಧರ್ಮರಾಜ! ನೀನು ಅಧಿಕಾರ ಬಂಧ ನಂತರ ಧರ್ಮವನ್ನು ಬಿಡಬೇಡ. ಸದಾ ಧರ್ಮಶೀಲನಾಗಿರು. ಲೋಕಕಲ್ಯಾಣಕ್ಕಾಗಿ ಯಾಗಗಳನ್ನು ಮಾಡುತ್ತಿರು. ''ರಾಜಾ ರಾಜಸೂಯೇನ ಯಜೇತ'' ಎಂಬ ಮಾತಿನಂತೆ ಎಲ್ಲ ಯಾಗಗಳ ಸ್ವರೂಪವಾದ ರಾಜಸೂಯ ಯಾಗವನ್ನು ಮಾಡು. ಕ್ರಮಶ್ರೇಷ್ಠವಾದ ಅಶ್ವಮೇಧವನ್ನೂ ಮಾಡು. ಹೀಗೆ ಧಾರ್ಮಿಕನಾಗಿದ್ದು ಶ್ರೇಷ್ಠನಾದ ಚಕ್ರವರ್ತಿಯಾಗು'' ಎಂದು ಇಲ್ಲಿ 'ಹಿ' ಎಂಬ ಪದ ಅನೇಕ ಅರ್ಥಗಳನ್ನು ಕೊಡುವಂತೆ ಆಚಾರ್ಯರ ಪ್ರಯೋಗವಿದೆ. ಜ್ಞಾನಕ್ಕೆ ಬೆಲೆ ಕೊಡದ ದುರ್ಯೋಧನ ಒಂದು ಕಡೆ ಇದ್ದರೆ, ಇಲ್ಲಿ ವ್ಯಾಸರೇ ಮೊದಲ ಅಭಿಷೇಕ ಮಾಡಿದ್ದು, ಜ್ಞಾನಿಗೆ ಕೊಟ್ಟ ಗೌರವ. ಇದೊಂದು ಆನಂದ. ಒಬ್ಬ ಧಾರ್ಮಿಕನು ರಾಜನಾದ ಎಂಬುದು ಇನ್ನೊಂದಾನಂದ.

ಇತ್ಯೇವ ಪಾರ್ಷತಸುತಾಸಹಿತೇಽಭಿಷಿಕ್ತೇ
ಕೃಷ್ಣೋಽಪಿ ವೃಷ್ಣಿವೃಷಭಃ ಸ ತಥಾಽಭ್ಯಷಿಂಚತ್ ।
ಏವಂ ಚ ಮಾರುತಿಶಿರಸ್ಯಭಿಷೇಕಮೇತೌ
ಸಂಚಕ್ರತುಃ ಸ್ಮ ಯುವರಾಜಪದೇ ಸಭಾರ್ಯಮ್ ॥ ೨೧೧ ॥

ಪದಚ್ಛೇದ :- ಇತಿ, ಏವ, ಪಾರ್ಷತಸುತಾಸಹಿತೇ, ಅಭಿಷಿಕ್ತೇ, ಕೃಷ್ಣಃ, ಅಪಿ, ವೃಷ್ಣಿವೃಷಭಃ, ಸಃ, ತಥಾ ಅಭ್ಯಷಿಂಚತ್ । ಏವಂ, ಚ, ಮಾರುತಿಶಿರಸಿ, ಅಭಿಷೇಕಮ್, ಏತೌ, ಸಂಚಕ್ರತುಃ, ಸ್ಮ, ಯುವರಾಜಪದೇ, ಸಭಾರ್ಯಮ್ ॥

ಅರ್ಥ :- ಇತ್ಯೇವ = ಈ ರೀತಿ ವ್ಯಾಸರ ಆಶೀರ್ವಾದದ ಮೂಲಕವೇ, ಪಾರ್ಷತಸುತಾಸಹಿತೇ = ದ್ರೌಪದೀಸಹಿತನಾದ ಧರ್ಮರಾಜನು, ಅಭಿಷಿಕ್ತೇ = ಅಭಿಷೇಕಿಸಲ್ಪಡುತ್ತಿರಲಾಗಿ, ಸಃ = ಆ, ವೃಷ್ಣಿವೃಷಭಃ = ವೃಷ್ಣಿಗಳಲ್ಲಿ ಶ್ರೇಷ್ಠನಾದ, ಕೃಷ್ಣಃ ಅಪಿ = ಶ್ರೀಕೃಷ್ಣನೂ ಕೂಡ, ತಥಾ = ವೇದವ್ಯಾಸರು ಮಾಡಿದಂತೆ ಆಶೀರ್ವಾದ ಮೂಲಕವೇ, ಅಭ್ಯಷಿಂಚತ್ = ಅಭಿಷೇಕ ಮಾಡಿದನು. ಏವಂ ಚ = ಈ ರೀತಿ ಆಶೀರ್ವಾದಪುರಸ್ಸರವಾಗಿಯೇ, ಏತೌ = ಈ ವಾಸಿಷ್ಠ ಯಾದವ ಕೃಷ್ಣರು, ಯುವರಾಜ ಪದೇ = ಯುವರಾಜನ ಸ್ಥಾನದಲ್ಲಿ, ಸಭಾರ್ಯಮ್ = ಹೆಂಡತಿಯಾದ ದ್ರೌಪದಿಯಿಂದೊಡಗೂಡಿದ,

ಮಾರತಿಶಿರಸಿ, ಮಾರುತಿ = ಭೀಮಸೇನನ, ಶಿರಸಿ = ತಲೆಯಮೇಲೆ, **ಅಭಿಷೇಕಮ್** = ಪಟ್ಟಾಭಿಷೇಕವನ್ನು, **ಸಂಚಕ್ರಮುಃ ಸ್ಮ** = ಮಾಡಿದರು.

**ತಾತ್ಪರ್ಯ** :- ದ್ರೌಪದೀಸಹಿತನಾದ ಧರ್ಮರಾಜನಿಗೆ ವೇದವ್ಯಾಸರು ಹಿಂದೆ ಹೇಳಿದಂತೆ ಆಶೀರ್ವದಿಸಿ, ಅಭಿಷೇಕ ಮಾಡಿದರು. ಅನಂತರ ವ್ಯಾಸರದೇ ಇನ್ನೊಂದು ರೂಪ ಶ್ರೀಕೃಷ್ಣ. ಅವನೂ ಕೂಡ ಧರ್ಮರಾಜನಿಗೆ ಆಶೀರ್ವಾದ ಮಾಡಿ ಅಭಿಷೇಕ ಮಾಡಿದನು. ವಾಸಿಷ್ಠ ಕೃಷ್ಣ ಮತ್ತು ಯಾದವ ಕೃಷ್ಣರ ಆಶೀರ್ವಾದದ ಬಲ ಧರ್ಮರಾಜನಿಗೆ ಸಿಕ್ಕ ನಂತರ ಮುಂದಿನ ಸರದಿ ಯುವರಾಜನಾಗಬೇಕಿರುವ ಭೀಮಸೇನನದ್ದು. ದ್ರೌಪದೀ ಸಹಿತನಾದ ಭೀಮನನ್ನೂ ಕೂಡ ವ್ಯಾಸ-ಕೃಷ್ಣರು ಆಶೀರ್ವದಿಸಿ ಯುವರಾಜನನ್ನಾಗಿ ಅಭಿಷೇಕ ಮಾಡಿದರು.

**ಭೀಮೇ ಚ ಪಾರ್ಷತಸುತಾಸಹಿತೇಽಭಿಷಿಕ್ತೇ**
**ತಾಭ್ಯಾಮನಂತಸುಕಶಕ್ತಿಚಿದಾತ್ಮಕಾಭ್ಯಾಮ್ ।**
**ಅನ್ಯೈಶ್ಚ ವಿಪ್ರವೃಷಭೈಃ ಸುಕೃತೇಽಭಿಷೇಕೇ**
**ಧರ್ಮಾತ್ಮಜಾನು ಮುಮುದುರ್ನಿಖಿಲಾಶ್ಚ ಸಂತಃ ॥ ೨೧೨ ॥**

**ಪದಚ್ಛೇದ** :- **ಭೀಮೇ, ಚ, ಪಾರ್ಷತಸುತಾಸಹಿತೇ, ಅಭಿಷಿಕ್ತೇ, ತಾಭ್ಯಾಮ್, ಅನಂತಸುಖಶಕ್ತಿಚಿದಾತ್ಮಕಾಭ್ಯಾಮ್ । ಅನ್ಯೈಃ, ಚ, ವಿಪ್ರವೃಷಭೈಃ, ಸುಕೃತೇ, ಅಭಿಷೇಕೇ, ಧರ್ಮಾತ್ಮಜಾನು, ಮುಮುದುಃ, ನಿಖಿಲಾಃ, ಚ, ಸಂತಃ ॥**

**ಅರ್ಥ** :- **ಅನಂತಸುಖಶಕ್ತಿಚಿದಾತ್ಮಕಾಭ್ಯಾಂ** = ಅಪರಿಮಿತವಾದ ಆನಂದ-ಬಲ ಮತ್ತು ಜ್ಞಾನಸ್ವರೂಪರಾದ, **ತಾಭ್ಯಾಂ** = ಆ ವೇದವ್ಯಾಸ ಮತ್ತು ಕೃಷ್ಣರಿಂದ, **ಚ** = ಮತ್ತು, **ಅನ್ಯೈಃ** = ಬೇರೆ, **ವಿಪ್ರವೃಷಭೈಃ** = ಬ್ರಾಹ್ಮಣಶ್ರೇಷ್ಠರಿಂದ, **ಧರ್ಮಾತ್ಮಜಾನು** = ಧರ್ಮರಾಜನ ಅನಂತರ, **ಪಾರ್ಷತಸುತಾಸಹಿತೇ** = ದ್ರೌಪದೀಸಹಿತನಾದ, **ಭೀಮೇ ಚ** = ಭೀಮನೂ ಕೂಡ, **ಅಭಿಷಿಕ್ತೇ** = ಅಭಿಷೇಕಿಸಲ್ಪಡುತ್ತಿರಲಾಗಿ, **ಸುಕೃತೇ** = ಆಶೀರ್ವಾದಪುರಸ್ಸರವಾದ ಆ ಒಳ್ಳೆಯ, **ಅಭಿಷೇಕೆ** = ಅಭಿಷೇಕದ ವಿಷಯದಲ್ಲಿ, **ನಿಖಿಲಾಃ** = ಎಲ್ಲ, **ಸಂತಃ ಚ** = ಸಜ್ಜನರಾದರೋ, **ಮುಮುದುಃ** = ಆನಂದಪಟ್ಟರು.

ತಾತ್ಪರ್ಯ :- ವೇದವ್ಯಾಸದೇವರು ಮತ್ತು ಶ್ರೀಕೃಷ್ಣರು ಸಾಮಾನ್ಯರಲ್ಲ, ಅವರು ಜ್ಞಾನ ಆನಂದಬಲ ಸ್ವರೂಪರು. ಯಾವ ದೋಷವೂ ಇಲ್ಲದ ಈ ಇಬ್ಬರು ಮೊದಲು ದ್ರೌಪದೀ ಸಹಿತನಾದ ಧರ್ಮರಾಜನಿಗೆ ಅನಂತರ ಯುವರಾಜನ ಪದವಿಯಲ್ಲಿ ಭೀಮಸೇನನಿಗೆ ಅಭಿಷೇಕ ಮಾಡಿದರು. ಸರ್ವಜ್ಞರಾದ ಈ ಇಬ್ಬರ ನಂತರ ಆಗಿನ ಕಾಲದ ಹಿರಿಯ ಜ್ಞಾನಿಗಳೆಲ್ಲರೂ ಧರ್ಮರಾಜ-ಭೀಮಸೇನನಿಗೆ ಆಶೀರ್ವಾದ ಮಾಡಿ, ಅಭಿಷೇಕ ಮಾಡಿದರು. ಈ ಅಭಿಷೇಕವನ್ನು ನೋಡಿದ ಎಲ್ಲ ಸಜ್ಜನರಿಗೂ ಆನಂದವಾಯಿತು. ಧರ್ಮರಾಜ ರಾಜ ಆದ ಎಂಬುವುದಕ್ಕಿಂತ ಭೀಮಸೇನ ಯುವರಾಜ ಆದ ಎಂಬ ವಿಷಯದಲ್ಲಿ ಸಜ್ಜನರು ಆನಂದಿಸಿದರು. ಎಂಬುದು ಶ್ಲೋಕದ ಭಾವ. ಪರಮ ಭಾಗವತನಾದ ಸಮರ್ಥನಾದ ಭೀಮಸೇನ ಯುವರಾಜನಾದರೇ ನಾವೆಲ್ಲ ಸುರಕ್ಷಿತರು ಎಂಬ ಭಾವದಿಂದ ಸಜ್ಜನರ ಮನಸ್ಸಿನಲ್ಲಿ ಆನಂದ ಮೂಡಿತು.

ತಸ್ಮಿನ್ ಮಹೋತ್ಸವವರೇ ದಿನಸಪ್ತಕಾನು-
ವೃತ್ತೇ ವಸಿಷ್ಠವೃಷಭೇಣ ಚ ವೃಷ್ಣಿಪೇನ ।
ಕೃಷ್ಣೇನ ತೇ ಯಯುರಮಾ ಪೃಥಯಾ ತಯಾ ಚ
ಪಾಂಚಾಲರಾಜಸುತಯಾ ಸ್ಥಲಮಿಂದ್ರವಾಸಮ್ ॥ ೨೧೩ ॥

ಪದಚ್ಛೇದ :- ತಸ್ಮಿನ್, ಮಹೋತ್ಸವವರೇ, ದಿನಸಪ್ತಕಾನುವೃತ್ತೇ, ವಸಿಷ್ಠವೃಷಭೇಣ, ಚ, ವೃಷ್ಣಿಪೇನ । ಕೃಷ್ಣೇನ, ತೇ ಯಯುಃ, ಅಮಾ, ಪೃಥಯಾ, ತಯಾ, ಚ, ಪಾಂಚಾಲರಾಜಸುತಯಾ, ಸ್ಥಲಮ್, ಇಂದ್ರವಾಸಮ್ ॥

ಅರ್ಥ :- ತಸ್ಮಿನ್ = ಆ, ಮಹೋತ್ಸವವರೇ = ಉತ್ತಮವಾದ ಮಹೋತ್ಸವವು, ದಿನಸಪ್ತಕಾನುವೃತ್ತೇ = ಏಳುದಿನಗಳು ನಡೆದ ನಂತರ, ತೇ = ಆ ಪಾಂಡವರು, ವಸಿಷ್ಠವೃಷಭೇಣ = ವಸಿಷ್ಠನ ಕುಲದಲ್ಲಿ ಶ್ರೇಷ್ಠನಾದ, ಕೃಷ್ಣೇನ = ಕೃಷ್ಣನೆಂಬ ಹೆಸರುಳ್ಳ ವೇದವ್ಯಾಸರಿಂದ, ಚ = ಮತ್ತು, ವೃಷ್ಣಿಪೇನ = ವೃಷ್ಣಿಗಳನ್ನು ಕಾಪಾಡುವ, ಕೃಷ್ಣೇನ = ಶ್ರೀಕೃಷ್ಣನಿಂದ, ಚ = ಮತ್ತು, ಪೃಥಯಾ = ಕುಂತಿಯಿಂದ, ಪಾಂಚಾಲರಾಜಸುತಯಾ = ಪಾಂಚಾಲರಾಜನ ಮಗಳಾದ ದ್ರೌಪದಿಯಿಂದ, ಅಮಾ = ಕೂಡಿಕೊಂಡು, ಇಂದ್ರವಾಸಮ್

ಸ್ಥಲಮ್ = ಇಂದ್ರನು ವಾಸವಿದ್ದ ಇಂದ್ರಪ್ರಸ್ಥವನ್ನು ಕುರಿತು, **ಯಯುಃ** = ಹೋದರು.

ತಾತ್ಪರ್ಯ :- ಹಸ್ತಿನಾವತಿಯಲ್ಲಿದ್ದಂತೆಯೇ ಧೃತರಾಷ್ಟ್ರನು ಧರ್ಮರಾಜನನ್ನು ಇಂದ್ರಪ್ರಸ್ಥದ ರಾಜನನ್ನಾಗಿ ಅಭಿಷೇಕಿಸಿದನು. ಧರ್ಮ-ಭೀಮರ ಈ ಪಟ್ಟಾಭಿಷೇಕವು ಒಂದು ದೊಡ್ಡ ಹಬ್ಬದಂತಿತ್ತು. ಏಳು ದಿನಗಳ ವರೆಗೆ ಅಭಿಷೇಕವೆಂಬ ಹಬ್ಬ ನಡೆಯಿತು. ಅನಂತರ ಪಾಂಡವರು ಇಂದ್ರಪ್ರಸ್ಥಕ್ಕೆ ತೆರಳಿದರು. ಅವರೊಡನೆ ವೇದವ್ಯಾಸರು, ಶ್ರೀಕೃಷ್ಣ, ಕುಂತೀ ದ್ರೌಪದೀಯರಾಗಿ ಇದ್ದರು.

**ಕೋಶಸ್ಯ ಚಾರ್ಧಸಹಿತಾಸ್ತು ಯದ್ವೈವ ಪಾರ್ಥಾ**
**ಗಚ್ಛಂತಿ ತಾನನುಯಯುರ್ನಿಖಿಲಾಶ್ಚ ಪೌರಾಃ ।**
**ಊಚುಶ್ಚ ಹಾ ಬತ ಸುಯೋಧನ ಏಷ ಪಾಪೋ**
**ದೂರೇ ಚಕಾರ ನನು ಪಾಂಡುಸುತಾನ್ ಗುಣಾಢ್ಯಾನ್ ॥ ೨೧೪ ॥**

ಪದಚ್ಛೇದ :- **ಕೋಶಸ್ಯ, ಚ, ಅರ್ಧಸಹಿತಾಃ, ತು, ಯದ್ವೈವ, ಪಾರ್ಥಾಃ, ಗಚ್ಛಂತಿ, ತಾನ್, ಅನುಯಯುಃ, ನಿಖಿಲಾಃ, ಚ, ಪೌರಾಃ । ಊಚುಃ, ಚ, ಹಾ ಬತ, ಸುಯೋಧನಃ, ಏಷಃ, ಪಾಪಃ, ದೂರೇ, ಚಕಾರ, ನನು, ಪಾಂಡುಸುತಾನ್, ಗುಣಾಢ್ಯಾನ್ ॥**

**ಅರ್ಥ** :- **ಯದ್ವೈವ** = ಯಾವಾಗಲೇ, **ಕೋಶಸ್ಯ ಚ** = ಕೋಶದ (ಸಂಪತ್ತಿನ) **ಅರ್ಧಸಹಿತಾಃ** = ಅರ್ಧಭಾಗದಿಂದ ಕೂಡಿದ, **ಪಾಥಾಃ** = ಪೃಥೆಯ ಮಕ್ಕಳು, **ಗಚ್ಛಂತಿ** = ಇಂದ್ರಪ್ರಸ್ಥಕ್ಕೆ ಹೊರಟರೋ, (**ತದಾ** = ಆಗ), **ತಾನ್** = ಆ ಪಾಂಡವರನ್ನು, **ನಿಖಿಲಾಃ** = ಎಲ್ಲಾ, **ಪೌರಾಃ ಚ** = ನಾಗರಿಕರಾದರೋ, **ಅನುಯಯುಃ** = ಅನುಸರಿಸಿ ಹೊರಟರು. **ಹಾ** = ಅಯ್ಯೋ!, **ಪಾಪಃ** = ಪಾಪಿಷ್ಠನಾದ, **ಏಷಃ** = ಈ, **ಸುಯೋಧನಃ** = ದುರ್ಯೋಧನನು, **ಗುಣಾಢ್ಯಾನ್** = ಸದ್ಗುಣಗಳಿಂದ ಪೂಜ್ಯರಾದ, **ಪಾಂಡುಸುತಾನ್** = ಪಾಂಡವರನ್ನು, **ದೂರೇ ಚಕಾರ ನನು** = ದೂರ ಮಾಡಿದನಲ್ಲವೇ, **ಬತ** = ಇದು ದುಃಖಕರವು, (**ಇತಿ** = ಎಂದು) **ಊಚುಃ ಚ** = ಹೇಳಿದರು ಕೂಡ.

**ತಾತ್ಪರ್ಯ** :- ಪಾಂಡವರೆಲ್ಲರೂ ಇಂದ್ರಪ್ರಸ್ಥಕ್ಕೆ ಹೊರಟ ನಂತರ ಹಸ್ತಿನಾಪುರದ ನಾಗರಿಕರಿಗೆ ಬಹಳ ದುಃಖ ಆಯಿತು. ಪಾಂಡವರ ಸದ್ಗುಣಗಳಿಂದ ಆಕರ್ಷಿತರಾದ ನಾಗರಿಕರಿಗೆ ಪಾಂಡವರಲ್ಲಿ ಪೂಜ್ಯ ಭಾವನೆ ಇತ್ತು. ದುರ್ಯೋಧನನ ಕೆಟ್ಟ ಆಡಳಿತದಿಂದ ನೊಂದ ಜನರು– ''ಈ ಪಾಪಿಷ್ಠನಾದ ದುರ್ಯೋಧನ ನಮ್ಮಿಂದ ಪಾಂಡವರನ್ನು ದೂರ ಮಾಡುತ್ತಿದ್ದಾನೆ. ಇದಕ್ಕಿಂತ ದುಃಖದ ವಿಷಯ ಇನ್ನೊಂದಿಲ್ಲ.'' ಎಂದು ಅಂದುಕೊಂಡರು.

**ಭೀಮಪ್ರತಾಪಮವಲಂಬ್ಯ ಕಲಿಂಗಬಂಧಾ-**
**ನ್ಮುಕ್ತಃ ಸುತಾಮಪಿ ಹಿ ತಸ್ಯ ಪುರಂ ನಿನಾಯ ।**
**ದ್ವೇಷ್ಟ್ಯೇವಮಪ್ಯತಿಬಲಾನ್ ಹಿ ಸದೈವ ಪಾರ್ಥಾನ್**
**ಯಾಮೋ ವಯಂ ಗುಣಿಭಿರದ್ಯ ಸಹೈವ ಪಾರ್ಥೈಃ ॥ ೨೧೫ ॥**

**ಪದಚ್ಛೇದ** :- **ಭೀಮಪ್ರತಾಪಮ್, ಅವಲಂಬ್ಯ, ಕಲಿಂಗಬಂಧಾತ್, ಮುಕ್ತಃ, ಸುತಾಮ್, ಅಪಿ, ಹಿ, ತಸ್ಯ, ಪುರಂ, ನಿನಾಯ । ದ್ವೇಷ್ಟಿ, ಏವಮ್, ಅಪಿ, ಅತಿಬಲಾನ್, ಹಿ, ಸದಾ, ಏವ, ಪಾರ್ಥಾನ್, ಯಾಮಃ, ವಯಂ, ಗುಣಿಭಿಃ, ಅದ್ಯ, ಸಹ, ಏವ, ಪಾರ್ಥೈಃ ॥**

**ಅರ್ಥ** :- **ಭೀಮಪ್ರತಾಪಮ್** = ಭೀಮನ ಪರಾಕ್ರಮವನ್ನು, **ಅವಲಂಬ್ಯ** = ಆಶ್ರಯಿಸಿ, **ಕಲಿಂಗಬಂಧಾತ್** = ಕಲಿಂಗರಾಜನ ಬಂಧನದಿಂದ, **ಮುಕ್ತಃ** = ಬಿಡಿಸಲ್ಪಟ್ಟ ಈ ದುರ್ಯೋಧನನು, **ತಸ್ಯ** = ಆ ಕಲಿಂಗರಾಜನ, **ಸುತಾಮಪಿ** = ಮಗಳನ್ನಾದರೋ **ಪುರಂ** = ಹಸ್ತಿನಪುರವನ್ನು ಕುರಿತು, **ನಿನಾಯ ಹಿ** = ಕೊಂಡೊಯ್ದನಷ್ಟೇ, **ಏವಮಪಿ** = ಹೀಗೆ ಭೀಮನ ಪರಾಕ್ರಮದಿಂದ ರಕ್ಷಿತನಾದರೂ, **ಅತಿಬಲಾನ್** = ಅತ್ಯಂತ ಪರಾಕ್ರಮಶಾಲಿಗಳಾದ, **ಪಾರ್ಥಾನ್** = ಪಾಂಡವರನ್ನು, ಸದಾ ಯಾವಾಗಲೂ ಕೂಡ, **ದ್ವೇಷ್ಟಿ** = ದ್ವೇಷಿಸುತ್ತಾನೆ. **ವಯಂ ಹಿ** = ನಾವಾದರೋ, **ಅದ್ಯ** = ಇಂದು, **ಆ ಗುಣಿಭಿಃ** = ಸದ್ಗುಣ ಸಂಪನ್ನರಾದ, **ಪಾರ್ಥೈಃ ಏವ ಸಹ** = ಪಾಂಡವರೊಂದಿಗೇ, **ಯಾಮಃ** = ಹೊರಡೋಣ.

ತಾತ್ಪರ್ಯ :- ಪಾಂಡವರನ್ನು ದೂರ ಮಾಡಿದ ದುರ್ಯೋಧನನನ್ನು ನಾಗರಿಕರು ಬಹಳ ಬೇಸರದಿಂದ ಹೀಗೆ ನಿಂದಿಸುತ್ತಾರೆ– ''ಈ ಪಾಪಿ ದುರ್ಯೋಧನ ಕಲಿಂಗರಾಜನ ಮಗಳನ್ನು ಅಪಹರಿಸಲು ಹೋಗಿ ಆ ರಾಜನ ಬಂಧನದಲ್ಲಿ ಸಿಕ್ಕಿ ಬಿದ್ದಿದ್ದ. ಆಗ ದುರ್ಯೋಧನನನ್ನು ಬಿಡಿಸಿದವನು ಭೀಮಸೇನ. ಹೀಗೆ ಭೀಮನ ಪರಾಕ್ರಮದಿಂದ ಉಳಿದಿದ್ದಾನೆ ಈ ದುರ್ಯೋಧನ. ಸೋತರೂ ಕಲಿಂಗರಾಜನ ಮಗಳನ್ನು ಹಸ್ತಿನಪುರಕ್ಕೆ ತಂದು ಮದುವೆಯಾಗಿದ್ದಾನೆ. ಇವನಿಗೆ ನಾಚಿಕೆ ಮತ್ತು ಕೃತಜ್ಞತೆಗಳೇ ಇಲ್ಲ. ಅತ್ಯಂತ ಪರಾಕ್ರಮಿಗಳಾದ ಪಾಂಡವರಿಂದ ಬದುಕಿದ್ದರೂ ಅವರನ್ನೇ ದ್ವೇಷಿಸುತ್ತಿದ್ದಾನೆ. ಕೃತಘ್ನನಾದ ಈ ದುರ್ಯೋಧನನ ಕೈ ಕೆಳಗೆ ನಾವು ಇರುವುದು ಬೇಡ. ಒಳ್ಳೆಯ ಗುಣಗಳನ್ನು ಹೊಂದಿದ ಪಾಂಡವರನ್ನೇ ಅನುಸರಿಸೋಣ.'' ಹೀಗೆ ಮಾತನಾಡಿಕೊಂಡ ನಾಗರಿಕರು ಪಾಂಡವರನ್ನೇ ಹಿಂಬಾಲಿಸಿಕೊಂಡು ಹೊರಡುತ್ತಾರೆ.

**ಆಜ್ಞಾಪಯತ್ಯಪಿ ಸ ಭೇರಿರವೇಣ ಪಾರ್ಥಾನ್**
**ನೈವಾನುಗಚ್ಛತ ಯದಿ ವ್ರಜಥಾನು ವೋಽದ್ಯ ।**
**ವಿತ್ತಂ ಹರಿಷ್ಯ ಇಹ ಸರ್ವಮಪೀತಿ ತಚ್ಚ**
**ಪಾಪಃ ಕರೋತು ನ ವಯಂ ವಿಜಹಾಮ ಪಾರ್ಥಾನ್ ॥ ೨೧೬ ॥**

**ಪದಚ್ಛೇದ :- ಆಜ್ಞಾಪಯತಿ, ಅಪಿ, ಸಃ, ಭೇರಿರವೇಣ, ಪಾರ್ಥಾನ್, ನ, ಏವ, ಅನುಗಚ್ಛತ, ಯದಿ, ವ್ರಜಥ, ಅನು, ವಃ, ಅದ್ಯ । ವಿತ್ತಂ, ಹರಿಷ್ಯೇ, ಇಹ, ಸರ್ವಮ್, ಅಪಿ, ಇತಿ, ತತ್, ಚ, ಪಾಪಃ, ಕರೋತು, ನ, ವಯಂ, ವಿಜಹಾಮ, ಪಾರ್ಥಾನ್ ॥**

**ಅರ್ಥ** :- ''**ಪಾರ್ಥಾನ್** = ಪಾಂಡವರನ್ನು, **ನೈವ ಅನುಗಚ್ಛತ** = ಅನುಸರಿಸಿ ಹೋಗಬೇಡಿ, **ಯದಿ** = ಒಂದು ವೇಳೆ, **ಅನು ವ್ರಜಥ** = ಪಾಂಡವರನ್ನು ಅನುಸರಿಸುವಿರಾದರೆ, **ಅದ್ಯ** = ಇಂದು, **ಇಹ** = ಇಲ್ಲಿ **ವಃ** = ನಿಮ್ಮ, **ಸರ್ವಮ್ ಅಪಿ** = ಎಲ್ಲ, **ವಿತ್ತಮ್** = ಸಂಪತ್ತನ್ನು, **ಹರಿಷ್ಯೇ** = ಅಪಹರಿಸುತ್ತೇನೆ.'' (**ಇತಿ** = ಈ ರೀತಿಯಾಗಿ), **ಸಃ** = ಆ ದುರ್ಯೋಧನನು, **ಭೇರಿರವೇಣ** = ನಗಾರಿಯ ಧ್ವನಿಯಿಂದ, **ಆಜ್ಞಾಪಯತಿ ಅಪಿ** = ಅಪ್ಪಣೆಯನ್ನು ಹೊರಡಿಸಿದರೂ, ''**ಪಾಪಃ** = ಪಾಪಿಯಾದ, ದುರ್ಯೋಧನನು, **ತತ್** = ನಮ್ಮ ಸಂಪತ್ತನ್ನು ಅಪಹರಿಸುವ ಕೆಲಸವನ್ನೇ, **ಕರೋತು** = ಮಾಡಲಿ, **ವಯಂ**

ಚ = ನಾವಾದರೋ, ಪಾರ್ಥಾನ್ = ಪಾಂಡವರನ್ನು, ನ ವಿಜಹಾಮ = ಬಿಡುವುದಿಲ್ಲ. (ಹೀಗೆ ಹೇಳಿದರು).

ತಾತ್ಪರ್ಯ :- ಪಾಂಡವರ ಅಗಲಿಕೆಯನ್ನು ಸಹಿಸದ ಹಸ್ತಿನಾಪುರದ ಜನರು ಪಾಂಡವರನ್ನು ಅನುಸರಿಸತೊಡಗಿದರು. ಇದನ್ನು ದುರ್ಯೋಧನ ಸಹಿಸಲಿಲ್ಲ. ತನ್ನ ದುರ್ಗುಣಗಳಿಂದ ದೂರ ಆದ ಜನರನ್ನು ಹೆದರಿಕೆಯಿಂದ ತಡೆಯಲು ಯತ್ನಿಸಿದ. ನಗರದಲ್ಲೆಲ್ಲೆಡೆ ಡಂಗುರ ಹೊಡೆಸಿದ. ''ಯಾರೂ ಕೂಡ ಪಾಂಡವರನ್ನು ಅನುಸರಿಸಬಾರದು. ಒಂದು ವೇಳೆ ಅವರ ಸಂಗಡ ಹೋದರೆ, ಇಲ್ಲಿನ ನಿಮ್ಮ ಎಲ್ಲ ಸಂಪತ್ತನ್ನು (ಹೊಲ, ಗದ್ದೆ, ಪಶು, ಮಕ್ಕಳು ಮುಂತಾದ ಸಂಪತ್ತನ್ನು) ಅಪಹರಿಸುವೆ'' ಎಂದು ಹೆದರಿಸಿದ. ಪಾಂಡವರ ಮೇಲೆ ಜನರಿಗೆ ಎಷ್ಟು ಪ್ರೀತಿ ಇತ್ತೆಂದು ಈ ಪ್ರಸಂಗದಲ್ಲೇ ತಿಳಿಯುತ್ತದೆ. ''ನಮ್ಮ ಸಂಪತ್ತನ್ನು ಪಾಪಿಯಾದ ದುರ್ಯೋಧನ ಅಪಹರಿಸಿದರೂ ಚಿಂತೆ ಇಲ್ಲ. ನಾವು ಮಾತ್ರ ಪಾಂಡವರ ಸಂಗವನ್ನು ತೊರೆಯುವುದಿಲ್ಲ.'' ಎಂದು ದೃಢವಾಗಿ ಹೇಳುತ್ತಾರೆ.

**ಸದ್ಭಿರ್ಹಿ ಸಂಗತಿರಿಹೈವ ಸುಖಸ್ಯ ಹೇತು-**
**ರ್ಮೋಕ್ಷೈಕಹೇತುರಥ ತದ್ವಿಪರೀತಮನ್ಯತ್ ।**
**ತಸ್ಮಾದ್ ವ್ರಜೇಮ ಸಹ ಪಾಂಡುಸುತೈರ್ಹಿ ಶಕ್ರ-**
**ಪ್ರಸ್ಥಂ ತ್ವಿತಿ ಸ್ಮ ಧೃತಚೇತಸ ಆಹ ಧರ್ಮಃ ॥ ೨೧೭ ॥**

**ಪದಚ್ಛೇದ :– ಸದ್ಭಿಃ, ಹಿ, ಸಂಗತಿಃ, ಇಹ, ಏವ, ಸುಖಸ್ಯ, ಹೇತುಃ, ಮೋಕ್ಷೈಕಹೇತುಃ, ಅಥ, ತತ್, ವಿಪರೀತಮ್, ಅನ್ಯತ್ । ತಸ್ಮಾತ್, ವ್ರಜೇಮ, ಸಹ, ಪಾಂಡುಸುತೈಃ, ಹಿ, ಶಕ್ರಪ್ರಸ್ಥಮ್, ತು, ಇತಿ, ಸ್ಮ, ಧೃತಚೇತಸಃ, ಆಹ, ಧರ್ಮಃ ॥**

ಅರ್ಥ :- ''ಇಹ = ಈ ಸಂಸಾರದಲ್ಲಿ, ಸದ್ಭಿಃ = ಸಜ್ಜನರೊಂದಿಗೆ ಸಂಗತಿಃ ಏವ = ಸಂಗವೇ, ಸುಖಸ್ಯ = ಆನಂದಕ್ಕೆ, ಹೇತುಃ = ಕಾರಣವು, ಅಥ = ಹಾಗೆಯೇ, ಮೋಕ್ಷೈಕಹೇತುಃ = ಮುಕ್ತಿಗೆ ಮುಖ್ಯ ಕಾರಣವು, ಅನ್ಯತ್ = ಇದಕ್ಕಿಂತ ಬೇರೆಯಾದ, ತತ್ = ದುರ್ಜನರ ಸಂಗವು, ವಿಪರೀತಮ್ = ದುಃಖಕ್ಕೆ ಕಾರಣವು ಮತ್ತು ತಮಸ್ಸಿಗೆ ಕಾರಣವು, ಹಿ = ಇದು ಪ್ರಸಿದ್ಧವಾಗಿದೆ. ತಸ್ಮಾತ್ = ಆದ್ದರಿಂದ (ವಯಂ = ನಾವು) ಪಾಂಡುಸುತೈಃ ಸಹ = ಪಾಂಡವರೊಂದಿಗೆ ಶಕ್ರಪ್ರಸ್ಥಮ್ ತು = ಇಂದ್ರಪ್ರಸ್ಥವನ್ನೇ ಕುರಿತು, ವ್ರಜೇಮ

= ಹೋಗೋಣ'' ಇತಿ ಹಿ = ಈ ರೀತಿಯಾಗಿಯೇ, ಧೃತಚೇತಸಃ = ದೃಢವಾದ ಮನಸ್ಸುಳ್ಳ ನಾಗರಿಕರನ್ನು ಕುರಿತು, ಧರ್ಮಃ = ಧರ್ಮರಾಜನು, ಆಹ ಸ್ಮ = ಹೇಳಿದನು.

ತಾತ್ಪರ್ಯ :- ಪಾಂಡವರ ಜೊತೆಗೆ ಏಕೆ ಹೋಗಬೇಕು ಅವರ ಸಂಗವನ್ನು ಏಕೆ ತೊರೆಯಬಾರದು ಎನ್ನುವುದಕ್ಕೆ ಒಂದು ಮುಖ್ಯ ಕಾರಣವನ್ನು ನಾಗರಿಕರು ಹೇಳುತ್ತಾರೆ– ''ಈ ದುಃಖಮಯವಾದ ಸಂಸಾರದಲ್ಲಿ ಸುಖವನ್ನು ಬಯಸುವುದಾದರೆ ಸಜ್ಜನರ ಸಂಗ ಮಾಡಬೇಕು. ಅದರಿಂದ ಇಹದಲ್ಲಿಯೂ ಸುಖ, ಪರದಲ್ಲಿಯೂ ಸುಖ. ಹಾಗೆಯೇ ಸಜ್ಜನರ ಸಂಗ ಮುಕ್ತಿಗೂ ಕಾರಣ. ಆದ್ದರಿಂದ ಸದ್ಗುಣಶಾಲಿಗಳಾದ ಪಾಂಡವರೊಡನೆ ಇಂದ್ರಪ್ರಸ್ಥಕ್ಕೆ ಹೋಗೋಣ'' ಎಂದು ದೃಢಮನಸ್ಸಿನಿಂದ ತೀರ್ಮಾನಿಸಿ ಪಾಂಡವರನ್ನು ಹಿಂಬಾಲಿಸುತ್ತಾರೆ. ಅವರ ಈ ಮನಸ್ಥಿತಿಯನ್ನು ಅರಿತ ಧರ್ಮರಾಜನು ಹೀಗೆ ಹೇಳುತ್ತಾನೆ.

ಪ್ರೀತಿರ್ಯದಿ ಸ್ಮ ಭವತಾಂ ಮಯಿ ಸಾನುಜೇಽಸ್ತಿ
ತಿಷ್ಠಧ್ವಮತ್ರ ಪಿತುರೇವ ಹಿ ಶಾಸನೇ ಮೇ ।
ಕೀರ್ತಿರ್ಹಿ ವೋಽನುಗಮನಾತ್ ಪಿತುರತ್ಯಯೇನ
ನಶ್ಯೇನ್ನ ಇತ್ಯನುಸರಧ್ವಮಿಹಾಽಂಬಿಕೇಯಮ್ ॥ ೨೧೮ ॥

ಪದಚ್ಛೇದ :– ಪ್ರೀತಿಃ, ಯದಿ, ಸ್ಮ, ಭವತಾಂ, ಮಯಿ, ಸಾನುಜೇ, ಅಸ್ತಿ, ತಿಷ್ಠಧ್ವಮ್, ಅತ್ರ ಪಿತುಃ, ಏವ, ಹಿ, ಶಾಸನೇ, ಮೇ । ಕೀರ್ತಿಃ, ಹಿ, ವಃ, ಅನುಗಮನಾತ್, ಪಿತುಃ, ಅತ್ಯಯೇನ, ನಶ್ಯೇತ್, ನಃ, ಇತಿ, ಅನುಸರಧ್ವಮ್, ಇಹ, ಆಂಬಿಕೇಯಮ್ ॥

ಅರ್ಥ :- ಯದಿ = ಒಂದು ವೇಳೆ, ಸಾನುಜೇ = ತಮ್ಮಂದಿರೊಂದಿಗೆ ಸಹಿತನಾದ, ಮಯಿ = ನನ್ನಲ್ಲಿ, ಭವತಾಂ = ನಿಮಗೆ, ಪ್ರೀತಿ = ಸ್ನೇಹವು, ಅಸ್ತಿ ಸ್ಮ ಚೇತ್ = ಇತ್ತು ಎಂದಾದರೆ, ಮೇ = ನನ್ನ, ಪಿತುಃ = ದೊಡ್ಡಪ್ಪನ, ಶಾಸನೇ ಏವ = ಅಧಿಕಾರದಲ್ಲಿಯೇ, ತಿಷ್ಠಧ್ಯಮ್ = ನಿಲ್ಲಿರಿ, ಹಿ = ಇದು ಉಚಿತವು, ಪಿತುಃ = ದೊಡ್ಡಪ್ಪನ, ಅತ್ಯಯೇನ = ಆಜ್ಞೆಯನ್ನು ಮೀರುವುದರಿಂದ ನಃ = ನಮ್ಮನ್ನು ಅನುಗಮನಾತ್ = ಅನುಸರಿಸುವುದರಿಂದ, ವಃ = ನಿಮ್ಮ, ಕೀರ್ತಿಃ ಹಿ = ಕೀರ್ತಿಯೇ, ನಶ್ಯೇತ್ = ನಾಶವಾಗಬಹುದು.

**ಇತಿ** = ಈ ಕಾರಣದಿಂದ, **ಇಹ** = ಇಲ್ಲಿಯೇ ಇದ್ದು, **ಆಂಬಿಕೇಯಮ್** = ಧೃತರಾಷ್ಟ್ರನನ್ನು, **ಅನುಸರಧ್ವಮ್** = ಅನುಸರಿಸಿರಿ. (**ಇತಿ** = ಹೀಗೆ, **ಧಾರ್ಮಃ** = ಧರ್ಮರಾಜನು, **ಆಹ** = ಹೇಳಿದನು.)

**ತಾತ್ಪರ್ಯ** :- ತಮ್ಮನ್ನು ಅನುಸರಿಸುತ್ತಿರುವ ಜನರನ್ನು ಉದ್ದೇಶಿಸಿ, ''ಪೌರರೇ! ನಿಮಗೆ ನನ್ನ ಮೇಲೆ ನನ್ನ ತಮ್ಮಂದಿರ ಮೇಲೆ ಪ್ರೀತಿ ಇದ್ದರೆ, ನೀವೆಲ್ಲ ಇಲ್ಲೆ ಇರಬೇಕು. ನನ್ನ ದೊಡ್ಡಪ್ಪನ ಶಾಸದಲ್ಲಿ ಇದ್ದರೆ ನಿಮಗೆ ಕೀರ್ತಿ. ನಮ್ಮನ್ನು ಅನುಸರಿಸಿದರೆ ದುರ್ಯೋಧನನ ಹಾಗು ಲೋಕದ ನಿಂದನೆಗೆ ಗುರಿಯಾಗಬೇಕಾದೀತು. ಇಲ್ಲಿಯೇ ಇದ್ದರೆ ನಿಮಗೂ ಲಾಭ, ನನ್ನ ದೊಡ್ಡಪ್ಪನ ಮಾನವೂ ಉಳಿಯುತ್ತದೆ. ಆದ್ದರಿಂದ ಧೃತರಾಷ್ಟ್ರನ ರಾಜ್ಯದಲ್ಲಿಯೇ ಇರಬೇಕು'' ಹೀಗೆ ಹೇಳಿದನು.

**ಇತ್ಯೇವ ತೈಃ ಪುರಜನಾ ನಿಖಿಲೈರ್ನಿಷಿದ್ಧಾಃ**
**ಕೃಚ್ಛ್ರೇಣ ತಸ್ಥುರಪಿ ತಾನ್ ಮನಸಾಽನ್ವಗಚ್ಛನ್ ।**
**ಪ್ರಾಪ್ಯಾಥ ಶಕ್ರಪುರಮಸ್ಮರತಾಂ ಚ ಕೃಷ್ಣೌ**
**ದೇವೇಶವರ್ಧಕಿಮಥಾಽಗಮದತ್ರ ಸೋಽಪಿ ॥ ೨೧೯ ॥**

**ಪದಚ್ಛೇದ** :- ಇತಿ, ಏವ, ತೈಃ, ಪುರಜನಾಃ, ನಿಖಿಲೈಃ, ನಿಷಿದ್ಧಾಃ, ಕೃಚ್ಛ್ರೇಣ, ತಸ್ಥುಃ, ಅಪಿ, ತಾನ್, ಮನಸಾ, ಅನ್ವಗಚ್ಛನ್ । ಪ್ರಾಪ್ಯ, ಅಥ, ಶಕ್ರಪುರಂ ಅಸ್ಮರತಾಮ್, ಚ, ಕೃಷ್ಣೌ, ದೇವೇಶವರ್ಧಕಿಮ್, ಅಥ, ಆಗಮತ್, ಅತ್ರ, ಸಃ, ಅಪಿ ॥

**ಅರ್ಥ** :- **ಇತಿ ಏವ** = ಈ ರೀತಿಯಾಗಿ, **ತೈಃ ನಿಖಿಲೈಃ** = ಆ ಎಲ್ಲ ಪಾಂಡವರಿಂದ **ಕೃಚ್ಛ್ರೇಣ** = ಬಹಳ ಪರಿಶ್ರಮದಿಂದ, **ಪುರಜನಾಃ** = ನಗರದ ಜನರು, **ನಿಷಿದ್ಧಾಃ** = ತಡೆಯಲ್ಪಟ್ಟವರಾಗಿ, **ತಸ್ಥುಃ** = ನಿಂತರು, **ಅಪಿ** = ಹಾಗಿದ್ದರೂ ಕೂಡ, **ತಾನ್** = ಆ ಪಾಂಡವರನ್ನು, **ಮನಸಾ** = ಮನಸ್ಸಿನಿಂದ, **ಅನ್ವಗಚ್ಛನ್** = ಅನುಸರಿಸಿದರು. **ಅಥ** = ಅನಂತರ, **ಶಕ್ರಪುರಮ್** = ಇಂದ್ರಪ್ರಸ್ಥವನ್ನು, **ಪ್ರಾಪ್ಯ** = ಹೊಂದಿ, **ಕೃಷ್ಣೌಚ** = ವಾಸಿಷ್ಠ ಯಾದವ ಕೃಷ್ಣರಾದರೋ, **ದೇವೇಶವರ್ಧಕಿಮ್** = ದೇವಶಿಲ್ಪಿಯಾದ ವಿಶ್ವಕರ್ಮನನ್ನು, **ಅಸ್ಮರತಾಮ್** = ನೆನೆದರು, **ಅಥ** = ವ್ಯಾಸ-ಕೃಷ್ಣರು ಸ್ಮರಣೆ ಮಾಡಿದ ನಂತರ, **ಅತ್ರ** = ಇಂದ್ರಪ್ರಸ್ಥಕ್ಕೆ, **ಸಃ ಅಪಿ** = ಆ ವಿಶ್ವಕರ್ಮನೂ ಕೂಡ, **ಆಗಮತ್** = ಬಂದನು.

ತಾತ್ಪರ್ಯ :- ಪಾಂಡವರೆಲ್ಲರೂ ಸೇರಿ ತಮ್ಮನ್ನು ಅನುಸರಿಸುತ್ತಿರುವ ನಾಗರಿಕರನ್ನು ಬಹಳ ಪರಿಶ್ರಮದಿಂದ ತಡೆದರು. ಪಾಂಡವರ ಪ್ರೀತಿಯ ಮಾತಿಗೆ ಬೆಲೆ ಕೊಟ್ಟು ಪೌರರು ಹಸ್ತಿನಪುರದಲ್ಲಿಯೇ ನಿಂತರು. ಆದರೆ ಪಾಂಡವರು ತಡೆದದ್ದು ಜನರ ದೇಹವನ್ನು ಮಾತ್ರ. ಅವರ ಮನಸ್ಸು ಪಾಂಡವರನ್ನೇ ಹಿಂಬಾಲಿಸುತ್ತಿತ್ತು. ಪಾಂಡವರು ಕೃಷ್ಣ-ವ್ಯಾಸರೊಡನೆ ಇಂದ್ರಪ್ರಸ್ಥವನ್ನು ತಲುಪಿದರು. ವೇದವ್ಯಾಸರು ಮತ್ತು ಶ್ರೀಕೃಷ್ಣ ಇವರಿಬ್ಬರು ದೇವಶಿಲ್ಪಿಯಾದ ವಿಶ್ವಕರ್ಮನನ್ನು ನೆನೆದರು. ಅವರು ಸ್ಮರಿಸಿದ ಮರುಕ್ಷಣವೇ ವಿಶ್ವಕರ್ಮ ಇಂದ್ರಪ್ರಸ್ಥದಲ್ಲಿದ್ದನು.

**ವಾಸಿಷ್ಠಪೇನ ಯದುಪೇನ ಚ ಪಾಂಡವಾನಾಂ**
**ರತ್ನೋತ್ಕರಂ ಕುರು ಪುರಂ ಪುರುಹೂತಪುರ್ಯಾಃ ।**
**ಸಾದೃಶ್ಯತಸ್ತ್ವಿತಿ ನಿಯುಕ್ತ ಉಭೌ ಪ್ರಣಮ್ಯ**
**ಸರ್ವೇಶ್ವರೌ ಸ ಕೃತವಾಂಶ್ಚ ಪುರಂ ತಥೈವ ॥ ೨೨೦ ॥**

ಪದಚ್ಛೇದ :- ವಾಸಿಷ್ಠಪೇನ, ಯದುಪೇನ, ಚ, ಪಾಂಡವಾನಾಂ ರತ್ನೋತ್ಕರಮ್, ಕುರು, ಪುರಂ, ಪುರುಹೂತಪುರ್ಯಾಃ । ಸಾದೃಶ್ಯತಃ, ತು, ಇತಿ, ನಿಯುಕ್ತಃ, ಉಭೌ, ಪ್ರಣಮ್ಯ, ಸರ್ವೇಶ್ವರೌ, ಸಃ, ಕೃತವಾನ್, ಚ, ಪುರಂ,ತಥಾ, ಏವ ॥

ಅರ್ಥ :- **ವಾಸಿಷ್ಠಪೇನ** = ವೇದವ್ಯಾಸರಿಂದ, **ಚ** = ಮತ್ತು, **ಯದುಪೇನ** = ಶ್ರೀಕೃಷ್ಣನಿಂದ, ''**ಪಾಂಡವಾನಾಂ** = ಪಾಂಡವರ, **ಪುರಂ** = ನಗರವಾದ ಇಂದ್ರಪ್ರಸ್ಥವನ್ನು, **ಪುರುಹೂತಪುರ್ಯಾಃ** = ಇಂದ್ರಲೋಕಕ್ಕೆ, **ಸಾದೃಶ್ಯತಃ ತು** = ಸಾದೃಶ್ಯವಿರುವಂತೆಯೇ, **ರತ್ನೋತ್ಕರಮ್** = ರತ್ನಮಯವನ್ನಾಗಿ, **ಕುರು** = ಮಾಡು'', ಇತಿ ಈ ರೀತಿಯಾಗಿ, **ನಿಯುಕ್ತಃ** = (ವಿಶ್ವಕರ್ಮನು) ನಿಯೋಜಿಸಲ್ಪಟ್ಟವರಾಗಿ, **ಸರ್ವೇಶ್ವರೌ** = ಎಲ್ಲದಕ್ಕೂ ಒಡೆಯರಾದ, **ಉಭೌ** = ವೇದವ್ಯಾಸ - ಕೃಷ್ಣರನ್ನು, **ಪ್ರಣಮ್ಯ** = ನಮಸ್ಕರಿಸಿ, **ಸಃ ಚ** = ಆ ವಿಶ್ವಕರ್ಮನು ಕೂಡ, **ಪುರಂ** = ಇಂದ್ರಪ್ರಸ್ಥವನ್ನು, **ತಥೈವ** = ಕೃಷ್ಣ-ವ್ಯಾಸರು ಹೇಳಿದಂತೆ ರತ್ನಮಯವನ್ನಾಗಿ, **ಕೃತವಾನ್** = ಮಾಡಿದನು.

ತಾತ್ಪರ್ಯ :- ವೇದವ್ಯಾಸರು ಮತ್ತು ಕೃಷ್ಣನು ಸ್ಮರಿಸಿದಾಗ ವಿಶ್ವಕರ್ಮನು ಬಂದಿದ್ದನು. ಆ ದೇವಶಿಲ್ಪಿಗೆ ಸರ್ವೇಶ್ವರರು ಹೀಗೆ ಆದೇಶಿಸಿದರು– ''ಇದು

ಪಾಂಡವರ ನಗರ, ಇಂದ್ರಪ್ರಸ್ಥ. ಇದನ್ನು ಸಂಪೂರ್ಣ ರತ್ನಮಯವನ್ನಾಗಿ ಮಾಡು. ದೇವಲೋಕಕ್ಕೆ ಸ್ವಲ್ಪವೂ ಕಡಿಮೆ ಇಲ್ಲದಂತೆ ನಗರ ನಿರ್ಮಾಣ ಆಗಬೇಕು.'' ಎಂದು. ಕೃಷ್ಣ-ವ್ಯಾಸರ ಅಪ್ಪಣೆ ಪಡೆದ ವಿಶ್ವಕರ್ಮನು ಅವರಿಬ್ಬರನ್ನು ನಮಿಸಿ, ಅವರು ಹೇಳಿದಂತೆ ನಗರವನ್ನು ರತ್ನಮಯವನ್ನಾಗಿ ಮಾಡಿದನು. ಇದು ವಿಶ್ವಕರ್ಮನ ಪವಾಡವೇನಲ್ಲ. ಜಗದೀಶ್ವರರಾದ ಕೃಷ್ಣ-ವ್ಯಾಸರ ಮನಸ್ಸಿಗೆ ಬಂದದ್ದು ಆಯಿತಷ್ಟೇ.

**ದೇಶಂ ಚ ನಾತಿಜನಸಂವೃತಮನ್ಯದೇಶ-**
**ಸಂಸ್ಥೈರ್ಜನೈರಭಿಪುಪೂರಿರ ಆಶು ಪಾರ್ಥಾಃ ।**
**ತೇಷಾಂ ಗುಣೈರ್ಹರಿಪದಾನತಿಹೇತುತಶ್ಚ**
**ರಾಷ್ಟ್ರಾಂತರಾ ಇಹ ಶುಭಾ ವಸತಿಂ ಸ್ಮ ಚಕ್ರುಃ ॥ ೨೨೧ ॥**

ಪದಚ್ಛೇದ :- **ದೇಶಮ್, ಚ, ನಾತಿಜನಸಂವೃತಮ್, ಅನ್ಯದೇಶಸಂಸ್ಥೈಃ, ಜನೈಃ, ಅಭಿಪುಪೂರಿರೇ, ಆಶು, ಪಾರ್ಥಾಃ । ತೇಷಾಂ, ಗುಣೈಃ, ಹರಿಪದಾನತಿಹೇತುತಃ, ಚ, ರಾಷ್ಟ್ರಾಂತರಾಃ, ಇಹ, ಶುಭಾಃ, ವಸತಿಂ ಸ್ಮ, ಚಕ್ರುಃ ॥**

ಅರ್ಥ :- **ಪಾರ್ಥಾಃ** = ಪಾಂಡವರು, **ನಾತಿಜನಸಂವೃತಮ್** = ಬಹಳ ಜನರಿಂದ ಕೂಡಿರದ, **ದೇಶಂ ಚ** = ಪ್ರದೇಶವಾದ ಇಂದ್ರಪ್ರಸ್ಥವನ್ನೂ ಕೂಡ, **ಅನ್ಯದೇಶ ಸಂಸ್ಥೈಃ** = ಬೇರೆ ಪ್ರದೇಶದಲ್ಲಿರುವ, **ಜನೈಃ** = ಜನರಿಂದ, **ಆಶು** = ಕೂಡಲೇ, **ಅಭಿಪುಪೂರಿರೇ** = ಎಲ್ಲೆಡೆಯಿಂದ ವೃದ್ಧಿಗೊಳಿಸಿದರು. **ತೇಷಾಂ** = ಆ ಪಾಂಡವರ, **ಗುಣೈಃ** = ಒಳ್ಳೆಯ ಗುಣಗಳಿಂದ, **ಚ** = ಮತ್ತು, **ಹರಿಪದಾನತಿಹೇತುತಃ** = ಹರಿಪದ = ಶ್ರೀ ಹರಿಯ ಚರಣಗಳಿಗೆ, ನತಿ = ನಮಸ್ಕಾರ ಮಾಡುವ, **ಹೇತುತಃ** = ಕಾರಣದಿಂದ **ರಾಷ್ಟ್ರಾಂತರಾಃ** = ಬೇರೆ ರಾಷ್ಟ್ರಗಳಲ್ಲಿದ್ದ, **ಶುಭಾಃ** = ಸಜ್ಜನರು, **ಇಹ** = ಈ ಇಂದ್ರಪ್ರಸ್ಥದಲ್ಲಿ, **ವಸತಿಂ** = ವಾಸವನ್ನು, **ಚಕ್ರುಃ ಸ್ಮ** = ಮಾಡಿದರಷ್ಟೇ.

ತಾತ್ಪರ್ಯ :- ವಿಶ್ವಕರ್ಮ ರತ್ನಮಯವಾದ ನಗರವನ್ನು ನಿರ್ಮಿಸಿದನು. ಆದರೆ ಎಷ್ಟೇ ವೈಭವವಿದ್ದರೂ ಪ್ರಜೆಗಳೇ ಇಲ್ಲದೇ ಅದು ನಗರವೆನಿಸುವುದಿಲ್ಲ. ಪಾಂಡವರು ಬರುವುದಕ್ಕಿಂತ ಮುಂಚೆ ಇಂದ್ರಪ್ರಸ್ಥ ಅಷ್ಟಾಗಿ ಅಭಿವೃದ್ಧಿ ಕಾಣದ ಪ್ರದೇಶ. ಆದ್ದರಿಂದ ಹೆಚ್ಚು ಜನರ ವಾಸ ಅಲ್ಲಿರಲಿಲ್ಲ. ಯಾವಾಗ ನಗರ

ರತ್ನಮಯವಾಯಿತೋ ಆಗ ಕೂಡಲೇ ಪಾಂಡವರು ಬೇರೆಡೆಯಿಂದ ಜನರನ್ನು ಇಂದ್ರಪ್ರಸ್ಥಕ್ಕೆ ಕರೆತಂದು, ದೇಶವನ್ನು ತುಂಬಿಸಿ, ಅಭಿವೃದ್ಧಿಗೊಳಿಸಿದರು. ಇಲ್ಲಿ ಒಂದು ಅಂಶವನ್ನು ಗಮನಿಸಬೇಕು. ಈ ಹಿಂದೆ ಹಸ್ತಿನಪುರದಿಂದ ಪ್ರಜೆಗಳು ಬರುವಾಗ ಬೇಡವೆಂದ ಪಾಂಡವರೇ ಈಗ ಬೇರೆಡೆಯಿಂದ ಜನರನ್ನು ಕರೆತಂದರು. ಹಸ್ತಿನಪುರ ಇವರ ರಾಜ್ಯವಲ್ಲ. ಇವರ ವ್ಯಾಪ್ತಿಗೆ ಸಂಬಂಧಪಟ್ಟ ಜನರನ್ನು ಮಾತ್ರ ಕರೆತಂದು ನಗರವನ್ನು ಬೆಳೆಸಿದರು ಎಂದರ್ಥ. ಇನ್ನು ಈ ಪಾಂಡವರ ಸದ್ಗುಣಗಳಿಂದ ಆಕರ್ಷಿತರಾಗಿ ಬೇರೆ ದೇಶದ ಸಜ್ಜನರೂ ಕೂಡ ಇಂದ್ರಪ್ರಸ್ಥಕ್ಕೆ ಬಂದು ನೆಲೆಸಿದರು. ಬೇರೆ ದೇಶದ ಜನರು ಬರಲು ಎರಡು ಕಾರಣಗಳು. ಒಂದು ಪಾಂಡವರ ಸಜ್ಜನಿಕೆ. ಇನ್ನೊಂದು ಅವರ ಆಸ್ತಿಕತೆ. ಶ್ರೀಹರಿಯ ಪಾದವನ್ನೇ ಸದಾ ನಮಿಸುವ ಪಾಂಡವರ ಆಳ್ವಿಕೆಯಲ್ಲಿ ಇರುವುದೇ ಲೇಸು ಎಂದು ಬಹಳ ಜನರು ಇಂದ್ರಪ್ರಸ್ಥದಲ್ಲೇ ವಾಸವನ್ನು ಹೂಡಿದರು.

**ಪ್ರಸ್ಥಾಪ್ಯ ದೂರಮನುಜಸ್ಯ ಸುತಾನ್ ಸ ರಾಜಾ**
**ಚಕ್ರೇಽಭಿಷೇಕಮಪಿ ತತ್ರ ಸುಯೋಧನಸ್ಯ ।**
**ದುಃಶಾಸನಂ ಚ ಯುವರಾಜಮಸೌ ವಿಧಾಯ**
**ಮೇನೇ ಕೃತಾರ್ಥಮಿವ ಚ ಸ್ವಮಶಾಂತಕಾಮಃ ।। ೨೨೨ ।।**

ಪದಚ್ಛೇದ :- ಪ್ರಸ್ಥಾಪ್ಯ, ದೂರಮ್, ಅನುಜಸ್ಯ, ಸುತಾನ್, ಸಃ, ರಾಜಾ, ಚಕ್ರೇ, ಅಭಿಷೇಕಮ್, ಅಪಿ, ತತ್ರ, ಸುಯೋಧನಸ್ಯ । ದುಃಶಾಸನಂ, ಚ, ಯುವರಾಜಂ, ಅಸೌ, ವಿಧಾಯ, ಮೇನೇ, ಕೃತಾರ್ಥಮ್, ಇವ, ಚ, ಸ್ವಂ, ಅಶಾಂತರಾಮಃ ।।

**ಅರ್ಥ :-** **ಸಃ** = ಆ, **ರಾಜಾ** = ರಾಜನಾದ ಧೃತರಾಷ್ಟ್ರನು, **ಅನುಜಸ್ಯ** = ತಮ್ಮನಾದ ಪಾಂಡುವಿನ, **ಸುತಾನ್** = ಮಕ್ಕಳನ್ನು, **ದೂರಂ** = ದೂರಕ್ಕೆ, **ಪ್ರಸ್ಥಾಪ್ಯ** = ಕಳುಹಿಸಿ, **ತತ್ರ** = ಹಸ್ತಿನಪುರದಲ್ಲಿ, **ಸುಯೋಧನಸ್ಯ** = ದುರ್ಯೋಧನನ, **ಅಭಿಷೇಕಮಪಿ** = ಅಭಿಷೇಕವನ್ನು ಕೂಡ, **ಚಕ್ರೇ** = ಮಾಡಿದನು. **ಚ** = ಮತ್ತು, **ಅಸೌ** = ಆ ಧೃತರಾಷ್ಟ್ರನು, **ದುಃಶಾಸನಂ** = ದುಃಶಾಸನನನ್ನು, **ಯುವರಾಜಂ** = ಯುವರಾಜನನ್ನಾಗಿ **ವಿಧಾಯ** = ಮಾಡಿ, **ಅಶಾಂತಕಾಮಃ** = ಬಯಕೆಗಳು ತೀರದವನಾಗಿ, **ಸ್ವಮ್** = ತನ್ನನ್ನು, **ಕೃತಾರ್ಥಮಿವ** = ಕೃತಕೃತ್ಯನೆಂಬಂತೆ, **ಮೇನೇ ಚ** = ತಿಳಿದನೂ ಕೂಡ.

**ತಾತ್ಪರ್ಯ** :- ಪಾಂಡವರನ್ನು ತನ್ನ ರಾಜ್ಯದಿಂದ ದೂರ ಕಳುಹಿಸಿ, ಸಮಾಧಾನಗೊಂಡ ಧೃತರಾಷ್ಟ್ರನು ಹಸ್ತಿನಪುರದ ರಾಜನನ್ನಾಗಿ ದುರ್ಯೋಧನನನ್ನು ಅಭಿಷೇಕಿಸಿದನು. ರಾಜಾ ದುರ್ಯೋಧನನಾದರೆ ಯುವರಾಜ ದುಃಶಾಸನನಾದ, ಹೀಗೆ ದುಷ್ಟರಾದ ಅಣ್ಣ-ತಮ್ಮಂದಿರನ್ನು ರಾಜ-ಯುವರಾಜನನ್ನಾಗಿ ಮಾಡಿ, ಇಲ್ಲಿಗೆ ನಾನು ಕೃತಕೃತ್ಯನಾದೆ ಎಂದು ಭ್ರಮಿಸಿದ ಧೃತರಾಷ್ಟ್ರ. ಪಾಂಡವರು ಎಲ್ಲಿ ನನ್ನ ಮಕ್ಕಳನ್ನು ಹೊಡೆದೋಡಿಸಿ ಪಾಂಡವರೇ ರಾಜ್ಯವನ್ನು ಆಳುತ್ತಾರೋ ಎಂದು ಹೆದರಿ, ಅವರನ್ನು ದೂರ ಕಳುಹಿಸಿದ. ದೊಡ್ಡಪ್ಪನ ಮೇಲಿನ ಗೌರವವನ್ನು ಧೃತರಾಷ್ಟ್ರ ದುರುಪಯೋಗ ಮಾಡಿಕೊಂಡ. ಇಲ್ಲಿ ''ಅಶಾಂತಕಾಮಃ'' ಎಂದಿದ್ದಾರೆ ಆಚಾರ್ಯರು. ದುರ್ಯೋಧನನನ್ನು ರಾಜನನ್ನಾಗಿ ಮಾಡಿದ ನಂತರ ಕ್ರಮದಂತೆ ಧೃತರಾಷ್ಟ್ರ ಕಾಡಿಗೆ ಹೋಗಬೇಕಿತ್ತು. ಹಾಗೆ ಮಾಡದೇ ಇನ್ನು ಏನನ್ನೋ ಬಯಸಿ ನಗರದಲ್ಲೇ ಇದ್ದನು. ಈ ಅಭಿಪ್ರಾಯ ಅಶಾಂತಕಾಮಃ' ಎಂಬ ಪದದಲ್ಲಿದೆ. ಮತ್ತು ತನ್ನನ್ನು ಕೃತಕೃತ್ಯ ಎಂದು ತಿಳಿದದ್ದು ಕೂಡ ಭ್ರಮೆ ಎಂದು 'ಇವ' ಪದದಿಂದ ಆಚಾರ್ಯರು ಸೂಚಿಸಿದ್ದಾರೆ. ಪಾಂಡವರನ್ನು ಜ್ಞಾನಿಗಳಾದ ವ್ಯಾಸ-ಕೃಷ್ಣರು ಅಭಿಷೇಕಿಸಿದರೇ, ದುರ್ಯೋಧನನನ್ನು ಕುರುಡನಾದ, ಅಜ್ಞಾನಿಯಾದ ಧೃತರಾಷ್ಟ್ರನು ಅಭಿಷೇಕಿಸಿದನು. ಇನ್ನು ದುರ್ಯೋಧನನ ರಾಜ್ಯ ಹೇಗಿರಬಹುದೆಂದು ಊಹಿಸಬಹುದು.

ಪಾರ್ಥಾಶ್ಚ ತೇ ಮುಮುದುರತ್ರ ವಸಿಷ್ಠವೃಷ್ಣಿ-
ವರ್ಯೋದಿತಾನಖಿಲತತ್ತ್ವವಿನಿರ್ಣಯಾಂಸ್ತು ।
ಶೃಣ್ವಂತ ಏವ ಹಿ ಸದಾ ಪೃಥಿವೀಂ ಚ ಧರ್ಮಾದ್
ಭುಂಜಂತ ಆಶ್ರಿತರಮಾಪತಿಪಾದಯುಗ್ಮಾಃ ॥ ೨೨೩ ॥

ಪದಚ್ಛೇದ :- ಪಾರ್ಥಾಃ, ಚ, ತೇ, ಮುಮುದುಃ, ಅತ್ರ, ವಸಿಷ್ಠ ವೃಷ್ಣಿವರ್ಯೋದಿತಾನ್, ಅಖಿಲತತ್ತ್ವವಿನಿರ್ಣಯಾನ್, ತು, ಶೃಣ್ವಂತಃ, ಏವ, ಹಿ, ಸದಾ, ಪೃಥಿವೀಮ್, ಚ, ಧರ್ಮಾತ್, ಭುಂಜತಃ, ಆಶ್ರಿತರಮಾಪತಿಪಾದಯುಗ್ಮಾ ॥

**ಅರ್ಥ :- ಆಶ್ರಿತರಮಾಪತಿಪಾದಯುಗ್ಮಾಃ** = ರಮಾಪತಿಯ ಚರಣದ್ವಯಗಳನ್ನು ಆಶ್ರಯಿಸಿದ, **ತೇ** = ಆ, **ಪಾರ್ಥಾಃ** = ಪಾಂಡವರು, **ಅತ್ರ** = ಈ ಇಂದ್ರಪ್ರಸ್ಥದಲ್ಲಿ, **ವಸಿಷ್ಠಂ ... ತಾನ್** = ವಸಿಷ್ಠ ಮತ್ತು ವೃಷ್ಣಿಕುಲಗಳಲ್ಲಿ ಶ್ರೇಷ್ಠರಾದ ವೇದವ್ಯಾಸ ಮತ್ತು ಕೃಷ್ಣರಿಂದ ಹೇಳಲ್ಪಟ್ಟ, **ಅಖಿಲತತ್ವವಿನಿರ್ಣಯಾನ್** = ಎಲ್ಲ ತತ್ವಗಳ ನಿರ್ಣಯಗಳನ್ನು, **ಶೃಣ್ವಂತಃ** = ಕೇಳುತ್ತ, **ಚ** = ಮತ್ತು, **ಸದಾ** = ಯಾವಾಗಲೂ, **ಪೃಥಿವೀಂ** = ಭೂಮಿಯನ್ನು, **ಧರ್ಮಾತ್ ಏವ** = ಧರ್ಮದ ಮಾರ್ಗದಲ್ಲಿಯೇ, **ಭುಂಜಂತಃ** = ರಕ್ಷಿಸುವವರಾಗಿ, **ಮುಮುದುಃ** = ಸಂತೋಷಪಟ್ಟರು.

**ತಾತ್ಪರ್ಯ :-** ಇಂದ್ರಪ್ರಸ್ಥದಲ್ಲಿ ಪಾಂಡವರು ಹೇಗಿದ್ದರೆಂದು ಈ ಶ್ಲೋಕದಲ್ಲಿ ಆಚಾರ್ಯರು ತಿಳಿಸುತ್ತಾರೆ. ವೇದವ್ಯಾಸರು ಮತ್ತು ಶ್ರೀಕೃಷ್ಣನು ಸದಾ ಪಾಂಡವರಿಗೆ ಎಲ್ಲ ಶಾಸ್ತ್ರಗಳ ನಿರ್ಣಗಳನ್ನು ತಿಳಿಸುತ್ತಿದ್ದರು. ಹಾಗೆಯೇ ಪಾಂಡವರೂ ಕೂಡ ಭಗವಂತನ ಪಾದಗಳನ್ನು ಆರಾಧಿಸುತ್ತ, ಭಗವಂತನ ಚರಣಗಳನ್ನೇ ಆಶ್ರಯಿಸಿ ಧರ್ಮಕ್ಕೆ ಅವಿರುದ್ಧವಾಗಿ ಭೂಮಿಯನ್ನು ಅನುಭವಿಸುತ್ತ, ರಕ್ಷಿಸುತ್ತಿದ್ದರು. ಇದರಲ್ಲಿಯೇ ಅವರು ಸುಖವನ್ನು ಕಾಣುತ್ತಿದ್ದರು. ಅತ್ತ ಅಜ್ಞಾನಿಗಳಾದ ದುರ್ಯೋಧನಾದಿಗಳು ಸ್ವಾರ್ಥದಿಂದ ದುಃಖವನ್ನು ಅನುಭವಿಸುತ್ತಿದ್ದರೆ, ಇತ್ತ ಪಾಂಡವರು ವೇದವ್ಯಾಸ ಮತ್ತು ಕೃಷ್ಣರಿಂದ ಜ್ಞಾನಸಂಪಾದನೆ ಮಾಡಿ, ನಿಃಸ್ವಾರ್ಥವಾಗಿ ರಾಜ್ಯವನ್ನು ಆಳುತ್ತ ಸುಖದಿಂದಿದ್ದರು. ಭಗವದರ್ಪಣೆ ಮತ್ತು ಜ್ಞಾನಗಳಲ್ಲಿ ಸುಖವಿದೆಯೇ ಹೊರತು ಬೇರೆಡೆಯಲ್ಲ ಎಂಬುದು ಇದರಿಂದ ತಿಳಿಯುತ್ತದೆ.

**ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ಶ್ರೀಮಹಾಭಾರತತಾತ್ಪರ್ಯನಿರ್ಣಯೇ**
**ಪಾಂಡವರಾಜ್ಯಲಾಭೋ ನಾಮ**
**ಏಕೋನವಿಂಶೋಽಧ್ಯಾಯಃ**

# ಅಧ್ಯಾಯ - 20

ಖಾಂಡವದಾಹಃ

**ಯಜ್ಞೋರುದಾನನರದೇವವಂದ್ಯತಾ-**
**ಪ್ರಶ್ನರ್ಷಿಪೂಜಾಸು ಯುಧಿಷ್ಠಿರೋಽಭೂತ್ ।**
**ಧರ್ಮಾನುಶಾಸ್ತಿಹರಿತತ್ತ್ವಶಂಸನ-**
**ಸ್ವರಾಷ್ಟ್ರರಕ್ಷಾದಿಷು ಭೀಮ ಆಸೀತ್ ॥ ೧ ॥**

**ಪದಚ್ಛೇದ :- ಯಜ್ಞೋರುದಾನನರದೇವವಂದ್ಯತಾಪ್ರಶ್ನರ್ಷಿಪೂಜಾಸು, ಯುಧಿಷ್ಠಿರಃ ಅಭೂತ್, ಧರ್ಮಾನುಶಾಸ್ತಿಹರಿತತ್ವ ಶಂಸನ ಸ್ವರಾಷ್ಟ್ರರಕ್ಷಾದಿಷು, ಭೀಮಃ, ಆಸೀತ್ ।**

**ಅರ್ಥ :- ಯಜ್ಞ** = ಯಾಗ ದೀಕ್ಷೆಯಲ್ಲಿ, **ಉರುದಾನ** = ಸುವರ್ಣಾದಿ ಮಹಾದಾನದ ವಿತರಣೆಯಲ್ಲಿ, **ನರದೇವವಂದ್ಯತಾ** = ರಾಜರ ಸ್ತುತಿ, ವಂದನೆ ಸ್ವೀಕಾರದಲ್ಲಿ, **ಪ್ರಶ್ನ** = ಧರ್ಮಾಧರ್ಮಾದಿಗಳ ಪ್ರಶ್ನೆಯಲ್ಲಿ, **ಋಷಿಪೂಜಾಸು** = ಋಷಿಗಳ ಸತ್ಕಾರವಿಧಿಯಲ್ಲಿ, **ಯುಧಿಷ್ಠಿರಃ** = ಧರ್ಮರಾಜನು, **ಅಭೂತ್** = ಅಧಿಕಾರಿಯಾಗಿದ್ದನು, **ಧರ್ಮಾನುಶಾಸ್ತಿ** = ಆಶ್ರಮವಿಹಿತ ಧರ್ಮಾನುಶಾಸನದಲ್ಲಿ, **ಹರಿತತ್ವಶಂಸನ** = ಶ್ರೀಹರಿಯತತ್ವಪ್ರಚಾರದಲ್ಲಿ, **ಸ್ವರಾಷ್ಟ್ರರಕ್ಷಾದಿಷು** = ರಾಷ್ಟ್ರರಕ್ಷಣೆಯಲ್ಲಿ, **ಭೀಮಃ** = ಭೀಮಸೇನನು, **ಅಭೂತ್** = ಅಧಿಕಾರಿಯಾಗಿದ್ದನು.

**ತಾತ್ಪರ್ಯ :-** ರಾಜ್ಯವನ್ನು ಪಡೆದ ಪಾಂಡವರು ಅಧಿಕಾರ ಹಂಚಿಕೆಯಿಂದ ರಾಜ್ಯಭಾರವನ್ನು ನಡೆಸಿದರು. ಯುಧಿಷ್ಠಿರನು ಯಾಗದಲ್ಲಿ ದೀಕ್ಷಿತನಾಗಿ ಯಾಗಾದಿಗಳನ್ನು ನೆರವೇರಿಸುತ್ತಿದ್ದನು. ಮತ್ತು ಸುವರ್ಣಾದಿ ದಾನಗಳನ್ನು ಮಾಡುತ್ತಿದ್ದನು. ಸಾಮಂತರಾಜರ ಮಾತುಕತೆಗಳನ್ನು ಆಲಿಸಿ ಪರಿಹಾರ ಸೂಚಿಸುತ್ತಿದ್ದನು. ಸಭೆಯಲ್ಲಿ ಧರ್ಮಾಧರ್ಮಾದಿಗಳ ವಿಧಿಯಲ್ಲಿ ಜಿಜ್ಞಾಸೆ ಮಾಡುತ್ತಿದ್ದನು. ಋಷಿಗಳ, ಅತಿಥಿಗಳ ಸತ್ಕಾರ ಅವನದ್ದೇ ಜವಾಬ್ದಾರಿ ಆಗಿತ್ತು. ಭೀಮಸೇನನು ಆಶ್ರಮೋಚಿತವಾದ ಧರ್ಮಗಳ ಶಾಸನಗಳನ್ನು ಮಾಡುತ್ತಿದ್ದನು. ಶ್ರೀಹರಿಯ ತತ್ವಪ್ರಚಾರದಲ್ಲಿ ದೀಕ್ಷಿತನಾಗಿದ್ದನು. ರಾಷ್ಟ್ರರಕ್ಷಣೆಯ ಜವಾಬ್ದಾರಿಯು ಅವನದಾಗಿತ್ತು.

ಸ್ತ್ರೀಧರ್ಮಸಂಶಾಸನಭೃತ್ಯಕೋಶ-
ರಕ್ಷಾವ್ಯಯಾದೌ ಗುಣದೋಷಚಿಂತನೇ ।
ಅಂತಃಪುರಸ್ಥಸ್ಯ ಜನಸ್ಯ ಕೃಷ್ಣಾ
ತ್ವಾಸೀದ್ಧರೇರ್ಧರ್ಮನಿದರ್ಶನೀ ಚ ॥ ೨ ॥

ಪದಚ್ಛೇದ :- ಸ್ತ್ರೀಧರ್ಮಶಂಸಾಸನ–ಭೃತ್ಯಕೋಶರಕ್ಷಾ–ವ್ಯಯಾದೌ ಗುಣದೋಷ ಚಿಂತನೆ, ಅಂತಃಪುರಸ್ಥಸ್ಯ ಜನಸ್ಯ ಕೃಪಾ ತು ಆಸೀತ್, ಹರೇಃ ಧರ್ಮನಿದರ್ಶಿನೀ ಚ

ಅರ್ಥ :- ಕೃಷ್ಣಾತು = ದ್ರೌಪದಿಯಾದರೂ, ಸ್ತ್ರೀಧರ್ಮಸಂಶಾಸನ ಭೃತ್ಯಕೋಶರಕ್ಷಾವ್ಯಯಾದೌ - ಸ್ತ್ರೀಧರ್ಮಸಂಶಾಸನ = ಅಂತಃಪುರದ ಸ್ತ್ರೀಯರಿಗೆ ಧರ್ಮಶಿಕ್ಷಣದಲ್ಲಿ, ಭೃತ್ಯಕೋಶರಕ್ಷಾ = ಆಳು, ಬೊಕ್ಕಸದಲ್ಲಿ ರಕ್ಷಣೆಯಲ್ಲಿ, ವ್ಯಯಾದೌ = ಬೊಕ್ಕಸದ ಆಯವ್ಯಯದ ವಿಷಯದಲ್ಲಿ, ಅಂತಃಪುರಸ್ಥಸ್ಯ = ಅಂತಃಪುರದಲ್ಲಿರುವ, ಜನಸ್ಯ = ಸ್ತ್ರೀಪುರುಷರ, ಗುಣದೋಷಚಿಂತನೇ = ಸರಿತಪ್ಪುಗಳ ವಿಮರ್ಶೆಯಲ್ಲಿ, ಆಸಿತ್ = ಅಧಿಕಾರಿ-ಯಾಗಿದ್ದಳು, ಹರೇಃ ಧರ್ಮದರ್ಶಿನೀ ಚ = ಶ್ರೀಹರಿಯ ತತ್ವದರ್ಶಕಳೂ, ಆಸಿತ್ = ಆಗಿದ್ದಳು.

ತಾತ್ಪರ್ಯ :- ದ್ರೌಪದಿಯು ಅಂತಃಪುರಸ್ತ್ರೀಯರ ಧರ್ಮಶಿಕ್ಷಣದಲ್ಲಿ, ದಾಸದಾಸಿಯರ ರಕ್ಷಣೆ, ರಾಜ್ಯ ಬೊಕ್ಕಸದ ರಕ್ಷಣೆಯಲ್ಲಿ, ಆಯವ್ಯಯದ ವಿಧಿಯಲ್ಲಿ ಅಧಿಕಾರಿಯಾಗಿದ್ದಳು. ಅಂತಃಪುರದ ಜನರ ಸ್ತ್ರೀಪುರುಷರ ಗುಣದೋಷಚಿಂತನೆ, ಹರಿತತ್ವಗಳ ಅನುಷ್ಠಾನಕ್ಕೆ ಮಾರ್ಗದರ್ಶಿಯೂ ಆಗಿದ್ದಳು.

ವಿವರಣೆ :- ದೌಪ್ರದಿಯು ಸತ್ಯಭಾಮೆಗೆ ಹೇಳಿದ ಮಾತು ಹೀಗಿದೆ ''ಶತಂ ದಾಸೀಸಹಪ್ರಾಣಿ ಕೌಂತೇಯಸ್ಯ ಮಹಾತ್ಮನಃ । ತಾಸಾಂ ನಾಮ ಚ ರೂಪಂ ಚ ಭೋಜನಾಚ್ಛಾದನಾನಿ ಚ । ಸರ್ವಾಸಾಮೇವ ವೇದಾಹಂ ಕರ್ಮ ಚೈವ ಕೃತಾಕೃತಮ್ ॥'' ಸಹಸ್ರಾರು ದಾಸದಾಸಿಯರು ಪಾಂಡವರಿಗೆ ಇದ್ದರೂ, ಅವರೆಲ್ಲರ ಹೆಸರು ರೂಪ ಉಡುಗೆ-ತೊಡುಗೆಗಳೆಲ್ಲವೂ ನನಗೆ ತಿಳಿದಿರುತ್ತದೆ.

ಬೀಭತ್ಸುರಾಸೀತ್ ಪರರಾಷ್ಟ್ರಮರ್ದನೇ
ತೇನಾನಿಯಮ್ಯಾಂಸ್ತು ಜರಾಸುತಾದೀನ್ ।
ಸ ಕೀಚಕಾದೀಂಶ್ಚ ಮಮರ್ದ ಭೀಮ-
ಸ್ತಸ್ಯೈವ ತೇ ಬಲತೋ ನಿತ್ಯಭೀತಾಃ ॥ ೩ ॥

ಪದಚ್ಛೇದ :- ಭಿಭತ್ಸುಃ, ಆಸೀತ್, ಪಲರಾಷ್ಟ್ರಮರ್ದನೆ, ತೇನ, ಅನಿಯಮ್ಯಾನ್, ತು, ಜರಾಸುತಾದೀನ್, ಸಕೀಚಕಾದೀನ್, ಮಮರ್ದ, ಭೀಮಃ, ತಸ್ಯ, ಏವ, ತೆ, ಬಲತಃ, ನಿತ್ಯಭೀತಾಃ।

ಅರ್ಥ :- ಬೀಭತ್ಸುಃ = ಅರ್ಜುನನು, ಪರರಾಷ್ಟ್ರಮರ್ದನೇ, ಪರರಾಷ್ಟ್ರ = ಬೇರೆ ರಾಷ್ಟ್ರಗಳ, ಮರ್ದನೇ = ದಮನದಲ್ಲಿ, ಆಸೀತ್ = ಜವಾಬ್ದಾರನಾಗಿದ್ದನು, ತೇನ ತು = ಆ ಅರ್ಜುನನಿಂದಲೂ, ಅನಿಯಮ್ಯಾನ್ = ನಿಗ್ರಹಿಸಲಸಾಧ್ಯರಾದ, ಸಕೀಚಕಾನ್ = ಕೀಚಕಾದಿಗಳಿಂದೊಡಗೂಡಿದ, ಜರಾಸುತಾದೀನ್ ಚ = ಜರಾಸಂಧಾದಿಗಳನ್ನು, ಭೀಮಃ = ಭೀಮಸೇನನು, ಮಮರ್ದ = ದಮನ ಮಾಡಿದನು, ತೇ = ಆ ಜರಾಸಂಧಾಧಿಗಳು, ತಸ್ಯೈವ = ಆ ವೃಕೋದರನ, ಬಲತ = ಶಕ್ತಿಯಿಂದಲೇ, ನಿತಾಭೀತಾ = ಸದಾ ಭಯವುಳ್ಳವರಾಗಿಯೂ, (ಬಭೂವು = ಇದ್ದರು)

ತಾತ್ಪರ್ಯ :- ಅರ್ಜುನನು ಶತ್ರುರಾಷ್ಟ್ರಗಳ ದಮನ ಮಿತ್ರರಾಷ್ಟ್ರಗಳೊಂದಿಗೆ ಸಂಧಾನಗಳಲ್ಲಿ ಜವಾಬ್ದಾರಿಯನ್ನು ಹೊಂದಿದ್ದನು. ಜರಾಸಂಧ ಕೀಚಕ ಮೊದಲಾದ ಅರ್ಜುನನಿಂದಲೂ ನಿಗ್ರಹಿಸಲಸಾಧ್ಯವಾದ ರಾಕ್ಷಸರನ್ನು ಭೀಮಸೇನನು ತನ್ನ ಪರಾಕ್ರಮದಿಂದ ದಮನಗೊಳಿಸುತ್ತಿದ್ದನು. ಭೀಮನ ಪರಾಕ್ರಮದ ಭಯದಿಂದಲೇ ಸದಾ ಭಯದ ನೆರಳಿನಲ್ಲೇ ಜರಾಸಂಧಾದಿಗಳು ಇರುತ್ತಿದ್ದರು.

ರಾಷ್ಟ್ರೇಷು ಭೀಮೇನ ವಿಮರ್ದಿತೇಷು
ಜಿತಾಶ್ಚ ಯುದ್ಧೇಷು ನಿರುದ್ಯಮಾಸ್ತೇ ।
ಬಭೂವುರಾಸೀದ್ಧರಿಧರ್ಮನಿಷ್ಠಃ
ಪ್ರಾಯೇಣ ಲೋಕಶ್ಚ ತದೀಯಶಾಸನಾತ್ ॥ ೪ ॥

ಪದಚ್ಛೇದ :- ರಾಷ್ಟ್ರೇಷು, ಭೀಮೇನ, ವಿಮರ್ದಿತೇಷು, ಜಿತಾಃ, ಚ, ಯುದ್ಧೇಷು, ನಿರುದ್ಯಮಾನಾಃ, ತೇ, ಬಭೂವುಃ, ಆಸೀತ್, ಹರಿಧರ್ಮನಿಷ್ಠಾಃ, ಪ್ರಾಯೇಣ, ಲೋಕಃ, ಚ, ತದೀಯಶಾಸನಾತ್।

ಅರ್ಥ :- ಭೀಮೇನ = ಭೀಮಸೇನನಿಂದ, ರಾಷ್ಟ್ರೇಷು = ಶತ್ರುರಾಷ್ಟ್ರಗಳು, ವಿಮರ್ದತೇಷು = ದಮನಿಸಲ್ಪಟ್ಟಾಗ, ಯುದ್ಧೇಷು =

ಯುದ್ಧಗಳಲ್ಲಿ, **ಜಿತಾಶ್ಚ** = (ಭೀಮನಿಂದ) ಗೆಲ್ಲಲ್ಪಟ್ಟ, **ತೇ** = ಆ ಜರಾಸಂಧಾದಿ ರಾಕ್ಷಸರು, **ನಿರುಧ್ಯಮಾನಾಃ** = ಪ್ರತಿರೋಧ ಇಲ್ಲದವರಾಗಿ, **ಬಭೂವುಃ** = ವಿಧೇಯರಾಗಿದ್ದರು, **ತದೀಯಶಾಸನಾತ್** = ಭೀಮನ ಶಾಸನದಿಂದ, **ಲೋಕಶ್ಚ** = ಪ್ರಜೆಗಳಾದರೂ, **ಪ್ರಾಯೇಣ** = ಅಧಿಕಾಂಶದಿಂದ, **ಹರಿಧರ್ಮನಿಷ್ಠಃ** = ಹರಿಧರ್ಮಾಚರಣೆಯಲ್ಲಿ ಆಸಕ್ತರು, **ಬಭೂವು** = ಆಗಿದ್ದರು.

**ತಾತ್ಪರ್ಯ :-** ಸಾಮ್ರಾಜ್ಯ ವಿಸ್ತರಣೆಯ ನೆಪದಿಂದ ಭೀಮಸೇನನು ಶತ್ರುರಾಷ್ಟ್ರಗಳನ್ನು ದಮನ ಮಾಡಿದನು. ಶತ್ರುಗಳಾದ ಜರಾಸಂಧ ಮೊದಲಾದ ರಾಕ್ಷಸರು ಭೀಮನಿಂದ ಸೋತು ಪ್ರತಿರೋಧ ವ್ಯಕ್ತಪಡಿಸದೆ ವಿಧೇಯರಾಗಿದ್ದರು. ಪ್ರಾಯಶಃ ಎಲ್ಲ ಪ್ರಜೆಗಳೂ ಸದ್ಧರ್ಮಾಚರಣೆಗಳನ್ನು ಮಾಡುತ್ತಾ ಶ್ರೀಹರಿಯನ್ನು ಭಕ್ತಿಭಾವದಿಂದ ಭಜಿಸುತ್ತಿದ್ದರು.

**ವಿವರಣೆ :-** ೧) ಸಾತ್ವಿಕ ಪ್ರಜೆಗಳು ಹರಿಧರ್ಮಗಳಲ್ಲಿ ರತರಾಗಿಯೇ ಇದ್ದರು. ಭೀಮನ ಆಡಳಿತದಿಂದ ವಿಘ್ನವಿಲ್ಲದೆ ಹರಿ ಧರ್ಮಾಚರಣೆಯನ್ನು ಮಾಡುವಂತಾಯಿತು.

೨) ರಾಜಸ ಪ್ರಜೆಗಳು ಸಂಶಯಗ್ರಸ್ತರಾಗಿದ್ದರೂ ಭೀಮನ ಶಾಸನದಿಂದ ಹರಿಧರ್ಮರತರಾಗಿದ್ದರು.

೩) ತಾಮಸ ಪ್ರಜೆಗಳು ತಮೋಮಾರ್ಗವನ್ನೇ ಅನುಸರಿಸಿದರು. ಆದ್ದರಿಂದ ಆಚಾರ್ಯರು ''ಪ್ರಾಯೇಣ'' ಎಂಬುದಾಗಿ ಇದನ್ನು ಸೂಚಿಸಿದ್ದಾರೆ. ಯೋಗ್ಯತಾನು ಗುಣ ಜೀವರನ್ನು ಪ್ರೇರೇಪಿಸುವುದು ವಾಯುದೇವರ ಸ್ವಭಾವವೇ ಆಗಿದೆ.

**ಆಜೀವಿನಾಂ ವೇತನದಸ್ತದಾऽऽಸೀ-**
**ನ್ಮಾದ್ರೀಸುತಃ ಪ್ರಥಮೋऽಥ ದ್ವಿತೀಯಃ ।**
**ಸಂಧಾನಭೇದಾದಿಷು ಧರ್ಮರಾಜ-**
**ಪಶ್ಚಾಚ್ಚ ಖಡ್ಗೀ ಸ ಬಭೂವ ರಕ್ಷನ್ ॥ ೫ ॥**

**ಪದಚ್ಛೇದ :-** **ಆಜೀವಿನಾಂ, ವೇತನದಃ, ತದಾ, ಆಸೀತ್, ಮಾದ್ರೀಸುತಃ, ಪ್ರಥಮಃ, ಅಥ, ದ್ವಿತೀಯಃ, ಸಂಧಾನಭೇಧಾದಿಷು, ಧರ್ಮರಾಜಪಶ್ಚಾತ್, ಚ, ಖಡ್ಗೀ, ಸಃ, ಬಭೂವ, ರಕ್ಷನ್ ।**

**ಅರ್ಥ :-** **ಪ್ರಥಮಃ** = ಜನನಕ್ರಮದಿಂದ ಮೊದಲನೆಯವನಾದ, **ಮಾದ್ರಿಸುತಃ** = ಮಾದ್ರಿಯ ಮಗನಾದ ನಕುಲನು, **ತದಾ** = ಆ ಸಾಮ್ರಾಜ್ಯದಲ್ಲಿ, **ಆಜೀವಿನಾಂ** = ಸೇವಕಜನರಿಗೆ, **ವೇತನದಃ** = ಸಂಬಳ ಕೊಡುವವನು, **ಆಸೀತ್** = ಆಗಿದ್ದನು, **ಅಥ ಮಾದ್ರಿಯ** = ಇನ್ನೊಬ್ಬ ಮಗನಾದ, **ದ್ವಿತೀಯಃ** = ಜನನ ಕ್ರಮದಿಂದ ಎರಡನೆಯವನಾದ ಸಹದೇವನು, **ಸಂಧಾನ ಭೇಧಾದಿವಿಷು** = ಸಾಮಾ, ದಾನ, ಭೇದ, ದಂಡಗಳಲ್ಲಿ, **ಆಸಿತ್** = ನಿಯುಕ್ತನಾಗಿದ್ದನು, **ಸ ಚ** = ಸಹದೇವನೂ ಪುನಃ, **ಧರ್ಮರಾಜಪಶ್ಚಾತ್** = ಯುಧಿಷ್ಠಿರನ ಹಿಂಭಾಗದಲ್ಲಿ, **ಖಡ್ಗೀ** = ಖಡ್ಗಧಾರಿಯಾಗಿ, **ರಕ್ಷನ್** = ಯುಧಿಷ್ಠಿರನನ್ನು ರಕ್ಷಿಸುತ್ತಾ, **ಬಭೂವ** = ಇದ್ದನು.

**ತಾತ್ಪರ್ಯ :-** ಮಾದ್ರಿಯ ಇಬ್ಬರು ಮಕ್ಕಳಲ್ಲಿ ಒಬ್ಬನಾದ ನಕುಲನು ವೇತನಕ್ಕಾಗಿ ದುಡಿಯುವ ಸೇವಕ ಜನರಿಗೆ, ಸಂಬಳ ವಿನಿಯೋಗವನ್ನು ಮಾಡುತ್ತಿದ್ದನು. ಇನ್ನೊಬ್ಬ ಮಗನಾದ ಸಹದೇವನು ಸಾಮಾದಾನ ಭೇದ ದಂಡ ಎಂಬ ರಾಜತಾಂತ್ರಿಕ ಕೆಲಸದಲ್ಲಿ ನಿಯುಕ್ತನಾಗಿದ್ದನು. ಮತ್ತು ಯುಧಿಷ್ಠಿರನ ಹಿಂಭಾಗದಲ್ಲಿ ಖಡ್ಗಧಾರಿಯಾಗಿ ಸದಾ ಅವನನ್ನು ಶತ್ರುಗಳಿಂದ ರಕ್ಷಿಸುತ್ತಾ ಅಣ್ಣನ ಸೇವೆಗೈಯುತ್ತಿದ್ದನು.

**ವಿವರಣೆ :-** ಶ್ಲೋಕದಲ್ಲಿ ''ಪ್ರಥಮಃ'' ಎಂಬುದಾಗಿ ಜನನ ಕ್ರಮವನ್ನು ನಿರ್ದೇಶನ ಮಾಡಿದ್ದಾರೆ. ಅವಳಿಗಳಲ್ಲಿ ಯಾರ ಜನನ ಮೊದಲೋ ಅವನು ಕಿರಿಯನು, ಯಾರ ಹುಟ್ಟು ಅನಂತರವೂ ಅವನು ಹಿರಿಯನು. ಆದ್ದರಿಂದ ಸಹದೇವ ಹಿರಿಯ, ನಕುಲನು ಕಿರಿಯನು ಎಂದು ತಿಳಿಯಬೇಕು.

ಧೃಷ್ಟದ್ಯುಮ್ನಸ್ತತ್ರ ಸೇನಾಪ್ರಣೇತಾ
ಶಕ್ರಪ್ರಸ್ಥೇ ನಿತ್ಯಮಾಸ್ತೇಽತಿಹಾರ್ದಾತ್ ।
ವಿಶೇಷತೋ ಭೀಮಸಖಾ ಸ ಆಸೀದ್
ರಾಷ್ಟ್ರಂ ಚೈಷಾಂ ಸರ್ವಕಾಮ್ಯೈಃ ಸುಪೂರ್ಣಮ್ ॥ ೬ ॥

ಪದಚ್ಛೇದ :- ದೃಷ್ಟದ್ಯುಮ್ನಃ, ತತ್ರ, ಸೇನಾಪ್ರಣೇತಾ, ಶಕ್ರಪ್ರಸ್ಥೇ ನಿತ್ಯಂ, ಆಸ್ತಿ, ಅತಿಹಾರ್ದಾತ್, ವಿಶೇಷತಃ, ಭೀಮಸಖಾ, ಸಃ, ಆಸೀತ್, ರಾಷ್ಟ್ರಂ, ಚ, ಏಷಾಂ, ಸರ್ವಕಾಮ್ಯೈಃ, ಸಪೂರ್ಣಮ್ ।

**ಅರ್ಥ** :- ತತ್ರ = ಆ ಯುಧಿಷ್ಠಿರನ ರಾಜ್ಯದಲ್ಲಿ, ದೃಷ್ಟದ್ಯುಮ್ನಃ = ದೃಷ್ಟದ್ಯುಮ್ನನು, ಸೇನಾಪ್ರಣೆತಾ = ಸೇನಾಪತಿಯೂ (ಆಗಿದ್ದನು), ಅತಿಹಾರ್ದಾತ್ = ಪಾಂಡವರಲ್ಲಿಯ ಸ್ನೇಹಾತಿಶಯದಿಂದ, ಶಕ್ರಪ್ರಸ್ಥೇ = ಇಂದ್ರಪ್ರಸ್ಥದಲ್ಲಿ, ನಿತ್ಯಂ = ಯಾವಾಗಲೂ, ಆಸ್ತೇ = ವಾಸಿಸುತ್ತಿದ್ದನು, ಸಃ = ಆ ದೃಷ್ಟದ್ಯುಮ್ನನು, ವಿಶೇಷತಃ = ವಿಶೇಷವಾಗಿ, ಭೀಮಸಖಾ = ಭೀಮನ ಗೆಳೆಯನು (ಆಗಿದ್ದನು), ಏಷಾಂ = ಪಾಂಡವರ, ರಾಷ್ಟ್ರಂ ಚ = ರಾಜ್ಯವಾದರೋ, ಸರ್ವಕಾಮ್ಯೈಃ = ಸರ್ವವಿಷಯಗಳಿಂದಲೂ, ಸುಪೂರ್ಣಮ್ = ಸದಾಪೂರ್ಣವಾಗಿಯೂ, ಆಸೀತ್ = ಇದ್ದಿತು.

**ತಾತ್ಪರ್ಯ** :- ಪಾಂಡವರ ರಾಜ್ಯದ ಸೇನಾಸಮೂಹಕ್ಕೆ ಸೇನಾಪತಿಯಾಗಿ ದೃಷ್ಟದ್ಯುಮ್ನನು ನಿಯುಕ್ತನಾಗಿದ್ದನು. ಪಾಂಡವರ ಮೇಲಿನ ಸೌಹಾರ್ದದಿಂದ ಯಾವಾಗಲೂ ಇಂದ್ರಪ್ರಸ್ಥದಲ್ಲೇ ವಾಸಿಸುತ್ತಿದ್ದನು. ಎಲ್ಲಾ ಪಾಂಡವರಲ್ಲಿ ವಿಶೇಷವಾಗಿ ಭೀಮಸೇನನ ಆಪ್ತಮಿತ್ರನಾಗಿದ್ದನು. ಆ ಪಾಂಡವರ ರಾಜ್ಯವು ಯಾವುದೇ ಕುಂದು ಕೊರತೆಗಳಿಲ್ಲದೆ, ಎಲ್ಲಾ ವಿಷಯದಲ್ಲೂ ಸಮೃದ್ಧವಾಗಿತ್ತು.

**ನಾವೈಷ್ಣವೋ ನ ದರಿದ್ರೋ ಬಭೂವ**
**ನ ಧರ್ಮಹಾನಿಶ್ಚ ಬಭೂವ ಕಸ್ಯಚಿತ್ ।**
**ತೇಷಾಂ ರಾಷ್ಟ್ರೇ ಶಾಸತಿ ಭೀಮಸೇನೇ**
**ನ ವ್ಯಾಧಿತೋ ನಾಪಿ ವಿಪರ್ಯಯಾನ್ಮೃತಿಃ ॥ ೭ ॥**

ಪದಚ್ಛೇದ :- ನ, ಅವೈಷ್ಣವಃ, ನ, ದರಿದ್ರಃ, ಬಭೂವ, ನ, ಧರ್ಮಹಾನಿಃ, ಚ, ಬಭೂವ, ಕಸ್ಯಚಿತ್, ತೇಷಾಂ, ರಾಷ್ಟ್ರೇ, ಶಾಸತಿ, ಭೀಮಸೇನೆ, ನ, ವ್ಯಾಧಿತಃ, ನ, ಅಪಿ, ವಿಪರ್ಯಯಾತ್, ಮೃತಿಃ ।

**ಅರ್ಥ** :- ಭೀಮಸೇನೇ = ಭೀಮನೂ, ಶಾಸತಿ = ಆಡಳಿತ ಮಾಡುತ್ತಿರಲೂ, ತೇಷಾಂ = ಪಾಂಡವರ, ರಾಷ್ಟ್ರೇ = ರಾಜ್ಯದಲ್ಲಿ, ಅವೈಷ್ಣವಃ = ವೈಷ್ಣವದ್ವೇಷಿಯೂ, ನ (ಬಭೂವ) = ಇರಲಿಲ್ಲ, ದರಿದ್ರಃ = ಬಡವನು,

ನ (ಬಭೂವ) = ಇರಲಿಲ್ಲ, ಚ = ಮತ್ತು, ಕಸ್ಯಚಿತ್ = ಯಾವುದೇ ಕಾರಣದಿಂದ, ಧರ್ಮಹಾನಿಃ = ಧರ್ಮಚ್ಯುತಿಯು, ನ (ಬಭೂವ) = ಆಗಲಿಲ್ಲ, ವ್ಯಾಧಿತಃ = ಅನಾರೋಗ್ಯ ಪೀಡಿತನೂ, ನ (ಬಭೂವ) = ಇರಲಿಲ್ಲ, (ಕಸ್ಯಚಿತ್ = ಯಾವ ವ್ಯಕ್ತಿಗೂ) ವಿಪರ್ಯಯಾತ್ = ಆಯು ವ್ಯತ್ಯಾಸದಿಂದ, ಮೃತಿಃ = ಮರಣವೂ, ನಾಪಿ ಬಭೂವ = ಉಂಟಾಗಲೇ ಇಲ್ಲ.

ತಾತ್ಪರ್ಯ :- ಭೀಮಸೇನನ ಆಡಳಿತವೂ ಸುವರ್ಣಯುಗವಾಗಿತ್ತು. ಅವನ ಆಡಳಿತದಲ್ಲಿ, ಅವೈಷ್ಣವರಾದ ವ್ಯಕ್ತಿಗಳು ಇರಲಿಲ್ಲ. ಬಡವರೂ ಇರಲಿಲ್ಲ. ಯಾವುದೇ ಕಾರಣದಿಂದ ಪ್ರಜೆಗಳು ಕೆಟ್ಟಮಾರ್ಗವನ್ನು ಅನುಸರಿಸುತ್ತಿರಲಿಲ್ಲ. ಅನಾರೋಗ್ಯದಿಂದ ಬಳಲುತ್ತಿರುವವರೂ ಇರಲಿಲ್ಲ. ಹಿರಿಯರು ಬದುಕಿರುವಾಗಲೇ ಕಿರಿಯರ ಮರಣ, ಮುಂತಾದ ಅನಿಷ್ಟವಾದ ಘಟನೆಗಳೂ ನಡೆಯುತ್ತಿರಲಿಲ್ಲ.

**ಯುಧಿಷ್ಠಿರಂ ಯಾಂತಿ ಹಿ ದರ್ಶನೋತ್ಸುಕಾಃ**
**ಪ್ರತಿಗ್ರಹಾಯಾಪ್ಯಥ ಯಾಜನಾಯ ।**
**ಕಾರ್ಯಾರ್ಥಿನೋ ನೈವ ವೃಕೋದರೇಣ**
**ಕಾರ್ಯಾಣಿ ಸಿದ್ಧಾನಿ ಯತೋಽಖಿಲಾನಿ ॥ ೮ ॥**

ಪದಚ್ಛೇದ :– ಯುಧಿಷ್ಠಿರಂ, ಯಾಂತಿ, ಹಿ, ದರ್ಶನೋತ್ಸುಕಾಃ, ಪ್ರತಿಗ್ರಹಾಯ, ಅಪಿ, ಅಥ, ಯಾಜನಾಯ, ಕಾರ್ಯಾರ್ಥಿನಃ, ನೈವ, ವೃಕೋದರೇಣ, ಕಾರ್ಯಾಣಿ, ಸಿದ್ಧಾನಿ, ಯತಃ, ಅಖಿಲಾನಿ ।

ಅರ್ಥ :- ದರ್ಶನೋತ್ಸುಕಾಃ = ರಾಜನ ದರ್ಶನೇಚ್ಛೆಯುಳ್ಳವರಾಗಿ, ಪ್ರತಿಗ್ರಹಾಯ = ದಾನ ಸ್ವೀಕಾರಕ್ಕಾಗಿ, ಅಥ = ಅಥವಾ, ಯಾಜನಾಯ ಅಪಿ = ಯಾಗಕ್ಕಾಗಿಯೂ, ಯುಧಿಷ್ಠಿರಂ = ಧರ್ಮರಾಜನನ್ನು ಕುರಿತು, ಯಾಂತಿ ಹಿ = ಹೋಗುತ್ತಿದ್ದರಷ್ಟೆ, ಕಾರ್ಯಾರ್ಥಿನಃ = ಕೆಲಸದ ನಿಮಿತ್ತದಿಂದ, ನೈವ (ಯಾಂತಿ) = ಹೋಗುತ್ತಿರಲಿಲ್ಲ, ಯತಃ = ಏಕೆಂದರೆ, ಅಖಿಲಾನಿ = ಎಲ್ಲಾ, ಕಾರ್ಯಾಣಿ = ಕೆಲಸಗಳು, ವೃಕೋದರೇನ = ಭೀಮನಿಂದ, ಸಿದ್ಧಾನಿ (ಯಾಂತಿ) = ನೆರವೇರಿಸಲ್ಪಟ್ಟಿರುತ್ತಿದ್ದವು.

ತಾತ್ಪರ್ಯ :- ಯುಧಿಷ್ಠಿರನ ಸಾಮ್ರಾಜ್ಯದಲ್ಲಿ ರಾಜನನ್ನು ಸಂದರ್ಶಿಸುವ ಇಚ್ಛೆಯುಳ್ಳವರಾಗಿ ಅವನ ಬಳಿಗೆ ಪ್ರಜೆಗಳು ಬರುತ್ತಿದ್ದರು. ಯಾಗಕ್ಕಾಗಿ ದಾನಕ್ಕಾಗಿಯೂ ಬರುತ್ತಿದ್ದರು. ಆದರೆ ಯಾರೂ ಕೂಡ ''ಈ ಕೆಲಸ ನೆರವೇರಬೇಕು'' ಎನ್ನುವ ಉದ್ವೇಶದಿಂದ ಬರುತಿದ್ದರಲಿಲ್ಲ, ಏಕೆಂದರೆ ಎಲ್ಲರ ಎಲ್ಲಾ ಕೆಲಸಗಳನ್ನು ಭೀಮಸೇನನಾಗಲೇ ನೆರವೇರಿಸುತ್ತಿದ್ದನು.

**ಗಂಧರ್ವವಿದ್ಯಾಧರಚಾರಣಾಶ್ಚ**
**ಸೇವಂತ ಏತಾನ್ ಸತತಂ ಸಮಸ್ತಾಃ ।**
**ಯಥಾ ಸುರೇಂದ್ರಂ ಮುನಯಶ್ಚ ಸರ್ವ**
**ಆಯಾಂತಿ ದೇವಾ ಅಪಿ ಕೃಷ್ಣಮರ್ಚಿತುಮ್ ॥ ೯ ॥**

**ಪದಚ್ಛೇದ :- ಗಂಧರ್ವವಿದ್ಯಾಚಾರಣಾಃ, ಚ, ಸೇವಂತೇ, ಏತಾನ್, ಸತತಂ, ಸಮಸ್ತಾಃ, ಯಥಾ, ಸುರೇಂದ್ರಂ, ಮುನಿಯಃ, ಚ, ಸರ್ವೇ, ಆಯಾಂತಿ, ದೇವಾಃ, ಅಪಿ, ಕೃಷ್ಣಂ, ಅರ್ಚಿತುಂ ।**

**ಅರ್ಥ :- ಸಮಸ್ತಾಃ** = ಎಲ್ಲಾ, **ಗಂಧರ್ವ ವಿದ್ಯಾಧರ ಚಾರಣಾಃ** = ಗಂಧರ್ವ ವಿದ್ಯಾಧರ ಚಾರಣರು, **ಸುರೇಂದ್ರಂ ಯಥಾ** = ದೇವೇಂದ್ರನನ್ನು ಹೇಗೋ ಹಾಗೆ, **ಏತಾನ್** = ಈ ಪಾಂಡವರನ್ನು, **ಸತತಂ** = ಯಾವಾಗಲೂ, **ಸೇವಂತೆ** = ನೃತ್ಯವಾದ್ಯಾದಿಗಳಿಂದ ಸೇವಿಸುತ್ತಿದ್ದರು, **ಸರ್ವೇ ಮುನಯಶ್ಚ** = ಎಲ್ಲಾ ಋಷಿಗಳು, **ದೇವಾಃ ಅಪಿ** = ದೇವತೆಗಳೂ, **ಕೃಷ್ಣಂ** = ಶ್ರೀಕೃಷ್ಣನನ್ನು, **ಅರ್ಚಿತುಂ** = ಪೂಜಿಸಲು, **ಆಯಾಂತಿ** = ಬರುತ್ತಿದ್ದರು.

ತಾತ್ಪರ್ಯ :- ಗಂಧರ್ವರು, ವಿದ್ಯಾಧರರು, ಚಾರಣರು, ದೇವೇಂದ್ರನನ್ನು ನೃತ್ಯವಾದ್ಯಾದಿಗಳಿಂದ ಸೇವೆ ಮಾಡಿದ ಹಾಗೆ ಎಲ್ಲಾ ಪಾಂಡವರನ್ನು ನೃತ್ಯ- ವಾದ್ಯಾದಿಗಳಿಂದ ಸಂತೋಷಗೊಳಿಸುತ್ತಿದ್ದರು. ಹಾಗೆಯೇ ಎಲ್ಲಾ ಋಷಿಗಳೂ ದೇವತೆಗಳೂ ಶ್ರೀಕೃಷ್ಣನು ಪೂಜಿಸಲು ಬರುತ್ತಿದ್ದರು.

**ತೇಷಾಂ ರಾಷ್ಟ್ರೇ ಕಾರ್ತಯುಗಾ ಹಿ ಧರ್ಮಾಃ**
**ಪ್ರವರ್ತಿತಾ ಏವ ತತೋಽಧಿಕಾಶ್ಚ ।**

**ಋದ್ಧಿಶ್ಚ ತಸ್ಮಾದಧಿಕಾ ಸುವರ್ಣ-**
**ರತ್ನಾಂಬರಾದೇರಪಿ ಸಸ್ಯಸಂಪದಾಮ್ ॥ ೧೦ ॥**

ಪದಚ್ಛೇದ :- ತೇಷಾಂ, ರಾಷ್ಟ್ರೇ, ಕಾರ್ತಯುಗಾಃ, ಧರ್ಮಾಃ, ಪ್ರವರ್ತಿತಾಃ, ಏವ, ತತಃ, ಅಧಿಕಾಶ್ಚಃ, ಚ, ಋದ್ಧಿಃ, ಚ, ತಸ್ಮಾತ್, ಅಧಿಕಾಃ, ಸುವರ್ಣರತ್ನಾಂಬರಾದೇಃ, ಅಪಿ, ಸಸ್ಯಸಂಫದಾಮ್ ।

**ಅರ್ಥ** :- **ತೇಷಾಂ** = ಆ ಪಾಂಡವರ, **ರಾಷ್ಟ್ರ** = ರಾಜ್ಯದಲ್ಲಿ, **ಕಾರ್ತಯುಗಾಃ** = ಕೃತಯುಗಸಂಬಂಧಿಯಾದ, **ಧರ್ಮಾಃ** = ಧರ್ಮಾಚರಣೆಗಳು, **ಪ್ರವರ್ತಿತಾ ಹಿ** = ನಡೆಸಲ್ಪಡುತ್ತಿದ್ದವಷ್ಟೆ, **ತತ ಏವ** = ಕೃತಯುಗಕ್ಕಿಂತ, **ಅಧಿಕಾಶ್ಚ** = ಹೆಚ್ಚಾಗಿ ಧರ್ಮಾಚರಣೆಗಳು ನಡೆಯುತ್ತಿದ್ದವು, **ತಸ್ಮಾತ್** = ಕೃತಯುಗಕ್ಕಿಂತಲೂ, **ಅಧಿಕಾಃ** = ಹೆಚ್ಚಾಗಿ, **ಸುವರ್ಣರತ್ನಾಂಬರಾದೇ** = ಚಿನ್ನ, ರತ್ನ, ಭೂಷಣ ಸಾಧನಗಳ, **ಅಪಿ** = ಮತ್ತು, **ಸಸ್ಯಸಂಪದಾವ್** = ಸಸ್ಯಸಂಪತ್ತಿನ, **ಋದ್ಧಿ ಆಸೀತ್** = ಅಭಿವೃದ್ಧಿಯಾಗಿತ್ತು.

**ತಾತ್ಪರ್ಯ** :- ಪಾಂಡವರ ರಾಜ್ಯವು ದ್ವಾಪರಯುಗದಲ್ಲಿದ್ದರು, ಇವರ ಆಡಳಿತದ ಬಲದಿಂದ ಕೃತಯುಗಕ್ಕೆ ಸಂಬಂಧಿಸಿದ ಎಲ್ಲಾ ಧರ್ಮಗಳು ಆಚರಣೆಯಲ್ಲಿದ್ದವು, ಅಷ್ಟೇಕೆ ಅದಕ್ಕಿಂತ ಹೆಚ್ಚಾಗಿ ಧರ್ಮಾಚರಣೆಗಳೂ ಈ ರಾಜ್ಯದಲ್ಲಿ ನಡೆಯುತ್ತಿತ್ತು. ಚಿನ್ನ, ಮುತ್ತು, ಆಭರಣ ಸಾಧನಗಳಿದ್ದೂ ಸಸ್ಯಸಂಪತ್ತಿನದ್ದೂ ವೃದ್ಧಿಯಾಗಿತ್ತು.

**ಅಥೋಪಯೇಮೇ ಶಿಶುಪಾಲಪುತ್ರೀಂ**
**ಯುಧಿಷ್ಠಿರೋ ದೇವಕೀಂ ನಾಮ ಪೂರ್ವಮ್ ।**
**ಸ್ವೀಯಾಂ ಭಾರ್ಯಾಂ ಯತ್ಸಹಜೋ ಧೃಷ್ಟಕೇತು-**
**ರನುಹ್ಲಾದಃ ಸವಿತುಶ್ಚಾಂಶಯುಕ್ತಃ ॥ ೧೧ ॥**

ಪದಚ್ಛೇದ :- ಅಥ, ಉಪಯೇಮ, ಶಿಶುಪಾಲಪುತ್ರೀಂ, ಯುಧಿಷ್ಠಿರಃ, ದೇವಕೀಂ, ನಾಮ, ಪೂರ್ವಂ, ಸ್ವೀಯಾಂ, ಭಾರ್ಯಾಂ, ಯತ್ಸಹಜೋ, ಧೃಷ್ಟಕೇತುಃ, ಅನುಹ್ಲಾದಃ, ಸವಿತುಃ, ಚ, ಅಂಶಯುಕ್ತಃ ।

**ಅರ್ಥ** :- **ಅಥ** = ಇಂದ್ರಪ್ರಸ್ಥನಲ್ಲಿ ರಾಜ್ಯಸ್ಥಾಪನಾನಂತರ, **ಯುಧಿಷ್ಠಿರಃ** = ಧರ್ಮರಾಯನು, **ಪೂರ್ವಂ** = ಮೂಲರೂಪದಲ್ಲಿ, **ಸ್ವೀಯಾಂ** = ತನ್ನ,

**ಭಾರ್ಯಾಂ** = ಹೆಂಡತಿ ಶ್ಯಾಮಲೆಯೇ ಆದ, **ಶಿಶುಪಾಲಪುತ್ರಿಂ** = ಶಿಶುಪಾಲನ ಮಗಳಾದ, **ದೇವಕೀಂ** = ದೇವಕೀ ಎಂಬುವವಳನ್ನು, **ಉಪಯೇಮೆ** = ಮದುವೆಯಾದನು, **ಯತ್ಸಜಜಃ** = ದೇವಕಿಯ ಸಹೋದರನು, **ಸವಿತುಃ** = ಸೂರ್ಯನ, **ಅಂಶಯುಕ್ತಃ** = ಅಂಶದಿಂದ ಕೂಡಿದ, **ಧೃಷ್ಟಕೇತುಃ** = ಧೃಷ್ಟಕೇತುವು, (**ಪೂರ್ವಂ** = ಹಿಂದೆ) **ಅನುಹ್ಲಾದಃ** = ಪ್ರಹ್ಲಾದ ತಮ್ಮನಾದ ಅನುಹ್ಲಾದನು.

ತಾತ್ಪರ್ಯ :- ಇಂದ್ರಪ್ರಸ್ಥದಲ್ಲಿ ರಾಜ್ಯಸ್ಥಾಪನೆ ಮಾಡಿದ ನಂತರ ಧರ್ಮರಾಜನು ಶಿಶುಪಾಲನ ಮಗಳಾದ ದೇವಕಿ ಎಂಬುವವಳನ್ನು ಮದುವೆಯಾದನು. ಅವಳು ಮೂಲರೂಪದಲ್ಲಿ ಯಮನ ಹೆಂಡತಿಯಾದ ಶ್ಯಾಮಲೆಯೇ ಆಗಿದ್ದಳು. ಅವಳ ಸಹೋದರನಾದ ಧೃಷ್ಟಕೇತುವು ಸೂರ್ಯನ ಅಂಶಯುಕ್ತನಾಗಿದ್ದನು. ಧೃಷ್ಟಕೇತುವು ಹಿಂದೆ ಪ್ರಹ್ಲಾದನ ತಮ್ಮನಾದ ಅನುಹ್ಲಾದನಾಗಿದ್ದನು.

**ತಸ್ಯಾಂ ಸುಹೋತ್ರೋ ನಾಮತಃ ಪುತ್ರ ಆಸೀದ್**
**ಯಶ್ಚಿತ್ರಗುಪ್ತೋ ನಾಮ ಪೂರ್ವಂ ಸುಲೇಖಃ ।**
**ಕೃಷ್ಣಾ ಸೈವಾಪ್ಯನ್ಯರೂಪೇಣ ಜಾತಾ**
**ಕಾಶೀಶಪುತ್ರೀ ಯಾಂ ಪ್ರವದಂತಿ ಕಾಳೀಮ್ ॥ ೧೨ ॥**

ಪದಚ್ಛೇದ :- **ತಸ್ಯಾಂ, ಸುಹೋತ್ರೋ, ನಾಮತಃ, ಪುತ್ರಃ, ಆಸೀತ್, ಯಃ, ಚಿತ್ರಗುಪ್ತಃ, ನಾಮ, ಪೂರ್ವಂ, ಸುಲೇಖಃ, ಕೃಷ್ಣಾ, ಸಾ, ಏವ, ಅಪಿ, ಅನ್ಯರೂಪೇಣ, ಜಾತಾ, ಕಾಶೀಪುತ್ರೀ, ಯಾಂ, ಪ್ರವದಂತಿ, ಕಾಳೀಂ ।**

ಅರ್ಥ :- **ತಸ್ಯಾಂ** = ದೇವಕಿಯಲ್ಲಿ, **ನಾಮತಃ** = ಹೆಸರಿನಿಂದ, **ಸುಹೂತ್ರಃ** = ಸುಹೋತ್ರನಾದ, **ಪುತ್ರಃ** = ಮಗನು, **ಆಸೀತ್** = ಜನಿಸಿದನು, **ಯಃ** = ಯಾವ ಸುಹೋತ್ರನು, **ಪೂರ್ವಂ** = ಮೂಲ ರೂಪದಲ್ಲಿ, **ಸುಲೇಖಃ** = ಪಾಪಪುಣ್ಯಗಳು ಬರೆಯುವ, **ಚಿತ್ರಗುಪ್ತಃ ನಾಮ** = ಚಿತ್ರಗುಪ್ತನೆಂದು ಪ್ರಸಿದ್ಧನು, **ಸೈವ ಕೃಷ್ಣಾ** = ಆ ದ್ರೌಪದಿಯೇ, **ಅನ್ಯರೂಪೇಣ** = ಇನ್ನೊಂದು ರೂಪದಿಂದ, **ಜಾತಾ** = ಜನಿಸಿದಳು, **ಕಶೀಪುತ್ರೀಂ** = ಕಾಶೀರಾಜನ ಮಗಳಾದ, **ಯಾಂ** = ಯಾವ ದ್ರೌಪದಿಯ ಇನ್ನೊಂದು ರೂಪವನ್ನು, **ಕಾಳೀಂ** = ಕಾಳಿ ಎಂಬುದಾಗಿ, **ಪ್ರವದಂತಿ** = ಕರೆಯುತ್ತಿದ್ದರು.

ತಾತ್ಪರ್ಯ :- ಯುಧಿಷ್ಠಿರ ಮತ್ತು ದೇವಕಿ ದಾಂಪತ್ಯದಲ್ಲಿ ಸುಹೋತ್ರನೆಂಬ ಮಗನು ಜನಿಸಿದನು. ಆ ಸುಹೋತ್ರನು ಮೂಲ ರೂಪದಲ್ಲಿ ಪ್ರಾಣಿಗಳ ಪಾಪಪುಣ್ಯಗಳ ಲೆಕ್ಕಾಚಾರವನ್ನು ಬರೆದಿಡುವ ಚಿತ್ರಗುಪ್ತನಾಗಿದ್ದನು. ದ್ರೌಪದಿಯು ಇನ್ನೊಂದು ರೂಪದಿಂದ ಕಾಶಿರಾಜನ ಮಗಳಾಗಿ ಕಾಳಿ ಎಂಬ ಹೆಸರಿನಿಂದ ಅವತರಿಸಿದಳು.

ಸಾ ಕೇವಲಾ ಭಾರತೀ ನಾನ್ಯದೇವ್ಯ-
ಸ್ತತ್ರಾಽವಿಷ್ಟಾ ಸ್ತತ್ಕೃತೇ ಕಾಶಿರಾಜಃ ।
ಸ್ವಯಂಬರಾರ್ಥಂ ನೃಪತೀನಾಜುಹಾವ
ಸರ್ವಾಂಸ್ತೇಪಿ ಹ್ಯತ್ರ ಹರ್ಷಾತ್ ಸಮೇತಾಃ ॥ ೧೩ ॥

ಪದಚ್ಛೇದ :– ಸಾ, ಕೇವಲಾ, ಭಾರತೀ, ನ, ಅನ್ಯದೇವ್ಯಃ, ತತ್ರ, ಆವಿಷ್ಟಾಃ, ತತ್ಕೃತೇ, ಕಾಶಿರಾಜಃ, ಸ್ವಯಂವರಾರ್ಥೇ, ನೃಪತೀನ್, ಆಜುಹಾವ, ಸರ್ವಾನ್, ತೇ, ಅಪಿ, ಹಿ, ಅತ್ರ, ಹರ್ಷಾತ್, ಸಮೇತಾಃ ।

ಅರ್ಥ :- ಸಾ = ಆ ಕಾಳಿದೇವಿಯಾದರೂ, ಕೇವಲಾ = ಅನ್ಯಾವೇಶ ರಹಿತಳಾದ, ಭಾರತೀ = ಭಾರತಿಯ ಅವತಾರಳಾಗಿದ್ದಳು, ತತ್ರ = ಆ ಕಾಳಿಯಲ್ಲಿ, ಅನ್ಯದೇವ್ಯಃ = ಶ್ಯಾಮಲಾದಿಗಳು, ನ ಆವೀಷ್ಟಾಃ = ಆಶಿಷ್ಟರಾಗಿರಲಿಲ್ಲ, ತತ್ಕತೇ = ಕಾಳಿಯ ಉದ್ದೇಶವಾಗಿ, ಸ್ವಯಂವರಾರ್ಥೇ = ಸ್ವಯಂವರಕ್ಕಾಗಿ, ಕಾಶಿರಾಜಃ = ಕಾಶಿರಾಜನು, ಸರ್ವಾನ್ = ಎಲ್ಲಾ ರಾಜ್ಯದ, ನೃಪತೀನ್ = ರಾಜರನ್ನು, ಆ ಜುಹಾವ = ಆಹ್ವಾನಿಸಿದನು, ತೇಽಪಿ = ಆ ರಾಜರೂ, ಹರ್ಷಾತ್ = ಸಂಭಮದಿಂದ, ಅತ್ರ = ಕಾಶಿಯಲ್ಲಿ, ಸಮೇತಾಃ ಹಿ = ಸಮಾವೇಶಗೊಂಡರಷ್ಟೆ.

ತಾತ್ಪರ್ಯ :- ಆ ಕಾಳಿಯು ಭಾರತಿದೇವಿಯ ಶುದ್ಧ ಅವತಾರಳೇ ಆಗಿದ್ದಳು. ಅಂದರೆ ಅವಳಲ್ಲಿ ದ್ರೌಪದಿಯ ಹಾಗೆ ಶ್ಯಾಮಲಾದಿಗಳ ಆವೇಶವಿರಲಿಲ್ಲ. ಆ ಕಾಳಿಯು ಸ್ವಯಂವರಕ್ಕಾಗಿ ತಂದೆಯಾದ ಕಾಶಿರಾಜನು ಎಲ್ಲಾ ರಾಜ್ಯದ ರಾಜರನ್ನು ಆಹ್ವಾನಿಸಿದನು. ಎಲ್ಲಾ ರಾಜರು ಕಾಳಿಯನ್ನು ವರಿಸುವ ಸಂಭ್ರಮದಿಂದ ಕಾಶಿಯಲ್ಲಿ ಸಮಾವೇಶಗೊಂಡರು.

ತೇಷಾಂ ಮಧ್ಯೇ ಭೀಮಸೇನಾಂಸ ಏಷಾ
ಮಾಲಾಮಾಧಾತ್ ತತ್ರ ಜರಾಸುತಾದ್ಯಾಃ ।
ಕ್ರುದ್ಧಾ ವಿಷ್ಣೋರಾಶ್ರಿತಾನಾಕ್ಷಿಪಂತ
ಆಸೇದುರುಚ್ಚೈಃ ಶಿವಮಾಸ್ತುವಂತಃ ॥ ೧೪ ॥

ಪದಚ್ಛೇದ :- ತೇಷಾಂ, ಮಧ್ಯೇ, ಭೀಮಸೇನಾಂಸಿ, ಏಷಾ, ಮಾಲಾಂ, ಅಧಾತ್, ತತ್ರ, ಜರಾಸುತಾದ್ಯಾಃ, ಕ್ರುದ್ಧಾಃ, ವಿಷ್ಣೋಃ, ಆಶ್ರಿತಾನ್, ಆಕ್ಷಿಪಂತ, ಆಸೇದುಃ, ಉಚ್ಚೈಃ, ಶಿವಂ, ಆಸ್ತುವಂತಃ ।

ಅರ್ಥ :- ಏಷಾ = ಕಾಳಿ, ತೇಷಾಂ ಮಧ್ಯೇ = ಅನೇಕರ ರಾಜರಲ್ಲಿ, ಭೀಮಸೇನಾಂಸೆ = ಭೀಮನ ಹೆಗಲಿನಲ್ಲಿ, ಮಾಲಾಮ್ = ಹಾರವನ್ನು, ಅಧಾತ್ = ಇರಿಸಿದಳು, ತತ್ರ = ಆ ಸಂದರ್ಭದಲ್ಲಿ, ಕ್ರುದ್ಧಾಃ = ಕುಪಿತರಾದ, ಜರಾಸುತಾದ್ಯಾಃ = ಜರಾಸಂಧ ಮೊದಲಾದವರು, ವಿಷ್ಣೋರಾಶ್ರಿತಾನ್ = ವೈಷ್ಣವರನ್ನು, ಆಕ್ಷಿಪಂತಃ = ನಿಂದಿಸುತ್ತಾ, ಶಿವಂ = ರುದ್ರನನ್ನು, ಉಚ್ಛೈ = ಜೋರಾಗಿ, ಆಸ್ತುವಂತಃ (ಸಂತಃ) = ಸ್ತುತಿಸುತ್ತಾ, ಆಸೇದುಃ = ಸಮೀಪಿಸಿದರು.

ತಾತ್ಪರ್ಯ :- ಆ ಸ್ವಯಂವರದಲ್ಲಿ ಅನೇಕ ರಾಜರ ಮಧ್ಯದಲ್ಲಿ ಕಾಳಿಯು ಭೀಮಸೇನನ ಹೆಗಲಿಗೆ ಹಾರವನ್ನು ಹಾಕಿ, ಭೀಮನನ್ನು ವರಿಸಿದಳು. ಇದರಿಂದ ಕುಪಿತರಾದ ಜರಾಸಂಧ ಮೊದಲಾದ ದೈತ್ಯರು ವಿಷ್ಣುವನ್ನು ಮತ್ತು ವಿಷ್ಣುಭಕ್ತರನ್ನು ಜೋರಾಗಿ ನಿಂದಿಸುತ್ತಾ, ಶಿವನನ್ನು ದೊಡ್ಡ ಧ್ವನಿಯಿಂದ ಹೊಗಳುತ್ತಾ ಪಾಂಡವರನ್ನು ಸಮೀಪಿಸಿದರು.

ಪೂರ್ವಂ ವಾಕ್ಯೈರ್ವೈದಿಕೈಸ್ತಾನ್ ಸ ಭೀಮೋ
ಜಿಗ್ಯೇ ತರ್ಕೈಃ ಸಾಧುಭಿಃ ಸಂಪ್ರಯುಕ್ತೈಃ ।
ವೇದಾ ಹ್ಯದೋಷಾ ಇತಿ ಪೂರ್ವಮೇವ
ಸಂಸಾಧಯಿತ್ವೈವ ಸದಾಗಮೈಶ್ಚ ॥ ೧೫ ॥

ಪದಚ್ಛೇದ :- ಪೂರ್ವಂ, ವಾಕ್ಯೈಃ, ವೈದಿಕೈಃ, ತಾನ್, ಸಃ, ಭೀಮಃ, ಜಿಗ್ಯೇ, ತರ್ಕೈಃ, ಸಾಧುಭಿಃ, ಸಂಪ್ರಯುಕ್ತೈಃ, ವೇದಾಃ, ಹಿ, ಅದೋಷಾಃ, ಇತಿ, ಪೂರ್ವಂ, ಏವ, ಸಂಸಾಧಯಿತ್ವಾ, ಏವ, ಸದಾಗಮೈಃ ಚ ।

**ಅರ್ಥ** :- **ಸಃ** = ಭೀಮನು, **ಪೂರ್ವಂ ಏವ** = ಮೊದಲೇ, **ವೇದಾಃ** = ವೇದಗಳು, **ಅದೋಷಾಃ ಹಿ** = ನಿರ್ದುಷ್ಟವಾದವುಗಳಷ್ಟೆ, **ಇತಿ** = ಎಂಬುದಾಗಿ, **ವೈದಿಕೈಃ** = ವೇದ ಸಂಬಂಧಿಯಾದ, **ವಾಕ್ಯೈಃ** = ವಾಕ್ಯಗಳಿಂದ, **ಸಾಧುಭಿಃ** = ಸಜ್ಜನರಿಂದ, **ಸಂಪ್ರಯುಕ್ತೈಃ** = ಪ್ರಯೋಗಿಸಲ್ಪಟ್ಟ, **ತರ್ಕೈಃ** = ತರ್ಕಗಳಿಂದ, **ಸದಾಗಮೈಶ್ಚ** = ವೈದಿಕವಾಕ್ಯಗಳಿಂದಲೂ, **ಸಂಸಾಧಯಿತ್ವಾ** = ಚೆನ್ನಾಗಿ ಸಾಧಿಸಿ, **ತಾನ್** = ಜರಾಸಂಧಾದಿಗಳನ್ನು, **ಪೂರ್ವಂ** = ಯುದ್ಧಕ್ಕಿಂತ ಮುಂಚೆಯೇ, **ಜಿಗ್ಯೇ** = ಗೆದ್ದನು.

**ತಾತ್ಪರ್ಯ** :- ಭೀಮಸೇನನು ಯುದ್ಧಕ್ಕಾಗಿ ಬಂದ ಜರಾಸಂಧಾದಿಗಳನ್ನು ವಾಗ್ ಯುದ್ಧದಲ್ಲಿ ಸೋಲಿಸಿದನು. ಭೀಮನು ಮೊದಲು ವೇದಗಳ ಪ್ರಮಾಣದಿಂದ, ಅನಂತರ ಉಚಿತವಾದ ತರ್ಕಗಳಿಂದ ಮತ್ತು ಪೌರಷೇಯ ವಾಕ್ಯಗಳಿಂದ ವೇದಗಳು ನಿರ್ದುಷ್ಟ ಎಂದು ಸಾಧಿಸಿ ಜರಾಸಂಧಾದಿಗಳನ್ನು ಬಾಹು ಯುದ್ಧಕ್ಕಿಂತ ಮೊದಲು ವಾಗ್‌ಯುದ್ಧದಲ್ಲಿ ಸೋಲಿಸಿದನು.

**ವಿವರಣೆ** :- ''ಪೃಷ್ಟೇನಾಗಮ ವಿವಾದೌ ವಕ್ತವ್ಯಃ ಸಾಧ್ಯಸಿದ್ಧಯೇ'' ಎಂಬ ಆಚಾರ್ಯೋಕ್ತಿಯಂತೆ ವಾದದಲ್ಲಿ ಮೊದಲು ಆಗಮ ಪ್ರಮಾಣವನ್ನು ಪ್ರಸ್ತುತ ಪಡಿಸಬೇಕು. ಆದಕ್ಕೆ ಭೀಮನೂ ಸಹ ವೈದಿಕ ವಾಕ್ಯಗಳನ್ನು ಪ್ರಮಾಣವನ್ನಾಗಿ ಮುಂದಿಟ್ಟನು. ಇದನ್ನೇ ಆಚಾರ್ಯರು ''ಪೂರ್ವಂ ವಾಕ್ಯಃ ವೈದಿಕೈಃ'' ಎಂದು ಸೂಚಿಸಿದ್ದಾರೆ.

**ವೇದಾಧಿಕ್ಯಂ ಶೈವಶಾಸ್ತ್ರಾಣಿ ಚಾsಹು-**
**ರ್ವೇದೋಜ್ಝಿತಾನಾಂ ಬಹುಲಾಂ ಚ ನಿಂದಾಮ್ ।**
**ತಥಾ ಶಾಕ್ತೇಯಸ್ಕಾಂದಸೌರಾದಿಕಾನಾಂ**
**ತತ್ರೈವೋಕ್ತಂ ಛಂದಸಾಂ ವೈಷ್ಣವತ್ವಮ್ ॥ ೧೬ ॥**

ಪದಚ್ಛೇದ :- **ವೇದಾಧಿಕ್ಯಂ, ಶೈವಶಾಸ್ತ್ರಾಣಿ, ಚ, ಆಹುಃ, ವೇದೋಜ್ಝಿತಾನಾಂ, ಬಹುಲಾಂ, ಚ, ನಿಂದಾಮ್, ತಥಾ, ಶಾಕ್ತೇಯ, ಸ್ಕಾಂಧಸೌರಾದಿಕಾನಾಂ, ತತ್ರ, ಏವ, ಉಕ್ತಂ, ಛಂದಸಾಂ, ವೈಷ್ಣವತ್ವಂ ।**

**ಅರ್ಥ** :- **ವೇದಾಧಿಕ್ಯಂ** = ಅಪೌರುಷೇಯವಾದ್ದರಿಂದ ವೇದಗಳಿಗೆ ಆಧಿಕ್ಯವನ್ನು, **ಶೈವಶಾಸ್ತ್ರಾಣಿ ಚ** = ಶೈವಾಗಮಗಳೂ, **ಆಹುಃ** = ಹೇಳುತ್ತವೆ,

ವೇದೋಜ್ಝಿತಾನಾಂ = ವೇದ ಅಪ್ರಮಾಣ್ಯವನ್ನು ಹೇಳುವ ಶಾಸ್ತ್ರಗಳ, ಬಹುಲಾಂ = ಹೆಚ್ಚಾಗಿ ನಿಂದಾಂ ಚ = ನಿಂದನೆಯನ್ನು (ಆಹುಃ = ಹೇಳುತ್ತವೆ), ತಥಾ = ಹಾಗೇಯೆ, ಶಾಕ್ತೇಯಸ್ಕಾಂಧ ಸೌರಾದಿಕಾನಾಂ = ಶಾಕ್ತೆಯ-ಶಾಕ್ತರ, ಸ್ಕಾಂಧ-ಸ್ಕಂಧಮತದ ಸೌರಾದಿಕಾನಾಂ-ಸೌರ, ಗಾಣಪತ ಮುಂತಾದ ಮತಗಳ, (ನಿಂದಾಂ ಚ ಆಹುಃ = ನಿಂದನೆ ಮಾಡಿವೆ), ತತ್ರೈವ = ಪ್ರಮಾಣವೆಂದು ಅಂಗೀಕರಿಸಿದ ವೇದದಲ್ಲೇ, ಛಂದಸಾಂ = ವೇದಗಳಿಗೆ, ವೈಷ್ಣವಸ್ವಂ = ವಿಷ್ಣುತ್ಕರ್ಷಪರತ್ವವು, ಉಕ್ತಂ = ಹೇಳಲ್ಪಟ್ಟಿದೆಯಷ್ಟೆ.

ತಾತ್ಪರ್ಯ :- ಶೈವಾಗಮಗಳೇ ವೇದವು ಅಪೌರುಷೆಯವಾದ್ದರಿಂದ ಬೇರೆ ಎಲ್ಲಾ ಪ್ರಮಾಣಗಳಿಗಿಂತ ಶ್ರೇಷ್ಠ ಎಂದು ಪ್ರತಿಪಾದಿಸಿವೆ. ಹಾಗೆ ವೇದ ವಿರುದ್ಧವಾದ ಶಾಸ್ತ್ರಗಳ ನಿಂದನೆಯನ್ನು ಮಾಡಿದೆ. ಹಾಗೆ ಶಾಕ್ತ, ಸ್ಕಾಂಧ, ಗಾಣಪತ ಮುಂತಾದ ವೇದವಿರುದ್ಧವಾದ ಪಂಥಗಳ ನಿಂದೆಯನ್ನು ಮಾಡಿವೆ. ಹೀಗೆ ಉತ್ತಮ ಪ್ರಮಾಣವೆಂದು ಅಂಗೀಕರಿಸಿದ ವೇದದಲ್ಲೇ ''ವೇದವು ವಿಷ್ಣುವಿನ ಗುಣೋತ್ಕರ್ಷವನ್ನು ಹೇಳುವುದರಲ್ಲೇ ತಾತ್ಪರ್ಯವುಳ್ಳದು'' ಎಂದು ಹೇಳಲ್ಪಟ್ಟಿದೆ.

ವಿಷ್ಣೋರಾಧಿಕ್ಯಂ ತಾನಿ ಶಾಸ್ತ್ರಾಣಿ ಚಾऽಽಹುಃ
ಶಿವಾದಿಭ್ಯಃ ಕುತ್ರಚಿನ್ನೈವ ವೇದೇ ।
ವಿಷ್ಣೂತ್ಕೃಷ್ಟಃ ಕಥಿತೋ ಬೌದ್ಧಪೂರ್ವಾ-
ಶ್ಚಾऽಽಹುರ್ವಿಷ್ಣುಂ ಪರಮಂ ಸರ್ವತೋऽಪಿ ॥ ೧೭ ॥

ಪದಚ್ಛೇದ :- ವಿಷ್ಣೋಃ, ಆಧಿಕ್ಯಂ, ತಾನಿ, ಶಾಸ್ತ್ರಾಣಿ, ಚ, ಆಹುಃ, ಶಿವಾದಿಭ್ಯಃ, ಕುತ್ರಚಿತ್, ನ, ಏವ, ವೇದೆ, ವಿಷ್ಣುತ್ಕೃಷ್ಟಃ, ಕಥಿತಃ, ಬೌದ್ಧಪೂರ್ವಾನ್ ಚ್, ಆಹುಃ, ವಿಷ್ಣುಂ, ಪರಮಂ, ಸರ್ವತಃ, ಅಪಿ ।

ಅರ್ಥ :- ತಾನಿ ಶಾಸ್ತ್ರಾಣಿ ಚಃ = ಆ ಶೈವಶಾಸ್ತ್ರಗಳಾದರೊ, ಕುತ್ರಚಿತ್ = ಕೆಲವು ಸಂದರ್ಭಗಳಲ್ಲಿ, ಶಿವಾದಿಭ್ಯಃ = ಶಿವ, ಸೂರ್ಯ ಮೊದಲಾದವರಿಂದ, ವಿಷ್ಣುಃ = ವಿಷ್ಣುವಿನ, ಆಧಿಕ್ಯಂ = ಶ್ರೇಷ್ಠತೆಯನ್ನು, ಆಹುಃ = ಹೇಳುತ್ತವೆ, ವೇದ = ವೇದಗಳಲ್ಲಿ, ಕುತ್ರಚಿತ್ = ಯಾವ ಸಂದರ್ಭದಲ್ಲಿ, ವಿಷ್ಣುತ್ಕೃಷ್ಟಃ = ವಿಷ್ಣುವಿಗಿಂತ ಉತ್ತಮನು, ನೈವಕಥಿತಃ = ಹೇಳಲ್ಪಟ್ಟಿಲ್ಲ, ಬೌದ್ಧಪೂರ್ವಾನ್

ಚ = ಬೌದ್ಧ ಮೊದಲಾದ ಪಂಥದವರು, ವಿಷ್ಣುಂ = ಬುದ್ಧಿರೂಪಿ ವಿಷ್ಣುವನ್ನು, ಸರ್ವತೋಽಪಿ = ಎಲ್ಲರಿಗಿಂತಲೂ, ಪರಮಂ = ಉತ್ತಮನನ್ನಾಗಿ, ಆಹುಃ = ಹೇಳುತ್ತಾರೆ.

ತಾತ್ಪರ್ಯ :- ಶೈವಾಗಮಗಳೂ ಕೆಲವೊಂದು ಸಂದರ್ಭಗಳಲ್ಲಿ ಶಿವ, ಸೂರ್ಯ ಮೊದಲಾದವರಿಗಿಂತ ವಿಷ್ಣುವೇ ಶ್ರೇಷ್ಠ ಎಂದು ಹೇಳುತ್ತವೆ. ಆದರೆ ವೇದಗಳಲ್ಲಿ ಎಲ್ಲಿಯೂ ವಿಷ್ಣುವಿಗಿಂತ ಶ್ರೇಷ್ಟ ವ್ಯಕ್ತಿಯು ಹೇಳಿದ್ದಿಲ್ಲ. ಬೌದ್ಧ, ಜೈನರೂ ಕೂಡ ಬುದ್ಧ, ರೂಪಿ ಪರಮಾತ್ಮನನ್ನೇ ಉತ್ತಮನೆಂದು ಹೇಳುವರು.

**ಲೋಕಾಯತಾಶ್ಚ ಕ್ವಚಿದಾಹುರಗ್ರ್ಯಂ**
**ವಿಷ್ಣುಂ ಗುರುಂ ಸರ್ವವರಂ ಬೃಹಸ್ಪತೇಃ ।**
**ಸರ್ವಾಗಮೇಷು ಪ್ರಥಿತೋಽತ ಏವ**
**ವಿಷ್ಣುಃ ಸಮಸ್ತಾಧಿಕ ಏವ ಮುಕ್ತಿದಃ ॥ ೧೮ ॥**

ಪದಚ್ಛೇದ :– **ಲೋಕಾಯತಾಃ**, ಚ, ಕ್ವಚಿತ್, ಆಹುಃ, ಅಗ್ರ್ಯಂ, ವಿಷ್ಣುಂ, ಗುರುಂ, ಸರ್ವವರಂ, ಬ್ರಹಸ್ಪತೇಃ, ಸರ್ವಾಗಮೇಷ, ಪ್ರಥಿತಃ, ಅತಃ, ಏವ, ವಿಷ್ಣುಃ, ಸಮಸ್ತಾಧಿಕಃ, ಏವ, ಮುಕ್ತಿದಃ ।

ಅರ್ಥ :- **ಲೋಕಾಯತಾಶ್ಚ** = ಚಾರ್ವಾಕರೂ ಕೂಡ, **ಕ್ವಚಿತ್** = ಕೆಲವೆಡೆ, **ವಿಷ್ಣುಂ** = ಶ್ರೀಹರಿಯನ್ನು, **ಸರ್ವವರಂ** = ಎಲ್ಲರಿಗಿಂತ ಶ್ರೇಷ್ಠ ಎಂಬುದಾಗಿ, **ಬ್ರಹಸ್ಪತೇಃ** = ಬ್ರಹಸ್ಪತಿಯ, **ಗುರುಂ** = ಗುರುವನ್ನಾಗಿ, **ಅಗ್ರ್ಯಂ** = ಆದ್ದರಿಂದ ಅವನಿಗಿಂತ ಶ್ರೇಷ್ಠ ಎಂದು, **ಆಹುಃ** = ಹೇಳುವರು, **ಅತಃ** = ಆದ್ದರಿಂದ, **ಮುಕ್ತಿದಃ** = ಮೋಕ್ಷವನ್ನು ಕರುಣಿಸುವ, **ವಿಷ್ಣು ಏವ** = ನಾರಾಯಣನೇ, **ಸಮಸ್ತಾಧಿಕಃ** = ಎಲ್ಲರಿಗಿಂತ ಉತ್ತಮನು, **ಇತಿ** = ಎಂದು, **ಸರ್ವಾಗಮೇಷು** = ಎಲ್ಲಾ ಆಗಮಗಳಲ್ಲೂ, **ಪ್ರಥಿತಃ** = ಪ್ರಸಿದ್ಧನು.

ತಾತ್ಪರ್ಯ :- ಚಾರ್ವಾಕರೂ ಕೂಡ ಕೆಲವೆಡೆ ವಿಷ್ಣುವನ್ನು ಶ್ರೇಷ್ಠನೆಂದೂ, ಬ್ರಹಸ್ಪತಿಗೂ ಗುರುವೆಂದು ಹೇಳುತ್ತಾರೆ. ಹೀಗೆ ಶೈವಾದಿಗಳೂ ವಿಷ್ಣು ಸರ್ವೋತ್ತಮತ್ವವನ್ನು ಅಂಗೀಕರಿಸಿರುವುದರಿಂದ, ಸರ್ವೋತ್ತಮನೆಂದು ಸರ್ವಾಗಮನಗಳಲ್ಲಿ ಪ್ರಸಿದ್ದನು, ಮುಕ್ತಿದಾತನಾದ ವಿಷ್ಣುವೆ.

ತೇಷ್ವಾಗಮೇಷ್ವೇವ ಪರಸ್ಪರಂ ಚ
ವಿರುದ್ಧತಾ ಹ್ಯನ್ಯಪಕ್ಷೇಷು ಭೂಪಾಃ ।
ಪ್ರತ್ಯಕ್ಷತಶ್ಚಾತ್ರ ಪಶ್ಯಧ್ವಮಾಶು
ಬಲಂ ಬಾಹ್ವೋರ್ಮೇ ವಿಷ್ಣುಪದಾಶ್ರಯಸ್ಯ ॥ ೧೯ ॥

ಪದಚ್ಛೇದ :- ತೇಷು, ಆಗಮೇಷು, ಏವ, ಪರಸ್ಪರಂ, ಚ, ವಿರುದ್ಧತಾ, ಹಿ, ಅನ್ಯಪಕ್ಷೇಷು, ಭೂಪಾಃ, ಪ್ರತ್ಯಕ್ಷತಃ, ಚ, ಅತ್ರ, ಪಶ್ಯಧ್ವಂ, ಆಶು, ಬಲಂ, ಬಾಹ್ವೋಃ, ಮೇ, ವಿಷ್ಣುಪದಾಶ್ರಯಸ್ಯ ।

ಅರ್ಥ :- ಅನ್ಯಪಕ್ಷೇಷು ಚ = ಶಿವಾದಿ ಸರ್ವೋತ್ತಮತ್ವ ಪಕ್ಷದಲ್ಲಿ, ತೇಷು ಆಗಮೇಷು ಏವಃ = ಶೈವಾದಿ ಆಗಮಗಳಲ್ಲೆ, ಪರಸ್ಪರಂ = ಆಂತರಿಕವಾಗಿ, ವಿರುದ್ಧತಾ ಹಿ = ವಿರೋಧ ವಿದೆಯಷ್ಟೆ, ಭೂಪಾಃ = ಎಲೈ ರಾಜರೇ, ಅತ್ರ = ವಿಷ್ಣು ಸರ್ವೋತ್ತಮತ್ವ ವಿಷಯದಲ್ಲಿ, ವಿಷ್ಣುಪದಾಶ್ರಯಸ್ಯ = ಶ್ರೀಹರಿಯನ್ನು ಆಶ್ರಯಿಸಿರುವ, ಮೇ = ನಿನ್ನ, ಬಾಹ್ವೋಃ = ಭುಜಗಳ, ಬಲಂ = ಶಕ್ತಿಯನ್ನು, ಪ್ರತ್ಯಕ್ಷತಃ = ಪ್ರತ್ಯಕ್ಷವಾಗಿ, ಆಶುಃ = ಬೇಗನೆ, ಪಶ್ಯಧ್ವಂ = ನೋಡಿರಿ.

ತಾತ್ಪರ್ಯ :- ರಾಜರೇ, ಶಿವಾದಿಗಳಿಗೆ ಉತ್ತಮತ್ವವನ್ನು ಹೇಳುವ ಪಕ್ಷಗಳಲ್ಲಿ ಆ ಆಗಮಗಳಲ್ಲಿಯೆ ಪರಸ್ಪರ ವಿರೊಧವಿದೆ ಮತ್ತು ಪ್ರತಿ ಆಗಮಗಳಲ್ಲೂ ಪೂರ್ವೋತ್ತರ ವಿರೋಧವಿದೆ. ವಿಷ್ಣು ಸರ್ವೋತ್ತಮತ್ವ ವಿಷಯದಲ್ಲಿ ದೃಢನಿಶ್ಚಯವಿರುವ ವಿಷ್ಣುಪಾದವನ್ನು ಅವಲಂಬಿಸಿದ, ನನ್ನ ಬಾಹುಗಳ ಬಲವನ್ನೇ ಪ್ರತ್ಯಕ್ಷವಾಗಿ ನೋಡಿರಿ.

ಪೂರ್ವಂ ಹಿ ಗಂಗಾ ಮಮ ವಿಷ್ಣುಪೂಜಾ-
ವಿಘ್ನಾರ್ಥಮಾಯಾದ್ ವಾಮಕರೇಣ ಸಾ ಮೇ ।
ನುನ್ನಾ ಪರಸ್ತಾದ್ ಬಹುಯೋಜನಂ ಗತಾ
ಪುರೇ ಕುರೂಣಾಂ ಶಿವ ಆಗತಸ್ತದಾ ॥ ೨೦ ॥

ಪದಚ್ಛೇದ :- ಪೂರ್ವಂ, ಹಿ, ಗಂಗಾ, ಮಮ, ವಿಷ್ಣುಪೂಜಾ, ವಿಘ್ನಾರ್ಥಂ, ಆಯಾತ್, ವಾಮಕರೇಣ, ಸಾ, ಮೇ, ನುನ್ನಾ, ಪರಸ್ತಾತ್, ಬಹುಯೋಜನಂ, ಗತಾ, ಪುರೇ, ಕುರುಣಾಂ, ಶಿವಃ, ಆಗತಃ, ತದಾ ।

**ಅರ್ಥ** :- **ಕುರೂಣಾಂಪುರೇ** = ಹಸ್ತಿನಪುರದಲ್ಲಿ, **ಗಂಗಾ** = ಗಂಗೆಯು, **ಮಮ** = ನನ್ನ, **ವಿಷ್ಣುಪೂಜಾವಿಘ್ನಾರ್ಥಂ** = ಶ್ರೀಹರಿ ಪೂಜಾವಿಘ್ನೋದ್ದೇಶದಿಂದ, **ಆಯಾತ್** = ಬಂದಳು, **ಮೇ** = ನನ್ನ, **ವಾಮಕರೇಣ** = ಎಡಗೈಯಿಂದ, **ನುನ್ನಾ** = ದೂಡಲ್ಪಟ್ಟ ಗಂಗೆಯು, **ಪರಸ್ತಾತ್** = ಎಡಪ್ರದೇಶದಿಂದ, **ಬಹುಯೋಜನಂ** = ಬಹಳ ಯೋಜನ, ದೂರ, **ಗತಾ** = ಹೋದರು, **ತದಾ** = ಆಗ, **ಶಿವಃ** = ರುದ್ರನು, **ಆಗತಃ** = ಬಂದನು.

**ತಾತ್ಪರ್ಯ** :- ಹಿಂದೆ ಹಸ್ತಿನಾವತಿಯಲ್ಲಿ ನನ್ನ ವಿಷ್ಣುಪೂಜೆಗೆ ವಿಘ್ನ ಮಾಡಲೆಂದು ಗಂಗೆ ಬಂದಳು, ನಾನು ಎಡಗೈಯಿಂದ ದೂರ ತಳ್ಳಿದಾಗ ಅವಳು ಅಲ್ಲಿಂದಾಚೆ ಬಹು ಯೋಜನ ಪರ್ಯಂತ ದೂರಕ್ಕೆ ಸರಿದಳು. ಆಗ ಶಿವ ಬಂದ.

**ಸ ವ್ಯಾಘ್ರರೂಪೀ ಕಪಿಲಾತ್ಮಕಾಮುಮಾಂ**
**ಪರೀಕ್ಷಯನ್ ಮಾಂ ಹಂತುಮಿವಾಽದ್ರವದ್ ದ್ರುತಮ್ ।**
**ಸ ಮೇ ಯುದ್ಧೇ ವಿಜಿತೋ ಮೂರ್ಛಿತಶ್ಚ**
**ಗದಾಪ್ರಹಾರಾದಾಸ ಲಿಂಗಾಂತರಸ್ಥಃ ॥ ೨೧ ॥**

ಪದಚ್ಛೇದ :– ಸಃ ವ್ಯಾಘ್ರರೂಪೀ, ಕಪಿಲಾತ್ಮಿಕಾಂ, ಉಮಾಂ, ಪರೀಕ್ಷಯನ್, ಮಾಂ, ಹಂತುಂ, ಇವ, ಅದ್ರವತ್, ದ್ರುತಮ್, ಸ, ಮೇ, ಯುದ್ಧೇ, ವಿಜಿತಃ, ಮೂರ್ಛಿತಃ, ಚ, ಗದಾಪ್ರಹಾರಾತ್, ಆಸ, ಲಿಂಗಾಂತರಸ್ಥಃ ।

**ಅರ್ಥ** :- **ಸಃ** = ಶಿವನು, **ಮಾಂ** = ನನ್ನನ್ನು, **ಪರೀಕ್ಷಯನ್** = ಪರೀಕ್ಷಿಸಲು, **ವ್ಯಾಘ್ರರೂಪೀ** = ಹುಲಿಯರೂಪ ಧರಿಸಿದವನಾಗಿ, **ಕಪಿಲಾತ್ಮಿಕಾಂ** = ಕಪಿಲ ಗೋರೂಪಳಾದ, **ಉಮಾಂ** = ಪಾರ್ವತಿಯನ್ನು, **ಹಂತುಂ ಇವ** = ಕೊಲ್ಲಲೂ ಎಂಬಂತೆ, **ದ್ರುತಂ** = ಶೀಘ್ರವಾಗಿ, **ಅದ್ರವತ್** = ಧಾವಿಸಿದನು, **ಸಃ** = ಅಂತಹ ವ್ಯಾಘ್ರರೂಪಿಯಾದ ಶಿವನು, **ಮೇ** = ನನ್ನ, **ಗದಾಪ್ರಹಾರಾತ್** = ಗದೆಯ ಪ್ರಹಾರದಿಂದ, **ಯುದ್ಧೇ** = ಯುದ್ಧದಲ್ಲಿ, **ವಿಜಿತಃ** = ಗೆಲ್ಲಲ್ಪಟ್ಟನು, **ಚ** = ಮತ್ತು, **ಮೂರ್ಛಿತಃ** = ನಿನ್ನ ಮೂರ್ಛಿತನಾದವನಾಗಿ, **ಲಿಂಗಾಂತರಸ್ಥಃ ಆಸ** = ಸಮೀಪದ ಪಾಷಾಣ ಲಿಂಗವನ್ನು ಪ್ರವೇಶಿಸಿದನು.

ತಾತ್ಪರ್ಯ :- ಶಿವ ನನ್ನನ್ನು ಪರೀಕ್ಷಿಸುವುದಕ್ಕಾಗಿ ಹುಲಿಯ ರೂಪದವನಾಗಿ ಕಪಿಲೆ ಗೋವಿನ ರೂಪದಲ್ಲಿದ್ದ ಪಾರ್ವತಿಯನ್ನು ಕೊಲ್ಲುವಂತೆ ನಟಿಸುತ್ತಾ ವೇಗವಾಗಿ ಧಾವಿಸಿದ. ಯುದ್ಧದಲ್ಲಿ ನನ್ನ ಗದಾ ಪ್ರಹಾರದಿಂದ ಸೋತು ಮೂರ್ಚಿತನಾದ ಭಯದಿಂದ ಲಿಂಗದೊಳಗೆ ಸೇರಿಕೊಂಡ.

ವ್ಯಾಘ್ರೇಶ್ವರಂ ನಾಮ ಲಿಂಗಂ ಪೃಥಿವ್ಯಾಂ
ಖ್ಯಾತಂ ತದಾಸ್ತೇ ತದ್ವದನ್ಯತ್ರ ಯುದ್ಧೇ ।
ತೀರೇ ಗೋಮತ್ಯಾ ಹೈಮವತೇ ಗಿರೌ ಹಿ
ಜಿತಸ್ತತ್ರಾಪ್ಯಾಸ ಶಾರ್ದೂಲಲಿಂಗಮ್ ॥ ೨೨ ॥

ಪದಚ್ಛೇದ :– ವ್ಯಾಘ್ರೇಶ್ವರಂ, ನಾಮ, ಲಿಂಗಂ, ಪೃಥಿವ್ಯಾಂ, ಖ್ಯಾತಂ, ತತ್, ಆಸ್ತೆ, ತದ್ವತ್, ಅನ್ಯತ್ರ, ಯುದ್ಧ ತೀರೇ, ಗೋಮತ್ಯಾಃ, ಹೈಮವತೇ, ಗಿರೌ, ಹಿ, ಜಿತಃ, ತತ್ರ, ಅಪಿ, ಆಸ, ಶಾರ್ದೂಲಲಿಂಗಂ ।

ಅರ್ಥ :- ತತ್ = ಆ ಕಾರಣದಿಂದ, ಪೃಥಿವ್ಯಾಂ = ಭೂಮಿಯಲ್ಲಿ, ವ್ಯಾಘ್ರೇಶ್ವರಂ ನಾಮ ಲಿಂಗಂ = ವ್ಯಾಘ್ರೇಶ್ವರ ಎಂಬ ಹೆಸರಿನ ಲಿಂಗವು, ಖ್ಯಾತಂ = ಪ್ರಸಿದ್ಧವಾಗಿ, ಆಸ್ತೇ = ಇದೆ, ತದ್ವತ್ = ಹಿಂದಿನಂತೆಯೆ, ಅನ್ಯತ್ರ = ಸ್ಥಳಾಂತರದಲ್ಲಿ, ಹೈಮವತೇ ಗಿರೌ = ಹಿಮಾಲಯ ಪರ್ವತದಲ್ಲಿ, **ಗೋಮತ್ಯಾಃ** = ಗೋಮತೀ ನದಿಯ, ತೀರೇ = ತೀರದಲ್ಲಿ, ಯುದ್ಧೇ = ಯುದ್ಧದಲ್ಲಿ, ಜಿತಃ = ಗೆಲ್ಲಲ್ಪಟ್ಟವನಾಗಿ, ತತ್ರಾಪಿ = ಅಲ್ಲಿಯೂ ಕೂಡ, **ಶಾರ್ದೂಲ ಲಿಂಗಂ** = (ಅಲ್ಲಿರುವ ಲಿಂಗ ಪ್ರವೇಶ ಮಾಡಿ) ಶಾರ್ದೂಲ ಲಿಂಗ ಎಂಬ ಹೆಸರಿನಿಂದ, **ಆಸ** = ಇದ್ದನು.

ತಾತ್ಪರ್ಯ :- ಆ ಶಿವಲಿಂಗ ಭೂಮಿಯಲ್ಲಿ ವ್ಯಾಘ್ರೇಶ್ವರ ಲಿಂಗವೆಂದೂ ಪ್ರಸಿದ್ಧವಾಗಿದೆ. ಅದೇ ರೀತಿ ಇನ್ನೊಂದೆಡೆ ಹಿಮಾಲಯ ಪರ್ವತ ಕಣಿವೆಯಲ್ಲಿ ಗೋಮತಿ ನದೀ ತೀರದಲ್ಲಿ ಯುದ್ಧ ನಡೆಯಿತು. ಆಗಲೂ ಶಿವ ನನ್ನಿಂದ ಪರಾಜಿತನಾಗಿ ಶಾರ್ದೂಲ ಲಿಂಗನೆನಿಸಿದ.

ಏವಂ ಪ್ರತ್ಯಕ್ಷೇ ವಿಷ್ಣುಪದಾಶ್ರಯಸ್ಯ
ಬಲಾಧಿಕ್ಯೇ ಕಿಮು ವಕ್ತವ್ಯಮತ್ರ ।

**ಅರ್ಥ :- ಕುರೂಣಾಂಪುರೇ** = ಹಸ್ತಿನಪುರದಲ್ಲಿ, **ಗಂಗಾ** = ಗಂಗೆಯು, **ಮಮ** = ನನ್ನ, **ವಿಷ್ಣುಪೂಜಾವಿಘ್ನಾರ್ಥಂ** = ಶ್ರೀಹರಿ ಪೂಜಾವಿಘ್ನೋದ್ದೇಶದಿಂದ, **ಆಯಾತ್** = ಬಂದಳು, **ಮೇ** = ನನ್ನ, **ವಾಮಕರೇಣ** = ಎಡಗೈಯಿಂದ, **ನುನ್ನಾ** = ದೂಡಲ್ಪಟ್ಟ ಗಂಗೆಯು, **ಪರಸ್ತಾತ್** = ಎಡಪ್ರದೇಶದಿಂದ, **ಬಹುಯೋಜನಂ** = ಬಹಳ ಯೋಜನ, ದೂರ, **ಗತಾ** = ಹೋದರು, **ತದಾ** = ಆಗ, **ಶಿವಃ** = ರುದ್ರನು, **ಆಗತಃ** = ಬಂದನು.

**ತಾತ್ಪರ್ಯ :-** ಹಿಂದೆ ಹಸ್ತಿನಾವತಿಯಲ್ಲಿ ನನ್ನ ವಿಷ್ಣುಪೂಜೆಗೆ ವಿಘ್ನ ಮಾಡಲೆಂದು ಗಂಗೆ ಬಂದಳು, ನಾನು ಎಡಗೈಯಿಂದ ದೂರ ತಳ್ಳಿದಾಗ ಅವಳು ಅಲ್ಲಿಂದಾಚೆ ಬಹು ಯೋಜನ ಪರ್ಯಂತ ದೂರಕ್ಕೆ ಸರಿದಳು. ಆಗ ಶಿವ ಬಂದ.

**ಸ ವ್ಯಾಘ್ರರೂಪೀ ಕಪಿಲಾತ್ಮಕಾಮುಮಾಂ**
**ಪರೀಕ್ಷಯನ್ ಮಾಂ ಹಂತುಮಿವಾಽದ್ರವದ್ ದ್ರುತಮ್ ।**
**ಸ ಮೇ ಯುದ್ಧೇ ವಿಜಿತೋ ಮೂರ್ಛಿತಶ್ಚ**
**ಗದಾಪ್ರಹಾರಾದಾಸ ಲಿಂಗಾಂತರಸ್ಥಃ ॥ ೨೧ ॥**

**ಪದಚ್ಛೇದ :– ಸಃ ವ್ಯಾಘ್ರರೂಪೀ, ಕಪಿಲಾತ್ಮಿಕಾಂ, ಉಮಾಂ, ಪರೀಕ್ಷಯನ್, ಮಾಂ, ಹಂತುಂ, ಇವ, ಅದ್ರವತ್, ದ್ರುತಮ್, ಸ, ಮೇ, ಯುದ್ಧೇ, ವಿಜಿತಃ, ಮೂರ್ಛಿತಃ, ಚ, ಗದಾಪ್ರಹಾರಾತ್, ಆಸ, ಲಿಂಗಾಂತರಸ್ಥಃ ।**

**ಅರ್ಥ :- ಸಃ** = ಶಿವನು, **ಮಾಂ** = ನನ್ನನ್ನು, **ಪರೀಕ್ಷಯನ್** = ಪರೀಕ್ಷಿಸಲು, **ವ್ಯಾಘ್ರರೂಪೀ** = ಹುಲಿಯರೂಪ ಧರಿಸಿದವನಾಗಿ, **ಕಪಿಲಾತ್ಮಿಕಾಂ** = ಕಪಿಲ ಗೋರೂಪಳಾದ, **ಉಮಾಂ** = ಪಾರ್ವತಿಯನ್ನು, **ಹಂತುಂ ಇವ** = ಕೊಲ್ಲಲೂ ಎಂಬಂತೆ, **ದ್ರುತಂ** = ಶೀಘ್ರವಾಗಿ, **ಆದ್ರವತ್** = ಧಾವಿಸಿದನು, **ಸಃ** = ಅಂತಹ ವ್ಯಾಘ್ರರೂಪಿಯಾದ ಶಿವನು, **ಮೇ** = ನನ್ನ, **ಗದಾಪ್ರಹಾರಾತ್** = ಗದೆಯ ಪ್ರಹಾರದಿಂದ, **ಯುದ್ಧೇ** = ಯುದ್ಧದಲ್ಲಿ, **ವಿಜಿತಃ** = ಗೆಲ್ಲಲ್ಪಟ್ಟನು, **ಚ** = ಮತ್ತು, **ಮೂರ್ಛಿತಃ** = ನಿನ್ನ ಮೂರ್ಛಿತನಾದವನಾಗಿ, **ಲಿಂಗಾಂತರಸ್ಥಃ ಆಸ** = ಸಮೀಪದ ಪಾಷಾಣ ಲಿಂಗವನ್ನು ಪ್ರವೇಶಿಸಿದನು.

ತಾತ್ಪರ್ಯ :- ಶಿವ ನನ್ನನ್ನು ಪರೀಕ್ಷಿಸುವುದಕ್ಕಾಗಿ ಹುಲಿಯ ರೂಪದವನಾಗಿ ಕಪಿಲೆ ಗೋವಿನ ರೂಪದಲ್ಲಿದ್ದ ಪಾರ್ವತಿಯನ್ನು ಕೊಲ್ಲುವಂತೆ ನಟಿಸುತ್ತಾ ವೇಗವಾಗಿ ಧಾವಿಸಿದ. ಯುದ್ಧದಲ್ಲಿ ನನ್ನ ಗದಾ ಪ್ರಹಾರದಿಂದ ಸೋತು ಮೂರ್ಛಿತನಾದ ಭಯದಿಂದ ಲಿಂಗದೊಳಗೆ ಸೇರಿಕೊಂಡ.

ವ್ಯಾಘ್ರೇಶ್ವರಂ ನಾಮ ಲಿಂಗಂ ಪೃಥಿವ್ಯಾಂ
ಖ್ಯಾತಂ ತದಾಸ್ತೇ ತದ್ವದನ್ಯತ್ರ ಯುದ್ಧೇ ।
ತೀರೇ ಗೋಮತ್ಯಾ ಹೈಮವತೇ ಗಿರೌ ಹಿ
ಜಿತಸ್ತತ್ರಾಪ್ಯಾಸ ಶಾರ್ದೂಲಲಿಂಗಮ್ ॥ ೨೨ ॥

ಪದಚ್ಛೇದ :- ವ್ಯಾಘ್ರೇಶ್ವರಂ, ನಾಮ, ಲಿಂಗಂ, ಪೃಥಿವ್ಯಾಂ, ಖ್ಯಾತಂ, ತತ್, ಆಸ್ತೆ, ತದ್ವತ್, ಅನ್ಯತ್ರ, ಯುದ್ಧ ತೀರೇ, ಗೋಮತ್ಯಾಃ, ಹೈಮವತೇ, ಗಿರೌ, ಹಿ, ಜಿತಃ, ತತ್ರ, ಅಪಿ, ಆಸ, ಶಾರ್ದೂಲಲಿಂಗಂ ।

ಅರ್ಥ :- ತತ್ = ಆ ಕಾರಣದಿಂದ, ಪೃಥಿವ್ಯಾಂ = ಭೂಮಿಯಲ್ಲಿ, ವ್ಯಾಘ್ರೇಶ್ವರಂ ನಾಮ ಲಿಂಗಂ = ವ್ಯಾಘ್ರೇಶ್ವರ ಎಂಬ ಹೆಸರಿನ ಲಿಂಗವು, ಖ್ಯಾತಂ = ಪ್ರಸಿದ್ಧವಾಗಿ, ಆಸ್ತೇ = ಇದೆ, ತದ್ವತ್ = ಹಿಂದಿನಂತೆಯೆ, ಅನ್ಯತ್ರ = ಸ್ಥಳಾಂತರದಲ್ಲಿ, ಹೈಮವತೇ ಗಿರೌ = ಹಿಮಾಲಯ ಪರ್ವತದಲ್ಲಿ, ಗೋಮತ್ಯಾಃ = ಗೋಮತೀ ನದಿಯ, ತೀರೇ = ತೀರದಲ್ಲಿ, ಯುದ್ಧೇ = ಯುದ್ಧದಲ್ಲಿ, ಜಿತಃ = ಗೆಲ್ಲಲ್ಪಟ್ಟವನಾಗಿ, ತತ್ರಾಪಿ = ಅಲ್ಲಿಯೂ ಕೂಡ, ಶಾರ್ದೂಲ ಲಿಂಗಂ = (ಅಲ್ಲಿರುವ ಲಿಂಗ ಪ್ರವೇಶ ಮಾಡಿ) ಶಾರ್ದೂಲ ಲಿಂಗ ಎಂಬ ಹೆಸರಿನಿಂದ, ಆಸ = ಇದ್ದನು.

ತಾತ್ಪರ್ಯ :- ಆ ಶಿವಲಿಂಗ ಭೂಮಿಯಲ್ಲಿ ವ್ಯಾಘ್ರೇಶ್ವರ ಲಿಂಗವೆಂದೂ ಪ್ರಸಿದ್ಧವಾಗಿದೆ. ಅದೇ ರೀತಿ ಇನ್ನೊಂದೆಡೆ ಹಿಮಾಲಯ ಪರ್ವತ ಕಣಿವೆಯಲ್ಲಿ ಗೋಮತಿ ನದೀ ತೀರದಲ್ಲಿ ಯುದ್ಧ ನಡೆಯಿತು. ಆಗಲೂ ಶಿವ ನನ್ನಿಂದ ಪರಾಜಿತನಾಗಿ ಶಾರ್ದೂಲ ಲಿಂಗನೆನಿಸಿದ.

ಏವಂ ಪ್ರತ್ಯಕ್ಷೇ ವಿಷ್ಣುಪದಾಶ್ರಯಸ್ಯ
ಬಲಾಧಿಕ್ಯೇ ಕಿಮು ವಕ್ತವ್ಯಮತ್ರ ।

ವಿಷ್ಣೋರಾಧಿಕ್ಯೇ ಕ್ಷತ್ರಿಯಾಣಾಂ ಪ್ರಮಾಣಂ
ಬಲಂ ವಿಪ್ರೇ ಜ್ಞಾನಮೇವೇತಿ ಚಾಽಽಹುಃ ।। ೨೩ ।।

ಪದಚ್ಛೇದ :- ಏವಂ, ಪ್ರತ್ಯಕ್ಷೇ, ವಿಷ್ಣುಪದಾಶ್ರಯಸ್ಯ, ಬಲಾಧಿಕ್ಯೇ, ಕಿಮು, ವಕ್ತವ್ಯಮ್, ಅತ್ರ, ವಿಷ್ಣೋಃ, ಆಧಿಕ್ಯ, ಕ್ಷತ್ರಿಯಾಣಾಂ, ಪ್ರಮಾಣಂ, ಬಲಂ, ವಿಪ್ರೇ, ಜ್ಞಾನಂ, ವಿದ, ಇತಿ, ಚ, ಆಹುಃ ।

ಅರ್ಥ :- ಏವಂ = ಈ ರೀತಿಯಾಗಿ, ವಿಷ್ಣುಪದಾಶ್ರಯಸ್ಯ = ಶ್ರೀಹರಿಯ ಪದಾಶ್ರಿತನಾದ ನನ್ನ, ಬಲಾಧಿಕ್ಯೇ = ಅಧಿಕ ಬಲದ ವಿಷಯದಲ್ಲಿ, ಪ್ರತ್ಯಕ್ಷೇಸತಿ = ಪ್ರತ್ಯಕ್ಷಪ್ರಮಾಣವಿರಲು, ವಿಷ್ಣು = ವಿಷ್ಣುವಿನ, ಅತ್ರ = ಇಲ್ಲಿ, ಆಧಿಕ್ಯೇ = ಸರ್ವೋತ್ತಮತ್ವ ವಿಷಯದಲ್ಲಿ, ವಕ್ತವ್ಯಮ್ = ಹೇಳಬೇಕಾದದ್ದೇನಿದೆ, ಕ್ಷತ್ರಿಯಾಣಾಂ = ಕ್ಷತ್ರಿಯರಿಗೆ, ಬಲಂ = ಶಕ್ತಿಯು, ವಿಪ್ರೇ = ಬ್ರಾಹ್ಮಣನಲ್ಲಿ, ಜ್ಞಾನಂ = ಜ್ಞಾನವು, ಪ್ರಮಾಣಂ ಚ = ಸ್ವರೂಪಶಕ್ತಿಯ ವಿಷಯದಲ್ಲಿ ಜ್ಞಾಪಕವಾಗಿ, ಆಹುಃ = ಹೇಳುವರು.

ತಾತ್ಪರ್ಯ :- ಹೀಗೆ ವಿಷ್ಣುಪಾದವನ್ನು ಆಶ್ರಯಿಸಿರುವ ನನ್ನ ಬಲವೇ ಹೆಚ್ಚೆಂದು ಪ್ರತ್ಯಕ್ಷ ಕಾಣುತ್ತಿರುವಾಗ ಆ ವಿಷ್ಣುವಿನ ಸರ್ವೋತ್ತಮತ್ವ ವಿಷಯದಲ್ಲಿ ಇನ್ನೇನು ಹೇಳಬೇಕು? ಏಕೆಂದರೆ ಕ್ಷತ್ರಿಯರಲ್ಲಿ ಉತ್ತಮತ್ವಕ್ಕೆ ಬಲವೂ, ವಿಪ್ರರಲ್ಲಿ ಉತ್ತಮತ್ವಕ್ಕೆ ಜ್ಞಾನವೂ ಮಾನದಂಡವೆಂದು ಬಲ್ಲವರು ಹೇಳುತ್ತಾರೆ.

ಮಯಾ ಕೇದಾರೇ ವಿಪ್ರರೂಪೀ ಜಿತಶ್ಚ
ರುದ್ರೋಽವಿಶಲ್ಲಿಂಗಮೇವಾಽಽಶು ಭೀತಃ ।
ತತಃ ಪರಂ ವೇದವಿದಾಮಗಮ್ಯತಾ-
ಶಾಪಂ ಪ್ರಾದಾಚ್ಛಂಕರೋ ವ್ರೀಡಿತೋಽತ್ರ ।। ೨೪ ।।

ಪದಚ್ಛೇದ :- ಮಯಾ, ಕೇದಾರೇ, ವಿಪ್ರರೂಪೀ, ಜಿತಃ, ಚ, ರುದ್ರಃ, ಅವಿಶತ್, ಲಿಂಗಂ, ಏವ, ಆಶು, ಭೀತಃ, ತತಃ, ಪರಂ, ವೇದವಿದಾಂ, ಅಗಮ್ಯತಾ ಶಾಪಂ, ಪ್ರಾದಾತ್, ಶಂಕರಃ, ವ್ರೀಡಿತಃ, ಅತ್ರ ।

**ಅರ್ಥ** :- **ಮಯಾ** = ನನ್ನಿಂದ, **ಕೇದಾರೇ** = ಕೇದಾರ ಕ್ಷೇತ್ರದಲ್ಲಿ, **ವಿಪ್ರರೂಪಿ** = ಬ್ರಾಹ್ಮಣರೂಪದಿಂದ ಬಂದ, **ರುದ್ರಃ** = ಶಿವನು, **ಜಿತಃ** = ಗೆಲ್ಲಲ್ಪಟ್ಟನು, **ಚ** = ಮತ್ತು, **ಭೀತಃ** = ಭೀತನಾದ ಶಿವನು, **ಆಶು** = ಶೀಘ್ರವಾಗಿ, **ಲಿಂಗಮೇವ** = ಲಿಂಗವನ್ನೇ, **ಆವಿಶತ್** = ಪ್ರವೇಶಿಸಿದನು, **ಅತ್ರ** = ಕೇದಾರದಲ್ಲಿ, **ತತಃ ಪರಂ** = ಪರಾಜಯದ ನಂತರ, **ವ್ರೀಡಿತಃ** = ನಾಚಿದವನಾಗಿ, **ಶಂಕರಃ** = ರುದ್ರನು, **ವೇದವಿದಾಂ** = ವೇದಾರ್ಥಜ್ಞಾನಿಗಳಿಗೆ, **ಅಗಮ್ಯತಾಶಾಪಂ** = ಹೋಗಲಸಾಧ್ಯವಾಗಲಿ ಎಂಬ ಶಾಪವನ್ನು, **ಪ್ರಾದಾತ್** = ಕೊಟ್ಟನು.

**ತಾತ್ಪರ್ಯ** :- ಕೇದಾರದಲ್ಲಿ ವಿಪ್ರರೂಪಿ ಶಿವ ನನ್ನೊಡನೆ ವಾದ ಯುದ್ಧದಲ್ಲಿ ಸೋತು, ಭಯಪಟ್ಟು ಬೇಗನೆ ಲಿಂಗವನ್ನು ಪ್ರವೇಶಿಸಿದ. ಲಜ್ಜಿತನಾಗಿ ಅಂದಿನಿಂದ ಆ ಸ್ಥಳ ''ವೇದಜ್ಞರಿಗೆ ಅಗಮ್ಯವೆನಿಸಲಿ'' ಎಂದು ಶಾಪವಿತ್ತನು.

**ಏವಂ ಪ್ರತ್ಯಕ್ಷೇ ವಿಷ್ಣುಬಲೇ ಪ್ರತೀಪಂ**
**ಮನೋ ಯಸ್ಯ ಹ್ಯುತ್ತರಂ ಸ ಬ್ರವೀತು ।**
**ಕ್ರೋಧೋಽಧಿಕಶ್ಚೇತ್ ಕ್ಷಿಪ್ರಮಾಯಾತು ಯೋದ್ಧು-**
**ಮಿತ್ಯುಕ್ತಾಸ್ತೇಽಭ್ಯಾಯಯುರಾತ್ತಶಸ್ತ್ರಾಃ ॥ ೨೫ ॥**

ಪದಚ್ಛೇದ :- **ಏವಂ, ಪ್ರತ್ಯಕ್ಷೇ, ವಿಷ್ಣುಬಲೇ, ಪ್ರತೀಪಂ, ಮನಃ, ಯಸ್ಯ, ಹಿ, ಉತ್ತರಂ, ಸ, ಬ್ರವೀತು, ಕ್ರೋದಾಧಿಕಃ, ಚೇತ್, ಕ್ಷಿಪ್ರಂ, ಆಯಾತು, ಯೋದ್ಧುಂ, ಇತಿ, ಉಕ್ತಾಃ, ತೇ, ಅಭ್ಯಾಯಯುಃ, ಆತ್ತ ಶಸ್ತ್ರಾಃ।**

**ಅರ್ಥ** :- **ಏವಂ** = ಹಿಂದೆ ಹೇಳಿದಂತೆ, **ವಿಷ್ಣುಬಲೆ** = ವಿಷ್ಣುವಿನ ಶಕ್ತಿಯು, **ಪ್ರತ್ಯಕ್ಷೇ** = ಪ್ರತ್ಯಕ್ಷ ಸಿದ್ಧವಾಗಿರಲು, **ಯಸ್ಯ** = ಯಾರ, **ಮನಃ** = ಮನಸ್ಸು, **ಪ್ರತೀಪಂ** = ಸಂಶಯಗ್ರಸ್ತವೋ, **ಸಃ ಹಿ** = ಅವನಾದರೂ, **ಉತ್ತರಂ** = ಪ್ರತ್ಯುತ್ತರವನ್ನು, **ಬ್ರವೀತು** = ಹೇಳಲಿ, **ಕ್ರೋಧಾಧಿಕಃ ಚೇತ್** = ಅತಿಯಾದ ಕೋಪವಿದ್ದಲ್ಲಿ, **ಯೋದ್ಧುಂ** = ಯುದ್ಧ ಮಾಡಲು, **ಕ್ಷಿಪ್ರಂ** = ಶೀಘ್ರವಾಗಿ, **ಆಯಾತು** = ಬರಲಿ, **ಇತಿ** = ಎಂಬುದಾಗಿ, **ಉಕ್ತಾಃ** = ಹೇಳಲ್ಪಟ್ಟ, **ತೇ** = ಆ ಜರಾಸಂಧಾದಿಗಳು, **ಆತ್ತಶಸ್ತ್ರಾಃ** = ಶಸ್ತ್ರ ಹಿಡಿದವರಾಗಿ, **ಅಭ್ಯಾಯಯುಃ** = ಆಗಮಿಸಿದರು.

**ತಾತ್ಪರ್ಯ** :- ಹೀಗೆ ವಿಷ್ಣುವಿನ ಬಲದ ವಿಷಯದಲ್ಲಿ ಪ್ರತ್ಯಕ್ಷ ಪ್ರಮಾಣವಿರುವಾಗ ಯಾರ ಮನಸ್ಸು ಇದನ್ನು ಒಪ್ಪುವುದಿಲ್ಲವೋ, ಅವರು ಉತ್ತರ ಹೇಳಲಿ, ಉತ್ತರಿಸಲಾಗದೆ ಕ್ರೋಧವೇ ಹೆಚ್ಚಾಗುವುದಾದರೆ ನನ್ನೊಡನೆ ಹೋರಾಟಕ್ಕೆ ಬೇಗನೆ ಬರಲಿ, ಹೀಗೆ ಭೀಮ ಹೇಳಿದಾಗ ರಾಜರು ಶಸ್ತ್ರ ಹಿಡಿದು ಯುದ್ಧಕ್ಕೆ ಬಂದರು.

**ವಿದ್ರಾವ್ಯ ತಾನ್ ಬಾಣಸಂಘೈಃ ಸಮಸ್ತಾನ್**
**ಜರಾಸುತಂ ಗದಯಾ ಯೋಧಯಿತ್ವಾ ।**
**ಬಾಹುಭ್ಯಾಂ ಚೈನಂ ಪರಿಗೃಹ್ಯಾಽಶು ವಿಷ್ಣೋಃ**
**ಪದೋತ್ಥಾಯಾಂ ಪ್ರಾಕ್ಷಿಪದ್ ದೇವನದ್ಯಾಮ್ ॥ ೨೬ ॥**

**ಪದಚ್ಛೇದ** :- **ವಿದ್ರಾವ್ಯ, ತಾನ್, ಬಾಣಸಂಘೈಃ, ಸಮಸ್ತಾನ್, ಜರಾಸುತಂ, ಗದಯಾ, ಯೋಧಯಿತ್ವಾ, ಬಾಹುಭ್ಯಾಂ, ಚ, ಏನಂ, ಪರಿಗೃಹ್ಯ, ಆಶು, ವಿಷ್ಣೋಃ, ಪದೋತ್ಥಾಯಾಂ, ಪ್ರಕ್ಷಿಪತ್, ದೇವನದ್ಯಾಂ ।**

**ಅರ್ಥ** :- **ತಾನ್ ಸಮಸ್ತಾನ್** = ಆ ಎಲ್ಲಾ ರಾಕ್ಷಸರನ್ನು, **ಬಾಣಸಂಘೈಃ** = ಬಾಣ ಸಮೂಹದಿಂದ, **ವಿದ್ರಾವ್ಯ** = ಓಡಿಸಿ (ಹಿಂಸಿಸಿ), **ಜರಾಸುತಂ** = ಜರಾಸಂಧನನ್ನು, **ಗದಯಾ** = ಗದೆಯಿಂದ, **ಯೋಧಯಿತ್ವಾ** = ಯುದ್ಧ ಮಾಡಿ, **ಏನಂ ಚ** = ಜರಾಸಂಧನನ್ನಾದರೂ, **ಬಾಹುಭ್ಯಾಂ** = ಬಾಹುಗಳಿಂದ, **ಪರಿಗ್ರಹ್ಯ** = ಹಿಡಿದು, **ಆಶು** = ಶೀಘ್ರವಾಗಿ, **ವಿಷ್ಣೋಃ** = ವಿಷ್ಣುವಿನ, **ಪದೋತ್ಥಾಯಾಂ** = ಕಾಲಿನಿಂದ ಹುಟ್ಟಿದ, **ದೇವನದ್ಯಾಂ** = ದೇವನದಿಯಾದ ಗಂಗೆಯಲ್ಲಿ, **ಪ್ರಾಕ್ಷಿಪತ್** = ಎಸೆದನು.

**ತಾತ್ಪರ್ಯ** :- ಭೀಮ ಅವರೆಲ್ಲರನ್ನೂ ಬಾಣಸಮೂಹಗಳಿಂದ ಹೊಡೆದೋಡಿಸಿ ಜರಾಸಂಧನನ್ನೂ ಗದೆಯಿಂದ ಹೊಡೆದು ಕೆಡಹಿ, ಬಾಹುಗಳಿಂದ ಹಿಡಿದು ವಿಷ್ಣು ಪಾದೋದ್ಭವೆಯಾದ ದೇವನದಿಯಲ್ಲಿ ಹಾಕಿದನು.

**ಸ ವ್ರೀಳಿತಃ ಪ್ರಯಯೌ ಮಾಗಧಾಂಶ್ಚ**
**ಭೂಪೈಃ ಸಮೇತೋ ಭೀಮಸೇನೋ ರಥಂ ಸ್ವಮ್ ।**

**ಆರುಹ್ಯ ಕಾಶೀಶ್ವರಪೂಜಿತಶ್ಚ**
**ಯಯೌ ಕಾಳ್ಯಾ ಶಕ್ರಸನಾಮಕಂ ಪುರಮ್ ॥ ೨೭ ॥**

ಪದಚ್ಛೇದ :- ಸಃ, ವ್ರೀಡಿತಃ, ಪ್ರಿಯಯೌ, ಮಾಗಧಾನ್, ಚ, ಭೂಪೈಃ, ಸಮೇತಾಃ, ಭೀಮಸೇನಃ, ರಥಂ, ಸ್ವಂ, ಆರುಹ್ಯ, ಕಾಶೀಶ್ವರಪೂಜಿತಶ್ಚ, ಯಯೌ, ಕಾಳ್ಯಾ, ಶಕ್ರಸನಾಮಕಂ, ಪುರಂ।

**ಅರ್ಥ** :- **ಸಚ** = ಆ ಜರಾಸಂಧನಾದರೂ, **ವ್ರಿಡಿತಃ** = ನಾಚಿದವನಾಗಿ, **ಭೂಪೈಃ** = ರಾಜರಿಂದ, **ಸಮೇತಃ** = ಕೂಡಿದವನಾಗಿ, **ಮಾಗಧಾನ್** = ಮಗಧ ದೇಶವನ್ನು ಕುರಿತು, **ಪ್ರಯಯೌ** = ಹೋದನು, **ಚ** = ಮತ್ತು, **ಭೀಮಃ** = ಭೀಮಸೇನನು, **ಸ್ವಂ** = ತನ್ನ, **ಕಾಶೀಶ್ವರಪೂಜಿತಃ** = ಕಾಶಿರಾಜನಿಂದ ಪೂಜಿತನಾಗಿ, **ರಥಂ** = ರಥವನ್ನು, **ಆರುಹ್ಯ** = ಏರಿ, **ಕಾಳ್ಯಾ ಸಹ** = ಕಾಳಿಯಿಂದ ಸಹಿತನಾಗಿ, **ಶಕ್ರಸನಾಮಕಂ** = ಇಂದ್ರನ ಹೆಸರಿನಿಂದ ಕೂಡಿದ, **ಪುರಂ** = ಪಟ್ಟಣವಾದ ಇಂದ್ರಪ್ರಸ್ಥವನ್ನು, **ಯಯೌ** = ಹೊಂದಿದನು.

**ತಾತ್ಪರ್ಯ** :- ಜರಾಸಂಧನು ನಾಚಿಕೆಗೊಂಡು, ರಾಜರೊಂದಿಗೆ ಮಗಧ ದೇಶಕ್ಕೆ ಹೊರಟು ಹೋದ. ಭೀಮ ಕಾಶೀರಾಜನಿಂದ ಪೂಜಿತನಾಗಿ ತನ್ನ ರಥವನ್ನೇರಿ ಇಂದ್ರಪ್ರಸ್ಥವನ್ನು ಸೇರಿದ.

**ತಸ್ಯಾಂ ತ್ರಿಲೋಕಾಧಿಕರೂಪಸದ್ಗುಣೈ-**
**ರಾಸಮ್ಮತಾಯಾಂ ರಮಮಾಣಃ ಸುತಂ ಚ ।**
**ಶರ್ವತ್ರಾತಂ ನಾಮಾಜನಯತ್ ಪುರಾ ಯಃ**
**ಸಮಾನವಾಯುರ್ಬಲವೀರ್ಯಯುಕ್ತಃ ॥ ೨೮ ॥**

ಪದಚ್ಛೇದ :- ತಸ್ಯಾಂ, ತ್ರಿಲೋಕಾಧಿಕ ಸದ್ಗುಣೈಃ, ಆಸಮ್ಮಿತಾಯಾಂ, ರಮಮಾಣಃ, ಸುತಂ, ಚ, ಶರ್ವತ್ರಾತಂ, ನಾಮ, ಅಜನಯತ್, ಪುರಾ, ಯಃ, ಸಮಾನವಾಯು, ಬಲವೀರ್ಯಯುಕ್ತಃ।

**ಅರ್ಥ** :- **ತ್ರಿಲೋಕಾಧಿಕ ಸದ್ಗುಣೈಃ** = ಮೂರು ಲೋಕದಲ್ಲಿ ಅಧಿಕವಾದ ಗುಣಗಳಿಂದ, **ಆಸಮ್ಮಿತಾಯಾಂ** = ತನಗೆ ಅನುರೂಪಳಾದ, **ತಸ್ಯಾಂ** = ಕಾಳಿಯಲ್ಲಿ, **ರಮಮಾಣಃ** = ರಮಿಸುತ್ತಿರುವವನಾಗಿ, **ಶರ್ವತ್ರಾತಂ ನಾಮ**

= ಶರ್ವತ್ರಾತ ಎಂಬ ಹೆಸರುಳ್ಳ, **ಸುತಂ ಚ** = ಪುತ್ರನನ್ನು, **ಅಜನಯತ್** = ಹುಟ್ಟಿಸಿದನು, **ಯಃ** = ಯಾವ ಶರ್ವತ್ರಾತನು, **ಪುರಾ** = ಹಿಂದೆ, **ಬಲವೀರ್ಯಯುಕ್ತಃ** = ಬಲಪೌರುಷಯುಕ್ತನಾದ, **ಸಮಾನವಾಯುಃ** = ಸಮಾನನಾಮಕ ವಾಯುವು.

**ತಾತ್ಪರ್ಯ** :- ಮೂರ್ಲೋಕದಲ್ಲಿ ಅಧಿಕವಾದ ರೂಪ ಸದ್ಗುಣಗಳಿಂದ ತನಗೆ ಅನುರೂಪಳಾಗಿದ್ದ ಕಾಳಿದೇವಿಯಲ್ಲಿ ರಮಿಸುತ್ತ, ಭೀಮಸೇನ ಶರ್ವತ್ರಾತ ಎಂಬ ಹೆಸರಿನ ಮಗನನ್ನು ಹುಟ್ಟಿಸಿದ. ಶರ್ವತ್ರಾತ ಹಿಂದೆ ಬಲವೀರ್ಯಯುಕ್ತನಾದ ಸಮಾನವಾಯುವಾಗಿದ್ದನು.

**ಕೃಷ್ಣೋಽಪಿ ಗತ್ವಾ ದ್ವಾರವತೀಂ ಸರಾಮಃ**
**ಸತ್ಯಾಪಿತುರ್ವಧಕರ್ತಾರಮೇವ ।**
**ಶತಧನ್ವಾನಂ ಹಂತುಮೈಚ್ಛತ್ ಸ ಚೈವ**
**ಯಯಾಚೇಽಕ್ರೂರಂ ಕೃತವರ್ಮಾನುಯುಕ್ತಮ್ ॥ ೨೯ ॥**

**ಪದಚ್ಛೇದ** :- **ಕೃಷ್ಣಃ, ಅಪಿ, ಗತ್ವಾ, ದ್ವಾರಾವತೀಂ, ಸರಾಮಃ, ಸತ್ಯಾಪಿತುಃ, ವಧಕರ್ತಾರಮ್, ಏವ, ಶತಧನ್ವಾನಂ, ಹಂತುಂ, ಐಚ್ಛೈತ್, ಸ, ಚ, ಏವ, ಯಯಾಚೆ, ಅಕ್ರೂರಂ, ಕೃತವರ್ಮಾನುಯುಕ್ತಂ।**

**ಅರ್ಥ** :- **ಕೃಷ್ಣಃ ಅಪಿ** = ಕೃಷ್ಣನೂ ಕೂಡ, **ಸರಾಮಃ** = ಬಲರಾಮನಿಂದ ಸಹಿತನಾಗಿ, **ದ್ವಾರಾವತೀಂ** = ದ್ವಾರಕಾಪಟ್ಟಣವನ್ನು ಕುರಿತು, **ಗತ್ವಾ** = ಹೊರಟು, **ಸತ್ಯಾಪಿತುಃ** = ಸತ್ಯಭಾಮೆಯ ತಂದೆಯು, **ವಧಕರ್ತಾರಮ್** = ಹಂತಕನಾದ, **ಶತಧನ್ವಾನಂ** = ಶತಧನ್ವನನ್ನು, **ಹಂತುಂ** = ಕೊಲ್ಲಲು, **ಐಚ್ಛತ್** = ಸಂಕಲ್ಪಿಸಿದನು, **ಸಚ** = ಆ ಶತಧನ್ವನಾದರೂ, **ಕೃತವರ್ಮಾನುಯುಕ್ತಂ** = ಕೃತವರ್ಮನಿಂದ ಸಹಿತನಾದ, **ಅಕ್ರೂರಮೇವ** = ಅಕ್ರೂರನನ್ನೇ, **ಯಯಾಚೇ** = ಬೇಡಿದೆ.

**ತಾತ್ಪರ್ಯ** :- ಶ್ರೀ ಕೃಷ್ಣ ಬಲರಾಮನೊಂದಿಗೆ ಇಂದ್ರ ಪ್ರಸ್ಥದಿಂದ ದ್ವಾರಕೆಗೆ ಹೋಗಿ ಸತ್ಯಭಾಮೆಯ ತಂದೆಯ ಹಂತಕನಾದ ಶತಧನ್ವನನ್ನು ಕೊಲ್ಲಲು ಸಂಕಲ್ಪಿಸಿದ. ಇದನ್ನು ತಿಳಿದ ಶತಧನ್ವ ಸಹಾಯಕ್ಕಾಗಿ ಅಕ್ರೂರನನ್ನು ಕೃತವರ್ಮನನ್ನು ಬೇಡಿದ.

ತಾವಬ್ರೂತಾಂ ಸರ್ವಲೋಕೈಕಕರ್ತು-
ರ್ನಾऽವಾಂ ವಿರೋಧಂ ಮನಸಾऽಪಿ ಕುರ್ವಃ ।
ಕೃಷ್ಣಸ್ಯ ಸರ್ವೇಶಿತುರಿತ್ಯನೂಕ್ತ
ಆರುಹ್ಯ ಚಾಶ್ವೀಂ ಭಯತಃ ಪರಾದ್ರವತ್ ।। ೩೦ ।।

ಪದಚ್ಛೇದ :- ತೌ, ಅಬ್ರೂತಾಂ, ಸರ್ವಲೋಕೈಕಕರ್ತುಃ, ನ, ಆವಾಂ ವಿರೋಧಂ, ಮನಸಾ, ಅಪಿ, ಕುರ್ವಃ, ಕೃಷ್ಣಸ್ಯ, ಸರ್ವೇಶಿತುಃ, ಇತಿ, ಅನೂಕ್ತಃ, ಆರುಹ್ಯ, ಚ, ಅಶ್ವೀಂ, ಭಯತಃ, ಪರಾದ್ರವತ್ ।

ಅರ್ಥ :- ತೌ = ಅಕ್ರೂರ ಕೃತವರ್ಮರು, ಸರ್ವಲೋಕಕರ್ತುಃ = ಸಕಲ ಲೋಕಕರ್ತೃವಾದ, ಸರ್ವೇಶಿತುಃ = ಸರ್ವೇಶ್ವರನಾದ, ಕೃಷ್ಣಸ್ಯ = ಶ್ರೀಕೃಷ್ಣನ, ವಿರೋಧಂ = ವಿರೋಧವನ್ನು, ಆವಾಂ = ನಾವಿಬ್ಬರು, ಮನಸಾऽಪಿ = ಮನಸ್ಸಿನಿಂದಲೂ, ನ ಕುರ್ವಃ = ಮಾಡುವುದಿಲ್ಲ, ಇತಿ = ಎಂದು, ಅಬ್ರೂತಾಂ = ಹೇಳಿದರು, ಅನೂಕ್ತೇ = ಹೀಗೆ ಹೇಳಲ್ಪಟ್ಟ ಶತಧನ್ವನು, ಅಶ್ವೀಂ = ಹೆಣ್ಣು ಕುದುರೆಯನ್ನು, ಆರುಹ್ಯ = ಏರಿ, ಭಯಾತ್ = ಹೆದರಿಕೆಯಿಂದ, ಪರಾದ್ರವತ್ ಚ = ಓಡಿಹೊದನು.

ತಾತ್ಪರ್ಯ :- ಅಕ್ರೂರ ಕೃತವರ್ಮರು ಹೇಳಿದರು ''ಸಕಲ ಲೋಕಗಳಿಗೆ ಮುಖ್ಯಜನಕನೂ, ಸರ್ವೇಶ್ವರನೂ ಆದ ಶ್ರೀಕೃಷ್ಣನಿಗೆ ನಾವು ಮನಸ್ಸಿನಲ್ಲಿಯೂ ವಿರೋಧ ಮಾಡಲಾರೆವು'' ಅವರು ಹೀಗೆ ಹೇಳಿದಾಗ ಶತಧನ್ವ ಭಯದಿಂದ ಸ್ಯಮಂತಕ ಮಣಿಯನ್ನು ಅಕ್ರೂರನ ಕೈಯಲ್ಲಿಟ್ಟು ಹೆಣ್ಣುಕುದುರೆಯನ್ನು ಏರಿ ಪಲಾಯನ ಮಾಡಿದ.

ಅನ್ವೇವ ತಂ ಕೃಷ್ಣರಾಮೌ ರಥೇನ
ಯಾತೌ ಶತಂ ಯೋಜನಾನಾಂ ದಿನೇನ ।
ಗತ್ವಾ ಮೃತಾಯಾಂ ಬಡಬಾಯಾಂ ಪದೈವ
ಸ ಪ್ರಾದ್ರವತ್ ಕೃಷ್ಣ ಏನಂ ಪದಾऽಗಾತ್ ।। ೩೧ ।।

ಪದಚ್ಛೇದ :- ಅನು, ಏವ, ತು, ಕೃಷ್ಣರಾಮೌ, ರಥೇನ, ಯಯಾ, ಶತಂ, ಯೋಜನಾನಾಂ ದಿನೇನ, ಗತ್ವಾ, ಮೃತಾಯಾಂ, ವಡವಾಯಾಂ, ಪದೈವ, ಸ, ಪ್ರಾದ್ರವತ್, ಕೃಷ್ಣಃ, ಏನಂ, ಪದಾ, ಅಗಾತ್ ।

**ಅರ್ಥ :- ತಂ ಅನು ಏವ** = ಆ ಶತಧನ್ವನನ್ನು ಹಿಂಬಾಲಿಸಿ, **ರಥೇನ** = ರಥದಿಂದ, **ಕೃಷ್ಣರಾಮೌ** = ಕೃಷ್ಣಬಲರಾಮರು, **ಯಾಯೌ** = ಹೊದರು (ಶತಧನ್ವನು), **ನ ಪರ್ಯಂತ** = ದೂರದ ಪ್ರದೇಶವನ್ನು ಕುರಿತು, **ಯೋಜನಾನಾಂ ಶತಂ** = ನೂರು ಯೋಜನೆಗಳನ್ನು, **ದಿನೇನ** = ಒಂದು ದಿನದಿಂದ, **ಗತ್ವಾ** = ಹೋಗಿ, **ವಡವಾಯಾಂ** = ಕುದುರೆಯು, **ಮತಾಯಾಂ** = ಸತ್ತು ಬಿಳಲು, **ಪದ್ಭೈವ** = ಕಾಲ್ನಡಿಗೆಯಿಂದಲೆ, **ಸಃ** = ಶತಧನ್ವನು, **ಪ್ರಾದ್ರವತ್** = ಓಡಿದನು, **ಏನಂ** = ಶತಧನ್ವನನ್ನು, **ಕೃಷ್ಣಃ** = ಕೃಷ್ಣನು, **ಪದಾ** = ಕಾಲ್ನಡಿಗೆಯಿಂದ, **ಅಗಾತ್** = ಹೊಂದಿದನು.

**ತಾತ್ಪರ್ಯ :-** ಶತಧನ್ವನನ್ನು ಬೆನ್ನಟ್ಟಿದ ಕೃಷ್ಣರಾಮರು ರಥದಿಂದ ಹೊರಟರು. ಶತಧನ್ವ ಒಂದೆ ದಿನದಲ್ಲಿ ನಿರಂತರ ನೂರು ಯೋಜನ ದೂರ ಹೋಗಿ ಮಿಥಿಲಾನಗರದ ಬಳಿ ಕುದುರೆ ಸತ್ತಾಗ ಕಾಲು ನಡಿಗೆಯಿಂದ ಒಡಿದ. ಕೃಷ್ಣ ಬಲರಾಮನನ್ನು ಬಿಟ್ಟು, ಒಬ್ಬನೆ ಕಾಲ್ನಡಿಗೆಯಿಂದ ಅವನನ್ನು ಬೆನ್ನಟ್ಟಿದ.

**ಛಿತ್ವಾ ಶಿರಸ್ತಸ್ಯ ಚಕ್ರೇಣ ಕೃಷ್ಣೋ**
**ಜಾನನ್ನಕ್ರೂರೇ ಮಣಿಮೇನೇನ ದತ್ತಮ್ ।**
**ಅಪ್ಯಜ್ಞವಲ್ಲೋಕವಿಡಂಬನಾಯ**
**ಪರೀಕ್ಷ್ಯ ವಾಸೋಽತ್ರ ನೇತ್ಯಾಹ ರಾಮಮ್ ॥ ೩೨ ॥**

**ಪದಚ್ಛೇದ :- ಛಿತ್ವಾ, ಶಿರಃ, ತಸ್ಯ, ಚಕ್ರೇಣ, ಕೃಷ್ಣಃ, ಜಾನನ್, ಅಕ್ರೂರೇ, ಮಣಿಂ, ಅನೇನ, ದತ್ತಂ, ಅಪಿ, ಅಜ್ಞವತ್, ಲೋಕವಿಡಂಬನಾಯ, ಪರೀಕ್ಷ್ಯ, ವಾಸಃ, ಅತ್ರ, ನ, ಇತಿ, ಆಹ, ರಾಮಮ್ ।**

**ಅರ್ಥ :- ಕೃಷ್ಣಃ** = ಶ್ರೀಕೃಷ್ಣನು, **ತಸ್ಯ** = ಆ ಶತಧನ್ವನ, **ಶಿರಃ** = ತಲೆಯನ್ನು, **ಚಕ್ರೇಣ** = ಸುದರ್ಶನದಿಂದ, **ಛಿತ್ವಾ** = ಛೇದಿಸಿ, **ಅನೇನ** = ಶತಧನ್ವನಿಂದ, **ಅಕ್ರೂರೇ** = ಅಕ್ರೂರನಲ್ಲಿ, **ಮಣಿಂ** = ಮಣಿಯು, **ದತ್ತಂ** = ಕೊಡಲ್ಪಟ್ಟಿದೆ ಎಂದು, **ಜಾನನ್ ಅಪಿ** = ತಿಳಿದಿದ್ದರೂ, **ಅಜ್ಞವತ್** = ಅಜ್ಞನಂತೆ, **ಲೋಕವಿಡಂಬನಾಯ** = ಲೋಕವಿಡಂಬನೆಗಾಗಿ, **ವಾಸಃ** = ಬಟ್ಟೆಯನ್ನು, **ಪರೀಕ್ಷಿಸಿ** = ಪರೀಕ್ಷಿಸಿ, **ಅತ್ರ** = ಇವನಲ್ಲಿ, **ನ** = ಮಣಿಯು ಇಲ್ಲ, **ಇತಿ** = ಎಂದು, **ರಾಮಂ** = ಬಲರಾಮನನ್ನು ಕುರಿತು, **ಆಹ** = ಹೇಳಿದನು.

ತಾತ್ಪರ್ಯ :- ಶ್ರೀಕೃಷ್ಣ ಚಕ್ರದಿಂದ ಶತಧನ್ವನ ಶಿರವನ್ನು ತರಿದು ಅವನು ಸ್ಯಮಂತಕ ಮಣಿಯನ್ನು ಅಕ್ರೂರನ ಕೈಯಲ್ಲಿ ಕೊಟ್ಟಿರುವನೆಂದು ಸ್ವತಃ ತಿಳಿದಿದ್ದರೂ, ಅಜ್ಞನಂತೆ ಲೋಕ ವಿಡಂಬನೆಗಾಗಿ ಅವನು ಉಟ್ಟ ವಸ್ತ್ರವನ್ನು ಪರೀಕ್ಷಿಸಿ, ಅಷ್ಟರೊಳಗೆ ಅಲ್ಲಿಗೆ ಬಂದ ಬಲರಾಮನಿಗೆ ''ಅಣ್ಣ ಇವನಲ್ಲಿ ಮಣಿ ಇಲ್ಲ'' ಎಂದು ಹೇಳಿದ.

**ಅವಿಶ್ವಾಸಾತ್ ಸ ತು ಸಕ್ರೋಧ ಏವ**
**ಯಯೌ ವಿದೇಹಾನವಸತ್ ಪಂಚ ಚಾಬ್ದಾನ್ ।**
**ಜಾನನ್ ಪಾರ್ಥೇಭ್ಯೋಽಹಾರ್ಯತಾಂ ಕೇಶವಸ್ಯ**
**ವಶೀಕರ್ತುಂ ಧಾರ್ತರಾಷ್ಟ್ರೋ ಬಲಂ ಗಾತ್ ॥ ೩೩ ॥**

**ಪದಚ್ಛೇದ :- ಅವಿಶ್ವಾಸಾತ್, ಸ, ತು, ಸಕ್ರೋಧಃ, ಏವ, ಯಯೌ, ವಿದೇಹಾನ್, ಅವಸತ್, ಪಂಚ, ಚ, ಅಬ್ದಾನ್, ಜಾನನ್, ಪಾರ್ಥೇಭ್ಯಃ, ಅಹಾರ್ಯತಾಂ ಕೇಶವಸ್ಯ, ವಶೀಕರ್ತಂ, ಧಾರ್ತರಾಷ್ಟ್ರಃ ಬಲಂ, ಗಾತ್ ।**

**ಅರ್ಥ :- ಸತು** = ಆ ಬಲಭದ್ರನಾದರೂ, **ಅವಿಶ್ವಾಸಾತ್** = ಕೃಷ್ಣನ ಮಾತಿನಲ್ಲಿ ವಿಶ್ವಾಸವಿಲ್ಲದವನಾಗಿ, **ಸಕ್ರೋಧಃ ಏವ** = ಕೋಪದಿಂದಲೆ, **ವಿದೇಹಾನ್** = ವಿದೇಹ ಪಟ್ಟಣವನ್ನು ಕುರಿತು, **ಯಯೌ** = ಹೋದನು, **ಅಬ್ದಾನ್ ಪಂಚ ಚ** = ಐದು ಸಂವತ್ಸರಗಳ ಪರ್ಯಂತ, **ಅವಸತ್ ಚ** = ವಾಸಮಾಡಿದನು, **ಪಾರ್ಥೇಭ್ಯ** = ಪಾಂಡವರಿಂದ, **ಕೇಶವಸ್ಯ** = ಶ್ರೀಕೃಷ್ಣನ, **ಅಹಾರ್ಯತಾಂ** = ಆಕರ್ಷಣೆಯ ಅಸಾಧ್ಯತೆಯನ್ನು, **ಜಾನನ್** = ತಿಳಿಯುತ್ತಾ, **ಧಾರ್ತರಾಷ್ಟ್ರಃ** = ದುರ್ಯೋಧನನು, **ಬಲಂ** = ಬಲರಾಮನನ್ನು, **ವಶೀಕರ್ತಂ** = ಆಕರ್ಷಿಸಲಿಕ್ಕಾಗಿ, **ಗಾತ್** = ಬಲರಾಮನನ್ನು ಹೊಂದಿದನು.

ತಾತ್ಪರ್ಯ :- ಶ್ರೀಕೃಷ್ಣನು ''ಮಣಿಯು ಶತಧನ್ವನಲ್ಲಿ ಇಲ್ಲ'' ಮಾತನ್ನು ಹೇಳಿದಾಗ, ಬಲರಾಮನಿಗೆ ಕೃಷ್ಣನಲ್ಲಿ ವಿಶ್ವಾಸ ಉಂಟಾಗಲಿಲ್ಲ, ಅವನ ಮೇಲಿನ ಸಿಟ್ಟಿನಿಂದಲೇ ಮಿಥಿಲಾ ಪಟ್ಟಣವನ್ನು ಕುರಿತು ಹೊರಟನು. ಇತ್ತ ದುರ್ಯೋಧನ ಶ್ರೀಕೃಷ್ಣನನ್ನು ಪಾಂಡವರಿಂದ ಬೇರ್ಪಡಿಸಲು ಸಾಧ್ಯವಿಲ್ಲ ಎಂದು ತಿಳಿದು ಅಣ್ಣನಾದ ಬಲರಾಮನನ್ನು ಸೆಳೆಯಲು ಅವನ ಬಳಿ ಹೋದನು.

ಬಭೂವ ಶಿಷ್ಯೋಽಸ್ಯ ತಥಾ ಗದಾಯಾ-
ಮಸನ್ನಿಧಾನಂ ಕೇಶವಸ್ಯ ಪ್ರತೀಕ್ಷನ್ ।
ತದಾ ಯಯಾಚೇ ಭಗಿನೀಂ ಚ ತಸ್ಯ
ಸ ಚ ಪ್ರತಿಜ್ಞಾಮಕರೋತ್ ಪ್ರದಾನೇ ॥ ೩೪ ॥

ಪದಚ್ಛೇದ :- ಬಭೂವ, ಶಿಷ್ಯಃ, ಅಸ್ಯ, ತಥಾ, ಗದಾಯಾಂ, ಅಸನ್ನಿಧಾನಂ, ಕೇಶವಸ್ಯ, ಪ್ರತೀಕ್ಷನ್, ತದಾ, ಯಯಾಚೇ, ಭಗಿನೀಂ, ಚ, ತಸ್ಯ, ಸ, ಚ, ಪ್ರತಿಜ್ಞಾಂ, ಅಕರೋತ್ ಪ್ರದಾನೇ ।

ಅರ್ಥ :- ಕೇಶವಸ್ಯ = ಕೃಷ್ಣನ, ಅಸನ್ನಿಧಾನಂ = ಅಸಾಮಿಪ್ಯವನ್ನು, ಪ್ರತಿಕ್ಷನ್ = ನಿರೀಕ್ಷಿಸುತ್ತಾ, ತಥಾ = ವಶೀಕರಣಕ್ಕಾಗಿ, ಗದಾಯಾಂ = ಗದಾ ಕಲಿಕೆಯಲ್ಲಿ, ಅಸ್ಯ = ಬಲಭದ್ರನ, ಶಿಷ್ಯಃ = ಶಿಷ್ಯನು, ಬಭೂವ = ಆದನು, ತದಾ = ಸರಿಯಾದ ಸಮಯದಲ್ಲಿ, ತಸ್ಯ ಚ = ಬಲರಾಮನ, ಭಗಿನೀಂ = ತಂಗಿಯಾದ ಸುಭದ್ರೆಯನ್ನೇ, ಯಯಾಚೆ = ವರಿಸಲಿಕ್ಕಾಗಿ ಬೇಡಿದನು, ಸಚ = ಆ ಬಲರಾಮನಾದರೂ, ಪ್ರದಾನೇ = ತಂಗಿಯನ್ನು ಕೊಡುವ ವಿಷಯದಲ್ಲಿ, ಪ್ರತಿಜ್ಞಾಂ = ಆಣೆಯನ್ನು, ಅಕರೋತ್ = ಮಾಡಿದನು.

ತಾತ್ಪರ್ಯ :- ದುರ್ಯೋಧನನು ಕೃಷ್ಣನು ಸಮೀಪದಲ್ಲಿ ಇಲ್ಲದಿರುವ ಸಮಯವನ್ನು ನೋಡಿ, ಬಲರಾಮನನ್ನು ಆಕರ್ಷಿಸಲು ಗದಾಶಿಕ್ಷಣದಲ್ಲಿ ಅವನ ಶಿಷ್ಯನಾದನು. ಮತ್ತು ಸರಿಯಾದ ಸಮಯದಲ್ಲಿ ಬಲರಾಮನ ತಂಗಿಯಾದ ಸುಭದ್ರೆಯನ್ನು ವರಿಸಲಿಕ್ಕಾಗಿ ಬೇಡಿದನು. ಬಲರಾಮನು ದುರ್ಯೋಧನನಿಗೆ ಮದುವೆ ಮಾಡಿ ಕೊಡುವುದಾಗಿ ಪ್ರತಿಜ್ಞೆ ಮಾಡಿದನು.

ಜ್ಯೇಷ್ಠಂ ಹ್ಯೇನಂ ಕೇಶವೋ ನಾತಿವರ್ತೇ-
ದಿತ್ಯೇವ ಮೇನೇ ಧಾರ್ತರಾಷ್ಟ್ರಃ ಸ ತಸ್ಮಾತ್ ।
ಜಗ್ರಾಹ ಹಸ್ತಂ ದಕ್ಷಿಣಂ ಸತ್ಯಹೇತೋ-
ರ್ದದೌ ಚ ರಾಮಃ ಕರಮಸ್ಮೈ ಹಲಾಂಕಮ್ ॥ ೩೫ ॥

ಪದಚ್ಛೇದ :- ಜ್ಯೇಷ್ಠಂ, ಹಿ, ಏನಂ, ಕೇಶವಃ, ನಾತಿವರ್ತೇತ್, ಇತಿ, ಏವ, ಮೇನೆ, ಧಾರ್ತರಾಷ್ಟ್ರಃ, ಸಃ, ತಸ್ಮಾತ್, ಜಗ್ರಾಹ, ಹಸ್ತಂ, ದಕ್ಷಿಣಂ, ಸತ್ಯಹೇತೋಃ, ದದೌ, ಚ, ರಾಮಃ, ಕರಂ, ಅಸ್ಮೈ, ಹಲಾಂಕಮ್ ।

**ಅರ್ಥ** :- **ಹಿ** = ಯಾವ ಕಾರಣದಿಂದ, **ಜ್ಯೇಷ್ಠಂ** = ಹಿರಿಯನಾದ, **ಏನಂ** = ಬಲಭದ್ರನನ್ನು, **ಕೇಶವಃ** = ಕೃಷ್ಣನು, **ನಾತಿವರ್ತೇತ್** = ಮೀರುವುದಿಲ್ಲ, **ಇತ್ಯೈವ** = ಎಂಬುದಾಗಿ, **ಧಾರ್ತರಾಷ್ಟ್ರಃ** = ದುರ್ಯೋಧನನು, **ಮೇನೆ** = ತಿಳಿದನು, **ತಸ್ಮಾತ್** = ಆ ಕಾರಣದಿಂದ, **ಸಃ** = ದುರ್ಯೋಧನನು, **ಸತ್ಯಹೇತೋಃ** = ಪ್ರತಿಜ್ಞೆಯ ಸತ್ಯತೆಗಾಗಿ, **ದಕ್ಷಿಣಂ ಹಸ್ತಂ** = ಬಲಗೈಯನ್ನು, **ಜಗ್ರಾಹ** = ಹಿಡಿದನು, **ರಾಮಃ ಚ** = ಬಲರಾಮನಾದರೂ, **ಅಸ್ಮೈ** = ದುರ್ಯೋಧನನಿಗೆ, **ಹಲಾಂಕಮ್** = ನೇಗಿಲು ಚಿಹ್ನೆಯುಳ್ಳ ಬಲಗೈಯನ್ನು, **ದದೌ** = ಕೊಟ್ಟನು.

**ತಾತ್ಪರ್ಯ** :- ದುರ್ಯೋಧನನು ''ಶ್ರೀಕೃಷ್ಣನು ಅಣ್ಣನಾದ ಬಲರಾಮನ ಮಾತನ್ನು ಮೀರುವುದಿಲ್ಲ'' ಎಂದು ತಿಳಿದು ಪ್ರತಿಜ್ಞೆಯ ದೃಢತೆಗಾಗಿ ಬಲರಾಮನ ಬಲಗೈಯನ್ನು ಪ್ರತಿಜ್ಞೆ ಮಾಡುವುದಕ್ಕಾಗಿ ಹಿಡಿದನು. ಆ ಬಲರಾಮ ತನ್ನ ಹಲಯುಧ ಹಿಡಿಯುವ ಬಲಗೈಯನ್ನು ಪ್ರತಿಜ್ಞೆಯ ಧೃಡತೆಗಾಗಿ ದುರ್ಯೋಧನನಿಗೆ ಇತ್ತನು.

**ರೂಪೇಣ ತಸ್ಯಾ ಮೋಹಿತೋ ಧಾರ್ತರಾಷ್ಟ್ರೋ**
**ವಿಶೇಷತಃ ಕೃಷ್ಣರಾಮೌ ಭಗಿನ್ಯಾಃ ।**
**ಸ್ನೇಹಾದ್ ವಶಂ ಯಾಸ್ಯತ ಇತ್ಯಗೃಹ್ಣಾದ್**
**ಹಸ್ತಂ ಹಲಾಂಕಂ ಹಲಿನೋ ರಿಪುಘ್ನಮ್ ॥ ೩೭ ॥**

ಪದಚ್ಛೇದ :- **ರೂಪೇಣ, ತಸ್ಯಾಃ, ಮೋಹಿತಃ, ಧಾರ್ತರಾಷ್ಟ್ರಃ, ವಿಶೇಷಿತಃ, ಕೃಷ್ಣರಾಮೌ, ಭಗಿನ್ಯಾಃ, ಸ್ನೇಹಾತ್, ವಶಂ, ಯಾಸ್ಯತ, ಇತಿ, ಅಗೃಹ್ಣಾತ್, ಹಸ್ತಂ, ಹಲಿನಃ, ರಿಪುಘ್ನಂ ।**

**ಅರ್ಥ** :- **ಧಾರ್ತರಾಷ್ಟ್ರಃ** = ದುರ್ಯೋಧನನು, **ತಸ್ಯಾಃ** = ಆ ಸುಭದ್ರೆಯ, **ರೂಪೇಣ** = ಸೌಂದರ್ಯದಿಂದ, **ಮೋಹಿತಃ** = ಮೋಹಿತನಾಗಿ, **ವಿಶೇಷತಃ** = ವಿಶೇಷವಾಗಿ, **ಭಗಿನ್ಯಾಃ** = ತಂಗಿಯ, **ಸ್ನೇಹಾತ್** = ಪ್ರೀತಿಯಿಂದ, **ಕೃಷ್ಣರಾಮೌ** = ಕೃಷ್ಣಬಲರಾಮರು, **ವಶಂ** = ನನ್ನ ವಶವನ್ನು, **ಯಾಸ್ಯತ್** = ಹೊಂದುವರು, **ಇತಿ** = ಎಂದು ಯೋಚಿಸಿ, **ಹಲಿನಃ** = ಬಲರಾಮನ, **ರಿಪುಘ್ನಂ** = ಶತ್ರುಸಂಹಾರಕವಾದ, **ಹಲಾಂಕಂ** = ನೇಗಿಲಿನ ಚಿಹ್ನೆಯುಳ್ಳ, **ಹಸ್ತಂ** = ಕೈಯನ್ನು, **ಅಗೃಹ್ಣಾತ್** = ಹಿಡಿದನು.

**ತಾತ್ಪರ್ಯ** :- ದುರ್ಯೋಧನನು ಸುಭದ್ರೆಯ ರೂಪದಿಂದ ಮೋಹಿತನಾಗಿ, ವಿಶೇಷವಾಗಿ ಸುಭದ್ರೆಯ ಪಾಣಿಗ್ರಹಣದ ನಂತರ ತಂಗಿಯ ಮೇಲಿನ ಪ್ರೀತಿಯಿಂದ ಬಲರಾಮಕೃಷ್ಣರು ನನ್ನ ವಶದಲ್ಲಿರುತ್ತಾರೆ ಎಂದು ಚಿಂತಿಸಿ ಶತ್ರುಸಂಹಾರಕವಾದ ಹಲದ ಚಿಹ್ನೆಯುಳ್ಳ ಬಲರಾಮನ ಬಲಗೈಯನ್ನು ಹಿಡಿದನು.

**ವಿವರಣೆ** :- ವ್ಯಾಸತೀರ್ಥೀಯದಲ್ಲಿ ಭಟರು ಶಪಥ ಮಾಡುವಾಗ ತಮ್ಮ ಆಯುಧವನ್ನು ತೋರಿಸಿ ಶಪಥ ಮಾಡುತ್ತಾರೆ. ಬಲರಾಮನು ಹಾಗೆಯೆ ಮಾಡಿದನು ಎಂದು ಸೂಚಿಸಲು ''ಹಲಾಂಕಂ'' ಎಂದು ಎಂದಿದ್ದಾರೆ (ತಾಮ್ರ).

ಯಾವ ಹಲದಿಂದ ಮುಂದೆ ಹಸ್ತಿನಪುರವನ್ನೇ ಎಳೆಯುತ್ತಾನೊ ಅಂತಹ ಹಲದಿಂದ ಅಂಕಿತವಾದ ಕೈಯಿಂದ ಪ್ರತಿಜ್ಞೆ ಮಾಡಿದನು ಎಂದು ''ಹಲಾಂಕಂ'' ಎನ್ನುವ ಮೂಲಕ ಆಶ್ಚರ್ಯ ವ್ಯಕ್ತಪಡಿಸಿದ್ದಾರೆ. (ಬನ್ನಂಜೀಯ) (ನಿರ್ಣಯಭಾವಚಂದ್ರಿಕಾ)

ಮುಂದೆ ಈ ಪ್ರಿಯಶಿಷ್ಯನು ಶತ್ರುವಿನಂತೆ ಸಾಂಬ ಸ್ವಯಂವರ ಸಂದರ್ಭದಲ್ಲಿ ವಿರೋಧವ್ಯಕ್ತಪಡಿಸಿದಾದ ಇದೆ ಹಲಾಂಕಿತವಾದ ಕೈಯಿಂದ ಶಿಕ್ಷಿಸುತ್ತಾನೆ ಎಂಬ ಧ್ವನಿಯನ್ನು ''ರಿಪುಘ್ನಂ'' ಎಂದು ಸೂಚಿಸಿದ್ದಾರೆ (ನಿರ್ಣಯ ಭಾವ ಚಂದ್ರಿಕಾ)

ಕ್ಷತ್ರಿಯರು ಆಯುಧ ಹಿಡಿಯುವ ಹಸ್ತದಿಂದ ಪ್ರತಿಜ್ಞೆಯನ್ನು ಮಾಡುತ್ತಾರೆ ಎಂದು ಸೂಚಿಸುವುದಕ್ಕಾಗಿ ''ಹಲಾಂಕಂ'' ಎಂದು ಹೇಳಿದ್ದಾರೆ (ಜನಾರ್ದನೀಯ).

**ಜಾತಾ ದೇವಕ್ಯಾಂ ಸಾ ಸುಭದ್ರೇತಿ ನಾಮ್ನಾ**
**ಭದ್ರಾ ರೂಪೇಣಾನಕದುಂದುಭೇಸ್ತಾಮ್ ।**
**ಕೃತ್ವಾ ಪುತ್ರೀಂ ರೋಹಿಣೀ ಸ್ವಾಮರಕ್ಷತ್**
**ಪೂರ್ವಂ ತು ಯಾಽಸೀತ್ ತ್ರಿಜಟೈವ ನಾಮ್ನಾ ॥ ೩೭ ॥**

ಪದಚ್ಛೇದ :- ಜಾತಾ, ದೇವಕ್ಯಾಂ, ಸಾ, ಸುಭದ್ರಾ, ಇತಿ, ನಾಮ್ನಾ, ಭದ್ರಾ, ರೂಪೇಣ, ಆನಕದುಂದುಭೇಃ, ತಾಂ ಕೃತ್ವಾ, ಪುತ್ರೀಂ, ರೋಹಿಣಿ, ಸ್ವಾಂ, ಅರಕ್ಷತ್, ಪೂರ್ವಂ, ತು, ಯಾ, ಆಸೀತ್, ತ್ರಿಜಟೈವ, ನಾಮ್ನಾ।

ಅರ್ಥ :- ಪೂರ್ವಂ ತು = ಹಿಂದೆ ತ್ರೇತೆಯಲ್ಲಿ, ಯಾ = ಯಾರು, ನಾಮ್ನಾ = ಹೆಸರಿನಿಂದ, ತ್ರಿಜಟಾ = ತ್ರಿಜಟೆಯು, ಆಸೀತ್ = ಆಗಿದ್ದಳೂ, ಸೈವ = ಆ ತ್ರಿಜಟೆಯೇ, ಆನಕದುಂದುಭೇಃ = ವಸುದೇವನಿಂದ, ದೇವಕ್ಯಾಂ = ದೇವಕಿಯಲ್ಲಿ, ಸುಭದ್ರಾ ನಾಮ್ನಾ = ಸುಭದ್ರೆಯೆಂಬ ಹೆಸರಿನಿಂದ, ಜಾತಾ = ಹುಟ್ಟಿದಳು, ರೂಪೇಣ = ಸೌಂದರ್ಯದಿಂದ, ಭದ್ರಾ = ಕಂಗೊಳಿಸುವ, ತಾಂ = ಆ ಸುಭದ್ರೆಯನ್ನು, ರೋಹಿಣಿ = ರೋಹಿಣಿಯ, ಸ್ವಾಂ = ತನ್ನ, ಪುತ್ರೀಂ ಕೃತಾ = ಮಗಳನ್ನಾಗಿಸಿ, ಅರಕ್ಷತ್ = ರಕ್ಷಿಸಿದಳು.

ತಾತ್ಪರ್ಯ :- ಹಿಂದೆ ತ್ರೇತಾಯುಗದಲ್ಲಿ ತ್ರಿಜಟೆಯಾದವಳೇ, ಈಗ ವಸುದೇವ ಮತ್ತು ದೇವಕಿಯರಲ್ಲಿ ಸುಭದ್ರಾ ಎಂಬ ಹೆಸರಿನಿಂದ ಹುಟ್ಟಿದಳು. ರೂಪದಿಂದ ಬಹಳ ಸೌಂದರ್ಯವತಿಯಾದ ಅವಳನ್ನು ರೋಹಿಣಿಯು ತನ್ನ ಮಗಳನ್ನಾಗಿಸಿ ರಕ್ಷಿಸಿದಳು.

ಸೀತಾಯಾಃ ಪ್ರಾಙ್ ನಿತ್ಯಶುಶ್ರೂಷಣಾತ್ ಸಾ
ಬಭೂವ ವಿಷ್ಣೋರ್ಭಗಿನೀ ಪ್ರಿಯಾ ಚ ।
ಉಮಾವೇಶಾದ್ ರೂಪಗುಣೋಪಪನ್ನಾ
ಪದ್ಮೇಕ್ಷಣಾ ಚಂಪಕದಾಮಗೌರೀ ॥ ೩೮ ॥

ಪದಚ್ಛೇದ :- ಸೀತಾಯಾಃ, ಪ್ರಾಕ್, ನಿತ್ಯಶುಶ್ರೂಷಣಾತ್, ಸಾ, ಬಭೂವ, ವಿಷ್ಣೋಃ, ಭಗಿನಿ, ಪ್ರಿಯಾ, ಚ, ಉಮಾವೇಶಾತ್, ರೂಪಗುಣೋಪಪನ್ನಾ, ಪದ್ಮೇಕ್ಷಣಾ, ಚಂಪಕದಾಮಗೌರಿ।

ಅರ್ಥ :- ಪ್ರಾಕ್ = ಹಿಂದೆ ತ್ರೇತೆಯಲ್ಲಿ, ಸೀತಾಯಾಃ = ಸೀತೆಯ, ನಿತ್ಯಶುಶ್ರೂಷಣಾತ್ = ನಿತ್ಯಸೇವೆಯಿಂದ, ಸಾ = ಆ ತ್ರಿಜಟೆಯ, ವಿಷ್ಣೋಃ = ಕೃಷ್ಣನ, ಭಗಿನಿ = ತಂಗಿಯು, ಪ್ರಿಯಾ ಚ = ಪ್ರೀತಿಪಾತ್ರಳು, ಬಭೂವ = ಆದಳು, ಉಮಾವೇಶಾತ್ = ಪಾರ್ವತಿಯ ಆವೇಶದಿಂದ, ರೂಪ ಗುಣೋಪಪನ್ನಾ = ಸೌಂದರ್ಯ ಮತ್ತು ಗುಣಗಳಿಂದ ಕೂಡಿದವಳು,

**ಪದ್ಮೇಕ್ಷಣಾ** = ಕಮಲದಂಥ ಕಣ್ಣುಳ್ಳವಳು, **ಚಂಪಕದಾಮಗೌರಿ** = **ಚಂಪಕದಾಮ** - ಸಂಪಿಗೆ ಮಾಲೆಯ ಬಣ್ಣದ, **ಗೌರಿ** - ಬಣ್ಣವುಳ್ಳವಳು, (**ಬಭೂವ** = ಆದಳು).

**ತಾತ್ಪರ್ಯ** :- ಹಿಂದೆ ತ್ರೇತಾಯುಗದಲ್ಲಿ ಅಶೋಕವನದಲ್ಲಿ ಸೀತೆಯನ್ನು ನಿತ್ಯ ಶುಶ್ರೂಷೆ ಮಾಡಿದ್ದರಿಂದ, ಶ್ರೀರಾಮನಿಗೆ ಪ್ರೀತಿಪಾತ್ರಳಾಗಿದ್ದಳು. ಆದ್ದರಿಂದಲೇ ಶ್ರೀಕೃಷ್ಣನ ತಂಗಿಯಾಗಿ ವಸುದೇವ, ದೇವಕಿಯಲ್ಲಿ ಜನಿಸಿದಳು. ಆ ಸುಭದ್ರೆಯು ಪಾರ್ವತಿಯ ಆವೇಶದಿಂದ ಎಲ್ಲಾ ಗುಣಗಳಿಂದ ಮತ್ತು ಸೌಂದರ್ಯದಿಂದ ಕೂಡಿದವಳಾಗಿದ್ದಳು ಕಮಲದಂಥ ಕಣ್ಣುಳ್ಳ ಅವಳು ಸಂಪಿಗೆ ಮಾಲೆಯ ಬಣ್ಣದ ಹಾಗೆ ಹೊಂಬಣ್ಣದವಳಾಗಿದ್ದಳು.

**ಏತತ್ ಕೃತ್ವಾ ಧೃತರಾಷ್ಟ್ರಾತ್ಮಜಃ ಸ**
**ಯಯೌ ಕುರೂನ್ ನಿವಸತ್ಯತ್ರ ರಾಮೇ ।**
**ಕೃಷ್ಣೋಽಕ್ರೂರಂ ವಿವಸಂತಂ ಭಯೇನ**
**ಸಹಾರ್ದಿಕ್ಯಂ ಚಾಽನಯಿತ್ವಾ ಜಗಾದ ॥ ೩೯ ॥**

ಪದಚ್ಛೇದ :- **ಏತತ್, ಕೃತ್ವಾ, ಧೃತರಾಷ್ಟ್ರಾತ್ಮಜಃ, ಸಃ, ಯಯೌ, ಕುರೂನ್, ನಿವಸತಿ, ಅತ್ರ, ರಾಮೆ, ಕೃಷ್ಣಃ, ಅಕ್ರೂರಂ, ಭಯೇನ, ವಿವಸಂತಂ, ಸಹಾರ್ದಿಕ್ಯಂ, ಚ, ಆನಯಿತ್ವಾ, ಜಗಾದ ।**

**ಅರ್ಥ** :- **ಧೃತರಾಷ್ಟ್ರಾತ್ಮಜಃ** = ದುರ್ಯೋಧನನು, **ಏತತ್** = ಶಪಥವನ್ನು, **ಕೃತ್ವಾ** = ಸಂಪಾದಿಸಿ, **ಅತ್ರ** = ವಿದೇಹ ಪಟ್ಟಣದಲ್ಲಿ, **ರಾಮೇ** = ಬಲರಾಮನು, **ನಿವಸತಿ (ಸತಿ)** = ವಾಸಿಸುತ್ತಿರಲು, **ಕುರೂನ್** = ತಾನು ಹಸ್ತಿನಪುರಕ್ಕೆ, **ಯಯೌ** = ಹೊರಟನು, **ಕೃಷ್ಣಃ** = ಕೃಷ್ಣನು, **ಭಯೇನ** = ಹೆದರಿಕೆಯಿಂದ, **ನಿವಸಂತಂ** = ದ್ವಾರಕೆಯಿಂದ ಬೇರೆಡೆ ವಾಸಿಸುತ್ತಿದ್ದ, **ಅಕ್ರೂರಂ ಚ** = ಅಕ್ರೂರನನ್ನಾದರೂ, **ಸಹಾರ್ದಿಕ್ಯಂ** = ಸ್ನೇಹದಿಂದ, **ಆನಯಿತ್ವಾ** = ಕರೆಸಿ (ಮಾತನ್ನು ಹೇಳಿದನು)

**ತಾತ್ಪರ್ಯ** :- ದುರ್ಯೋಧನನು ಬಲರಾಮನಿಂದ ಶಪಥ ತೆಗೆದುಕೊಂಡು, ಬಲರಾಮನು ವಿದೇಹಪಟ್ಟಣದಲ್ಲಿ ವಾಸಿಸುತ್ತಿರುವಾಗಲೇ ತಾನು ಹಸ್ತಿನಾಪುರವನ್ನು ಕುರಿತು ಹೊರಟನು. ಅನಂತರ ಕೃಷ್ಣನು ದ್ವಾರಕೆಯ

ಹೊರಗೆ ಭಯದಿಂದ ಜೀವಿಸುತ್ತಿದ್ದ. ಅಕ್ರೂರನನ್ನು ಸ್ನೇಹದಿಂದ ಕರೆದು ಮಾತನ್ನು ಹೇಳಿದನು.

ವಿವರಣೆ :- ಭಯದಿಂದ ಕೃಷ್ಣನನ್ನು ಬಿಟ್ಟು ದೂರದಲ್ಲಿ ವಾಸಿಸುತ್ತಿದ್ದರೂ, ಅಕ್ರೂರ ಮನಸ್ಸಿನ ಒಳಗೆ ಕೃಷ್ಣನೇ ನೆಲೆಸಿದ್ದನು. ಇದನ್ನು ಆಚಾರ್ಯರು ''ವಿವಸಂತಂ'' ಎಂದು ಸೂಚಿಸಿದ್ದಾರೆ. ''ವಿ'' ಶಬ್ದಕ್ಕೆ ಪರಮಾತ್ಮ ಎಂಬ ಅರ್ಥವು, ''ವಿಃ ಪಕ್ಷಿ ಪರಮಾತ್ಮನೋಃ'' ''ಅಕಯಪ್ರವಿಸಂಭೂಮಾಃ ಸಖಹಾವಿಷ್ಣು ವಾಚಕಾಃ'' ಎಂಬಿತ್ಯಾದಿಯಾಗಿ ಪ್ರಮಾಣಿಕೃತವಾಗಿದೆ (ನಿರ್ಣಯಭಾವಚಂದ್ರಿಕಾ).

**ಆನೀಯ ರಾಮಂ ಚ ಸಮಸ್ತಸಾತ್ತ್ವತಾಂ**
**ಯದಾಽವಾದೀತ್ ಕೇಶವಃ ಸನ್ನಿಧಾನೇ ।**
**ಮಣಿಸ್ತ್ವಯ್ಯಾಸ್ತೇ ದರ್ಶಯೇತ್ಯೇವ ಭೀತಃ**
**ತದಾಽಕ್ರೂರೋಽದರ್ಶಯದ್ ರತ್ನಮಸ್ಮೈ ॥ ೪೦ ॥**

ಪದಚ್ಛೇದ :- **ಆನೀಯ, ರಾಮಂ, ಚ, ಸಮಸ್ತಸಾತ್ವತಾಂ, ಯದಾ, ಅವಾದೀತ್, ಕೇಶವಃ, ಸನ್ನಿಧಾನೇ, ಮಣಿಃ, ತ್ವಯಿ, ಆಸ್ತೇ, ದರ್ಶಯ ಇತಿ, ಏವ, ಭೀತಃ, ತದಾ, ಅಕ್ರೂರಃ, ಅದರ್ಶಯತ್, ರತ್ನಂ, ಅಸ್ಮೈ ।**

ಅರ್ಥ :- **ರಾಮಂ ಚ** = ಬಲರಾಮನನ್ನೂ, **ಆನೀಯ** = ಕರೆಸಿ, **ಸಮಸ್ತಸಾತ್ವತಾಂ** = ಸಮಸ್ತ ಯಾದವರ, **ಸನ್ನಿಧಾನೇ** = ಸಮಕ್ಷಮದಲ್ಲಿ, **ಜಗಾದ** = ಹೇಳಿದನು, **ಯದಾ** = ಯಾವಾಗ, **ಕೇಶವಃ** = ಕೃಷ್ಣನು, **ಮಣಿಃ** = ಮಣಿಯು, **ತ್ವಯಿ** = ನಿನ್ನಲ್ಲಿ, **ಆಸ್ತೇ** = ಇದೆ, **ದರ್ಶಯ** = ತೋರಿಸು, **ಇತಿ** = ಎಂದು, **ಅವಾದೀತ್** = ಹೇಳಿದನೊ, **ತದಾ** = ಆಗ, **ಭೀತಃ** = ಭಯಗ್ರಸ್ತನಾದ, **ಅಕ್ರೂರಃ** = ಅಕ್ರೂರನು, **ರತ್ನಂ** = ಮಣಿಯನ್ನು, **ಅಸ್ಮೈ** = ಕೃಷ್ಣಾಯ, **ಆದರ್ಶಯತ್** = ತೋರಿಸಿದನು.

ತಾತ್ಪರ್ಯ :- ಬಲರಾಮನನ್ನು ವಿದೇಹಪಟ್ಟಣದಿಂದ ದ್ವಾರಕೆಗೆ ಕರೆಸಿ, ಸಮಸ್ತ ಯಾದವರ ಸಮಕ್ಷಮದಲ್ಲಿ ಅಕ್ರೂರನನ್ನು ಕುರಿತು ''ಎಲೈ ಅಕ್ರೂರನೇ ಮಣಿಯು ನಿನ್ನಲ್ಲಿದೆ. ಆ ಮಣಿಯನ್ನು ತೋರಿಸು'' ಎಂದು ಹೇಳಿದನು. ಹೀಗೆ ಕೃಷ್ಣನ ಮಾತಿನಿಂದ ಹೆದರಿದ ಅಕ್ರೂರನು ಸ್ಯಮಂತಕಮಣಿಯನ್ನು ಕೃಷ್ಣನಿಗೆ ತೋರಿಸಿದನು.

**ಅವ್ಯಾಜತಾಮಾತ್ಮನೋ ದರ್ಶಯಿತ್ವಾ**
**ಹಲಾಯುಧೇ ಕೇಶವಸ್ತಸ್ಯ ಜಾನನ್ ।**
**ರತ್ನಾಕಾಂಕ್ಷಾಮುಗ್ರಸೇನಸ್ಯ ಚೈವ**
**ಮಾತುಶ್ಚ ಸಾಂಬಸ್ಯ ಪುನರ್ಬಭಾಷೇ ॥ ೪೧ ॥**

**ಪದಚ್ಛೇದ :–** ಅವ್ಯಾಜತಾಂ, ಆತ್ಮನಃ, ದರ್ಶಯಿತ್ವಾ, ಹಲಾಯುಧೆ, ಕೇಶವಃ, ತಸ್ಯ, ಜಾನನ್, ರತ್ನಾಕಾಂಕ್ಷಾಂ, ಉಗ್ರಸೇನಸ್ಯ, ಚ, ಏವ, ಮಾತುಃ, ಚ, ಸಾಂಬಸ್ಯ, ಪುನಃ, ಬಭಾಷೆ ।

**ಅರ್ಥ :-** ಕೇಶವಃ = ಶ್ರೀಕೃಷ್ಣನು, ಹಲಾಯುಧೇಃ = ಬಲರಾಮನಲ್ಲಿ, ಆತ್ಮನಃ = ತನ್ನ, ಅವ್ಯಾಜತಾಂ = ನಿಷ್ಕಪಟತೆಯನ್ನು, ದರ್ಶಯಿತ್ವಾ = ತೋರಿಸಿ, ತಸ್ಯ = ಬಲರಾಮನಿಗೂ, ಉಗ್ರಸೇನಸ್ಯ = ಉಗ್ರಸೇನನಿಗೂ, ಸಾಂಬಸ್ಯ ಮಾತುಶ್ಚ = ಸಾಂಬನ ತಾಯಿಯಾದ ಜಾಂಬವತಿಗೂ ಇರುವ, ರತ್ನಾಕಾಂಕ್ಷಾಂ = ಸ್ಯಮಂತಕ ಮಣಿಯನ್ನು ಪಡೆಯುವ ಇಚ್ಛೆಯನ್ನು, ಜಾನನ್ = ತಿಳಿದವನಾಗಿ, ಪುನಃ ಬಭಾಷೇ = ಮತ್ತೊಮ್ಮೆ ನುಡಿದನು.

**ತಾತ್ಪರ್ಯ :-** ಬಲರಾಮನಿಗೆ ತನ್ನ ನಿಷ್ಕಪಟಭಾವವನ್ನು ಪ್ರಮಾಣ ಸಹಿತವಾಗಿ ವ್ಯಕಪಡಿಸಿದ ಶ್ರೀಕೃಷ್ಣನು, ಬಲರಾಮನಿಗೂ, ಉಗ್ರಸೇನನಿಗೂ, ಜಾಂಬವತಿಗೂ ಆ ಸ್ಯಮಂತಕ ಮಣಿಯನ್ನು ಪಡೆಯುವ ಇಚ್ಛೆಯನ್ನು ತಿಳಿದವನಾಗಿ ಮತ್ತೊಮ್ಮೆ ಮಾತನಾಡಿದನು.

**ಆಸ್ತಾಮಕ್ರೂರೇ ಮಣಿರನ್ಯೈರಧಾರ್ಯಃ**
**ಸದಾ ಯಜ್ಞಾದ್ ದಾನಪತೇಃ ಸ ಧಾರ್ಯಃ ।**
**ನ ಸತ್ಯಾ ಕೃಷ್ಣಾವಾಂಛಿತಂ ಕಿಂಚಿದಿಚ್ಛೇತ್**
**ತಥಾಽಪಿ ತಸ್ಯಾ ಯೋಗ್ಯ ಇತ್ಯಾಹ ಕೃಷ್ಣಃ ॥ ೪೨ ॥**

**ಪದಚ್ಛೇದ :–** ಆಸ್ತಾಂ, ಅಕ್ರೂರೇ, ಮಣಿಃ, ಅನ್ಯೈಃ, ಅಧಾರ್ಯಃ, ಸದಾ, ಯಜ್ಞಾತ್, ದಾನಪತೇಃ, ಸ, ಧಾರ್ಯಃ, ನ, ಸತ್ಯಾ, ಕೃಷ್ಣಾವಾಂಛಿತಂ, ಕಿಂಚಿತ್, ಇಚ್ಛೆತ್, ತಥಾ, ಅಪಿ, ತಸ್ಯಾಃ, ಯೋಗ್ಯಃ, ಇತಿ, ಆಹ, ಕೃಷ್ಣಃ ।

**ಅರ್ಥ :-** ಅನ್ಯೈಃ = ಬೇರೆಯವರಿಂದ, ಅಧಾರ್ಯಃ = ಧರಿಸಲು ಯೋಗ್ಯವಲ್ಲದ, ಮಣಿಃ = ಸ್ಯಮಂತಕ ಮಣಿಯು, ಅಕ್ರೂರೇ = ಅಕ್ರೂರನಲ್ಲಿ

**ಆಸ್ತಾಂ** = ಇರಲಿ, **ಸದಾ** = ಯಾವಾಗಲೂ, **ಯಜ್ಞಾತ್** = ಯಜ್ಞಶೀಲನಾದ್ದರಿಂದ, **ದಾನಪತೇಃ** = ಅಧಿಕ ದಾನಮಾಡುವ ಅಕ್ರೂರನಿಂದ, **ಧಾರ್ಯ** = ಧರಿಸಲು ಯೋಗ್ಯ, **ಕೃಷ್ಣಾವಾಂಛಿತಂ** = ಕೃಷ್ಣನು ಬಯಸದ, **ಕಿಂಚಿತ್** = ಯಾವುದನ್ನು, **ಸತ್ಯಾ** = ಸತ್ಯಭಾಮೆಯು, **ನ ಇಚ್ಛೇತ್** = ಬಯಸಲಾರಳು, **ತಥಾಽಪಿ** = ಹಾಗಿದ್ದರೂ, **ತಸ್ಯಾಃ** = ಅವಳಿಗೆ, **ಯೋಗ್ಯಃ** = ಧರಿಸಲು ಯೋಗ್ಯವಾದದ್ದೇ ಆಗಿದೆ, **ಇತಿ** = ಎಂದು, **ಕೃಷ್ಣಃ** = ಕೃಷ್ಣನು, **ಆಹ** = ಹೇಳಿದನು.

**ತಾತ್ಪರ್ಯ :-** ಬೇರೆಯವರಿಂದ ಧರಿಸಲು ಅಸಾಧ್ಯವಾದ ಈ ಮಣಿಯು ಅಕ್ರೂರನಲ್ಲೇ ಇರಲಿ. ಅವನು ನಿತ್ಯ ಯಜ್ಞಶೀಲನಾದ್ದರಿಂದ, ಅಧಿಕದಾನ ಮಾಡುವನು. ಆದ್ದರಿಂದ ಅಕ್ರೂರನೆ, ಆ ಮಣಿಯನ್ನು ಕಾಪಾಡಲಿ. ಇನ್ನು ಸತ್ಯಭಾಮೆಯು, ನಾನು ಇಷ್ಟಪಡದ ಯಾವುದನ್ನು ಅವಳು ಹೊಂದಲಿಕ್ಕೆ ಇಷ್ಟಪಡಲಾರಳು, ಆದರೂ ಆ ಮಣಿಯು ಅವಳು ಇಟ್ಟುಕೊಳ್ಳಲು ಯೋಗ್ಯವೇ ಆಗಿತ್ತು, ಹೀಗೆ ಕೃಷ್ಣನು ತನ್ನ ಮಾತನ್ನು ಮುಗಿಸಿದನು.

**ವಿವರಣೆ :-** ವಾಸ್ತವಿಕವಾಗಿ ಸತ್ಯಭಾಮೆಯು ಕೃಷ್ಣನು ಇಷ್ಟಪಡದ ವಸ್ತುವನ್ನು ಇಷ್ಟಪಡಲಾರಳು. ಆದರೂ ತಂದೆಯ ಸಂಪತ್ತು ಮಗನಿಲ್ಲದಿದ್ದರೆ ಮಗಳ ಅಧಿಕಾರಕ್ಕೆ ಬರುತ್ತದೆ ಆದ್ದರಿಂದ ಸತ್ಯಭಾಮೆಯು ಅದನ್ನು ಹೊಂದಲು ಯೋಗ್ಯಳು ಎಂದು ಕೃಷ್ಣನು ಹೇಳಿದನು. (ತಾಮ್ರ)

**ಲಬ್ಧ್ವಾ ರತ್ನಂ ದಾನಪತಿಃ ಸದೈವ**
**ಸಂದೀಕ್ಷಿತೋಽಭೂದ್ ಯಜ್ಞಕರ್ಮಣ್ಯತಂದ್ರಃ ।**
**ಪ್ರದರ್ಶ್ಯ ಕೃಷ್ಣೋ ಹಲಿನೇ ರತ್ನಮೇತತ್**
**ಶಕ್ರಪ್ರಸ್ಥಂ ಪಾಂಡವಸ್ನೇಹತೋಽಗಾತ್ ॥ ೪೩ ॥**

ಪದಚ್ಛೇದ :- ಲಬ್ಧ್ವಾ, ರತ್ನಂ, ದಾನಪತಿಃ, ಸದೈವ, ಸಂದೀಕ್ಷಿತಃ, ಅಭೂತ್, ಯಜ್ಞಕರ್ಮಣಿ, ಅತಂದ್ರಃ, ಪದರ್ಶ್ಯ, ಕೃಷ್ಣಃ, ಹಲಿನಃ, ರತ್ನಂ, ಏತತ್, ಶಕ್ರಪ್ರಸ್ಥಂ, ಪಾಂಡವಸ್ನೇಹತಃ, ಅಗಾತ್ ।

**ಅರ್ಥ :-** **ದಾನಪತಿ** = ದಾನಶ್ರೇಷ್ಠನಾದ ಅಕ್ರೂರನು, **ರತ್ನಂ** = ಸ್ಯಮಂತಕ ಮಣಿಯನ್ನು, **ಲಬ್ಧ್ವಾ** = ಪಡೆದು, **ಸದೈವ** = ಯಾವಾಗಲೂ,

**ಅತಂದ್ರಃ** = ಆಲಸ್ಯವಿಲ್ಲದೆ, **ಯಜ್ಞಕರ್ಮಣಿ** = ಯಾಗಕರ್ಮದಲ್ಲಿ, **ಸಂದೀಕ್ಷಿತಃ ಅಭೂತ್** = ದೀಕ್ಷೆಯುಳ್ಳವನಾದನು, **ಕೃಷ್ಣಃ** = ಕೃಷ್ಣನು, **ಹಲಿನಃ** = ಬಲರಾಮನಿಗೆ, **ಏತತ್ ರತ್ನಂ** = ಈ ಸ್ಯಮಂತಕ ಮಣಿಯನ್ನು, **ಪ್ರದರ್ಶ್ಯ** = ತೋರಿಸಿ, **ಪಾಂಡವಸ್ನೇಹತಃ** = ಪಾಂಡವರಲ್ಲಿಯ ಸ್ನೇಹದಿಂದ, **ಶಕ್ರಪ್ರಸ್ಥಂ** = ಇಂದ್ರಪ್ರಸ್ಥವನ್ನು, **ಅಗಾತ್** = ಹೊಂದಿದನು.

ತಾತ್ಪರ್ಯ :- ಅಕ್ರೂರನು ಆ ಸ್ಯಮಂತಕ ಮಣಿಯನ್ನು ಪಡೆದು. ಯಾವುದೇ ಆಲಸ್ಯವಿಲ್ಲದೆ, ದಾನಕರ್ಮಮಾಡುತ್ತಾ, ಯಜ್ಞಶೀಲನಾಗಿ, ಯಜ್ಞದಲ್ಲಿ ಬದ್ಧಾದರನಾಗಿದ್ದನು. ಶ್ರೀಕೃಷ್ಣನು ಬಲರಾಮನಿಗೆ ಆ ಮಣಿಯನ್ನು ತೋರಿಸಿ, ಪಾಂಡವರ ಮೇಲಿನ ಸ್ನೇಹದಿಂದ ಇಂದ್ರಪ್ರಸ್ಥವನ್ನು ಕುರಿತು ಹೊರಟನು.

**ವಸನ್ನಜಸ್ತತ್ರ ಬಹೂಂಶ್ಚ ಮಾಸಾನ್**
**ಸಫಲ್ಗುನೋಽಯಾನ್ಮೃಗಯಾಂ ಕದಾಚಿತ್ ।**
**ಹತ್ವಾ ಮೃಗಾನ್ ಯಮುನಾತೀರಸಂಸ್ಥಃ**
**ಸೋಽನ್ಯಾಂ ಕಾಳಿಂದೀಂ ದದೃಶೇ ತತ್ಸ್ವಸಾರಮ್ ॥ ೪೪ ॥**

ಪದಚ್ಛೇದ :- **ವಸನ್, ಅಜಃ, ತತ್ರ, ಬಹೂನ್, ಚ, ಮಾಸಾನ್, ಸಫಲ್ಗುನಃ, ಅಯಾತ್, ಮೃಗಯಾಂ, ಕದಾಚಿತ್, ಹತ್ವಾ, ಮೃಗಾನ್, ಯಮುನಾತೀರಸಂಸ್ಥಃ, ಸಃ, ಅನ್ಯಾಂ, ಕಾಳಿಂದೀಂ, ದದೃಶೆ, ತತ್ ಸ್ವಸಾರಮ್ ।**

ಅರ್ಥ :- **ತತ್ರ** = ಇಂದ್ರಪ್ರಸ್ಥನಲ್ಲಿ, **ಬಹೂನ್** = ಬಹಳ, **ಮಾಸಾನ್ ಚ** = ತಿಂಗಳುಗಳವರೆಗೆ, **ವಸನ್** = ವಾಸಮಾಡುತ್ತಾ, **ಕದಾಚಿತ್** = ಒಮ್ಮೆ, **ಮಗಯಾಂ ಚ** = ಬೇಟೆಗಾಗಿ, **ಅಯಾತ್** = ಹೋದನು, **ಮೃಗಾನ್** = ಪ್ರಾಣಿಗಳನ್ನು, **ಹತ್ವಾ** = ಕೊಂದು, **ಯಮುನಾತೀರಸಂಸ್ಥಃ** = ಯಮುನಾ ತೀರದಲ್ಲಿ ನಿಂತ, **ಸಃ** = ಆ ಕೃಷ್ಣನು, **ಅನ್ಯಾಂ** = ಯಮುನೆಯಲ್ಲದ, **ತತ್ ಸ್ವಸಾರಮ್** = ಅವಳ ತಂಗಿಯಾದ, **ಕಾಳಿಂದಿಂ** = ಕಾಳಿಂದಿಯನ್ನು, **ದದೃಶೆ** = ನೋಡಿದನು.

ತಾತ್ಪರ್ಯ :- ಶ್ರೀಕೃಷ್ಣನು ಇಂದ್ರಪ್ರಸ್ಥದಲ್ಲಿ ವಾಸಮಾಡುತ್ತಾ ಅನೇಕ ತಿಂಗಳವರೆಗೆ ಇದ್ದ. ಒಂದುದಿನ ಅರ್ಜುನನೊಂದಿಗೆ ಬೇಟೆಗೆ ಹೋದ.

ಮೃಗಗಳನ್ನು ಕೊಂದು ಯಮುನಾತೀರಕ್ಕೆ ಬಂದ. ಅಲ್ಲಿ ಯಮುನೆಯ ತಂಗಿಯಾದ ಕಾಳಿಂದಿಯನ್ನು ನೋಡಿದನು.

**ಸಾ ಸೂರ್ಯಪುತ್ರೀ ಯಮುನಾನುಜಾತಾ**
**ತಪಶ್ಚರಂತೀ ಕೃಷ್ಣಪತ್ನೀತ್ವಕಾಮಾ ।**
**ಪೃಷ್ಟಾಽರ್ಜುನೇನಾಽಹ ಸಮಸ್ತಮೇತತ್**
**ಪತ್ನೀಂ ಚ ತಾಂ ಜಗೃಹೇ ವಾಸುದೇವಃ ॥ ೪೫ ॥**

ಪದಚ್ಛೇದ :– ಸಾ, ಸೂರ್ಯಪುತ್ರೀ, ಯಮುನಾ, ಅನುಜಾತಾ, ತಪಃ, ಚರಂತೀ, ಕೃಷ್ಣಪತ್ನೀತ್ವಕಾಮಾ, ಪೃಷ್ಟಾ , ಅರ್ಜುನೇನ, ಆಹ, ಸಮಸ್ತಂ, ಏತತ್, ಪತ್ನೀಂ, ಚ, ತಾಂ, ಜಗೃಹೆ, ವಾಸುದೇವಃ।

**ಅರ್ಥ** :- **ಯಮುನಾನುಜಾತಾ** = ಯಮುನೆಯ ತಂಗಿಯಾದ, **ಸೂರ್ಯಪುತ್ರೀ** = ಸೂರ್ಯನ ಮಗಳಾದ, **ಸಾ** = ಕಾಳಿಂದಿಯು, **ಕೃಷ್ಣಪತ್ನಿತ್ವ ಕಾಮಾ** = ಕೃಷ್ಣನ ಹೆಂಡತಿಯಾಗಬಯಸಿ, **ತಪಃ** = ತಪಸ್ಸನ್ನು, **ಚಿರಂತೀ** = ಆಚರಿಸುತ್ತಿರಲು, **ಅರ್ಜುನೇನ** = ಅರ್ಜುನನಿಂದ, **ಪೃಷ್ಟಾ** = ಕೇಳಲ್ಪಟ್ಟ ಕಾಳಿಂದಿಯು, **ಏತತ್‌ಸಮಸ್ತಂ** = ತನ್ನ ವೃತ್ತಾಂತವನ್ನು, **ಆಹ** = ಹೇಳಿದಳು, **ತಾಂ ಚ** = ಆ ಕಾಳಿಂದಿಯನ್ನು, **ಪತ್ನೀಂ** = ಪತ್ನಿಯನ್ನಾಗಿ, **ವಾಸುದೇವ** = ಶ್ರೀಕೃಷ್ಣನು, **ಜಗೃಹೆ** = ಸ್ವೀಕರಿಸಿದನು.

**ತಾತ್ಪರ್ಯ** :- ಸೂರ್ಯನ ಮಗಳಾದ ಯಮುನೆಯ ತಂಗಿಯಾದ ಆ ಕಾಳಿಂದಿಯು ಶ್ರೀಕೃಷ್ಣನನ್ನು ತನ್ನ ಪತಿಯನ್ನಾಗಿಸಿಕೊಳ್ಳಲು, ತಪಸ್ಸನ್ನು ಆಚರಿಸುತ್ತಿದ್ದಳು. ಅರ್ಜುನನು ಅವಳನ್ನು ಕೇಳಿದಾಗ, ಅವಳು ತನ್ನ ವೃತ್ತಾಂತವನ್ನು ಹೇಳಿದನು. ಶ್ರೀಕೃಷ್ಣನನ್ನು ಅವಳನ್ನು ಪತ್ನಿಯನ್ನಾಗಿ ಸ್ವೀಕರಿಸಿದನು.

**ತತೋ ಗತ್ವಾ ನಗ್ನಜಿತೋ ಗೃಹಂ ಚ**
**ಸ್ವಯಂಬರೇ ಸಪ್ತ ವೃಷಾನಗೃಹ್ಣಾತ್ ।**
**ಸರ್ವೈರಗ್ರಾಹ್ಯಾನಸುರಾನ್ ವರೇಣ**
**ಶಿವಸ್ಯ ಯೈರ್ನಿರ್ಜಿತಾ ಭೂಮಿಪಾಲಾಃ ॥ ೪೬ ॥**

**ಪದಚ್ಛೇದ :- ತತಃ, ಗತ್ವಾ, ನಗ್ನಜಿತಃ, ಗೃಹಂ, ಚ, ಸ್ವಯಂವರೆ, ಸಪ್ತ, ವೃಷಾನ್, ಅಗೃಹ್ಣಾತ್, ಸರ್ವೈಃ, ಅಗ್ರಹ್ಯಾನ್, ಅಸುರಾನ್, ವರೇಣ, ಶಿವಸ್ಯ, ಯೈಃ, ನಿರ್ಜಿತಾಃ, ಭೂಮಿಪಾಲಾಃ ।**

**ಅರ್ಥ** :- **ತತಃ** = ಕಾಳಿಂದಿ ವಿವಾಹಾನಂತರ, **ನಗ್ನಜಿತಃ** = ನಗ್ನಜಿತ್ ಎಂಬ ರಾಜನ, **ಗೃಹಂ** = ಅರಮನೆಯನ್ನು ಕುರಿತು, **ಗತ್ವಾ** = ಹೋಗಿ, **ಸ್ವಯಂಬರೇ** = ಸ್ವಯಂವರದಲ್ಲಿಯಾದರೋ, **ಶಿವಸ್ಯ** = ರುದ್ರನ, **ವರೇಣ** = ವರದಿಂದ, **ಅಗೃಹ್ಯಾನ್** = ಬಂಧಿಸಲಸಾಧ್ಯವಾದ, **ಅಸುರಾನ್** = ರಾಕ್ಷಸರಾದ, **ಯೈಃ** = ಯಾವ ವೃಷಭಗಳಿಂದ, **ಭೂಮಿಪಾಲಾಃ** = ರಾಜರುಗಳು, **ನಿರ್ಜಿತಾಃ** = **ಸೋಲಿಸಲ್ಪಟ್ಟಿದ್ದರು**, **ತಾನ್** = ಅಂತಹ, **ಸಪ್ತ** = ಏಳು, **ವೃಷಾನ್** = ಎತ್ತುಗಳನ್ನು, **ಅಗೃಹ್ಣಾತ್** = ಬಂಧಿಸಿದನು.

**ತಾತ್ಪರ್ಯ** :- ಬಳಿಕ ಶ್ರೀಕೃಷ್ಣ ನಗ್ನಜಿತ್ ರಾಜನ ಅರಮನೆಗೆ ಹೋಗಿ ಸ್ವಯಂವರದಲ್ಲಿ ಏಳು ಗೂಳಿಗಳನ್ನು ಹಿಡಿದು ಕಟ್ಟಿದ. ಶಿವನ ವರದಿಂದ ರಾಜರನ್ನು ಪರಾಭವಗೊಳಿಸಿದ, ದೈತ್ಯಸ್ವರೂಪದ ಗೂಳಿಗಳು ಅವು ಯಾರಿಗೂ ಹಿಡಿಯಲಾದ ಶಕ್ಯವಾಗಿರಲಿಲ್ಲ.

**ತತೋ ನೀಲಾಂ ತಸ್ಯ ಸುತಾಂ ಚ ಲೇಭೇ**
**ಪೂರ್ವಂ ನೀಲಾ ಗೋಪಕನ್ಯಾಽಪಿ ಯಾಽಸೀತ್ ।**
**ಸಾ ದೇಹೇಽಸ್ಯಾಃ ಪ್ರಾವಿಶತ್ ಪೂರ್ವಮೇಷಾ**
**ಯಸ್ಮಾದೇಕಾ ದ್ವಿವಿಧಾ ಸಂಪ್ರಜಾತಾ ॥ ೪೭ ॥**

**ಪದಚ್ಛೇದ** :- **ತತಃ, ನೀಲಾಂ, ತಸ್ಯ, ಸುತಾಂ, ಚ, ಲೇಭೇ, ಪೂರ್ವಂ, ನೀಲಾ, ಗೋಪಕನ್ಯಾ, ಅಪಿ, ಯಾ, ಆಸೀತ್, ಸಾ, ದೇಹೇ, ಅಸ್ಯಾಃ, ಪ್ರಾವಿಶತ್, ಪೂರ್ವಂ, ಉಷಾ, ಯಸ್ಮಾದ್, ಏಕಾ, ದ್ವಿವಿಧಾ, ಸಂಪ್ರಜಾತಾ ।**

**ಅರ್ಥ** :- **ತತಃ** = ಸ್ವಯಂವರ ಗೆದ್ದ ನಂತರ, **ತಸ್ಯ** = ನಗ್ನಜೀತನ, **ಸುತಾಂ** = ಮಗಳಾದ, **ನೀಲಾಂ** = ನೀಲಾಳನ್ನು, **ಲೇಭೆ** = ಹೊಂದಿದನು, **ಪೂರ್ವ** = ಹಿಂದೆ, **ಯಾಃ ನೀಲಾ** = ಯಾವ ನೀಲೆಯು, **ಗೋಪಿಕನ್ಯಾಪಿ** = ಕುಂಭಕನೆಂಬ ಗೋಪನ ಮಗಳೂ, **ಆಸೀತ್** = ಆಗಿದ್ದಳು, **ಯಸ್ಮಾತ್** = ಯಾವ ಕಾರಣದಿಂದ, **ಉಷಾ** = ನೀಲೆಯು, **ಏಕಾ** = ಒಬ್ಬಳೆ, **ಪೂರ್ವಂ** = ಹಿಂದೆ,

**ದ್ವಿವಿಧಾ** = ಎರಡು ರೂಪದಿಂದ, **ಸಂಪ್ರಜಾತಾ** = ಹುಟ್ಟಿದಳೂ, **ಸಾ** = ಆ ನೀಲೆಯು, **ಅಸ್ಯಾಃ** = ಈ ನಗ್ನಜೀತನ, **ತಸ್ಮಾತ್** = ಆ ಕಾರಣದಿಂದ ಒಂದೆ ಆದಳು.

**ತಾತ್ಪರ್ಯ** :- ಶ್ರೀಕೃಷ್ಣ ಹೀಗೆ ನಗ್ನಜೀತನ ಮಗಳಾದ ನೀಲೆಯನ್ನು ಗೆದ್ದುಕೊಂಡ. ಹಿಂದೆ ಇದ್ದ ನೀಲೆ ಎಂಬ ಕುಂಭಕನೆಂಬ ಗೋಪಿಕನ್ಯೆಯು ಹಿಂದೆಯೆ ಇವಳ ದೇಹದಲ್ಲಿ ಸೇರಿ ಒಂದಾಗಿದ್ದಳು. ಏಕೆಂದರೆ ಅವಳು ಒಬ್ಬಳೇ ಎರಡು ರೂಪಗಳಿಂದ ಹುಟ್ಟಿದ್ದು.

**ವಿವರಣೆ** :- ಎರಡನೇ ಶರೀರ ಹುಟ್ಟಿದಾಗ, ಆ ಶರೀರ ಈ ಶರೀರ ಒಟ್ಟಾಯಿತು, ಹೀಗೆ ಶರೀರೈಕ್ಯವನ್ನೇ ಪ್ರಾಚೀನರು ಹೇಳುತ್ತಾರೆ. (ಗೀತಾಭಾಷ್ಯಟೀಕೆ)

**ಪಿತೃಷ್ವಸುರ್ಮಿತ್ರವಿಂದಾ ಸುತಾ ಚ**
**ಕೃಷ್ಣೇ ಮಾಲಾಮಾಸಜದ್ ರಾಜಮಧ್ಯೇ ।**
**ವಿಂದಾನುವಿಂದೌ ಭ್ರಾತರಾವೇವ ತಸ್ಯಾ**
**ನ್ಯಷೇಧತಾಂ ಧಾರ್ತರಾಷ್ಟ್ರಾರ್ಥಮುಗ್ರೌ ॥ ೪೮ ॥**

**ಪದಚ್ಛೇದ :- ಪಿತೃಷ್ವಸುಃ, ಮಿತ್ರವಿಂದಾ, ಸುತಾ, ಚ, ಕೃಷ್ಣೆ, ಮಾಲಾಂ, ಆಸಜತ್, ರಾಜಮಧ್ಯೇ, ವಿಂದಾನುವಿಂದೌ, ಭ್ರಾತರೌ, ಏವ, ತಸ್ಯಾಃ, ನ್ಯಷೇಧತಾಂ, ಧಾರ್ತರಾಷ್ಟ್ರಾರ್ಥಂ, ಉಗ್ರೌ ।**

**ಅರ್ಥ** :- **ಪಿತೃಷ್ವಸುಃ** = ಸೋದರತ್ತೆ ರಾಜಾಧಿದೇವಿಯ, **ಸುತಾ** = ಮಗಳಾದ, **ಮಿತ್ರವಿಂದಾ ಚ** = ಮಿತ್ರವಿಂದೆಯು, **ರಾಜಮಧ್ಯೆ** = ಅನೇಕ ರಾಜರ ಮಧ್ಯದಲ್ಲಿ, **ಕೃಷ್ಣೇ** = ಕೃಷ್ಣನಲ್ಲಿ, **ಮಾಲಾಂ** = ಹಾರವನ್ನು, **ಆಸಜತ್** = ಸಮರ್ಪಿಸಿದಳು, **ತಸ್ಯಾಃ** = ಆ ಮಿತ್ರವಿಂದೆಯ, **ಉಗ್ರೌ** = ಕ್ರೂರಿಗಳಾದ, **ಭಾತರೌ ಏವ** = ಸೋದರರೇ ಆದ, **ವಿಂದಾನುವಿಂದೌ** = ವಿಂದಾನುವಿಂದರು, **ಧಾರ್ತರಾಷ್ಟ್ರಾರ್ಥಂ** = ದುರ್ಯೋಧನನಿಗೆ ಕೊಡುವ ಉದ್ದೇಶದಿಂದ, **ನ್ಯಷೇಧತಾಂ** = ಕೃಷ್ಣನನ್ನು ತಡೆದರು.

**ತಾತ್ಪರ್ಯ** :- ಸೋದರತ್ತೆಯ ಮಗಳು ಮಿತ್ರವಿಂದೆಯೂ ರಾಜರ ಮಧ್ಯದಲ್ಲಿ ಕೃಷ್ಣನ ಕೊರಳಿಗೆ ಮಾಲೆ ಹಾಕಿದಳು. ಅವಳ ಸೋದರರಾದ

ಕ್ರೂರಿಗಳಾದ ವಿಂದಾನುವಿಂದರು, ಅವಳನ್ನು ದುರ್ಯೋಧನನಿಗೆ ಕೊಡಲು ಇಚ್ಛಿಸಿ ಕೃಷ್ಣನನ್ನು ತಡೆದರು.

**ಜಿತ್ವಾಽವಂತ್ಯೌ ತೌ ನೃಪತೀಂಶ್ಚೈವ ಸರ್ವಾ-**
**ನಾದಾಯ ತಾಂ ಪ್ರಯಯೌ ವಾಸುದೇವಃ ।**
**ಪಿತೃಷ್ವಸುಸ್ತನಯಾಂ ಚ ದ್ವಿತೀಯಾಂ**
**ಭದ್ರಾಂ ದತ್ತಾಮಗ್ರಹೀದ್ ಭ್ರಾತೃಭಿ ಸಃ ॥ ೪೯ ॥**

**ಪದಚ್ಛೇದ :– ಜಿತ್ವಾ, ಅವಂತ್ಯೊ, ತೌ, ನೃಪತೀನ್, ಚ, ಏವ, ಸರ್ವಾನ್, ಆದಾಯ, ತಾಂ ಪ್ರಯಯೌ, ವಾಸುದೇವಃ, ಪಿತೃಷ್ವಸುಃ, ತನಯಾಂ, ಚ, ದ್ವಿತೀಯಾಂ, ಭದ್ರಾಂ, ದತ್ತಾಂ, ಅಗ್ರಹೀತ, ಭಾತೃಭಿಃ, ಸಃ ।**

**ಅರ್ಥ :- ತೌ ಅವಂತ್ಯೌ** = ಅವಂತೀ ದೇಶದ ರಾಜಕುಮಾರರಾದ ವಿಂದಾನುವಿಂದರನ್ನು, **ಸರ್ವಾನ್** = ಎಲ್ಲಾ, **ನೃಪತಿನ್ ಚ** = ರಾಜರನ್ನೂ, **ಜಿತ್ವಾ** = ಗೆದ್ದು, **ತಾಂ** = ಮಿತ್ರವಿಂದೆಯನ್ನು, **ಆದಾಯ** = ಕರೆದುಕೊಂಡು, **ವಾಸುದೇವಃ** = ಕೃಷ್ಣನು, **ಪ್ರಯಯೌ** = ಹೋದನು, **ದ್ವಿತೀಯಾಂ** = ಇನ್ನೊಬ್ಬ **ಪಿತೃಷ್ವಸುಃ** = ಸೋದರತ್ತೆಯ, **ತನಯಾಂ** = ಮಗಳಾದ, **ಭಾತೃಭಿಃ** = ಅವಳ ತಮ್ಮಂದಿರಿಂದ, **ದತ್ತಾಂ** = ಕೊಡಲ್ಪಟ್ಟ, **ಭದ್ರಾಂ** = ಭದ್ರಾಳನ್ನು, **ಸಃ ಚ** = ಕೃಷ್ಣನೂ, **ಅಗೃಹೀತ್** = ಸ್ವೀಕರಿಸಿದನು.

**ತಾತ್ಪರ್ಯ :-** ಶ್ರೀಕೃಷ್ಣ ಅವಂತಿ ರಾಜಕುಮಾರರಾದ ಆ ವಿಂದ ಅನುವಿಂದರನ್ನೂ ಬೇರೆ ಎಲ್ಲಾ ರಾಜರನ್ನೂ ಗೆದ್ದು ಮಿತ್ರವಿಂದೆಯನ್ನು ಕರೆದುಕೊಂಡು ಹೋದ. ಇನ್ನೊಬ್ಬ ಸೋದರತ್ತೆಯ ಮಗಳು ಭದ್ರೆಯನ್ನು ಅವಳ ಸೋದರರೆ ಕೊಟ್ಟರು. ಶ್ರೀಕೃಷ್ಣ ಸ್ವೀಕರಿಸಿದ.

**ವಿಶ್ವೇಷಾಂ ದೇವಾನಾಮವತಾರಾ ಹಿ ಪಂಚ**
**ತೇ ಕೈಕೇಯಾ ಭ್ರಾತರೋಽಸ್ಯಾ ಹರೇಶ್ಚ ।**
**ಭಕ್ತಾ ನಿತ್ಯಂ ಪಾಂಡವಾನಾಂ ಚ ತಾತೋಽ-**
**ಪ್ಯೇಷಾಂ ವಶೇ ಶೈಬ್ಯನಾಮಭೂರ್ರಗ್ರೇ ॥ ೫೦ ॥**

ಪದಚ್ಛೇದ :- ವಿಶ್ವೇಷಾಂ, ದೇವಾನಾಂ, ಅವತಾರಾಃ, ಹಿ, ಪಂಚ, ತೇ, ಕೈಕಯಾ, ಭ್ರಾತರಃ, ಅಸ್ಯಾಃ, ಹರೇಃ, ಚ, ಭಕ್ತಾ, ನಿತ್ಯಂ, ಪಾಂಡವಾನಾಂ, ಚ, ತತಃ, ಅಪಿ, ಏಷಾಂ, ವಶೇ, ಶೈಬ್ಯನಾಮ, ಋಭುಃ, ಅಗ್ರೇ ।

**ಅರ್ಥ :-** **ಅಸ್ಯಾಃ** = ಭದ್ರಾಳ, **ಭ್ರಾತರಃ** = ತಮ್ಮಂದಿರು, **ಪಂಚ** = ಐದುಜನ, **ಕೈಕಯಾ** = ಕೇಕಯ ದೇಶದಲ್ಲಿ ಜನಿಸಿದವರು, **ಏತೇ** = ಐದು ಜನ, **ವಿಶ್ವೇಷಾಂ ದೇವಾನಾಂ** = ವಿಶ್ವ ದೇವತೆಗಳ, **ಅವತಾರಾಃ** = ಅವತಾರಭೂತರು, **ನಿತ್ಯಂ** = ಯಾವಾಗಲೂ, **ಹರೇಃ ಚ** = ಶ್ರೀಹರಿಯ, **ಪಾಂಡವಾನಾಂ ಚ** = ಪಾಂಡವರ, **ಭಕ್ತಾಃ** = ಭಕ್ತರು, **ಅಗ್ರೇ** = ಪೂರ್ವದಲ್ಲಿ, **ಋಭುಃ** = ಋಭ ಎಂಬ ದೇವನಾದ, **ಶೈಬ್ಯನಾಮ** = ತಂದೆಯಾದ ಶೈಬ್ಯನು, **ಏಷಾಂ** = ಕೇಕಯರ, **ವಶೇ** = ಅಧೀನದಲ್ಲಿರುವ.

**ತಾತ್ಪರ್ಯ :-** ವಿಶ್ವದೇವತೆಗಳ ಅವತಾರಭೂತರಾದ ಐವರು ಕೇಕಯ ರಾಜಕುಮಾರರು, ಭದ್ರೆಯ ಸೋದರರರು, ಸದಾ ವಿಷ್ಣುವಿನ ಭಕ್ತರು ಪಾಂಡವರಿಗೂ ಭಕ್ತರು. ಇವರ ತಂದೆ ಶೈಬ್ಯ. ಹಿಂದೆ ಋಭು ಎಂಬ ದೇವ ಶೈಬ್ಯನು ಕೇಕಯರ ವಶದಲ್ಲಿದ್ದ.

**ಸ್ವಯಂಬರೋ ಲಕ್ಷಣಾಯಾಸ್ತಥಾಽಽಸೀದ್**
**ಯಥಾ ದ್ರೌಪದ್ಯಾ ಲಕ್ಷವೇಧಾತ್ಮಕಃ ಸಃ ।**
**ಮದ್ರೇಷು ತಸ್ಯಾಶ್ಚ ಪಿತಾ ಪಿನಾಕಂ**
**ಸ್ವಯಂಬರಾರ್ಥಂ ಜಗೃಹೇ ಗಿರೀಶಾತ್ ॥ ೫೧ ॥**

ಪದಚ್ಛೇದ :- ಸ್ವಯಂವರಃ, ಲಕ್ಷಣಾಯಾಃ, ತಥಾ, ಆಸೀತ್, ಯಥಾ, ದ್ರೌಪದ್ಯಾಃ, ಲಕ್ಷವೇಧಾತ್ಮಕಃ, ಸಃ, ಮದ್ರೇಷು, ತಸ್ಯಾಃ, ಚ, ಪಿತಾ, ಪಿನಾಕಂ, ಸ್ವಯಂವರಾರ್ಥಂ, ಜಗೃಹಿ, ಗಿರೀಶಾತ್ ।

**ಅರ್ಥ :-** **ಮದ್ರೇಷು** = ಮದ್ರದೇಶದಲ್ಲಿ, **ಲಕ್ಷಣಾಯಾಃ** = ಲಕ್ಷಣೆಯ, **ಸ್ವಯಂವರಃ** = ಸ್ವಯಂವರವು, **ಆಸೀತ್** = ಇದ್ದೀತು, **ಸಃ** = ಸ್ವಯಂವರವು, **ಯಥಾ** = ಯಾವ ರೀತಿಯಲ್ಲಿ, **ದ್ರೌಪಾದ್ಯಃ** = ದ್ರೌಪದದೇವಿಯ ಸ್ವಯಂವರವು, **ಲಕ್ಷ್ಯವೇಧಾತ್ಮಕಃ** = ಲಕ್ಷ್ಯಭೇಧವುಳ್ಳದ್ದಾಗಿತ್ತೊ, **ತಥಾ** = ಹಾಗೆಯೆ, (**ಆಸೀತ್** = ಇದ್ದಿತು) **ತಸ್ಯಾಃ** = ಆ ಲಕ್ಷಣೆಯ, **ಪಿತಾ ಚ** =

ತಂದೆಯಾದರೂ, ಸ್ವಯಂಬರಾರ್ಥಂ = ಸ್ವಯಂ ವರಕ್ಕೋಸ್ಕರ, ಗಿರೀಶಾತ್ = ರುದ್ರನಿಂದ, ಪಿನಾಕಂ = ಧನುಸ್ಸನ್ನು, ಜಗೃಹೇ = ತೆಗೆದುಕೊಂಡನು.

ತಾತ್ಪರ್ಯ :- ಮದ್ರದೇಶದಲ್ಲಿ ಲಕ್ಷಣೆಯ ಸ್ವಯಂವರ ಇತ್ತು. ದ್ರೌಪದಿಯ ಸ್ವಯಂವರದಲ್ಲಿ ಹೇಗೆ ಮತ್ಸ್ಯಯಂತ್ರಭೇದಿಸುವ ಗುರಿಯಿತ್ತು, ಹಾಗೆ ಲಕ್ಷಣೆಯ ಸ್ವಯಂವರದಲ್ಲಿ ಲಕ್ಷ್ಯಭೇದ ಮಾಡುವ ಸ್ಪರ್ಧೆಯಿತ್ತು. ಲಕ್ಷಣೆಯ ತಂದೆಯಾದ ಬೃಹತ್ಸನನು ಅವಳ ಸ್ವಯಂವರಕ್ಕಾಗಿ ರುದ್ರನಿಂದ ಧನುಸ್ಸನ್ನು ಪಡೆದಿದ್ದನು.

**ಲಕ್ಷಂ ಚ ತತ್ ಸರ್ವತಶ್ಛನ್ನಮೇವ**
**ದ್ವಾರಂ ಶರಸ್ಯಾಪ್ಯುಪರಿ ಸ್ಮ ಲಕ್ಷಾತ್ ।**
**ಛಿನ್ನೇಷುಣಾ ಪಾತನೀಯಂ ಚ ತದ್ಧಿ**
**ದ್ರೌಪದ್ಯರ್ಥಾತ್ ತದಶಕ್ಯಂ ತತೋಽಲಮ್ ॥ ೩೨ ॥**

**ಪದಚ್ಛೇದ :-** ಲಕ್ಷ್ಯಂ, ಚ, ತತ್ಂ ಸರ್ವತಃ, ಛಿನ್ನಮ್, ಏವ, ದ್ವಾರಂ, ಚ, ತಸ್ಯ, ಅಪಿ, ಉಪರಿ ಸ್ಮ, ಲಕ್ಷಾತ್, ಛಿನ್ನೇಷುಣಾ, ಪಾತನೀಯಂ, ಚ, ತತ್, ಹಿ, ದ್ರೌಪದ್ಯರ್ಥಾತ್, ತತ್, ಅಶಕ್ಯಂ, ತತಃ, ಅಲಂ ।

ಅರ್ಥ :- ತತ್ ಲಕ್ಷ್ಯಂ ಚ = ಆ ಲಕ್ಷ್ಯವಾದರೂ, ಸರ್ವತಃ = ಎಲ್ಲಾ ಕಡೆಯಿಂದಲೂ, ಛಿನ್ನಮೇವ = ಮುಚ್ಚಲ್ಪಟ್ಟಿತ್ತು, ತಸ್ಯ = ಆ ಲಕ್ಷ್ಯದ, ದ್ವಾರಂ = ದ್ವಾರವು, ಲಕ್ಷಾತ್ = ಲಕ್ಷ್ಯಕ್ಕಿಂತ, ಉಪರಿಸ್ಮ = ಮೇಲುಗಡೆ ಇತ್ತು, ತತ್ ಚ = ಆ ಲಕ್ಷ್ಯವಾದರೂ, ಛಿನ್ನೇಷ್ಣುನಾ = ತುಂಡಾದ ಬಾಣದಿಂದ, ಪಾತನೀಯಂ ಹಿ = ಭೇದಿಸಲ್ಪಡಬೇಕಿತ್ತಷ್ಟೆ, ದ್ರೌಪದ್ಯಾರ್ಥಾತ್ = ದ್ರೌಪದಿಯ ಸ್ವಯಂವರದ ಲಕ್ಷ್ಯಕ್ಕಿಂತ, ತತ್ = ಲಕ್ಷಣೆಯ ಸ್ವಯಂವರದ ಲಕ್ಷ್ಯಭೇದವು, ಅಲಮ್ ಅಶ್ಯಕ್ಯಂ = ದುಃಶಕವಾಗಿದ್ದಿತ್ತು.

ತಾತ್ಪರ್ಯ :- ಆ ಲಕ್ಷ್ಯವು ಎಲ್ಲಾ ದಿಕ್ಕುಗಳಿಂದ ಮುಚ್ಚಿತ್ತು. ಆ ಲಕ್ಷ್ಯದ ದ್ವಾರವು ಲಕ್ಷ್ಯಕ್ಕಿಂತ ಮೇಲ್ಭಾಗದಲ್ಲಿತ್ತು. ಆ ಲಕ್ಷ್ಯವನ್ನು ತುಂಡಾದ ಬಾಣದಿಂದ ಭೇದಿಸಬೇಕಿತ್ತು. ಆ ಲಕ್ಷಣ್ಯವು ದ್ರೌಪದಿಯ ಸ್ವಯಂವರದ ಲಕ್ಷ್ಯಕ್ಕಿಂತ ಕಠಿಣವಾಗಿತ್ತು.

ತತ್ರಾऽಜಗ್ಮುರ್ಮಾಗಧಾದ್ಯಾಶ್ಚ ಸರ್ವೇ
ಪಾರ್ಥಾ ಅಪಿ ದ್ರಷ್ಟುಮಿಹಾಭ್ಯುಪಾಯಯುಃ ।
ದುರ್ಯೋಧನಾದ್ಯಾಶ್ಚ ಸಸೂತಪುತ್ರಾ
ಸಜ್ಜೀಕರ್ತುಂ ಧನುರಪ್ಯುತ್ಸಹಂತೇ ॥ ೫೩ ॥

ಪದಚ್ಛೇದ :- ತತ್ರ, ಅಜಗ್ಮುಃ, ಮಾಗದಾದ್ಯಾಃ, ಚ, ಸರ್ವೇ, ಪಾರ್ಥಾಃ, ಅಪಿ, ದೃಷ್ಟುಂ, ಇಹ, ಅಭ್ಯುಪಾಯಯುಃ, ದುರ್ಯೋಧನಾದ್ಯಾಃ, ಚ, ಸಸೂತಪುತ್ರಾಃ, ಸಜ್ಜೀಕರ್ತುಂ, ಧನುಃ, ಅಪಿ, ಉತ್ಸಹಂತೇ ।

**ಅರ್ಥ** :- **ತತ್ರ** = ಆ ಸ್ವಯಂವರದಲ್ಲಿ, **ಮಾಗದಾದ್ಯಾಃ** = ಜರಾಸಂಧಾದಿಗಳು, **ಸಸೂತಪುತ್ರಾಃ** = ಸೂತ ಪುತ್ರಾದಿಗಳಿಂದ ಸಹಿತರಾದ, **ಸರ್ವೇ** = ಎಲ್ಲಾ, **ದುರ್ಯೋಧನಾದ್ಯಾಃ** = ದುರ್ಯೋಧನ ಮೊದಲಾದವರು, **ಆಜಗ್ಮುಃ** = ಆಗಮಿಸಿದರು, **ಧನುಃ ಅಪಿ** = ಧನುಸ್ಸನ್ನು, **ಸಜ್ಜೀಕರ್ತುಂ** = ಹೆದೆಗೇರಿಸಲು, **ಉತ್ಸಹಂತೇ** = ಉತ್ಸಾಹ ಉಳ್ಳವರಾಗಿದ್ದರು, **ಪಾರ್ಥಾಃ ಅಪಿ** = ಪಾಂಡವರೂ ಕೂಡ, **ಇಹ** = ಸ್ವಯಂವರವನ್ನು, **ದೃಷ್ಟುಂ** = ನೋಡಲು, **ಅಭುಪಾಯಯುಃ** = ಆಗಮಿಸಿದರು.

**ತಾತ್ಪರ್ಯ** :- ಆ ಸ್ವಯಂವರಕ್ಕೆ ಜರಾಸಂಧ ಮುಂತಾದ ಎಲ್ಲ ರಾಜರೂ ಬಂದರು. ಪಾಂಡವರು ನೋಡಲು ಬಂದಿದ್ದರು. ಕರ್ಣ ದುರ್ಯೋಧನಾದಿಗಳು ಬಿಲ್ಲಿಗೆ ಹೆದೆಯೇರಿಸಲು ಯತ್ನಿಸಿದರು.

ಕೇಚಿನ್ನಿಪೇತುರ್ಧನುಷೈವ ತಾಡಿತಾ
ನವೈ ಕೇಚಿಚ್ಚಾಲಯಿತುಂ ಚ ಶೇಕುಃ ।
ದುರ್ಯೋಧನೋ ಮಾಗಧಃ ಸೂತಪುತ್ರಃ
ಸಜ್ಯಂ ಕೃತ್ವಾ ಲಕ್ಷವೀಕ್ಷಾಂ ನ ಶೇಕುಃ ॥ ೫೪ ॥

ಪದಚ್ಛೇದ :- ಕೇಚಿತ್, ನಿಪೇತುಃ, ಧನುಷಾ, ಏವ, ತಾಡಿತಾಃ, ನ, ವೈ, ಕೇಚಿತ್, ಚಾಲಯಿತುಂ, ಚ, ಶೇಕುಃ, ದುರ್ಯೋಧನಃ, ಮಾಗಧಃ, ಸೂತಪುತ್ರಃ, ಸಜ್ಯಂ, ಕೃತ್ವಾ, ಲಕ್ಷ್ಯವೀಕ್ಷಾಂ, ನ, ಶೇಕುಃ ।

**ಅರ್ಥ** :- **ಕೇಚಿತ್** = ಕೆಲವೊಬ್ಬರು, **ಧನುಷಾ ಏವ** = ಧನುಸ್ಸನಿಂದಲೇ, **ತಾಡಿತಾಃ** = ಹೊಡೆಯಲ್ಪಟ್ಟವರಾಗಿ, **ನಿಪೇತುಃ** = ಬಿದ್ದರು, **ಕೇಚಿತ್** = ಕೆಲವೊಬ್ಬರು, **ಚಾಲಯಿತುಂ ಚ** = ಅಲುಗಾಡಿಸಲು ಕೂಡ, **ನ ವೈ ಶೇಕುಃ** = ಸಮರ್ಥರಾಗಲಿಲ್ಲವಷ್ಟೇ, **ದುರ್ಯೋಧನಃ** = ದುರ್ಯೋಧನನು, **ಮಾಗಧಃ** = ಜರಾಸಂಧನು, **ಸೂತಪುತ್ರಃ** = ಕರ್ಣನು, **ಸಜ್ಯಂ ಕೃತ್ವಾ** = ಹೆದೆಯೇರಿಸಿ, **ಲಕ್ಷವೀಕ್ಷಾಂ (ಕರ್ತುಂ)** = ಲಕ್ಷವನ್ನು ನೋಡಲು, **ನ ಶೇಕುಃ** = ಸಮರ್ಥರಾಗಲಿಲ್ಲ.

**ತಾತ್ಪರ್ಯ** :- ಕೆಲವೊಬ್ಬರು ಧನುಸ್ಸನ್ನು ಹೆದೆಯೇರಿಸಲು ಹೋಗಿ ಆ ಧನುಸ್ಸಿನಿಂದಲೇ ಹೊಡೆಸಿಕೊಂಡು ಕೆಳಗೆ ಬಿದ್ದರು. ಕೆಲವರು ಧನುಸ್ಸನ್ನು ಅಲುಗಾಡಿಸಲೂ ಇಲ್ಲ. ದುರ್ಯೋಧನ ಜರಾಸಂಧ ಕರ್ಣರು ಬಿಲ್ಲನ್ನು ಹೆದೆಯೇರಿಸಿದರೂ, ಲಕ್ಷವನ್ನು ನೋಡಲು ಸಮರ್ಥರಾಗಲಿಲ್ಲ.

**ಧನಂಜಯಃ ಸ್ವಾತ್ಮಬಲಂ ಪ್ರಕಾಶಯನ್**
**ಸಜ್ಯಂ ಕೃತ್ವಾ ಧನುರೈಕ್ಷಚ್ಚ ಲಕ್ಷಮ್ ।**
**ನೈವಾಽದದೇ ಬಾಣಮನಿಚ್ಛಯೈವ ತತ್**
**ಪ್ರಾಪ್ಯಾಂ ಜಾನನ್ ಕೇಶವೇನೈವ ತಾಂ ಚ ।। ೫೫ ।।**

ಪದಚ್ಛೇದ :- ಧನಂಜಯಃ, ಸ್ವಾತ್ಮಬಲಂ, ಪ್ರಕಾಶಯನ್, ಸಜ್ಯಂ, ಕೃತ್ವಾ, ಧನುಃ, ಐಕ್ಷತ್, ಚ, ಲಕ್ಷಮ್, ನ, ಏಮ, ಆದದೆ, ಬಾಣಂ, ಆನಿಚ್ಛಯಾ, ಏವ, ತತ್, ಪ್ರಾಪ್ಯಾಂ, ಜಾನನ್, ಕೇಶವೇನ, ಏವ, ತಾಂ, ಚ ।

**ಅರ್ಥ** :- **ಧನಂಜಯಃ** = ಅರ್ಜುನ, **ಸ್ವಾತ್ಮಬಲಂ** = ತನ್ನ ಶಕ್ತಿಯನ್ನು, **ಪ್ರಕಾಶಯನ್** = ಪ್ರಕಟಪಡಿಸುತ್ತಾ, **ಧನುಃ** = ಬಿಲ್ಲನ್ನು, **ಸಜ್ಯಂ ಕೃತ್ವಾ** = ಹೆದೆಯೇರಿಸಿ, **ಲಕ್ಷಂ ಚ** = ಲಕ್ಷವನ್ನು, **ಐಕ್ಷತ್** = ನೋಡಿದನು, **ಅನಿಚ್ಛಯಾ ಏವ** = ಕನ್ಯೆಯನ್ನು ಇಚ್ಛಿಸದೆಯೇ, **ತಾಂ ಚ** = ಆ ಲಕ್ಷಣೆಯನ್ನಾದರೂ, **ಕೇಶವೇನ ಏವ** = ಕೃಷ್ಣನಿಂದಲೇ, **ಪ್ರಾಪ್ಯಂ** = ಹೊಂದಲ್ಪಡುವಳನ್ನಾಗಿ, **ಜಾನನ್** = ತಿಳಿದವನಾಗಿ, **ಬಾಣಂ** = ಬಾಣವನ್ನು, **ನೈವ ಆದದೆ** = ತೆಗೆದುಕೊಳ್ಳಲಿಲ್ಲ.

ತಾತ್ಪರ್ಯ :- ಅರ್ಜುನ ತನ್ನ ಬಲವನ್ನು ಚೆನ್ನಾಗಿ ಪ್ರದರ್ಶಿಸುತ್ತಾ ಬಿಲ್ಲನ್ನು ಹೆದೆ ಏರಿಸಿ ಲಕ್ಷ್ಯವನ್ನೂ ನೋಡಿದ. ಆದರೆ ಲಕ್ಷ್ಯವನ್ನು ಭೇದಿಸುವಂತೆ ಬಾಣವನ್ನು ಎಸೆಯಲಿಲ್ಲ. ಏಕೆಂದರೆ ಕನ್ಯೆಯನ್ನು ಪಡೆಯುವ ಇಚ್ಛೆ ಅವನಿಗೆ ಇರಲಿಲ್ಲ. ಅವಳು ಕೃಷ್ಣನಿಗೆ ಲಭ್ಯಳೆಂದು ಅವನು ತಿಳಿದಿದ್ದ.

**ಭೀಮಶ್ಚಾಪಂ ಲಕ್ಷಮಪ್ಯೇತದತ್ರ**
**ದ್ರಷ್ಟುಂ ಚ ನೈವೈಚ್ಛದರೀಂದ್ರ ಧಾರಿಣಃ ।**
**ಯೋಗ್ಯೇ ಕರ್ಮಣ್ಯಾಯತಂಶ್ಚಾಪರಾಧೀ**
**ಸ್ಯಾದಿತ್ಯಂಜಃ ಪಶ್ಯಮಾನೋ ಮಹಾತ್ಮಾ ॥ ೫೬ ॥**

ಪದಚ್ಛೇದ :- **ಭೀಮಃ, ಚಾಪಂ, ಲಕ್ಷಂ, ಅಪಿ, ಏತತ್, ಅತ್ರ, ದೃಷ್ಟಂ, ಚ, ನ, ಏವ, ಇಚ್ಛೀತ್, ಅರೀಂದ್ರಧಾರಿಣಃ, ಯೋಗ್ಯೇ, ಕರ್ಮಣಿ, ಆಯತನ್, ಚ, ಅಪರಾಧಿ, ಸ್ಯಾತ್, ಇತಿ, ಅಂಜಃ, ಪಶ್ಯಮಾನಃ, ಮಹಾತ್ಮಾ।**

**ಅರ್ಥ** :- **ಅರಿಂದ್ರಧಾರಿಣಃ** = ಶ್ರೀಕೃಷ್ಣನಿಗೆ, **ಯೋಗ್ಯೇ** = ಯೋಗ್ಯವಾದ, **ಕರ್ಮಣಿ** = ಕೆಲಸದಲ್ಲಿ, **ಆಯತನ್** = ಪ್ರಯತ್ನ ಮಾಡಿದರೆ, **ಅಪರಾಧಿ** = ದೋಷಿಯು, **ಸ್ಯಾಮ್** = ಆಗುವೆನು, **ಇತಿ** = ಎಂಬುದಾಗಿ, **ಅಂಜಃ** = ಚೆನ್ನಾಗಿ, **ಪಶ್ಯಮಾನ್** = ತಿಳಿದವನಾಗಿ, **ಮಹಾತ್ಮಾ** = ಮಹಾತ್ಮನಾದ, **ಭೀಮಃ** = ಭೀಮನು, **ಅತ್ರ** = ಸ್ವಯಂವರದಲ್ಲಿ, **ಚಾಪಂ** = ಬಿಲ್ಲನ್ನು, **ಚ** = ಮತ್ತು, **ಏತತ್ ಲಕ್ಷ್ಯಂ** = ಲಕ್ಷವನ್ನು, **ದೃಷ್ಟುಂ ಅಪಿ** = ನೋಡಲೂ ಸಹ, **ನೈವ ಇಚ್ಛೀತ್** = ಬಯಸಲೇ ಇಲ್ಲ.

**ತಾತ್ಪರ್ಯ** :- ಶ್ರೀಕೃಷ್ಣನೇ ಮಾಡಬೇಕಾಗಿರುವ ಕಾರ್ಯದಲ್ಲಿ ತಾನು ಯತ್ನ ಮಾಡಿದರೂ ಅಪರಾಧಿಯಾದೆನೆಂದು ತಿಳಿದು, ಮಹಾತ್ಮನಾದ ಭೀಮನು ಬಿಲ್ಲನ್ನಾಗಲಿ, ಲಕ್ಷ್ಯವನ್ನಾಗಲಿ ಸ್ವಯಂವರದಲ್ಲಿ ನೋಡಲು ಬಯಸಲಿಲ್ಲ.

**ವಿವರಣೆ** :- ''ಭೀಮೋ ದುರ್ಯೋಧನೋ ಕರ್ಣೋ ನಾವಿಂದನ್ ತದವಸ್ಥಿತಿಂ'' ಎಂದು ಭಾಗವತದಲ್ಲಿ, ಭೀಮನು ಲಕ್ಷ್ಯವನ್ನು ಕಾಣಲು ಸಮರ್ಥನಾಗಲಿಲ್ಲ ಎಂದು ಹೇಳಿದ್ದರಿಂದ, ಭಾಗವತ ವಿರೋಧವ್ಯಕ್ತವಾಗುತ್ತದೆ. ಆದರೆ ಆ ಶ್ಲೋಕಕ್ಕೆ ದುರ್ಯೋಧನ ಕರ್ಣರು ಪ್ರಯತ್ನ ಮಾಡಿಯೂ

ಲಕ್ಷ್ಯವನ್ನು ಕಾಣಲು ಸಮರ್ಥರಾಗಲಿಲ್ಲ. ಭೀಮನು ಪ್ರಯತ್ನವನ್ನೆ ಮಾಡಲಿಲ್ಲ ಆದ್ದರಿಂದ ಅದನ್ನು ಲಕ್ಷ್ಯವನ್ನು ಕಾಣಲಿಲ್ಲ ಎಂದು ಅರ್ಥೈಸಬೇಕು. (ವಾದಿರಾಜೀಯ)

**ಕೃಷ್ಣಸ್ತತಶ್ಚಾಪಮಧಿಜ್ಯಮಾಶು**
**ಕೃತ್ವಾಽಚಿಂತ್ಯಶ್ಛಿನ್ನಬಾಣೇನ ಲಕ್ಷಮ್ ।**
**ಅಪಾತಯದ್ ದುಂದುಭಯಶ್ಚ ದಿವ್ಯಾ**
**ನೇದುಃ ಪ್ರಸೂನಂ ವವೃಷುಃ ಸುರಾಶ್ಚ ॥ ೫೭ ॥**

**ಪದಚ್ಛೇದ :-** ಕೃಷ್ಣಃ, ತತಃ, ಚಾಪಂ, ಅಧಿಜ್ಯಂ, ಆಶು, ಕೃತ್ವಾ, ಅಚಿಂತ್ಯಃ, ಛಿನ್ನಬಾಣೇನ, ಲಕ್ಷ್ಯಂ, ಅಪಾತಯತ್, ದುಂದುಭಯಃ, ಚ, ದಿವ್ಯಾಃ, ನೇದುಃ, ಪ್ರಸೂನಂ, ವವೃಷುಃ, ಸುರಾಃ, ಚ ।

**ಅರ್ಥ :-** **ಅಚಿಂತ್ಯಃ** = ಅಚಿಂತ್ಯನಾದ, **ಕೃಷ್ಣಃ** = ಶ್ರೀಕೃಷ್ಣನು, **ಚಾಪಂ** = ಬಿಲ್ಲನ್ನು, **ಆಶು** = ಬೇಗನೆ, **ಅಧಿಜ್ಯಂ ಕೃತ್ವಾ** = ಹೆದೆಯೇರಿಸಿ, **ಛಿನ್ನಬಾಣೇನ** = ತುಂಡು ಬಾಣದಿಂದ, **ಲಕ್ಷಂ** = ಲಕ್ಷ್ಯವನ್ನು, **ಅಪಾತಯತ್** = ಬಳಿಸಿದನು, **ತತಃ** = ಲಕ್ಷ್ಯಭೇದದ ನಂತರ, **ದಿವ್ಯಾ** = ದೇವಲೋಕದ, **ದುಂದುಭಯಃ ಚ** = ದುಂದುಭಿಗಳು, **ನೇದುಃ** = ಮೊಳಗಿದವು, **ಸುರಾಃ ಚ** = ದೇವತೆಗಳು, **ಪ್ರಸೂನಂ ವವೃಷುಃ** = ಹೂಮಳೆಗೈದರು.

**ತಾತ್ಪರ್ಯ :-** ಬಳಿಕ ಅಚಿಂತ್ಯನಾದ ಶ್ರೀಕೃಷ್ಣನು ಬೇಗನೆ ಬಿಲ್ಲನ್ನು ಹೆದೆಯೇರಿಸಿ ಮುರುಕು ಬಾಣದಿಂದ ಲಕ್ಷವನ್ನು ಕೆಡವಿದ. ದೇವಲೋಕದ ದುಂದುಭಿ ಮೊಳಗಿದವು. ದೇವತೆಗಳು ಹೂಮಳೆಗೆರೆದರು.

**ಕೃಷ್ಣೇ ಬ್ರಹ್ಮಾದ್ಯೈಃ ಸ್ತೂಯಮಾನೇ ನರೇಂದ್ರ-**
**ಕನ್ಯಾ ಮಾಲಾಂ ಕೇಶವಾಂಸೇ ನಿಧಾಯ ।**
**ತಸ್ಥಾವುಪಾಸ್ಯಾಥ ಸರ್ವೇ ನರೇಂದ್ರಾ**
**ಯುದ್ಧಾಯಾಗುಃ ಕೇಶವಂ ಸ್ವಾತ್ತಶಸ್ತ್ರಾಃ ॥ ೫೮ ॥**

**ಪದಚ್ಛೇದ :-** ಕೃಷ್ಣೇ, ಬ್ರಹ್ಮಾದೇಃ, ಸ್ತೂಯಮಾನೆ, ನರೇಂದ್ರಕನ್ಯಾ, ಮಾಲಾಂ, ಕೇಶವಾಂಸೇ, ನಿಧಾಯ, ತಸ್ಥೌ ಉಪ, ಆಸ್ಯ, ಅಥ ಸರ್ವೇ, ನರೇಂದ್ರಾಃ, ಯುದ್ಧಾಯ, ಆಗುಃ, ಕೇಶವಂ, ಸ್ವಾ ತ್ತಶಸ್ತ್ರಾಃ ।

**ಅರ್ಥ** :- **ಕೃಷ್ಣೇ** = ಕೃಷ್ಣನು, **ಬ್ರಹ್ಮಾದ್ಯೈಃ** = ಬ್ರಹ್ಮಾದಿ ದೇವತೆಗಳಿಂದ, **ಸ್ತೂಯಮಾನೆ** = ಹೊಗಳಲ್ಪಡುತ್ತಿರಲು, **ನರೇಂದ್ರಕನ್ಯಾ** = ಲಕ್ಷಣೆಯು, **ಮಾಲಾಂ** = ಹಾರವನ್ನು, **ಕೇಶವಾಂಸೆ** = ಶ್ರೀಕೃಷ್ಣನ ಕೊರಳಲ್ಲಿ, **ನಿಧಾಯ** = ಹಾಕಿ, **ಅಸ್ಯ** = ಶ್ರೀಕೃಷ್ಣನ, **ಉಪ** = ಸಮೀಪದಲ್ಲಿ, **ತಸ್ಥೌ** = ನಿಂತಳು, **ಅಥ** = ಅನಂತರ, **ಸರ್ವೇ** = ಎಲ್ಲಾ, **ನರೇಂದ್ರಾಃ** = ರಾಜರು, **ಸ್ವಾತ್ತಶಸ್ತ್ರಾಃ** = ಶಸ್ತ್ರ ಹಿಡಿದವರಾಗಿ, **ಕೇಶವಂ** = ಕೃಷ್ಣನನ್ನು, **ಯುದ್ಧಾಯ** = ಯುದ್ಧಕ್ಕಾಗಿ, **ಆಗುಃ** = ಸಮಿಪಿಸಿದರು.

**ತಾತ್ಪರ್ಯ** :- ಬ್ರಹ್ಮಾದಿಗಳು ಶ್ರೀಕೃಷ್ಣನನ್ನು ಸ್ತೋತ್ರಮಾಡುತ್ತಿರಲು ರಾಜಕುಮಾರಿ ಲಕ್ಷಣೆಯು ಕೃಷ್ಣನ ಕೊರಳಲ್ಲಿ ಮಾಲೆ ಹಾಕಿ ಬಳಿಯಲ್ಲಿ ನಿಂತಳು. ಆಗ ಎಲ್ಲ ರಾಜರೂ ಚೆನ್ನಾಗಿ ಶಸ್ತ್ರ ಹಿಡಿದು, ಕೃಷ್ಣನೊಡನೆ ಯುದ್ಧಕ್ಕೆ ಬಂದರು.

**ವಿದ್ರಾವ್ಯ ತಾನ್ ಮಾಗಧಾದೀನ್ ಸ ಕೃಷ್ಣೋ**
**ಭೀಮಾರ್ಜುನಾಭ್ಯಾಂ ಸಹಿತಃ ಪುರೀಂ ಸ್ವಾಮ್ ।**
**ಯಯಾವೇತಾ ಅಷ್ಟಮಹಾಮಹಿಷ್ಯಃ**
**ಕೃಷ್ಣಸ್ಯ ದಿವ್ಯಾ ಲೋಕಸುಂದರ್ಯ ಇಷ್ಟಾಃ ॥ ೫೯ ॥**

**ಪದಚ್ಛೇದ** :- ವಿದ್ರಾವ್ಯ, ತಾನ್, ಮಾಗದಾಧೀನ್, ಸಃ, ಕೃಷ್ಣಃ, ಭೀಮಾರ್ಜುನಾಭ್ಯಾಂ, ಸಹಿತಃ, ಪುರೀಂ, ಸ್ವಾಮ್, ಯಯೌ, ಏತೆ, ಅಷ್ಟ, ಮಹಾಮಹಿಷ್ಯಃ, ಕೃಷ್ಣಸ್ಯ, ದಿವ್ಯಾಃ, ಲೋಕಸುಂದರ್ಯಃ, ಇಷ್ಟಾಃ ।

**ಅರ್ಥ** :- **ಸಃ ಕೃಷ್ಣಃ** = ಆ ಕೃಷ್ಣನು, **ಮಾಗದಾಧೀನ್** = ಜರಾಸಂಧಾದಿಗಳನ್ನು, **ವಿದ್ರಾವ್ಯ** = ಒಡಿಸಿ, **ಭೀಮಾರ್ಜುನಾಭ್ಯಾಂ** = ಭೀಮಾರ್ಜುನರಿಂದ, **ಸಹಿತಃ** = ಕೂಡಿಕೊಂಡು, **ಸ್ವಾಮ್** = ತನ್ನ, **ಪುರೀಂ** = ದ್ವಾರಾವತಿಯನ್ನು ಕುರಿತು, **ಯಯೌ** = ಹೋದನು, **ಏತೇ** = ರುಕ್ಮಿಣಿ ಮೊದಲಾದ ಕೃಷ್ಣನ, **ಅಷ್ಟ** = ಎಂಟು, **ಮಹಾಮಹಿಷ್ಯಃ** = ಪಟ್ಟದ ರಾಣಿಯರು, **ದಿವ್ಯಾಃ** = ಅಲೌಕಿಕರು, **ಲೋಕಸುಂದರ್ಯ** = ತ್ರಿಲೋಕ ಸುಂದರಿಯರು, **ಇಷ್ಟಾಃ** = ಕೃಷ್ಣನ ಪ್ರೀತಿಪಾತ್ರರು.

**ತಾತ್ಪರ್ಯ** :- ಶ್ರೀಕೃಷ್ಣ ಆ ಜರಾಸಂಧಾದಿ ರಾಜರನ್ನು ಒಡಿಸಿ ಭೀಮಾರ್ಜುನರೊಂದಿಗೆ ತನ್ನ ಪಟ್ಟಣವಾದ ದ್ವಾರಾವತಿಗೆ ತೆರಳಿದೆ. ಈ ಅಷ್ಟ

ಮಹಾಮಹಿಷಿಯರು ಶ್ರೀಕೃಷ್ಣನಿಗೆ ಪ್ರೀತಿಪಾತ್ರರು, ಅಲೌಕಿಕರು, ತ್ರಿಲೋಕಸುಂದರಿಯರು ಆಗಿದ್ದರು.

ಭೈಷ್ಮೀಸತ್ಯಾ ಚೈಕತನುರ್ದ್ವಿಧೈವ
ಜಾತಾ ಭೂಮೌ ಪ್ರಕೃತಿರ್ಮೂಲಭೂತಾ ।
ತಯೈವಾನ್ಯಾಃ ಸರ್ವದಾಽನುಪ್ರವಿಷ್ಟಾ-
ಸ್ತಾಸಾಂ ಮಧ್ಯೇ ಜಾಂಬವತೀ ಪ್ರಧಾನಾ ॥ ೬೦ ॥

ಪದಚ್ಛೇದ :- ಭೈಷ್ಮೀಸತ್ಯಾ, ಚ, ಏಕತನುಃ, ದ್ವಿಧಾ, ಇವ, ಜಾತಾಃ, ಭೂಮಾ, ಪ್ರಕೃತಿಃ, ಮೂಲಭೂತಾಃ, ತಯಾ, ಏವ, ಅನ್ಯಾಃ, ಸರ್ವದಾ, ಅನುಪ್ರವಿಷ್ಟಾಃ, ತಾಸಾಂ, ಮಧ್ಯೆ, ಜಾಂಬವತೀ, ಪ್ರಧಾನಾ ।

ಅರ್ಥ :- ಭೈಷ್ಮೀ = ರುಕ್ಮಿಣಿಯು, ಚ = ಮತ್ತು, ಸತ್ಯಾ = ಸತ್ಯಭಾಮೆಯು, ಮೂಲಭೂತಾಃ = ಜಗತ್ ಜನನಕ್ಕೆ ಮೂಲಕಾರಣಳಾದ, ಪ್ರಕೃತಿಃ = ಮಹಾಲಕ್ಷ್ಮಿಯ, ಏಕತನು = ಒಬ್ಬಳೆ, ಭೂಮೌ = ಭೂಮಿಯಲ್ಲಿ, ದ್ವಿಧಾ ಇವ = ಇಬ್ಬಳೆಂಬಂತೇ, ಜಾತಾ = ಹುಟ್ಟಿದಳು, ತಯಾ ಏವ = ಲಕ್ಷ್ಮಿಯಿಂದಲೇ, ಅನ್ಯಾ = ಬೇರೆ ವಿಷ್ಣುಪ್ರಿಯರು, ಸರ್ವದಾ = ಯಾವಾಗಲೂ, ಅನುಪ್ರವಿಷ್ಟಾಃ = ಆವಿಷ್ಠರೂ, ತಾಸಾಂ = ಆ ಷಣ್ಮಹಿಷಿಯರ, ಮಧ್ಯೆ = ಮಧ್ಯದಲ್ಲಿ, ಜಾಂಬವತೀ = ಜಾಂಬವತಿಯು, ಪ್ರಧಾನಾ = ಶ್ರೇಷ್ಠಳು.

ತಾತ್ಪರ್ಯ :- ಅವರಲ್ಲಿ ರುಕ್ಮಿಣಿ ಸತ್ಯಭಾಮೆಯರು ಎಲ್ಲಾ ಜಗತ್ತಿಗೆ ಮೂಲಪ್ರಕೃತಿಯಾಗಿ ಕಾರಣಳಾದ ಮಹಾಲಕ್ಷ್ಮಿಯೇ. ಒಬ್ಬಳೇ ಆದರೂ ಭೂಮಿಯಲ್ಲಿ ಎರಡು ಅವತಾರವನ್ನು ಮಾಡಿದ್ದಳು. ಬೇರೆ ಮಹಿಷಿಯರು ಅವಳಿಂದಲೇ ಪ್ರವಿಷ್ಟರು. ಷಣ್ಮಹಿಷಿಯರ ನಡುವೆ ಜಾಂಬವತಿ ಪ್ರಧಾನಳು.

ರಾಮೇಣ ತುಲ್ಯಾ ಜಾಂಬವತೀ ಪ್ರಿಯತ್ವೇ
ಕೃಷ್ಣಸ್ಯಾನ್ಯಾಃ ಕಿಂಚಿದೂನಾಶ್ಚ ತಸ್ಯಾಃ ।
ಯದಾಽಽವೇಶೋ ಬಹುಲಃ ಸ್ಯಾದ್ ರಮಾಯಾ-
ಸ್ತದಾ ತಾಸು ಪ್ರೀಯತೇ ಕೇಶವೋಽಲಮ್ ॥ ೬೧ ॥

ಪದಚ್ಛೇದ :- ರಾಮೇಣ, ತುಲ್ಯಾ, ಜಾಂಬವತೀ, ಪ್ರಿಯತ್ವೇ, ಕೃಷ್ಣಸ್ಯ, ಅನ್ಯಾಃ, ಕಿಂಚಿತ್, ಊನಾಃ, ಚ, ತಸ್ಯಾಃ, ಯದಾ, ಆವೇಶಃ, ಬಹುಲಃ, ಸ್ಯಾತ್, ರಮಾಯಾಃ, ತದಾ, ತಾಸು, ಪ್ರೀಯತೆ, ಕೇಶವಃ, ಅಲಂ ।

**ಅರ್ಥ** :- **ಜಾಂಬವತೀ** = ಜಾಂಬವತಿಯು, **ಕೃಷ್ಣಸ್ಯ** = ಕೃಷ್ಣನ, **ಪ್ರಿಯತ್ವೆ** = ಪ್ರೀತಿಪಾತ್ರತೆಯಲ್ಲಿ, **ರಾಮೇಣ** = ಬಲರಾಮನಿಂದ, **ತುಲ್ಯಾ** = ಸಮಳು, **ಅನ್ಯಾ ಚ** = ಕಾಳಿಂದಿ ಮೊದಲಾದವರು, **ಕಿಂಚಿತ್ ಊನಾಃ** = ಅವಳಿಗಿಂತ ಸ್ವಲ್ಪ ಕಡಿಮೆ ಪ್ರೀತಿಪಾತ್ರರು, **ತಾಸು** = ಆ ಕಾಳಿಂದಿ ಮೊದಲಾದವರಲ್ಲಿ, **ಯದಾ** = ಯಾವಾಗಿ, **ರಮಾಯಾಃ** = ಲಕ್ಷ್ಮಿಯ, **ಆವೇಶಃ** = ಆವೇಶವು, **ಬಹು** = ಹೆಚ್ಚಾಗಿ, **ಸ್ಯಾತ್** = ಇರುತ್ತದೊ, **ತದಾ** = ಆಗ, **ತಸ್ಯಾಃ** = ಜಾಂಬವತಿಗಿಂತ, (**ತಾಸು** = ಕಾಳಿಂದಿಯರಲ್ಲಿ), **ಕೇಶವಃ** = ಕೃಷ್ಣನು, **ಅಲಂ ಪ್ರೀಯತೆ** = ಅಧಿಕ ಪ್ರೀತಿಸುವನು.

**ತಾತ್ಪರ್ಯ** :- ಕೃಷ್ಣನಿಗೆ ಪ್ರೀತಿಪಾತ್ರಳೆನಿಸುವ ವಿಷಯದಲ್ಲಿ ಜಾಂಬವತಿ ಬಲರಾಮನಿಗೆ ಸಮಾನಳು. ಉಳಿದವರು ಅವಳಿಗಿಂತ ಸ್ವಲ್ಪ ಕಡಿಮೆಯವರು. ಯಾವಾಗ ರಮಾವೇಶ ಅಧಿಕವಾಗುವುದೊ ಆಗ ಅವರಲ್ಲಿ ಅಧಿಕ ಪ್ರೀತಿ ಮಾಡುವನು.

**ವಿವರಣೆ** :- ರಮಾವೇಶ ಯಾವಾಗ ಜಾಂಬವತಿಯಲ್ಲಿ ಅಧಿಕ-ವಾಗಿರುತ್ತದೊ, ಆಗ ಅವಳು ಬಲರಾಮನಿಗೆ ಸಮಾನಳು. ರಮಾವೇಶ ಇಲ್ಲದಾಗ, ಎಲ್ಲಾ ಷಣ್ಮಹಿಷಿಯರು ಬಲರಾಮನಿಗಿಂತ ಐದು ಗುಣ ನ್ಯೂನರು ಪ್ರದ್ಯುಮ್ನನಿಗಿಂತ ಇಪ್ಪತ್ತು ಗುಣ ಅಧಿಕರು. ಆಗಲೂ ಅವರಲ್ಲಿ ಜಾಂಬವತಿ ಸ್ವಲ್ಪ ಗುಣಾಧಿಕಳು. ಟೀಕೆಯಲ್ಲಿ ''ತಾಸಾಂ ಮಧ್ಯೆ ಜಾಂಬವತೀ ಪ್ರಧಾನಾ ಪ್ರಕೃತ್ಯಾವೇಶಾತ್ ಆಧಿಕ್ಯಾತ್'' ಎಂದಿದ್ದಾರೆ. (ತಾಮ್ರ)

**ಯದಾऽऽವೇಶೋ ಹ್ರಾಸಮುಪೈತಿ ತತ್ರ**
**ಪ್ರದ್ಯುಮ್ನತೋ ವಿಂಶಗುಣಾಧಿಕಾಃ ಸ್ಯುಃ ।**
**ಅನಾದಿತಸ್ತಾಃ ಕೇಶವಾನ್ನಾನ್ಯಸಂಸ್ಥಾ**
**ರೇಮೇ ತಾಭಿಃ ಕೇಶವೋ ದ್ವಾರವತ್ಯಾಮ್ ॥ ೬೨ ॥**

**ಪದಚ್ಛೇದ :-** ಯದಾ, ಆವೇಶಃ, ಹ್ರಾಸಂ, ಉಪೈತಿ, ತತ್ರ, ಪ್ರದ್ಯುಮ್ನತಃ, ವಿಂಶ-ಗುಣಧಿಕಾಃ, ಸ್ಯುಃ, ಅನಾದಿತಃ, ತಾಃ, ಕೇಶವಾನ್, ಅನ್ಯಸಂಸ್ಥಾಃ, ರೇಮೆ, ತಾಭಿಃ, ಕೇಶವಃ, ದ್ವಾರವತ್ಯಾಂ।

**ಅರ್ಥ :-** **ಯದಾ** = ಯಾವಾಗ, **ತತ್ರ** = ಷಣ್ಮಹಿಷಿಯರಲ್ಲಿ, **ಆವೇಶಃ** = ರಮಾವೇಶವು, **ಹ್ರಾಸಂ** = ಹ್ರಾಸವನ್ನು, **ಉಪೈತಿ** = ಹೊಂದುವುದೊ, ತದ = ಆಗ, **ಪ್ರದ್ಯುಮ್ನತಃ** = ಕಾಮನಿಂದ, **ವಿಂಶಗುಣಾಧಿಕಾಃ** = ಇಪ್ಪತ್ತು ಗುಣಾಧಿಕರು, **ಸ್ಯುಃ** = ಆಗುವರು, **ತಾಃ** = ಆ ಜಾಂಬವತಿ ಮೊದಲಾದವರು, **ಅನಾದಿತಃ** = ಅನಾದಿಕಾಲದಿಂದ, **ಕೇಶವಾತ್** = ಕೃಷ್ಣನಿಗಿಂತ, **ಅನ್ಯಸಂಸ್ಥಾಃ ನ** = ಬೇರೆ ಪುರುಷರನ್ನು ರಮಿಸಿರಲಿಲ್ಲ. **ತಾಭಿಃ** = ಅಂತಹ ಷಣ್ಮಹಿಷಿ, **ಯಾರೊಂದಿಗೆ** = ಕೂಡಿ, **ಕೇಶವಃ** = ಕೃಷ್ಣನು, **ದ್ವಾರವತ್ಯಾಂ** = ದ್ವಾರಕೆಯಲ್ಲಿ, **ರಮೆ** = ರಮಿಸಿದನು.

**ತಾತ್ಪರ್ಯ :-** ರಮಾವೇಶ ಕಡಿಮೆ ಇರುವಾಗ ಅವರು ಪ್ರದ್ಯುಮ್ನನಿಗಿಂತ ಇಪ್ಪತ್ತು ಗುಣ ಅಧಿಕರು. ಅನಾದಿಕಾಲದಿಂದಲೂ ಅವರು ಕೃಷ್ಣನನ್ನು ಹೊರತು ಅನ್ಯರನ್ನು ಸೇರಿದ್ದಿಲ್ಲ. ಶ್ರೀಕೃಷ್ಣ ದ್ವಾರಕೆಯಲ್ಲಿ ಅವರೊಂದಿಗೆ ರಮಿಸಿದ.

**ಏವಂ ಕೃಷ್ಣೇ ದ್ವಾರಕಾಮಧ್ಯಸಂಸ್ಥೇ**
**ಗಿರಿಂ ಭೂಪಾ ರೈವತಕಂ ಸಮಾಯಯುಃ ।**
**ದುರ್ಯೋಧನಾದ್ಯಾಃ ಪಾಂಡವಾಶ್ಚೈವ ಸರ್ವೇ**
**ನಾನಾದೇಶ್ಯಾ ಯೇ ಚ ಭೂಪಾಲಸಂಘಾಃ ॥ ೬೩ ॥**

ಪದಚ್ಛೇದ :- ಏವಂ, ಕೃಷ್ಣ, ದ್ವಾರಕಾಮಧ್ಯಸಂಸ್ಥೆ, ಗಿರೀಂ, ಭೂಪಾಃ, ಕೈವತಕಂ, ಸಮಾಯಯುಃ, ದುರ್ಯೋಧನಾದ್ಯಾಃ, ಪಾಂಡವಾಃ ಚ, ಏವ, ಸರ್ವೇ, ನಾನಾದೇಶ್ಯಾಃ, ಯೇ, ಚ, ಭೂಪಾಲ ಸಂಘಾಃ।

**ಅರ್ಥ :-** ಏವಂ = ಈ ರೀತಿಯಾಗಿ, ಕೃಷ್ಣನು, ದ್ವಾರಕಾಮಧ್ಯ ಸಂಸ್ಥೆ = ದ್ವಾರಕಾ ಪಟ್ಟಣದಲ್ಲಿ ಇರುತ್ತಿರಲು, **ಭೂಪಾಃ** = ರಾಜರುಗಳು, **ಸರ್ವೇ** = ಎಲ್ಲಾ, **ದುರ್ಯೋಧನಾದ್ಯಾಃ** = ದುರ್ಯೋಧನ ಮೊದಲಾದವರು, **ಪಾಂಡವಾಃ ಚ** = ಪಾಂಡವರೂ, **ನಾನಾದೇಶ್ಯಾ** = ಬೇರೆ ಬೇರೆ ದೇಶದಲ್ಲಿ ಹುಟ್ಟಿದ, **ಯೇ ಚೈವ** = ಎಲ್ಲಾ, **ಭೂಪಾಲ ಸಂಘಾಃ** = ರಾಜರುಗಳು, **ರೈವತಕಂ** = ರೈವತವೆಂಬ, **ಗಿರಿಂ** = ಪರ್ವತವನ್ನು, **ಸಮಾಯಯುಃ** = ಹೊಂದಿದರು.

ತಾತ್ಪರ್ಯ :- ಹೀಗೆ ಕೃಷ್ಣನು ದ್ವಾರಕೆಯಲ್ಲಿದ್ದಾಗ ರೈವತಗಿರಿಗೆ ದುರ್ಯೋಧನಾದಿ ರಾಜರುಗಳೂ ಪಾಂಡವರಿಗೂ ಎಲ್ಲರೂ ಬಂದರು. ನಾನಾ ದೇಶಗಳ ರಾಜ ಸಮೂಹಗಳೂ ಆಗಮಿಸಿದವು.

ಆತ್ಮಾನಂ ತಾನ್ ದ್ರಷ್ಟುಮಭ್ಯಾಗತಾನ್ ಸ
ಕೃಷ್ಣೋ ಗಿರೌ ರೈವತಕೇ ದದರ್ಶ ।
ನಮಸ್ಕೃತೇ ಸರ್ವನರೇಂದ್ರ ಮುಖ್ಯೈಃ
ಕೃಷ್ಣೇ ವೈದರ್ಭ್ಯಾ ಸಹ ದಿವ್ಯಾಸನಸ್ಥೇ ॥ ೬೪ ॥

ಪದಚ್ಛೇದ :– ಆತ್ಮಾನಂ, ತಾನ್, ದ್ರಷ್ಟುಂ, ಅಭ್ಯಾಗತಾನ್, ಸಃ, ಕೃಷ್ಣಃ, ಗಿರೌ, ರೈವತಕೇ, ದದರ್ಶ, ನಮಸ್ಕೃತೆ, ಸರ್ವನರೇಂದ್ರಮುಖ್ಯೈಃ, ಕೃಷ್ಣೇ, ವೈದರ್ಭ್ಯಾ, ಸಹ, ದಿವ್ಯಾಸನಸ್ಥೇ ।

ಅರ್ಥ :- ಸಃ ಕೃಷ್ಣಃ = ಆ ಕೃಷ್ಣನನು, ಆತ್ಮಾನಂ = ತನ್ನನ್ನು, ದ್ರಷ್ಟುಂ = ನೋಡಲು, ಅಭ್ಯಾಗತಾನ್ = ಬಂದವರನ್ನು, ರೈವತಕೆ ಗಿರೌ = ರೈವತ ಎಂಬ ಪರ್ವತದಲ್ಲಿ, ದದರ್ಶ = ನೋಡಿದನು, ಸರ್ವನರೇಂದ್ರಮುಖ್ಯಃ = ಎಲ್ಲಾ ರಾಜಪ್ರಮುಖರಿಂದ, ನಮಸ್ಕೃತೇ = ನಮಸ್ಕೃತನಾಗಿ, ವೈದರ್ಭ್ಯಾ ಸಹ = ರುಕ್ಮಿಣಿಯಿಂದ ಕೂಡಿ, ಕೃಷ್ಣೇ = ಕೃಷ್ಣನು, ದಿವ್ಯಾಸನಸ್ಥೆ = ದಿವ್ಯ ಆಸನದಲ್ಲಿ ಕುಳಿತಿರಲು (ನಾರದರು ಬಂದರು).

ತಾತ್ಪರ್ಯ :- ತನ್ನನ್ನು ನೋಡಲು ಬಂದಿದ್ದ ರಾಜರುಗಳನ್ನು ಶ್ರೀಕೃಷ್ಣ ರೈವತರ ಪರ್ವತದಲ್ಲಿ ಕಂಡ. ಆಗ ಎಲ್ಲ ರಾಜರುಗಳಿಂದ ನಮಸ್ಕೃತನಾಗಿ ರುಕ್ಮಿಣಿಯೊಂದಿಗೆ ದಿವ್ಯಾಸನದಲ್ಲಿ ಕೃಷ್ಣ ಕುಳಿತಿದ್ದಾಗ ನಾರದ ಆಕಾಶದಿಂದ ಇಳಿದು ಬಂದ.

ಏತ್ಯಾऽऽಕಾಶಾನ್ನಾರದಃ ಕೃಷ್ಣಮಾಹ
ಸರ್ವೋತ್ತಮಸ್ತ್ವಂ ತ್ವಾದೃಶೋ ನಾಸ್ತಿ ಕಶ್ಚಿತ್ ।
ಇತ್ಯಾಶ್ಚರ್ಯೋ ಧನ್ಯ ಇತ್ಯೇವ ಶಬ್ದ-
ದ್ವಯೇ ತೂಕ್ತೇ ವಾಸುದೇವಸ್ತಮಾಹ ॥ ೬೫ ॥

**ಪದಚ್ಛೇದ :-** ಏತೇ, ಆಕಾಶಾತ್, ನಾರದಃ, ಕೃಷ್ಣಂ, ಆಹ, ಸರ್ವೋತ್ತಮಃ ತ್ವಂ, ತ್ವಾದೃಶಃ, ನಾಸ್ತಿ, ಕಶ್ಚಿತ್, ಇತಿ, ಆಶ್ಚರ್ಯ, ಧನ್ಯ, ಇತಿ, ಏವ, ಶಬ್ದದ್ವಯೆ, ತು, ಉಕ್ತೇ, ವಾಸುದೇವಃ, ತಮ್, ಆಹ।

**ಅರ್ಥ :-** ನಾರದಃ = ನಾರದನು, ಆಕಾಶಾತ್ = ಆಕಾಶದಿಂದ, ಕೃಷ್ಣಂ = ಕೃಷ್ಣನನ್ನು, ಏತೇ = ಸಮೀಪಿಸಿ, ತ್ವಂ = ನೀನು, ಸರ್ವೋತ್ತಮಃ = ಎಲ್ಲರಿಗಿಂತಲೂ ಉತ್ತಮನು, ತ್ವಾದೃಶಃ = ನಿನ್ನ ಹಾಗೆ, ಕಶ್ಚಿತ್ = ಯಾರೂ, ನಾಸ್ತಿ = ಇಲ್ಲ, ಇತಿ = ಎಂಬರ್ಥದಲ್ಲಿ, ಧನ್ಯ = ಧನ್ಯನು, ಆಶ್ಚರ್ಯಃ = ಆಶ್ಚರ್ಯನು, ಇತಿ = ಎಂದು, ಶಬ್ದದ್ವಯೆ = ಎರಡು ಶಬ್ದ, ಉಕ್ತೆ ತು = ಹೇಳಲು, ವಾಸುದೇವ = ಕೃಷ್ಣಯ, ತಂ = ಅವನನ್ನು ಕುರಿತು, ಆಹ = ಹೇಳಿದನು.

**ತಾತ್ಪರ್ಯ :-** ಶ್ರೀಕೃಷ್ಣನು ದಿವ್ಯಾಸನದಲ್ಲಿ ಕುಳಿತಾಗ ನಾರದರು ಆಕಾಶದಿಂದ ಬಂದು ಕೃಷ್ಣನನ್ನು ಸಮೀಪಿಸಿ, ನೀನು ಸರ್ವೋತ್ತಮ, ನಿನಗೆ ಸರಿಸಮ ಯಾರೂ ಇಲ್ಲ ಎಂಬರ್ಥದಲ್ಲಿ ನೀನು ಧನ್ಯ, ನೀನು ಆಶ್ಚರ್ಯ ಎಂಬ ಎರಡು ಶಬ್ದಗಳನ್ನು ಹೇಳಿದಾಗ ಅವನನ್ನು ಕುರಿತು ಕೃಷ್ಣನು ಹೀಗೆ ಹೇಳಿದನು.

**ವಿವರಣೆ :-** ''ಆ'' ಎಲ್ಲೆಡೆ ''ಶ್ಚರ್ಯ'' ಸುಖಾನುಭವಯೋಗ್ಯರಾದ ಎಲ್ಲ ಜೀವರೂ ಯಾರಿಂದ ಪ್ರವೃತ್ತಿ ಮಾಡುವರೋ ಅವನು ಆಶ್ಚರ್ಯ. ಅಂದರೆ ಸರ್ವೋತ್ತಮ ಚೇತನ ನೀನೆ. 'ಧ' ಜಗತ್ತನ್ನು ತಮ್ಮ ಅಧಿ ೕನವಿಟ್ಟುಕೊಂಡು ಧರಿಸುವವರೆಂದು ದುರ್ವಾದಿಗಳು ಒಪ್ಪಿರುವ ಇತರ ದೇವತೆಗಳನ್ನು 'ನಿ' ಚೆನ್ನಾಗಿ ''ಯ'' ದೂರಕ್ಕೆ ಹೋಗಲಾಡಿಸುವನು. (ವಾದಿರಾಜಿಯ)

**ದಕ್ಷಿಣಾಭಿಃ ಸಾಕಮಿತ್ಯೇವ ಕೃಷ್ಣಂ**
**ಪಪ್ರಚ್ಛುರೇತತ್ ಕಿಮಿತಿ ಸ್ಮ ಭೂಪಾಃ ।**
**ನಾರಾಯಣೋ ಮುನಿಮೂಚೇ ವದೇತಿ**
**ಶೃಣುಧ್ವಮಿತ್ಯಾಹ ಸ ನಾರದೋಽಪಿ ॥ ೬೬ ॥**

**ಪದಚ್ಛೇದ :-** ದಕ್ಷಿಣಾಭಿಃ, ಸಾಕಂ, ಇತ್ಯೇವ, ಕೃಷ್ಣಂ, ಪ್ರಪ್ರಚ್ಛುಃ, ಏತತ್, ಕಿಂ, ಇತಿ, ಸ್ಮ ಭೂಪಾಃ, ನಾರಾಯಣಃ, ಮುನಿಂ, ಊಚೆ, ವದ, ಇತಿ, ಶೃಣುಧ್ವಂ, ಇತಿ, ಆಹ, ಸ, ನಾರದಃ, ಅಪಿ ।

**ಅರ್ಥ :- ದಕ್ಷಿಣಾಭಿಃ ಸಾಕಂ** = ದಕ್ಷಿಣಾದೇವಿಯೊಂದಿಗೆ, **ಇತ್ಯೆವ (ಆಹ)** = ಹೀಗೆಂದನು, **ಏತತ್** = ''ದಕ್ಷಿಣಾಭಿ ಸಾಕಂ'' ಎಂದು ಹೇಳಿದ್ದು, **ಕಿಂ** = ಯಾವ ಅಭಿಪ್ರಾಯವುಳ್ಳದ್ದು, **ಇತಿ** = ಎಂದು, **ಕೃಷ್ಣಂ** = ಕೃಷ್ಣನನ್ನು, **ಪ್ರಪ್ರಚ್ಛುಃ ಸ್ಮ** = ಕೇಳಿದರು, **ನಾರಾಯಣಃ** = ಕೃಷ್ಣನು, **ಮುನಿಂ** = ನಾರದನನ್ನು ಕುರಿತು, **ವದ** = ಹೇಳು, **ಇತಿ** = ಎಂದು, **ಊಚೇ** = ಹೇಳಿದನು, **ಸಃ ನಾರದಃ ಅಪಿ** = ನಾರದರೂ, **ಶೃಣುಧ್ವಂ** = ಕೇಳಿರಿ, **ಇತಿ** = ಎಂದು, **ಆಹ** = ಹೇಳಿದರು.

**ತಾತ್ಪರ್ಯ :-** ಆಗ ಶ್ರೀಕೃಷ್ಣ 'ದಕ್ಷಿಣಾದೇವಿಯರೊಂದಿಗೆ' ಎಂದು ಹೇಳಿದನು. ರಾಜರು ಇದೇನೆಂದು ಕೃಷ್ಣನನ್ನು ಕೇಳಿದರು. ಶ್ರೀಕೃಷ್ಣ ನಾರದನಿಗೆ ''ನೀನೇ ಹೇಳು'' ಎಂದು ಹೇಳಿದನು. ''ಕೇಳಿರಿ'' ಎಂದ ನಾರದರು ಹೇಳಿದರು.

**ವಿವರಣೆ :-** ಆಗ ಶ್ರೀಕೃಷ್ಣ ದಕ್ಷಿಣಾದೇವಿಯರೊಂದಿಗೇ ನಾನು ಆಶ್ಚರ್ಯ ಧನ್ಯನಾಗಿರುವೆನೆಂದ. ಕೇವಲ ನಾನೇ ಆಶ್ಚರ್ಯ ಶಬ್ದಾರ್ಥವೆನಿಸಿದ ಸರ್ವೋತ್ತಮತ್ವಾದಿ ಗುಣಶಾಲಿಯಲ್ಲಿ ದಕ್ಷಿಣೆಗಳಿಗೆ ಅಭಿಮಾನಿನಿ ಎಂಬ ಕಾರಣದಿಂದಲೂ, ನಾನು ಅರ್ಧನಾರೀಶ್ವರನಾಗಿರುವಾಗ ನನ್ನ ದೇಹಭಾಗಕ್ಕೆ ಎಡಭಾಗದಲ್ಲಿರುವ ರಮೆಗೆ ''ದಕ್ಷ'' ಬಲದಲ್ಲಿ ''ಇನ'' ಪತಿಯಾದ ನಾನು ಸದಾ ಇರುವೆನೆಂಬ ಕಾರಣದಿಂದಲೂ ''ದಕ್ಷಿಣಾ'' ಎಂಬ ಹೆಸರುಳ್ಳ ರುಕ್ಮಿಣೀರೂಪಳಾದ ಈ ರಮಾದೇವಿಯೂ ಸರ್ವೋತ್ತಮಳು ಮತ್ತು ಅಸದೃಶಳಾಗಿರುವುದರಿಂದ ಆಶ್ಚರ್ಯಳು ಮತ್ತು ಧನ್ಯಳು. (ವಾದಿರಾಜಿಯ)

**ಕೂರ್ಮೋ ದೃಷ್ಟೋ ವಿಷ್ಣುಪದ್ಯಾಂ ಮಯೋಕ್ತ-**
**ಸ್ತ್ವಮುತ್ತಮೋ ನಾಸ್ತಿ ಸಮಸ್ತವೇತಿ ।**
**ಊಚೇ ಗಂಗಾಮುತ್ತಮಾಂ ಸಾ ಜಲೇಶ-**
**ಮುಮಾಮೂಚೇ ಪೃಥಿವೀನಾಮಿಕಾಂ ಸಃ ॥ ೬೭ ॥**

ಪದಚ್ಛೇದ :- ಕೂರ್ಮಃ, ದೃಷ್ಟಃ, ವಿಷ್ಣುಪದ್ಯಾಂ, ಮಯಾ, ಉಕ್ತೇಃ, ತ್ವಂ, ಉತ್ತಮಃ, ನಾಸ್ತಿ, ಸಮಃ, ತವ, ಇತಿ, ಊಚೇ, ಗಂಗಾಂ, ಉತ್ತಮಾಂ, ಸಾ, ಜಲೇಶಂ, ಉಮಾಂ, ಊಚೇ, ಪೃಥಿವೀನಾಮಿಕಾಂ, ಸಃ ।

**ಅರ್ಥ** :- **ಮಯಾ** = ನನ್ನಿಂದ, **ವಿಷ್ಣುಪದ್ಯಾಂ** = ಗಂಗೆಯಲ್ಲಿ, **ಕೂರ್ಮಃ** = ಕೂರ್ಮನೆಂಬ ದೇವನು, **ದೃಷ್ಟಃ** = ನೋಡಲ್ಪಟ್ಟನು, **ತ್ವಂ** = ನೀನು, **ಉತ್ತಮಃ** = ಸರ್ವೋತ್ತಮನು, **ತವ** = ನಿನ್ನ, **ಸಮಃ** = ಸದೃಶನೂ, **ನಾಸ್ತಿ** = ಇಲ್ಲ, **ಇತಿ** = ಎಂದು (**ಮಯಾ** = ನನ್ನಿಂದ), **ಉಕ್ತಃ** = ಹೇಳಲ್ಪಟ್ಟ, (**ಸಃ** = ಅವನು), **ಗಂಗಾಂ** = ಗಂಗೆಯನ್ನು, **ಉತ್ತಮಾಂ** = ಸರ್ವೋತ್ತಮಳೆಂದು, **ಊಚೆ** = ಹೇಳಿದನು, **ಸಾ** = ಆ ಗಂಗೆಯು, **ಜಲೇಶಂ** = ವರುಣನನ್ನು, **ಸಃ** = ಆ ವರುಣನು, **ಪೃಥಿವೀನಾಮೀಕಾಂ** = ಪೃಥಿವೀ ನಾಮಕಳಾದ, **ಉಮಾಂ** = ಪಾರ್ವತಿಯನ್ನು, **ಊಚೇ** = ಉತ್ತಮಳೆಂದು ಹೇಳಿದನು.

**ತಾತ್ಪರ್ಯ** :- ನಾರದ ಮುನಿ ನುಡಿದರು – ''ನಾನು ಗಂಗಾನದಿಯಲ್ಲಿ ಕೂರ್ಮರೂಪದಲ್ಲಿದ್ದ ಒಬ್ಬ ದೇವನನ್ನು ಕಂಡೆ. ''ನೀನೇ ಉತ್ತಮ, ನಿನಗಿಂತ ಉತ್ತಮನಿಲ್ಲ'' ಎಂದೆ. ಆಗ ಅವನು ''ಗಂಗೆ ಉತ್ತಮಳು'' ಎಂದ. ಗಂಗೆ ''ವರುಣ ಉತ್ತಮ'' ಎಂದಳು. ವರುಣ ಪೃಥಿವೀನಾಮಕಳಾದ ''ಉಮೆ ಉತ್ತಮಳು'' ಎಂದ.

**ವಿವರಣೆ** :- ಕೂರ್ಮದೇವ ಗಂಗೆಗಿಂತ ಕಡಿಮೆಯವನೆಂದರೆ ತತ್ವದೇವತೆಗಳ ತಾರತಮ್ಯದಲ್ಲಿ ಅತಿ ಕೆಳಗಿನವನಾದ ಪುಷ್ಕರ ಎಂದೇ ತಿಳಿಯಬೇಕು. (ವಾದಿರಾಜಿಯ)

ಇಲ್ಲಿ ಎಲ್ಲಾ ಕಡೆಯೂ ''ನೀನೇ ಉತ್ತಮ, ನಿನಗೆ ಸಮಾನವಿಲ್ಲ'' ಎಂಬ ಅಭಿಪ್ರಾಯದಿಂದ, ಎಲ್ಲರನ್ನೂ ಕುರಿತು, ''ಧನ್ಯ, ಆಶ್ಚರ್ಯ'' ಎಂದು ಹೇಳಿದರು ಎಂದು ತಿಳಿಯಬೇಕು.

ಹರಿವಂಶದಲ್ಲಿ ವರುಣನು ''ಪೃಥಿವಿಯನ್ನು ಶ್ರೇಷ್ಠ''ನೆಂದನು ಎಂದು ಉಲ್ಲೇಖವಿದೆ, ಅದರ ವಿರೋಧ ಪರಿಹಾರಕ್ಕಾಗಿ ''ಪೃಥಿವೀನಾಮಕಳಾದ ಉಮೆಯನ್ನು ಶ್ರೇಷ್ಠನೆಂದನು'' ಎಂದಿದ್ದಾರೆ.

ಕೂರ್ಮ ಎಂದು ಪುಷ್ಕರನನ್ನು ಹೇಳುತ್ತಾರೆ. ಪ್ರಾಚೀನ ಟೀಕೆಯ ಅಭಿಮತವೂ ಇದೆ. ಕೆಲವರು ''ಕೂರ್ಮ ಎಂದರೆ ಬುಧನು ತಾಯಿಯ ಶಾಪದಿಂದ ಕೂರ್ಮನಾದನು'' ಎನ್ನುತ್ತಾರೆ. ಆದರೆ ಪುಷ್ಕರ ಎನ್ನುವ ಮತವೆ ಸ್ವರಸ. ನಿರ್ವಚನವೂ ಇದಕ್ಕೆ ಅನುಗುಣವಾಗಿದೆ. ''ಕರೋತಿ, ಕಾರಯತಿ ವಾ

ಕರ್ಮಾಣಿ ಇತಿ ಕೂರ್ಮಃ'' ಎಂದು ನಿರ್ವಚನ. ಪುಷ್ಕರನು ಕರ್ಮದೇವತೆ ಆದ್ದರಿಂದ ಅವನಿಗೆ ಕೂರ್ಮ ಎಂಬ ನಾಮವು ಸಾರ್ಥಕವಾಗುತ್ತದೆ. (ನಿರ್ಣಯಭಾವಚಂದ್ರಿಕಾ)

**ಯಾ ಮಾದೃಶಾ ದೇವತಾಃ ಸರ್ವಶಸ್ತಾ**
**ಧೃತಾಸ್ತಯಾ ಪ್ರಥಿತತ್ವಾತ್ ಪೃಥಿವ್ಯಾ ।**
**ಶಿವಂ ಶೇಷಂ ಗರುಡಂ ಚಾಽಹ ಸಾಽಪಿ**
**ಪರವಾನಾತ್ ಪರ್ವತನಾಮಧೇಯಾನ್ ॥ ೬೮ ॥**

**ಪದಚ್ಛೇದ :- ಯಾಃ, ಮಾದೃಶಾಃ, ದೇವತಾಃ, ಸರ್ವಶಃ, ತಾಃ, ಧೃತಾಃ, ತಯಾ, ಪ್ರಥಿತತ್ವಾತ್, ಪೃಥಿವ್ಯಾ, ಶಿವಂ, ಶೇಷಂ, ಗರುಡಂ, ಚ, ಆಹ, ಸಾ, ಅಪಿ, ಪರಾವನಾತ್, ಪರ್ವತನಾಮಧೇಯಾನ್ ।**

**ಅರ್ಥ :- ಪ್ರಥಿತತ್ವಾತ್** = ಪ್ರಸಿದ್ಧಳಾದ್ದರಿಂದ, **ಪಥಿವ್ಯಾ** = ಪೃಥಿವಿನಾಮಕಳಾದ, **ತಯಾ** = ಆ ಉಮೆಯಿಂದ, **ಮಾದೃಶಾಃ** = ನನ್ನ ಸಮಾನರಾದ, **ಯಾಃ ದೇವತಾಃ** = ದೇವತೆಗಳು, **ಸರ್ವಶಃ** = ನನಗಿಂತ ಉತ್ತಮರಾದ, **ತಾಃ** = ಇಂದ್ರಕಾಮಾದಿ ದೇವತೆಗಳು, **ಧೃತಾಃ** = ಧರಿಸಲ್ಪಟ್ಟಿದ್ದಾರೆ, **ಸಾ ಅಪಿ** = ಆ ಉಮೆಯಾದರೂ, **ಪರಾವನಾತ್** = ಪರರನ್ನು ರಕ್ಷಿಸುವ ಪ್ರಯುಕ್ತ, **ಪರ್ವತನಾಮಧೇಯಾನ್** = ಪರ್ವತ ಎಂಬ ಹೆಸರುಳ್ಳ, **ಶಿವಂ** = ರುದ್ರನನ್ನು, **ಶೇಷಂ** = ಶೇಷನನ್ನು, **ಗರುಡಂ ಚ** = ಗರುಡನನ್ನೂ, **ಆಹ** = ಉತ್ತಮರೆಂದು ಹೇಳಿದಳು.

**ತಾತ್ಪರ್ಯ :-** ಪ್ರಸಿದ್ಧಳಾದ ಪ್ರಯುಕ್ತ ಪೃಥಿವೀನಾಮಕಳಾದ ಉಮೆ ನನ್ನಂಥ ದೇವತೆಗಳೆಲ್ಲರನ್ನೂ ಧರಿಸಿದ್ದಾಳೆ ಎಂದ ವರುಣ. ಉಮೆಯೂ ಕೂಡ ಪರರನ್ನು ರಕ್ಷಿಸುವ ಪ್ರಯುಕ್ತ ಪರ್ವತನಾಮಕರಾದ ಶಿವ ಶೇಷ ಗರುಡನನ್ನು ಉತ್ತಮರೆಂದು ಹೇಳಿದಳು.

**ವಿವರಣೆ :-** ''ಪರಾವನಾತ್'' ಎಂದು ವಾದಿರಾಜೀಯದಲ್ಲಿ ಪಾಠ, ಅದರ ಪ್ರಕಾರ ಪರ ಶಬ್ದ, ಅವ-ರಕ್ಷಣೆ, ಧಾತು ''ಕ್ತ'' ಪ್ರತ್ಯಯಗಳಿಂದ ''ಪರ್ವತ'' ಆಗಿದೆ. ಅಂದರೆ ತಮಗಿಂತ ಕೆಳಗಿನವರಾದ ಇಂದ್ರಾದಿಗಳನ್ನು ರಕ್ಷಣೆ ಮಾಡುವವರು. ಜನಾರ್ದನೀಯದಲ್ಲಿ ಪರಾವಾನಾತ್ ಎಂದರೆ ಪರ

ಎಂದ ಪರಮಾತ್ಮನ ಬಗ್ಗೆ ಆ ಚೆನ್ನಾಗಿ, ವನಾತ್ ತಿಳಿದವರು ಎಂಬ ಅರ್ಥವೂ ಉಲ್ಲೇಖಿತವಾಗಿದೆ. ಇಲ್ಲಿ ವಾ-ಗತಿ-ಗಂಧನಯೋಃ ಎಂಬ ಧಾತು ವಿವಕ್ಷಿತ.

**ತ್ರೈರೇವಾಹಂ ಮತ್ಸಮಾಶ್ಚೈವ ದೇವ್ಯೋ**
**ಧ್ರಿಯಂತ ಇತ್ಯೇವ ತ ಊಚಿರೇಽಥ ।**
**ಬ್ರಹ್ಮಾಣಮೇವೋತ್ತಮಮಾಹ ಸೋಽಪಿ**
**ವೇದಾತ್ಮಿಕಾಂ ಪ್ರಕೃತಿಂ ವಿಷ್ಣುಪತ್ನೀಮ್ ॥ ೬೯ ॥**

**ಪದಚ್ಛೇದ :- ತ್ರೈಃ, ಏವ, ಅಹಂ, ಮತ್ಸಮಾಃ, ಚ, ಏವ, ದೇವ್ಯಃ, ಧ್ರಿಯಂತೇ, ಇತಿ, ಏವ, ತೆ, ಊಚಿರೇ, ಅಥ, ಬ್ರಹ್ಮಾಣಂ, ಏವ, ಉತ್ತಮಂ, ಆಹ, ಸಃ, ಅಪಿ, ವೇದಾತ್ಮಿತಾಂ, ಪ್ರಕೃತಿಂ, ವಿಷ್ಣುಪತ್ನೀಂ ।**

**ಅರ್ಥ :- ಅಹಂ ಏವ** = ನಾನೂ ಕೂಡ, **ಚ** = ಮತ್ತು, **ಮತ್ಸಮಾಃ** = ನನಗೆ ಸಮಾನರಾದ, **ದೇವ್ಯಃ** = ವಾರುಣಿ, ಸೌಪರ್ಣಿಯರು, **ತ್ರೈಃ** = ಗರುಡ ಶೇಷರುದ್ರರಿಂದ, **ಧ್ರಿಯಂತೇ** = ರಕ್ಷಿಸಲ್ಪಡುತ್ತಾರೆ, **ಇತಿ** = ಆದ್ದರಿಂದ (ನನಗಿಂತ ಉತ್ತಮರು), **ಅಥ** = ಗರುಡ ಶೇಷರುದ್ರರನ್ನು ಕೇಳಿದ ನಂತರ, **ತೇ** = ಅವರು, **ಬ್ರಹ್ಮಾಣಂ ಏವ** = ಚತುರ್ಮುಖನನ್ನೇ, **ಉತ್ತಮಂ** = ಶ್ರೇಷ್ಠನೆಂದು, **ಆಹ** = ಹೇಳಿದನು, **ಸಃ ಅಪಿ** = ಆ ಚತುರ್ಮುಖನು, **ವಿಷ್ಣುಪತ್ನೀಂ** = ನಾರಾಯಣನ ಹೆಂಡತಿಯಾದ, **ವೇದಾತ್ಮಿತಾಂ** = ವೇದಾಭಿಮಾನಿಯಾದ, **ಪ್ರಕೃತಿಂ** = ಲಕ್ಷ್ಮಿಯನ್ನು, (**ಉತ್ತಮಂ ಆಹ** = ಶ್ರೇಷ್ಠಳೆಂದು ಹೇಳಿದನು).

**ತಾತ್ಪರ್ಯ :-** ನನ್ನನ್ನೂ ನನಗೆ ಸಮಾನರಾದ ಸೌಪರ್ಣಿ ವಾರುಣೀ ದೇವಿಯರನ್ನೂ ಶಿವ ಶೇಷ ಗರುಡರೇ ಕಾಪಾಡುತ್ತಾರೆ ಎಂದಳು ಉಮೆ. ಶಿವಶೇಷಗರುಡರು ಬ್ರಹ್ಮನನ್ನು ಉತ್ತಮನೆಂದರು. ಬ್ರಹ್ಮನೂ ವೇದಾಭಿಮಾನಿನಿಯಾದ ವಿಷ್ಣುಪತ್ನಿ ರಮೆಯನ್ನು ಉತ್ತಮಳೆಂದು ಹೇಳಿದ.

**ಸೈಕಾ ದೇವೀ ಬಹುರೂಪಾ ಬಭಾಷೇ**
**ಯುಕ್ತಾ ಯದಾಽಹಂ ಜ್ಞೇನ ನಾರಾಯಣೇನ ।**
**ಯಜ್ಞಕ್ರಿಯಾಮಾನಿನೀ ಯಜ್ಞನಾಮ್ನೀ**
**ತದೋತ್ತಮಾ ತತ್ಪ್ರವೇಶಾತ್ ತದಾಖ್ಯಾ ॥ ೭೦ ॥**

ಪದಚ್ಛೇದ :- ಸಾ, ಏಕಾ, ದೇವಿ, ಬಹುರೂಪಾ, ಬಭಾಷೆ, ಯುಕ್ತ, ಯದಾ, ಅಹಂ, ಜ್ಞೇನ, ನಾರಾಯಣೇನ, ಯಜ್ಞಕ್ರಿಯಾಮಾನಿನೀ, ಯಜ್ಞನಾಮ್ನೀ, ತದಾ, ಉತ್ತಮಾ, ತತ್, ಪ್ರವೇಶಾತ್, ತದಾಖ್ಯಾ ।

**ಅರ್ಥ** :- **ಏಕಾ** = ಸ್ವರೂಪದಿಂದ ಒಬ್ಬಳೇ ಆಗಿದ್ದರೂ, **ಬಹುರೂಪಾ** = ಬಹುರೂಪಳಾಗಿರುವ, **ಸಾ** = ವೇದಾಭಿಮಾನಿಯು, **ಬಭಾಷೆ** = ಹೇಳಿದಳು, **ಯದಾ** = ಯಾವಾಗ, **ಅಹಂ** = ನಾನು, **ಜ್ಞೇನ** = ''ಜ್ಞ'' ನಾಮಕನಾದ ನಾರಾಯಣನೊಂದಿಗೆ, **ಯುಕ್ತಾ** = ಕೂಡಿ, **ಯಜ್ಞಕ್ರಿಯಾಮಾನಿನಿ** = ಯಜ್ಞಕ್ರಿಯೆಗೆ ಅಭಿಮಾನಿನಿಯಾಗಿ, **ಯಜ್ಞನಾಮ್ನೀ** = ಯಜ್ಞನಾಮಕಳಾಗಿರುವೆನೋ, **ತದಾ** = ಆಗ, **ಉತ್ತಮಾ** = ಉತ್ತಮಳು, **ತತ್ ಪ್ರವೇಶಾತ್** = ಯಜ್ಞ ಕ್ರಿಯೆಯಲ್ಲಿ ಅಂತರ್ಗತಳಾಗಿದ್ದರಿಂದಲೂ, **ತದಾಖ್ಯಾ** = ಯಜ್ಞನಾಮಕಳೆನೆಸಿದ್ದೇನೆ.

**ತಾತ್ಪರ್ಯ** :- ಒಬ್ಬಳೇ ಆದರೂ ಬಹುರೂಪಳಾಗಿರುವ ವೇದಾಭಿಮಾನಿನಿ ರಮೆ ಹೇಳಿದಳು. ನಾನು ''ಜ್ಞ'' ನಾಮಕನಾದ ನಾರಾಯಣನೊಂದಿಗೆ ಇದ್ದು, ಯಜ್ಞಕ್ರಿಯಾಭಿಮಾನಿನಿಯಾಗಿ ಯಜ್ಞನಾಮಕಳಾಗಿರುವಾಗ ಉತ್ತಮಳು. ಯಜ್ಞಕ್ರಿಯೆಯಲ್ಲಿ ಅಂತರ್ಗತಳಾಗಿದ್ದರಿಂದಲೂ ನಾನು ಯಜ್ಞನಾಮಕಳೆನಿಸಿದ್ದೇನೆ.

**ವಿವರಣೆ** :- ಬಹು ವೇದಗಳಿಗೆ ಅಭಿಮಾನಿಯಾದ್ದರಿಂದ ಅವಳು ಬಹುರೂಪಳು. ಲಕ್ಷ್ಮಿಗೆ ಎರಡು ಅವಸ್ಥಾ ವಿಶೇಷವಿದೆ. ಒಂದು ನಾರಾಯಣನಲ್ಲಿ (ಜನಾರ್ದನೀಯ) ಪ್ರವೇಶವುಳ್ಳ ಅವಸ್ಥಾ ಮತ್ತು ಅವನಿಗಿಂತ ಭಿನ್ನವಾದ ಇನ್ನೊಂದು ಅವಸ್ಥಾ, ಎರಡು ಅವಸ್ಥೆಗಳಲ್ಲೂ ವೇದಾಭಿಮಾನಿತ್ವ ಸಮಾನ. ನಾರಾಯಣನಲ್ಲಿ ಪ್ರವೇಶವಿಲ್ಲದಿರುವ ಅವಸ್ಥೆವುಳ್ಳವಳಿಗಿಂತ ನಾರಾಯಣನಲ್ಲಿ ಪ್ರವೇಶವಿರುವ ಅವಸ್ಥೆವುಳ್ಳವಳು ಶ್ರೇಷ್ಠ ಎಂದು ತಿಳಿಯಬೇಕು. (ಜನಾರ್ದನೀಯ)

**ವಿಷ್ಣಾವವಿಷ್ಟಾ ಯಜ್ಞನಾಮ್ನೀ ತದಂಕ-**
**ಸ್ಥಿತಾ ಸೋಚೇ ಕೇಶವೋ ಹ್ಯುತ್ತಮೋऽಲಮ್ ।**

ನ ತತ್ಸಮಶ್ಚಾಧಿಕೋಽತಃ ಕುತಃ ಸ್ಯಾ-
ದೃಷೇ ಸತ್ಯಂ ನಾನ್ಯಥೇತಿ ಸ್ಮ ಭೂಯಃ ॥ ೭೧ ॥

ಪದಚ್ಛೇದ :- ವಿಷ್ಣೌ ಆವಿಷ್ಟಾ, ಯಜ್ಞನಾಮ್ನೀ, ತದಂತಸ್ಥಿತಾ, ಸಾ, ಊಚೆ, ಕೇಶವಃ, ಹಿ, ಉತ್ತಮಃ, ಅಲಂ, ನ, ತತ್ಸಮಃ, ಚ, ಅಧಿಕಃ, ಕುತಃ, ಸ್ಯಾತ್, ಋಷೆ, ಸತ್ಯಂ, ನ, ಅನ್ಯಥಾ, ನ, ಇತಿ, ಸ್ಮ, ಭೂಯಃ ।

ಅರ್ಥ :- ವಿಷ್ಣೌ = ನಾರಾಯಣನಲ್ಲಿ, ಆವಿಷ್ಟಾ = ಆವಿಷ್ಟಳಾದ, ತದಂಕಸ್ಥಿತಾ = ಅವನ ತೊಡೆ ಮೇಲೆ ಕುಳಿತಿರುವ, ಸಾ = ಲಕ್ಷ್ಮಿಯು, ಕೇಶವಃ = ಕೃಷ್ಣನು, ಅಲಂ ಉತ್ತಮಃ ಹಿ = ನಿಶ್ಚಿತವಾಗಿ ಸರ್ವೋತ್ತಮನಷ್ಟೆ, ತತ್ಸಮಃ ನ = ಅವನಿಗೆ ಸಮನಾರಿಲ್ಲ, ಕುತ ಚ ಅಧಿಕಂ ಸ್ಯಾತ್ = ಎಲ್ಲಿಯೂ ಉತ್ತಮನಿರಲೂ ಹೇಗೆ ಸಾಧ್ಯ?, ಇತಿ = ಎಂದು, ಭೂಯಃ = ಮತ್ತೊಮ್ಮೆ, ಊಚೇ ಸ್ಮ = ಹೇಳಿದಳು.

ತಾತ್ಪರ್ಯ :- ವಿಷ್ಣುವಿನಿಂದ ಆವಿಷ್ಟಳೂ ಅವನ ತೊಡೆಯಲ್ಲಿರುವವಳೂ ಆದ ಯಜ್ಞನಾಮಕಳಾದ ರಮೆ ಕೃಷ್ಣನೇ ಅತ್ಯಂತ ಶ್ರೇಷ್ಠನಾಗಿದ್ದಾನೆ. ಅವನಿಗೆ ಸಮಾನನಿಲ್ಲ, ಉತ್ತಮನೆಲ್ಲಿದ್ದಾನು? ಮುನಿಯೆ, ಇದು ಸತ್ಯ ಸುಳ್ಳಲ್ಲ ಎಂದು ಹೇಳಿದಳು.

ವಿವರಣೆ :- ಶ್ಲೋಕದಲ್ಲಿ ''ಭೂಯಃ'' ಎಂದು ಹೇಳಿದ್ದರಿಂದ ಹಿಂದೆ ಹೇಳಿದ ವೇದಾಭಿಮಾನಿನಿ ಹಾಗೂ ಯಜ್ಞಾಮಾನಿನಿ ಒಬ್ಬರೇ ಎಂದು ತಿಳಿಸಿದಂತಾಯಿತು. (ಜನಾರ್ದನೀಯ)

ತಯೋಕ್ತೋಽಹಂ ನಾವತಾರೇಷು ಕಶ್ಚಿದ್
ವಿಶೇಷ ಇತ್ಯೇವ ಯದುಪ್ರವೀರಮ್ ।
ಸರ್ವೋತ್ತಮೋಽಸೀತ್ಯವದಂ ಸ ಚಾಽಽಹ
ನ ಕೇವಲಂ ಮೇಽಂಕಗಾಯಾಃ ಶ್ರಿಯೋಽಹಮ್ ॥ ೭೨ ॥

ಪದಚ್ಛೇದ :- ತಯಾ, ಉಕ್ತಾ, ಅಹಂ, ನ, ಅವತಾರೇಷು, ಕಶ್ಚಿತ್, ವಿಶೇಷ, ಇತಿ, ಏವ, ಯದುಪ್ರವೀರಂ, ಸರ್ವೋತ್ತಮಃ, ಅಸಿ, ಇತಿ, ಅವದಂ, ಸ, ಚ, ಆಹ, ನ, ಕೇವಲಂ, ಮೇ, ಅಂಕಗಾಯಾಃ, ಶ್ರೀಯಃ, ಅಹಂ ।

**ಅರ್ಥ** :- **ತಯಾ** = ಯಜ್ಞಾಭಿಮಾನಿನಿಯಿಂದ, **ಉಕ್ತಾ** = ಹೀಗೆ ಹೇಳಲ್ಪಟ್ಟ, **ಅಹಂ** = ನಾನು, **ಅವತಾರೇಷು** = ಪರಮಾತ್ಮನ ಅವತಾರಗಳಲ್ಲಿ, **ಕಶ್ಚಿತ್** = ಯಾವ ರೀತಿಯಿಂದಲೂ, **ವಿಶೇಷ** = ಭೇದವು, **ನ** = ಇಲ್ಲ, **ಇತ್ಯೇವ** = ಎಂಬ ಕಾರಣದಿಂದಲೇ, **ಯದುಪ್ರವೀರಂ** = ಕೃಷ್ಣನನ್ನು, **ಸರ್ವೋತ್ತಮಃ** = ಎಲ್ಲರಿಗಿಂತ ಉತ್ತಮನು, **ಅಸಿ** = ಆಗಿರುವಿ, **ಇತಿ** = ಎಂದು, **ಅವದಂ** = ಹೇಳಿದೆನು, **ಸ ಚ** = ಕೃಷ್ಣನಾದನು, **ಆಹ** = ಹೇಳಿದನು, **ಅಹಂ** = ನಾನು, **ಮೇ** = ನನ್ನ, **ಅಂಕಗಾಯಾಃ** = ತೊಡೆಯಲ್ಲಿ ಕುಳಿತಿರುವ, **ಕೇವಲಂ ಶ್ರೀಯಃ ನ** = ಯಜ್ಞಾಭಿಮಾನಿನಿಗಿಂತ ಉತ್ತಮನಷ್ಟೆ ಅಲ್ಲ. (ದಕ್ಷಿಣೆ ಭಾಮಿನಿನಿಗಿಂತಲೂ ಉತ್ತಮ.)

**ತಾತ್ಪರ್ಯ** :- ಯಜ್ಞನಾಮಕಳಾದ ರಮಾದೇವಿ ನನಗೆ ಹೀಗೆ ಹೇಳಿದಾಗ ಶ್ರೀಹರಿಯ ಮೂಲರೂಪಕ್ಕಿಂತ ಅವನ ಅವತಾರಗಳಲ್ಲಿ ಯಾವುದೇ ವಿಶೇಷವಿಲ್ಲ ಎಂದು ಕೃಷ್ಣನನ್ನೇ ''ನೀನು ಸರ್ವೋತ್ತಮ'' ಎಂದೆ, ಆಗ ಅವನು ಹೇಳಿದ ನಾನು ಕೇವಲ ನನ್ನ ತೊಡೆಯ ಮೇಲೆ ಕುಳಿತಿರುವ ಯಾಜ್ಞಾಭಿಮಿನಿನಿಗಿಂತ ಶ್ರೇಷ್ಠವೆಂದಲ್ಲ, ದಕ್ಷಿಣಭಾಮಿನಿನಿಗಿಂತಲೂ ಶ್ರೇಷ್ಠ ಎಂದು.

**ಸದೋತ್ತಮಃ ಕಿಂತು ಯದಾ ತು ಸಾ ಮೇ**
**ವಾಮಾರ್ಧರೂಪಾ ದಕ್ಷಿಣಾನಾಮಧೇಯಾ ।**
**ಯಸ್ಮಾತ್ ತಸ್ಯಾ ದಕ್ಷಿಣತಃ ಸ್ಥಿತೋऽಹಂ**
**ತಸ್ಮಾನ್ನಾಮ್ನಾ ದಕ್ಷಿಣೇತ್ಯೇವ ಸಾ ಸ್ಯಾತ್ ॥ ೭೩ ॥**

ಪದಚ್ಛೇದ :- ಸರ್ವೋತ್ತಮಃ, ಕಿಂತು, ಯದಾ, ತು, ಸಾ ಮೇ, ವಾಮಾರ್ಧರೂಪಾ, ದಕ್ಷಿಣಾನಾಮಧೇಯಾ, ಯಸ್ಮಾತ್, ತಸ್ಯಾಃ, ದಕ್ಷಿಣತಃ, ಸ್ಥಿತಃ, ಅಹಂ, ತಸ್ಮಾತ್, ನಾಮ್ನಾ, ದಕ್ಷಿಣಾ, ಇತಿ, ಏವ, ಸಾ, ಸ್ಯಾತ್ ।

**ಅರ್ಥ** :- **ಸರ್ವೋತ್ತಮಃ** = ಯಜ್ಞನಾಮಕಳಾದ ಲಕ್ಷ್ಮಿಯಿಂದ ಶ್ರೇಷ್ಠನಷ್ಟೆ ಅಲ್ಲ, **ಕಿಂತು** = ಮತ್ತು, **ಯದಾ ತು** = ಯಾವಾಗ, **ಸಾ** = ಲಕ್ಷ್ಮಿಯು, **ಮೇ** = ನನ್ನ, **ವಾಮಾರ್ಧರೂಪಾ** = ಎಡಭಾಗದ ಅರ್ಧರೂಪಳಾಗಿ, **ದಕ್ಷಿಣನಾಮಧೇಯಾ** = ದಕ್ಷಿಣಾನಾಮಕಳಾಗಿರುವಳು (ಆಗಲೂ ಸರ್ವೋತ್ತಮ), **ಯಸ್ಮಾತ್** = ಯಾವ ಕಾರಣದಿಂದ, **ಅಹ** =

ನಾನು, **ತಸ್ಯಾಃ** = ಆ ಲಕ್ಷ್ಮೀಯ, **ದಕ್ಷಿಣತಃ** = ಬಲಭಾಗದಲ್ಲಿ, **ಸ್ಥಿತಃ** = ಇರುವೆನೋ, **ತಸ್ಮಾತ್** = ಆ ಕಾರಣದಿಂದ, **ನಾಮ್ನಾ** = ಹೆಸರಿನಿಂದ, **ಸಾ** = ಲಕ್ಷ್ಮೀಯ, **ದಕ್ಷಿಣೇತ್ಯವಸ್ಯಾತ್** = ದಕ್ಷಿಣಾ ಎಂಬ ನಾಮದಿಂದ ಪ್ರಸಿದ್ಧಳಾಗಿದ್ದಳು.

**ತಾತ್ಪರ್ಯ** :- ನಾನು ಕೇವಲ ಯಕ್ಷನಾಮಕಳಾದ ಲಕ್ಷ್ಮೀಯಿಂದ ಮಾತ್ರ ಸರ್ವೋತ್ತಮನಲ್ಲ, ನನ್ನ ಎಡಭಾಗದ ಅರ್ಧವಾಗಿ ದಕ್ಷಿಣಾ ಎಂಬ ಹೆಸರುಳ್ಳವಳಾಗಿದ್ದಾಗಲೂ, ಸರ್ವೋತ್ತಮ. ನಾನು ಅವಳಿಗೆ ಬಲಭಾಗದಲ್ಲಿ ಇರುವುದರಿಂದ ಅವಳು ದಕ್ಷಿಣಾನಾಮದಿಂದ ಪ್ರಸಿದ್ಧಳಾಗಿದ್ದಾಳೆ.

**ಸಾ ದಕ್ಷಿಣಾಮಾನಿನೀ ದೇವತಾ ಚ**
**ಸಾ ಚ ಸ್ಥಿತಾ ಬಹುರೂಪಾ ಮದರ್ಧಾ ।**
**ವಾಮಾರ್ದ್ಧೋ ಮೇ ತತ್ಪ್ರವಿಷ್ಟೋ ಯತೋ ಹಿ**
**ತತೋಽಹಂ ಸ್ಯಾಮರ್ಧನಾರಾಯಣಾಖ್ಯಃ ॥ ೭೪ ॥**

**ಪದಚ್ಛೇದ** :– ಸಾ, ದಕ್ಷಿಣಾಮಾನಿನೀ, ದೇವತಾ, ಚ, ಸಾ, ಚ, ಸ್ಥಿತಾ, ಬಹುರೂಪಾ, ಮದರ್ಧಾ, ವಾಮಾರ್ಧಾ, ಮೇ, ತತ್ಪ್ರವಿಷ್ಟಃ, ಯತಃ, ಹಿ, ತತಃ, ಅಹಂ, ಸ್ಯಾತ್, ಸ್ಯಾಮ್, ಅರ್ಧನಾರಾಯಣಾಖ್ಯಃ ।

**ಅರ್ಥ** :- **ಸಾ** = ಆ ದಕ್ಷಿಣೆಯು, **ದಕ್ಷಿಣಾಭೀಮಾನಿನಿ ದೇವಾತಾ** = ಯಜ್ಞಗಳಲ್ಲಿ ಕೊಡುವ ದಕ್ಷಿಣೆಯ ಅಭಿಮಾನಿ, **ಬಹುರೂಪಾ** = ಬಹುರೂಪಳಾದ, **ಸಾ ಚ** = ಆ ದಕ್ಷಿಣೆಯು, **ಮದರ್ಧಾ** = ನನ್ನ ಅರ್ಧರೂಪಳು, **ಯತಃ** = ಯಾವ ಕಾರಣದಿಂದ, **ಮೇ** = ನನ್ನ, **ವಾಮಾರ್ಧಾ** = ಬಲಭಾಗವು, **ತತ್ಪ್ರವಿಷ್ಟಃ** = ಅವಳಿಂದ ಪ್ರವೇಶಿಸಲ್ಪಟ್ಟಿದೆಯೋ, **ತತಃ** = ಆದ್ದರಿಂದ, **ಅಹಂ** = ನಾರಾಯಣನು, **ಅರ್ಧನಾರಾಯಣಾಖ್ಯಃ ಸ್ಯಾಮ್** = ಅರ್ಧನಾರಾಯಣ ಎನಿಸಿದ್ದೇನೆ.

**ತಾತ್ಪರ್ಯ** :- ಆ ದಕ್ಷಿಣಾನಾಮಕಳಾದ ಲಕ್ಷ್ಮೀಯು ಯಜ್ಞದಲ್ಲಿ ಕೊಡುವ ದಕ್ಷಿಣೆಗೆ ಅಭಿಮಾನಿ ಯಜ್ಞದಲ್ಲಿ ದಕ್ಷಿಣೆಯು ಬಹುರೂಪವಾದ್ದರಿಂದ ಅವಳು ಬಹುರೂಪಳು ಅವಳು ನನ್ನ ಬಲಭಾಗದಲ್ಲಿ ಪ್ರವೇಶಿಸಿದ್ದರಿಂದ ನಾನು ಅರ್ಧನಾರಾಯಣ ಎಂದೆನಿಸಿದ್ದೇನೆ.

ತದಾಽಪ್ಯಸ್ಯಾ ಉತ್ತಮೋಽಹಂ ಸುಪೂರ್ಣೋ
ನ ಮಾದೃಶಃ ಕಶ್ಚಿದಸ್ತ್ಯುತ್ತಮೋ ವಾ ।
ಇತ್ಯೇವಾವಾದೀದ್ ದಕ್ಷಿಣಾಭಿಃ ಸಹೇತಿ
ಸರ್ವೋತ್ತಮತ್ವಂ ದಕ್ಷಿಣಾನಾಂ ಸ್ಮರನ್ ಸಃ ॥ ೭೫ ॥

ಪದಚ್ಛೇದ :- ತದಾ, ಅಪಿ, ಅಸ್ಯಾಃ, ಉತ್ತಮಃ, ಅಹಂ, ಸುಪರ್ಣಃ, ನ, ಮಾದೃಶಃ, ಕಶ್ಚಿತ್, ಅಸ್ತಿ, ಉತ್ತಮಃ, ವಾ, ಇತಿ, ಏವ, ಅವಾದೀತ್, ದಕ್ಷಿಣಾಭಿಃ, ಸಃ, ಇತಿ, ಸರ್ವೋತ್ತಮಃ ತ್ವಂ, ದಕ್ಷಿಣಾನಾಂ, ಸ್ಮರನ್, ಸಃ ।

**ಅರ್ಥ** :- **ತದಾ ಅಪಿ** = ಬಲಭಾಗದಲ್ಲಿ ಲಕ್ಷ್ಮಿಯಿದ್ದಾಗಲೂ, **ಅಹ** = ನಾನು, **ಉತ್ತಮಃ** = ಶ್ರೇಷ್ಠನು, **ಇತ್ಯೇವ** = ಈ ಕಾರಣದಿಂದಲೆ, **ಸುಪೂರ್ಣಃ** = ಬಲಜ್ಞಾನಗಳಿಂದ ಪೂರ್ಣನು, **ಮಾದೃಶಃ** = ನನ್ನ ಸದೃಶನು, **ಉತ್ತಮಃ ವಾ** = ಉತ್ತಮನು, **ನಾಸ್ತಿ** = ಯಾರೂ ಇಲ್ಲ, **ಸಃ** = ಆ ಕೃಷ್ಣನು, **ದಕ್ಷಿಣಾನಾಂ** = ಲಕ್ಷ್ಮಿಯರೂಪಗಳಿಂದಲೂ, **ಚ** = ಮತ್ತು, **ಸರ್ವೋತ್ತಮತ್ವಂ** = ಎಲ್ಲ ಜಗತ್ತಿಗಿಂತ ಉತ್ತಮತ್ವವನ್ನು, **ಸ್ಮರನ್** = ಸಾಧಿಸುತ್ತಾ, **ದಕ್ಷಿಣಾಭಿಃ ಸಹ** = ದಕ್ಷಿಣಾಭಿಃ ಸಾಕಂ, **ಇತಿ** = ಎಂದು, **ಅವಾದೀತ್** = ಹೇಳಿದನು.

**ತಾತ್ಪರ್ಯ** :- ದಕ್ಷಿಣಾ ನಾಮಕಳಾದ ದೇವಿಯು ಬಲಭಾಗದಲ್ಲಿ ಇರುವಾಗಲೂ, ನಾನು ಅವುಗಳಿಗಿಂತ ಶ್ರೇಷ್ಠನು. ನನ್ನ ಸಮಾನರಾಗಲ್ಲಿ ಉತ್ತಮರಾಗಲಿ ಯಾರೂ ಇಲ್ಲ. ನಾನು ಬಲಜ್ಞಾನಗಳಿಂದ ಪೂರ್ಣನು ನಾನು ದಕ್ಷಿಣಾದೇವಿ ಮತ್ತು ಜಗತ್ತಿಗಿಂತ ಉತ್ತಮನು ಎಂದು ಸಾಧಿಸುತ್ತಾ ''ದಕ್ಷಿಣಾಭಿಃ ಸಾಕಂ'' ಎಂದನು.

ತಾಭಿಶ್ಚೈತಾಭಿರ್ದಕ್ಷಿಣಾಭಿಃ ಸಮೇತಾದ್
ವರಿಷ್ಠೋಽಹಂ ಜಗತಃ ಸರ್ವದೈವ ।
ಮತ್ಸಾಮರ್ಥ್ಯಾನ್ನೈವ ಚಾನಂತಭಾಗೋ
ದಕ್ಷಿಣಾನಾಂ ವಿದ್ಯತೇ ನಾರದೇತಿ ॥ ೭೬ ॥

ಪದಚ್ಛೇದ :- ತಾಭಿಃ, ಚ, ಎತಾಭಿಃ, ದಕ್ಷಿಣಾಭಿಃ, ಸಮೇತಾದ್, ವರಿಷ್ಠಃ, ಅಹಂ, ಜಗತಃ, ಸರ್ವದಾ, ಏವ, ಮತ್ಸಾಮರ್ಥ್ಯಾತ್, ಚ, ಅನಂತಭಾಗೊ, ದಕ್ಷಿಣಾನಾಂ, ವಿದ್ಯತೇ, ನಾರದ, ಇತಿ ।

**ಅರ್ಥ** :- **ನಾರದ** = ಎಲೈ ನಾರದನೆ, **ತಾಭಿಃ** = ವೇದಾಭಿಮಾನಿ ಯಜ್ಞಾಮಾನಿನಿಗಳಿಂದ, **ಎತಾಭಿಃ** = ದಕ್ಷಿಣೆಗಳಿಂದ, **ಸಮೇತಾತ್** = ಕೂಡಿ, **ಜಗತಃ** = ಪ್ರಪಂಚಕ್ಕಿಂತ, **ಸರ್ವದಾ** = ಎಲ್ಲಾ ಕಾಲದಲ್ಲೂ, **ವರಿಷ್ಠಃ ಏವ್** = ಶ್ರೇಷ್ಠನೇ ಆಗಿದ್ದಾನೆ, **ಮತ್ಸಾಮರ್ಥ್ಯಾತ್** = ನನ್ನ ಸಾಮರ್ಥ್ಯದ, **ಅನಂತಭಾಗಃ** = ಅನಂತಭಾಗದ ಒಂದು ಭಾಗವು, **ದಕ್ಷಿಣಾನಾಂ** = ವಾಮಾರ್ಧರೂಪಳಾದ ಲಕ್ಷ್ಮಿಗೆ, **ನವಿದ್ಯತೇ ಇತಿ** = ಇಲ್ಲ ಎಂದು (ಹೇಳಿದನು).

**ತಾತ್ಪರ್ಯ** :- ನಾರದ, ವೇದಯಜ್ಞ ದಕ್ಷಿಣಾದೇವಿಯರೂ ಸೇರಿದಂತೆ, ಎಲ್ಲ ಜಗತ್ತಿಗಿಂತಲೂ ನಾನು ಸರ್ವದಾ ಉತ್ತಮನು ನನ್ನ ಸಾಮರ್ಥ್ಯದ ಅನಂತಾಂಶಗಳಲ್ಲಿ ಒಂದಂಶದಷ್ಟೂ ಸಾಮರ್ಥ್ಯವು ದಕ್ಷಿಣಾದೇವಿಯರಿಗೆ ಇಲ್ಲ ಎಂದು ನುಡಿದ.

**ಉಕ್ತಂ ಕೃಷ್ಣೇನಾಪ್ರತಿಮೇನ ಭೂಪಾ**
**ಅನ್ಯೋತ್ತಮತ್ವಂ ದಕ್ಷಿಣಾನಾಂ ಚ ಶಶ್ವತ್ ।**
**ಸೇಯಂ ಭೈಷ್ಮೀ ದಕ್ಷಿಣಾ ಕೇಶವೋಽಯಂ**
**ತಸ್ಯಾಃ ಶ್ರೇಷ್ಠಃ ಪಶ್ಯತ ರಾಜಸಂಘಾಃ ॥ ೭೭ ॥**

**ಪದಚ್ಛೇದ** :- ಉಕ್ತಂ, ಕೃಷ್ಣೇನ, ಅಪ್ರಮಿತೇನ, ಭೂಪಾಃ, ಅನ್ಯೋತ್ತಮತ್ವಂ, ದಕ್ಷಿಣಾನಾಂ, ಚ, ಶಶ್ವತ್, ಸಾ, ಇಯಂ, ಭೈಷ್ಮೀ, ದಕ್ಷಿಣಾ, ಕೇಶವಃ, ಅಯಂ, ತಸ್ಯಾಃ, ಶ್ರೇಷ್ಠ, ಪಶ್ಯತ, ರಾಜಸಂಘಾಃ ।

**ಅರ್ಥ** :- **ಭೂಪಾಃ** = ರಾಜರೇ, **ಅಪ್ರಮಿತೇನ** = ಅಪ್ರಮಿತ ಶಕ್ತಿಶಾಲಿಯಾದ, **ಕೃಷ್ಣೇನ ಚ** = ಕೃಷ್ಣನಿಂದ, **ಶಶ್ವತ್** = ಶಾಶ್ವತವಾಗಿ, **ದಕ್ಷಿಣಾನಾಂ** = ದಕ್ಷಿಣಾದೇವಿಯರ, **ಅನ್ಯೋತ್ತಮತ್ವಂ** = ಅನ್ಯ - ತನಗಿಂತ ಇತರವಾದ ಜಗತ್ತಿಗಿಂತ, **ಉತ್ತಮತ್ವಂ** = ಶ್ರೇಷ್ಠತೆಯು, **ಉಕ್ತಂ** = ಹೇಳಲ್ಪಟ್ಟಿತು, **ರಾಜಸಂಘಾಃ** = ರಾಜ ಸಮೂಹವೆ, **ಪಶ್ಯತೆ** = ನೋಡಿರಿ, **ಸಾ ದಕ್ಷಿಣಾ** = ದಕ್ಷಿಣೆಯೆಂದು ಉಕ್ತಳಾದವಳೆ, **ಇಯ ಭೈಷ್ಕೀ** = ಈ ರುಗ್ಮಿಣಿಯು, **ಅಯಂ** = ಅವಳ ಪಕ್ಕದಲ್ಲಿ ಕುಳಿತಿರುವನೇ, **ಕೇಶವಃ** = ನಾರಾಯಣನು, **ತಸ್ಯಾ** = ಆ ದಕ್ಷಿಣೆಗಿಂತ, **ಶ್ರೇಷ್ಠಃ** = ಉತ್ತಮನು.

ತಾತ್ಪರ್ಯ :- ನಾರದರು ಹೇಳಿದರು, ಪರಾಕ್ರಮಶಾಲಿಯಾಗಿರುವ ಕೃಷ್ಣನು ದಕ್ಷಿಣಾದೇವಿಯ ತನ್ನನ್ನು ಬಿಟ್ಟು ಉಳಿದೆಲ್ಲವರಗಿಂತ ದಕ್ಷಿಣೆಯು ಶ್ರೇಷ್ಠ- ಳಾಗಿದ್ದಾಳೆ ಎಂದು ಹೇಳಿದನು. ಆ ದಕ್ಷಿಣೆಯು ನಿಮಗೆ ಎದುರಲ್ಲಿ ಕಾಣುತ್ತಿರುವ ರುಕ್ಮಿಣಿಯೆ. ಆ ರುಕ್ಮಿಣಿಗಿಂತ ಪರಮಾತ್ಮನೆ ಶ್ರೇಷ್ಠನು ಎಂದು ರಾಜರುಗಳೆ ತಿಳಿಯಿರಿ.

**ಪ್ರತ್ಯಕ್ಷಂ ವೋ ವೀರ್ಯಮಸ್ಯಾಪಿ ಕುಂತ್ಯಾ**
**ಯುದ್ಧೇಽರ್ಥಿತಃ ಕೇಶವೋ ವೀರ್ಯಮಸ್ಯೈ ।**
**ಅದರ್ಶಯತ್ ಪಾಂಡವಾನ್ ಧಾರ್ತರಾಷ್ಟ್ರಾನ್**
**ಭೀಷ್ಮದ್ರೋಣದ್ರೌಣಿಕೃಪಾನ್ ಸಕರ್ಣಾನ್ ।**
**ನಿರಾಯುಧಾಂಶ್ಚಕ್ರ ಏಕಃ ಕ್ಷಣೇನ**
**ಲೋಕಶ್ರೇಷ್ಠಾನ್ ದೈವತೈರಪ್ಯಜೇಯಾನ್ ॥ ೭೮ ॥**

ಪದಚ್ಛೇದ :- ಪ್ರತ್ಯಕ್ಷಂ, ವಃ, ವೀರ್ಯಂ, ಅಸ್ಯ, ಅಪಿ, ಕುಂತ್ಯಾ, ಯುದ್ಧೇ, ಅರ್ಥಿತಃ, ಕೇಶವಃ, ವೀರ್ಯಂ, ಅಸ್ಯೈ, ಅದರ್ಶಯತ್, ಪಾಂಡವಾನ್, ಧಾರ್ತರಾಷ್ಟ್ರಾನ್, ಭೀಷ್ಮದ್ರೋಣದ್ರೌಣಿ ಕೃಪಾನ್, ಸಕರ್ಣಾನ್, ನಿರಾಯುಧಾನ್, ಚಕ್ರೆ, ಏಕಕ್ಷಣೇನ, ಲೋಕಶ್ರೇಷ್ಠಾನ್, ದೈವತೈಃ, ಅಪಿ, ಅಜೇಯಾನ್ ।

**ಅರ್ಥ** :- **ಅಸ್ಯ** = ಕೃಷ್ಣಸ್ಯ, **ವೀರ್ಯಂ** = ಬಲವು, **ವಃ** = ನಿಮಗೆ, **ಪ್ರತ್ಯಕ್ಷಮಪಿ** = ಪ್ರತ್ಯಕ್ಷಸಿದ್ದವಷ್ಟೆ (ನಾರದರು ಹೀಗೆ ಹೇಳಲು), **ಕುಂತ್ಯಾ** = ಕುಂತಿಯಿಂದ, **ಯುದ್ಧೇ** = ಯುದ್ಧದ ವಿಷಯದಲ್ಲಿ, **ಪ್ರಾರ್ಥಿತಃ** = ಪ್ರಾರ್ಥಿಸಲ್ಪಟ್ಟವನಾಗಿ, **ಕೇಶವಃ** = ಕೃಷ್ಣನು, **ಅಸ್ಯೈಃ** = ಪೃಥೆಗೆ, **ವೀರ್ಯಂ** = ಬಲವನ್ನು, **ಅದರ್ಶಯತ್** = ತೋರಿಸಿದನು, **ಲೋಕಶ್ರೇಷ್ಠಾನ್** = ಮೂಲರ್ೋಕದಲ್ಲಿ ಶ್ರೇಷ್ಠರಾದ, **ದೈವತೈರಪ್ಯಜೇಯಾನ್** = ದೇವತೆಗಳಿಂದಲೂ ಜಯಿಸಲಸಾಧ್ಯವಾದ, **ಪಾಂಡವಾನ್** = ಪಾಂಡವರನ್ನೂ, **ಭೀಷ್ಮದ್ರೋಣ ದ್ರೌಣೀಕೃಪಾನ್** = ಭೀಷ್ಮ, ದ್ರೋಣ, ಅಶ್ವತ್ಥಾಮ, ಕೃಪರನ್ನೂ, **ಸಕರ್ಣಾನ್** = ಕರ್ಣಸಹಿತರಾದ, **ಧಾರ್ತರಾಷ್ಟ್ರಾನ್** = ದುರ್ಯೋಧನಾದಿ ಗಳನ್ನೂ **ಏಕಃ ಕ್ಷಣೇನ** = ಒಂದೇ ಕ್ಷಣದಲ್ಲಿ, **ನಿರಾಯುಧಾನ್** = ಆಯುಧ ರಹಿತರನ್ನಾಗಿ, **ಚಕ್ರೇ** = ಮಾಡಿದನು.

ತಾತ್ಪರ್ಯ :- ಶ್ರೀಕೃಷ್ಣನ ಶಕ್ತಿಯನ್ನು ಬೇಕಾದರೆ ನೀವೇ ಪ್ರತ್ಯಕ್ಷವಾಗಿ ನೋಡಿರಿ ಎಂದು ನಾರದರು ಹೇಳಿದಾಗ ಕುಂತಿದೇವಿಯ ಪ್ರಾರ್ಥನೆಯಂತೆ ಅವಳಿಗಾಗಿ ಶ್ರೀಕೃಷ್ಣ ಯುದ್ಧದಲ್ಲಿ ಪರಾಕ್ರಮವನ್ನು ತೋರಿದ. ದೇವತೆಗಳಿಂದಲೂ ಪರಾಭವ ಹೊಂದದಿರುವ ಲೋಕದಲ್ಲೇ ಶ್ರೇಷ್ಠ ಪರಾಕ್ರಮಿಗಳೆನಿಸಿದ ಪಾಂಡವರು ಕೌರವರು ಭೀಷ್ಮ ದ್ರೋಣ ಅಶ್ವತ್ಥಾಮ ಕೃಪ ಕರ್ಣರು ಈ ಎಲ್ಲರನ್ನೂ ಶ್ರೀಕೃಷ್ಣ ಒಂದು ಕ್ಷಣದಲ್ಲಿ ನಿರಾಯುಧರನ್ನಾಗಿ ಮಾಡಿದ.

ವ್ರತಂ ಭೀಮಸ್ಯಾಸ್ತಿ ನೈವಾಭಿ ಕೃಷ್ಣ-
ಮಿಯಾಮಿತಿ ಸ್ಮಾऽಜ್ಞಯಾ ತಸ್ಯ ವಿಷ್ಣೋಃ ।
ಚಕ್ರಂ ರಥಸ್ಯಾಗ್ರಹೀತ್ ಸ ಪ್ರಣಮ್ಯ
ಕೃಷ್ಣಂ ಸ ತಂ ಕೇಶವೋऽಪಾಹರಚ್ಚ ॥ ೭೯ ॥

ಪದಚ್ಛೇದ :- ವ್ರತಂ, ಭೀಮಸ್ಯ, ಅಸ್ತಿ, ನ, ಏವಂ, ಅಭಿಕೃಷ್ಣಂ, ನ, ಏವ, ಇಯಾಂ, ಇತಿ, ಸ್ಮ, ಆಜ್ಞಯಾ, ತಸ್ಯ, ವಿಷ್ಣೋಃ, ಚಕ್ರಂ, ರಥಸ್ಯ, ಅಗ್ರಹಿಲತ್, ಸ, ಪ್ರಣಮ್ಯ, ಕೃಷ್ಣಂ, ಸ, ತಂ, ಕೇಶವಃ, ಉಪಾಹರತ್, ಚ ।

ಅರ್ಥ :- ಕೃಷ್ಣಮಭಿ = ಕೃಷ್ಣನನ್ನು ಕುರಿತು, ನೈವ ಇಯಾಮ್ = ಯುದ್ಧಕ್ಕಾಗಿ ಹೋಗುವುದಿಲ್ಲ, ಇತಿ = ಎಂದು, ಭೀಮಸ್ಯ = ಭೀಮನ, ವ್ರತಂ = ವ್ರತವು, ಅಸ್ತಿ ಸ್ಮ = ಇದ್ದೀತು (ಆದ್ದರಿಂದ), ಸಃ = ಭೀಮನು, ಕೃಷ್ಣಂ = ಕೃಷ್ಣನನ್ನು, ಪ್ರಣಮ್ಯ = ನಮಿಸಿ, ತಸ್ಯ ವಿಷ್ಣೋಃ = ಆ ಶ್ರೀಕೃಷ್ಣನ, ಆಜ್ಞಯಾ = ಆಜ್ಞೆಯಿಂದೆ, ರಥಸ್ಯ ಚಕ್ರಂ = ಶ್ರೀಕೃಷ್ಣನ ರಥಚಕ್ರವನ್ನು, ಅಗ್ರಹೀತ್ = ಹಿಡಿದನು, ಕೇಶವಃ ಚ = ಕೃಷ್ಣನಾದರೂ, ತಂ = ಭೀಮನನ್ನು, ಉಪಾಹರತ್ = ದೂರಕ್ಕೆ ಎಸೆದನು.

ತಾತ್ಪರ್ಯ :- ಕೃಷ್ಣನೊಂದಿಗೆ ಯಾವುದೇ ಕಾರಣಕ್ಕೂ ಯುದ್ಧ ಮಾಡುವುದಿಲ್ಲ ಎಂದು ಭೀಮನು ಪ್ರತಿಜ್ಞೆ ಮಾಡಿದ್ದನು. ಆದರೂ ಕೃಷ್ಣ ಆಜ್ಞೆ ಮಾಡಿದ್ದರಿಂದ ಅವನನ್ನು ನಮಸ್ಕರಿಸಿ ರಥಚಕ್ರವನ್ನು ಮಾತ್ರ ಗಟ್ಟಿಯಾಗಿ ಹಿಡಿದುಕೊಂಡ. ಯುದ್ಧ ಮಾಡಲಿಲ್ಲ ಆದರೂ ಶ್ರೀಕೃಷ್ಣ ತನ್ನ ಬಲವನ್ನು ತೋರುವುದಕ್ಕಾಗಿ ಭೀಮನನ್ನು ರಥದಿಂದ ಬಿಡಿಸಿ ದೂರಕ್ಕೆ ಎಸೆದುಬಿಟ್ಟ.

ವಿವರಣೆ :- ಹಿಂದೆ ಭೀಮನು ''ಕೃಷ್ಣನೊಂದಿಗೆ ಗದಾ ಶಿಕ್ಷಣವನ್ನು ಮಾಡಿರಲಿಲ್ಲ ''ಪ್ರತ್ಯುದ್ಯಮೋ ಭಗವತಾಪಿ ಭವೇತ್ ಗದಾಯಾಃ ಶಿಕ್ಷಾ ಯದಾ ಭಗವತಾ ಕ್ರಿಯತೆ ನ ಚೇಮಮ್ । ಕುರ್ಯಾಮ್'' ಭಗವಂತನೊಟ್ಟಿಗೆ ಗದಾಶಿಕ್ಷಣವನ್ನು ಮಾಡಿದರೆ, ಪ್ರತಿ ಪ್ರಹಾರವನ್ನು ಮಾಡಬೇಕಾದೀತು, ಭೀಮನು ಪ್ರತಿ ಪ್ರಹಾರ ಮಾಡುವುದಿಲ್ಲ'', ಆದ್ದರಿಂದ ಗದಾಶಿಕ್ಷಣವನ್ನು ಮಾಡಿರಲಿಲ್ಲ.

**ಏವಂ ಕ್ರೀಡಂತೋಽಪ್ಯಾತ್ಮಶಕ್ತ್ಯಾ ಪ್ರಯತ್ನಂ**
**ಕುರ್ವಂತಸ್ತೇ ವಿಜಿತಾಃ ಕೇಶವೇನ ।**
**ತತಃ ಸರ್ವೇ ನೇಮುರಸ್ಮೈ ಪೃಥಾ ಚ**
**ಸವಿಸ್ಮಯಾ ವಾಸುದೇವಂ ನನಾಮ ॥ ೮೦ ॥**

**ಪದಚ್ಛೇದ :- ಏವಂ, ಕ್ರೀಡಂತಃ, ಅಪಿ, ಆತ್ಮಶಕ್ತ್ಯಾ, ಪ್ರಿಯತ್ನಂ, ಕುರ್ವಂತಃ, ತೇ, ವಿಜಿತಾಃ, ಕೇಶವೇನ, ತತಃ, ಸರ್ವೇ, ನೇಮುಃ, ಅಸ್ಮೈ, ಪೃಥಾ, ಚ, ಸವಿಸ್ಮಯಾ, ವಾಸುದೇವಂ, ನನಾಮ ।**

**ಅರ್ಥ** :- **ಏವಂ** = ಹೀಗೆ, **ಕ್ರೀಡಂತಃ ಅಪಿ** = ಕ್ರೀಡಿಸುತ್ತಿದ್ದರೂ, **ಆತ್ಮಶಕ್ತ್ಯಾ** = ಆತ್ಮಬಲದಿಂದ, **ಕುರ್ವಂತಃ** = ಯುದ್ಧ ಮಾಡುತ್ತಿದ್ದರೂ, **ತೇ** = ಆ ದುರ್ಯೋಧನಾದಿಗಳು, **ಕೇಶವೇನ** = ಕೃಷ್ಣನಿಂದ, **ವಿಜಿತಾಃ** = ಗೆಲ್ಲಲ್ಪಟ್ಟರು, **ತತಃ** = ಪರಾಭವಾನಂತರ, **ಸರ್ವೇ** = ಎಲ್ಲರೂ, **ಅಸ್ಮೈ** = ಕೃಷ್ಣನಿಗೆ, **ನೇಮುಃ** = ನೇಮಿಸಿದರು, **ಪೃಥಾ ಚ** = ಕುಂತಿಯೂ, **ಸವಿಸ್ಮಯಾ** = ಆಶ್ಚರ್ಯಚಕಿತ- ಳಾದವಳಾಗಿ, **ನನಾಮ** = ನಮಸ್ಕರಿಸಿದಳು.

**ತಾತ್ಪರ್ಯ** :- ಹೀಗೆ ಎಲ್ಲಾ ರಾಜರೂ ಕ್ರೀಡೆ ಮಾಡುತ್ತ ತಮ್ಮ ಶಕ್ತಿ ಇದ್ದಷ್ಟೂ ಪ್ರಯತ್ನ ಮಾಡಿದರೂ ಕೃಷ್ಣನಿಂದ ಪರಾಜಿತರಾಗಿ ಅವನಿಗೆ ನಮಿಸಿದರು. ಕುಂತಿಯೂ ಆಶ್ಚರ್ಯ ಭರಿತರಾಗಿ ನಮಿಸಿದಳು.

**ಏವಂ ವಿಧಾನ್ಯದ್ಭುತಾನೀಹ ಕೃಷ್ಣೇ**
**ದೃಷ್ಟಾನಿ ವಃ ಶತಸಾಹಸ್ರಶಶ್ಚ ।**
**ತಸ್ಮಾದೇಷ ಹ್ಯದ್ಭುತೋಽತ್ಯುತ್ತಮಶ್ಚೇ-**
**ತ್ಯುಕ್ತ್ವಾ ನೇಮುಸ್ತೇಽಖಿಲಾ ವಾಸುದೇವಮ್ ॥ ೮೧ ॥**

**ಪದಚ್ಛೇದ :-** ಏವಂ, ವಿಧಾನಿ, ಅದ್ಭುತಾನಿ, ಇಹ, ಕೃಷ್ಣೇ, ದೃಷ್ಟಾನಿ, ವಃ, ಶತಸಾಹಸ್ರಶಃ, ಚ, ತಸ್ಮಾತ್, ಏಷಃ, ಹಿ, ಅದ್ಭುತಃ, ಅಪಿ, ಉತ್ತಮಃ, ಚ, ಇತಿ, ಉಕ್ತಾಃ, ನೇಮುಃ, ತೇ, ಅಖಿಲಾಃ, ವಾಸುದೇವಂ ।

**ಅರ್ಥ :-** ವಃ = ನಿಮ್ಮಿಂದ, ಏವಂ ವಿಧಾನಿ = ಹಿಂದೆ ನೋಡಿದ ಪ್ರಕಾರ, ಅದ್ಭುತಾನಿ = ಅದ್ಭುತಗಳು, ಇಹ ಕೃಷ್ಣೇ = ಈ ಕೃಷ್ಣನಲ್ಲಿ, ಶತಸಾಹಸ್ರಶಃ ಚ = ಹತ್ತುಹಲವು ಸಾವಿರಗಳು, ದೃಷ್ಟಾನಿ = ನೋಡಲ್ಪಟ್ಟಿದೆ, ತಸ್ಮಾತ್ = ಆ ಕಾರಣದಿಂದ, ಏಷ ಹಿ = ಈ ಕೃಷ್ಣನೇ, ಅದ್ಭುತಃ ಅಪಿ = ಆಶ್ಚರ್ಯನೂ, ಉತ್ತಮಃ ಚ = ಸರ್ವಶ್ರೇಷ್ಠನೂ, ಇತಿ = ಎಂದು, ಉಕ್ತಾಃ = ನಾರದನಿಂದ ಹೇಳಲ್ಪಟ್ಟ, ತೇ ಅಖಿಲಾಃ = ಎಲ್ಲಾ ಜನರೂ, ವಾಸುದೇವಂ = ಶ್ರೀಕೃಷ್ಣನನ್ನು, ನೇಮುಃ = ನಮಿಸಿದರು.

**ತಾತ್ಪರ್ಯ :-** ನಾರದರು ಹೇಳಿದರು, ಹಿಂದೆ ನೋಡಿದ ಹಾಗೆ ಹಲವಾರು ಬಾರಿ ನೀವೇ ಕೃಷ್ಣನ ಅದ್ಭುತವಾದ ಲೀಲೆಗಳನ್ನು, ಪರಾಕ್ರಮಗಳನ್ನು ನೋಡಿದ್ದೀರಿ ಆದ್ದರಿಂದ ಈ ಕೃಷ್ಣನೆ ಧನ್ಯನು, ಆಶ್ಚರ್ಯನು. ಹೀಗೆ ನಾರದರು ಹೇಳಿದಾಗ ಅವರೆಲ್ಲರೂ ಕೃಷ್ಣನನ್ನು ನಮಿಸಿದರು.

**ವಾಯ್ವಾಜ್ಞಯಾ ವಾಯುಶಿಷ್ಯಃ ಸ ಸತ್ಯ-**
**ಮಿತ್ಯಾದ್ಯುಕ್ತ್ವಾ ನಾರದೋ ರುಗ್ಮಿಣೀಂ ಚ ।**
**ಸ್ತುತ್ವಾ ಪುಷ್ಪಂ ಪಾರಿಜಾತಸ್ಯ ದತ್ವಾ**
**ಯಯೌ ಲೋಕಂ ಕ್ಷಿಪ್ರಮಬ್ಜೋದ್ಭವಸ್ಯ ॥ ೮೨ ॥**

ಪದಚ್ಛೇದ :- ವಾಯ್ವಾಜ್ಞಯಾ, ವಾಯುಶಿಷ್ಯಃ, ಸಃ, ಸತ್ಯಂ, ಇತಿ, ಆದಿ, ಉಕ್ತ್ವಾ, ನಾರದಃ, ರುಕ್ಮಿಣೀಂ, ಚ, ಸ್ತುತ್ವಾ, ಪುಷ್ಪಂ, ಪಾರಿಜಾತಸ್ಯ, ದತ್ವಾ, ಯಯೌ, ಲೋಕಂ, ಕ್ಷಿಪ್ರಂ, ಅಬ್ಜೋದ್ಭವಸ್ಯ ।

**ಅರ್ಥ :-** ವಾಯ್ವಾಜ್ಞಯಾ = ವಾಯುದೇವರ ಆಜ್ಞೆಯಿಂದ, ವಾಯುಶಿಷ್ಯಃ = ವಾಯುದೇವರ ಶಿಷ್ಯನಾದ, ಸಃ = ನಾರದರು, ಇತ್ಯಾದಿ = ಕೃಷ್ಣನೇ ಧನ್ಯನು ಆಶ್ಚರ್ಯನು ಎಂಬ ಮೊದಲಾದ, ಸತ್ಯಂ = ಸತ್ಯವನ್ನು, ಉಕ್ತ್ವಾ = ಹೇಳಿ, ರುಕ್ಮಿಣೀಂ ಚ = ರುಗ್ಮಿಣಿಯನ್ನು, ಸ್ತುತ್ವಾ = ಸ್ತುತಿಸಿ, ಪಾರಿಜಾತಸ್ಯ ಪುಷ್ಪಂ = ಪಾರಿಜಾತಪುಷ್ಪವನ್ನು, ದತ್ವಾ = ಕೊಟ್ಟು, ಅಬ್ಜೋದ್ಭವಸ್ಯ

= ಬ್ರಹ್ಮನ, ಲೋಕಂ = ಸತ್ಯ ಲೋಕವನ್ನು ಕುರಿತು, ಕ್ಷಿಪ್ರಂ = ಬೇಗನೆ, ಯಯೌ = ಹೋದನು.

ತಾತ್ಪರ್ಯ :- ವಾಯುದೇವರ ಆಜ್ಞೆಯಿಂದ ವಾಯುದೇವರ ಶಿಷ್ಯರಾದ ಆ ನಾರದರು ಕೃಷ್ಣನೇ ಧನ್ಯನು, ಆಶ್ಚರ್ಯನು ಎಂಬಿತ್ಯಾದಿ ಸತ್ಯವನ್ನು ಹೇಳಿ, ರುಗ್ಮಿಣಿಯನ್ನು ಸ್ತುತಿಸಿ, ಅವಳಿಗೆ ನಮನ ಪೂರ್ವಕವಾಗಿ ಪಾರಿಜಾತ ಹೂವನ್ನು ಕೊಟ್ಟು, ಬ್ರಹ್ಮನ ಲೋಕವಾದ ಸತ್ಯಲೋಕವನ್ನು ಕುರಿತು ಶೀಘ್ರವಾಗಿ ಹೋನು.

ಸಾಕ್ಷಾತ್ ಸತ್ಯಾ ರುಗ್ಮಿಣೀತ್ಯೇಕಸಂವಿದ್
ದ್ವಿಧಾಭೂತಾ ನಾತ್ರ ಭೇದೋಽಸ್ತಿ ಕಶ್ಚಿತ್ ।
ತಥಾಽಪಿ ಸಾ ಪ್ರಮದಾನಾಂ ಸ್ವಭಾವ-
ಪ್ರಕಾಶನಾರ್ಥಂ ಕುಪಿತೇವಾಽಽಸ ಸತ್ಯಾ ॥ ೮೩ ॥

ಪದಚ್ಛೇದ :- ಸಾಕ್ಷಾತ್, ಸತ್ಯಾ, ರುಗ್ಮಿಣೀ, ಇತಿ, ಏಕಸಂವಿತ್, ದ್ವಿಧಾ, ಭೂತಾ, ನ, ಅತ್ರ, ಭೇದಃ, ಅಸ್ತಿ, ಕಶ್ಚಿತ್, ತಥಾ, ಅಪಿ, ಸಾ, ಪ್ರಮದಾನಾಂ, ಸ್ವಭಾವ ಪ್ರಕಾಶನಾರ್ಥಂ, ಕುಪಿತಾ, ಇವ, ಆಸ, ಸತ್ಯಾ ।

ಅರ್ಥ :- ಸಾಕ್ಷಾತ್ = ಸಾಕ್ಷಾತ್ತಾಗಿ, ಏಕಸಂವಿತ್ = ಅತ್ಯಂತ ಅಭಿನ್ನಜ್ಞಾನರೂಪಳಾದ ಲಕ್ಷ್ಮಿಯು, ಸತ್ಯಾ = ಸತ್ಯಭಾಮೆ, ರುಗ್ಮಿಣಿ = ರುಗ್ಮಿಣಿ, ಇತಿ = ಎಂಬುದಾಗಿ, ದ್ವಿಧಾಭೂತಾ = ಎರಡಾಗಿದ್ದಳು, ಅತ್ರ = ಇವರ ಸ್ವರೂಪದಲ್ಲಿ, ಕಶ್ಚಿತ್ = ಯಾವುದೇ ರೀತಿಯಾಗಿ, ಭೇದಃ = ಭೇದವು, ನಾಸ್ತಿ = ಇಲ್ಲ, ತಥಾಪಿ = ಹಾಗಿದ್ದರೂ, ಸಾಃ ಸತ್ಯಾ = ಸತ್ಯಭಾಮೆಯು, ಪ್ರಮುದಾನಾಂ = ಪತ್ನಿಯರ, ಸ್ವಭಾವಪ್ರಕಾಶನಾರ್ಥಂ = ಗುಣಗಳನ್ನು ತಿಳಿಸುವುದಕ್ಕೋಸ್ಕರ, ಕುಪಿತಾ ಇವ = ಕೋಪಗೊಂಡವಳಂತೆ, ಆಸ = ಇದ್ದಳು.

ತಾತ್ಪರ್ಯ :- ಜ್ಞಾನರೂಪಳಾದ ಆ ಲಕ್ಷ್ಮಿಯು ಒಬ್ಬಳೆ ಆಗಿದ್ದರೂ, ಸತ್ಯಭಾಮೆ, ರುಗ್ಮಿಣಿ ಎಂದು ಎರಡು ಅವತಾರವನ್ನು ತಾಳಿದ್ದಳು. ಅವರ ಸ್ವರೂಪದಲ್ಲಿ ಯಾವುದೇ ರೀತಿಯಾದ ಭೇದವಿರಲಿಲ್ಲ. ಆದರೂ ನಾರದರು ರುಗ್ಮಿಣಿಗೆ ಪಾರಿಜಾತ ಹೂವನ್ನು ಕೊಟ್ಟಾಗ, ಸತ್ಯಭಾಮೆಯು ಪತ್ನಿಯರ ಸ್ವಭಾವವನ್ನು ಜಗತ್ತಿಗೆ ತೋರಿಸುವುದಕ್ಕೋಸ್ಕರ, ಕೋಪಿಸಿದವಳಂತೆ ನಟಿಸಿದಳು.

**ಸಾಕಂ ರುಗ್ಮಿಣ್ಯಾ ರಾಜಮಧ್ಯೇ ಪ್ರವೇಶಾತ್**
**ಸ್ತವಾದೃಷೇಃ ಪುಷ್ಪದಾನಾಚ್ಚ ದೇವೀಮ್ ।**
**ಕೋಪಾನನಂ ದರ್ಶಯಂತೀಮುವಾಚ**
**ವಿಡಂಬಾರ್ಥಂ ಕಾಮಿಜನಸ್ಯ ಕೃಷ್ಣಃ ॥ ೮೪ ॥**

ಪದಚ್ಛೇದ :- ಸಾಕಂ, ರುಗ್ಮಿಣ್ಯಾ, ರಾಜಮಧ್ಯೇ, ಪ್ರವೇಶಾತ್, ಸ್ತವಾತ್, ಋಷೇಃ, ಪುಷ್ಪದಾನಾತ್, ಚ, ದೇವಿಂ, ಕೋಪಾನನಂ, ದರ್ಶಯಂತೀಂ, ಉವಾಚ, ವಿಡಂಬನಾರ್ಥಂ, ಕಾಮಿಜನಸ್ಯ, ಕೃಷ್ಣಃ ।

**ಅರ್ಥ** :- **ರುಗ್ಮಿಣ್ಯಾ ಸಾಕಂ** = ರುಗ್ಮಿಣಿಯೊಂದಿಗೆ, **ರಾಜಮಧ್ಯೇ** = ರಾಜರ ಮಧ್ಯದಲ್ಲಿ, **ಪ್ರವೇಶಾತ್** = ಪ್ರವೇಶ ಮಾಡಿದ್ದರಿಂದಲೂ, **ಋಷೇಃ** = ನಾರದರ, **ಸ್ತವಾತ್** = ಸ್ತೋತ್ರದಿಂದಲೂ, **ಪುಷ್ಪದಾನಾತ್ ಚ** = ಪಾರಿಜಾತ ಹೂವನ್ನು ಕೊಟ್ಟಿದ್ದರಿಂದಲೂ, **ಕೋಪಾನನಂ** = ಸಿಟ್ಟಿನ ಮುಖವುಳ್ಳವಳಾಗಿ, **ದರ್ಶಯಂತೀಂ** = ತನ್ನನ್ನು ನೋಡುತ್ತಿರುವ, **ದೇವಿಂ** = ಸತ್ಯಭಾಮೆಯನ್ನು ಕುರಿತು, **ಕಾಮಿಜನಸ್ಯ** = ಮಂದಜನರ, **ವಿಡಂಬನಾರ್ಥಂ** = ವಿಡಂಬನೆ-ಗೋಸ್ಕರ, **ಕೃಷ್ಣಃ** = ಕೃಷ್ಣನು, **ಉವಾಚ** = ಹೇಳಿದನು.

**ತಾತ್ಪರ್ಯ** :- ಕೃಷ್ಣನು ರುಗ್ಮಿಣಿಯೊಂದಿಗೆ ರಾಜರ ಮಧ್ಯದಲ್ಲಿ ಪ್ರವೇಶಿಸಿದ್ದರಿಂದ ನಾರದರು ರುಗ್ಮಿಣಿಯನ್ನು ಹೊಗಳಿದ್ದರಿಂದ, ರುಗ್ಮಿಣಿಗೆ ಪಾರಿಜಾತ ಹೂವನ್ನು ಕೊಟ್ಟಿದ್ದರಿಂದ ಕೋಪಗೊಂಡು ಸತ್ಯಭಾಮೆಯು ಕೃಷ್ಣನನ್ನು ನೋಡುತ್ತಿದ್ದಳು. ಕೃಷ್ಣನು ಮಂದಜನರ ವಿನೋದಕ್ಕೋಸ್ಕರ ಸತ್ಯಭಾಮೆಯನ್ನು ಕುರಿತು ಹೀಗೆ ಹೇಳಿದನು.

**ದಾತಾಸ್ಮ್ಯಹಂ ಪಾರಿಜಾತಂ ತರುಂ ತ**
**ಇತ್ಯೇವ ತತ್ರಾಥಾಽಗಮದ್ ವಾಸವೋಽಪಿ ।**
**ಸರ್ವೈರ್ದೇವೈರ್ಭೌಮಜಿತೋಽಪ್ಯದಿತ್ಯಾ-**
**ಸ್ತೇನೈವಾಥೋ ಕುಂಡಲಾಭ್ಯಾಂ ಹೃತಾಭ್ಯಾಮ್ ॥ ೮೫ ॥**

ಪದಚ್ಛೇದ :- ದಾತಾ, ಅಸ್ಮಿ, ಅಹಂ, ಪಾರಿಜಾತಂ, ತರುಂ, ತೇ, ಇತಿ, ಏವ, ತತ್ರ, ಅಥ, ಅಗಮತ್, ವಾಸವಃ, ಅಪಿ, ಸರ್ವದೇವೈ, ಭೌಮಜಿತಃ, ಅಪಿ, ಆದಿತ್ಯಾಃ, ತೇನೈವ, ಅಥ, ಕುಂಡಲಾಭ್ಯಾಂ; ಹೃತಾಭ್ಯಾಂ ।

**ಅರ್ಥ** :- **ಅಹಂ** = ನಾನು, **ತೇ** = ನಿನಗೆ, **ಪಾರಿಜಾತಂ ತರುಂ** = ಪಾರಿಜಾತ ಗಿಡವನ್ನೇ, **ದಾತಾ ಅಸ್ಮಿ** = ಕೊಡುತ್ತೇನೆ, **ಇತ್ಯೇವ (ಉವಾಚ)** = ಹೀಗೆಂದು ಹೇಳಿದನು, **ಅಥ** = ಅನಂತರ, **ತತ್ರ** = ಅಲ್ಲಿ, **ಸರ್ವದೇವೈಃ ಅಪಿ** = ಎಲ್ಲಾ ದೇವತೆಗಳಿಂದ ಸಹಿತನಾಗಿ, **ಭೌಮಜೀತಃ** = ನರಕಾಸುರನಿಂದ ಸೋತ, **ವಾಸವ ಅಪಿ** = ಇಂದ್ರನೂ, **ಅಗಮತ್** = ಆಗಮಿಸಿದನು, **ತೇನೈವ** = ಆ ನರಕಾಸುರನಿಂದಲೇ, **ಅದಿತ್ಯಾಃ** = ಅದಿತಿ ದೇವಿಯ, **ಕುಂಡಲಾಭ್ಯಾ** = ಕಿವಿಯೋಲೆಗಳು, **ಹೃತಾಭ್ಯಾಂ** = ಅಪಹರಿಸಲ್ಪಟ್ಟಿದ್ದವು.

**ತಾತ್ಪರ್ಯ** :- ಶ್ರೀಕೃಷ್ಣನು ಕೋಪಗೊಂಡ ಆ ಸತ್ಯಭಾಮೆಗೆ ''ನಾನು ನಿನಗೆ ಪಾರಿಜಾತ ಗಿಡವನ್ನೇ ತಂದುಕೊಡುತ್ತೇನೆ'' ಎಂದು ಹೇಳಿ ಸಮಾಧಾನ ಪಡಿಸಿದನು. ಆಗ ಎಲ್ಲ ದೇವತೆಗಳು ನರಕನಿಂದ ಪರಾಭವಗೊಂಡಿದ್ದರು. ಇಂದ್ರನು ಪರಾಭವಗೊಂಡಿದ್ದನು. ಆ ಇಂದ್ರನು ಇಲ್ಲಿಗೆ ಆಗಮಿಸಿದನು. ಆ ನರಕಾಸುರನು ಅದಿತಿ ದೇವಿಯ ಕಿವಿಯೋಲೆಗಳನ್ನು ಅಪಹರಿಸಿದ್ದನು.

**ತದೈವಾಽಗುರ್ಮುನಯಸ್ತೇನ ನುನ್ನಾ**
**ಬದರ್ಯಾಸ್ತೇ ಸರ್ವ ಏವಾಽಶು ಕೃಷ್ಣಮ್ ।**
**ಯಯಾಚಿರೇ ಭೌಮವಧಾಯ ನತ್ವಾ**
**ಸ್ತುತ್ವಾ ಸ್ತೋತ್ರೈರ್ವೈದಿಕೈಸ್ತಾಂತ್ರಿಕೈಶ್ಚ ॥ ೮೬ ॥**

ಪದಚ್ಛೇದ :– ತದಾ, ಏವ, ಅಗುಃ, ಮುನಯಃ, ತೇನ, ನುನ್ನಾಃ, ಬದರ್ಯಾ, ತೇ, ಸರ್ವೇ, ಏವ, ಆಶು, ಕೃಷ್ಣಂ, ಯಯಾಚಿರೇ, ಭೌಮವಧಾಯ, ನಿತ್ವಾ, ಸ್ತುತ್ವಾ, ಸ್ತೋತ್ರೈಃ, ವೈದಿಕೈಃ, ತಾಂತ್ರಿಕೈಃ, ಚ ।

**ಅರ್ಥ** :- **ತದಾ ಏವ** = ಆ ಸಮಯದಲ್ಲಿ, **ತೇನ** = ಇಂದ್ರನಿಂದಲೇ, **ನುನ್ನಾಃ** = ಪ್ರೇರಿತರಾದ, **ಸರ್ವೇ ಮುನಯಃ** = ಎಲ್ಲಾ ಮುನಿಗಳು, **ಬದರ್ಯಾ** = ಬದರಿಯಿಂದ, **ಅಗುಃ** = ಬಂದರು, **ತೇ ಏವ** = ಆ ಮುನಿಗಳು, **ವೈದಿಕೈಃ** = ವೇದೋಕ್ತವಾದ, **ತಾಂತ್ರಿಕೈಃ ಚ** = ಪಂಚರಾತ್ರಗಳಲ್ಲಿ ಉಕ್ತವಾದ, **ಸ್ತೋತ್ರೈಃ** = ಸ್ತೋತ್ರಗಳಿಂದ, **ಕೃಷ್ಣಂ** = ಕೃಷ್ಣನನ್ನು, **ಸ್ತುತ್ವಾ** = ಸ್ತುತಿಸಿ, **ನತ್ವಾ** = ನಮಿಸಿ, **ಭೌಮವಧಾಯ** = ನರಕನ ವಧೆಗಾಗಿ, **ಕೃಷ್ಣಂ** = ಕೃಷ್ಣನನ್ನು, **ಯಯಾಚಿರೆ** = ಪ್ರಾರ್ಥಿಸಿದರು.

ತಾತ್ಪರ್ಯ :- ಆ ಸಮಯದಲ್ಲೆ ಇಂದ್ರನಿಂದ ಪ್ರೇರಿತರಾದ ಎಲ್ಲಾ ಮುನಿಗಳು ಬದರಿಯಿಂದ ಅಲ್ಲಿಗೆ ಬಂದು ಸೇರಿದರು. ಆ ಮುನಿಗಳು ಕೃಷ್ಣನನ್ನು ವೇದೋಕ್ತವಾದ, ಪಂಚರಾತ್ರೋಕ್ತವಾದ ಸ್ತೋತ್ರಗಳಿಂದ ಸ್ತುತಿಸಿ, ನಮಿಸಿ, ನರಕಾಸುರನ ವಧೆಗಾಗಿ ಕೃಷ್ಣನನ್ನು ಪ್ರಾರ್ಥಿಸಿದರು.

ವಿವರಣೆ :- ಶ್ಲೋಕದಲ್ಲಿ ನಿರ್ಣಯಭಾವಚಂದ್ರಿಕಾಕಾರರ ಪ್ರಕಾರ ''ತೇನ ತುನ್ನಾಃ'' ಎಂದು ಪಾಠ, ಆಗ ''ತುದ ವ್ಯಥನೇ ಎಂಬ ಧಾತುವಿನಿಂದ ತುನ್ನಾಃ ಎಂದು ರೂಪವಾಗುತ್ತದೆ, ಆಗ ''ತೇನ = ಆ ನರಕನಿಂದ ತುನ್ನಾಃ = ಪೀಡಿತರಾದ'' ಎಂದು ಮೂಲಾರ್ಥವಾಗುತ್ತದೆ.

**ಇಂದ್ರೇಣ ದೇವೈಃ ಸಹಿತೇನ ಯಾಚಿತೋ**
**ವಿಪ್ರೈಶ್ಚ ಸಸ್ಮಾರ ವಿಹಂಗರಾಜಮ್ ।**
**ಆಗಮ್ಯ ನತ್ವಾಪುರತಃ ಸ್ಥಿತಂ ತ-**
**ಮಾರುಹ್ಯ ಸತ್ಯಾಸಹಿತೋ ಯಯೌ ಹರಿಃ ।। ೮೭ ।।**

ಪದಚ್ಛೇದ :- **ಇಂದ್ರೇಣ, ದೇವೈಃ, ಸಹಿತೇನ, ಯಾಚಿತಃ, ವಿಪ್ರೈಃ, ಚ, ಸಸ್ಮಾರ, ವಿಹಂಗರಾಜಂ, ಆಗಮ್ಯ, ನತ್ವಾ, ಪುರತಃ, ಸ್ಥಿತಂ, ತಂ, ಆರುಹ್ಯ, ಸತ್ಯಾಸಹಿತಃ, ಯಯೌ, ಹರಿಃ ।**

ಅರ್ಥ :- **ದೇವೈಃ ಸಹಿತೇನ** = ದೇವತೆಗಳಿಂದ ಸಹಿತನಾದ, **ಇಂದ್ರೇಣ** = ಇಂದ್ರನಿಂದ, **ವಿಪ್ರೈಃ ಚ** = ಬ್ರಾಹ್ಮಣರಿಂದಲೂ, **ಯಾಚಿತಃ** = ಪ್ರಾರ್ಥಿಸಲ್ಪಟ್ಟ, **ಹರಿಃ** = ಕೃಷ್ಣನು, **ವಿಹಂಗರಾಜಂ** = ಗರುಡನನ್ನು, **ಸಸ್ಮಾರ** = ಸ್ಮರಿಸಿದನು, **ಆಗಮ್ಯ** = ಬಂದು, **ನತ್ವಾ** = ನಮಿಸಿ, **ಪುರತಃ ಸ್ಥಿತಂ** = ಎದುರು ನಿಂತಿರುವ, **ತಂ** = ಗರುಡನನ್ನು, **ಆರುಹ್ಯ** = ಏರಿ, **ಸತ್ಯಾಸಹಿತಃ** = ಸತ್ಯಭಾಮೆ ಸಹಿತನಾಗಿ ಕೃಷ್ಣನು, **ಯಯೌ** = ಹೋದನು.

ತಾತ್ಪರ್ಯ :- ಇಂದ್ರ ಮೊದಲಾದ ದೇವತೆಗಳು, ಬ್ರಾಹ್ಮಣರು ಕೃಷ್ಣನನ್ನು ಪ್ರಾರ್ಥಿಸಿದರು. ಆಗ ಕೃಷ್ಣನು ಗರುಡನನ್ನು ಸ್ಮರಿಸಿದನು. ಗರುಡನು ಎದುರು ಬಂದು ನಿಂತು ನಮಿಸಿದನು. ಕೃಷ್ಣನು ಅವನ ಮೇಲೇರಿ ಸತ್ಯಭಾಮಾ ಸಹಿತನಾಗಿ ಹೋದನು.

ನಿತ್ಯೈವ ಯಾ ಪ್ರಕೃತಿಃ ಸ್ವೇಚ್ಛಯೈವ
ಜಗಚ್ಛಿಕ್ಷಾರ್ಥಂ ದ್ವಾದಶೀಂ ಭೀಮಸಂಜ್ಞಾಮ್ ।
ಉಪೋಷ್ಯ ಬಭ್ರೇ ಕೋಟಿಧಾರಾಜಲಸ್ಯ
ವಿಷ್ಣೋಃ ಪ್ರೀತ್ಯರ್ಥಂ ಸೈವ ಹಿ ಸತ್ಯಭಾಮಾ ॥ ೮೮ ॥

ಪದಚ್ಛೇದ :- ನಿತ್ಯಾ, ಏವ, ಪ್ರಕೃತಿಃ, ಸ್ವೇಚ್ಛಯಾ, ಏವ, ಜಗತ್‌ಶಿಕ್ಷಾರ್ಥಂ, ದ್ವಾದಶೀಂ, ಭೀಮಸಂಜ್ಞಾಂ, ಉಪೋಷ್ಯ, ಬಭ್ರೆ, ಕೋಟಿಧಾರಾಜಲಸ್ಯ, ವಿಷ್ಣೋಃ, ಪ್ರೀತ್ಯರ್ಥಂ, ಸಾ, ಏವ, ಹಿ, ಸತ್ಯಭಾಮಾ ।

ಅರ್ಥ :- ನಿತ್ಯೇವ = ನಾಶರಹಿತಳಾದ, ಯಾಪ್ರಕೃತಿಃ = ಪ್ರಕೃತಿಸ್ವರೂಪಳೋ, ಸೈವ ಸತ್ಯಭಾಮಾ = ಅವಳೇ ಸತ್ಯಭಾಮೆಯು, ಸ್ವಚ್ಛಯೈವ = ತನ್ನ ಇಚ್ಛೆಯಿಂದಲೇ, ಜಗತ್ ಶಿಕ್ಷಾರ್ಥಂ = ಜನರೆಲ್ಲರ ಶಿಕ್ಷಣಕ್ಕೋಸ್ಕರ, ಭೀಮಸಂಜ್ಞಾಂ = ಭೀಮ ಎಂಬ ಹೆಸರಿನ, ದ್ವಾದಶೀಂ = ದ್ವಾದಶೀವ್ರತವನ್ನು ಆಚರಿಸಲು, ವಿಷ್ಣೋ ಪ್ರೀತ್ಯರ್ಥಂ = ವಿಷ್ಣುವಿನ ಪ್ರೀತಿಗೋಸ್ಕರ, ಕೋಟಿಧಾರಾ ಜಲಸ್ಯ ಬಭ್ರೇ = ಕೋಟಿಜಲಧಾರೆಗಳನ್ನು ಧರಿಸಿದಳು.

ತಾತ್ಪರ್ಯ :- ಸತ್ಯಭಾಮೆ ನಾಶರಹಿತಳಾದ ಮಹಾಲಕ್ಷ್ಮಿಯೇ ಆದರೂ ಸ್ವೇಚ್ಛೆಯಿಂದಲೇ ವಿಷ್ಣುಪ್ರೀತಿಗಾಗಿ ಮತ್ತು ಲೋಕಶಿಕ್ಷಣಕ್ಕಾಗಿ ಭೀಮನಾಮಕ ದ್ವಾದಶೀ ವ್ರತವನ್ನು ಸಂಕಲ್ಪಿಸಿ ಏಕಾದಶಿ ಉಪವಾಸವಿದ್ದು ರಾತ್ರಿಯಲ್ಲಿ ಕೋಟಿ ಜಲಧಾರೆಗಳನ್ನು ಧರಿಸಿದಳು.

ವಿವರಣೆ :- ಮತ್ಸ್ಯಪುರಾಣ ಪ್ರಕಾರ ಮಾಘಶುದ್ಧ ಏಕಾದಶಿಯಂದು ಉಪವಾಸ ಮಾಡಿ ಅಂದು ರಾತ್ರಿಯಲ್ಲಿ ಕೃಷ್ಣಾಜಿನದ ಮೇಲೆ ಕುಳಿತು ಉದ್ದಿನ ಕಾಳಿನಷ್ಟು ಗಾತ್ರದ ತೂತಿನ ಕಲಶದಿಂದ ರಾತ್ರಿ ಇಡೀ ಅಖಂಡ ಜಲಧಾರೆಯನ್ನು ತಲೆಗೆ ಹಾಕಿಕೊಳ್ಳಬೇಕು. ಶಕ್ತಿ ಇದ್ದಷ್ಟು ಅಧಿಕ ಸಂಖ್ಯೆಯಲ್ಲಿ ಜಲಧಾರೆ ಸುರಿಸಿಕೊಳ್ಳಬೇಕು. ಬೆಳಿಗ್ಗೆ ಕೇವಲ ಹಾಲಿನಿಂದ ಪಾರಣ ಮಾಡಬೇಕು. (ಜನಾರ್ದನೀಯ)

ತಯಾ ಯುಕ್ತೋ ಗರುಡಸ್ಕಂಧಸಂಸ್ಥೋ
ದೂರಾನುಯಾತೋ ವಜ್ರಭೃತಾಽಪ್ಯನುಜ್ಞಾಮ್ ।

**ದತ್ವಾSಮುಷ್ಮೈ ಪ್ರಯಯೌ ವಾಯುಜುಷ್ಟಾ-**
**ಮಾಶಾಂ ಕೃಷ್ಣೋ ಭೌಮವಧೇ ಧೃತಾತ್ಮಾ ॥ ೮೯ ॥**

ಪದಚ್ಛೇದ :- ತಯಾ, ಯುಕ್ತಃ, ಗರುಡಸ್ಕಂಧಸಂಸ್ಥಃ, ದೂರಾನುಯಾನುತಃ, ವಜ್ರಭೃತಾ, ಅಪಿ, ಅನುಜ್ಞಾಂ, ದತ್ವಾ, ಅಮುಷ್ಮೈ, ಪ್ರಯಯೌ, ವಾಯುಜುಷ್ಟಾಂ, ಆಶಾಂ, ಕೃಷ್ಣಃ, ಭೌಮವಧೇ, ಧತಾತ್ಮಾ ।

**ಅರ್ಥ** :- **ಭೌಮವಧೇ** = ನರಕನ ವಧೆಯಲ್ಲಿ, **ಧೃತಾತ್ಮಾ** = ಸಂಕಲ್ಪಬದ್ಧನಾದ, **ಕೃಷ್ಣಃ** = ಶ್ರೀಕೃಷ್ಣನು, **ತಯಾ** = ಸತ್ಯಭಾಮೆಯಿಂದ, **ಯುಕ್ತಃ** = ಕೂಡಿಕೊಂಡು, **ಗರುಡಸ್ಕಂಧಸಂಸ್ಥಃ** = ಗರುಡಾರೂಢನಾಗಿ, **ದೂರಾನುಯಾತಃ** = ದೂರದಿಂದ ಹಿಂಬಾಲಿಸಿಕೊಂಡು ಬಂದ, **ಅಮುಷ್ಮೈ ವಜ್ರಭೃತಾ ಪಿ** = ಇಂದ್ರನಿಗೂ, **ಅನುಜ್ಞಾಂ** = ಆಜ್ಞೆಯನ್ನು, **ದತ್ವಾ** = ಕೊಟ್ಟು, **ವಾಯುಜುಷ್ಟಾಂ ಆಶಾಂ** = ವಾಯುವ್ಯ ದಿಕ್ಕನ್ನು ಕುರಿತು, **ಪ್ರಯಯೌ** = ಹೋದನು.

ತಾತ್ಪರ್ಯ :- ನರಕಾಸುರನ ವಧೆಯನ್ನು ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡಿದ್ದ ಶ್ರೀಕೃಷ್ಣ ಸತ್ಯಭಾಮಾ ಸಮೇತನಾಗಿ ಗರುಡನ ಹೆಗಲನ್ನೇರಿ, ಬಹುದೂರದವರೆಗೂ ಹಿಂಬಾಲಿಸಿ ಬಂದಿದ್ದ ಇಂದ್ರನಿಗೆ ಹೋಗಲು ಅನುಜ್ಞೆ ನೀಡಿ, ವಾಯುವ್ಯ ದಿಕ್ಕಿಗೆ ಪ್ರಯಾಣ ಮಾಡಿದ.

**ಭೌಮೋ ಹ್ಯಾಸೀದ್ ಬ್ರಹ್ಮವರಾದವಧ್ಯೋ**
**ನ ಶಸ್ತ್ರಭೃಜ್ಜೇಯಸ ಇತ್ಯಮುಷ್ಮೈ ।**
**ದತ್ತೋ ವರೋ ಬ್ರಹ್ಮಣಾ ತದ್ವದೇವ**
**ತಸ್ಯಾಮಾತ್ಯಾನಾಂ ತದ್ವದವಧ್ಯತಾ ಚ ॥ ೯೦ ॥**

ಪದಚ್ಛೇದ :- ಭೌಮಃ, ಹೀ, ಆಸೀತ್, ಬ್ರಹ್ಮವರಾತ್, ಅವಧ್ಯಃ, ನ, ಶಸ್ತ್ರಭೃತ್, ಜೇಯಸೇ, ಇತಿ, ಅಮುಷ್ಮೈ, ದತ್ತಃ, ವರಃ, ಬ್ರಹ್ಮಣಾ, ತದ್ವತ್, ಏವ, ತಸ್ಯ, ಅಮಾತ್ಯಾನಾಂ, ತದ್ವತ್, ಅವಧ್ಯತ್ಮಾ ಚ ।

**ಅರ್ಥ** :- **ಭೌಮಃ** = ನರಕಾಸುರನು, **ಬ್ರಹ್ಮವರಾತ್** = ಬ್ರಹ್ಮನ ವರದಿಂದ, **ಅವಧ್ಯಃ** = ಅವಧ್ಯನು, **ಆಸೀತ್ ಹಿ** = ಆಗಿದ್ದನಷ್ಟೆ, **ಶಸ್ತ್ರಭೃತ್** =

ಶಸ್ತ್ರಧಾರಿಯಾಗಿ ನಿಂತರೆ, (ತ್ವಂ = ನೀನು), ನ ಜೇಯಸೇ = ಯಾರಿಂದಲೂ ಪರಾಜಿತನಾಗಲಾರೆ, ಇತಿ = ಎಂದು, ಬ್ರಹ್ಮಣಾ = ಬ್ರಹ್ಮದೇವರಿಂದ, ವರಃ = ವರವು, ದತ್ತಃ = ಕೊಡಲ್ಪಟ್ಟಿತು, ತದ್ವದೇವ = ಹಾಗೆಯೇ, ತಸ್ಯ = ನರಕಾಸುರನ, ಅಮಾತ್ಯಾನಾಂ ಚ = ಮಂತ್ರಿಗಳಿಗೂ ಕೂಡ, ತದ್ವದೇವ = ಅವನಂತೆಯೇ, ಅವಧ್ಯತಾ ಚ (ದತ್ತಃ) = ಅವಧ್ಯತ್ವವು ಕೊಡಲ್ಪಟ್ಟಿತ್ತು.

ತಾತ್ಪರ್ಯ :- ನರಕಾಸುರ ಬ್ರಹ್ಮನ ವರದಿಂದ ಅವಧ್ಯನಾಗಿದ್ದ. ಶಸ್ತ್ರಧಾರಿಯಾಗಿ ನಿಂತರೆ ನೀನು ಯಾರಿಂದಲೂ ಪಾರಜಿತನಾಗಲಾರೆ, ಎಂದೂ ಬ್ರಹ್ಮ ಅವನಿಗೆ ವರ ನೀಡಿದ್ದ. ಅವನ ಮಂತ್ರಿಗಳಿಗೂ ಹಾಗೇ ಅಜೇಯತ್ವದ ವರ ನೀಡಿದ್ದ. ಅವಧ್ಯತ್ವವನ್ನೂ ನೀಡಿದ್ದ.

**ಭೌಮೇನ ಜಯತ್ವಮಪಿ ಹ್ಯಮೀಷಾಂ**
**ದತ್ತಂ ಭೌಮಾಯ ಬ್ರಹ್ಮಣಾ ಕ್ರೋಡರೂಪಾತ್ ।**
**ವಿಷ್ಣೋರ್ಜಾತಾಯಾಸ್ಯ ದುರ್ಗಂ ಚ ದತ್ತಂ**
**ಪ್ರಾಗ್ಜ್ಯೋತಿಷಂ ನಾಮ ಪುರಂ ಸಮಸ್ತೈಃ ॥ ೯೧ ॥**

**ಪದಚ್ಛೇದ :- ಭೌಮೇನ, ಜೇಯತ್ವಂ, ಅಪಿ, ಹೀ, ಅಮೀಷಾಂ, ದತ್ತಂ, ಭೌಮಾಯ, ಬ್ರಹ್ಮಣಾ, ಕ್ರೋಡರೂಪಾತ್, ವಿಷ್ಣೋಃ, ಜಾತಾಯ, ಅಸ್ಯ, ದುರ್ಗಂ, ಚ, ದತ್ತಂ, ಪ್ರಾಗ್ಜ್ಯೋತಿಷಂ, ನಾಮ, ಪುರಂ, ಸಮಸ್ತೈಃ ।**

ಅರ್ಥ :- **ಅಮೀಷಾಂ** = ನರಕಾಸುರನ ಮಂತ್ರಿಗಳಿಗೆ, **ಭೌಮೇನ ಅಪಿ ಹೀ** = ನರಕಾಸುರನಿಂದ ಮಾತ್ರ, **ಜೇಯತ್ವಂ** = ಪರಾಜಯವು, (ಇತಿ) = (ಎಂದು) **ಬ್ರಹ್ಮಣಾ** = ಬ್ರಹ್ಮದೇವರಿಂದ, (ವರಂ) **ದತ್ತಂ** = ಕೊಡಲ್ಪಟ್ಟಿತು, **ಕ್ರೋಡರೂಪಾತ್** = ವರಾಹರೂಪಿಯಾದ, **ವಿಷ್ಣೋಃ** = ವಿಷ್ಣುವಿನಿಂದ (ಧರಾದೇವಿಯಲ್ಲಿ), **ಜಾತಾಯ** = ಜನಿಸಿದ, **ಅಸ್ಯ** = ನರಕಾಸುರನಿಗೆ, **ಸಮಸ್ತೈಃ** = ಎಲ್ಲರಿಂದಲೂ, **ದುರ್ಗಂ** = ಹೋಗಲು ಅಶಕ್ಯವಾದ, **ಪ್ರಾಗ್ಜ್ಯೋತಿಷಂ ನಾಮ** = ಪ್ರಾಗ್ಜ್ಯೋತಿಷವೆಂಬ, **ಪುರಂ** = ಪಟ್ಟಣವು, **ದತ್ತಂ** = (ಬ್ರಹ್ಮನಿಂದ) ಕೊಡಲ್ಪಟ್ಟಿತು.

ತಾತ್ಪರ್ಯ :- ಈ ಮಂತ್ರಿಗಳಿಗೆ ನರಕಾಸುರನಿಂದ ಮಾತ್ರ ಪರಾಜಯ, ಎಂದೂ ಬ್ರಹ್ಮ ನರಕಾಸುರನಿಗೆ ವರವಿತ್ತಿದ್ದ. ವರಾಹರೂಪಿ ವಿಷ್ಣುವಿನಿಂದ

ಧರಾದೇವಿಯಲ್ಲಿ ಜನಿಸಿದ್ದ ಈ ನರಕಾಸುರನಿಗೆ, ಎಲ್ಲರಿಗೂ ದುರ್ಗಮವಾದ ಸಕಲ ಸಂಪತ್ಸಮೃದ್ಧವಾದ ಪ್ರಾಗ್ಜ್ಯೋತಿಷವೆಂಬ ಪಟ್ಟಣವನ್ನೂ ಕೊಟ್ಟಿದ್ದ.

**ಆಸೀದ್ ಬಾಹ್ಯೇ ಗಿರಿದುರ್ಗಂ ತದಂತಃ**
**ಪಾನೀಯದುರ್ಗಂ ಮೌರವಂ ಪಾಶದುರ್ಗಮ್ ।**
**ತಸ್ಯಾಪ್ಯಂತಃ ಕ್ಷುರಧಾರೋಪಮಂ ತತ್**
**ಪಾಶಾಶ್ಚ ತೇ ಷಟ್ಸಹಸ್ರಾಶ್ಚ ಘೋರಾಃ ॥ ೯೨ ॥**

ಪದಚ್ಛೇದ :- **ಆಸೀತ್, ಬಾಹ್ಯೇ, ಗಿರಿದುರ್ಗಂ, ತದಂತಃ, ಪಾನೀಯದುರ್ಗಂ, ಮೌರವಂ, ಪಾಶದುರ್ಗಂ, ತಸ್ಯ, ಅಪಿ, ಅಂತಃ, ಕ್ಷುರಧಾರೋಪಮಂ, ತತ್, ಪಾಶಾಃ, ಚ, ಷಟ್ಸಹಸ್ರಾಃ, ಸುಘೋರಾಃ ।**

**ಅರ್ಥ** :- **ಬಾಹ್ಯೇ** = ಹೊರಗೆ, **ಗಿರಿದುರ್ಗಂ** = ಗಿರಿದುರ್ಗವು, **ಆಸೀತ್** = ಇದ್ದಿತು, **ತದಂತಃ** = ಅದರೊಳಗೆ, **ಪಾನೀಯದುರ್ಗಂ** = ಜಲದುರ್ಗವು, **(ಆಸೀತ್) ತಸ್ಯಾಪ್ಯಂತಃ** = ಅದಕ್ಕೂ ಒಳಗೆ, **ಕ್ಷುರಧಾರೋಪಮಂ** = ಕತ್ತಿಯ ಅಲುಗಿನಂತೆ ಹರಿತವಾದ, **ಮೌರವಂ** = ಮುರಾಸುರ ನಿರ್ಮಿತವಾದ, **ಪಾಶದುರ್ಗಂ** = ಪಾಶದುರ್ಗವು, **(ಆಸೀತ್) ಷಟ್ಸಹಸ್ರಾಃ** = ಆರು ಸಾವಿರ, **ತೇ ಪಾಶಾಃ** = ಆ ಪಾಶಗಳು, **ಸುಘೋರಾಃ** = ಅತ್ಯಂತ ಭಯಂಕರಗಳು (ಆಸನ್=ಆಗಿದ್ದವು).

**ತಾತ್ಪರ್ಯ** :- ಹೊರಗೆ ಗಿರಿದುರ್ಗವಿದ್ದಿತು. ಅದರೊಳಗೆ ಜಲದುರ್ಗ, ಅದಕ್ಕೂ ಒಳಗೆ ಕ್ಷೌರಿಕನ ಕತ್ತೆಯ ಅಲುಗಿನಂತೆ ಚೂಪಾದ ಮುರಾಸುರ ನಿರ್ಮಿತವಾದ ಪಾಶದುರ್ಗ. ಆರು ಸಾವಿರ ಪಾಶಗಳು ಅತ್ಯಂತ ಭಯಂಕರವಾಗಿದ್ದವು.

**ಅಭೇದ್ಯತ್ವಮರಿಭಿರತಾರ್ಯತಾ ಚ**
**ದತ್ತಾ ದುರ್ಗಾಣಾಂ ಬ್ರಹ್ಮಣಾಽಽರಾಧಿತೇನ ॥ ೯೩ ॥**

ಪದಚ್ಛೇದ :- **ಅಭೇದ್ಯತ್ವಂ, ಅರಿಭಿಃ, ಅತಾರ್ಯತಾ, ಚ, ದತ್ತಾ, ದುರ್ಗಾಣಾಂ, ಬ್ರಹ್ಮಣಾ, ಆರಾಧಿತೇನ ।**

**ಅರ್ಥ** :- **ದುರ್ಗಾಣಾಂ** = ಕೋಟೆಗಳ, **ಅಭೇದ್ಯತ್ವಂ** = ಭೇದಿಸಲು ಅಸಾಧ್ಯವಾಗುವಿಕೆಯು, **ಅತಾರ್ಯತಾ ಚ** = ದಾಟಲು ಅಸಾಧ್ಯ- ವಾಗುವಿಕೆಯು, **ಆರಾಧಿತೇನ** = ನರಕಾಸುರನಿಂದ ಪೂಜಿತನಾದ, **ಬ್ರಹ್ಮಣಾ** = ಬ್ರಹ್ಮದೇವರಿಂದ, **ದತ್ತಾ** = (ವರವು) ಕೊಡಲ್ಪಟ್ಟಿತು.

**ತಾತ್ಪರ್ಯ** :- ಆ ದುರ್ಗಗಳು ಶತ್ರುಗಳಿಗೆ ಅಭೇದ್ಯವೂ, ದಾಟಲು ಅಸಾಧ್ಯವೂ ಆಗಿರಲೆಂದು ನರಕಾಸುರನಿಂದ ಆರಾಧಿತನಾದ ಬ್ರಹ್ಮನೇ ವರ ನೀಡಿದ್ದ.

**ತಸ್ಯಾಮಾತ್ಯಾಃ ಪೀಠಮುರೌ ನಿಸುಂಭ-**
**ಹಯಗ್ರೀವೌ ಪಂಚಜನಶ್ಚ ಶೂರಾಃ ।**
**ಸಂಕಲ್ಪ್ಯ ತಾನ್ ಲೋಕಪಾಲಾನಹಂ ಚ**
**ಬ್ರಹ್ಮೇತ್ಯದ್ಧಾ ಭಾಷಮಾಣಃ ಸ ಆಸ್ತೇ ॥ ೯೪ ॥**

**ಪದಚ್ಛೇದ** :– ತಸ್ಯ, ಅಮಾತ್ಯಾಃ, ಪೀಠಮುರೌ, ನಿಶುಂಭಹಯಗ್ರೀವೌ, ಪಂಚಜನಃ, ಚ, ಶೂರಾಃ, ಸಂಕಲ್ಪ್ಯ, ತಾನ್, ಲೋಕಪಾಲಾನ್, ಅಹಂ, ಚ, ಬ್ರಹ್ಮ ಇತಿ, ಅದ್ಧಾ ಭಾಷಮಾಣಃ, ಸಃ ಆಸ್ತೆ ।

**ಅರ್ಥ** :- **ಶೂರಾಃ** = ಶೂರರಾದ, **ಪೀಠಮುರೌ** = ಪೀಠ ಮತ್ತು ಮುರ, **ನಿಶುಂಭಹಯಗ್ರೀವೌ** = ನಿಶುಂಭ ಮತ್ತು ಹಯಗ್ರೀವ, **ಚ** = ಮತ್ತು, **ಪಂಚಜನಃ** = ಪಂಚಜನನು, **ತಸ್ಯ** = ಆ ನರಕಾಸುರನ, **ಅಮಾತ್ಯಾಃ** = ಮಂತ್ರಿಗಳು, **ತಾನ್** = ಅವರನ್ನು, **ಲೋಕಪಾಲಾನ್** = ಲೋಕಪಾಲಕರೆಂದು, **ಸಂಕಲ್ಪ್ಯ** = ಸಂಕಲ್ಪಿಸಿ, **ಅಹಂ ಚ** = ನಾನಾದರೋ, **ಬ್ರಹ್ಮ ಇತಿ** = ಚತುರ್ಮುಖ ಬ್ರಹ್ಮನೆಂದು, **ಅದ್ಧಾ** = ಚೆನ್ನಾಗಿ, **ಭಾಷಮಾಣಃ** = ಹೇಳಿಕೊಳ್ಳುತ್ತಾ, **ಆಸ್ತೆ** = ಇದ್ದನು.

**ತಾತ್ಪರ್ಯ** :- ಶೂರರಾದ ಪೀಠ, ಮುರ, ನಿಶುಂಭ, ಹಯಗ್ರೀವ ಮತ್ತು ಪಂಚಜನ ಇವರು ನರಕಾಸುರನ ಮಂತ್ರಿಗಳು ಅವನು ಇವರನ್ನು ಲೋಕಪಾಲಕರೆಂದು ಸಂಕಲ್ಪಿಸಿ ತಾನು ಚತುರ್ಮುಖ ಬ್ರಹ್ಮನೇ ಎಂದು ಹೇಳಿಕೊಳ್ಳುತ್ತಿದ್ದ.

ಹಂತುಂ ಕೃಷ್ಣೋ ನರಕಂ ತತ್ರ ಗತ್ವಾ
ಗಿರಿದುರ್ಗಂ ಗದಯಾ ನಿರ್ಬಿಭೇದ ।
ವಾಯವ್ಯಾಸ್ತ್ರೇಣೋದಕಂ ಶೋಷಯಿತ್ವಾ
ಚಕರ್ತ ಖಡ್ಗೇನ ಮುರಸ್ಯ ಪಾಶಾನ್ ॥ ೯೫ ॥

ಪದಚ್ಛೇದ :- ಹಂತುಂ, ಕೃಷ್ಣಃ, ನರಕಂ, ತತ್ರ, ಗತ್ವಾ, ಗಿರಿಂ, ದುರ್ಗಂ, ಗದಯಾ, ನಿರ್ಬಿಭೇದ, ವಾಯವ್ಯಾಸ್ತ್ರೇಣ, ಉದಕಂ, ಶೋಷಯಿತ್ವ, ಚಕರ್ತ, ಖಡ್ಗೇನ, ಮುರಸ್ಯ, ಪಾಶಾನ್ ।

ಅರ್ಥ :- ಕೃಷ್ಣಃ = ಶ್ರೀಕೃಷ್ಣನು, ನರಕಂ = ನರಕಾಸುರನನ್ನು, ಹಂತುಂ = ಕೊಲ್ಲಲು, ತತ್ರ = ಪ್ರಾಗ್ಜ್ಯೋತಿಷಪುರಕ್ಕೆ, ಗತ್ವಾ = ಹೋಗಿ, ಗಿರಿಂ ದುರ್ಗಂ = ಗಿರಿದುರ್ಗವನ್ನು, ಗದಯಾ = ಗದೆಯಿಂದ, ನಿರ್ಬಿಭೇದ = ಭೇದಿಸಿದನು, ಉದಕಂ = ಜಲದುರ್ಗವನ್ನು, ವಾಯವ್ಯಾಸ್ತ್ರೇಣ = ವಾಯವ್ಯಾಸ್ತ್ರದಿಂದ, ಶೋಷಯಿತ್ವಾ = ಒಣಗಿಸಿ, ಮುರಸ್ಯ = ಮುರನ, ಪಾಶಾನ್ = ಪಾಶಗಳನ್ನು, ಖಡ್ಗೇನ = ಕತ್ತಿಯಿಂದ, ಚಕರ್ತ = ಕತ್ತರಿಸಿದನು.

ತಾತ್ಪರ್ಯ :- ನರಕಾಸುರನನ್ನು ಕೊಲ್ಲುವುದಕ್ಕಾಗಿ ಶ್ರೀಕೃಷ್ಣನು ಪ್ರಾಗ್ಜ್ಯೋತಿಷಪುರಕ್ಕೆ ಹೋಗಿ ಮೊದಲು ಗಿರಿದುರ್ಗವನ್ನು ಗದೆಯಿಂದ ಭೇದಿಸಿದನು. ಅನಂತರ ಜಲದುರ್ಗವನ್ನು ವಾಯವ್ಯಾಸ್ತ್ರದಿಂದ ಒಣಗಿಸಿ ಮುರನ ಪಾಶಗಳನ್ನು ಖಡ್ಗದಿಂದ ತುಂಡರಿಸಿದನು.

ಅಥಾಭಿಪೇತುರ್ಮುರಪೀಠೌ ನಿಸುಂಭ-
ಹಯಗ್ರೀವೌ ಪಂಚಜನಶ್ಚ ದೈತ್ಯಾಃ ।
ತಾನ್ ಶೈಲಶಸ್ತ್ರಾಸ್ತ್ರಶಿಲಾಭಿವರ್ಷಿಣ-
ಶ್ಚಕ್ರೇ ವ್ಯಸೂಂಶ್ಚಕ್ರನಿಕೃತ್ತಕಂಧರಾನ್ ॥ ೯೬ ॥

ಪದಚ್ಛೇದ :- ಅಥ, ಅಭಿಪೇತುಃ, ಮುರಷಿಕೌ, ನಿಶುಂಭ ಹಯಗ್ರೀವೌ, ಪಂಚಜನಃ, ಚ, ಶೂರಾಃ, ತಾನ್, ಶೈಲಶಸ್ತ್ರಾಸ್ತ್ರಶಿಲಾಭಿಃ, ವರ್ಷಿಣಃ, ಚಕ್ರೇ, ವ್ಯಸೂನ್, ಚಕ್ರನಿಕೃತ್ತ ಕಂಧರಾನ್ ।

**ಅರ್ಥ** :- **ಅಥ** = ಅನಂತರ, **ಶೂರಾಃ** = ಶೂರರಾದ, **ಮುರಪೀಠೌ** = ಮುರ, ಪೀಠ, **ನಿಶುಂಭಹಯಗ್ರೀವೌ** = ನಿಶುಂಭ ಮತ್ತು ಹಯಗ್ರೀವ, **ಚ** = ಮತ್ತು, **ಪಂಚಜನಃ** = ಪಂಚಜನ ಇವರು, **ಅಭಿಪೇತುಃ** = ಮೇಲೆ ಎರಗಿ ಬಂದರು, **ಶೈಲಶಸ್ತ್ರಾಸ್ತ್ರಶಿಲಾಭಿಃ** = ಬೆಟ್ಟ, ಶಸ್ತ್ರ, ಅಸ್ತ್ರ, ಕಲ್ಲು ಬಂಡೆಗಳನ್ನು, **ವರ್ಷಿಣಃ** = ಸುರುಸುತ್ತಿರುವ, **ತಾನ್** = ಆ ಮಂತ್ರಿಗಳನ್ನು (ಶ್ರೀಕೃಷ್ಣ), **ಚಕ್ರನಿಕೃತ್ತಕಂಧರಾನ್** = **ಚಕ್ರ** - ಚಕ್ರದಿಂದ, **ನಿಕೃತ್ತ** - ತುಂಡರಿಸಲ್ಪಟ್ಟ, **ಕಂಧರಾನ್** - ಕತ್ತುಳ್ಳವರನ್ನಾಗಿ, **ವ್ಯಸೂನ್** = ಪ್ರಾಣವಿಲ್ಲದವರನ್ನಾಗಿ, **ಚಕ್ರೆ** = ಮಾಡಿದನು.

**ತಾತ್ಪರ್ಯ** :- ಶ್ರೀಕೃಷ್ಣನು ಪಾಶಗಳನ್ನು ಖಡ್ಗದಿಂದ ತುಂಡರಿಸಿದ ನಂತರ, ಶೂರರಾದ ಮುರ, ಪೀಠ, ನಿಶುಂಭ, ಹಯಗ್ರೀವ ಪಂಚಜನ ಇವರು ಯುದ್ಧಕ್ಕಾಗಿ ಎರಗಿಬಂದರು. ನಿರಂತರ ಬೆಟ್ಟ, ಶಸ್ತ್ರ, ಅಸ್ತ್ರ, ಕಲ್ಲುಬಂಡೆಗಳ ಮಳೆಯನ್ನೇ ಸುರಿಸುತ್ತಿದ್ದ ಆ ಮಂತ್ರಿಗಳ ಕತ್ತನ್ನು ಶ್ರೀಕೃಷ್ಣನು ಸುದರ್ಶನದಿಂದ ತರಿದನು.

**ತೇಷಾಂ ಸುತಾಃ ಸಪ್ತಸಪ್ತೋರುವೀರ್ಯಾ**
**ವರಾದವಧ್ಯಾ ಗಿರಿಶಸ್ಯಾಭಿಪೇತುಃ ।**
**ತಾನಸ್ತ್ರಶಸ್ತ್ರಾಭಿಮುಚಃ ಶರೋತ್ತಮೈಃ**
**ಸಮರ್ಪಯಾಮಾಸ ಸ ಮೃತ್ಯವೇಽಚ್ಯುತಃ ॥ ೯೭ ॥**

ಪದಚ್ಛೇದ :- ತೇಷಾಂ, ಸುತಾಃ, ಸಪ್ತಸಪ್ತೋರುವೀರ್ಯಾಃ, ವರಾದ್, ಅವಧ್ಯಾಃ, ಗಿರಿಶಸ್ಯ, ಅಭಿಪೇತುಃ, ತಾನ್, ಅಸ್ತ್ರಶಸ್ತ್ರಾಭಿಮುಚಃ, ಶರೋತ್ತಮೈಃ, ಸಮರ್ಪಯಾಮಾಸ, ಚ, ಮೃತ್ಯವೇ, ಅಚ್ಯುತಃ ।

**ಅರ್ಥ** :- **ಸಪ್ತಸಪ್ತೋರುವೀರ್ಯಾಃ** = ಏಳೇಳು ಮಂದಿ ಮಹಾಪರಾಕ್ರಮಿಗಳಾದ, **ತೇಷಾಂ** = ಆ ಮಂತ್ರಿಗಳ, **ಸುತಾಃ** = ಮಕ್ಕಳು, **ಗಿರಿಶಸ್ಯ** = ರುದ್ರದೇವರ, **ವರಾತ್** = ವರದಿಂದ, **ಅವಧ್ಯಾಃ** = ಅವಧ್ಯರು, **ಅಭಿಪೇತುಃ** = ಯುದ್ಧಕ್ಕೆ ಬಂದರು, **ಅಸ್ತ್ರಶಸ್ತ್ರಾಭಿಮುಚಃ** = ಅಸ್ತ್ರಶಸ್ತ್ರಗಳನ್ನು ಎಸೆಯುತ್ತಿದ್ದ, **ತಾನ್** = ಅವರನ್ನು, **ಅಚ್ಯುತಃ** = ಶ್ರೀಕೃಷ್ಣನು, **ಶರೋತ್ತಮೈಃ** = ಉತ್ತಮ ಬಾಣಗಳಿಂದ, **ಮೃತ್ಯವೇ** = ಮೃತ್ಯುವಿಗೆ, **ಸಮರ್ಪಯಾಮಾಸ** = ಅರ್ಪಿಸಿದನು.

**ತಾತ್ಪರ್ಯ** :- ಅವರ ಮಕ್ಕಳು ಏಳೇಳು ಮಂದಿ ಎಲ್ಲರೂ ಮಹಾಪರಾಕ್ರಮಿಗಳು. ಶಿವನು ವರದಿಂದ ಅವಧ್ಯರು ಯುದ್ಧಕ್ಕೆ ಬಂದರು. ಅಸ್ತ್ರಶಸ್ತ್ರಗಳನ್ನು ಎಸೆಯುತ್ತಿದ್ದ ಅವರನ್ನು ಶ್ರೀಕೃಷ್ಣ ಉತ್ತಮ ಬಾಣಗಳಿಂದ ಮೃತ್ಯುವಿಗೆ ಕೊಟ್ಟ.

**ಹತ್ವಾ ಪಂಚತ್ರಿಂಶತೋ ಮಂತ್ರಿಪುತ್ರಾನ್**
**ಜಗಾಮ ಭೌಮಸ್ಯ ಸಕಾಶಮಾಶು ।**
**ಶ್ರುತ್ವಾ ಭೌಮಃ ಕೃಷ್ಣಮಾಯಾತಮಾರಾ-**
**ದಕ್ಷೋಹಿಣೀತ್ರಿಂಶಕೇನಾಭ್ಯಯಾತ್ ತಮ್ ॥ ೯೮ ॥**

**ಪದಚ್ಛೇದ :- ಹತ್ವಾ, ಪಂಚತ್ರಿಂಶತಃ, ಮಂತ್ರಿಪುತ್ರಾನ್, ಜಗಾಮ, ಭೌಮಸ್ಯ, ಸಕಾಶಂ, ಆಶು, ಶ್ರುತ್ವಾ, ಭೌಮಃ, ಕೃಷ್ಣಂ, ಆಯಾಂತಂ, ಆರಾತ್, ಅಕ್ಷೌಹಿಣೀತ್ರಿಂಶಕೇನ, ಅಭ್ಯಯಾತ್, ತಮ್ ।**

**ಅರ್ಥ :- ಪಂಚತ್ರಿಂಶತಃ** = ಮೂವತ್ತೈದುಮಂದಿ, **ಮಂತ್ರಿಪುತ್ರಾನ್** = ಮಂತ್ರಿಪುತ್ರರನ್ನು, **ಹತ್ವಾ** = ಕೊಂದು, **ಭೌಮಸ್ಯ** = ನರಕಾಸುರನ, **ಸಕಾಶಂ** = ಹತ್ತಿರ, **ಆಶು** = ಬೇಗನೇ, **ಜಗಾಮ** = ಹೋದನು, **ಕೃಷ್ಣಂ** = ಶ್ರೀಕೃಷ್ಣನನ್ನು, **ಆಯಾಂತಂ** = ತನ್ನ ಬಳಿಗೆ ಬರುತ್ತಿರುವವನ್ನಾಗಿ, **ಶ್ರುತ್ವಾ** = ಕೇಳಿ, **ಭೌಮಃ** = ನರಕಾಸುರನು, **ಆರಾತ್** = ಕೂಡಲೇ, **ಅಕ್ಷೌಹಿಣೀತ್ರಿಂಶಕೇನ** = ಮೂವತ್ತು ಅಕ್ಷೌಹಿಣೀ ಸೈನ್ಯ ಸಮೇತನಾಗಿ, **ತಂ** = ಶ್ರೀಕೃಷ್ಣನನ್ನು, **ಅಭ್ಯಯಾತ್** = ಇದಿರಿಸಿದನು.

**ತಾತ್ಪರ್ಯ** :- ಮೂವತ್ತೈದು ಮಂದಿ ಮಂತ್ರಿಪುತ್ರರನ್ನು ಕೊಂದ ಬಳಿಕ ಶ್ರೀಕೃಷ್ಣನು ನರಕಾಸುರನ ಬಳಿಗೆ ಹೋದನು. ಶ್ರೀಕೃಷ್ಣ ತನ್ನ ಬಳಿಗೆ ಬರುತ್ತಿರುವುದನ್ನು ಕೇಳಿ ನರಕಾಸುರ ಮೂವತ್ತು ಅಕ್ಷೌಹಿಣೀ ಸೈನ್ಯ ಸಮೇತನಾಗಿ ಬಂದು ಶ್ರೀಕೃಷ್ಣನನ್ನು ಇದಿರಿಸಿದನು.

**ಜಘ್ನೇ ಸೇನಾಂ ಗರುಡಃ ಪಕ್ಷಪಾತೈಃ**
**ಪಾದಂ ಶೇಷಾಂ ಕೇಶವಃ ಸಾಯಕೌಘೈಃ ।**
**ಅಥಾಽಸಸಾದಾಽಶು ಭೌಮೋಽಚ್ಯುತಂ ತಂ**
**ಮುಂಚನ್ ಶರಾನಸ್ತ್ರಸಮ್ಮಂತ್ರಿತಾನ್ ದ್ರಾಕ್ ॥ ೯೯ ॥**

ಪದಚ್ಛೇದ :- ಜಘ್ನೇ, ಸೇನಾಂ, ಗರುಡಃ, ಪಕ್ಷಪಾತೈಃ, ಪಾದಂ, ಶೇಷಂ, ಕೇಶವಃ, ಸಾಯಕಾಘೈಃ, ಅಥ, ಆಸಸಾದ, ಆಶು, ಭೌಮಃ, ಅಚ್ಯುತಂ, ತಂ, ಮುಂಚನ್, ಬಾಣಾನ್, ಅಸ್ತ್ರಸಮ್ಮಂತ್ರಿತಾನ್, ದ್ರಾಕ್ ।

**ಅರ್ಥ** :- **ಗರುಡಃ** = ಗರುಡನು, **ಸೇನಾಂ** = ಸೈನ್ಯದ, **ಪಾದಂ** = ಕಾಲಂಶವನ್ನು, **ಪಕ್ಷಪಾತೈಃ** = ರೆಕ್ಕೆಗಳ ಹೊಡೆತದಿಂದ, **ಜಘ್ನೇ** = ನಾಶಮಾಡಿದನು, **ಕೇಶವಃ** = ಶ್ರೀಕೃಷ್ಣನು, **ಶೇಷಂ** = ಉಳಿದ ಸೈನ್ಯವನ್ನು, **ಸಾಯಕಾಘೈಃ** = ಬಾಣಸಮೂಹಗಳಿಂದ, (ಜಘ್ನೇ = ನಾಶಮಾಡಿದನು) **ಅಥ** = ಅನಂತರ, **ಭೌಮಃ** = ನರಕಾಸುರನು, **ಅಸ್ತ್ರಸಮ್ಮಂತ್ರಿತಾನ್** = ಅಸ್ತ್ರಮಂತ್ರಗಳಿಂದ, ಅಭಿಮಂತ್ರಿತವಾದ, **ಬಾಣಾನ್** = ಬಾಣಗಳನ್ನು, **ಮುಂಚನ್** = ಬಿಡುತ್ತಾ, **ದ್ರಾಕ್** = ಬೇಗನೇ, **ತಂ** = ಆ, **ಅಚ್ಯುತಂ** = ಶ್ರೀಕೃಷ್ಣನನ್ನು, **ಆಸಸಾದ** = ಎದುರುಗೊಂಡನು.

**ತಾತ್ಪರ್ಯ** :- ಸೈನ್ಯದ ಕಾಲಂಶವನ್ನು ಗರುಡನೇ ರೆಕ್ಕೆಗಳ ಹೊಡೆತದಿಂದ ನಾಶಮಾಡಿದ. ಉಳಿದ ಸೈನ್ಯವನ್ನು ಕೃಷ್ಣ ಬಾಣಸಮೂಹಗಳಿಂದ ನಾಶಗೊಳಿಸಿದ. ಅನಂತರ ನರಕಾಸುರನು ಅಸ್ತ್ರಮಂತ್ರಗಳಿಂದ ಅಭಿಮಂತ್ರಿತ ವಾದ ಬಾಣಗಳನ್ನು ಎಸೆಯುತ್ತಾ ಬೇಗನೇ ಶ್ರೀಕೃಷ್ಣನ ಬಳಿಗೆ ಬಂದ.

**ವಿವ್ಯಾಧ ತಂ ಕೇಶವಃ ಸಾಯಕೌಘೈ-**
**ರ್ಭೌಮಃ ಶತಘ್ನೀಂ ಬ್ರಹ್ಮದತ್ತಾಮಮುಂಚತ್ ॥ ೧೦೦ ॥**

ಪದಚ್ಛೇದ :- ವಿವ್ಯಾಧ, ತಂ, ಕೇಶವಃ, ಸಾಯಕೌಘೈಃ, ಭೌಮಃ, ಶತಘ್ನೀಂ, ಬ್ರಹ್ಮದತ್ತಾಂ, ಅಮುಂಚತ್ ।

**ಅರ್ಥ** :- **ಕೇಶವಃ** = ಶ್ರೀಕೃಷ್ಣನು, **ಸಾಯಕಾಘೈಃ** = ಬಾಣಸಮೂಹ ಗಳಿಂದ, **ತಂ** = ನರಕಾಸುರನನ್ನು, **ವಿವ್ಯಾಧ** = ಹೊಡೆದನು, **ಭೌಮಃ** = ನರಕಾಸುರನು, **ಬ್ರಹ್ಮದತ್ತಾಂ** = ಬ್ರಹ್ಮನು ನೀಡಿದ, **ಶತಘ್ನೀಂ** = ಶತಘ್ನಿಯನ್ನು, **ಅಮುಂಚತ್** = ಪ್ರಯೋಗಿಸಿದನು.

**ತಾತ್ಪರ್ಯ** :- ಶ್ರೀಕೃಷ್ಣ ನರಕನನ್ನು ಬಾಣಸಮೂಹಗಳಿಂದ ಹೊಡೆದ. ನರಕ ಬ್ರಹ್ಮನಿತ್ತ ಶತಘ್ನಿಯನ್ನು ಶ್ರೀಕೃಷ್ಣನ ಮೇಲೆ ಪ್ರಯೋಗಿಸಿದ.

**ಅಚ್ಛೇದ್ಯೋಽಭೇದ್ಯೋ ನಿತ್ಯಸಂವಿತ್ಸುಖಾತ್ಮಾ**
**ನಿತ್ಯಾವ್ಯಯಃ ಪೂರ್ಣಶಕ್ತಿಃ ಸ ಕೃಷ್ಣಃ ।**
**ನಿಗೀರ್ಯ ತಾಂ ದೇವವರಃ ಶತಘ್ನೀಂ**
**ನಿತ್ಯಾಶ್ರಾಂತೋಽದರ್ಶಯಚ್ಛ್ರಾಂತವಚ್ಚ ॥ ೧೦೧ ॥**

ಪದಚ್ಛೇದ :- **ಅಚ್ಛೇದ್ಯಃ, ಅಭೇದ್ಯಃ, ನಿತ್ಯಸಂವಿತ್, ಸುಖಾತ್ಮಾ, ನಿತ್ಯಾವ್ಯಯಃ, ಪೂರ್ಣಶಕ್ತಿಃ, ಸ, ಕೃಷ್ಣಃ, ನಿಗೀರ್ಯ, ತಾಂ, ದೇವವರಃ, ಶತಘ್ನೀಂ, ನಿತ್ಯಾಶ್ರಾಂತಃ, ಅದರ್ಶಯತ್, ಶ್ರಾಂತವತ್, ಚ ।**

**ಅರ್ಥ** :- **ಅಚ್ಛೇದ್ಯಃ** = ಛೇದಿಸಲು ಅಸಾಧ್ಯನಾದ, **ಅಭೇದ್ಯ** = ಭೇದಿಸಲು ಅಸಾಧ್ಯನಾದ, **ನಿತ್ಯಸಂವಿತ್** = ಸದಾಜ್ಞಾನಪೂರ್ಣನಾದ, **ಸುಖಾತ್ಮಾ** = ಆನಂದಸ್ವರೂಪನಾದ, **ನಿತ್ಯಾವ್ಯಯಃ** = ನಾಶರಹಿತನಾದ, **ಪೂರ್ಣಶಕ್ತಿಃ** = ಸರ್ವಶಕ್ತನಾದ, **ದೇವವರಃ** = ದೇವತೆಗಳಲ್ಲಿ ಶ್ರೇಷ್ಠನಾದ, **ಸಃ ಕೃಷ್ಣಃ** = ಆ ಕೃಷ್ಣನು, **ಶತಘ್ನೀಂ** = ಶತಘ್ನಿ ಎಂಬ ಅಸ್ತ್ರವನ್ನು, **ನಿಗೀರ್ಯ** = ನುಂಗಿ, **ನಿತ್ಯಾಶ್ರಾಂತಃ** = ಯಾವಾಗಲೂ ಬಳಲಿಕೆ ಇಲ್ಲದ ಕೃಷ್ಣನು, **ಶ್ರಾಂತವತ್ ಚ** = ಬಳಲಿದವನಂತೆ, **ಅದರ್ಶಯತ್** = ತೋರಿಸಿಕೊಂಡನು.

**ತಾತ್ಪರ್ಯ** :- ಯಾರಿಂದಲೂ ತುಂಡರಿಸಲಶಕ್ಯನಾದ, ಭೇದಿಸಲ ಶಕ್ಯನಾದ, ಜ್ಞಾನಪೂರ್ಣನಾದ, ಆನಂದಸ್ವರೂಪನಾದ, ನಾಶರಹಿತನಾದ, ಸರ್ವಶಕ್ತನಾದ ಕೃಷ್ಣನು ಆ ಶತಘ್ನಿ ಎಂಬ ಅಸ್ತ್ರವನ್ನು ನುಂಗಿ, ಬಳಲಿಕೆ ಇಲ್ಲದಿದ್ದರೂ ಬಳಲಿದವನಂತೆ ತೋರಿಸಿಕೊಂಡನು.

**ಬಹೂನ್ ವರಾನ್ ಬ್ರಹ್ಮಣೋಽನ್ಯೇಷ್ವಮೋಘಾನ್**
**ಮೋಘೀಕೃತಾನ್ ವೀಕ್ಷ್ಯ ಪರಾತ್ಪರೇಶಃ ।**
**ಭವೇತ್ ಕಥಂಚಿದ್ ಬಹುಮಾನೇನ ಯುಕ್ತ**
**ಇತ್ಯೇವ ಕೃಷ್ಣೋಽದರ್ಶಯಚ್ಛ್ರಾಂತವತ್ ಸ್ವಮ್ ॥ ೧೦೨ ॥**

ಪದಚ್ಛೇದ :- **ಬಹೂನ್, ವರಾನ್, ಬ್ರಹ್ಮಣಃ, ಅನ್ಯೇಷು, ಅಮೋಘಾನ್, ಮೋಘೀಕೃತಾನ್, ವೀಕ್ಷ್ಯ, ಪರಾತ್ಪರೇಶಃ, ಭವೇತ್, ಕಥಂಚಿತ್, ಬಹುಮಾನೇನ, ಯುಕ್ತಃ, ಇತಿ, ಏವ, ಕೃಷ್ಣಃ, ಅದರ್ಶಯತ್, ಶ್ರಾಂತವತ್, ಸ್ವಂ ।**

**ಅರ್ಥ** :- **ಪರಾತ್ ಪರೇಶಃ** = ಸರ್ವೇಶ್ವರನಾದ, **ಬ್ರಹ್ಮಣಃ** = ಬ್ರಹ್ಮದೇವರ, **ಅಮೋಘಾನ್** = ವ್ಯರ್ಥವಾಗದ, **ವರಾನ್** = ವರಗಳನ್ನು, **ಅನ್ಯೇಷು** = ಮಂತ್ರಿ ಮೊದಲಾದವರಲ್ಲಿ, **ಮೋಘೀಕೃತಾನ್** = ವ್ಯರ್ಥಗೊಂಡಿದ್ದನ್ನಾಗಿ, **ವೀಕ್ಷ್ಯ** = ನೋಡಿ, **ಕಥಂಚಿತ್** = ಹೇಗಾದರೂ, **ಬಹುಮಾನೇನ** = ಬ್ರಹ್ಮನಲ್ಲಿ ಬಹಳ ಆದರದಿಂದ, **ಯುಕ್ತಃ ಭವೇತ್** = ಕೂಡಿದವನಾಗಲಿ, **ಇತ್ಯೇವ** = ಎಂಬ ಕಾರಣದಿಂದಲೇ, **ಕೃಷ್ಣಃ** = ಶ್ರೀಕೃಷ್ಣನು, **ಸ್ವಂ** = ತನ್ನನ್ನು, **ಶ್ರಾಂತವತ್** = ಬಳಲಿದವನಂತೆ, **ಅದರ್ಶಯತ್** = ತೋರಿಸಿಕೊಂಡನು.

**ತಾತ್ಪರ್ಯ** :- ಪರಾತ್ಪರನಾದ ಸರ್ವೇಶ್ವರ ಶ್ರೀಕೃಷ್ಣ ಬ್ರಹ್ಮನ ಅಮೋಘವಾದ ಅನೇಕ ವರಗಳನ್ನು ಮಂತ್ರಿಗಳು ಮುಂತಾದವರಲ್ಲಿ ವ್ಯರ್ಥಗೊಳಿಸಿರುವುದನ್ನು ಕಂಡಿರುವ ನರಕಾಸುರ ಬ್ರಹ್ಮನಲ್ಲಿ ಹೇಗಾದರೂ ಮಹತ್ವಬುದ್ಧಿ ಉಳ್ಳವನಾಗಲಿ ಎಂದು ತಾನು ಆಯಾಸಗೊಂಡವನಂತೆ ತೋರಿಕೊಂಡ.

**ತದಾ ದೃಪ್ತಂ ನರಕಂ ವೀಕ್ಷ್ಯ ದೇವೀ**
**ಸತ್ಯಾಽಽದದೇ ಕಾರ್ಮುಕಂ ಶಾರ್ಙ್ಗಸಂಜ್ಞಮ್ ।**
**ಚಕಾರ ತಂ ಯತಮಾನಂ ಚ ಭೌಮಂ**
**ನಿರಾಯುಧಂ ವಿರಥಂ ಚ ಕ್ಷಣೇನ ॥ ೧೦೩ ॥**

ಪದಚ್ಛೇದ :– ತದಾ, ದೃಪ್ತಂ, ನರಕಂ, ವೀಕ್ಷ್ಯ, ದೇವಿ, ಸತ್ಯಾ, ಆದದೆ, ಕಾರ್ಮುಕಂ, ಶಾರ್ಙ್ಗಸಂಜ್ಞಮ್, ಚಕಾರ, ತಂ, ಯತಮಾನಂ, ಚ, ಭೌಮಂ ನಿರಾಯುಧಂ, ವಿರಥಂ, ಚ, ಕ್ಷಣೇನ ।

**ಅರ್ಥ** :- **ತದಾ** = ಆಗ, **ದೃಪ್ತಂ** = ದರ್ಪಗೊಂಡ, **ನರಕಂ** = ನರಕಾಸುರನನ್ನು, **ವೀಕ್ಷ್ಯ** = ನೋಡಿ, **ದೇವಿ** = ಷಡ್ಗುಣೈಶ್ವರ್ಯಸಂಪನ್ನಳಾದ, **ಸತ್ಯಾ** = ಸತ್ಯಭಾಮೆಯು, **ಶಾಂರ್ಙ್ಗಸಂಜ್ಞಂ** = ಶಾಂರ್ಙ್ಗ ಎಂಬ ಹೆಸರುಳ್ಳ, **ಕಾರ್ಮುಕಂ** = ಬಿಲ್ಲನ್ನು, **ಆದದೆ** = ತೆಗೆದುಕೊಂಡಳು, **ಯತಮಾನಂ** = ಯುದ್ಧಕ್ಕಾಗಿ ಪ್ರಯತ್ನಿಸುತ್ತಿರುವ, **ತಂ ಭೌಮಂ ಚ** = ಆ ನರಕಾಸುರನನ್ನು, **ಕ್ಷಣೇನ** = ಕ್ಷಣಮಾತ್ರಸಮಯದಲ್ಲಿ, **ನಿರಾಯುಧಂ** = ಆಯುಧ ರಹಿತನನ್ನಾಗಿ, **ವಿರಥಂ ಚ** = ರಥರಹಿತನನ್ನಾಗಿ, **ಚಕಾರ** = ಮಾಡಿದಳು.

ತಾತ್ಪರ್ಯ :- ಆಗ ಬಹಳ ಗರ್ವಯುಕ್ತನಾದ ನರಕಾಸುರನನ್ನು ನೋಡಿ, ಸತ್ಯಭಾಮೆಯು ಶಾಂರ್ಙ್ಗ ಎಂಬ ಹೆಸರುಳ್ಳ ಧನುಸ್ಸನ್ನು ತೆಗೆದುಕೊಂಡು, ಯುದ್ಧಕ್ಕಾಗಿ ಪ್ರಯತ್ನಿಸುತಿದ್ದ ಅವನನ್ನು ಕ್ಷಣಮಾತ್ರದಲ್ಲಿ ನಿರಾಯುಧನನ್ನಾಗಿ ಮತ್ತು ರಥರಹಿತನನ್ನಾಗಿ ಮಾಡಿದಳು.

**ಆಲಿಂಗ್ಯ ಕೃಷ್ಣಃ ಸತ್ಯಭಾಮಾಂ ಪುನಶ್ಚ**
**ರಥಾಂತರೇ ಸಂಸ್ಥಿತಂ ಭೌಮಮುಗ್ರಮ್ ।**
**ಸೃಜಂತಮಸ್ತ್ರಾಣ್ಯರಿಣಾ ನಿಕೃತ್ತ-**
**ಕಂಧಂ ಮೃತ್ಯೋರರ್ಪಯಾಮಾಸ ಶೀಘ್ರಮ್ ॥ ೧೦೪ ॥**

**ಪದಚ್ಛೇದ :-** ಆಲಿಂಗ್ಯ, ಕೃಷ್ಣಃ, ಸತ್ಯಭಾಮಾಂ, ಪುನಃ, ಚ, ರಥಾಂತರೇ, ಸಂಸ್ಥಿತಂ, ಭೌಮಂ, ಉಗ್ರಂ, ಸೃಜಂತಂ, ಅಸ್ತ್ರಾಣಿ, ಅರಿಣಾ, ನಿಕೃತ್ತಸ್ಕಂಧಂ, ಮೃತ್ಯೋಃ, ಅರ್ಪಯಾಮಾಸ, ಶೀಘ್ರಂ ।

**ಅರ್ಥ :-** **ಕೃಷ್ಣಃ** = ಶ್ರೀಕೃಷ್ಣನು, **ಸತ್ಯಭಾಮಾಂ** = ಸತ್ಯಭಾಮೆಯನ್ನು, **ಆಲಿಂಗ್ಯ** = ಆಲಿಂಗಿಸಿ, **ಪುನಃ ಚ** = ಮತ್ತು, **ರಥಾಂತರೇ** = ಬೇರೊಂದು ರಥದಲ್ಲಿ, **ಸಂಸ್ಥಿತಂ** = ಕುಳಿತಿರುವ, **ಅಸ್ತ್ರಾಣಿ** = ಅಸ್ತ್ರಗಳನ್ನು, **ಸೃಜಂತಂ** = ಪ್ರಯೋಗಿಸುತ್ತಿರುವ, **ಉಗ್ರಂ** = ಕ್ರೂರಿಯಾದ, **ಭೌಮಂ** = ನರಕಾಸುರನನ್ನು, **ಶೀಘ್ರಂ** = ಬೇಗನೆ, **ಅರಿಣಾ** = ಸುದರ್ಶನ ಚಕ್ರದಿಂದ, **ನಿಕೃತ್ತಸ್ಕಂಧಂ** = ತುಂಡರಿಸಲ್ಪಟ್ಟ ಕತ್ತುಳ್ಳವನನ್ನಾಗಿ, **ಮೃತ್ಯೋಃ** = ಮೃತ್ಯುವಿಗೆ, **ಅರ್ಪಯಾಮಾಸ** = ಅರ್ಪಿಸಿದನು.

ತಾತ್ಪರ್ಯ :- ಶ್ರೀಕೃಷ್ಣನು ಸತ್ಯಭಾಮೆಯ ಪರಾಕ್ರಮಕ್ಕೆ ಮೆಚ್ಚಿ, ಅವಳನ್ನು ಆಲಿಂಗಿಸಿದನು. ಮತ್ತು ಇನ್ನೊಂದು ರಥದಲ್ಲಿ ಕುಳಿತು ಅಸ್ತ್ರಗಳನ್ನು ಬಿಡುತ್ತಿದ್ದ ನರಕನನ್ನು ಚಕ್ರದಿಂದ ಅವನ ಕುತ್ತಿಗೆಯನ್ನು ಕತ್ತರಿಸಿ ಮೃತ್ಯುವಿಗೆ ಅರ್ಪಿಸಿದನು.

**ಸ ಮಂತ್ರಿಭಿರ್ಮಂತ್ರಿಪುತ್ರೈಃ ಸಮೇತೋ**
**ಜಗಾಮ ಕೃಷ್ಣಾವಜ್ಞಯಾಽಂಧಂ ತಮಶ್ಚ ।**
**ತದಾವಿಷ್ಟೋ ವಾಯುರಗಾಚ್ಚ ಕೃಷ್ಣ-**
**ಮಂತಃಪುರಂ ಪ್ರಾವಿಶತ್ ಸತ್ಯಯೇಶಃ ॥ ೧೦೫ ॥**

ಪದಚ್ಛೇದ :- ಸಃ, ಮಂತ್ರಿಭಿಃ, ಮಂತ್ರಿಪುತ್ರೈಃ, ಸಮೇತಃ, ಜಗಾಮ, ಕೃಷ್ಣ ಆವಜ್ಞಯಾ, ಅಂಧಂ, ತಮಃ, ಚ, ತತ್, ಆವಿಷ್ಟಃ, ವಾಯುಃ, ಅಗಾತ್, ಚ, ಕೃಷ್ಣಂ, ಅಂತಃಪುರಂ, ಪ್ರಾವಿಶತ್, ಸತ್ಯಯಾ, ಈಶಃ ।

**ಅರ್ಥ** :- **ಸಃ** = ಆ ನರಕನು, **ಕೃಷ್ಣಾವಜ್ಞಯಾ** = ಕೃಷ್ಣನನ್ನು ನಿಂದಿಸಿದ್ದರಿಂದ, **ಮಂತ್ರಿಭಿಃ** = ಅಮಾತ್ಯರಿಂದ, **ಮಂತ್ರಿಪುತ್ರೈಃ** = ಮಂತ್ರಿಗಳ ಮಕ್ಕಳಿಂದ, **ಸಮೇತಃ** = ಸಹಿತನಾಗಿ, **ಅಂಧಂ ತಮಃ** = ಅಂಧಃ ತಮಸ್ಸನ್ನು, **ಜಗಾಮ** = ಹೊಂದಿದನು, **ತದಾವಿಷ್ಟಃ** = ಅವನಲ್ಲಿ ಆವಿಷ್ಟನಾದ, **ವಾಯುಃ ಚ** = ಮುಖ್ಯಪ್ರಾಣನಾದರೂ, **ಕೃಷ್ಣಂ** = ಕೃಷ್ಣನನ್ನು, **ಅಗಾತ್** = ಹೊಂದಿದನು, **ಈಶಃ** = ಶ್ರೀಕೃಷ್ಣನು, **ಸತ್ಯಯಾ** = ಸತ್ಯಭಾಮೆಯಿಂದ ಕೂಡಿದವನಾಗಿ, **ಅಂತಃಪುರಂ** = ಅರಮನೆಯನ್ನು, **ಪ್ರಾವಿಶತ್** = ಪ್ರವೇಶಿಸಿದನು.

**ತಾತ್ಪರ್ಯ** :- ನರಕಾಸುರ ಶ್ರೀಕೃಷ್ಣನನ್ನು ನಿಂದಿಸಿದ್ದರಿಂದ ಮಂತ್ರಿ, ಮಂತ್ರಿಪುತ್ರರ ಸಮೇತನಾಗಿ ಅಂಧಂತಮಸ್ಸನ್ನು ಹೊಂದಿದ, ಅವನಲ್ಲಿ ಆವಿಷ್ಟನಾಗಿದ್ದ ವಾಯು ಶ್ರೀಕೃಷ್ಣನನ್ನು ಸೇರಿದ. ಶ್ರೀಕೃಷ್ಣ ಸತ್ಯಭಾಮೆಯೊಂದಿಗೆ ನರಕನ ಅಂತಃಪುರವನ್ನು ಪ್ರವೇಶಿಸಿದ.

**ತದಾ ಭೂಮಿಃ ಪಂಚಭೂತಾವರಾ ಯಾ**
**ಯಸ್ಯಾಂ ಜಜ್ಞೇ ನರಕಃ ಶ್ರೀವರಾಹಾತ್ ।**
**ಮೂಲಪ್ರಕೃತ್ಯೈವ ಭೂಮ್ಯಾ ನಿತಾಂತ-**
**ಮಾವಿಷ್ಟಾ ಯಾ ಸಾಽಗಮತ್ ಕೃಷ್ಣಪಾದೌ ॥ ೧೦೬ ॥**

ಪದಚ್ಛೇದ :- ತದಾ, ಭೂಮಿಃ, ಪಂಚಭೂತಾವರಾ, ಯಾ, ಯಸ್ಯಾಂ, ಜಜ್ಞೆ, ನರಕಃ, ಶ್ರೀವರಾಹಾತ್, ಮೂಲಪ್ರಕೃತೀ, ಏವ, ಭೂಮ್ಯಾ, ನಿತಾಂತಂ, ಆವಿಷ್ಟಾಯಾಂ ಸಾ, ಅಗಮತ್, ಕೃಷ್ಣಪಾಪೌ ।

**ಅರ್ಥ** :- **ತದಾ** = ಆಗ, **ಪಂಚಭೂತಾವರಾ** = ಪಂಚಭೂತಗಳಲ್ಲಿ ಕೊನೆಯವಳಾದ, **ಯಾ ಭೂಮಿ** = ಭೂಮಿದೇವಿಯು, **ಯಸ್ಯಾ** = ಯಾವ ಭೂಮಿದೇವಿಯಲ್ಲಿ, **ಶ್ರೀವರಾಹಾತ್** = ವರಾಹರೂಪಿಯಾದ ಪರಮಾತ್ಮ ನಿಂದ, **ನರಕಃ** = ನರಕಾಸುರನು, **ಜಜ್ಞೆ** = ಜನಿಸಿದನು, **ಮೂಲಪ್ರಕೃತಿ ಏವ** =

ಮೂಲ ಪ್ರಕೃತಿಯೇ ಆದ, **ಭೂಮ್ಯಾ** = ಭೂರೂಪಿಯಾದ, ಲಕ್ಷ್ಮಿಯಿಂದ **ನಿತಾಂತಂ** = ವಿಶೇಷವಾಗಿ, **ಆವಿಷ್ಟಾಯಾಂ(ಸತ್ಯಾಂ)** = ಆವೇಶ ಹೊಂದಿರಲು, **ಸಾ** = ಆ ಭೂದೇವಿ, **ಕೃಷ್ಣಪಾದೌ** = ಕೃಷ್ಣಪಾದಗಳಲ್ಲಿ, **ಅಗಮತ್** = ನಮಿಸಿದಳು.

**ತಾತ್ಪರ್ಯ** :- ಪಂಚಭೂತಗಳಲ್ಲಿ ಕೊನೆಯವಳಾದ ಭೂಮಿದೇವಿಯಲ್ಲಿ ಶ್ರೀವರಾಹನಿಂದ ನರಕಾಸುರ ಹುಟ್ಟಿದ್ದ. ಅವಳಲ್ಲಿ ಮೂಲಪ್ರಕೃತಿಯಾದ ಮಹಾಲಕ್ಷ್ಮಿಯ ಭೂರೂಪಿ ವಿಶೇಷವಾಗಿ ಆವೇಶ ಹೊಂದಿತ್ತು. ಅಂತ ಭೂದೇವಿಯು ಕೃಷ್ಣನ ಪಾದಗಳಿಗೆ ನಮಿಸಿದಳು.

**ವಿವರಣೆ** :- ವಾಸ್ತವಿಕವಾಗಿ ಭೂಮಿದೇವಿ ಮತ್ತು ಆಕಾಶಾಭಿಮಾನಿ ಗಣಪತಿ ಇಬ್ಬರೂ ಸಮಾನರಾದರೂ, ಆಚಾರ್ಯರ ಈ ಮಾತಿನಿಂದ ಗಣಪತಿಗಿಂತ ಭೂಮಿದೇವಿ ಸ್ವಲ್ಪ ಎಂದು ತಿಳಿಯಬೇಕು. (ತಾಮ್ರ)

**ಸಾಽದಿತ್ಯಾಸ್ತೇ ಕುಂಡಲೇ ಪಾದಯೋಶ್ಚ**
**ನಿಧಾಯ ಪೌತ್ರಂ ಭಗದತ್ತಸಂಜ್ಞಮ್ ।**
**ಸಮರ್ಪಯಾಮಾಸ ತಸ್ಯಾಭಿಷೇಕಂ**
**ಪ್ರಾಗ್ಜ್ಯೋತಿಷೇ ಕಾರಯಾಮಾಸ ಕೃಷ್ಣಃ ॥ ೧೦೭ ॥**

ಪದಚ್ಛೇದ :- ಸಾ, ಅದಿತ್ಯಾಃ, ತೇ, ಕುಂಡಲೇ, ಪಾದಯೋಃ, ಚ, ನಿಧಾಯ, ಪೌತ್ರಂ, ಭಗದತ್ತಸಂಜ್ಞಂ, ಸಮರ್ಪಯಾಮಾಸ, ತಸ್ಯ, ಅಭಿಷೇಕಂ, ಪ್ರಾಗ್ಜ್ಯೋತಿಷೇ, ಕಾರಯಾಮಾಸ, ಕೃಷ್ಣಃ।

**ಅರ್ಥ** :- **ಸಾಃ** = ಆ ಭೂಮಿದೇವಿಯು, **ಅದಿತ್ಯಾಃ** = ಅದಿತಿಯ, **ತೆ ಕುಂಡಲೇ** = ಆ ಎರಡು ಕಿವಿಯೋಲೆಗಳನ್ನು, **ಪಾದಯೋಃ** = ಕೃಷ್ಣನ ಪಾದಗಳಲ್ಲಿ, **ನಿಧಾಯ** = ಇಟ್ಟು, **ಭಗದತ್ತಸಂಜ್ಞಂ** = ಭಗದತ್ತ ಎಂಬ ಹೆಸರುಳ್ಳ, **ಪೌತ್ರಂ ಚ** = ಮೊಮ್ಮಗಳನ್ನು **ಸಮರ್ಪಯಾಮಾಸ** = ಸಮರ್ಪಿಸಿದಳು, **ಪ್ರಾಗ್ ಜ್ಯೋತಿಷೆ** = ಪ್ರಾಗ್ ಜ್ಯೋತಿಷೀಪುರದಲ್ಲಿ, **ತಸ್ಯ** = ಆ ಭಗದತ್ತನ, **ಅಭಿಷೇಕಂ** = ಪಟ್ಟಾಭಿಷೇಕವನ್ನು, **ಕೃಷ್ಣಃ** = ಕೃಷ್ಣನು, **ಕಾರಯಾಮಾಸ** = ಮಾಡಿಸಿದನು.

ತಾತ್ಪರ್ಯ :- ಆ ಭೂಮಿದೇವಿಯು ಅದಿತಿಯ ಕಿವಿಯೋಲೆಗಳನ್ನು ಕೃಷ್ಣನ ಪಾದಗಳಲ್ಲಿ ಸಮರ್ಪಿಸಿದಳು. ಮತ್ತು ಭಗದತ್ತ ಎಂಬ ತನ್ನ ಮೊಮ್ಮಗನನ್ನು ಕೃಷ್ಣನಿಗೆ ಸಮರ್ಪಿಸಿದಳು. ಕೃಷ್ಣನು ಪ್ರಾಗ್ಜ್ಯೋತಿಷಪುರಕ್ಕೆ ಅವನನ್ನು ರಾಜನನ್ನಾಗಿ ಪಟ್ಟಾಭಿಷೇಕ ಮಾಡಿದನು.

**ಸಂಸ್ಥಾಪ್ಯ ತಂ ಸರ್ವಕಿರಾತರಾಜ್ಯೇ**
**ಭೌಮಾಹೃತಂ ವೈಶ್ರವಣಾದ್ ಬಲೇನ ।**
**ಶಿವೇನ ದತ್ತಂ ಧನದಾಯಾತಿಸತ್ತ್ವಂ**
**ಭಗದತ್ತೇ ನ್ಯದಧಾತ್ ಸುಪ್ರತೀಕಮ್ ॥ ೧೦೮ ॥**

ಪದಚ್ಛೇದ :– ಸಂಸ್ಥಾಪ್ಯ, ತಂ, ಸರ್ವಕಿರಾತರಾಜ್ಯೇ, ಭೌಮಾಹೃತಂ, ವೈಶ್ರವಣಾದ್, ಬಲೇನ, ಶಿವೇನ, ದತ್ತಂ, ಧನದಾಯಾತ್, ಅತಿಸತ್ವಂ, ಭಗದತ್ತೇ, ಅಧಾತ್, ಸುಪ್ರತೀಕಂ, ರಮೇಶಃ ।

ಅರ್ಥ :- **ತಂ** = ಆ ಭಗದತ್ತನನ್ನು, **ಸರ್ವಕಿರಾತರಾಜ್ಯೆ** = ಎಲ್ಲಾ ಕಿರಾತರ ರಾಜ್ಯಕ್ಕೂ ಅಧಿಪತಿಯಾಗಿ, **ಸಂಸ್ಥಾಪ್ಯ** = ಕುಳ್ಳಿರಿಸಿ, **ಶಿವೇನ** = ಶಿವನಿಂದ, **ಧನದಾಯ ದತ್ತಂ** = ಕುಬೇರನಿಗೆ ಕೊಡಲ್ಪಟ್ಟ, **ಬಲೇನ** = ಬಲಾತ್ಕಾರದಿಂದ, **ವೈಶ್ರವಣಾತ್** = ಕುಬೇರನಿಂದ, **ಭೌಮಾಹೃತಂ** = ನರಕನಿಂದ ಅಪಹರಿಸಲ್ಪಟ್ಟ, **ಅತಿಸತ್ವಂ** = ಬಹಳ ಬಲಿಷ್ಠವಾದ, **ಸುಪ್ರತೀಕಂ** = ಸುಪ್ರತೀಕ ಎಂಬ ಆನೆಯನ್ನು, **ರಮೇಶಃ** = ಕೃಷ್ಣನು, **ಭಗದತ್ತೇ ಅಧಾತ್** = ಭಗದತ್ತನಲ್ಲಿ ಇರಿಸಿದನು.

ತಾತ್ಪರ್ಯ :- ಆ ಭಗದತ್ತನನ್ನು ಕಿರಾತರ ಸಾಮ್ರಾಜ್ಯಕ್ಕೆ ಅಧಿಪತಿ-ಯನ್ನಾಗಿರಿಸಿ, ಹಿಂದೆ ಶಿವನು ಕುಬೇರನಿಗೆ ಕೊಟ್ಟಿದ್ದ ಕುಬೇರನಿಂದ ನರಕನು ಅಪಹರಿಸಿದ್ದ, ಸುಪ್ರತೀಕ ಎಂಬ ಆನೆಯನ್ನು ಭಗದತ್ತನಿಗೆ ಕೊಟ್ಟನು.

**ಕರೀಂದ್ರಮೇಕಂ ತಂ ನಿಧಾಯೈವ ತಸ್ಮಿನ್**
**ಕೃತ್ವಾ ಪ್ರಸಾದಂ ಚ ವಸುಂಧರಾಯಾಃ ।**
**ಚತುರ್ದಂತಾನ್ ಷಟ್ ಸಹಸ್ರಾನ್ ಕರೀಂದ್ರಾನ್**
**ಪಯೋಬ್ಧಿಜಾನ್ ಪ್ರಾಹಿಣೋದ್ ದ್ವಾರವತ್ಯೈ ॥ ೧೦೯ ॥**

**ಪದಚ್ಛೇದ :- ಕರೀಂದ್ರಂ, ಏಕಂ, ನಿಧಾಯ, ಏವ, ತಸ್ಮಿನ್, ಕೃತ್ವಾ, ಪ್ರಸಾದಂ, ಚ, ವಸುಂಧರಾಯಾಃ, ಚತುರ್ದಂತಾನ್, ಷಟ್‌ಸಹಸ್ರಾನ್, ಕರೀಂದ್ರಾನ್, ಪಯೋಬ್ಧಿಜಾನ್, ಪ್ರಾಹಿಣೋತ್, ದ್ವಾರವತ್ಯೈ ।**

**ಅರ್ಥ** :- **ತಂ ಏಕಂ ಕರೀಂದ್ರಂ** = ಆ ಸುಪ್ರತೀಕ ಎಂಬ ಶ್ರೇಷ್ಠ ಆನೆಯನ್ನು, **ತಸ್ಮಿನ್ ಏವ** = ಆ ಭಗದತ್ತನಲ್ಲೇ, **ನಿಧಾಯ** = ಇರಿಸಿ, **ವಸುಂಧರಾಯಾಃ** = ಭೂದೇವಿಗೆ, **ಪ್ರಸಾದಂ ಕೃತ್ವಾ ಚ** = ಸಾಂತ್ವನ ಮಾಡಿ, **ಚತುರ್ದಂತಾನ್** = ನಾಲ್ಕು ಹಲ್ಲುಗಳುಳ್ಳ, **ಷಟ್ ಸಹಸ್ರಾನ್** = ಆ ಸಾವಿರ, **ಪಯೋಬ್ಧಿಜಾನ್** = ಸಮುದ್ರದಿಂದ ಉದಿಸಿದ್ದ, **ಕರೀಂದ್ರಾನ್** = ಶ್ರೇಷ್ಠ ಆನೆಗಳನ್ನು, **ದ್ವಾರವತ್ಯೈ** = ದ್ವಾರಕೆಗೆ, **ಪ್ರಾಹಿಣೋತ್** = ಕಳುಹಿಸಿದನು.

**ತಾತ್ಪರ್ಯ** :- ಆ ಭಗದತ್ತನಲ್ಲಿ ಸುಪ್ರತೀಕ ಎಂಬ ಶ್ರೇಷ್ಠ ಆನೆಯನ್ನು ಮಾತ್ರ ಇರಿಸಿದನು. ಭೂಮಿ ದೇವಿಗೆ ಸಾಂತ್ವನವನ್ನು ಮಾಡಿದನು. ಮತ್ತು ಸಮುದ್ರದಿಂದ ಉದಿಸಿದ್ದ ನಾಲ್ಕು ಹಲ್ಲುಗಳುಳ್ಳ ಆರು ಸಾವಿರ ಶ್ರೇಷ್ಠ ಆನೆಗಳನ್ನು ದ್ವಾರಕೆಗೆ ಕಳುಹಿಸಿದನು.

**ನರಾಧಿಪಾನ್ ದೇವಗಂಧರ್ವನಾಗಾನ್**
**ಜಿತ್ವಾಽಽನೀತಂ ಹೇಮರತ್ನೋಚ್ಚರಾಶಿಮ್ ।**
**ಶತದ್ವಯಂ ಯೋಜನಾನಾಂ ಸಮೃದ್ಧಂ**
**ಸಮಂತತಃ ಪ್ರಾಹಿಣೋತ್ ಸ್ವಾಂ ಪುರೀಂ ಸಃ ॥ ೧೧೦ ॥**

**ಪದಚ್ಛೇದ** :- ನರಾಧಿಪಾನ್, ದೇವಗಂಧರ್ವನಾಗಾನ್, ಜಿತ್ವಾ, ಆನೀತಂ, **ಹೇಮರತ್ನೋಚ್ಚರಾಶಿಂ, ಶತದ್ವಯಂ, ಯೋಜನಾನಾಂ, ಸಮೃದ್ಧಂ, ಸಮಂತಃ, ಪ್ರಾಹಿಣೋತ್, ಸ್ವಾಂ, ಪುರೀಂ, ಸ ।**

**ಅರ್ಥ** :- **ನರಾಧಿಪಾನ್** = ರಾಜರುಗಳನ್ನು, **ದೇವಗಂಧರ್ವನಾಗಾನ್** = ದೇವಗಂಧರ್ವನಾಗರನ್ನು, **ಜಿತ್ವಾ** = ಗೆದ್ದು, **ಆನೀತಂ** = ತಂದ, **ಯೋಜನಾನಾಂ ಶತದ್ವಯಂ** = ಇನ್ನೂರು ಯೋಜನೆಗಳಷ್ಟು, **ಸಮಂತತಃ** = ವಿಸ್ತಾರವಾಗಿ, **ಸಮೃದ್ಧ** = ಸಮೃದ್ಧವಾಗಿದ್ದ, **ಹೇಮರತ್ನೋಚ್ಚರಾಶಿಂ** = ಬಂಗಾರರತ್ನಗಳ ದೊಡ್ಡ ರಾಶಿಯನ್ನು, **ಸಃ** = ಆ ಶ್ರೀಕೃಷ್ಣನು, **ಸ್ವಾಂ ಪುರೀಂ** = ತನ್ನ ಪಟ್ಟಣಕ್ಕೆ, **ಪ್ರಾಣಿಣೋತ್** = ಕಳುಹಿಸಿದ.

ತಾತ್ಪರ್ಯ :- ರಾಜರುಗಳನ್ನು ದೇವಗಂಧರ್ವನಾಗರನ್ನು ಗೆದ್ದು ನರಕಾಸುರ ತಂದಿದ್ದ. ಇನ್ನೂರು ಯೋಜನಗಳಷ್ಟು ಎತ್ತರಕ್ಕೆ ಬೆಳದಿದ್ದ ಬಂಗಾರ ರತ್ನಗಳ ದೊಡ್ಡರಾಶಿಯನ್ನೂ ತನ್ನ ಪಟ್ಟಣಕ್ಕೆ ಕಳಿಸಿದ ಶ್ರೀಕೃಷ್ಣ.

**ಮಹಾವೀರ್ಯೈರ್ನೈರ್‌ಋತ್ಯೈ ರಾಕ್ಷಸೇಂದ್ರೈ-**
**ರ್ಭೌಮಾನೀತೈರ್ನಿರ್‌ಋತಿಂ ಯೋಧಯಿತ್ವಾ ।**
**ಸ ಪ್ರಾಹಿಣೋತ್ ಸರ್ವರತ್ನೋಚ್ಚರಾಶಿಂ**
**ಗಜಾಂಶ್ಚ ನಾರಾಯಣ ಆದಿದೇವಃ ॥ ೧೧೧ ॥**

**ಪದಚ್ಛೇದ :- ಮಹಾವೀರ್ಯೈಃ, ನೈರ್ಋತ್ಯೈಃ, ರಾಕ್ಷಸೇಂದ್ರೈಃ, ಭೌಮಾನೀತೈಃ, ನಿರ್ಋತಿಂ, ಯೋಧಯಿತ್ವಾ, ಸಂ, ಪ್ರಾಹಿಣೋತ್ಂ ಸರ್ವರತ್ನೋಚ್ಚರಾಶಿಂ, ಗಜಾನ್, ಚ, ನಾರಾಯಣ, ಆದಿದೇವಃ ।**

**ಅರ್ಥ :- ನೈರ್ಋತ್ಯೈಃ** = ನಿರ್ಋತ್ಯ ದೇಶಾಧಿಪತಿಯಾದ, **ನಿರ್ಋತಿಂ** = ನಿಋತಿಯನ್ನು, **ಯೋಧಯಿತ್ವಾ** = ಯುದ್ಧದಲ್ಲಿ ಸೋಲಿಸಿ, **ಭೌಮಾನಿತೈಃ** = ನರಕಾಸುರನಿಂದ ವಶ ಮಾಡಿಕೊಳ್ಳಲ್ಪಟ್ಟ, **ಮಹಾವೀರ್ಯೈಃ** = ಬಲಿಷ್ಠರಾದ, **ರಾಕ್ಷಸೇಂದ್ರೈಃ** = ರಾಕ್ಷಸ ಶ್ರೇಷ್ಠರಿಂದ, **ಸರ್ವರತ್ನೋಚ್ಚರಾಶಿಂ** = ಎಲ್ಲಾ ರತ್ನಗಳ ದೊಡ್ಡರಾಶಿಯನ್ನು, **ಗಜಾನ್ ಚ** = ಆನೆಗಳನ್ನು(ವಶಕ್ಕೆ ತೆಗೆದುಕೊಂಡು), **ಸಃ ಆದಿದೇವಃ** = ಸೃಷ್ಟಿಯಾದಲ್ಲಿದ ಪರಮಾತ್ಮನೆ ಆದ, **ನಾರಾಯಣ** = ಶ್ರೀಕೃಷ್ಣನು, **ಪ್ರಾಹಿಣೋತ** = ತನ್ನ ಊರಿಗೆ ಕಳುಹಿಸಿದ.

ತಾತ್ಪರ್ಯ :- ನರಕಾಸುರ ನಿರ್ಋತಿಯೊಡನೆ ಹೋರಾಡಿ ವಶಕ್ಕೆ ತಂದುಕೊಂಡಿದ್ದ ಮಹಾಬಲಿಷ್ಠರಾದ ಉತ್ತಮರಾಕ್ಷಸರ ಮೂಲಕ ಶ್ರೀಕೃಷ್ಣ ಎಲ್ಲ ರತ್ನಗಳ ದೊಡ್ಡ ರಾಶಿಗಳನ್ನು ಆನೆಗಳನ್ನು ದ್ವಾರಕೆಗೆ ಕಳಿಸಿದ.

**ತತ್ರಾಪಶ್ಯತ್ ಕನ್ಯಕಾ ಭೂಮಿಪಾನಾಂ**
**ಭೌಮಾನೀತಾಃ ಸಮರೇ ತಾನ್ ವಿಜಿತ್ಯ ।**
**ದ್ವ್ಯಷ್ಟೌ ಸಹಸ್ರಾಣಿ ಶತಂ ಚ ರೂಪ-**
**ಶೀಲೋದಾರಾ ಅಕ್ಷತಾಃ ಸದ್ವ್ರತಸ್ಥಾಃ ॥ ೧೧೨ ॥**

**ಪದಚ್ಛೇದ** :- ತತ್ರ, ಅಪಶ್ಯತ್, ಕನ್ಯಕಾಃ, ಭೂಮಿಪಾನಾಂ, ಭೌಮಾನೀತಾಃ, ಸಮರೇ, ತಾನ್, ವಿಜಿತ್ಯ, ದ್ವ್ಯಷ್ಟೌಸಹಸ್ರಾಣಿ, ಶತಂ, ಚ, ರೂಪಶೀಲೋದಾರಾಃ, ಅಕ್ಷತಾಃ, ಸದ್‌ವ್ರತಸ್ಥಾಃ ।

**ಅರ್ಥ** :- (**ಭೌಮಃ**) **ಸಮರೇ** = ಯುದ್ಧದಲ್ಲಿ, **ತಾನ್** = ಆಯಾವ ರಾಜರನ್ನು, **ವಿಜಿತ್ಯ** = ಗೆದ್ದು, **ಭೌಮಾನೀತಾಃ** = ನರಕಾಸುರನಿಂದ ತರಲ್ಪಟ್ಟ, **ರೂಪಶೀಲೋದಾರಾಃ** = ರೂಪ ಶೀಲಗಳಲ್ಲಿ ಉತ್ಕೃಷ್ಟರಾದ, **ಅಕ್ಷತಾಃ** = ಇನ್ನೂ ಋತುಮತಿಯರಾಗದಿದ್ದ, **ಸದ್‌ವ್ರತಸ್ಥಾಃ** = ಒಳ್ಳೆಯ ವ್ರತನಿಷ್ಠರಾಗಿದ್ದ, **ದ್ವ್ಯಷ್ಟೌ ಸಹಸ್ರಾಣಿ** = ಹದಿನಾರು ಸಾವಿರದ, **ಶತಂ ಚ** = ನೂರುಮಂದಿ, **ಭೂಮಿಪಾನಾಂ** = ರಾಜರ, **ಕನ್ಯಕಾಃ** = ರಾಜಕುಮಾರಿಯರನ್ನು, **ತತ್ರ** = ಅಲ್ಲಿ, **ಅಪಶ್ಯತ್** = ಕಂಡನು.

**ತಾತ್ಪರ್ಯ** :- ನರಕಾಸುರ ಯುದ್ಧದಲ್ಲಿ ರಾಜರನ್ನು ಗೆದ್ದು ತಂದಿದ್ದ ರೂಪಶೀಲಗಳಲ್ಲಿ ಶ್ರೇಷ್ಠರಾದ ಇನ್ನೂ ಋತುಮತಿಯರಾಗದಿದ್ದ ಒಳ್ಳೆಯ ವ್ರತನಿಷ್ಠರೂ ಆಗಿದ್ದ ಹದಿನಾರು ಸಾವಿರದ ನೂರುಮಂದಿ ರಾಜಕುಮಾರಿಯರನ್ನು ಶ್ರೀಕೃಷ್ಣ ಅಲ್ಲಿ ಕಂಡನು.

(**ವಿವರಣೆ** :- ''ಅಕ್ಷತಯೋನಯಃ'' ಇನ್ನೂ ರಜಸ್ವಲೆಯಾಗದ ಕನ್ಯೆಯರು (ಜನಾರ್ದನೀಯ) ರಜಸ್ವಲೆಯಾದರೂ ವೈಷ್ಣವ ವ್ರತದಲ್ಲಿ ನಿಷ್ಠರಾದ ಕನ್ಯೆಯರು. ಮದುವೆಯಾಗದವರೆಗೆ ಸಂಭೋಗ ಮಾಡದಿರುವುದೇ ವೈಷ್ಣವ ವ್ರತ. ವಿಷ್ಣುಪ್ರೀತಿಕರವಾದ ಬೇರೆವ್ರತಗಳಲ್ಲಿ ನಿಷ್ಠರಾಗಿದ್ದರು. ''ಸರ್ವಾಃ ಕಾಷಾಯಧಾರಿಣ್ಯಃ ಸರ್ವಾಶ್ಚ ನಿಯತೇಂದ್ರಿಯಃ'' ಎಲ್ಲರು ಕಾಷಾಯ- ವಸ್ತ್ರಧಾರಿಗಳಾಗಿದ್ದರು. ಎಲ್ಲರೂ ಜಿತೇಂದ್ರಿಯರಾಗಿದ್ದರು. (ಭಾವಚಂದ್ರಿಕಾ)

**ಕಾಶ್ಚಿತ್ ತತ್ರಾಽಸನ್ ದೇವಗಂಧರ್ವಕನ್ಯಾ-**
**ಸ್ತಾಸಾಂ ಪ್ರಧಾನಾ ತ್ವಷ್ಟ್ರುಪುತ್ರೀ ಕಶೇರುಃ ।**
**ಪುತ್ರಾ ಅಗ್ನೇಃ ಪೂರ್ವಮಾಸಂಶ್ಚ ತೇಽಥ**
**ಸ್ತ್ರೀತ್ವಪ್ರಾಪ್ತ್ಯೈ ಚಕ್ರುರುಗ್ರಂ ತಪಶ್ಚ ॥ ೧೧೩ ॥**

ಪದಚ್ಛೇದ :- ಕಾಶ್ಚಿತ್, ತತ್ರ, ಆಸನ್, ದೇವಗಂಧರ್ವಕನ್ಯಾಃ, ತಾಸಾಂ, ಪ್ರಧಾನಾಃ, ತ್ವಷ್ಟ್ರುಪುತ್ರೀ, ಕಶೇರುಃ, ಪುತ್ರಾಃ, ಅಗ್ನೇಃ, ಪೂರ್ವಂ, ಆಸನ್, ಚ, ತೇ, ಅಥ, ಸ್ತ್ರೀತ್ವಪ್ರಾಪ್ತ್ಯೈ, ಚಕ್ರುಃ, ಉಗ್ರಂ, ತಪಃ, ಚ।

ಅರ್ಥ :- ತತ್ರ = ಅಲ್ಲಿ, ಕಾಶ್ಚಿತ್ = ಕೆಲವರು, ದೇವಗಂಧರ್ವ ಕನ್ಯಾಃ = ದೇವಕನ್ಯೆಯರು, ಗಂಧರ್ವಕನ್ಯೆಯರು ಕೂಡ, ಆಸನ್ = ಇದ್ದರು, ತಾಸಾಂ = ಅವರಲ್ಲಿ, ತ್ವಷ್ಟ್ರುಪುತ್ರೀ = ತ್ವಷ್ಟ್ರುಪ್ರಜಾಪತಿಯ ಮಗಳಾದ, ಕಶೇರುಃ = ಕಶೇರು, ಪ್ರಧಾನಾ = ಪ್ರಧಾನಳು, ತೇ = ಅವರೆಲ್ಲರು, ಪೂರ್ವಂ = ಮೊದಲು, ಅಗ್ನೇಃ = ಅಗ್ನಿಯ, ಪುತ್ರಾಃ = ಪುತ್ರರು, ಆಸನ್ = ಆಗಿದ್ದರು, ಅಥ = ಬಳಿಕ, ಸ್ತ್ರೀತ್ವಪ್ರಾಪ್ತ್ಯೈ = ಸ್ತ್ರೀತ್ವಪ್ರಾಪ್ತಿಗಾಗಿ, ಉಗ್ರ್ಯಂ = ಉಗ್ರವಾದ, ತಪಃ = ತಪಸ್ಸನ್ನು, ಚಕ್ರುಃ = ಮಾಡಿದರು.

ತಾತ್ಪರ್ಯ :- ಅವರಲ್ಲಿ ಕೆಲವರು ದೇವಕನ್ಯೆಯರೂ, ಗಂಧರ್ವ-ಕನ್ಯೆಯರೂ ಇದ್ದರು. ಅವರಲ್ಲಿ ತ್ವಷ್ಟ್ರುಪ್ರಜಾಪತಿಯ ಮಗಳಾದ ಕಶೇರು ಪ್ರಧಾನಳು. ಅವರೆಲ್ಲರೂ ಮೊದಲಿಗೆ ಅಗ್ನಿಯ ಪುತ್ರರು. ಅನಂತರ ಸ್ತ್ರೀತ್ವ-ಪ್ರಾಪ್ತಿಗಾಗಿ ಉತ್ತಮವಾದ ತಪಸ್ಸಾಚರಿಸಿದರು.

**ಭಾರ್ಯಾರ್ತಾರ್ಥೇ ವಾಸುದೇವಸ್ಯ ಯೋಷಿತ್-**
**ತನುಂ ತಾಸಾಮಿಚ್ಛತೀನಾಂ ಸಮೀರಃ ।**
**ಅದಾದ್ ವರಂ ತಪಸಾಽಽರಾಧಿತಃ ಸನ್**
**ಸ್ತ್ರೀಭೂತಾಸ್ತೇ ಬದರೀಂ ಸಂಪ್ರಜಗ್ಮುಃ ॥ ೧೧೪ ॥**

ಪದಚ್ಛೇದ :- ಭಾರ್ಯಾರ್ತಾರ್ಥೆ, ವಾಸುದೇವಸ್ಯ, ಯೋಷಿತ್ತನುಂ, ತಾಸಾಂ, ಇಚ್ಛತೀನಾಂ, ಸಮೀರಃ, ಆದಾತ್, ವರಂ, ತಪಸಾ, ಆರಾಧಿತಃ, ಸನ್, ಸ್ತ್ರೀಭೂತಾಃ, ತೇ, ಬದರೀಂ, ಸಂಪ್ರಜಗ್ಮುಃ।

ಅರ್ಥ :- ತಪಸಾ = ತಪಸ್ಸಿನಿಂದ, ಆರಾಧಿತಃ = ಆರಾಧಿತನಾದ, ಸಮೀರಃ = ವಾಯುದೇವರು, ವಾಸುದೇವಸ್ಯ = ಶ್ರೀಕೃಷ್ಣನ, ಭಾರ್ಯಾರ್ತಾರ್ಥೆ = ಮಡದಿಯರಾಗಬೇಕೆಂದು, ಇಚ್ಛತೀನಾಂ = ಬಯಸಿದ, ತಾಸಾಂ = ಅವರಿಗೆ, ಯೋಷಿತ್ತನುಂ = ಸ್ತ್ರೀಜನ್ಮವನ್ನು, ವರಂ = ವರವಾಗಿ,

**ಅದಾತ್** = ಕೊಟ್ಟನು, **ಸ್ತ್ರೀಭೂತಾಃ** = ಸ್ತ್ರೀಯರಾಗಿ ಹುಟ್ಟಿದ, **ತೇ** = ಅವರು, **ಬದರೀಂ** = ಬದರಿಗೆ, **ಸಂಪ್ರಜಗ್ಮುಃ** = ಹೊರಟುಹೋದರು.

**ತಾತ್ಪರ್ಯ** :- ಶ್ರೀಕೃಷ್ಣನ ಮಡದಿಯರಾಗಬೇಕೆಂದು ಸ್ತ್ರೀಜನ್ಮವನ್ನು ಬಯಸಿದ ಅವರಿಗೆ ತಪಸ್ಸಿನಿಂದ ಆರಾಧಿತನಾದ ವಾಯು ಹಾಗೇ ವರ ನೀಡಿದ್ದ. ಸ್ತ್ರೀಯರಾಗಿ ಹುಟ್ಟಿದ ಬಳಿಕ ಅವರು ಬದರಿಗೆ ಹೋದರು.

**ನಾರಾಯಣಂ ತತ್ರ ಶುಶ್ರೂಷಮಾಣಾಃ**
**ಪ್ರಾಪ್ಯಾಪ್ಸರಸ್ತ್ವಂ ರಾಜಕುಲೇಷು ಜಾತಾಃ ।**
**ಕಾಶ್ಚಿತ್ ಸ್ವರ್ಗೇ ತಾ ನಿಶಾಮ್ಯೈವ ಕೃಷ್ಣಂ**
**ವವ್ರುಃ ಪತಿಂ ಸರ್ವಗುಣಾಭಿರಾಮಮ್ ॥ ೧೧೫ ॥**

**ಪದಚ್ಛೇದ** :- ನಾರಾಯಣಂ, ತತ್ರ, ಶುಶೂಷಮಾಣಾಃ, ಪ್ರಾಪ್ಯ, ಅಪ್ಸರಸ್ತ್ವಂ, ರಾಜಕುಲೇಷು, ಜಾತಾಃ, ಕಾಶ್ಚಿತ್, ಸ್ವರ್ಗೇ, ತಾಃ, ನಿಶಾಮ್ಯ ಏವ, ಕೃಷ್ಣಂ, ವವ್ರುಃ, ಪತಿಂ, ಸರ್ವಗುಣಾಭಿರಾಮಂ ।

**ಅರ್ಥ** :- **ತತ್ರ** = ಬದರಿಕಾಶ್ರಮದಲ್ಲಿ, **ತಾಃ** = ಆ ಸ್ತ್ರೀಯರು, **ನಾರಾಯಣಂ** = ಶ್ರೀವೇದವ್ಯಾಸರನ್ನು, **ಶುಶ್ರೂಷಾಮಾಣಾಃ** = ಸೇವಿಸುತ್ತಾ, **ಅಪ್ಸರಸ್ತ್ವಂ** = ಅಪ್ಸರ ಜನ್ಮಹೊಂದಿ, **ಕಾಶ್ಚಿತ್** = ಕೆಲವರು, **ರಾಜಕುಲೇಷು** = ರಾಜವಂಶಗಳಲ್ಲಿ, **ಜಾತಾಃ** = ಹುಟ್ಟಿದರು, (**ಕಾಶ್ಚಿತ್** = ಕೆಲವರು), **ಸ್ವರ್ಗೇ** = ಸ್ವರ್ಗದಲ್ಲಿ, (**ಜಾತಾಃ**) **ತಾಃ** = ಅವರು, **ಸರ್ವಗುಣಾಭಿರಾಮಂ** = ಎಲ್ಲಾ ಗುಣಗಳಿಂದ ಮನೋಹರನಾಗಿದ್ದ, **ಕೃಷ್ಣಂ** = ಶ್ರೀಕೃಷ್ಣನನ್ನು, **ನಿಶಾಮ್ಯೈವ** = ನೋಡಿದ ಕೂಡಲೇ, **ಪತಿಂ** = ಪತಿಯನ್ನಾಗಿ, **ವವ್ರುಃ** = ವರಿಸಿದರು.

**ತಾತ್ಪರ್ಯ** :- ಬದರಿಕಾಶ್ರಮದಲ್ಲಿ ಆ ಸ್ತ್ರೀಯರು ಶ್ರೀವೇದವ್ಯಾಸರನ್ನು ಸೇವಿಸುತ್ತಾ ಅಪ್ಸರ ಜನ್ಮಹೊಂದಿ, ಬಳಿಕ ಕೆಲವರು ರಾಜವಂಶಗಳಲ್ಲಿಯೂ, ಕೆಲವರು ಸ್ವರ್ಗದಲ್ಲಿಯೂ ಹುಟ್ಟಿದರು. ಅವರು ಶ್ರೀಕೃಷ್ಣನನ್ನು ಕಂಡ ಮಾತ್ರಕ್ಕೆ ಸರ್ವಗುಣಗಳಿಂದಲೂ ಮನೋಹರನಾಗಿದ್ದ ಅವನನ್ನೇ ಪತಿಯನ್ನಾಗಿ ವರಿಸಿದರು.

**ಆಜಾನದೇವೈಃ ಸರ್ವಗುಣೈಃ ಸಮಾಸ್ತಾಃ**
**ಸ್ವಭಾವತೋಽಥೇಂದಿರಾವೇಶತೋಽತಃ ।**
**ಗುಣಾಧಿಕಾಸ್ತಾಃ ಶಿಬಿಕಾಸು ಕೃಷ್ಣ**
**ಆರೋಪಯಿತ್ವಾ ಪ್ರಾಹಿಣೋದ್ ದ್ವಾರವತ್ಯೈ ।। ೧೧೬ ।।**

ಪದಚ್ಛೇದ :- ಆಜಾನದೇವೈಃ, ಸರ್ವಗುಣೈಃ, ಸಮಾಃ, ತಾಃ, ಸ್ವಭಾವತಃ, ಅಥ, ಇಂದಿರಾವೇಶತಃ, ಅತಃ, ಗುಣಾಧಿಕಾಃ, ತಾಃ, ಶಿಬಿಕಾಸು, ಕೃಷ್ಣಃ, ಆರೋಪಯಿತ್ವಾ, ಪ್ರಾಹಿಣೋತ್, ದ್ವಾರವತ್ಯೈ ।

ಅರ್ಥ :- **ತಾಃ** = ಆ ಸ್ತ್ರೀಯರು, **ಸ್ವಭಾವತಃ** = ತಮ್ಮ ಪ್ರಕೃತಿಸ್ವಭಾವ-ದಿಂದಲೇ, **ಸರ್ವಗುಣೈಃ** = ಎಲ್ಲಾ ಗುಣಗಳಿಂದಲೂ, **ಆಜಾನದೇವೈಃ** = ಆಜಾನದೇವತೆಗಳಿಗೆ, **ಸಮಾಃ** = ಸಮಾನರು, **ಇಂದಿರಾವೇಶತಃ** = ರಮಾವೇಶದ ಪ್ರಯುಕ್ತ, **ಗುಣಾಧಿಕಾಃ** = ಗುಣಗಳಲ್ಲಿ ಶ್ರೇಷ್ಠರು, **ತಾಃ** = ಅವರನ್ನು, **ಕೃಷ್ಣಃ** = ಶ್ರೀಕೃಷ್ಣನು, **ಶಿಬಾಕಾಸು** = ಡೋಲಿಗಳಲ್ಲಿ, **ಆರೋಪಯಿತ್ವಾ** = ಕುಳ್ಳಿರಿಸಿ, **ದ್ವಾರವತ್ಯೈ** = ದ್ವಾರಕೆಗೆ, **ಪ್ರಾಹಿಣೋತ್** = ಕಳುಹಿಸಿದನು.

ತಾತ್ಪರ್ಯ :- ಅವರು ಸ್ವಭಾವತಃ ಎಲ್ಲಾ ಗುಣಗಳಲ್ಲಿಯೂ ಆಜಾನದೇವತೆಗಳಿಗೆ ಸಮಾನರು. ರಮಾವೇಶಪ್ರಯುಕ್ತ ಗುಣಗಳಲ್ಲಿ ಇನ್ನೂ ಶ್ರೇಷ್ಠರೆನಿಸಿದರು. ಅವರನ್ನು ಶ್ರೀಕೃಷ್ಣ ಡೋಲಿಗಳಲ್ಲಿ ಕೂಡಿಸಿ ದ್ವಾರಕೆಗೆ ಕಳಿಸಿದ.

**ಸಮಂತತೋ ಯೋಜನಾನಾಂ ಶತೇ ದ್ವೇ**
**ಪ್ರವೃದ್ಧಮಿಂದ್ರಸ್ಯ ಸ ರತ್ನಪರ್ವತಮ್ ।**
**ನಿತ್ಯಾಮೃತಸ್ರಾವಿ ಜಲೇಶ್ವರಸ್ಯ**
**ಛತ್ರಂ ಚ ದೋರ್ಭ್ಯಾಂ ಗರುಡೇ ನ್ಯಧಾದ್ಧರಿಃ ।। ೧೧೭ ।।**

ಪದಚ್ಛೇದ :- ಸಮಂತತಃ, ಯೋಜನಾನಾಂ, ಶತೇ, ದ್ವೆ, ಪ್ರವೃದ್ಧಂ, ಇಂದ್ರಸ್ಯ, ಸಃ, ರತ್ನಪರ್ವತಂ, ನಿತ್ಯಾಮೃತಸ್ರಾವಿ, ಜಲೇಶ್ವರಸ್ಯ, ಛತ್ರಂ, ಚ, ದೋರ್ಭ್ಯಾಂ, ಗರುಡೇ, ನ್ಯಧಾತ್ ಹರಿಃ ।

**ಅರ್ಥ :- ಸಃ** = ಶ್ರೀಕೃಷ್ಣನು, **ಸಮಂತತಃ** = ಎಲ್ಲಡೆಯಲ್ಲಿಯೂ, **ಪ್ರವೃದ್ಧಂ** = ಬೆಳೆದಿದ್ದ, **ಯೋಜನಾನಾಂ ಶತೇದ್ವೇ** = ಇನೂರು ಯೋಜನೆಯುಳ್ಳ, **ಇಂದ್ರಸ್ಯ** = ಇಂದ್ರನ, **ರತ್ನಪರ್ವತಂ** = ಮಣಿ ಪರ್ವತವನ್ನು, **ಚ** = ಮತ್ತು, **ಜಲೇಶ್ವರಸ್ಯ** = ವರುಣ, **ನಿತ್ಯಾಮೃತಸ್ರಾವಿ** = ಸದಾ ಅಮೃತವನ್ನು ಸುರಿಸುವ, **ಛತ್ರಂ** = ಛತ್ರವನ್ನೂ, **ಹರಿಃ** = ಶ್ರೀಕೃಷ್ಣನು, **ದೋರ್ಭ್ಯಾಂ** = ತನ್ನ ತೋಳುಗಳಿಂದ, **ಗರುಡೇ** = ಗರುಡನ ಮೇಲೆ, **ನ್ಯಧಾತ್** = ಇಟ್ಟನು.

**ತಾತ್ಪರ್ಯ :-** ಇನ್ನೂರು ಯೋಜನೆ ಉದ್ದ ಅಗಲ ಎತ್ತರವಾಗಿದ್ದ ಇಂದ್ರನ ರತ್ನಗಳ ಪರ್ವತವನ್ನೂ, ಸದಾ ಅಮೃತ ಸುರಿಸುತ್ತಿದ್ದ ವರುಣನ ಛತ್ರವನ್ನು ಶ್ರೀಕೃಷ್ಣ ತನ್ನ ತೋಳುಗಳಿಂದ ಎತ್ತಿ ಗರುಡನ ಮೇಲೆ ಇರಿಸಿದ.

**ಸ್ವಯಂ ಚ ಸತ್ಯಾಸಹಿತಃ ಸಮಾರುಹತ್**
**ಸ ಚಾಶ್ರಮೇಣೈವ ಯಯೌ ತ್ರಿವಿಷ್ಟಪಮ್ ।**
**ಅಭಿಪ್ರಯಾತೋಽಖಿಲಲೋಕಪಾಲೈಃ**
**ಜನಾರ್ದನಃ ಶಕ್ರಗೃಹಂ ವಿವೇಶ ॥ ೧೧೮ ॥**

**ಪದಚ್ಛೇದ :-** ಸ್ವಯಂ, ಚ, ಸತ್ಯಾಸಹಿತಃ, ಸಮಾರುಹತ್, ಸಃ, ಚ, ಅಶ್ರಮೇಣೈವ, ಯಯೌ, ತ್ರಿವಿಷ್ಟಪಂ, ಅಭಿಪ್ರಯಾತಃ, ಅಖಿಲಲೋಕ ಪಾಲೈಃ, ಜನಾರ್ದನಃ, ಶಕ್ರಗೃಹಂ, ವಿವೇಶ।

**ಅರ್ಥ :- ಸತ್ಯಾಸಹಿತಃ** = ಸತ್ಯಭಾಮಾ ಸಹಿತನಾಗಿ, **ಸ್ವಯಂ ಚ** = ತಾನೂ ಕೂಡ, **ಸಮಾರುಹತ್** = (ಗರುಡನನ್ನು) ಏರಿದನು, **ಸ ಚ** = ಆ ಗರುಡನಾದರೋ, **ಅಶ್ರಮೇಣೈವ** = ಅನಾಯಾಸದಿಂದ, **ತ್ರಿವಿಷ್ಟಪಂ** = ಸ್ವರ್ಗವನ್ನು ಕುರಿತು, **ಯಯೌ** = ಹೋದನು, **ಅಖಿಲಲೋಕಪಾಲೈಃ** = ಎಲ್ಲಾ ಲೋಕಪಾಲಕರಿಂದಲೂ, **ಅಭಿಪ್ರಯಾತಃ** = ಇದಿರುಗೊಳ್ಳುತ್ತಾ, **ಜನಾರ್ದನಃ** = ಶ್ರೀಕೃಷ್ಣನು, **ಶಕ್ರಗೃಹಂ** = ಇಂದ್ರನ ಅರಮನೆಯನ್ನು, **ವಿವೇಶ** = ಪ್ರವೇಶಿಸಿದ.

ತಾತ್ಪರ್ಯ :- ಬಳಿಕ ತಾನು ಸತ್ಯಭಾಮಾ ಸಮೇತನಾಗಿ ಗರುಡನನ್ನು ಏರಿದ. ಗರುಡ ಅನಾಯಾಸದಿಂದ ಸ್ವರ್ಗವನ್ನು ಸೇರಿದ. ಎಲ್ಲ ಲೋಕಪಾಲಕರು ಇದಿರುಗೊಳ್ಳುತ್ತಿದ್ದಂತೆ ಶ್ರೀಕೃಷ್ಣ ಇಂದ್ರನ ಅರಮನೆಯನ್ನು ಪ್ರವೇಶಿಸಿದ.

**ಸಂಪೂಜಿತಃ ಸತ್ಯಭಾಮಾಸಹಾಯಃ**
**ಶಕ್ರೇಣ ಶಚ್ಯಾ ಸಹಿತೇನ ಸಾದರಮ್ ।**
**ದದಾವದಿತ್ಯೈ ಅಪಿ ಕುಂಡಲೇ ಶುಭೇ**
**ಸಮಸ್ತದೇವೈರ್ಮುನಿಭಿಶ್ಚ ವಂದಿತಃ ॥ ೧೧೯ ॥**

ಪದಚ್ಛೇದ :- ಸಂಪೂಜಿತಃ, ಸತ್ಯಭಾಮಾಸಹಾಯಃ, ಶಕ್ರೇಣ, ಶಚ್ಯಾ, ಸಹಿತೇನ, ಸಾದರಂ, ದದೌ, ಅದಿತ್ಯೈ, ಅಪಿ, ಕುಂಡಲೇ, ಶುಭೇ, ಸಮಸ್ತದೇವೈಃ, ಮುನಿಭಿಶ್ಚ ವಂದಿತಃ ।

ಅರ್ಥ :- **ಸಮಸ್ತದೇವೈಃ** = ಎಲ್ಲಾ ದೇವತೆಗಳಿಂದಲೂ, **ಮುನಿಭಿಶ್ಚ** = ಮುನಿಗಳಿಂದಲೂ, **ವಂದಿತಃ** = ವಂದಿತನಾದ, **ಸತ್ಯಭಾಮಾ ಸಹಾಯಃ** = ಸತ್ಯಭಾಮಾ ಸಮೇತನಾದ ಶ್ರೀಕೃಷ್ಣನು, **ಶಚ್ಯಾ ಸಹಿತೇನ** = ಶಚೀದೇವಿಯಿಂದ ಕೂಡಿದ, **ಶಕ್ರೇಣ** = ಇಂದ್ರನಿಂದ, **ಸಾದರಂ** = ಆದರಪೂರ್ವಕವಾಗಿ, **ಸಂಪೂಜಿತಃ** = ಪೂಜಿಸಲ್ಪಟ್ಟವನಾಗಿ, **ಶುಭೇ** = ಮಂಗಳಕರವಾದ, **ಕುಂಡಲೇ** = ಕುಂಡಲಗಳನ್ನು, **ಅದಿತ್ಯೈ** = ಅದಿತಿಗೆ, **ದದೌ** = ಕೊಟ್ಟನು.

ತಾತ್ಪರ್ಯ :- ಸತ್ಯಭಾಮಾ ಸಮೇತನಾದ ಶ್ರೀಕೃಷ್ಣ ಶಚಿ ಇಂದ್ರರಿಂದ ಆದರಪೂರ್ವಕ ಸತ್ಕೃತನಾಗಿ ಅದಿತಿಗೆ ಮಂಗಳಕರವಾದ ಕುಂಡಲಗಳನ್ನಿತ್ತ. ಎಲ್ಲ ದೇವತೆಗಳಿಂದಲೂ ಮುನಿಗಳಿಂದಲೂ ವಂದಿತನಾದ.

**ತಮಾಸುರಾವೇಶವಶಾದಜಾನತೀ**
**ಸತ್ಯಾಂ ಚ ಸರ್ವಪ್ರಭವೌ ಜಗತ್ಪ್ರಭೂ ।**
**ನಿರ್ದೋಷಸೌಖ್ಯೈಕತನೂ ಶುಭಾಶಿಷ-**
**ಸ್ತಾಭ್ಯಾಂ ದದೌ ಸಾಽದಿತಿರಾತ್ಮಪುತ್ರವತ್ ॥ ೧೨೦ ॥**

ಪದಚ್ಛೇದ :- ತಂ, ಅಸುರಾವೇಶವಶಾದ್, ಅಜಾನತೀ, ಸತ್ಯಾಂ, ಚ, ಸರ್ವಪ್ರಭವೌ, ಜಗತ್ಪ್ರಭೂ, ನಿರ್ದೋಷಸೌಖ್ಯೈಕತನೂ, ಶುಭಾಶಿಷಃ, ತಾಭ್ಯಾಂ, ದದೌ, ಸಾ, ಅದಿತಿಃ, ಆತ್ಮಪುತ್ರವತ್ ।

**ಅರ್ಥ** :- **ಸಾ** = ಆ ಯಾವ, **ಅದಿತಿ** = ಅದಿತಿಯು, **ಅಸುರಾವೇಶವಶಾತ್** = ಅಸುರಾವೇಶ ವಶದಿಂದ, **ತಂ** = ಆ ಶ್ರೀಕೃಷ್ಣನನ್ನು, **ಸತ್ಯಾಂ ಚ** = ಸತ್ಯಭಾಮೆಯನ್ನೂ, **ಸರ್ವಪ್ರಭವೌ** = ಸರ್ವಕರ್ತರು, **ಜಗತ್ಪ್ರಭೂ** = ಜಗತ್ತಿನ ಪ್ರಭುಗಳು, **ನಿರ್ದೋಷಸೌಖ್ಯೈಕತನೂ** = ನಿರ್ದುಷ್ಟ ಆನಂದ ಮಾತ್ರ ಸ್ವರೂಪರೂ ಎಂದು, **ಅಜಾನರೇ** = ತಿಳಿಯದೇ, **ತಾಭ್ಯಾಂ** = ಅವರಿಬ್ಬರಿಗೆ, **ಆತ್ಮಪುತ್ರವತ್** = ತನ್ನ ಮಕ್ಕಳಂತೆ, **ಶುಭಾಶಿಷಃ** = ಶುಭಾಶೀರ್ವಾದವನ್ನು, **ದದೌ** = ನೀಡಿದಳು.

**ತಾತ್ಪರ್ಯ** :- ಅದಿತಿಯು ಅಸುರಾವೇಶವಶದಿಂದ ಶ್ರೀಕೃಷ್ಣನನ್ನೂ ಸತ್ಯಭಾಮೆಯನ್ನೂ ಸರ್ವಕರ್ತರಾದ ಜಗತ್ಪ್ರಭುಗಳು, ನಿರ್ದುಷ್ಟ ಆನಂದ ಮಾತ್ರ ಸ್ವರೂಪರು ಎಂದು ತಿಳಿಯದೇ ತನ್ನ ಮಕ್ಕಳಂತೆ ತಿಳಿದು ಅವರಿಗೆ ಶುಭಾಶೀರ್ವಾದಗಳನ್ನು ನೀಡಿದಳು.

**ಅಥೋ ಸದಾನಂದಚಿದಾತ್ಮದೇಹಃ**
**ಸ ನಂದನೋದ್ಯಾನಮಜೋಽನುರೂಪಯಾ ।**
**ಅನಂತಶಕ್ತಿಃ ಸಹ ಸತ್ಯಭಾಮಯಾ**
**ವಿವೇಶ ರಂತುಂ ಪ್ರಿಯಯಾಽಖಿಲೇಶ್ವರಃ ॥ ೧೨೧ ॥**

**ಪದಚ್ಛೇದ** :- ಅಥ, ಸದಾನಂದಚಿದಾತ್ಮದೇಹಃ, ಸಃ, ನಂದನೋದ್ಯಾನಂ, ಅಜಃ, ಅನುರೂಪಯಾ, ಅನಂತಶಕ್ತಿಃ, ಸಹ, ಸತ್ಯಭಾಮಯಾ, ವಿವೇಶ, ರಂತುಂ, ಪ್ರಿಯಯಾ, ಅಖಿಲೇಶ್ವರಃ।

**ಅರ್ಥ** :- **ಅಥ** = ಅನಂತರ, **ಸದಾನಂದಚಿದಾತ್ಮದೇಹಃ** = ಸದಾ ಆನಂದ, ಜ್ಞಾನ ಸ್ವರೂಪದೇಹವುಳ್ಳ, **ಅಜಃ** = ಜನನರಹಿತನಾದ, **ಅನಂತಶಕ್ತಿಃ** = ಅನಂತಶಕ್ತಿಯುಳ್ಳ, **ಅಖಿಲೇಶ್ವರಃ** = ಸರ್ವೇಶ್ವರನಾದ, **ಸಃ** = ಶ್ರೀಕೃಷ್ಣನು, **ಅನುರೂಪಯಾ** = ತನಗೆ ಅನುರೂಪಳಾದ, **ಪ್ರಿಯಯಾ** = ಪ್ರಿಯೆಯಾದ, **ಸತ್ಯಭಾಮಯಾ ಸಹ** = ಸತ್ಯಭಾಮೆಯೊಂದಿಗೆ, **ರಂತುಂ** = ವಿಹರಿಸಲು, **ನಂದನೋದ್ಯಾನಂ** = ನಂದನವನವನ್ನು, **ವಿವೇಶ** = ಪ್ರವೇಶಿಸಿದನು.

**ತಾತ್ಪರ್ಯ** :- ಬಳಿಕ ಸದಾ ಆನಂದ ಜ್ಞಾನವೇ ದೇಹವಾಗಿ ಉಳ್ಳ, ಜನನರಹಿತನಾದ, ಅನಂತಶಕ್ತಿಯುಳ್ಳ, ಸರ್ವೇಶ್ವರನಾದ, ಶ್ರೀಕೃಷ್ಣ ತನಗೆ

ಅನುರೂಪಳಾದ ಪ್ರಿಯೆ ಸತ್ಯಭಾಮೆಯೊಂದಿಗೆ ವಿಹಾರ ಮಾಡಲು ನಂದನವೆಂಬ ಉದ್ಯಾನವನವನ್ನು ಪ್ರವೇಶಿಸಿದನು.

**ತಯಾಽಚ್ಯುತೋಽಸೌ ಕನಕಾವದಾತಯಾ**
**ಸುಕುಂಕುಮಾದಿಗ್ಧಪಿಶಂಗವಾಸಸಾ ।**
**ಪೂರ್ಣೇಂದುಕೋಟ್ಯೋಘಜಯನ್ಮುಖಾಬ್ಜಯಾ**
**ರೇಮೇಽಮಿತಾತ್ಮಾ ಜಗದೇಕಸುಂದರಃ ॥ ೧೨೨ ॥**

ಪದಚ್ಛೇದ :- ತಯಾ, ಅಚ್ಯುತಃ, ಅಸೌ, ಕನಕಾವದಾತಯಾ, ಸುಕುಂಕುಮಾದಿಗ್ಧ ಪಿಶಂಗವಾಸಸಾ, ಪೂರ್ಣೇಂದು ಕೋಟ್ಯಾ, ಘಜಯನ್ಮುಖಾಬ್ಜಯಾ, ರೇಮೇ, ಅಮಿತಾತ್ಮಾ, ಜಗದೇಕಸುಂದರಃ ।

**ಅರ್ಥ** :- **ಜಗದೇಕಸುಂದರಃ** = ಲೋಕೈಕಸುಂದರನಾದ, **ಅಸೌ ಅಚ್ಯುತಃ** = ಈ ಯಾವ ಶ್ರೀಕೃಷ್ಣನು, **ಕನಕಾವದಾತಯಾ** = ಬಂಗಾರದಂತೆ ಸ್ವಚ್ಛವರ್ಣದವಳು, **ಸುಕುಂಕುಮಾದಿಗ್ಧಪಿಶಂಗವಾಸಸಾ** = ಒಳ್ಳೆಯ ಕುಂಕುಮ ಕೇಸರಿಯಿಂದ ಲಿಪ್ತವಾದ ಪೀತಾಂಬರ ಉಟ್ಟವಳು, **ಪೂರ್ಣೇಂದುಕೋಟ್ಯೌಘಜಯನ್ಮುಖಾಬ್ಜಯಾ** = ಕೋಟಿ ಪೂರ್ಣಚಂದ್ರರನ್ನು ಜಯಿಸುವ ಮುಖಕಮಲ ಉಳ್ಳವಳೂ ಆದ, **ತಯಾ** = ಸತ್ಯಭಾಮೆಯೊಂದಿಗೆ, **ಅಮಿತಾತ್ಮಾ** = ಅಮಿತಶಕ್ತಿಶಾಲಿಯಾದ ಶ್ರೀಕೃಷ್ಣನು, **ರೇಮೇ** = ವಿಹರಿಸಿದನು.

**ತಾತ್ಪರ್ಯ** :- ಬಂಗಾರದಂತೆ ಸ್ವಚ್ಛವರ್ಣದವಳು, ಒಳ್ಳೆಯ ಕುಂಕುಮ ಕೇಸರಿಯಿಂದ ಲಿಪ್ತವಾದ ಪೀತಾಂಬರ ಉಟ್ಟವಳು, ಕೋಟಿ ಪೂರ್ಣ ಚಂದ್ರರನ್ನು ಧಿಕ್ಕರಿಸುವ ಮುಖಕಮಲ ಉಳ್ಳವಳು ಇಂಥ ಸತ್ಯಭಾಮೆ ಯೊಂದಿಗೆ ಲೋಕೈಕ ಸುಂದರನಾದ ಅಮಿತಶಕ್ತಿಶಾಲಿ ಶ್ರೀಕೃಷ್ಣ ವಿಹರಿಸಿದ.

**ಸರ್ವರ್ತುನಿತ್ಯೋದಿತಸರ್ವವೈಭವೇ**
**ಸುರತ್ನಚಾಮೀಕರವೃಕ್ಷಸದ್ವನೇ ।**
**ಸದೈವ ಪೂರ್ಣೇಂದುವಿರಾಜಿತೇ ಹರಿ-**
**ಶ್ಚಚಾರ ದೇವ್ಯಾ ಪವನಾನುಸೇವಿತೇ ॥ ೧೨೩ ॥**

ಪದಚ್ಛೇದ :- ಸರ್ವರ್ತುರ್ನಿ ನಿತ್ಯೋದಿತ ಸರ್ವವೈಭವೇ, ಸುರತ್ನಚಾಮೀಕರ ವೃಕ್ಷಸದ್ವನೇ, ಸದಾ, ಏವ, ಪೂರ್ಣೇಂದು, ವಿರಾಜಿತೆ, ಹರಿಃ, ಚಚಾರ, ದೇವ್ಯಾ, ಪವನಾನುಸೇವಿತೆ ।

ಅರ್ಥ :- ಸರ್ವರ್ತುನಿತ್ಯೋದಿತಸರ್ವವೈಭವೇ = ಎಲ್ಲ ಋತು ಗಳಲ್ಲಿಯೂ, ಎಲ್ಲ ವೈಭವಗಳೂ ನಿತ್ಯ ಆವಿರ್ಭವಿಸುವ, ಪೂರ್ಣೇಂದು ವಿರಾಜಿತೇ = ಪೂರ್ಣಚಂದ್ರನಿಂದ ವಿರಾಜಿಸುತ್ತಾ, ಪವನಾನು ಸೇವಿತೇ = ಮಂದಮಾರುತದಿಂದ ಸೇವಿಸುತ್ತ, ಸುರತ್ನಚಾಮೀಕರವೃಕ್ಷಸದ್ವನೇ = ಒಳ್ಳೆಯ ರತ್ನ, ಬಂಗಾರಗಳವೃಕ್ಷಗಳುಳ್ಳ ಉತ್ತಮವಾದ ಆ ಉದ್ಯಾನದಲ್ಲಿ, ದೇವ್ಯಾ = ಸತ್ಯಭಾಮೆಯೊಂದಿಗೆ, ಚಚಾರ = ಸಂಚರಿಸಿದ.

ತಾತ್ಪರ್ಯ :- ಎಲ್ಲಾ ಋತುಗಳಲ್ಲಿಯೂ, ಎಲ್ಲಾ ವೈಭವಗಳು, ನಿತ್ಯ ಆವಿರ್ಭವಿಸುವ, ಯಾವಾಗಲೂ ಪೂರ್ಣಚಂದ್ರನಿಂದ ವಿರಾಜಿಸುವ, ಮಂದಮಾರುತದಿಂದ ಸೇವಿತವಾಗುವ, ಒಳ್ಳೆಯರತ್ನ ಬಂಗಾರಗಳ ವೃಕ್ಷಗಳುಳ್ಳ ಉತ್ತಮವಾದ ಆ ನಂದನೋದ್ಯಾನದಲ್ಲಿ ದೇವಿಯೊಂದಿಗೆ ಶ್ರೀಕೃಷ್ಣ ಸಂಚರಿಸಿದ.

ವಿದೋಷಸಂವಿತ್ತನುರತ್ರ ಸತ್ತರುಂ
ದದರ್ಶ ಸತ್ಯಾSಮೃತಮಂಥನೋದ್ಭವಮ್ ।
ಸಾ ಪಾರಿಜಾತಂ ಮಣಿಕಾಂಚನಾತ್ಮಕಂ
ಸಮಸ್ತಕಾಮಪ್ರದಮಾರ್ತಿಹಾರಿಣಮ್ ॥ ೧೨೪ ॥

ಪದಚ್ಛೇದ :- ನಿರ್ದೋಷಸಂವಿತ್ತನುಃ, ಅತ್ರ, ಸತ್ತರುಂ, ದದರ್ಶ, ಸತ್ಯಾ, ಅಮೃತ ಮಂಥನೋದ್ಭವಂ, ಸಾ, ಪಾರಿಜಾತಂ, ಮಣಿಕಾಂಚನಾತ್ಮಕಂ, ಸಮಸ್ತಕಾಮಪ್ರದಂ, ಆರ್ತಿಹಾರಿಣಂ ।

ಅರ್ಥ :- ನಿರ್ದೋಷಸಂವಿತ್‌ತನುಃ = ನಿರ್ದೋಷ - ದೋಷರಹಿತ-ವಾದ, ಸವಿತ್ - ಜ್ಞಾನರೂಪವಾದಿ, ತನುಃ = ಶರೀರವುಳ್ಳ, ಸಾ ಸತ್ಯಾ = ಆ ಸತ್ಯಭಾಮೆಯು, ಅಮೃತಮಂಥನೋದ್ಭವಂ = ಅಮೃತಮಂಥನದಿಂದ ಉದ್ಭವಿಸಿದ, ಸಮಸ್ತಕಾಮಪ್ರದಂ = ಸಕಲಾಭಿಷ್ಟದಾಯಕವಾದ, ಆರ್ತಿಹಾರಿಣಂ = ದುಃಖ ಪರಿಹಾಕರವಾದ, ಮಣಿಕಾಂಚನಾತ್ಮಕಂ =

ರತ್ನಸುವರ್ಣಾತ್ಮಕವಾದ, **ಪಾರಿಜಾತಂ** = ಪಾರಿಜಾತವೆಂಬ, **ಸತ್ತರುಂ** = ಉತ್ತಮ ವೃಕ್ಷವುಳ್ಳ, **ಅತ್ರ** = ನಂದನವನದಲ್ಲಿ, **ದರ್ಶ** = ನೋಡಿದಳು.

**ತಾತ್ಪರ್ಯ** :- ನಿರ್ದೋಷಜ್ಞಾನಸ್ವರೂಪಳಾದ ಸತ್ಯಭಾಮೆ ಅಮೃತ-ಮಥನದಿಂದ ಉದ್ಭವಿಸಿದ ಸಕಲಾಭೀಷ್ಟದಾಯಕ ಮತ್ತು ದುಃಖ ಪರಿಹಾರಕ-ವಾದ ರತ್ನಸುವರ್ಣಾತ್ಮಕವಾದ ಪಾರಿಜಾತವೆಂಬ ಉತ್ತಮ ವೃಕ್ಷವನ್ನು ನಂದನವನದಲ್ಲಿ ಕಂಡಳು.

**ದೃಷ್ಟ್ವೈವ ತಂ ಸುಸ್ಮಿತಚಂದ್ರಿಕಾಸ್ಫುರ-**
**ನ್ಮುಖಾರವಿಂದಾಽಸಿತಲೋಲಲೋಚನಾ ।**
**ಕಪೋಲನಿರ್ಭಾತಚಲತ್ಸುಕುಂಡಲಾ**
**ಜಗಾದ ದೇವಾಧಿಪತಿಂ ಪತಿಂ ಸತೀ ॥ ೧೨೫ ॥**

**ಪದಚ್ಛೇದ :- ದೃಷ್ಟ್ವಾ, ಏವ, ತಂ, ಸುಸ್ಮಿತಚಂದ್ರಿಕಾಸ್ಫುರನ್ಮುಖಾರವಿಂದಾ, ಅಸಿತಲೋಲಲೋಚನಾ ಕಪೋಲನಿರ್ಭಾತ ಚಲತ್ಸುಕುಂಡಲಾ, ಜಗಾದ, ದೇವಾಧಿ ಪತಿಂ ಪತಿಂ, ಸಾ ।**

**ಅರ್ಥ** :- **ಸುಸ್ಮಿತಚಂದ್ರಿಕಾಸ್ಫುರನ್ಮುಖಾರವಿಂದಾ** = **ಸುಸ್ಮಿತಚಂದ್ರಿಕಾ** - ಬೆಳದಿಂಗಳಿನಂತಹ ಮುಗುಳ್ನಗೆಯಿಂದ, **ಸ್ಫುರನ್** = ಹೊಳೆಯುವ, **ಮುಖಾರವಿಂದ** = ಕಮಲದಂತೆ ಮುಖವುಳ್ಳ, **ಅಸಿತಲೋಲಲೋಚನಾ** = **ಅಸಿತ** - ಕಪ್ಪಾದ, **ಲೋಲ** - ಚಂಚಲವಾದ, **ಲೋಚನಾ** - ಕಣ್ಣುಳ್ಳ, **ಕಪೋಲನಿರ್ಭಾತ ಚಲತ್ಸುಕುಂಡಲಾ** = **ಕಪೋಲ** - ಕೆನ್ನೆಗಳಲ್ಲಿ, **ನಿಭಾತ** - ಶೋಭಿಸುತ್ತಿರುವು (ಪ್ರತಿಫಲಿಸುತ್ತಿರುವ), **ಚಲತ್** - ಚಂಚಲವಾದ, **ಸುಕುಂಡಲ** - ಒಳ್ಳೆಯ ಕುಂಡಲುಗಳುಳ್ಳ, **ಸಾ** = ಸತ್ಯಭಾಮೆಯು, **ತಂ** = ಆ ಪಾರಿಜಾತವನ್ನು, **ದೃಷ್ಟ್ವಾ** = ನೋಡಿದಕೂಡಲೆ, **ದೇವಾಧಿಪತಿ** = ದೇವತೆಗಳಿಗೆಲ್ಲ ಒಡೆಯನಾದ, **ಪತಿಂ** = ತನ್ನ ಪತಿಯಾದ ಕೃಷ್ಣನನ್ನು, ಕುರಿತು, **ಜಗಾದ** = ಹೇಳಿದಳು.

**ತಾತ್ಪರ್ಯ** :- ಬೆಳದಿಂಗಳಿನಂತಹ ನಗುವಿನಿಂದ ಹೊಳೆಯುವ ಕಮಲದಂತಹ ಮುಖವುಳ್ಳ ಕಪ್ಪಾದ ಚಂಚಲವಾದ ಕಣ್ಣುಳ್ಳ, ಕೆನ್ನೆಗಳಲ್ಲಿ ಪ್ರತಿಫಲಿಸುವ ಚಂಚಲವಾದ ಕುಂಡಲುಗಳುಳ್ಳ ಆ ಸತ್ಯಭಾಮೆಯು ಆ

ಪಾರಿಜಾತವೃಕ್ಷವನ್ನು ನೋಡಿ ದೇವತೆಗಳಿಗೆ ಒಡೆಯನಾದ ತನ್ನ ಪತಿಯನ್ನು ಕುರಿತು ಹೇಳಿದಳು.

ತರುರ್ಜಗಜ್ಜೀವದ ಮೇ ಗೃಹಾಂಗಣೇ
ಸಂಸ್ಥಾಪನೀಯೋऽಯಮಚಿಂತ್ಯಪೌರುಷ ।
ಇತೀರಿತಸ್ತಾಂ ಕಲಶೋಪಮಸ್ತನೀ-
ಮಾಲಿಂಗ್ಯ ದೇವಸ್ತರುಮುದ್ಬಬರ್ಹ ॥ ೧೨೬ ॥

ಪದಚ್ಛೇದ :- ತರುಃ, ಜಗಜ್ಜೀವದ, ಮೇ, ಗೃಹಾಂಗಣೇ, ಸಂಸ್ಥಾಪನೀಯಃ, ಅಯಂ, ಅಚಿಂತ್ಯಪೌರುಷ, ಇತಿ, ಇರೀತಃ, ತಾಂ, ಕಲಶೋಪಮಸ್ತನೀಂ, ಆಲಿಂಗ್ಯ, ದೇವಃ, ತರುಂ, ಉದ್ಬಬರ್ಹ ।

ಅರ್ಥ :- ಜಗಜ್ಜೀವದ = ಜಗತ್ತಿಗೆ ಜೀವನ ಪ್ರದನಾದ, ಅಚಿಂತ್ಯಪೌರುಷ = ಅಚಿಂತ್ಯವಾದ ಪರಾಕ್ರಮವುಳ್ಳ ಕೃಷ್ಣನೇ, ಅಯಂತರುಃ = ಈ ವೃಕ್ಷವು, ಮೇ = ನನ್ನ, ಗೃಹಾಂಗಣೇ = ಮನೆಯಂಗಳದಲ್ಲಿ, ಸಂಸ್ಥಾಪನೀಯಃ = ಸ್ಥಾಪಿಸಲು ಯೋಗ್ಯವಾದುದು, ಇತಿ = ಎಂದ, ಇರೀತಃ ದೇವಃ = ಹೇಳಲ್ಪಟ್ಟ ಕೃಷ್ಣನು, ತಾಂ ಕಲಶೋಪಮಸ್ತನೀಂ = ಕಲಶಸದೃಶವಾದ ಸ್ತನಗಳುಳ್ಳ ದೇವಿಯನ್ನು, ಆಲಿಂಗ್ಯ = ಆಲಂಗಿಸಿ, ತರುಂ = ಪಾರಿಜಾತ ವೃಕ್ಷವನ್ನು, ಉದ್ಬಬರ್ಹ = ಕಿತ್ತನು.

ತಾತ್ಪರ್ಯ :- ಜಗತ್ತಿಗೆ ಜೀವನ ಪ್ರದನಾದ ಅಚಿಂತ್ಯ ಪೌರುಷ ಶಾಲಿಯಾದ ಕೃಷ್ಣನೇ, ಈ ಮರ ನನ್ನ ಮನೆಯಂಗಳದಲ್ಲಿ ಇರಿಸಲು ಯೋಗ್ಯವಾಗಿದೆ. ಹೀಗೆ ಹೇಳಿದಾದ ಕಲಶದಂಥ ಸ್ತನವುಳ್ಳ ಆ ದೇವಿಯನ್ನು ಆಲಿಂಗಿಸಿ ದೇವಿ ಶ್ರೀಕೃಷ್ಣ ಪಾರಿಜಾತ ವೃಕ್ಷವನ್ನು ಕಿತ್ತ.

ಸ ತೇನ ವೃಕ್ಷೇಣ ಸಹೈವ ಕೇಶವ-
ಸ್ತಯಾ ಚ ದೇವ್ಯಾऽऽರುಹದಗ್ರ್ಯಪೌರುಷಮ್ ।
ಖಗೇಶ್ವರಂ ತಚ್ಚ ನಿಶಮ್ಯ ಶಚ್ಯಾ
ಪ್ರಚೋದಿತೋ ವಾಸವ ಆಗಮತ್ ಸುರೈಃ ॥ ೧೨೭ ॥

ಪದಚ್ಛೇದ :- ಸಃ, ತೇನ, ವೃಕ್ಷೇಣ, ಸಹ, ಏವ, ಕೇಶವಃ, ತಯಾ, ಚ, ದೇವ್ಯಾ, ಅರುಹತ್, ಅಗ್ರ್ಯ, ಪೌರುಷ, ಖಗೇಶ್ವರಂ, ತತ್, ಚ, ನಿಶಮ್ಯ, ಶಚ್ಯಾ, ಪ್ರಚೋದಿತಃ, ವಾಸವಃ, ಆಗಮತ್, ಸುರೈಃ।

ಅರ್ಥ :- ಸಃ = ಆ ಯಾವ, ಕೇಶವಃ = ಶ್ರೀಕೃಷ್ಣನು, ತೇ ನ = ಆ, ವರ್ಕ್ಷೇಣ ಸಹ = ಪಾರಿಜಾತ ವೃಕ್ಷದೊಡನೆ, ಚ = ಮತ್ತು, ತಯಾ = ಆ, ದೇವ್ಯಾ ಸಹ = ಸತ್ಯಭಾಮೆಯೊಡನೆ, ಅಗ್ರ್ಯಪೌರುಷಂ = ಶ್ರೇಷ್ಠವಾದ ಪೌರುಷವುಳ್ಳ, ಖಗೇಶ್ವರಂ = ಗರುಡನನ್ನು, ಆರುಹತ್ = ಏರಿದನು, ತತ್ ಚ = ಈ ವಿಷಯವನ್ನಾದರೋ, ನಿಶಮ್ಯ = ಕೇಳಿ, ಶಚ್ಯಾ = ಶಚೀದೇವಿಯಿಂದ, ಪ್ರಚೋದಿತಃ = ಪ್ರೇರಿಸಲ್ಪಟ್ಟ, ವಾಸವಃ = ಇಂದ್ರನು, ಸುರೈಃ ಸಹ = ದೇವತೆಗಳೊಂದಿಗೆ, ಆಗಮತ್ = ಬಂದನು.

ತಾತ್ಪರ್ಯ :- ಶ್ರೀಕೃಷ್ಣ ಆ ಪಾರಿಜಾತವೃಕ್ಷ ಹಾಗೂ ಸತ್ಯಭಾಮಾ ದೇವಿಯರಿಂದೊಡಗೂಡಿ ಗರುಡನನ್ನು ಏರಿದ. ಅದನ್ನು ಕೇಳಿ ಶಚಿಯಿಂದ ಪ್ರೇರಿತನಾದ ಇಂದ್ರ ದೇವತೆಗಳೊಡನೆ ಅಲ್ಲಿಗೆ ಬಂದ.

ತಾನಾಸುರಾವೇಶಯುತಾನ್ ಹರೇಶ್ಚ
ಬಲಪ್ರಕಾಶಾಯ ಸಮುದ್ಯತಾನ್ ಸುರಾನ್ ।
ನ್ಯವಾರಯಚ್ಛಾರ್ಙ್ಗಶರಾಸನಚ್ಯುತೈ-
ರ್ಹರಿಪ್ರಿಯಾ ಬಾಣವರ್ಯೈಃ ಸಮಸ್ತಶಃ ॥ ೧೨೮ ॥

ಪದಚ್ಛೇದ :- ತಾನ್, ಆಸುರಾವೇಶಯುತಾನ್, ಹರೇಃ, ಚ, ಬಲಪ್ರಕಾಶಾಯ, ಸಮುದ್ಯತಾನ್, ಸುರಾನ್, ನ್ಯವಾರಯತ್, ಶಾಂರ್ಗಶರಾಸನಚ್ಯುತೈಃ, ಹರಿಪ್ರಿಯಾ, ಬಾಣವರ್ಯೈಃ ಸಮಸ್ತಶಃ।

ಅರ್ಥ :- ಆಸುರಾವೇಶಯುತಾನ್ = ಅಸುರಾವೇಶಯುಕ್ತರಾಗಿ, ಸಮುದ್ಯತಾನ್ = ಬಂದಂತಹ, ತಾನ್ = ಆ, ಸುರಾನ್ = ದೇವತೆಗಳನ್ನು, ಹರಿಪ್ರಿಯಾ = ಶ್ರೀಕೃಷ್ಣನ ಪ್ರಿಯೆಯಾದ ಸತ್ಯಭಾಮೆ, ಹರೇಶ್ಚ = ಶ್ರೀಕೃಷ್ಣನ, ಬಲಪ್ರಕಾಶಾಯ = ಬಲಪ್ರಕಟನಕ್ಕಾಗಿ, (ಸ್ವಯಂ) ಶಾಂರ್ಗಶಿರಾಸನಚ್ಯುತೈಃ = ಶಾಂರ್ಗಧನಸ್ಸಿನಿಂದ ಹೊರಡುವ, ಬಾಣವರ್ಯೈಃ = ಉತ್ತಮ ಬಾಣಗಳಿಂದ, ಸಮಸ್ತಶಃ = ಎಲ್ಲರನ್ನು, ನ್ಯವಾರಯತ್ = ಇದಿರಿಸಿದಳು.

ಪಾರಿಜಾತವೃಕ್ಷವನ್ನು ನೋಡಿ ದೇವತೆಗಳಿಗೆ ಒಡೆಯನಾದ ತನ್ನ ಪತಿಯನ್ನು ಕುರಿತು ಹೇಳಿದಳು.

ತರುರ್ಜಗಜ್ಜೀವದ ಮೇ ಗೃಹಾಂಗಣೇ
ಸಂಸ್ಥಾಪನೀಯೋಽಯಮಚಿಂತ್ಯಪೌರುಷ ।
ಇತೀರಿತಸ್ತಾಂ ಕಲಶೋಪಮಸ್ತನೀ-
ಮಾಲಿಂಗ್ಯ ದೇವಸ್ತರುಮುದ್ಬಬರ್ಹ ॥ ೧೨೬ ॥

ಪದಚ್ಛೇದ :- ತರುಃ, ಜಗಜ್ಜೀವದ, ಮೇ, ಗೃಹಾಂಗಣೇ, ಸಂಸ್ಥಾಪನೀಯಃ, ಅಯಂ, ಅಚಿಂತ್ಯಪೌರುಷ, ಇತಿ, ಇರೀತಃ, ತಾಂ, ಕಲಶೋಪಮಸ್ತನೀಂ, ಆಲಿಂಗ್ಯ, ದೇವಃ, ತರುಂ, ಉದ್ಬಬರ್ಹ ।

ಅರ್ಥ :- ಜಗಜ್ಜೀವದ = ಜಗತ್ತಿಗೆ ಜೀವನ ಪ್ರದನಾದ, ಅಚಿಂತ್ಯಪೌರುಷ = ಅಚಿಂತ್ಯವಾದ ಪರಾಕ್ರಮವುಳ್ಳ ಕೃಷ್ಣನೇ, ಅಯಂತರುಃ = ಈ ವೃಕ್ಷವು, ಮೇ = ನನ್ನ, ಗೃಹಾಂಗಣೇ = ಮನೆಯಂಗಳದಲ್ಲಿ, ಸಂಸ್ಥಾಪನೀಯಃ = ಸ್ಥಾಪಿಸಲು ಯೋಗ್ಯವಾದುದು, ಇತಿ = ಎಂದ, ಇರೀತಃ ದೇವಃ = ಹೇಳಲ್ಪಟ್ಟ ಕೃಷ್ಣನು, ತಾಂ ಕಲಶೋಪಮಸ್ತನೀಂ = ಕಲಶಸದೃಶವಾದ ಸ್ತನಗಳುಳ್ಳ ದೇವಿಯನ್ನು, ಆಲಿಂಗ್ಯ = ಆಲಂಗಿಸಿ, ತರುಂ = ಪಾರಿಜಾತ ವೃಕ್ಷವನ್ನು, ಉದ್ಬಬರ್ಹ = ಕಿತ್ತನು.

ತಾತ್ಪರ್ಯ :- ಜಗತ್ತಿಗೆ ಜೀವನ ಪ್ರದನಾದ ಅಚಿಂತ್ಯ ಪೌರುಷ ಶಾಲಿಯಾದ ಕೃಷ್ಣನೇ, ಈ ಮರ ನನ್ನ ಮನೆಯಂಗಳದಲ್ಲಿ ಇರಿಸಲು ಯೋಗ್ಯವಾಗಿದೆ. ಹೀಗೆ ಹೇಳಿದಾದ ಕಲಶದಂಥ ಸ್ತನವುಳ್ಳ ಆ ದೇವಿಯನ್ನು ಆಲಿಂಗಿಸಿ ದೇವಿ ಶ್ರೀಕೃಷ್ಣ ಪಾರಿಜಾತ ವೃಕ್ಷವನ್ನು ಕಿತ್ತ.

ಸ ತೇನ ವೃಕ್ಷೇಣ ಸಹೈವ ಕೇಶವ-
ಸ್ತಯಾ ಚ ದೇವ್ಯಾಽಽರುಹದಗ್ರ್ಯಪೌರುಷಮ್ ।
ಖಗೇಶ್ವರಂ ತಚ್ಚ ನಿಶಮ್ಯ ಶಚ್ಯಾ
ಪ್ರಚೋದಿತೋ ವಾಸವ ಆಗಮತ್ ಸುರೈಃ ॥ ೧೨೭ ॥

ಪದಚ್ಛೇದ :- ಸಃ, ತೇನ, ವೃಕ್ಷೇಣ, ಸಹ, ಏವ, ಕೇಶವಃ, ತಯಾ, ಚ, ದೇವ್ಯಾ, ಅರುಹತ್, ಅಗ್ರ್ಯ, ಪೌರುಷ, ಖಗೇಶ್ವರಂ, ತತ್, ಚ, ನಿಶಮ್ಯ, ಶಚ್ಯಾ, ಪ್ರಚೋದಿತಃ, ವಾಸವಃ, ಆಗಮತ್, ಸುರೈಃ ।

ಅರ್ಥ :- ಸಃ = ಆ ಯಾವ, ಕೇಶವಃ = ಶ್ರೀಕೃಷ್ಣನು, ತೇ ನ = ಆ, ವಕ್ಷೇಣ ಸಹ = ಪಾರಿಜಾತ ವೃಕ್ಷದೊಡನೆ, ಚ = ಮತ್ತು, ತಯಾ = ಆ, ದೇವ್ಯಾ ಸಹ = ಸತ್ಯಭಾಮೆಯೊಡನೆ, ಅಗ್ರ್ಯಪೌರುಷಂ = ಶ್ರೇಷ್ಠವಾದ ಪೌರುಷವುಳ್ಳ, ಖಗೇಶ್ವರಂ = ಗರುಡನನ್ನು, ಆರುಹತ್ = ಏರಿದನು, ತತ್ ಚ = ಈ ವಿಷಯವನ್ನಾದರೋ, ನಿಶಮ್ಯ = ಕೇಳಿ, ಶಚ್ಯಾ = ಶಚೀದೇವಿಯಿಂದ, ಪ್ರಚೋದಿತಃ = ಪ್ರೇರಿಸಲ್ಪಟ್ಟ, ವಾಸವಃ = ಇಂದ್ರನು, ಸುರೈಃ ಸಹ = ದೇವತೆಗಳೊಂದಿಗೆ, ಆಗಮತ್ = ಬಂದನು.

ತಾತ್ಪರ್ಯ :- ಶ್ರೀಕೃಷ್ಣ ಆ ಪಾರಿಜಾತವೃಕ್ಷ ಹಾಗೂ ಸತ್ಯಭಾಮಾ ದೇವಿಯರಿಂದೊಡಗೂಡಿ ಗರುಡನನ್ನು ಏರಿದ. ಅದನ್ನು ಕೇಳಿ ಶಚಿಯಿಂದ ಪ್ರೇರಿತನಾದ ಇಂದ್ರ ದೇವತೆಗಳೊಡನೆ ಅಲ್ಲಿಗೆ ಬಂದ.

ತಾನಾಸುರಾವೇಶಯುತಾನ್ ಹರೇಶ್ಚ
ಬಲಪ್ರಕಾಶಾಯ ಸಮುದ್ಯತಾನ್ ಸುರಾನ್ ।
ನ್ಯವಾರಯಚ್ಛಾರ್ಙ್ಗಶರಾಸನಚ್ಯುತೈ-
ರ್ಹರಿಪ್ರಿಯಾ ಬಾಣವರೈಃ ಸಮಸ್ತಶಃ ॥ ೧೨೮ ॥

ಪದಚ್ಛೇದ :- ತಾನ್, ಆಸುರಾವೇಶಯುತಾನ್, ಹರೇಃ, ಚ, ಬಲಪ್ರಕಾಶಾಯ, ಸಮುದ್ಯತಾನ್, ಸುರಾನ್, ನ್ಯವಾರಯತ್, ಶಾಂರ್ಗಶರಾಸನಚ್ಯುತೈಃ, ಹರಿಪ್ರಿಯಾ, ಬಾಣವರೈಃ ಸಮಸ್ತಶಃ ।

ಅರ್ಥ :- ಆಸುರಾವೇಶಯುತಾನ್ = ಅಸುರಾವೇಶಯುಕ್ತರಾಗಿ, ಸಮುದ್ಯತಾನ್ = ಬಂದಂತಹ, ತಾನ್ = ಆ, ಸುರಾನ್ = ದೇವತೆಗಳನ್ನು, ಹರಿಪ್ರಿಯಾ = ಶ್ರೀಕೃಷ್ಣನ ಪ್ರಿಯೆಯಾದ ಸತ್ಯಭಾಮೆ, ಹರೇಶ್ಚ = ಶ್ರೀಕೃಷ್ಣನ, ಬಲಪ್ರಕಾಶಾಯ = ಬಲಪ್ರಕಟನಕ್ಕಾಗಿ, (ಸ್ವಯಂ) ಶಾಂರ್ಗಶಿರಾಸನಚ್ಯುತೈಃ = ಶಾಂರ್ಗಧನಸ್ಸಿನಿಂದ ಹೊರಡುವ, ಬಾಣವರೈಃ = ಉತ್ತಮ ಬಾಣಗಳಿಂದ, ಸಮಸ್ತಶಃ = ಎಲ್ಲರನ್ನು, ನ್ಯವಾರಯತ್ = ಇದಿರಿಸಿದಳು.

ತಾತ್ಪರ್ಯ :- ಅಸುರಾವೇಶಯುಕ್ತರಾಗಿ ಕೃಷ್ಣನೊಡನೆ ಹೋರಾಡಲು ಬಂದ ಆ ಎಲ್ಲಾ ದೇವತೆಗಳನ್ನು ಹರಿಪ್ರಿಯೆಯಾದ ಸತ್ಯಭಾಮೆ ಹರಿಯ ಬಲಪ್ರಕಟನಕ್ಕಾಗಿ ತಾನೇ ಶಾಂರ್ಗಧನುಸ್ಸಿನಿಂದ ಹೊರಡುವ ಉತ್ತಮ ಬಾಣಗಳಿಂದ ಇದಿರಿಸಿದಳು.

**ನಿರಾಯುಧಂ ವೈಶ್ರವಣಂ ಚಕಾರ**
**ಚಿಕ್ಷೇಪ ಚಾಬ್ಧೌ ಗರುಡೋ ಜಲೇಶ್ವರಮ್ ।**
**ಪ್ರಧಾನವಾಯೋಸ್ತನಯಂ ತು ವಾಯುಂ**
**ಕೋಣಾಧಿಪಂ ವಹ್ನಿಯಮಾದಿಕಾನಪಿ ॥ ೧೨೯ ॥**

ಪದಚ್ಛೇದ :- **ನಿರಾಯುಧಂ, ವೈಶ್ರವಣಂ, ಚಕಾರ, ಚಿಕ್ಷೇಪ, ಚ, ಅಬ್ಧೌ, ಗರುಡಃ, ಜಲೇಶಂ, ಪ್ರಧಾನವಾಯೋಃ, ತನಯಂ, ತು, ವಾಯುಂ, ಕೋಣಾಧಿಪಂ, ವಹ್ನಿಯಮಾದಿಕಾನ್, ಅಪಿ ।**

ಅರ್ಥ :- (ಸತ್ಯಭಾಮೆ) **ವೈಶ್ರವಣಂ** = ಕುಬೇರನನ್ನು, **ನಿರಾಯುಧಂ** = ನಿರಾಯುಧನನ್ನಾಗಿ, **ಚಕಾರ** = ಮಾಡಿದಳು, **ಜಲೇಶಂ** = ವರುಣನನ್ನು, **ಗರುಡಃ** = ಗರುಡನು, **ಅಬ್ಧೌ** = ಸಮುದ್ರದಲ್ಲಿ, **ಚಿಕ್ಷೇಪ** = ಎಸೆದನು, **ಚ** = ಮತ್ತು, (ಕೃಷ್ಣನು) **ಪ್ರಧಾನವಾಯೋಃ** = ಪ್ರಧಾನವಾಯುವಿನ, **ತನಯಂ** = ಮಗನಾದ, **ಕೋಣಾಧಿಪಂ** = ವಾಯವ್ಯ ಕೋಣಾಧಿಪತಿಯಾದ, **ವಾಯುಂ** = ವಾಯುವನ್ನು, **ವಹ್ನಿಯಮಾದಿಕಾನಪಿ** = ವಹ್ನಿ, ಯಮ ಮೊದಲಾದವರಿಗೂ ಕೂಡ (ತನ್ನ ಸ್ವರೂಪ ತಿಳಿಯುವಂತೆ ಮಾಡಿದ).

ತಾತ್ಪರ್ಯ :- ಸತ್ಯಭಾಮೆ ಕುಬೇರನನ್ನು ನಿರಾಯುಧಗೊಳಿಸಿದಳು. ಗರುಡ ವರುಣನನ್ನು ಸಮುದ್ರದಲ್ಲಿ ಎಸೆದ. ಮುಖ್ಯವಾಯುವಿನ ಮಗನಾದ ವಾಯವ್ಯ ಕೋಣಾಧಿಪತಿ ವಾಯುವಿಗೆ, ಹಾಗೂ ವಹ್ನಿ ಯಮ ಮೊದಲಾದವರಿಗೂ ಶ್ರೀಕೃಷ್ಣ ತನ್ನ ಸ್ವರೂಪ ತಿಳಿಯುವಂತೆ ಮಾಡಿದ.

**ವಿಬೋಧ್ಯ ಶಾರ್ಙ್ಗೋತ್ಥರವೈಃ ಸ್ವಕಾಂ ತನು-**
**ಮಾವೇಶಿತಾನಾಮಸುರೈರಗಾದ್ಧರಿಃ ।**
**ತೇ ಬೋಧಿತಾಸ್ತೇನ ರಣಂ ವಿಸೃಜ್ಯ**
**ಯಯುರ್ವಿದಿತ್ವಾ ತಮನಾದಿಪೂರುಷಮ್ ॥ ೧೩೦ ॥**

ಪದಚ್ಛೇದ :- ನಿಬೋಧ್ಯ, ಶಾಂರ್ಗೋತ್ಥರವೈಃ, ಸ್ವಕಾಂ, ತನುಂ, ಆವೇಶಿತಾನಾಂ, ಅಸುರೈಃ, ಅಗಾತ್, ಹರಿಃ, ತೇ, ಬೋಧಿತಾಃ, ತೇನ, ರಣಂ, ವಿಸೃಜ್ಯ, ಯಯುಃ, ವಿದಿತ್ವಾ, ತಂ, ಅನಾದಿಪುರುಷಂ ।

ಅರ್ಥ :- ಅಸುರೈಃ ಆವೇಶಿತಾನಾಂ = ಅಸುರಾವಿಷ್ಟರಾದ ದೇವತೆಗಳಿಗೆ, ಹರಿಃ = ಶ್ರೀಕೃಷ್ಣನು, ಶಾಂರ್ಗೋತ್ಥರವೈಃ = ಶಾಂರ್ಗದಿಂದ ಎದ್ದ ಧ್ವನಿಯಿಂದಲೇ, ಸ್ವಕಾಂತನುಂ = ತನ್ನ ಸ್ವರೂಪವನ್ನು, ನಿಬೋಧ್ಯ = ತಿಳಿಯುವಂತೆ ಮಾಡಿ, ತಾನ್ = ಅವರ ಮೇಲೆ, ಅಗಾತ್ = ಏರಿ ಹೋದನು, ತೇನ = ಅದರಿಂದ, ಬೋಧಿತಾಃ = ಜ್ಞಾನೋದಯ ಹೊಂದಿದ, ತೇ = ಆ ದೇವತೆಗಳು, ತಂ = ಆ ಶ್ರೀಕೃಷ್ಣನನ್ನು, ಅನಾದಿಪುರುಷಂ = ಅನಾದಿಪುರುಷನೆಂದು, ವಿದಿತ್ವಾ = ತಿಳಿದು, ರಣಂ = ಯುದ್ಧವನ್ನು, ವಿಸೃಜ್ಯ = ತ್ಯಜಿಸಿ, ಯಯುಃ = ಹೋದರು.

ತಾತ್ಪರ್ಯ :- ಅಸುರಾವಿಷ್ಟರಾದ ಬೇರೆ ಎಲ್ಲಾ ದೇವತೆಗಳಿಗೂ ಶ್ರೀಕೃಷ್ಣ ಶಾಂರ್ಗದಿಂದ ಎದ್ದ ಧ್ವನಿಯಿಂದಲೇ ತನ್ನ ಸ್ವರೂಪ ತಿಳಿಯುವಂತೆ ಮಾಡಿದ. ಆಗ ಅವರು ಜ್ಞಾನೋದಯ ಹೊಂದಿ ಕೃಷ್ಣನನ್ನು ಅನಾದಿ ಪುರುಷನೆಂದು ತಿಳಿದು ಯುದ್ಧವನ್ನು ತ್ಯಜಿಸಿ ಹೊರಟು ಹೋದರು.

ಶಿವಂ ಚ ಶಕ್ರಾರ್ಥಮುಪಾಗತಂ ಹರಿ-
ರ್ವ್ಯದ್ರಾವಯಚ್ಛಾರ್ಙ್ಗವಿನಿಃಸೃತೈಃ ಶರೈಃ ।
ಸವಾಹನೋ ದೂರತರೇ ನಿಪಾತಿತೋ
ಗರುತ್ಮತಾ ಶಂಭುರಗಾಚ್ಛರಾಹತಃ ॥ ೧೩೧ ॥

ಪದಚ್ಛೇದ :- ಶಿವಂ, ಚ, ಶಕ್ರಾರ್ಥಂ, ಉಪಾಗತಂ, ಹರಿಃ, ವ್ಯದ್ರಾವಯತ್, ಶಾಂರ್ಗವಿನಿಸೃತೈಃ, ಶರೈಃ, ಸವಾಹನಃ, ದೂರತರೇ, ನಿಪಾತಿತಃ, ಗರುತ್ಮತಾ, ಶಂಭುಃ, ಅಗಾತ್, ಶರಾಹತಃ ।

ಅರ್ಥ :- ಶಕ್ರಾರ್ಥಂ = ಇಂದ್ರನ ಸಹಾಯಕ್ಕಾಗಿ, ಉಪಾಗತಂ = ಬಂದ, ಶಿವಂ ಚ = ರುದ್ರನನ್ನೂ ಕೂಡ, ಹರಿಃ = ಶ್ರೀಕೃಷ್ಣನು, ಶಾಂರ್ಗವಿನಿಸೃತೈಃ = ಶಾಂರ್ಗದಿಂದ ಹೊರಟ, ಶರೈ = ಬಾಣಗಳಿಂದ, ವ್ಯದ್ರಾವಯತ್ = ಓಡಿಸಿದನು, ಸವಾಹನಃ = ವಾಹನವಾದ ನಂದಿ

ಸಮೇತವಾಗಿ, **ದೂರತರೇ** = ಬಲುದೂರಕ್ಕೆ, **ಗರುತ್ಮತಾ** = ಗರುಡನಿಂದ, **ನಿಪಾತಿತಃ** = ಬೀಳಿಸಲ್ಪಟ್ಟ, **ಶರಾಹತಃ** = ಬಾಣಗಳಿಂದ ಹೊಡೆಯಲ್ಪಟ್ಟ **ಶಂಭುಃ** = ರುದ್ರನು, **ಅಗಾತ್** = ಹೊರಟು ಹೋದನು.

**ತಾತ್ಪರ್ಯ** :- ಇಂದ್ರನ ಸಹಾಯಕ್ಕೆ ಬಂದ ಶಿವನನ್ನು ಶ್ರೀಕೃಷ್ಣ ಶಾರ್ಙ್ಗದಿಂದ ಹೊರಟ ಬಾಣಗಳಿಂದ ಓಡಿಸಿದ. ಗರುಡ ಅವನನ್ನು ನಂದೀ ಸಮೇತವಾಗಿ ಬಲುದೂರಕ್ಕೆ ಎಸೆದ. ಬಾಣಗಳ ಏಟಿಗೆ ಗುರಿಯಾಗಿ ರುದ್ರ ಹೊರಟುಹೋದ.

**ವಿದ್ರಾವಿತೇ ಬಾಣಗಣೈಶ್ಚ ಶೌರಿಣಾ**
**ಹರೇ ಹರೌ ವಜ್ರಮವಾಸೃಜದ್ ದ್ರುತಮ್ ।**
**ಶಕ್ರೋಽಗ್ರಹೀತ್ ತಂ ಪ್ರಹಸನ್ ಜನಾರ್ದನಃ**
**ಕರೇಣ ವಾಮೇನ ಸ ಚಾಪಜಗ್ಮಿವಾನ್ ॥ ೧೩೨ ॥**

**ಪದಚ್ಛೇದ** :- ವಿದ್ರಾವತೇ, ಬಾಣಗಣೈಃ, ಚ, ಶೌರಿಣಾ, ಹರೇ, ಹರೌ, ವಜ್ರಂ, ಅವಾಸೃಜತ್, ದ್ರುತಂ, ಶಕ್ರಃ, ಅಗೃಹೀತ್, ತಂ, ಪ್ರಹಸನ್, ಜನಾರ್ದನಃ, ಕರೇಣ, ವಾಮೇನ, ಸಃ, ಚ, ಅಪಜಗ್ಮಿವಾನ್ ।

**ಅರ್ಥ** :- **ಶೌರಿಣಾ** = ಶ್ರೀಕೃಷ್ಣನಿಂದ, **ಬಾಣಗಣೈಃ** = ಬಾಣ ಸಮೂಹಗಳಿಂದ, **ಹರೌ** = ಶಿವನು, **ವಿದ್ರಾವಿತೇ** = ಓಡಿಸಲ್ಪಡಲು, **ಶಕ್ರಃ** = ಇಂದ್ರನು, **ದ್ರುತಂ** = ಬೇಗನೇ, **ವಜ್ರಂ** = ವಜ್ರಾಯುಧವನ್ನು, **ಹರೇ** = ಶ್ರೀಕೃಷ್ಣನಲ್ಲಿ, **ಅವಾಸೃಜತ್** = ಪ್ರಯೋಗಿಸಿದನು, **ತಂ** = ಆ ಆಯುಧವನ್ನು, **ಜನಾರ್ದನಃ** = ಶ್ರೀಕೃಷ್ಣನು, **ಪ್ರಹಸನ್** = ನಗುತ್ತಾ, **ವಾಮೇನ ಕರೇಣ** = ಎಡಗೈಯಿಂದ, **ಅಗ್ರಹೀತ್** = ಹಿಡಿದನು, **(ತದಾ) ಸಃ** = ಇಂದ್ರನು, **ಅಪಜಗ್ಮಿವಾನ್** = ದೂರ ಓಡಲು ತೊಡಗಿದನು.

**ಅಪಾಹಸತ್ ತಂ ಜಗದೇಕಸುಂದರೀ**
**ಹರಿಪ್ರಿಯಾಽಥೋ ಜಗದೇಕಮಾತರಮ್ ।**
**ಉವಾಚ ಶಕ್ರೋ ಜಗತಾಂ ಜನಿತ್ರೇ**
**ಪ್ರದರ್ಶಯಾಮೋ ವಯಮಾತ್ಮಶೈಶವಮ್ ॥ ೧೩೩ ॥**

**ಪದಚ್ಛೇದ :-** ಅಪಹಸತ್, ತಂ, ಜಗದೇಕಸುಂದರಿ, ಹರಿಪ್ರಿಯಾ, ಅಥ, ಜಗದೇಕಮಾತರಂ, ಉವಾಚ, ಶಕ್ರಃ, ಜಗತಾಂ, ಜನಿತ್ರೆ, ಪ್ರದರ್ಶಿಯಾಮಃ, ವಯಂ, ಆತ್ಮಶೈರವಂ।

**ಅರ್ಥ :-** **ಜಗದೇಕಸುಂದರೀ** = ಜಗದೇಕ ಸುಂದರಿಯಾದ, **ಹರಿಪ್ರಿಯಾ** = ಸತ್ಯಭಾಮೆಯು, **ತಂ** = ಇಂದ್ರನನ್ನು, **ಅಪಾಹಸತ್** = ಅಪಹಾಸಗೈದಳು, **ಶಕ್ರಃ** = ಇಂದ್ರನು, **ಜಗದೇಕ ಮಾತರಂ** = ಜಗನ್ಮಾತೆಗೆ, **ವಯಂ** = ನಾವು, **ಜಗತಾಂ ಜನಿತ್ರೆ** = ಜಗಜ್ಜನಕನ ಮುಂದೆ, **ಆತ್ಮಶೈವವಂ** = ನಮ್ಮ ಬಾಲಚಾಪಲ್ಯವನ್ನು, **ಪ್ರದರ್ಶಯಾಮಃ** = ತೋರಿಸುತ್ತಿದ್ದೇವಷ್ಟೆ ಎಂದು, **ಉವಾಚ** = ಹೇಳಿದನು.

**ತಾತ್ಪರ್ಯ :-** ಜಗದೇಕ ಸುಂದರಿಯಾದ ಸತ್ಯಭಾಮೆ ಇಂದ್ರನಿಗೆ ಅಪಹಾಸಗೈದಳು. ಇಂದ್ರ ಜಗದೇಕಮಾತೆಗೆ ''ನಾವು ಜಗಜ್ಜನಕನ ಮುಂದೆ ನಮ್ಮ ಬಾಲಚಾಪಲ್ಯವನ್ನು ತೋರಿಸುತ್ತಿದ್ದೇವಷ್ಟೆ'' ಎಂದ.

**ಜಗಾಮ ಚಾಥೋ ಶರಣಂ ಜನಾರ್ದನಂ**
**ಸುರೈರ್ವೃತೋ ದೇವಪತಿಃ ಕ್ಷಮಾಪಯನ್ ।**
**ಶೃಂಗಂ ಚ ದತ್ವಾ ಮಣಿಪರ್ವತಸ್ಯ**
**ಪ್ರಣಮ್ಯ ದೇವ್ಯಾ ಸಹಿತಂ ಜಗದ್ಗುರುಮ್ ॥ ೧೩೪ ॥**

ಪದಚ್ಛೇದ :- ಜಗಾಮ, ಚ, ಅಥ, ಶರಣಂ, ಜನಾರ್ದನಂ, ಸುರೈಃ, ವೃತಃ, ದೇವಪತಿಃ, ಕ್ಷಮಾಪಯನ್, ಶೃಂಗಂ, ಚ, ದತ್ವಾ, ಮಣಿಪರ್ವತಸ್ಯ, ಪ್ರಣಮ್ಯ, ದೇವ್ಯಾ, ಸಹಿತಂ, ಜಗದ್ಗುರುಂ।

**ಅರ್ಥ :-** **ಅಥ** = ಅನಂತರ, **ಸುರೈಃ** = ದೇವತೆಗಳಿಂದ, **ವೃತಃ** = ಸುತ್ತುವರಿದ, **ದೇವಪತಿಃ** = ಇಂದ್ರನು, **ಕ್ಷಮಾಪಯನ್** = ಕ್ಷಮೆಯನ್ನು ಪ್ರಾರ್ಥಿಸುತ್ತಾ, **ಜನಾರ್ದನಂ** = ಶ್ರೀಕೃಷ್ಣನಿಗೆ, **ಶರಣಂ** = ಶರಣವನ್ನು, **ಜಗಾಮ** = ಹೊಂದಿದ, **ದೇವ್ಯಾಸಹಿತಂ** = ಸತ್ಯಭಾಮೆ ಸಮೇತನಾದ, **ಜಗದ್ಗುರುಂ** = ಜಗದ್ಗುರುವಾದ ಶ್ರೀಕೃಷ್ಣನನ್ನು, **ಪ್ರಣಮ್ಯ** = ನಮಸ್ಕರಿಸಿ, **ಮಣಿಪರ್ವತಸ್ಯ** = ಮಣಿಪರ್ವತದ, **ಶೃಂಗಂ ಚ** = ಶಿಖರವನ್ನೂ, **ದತ್ವಾ** = ಕೊಟ್ಟು (**ಯಯಾಚ** = ಪ್ರಾರ್ಥಿಸಿದನು).

ತಾತ್ಪರ್ಯ :- ಬಳಿಕ ದೇವತೆಗಳೊಂದಿಗೆ ಇಂದ್ರ ಕ್ಷಮೆ ಬೇಡುತ್ತಾ ಕೃಷ್ಣನಿಗೆ ಶರಣಾದ. ತಾನು ಮಾಡಿದ ತಪ್ಪಿಗೆ ಮಣಿಪರ್ವತ ಶಿಖರವನ್ನೂ ಕೊಟ್ಟು ದೇವಿ ಸಮೇತನಾದ ಶ್ರೀಕೃಷ್ಣನನ್ನು ನಮಿಸಿ (ಪ್ರಾರ್ಥಿಸಿದನು.).

**ಯಯಾಚ ಏನಂ ಪರಿರಕ್ಷಣಾಯ**
**ಶಚೀಪತಿಃ ಕೇಶವಮರ್ಜುನಸ್ಯ ।**
**ಜಗಾದ ಕೃಷ್ಣೋಽಪಿ ಧರಾತಳಸ್ಥಿತೇ**
**ನ ಮಯ್ಯಮುಂ ಕಶ್ಚನ ಜೇಷ್ಯತೀತಿ ॥ ೧೩೫ ॥**

ಪದಚ್ಛೇದ :- ಯಯಾಚ, ಏನಂ, ಪರಿರಕ್ಷಣಾಯ, ಶಚೀಪತಿಃ, ಕೇಶವಂ, ಅರ್ಜುನಸ್ಯ, ಜಗಾದ, ಕೃಷ್ಣ ಅಪಿ, ಧರಾತಲೇ, ಸ್ಥಿತೇ, ನ, ಮಯಿ, ಅಮುಂ, ಕಶ್ಚನ, ಜೇಷ್ಯತಿ, ಇತಿಂ।

ಅರ್ಥ :- ಶಚೀಪತಿಃ = ಇಂದ್ರನು, ಕೇಶವಂ = ಶ್ರೀಕೃಷ್ಣನನ್ನು, ಅರ್ಜುನಸ್ಯ = ಅರ್ಜುನನ, ಪರಿರಕ್ಷಣಾಯ = ಸರ್ವಪ್ರಕಾರದ ರಕ್ಷಣೆಗಾಗಿ, ಯಯಾಚ = ಬೇಡಿದನು, ಕೃಷ್ಣೋಽಪಿ = ಶ್ರೀಕೃಷ್ಣನೂ ಕೂಡ, ಮಯಿ = ನಾನು, ಧರಾತಲೇ = ಭೂತಲದಲ್ಲಿ, ಸ್ಥಿತೇ = ಇರುವಷ್ಟು ಕಾಲ, ಏನಂ = ಈ ಅರ್ಜುನನನ್ನು, ಕಶ್ಚನ = ಯಾವೊಬ್ಬನೂ, ನ ಜೇಷ್ಯತಿ = ಪರಾಭವಗೊಳಿಸುವುದಿಲ್ಲ, ಇತಿ = ಎಂದು, ಜಗಾದ = ಹೇಳಿದನು.

ತಾತ್ಪರ್ಯ :- ಇಂದ್ರನು ಅರ್ಜುನನಿಗೆ ಸರ್ವಪ್ರಕಾರದ ರಕ್ಷಣೆ ನೀಡಲು ಬೇಡಿದ. ಕೃಷ್ಣನಿಂದ ''ಭೂತಲದಲ್ಲಿ ನಾನಿರುವಷ್ಟು ಕಾಲ ಅರ್ಜುನನನ್ನು ಯಾರೂ ಪರಾಭವಗೊಳಿಸುವುದಿಲ್ಲ''.

**ತಮರ್ಜುನಾರ್ಥಂ ವರಮಾಪ್ಯ ವಾಸವಃ**
**ಪುನಃಪುನಶ್ಚಕ್ರಧರಂ ಪ್ರಣಮ್ಯ ।**
**ಪ್ರಸನ್ನದೃಷ್ಟ್ಯಾ ಹರಿಣಾಽಭಿವೀಕ್ಷಿತೋ**
**ಯಯೌ ಮಹಾಭಾಗವತಃ ಸ್ವಮಾಲಯಮ್ ॥ ೧೩೬ ॥**

ಪದಚ್ಛೇದ :- ತಂ, ಅರ್ಜುನಾರ್ಥಂ, ವರಂ, ಆಪ್ಯ, ವಾಸವಃ, ಪುನಃ, ಪುನಃ, ಚಕ್ರಧರಂ, ಪ್ರಣಮ್ಯ, ಪ್ರಸನ್ನದೃಷ್ಟ್ಯಾ, ಹರಿಣಾ, ಅಭಿವೀಕ್ಷಿತಃ, ಯಯೌ, ಮಹಾಭಾಗವತಃ, ಸ್ವಂ, ಆಲಯಂ।

ಅರ್ಥ :- ಮಹಾಭಾಗವತಃ = ಮಹಾಭಗವದ್ಭಕ್ತನಾದ, ವಾಸವಃ = ಇಂದ್ರನು, ಅರ್ಜುನಾರ್ಥಂ = ಅರ್ಜುನನಿಗಾಗಿ, ತಂ = ಆ, ವರಂ = ವರವನ್ನು, ಆಪ್ಯ = ಪಡೆದು, ಪುನಃ ಪುನಃ = ಮತ್ತೆ ಮತ್ತೆ, ಚಕ್ರಧರಂ = ಶ್ರೀಕೃಷ್ಣನನ್ನು, ಪ್ರಣಮ್ಯ = ನಮಿಸಿ, ಪ್ರಸನ್ನದೃಷ್ಟ್ಯಾ = ಪ್ರಸನ್ನ ದೃಷ್ಟಿಯಿಂದ, ಹರಿಣಾ = ಶ್ರೀಕೃಷ್ಣನಿಂದ, ಅಭಿವೀಕ್ಷಿತಃ = ನೋಡಲ್ಪಟ್ಟು, ಸ್ವಂ = ತನ್ನ, ಆಲಯಂ = ಮನೆಯನ್ನು ಕುರಿತು, ಯಯೌ = ಹೋದನು.

ತಾತ್ಪರ್ಯ :- ಅರ್ಜುನನಿಗಾಗಿ ಆ ವರ ಪಡೆದು ಮಹಾಭಗವದ್ಭಕ್ತನಾದ ಇಂದ್ರ ಪುನಃ ಪುನಃ ಕೃಷ್ಣನನ್ನು ನಮಿಸಿ, ಪ್ರಸನ್ನ ದೃಷ್ಟಿಯಿಂದ ನೋಡುತ್ತಿದ್ದಂತೆಯೇ ತನ್ನ ಮನೆಗೆ ಹೊರಟುಹೋದ.

**ಕೃಷ್ಣೋಽಪ್ಯನುಜ್ಞಾಪ್ಯ ಪುರಂದರಂ ಪುರೀಂ**
**ನಿಜಾಂ ವ್ರಜನ್ನಭ್ಯಧಿಕಂ ವ್ಯರೋಚತ ।**
**ಕಿರೀಟಧಾರೀ ವರಕುಂಡಲೋಲ್ಲಸನ್-**
**ಮುಖಾಂಬುಜಃ ಪೀತಪಟಃ ಸುಕೌಸ್ತುಭಃ ॥ ೧೩೭ ॥**

ಪದಚ್ಛೇದ :- ಕೃಷ್ಣಃ, ಅಪಿ, ಅನುಜ್ಞಾಪ್ಯ, ಪುರಂದರಂ, ಪುರೀಂ, ನಿಜಾಂ, ವ್ರಜನ್, ಅಭ್ಯಧಿಕಂ, ವ್ಯರೋಚತ, ಕಿರೀಟಧಾರಿ, ಚಲಕುಂಡಲೋಲ್ಲಸತ್, ಮುಖಾಂಬುಜ, ಪೀತಪಟಃ, ಸಕೌಸ್ತುಭಃ ।

ಅರ್ಥ :- ಕೃಷ್ಣಃ ಅಪಿ = ಕೃಷ್ಣನೂ, ಪುರಂದರಂ = ಇಂದ್ರನಿಗೆ, ಅನುಜ್ಞಾಪ್ಯ = ಹೋಗಲು ಅನುಜ್ಞೆ ಕೊಟ್ಟು, ನಿಜಾಂ = ತನ್ನ, ಪುರೀಂ = ಪಟ್ಟಣವಾದ ದ್ವಾರಕೆಗೆ, ವ್ರಜನ್ = ಹೋಗುತ್ತಾ, ಕಿರೀಟಧಾರಿ = ಕಿರೀಟಧಾರಿಯಾಗಿ, ಚಲಕುಂಡಲೋಲ್ಲಸತ್ ಮುಖಾಂಬುಜಃ = ಚಲ - ಚಂಚಲವಾದ, ಕುಂಡಲ - ಕುಂಡಲಗಳಿಂದ, ಉಲ್ಲಸತ್ - ಶೋಭಿಸುತ್ತಿರುವ, ಮುಖಾಂಬುಜಃ = ಮುಖಕಮಲವುಳ್ಳವನಾಗಿ, ಪೀತಪಟಃ = ಪೀತಾಂಬರ ಧಾರಿಯಾಗಿ, ಸಕೌಸ್ತುಭಃ = ಕೌಸ್ತುಭತೊಟ್ಟು, ಅಭ್ಯಧಿಕಂ = ಬಹಳವಾಗಿ, ವ್ಯರೋಚತ = ಶೋಭಿಸಿದನು.

ತಾತ್ಪರ್ಯ :- ಇಂದ್ರನಿಗೆ ಹೋಗಲು ಅನುಜ್ಞೆ ನೀಡಿ, ಚಂಚಲವಾದ ಕುಂಡಲಗಳಿಂದ ಶೋಭಿಸುವ ಕಮಲದಂಥ ಮುಖವುಳ್ಳ, ಪಿತಾಂಬರ ತೊಟ್ಟ

ಕೌಸ್ತುಭಧಾರಿಯಾದ ಕೃಷ್ಣನು ತನ್ನ ಪಟ್ಟಣಕ್ಕೆ ಹಿಂತಿರುಗುತ್ತಾ ಬಲು ಚೆನ್ನಾಗಿ ಶೋಭಿಸಿದನು.

ವಿರೋಚಮಾನಸ್ಯ ತದಾ ಜಗತ್ಪ್ರಭೋ-
ರ್ನವೈ ವಿಶೇಷಃ ಕ್ವಚಿದಚ್ಯುತಸ್ಯ ।
ತಥಾಽಪಿ ತತ್ ಸ್ಮಾರಯಿತುಂ ವಚೋ ಭವೇ-
ದಪೇಕ್ಷ್ಯ ಚಾಲ್ಪಜ್ಞಮತಿಂ ಪುರಾಣಗಮ್ ॥ ೧೩೮ ॥

ಪದಚ್ಛೇದ :- ವಿರೋಚಮಾನಸ್ಯ, ಸದಾ, ಜಗತ್ಪ್ರಭೂ, ನ, ವೈ, ವಿಶೇಷಃ, ಕ್ವಚಿತ್, ಅಚ್ಯುತಸ್ಯ, ತಥಾಪಿ, ತತ್, ಸ್ಮಾರಯಿತುಂ, ವಚೋ, ಭವೇತ್, ಅಪೇಕ್ಷ್ಯ, ಚ, ಅಲ್ಪಜ್ಞಮತಿಂ, ಪುರಾಣಗಂ।

ಅರ್ಥ :- ಸದಾ = ಯಾವಾಗಲೂ, ವಿರೋಚಮಾನಸ್ಯ = ಶೋಭಿಸುತ್ತಿರುವ, ಜಗತ್ಪ್ರಭೂ = ಜಗತ್ತಿಗೆ ಒಡೆಯನಾದ, ಅಚ್ಯುತಸ್ಯ = ಶ್ರೀಕೃಷ್ಣನಿಗೆ, ಕ್ವಚಿತ್ = ಯಾವ ಕಾಲಘಟ್ಟದಲ್ಲಿ, ವಿಶೇಷಃ ನವೈ = ವ್ಯತ್ಯಾಸವಿಲ್ಲವಷ್ಟೆ, ತಥಾಪಿ = ಹಾಗಿದ್ದರೂ, ತತ್ = ಆ ಶೋಭೆಯನ್ನು, ಸ್ಮಾರಯಿತುಂ = ಸ್ಮರಿಸಲು, ಅಲ್ಪಜ್ಞಮತಿಂ = ಮಂದಮತಿಗಳನ್ನು, ಅಪೇಕ್ಷ್ಯ = ಅನುಸರಿಸಿ, ಪಾರಾಣಗಂ = ಪುರಾಣಗಳ, ವಚ = ಅಂತಹ ಮಾತುಗಳು, ಭವೇತ್ = ಬರುತ್ತವೆ.

ತಾತ್ಪರ್ಯ :- ಸದಾಕಾಲ ಶೋಭಿಸುವ ಜಗನ್ನಾಥನಾದ ಕೃಷ್ಣನಿಗೆ ಯಾವುದೇ ಕಾಲಘಟ್ಟದಲ್ಲಿ ವ್ಯತ್ಯಾಸವಿಲ್ಲ. ಹಾಗಿದ್ದರೂ ಮಂದಮತಿಗಳಿಗಾಗಿ ಪುರಾಣಗಳಲ್ಲಿ ಅಲ್ಲಲ್ಲಿ ಅಂತಹ ಮಾತುಗಳು ಬರುತ್ತವೆ.

ಪ್ರವಿಶ್ಯ ಚೇಶಃ ಸ್ವಪುರೀಂ ಸ ಯಾದವೈಃ
ಸುಪೂಜಿತೋಽಂತಃಪುರಮೇತ್ಯ ಚಾಂಗಣೇ ।
ತರುಂ ಪ್ರಿಯಾಯಾ ನ್ಯದಧಾದ್ ಗೃಹಸ್ಯ
ಸಹೈವ ಶೃಂಗೇಣ ಚ ರತ್ನಸದ್ಗಿರೇಃ ॥ ೧೩೯ ॥

ಪದಚ್ಛೇದ :- ಪ್ರವಿಶ್ಯ, ಚ, ಈಶಃ, ಸ್ವಪುರೀಂ, ಸ, ಯಾದವೈಃ, ಸುಪೂಜಿತಃ, ಅಂತಃಪುರಂ, ಏತ್ಯ, ಚ, ಅಂಗಣೇ, ತರುಂ, ಪ್ರಿಯಾಯಾಃ, ನ್ಯದಧಾತ್, ಗೃಹಸ್ಯ, ಸಹ, ಏವ, ಶೃಂಗೇಣ, ಚ, ರತ್ನಸದ್ಗಿರೇಃ।

**ಅರ್ಥ** :- **ಸಃ ಈಶಃ** = ಶ್ರೀಕೃಷ್ಣನು, **ಸ್ವಪುರೀಂ** = ತನ್ನ ಪಟ್ಟಣವನ್ನು, **ಪ್ರವಿಶ್ಯ** = ಪ್ರವೇಶಿಸಿ, **ಯಾದವೈಃ** = ಯಾದವರಿಂದ, **ಸುಪೂಜಿತಃ** = ಪೂಜಿಸಲ್ಪಟ್ಟವನಾಗಿ, **ಅಂತಃಪುರಂ** = ಅಂತಃಪುರವನ್ನು ಕುರಿತು, **ಏತ್ಯ** = ಬಂದು, **ಪ್ರಿಯಾಯಾಃ** = ಸತ್ಯಭಾಮೆಯ, **ಗೃಹಸ್ಯ** = ಮನೆಯ, **ಅಂಗಣೇ ಚ** = ಪ್ರಾಂಗಣದಲ್ಲಿ, **ರತ್ನಸದ್ಗಿರೇಃ** = ಮಣಿ ಪರ್ವತವು, **ಶೃಂಗೇಣ ಸಹೈವ** = ಶಿಖರದೊಂದಿಗೆ, **ತರುಂ** = ಪಾರಿಜಾತವೃಕ್ಷವನ್ನು, **ನ್ಯದಧಾತ್** = ಇರಿಸಿದನು.

**ತಾತ್ಪರ್ಯ** :- ಶ್ರೀಕೃಷ್ಣ ದ್ವಾರಕೆಯನ್ನು ಪ್ರವೇಶಿಸಿ ಯಾದವರಿಂದ ಸನ್ಮಾನಿತನಾಗಿ ಅಂತಃಪುರಕ್ಕೆ ಬಂದು ಸತ್ಯಭಾಮೆಯ ಮನೆಯಂಗಳದಲ್ಲಿ ಮಣಿಪರ್ವತದ ಶಿಖರದೊಂದಿಗೆ ಪಾರಿಜಾತವೃಕ್ಷವನ್ನು ಇರಿಸಿದ.

**ಪ್ರದಾಯ ರತ್ನಾನಿ ಚ ಸರ್ವಸಾತ್ತ್ವತಾಂ**
**ಯಥೇಷ್ಟತಸ್ತಾ ಅಪಿ ಕನ್ಯಕಾಃ ಪ್ರಭುಃ ।**
**ಉದ್ವಾಹ್ಯ ರೇಮೇ ಪಥಗೇವ ರತ್ನ-**
**ಪ್ರಾಸಾದಸಂಸ್ಥಾಭಿರನಂತರೂಪಃ ॥ ೧೪೦ ॥**

ಪದಚ್ಛೇದ :– ಪ್ರದಾಯ, ರತ್ನಾನಿ, ಚ, ಸರ್ವಸಾತ್ವತಾಂ, ಯಥೇಷ್ಟತಃ, ತಾಃ, ಅಪಿ, ಕನ್ಯಕಾಃ, ಪ್ರಭುಃ, ಉದ್ವಾಹ್ಯ, ರೇಮೇ, ಪೃಥಗೇವ, ರತ್ನಪ್ರಾಸಾದ ಸಂಸ್ಥಾಭಿಃ, ಅನಂತರೂಪಃ ।

**ಅರ್ಥ** :- **ಪ್ರಭುಃ** = ಶ್ರೀಕೃಷ್ಣನು, **ಸರ್ವಸಾತ್ವತಾಂ** = ಎಲ್ಲ ಯಾದವರಿಗೂ, **ಯಥೇಷ್ಟತಃ** = ಯಥೇಚ್ಛವಾಗಿ, **ರತ್ನಾನಿ** = ರತ್ನಗಳನ್ನು, **ಪ್ರದಾಯ** = ಕೊಟ್ಟು, **ಚ** = ಮತ್ತು, **ತಾಃ** = ಆ, **ಕನ್ಯಕಾಃ** = ಕನ್ಯೆಯರನ್ನು, **ಉದ್ವಾಹ್ಯ** = ಮದುವೆಯಾಗಿ, **ರತ್ನಪ್ರಾಸಾದಸಂಸ್ಥಾಭಿಃ** = ರತ್ನದುಪ್ಪರಿಗೆಗಳಲ್ಲಿ ಅವರನ್ನಿರಿಸಿ, **ಅನಂತರೂಪಃ** = ಅನಂತರೂಪಗಳಿಂದ, **ರೇಮೇ** = ರಮಿಸಿದನು.

**ತಾತ್ಪರ್ಯ** :- ಎಲ್ಲಾ ಯಾದವರಿಗೂ ಶ್ರೀಕೃಷ್ಣ ಯಥೇಚ್ಛವಾಗಿ ರತ್ನಗಳನ್ನು ಕೊಟ್ಟು ಆ ಕನ್ಯೆಯರನ್ನು ಮದುವೆಯಾಗಿ, ಬೇರೆ ಬೇರೆ

ರತ್ನದುಷ್ಪರಿಗೆಗಳಲ್ಲಿ ಅವರನ್ನಿರಿಸಿ, ಅನಂತರೂಪಗಳಿಂದ ಅವರೊಂದಿಗೆ ಬೇರೆ ಬೇರೆಯಾಗಿಯೇ ರಮಿಸಿದ.

**ಪೃಥಕ್ಪೃಥಕ್ ತಾಸು ದಶೈವ ಪುತ್ರಕಾ-**
**ನಧತ್ತ ಕನ್ಯಾಮಪಿ ಸರ್ವಶಃ ಪ್ರಭುಃ ।**
**ಪ್ರದ್ಯುಮ್ನಸಾಂಬಾವಪಿ ಭಾನುಚಾರು-**
**ದೇಷ್ಣೌ ಚ ತೇಷಾಂ ನಿತರಾಂ ಗುಣಾಧಿಕಾಃ ॥ ೧೪೧ ॥**

ಪದಚ್ಛೇದ :– ಪೃಥಕ್, ಪೃಥಕ್, ತಾಸು, ದಶೈವ, ಪುತ್ರಕಾನ್, ನ್ಯಧತ್ತ, ಕನ್ಯಾಮಪಿ, ಸರ್ವೇಶಃ, ಪ್ರಭುಃ, ಪ್ರದ್ಯುಮ್ನಸಾಂಬೌ, ಅಪಿ, ಭಾನುಚಾರುದೇಷ್ಣೌ ಚಾ ತೇಷಾಂ, ನಿತರಾಂ, ಗುಣಾಧಿಕಾಃ ।

ಅರ್ಥ :- ಪ್ರಭುಃ = ಶ್ರೀಕೃಷ್ಣನು, ತಾಸು = ಆ ಕನ್ಯೆಯರಲ್ಲಿ, ಪೃಥಕ್ ಪೃಥಕ್ = ಒಬ್ಬೊಬ್ಬರಲ್ಲಿಯೂ ಪ್ರತ್ಯೇಕವಾಗಿ, ದಶಪುತ್ರಕಾನ್ = ಹತ್ತು ಗಂಡು ಮಕ್ಕಳನ್ನು, ಕನ್ಯಾಮಪಿ = ಒಬ್ಬಳು ಕನ್ಯೆಯನ್ನೂ, ನ್ಯಧತ್ತ = ಹುಟ್ಟಿಸಿದನು, ತೇಷಾಂ = ಅವರಲ್ಲಿ, ಪ್ರದ್ಯುಮ್ನಸಾಂಬೌ = ಪ್ರದ್ಯುಮ್ನಸಾಂಬರು, ಅಪಿ = ಮತ್ತು, ಭಾನುಚಾರದೇಷ್ಣಾ = ಭಾನು, ಚಾರುದೇಷ್ಣರು, ನಿತರಾಂ = ಹೆಚ್ಚಾಗಿ, ಗುಣಾಧಿಕಾಃ = ಗುಣಗಳಲ್ಲಿ ಶ್ರೇಷ್ಠರು.

ತಾತ್ಪರ್ಯ :- ಶ್ರೀಕೃಷ್ಣನು ಆ ಕನ್ಯೆಯರಲ್ಲಿ ಒಬ್ಬೊಬ್ಬರಲ್ಲಿಯೂ ಪ್ರತ್ಯೇಕ ಹತ್ತು ಗಂಡು ಮಕ್ಕಳನ್ನು ಒಬ್ಬಳು ಕನ್ಯೆಯನ್ನೂ ಹುಟ್ಟಿಸಿದ ಅವರಲ್ಲಿ ಪ್ರದ್ಯುಮ್ನಸಾಂಬರು, ಭಾನು ಚಾರುದೇಷ್ಣರು ಗುಣಗಳಲ್ಲಿ ಹೆಚ್ಚು ಶ್ರೇಷ್ಠರು.

**ವಿವಸ್ವತೋ ಯೋಽವರಜೋಽದಿತೇಃ ಸುತಃ**
**ಖ್ಯಾತಶ್ಚ ನಾಮ್ನಾ ಸವಿತೇತಿ ಕೃಷ್ಣಾತ್ ।**
**ಜಾತಃ ಸ ಸತ್ಯಾಜಠರೇಽತ್ರ ನಾಮ್ನಾ**
**ಭಾನುಸ್ತು ಭೈಷ್ಮ್ಯಾ ಅಪಿ ಚಾರುದೇಷ್ಣಃ ॥ ೧೪೨ ॥**

ಪದಚ್ಛೇದ :- ವಿವಸ್ವತಃ, ಯಃ, ಅವರಜಃ, ಅದಿತೇಃ, ಸುತಃ, ಖ್ಯಾತಃ, ಚ, ನಾಮ್ನಾ, ಸವಿತಾ, ಇತಿ, ಕೃಷ್ಣಾತ್, ಜಾತಃ, ಸಃ, ಸತ್ಯಾಜಠರೇ, ಅತ್ರ, ನಾಮ್ನಾ, ಭಾನುಃ, ತು, ಭೈಷ್ಮ್ಯಾ, ಅಪಿ, ಚಾರುದೇಷ್ಣಃ ।

**ಅರ್ಥ** :- **ಅದಿತೇಃ** = ಅದಿತಿ ದೇವಿಯ, **ಸುತಃ** = ಮಗನಾದ, **ವಿವಸ್ವತಃ** = ''ವಿವಸ್ವಾನ್'' ಎಂಬ ಸೂರ್ಯನ, **ಅವರಜಃ** = ತಮ್ಮನು, **ಸವಿತಾ ಇತಿ** = ಸವಿತೃ ಎಂಬ, **ನಾಮ್ನಾ** = ಹೆಸರಿನಿಂದ, **ಖ್ಯಾತಃ** = ಖ್ಯಾತನಾದ, **ಸಃ** = ಅವನು, **ಕೃಷ್ಣಾತ್** = ಕೃಷ್ಣನಿಂದ, **ಸತ್ಯಾಜಠರೇ** = ಸತ್ಯಭಾಮೆಯ ಉದರದಲ್ಲಿ, **ಜಾತಃ** = ಹುಟ್ಟಿದನು, **ಚಾರುದೇಷ್ಣಃ** = ಚಾರುದೇಷ್ಣನು, **ಭೈಷ್ಮ್ಯಾಂ** = ರುಕ್ಮಿಣಿಯಿಂದ (**ಜಾತಃ** = ಹುಟ್ಟಿದನು).

**ತಾತ್ಪರ್ಯ** :- ವಿವಸ್ವಾನ್ ಎಂಬ ಸೂರ್ಯನ ತಮ್ಮನು ಸವಿತೃ ಎಂಬ ಹೆಸರಿನಿಂದ ಖ್ಯಾತನಾದ ಸೂರ್ಯ. ಅವನು ಶ್ರೀಕೃಷ್ಣನಿಂದ ಸತ್ಯಭಾಮೆಯ ಉದರದಲ್ಲಿ ಹುಟ್ಟಿದ. ಅವನ ಹೆಸರು ಭಾನು. ರುಕ್ಮಿಣಿಯಲ್ಲಿ ಚಾರುದೇಷ್ಣ ಹುಟ್ಟಿದ.

**ಸ ಚಾರುದೇಷ್ಣೋಽಪಿ ಹಿ ವಿಘ್ನರಾಜೋ**
**ಯೇಽನ್ಯೇ ಚ ಕೃಷ್ಣಸ್ಯ ಸುತಾಃ ಸಮಸ್ತಾಃ ।**
**ತೇ ಚೈವ ಗೀರ್ವಾಣಗಣಾಸ್ತಥಾಽನ್ಯೇ**
**ಯೇ ದ್ವಾರಕಾಯಾಂ ನಿವಸಂತಿ ಸರ್ವೇ ॥ ೧೪೩ ॥**

ಪದಚ್ಛೇದ :– ಸಃ, ಚಾರುದೇಷ್ಣಃ, ಅಪಿ, ಹಿ, ವಿಘ್ನರಾಜಃ, ಯೇ, ಅನ್ಯೇ, ಚ, ಕೃಷ್ಣಸ್ಯ, ಸುತಾಃ, ಸಮಸ್ತಾಃ, ತೇ, ಚ, ಏವ, ಗೀರ್ವಾಣಗಣಾಃ, ತಥಾ, ಅನ್ಯೆ, ಯೇ, ದ್ವಾರಕಾಯಾಂ, ನಿವಸಂತಿ, ಸರ್ವೇ ।

**ಅರ್ಥ** :- **ಸಃ ಚಾರುದೇಷ್ಣಃ** = ಆ ಚಾರುದೇಷ್ಣನು, **ವಿಘ್ನರಾಜೋ ಹಿ** = ಗಣಪತಿಯ ಅವತಾರ, **ಕೃಷ್ಣಸ್ಯ** = ಶ್ರೀಕೃಷ್ಣನ, **ಯೇ ಅನ್ಯೆ** = ಬೇರೆ ಯಾವ, **ಸಮಸ್ತಾಃ** = ಎಲ್ಲಾ, **ಸುತಾಃ** = ಮಕ್ಕಳು, **ಅಪಿ ಚ** = ಮತ್ತು, **ದ್ವಾರಕಾಯಾಂ** = ದ್ವಾರಕೆಯಲ್ಲಿ, **ಯೇ ನಿವಸಂತಿ** = ಯಾರು ವಾಸವಿದ್ದಾರೋ, **ತೇ ಸರ್ವೇ** = ಅವರೆಲ್ಲರೂ, **ಗೀರ್ವಾಣಗಣಾಃ** = ದೇವಾಂಶ ಸಂಭೂತರು.

**ತಾತ್ಪರ್ಯ** :- ಆ ಚಾರುದೇಷ್ಣ ಗಣಪತಿಯ ಅವತಾರ. ಕೃಷ್ಣನ ಬೇರೆ ಮಕ್ಕಳೂ ಕೂಡ ಎಲ್ಲರೂ ದೇವ ಸಮೂಹಕ್ಕೆ ಸೇರಿದವರು. ಹಾಗೆ ದ್ವಾರಕೆಯಲ್ಲಿ ವಾಸವಾಗಿದ್ದ ಬೇರೆ ಜನರೂ ದೇವಾಂಶ ಸಂಭೂತರೇ.

ತಸ್ಯಾಂ ಸಮಸ್ತೈರಭಿಪೂಜ್ಯಮಾನೇ
ದೇವೇ ಸ್ವಪುರ್ಯಾಂ ನಿವಸತ್ಯನಂತೇ ।
ಯಯೌ ಕದಾಚಿತ್ ಸ ತು ರೌಗ್ಮಿಣೇಯಃ
ಸಾಂಬೇನ ಸಾರ್ಧಂ ಭುಜಗೇಂದ್ರಲೋಕಮ್ ॥ ೧೪೪ ॥

ಪದಚ್ಛೇದ :- ತಸ್ಯಾಂ, ಸಮಸ್ತೈಃ, ಅಭಿಪೂಜ್ಯಮಾನೇ, ದೇವೇಃ, ಸ್ವಪುರ್ಯಾಂ, ನಿವಸತಿ, ಅನಂತೆ, ಯಯೌ, ಕದಾಚಿತ್, ಸಃ, ತು, ರೌಕ್ಮಿಣೇಯಃ, ಸಾಂಬೇನ, ಸಾರ್ಧಂ, ಭುಜಗೇಂದ್ರಲೋಕಂ।

ಅರ್ಥ :- ಅನಂತೇ = ಶ್ರೀಕೃಷ್ಣನು, ಸಮಸ್ತೈಃ ದೇವೈಃ = ಎಲ್ಲ ದೇವತೆಗಳಿಂದಲೂ, ಸ್ವಪುರ್ಯಾಂ = ತನ್ನ ನಗರದಲ್ಲಿ, ಅಭಿಪೂಜ್ಯಮಾನೇ = ಪೂಜೆಗೊಳ್ಳುತ್ತಾ, ನಿವಸತಿ = ವಾಸವಿರಲು, ಕದಾಚಿತ್ = ಒಮ್ಮೆ, ರೌಕ್ಮಿಣೇಯಃ = ರುಕ್ಮಿಣಿಯ ಮಗ ಪ್ರದ್ಯುಮ್ನ, ಸಾಂಬೇನ ಸಾಕಂ = ಸಾಂಬನೊಂದಿಗೆ, ಭುಜಗೇಂದ್ರಲೋಕಂ = ನಾಗಲೋಕಕ್ಕೆ, ಯಯೌ = ಹೋದನು.

ತಾತ್ಪರ್ಯ :- ಶ್ರೀಕೃಷ್ಣ ತನ್ನ ದ್ವಾರಾವತೀನಗರಿಯಲ್ಲಿ ಎಲ್ಲ ದೇವತೆಗಳಿಂದಲೂ ಪೂಜೆಗೊಳ್ಳುತ್ತಾ ವಾಸವಿರಲು ಒಮ್ಮೆ ರುಕ್ಮಿಣಿಯ ಮಗ ಪ್ರದ್ಯುಮ್ನ ಸಾಂಬನೊಂದಿಗೆ ಪಾತಾಳ ದಿಗ್ವಿಜಯಕ್ಕೆ ಹೋದ.

ಅಜ್ಞಾನತಸ್ತೈರಭಿಯೋಧಿತಃ ಸ
ಜಿಗಾಯ ಸರ್ವಾನಪಿ ವಾಸುಕಿಂ ಚ ।
ವಿದ್ರಾವ್ಯ ಬಾಣೈರಥ ರತ್ನಸಂಚಯಾನ್
ಸಮಾದದೇ ನೇಮುರಮುಂ ತತಸ್ತೇ ॥ ೧೪೫ ॥

ಪದಚ್ಛೇದ :- ಅಜ್ಞಾನತಃ, ತೈಃ, ಅಭಿಯೋಧಿತಃ, ಸಃ, ಜಿಗಾಯ, ಸರ್ವಾನ್, ಅಪಿ, ವಾಸುಕಿಂ, ಚ, ವಿದ್ರಾವ್ಯ, ಬಾಣೈಃ, ಅಥ, ರತ್ನಸಂಚಯಾನ್, ಸಮಾದದೇ, ನೇಮುಃ, ಅಮುಂ, ತತಃ, ತೇ ।

ಅರ್ಥ :- ಸಃ = ಪ್ರದ್ಯುಮ್ನನು, ಅಜ್ಞಾನತಃ = ಅಜ್ಞಾನದಿಂದ, ತೈಃ = ಆ ಸರ್ಪಗಳಿಂದ, ಅಭಿಯೋಧಿತಃ = ಯುದ್ಧ ಮಾಡಲ್ಪಟ್ಟಾಗ, ಸರ್ವಾನಪಿ = ಎಲ್ಲರನ್ನೂ, ವಾಸುಕಿಂ ಚ = ವಾಸುಕಿಯನ್ನೂ, ಜಿಗಾಯ = ಗೆದ್ದನು, ಬಾಣೈಃ

= ಬಾಣಸಮೂಹಗಳಿಂದ, ತಾನ್ = ಅವರನ್ನು, ವಿದ್ರಾವ್ಯ = ಓಡಿಸಿ, **ರತ್ನಸಂಚಯಾನ್** = ರತ್ನ ಸಮೂಹಗಳನ್ನು, **ಸಮಾದದೇ** = ವಶಪಡಿಸಿಕೊಂಡನು, **ತತಃ** = ಬಳಿಕ, **ತೇ** = ಸರ್ಪಗಳು, **ಅಮುಂ** = ಇವರನ್ನು, **ನೇಮುಃ** = ನಮಿಸಿದರು.

ತಾತ್ಪರ್ಯ :- ಸರ್ಪಗಳು ಅಜ್ಞಾನದಿಂದ ಯುದ್ಧ ಮಾಡಿದಾಗ ಪ್ರದ್ಯುಮ್ನ, ಸಾಂಬರು ಅವರೆಲ್ಲರನ್ನೂ, ವಾಸುಕಿಯನ್ನೂ ಗೆದ್ದರು. ಬಾಣಸಮೂಹಗಳಿಂದ ಅವರನ್ನು ಓಡಿಸಿ ರತ್ನಸಮೂಹಗಳನ್ನು ವಶಪಡಿಸಿಕೊಂಡರು. ಸರ್ಪರುಗಳು ಆಗ ಅವರನ್ನು ನಮಿಸಿದರು.

**ತೈಃ ಪೂಜಿತಃ ಸಾಂಬಸಹಾಯ ಆಶು**
**ಮಯಂ ಚ ಮಾಯಾವಿನಮಸ್ತ್ರವರ್ಷೈಃ ।**
**ವಿಜಿತ್ಯ ರುಂಧಾನಮನೇನ ಪೂಜಿತೋ**
**ಯಯೌ ರಥೇನಾಂಬರಗೇನ ನಾಕಮ್ ॥ ೧೪೬ ॥**

**ಪದಚ್ಛೇದ :- ತೈಃ, ಪೂಜಿತಃ, ಸಾಂಬಸಹಾಯಃ, ಆಶು, ಮಯಂ, ಚ, ಮಾಯಾವಿನಮ್, ಅಸ್ತ್ರವರ್ಷೈಃ, ವಿಜಿತ್ಯ, ರುಂಧಾನಮ್, ಅನೇನ, ಪೂಜಿತಃ, ಯಯೌ, ರಥೇನ, ಅಂಬರಗೇನ, ನಾಕಮ್ ।**

ಅರ್ಥ :- **ತೈಃ** = ಆ ಸರ್ಪಗಳಿಂದ, **ಪೂಜಿತಃ** = ಪೂಜಿಸಲ್ಪಟ್ಟ, **ಸಾಂಬಸಹಾಯಃ** = ಸಾಂಬನೊಂದಿಗೆ ಕೂಡಿದ ಪ್ರದ್ಯುಮ್ನನು, **ಆಶು** = ಶೀಘ್ರವಾಗಿ, **ಮಾಯಾವಿನಂ** = ಮಾಯಾವಿಯಾದ, **ಮಯಂ** = ಮಾಯಾಸುರನನ್ನು, **ಅಸ್ತ್ರವರ್ಷೈಃ** = ಅಸ್ತ್ರಗಳ ಮಳೆಯಿಂದ, **ವಿಜಿತ್ಯ** = ಗೆದ್ದು, **ಅನೇನ** = ಮಾಯಾಸುರನಿಂದ, **ಪೂಜಿತಃ** = ಪೂಜಿಸಲ್ಪಟ್ಟವನಾಗಿ, **ಅಂಬರಗೇನ** = ಆಕಾಶದಲ್ಲಿ ಸಂಚರಿಸುವ, **ರಥೇನ** = ರಥದಿಂದ, **ನಾಕಂ** = ಸ್ವರ್ಗಲೋಕವನ್ನು, **ಯಯೌ** = ಹೋದನು.

ತಾತ್ಪರ್ಯ :- ಪ್ರದ್ಯುಮ್ನ ಮತ್ತು ಸಾಂಬರು ವಾಸುಕಿ ಮೊದಲಾದ ಸರ್ಪಗಳಿಂದ ಪೂಜಿತರಾದರು. ಅವರನ್ನು ತಡೆಯಲು ಬಂದಿರುವ ಅನೇಕ ಮಾಯಾವಿದ್ಯೆಗಳನ್ನು ಬಲ್ಲ ಮಯನನ್ನು ಅನೇಕ ಅಸ್ತ್ರಗಳ ಮಳೆಯಿಂದ ಗೆದ್ದು

ಆಕಾಶ ಮಾರ್ಗದಲ್ಲಿ ಸಾಗುವ ರಥದಿಂದ ಸ್ವರ್ಗಲೋಕವನ್ನು ಕುರಿತು ಹೋದರು.

**ತತ್ರೈವ ಕೃಷ್ಣೇನ ತು ಪಾರಿಜಾತೇ**
**ಹೃತೇ ಜಯಂತಂ ಪ್ರಜಿಗಾಯ ಚಾಽಜೌ ।**
**ಸಂಸ್ಪರ್ಧಯಾಽಽಯಾತಮಮುಷ್ಯ ಚಾನುಜಂ**
**ಸಾಂಬೋಽಜಯದ್ ವೃಷಭಂ ನಾಮ ಶಸ್ತ್ರೈಃ ॥ ೧೪೭ ॥**

ಪದಚ್ಛೇದ :- ತತ್ರ, ಏವ, ಕೃಷ್ಣೇನ, ತು ಪಾರಿಜಾತೇ, ಹೃತೇ, ಜಯಂತಮ್, ಪ್ರಜಿಗಾಯ, ಚ, ಆಜೌ, ಸಂಸ್ಪರ್ಧಯಾ, ಆಯಾತಮ್, ಅಮುಷ್ಯ, ಚ, ಅನುಜಮ್, ಸಾಂಬಃ, ಅಜಯತ್, ವೃಷಭಮ್, ನಾಮ ಶಸ್ತ್ರೈಃ ।

**ಅರ್ಥ** :- **ತತ್ರೈವ** = ಆ ಸ್ವರ್ಗದಲ್ಲಿಯೇ, **ಕೃಷ್ಣೇನ** = ಶ್ರೀ ಕೃಷ್ಣಪರಮಾತ್ಮನಿಂದ, **ಪಾರಿಜಾತೇ ಅಪಹೃತೇ ಏವ** = ಪಾರಿಜಾತ ವೃಕ್ಷದ ಅಪಹರಣದ ನಿಮಿತ್ತದಿಂದಲೇ, **ಸಂಸ್ಪರ್ಧಯಾ** = ಪ್ರತಿಸ್ಪರ್ಧೆಯಿಂದ, **ಆಯಾತಃ** = ಬಂದಿರುವ, **ಜಯಂತಂ** = ಜಯಂತನನ್ನು, **ಆಜೌ** = ಯುದ್ಧದಲ್ಲಿ, **ಪ್ರಜಿಗಾಯ** = ಗೆದ್ದನು, **ಅಮುಷ್ಯ** = ಈ ಜಯಂತನ, **ಅನುಜಂ** = ತಮ್ಮನಾದ, **ವೃಷಭಂ ನಾಮ** = ವೃಷಭನೆಂದು ಹೆಸರು ಉಳ್ಳವನನ್ನು, **ಶಾಸ್ತ್ರೈಃ** = ಶಸ್ತ್ರಗಳಿಂದ, **ಸಾಂಬ** = ಸಾಂಬನು, **ಅಜಯತ್** = ಗೆದ್ದನು.

**ತಾತ್ಪರ್ಯ** :- ಹಿಂದೆ ಶ್ರೀಕೃಷ್ಣನು ಪಾರಿಜಾತವೃಕ್ಷವನ್ನು ಅಪಹರಿಸಿದ್ದಾನೆ ಎಂಬ ಕಾರಣದಿಂದ ಕೃಷ್ಣನನ್ನು ಯುದ್ಧದಲ್ಲಿ ಎದುರಿಸಲು ಆಗದೆ ಅವನ ಮಕ್ಕಳಾದ ಪ್ರದ್ಯುಮ್ನ ಮತ್ತು ಸಾಂಬರನ್ನು ಗೆಲ್ಲಬೇಕೆಂಬ ಆಸೆಯಿಂದ ಇಂದ್ರನ ಮಗನಾದ ಜಯಂತ ಮತ್ತು ಅವನ ತಮ್ಮ ಋಷಭನಿಗೆ ಎದುರಾಗಿ ಬಂದರು. ಅವರಿಬ್ಬರಲ್ಲಿ ಪ್ರದ್ಯುಮ್ನ ಜಯಂತನನ್ನು ಗೆದ್ದ. ಸಾಂಬ ಋಷಭನನ್ನು ಗೆದ್ದ.

**ಅಸ್ತ್ರಾಣಿ ತಾವಸ್ತ್ರವರೈರ್ನಿಹತ್ಯ**
**ತಯೋಶ್ಚ ತಾಭ್ಯಾಂ ಪ್ರತಿದಗ್ಧಯಾನೌ ।**
**ವಿದ್ರಾವ್ಯ ತೌ ಬಾಣವರೈಃ ಸುರೇಂದ್ರ-**
**ಸಂಪೂಜಿತೌ ಯಯತುರ್ವಿದ್ಯಯಾ ಖೇ ॥ ೧೪೮ ॥**

ಪದಚ್ಛೇದ :- ಅಸ್ತ್ರಾಣಿ, ತಾ, ಅಸ್ತ್ರವರ್ಯೈ, ನಿಹತ್ಯ, ತಯೋಃ, ಚ, ತಾಭ್ಯಾಂ, ಪ್ರತಿದಗ್ಧಯಾನೌ, ವಿದ್ರಾವ್ಯ, ತೌ, ಬಾಣ, ವರ್ಯೈಃ, ಸುರೇಂದ್ರಸಂಪೂಜಿತೌ, ಯಯತುಃ, ವಿದ್ಯಯಾ, ಖೇ ।

ಅರ್ಥ :- ತೈಃ = ಆ ಪ್ರದ್ಯುಮ್ನ ಮತ್ತು ಸಾಂಬರು, ತಯೋಃ = ಜಯಂತ ಮತ್ತು ವೃಷಭನ, ಅಸ್ತ್ರಾಣಿ = ಅಸ್ತ್ರಗಳನ್ನು, ಅಸ್ತ್ರವರ್ಯೈಃ = ಉತ್ತಮ ಅಸ್ತ್ರಗಳಿಂದ, ನಿಹತ್ಯ = ನಾಶಪಡಿಸಿ, ತಾಭ್ಯಾಂ = ಜಯಂತ ಮತ್ತು ವೃಷಭರಿಂದ, ಪ್ರತಿದಗ್ಧ್ಯಾನೌ = ಸುಡಲ್ಪಟ್ಟ ರಥವುಳ್ಳ ಪ್ರದ್ಯುಮ್ನ ಮತ್ತು ಸಾಂಬರು, ತೌ = ಆ ಜಯಂತ ಮತ್ತು ವೃಷಭರನ್ನು, ಬಾಣವರ್ಯೈಃ = ಶ್ರೇಷ್ಠಬಾಣಗಳಿಂದ, ವಿದ್ರಾವ್ಯ = ಓಡಿಸಿ, ಸುರೇಂದ್ರಸಂಪೂಜಿತೌ = ದೇವೇಂದ್ರನಿಂದ ಪೂಜಿಸಲ್ಪಟ್ಟವರಾಗಿ, ವಿದ್ಯಯಾ = ಮಂತ್ರಶಕ್ತಿಯಿಂದ, ಖೇ = ಆಕಾಶದಲ್ಲಿ, ಯಯತುಃ = ಹೋದರು.

ತಾತ್ಪರ್ಯ :- ಪ್ರದ್ಯುಮ್ನ ಮತ್ತು ಸಾಂಬರು ಜಯಂತ ಮತ್ತು ಋಷಭ ಪ್ರಯೋಗಿಸಿರುವ ಅನೇಕ ಅಸ್ತ್ರಗಳನ್ನು ಅದಕ್ಕಿಂತ ಉತ್ತಮವಾದ ಅಸ್ತ್ರಗಳನ್ನು ಪ್ರಯೋಗಿಸಿ ನಾಶಪಡಿಸಿದರು. ಅನಂತರ ಜಯಂತ ಮತ್ತು ಋಷಭರು ಇವರ ರಥವನ್ನು ಸುಟ್ಟರು. ಆದರೂ ಅನೇಕ ಶ್ರೇಷ್ಠ ಬಾಣಗಳಿಂದ ಜಯಂತ ಮತ್ತು ಋಷಭನನ್ನು ಓಡಿಸಿ ದೇವೇಂದ್ರನಿಂದ ಮಾನಿತರಾಗಿ ತಮ್ಮ ಮಂತ್ರ ಪ್ರಭಾವದಿಂದ ಆಕಾಶದಲ್ಲಿ ಹೋದರು.

ಸ ವಿದ್ಯಯಾ ಸಾಂಬಮುದೂಹ್ಯ ರತ್ಯಾ
ಪ್ರದತ್ತಯಾ ರುಗ್ಮಿಣಿನಂದನಃ ಪುರೀಮ್ ।
ಯಯೌ ತತೋ ನಾರದ ಆಗಮದ್ ದ್ರುತಂ
ಜ್ಞಾತುಂ ಹರೇರ್ಬಹುಭಾರ್ಯಾಸು ವೃತ್ತಿಮ್ ॥ ೧೪೯ ॥

ಪದಚ್ಛೇದ :- ಸಃ, ವಿದ್ಯಯಾ, ಸಾಂಬಂ, ಉದೂಹ್ಯ ರತ್ಯಾ, ಪ್ರದತ್ತಯಾ, ರುಗ್ಮಿಣಿನಂದನಃ, ಪುರೀಮ್, ಯಯೌ, ತತೋ, ನಾರದ, ಆಗಮದ್, ದ್ರುತಂ, ಜ್ಞಾತುಂ, ಹರೇಃ, ಬಹುಭಾರ್ಯಾಸು, ವೃತ್ತಿಮ್.

ಅರ್ಥ :- ಸಃ = ಆ ರುಕ್ಮಿಣಿಯ ಮಗನಾದ ಪ್ರದ್ಯುಮ್ನನು, ರತ್ಯಾ = ರತಿದೇವಿಯಿಂದ, ಪ್ರದತ್ತಯಾ = ಕೊಡಲ್ಪಟ್ಟ, ವಿದ್ಯಯಾ = ವಿದ್ಯೆಯಿಂದ,

**ಸಾಂಬಂ** = ಸಾಂಬನನ್ನು, **ಉದೂಹ್ಯ** = ಭುಜದ ಮೇಲೆ ಹೊತ್ತಿಕೊಂಡು, **ಪುರೀಂ** = ದ್ವಾರಕಾಪಟ್ಟಣವನ್ನು ಕುರಿತು, **ಯಯೌ** = ಹೋದನು, **ತತಃ** = ಪ್ರದ್ಯುಮ್ನನು ದ್ವಾರಕೆಗೆ ಹೋದ ಬಳಿಕ, **ಹರೇಃ** = ಶ್ರೀಕೃಷ್ಣನ, **ಬಹುಭಾರ್ಯಾಸ್ತು** = ಅನೇಕ ಪತ್ನಿಯರಲ್ಲಿ ಇರುವ, **ವೃತ್ತಿಂ** = ವರ್ತನೆಯನ್ನು, **ಜ್ಞಾತುಂ** = ತಿಳಿದುಕೊಳ್ಳಲು, **ನಾರದಃ** = ನಾರದರು, **ಆಗಮದ್** = ಬಂದರು.

**ತಾತ್ಪರ್ಯ** :- ಸಾಂಬನು ಆಕಾಶಮಾರ್ಗದಲ್ಲಿ ಸಂಚರಿಸುವ ವಿದ್ಯೆಯನ್ನು ತಿಳಿಯದಿದ್ದರೂ ಪ್ರದ್ಯುಮ್ನನು ರತಿದೇವಿ ಉಪದೇಶಿಸಿದ ಆ ವಿದ್ಯೆಯಿಂದ ಸಾಂಬನನ್ನು ಭಜದ ಮೇಲೆ ಹೊತ್ತು ದ್ವಾರಕೆಗೆ ಬಂದನು. ಅನಂತರ ಶ್ರೀಕೃಷ್ಣ ತನ್ನ ಅನೇಕ ಮಡದಿಯರಲ್ಲಿ ನಡೆಸುವ ವರ್ತನೆಗಳು ಹೇಗಿರುವುದು ಎನ್ನುವುದನ್ನು ತಿಳಿಯಲು ನಾರದರು ಬಂದಿದ್ದಾರೆ.

**ತಂ ದ್ವ್ಯಷ್ಟಸಾಹಸ್ರಗೃಹೇಷು ದೃಷ್ಟ್ವಾ**
**ತಾವತ್ಸ್ವರೂಪೈರ್ವಿಹರಂತಮೇಕಮ್ ।**
**ಸುವಿಸ್ಮಿತಃ ಪ್ರಯಯೌ ತಂ ಪ್ರಣಮ್ಯ**
**ಶಕ್ರಪ್ರಸ್ಥಂ ಪೂಜಿತಶ್ಚಾತ್ರ ಪಾರ್ಥೈಃ ॥ ೧೫೦ ॥**

**ಪದಚ್ಛೇದ** :– ತಂ, ದ್ವಷ್ಟ ಸಾಹಸ್ರಗೃಹೇಷು, ದೃಷ್ಟ್ವಾ, ತಾವತ್‌ಸ್ವರೂಪೈಃ ವಿಹರಂತಂ, ಏಕಮ್, ಸುವಿಸ್ಮಿತಃ, ಪ್ರಯಯೌ, ತಂ, ಪ್ರಣಮ್ಯ, ಶಕ್ರಪ್ರಸ್ಥಂ, ಪೂಜಿತಃ, ಚ, ಅತ್ರ, ಪಾರ್ಥೈಃ.

**ಅರ್ಥ** :- **ದ್ವ್ಯಷ್ಟಸ್ತಾಹಸ್ರಗೃಹೇಷು** = ಹದಿನಾರು ಸಾವಿರ ಮನೆಗಳಲ್ಲಿ, **ತಾವತ್ಸ್ವರೂಪೈಃ** = ಹದಿನಾರು ಸಾವಿರ ರೂಪಗಳಿಂದ, **ವಿಹರಂತ** = ವಿಹರಿಸುತ್ತಿರುವ, **ತಂ** = ಶ್ರೀ ಕೃಷ್ಣನನ್ನು, **ದೃಷ್ಟ್ವಾ** = ನೋಡಿ, **ಸುವಿಸ್ಮಿತಃ** = ಆಶ್ಚರ್ಯಚಕಿತರಾದವರಾಗಿ, **ಪ್ರಣಮ್ಯ** = ನಮಸ್ಕರಿಸಿ, **ಶಕ್ರಪ್ರಸ್ತಂ** = ಇಂದ್ರಪ್ರಸ್ತವನ್ನು ಕುರಿತು, **ಪ್ರಯಯೌ** = ಹೊದರಸಿ, **ಅತ್ರ** = ಈ ಇಂದ್ರಪ್ರಸ್ಥದಲ್ಲಿ, **ಪಾರ್ಥೌಃ** = ಪಾಂಡವರಿಂದ, **ಪೂಜಿತಃ** = ಪೂಜಿಸಲ್ಪಟ್ಟರು.

**ತಾತ್ಪರ್ಯ** :- ಒಬ್ಬನೇ ಶ್ರೀಕೃಷ್ಣನು ಹದಿನಾರು ಸಾವಿರ ಮನೆಗಳಲ್ಲಿ ಹದಿನಾರು ಸಾವಿರ ರೂಪಗಳನ್ನು ಸ್ವೀಕರಿಸಿ ವಿಹಾರ ಮಾಡುವ ಸೊಬಗನ್ನು

ನೋಡಿ ಆಶ್ಚರ್ಯಚಕಿತರಾದರು. ಆನಂತರ ಶ್ರೀಕೃಷ್ಣನನ್ನು ನಮಸ್ಕರಿಸಿ ಇಂದ್ರಪ್ರಸ್ಥಕ್ಕೆ ತೆರಳಿದ್ದಾರೆ. ಅಲ್ಲಿಯೂ ಪಾಂಡವರು ಅವರನ್ನು ಸತ್ಕರಿಸಿದ್ದಾರೆ.

**ಸ ಆಜ್ಞಯಾ ಬ್ರಹ್ಮಣ ಆಹ ಕೃಷ್ಣಾಂ**
**ಕ್ರಮಾತ್ ಕರ್ತುಂ ಭೀಮ ಏವೈಕಸಂಸ್ಥಾಮ್ ।**
**ಅನ್ಯಾ ದೇವೀಃ ಸ್ವಾಪಯಿತ್ವಾ ಶರೀರೇ**
**ತಸ್ಯಾ ಭಾರತ್ಯಾಃ ಪೂರ್ಣಭೋಗಾರ್ಥಮೇವ ॥ ೧೫೧ ॥**

**ಪದಚ್ಛೇದ :-** ಸಃ, ಆಜ್ಞಯಾ, ಬ್ರಹ್ಮಣ, ಆಹ, ಕೃಷ್ಣಾಂ, ಕ್ರಮಾತ್, ಕರ್ತುಂ, ಭೀಮ, ಏವ, ಏಕ ಸಂಸ್ಥಾಮ್, ಅನ್ಯಾ, ದೇವೀಃ, ಸ್ವಾಪಯಿತ್ವಾ, ಶರೀರೇ, ತಸ್ಯಾಃ, ಭಾರತ್ಯಾಃ, ಪೂರ್ಣಭೋಗಾರ್ಥಮ್, ಏವ ।

**ಅರ್ಥ :-** ಸಃ = ಆ ನಾರದರು, ಬ್ರಹ್ಮಣಃ = ಬ್ರಹ್ಮದೇವರ, ಆಜ್ಞಯಾ = ಅಪ್ಪಣೆಯಿಂದ, ತಸ್ಯಾಃ = ಆ ಭಾರತೀದೇವಿಯ, ಶರೀರೇ = ಶರೀರದಲ್ಲಿ, ಅನ್ಯಾಃ ದೇವೀಃ = ಶಚಿ ಶಾಮಲೆ ಮೊದಲಾದ ದೇವಿಯರನ್ನು, ಸ್ವಾಪಯಿತ್ವಾ = ನಿದ್ರೆಗೊಳಿಸಿ, ಭಾರತ್ಯಾಃ = ಭಾರತೀದೇವಿಯ, ಪೂರ್ಣಭೋಗಾರ್ಥಮೇವ = ಭೀಮನ ಸಂಪೂರ್ಣ ಭೋಗಕ್ಕಾಗಿ, ಕೃಷ್ಣಾಂ = ದ್ರೌಪದಿಯನ್ನು, ಕ್ರಮಾತ್ = ಕ್ರಮವಾಗಿ, ಭೀಮ ಏವ ಏಕಸಂಸ್ಥಾ = ಭೀಮನಲ್ಲಿಯೆ ಮುಖ್ಯವಾಗಿ ಇರುವಂತೆ, ಕರ್ತುಂ = ಮಾಡಲು, ಆಹ = ಹೇಳಿದರು.

**ತಾತ್ಪರ್ಯ :-** ದ್ರೌಪದಿ ದೇವಿಯ ಶರೀರದಲ್ಲಿ ಶಚಿ, ಶಾಮಲೆ, ಉಷಾ ಮೊದಲಾದ ಐದು ಮಂದಿ ಇದ್ದರೂ ಉಳಿದ ದೇವಿಯರನ್ನು ನಿದ್ರಾವಸ್ಥೆ ಬರುವಂತೆ ಮಾಡಿ ಭಾರತೀದೇವಿಗೆ ಸಂಪೂರ್ಣ ರತಿಸುಖವು ದೊರೆಯಲಿ ಮತ್ತು ದ್ರೌಪದಿ ಕ್ರಮವಾಗಿ ಭೀಮನಲ್ಲಿ ಇರಬೇಕೆಂಬ ಉದ್ದೇಶದಿಂದ ನಾರದರು ಬ್ರಹ್ಮದೇವರ ಆದೇಶಕ್ಕೆ ಅನುಸಾರವಾಗಿ ಹೇಳಿದರು.

**ಸುಂದೋಪಸುಂದೌ ಭ್ರಾತರೌ ಬ್ರಹ್ಮವಾಕ್ಯಾತ್**
**ಪರಸ್ಪರಾದನ್ಯತೋ ನೈವ ವಧ್ಯೌ ।**
**ತಿಲೋತ್ತಮಾರ್ಥೇ ನಿಹತೌ ಪರಸ್ಪರಂ**
**ತಯೋರ್ವಧಾರ್ಥೇ ಸೃಷ್ಟಯಾ ತೇನ ದೈತ್ಯೌ ॥ ೧೫೨ ॥**

**ಪದಚ್ಛೇದ** :- ಸುಂದೋಪಸುಂದೌ, ಭ್ರಾತರೌ, ಬ್ರಹ್ಮವಾಕ್ಯಾತ್, ಪರಸ್ಪರಾತ್, ಅನ್ಯತಃ, ನ, ಏವ, ವಧ್ಯೌ, ತಿಲೋತ್ತಮಾರ್ಥೇ, ನಿಹತೌ, ಪರಸ್ಪರಂ, ತಯೋಃ, ವಧಾರ್ಥೇ, ಸೃಷ್ಟಯಾ, ತೇನ, ದೈತ್ಯೌ ।

**ಅರ್ಥ** :- **ಸುಂದೋಪಸುಂದೌ** = ಸುಂದ ಮತ್ತು ಉಪಸುಂದ ಎಂಬ ಇಬ್ಬರು, **ಭ್ರಾತರೌ** = ಅಣ್ಣತಮ್ಮಂದಿರು, **ಬ್ರಹ್ಮವಾಕ್ಯಾತ್** = ಬ್ರಹ್ಮನ ವರದಿಂದ, **ಪರಸ್ಪರಾತ್** = ಪರಸ್ಪರರಿಂದ ಹೊರತು, **ಅನ್ಯತಃ** = ಇನ್ನೊಬ್ಬರಿಂದ, **ನೈವ ವಧ್ಯೌ** = ಮರಣವಿಲ್ಲದವರಾಗಿದ್ದರು, **ತೇನ** = ಆ ಬ್ರಹ್ಮದೇವರಿಂದ, **ತಯೋಃ** = ಆ ಸುಂದೋಪಸುಂದರ, **ವಧಾರ್ಥೇ** = ಸಂಹಾರಕ್ಕಾಗಿ, **ಸೃಷ್ಟಯಾ** = ಸೃಷ್ಟಿಮಾಡಲ್ಪಟ್ಟ, **ತಿಲೋತ್ತಮಾರ್ಥೇ** = ತಿಲೋತ್ತಮೆಯ ಸ್ವೀಕಾರಕ್ಕಾಗಿ, **ದೈತ್ಯೌ** = ಸುಂದ ಉಪಸುಂದ ಎಂಬ ದೈತ್ಯರು, **ಪರಸ್ಪರೇ** = ಅನೋನ್ಯವಾಗಿ, **ನಿಹತೌ** = ಗದೆಯಿಂದ ಹೊಡೆಯಲ್ಪಟ್ಟವರಾಗಿ ಮೃತರಾದರು.

**ತಾತ್ಪರ್ಯ** :- ಸುಂದ ಉಪಸುಂದ ಎಂಬ ಇಬ್ಬರು ರಾಕ್ಷಸರು ಬ್ರಹ್ಮದೇವರನ್ನು ಕುರಿತು ಅವಧ್ಯರಾಗಲು ತಪಸ್ಸು ಮಾಡಿದರು. ಬ್ರಹ್ಮದೇವರು ನೀವು ಬೇರೆಯವರಿಂದಲೂ ಸಾಯುವುದಿಲ್ಲ. ಆದರೆ ಪರಸ್ಪರ ಹೊಡೆದಾಗ ಮಾತ್ರ ಸಾಯುವಿರಿ ಎಂದು ವರವನ್ನು ನೀಡಿದ್ದಾರೆ. ಬ್ರಹ್ಮದೇವರು ಇವರ ಸಂಹಾರಕ್ಕಾಗಿ ತಿಲೋತ್ತಮೆ ಎಂಬ ಅಪ್ಸರೆಯನ್ನು ಸೃಷ್ಟಿಸಿದರು. ತಿಲೋತ್ತಮೆಯನ್ನು ನೋಡಿ ಇಬ್ಬರು ಮೋಹಿತರಾಗಿ ಪರಸ್ಪರ ಗದೆಯಿಂದ ಹೊಡೆದುಕೊಂಡು ಸತ್ತರು.

**ಅತಃ ಪೃಥಗ್ ವತ್ಸರತೋ ಭವತ್ಸು**
**ಕ್ರಮಾತ್ ಕೃಷ್ಣಾ ತಿಷ್ಠತಾಂ ಯೋಽನ್ಯಯುಕ್ತಾಮ್ ।**
**ಪಶ್ಯೇದ್ ವೋಽಸೌ ವತ್ಸರಂ ತೀರ್ಥಯಾತ್ರಾಂ**
**ಕುರ್ಯಾದಿತಿ ಸ್ಮಾಥ ಚಕ್ರುಸ್ತಥಾ ತೇ ॥ ೧೫೩ ॥**

ಪದಚ್ಛೇದ :- ಅತಃ, ಪೃಥಕ್, ವತ್ಸರತಃ, ಭವತ್ಸು, ಕ್ರಮಾತ್, ಕೃಷ್ಣಾ, ತಿಷ್ಠತಾಂ, ಯಃ, ಅನ್ಯಯುಕ್ತಾಮ್, ಪಶ್ಯೇತ್, ವಃ, ಅಸೌ, ವತ್ಸರಂ, ತೀರ್ಥಯಾತ್ರಾಂ, ಕುರ್ಯಾತ್, ಇತಿ, ಸ್ಮ, ಅಥ, ಚಕ್ರುಃ, ತಥಾ, ತೇ ।

**ಅರ್ಥ** :- **ಅತಃ** = ಆದ್ದರಿಂದ, **ಕೃಷ್ಣಾ** = ದ್ರೌಪದೀದೇವಿಯು, **ಭವತ್ಸು** = ನಿಮ್ಮಲ್ಲಿ, **ಪೃಥಕ್** = ಪ್ರತ್ಯೇಕವಾಗಿ (ಒಂದೊಂದು), **ವತ್ಸರತಃ** = ವರ್ಷದಿಂದ, **ಕ್ರಮಾತ್** = ಜ್ಯೇಷ್ಠ ಕ್ರಮದಿಂದ, **ತಿಷ್ಠತಾಂ** = ಇರಲಿ, **ವಃ** = ನಿಮ್ಮಲ್ಲಿ, **ಯಃ** = ಯಾವನು, **ಅನ್ಯಯುಕ್ತಾಂ** = ಇನ್ನೊಬ್ಬನಿಂದ ಕೂಡಿದ ದ್ರೌಪದಿಯನ್ನು (ಭೀಮನಿಂದ ಕೂಡಿದ ದ್ರೌಪದಿಯನ್ನು ಯುಧಿಷ್ಠಿರನು, ಯುಧಿಷ್ಠಿರನಿಂದ ಕೂಡಿದ ದ್ರೌಪದಿಯನ್ನು ಅರ್ಜುನನು), **ಪಶ್ಯೇತ್** = ನೋಡುವವನೊ, **ಅಸೌ** = ಅವನು, **ವತ್ಸರಂ** = ಒಂದು ವರ್ಷ, **ತೀರ್ಥಯಾತ್ರಾಂ** = ತೀರ್ಥಕ್ಷೇತ್ರ- ಯಾತ್ರೆಯನ್ನು, **ಕುರ್ಯಾತ್** = ಮಾಡಬೇಕು, **ಇತಿ** = ಎಂದು, **ಆಹ** = ಹೇಳಿದರು, **ಅಥ** = ಹೇಳಿದ ನಂತರ, **ತೇ** = ಆ ಪಾಂಡವರು, **ತಥಾ** = ಹಾಗೆ, **ಚಕ್ರುಃ ಸ್ಮ** = ಮಾಡಿದರಷ್ಟೆ.

**ತಾತ್ಪರ್ಯ** :- ದ್ರೌಪದೀದೇವಿಯೂ ಐದು ಮಂದಿಯಲ್ಲಿ ದೊಡ್ಡವರಿಂದ ಪ್ರಾರಂಭ ಮಾಡಿ ಒಬ್ಬರ ಬಳಿ ಒಂದು ವರ್ಷ ಕೂಡಿಕೊಂಡು ಇರಲಿ. ಆದರೆ ಈ ಪರ್ಯಾಯ ವ್ಯವಸ್ಥೆಯಲ್ಲಿ ಒಬ್ಬರಿಂದ ಕೂಡಿದಾಗ ಇನ್ನೊಬ್ಬರು ನೋಡಿದಲ್ಲಿ ಅವರು ಒಂದು ವರ್ಷದವರೆಗೆ ತೀರ್ಥಯಾತ್ರೆಯನ್ನು ಮಾಡಬೇಕು ಎಂದು ನಾರದರು ಹೇಳಿದರು. ಅವರು ಹೇಳಿದ ಹಾಗೆ ಪಾಂಡವರು ನಿಯಮ ಪರಿಪಾಲಿಸಿದರು. (ಸುಂದೋಪಸುಂದರಂತೆ ನಿಮ್ಮಲ್ಲಿ ಕಲಹ ಉಂಟಾಗಬಾರದು ಎಂಬ ದೃಷ್ಟಿಯಿಂದ.)

**ತತಃ ಕದಾಚಿದ್ ಧರ್ಮರಾಜೇನ ಯುಕ್ತಾಂ**
**ಶಸ್ತ್ರಾಗಾರೇ ವಿಪ್ರಗೋರಕ್ಷಣಾರ್ಥಮ್ ।**
**ಶಸ್ತ್ರಾದಿತ್ಸುಃ ಫಲ್ಗುನೋಽದ್ರಾಕ್ ಸ ಶಸ್ತ್ರೈ-**
**ರ್ದಸ್ಯೂನ್ ಹತ್ವಾ ತೀರ್ಥಯಾತ್ರೋನ್ಮುಖೋಽಭೂತ್ ॥ ೧೫೪ ॥**

ಪದಚ್ಛೇದ :- ತತಃ, ಕದಾಚಿತ್, ಧರ್ಮರಾಜೇನ, ಯುಕ್ತಾಂ, ಶಸ್ತ್ರಾಗಾರೇ, ವಿಪ್ರಗೋರಕ್ಷಣಾರ್ಥಮ್, ಶಸ್ತ್ರಾದಿತ್ಸುಃ, ಫಲ್ಗುನಃ, ಅದ್ರಾಕ್, ಸಃ, ಶಸ್ತ್ರೈಃ, ದಸ್ಯೂನ್, ಹತ್ವಾ, ತೀರ್ಥಯಾತ್ರೋನ್ಮುಖಃ, ಅಭೂತ್ ।

**ಅರ್ಥ** :- **ತತಃ** = ಈ ರೀತಿ ನಿಯಮವನ್ನು ಅಂಗೀಕರಿಸಿದ ನಂತರ, **ಕದಾಚಿತ್** = ಒಮ್ಮೆ, **ಶಸ್ತ್ರಾಗಾರೇ** = ಶಸ್ತ್ರಗಳಿರುವ ಮನೆಯಲ್ಲಿ, **ಧರ್ಮರಾಜೇನ**

= ಧರ್ಮರಾಜನಿಂದ, **ಯುಕ್ತಾಂ** = ಕೂಡಿದ ದ್ರೌಪದಿಯನ್ನು, **ವಿಪ್ರಗೋರಕ್ಷಣಾರ್ಥಮ್** = ಬ್ರಾಹ್ಮಣನ ಹಸುವನ್ನು ರಕ್ಷಿಸಲಿಕ್ಕೋಸ್ಕರ, **ಶಸ್ತ್ರಾದಿತ್ಸುಃ** = ಶಸ್ತ್ರಗಳನ್ನು ಸ್ವೀಕರಿಸುವ ಇಚ್ಛೆ ಉಳ್ಳವನಾಗಿ, **ಫಲ್ಗುನಃ** = ಅರ್ಜುನನು, **ಅದ್ರಾಕ್** = ನೋಡಿದನು, **ಸಃ** = ಆ ಅರ್ಜುನನು, **ಶಸ್ತ್ರೈಃ** = ಶಸ್ತ್ರಗಳಿಂದ, **ದಸ್ಯೂನ್** = ಕಳ್ಳರನ್ನು, **ಹತ್ವಾ** = ಕೊಂದು, **ತೀರ್ಥಯಾತ್ರೋ-ನ್ಮುಖಃ** = ತೀರ್ಥ ಯಾತ್ರೆಗೆ ಉದ್ಯುಕ್ತನಾಗಿ, **ಅಭೂತ್** = ಆದನು.

**ತಾತ್ಪರ್ಯ** :- ನಾರದರು ಹೇಳಿದ ನಿಯಮವನ್ನು ಪಾಲಿಸುತ್ತಿರುವಾಗ ಒಬ್ಬ ಬ್ರಾಹ್ಮಣನ ಹಸುಗಳನ್ನ ಕಳ್ಳರು ಅಪಹರಿಸಿದರು. ಆ ಬ್ರಾಹ್ಮಣನು ಪಾಂಡವರಲ್ಲಿ ಮೊರೆಯಿಟ್ಟಾಗ ಅರ್ಜುನ ರಕ್ಷಿಸುವೆನೆಂದು ಶಸ್ತ್ರಗಳನ್ನು ತೆಗೆದುಕೊಳ್ಳಲು ಹೋದ. ಆದರೆ ಆ ಸಮಯದಲ್ಲಿ ಧರ್ಮರಾಜನು ದ್ರೌಪದಿಯೊಂದಿಗೆ ಕೂಡಿದ್ದ. ಈ ವಿಷಯವನ್ನು ತಿಳಿದರೂ ಬ್ರಾಹ್ಮಣನ ಹಸುಗಳನ್ನು ರಕ್ಷಿಸಬೇಕೆಂಬ ಉದ್ದೇಶದಿಂದ ಶಸ್ತ್ರಾಗಾರಕ್ಕೆ ಪ್ರವೇಶವನ್ನು ಮಾಡಿ ಶಸ್ತ್ರಗಳಿಂದ ಕಳ್ಳರನ್ನು ಓಡಿಸಿ ಹಸುಗಳನ್ನು ರಕ್ಷಿಸಿದ. ಅನಂತರ ತನ್ನ ಪ್ರತಿಜ್ಞೆ ಭಂಗವಾಗಿದೆ ಎಂಬ ಉದ್ದೇಶದಿಂದ ತೀರ್ಥಕ್ಷೇತ್ರಯಾತ್ರೆಗೆ ಹೊರಡಲು ಸಿದ್ಧನಾದನು.

**ಯುಧಿಷ್ಠಿರಾದ್ಯೈಃ ಸೌಹೃದಾದ್ ವಾರಿತೋಽಪಿ**
**ಯಯೌ ಸತ್ಯಾರ್ಥಂ ಸ ಕದಾಚಿದ್ ದ್ಯುನದ್ಯಾಮ್ ।**
**ಕುರ್ವನ್ ಸ್ನಾನಂ ಮಾಯಯಾ ನಾಗವಧ್ವಾ**
**ಹೃತೋ ಲೋಕಂ ಭುಜಗಾನಾಂ ಕ್ಷಣೇನ ॥ ೧೫೫ ॥**

**ಪದಚ್ಛೇದ** :– ಯುಧಿಷ್ಠಿರಾದ್ಯೈಃ, ಸೌಹೃದಾದ್, ವಾರಿತಃ, ಅಪಿ, ಯಯೌ, ಸತ್ಯಾರ್ಥಂ, ಸಃ, ಕದಾಚಿತ್, ದ್ಯುನದ್ಯಾಮ್, ಕುರ್ವನ್, ಸ್ನಾನಂ, ಮಾಯಯಾ, ನಾಗವಧ್ವಾ, ಹೃತಃ, ಲೋಕಂ, ಭುಜಗಾನಾಂ, ಕ್ಷಣೇನ ।

**ಅರ್ಥ** :- **ಯುಧಿಷ್ಠಿರಾದ್ಯೈಃ** = ಧರ್ಮರಾಜಾದಿಗಳಿಂದ, **ಸೌಹೃದಾದ್** = ಸ್ನೇಹದಿಂದ, **ವಾರಿತಃ ಅಪಿ** = ತಡೆಯಲ್ಪಟ್ಟರು, **ಸತ್ಯಾರ್ಥಂ** = ತನ್ನ ಪ್ರತಿಜ್ಞೆಯ ಪಾಲನೆಗಾಗಿ, **ಯಯೌ** = ತೀರ್ಥಕ್ಷೇತ್ರವನ್ನು ಸಂಚರಿಸಲು ಹೋದನು, **ಸಃ** = ಆ ಅರ್ಜುನನು, **ಕದಾಚಿದ್** = ಒಮ್ಮೆ, **ದ್ಯುನದ್ಯಾಮ್** =

ಗಂಗಾನದಿಯಲ್ಲಿ, **ಸ್ನಾನಂ ಕುರ್ವನ್** = ಸ್ನಾನವನ್ನು ಮಾಡುತ್ತ, **ನಾಗವಧ್ವಾ** = ನಾಗಕನ್ಯೆಯಿಂದ, **ಮಾಯಯಾ** = ಮಾಯೆಯಿಂದ, **ಭುಜಗಾನಾಂ** = ಸರ್ಪಗಳ, **ಲೋಕಂ** = ಲೋಕವನ್ನು, **ಕ್ಷಣೇನ** = ಒಂದು ಕ್ಷಣದಿಂದ, **ಹೃತಃ** = ಅಪಹರಿಸಲ್ಪಟ್ಟನು.

**ತಾತ್ಪರ್ಯ** :- ಧರ್ಮರಾಜಾದಿಗಳು ತಮ್ಮನ ಮೇಲಿನ ಪ್ರೀತಿಯಿಂದ ಎಷ್ಟು ತಡೆದರೂ ಅವನು ಕೇಳದೆ ತಾನು ಮಾಡಿದ ಪ್ರತಿಜ್ಞೆಯನ್ನು ಪಾಲಿಸಲು ತೀರ್ಥಕ್ಷೇತ್ರಯಾತ್ರೆಗೆ ಹೊರಟಿದ್ದಾನೆ. ಒಮ್ಮೆ ಗಂಗಾನದಿಯಲ್ಲಿ ಸ್ನಾನ ಮಾಡುವಾಗ ನಾಗಕನ್ಯೆಯು ಒಂದೇ ಕ್ಷಣದಲ್ಲಿ ಅರ್ಜುನನನ್ನು ನಾಗಗಳ ಲೋಕಕ್ಕೆ ಎಳೆದುಕೊಂಡು ಹೋಗಿದ್ದಾಳೆ.

**ತಸ್ಯಾಃ ಪಿತಾ ಗರುಡೇನಾಽತ್ತಪತ್ಯುಃ**
**ಪುತ್ರಾಕಾಂಕ್ಷೀ ಚೋದಯಾಮಾಸ ಪಾರ್ಥಮ್ ।**
**ಸಂವತ್ಸರಬ್ರಹ್ಮಚರ್ಯೇ ತು ಪಾರ್ಥೈಃ**
**ಕೃಷ್ಣಾಹೇತೋಃ ಸಮಯೇ ಸಾಧು ಬದ್ಧಮ್ ॥ ೧೫೭ ॥**

**ಪದಚ್ಛೇದ** :- ತಸ್ಯಾಃ, ಪಿತಾ, ಗರುಡೇನ, ಆತ್ತಪತ್ಯುಃ, ಪುತ್ರಾಕಾಂಕ್ಷಿ, ಚೋದಯಾಮಾಸ, ಪಾರ್ಥಮ್, ಸಂವತ್ಸರಬ್ರಹ್ಮಚರ್ಯೇ, ತು, ಪಾರ್ಥೈಃ, ಕೃಷ್ಣಾಹೇತೋಃ, ಸಮಯೇ, ಸಾಧು, ಬದ್ಧಮ್ ।

**ಅರ್ಥ** :- **ತಸ್ಯಾಃ** = ಆ ನಾಗಕನ್ಯೆಯ, **ಪಿತಾ** = ತಂದೆಯು, **ಗರುಡೇನ** = ಗರುಡನಿಂದ, **ಆತ್ತಪತ್ಯುಃ** = ಪತಿಯನ್ನು ನುಂಗಿರುವ ತನ್ನ ಮಗಳಿಗೆ, **ಪುತ್ರಾಕಾಂಕ್ಷೀ** = ಮಕ್ಕಳನ್ನು ಬಯಸಿದವನಾಗಿ, **ಕೃಷ್ಣಾಹೇತೋಃ** = ದ್ರೌಪದಿ-ಗೋಸ್ಕರ, **ಪಾರ್ಥೈಃ** = ಪಾಂಡವರಿಂದ, **ಸಂವತ್ಸರ ಬ್ರಹ್ಮಚರ್ಯೆ** = ಒಂದು ವರ್ಷ ಬ್ರಹ್ಮಚರ್ಯ ವ್ರತದಲ್ಲಿ, **ಸಮಯೇ** = ತೀರ್ಥಯಾತ್ರೆಯನ್ನು ಮಾಡುವೆನು ಎಂಬ ನಿಯಮದಿಂದ, **ಸಾಧು** = ಚೆನ್ನಾಗಿ, **ಬದ್ಧಂ** = ಬಂಧಿಸಲ್ಪಟ್ಟ, **ಪಾರ್ಥಮ್** = ಅರ್ಜುನನನ್ನು, **ಚೋದಯಾಮಾಸ** = ಪ್ರಾರ್ಥಿಸಿದನು.

**ತಾತ್ಪರ್ಯ** :- ಆ ನಾಗಕನ್ಯೆಯ ಪತಿಯನ್ನು ಗರುಡನು ತಿಂದಿದ್ದ. ಆದ್ದರಿಂದ ಅವಳ ತಂದೆ ಅವಳಲ್ಲಿ ಅರ್ಜುನನನ್ನು ಒಂದು ಪುತ್ರಸಂತಾನವನ್ನು

ಅನುಗ್ರಹಿಸು ಎಂದು ಅಂಗಲಾಚಿ ಬೇಡಿದ. ಅರ್ಜುನನು ಹೇಳಿದ ನಾನು ಅಕಾಲದಲ್ಲಿ ದ್ರೌಪದಿಯನ್ನು ನೋಡಿರುವ ಕಾರಣದಿಂದ ಒಂದು ವರ್ಷ ಬ್ರಹ್ಮಚರ್ಯದಲ್ಲಿ ಇದ್ದೇನೆ ಎಂದು. ಆದ್ದರಿಂದ ನನ್ನಿಂದ ಪುತ್ರೋತ್ಪಾದನೆಯಾಗಲು ಸಾಧ್ಯವಿಲ್ಲ.

**ಪುನಃಪುನರ್ಯಾಚ್ಯಮಾನಃ ಸ ಪಾರ್ಥಃ**
**ಪುತ್ರಾರ್ಥಮಸ್ಯಾ ಭುಜಗೇನ ತಸ್ಯಾಮ್ ।**
**ಉತ್ಪಾದಯಾಮಾಸ ಸುತಂ ಕುಜಾಂಶಂ**
**ನಾಮ್ನೇರಾವಂತಂ ವರುಣಾವೇಶಯುಕ್ತಮ್ ।। ೧೫೭ ।।**

**ಪದಚ್ಛೇದ :– ಪುನಃಪುನಃ, ಯಾಚ್ಯಮಾನಃ, ಸಃ, ಪಾರ್ಥಃ, ಪುತ್ರಾರ್ಥಮ್, ಅಸ್ಯಾಃ, ಭುಜಗೇನ, ತಸ್ಯಾಮ್, ಉತ್ಪಾದಯಾಮಾಸ್ತ, ಸುತಮ್, ಕುಜಾಂಶಂ, ನಾಮ್ನಾ, ಇರಾವಂತಂ, ವರೂಣಾವೇಶಯುಕ್ತಮ್ ।**

**ಅರ್ಥ :-** **ಪುನಃ ಪುನಃ** = ಮತ್ತೆ ಮತ್ತೆ, **ಭುಜಗೇನ** = ನಾಗಕನ್ಯೆಯ ತಂದೆಯಿಂದ, **ಅಸ್ಯಾಃ** = ತನ್ನ ಮಗಳಿಗೆ, **ಪುತ್ರಾರ್ಥವ್** = ಪುತ್ರೋತ್ಪಾದನೆಗಾಗಿ, **ಯಾಚ್ಯಮಾನಃ** = ಬೇಡಲ್ಪಟ್ಟ, **ಸಃ** = ಆ, **ಪಾರ್ಥಃ** = ಅರ್ಜುನನು, **ತಸ್ಯಾಂ** = ಉಲೂಪಿಯಲ್ಲಿ, **ಕುಜಾಂಶಂ** = ಕುಜನ (ಮಂಗಳ) ಅಂಶವುಳ್ಳ, **ವರೂಣಾವೇಶಯುಕ್ತಮ್** = ವರುಣನ ಆವೇಶದಿಂದ ಕೂಡಿದ, **ನಾಮ್ನಾ ಇರಾವಂತಂ** = ಇರಾವಾನ್ ಎಂಬ ಹೆಸರುಳ್ಳ, **ಸುತಂ** = ಮಗನನ್ನು, **ಉತ್ಪಾದಯಾಮಾಸ** = ಹುಟ್ಟಿಸಿದನು.

**ತಾತ್ಪರ್ಯ :-** ನಾಗಕನ್ಯೆಯ ತಂದೆಯು ಬಹುಬಾರಿ ಪುತ್ರಸಂತಾನಕ್ಕೆಂದು ಬೇಡಿದಾಗ ಅರ್ಜುನನು ಉಲೂಪಿಯಲ್ಲಿ ಕುಜನ ಅಂಶದಿಂದ ಕೂಡಿದ ವರುಣನ ಆವೇಶದಿಂದ ಕೂಡಿದ ಇರಾವಾನ್ ಎಂಬ ಮಗನನ್ನು ಹುಟ್ಟಿಸಿದ.

**ಗುಣಾಃ ಪಿತುರ್ಮಾತೃಜಾತಿಃ ಸುತಾನಾಂ**
**ಯಸ್ಮಾತ್ ಸತಾಂ ಪ್ರಾಯಶಸ್ತೇನ ನಾಗಃ ।**
**ಬಲೀ ಚ ಪಾರ್ಥಪ್ರಥಮೋದ್ಭವತ್ವಾತ್**
**ಮಾಯಾವಿದಸ್ತ್ರೀ ಚ ಸುಧಾರ್ಮಿಕಶ್ಚ ।। ೧೫೮ ।।**

ಪದಚ್ಛೇದ :- ಗುಣಾಃ, ಪಿತುಃ, ಮಾತೃಜಾತಿಃ, ಸುತಾನಾಂ, ಯಸ್ಮಾತ್, ಸತಾಂ, ಪ್ರಾಯಶಃ, ತೇನ, ನಾಗಃ, ಬಲೀ, ಚ, ಪಾರ್ಥಪ್ರಥಮೋದ್ಭವತ್ವಾತ್, ಮಾಯಾವಿದ್, ಅಸ್ತ್ರೀ, ಚ, ಸುಧರ್ಮಿಕಃ, ಚ ।

**ಅರ್ಥ** :- **ಯಸ್ಮಾತ್** = ಯಾವ ಕಾರಣದಿಂದ, **ಪ್ರಾಯಶಃ** = ಹೆಚ್ಚಾಗಿ, **ಸತಾಂ** = ಸಜ್ಜನರ, **ಸುತಾನಾಂ** = ಮಕ್ಕಳಿಗೆ, **ಪಿತುಃ** = ತಂದೆಯ, **ಗುಣಾ** = ಗುಣಗಳು, **ಮಾತೃಜಾತಿ** = ತಾಯಿಯ ಜಾತಿಯು, (**ಭವಂತಿ** = ಆಗುತ್ತವೆ), **ತೇನ** = ಆ ಕಾರಣದಿಂದ, **ನಾಗಃ** = ಇರಾವಾನ್ ಎಂಬ ಹೆಸರುಳ್ಳ ನಾಗನು, **ಪಾರ್ಥಪ್ರಥಮೋದ್ಭತ್ವಾತ್** = ಅರ್ಜುನನ ಮೊದಲ ಮಗನಾದ್ದರಿಂದ, **ಬಲೀ** = ಬಲಶಾಲಿಯೂ, **ಚ** = ಮತ್ತು, **ಮಾಯಾವಿದ್** = ಮಾಯಾವಿಯೂ, **ಅಸ್ತ್ರೀ** = ಅಸ್ತ್ರವಿದ್ಯಾಪಾರಂಗತನು, **ಚ** = ಮತ್ತು, **ಸುಧರ್ಮಿಕಃ** = ಒಳ್ಳೆ ಧರ್ಮಿಷ್ಠನೂ ಆದನು.

**ತಾತ್ಪರ್ಯ** :- ಪ್ರಾಯಶಃ ಸಜ್ಜನರ ಮಕ್ಕಳಲ್ಲಿ ತಾಯಿಯ ಜಾತಿಯು ತಂದೆಯ ಗುಣಗಳು ಬರುತ್ತವೆ. ಆದ್ದರಿಂದ ಇರಾವಾನ್ ಎಂಬುವವನು ತಾಯಿಯಂತೆ ನಾಗನಾಗಿಯೇ ಹುಟ್ಟಿದ. ಮತ್ತೆ ಅರ್ಜುನನ ಮೊದಲನೆ ಮಗನಾದ್ದರಿಂದ ಅರ್ಜುನನಂತೆ ಅತ್ಯಂತ ಬಲಿಷ್ಠನು ಅಸ್ತ್ರವಿದ್ಯೆಯಲ್ಲಿ ನಿಪುಣನು, ಮಾಯಾವಿದ್ಯೆಯಲ್ಲಿ ಚತುರನು, ಉತ್ತಮ ಧಾರ್ಮಿಕನೂ ಆದನು.

**ತತೋ ಯಯಾವರ್ಜುನಸ್ತೀರ್ಥಯಾತ್ರಾ-**
**ಕ್ರಮೇಣ ಪಾಂಡ್ಯಾಂನ್ ತನಯೋಽಸ್ಯ ಮಾತ್ರಾ ।**
**ಸಹ ತ್ಯಕ್ತೋ ಭುಜಗೈರ್ದೇವಲೋಕೇ**
**ಸಂಪೂಜಿತೋ ನ್ಯವಸದ್ ದೈವತೈಶ್ಚ ॥ ೧೫ ॥**

ಪದಚ್ಛೇದ :- ತತಃ, ಯಯೌ, ಅರ್ಜುನಃ, ತೀರ್ಥಯಾತ್ರಾಕ್ರಮೇಣ, ಪಾಂಡ್ಯಾನ್, ತನಯಃ, ಅಸ್ಯ, ಮಾತ್ರಾ ಸಹ, ತ್ಯಕ್ತಃ, ಭುಜಗೈಃ, ದೇವಲೋಕೇ, ಸಂಪೂಜಿತಃ, ನ್ಯವಸದ್, ದೈವತೈಃ, ಚ ।

**ಅರ್ಥ** :- **ತತಃ** = ಅನಂತರ, **ಅರ್ಜುನಃ** = ಅರ್ಜುನನು, **ತೀರ್ಥಯಾತ್ರಾಕ್ರಮೇಣ** = ತೀರ್ಥಯಾತ್ರೆಯ ಕ್ರಮದಿಂದ, **ಪಾಂಡ್ಯಾನ್** =

ಪಾಂಡ್ಯದೇಶಕ್ಕೆ, **ಯಯೌ** = ಹೋದನು, **ಅಸ್ಯ** = ಅರ್ಜುನನ, **ತನಯಃ** = ಮಗನು, **ಮಾತ್ರಾ ಸಹ** = ತಾಯಿಯ ಜೊತೆಗೆ, **ಭುಜಗೈಃ** = ನಾಗಗಳಿಂದ, **ತ್ಯಕ್ತಃ** = ಬಹಿಷ್ಕರಿಸಲ್ಪಟ್ಟನು, **ದೈವತೈಃ ಚ** = ದೇವತೆಗಳಿಂದಲಾದರೂ, **ಸಂಪೂಜಿತಃ** = ಪೂಜಿಸಲ್ಪಟ್ಟವನಾಗಿ, **ದೇವಲೋಕೇ** = ದೇವಲೋಕದಲ್ಲಿ, **ನ್ಯವಸತ್** = ವಾಸವನ್ನು ಮಾಡಿದನು.

**ತಾತ್ಪರ್ಯ** :- ಬಳಿಕ ಅರ್ಜುನನು ತೀರ್ಥಯಾತ್ರೆಯ ಕ್ರಮವಾಗಿ ಪಾಂಡ್ಯದೇಶವನ್ನು ಕುರಿತುಹೋದ. ನಾಗಲೊಕದಲ್ಲಿ ಇರಾವಾನ್ ವಿಧವೆಯಲ್ಲಿ ಹುಟ್ಟಿದ್ದರಿಂದ ಬಹಿಷ್ಕೃತನಾದ ಮತ್ತೆ ಅವಳ ತಾಯಿಯಾದ ಉಲೂಪಿಯು ವಿಧವೆಯಾಗಿ ಅಕೃತ್ಯವನ್ನು ಮಾಡಿದ್ದರಿಂದ ಬಹಿಷ್ಕಾರವನ್ನು ಹಾಕಿದ್ದಾರೆ. ಆದರೆ ದೇವಲೋಕದಲ್ಲಿ ದೇವೇಂದ್ರನ ಮಗನಾದ ಅರ್ಜುನನ ಮಗನಾದ್ದರಿಂದ ದೇವತೆಗಳು ಸತ್ಕರಿಸಿದರು. ಇಬ್ಬರು ಅಲ್ಲಿಯೆ ವಾಸ ಮಾಡಿದರು.

**ಸತ್ಯಾತ್ಯಯಾನ್ನೈವ ದೋಷೋಽರ್ಜುನಸ್ಯ**
**ತೇಜೀಯಸಶ್ಚಿಂತನೀಯಃ ಕಥಂಚಿತ್ ।**
**ಶ್ರೇಷ್ಠಾಪರಾಧಾನ್ನಾನ್ಯದೋಷಸ್ಯ ಲೇಪಃ**
**ತೇಜೀಯಸಾಂ ನಿರ್ಣಯೋಽಯಂ ಹಿ ಶಾಸ್ತ್ರೇ ॥ ೧೬೦ ॥**

ಪದಚ್ಛೇದ :- **ಸತ್ಯಾತ್ಯಯಾತ್, ನ, ಏವ, ದೋಷಃ, ಅರ್ಜುನಸ್ಯ, ತೇಜೀಯಸಃ, ಚಿಂತನೀಯಃ, ಕಥಂಚಿದ್ವತ್, ಶ್ರೇಷ್ಠಾಪರಾಧಾತ್, ನ, ಅನ್ಯದೋಷಸ್ಯ, ಲೇಪಃ, ತೇಜೀಯಸಾಂ, ನಿರ್ಣಯಃ, ಅಯಂ, ಹಿ, ಶಾಸ್ತ್ರೇ ।**

**ಅರ್ಥ** :- **ತೆಜೀಯಸಃ** = ಮಹಾಜ್ಞಾನಿಯಾದ, **ಅರ್ಜುನಸ್ಯ** = ಅರ್ಜುನನಿಗೆ, **ಸತ್ಯಾತ್ಯಯಾತ್** = ತಾನು ಮಾಡಿದ ಪ್ರತಿಜ್ಞೆ ಭಂಗದಿಂದ, **ದೋಷಃ** = ದೊಷವು, **ಕಥಂಚಿತ್** = ಸರ್ವಥಾ, **ನೈವ ಚಿಂತನೀಯಃ** = ಚಿಂತನೆ ಮಾಡಬಾರದು, **ಹಿ** = ಯಾವ ಕಾರಣದಿಂದ, **ತೇಜೀಯಸಾಂ** = ಜ್ಞಾನಿಗಳಿಗೆ, **ಶ್ರೇಷ್ಠಾಪರಾಧಾತ್** = ಸ್ವೋತ್ತಮಾಪರಾಧಕ್ಕಿಂತ, **ಅನ್ಯದೋಷಸ್ಯ** = ಬೇರೆ ಪಾಪಗಳ, **ಲೇಪಃ** = ಲೋಪವು, **ನ** = ಆಗುವುದಿಲ್ಲ, **ಅಯಂ ಹಿ** = ಇದೇ, **ಶಾಸ್ತ್ರೇ** = ಶಾಸ್ತ್ರಗಳಲ್ಲಿ ಇರುವ, **ನಿರ್ಣಯಃ** = ಸಿದ್ಧಾಂತವು.

ತಾತ್ಪರ್ಯ :- ಮಹಾಜ್ಞಾನಿಯಾದ ಅರ್ಜುನನು ತನ್ನ ಪ್ರತಿಜ್ಞೆ ಮೀರಿರಬಹುದು. ಆದರೆ ಪ್ರತಿಜ್ಞಾಭಂಗದಿಂದ ಯಾವುದೇ ಪಾಪವು ಉಂಟಾಗುತ್ತದೆ ಎಂದು ಚಿಂತಿಸಬಾರದು ಏಕೆಂದರೆ ಮಹಾಜ್ಞಾನಿಗಳಿಗೆ ಸ್ವೋತ್ತಮಾಪರಾಧಕ್ಕಿಂತ ಬೇರೆ ಯಾವ ದೋಷಗಳೂ ಅಂಟುವುದಿಲ್ಲ ಎಂದೇ ಶಾಸ್ತ್ರಕಾರರ ನಿರ್ಣಯ.

ಅಪರೋಕ್ಷ ಜ್ಞಾನೋತ್ತರ ಕಾಲದಲ್ಲಿ ಜ್ಞಾನಕ್ಕಿಂತ ಪೂರ್ವಕಾಲದಲ್ಲಿ ಮಾಡುವ ಎಲ್ಲ ಪಾಪಗಳು ಲೇಪವಾಗುವುದು ಇದನ್ನೇ ''ತದಧಿಗಮೇ ಉತ್ತರಪೂರ್ವಾಘಯೋಃ ಅಶ್ಲೇಷ ವಿನಾಶಾ'' ಎಂಬ ಸೂತ್ರದಲ್ಲಿ ಹೇಳಿದೆ. ಆದ್ದರಿಂದ ಅರ್ಜುನನು ಉಲೂಪಿಯಲ್ಲಿ ಪುತ್ರೋತ್ಪಾದನೆ ಮಾಡಿದ್ದು ದೋಷವಲ್ಲ.

ಇಲ್ಲಿ ಒಂದು ಪ್ರಶ್ನೆ ಬರಬಹುದು ಅಶ್ವತ್ಥಾಮಾಚಾರ್ಯರು ಭಾನುಮತಿ-ಯಲ್ಲಿ ಪುತ್ರೋತ್ಪಾದನೆಗೆ ಸಂಕಲ್ಪವನ್ನು ಗೈದರು ತತ್‌ಕ್ಷಣದಲ್ಲಿಯೆ ಬ್ರಹ್ಮಚರ್ಯ- ವನ್ನು ಕಳೆದುಕೊಂಡರು. ಆದರೆ ಅರ್ಜುನನು ಉಲೂಪಿಯಲ್ಲಿ ಮಕ್ಕಳನ್ನು ಹುಟ್ಟಿಸಿದರು ಯಾವ ದೋಷ ಅಂಟಲಿಲ್ಲ ಇದು ಹೇಗೆ.

ಇಲ್ಲಿ ಹೀಗೆ ಸಮಾಧಾನವನ್ನು ಹೇಳಬಹುದು. ಕೇವಲ ಭಾನುಮತಿಯಲ್ಲಿ ಪುತ್ರೋತ್ಪಾದನೆಯ ಸಂಕಲ್ಪದಿಂದ ಅಶ್ವತ್ಥಾಮರಿಗೆ ದೊಷ ಬರಲಿಲ್ಲ ಆದರ ಹಿನ್ನಲೆಯಲ್ಲಿರುವ ಅಪಾಂಡವ ಪೃಥಿವಿಯನ್ನು ಮಾಡಬೇಕೆಂಬ ಸಂಕಲ್ಪವಿತ್ತು. ಆದ್ದರಿಂದ ದೋಷವಾಯಿತು ಅರ್ಜುನನಲ್ಲಿ ಇಂತಹ ಯಾವುದೆ ದುಷ್ಟ ಸಂಕಲ್ಪ ಇರಲಿಲ್ಲ.

**ಅತಿಸ್ನೇಹಾಚ್ಚಾಗ್ರಜಾಭ್ಯಾಂ ತದಸ್ಯ**
**ಕ್ಷಾಂತಂ ಸುತಾ ಪಾಂಡ್ಯರಾಜೇನ ದತ್ತಾ ।**
**ಸಂವತ್ಸರಾಂತೇ ಫಲ್ಗುನಸ್ಯಾನುರೂಪಾ**
**ಚಿತ್ರಾಂಗದಾ ವೀರಸೇನೇನ ತೋಷಾತ್ ॥ ೧೬೦ ॥**

ಪದಚ್ಛೇದ :– ಅತಿಸ್ನೇಹಾತ್, ಚ, ಅಗ್ರಜಾಭ್ಯಾಂ, ತದ್, ಅಸ್ಯ, ಕ್ಷಾಂತಂ, ಸುತಾ, ಪಾಂಡ್ಯರಾಜೇನ, ದತ್ತಾ, ಸಂವತ್ಸರಾಂತೇ, ಫಲ್ಗುನಸ್ಯ, ಅನುರೂಪಾ, ಚಿತ್ರಾಂಗದಾ, ವೀರಸೇನನ, ತೋಷಾತ್ ।

**ಅರ್ಥ :-** **ಅಸ್ಯ** = ಆ ಅರ್ಜುನನ, **ತತ್** = ಆ ಬ್ರಹ್ಮಚರ್ಯವನ್ನು ಮೀರಿರುವುದು, **ಅಗ್ರಜಾಭ್ಯಾಂ** = ಯುಧಿಷ್ಠಿರ ಮತ್ತು ಭೀಮಸೇನರಿಂದ, **ಅತಿಸ್ನೇಹಾತ್** = ಅರ್ಜುನನ ಮೇಲಿನ ಅತಿಯಾದ ಪ್ರೀತಿಯಿಂದ, **ಕ್ಷಾಂತಂ** = ಕ್ಷಮಿಸಲ್ಪಟ್ಟಿತು, **ಸಂವತ್ಸರಾಂತೇ** = ಒಂದು ವರ್ಷದ ನಂತರ, **ಪಾಂಡ್ಯರಾಜೇನ** = ಪಾಂಡ್ಯದೇಶದ ಅರಸನಾದ, **ವೀರಸೇನೇನ** = ವೀರಸೇನನೆಂಬ ರಾಜನಿಂದ, **ಫಲ್ಗುನಸ್ಯ** = ಅರ್ಜುನನಿಗೆ, **ಅನುರೂಪಾ** = ಯೋಗ್ಯಳಾದ, **ಚಿತ್ರಾಂಗದಾ** = ಚಿತ್ರಾಂಗದೆ ಎಂಬ ಮಗಳು, **ತೋಷಾತ್** = ಸಂತೋಷದಿಂದ, **ದತ್ತಾ** = ಕೊಡಲ್ಪಟ್ಟಳು.

**ತಾತ್ಪರ್ಯ :-** ಅರ್ಜುನನ ಅಣ್ಣಂದಿರಾದ ಧರ್ಮರಾಜ ಭೀಮಸೇನಾದಿ- ಗಳು ತಮ್ಮನ ಮೇಲೆ ಅತಿಯಾದ ಪ್ರೀತಿಯಿಂದ ಅವನು ಮಾಡಿದ ಅಪರಾಧವನ್ನು ಕ್ಷಮಿಸಿದರು. ಒಂದು ವರ್ಷ ಬ್ರಹ್ಮಚರ್ಯವನ್ನು ಆಚರಿಸಿದ ನಂತರ ಪಾಂಡ್ಯದೇಶದ ಅರಸ ವೀರಸೇನ ಅರ್ಜುನನಿಗೆ ಸದೃಶಳಾದ ಚಿತ್ರಾಂಗದೆಯನ್ನು ವಿವಾಹ ಮಾಡಿಕೊಟ್ಟಿದ್ದಾನೆ.

**ಸ ವೀರಸೇನಸ್ತ್ವಷ್ಟುರಂಶೋ ಯಮಸ್ಯಾ-**
**ಪ್ಯಾವೇಶಯುಕ್ ಸಾ ಚ ಕನ್ಯಾ ಶಚೀ ಹಿ ।**
**ತಾರಾದೇಹೇ ಸೂರ್ಯಜಸ್ಯಾಂಗಸಂಗಾತ್**
**ಸ್ವರ್ಗಂ ನಾಗಾದಂತರಿಕ್ಷಾದಿಹಾऽಸೀತ್ ॥ ೧೬೨ ॥**

**ಪದಚ್ಛೇದ :–** ಸಃ, ವೀರಸೇನಃ, ತ್ವಷ್ಟುಃ, ಅಂಶಃ, ಯಮಸ್ಯ, ಅಪಿ, ಆವೇಶಯುಕ್, ಸಾ, ಚ, ಕನ್ಯಾ, ಶಚೀ, ಹಿ, ತಾರಾದೇಹೇ, ಸೂರ್ಯಜಸ್ಯ, ಅಂಗಸಂಗಾತ್, ಸ್ವರ್ಗಂ, ನ, ಆಗಾತ್, ಅಂತರಿಕ್ಷಾತ್, ಇಹ, ಆಸೀತ್ ।

**ಅರ್ಥ :-** **ಸಃ** = ಆ, **ವೀರಸೇನಃ** = ವೀರಸೇನನು, **ತ್ವಷ್ಟುಃ** = ತ್ವಷ್ಟೃ ನಾಮಕ ಸೂರ್ಯನ, **ಅಂಶಃ** = ಅಂಶ, **ಯಮಸ್ಯ** = ಯಮದೇವರ, **ಆವೇಶಯುಕ್** = ಆವೇಶಉಳ್ಳವನು, **ಸಾ ಚ ಕನ್ಯಾ** = ಆ ವೀರಸೇನನ ಮಗಳಾದ ಚಿತ್ರಾಂಗದೆಯಾದರು, **ಶಚೀ** = ಶಚೀದೇವಿಯು, **ತಾರಾದೇಹೇ** = ತಾರೆಯ ಶರೀರದಲ್ಲಿ, **ಸೂರ್ಯಜಸ್ಯ** = ಸೂರ್ಯನ ಮಗನಾದ ಸುಗ್ರೀವನ, **ಅಂಗಸಂಗಾತ್** = ಅಂಗಸಂಗ ಮಾಡಿದ್ದರಿಂದ, **ಸ್ವರ್ಗಂ** =

ಸ್ವರ್ಗವನ್ನು, ನ ಅಗಾತ್ = ಹೋಗಲಿಲ್ಲ, ಅಂತರಿಕ್ಷಾತ್ = ಅಂತರಿಕ್ಷ ಲೋಕದಿಂದಲೆ, ಇಹ = ಈ ಭೂಮಿಯಲ್ಲಿ, ಆಸೀತ್ = ಹುಟ್ಟಿದಳು.

ತಾತ್ಪರ್ಯ :- ವೀರಸೇನನು ತ್ವಷ್ಟೃ ಎಂಬ ಸೂರ್ಯನ ಅಂಶ ಯಮನ ಆವೇಶ ಉಳ್ಳವನು. ಆವನ ಮಗಳಾದ ಚಿತ್ರಾಂಗದೆಯು ಶಚೀದೇವಿಯು, ಶಚೀಯು ತಾರೆಯಾದಾಗ ಸುಗ್ರೀವನ ಅಂಗಸಂಗವನ್ನು ಮಾಡಿದ ಅಪರಾಧದಿಂದ ಸ್ವರ್ಗವನ್ನು ಹೋಗದೆ ಅಂತರಿಕ್ಷದಿಂದಲೇ ಭೂಮಿಗೆ ಇಳಿದು ಬಂದಿದ್ದಾಳೆ.

ತೇನೈವ ಹೇತೋರ್ನಾತಿಸಾಮೀಪ್ಯಮಾಸೀತ್
ತಸ್ಯಾಃ ಪಾರ್ಥೇ ಪುತ್ರಿಕಾಪುತ್ರಧರ್ಮಾತ್ ।
ತಸ್ಯಾಂ ಜಾತೋ ಬಭ್ರುವಾಹೋಽರ್ಜುನೇನ
ಪೂರ್ವಂ ಜಯಂತಃ ಕಾಮದೇವಾಂಶಯುಕ್ತಃ ॥ ೧೬೩ ॥

ಪದಚ್ಛೇದ :– ತೇನ, ಏವ, ಹೇತೋಃ, ನ, ಅತಿಸಾಮೀಪ್ಯಂ, ಆಸೀತ್, ತಸ್ಯಾಃ, ಪಾರ್ಥೇ, ಪುತ್ರಿಕಾಪುತ್ರಧರ್ಮಾತ್, ತಸ್ಯಾಂ, ಜಾತಃ, ಬಭ್ರುವಾಹಃ, ಅರ್ಜುನೇನ, ಪೂರ್ವಂ, ಜಯಂತಃ, ಕಾಮದೇವಾಂಶಯುಕ್ತಃ ।

ಅರ್ಥ :- ತೇನೈವ ಹೇತೋಃ = ಸುಗ್ರೀವನ ಅಂಗಸಂಗದ ದೋಷದಿಂದ, ತಸ್ಯಾಃ = ಆ ಚಿತ್ರಾಂಗದೆಗೆ, ಪಾರ್ಥೇ = ಅರ್ಜುನನಲ್ಲಿ, ಅತಿಸಾಮೀಪ್ಯಂ = ಒಡನಾಟವು, ನ ಆಸೀತ್ = ಇರಲಿಲ್ಲ, ತಸ್ಯಾಂ = ಅವಳಲ್ಲಿ, ಅರ್ಜುನೇನ = ಅರ್ಜುನನಿಂದ, ಪುತ್ರಿಕಾಪುತ್ರಧರ್ಮಾತ್ = ಪುತ್ರಿಕಾಪುತ್ರ ಧರ್ಮದಿಂದ, ಬಭ್ರುವಾಹಃ = ಬಭ್ರುವಾಹನು, ಪೂರ್ವಂ = ಹಿಂದೆ, ಜಯಂತಃ = ಜಯಂತನು, ಕಾಮದೇವಾಶಯುಕ್ತಃ = ಮನ್ಮಥನ ಅಂಶದಿಂದ ಕೂಡಿದವನಾಗಿ, ಜಾತಃ = ಹುಟ್ಟಿದನು.

ತಾತ್ಪರ್ಯ :- ಶಚಿಯು ತಾರೆಯಾಗಿದ್ದಾಗ ಸುಗ್ರೀವನ ಸಂಗ ಮಾಡಿರುವುದರಿಂದಲೇ ಅರ್ಜುನ ಚಿತ್ರಾಂಗದೆಯ ಜೊತೆ ಬಹುದಿನ ಸಂಬಂಧ ಇರಲಿಲ್ಲ. ಕೇವಲ ಮೂರು ತಿಂಗಳು ಮಾತ್ರ ಅವಳೊಂದಿಗೆ ಇದ್ದ. ಅವಳಲ್ಲಿ ಮನ್ಮಥನ ಆವೇಶದಿಂದ ಕೂಡಿದ ಜಯಂತನು ಬಭ್ರುವಾಹನ ಎಂಬ

ಹೆಸರಿನಿಂದ ಹುಟ್ಟಿದನು. ಆದರೆ ಅವನು ಪುತ್ರಿಕಾಪುತ್ರ ಧರ್ಮದಿಂದ ಪಾಂಡ್ಯದೇಶಕ್ಕೆ ಸೇರಿದವನಾದನು.

**ಪುತ್ರಂ ವೀರಂ ಜನಯಿತ್ವಾಽರ್ಜುನೋಽತೋ**
**ಗಚ್ಛನ್ ಪ್ರಭಾಸಂ ಶಾಪತೋ ಗ್ರಾಹದೇಹಾಃ ।**
**ಅಮೂಮುಚಚ್ಚಾಪ್ಸರಸಃ ಸ ಪಂಚ**
**ತಾಭಿರ್ಗೃಹೀತಃ ಪ್ರವಿಕೃಷ್ಯ ತೀರಮ್ ॥ ೧೬೪ ॥**

**ಪದಚ್ಛೇದ :-** ಪುತ್ರಂ, ವೀರಂ, ಜನಯಿತ್ವಾ, ಅರ್ಜುನಃ, ಅತಃ, ಗಚ್ಛನ್, ಪ್ರಭಾಸಂ, ಶಾಪತಃ, ಗ್ರಾಹದೇಹಾಃ, ಅಮೂಮುಚತ್, ಚ, ಅಪ್ಸರಸಃ, ಸಃ, ಪಂಚ, ತಾಭಿಃ, ಗೃಹೀತಃ, ಪ್ರವಿಕೃಷ್ಯ, ತೀರಮ್ ।

**ಅರ್ಥ :-** **ಅರ್ಜುನಃ** = ಅರ್ಜುನನು, **ವೀರಂ** = ವೀರನಾದ, **ಪುತ್ರಂ** = ಮಗನನ್ನು, **ಜನಯಿತ್ವಾ** = ಹುಟ್ಟಿಸಿ, **ಅತಃ** = ಅನಂತರ, **ಪ್ರಭಾಸಂ** = ಪ್ರಭಾಸ ಕ್ಷೇತ್ರವನ್ನು, **ಗಚ್ಛನ್** = ಹೋಗುತ್ತಾ, **ಸಃ** = ಅವನು, **ಶಾಪತಃ** = ಬ್ರಾಹ್ಮಣನ ಶಾಪದಿಂದ, **ಗ್ರಾಹದೇಹಾಃ** = ಮೊಸಳೆಯ ಜನ್ಮವನ್ನು ಹೊಂದಿದ, **ಪಂಚ** = ಐದು, **ಅಪ್ಸರಸಃ** = ಅಪ್ಸರ ಸ್ತ್ರೀಯರನ್ನು, **ತಾಭಿಃ** = ಅವರಿಂದ, **ಗೃಹೀತಃ** = ಹಿಡಿದವನಾಗಿ, **ತೀರಂ** = ತೀರವನ್ನು ಕುರಿತು, **ಪ್ರವಿಕೃಷ್ಯ** = ಎಳೆದು, **ಅಮೂಮುಚತ್** = ಶಾಪದಿಂದ ಮುಕ್ತಗೊಳಿಸಿದ.

**ತಾತ್ಪರ್ಯ :-** ಅತ್ಯಂತ ಪರಾಕ್ರಮಿಯಾದ ಬಭ್ರುವಾಹನನನ್ನು ಹುಟ್ಟಿಸಿ ಅರ್ಜುನ ಮುಂದೆ ತೀರ್ಥಕ್ಷೇತ್ರ ಯಾತ್ರೆಯನ್ನು ಮಾಡುತ್ತ ಪ್ರಭಾಸಕ್ಷೇತ್ರಕ್ಕೆ ಹೋಗುವ ದಾರಿಯಲ್ಲಿ ಬ್ರಾಹ್ಮಣನ ಶಾಪದಿಂದ ಮೊಸಳೆಯ ಜನ್ಮವನ್ನು ಹೊಂದಿರುವ ಐದು ಅಪ್ಸರೆಯರನ್ನು ಶಾಪದಿಂದ ಮೋಚನೆಗೊಳಿಸಿದ್ದಾನೆ.

**ಏವಂ ಹಿ ತಾಸಾಂ ಶಾಪಮೋಕ್ಷಃ ಪ್ರದತ್ತೋ**
**ಯದಾಽಖಿಲಾ ವೋ ಯುಗಪತ್ ಸಂಪ್ರಕರ್ಷೇತ್ ।**
**ಏಕಸ್ತದಾ ನಿಜರೂಪಾಪ್ತಿರೇವೇ-**
**ತ್ಯಲಂ ತುಷ್ಟೇನ ಬ್ರಾಹ್ಮಣೇನಾಽನತಾನಾಮ್ ॥ ೧೬೫ ॥**

ಪದಚ್ಛೇದ :- ಏವಂ, ತಾಸಾಂ, ಶಾಪಮೋಕ್ಷಃ, ಪ್ರದತ್ತಃ, ಯದಾ, ಅಖಿಲಾಃ, ವಃ, ಯುಗಪತ್, ಸಂಪ್ರಕರ್ಷೇತ, ಏಕಃ, ತದಾ, ನಿಜರೂಪಾಪ್ತಿಃ, ಏವ, ಇತಿ, ಅಲಂ, ತುಷ್ಟೇನ, ಬ್ರಾಹ್ಮಣೇನ, ಆನತಾನಾಮ್ ।

**ಅರ್ಥ** :- **ಏವಂ** = ಈ ರೀತಿಯಾಗಿ, **ಆನತಾನಾಮ್** = ಶರಣಾಗತಿಯನ್ನು ಹೊಂದಿದ, **ತಾಸಾಂ** = ಆ ಅಪ್ಸರ ಸ್ತ್ರೀಯರಿಗೆ, **ಅಲಂ** = ಚೆನ್ನಾಗಿ, **ತುಷ್ಟೇನ** = ಸಂತುಷ್ಟನಾದ, **ಬ್ರಾಹ್ಮಣೇನ** = ಬ್ರಾಹ್ಮಣನಿಂದ, **ಯದಾ** = ಯಾವಾಗ, **ಅಖಿಲಾಃ ವಃ** = ಎಲ್ಲರನ್ನು, **ಏಕಃ** = ಒಬ್ಬನೇ, **ಯುಗಪತ್** = ಒಟ್ಟಿಗೆ, **ಸಂಪ್ರಕರ್ಷೇತ್** = ಎಳೆಯುವನೂ, **ತದಾ** = ಆವಾಗ, **ನಿಜರೂಪಾಪ್ತಿಃ ಏವ** = ಮೂಲ ರೂಪವು ಪ್ರಾಪ್ತಿಯಾಗುತ್ತದೆ, **ಇತಿ** = ಎಂದು, **ಅಲಂ** = ಚೆನ್ನಾಗಿ, **ಶಾಪಮೋಕ್ಷಃ** = ಶಾಪವಿಮೋಚನೆಯು, **ಪ್ರದತ್ತಃ** = ಕೊಡಲ್ಪಟ್ಟಿದೆ.

**ತಾತ್ಪರ್ಯ** :- ಒಬ್ಬ ಬ್ರಾಹ್ಮಣನಿಂದ ಶಾಪವನ್ನು ಪಡೆದಿರುವ ಅಪ್ಸರೆಯರು ಬ್ರಾಹ್ಮಣನನ್ನು ಶಾಪಮೋಚನೆಗಾಗಿ ಅಂಗಲಾಚಿ ಬೇಡಿದರು ಆಗ ಆ ಬ್ರಾಹ್ಮಣನು ಅವರ ಪ್ರಾರ್ಥನೆಗೆ ಸಂತುಷ್ಟನಾದ ಬ್ರಾಹ್ಮಣನು ಯಾವಾಗ ಒಬ್ಬ ಪ್ರಬಲವಾದ ವ್ಯಕ್ತಿ ಐದು ಮಂದಿಯರನ್ನು ಎಳೆಯುತ್ತಾನೊ ಆಗ ನಿಮಗೆ ಶಾಪಮೋಚನೆ ಇದೆ ಎಂದು ಹೇಳಿದನು.

**ವಿಪ್ರಾಪಹಾಸಾತ್ ಕುತ್ಸಿತಯೋನಿತಸ್ತಾಃ**
**ಕನ್ಯಾತೀರ್ಥೇ ಪಾಂಡವಃ ಸಂಪ್ರಮೋಚ್ಯ ।**
**ಪ್ರಾಪ್ತಃ ಪ್ರಭಾಸಂ ವಾಸುದೇವಾನುಜಾತಾಂ**
**ಶುಶ್ರಾವ ರಾಮೇಣ ಸುಯೋಧನೋದ್ಯತಾಮ್ ॥ ೧೬೬ ॥**

ಪದಚ್ಛೇದ :- ವಿಪ್ರಾಪಹಾಸಾತ್, ಕುತ್ಸಿತಯೋನಿತಃ, ತಾಃ, ಕನ್ಯಾತೀರ್ಥೇ, ಪಾಂಡವಃ, ಸಂಪ್ರಮೋಚ್ಯ, ಪ್ರಾಪ್ತಃ, ಪ್ರಭಾಸಂ, ವಾಸುದೇವಾನುಜಾಂ, ತಾಂ ಶುಶ್ರಾವ, ರಾಮೇಣ, ಸುಯೋಧನೋದ್ಯತಾಮ್ ।

**ಅರ್ಥ** :- **ಪಾಂಡವಃ** = ಅರ್ಜುನನು, **ಕನ್ಯಾತೀರ್ಥೇ** = ಕನ್ಯಾತೀರ್ಥವೆಂಬ ಕ್ಷೇತ್ರದಲ್ಲಿ, **ವಿಪ್ರಾಪಹಾಸಾತ್** = ಬ್ರಾಹ್ಮಣನ ಅಪಹಾಸದ ನಿಮಿತ್ತ ಶಾಪದಿಂದ, **ಕುತ್ಸಿತಯೋನಿತಃ** = ಮೊಸಳೆ ಜನ್ಮದಿಂದ, **ಸಂಪ್ರಮೋಚ್ಯ** = ಶಾಪದಿಂದ ಮೋಚನೆಗೊಳಿಸಿ, **ಪ್ರಭಾಸಂ** = ಪ್ರಭಾಸ ಕ್ಷೇತ್ರವನ್ನು, **ಪ್ರಾಪ್ತಃ** =

ಹೊಂದಿದವನಾಗಿ, **ವಾಸುದೇವಾನುಜಾಂ** = ಶ್ರೀಕೃಷ್ಣನ ತಂಗಿಯಾದ ಸುಭದ್ರೆಯನ್ನು, **ರಾಮೇಣ** = ಬಲರಾಮನಿಂದ, **ಸುಯೋಧನೋದ್ಯತಾಂ** = ದುರ್ಯೋಧನನಿಗೆ ಕೊಡಲು ಉದ್ಯುಕ್ತನಾದುದನ್ನು, **ಶುಶ್ರಾವ** = ಕೇಳಿದನು.

**ತಾತ್ಪರ್ಯ :-** ವರ್ಗಾ, ಸಾರಭೇಯಿ, ಸಮೀಚೀ, ಬುದ್ಬುದಾ ಮತ್ತು ಲತಾ ಎಂಬ ಐದು ಮಂದಿ ಅಪ್ಸರೆಯರು ಬ್ರಾಹ್ಮಣನ ಅವಮಾನವನ್ನು ಮಾಡಿದ್ದಾರೆ. ಕುಪಿತನಾದ ಬ್ರಾಹ್ಮಣನು ಅವರಿಗೆ ಮೊಸಳೆಯಾಗಿರಿ ಎಂದು ಶಾಪವನ್ನು ನೀಡಿದ್ದಾನೆ. ಈ ಐದು ಮಂದಿ ಅಪ್ಸರೆಯನ್ನು ಅರ್ಜುನ ಶಾಪದಿಂದ ವಿಮೋಚನಗೊಳಿಸಿ ಮುಂದೆ ಪ್ರಭಾಸ ಕ್ಷೇತ್ರಕ್ಕೆ ಹೊರಟಿದ್ದಾನೆ. ಅನಂತರ ಶ್ರೀಕೃಷ್ಣನ ತಂಗಿಯಾದ ಸುಭದ್ರೆಯನ್ನು ದುರ್ಯೋಧನನಿಗೆ ಕೊಡಬೇಕು ಎಂದು ಬಲರಾಮಾದಿಗಳು ನಿಶ್ಚಯಿಸಿದ್ದಾರೆ ಎಂಬ ಸುದ್ದಿಯು ತಿಳಿಯಿತು.

**ವಿಚಿಂತ್ಯ ಕಾರ್ಯಂ ಯತಿರೂಪಂ ಗೃಹೀತ್ವಾ**
**ಕುಶಸ್ಥಲೀಂ ಪ್ರಯಯೌ ತಂ ಸಮೀಪೇ ।**
**ಪ್ರಾಪ್ತಂ ಕೃಷ್ಣಃ ಪ್ರಾಹಸತ್ ಸಂವಿಜಾನನ್**
**ಸತ್ಯಾಸಹಾಯಃ ಶಯನೀಯಾಧಿರೂಢಃ ॥ ೧೬೭ ॥**

**ಪದಚ್ಛೇದ :-** ವಿಚಿಂತ್ಯ, ಕಾರ್ಯಂ, ಯತಿರೂಪಂ, ಗೃಹೀತ್ವಾ, ಕುಶಸ್ಥಲೀಂ, ಪ್ರಯಯೌ, ತಂ, ಸಮೀಪೇ, ಪ್ರಾಪ್ತಂ, ಕೃಷ್ಣಃ, ಪ್ರಾಹಸತ್, ಸಂವಿಜಾನನ್, ಸತ್ಯಾಸಹಾಯಃ, ಶಯನೀಯಾಧಿರೂಢಃ ।

**ಅರ್ಥ :-** **ಕಾರ್ಯಂ** = ಸುಭದ್ರೆಯು ತನಗೆ ಸಿಗಬೇಕಾದ ಕಾರ್ಯವನ್ನು, **ವಿಚಿಂತ್ಯ** = ಆಲೋಚಿಸಿ, **ಯತಿರೂಪಂ** = ಸನ್ಯಾಸಿ ವೇಷವನ್ನು, **ಗೃಹೀತ್ವಾ** = ಸ್ವೀಕರಿಸಿ, **ಕುಶಸ್ಥಲೀಂ** = ದ್ವಾರಕಾಪಟ್ಟಣಕ್ಕೆ, **ಪ್ರಯಯೌ** = ಹೋದನು, **ಸತ್ಯಾಸಹಾಯಃ** = ಸತ್ಯಭಾಮೆಯೊಂದಿಗೆ, **ಶಯನೀಯಾಧಿರೂಢಃ** = ಮಂಚದ ಮೇಲೆ ಕುಳಿತಿರುವ, **ಕೃಷ್ಣಃ** = ಶ್ರೀಕೃಷ್ಣನು, **ಸಮೀಪೆ** = ಹತ್ತಿರದಲ್ಲಿ, **ಪ್ರಾಪ್ತಂ** = ಬಂದ, **ತಂ** = ಆ ಅರ್ಜುನನನ್ನು, **ಸುವಿಜಾನನ್** = ತಿಳಿಯುತ್ತಾ, **ಪ್ರಾಹಸತ್** = ನಕ್ಕನು.

ತಾತ್ಪರ್ಯ :- ಅರ್ಜುನನು ಸುಭದ್ರೆಯು ತನಗೆ ದೊರೆಯಬೇಕಾದರೆ ಏನು ಮಾಡಬೇಕು ಎಂದು ವಿಚಾರಿಸಿ ಸಂನ್ಯಾಸಿವೇಷವನ್ನು ಧರಿಸಿ ದ್ವಾರಕೆಗೆ ಬಂದಿದ್ದಾನೆ ರಾತ್ರಿಯ ಸಮಯದಲ್ಲಿ ದ್ವಾರಕೆಗೆ ಬಂದಾಗ ಸತ್ಯಭಾಮೆ- ಯೊಂದಿಗೆ ಮಂಚದ ಮೇಲೆ ಕುಳಿತಿರುವ ಶ್ರೀಕೃಷ್ಣನು ಮುನಿವೇಷದಲ್ಲಿರುವ ಅರ್ಜುನನನ್ನು ತಿಳಿದು ನಗುತ್ತಾನೆ.

**ಸರ್ವಜ್ಞಾ ಸಾ ಲೀಲಯಾ ಹಾಸಹೇತು-**
**ಮಪೃಚ್ಛತ್ ತಂ ಸೋಽಪಿ ತಸ್ಯೈ ಬಭಾಷೇ ।**
**ಲೀಲಾಭಾಜೌ ದರ್ಶನಾರ್ಥಂ ಪುನಸ್ತಾ-**
**ವಗಚ್ಛತಾಂ ರೈವತಂ ಶೈಲರಾಜಮ್ ॥ ೧೬೮ ॥**

**ಪದಚ್ಛೇದ :– ಸರ್ವಜ್ಞಾ, ಸಾ, ಲೀಲಯಾ, ಹಾಸಹೇತುಮ್, ಅಪೃಚ್ಛತ್, ತಮ್, ಸಃ, ಅಪಿ, ತಸ್ಯೈ, ಬಭಾಷೆ, ಲೀಲಾ, ಭಾಜೌ, ದರ್ಶನಾರ್ಥಂ, ಪುನಃ, ತೌ, ಅಗಚ್ಛತಾಂ, ರೈವತಂ, ಶೈಲರಾಜಮ್ ।**

**ಅರ್ಥ :- ಸರ್ವಜ್ಞಾ** = ಸರ್ವಜ್ಞಳಾದ, **ಸಾ** = ಆ ಸತ್ಯಭಾಮೆಯು, **ಲೀಲಯಾ** = ಲೀಲೆಯಿಂದ, **ಹಾಸಹೇತುಂ** = ನಗುವಿನ ಕಾರಣವನ್ನು, **ಅಪೃಚ್ಛತ್** = ಕೇಳಿದಳು, **ಸೋಽಪಿ** = ಆ ಶ್ರೀಕೃಷ್ಣನಾದರೊ, **ತಸ್ಯೈ** = ಅವಳಿಗೆ, **ಹಾಸಹೇತುಂ** = ನಗುವಿನ ಕಾರಣವನ್ನು, **ಬಭಾಷೆ** = ಹೇಳಿದನು, **ಪುನಃ** = ಮತ್ತು, **ತೌ** = ಆ ಕೃಷ್ಣ ಸತ್ಯಭಾಮೆಯರು, **ಲೀಲಾಭಾಜೌ** = ಕ್ರೀಡೆಯನ್ನು ಮಾಡುತ್ತಾ, **ದರ್ಶನಾರ್ಥಂ** = ಅರ್ಜುನನ ದರ್ಶನಕ್ಕಾಗಿ, **ಶೈಲರಾಜಮ್** = ಪರ್ವತಶ್ರೇಷ್ಠವಾದ, **ರೈವತಂ** = ರೈವತ ಪರ್ವತವನ್ನು ಕುರಿತು, **ಅಗಚ್ಛತಾಂ** = ಹೋದರು.

ತಾತ್ಪರ್ಯ :- ಸತ್ಯಭಾಮೆಯು ಸರ್ವಜ್ಞಳಾದ್ದರಿಂದ ಎಲ್ಲವನ್ನು ತಿಳಿದಿದ್ದರೂ ಕೃಷ್ಣನ ಬಳಿ ನಗುವಿನ ಕಾರಣವೇನೆಂದು ಪ್ರಶ್ನೆ ಮಾಡಿದಳು ಕೃಷ್ಣನು ಅವಳಿಗೆ ಉತ್ತರವನ್ನು ಹೇಳಿದ. ಅನಂತರ ಅವರಿಬ್ಬರು ಯತಿಯ ವೇಷದಲ್ಲಿರುವ ಅರ್ಜುನನನ್ನು ನೋಡಲು ರೈವತ ಪರ್ವತವನ್ನು ಕುರಿತು ಹೊದರು.

**ಆಕ್ರೀಡೋಽಸೌ ವೃಷ್ಣಿಭೋಜಾಂಧಕಾನಾಂ**
**ತತ್ರಾಪಶ್ಯತ್ ಕೇಶವಃ ಫಲ್ಗುನಂ ತಮ್ ।**
**ಸ್ವಸುರ್ದಾನೇ ಸ ಪ್ರತಿಜ್ಞಾಂ ರಹೋಽಸ್ಮೈ**
**ಚಕ್ರೇ ಕೃಷ್ಣೋಥಾಽಸದತ್ ಸರ್ವವೃಷ್ಣೀನ್ ॥ ೧೬೯ ॥**

**ಪದಚ್ಛೇದ :- ಆಕ್ರೀಡಃ, ಅಸೌ, ವೃಷ್ಣಿಭೋಜಾಂಧಕಾನಾಂ, ತತ್ರ, ಅಪಶ್ಯತ್, ಕೇಶವಃ, ಫಲ್ಗುನಂ, ತಮ್, ಸ್ವಸುಃ, ದಾನೇ, ಸಃ ಪ್ರತಿಜ್ಞಾಂ, ರಹಃ, ಅಸ್ಮೈ, ಚಕ್ರೇ, ಕೃಷ್ಣಃ, ಅಥ, ಆಸದತ್, ಸರ್ವವೃಷ್ಣೀನ್ ।**

**ಅರ್ಥ :- ಅಸೌ** = ಈ ರೈವತ ಪರ್ವತವು, **ವೃಷ್ಣಿಭೋಜಾಂಧಕಾನಾಂ** = ವೃಷ್ಣಿ, ಭೋಜ, ಅಂಧಕರೆಂಬ ಯಾದವರಿಗೆ, **ಆಕ್ರೀಡಃ** = ವಿಹಾರ ಸ್ಥಾನವಾಗಿತ್ತು, **ತತ್ರ** = ಆ ಪರ್ವತದಲ್ಲಿ, **ಕೇಶವಃ** = ಶ್ರೀಕೃಷ್ಣನು, **ತಂ** = ಆ, **ಫಲ್ಗುನಂ** = ಅರ್ಜುನನನು, **ಅಪಶ್ಯತ್** = ನೋಡಿದನು, **ಸಃ** = ಆ ಕೃಷ್ಣನು, **ಸ್ವಸುಃದಾನೆ** = ತಂಗಿಯಾದ ಸುಭದ್ರೆಯನ್ನು ಕೊಡುವ ವಿಷಯದಲ್ಲಿ, **ರಹಃ** = ರಹಸ್ಯವಾಗಿ, **ಪ್ರತಿಜ್ಞಾಂ** = ಪ್ರತಿಜ್ಞೆಯನ್ನು, **ಚಕ್ರೇ** = ಮಾಡಿದನು, **ಅಥ** = ಪ್ರತಿಜ್ಞೆ ಮಾಡಿದ ನಂತರ, **ಸರ್ವವೃಷ್ಣೀನ್** = ಎಲ್ಲ ಯಾದವರನ್ನು, **ಆಸದತ್** = ಹೊಂದಿದನು.

**ತಾತ್ಪರ್ಯ :-** ಆ ರೈವತ ಪರ್ವತವು ವೃಷ್ಣಿ, ಭೋಜ, ಅಂಧಕ ಮೊದಲಾದ ಸಮಸ್ತ ಯಾದವರಿಗೆ ವಿಹಾರ ಸ್ಥಳವಾಗಿತ್ತು. ಅಲ್ಲಿ ಕೃಷ್ಣನು ಯತಿವೇಷದಲ್ಲಿರುವ ಅರ್ಜುನನನ್ನು ನೋಡಿ ಅವನು ಮುಂದೆ ಏಕಾಂತದಲ್ಲಿ ತನ್ನ ತಂಗಿಯಾದ ಸುಭದ್ರೆಯನ್ನು ಕೊಡುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿದ್ದಾನೆ.

**ದೃಷ್ಟ್ವಾ ಗಿರೌ ರೌಹಿಣೇಯೋ ಯತೀಂದ್ರ-**
**ವೇಷಂ ಪಾರ್ಥಂ ಜ್ಞಾತಿಯುಕ್ತಃ ಪ್ರಣಮ್ಯ ।**
**ಚಕ್ರೇ ಪೂಜಾಂ ಫಲ್ಗುನೋಽಪಿ ಪ್ರಣಾಮಂ**
**ಗುಣಜ್ಯೇಷ್ಠೋಽಸೀತಿ ಚಕ್ರೇ ಬಲಾಯ ॥ ೧೭೦ ॥**

ಪದಚ್ಛೇದ :- ದೃಷ್ಟ್ವಾ, ಗಿರೌ, ರೌಹಿಣೇಯಃ, ಯತೀಂದ್ರವೇಷಂ, ಪಾರ್ಥಂ, ಜ್ಞಾತಿಯುಕ್ತಃ, ಪ್ರಣಮ್ಯ, ಚಕ್ರೆ, ಪೂಜಾಂ, ಫಲ್ಗುನಃ, ಅಪಿ, ಪ್ರಣಾಮಂ, ಗುಣಜ್ಯೇಷ್ಠಃ, ಅಸಿ ಇತಿ, ಚಕ್ರೆ, ಬಲಾಯ ।

**ಅರ್ಥ** :- **ರೌಹಿಣೆಯಃ** = ಬಲರಾಮನು, **ಗಿರೌ** = ರೈವತ ಪರ್ವತದಲ್ಲಿ, **ಯತೀಂದ್ರವೇಷಂ** = ಸನ್ಯಾಸಿಯ ವೇಷವನ್ನು ಧರಿಸಿದ, **ಪಾರ್ಥಂ** = ಅರ್ಜುನನನ್ನು, **ಜ್ಞಾತಿಯುಕ್ತಃ** = ಬಂಧು ಸಮೇತನಾಗಿ, **ಪ್ರಣಮ್ಯ** = ನಮಸ್ಕರಿಸಿ, **ಪೂಜಾಂ** = ಪೂಜೆಯನ್ನು, **ಚಕ್ರೆ** = ಮಾಡಿದನು, **ಫಲ್ಗುನಃ ಅಪಿ** = ಅರ್ಜುನನೂ ಕೂಡ, **ಗುಣಜ್ಯೇಷ್ಠಃ ಅಸಿ** = ನನಗಿಂತ ಗುಣಗಳಿಂದ ಶ್ರೇಷ್ಠನಾಗಿದ್ದಿ, **ಇತಿ** = ಎಂದು, **ಬಲಾಯ** = ಬಲರಾಮನಿಗೆ, **ಪ್ರಣಾಮಂ** = ನಮಸ್ಕಾರವನ್ನು, **ಚಕ್ರೆ** = ಮಾಡಿದನು.

ತಾತ್ಪರ್ಯ :- ಬಲರಾಮದೇವರು ಯತಿವೇಷದಲ್ಲಿರುವ ಅರ್ಜುನನಿಗೆ ಬಂಧು ಬಾಂಧವ ಸಮೇತರಾಗಿ ನಮಸ್ಕಾರವನ್ನು ಮಾಡಿದ್ದಾರೆ. ಅವರನ್ನು ಸತ್ಕರಿಸಿದ್ದಾನೆ. ನಂತರ ಅರ್ಜುನನೂ ಕೂಡ ಪ್ರತಿಯಾಗಿ ನೀವು ಗುಣದಿಂದ ಉತ್ತಮರಾಗಿದ್ದೀರಿ ಎಂದು ಬಲರಾಮನಿಗೆ ನಮಿಸಿದ್ದಾನೆ.

**ಸರ್ವಜ್ಞಂ ತಂ ವಾಗ್ಮಿನಂ ವೀಕ್ಷ್ಯ ರಾಮಃ**
**ಕನ್ಯಾಗಾರೇ ವರ್ಷಕಾಲೇ ನಿವಾಸಮ್ ।**
**ಸತ್ಕಾರಪೂರ್ವಂ ಕಾರಯೇತ್ಯಾಹ ಕೃಷ್ಣಂ**
**ನೈವೇತ್ಯೂಚೇ ಕೇಶವೋ ದೋಷವಾದೀ ॥ ೧೭೧ ॥**

ಪದಚ್ಛೇದ :- ಸರ್ವಜ್ಞಂ, ತಂ, ವಾಗ್ಮಿನಂ, ವೀಕ್ಷ್ಯ, ರಾಮಃ, ಕನ್ಯಾಗಾರೆ, ವರ್ಷಕಾಲೆ, ನಿವಾಸಮ್, ಸತ್ಕಾರಪೂರ್ವಂ, ಕಾರಯ, ಇತಿ, ಆಹ, ಕೃಷ್ಣಂ, ನ, ಏವ, ಇತಿ, ಊಚೆ, ಕೇಶವಃ, ದೋಷವಾದೀ ।

**ಅರ್ಥ** :- **ಸರ್ವಜ್ಞಂ** = ಸರ್ವಜ್ಞನಾದ, **ವಾಗ್ಮಿನಂ** = ವಾಗ್ಮಿಯಾದ, **ತಂ** = ಆ ಅರ್ಜುನನು, **ವೀಕ್ಷ್ಯ** = ನೋಡಿ, **ರಾಮಃ** = ಬಲರಾಮನು, **ವರ್ಷಾಕಾಲೇ** = ಚಾತುರ್ಮಾಸ್ಯ ವ್ರತದ ಸಂದರ್ಭದಲ್ಲಿ, **ಸತ್ಕಾರಪೂರ್ವಕಂ** = ಆದರ ಪೂರ್ವಕವಾಗಿ, **ಕನ್ಯಾಗಾರೇ** = ಕನ್ಯಾಗೃಹದಲ್ಲಿ, **ನಿವಾಸಂ** = ಆವಾಸವನ್ನು, **ಕಾರಯ** = ಮಾಡಿಸು, **ಇತಿ** = ಎಂದು, **ಕೃಷ್ಣಂ** =

ಶ್ರೀಕೃಷ್ಣನನ್ನು, **ಆಹ** = ಹೇಳಿದನು, **ದೋಷವಾದಿ** = ದೋಷಗಳನ್ನು ಆರೋಪ ಮಾಡುವ, **ಕೇಶವಃ** = ಕೃಷ್ಣನು, **ನೈವ** = ಕನ್ಯಾಗೃಹದಲ್ಲಿ ವಾಸಿಸುವುದು ಯೋಗ್ಯವಲ್ಲ, **ಇತಿ** = ಎಂದು, **ಊಚೆ** = ಹೇಳಿದನು.

**ತಾತ್ಪರ್ಯ** :- ಬಲರಾಮನು ಎಲ್ಲವನ್ನು ಬಲ್ಲಿದ ವಾಗ್ಮಿಯಾದ ಸಂನ್ಯಾಸಿಗಳಿಗೆ ಚಾತುರ್ಮಾಸ್ಯ ಕಾಲ ಸಂಪೂರ್ಣ, ಕನ್ಯಾಗೃಹದಲ್ಲಿ ವಾಸವನ್ನು ಕಲ್ಪಿಸು ಎಂದು ಕೃಷ್ಣನ ಬಳಿ ಹೇಳಿದನು. ಆಗ ಕೃಷ್ಣನು ಕನ್ಯಾಗಾರದಲ್ಲಿ ಸಂನ್ಯಾಸಿಯ ವಾಸವನು ಕಲ್ಪಿಸುವುದು ಯುಕ್ತವಲ್ಲ ಎಂದು ಹೇಳಿದನು.

**ಯುವಾ ಬಲೀ ದರ್ಶನೀಯೋಽತಿವಾಗ್ಮೀ**
**ನಾಯಂ ಯೋಗ್ಯಃ ಕನ್ಯಕಾಗಾರವಾಸಮ್ ।**
**ಇತ್ಯುಕ್ತವಂತಂ ರಾಮ ಆಹಾಽಪ್ತವಿದ್ಯೇ**
**ನಾಸ್ಮಿನ್ ಶಂಕೇತ್ಯೇವ ಲೋಕಾಧಿನಾಥಮ್ ॥ ೧೭೨ ॥**

ಪದಚ್ಛೇದ :- **ಯುವಾ, ಬಲೀ, ದರ್ಶನೀಯಃ, ಅತಿವಾಗ್ಮೀ, ನ, ಅಯಂ, ಯೋಗ್ಯಃ, ಕನ್ಯಕಾಗಾರವಾಸಮ್, ಇತಿ, ಉಕ್ತವಂತಂ, ರಾಮಃ, ಆಹ, ಆಪ್ತವಿದ್ಯೆ, ನ, ಅಸ್ಮಿನ್, ಶಂಕಾ ಇತಿ, ಏವ, ಲೋಕಾಧಿನಾಥಮ್ ।**

**ಅರ್ಥ** :- **ಯುವಾ** = ಯುವಕನಾದ, **ಬಲೀ** = ಬಲಿಷ್ಠನಾದ, **ದರ್ಶನೀಯಃ** = ಸುಂದರವಾದ ರೂಪವುಳ್ಳವನಾದ, **ಅತಿವಾಗ್ಮೀ** = ಬಲು ಮಾತುಗಾರನಾದ, **ಅಯಂ** = ಈ ಸಂನ್ಯಾಸಿಯು, **ಕನ್ಯಕಾಗಾರವಾಸಮ್** = ಕನ್ಯಾಗೃಹದಲ್ಲಿ, ವಾಸಮಾಡಲು, **ಯೋಗ್ಯಃ** = ಯೋಗ್ಯನು, **ನ** = ಅಲ್ಲ, **ಇತಿ** = ಎಂದು, **ಉಕ್ತವಂತಂ** = ಹೇಳಿದ, **ಲೋಕಾಧಿನಾಥಮ್** = ಜಗದೀಶ್ವರನಾದ ಕೃಷ್ಣನನ್ನು, **ರಾಮಃ** = ಬಲರಾಮನು, **ಆಪ್ತವಿದ್ಯೆ** = ಪರಮಾತ್ಮ ತತ್ವಜ್ಞಾನವನ್ನು ಪಡೆದ, **ಅಸ್ಮಿನ್** = ಈ ಸಂನ್ಯಾಸಿಯಲ್ಲಿ, **ನ ಶಂಕಾ** = ಸಂದೇಹವಿಲ್ಲ, **ಇತ್ಯೇವಂ** = ಹೀಗೆಂದು, **ಆಹ** = ಹೇಳಿದನು.

**ತಾತ್ಪರ್ಯ** :- ಈ ಸಂನ್ಯಾಸಿಯು ಯುವಕನಾಗಿದ್ದಾನೆ, ಬಲಿಷ್ಠನಾಗಿದ್ದಾನೆ, ನೋಡಲು ಒಳ್ಳೆ ರೂಪವಂತನಾಗಿದ್ದಾನೆ ಮತ್ತು ಉತ್ತಮ ಮಾತುಗಾರನಾಗಿದ್ದಾನೆ, ಇಂತಹ ವ್ಯಕ್ತಿ ಕನ್ಯಾಗೃಹದಲ್ಲಿ ವಾಸ ಮಾಡಲು ಯೋಗ್ಯವಲ್ಲ ಎಂದು ಜಗದೊಡೆಯನಾದ ಕೃಷ್ಣ ಹೇಳಿದಾಗ, ಭಗವಂತನ

ತತ್ವಜ್ಞಾನವನ್ನು ಸಂಪಾದಿಸಿದ ಜ್ಞಾನಿಗಳಲ್ಲಿ ಈ ರೀತಿ ಸಂದೇಹವನ್ನು ತೋರಿಸುವುದು ಸರಿಯಲ್ಲ ಬಲರಾಮ ನುಡಿದ.

**ನಾಸ್ಮನ್ಮತೇ ರೋಚತೇ ತ್ವನ್ಮತಂ ತು**
**ಸರ್ವೇಷಾಂ ನಃ ಪೂಜ್ಯಮೇವಾಸ್ತು ತೇನ ।**
**ಇತ್ಯುಕ್ತ್ವಾ ತಂ ಕೇಶವಃ ಸೋದರಾಯೈ**
**ಶುಶ್ರೂಷಸ್ವೇತ್ಯಾಹ ಸಂತಂ ಯತೀಂದ್ರಮ್ ॥ ೧೭೩ ॥**

ಪದಚ್ಛೇದ :– ನ, ಅಸ್ಮನ್ಮತೆ, ರೋಚತೇ, ತ್ವನ್ಮತಂ, ತು, ಸರ್ವೇಷಾಂ, ನಃ, ಪೂಜ್ಯಮ್ ಏವ, ಅಸ್ತು, ತೇನ, ಇತಿ, ಉಕ್ತ್ವಾ, ತಂ, ಕೇಶವಃ, ಸೋದರಾಯೈ, ಶುಶ್ರೂಷಸ್ವ, ಇತಿ, ಆಹ, ಸಂತಂ, ಯತೀಂದ್ರಮ್ ।

**ಅರ್ಥ** :- **ಅಸ್ಮನ್ಮತೇ** = ನಮ್ಮ ಪ್ರಕಾರ, **ತ್ವನ್ಮತಂ** = ನಿನ್ನ ಅಭಿಪ್ರಾಯವು, **ನ ರೋಚತೇ** = ಇಷ್ಟವಾಗುವುದಿಲ್ಲ, **ತು** = ಆದರೆ, **ನಃ ಸರ್ವೇಷಾಂ** = ನಮ್ಮೆಲ್ಲರಿಗೂ, **ಪೂಜ್ಯಮೇವ** = ಆದರಣೀಯವೇ, **ಅಸ್ತು** = ಆಗಲಿ, **ಇತಿ** = ಈ ರೀತಿ, **ಕೇಶವಃ** = ಶ್ರೀಕೃಷ್ಣನು, **ಉಕ್ತ್ವಾ** = ಹೇಳಿ, **ಸೋದರಾಯೈ** = ತಂಗಿಯಾದ ಸುಭದ್ರೆಗೆ, **ತಂ** = ಆ, **ಯತೀಂದ್ರಮ್ ಸಂತಂ** = ಸನ್ಯಾಸಿ ಶ್ರೇಷ್ಠನಾದ ಅರ್ಜುನನನ್ನು, **ಶುಶ್ರೂಷಸ್ವ** = ಸೇವಿಸು, **ಇತಿ** = ಎಂದು, **ಆಹ** = ಹೇಳಿದನು.

**ತಾತ್ಪರ್ಯ** :- ಕೃಷ್ಣನು ಹೇಳುತ್ತಾನೆ ನಿನ್ನ ಅಭಿಪ್ರಾಯವು ನನಗೆ ಹಿಡಿಸುವುದಿಲ್ಲ, ಆದರೂ ನೀನು ಜ್ಯೇಷ್ಠನಾದ್ದರಿಂದ ನಿಮ್ಮ ಮಾತು ನಮಗೆ ಆದರಣೀಯವೆ ಆಗಿದೆ. ಈ ರೀತಿ ಹೇಳಿ ತನ್ನ ತಂಗಿಯಾದ ಸುಭದ್ರೆಗೆ ಯತಿಗಳನ್ನು ಸೇವಿಸಲು ಆಜ್ಞೆ ಮಾಡಿದ್ದಾನೆ.

**ನಿತ್ಯಾಪ್ರಮತ್ತಾ ಸಾಧು ಸಂತೋಷಯೇತಿ**
**ಪ್ರೋಕ್ತಾ ತಥಾ ಸಾಽಕರೋತ್ ಸೋಽಪಿ ತತ್ರ ।**
**ಚಕ್ರೇ ಮಾಸಾನ್ ವಾರ್ಷಿಕಾನ್ ಸತ್ಕಥಾಭಿ-**
**ರ್ವಾಸಂ ವಾಕ್ಯಂ ಶ್ರದ್ದಧಾನೋ ಹರೇಸ್ತತ್ ॥ ೧೭೪ ॥**

**ಪದಚ್ಛೇದ :- ನಿತ್ಯಾಪ್ರಮತ್ತಾ, ಸಾಧು, ಸಂತೋಷಯ, ಇತಿ, ಪ್ರೋಕ್ತಾ, ತಥಾ, ಸಾ, ಅಕರೋತ್, ಸಃ, ಅಪಿ, ತತ್ರ, ಚಕ್ರೇ, ಮಾಸಾನ್, ವಾರ್ಷಿಕಾನ್, ಸತ್ಕಥಾಭಿಃ, ವಾಸಂ, ವಾಕ್ಯಂ, ಶ್ರದ್ದಧಾನಃ, ಹರೇಃ, ತತ್ ।**

**ಅರ್ಥ :- ನಿತ್ಯಾಪ್ರಮತ್ತಾ** = ನಿತ್ಯವೂ ತಪ್ಪು ಮಾಡದವಳಾಗಿ, **ಸಾಧು** = ಚೆನ್ನಾಗಿ, **ಸಂತೋಷಯ** = ಸಂತೋಷಗೊಳಿಸು, **ಇತಿ** = ಎಂದು, ಹೇಳಲ್ಪಟ್ಟ, **ಸಾ** = ಆ ಸುಭದ್ರೆಯು, **ತಥಾ** = ಹಾಗೆಯೆ, **ಅಕರೋತ್** = ಮಾಡಿದಳು, **ಸೋಽಪಿ** = ಆ ಅರ್ಜುನನಾದರೊ, **ಹರೇಃ** = ಶ್ರೀಕೃಷ್ಣನ, **ವಾಕ್ಯಂ** = ಸುಭದ್ರೆಯನ್ನು ಕೊಡುವೆ ಎಂದು ಹೇಳಿದ ಮಾತನ್ನು, **ಶ್ರದ್ದಧಾನಃ** = ವಿಶ್ವಾಸಿಸುತ್ತ, **ವಾರ್ಷಿಕಾನ್ ಮಾಸಾನ್** = ವರ್ಷಾಕಾಲದ ನಾಲ್ಕು ತಿಂಗಳುಗಳನ್ನು, **ಸತ್ಕಥಾಭಿಃ** = ಒಳ್ಳೆಯ ಕಥೆಗಳಿಂದ, **ವಾಸಂ** = ನಿವಾಸವನ್ನು, **ಚಕ್ರೇ** = ಮಾಡಿದನು.

**ತಾತ್ಪರ್ಯ :-** ಸುಭದ್ರೆಯೂ ಕೂಡ ''ನಿತ್ಯವೂ ತಪ್ಪದೆ ಚೆನ್ನಾಗಿ ಯತಿಗಳನ್ನು ಸೇವಿಸು'' ಎಂದು ಹೇಳಿದ ಶ್ರೀಕೃಷ್ಣನ ಮಾತನ್ನು ಆಲಿಸಿ ಸೇವೆಯನ್ನು ಮಾಡಿದ್ದಾಳೆ. ಅರ್ಜುನನೂ ಕೂಡ ಶ್ರೀಕೃಷ್ಣನ ಮಾತಿನ ಮೇಲೆ ವಿಶ್ವಾಸವನ್ನು ಇಟ್ಟು ನಾಲ್ಕು ತಿಂಗಳು ಕಾಲ ಸುಂದರ ಅನೇಕ ಕಥೆಗಳನ್ನು ಹೇಳುತ್ತಾ ಕನ್ಯಾಗಾರದಲ್ಲಿ ವಾಸವನ್ನು ಮಾಡಿದ.

**ಸಂಯಾಚಿತಃ ಫಲ್ಗುನೇನಾಽಹ ವಾಕ್ಯಂ**
**ಯದ್ ವಾಸುದೇವಸ್ತನ್ನ ಜಾನಾತಿ ಕಶ್ಚಿತ್ ।**
**ಋತೇ ಪಿತ್ರೋರ್ವಿಪೃಥೋಃ ಸಾತ್ಯಕೇರ್ವಾ**
**ಸುಭದ್ರಾಂ ತೇ ಪ್ರದದಾನೀತಿ ಸತ್ಯಮ್ ॥ ೧೭೫ ॥**

**ಪದಚ್ಛೇದ :- ಸಂಯಾಚಿತಃ, ಫಲ್ಗುನೇನ, ಆಹ, ವಾಕ್ಯಂ, ಯದ್, ವಾಸುದೇವಃ, ತತ್, ನ, ಜಾನಾತಿ, ಕಶ್ಚಿತ್, ಋತೇ, ಪಿತ್ರೋಃ, ವಿಪೃಥೋಃ, ಸಾತ್ಯಕೇಃ, ವಾ, ಸುಭದ್ರಾಂ, ತೇ, ಪ್ರದದಾನಿ, ಇತಿ, ಸತ್ಯಮ್ ।**

**ಅರ್ಥ :- ಫಲ್ಗುನೇನ** = ಅರ್ಜುನನಿಂದ, **ಸಂಯಾಚಿತಃ** = ಬೇಡಲ್ಪಟ್ಟ, **ವಾಸುದೇವಃ** = ಶ್ರೀಕೃಷ್ಣನು, **ತೇ** = ನಿನಗೆ, **ಸುಭದ್ರಾಂ** = ಸುಭದ್ರೆಯನ್ನು, **ಪ್ರದದಾನಿ** = ಕೊಡುವೆನು, **ಇತಿ** = ಎಂದು, **ಯತ್** = ಯಾವ, **ಸತ್ಯಂ ವಾಕ್ಯಂ**

= ಸತ್ಯವಾದ ಮಾತನ್ನು, ಆಹ = ಹೇಳಿದನೂ, ತತ್ = ಈ ಮಾತು, ಪಿತ್ರೋಃ = ತಂದೆ ತಾಯಿಯಾದ ವಸುದೇವ ದೇವಕಿಯರ, ವಿಪೃಥೋಃ = ವಿಪೃಥುವಿನ, ಸಾತ್ಯಕೇಃ = ಸಾತ್ಯಕಿಯ, ಋತೇ = ಹೊರತುಪಡಿಸಿ, ಕಶ್ಚಿತ್ = ಒಬ್ಬನೂ, ನ ಜಾನಾತಿ = ತಿಳಿದಿಲ್ಲ.

ತಾತ್ಪರ್ಯ :- ಅರ್ಜುನನು ಶ್ರೀಕೃಷ್ಣನ ಬಳಿ ಸುಭದ್ರೆಯನ್ನು ನನಗೆ ಕೊಡು ಎಂದು ಪಾರ್ಥಿಸದ್ದ. ಆಗ ಶ್ರೀಕೃಷ್ಣನು ನಿನಗೇ ಕೊಡುವೇನು ಎಂದು ಪ್ರತಿಜ್ಞೆಯನ್ನು ಮಾಡಿದ್ದ. ಆದರೆ ಈ ಕೃಷ್ಣನ ಪ್ರತಿಜ್ಞೆಯು ವಸುದೇವ ದೇವಕಿ ಮತ್ತು ಸಾತ್ಯಕಿ ವಿಪೃಥುವನ್ನು ಹೊರತುಪಡಿಸಿ ಯಾರಿಗೂ ತಿಳಿದಿರಲಿಲ್ಲ.

**ಅಸ್ತ್ರೇ ಶಸ್ತ್ರೇ ತತ್ತ್ವವಿದ್ಯಾಸು ಚೈವ**
**ಶಿಷ್ಯಃ ಶೈನೇಯೋ ವಾಸುದೇವೇಂದ್ರಸೂನ್ವೋಃ ।**
**ತಸ್ಮಾದಸ್ಮೈ ಕಥಯಾಮಾಸ ಕೃಷ್ಣಃ**
**ಸ್ವಶಿಷ್ಯತ್ವಾದ್ ವಿಪೃಥೋಶ್ಚಾಪಿ ಸರ್ವಮ್ ॥ ೧೭೬ ॥**

ಪದಚ್ಛೇದ :- ಅಸ್ತ್ರೇ, ಶಸ್ತ್ರೇ, ತತ್ವವಿದ್ಯಾಸ್ತು, ಚ, ಏವ, ಶಿಷ್ಯಃ ಶೈನೇಯಃ, ವಾಸುದೇವೇಂದ್ರಸೂನ್ವೋಃ, ತಸ್ಮಾತ್, ಅಸ್ಮೈ, ಕಥಯಾಮಾಸ, ಕೃಷ್ಣಃ, ಸ್ವಶಿಷ್ಯತ್ವಾತ್, ವಿಪೃಥೋಃ, ಚ, ಅಪಿ, ಸರ್ವಂ ।

ಅರ್ಥ :- ಅಸ್ತ್ರೇ = ಅಸ್ತ್ರಗಳಲ್ಲಿ, ಶಸ್ತ್ರೇ = ಶಸ್ತ್ರಗಳಲ್ಲಿ, ಚ = ಮತ್ತು, ತತ್ವ- ವಿದ್ಯಾಸು = ಶಾಸ್ತ್ರತತ್ವಜ್ಞಾನದಲ್ಲಿ, ಶೈನೆಯಃ = ಸಾತ್ಯಕಿಯು, ವಾಸುದೇವೆಂದ್ರ- ಸುನ್ವೋಃ = ಶ್ರೀಕೃಷ್ಣ ಮತ್ತು ಅರ್ಜುನನ, ಶಿಷ್ಯ = ಶಿಷ್ಯನು, ತಸ್ಮಾತ್ = ಆದ್ದರಿಂದ, ಕೃಷ್ಣಃ = ಶ್ರೀಕೃಷ್ಣನು, ಅಸ್ಮೈ = ಇವನಿಗೆ, ಚ = ಮತ್ತು, ವಿಪೃಥೋಃ = ವಿಪೃಥುವಿಗೆ, ಸ್ವಶಿಷ್ಯತ್ವಾತ್ = ತನ್ನ ಶಿಷ್ಯನಾದ್ದರಿಂದ, ಸರ್ವಂ ಕಥಯಾಮಾಸ = ಎಲ್ಲವನ್ನು ಹೇಳಿದನು.

ತಾತ್ಪರ್ಯ :- ಸಾತ್ಯಕಿಯು ಅಸ್ತ್ರವಿದ್ಯೆಗಳನ್ನು ಶಸ್ತ್ರವಿದ್ಯೆಯನ್ನು ವೇದಾಂತ ಶಾಸ್ತ್ರದ ತತ್ವಜ್ಞಾನವನ್ನು ಕೃಷ್ಣಾರ್ಜುನರ ಬಳಿ ಅಧ್ಯಯನದಿಂದ ಸಂಪಾದಿಸಿದ್ದ ಆದ್ದರಿಂದ ಅವನಿಗೆ ಈ ವಿಷಯ ಕೃಷ್ಣ ಹೇಳಿದ್ದ. ಅಷ್ಟೆ ಅಲ್ಲದೆ ವಿಪೃಥುವು ಶ್ರೀಕೃಷ್ಣನ ಶಿಷ್ಯನಾದ್ದರಿಂದ ಅವನಿಗೂ ಈ ವಿಷಯವನ್ನು ಹೇಳಿದ್ದ.

**ಅನ್ಯೇ ಸರ್ವೇ ವಾಸುದೇವಸ್ಯ ಪಾರ್ಥಾನ್**
**ಪ್ರಿಯಾನ್ ನಿತ್ಯಂ ಜಾನಮಾನಾ ಅಪಿ ಸ್ಮ ।**
**ರಾಮೇಣಾದಿಷ್ಟಾ ಉದ್ಧವೋಽಥಾಽಹುಕಾದ್ಯಾ**
**ಹಾರ್ದಿಕ್ಯಾದ್ಯಾ ನೈವ ದಿತ್ಸಂತಿ ಜಿಷ್ಣೋಃ ॥ ೧೭೭ ॥**

**ಪದಚ್ಛೇದ** :- ಅನ್ಯೇ, ಸರ್ವೇ, ವಾಸುದೇವಸ್ಯ, ಪಾರ್ಥಾನ್, ಪ್ರಿಯಾನ್, ನಿತ್ಯಂ, ಜಾನಮಾನಾ, ಅಪಿ, ಸ್ಮ ರಾಮೇಣ, ಆದಿಷ್ಟಾಃ, ಉದ್ಧವಃ, ಅಥ, ಆಹುಕಾದ್ಯಾಃ, ಹಾರ್ದಿಕ್ಯಾದ್ಯಾಃ, ನ, ಏವ, ದಿತ್ಸಂತಿ, ಜಿಷ್ಣೋಃ ।

**ಅರ್ಥ** :- ಉದ್ಧವಃ = ಉದ್ಧವನು, ಹಾರ್ದಿಕ್ಯಾದ್ಯಾಃ = ಕೃತವರ್ಮನೆ, ಆಹುಕಾದ್ಯಾಃ = ಆಹುಕ ಮೊದಲಾದ, ಅನ್ಯೇ ಸರ್ವೇ = ಉಳಿದವರೆಲ್ಲರೂ, ವಾಸುದೇವಸ್ಯ = ಶ್ರೀಹರಿಗೆ, ನಿತ್ಯಂ = ಯಾವಾಗಲೂ, ಪ್ರಿಯಾನ್ = ಪ್ರೀತಿ ಪಾತ್ರರಾದ, ಪಾರ್ಥಾನ್ = ಪಾಂಡವರನ್ನು, ಜಾನಮಾನಾಃ ಅಪಿ = ತಿಳಿದಿದ್ದರೂ, ರಾಮೇಣ ಬಲರಾಮನಿಂದ, ಆದಿಷ್ಟಾಃ = ಆದೇಶಿಸಲ್ಪಟ್ಟವರಾಗಿ, ಜಿಷ್ಣೋಃ = ಅರ್ಜುನನಿಗೆ, ನೈವ ದಿತ್ಸಾಂತಿ = ಕೊಡುತ್ತಿರಲಿಲ್ಲವಷ್ಟೆ.

**ತಾತ್ಪರ್ಯ** :- ಈ ನಾಲ್ಕು ಜನರನ್ನು ಬಿಟ್ಟು ಉಳಿದ ಎಲ್ಲ ಯಾದವರು ಕೃಷ್ಣನು ಪಾಂಡವಪ್ರಿಯ ಎಂದು ತಿಳಿದಿದ್ದರೂ ಬಲರಾಮನ ಆದೇಶಕ್ಕೆ, ಅನುಸಾರವಾಗಿ ಸುಭದ್ರೆಯನ್ನು ಅರ್ಜುನನಿಗೆ ಕೊಡಲು ಒಪ್ಪುತ್ತಿರಲಿಲ್ಲ.

**ದುರ್ಯೋಧನೇ ದಾತುಮಿಚ್ಛಂತಿ ಸರ್ವೇ**
**ರಾಮಪ್ರಿಯಾರ್ಥಂ ಜಾನಮಾನಾ ಹರೇಸ್ತತ್ ।**
**ಅಪ್ಯಪ್ರಿಯಂ ರಾಕ್ಷಸಾವೇಶಯುಕ್ತಾ-**
**ಸ್ತಸ್ಮಾತ್ ಸರ್ವಾನ್ ವಂಚಯಾಮಾಸ ಕೃಷ್ಣಃ ॥ ೧೭೮ ॥**

**ಪದಚ್ಛೇದ** :- ದುರ್ಯೋಧನೇ, ದಾತುಮ್, ಇಚ್ಛಂತಿ, ಸರ್ವೇ, ರಾಮಪ್ರಿಯಾರ್ಥಂ, ಜಾನಮಾನಾಃ, ಹರೇಃ, ತತ್, ಅಪಿ, ಅಪ್ರಿಯಂ, ರಾಕ್ಷಸಾವೇಶಯುಕ್ತಾಃ, ತಸ್ಮಾತ್, ಸರ್ವಾನ್, ವಂಚಯಾಮಾಸ, ಕೃಷ್ಣಃ ।

**ಅರ್ಥ** :- ರಾಕ್ಷಸವೇಶಯುಕ್ತಾಃ = ಅಸುರಾವೇಶವುಳ್ಳ, ಸರ್ವೇ = ಎಲ್ಲ ಯಾದವರು, ಹರೇಃ = ಶ್ರೀಕೃಷ್ಣನಿಗೆ, ಅಪ್ರಿಯಂ ಅಪಿ = ಸಂತೋಷ

ಕರವಲ್ಲದಿದ್ದರೂ ಕೂಡ, **ರಾಮಪ್ರಿಯಾರ್ಥಂ** = ಬಲರಾಮನನ್ನು ಸಂತೋಷಗಳಿಸಲು, **ದುರ್ಯೋಧನೆ** = ದುರ್ಯೋಧನನಿಗೆ, **ದಾತುಂ** = ಸುಭದ್ರೆಯನ್ನು ಕೊಡಲು, **ಇಚ್ಛಂತಿ** = ಬಯಸುತ್ತಾರೆ, **ತಸ್ಮಾತ್** = ಆದ್ದರಿಂದ, **ಕೃಷ್ಣಃ** = ಶ್ರೀಕೃಷ್ಣನು, **ಸರ್ವಾನ್** = ಎಲ್ಲರನ್ನು, **ವಂಚಯಾಮಾಸ** = ಮೋಸ ಮಾಡಿದನು.

ತಾತ್ಪರ್ಯ :- ಪ್ರದ್ಯುಮ್ನ ಸಾಂಬ ಕೃತವರ್ಮ ಮೊದಲಾದ ಎಲ್ಲ ಯಾದವರಲ್ಲಿ ಆ ಸಮಯದಲ್ಲಿ ಕಲಿಯ ಆವೇಶವಿತ್ತು. ಆದ್ದರಿಂದಲೇ ಕೃಷ್ಣನಿಗೆ ಸಂತೋಷಕರವಲ್ಲದಿದ್ದರೂ ಬಲರಾಮನನ್ನು ತುಷ್ಟಿಗೊಳಿಸಲು, ಸುಭದ್ರೆಯನ್ನು ದುರ್ಯೋಧನನಿಗೆ ಕೊಡಲು ನಿಶ್ಚಯಿಸಿದ್ದರು ಆದ್ದರಿಂದ ಶ್ರೀಕೃಷ್ಣ ಎಲ್ಲರನ್ನು ವಂಚನೆ ಮಾಡಿದ.

**ಪ್ರದ್ಯುಮ್ನಸಾಂಬಪ್ರಮುಖಾಶ್ಚ ವಂಚಿತಾ**
**ಯಯುಸ್ತೀರ್ಥಾರ್ಥಂ ರಾಮಯುಕ್ತಾಃ ಸಮಗ್ರಾಃ ।**
**ಪಿಂಡೋದ್ಧಾರಂ ತತ್ರ ಮಹೋತ್ಸವೇ-**
**ಷ್ವಾವರ್ತಯತ್ಸು ಕ್ವಚಿದೂಚೇ ಸುಭದ್ರಾ ॥ ೧೭೯ ॥**

ಪದಚ್ಛೇದ :- ಪ್ರದ್ಯುಮ್ನಸಾಂಬಪ್ರಮುಖಾಃ, ಚ, ವಂಚಿತಾಃ, ಯಯುಃ, ತೀರ್ಥಾರ್ಥಮ್, ರಾಮಯುಕ್ತಾಃ, ಸಮಗ್ರಾಃ, ಪಿಂಡೋದ್ಧಾರಂ, ತತ್ರ, ಮಹೋತ್ಸವೇಷು, ಆವರ್ತಯತ್ಸು, ಕ್ವಚಿದ್, ಊಚೆ, ಸುಭದ್ರಾ ।

ಅರ್ಥ :- **ಪ್ರದ್ಯುಮ್ನಸಾಂಬಪ್ರಮುಖಾಃ ಚ** = ಪ್ರದ್ಯುಮ್ನ ಸಾಂಬನೆ ಮೊದಲಾದವರೂ ಕೂಡ, **ವಂಚಿತಾಃ** = ಕೃಷ್ಣನಿಂದ, ವಂಚಿತರಾದರು, **ಕ್ವಚಿತ್** = ಒಂದುದಿನ, **ರಾಮಯುಕ್ತಾಃ** = ಬಲರಾಮನಿಂದ ಕೂಡಿದವರಾಗಿ, **ಸಮಗ್ರಾಃ** = ಎಲ್ಲ ಯಾದವರು, **ತೀರ್ಥಾರ್ಥಮ್** = ತೀರ್ಥಯಾತ್ರೆಗಾಗಿ, **ಪಿಂಡೋದ್ಧಾರಂ** = ಪಿಂಡೋದ್ಧಾರವೆಂಬ ಕ್ಷೇತ್ರವನ್ನು ಕುರಿತು, **ಯಯುಃ** = ಹೋದರು, **ತತ್ರ** = ಆ ಪಿಂಡೋದ್ಧಾರ ಕ್ಷೇತ್ರದಲ್ಲಿ, **ಮಹೋತ್ಸವೇಷು** = ದೊಡ್ಡ ಉತ್ಸವಗಳು **ಆವರ್ತಯತ್ಸು** = ನಡೆಯುತ್ತಿರಲು, **ಸುಭದ್ರಾ** = ಸುಭದ್ರೆಯು, **ಊಚೆ** = ಹೇಳಿದಳು.

**ತಾತ್ಪರ್ಯ** :- ಪ್ರದ್ಯುಮ್ನ ಸಾಂಬ ಮೊದಲಾದವರನ್ನು ಕೃಷ್ಣ ವಂಚಿಸಿದ್ದಾನೆ. ಒಮ್ಮೆ ಎಲ್ಲ ಯಾದವರು ಬಲರಾಮನಿಂದ ಕೂಡಿ ಪಿಂಡೋದ್ಧಾರ ಕ್ಷೇತ್ರಕ್ಕೆ ಹೋಗಿದ್ದಾರೆ. ಅಲ್ಲಿ ದೊಡ್ಡ ಉತ್ಸವದಲ್ಲಿ ಎಲ್ಲ ಮಗ್ನರಾದಾಗ ಇತ್ತ ಸುಭದ್ರೆಯು ಅರ್ಜುನನನ್ನು ಕೇಳುತ್ತಾಳೆ.

**ಯತೇ ತೀರ್ಥಾನ್ಯಾಚರನ್ ಬಾಂಧವಾಂಸ್ತ್ವ-**
**ಮದ್ರಾಕ್ಷೀರ್ನಃ ಕ್ವಚಿದಿಷ್ಟಾನ್ ಸ್ಮ ಪಾರ್ಥಾನ್ ।**
**ಕುಂತೀಂ ಕೃಷ್ಣಾಂ ಚೇತ್ಯಾಹ ಪೃಷ್ಟಃ ಸ ಪಾರ್ಥ**
**ಓಮಿತ್ಯೇತೇಷಾಮಾಹ ಚಾನಾಮಯಂ ಸಃ ॥ ೧೮೦ ॥**

**ಪದಚ್ಛೇದ :– ಯತೇ, ತೀರ್ಥಾನಿ, ಆಚರನ್, ಬಾಂಧವಾನ್, ತ್ವಮ್, ಅದ್ರಾಕ್ಷೀಃ, ನಃ, ಕ್ವಚಿತ್, ಇಷ್ಟಾನ್, ಸ್ಮ ಪಾರ್ಥಾನ್, ಕುಂತೀಂ, ಕೃಷ್ಣಾಂ, ಚ, ಇತಿ, ಆಹ, ಪೃಷ್ಟಃ, ಸಃ, ಪಾರ್ಥಃ, ಓಂ, ಇತಿ, ಏಷಾಮ್, ಆಹ, ಚ, ಅನಾಮಯಂ, ಸಃ ।**

**ಅರ್ಥ** :- **ಯತೇ** = ಎಲೈ ಸಂನ್ಯಾಸಿಯೆ, **ತ್ವಂ** = ನೀನು, **ತೀರ್ಥಾನಿ** = ತೀರ್ಥಕ್ಷೇತ್ರಗಳನ್ನು, **ಆಚರನ್** = ಸಂಚರಿಸುತ್ತ, **ಕ್ವಚಿತ್** = ಎಲ್ಲಿಯಾದರೂ, **ನಃ** = ನಮಗೆ, **ಇಷ್ಟಾನ್** = ಪ್ರೀತಿಪಾತ್ರರಾದ, **ಬಾಂಧವಾನ್** = ಬಂಧುಗಳಾದ, **ಪಾರ್ಥಾನ್** = ಕುಂತಿಯ ಮಕ್ಕಳನ್ನು, **ಕುಂತೀ** = ಕುಂತಿಯನ್ನು, **ಚ** = ಮತ್ತು, **ಕೃಷ್ಣಾಂ** = ದ್ರೌಪದಿಯನ್ನು, **ಅದ್ರಾಕ್ಷೀಃ** = ನೋಡಿದ್ದಿಯಾ, **ಇತಿ** = ಈ ರೀತಿ, **ಪೃಷ್ಟಃ** = ಕೇಳಲ್ಪಟ್ಟ, **ಪಾರ್ಥಃ** = ಅರ್ಜುನನು, **ಓಂ ಇತಿ ಆಹ** = ಹೌದು ಎಂದು ಹೇಳಿದ, **ಚ** = ಮತ್ತು, **ಸಃ** = ಅರ್ಜುನನು, **ತೇಷಾಂ** = ಅವರ, **ಅನಾಮಯಂ** = ಕ್ಷೇಮವನ್ನೂ ಕೂಡ, **ಆಹ** = ಹೇಳಿದನು.

**ತಾತ್ಪರ್ಯ** :- ಸಂನ್ಯಾಸಿಯೆ, ನೀನು ತೀರ್ಥಕ್ಷೇತ್ರವನ್ನು ಸಂಚಾರ ಮಾಡುತ್ತ ನಮ್ಮ ಇಷ್ಟ ಬಂಧುಗಳಾದ ಪಾಂಡವರನ್ನು, ಕುಂತಿಯನ್ನು, ದ್ರೌಪದಿಯನ್ನು ಎಲ್ಲಿಯಾದರೂ ಕಂಡಿದ್ದೀಯಾ. ಈ ರೀತಿ ಸುಭದ್ರೆಯು ಕೇಳಿದಾಗ ಅರ್ಜುನನು ಹೌದು ಎಂದು ಉತ್ತರಿಸಿದ ಮತ್ತು ಅವರು ಕುಶಲಿಗಳೂ ಎಂದು ಹೇಳಿದ.

**ಭೂಯಃ ಸಾಽವಾದೀದ್ ಭಗವನ್ನಿಂದ್ರಸೂನು-**
**ರ್ಗತಸ್ತೀರ್ಥಾರ್ಥಂ ಬ್ರಾಹ್ಮಣೇಭ್ಯಃ ಶ್ರುತೋ ಮೇ ।**

**ಕಚ್ಚಿದ್ ದೃಷ್ಟೋ ಭವತೇತ್ಯೋಮಿತಿ ಸ್ಮ**
**ಪಾರ್ಥೋಽಪ್ಯೂಚೇ ಕ್ವೇತಿ ಸಾಽಪೃಚ್ಛದೇನಮ್ ॥ ೧೮೧ ॥**

ಪದಚ್ಛೇದ :- **ಭೂಯಃ, ಸಾ, ಅವಾದೀತ್, ಭಗವನ್, ಇಂದ್ರಸೂನುಃ, ಗತಃ, ತೀರ್ಥಾರ್ಥಂ, ಬ್ರಾಹ್ಮಣೇಭ್ಯಃ, ಶ್ರುತಃ, ಮೇ, ಕ್ವಚಿತ್, ದೃಷ್ಟಃ, ಭವತಾ, ಇತಿ, ಓಂ, ಇತಿ ಸ್ಮ ಪಾರ್ಥಃ, ಅಪಿ, ಊಚೆ, ಕ್ವ, ಇತಿ, ಸಾ, ಅಪೃಚ್ಛತ್, ಏನಮ್ ।**

**ಅರ್ಥ** :- **ಭೂಯಃ** = ಮತ್ತೇ, **ಸಾ** = ಆ ಸುಭದ್ರೆಯು, **ಅವಾದೀತ್** = ಹೇಳಿದಳು, **ಭಗವನ್** = ಪೂಜ್ಯರಾದ ಸಂನ್ಯಾಸಿಗಳೇ, **ಇಂದ್ರಸೂನುಃ** = ಇಂದ್ರನ ಮಗನಾದ ಅರ್ಜುನನು, **ತೀರ್ಥಾರ್ಥಂ** = ತೀರ್ಥಕ್ಷೇತ್ರಯಾತ್ರೆಗಾಗಿ, **ಗತಃ** = ಹೋಗಿದ್ದಾನೆ, **ಇತಿ** = ಎಂದು, **ಬ್ರಾಹ್ಮಣೇಭ್ಯಃ** = ಬ್ರಾಹ್ಮಣರಿಂದ, **ಮೇ** = ನನ್ನಿಂದ, **ಶ್ರುತಃ** = ಕೇಳಲ್ಪಟ್ಟಿದೆ, **ಭವತಾ** = ನಿನ್ನಿಂದ, **ಕ್ವಚಿತ್** = ಎಲ್ಲಿಯಾದರೂ, **ದೃಷ್ಟಃ** = ನೋಡಲ್ಪಟ್ಟಿದ್ದಾನೆಯೆ, **ಪಾರ್ಥೋಽಪಿ** = ಅರ್ಜುನನಾದರೂ, **ಓಂ ಇತಿ ಸ್ಮ ಊಚೆ** = ಹೌದು ಎಂದು ಹೇಳಿದನು, **ಸಾಽಪಿ** = ಅವಳಾದರೂ, **ಏನಮ್** = ಯತಿರೂಪದಲ್ಲಿರುವ ಅರ್ಜುನನನ್ನು, **ಕ್ವ** = ಎಲ್ಲಿದ್ದಾನೆ, **ಇತಿ** = ಎಂದು, **ಅಪೃಚ್ಛತ್** = ಕೇಳಿದಳು.

**ತಾತ್ಪರ್ಯ** :- ಸುಭದ್ರೆಯು ಮತ್ತೆ ಪ್ರಶ್ನಿಸುತ್ತಾಳೆ, ಪೂಜ್ಯರೇ ಆ ಪಾಂಡವರಲ್ಲಿ ಇಂದ್ರನ ಮಗನಾದ ಅರ್ಜುನ ತೀರ್ಥಕ್ಷೇತ್ರಯಾತ್ರೆಗೆ ಹೋಗಿದ್ದಾನೆ ಎನ್ನುವುದು ಬ್ರಾಹ್ಮಣರ ಮುಖ ನೋಡಿ ನನಗೆ ತಿಳಿಯಿತು. ನೀನು ಆ ಅರ್ಜುನನು ಎಲ್ಲಿಯಾದರೂ ನೋಡಿದ್ದಿಯೋ? ಹೌದು ಎಂದು ಉತ್ತರಿಸಿದ. ಮತ್ತೆ ಅವಳು ಕೇಳುತ್ತಾಳೆ ಎಲ್ಲಿ ಆ ಅರ್ಜುನನು ಇರುವನು.

**ಅತ್ರೈವೇತಿ ಸ್ಮಯಮಾನಂ ಚ ಪಾರ್ಥಂ**
**ಪುನಃಪುನಃ ಪರ್ಯಪೃಚ್ಛಚ್ಚುಭಾಂಗೀ ।**
**ಸೋಽಪ್ಯಾಹೋನ್ನತ್ತೇ ಸೋಽಸ್ಮಿ ಹೀತಿ ಸ್ಮಯಂಸ್ತಾಂ**
**ಫುಲ್ಲಾಕ್ಷೀ ತಂ ಸಾ ದದರ್ಶಾತಿಹೃಷ್ಟಾ ॥ ೧೮೨ ॥**

ಪದಚ್ಛೇದ :- ಅತ್ರ, ಏವ, ಇತಿ, ಸ್ಮಯಮಾನಂ, ಚ, ಪಾರ್ಥಂ, ಪುನಃ, ಪುನಃ, ಪರ್ಯಪೃಚ್ಛತ್, ಶುಭಾಂಗೀ, ಸಃ, ಅಪಿ, ಆಹ, ಉನ್ಮತೆ, ಸಃ, ಅಸ್ಮಿ ಹಿ, ಇತಿ, ಸ್ಮಯನ್, ತಾಂ, ಫುಲ್ಲಾಕ್ಷೀ, ತೇ, ಸಾ, ದದರ್ಶ, ಅತಿಹೃಷ್ಟಾ ।

ಅರ್ಥ :- ಅತ್ರೈವ ಇತಿ = ಇಲ್ಲಿಯೆ ಎಂದು, ಸ್ಮಯಮಾನಂ = ನಗುತ್ತಿರುವ, ಪಾರ್ಥಂ = ಅರ್ಜುನನನ್ನು, ಪುನಃ ಪುನಃ = ಮತ್ತೆ ಮತ್ತೆ, ಶುಭಾಂಗೀ = ಮಂಗಳಾಂಗಿಯಾದ ಸುಭದ್ರೆಯು, ಪರ್ಯಪೃಚ್ಛತ್ = ಕೇಳಿದಳು, ಉನ್ಮತೇ = ಹುಚ್ಚಿ, ಸೋಸ್ಮಿ = ಅವನೆ ನಾನಾಗಿದ್ದೇನೆ, ಇತಿ = ಈ ರೀತಿ, ಸ್ಮಯನ್ = ನಗುತ್ತಾ, ತಾಂ = ಆ ಸುಭದ್ರೆಯನ್ನು, ಆಹ = ಹೇಳಿದನು, ಸಾ = ಅವಳು, ಫುಲ್ಲಾಕ್ಷೀ = ಅರಳಿದ ಕಣ್ಣುಗಳುಳ್ಳವನಾಗಿ, ಅತಿಹೃಷ್ಟಾ = ಪರಮಾನಂದಭರಿತಳಾಗಿ, ದದರ್ಶ = ನೋಡಿದಳು.

ತಾತ್ಪರ್ಯ :- ಅರ್ಜುನನು ಇಲ್ಲಿಯೆ ಇದ್ದಾನೆ ಎಂದು ನಗುತ್ತಾ ಹೇಳಿದಾಗ ಮಂಗಳಾಂಗಿಯಾದ ಸುಭದ್ರೆಯು ಎಲ್ಲಿ ಎಲ್ಲಿ ಎಂದು ಮತ್ತೆ ಕೇಳಿದ್ದಾಳೆ. ಹುಚ್ಚಿ ಆ ಅರ್ಜುನನೇ ನಾನಾಗಿದ್ದೇನೆ ಎಂದು ನಗುತ್ತಾ ಹೇಳಿದಾಗ ಅರಳಿದ ಕಣ್ಣುಗಳಿಂದ ಅತ್ಯಂತ ಸಂತುಷ್ಟಳಾಗಿ ಅರ್ಜುನನನ್ನು ನೋಡಿದಳು.

ತತೋ ಹರ್ಷಾಲ್ಲಜ್ಜಯಾ ಚೋತ್ಪಲಾಕ್ಷೀ
ಕಿಂಚಿನ್ನೋಚೇ ಪಾರ್ಥ ಏನಾಮುವಾಚ ।
ಕಾಮಾವಿಷ್ಟೋ ಮುಖ್ಯಕಾಲೋ ಹ್ಯಯಂ ನಾ-
ವುದ್ವಾಹಾರ್ಥೇಕ್ತಸ್ತ್ವಿತಿ ಸಾ ಚೈನಮಾಹ ॥ ೧೮೩ ॥

ಪದಚ್ಛೇದ :- ತತಃ, ಹರ್ಷಾತ್, ಲಜ್ಜಯಾ, ಚ, ಉತ್ಪಲಾಕ್ಷೀ, ಕಿಂಚಿತ್, ನ, ಊಚೆ, ಪಾರ್ಥಃ, ಏನಾಂ, ಉವಾಚ, ಕಾಮಾವಿಷ್ಟಃ, ಮುಖ್ಯಕಾಲಃ, ಹಿ, ಅಯಂ, ನೌ, ಉದ್ವಾಹಾರ್ಥೇ, ಅಸ್ತು, ಇತಿ, ಸಾ, ಚ, ಏನಮ್, ಆಹ ।

ಅರ್ಥ :- ತತಃ = ಅನಂತರ, ಉತ್ಪಲಾಕ್ಷೀ = ಅರಳಿದ ಕಣ್ಣುಗಳುಳ್ಳ, ಹರ್ಷಾತ್ = ಆನಂದದಿಂದ, ಚ = ಮತ್ತು, ಲಜ್ಜಯಾ = ಲಜ್ಜೆಯಿಂದ, ಕಿಂಚಿದ್ = ಸ್ವಲ್ಪವೂ, ನ ಊಚೆ = ಮಾತನಾಡಲಿಲ್ಲ, ಪಾರ್ಥಃ = ಅರ್ಜುನನು, ಏನಾಂ = ಇವಳನ್ನು ಕುರಿತು, ಉವಾಚ = ಹೇಳಿದನು, ಕಾಮಾವಿಷ್ಟ = ಪರಸ್ಪರ ಅನುರಾಗವುಳ್ಳ, ನೌ = ನಮ್ಮಿಬ್ಬರ, ಉದ್ವಾಹಾರ್ಥೇ = ವಿವಾಹಕ್ಕೋಸ್ಕರ,

ಅಯಂ = ಇದು, ಮುಖ್ಯಕಾಲಃ = ಶುಭಸಮಯವೂ, ಅಸ್ತು = ಆಗಲಿ, ಇತಿ = ಎಂದು, ಸಾ ಚ = ಅವಳಾದರೂ, ಏನಮ್ = ಅರ್ಜುನನನ್ನು, ಆಹ = ಹೇಳಿದಳು.

ತಾತ್ಪರ್ಯ :- ಬಳಿಕ ಸುಭದ್ರೆಯು ಸಂತೋಷ ಮತ್ತು ನಾಚಿಕೆಯಿಂದ ಏನೂ ಮಾತನಾಡದೆ ಇದ್ದಳು. ಅರ್ಜುನನು ಹೇಳುತ್ತಾನೆ ಪರಸ್ಪರ ನಮ್ಮಲ್ಲಿ ಪ್ರೀತಿ ತುಂಬಿದ ಈ ಸಮಯದಲ್ಲಿಯೇ ನಾವಿಬ್ಬರು ವಿವಾಹವನ್ನು ಮಾಡಿಕೊಳ್ಳೊಣ.

**ನಾತಿಕ್ರಮೋ ವಾಸುದೇವಸ್ಯ ಯುಕ್ತ-**
**ಸ್ತಸ್ಮಾತ್ ತೇನ ಸ್ವಪಿತೃಭ್ಯಾಂ ಚ ದತ್ತಾಮ್ ।**
**ಯುಕ್ತೋ ನಿಜೈರ್ಬಂಧುಭಿಶ್ಚೋತ್ಸವೇ ಮಾಂ**
**ಸಮುದ್ವಹೇತ್ಯಥ ಕೃಷ್ಣಂ ಸ ದಧ್ಯೌ ॥ ೧೮೪ ॥**

ಪದಚ್ಛೇದ :- ನ, ಅತಿಕ್ರಮಃ, ವಾಸುದೇವಸ್ಯ, ಯುಕ್ತಃ, ತಸ್ಮಾತ್, ತೇನ, ಸ್ವಪಿತೃಭ್ಯಾಂ, ಚ, ದತ್ತಾಂ, ಯುಕ್ತಃ, ನಿಜೈಃ, ಬಂಧುಭಿಃ, ಚ, ಉತ್ಸವೆ, ಮಾಂ, ಸಮುದ್ವಹ, ಇತಿ, ಅಥ, ಕೃಷ್ಣಂ, ಸ, ದಧ್ಯೌ ।

ಅರ್ಥ :- ವಾಸುದೇವಸ್ಯ = ಶ್ರೀಕೃಷ್ಣನ, ಅತಿಕ್ರಮಃ = ಮೀರುವುದು, ನ ಯುಕ್ತಃ = ಯುಕ್ತವಲ್ಲ, ತಸ್ಮಾತ್ = ಆದ್ದರಿಂದ, ತೇನ = ಕೃಷ್ಣನಿಂದ, ಸ್ವಪಿತೃಭ್ಯಾಂ = ತನ್ನ ತಂದೆತಾಯಂದಿರಾದ ವಸುದೇವ ದೇವಕಿಯರಿಂದ, ದತ್ತಾಂ = ಕೊಡಲ್ಪಟ್ಟ, ಚ = ಮತ್ತು, ನಿಜೈಃ ಬಂಧುಭಿಃ = ನಮ್ಮ ಬಂಧುಗಳಿಂದ, ಉತ್ಸವೇ = ಮಹೋತ್ಸವದಲ್ಲಿ, ಮಾಂ = ನನ್ನನ್ನು, ಸಮುದ್ವಹ = ವಿವಾಹ ಮಾಡಿಕೊ, ಇತಿ = ಎಂದು ಹೇಳಿದಳು, ಅಥ = ಅನಂತರ, ಸಃ = ಅರ್ಜುನನು, ಕೃಷ್ಣಂ = ಶ್ರೀಕೃಷ್ಣನನ್ನು, ದಧ್ಯೌ = ಸ್ಮರಿಸಿದನು.

ತಾತ್ಪರ್ಯ :- ಸುಭದ್ರೆಯೆ ಅರ್ಜುನನಿಗೆ ಹೇಳುತ್ತಾಳೆ. ಅಣ್ಣನಾದ ಕೃಷ್ಣನನ್ನು ಬಿಟ್ಟು ಯಾವ ಕೆಲಸವನ್ನು ಮಾಡುವುದು ಸರಿಯಲ್ಲ. ಆದ್ದರಿಂದ ತಂದೆ ತಾಯಂದಿರು ಶ್ರೀಕೃಷ್ಣ ನಿನಗೆ ಕೊಟ್ಟಾಗ ಬಂಧು ಬಾಂಧವರಿಂದ ಕೂಡಿದ ಮಹೋತ್ಸವದಲ್ಲಿ ನನ್ನ ಮದುವೆ ಮಾಡಿಕೊ. ಹೀಗೆ ಹೇಳಿ ಶ್ರೀಕೃಷ್ಣನನ್ನು ಸ್ಮರಿಸಿದಳು.

**ಮಾತಾಪಿತೃಭ್ಯಾಂ ಸಹಿತೋಽಥ ಕೃಷ್ಣ-**
**ಸ್ತತ್ರೈವಾಽಯಾದ್ ವಾಸವಶ್ಚಾಥ ಶಚ್ಯಾ ।**
**ಸಮಂ ಮುನೀಂದ್ರೈಃ ಫಲ್ಗುನೇನ ಸ್ಮೃತಃ ಸನ್**
**ತತ್ರೈವಾಽಗಾತ್ ಪ್ರೀತಿಯುಕ್ತೋ ನಿಶಾಯಾಮ್ ॥ ೧೮೫ ॥**

**ಪದಚ್ಛೇದ :-** ಮಾತಾಪಿತೃಭ್ಯಾಂ, ಸಹಿತಃ, ಅಥ, ಕೃಷ್ಣಃ, ತತ್ರ, ಏವ, ಆಯಾತ್, ವಾಸವಃ, ಚ, ಅಥ, ಶಚ್ಯಾ, ಸಮಂ, ಮುನೀಂದ್ರೈಃ, ಫಲ್ಗುನೇನ, ಸ್ಮೃತಃ, ಸಃ, ತತ್ರ, ಏವ, ಆಗಾತ್, ಪ್ರೀತಿಯುಕ್ತಃ, ನಿಶಾಯಾಂ ।

**ಅರ್ಥ :-** **ಅಥ** = ಅನಂತರ, **ಮಾತಾಪಿತೃಭ್ಯಾಂ** = ತಂದೆ ತಾಯಂದಿರಾದ ವಸುದೇವ ದೇವಕಿಯರೊಂದಿಗೆ, **ಕೃಷ್ಣಃ** = ಶ್ರೀಕೃಷ್ಣನು, **ತತ್ರೈವ** = ಅಲ್ಲಿಯೆ, **ಆಯಾತ್** = ಬಂದನು, **ಚ** = ಮತ್ತು, **ಫಲ್ಗುನೇನ** = ಅರ್ಜುನನಿಂದ, **ಸ್ಮೃತಃ** = ನೆನೆಯಲ್ಪಟ್ಟ, **ಪ್ರೀತಿಯುಕ್ತಃ** = ಪ್ರೀತಿಯಿಂದ ಕೂಡಿದವನಾದ, **ವಾಸವಃ** = ಇಂದ್ರನು, **ಶಚ್ಯಾ** = ಶಚಿದೇವಿಯಿಂದ, **ಮುನಿಂದ್ರೈಃ** = ವಸಿಷ್ಠ ನಾರದಾದಿ ಋಷಿಗಳಿಂದ, **ತತ್ರೈವ** = ಆ ರೈವತ ಪರ್ವತದಲ್ಲಿಯೆ, **ಆಗಾತ್** = ಬಂದನು.

**ತಾತ್ಪರ್ಯ :-** ಸುಭದ್ರೆಯು ಸ್ಮರಿಸಿದ ಕೂಡಲೇ ತಂದೆ ತಾಯಿ ಸಮೇತನಾಗಿ ಕೃಷ್ಣ ಬಂದಿದ್ದಾನೆ. ಅರ್ಜುನನು ಇಂದ್ರನನ್ನು ಸ್ಮರಿಸಿದಾಗ ಶಚೀದೇವಿ ನಾರದ ವಿಶ್ವಾಮಿತ್ರ ಮೊದಲಾದ ಋಷಿಗಳಿಂದ ಸಮೇತನಾಗಿ ದೇವೇಂದ್ರ ಬಂದನು.

**ಕೃಷ್ಣಸ್ತತಃ ಪುರುಹೂತೇನ ಸಾಕಂ**
**ತಯೋರ್ವಿವಾಹಂ ಕಾರಯಾಮಾಸ ಸಮ್ಯಕ್ ।**
**ಮಾತಾಪಿತೃಭ್ಯಾಂ ಸಾತ್ಯಕಿನಾಽಪಿ ಯುಕ್ತೋ**
**ಮಹೋತ್ಸವೇಽನ್ಯಾವಿದಿತೇ ಮುನೀಂದ್ರೈಃ ॥ ೧೮೬ ॥**

**ಪದಚ್ಛೇದ :-** ಕೃಷ್ಣಃ, ತತಃ, ಪುರೂಹತೇನ, ಸಾಕಂ, ತಯೋಃ, ವಿವಾಹಂ, ಕಾರಯಾಮಾಸ, ಸಮ್ಯಕ್, ಮಾತಾಪಿತೃಭ್ಯಾಂ, ಸಾತ್ಯಕಿನಾ, ಅಪಿ, ಯುಕ್ತಃ, ಮಹೋತ್ಸವೇ, ಅನ್ಯಾವಿದಿತೇ, ಮುನೀಂದ್ರೈಃ ।

**ಅರ್ಥ** :- **ತತಃ** = ಅನಂತರ, **ಪುರೂಹತೇನ ಸಾಕಂ** = ಇಂದ್ರನ ಜೊತೆ, **ಮಾತಾಪಿತೃಭ್ಯಾಂ** = ತಂದೆ ತಾಯಂದಿರಿಂದ, **ಸಾತ್ಯಕಿನಾಽಪಿ** = ಸಾತ್ಯಕಿಯಿಂದ, **ಮುನೀಂದ್ರೈಃ** = ವಸಿಷ್ಠಾದಿ ಋಷಿಗಳಿಂದ, **ಯುಕ್ತಃ** = ಕೂಡಿದ, **ಕೃಷ್ಣಃ** = ಶ್ರೀಕೃಷ್ಣನು, **ಅನ್ಯಾವಿದಿತೇ** = ನಾಲ್ಕು ಜನರನ್ನು ಬಿಟ್ಟು ಬೇರೆಯಾರಿಂದಲೂ ಗೊತ್ತಾಗದೆ ಇರುವ, **ಮಹೋತ್ಸವೇ** = ದೊಡ್ಡ ಉತ್ಸವದಲ್ಲಿ, **ವಿವಾಹಂ** = ಮದುವೆಯನ್ನು, **ಕಾರಯಾಮಾಸ** = ಮಾಡಿಸಿದನು.

**ತಾತ್ಪರ್ಯ** :- ಶ್ರೀಕೃಷ್ಣನು ಉಳಿದ ಯಾದವರಿಗೆ ಗೊತ್ತಾಗದಂತೆ, ದೇವೇಂದ್ರ, ವಸುದೇವ, ದೇವಕಿ, ಸಾತ್ಯಕಿ ಅತ್ರಿ ಮೊದಲಾದ ಋಷಿಗಳಿಂದ ಸಮೇತನಾಗಿ ಮದುವೆಯನ್ನು ಮಾಡಿಸಿದ್ದಾನೆ.

**ತತಃ ಕೃಷ್ಣಃ ಸ್ಯಂದನಂ ಫಲ್ಗುನಾರ್ಥೇ**
**ನಿಧಾಯ ಸ್ವಂ ಪ್ರಯಯೌ ತದ್ರಜನ್ಯಾಮ್ ।**
**ಗತೇ ಚ ಶಕ್ರೇ ರಥಮಾರುರೋಹ**
**ಪ್ರಾತಃ ಪಾರ್ಥಃ ಸಹಿತೋ ಭಾರ್ಯಯೈವ ॥ ೧೮೭ ॥**

**ಪದಚ್ಛೇದ** :- ತತಃ, ಕೃಷ್ಣಃ, ಸ್ಯಂದನಂ, ಫಲ್ಗುನಾರ್ಥೇ, ನಿಧಾಯ, ಸ್ವಂ, ಪ್ರಯಯೌ, ತದ್ರಜನ್ಯಾಂ, ಗತೇ, ಚ, ಶಕ್ರೇ, ರಥಮ್, ಆರುರೋಹ, ಪ್ರಾತಃ, ಪಾರ್ಥಃ, ಸಹಿತಃ, ಭಾರ್ಯಯಾ, ಏವ ।

**ಅರ್ಥ** :- **ತತಃ** = ಅನಂತರ, **ಕೃಷ್ಣಃ** = ಕೃಷ್ಣನ, **ಫಲ್ಗುನಾರ್ಥೇ** = ಅರ್ಜುನನಿಗೋಸ್ಕರ, **ಸ್ವಂ** = ತನ್ನದ್ದಾದ, **ಸ್ಯಂದನಂ** = ರಥವನ್ನು, **ನಿಧಾಯ** = ಇಟ್ಟು, **ತದ್ರಜನ್ಯಾಂ** = ಆ ರಾತ್ರಿಯಲ್ಲಿಯೆ, **ಪ್ರಯಯೌ** = ಪಿಂಡೋದ್ಧಾರ ಕ್ಷೇತ್ರಕ್ಕೆ ಹೋದನು, **ಅಥ** = ಕೃಷ್ಣ ಹೋದನಂತರ, **ಶಕ್ರೇ ಗತೇ** = ಇಂದ್ರನು ಹೋಗಲು, **ಪ್ರಾತಃ** = ಬೆಳಗಿನ ಸಮಯದಲ್ಲಿ, **ಭಾರ್ಯಯಾ ಸಹಿತಃ** = ಹೆಂಡತಿಯಿಂದ ಕೂಡಿದವನಾಗಿ, **ಪಾರ್ಥಃ** = ಅರ್ಜುನನು, **ರಥಮ್** = ರಥವನ್ನು, **ಆರೂರೋಹ** = ಎರಿದನು.

**ತಾತ್ಪರ್ಯ** :- ಸುಭದ್ರೆಯ ವಿವಾಹವಾದ ನಂತರ ಶ್ರೀಕೃಷ್ಣನು ಅರ್ಜುನನಿಗಾಗಿ ರಥವನ್ನು ಕೊಟ್ಟು ರಾತ್ರಿಯಲ್ಲೇ ಪಿಂಡೋದ್ಧಾರಕ್ಕೆ ತೆರಳಿದ್ದಾನೆ

ನಂತರ ಇಂದ್ರನು ದೇವಲೋಕಕ್ಕೆ ಹೋಗಲು ಬೆಳಗಿನ ಜಾವದಲ್ಲಿ ಹೆಂಡತಿಯಿಂದ ಸಹಿತನಾಗಿ ರಥವನ್ನು ಏರಿದ.

**ಸರ್ವಾಯುಧೈರ್ಯುಕ್ತರಥಂ ಸಮಾಸ್ಥಿತೇ**
**ಗೃಹೀತಚಾಪೇ ಫಲ್ಗುನೇ ದ್ವಾರವತ್ಯಾಮ್ ।**
**ಆಸೀದ್ ರಾವಃ ಕಿಂಕಿಮೇತತ್ ತ್ರಿದಂಡೀ**
**ಕನ್ಯಾಂ ಹರತ್ಯೇಷ ಕೋದಂಡಪಾಣಿಃ ॥ ೧೮೮ ॥**

**ಪದಚ್ಛೇದ** :- ಸರ್ವಾಯುಧೈಃ, ಯುಕ್ತರಥಂ, ಸಮಾಸ್ಥಿತೇ, ಗೃಹೀತಚಾಪೇ, ಫಲ್ಗುನೇ, ದ್ವಾರವತ್ಯಾಂ, ಆಸೀತ್, ರಾವಃ, ಕಿಮ್ ಕಿಮ್, ಏತತ್, ತ್ರಿದಂಡೀ, ಕನ್ಯಾಂ, ಹರತಿ, ಏಷಃ, ಕೋದಂಡಪಾಣಿಃ ।

**ಅರ್ಥ** :- **ಸರ್ವಾಯುಧೈಃ** = ಎಲ್ಲ ಆಯುಧಗಳಿಂದ, **ಯುಕ್ತರಥಂ** = ಕೂಡಿದ ರಥವನ್ನು, **ಗೃಹೀತಚಾಪೇ** = ಧನುಸ್ಸನ್ನು ಹಿಡಿದಿರುವ, **ಫಲ್ಗುನೇ** = ಅರ್ಜುನನು, **ಸಮಾಸ್ಥಿತೇ** = ನಿಂತಾಗ, **ದ್ವಾರವತ್ಯಾಂ** = ದ್ವಾರಕಾಪಟ್ಟಣದಲ್ಲಿ, **ಏಷಃ** = ಈ, **ತ್ರಿದಂಡೀ** = ಸಂನ್ಯಾಸಿಯು, **ಕೋದಂಡಪಾಣಿಃ** = ಧನುಸ್ಸನ್ನು ಹಿಡಿದವನಾಗಿ, **ಕನ್ಯಾಂ** = ಕನ್ಯೆಯನ್ನು, **ಹರತಿ** = ಅಪಹರಿಸುತ್ತಾನೆ, **ಏತತ್ ಕಿಮ್** = ಇದು ಏನು, **ಕಿಮ್ ಇತಿ** = ಎಂದು, **ರಾವಃ** = ಶಬ್ದವು, **ಆಸೀತ್** = ಕೇಳಿತು.

**ತಾತ್ಪರ್ಯ** :- ಆ ರಥದಲ್ಲಿ ಅನೇಕ ಆಯುಧಗಳಿದ್ದವು. ಅಂತಹ ರಥದಲ್ಲಿ ಧನುಸ್ಸನ್ನು ಹಿಡಿದು ಅರ್ಜುನನು ನಿಂತಾಗ ದ್ವಾರಕೆಯಲ್ಲಿ ಕೋಲಾಹಲ ಧ್ವನಿಯು ಕೇಳಿಸಿದ. ಏನಿದು ಆಶ್ಚರ್ಯ ಸಂನ್ಯಾಸಿಯೂ ದಂಡವನ್ನು ಹಿಡಿಯದೇ ಬಿಲ್ಲನ್ನು ಹಿಡಿದವನಾಗಿ ಕನ್ಯೆಯನ್ನು ಅಪಹರಿಸುತ್ತಿದ್ದಾನೆ.

**ತತಸ್ತುಂ ತಂ ಸತನುತ್ರಂ ಮಹೇಂದ್ರ-**
**ದತ್ತೇ ದಿವ್ಯೇ ಕುಂಡಲೇ ವಾಸಸೀ ಚ ।**
**ದಿವ್ಯಾನಿ ರತ್ನಾನಿ ಚ ಭೂಷಣಾನಿ**
**ದೃಷ್ಟ್ವಾ ಬಿಭ್ರಾಣಂ ರಕ್ಷಿಣೋಽವಾರಯನ್ ಸ್ಮ ॥ ೧೮೯ ॥**

ಪದಚ್ಛೇದ :- ತತಃ, ತು, ತೇ, ಸತನುತ್ರಂ, ಮಹೇಂದ್ರದತ್ತೆ, ದ್ವಿವ್ಯೇ, ಕುಂಡಲೆ, ವಾಸಸೀ, ಚ, ದ್ವಿವ್ಯಾನಿ, ರತ್ನಾನಿ, ಚ, ಭೂಷಣಾನಿ, ದೃಷ್ಟ್ವಾ, ಬಿಭ್ರಾಣಂ, ರಕ್ಷಿಣಃ, ಅವಾರಯನ್, ಸ್ಮ।

ಅರ್ಥ :- ತತಃ = ಕೋಲಾಹಲ ಕೇಳಿದ ನಂತರ, ರಕ್ಷಿಣಃ = ಪುರದ ರಕ್ಷಕರು, ಸತನುತ್ರಂ = ಕವಚವನ್ನು ಧರಿಸಿದ, ಮಹೇಂದ್ರದತ್ತೇ = ಇಂದ್ರನಿಂದ ಕೊಡಲ್ಪಟ್ಟ, ಕುಂಡಲೇ = ಕರ್ಣಕುಂಡಲಗಳನ್ನು, ವಾಸಸೀ = ವಸ್ತ್ರಗಳನ್ನು, ದಿವ್ಯಾನಿ ರತ್ನಾನಿ ವಿಭೂಷಣಾನಿ = ದಿವ್ಯರತ್ನಾಭರಣಗಳನ್ನು, ಬಿಭ್ರಾಣಂ = ಧರಿಸಿದ ಅರ್ಜುನನನ್ನು, ದೃಷ್ಟ್ವಾ = ನೋಡಿ, ಅವಾರಯನ್ ಸ್ಮ = ತಡೆದರಷ್ಟೆ

ತಾತ್ಪರ್ಯ :- ಬಳಿಕ ಅರ್ಜುನ ದೇವೇಂದ್ರ ಕೊಟ್ಟಿರುವ ಕರ್ಣಕುಂಡಲಗಳನ್ನು ದಿವ್ಯವಸ್ತ್ರಗಳನ್ನು ಅನೇಕ ರತ್ನಾಭರಣಗಳನ್ನು ಧರಿಸಿದನು. ಇಂತಹ ಅರ್ಜುನನು ಎಲ್ಲರೂ ತಡೆದಿದ್ದಾರೆ.

**ತತಃ ಸ ಆಬದ್ಧತಲಾಂಗುಲಿತ್ರಃ**
**ಸತೂಣೀರಶ್ಚಾಪಮಾಯಮ್ಯ ಬಾಣೈಃ ।**
**ಚಕ್ರೇಽಂತರಿಕ್ಷಂ ಪ್ರದಿಶೋ ದಿಶಶ್ಚ**
**ನಿರಂತರಂ ಶಿಕ್ಷಯಾ ವಿದ್ಯಯಾ ಚ ॥ ೧೯೦ ॥**

ಪದಚ್ಛೇದ :- ತತಃ, ಸಃ, ಆಬದ್ಧತಲಾಂಗುಲಿತ್ರಃ, ಸತೂಣೀರಃ, ಚಾಪಮ್, ಆಯಮ್ಯ, ಬಾಣೈಃ, ಚಕ್ರೆ, ಅಂತರಿಕ್ಷಂ, ಪ್ರದಿಶಃ, ದಿಶಃ, ಚ, ನಿರಂತರಂ, ಶಿಕ್ಷಯಾ, ವಿದ್ಯಯಾ, ಚ।

ಅರ್ಥ :- ತತಃ = ಅನಂತರ, ಸಃ = ಅರ್ಜುನನು, ಆಬದ್ಧತಲಾಂಗುಲಿತ್ರಃ = ಅಂಗೈ ಮತ್ತು ಬೆರಳುಗಳ ಕವಚವನ್ನು ಧರಿಸಿದವನಾಗಿ, ಸತೂಣೀರಃ = ಬತ್ತಳಿಕೆಯನ್ನು ಧರಿಸಿದವನಾಗಿ, ಚಾಪಂ = ಬಿಲ್ಲನ್ನು, ಆಯಮ್ಯ = ಎಳೆದು, ಬಾಣೈಃ = ಅನೇಕ ಬಾಣಗಳಿಂದ, ನಿರಂತರಂ = ಸತತ, ಶಿಕ್ಷಯಾ = ಅಭ್ಯಾಸದ ಬಲದಿಂದ, ವಿದ್ಯಯಾ = ವಿದ್ಯಾಬಲದಿಂದ, ಅಂತರಿಕ್ಷಂ = ಅಂತರಿಕ್ಷಲೋಕವನ್ನು, ದಿಶಃ = ಎಲ್ಲ ದಿಕ್ಕನ್ನು, ಪ್ರದಿಶಃ = ವಿದಿಕ್ಕುಗಳನ್ನು, ಚಕ್ರೇ = ತುಂಬಿಸಿದನು.

ತಾತ್ಪರ್ಯ :- ಅರ್ಜುನನು ಅಂಗೈ ಮತ್ತು ಬೆರಳುಗಳಿಗೆ ಕವಚವನ್ನು ಧರಿಸಿದ. ಬೆನ್ನಿನಲ್ಲಿ ಬತ್ತಳಿಕೆಯನ್ನು ಹಾಕಿಕೊಂಡು ಧನುಸ್ಸನ್ನು ಎಳೆದು ಬಾಣಗಳಿಂದ ಎಲ್ಲ ದಿಕ್ಕುಗಳನ್ನು ವಿದಿಕ್‌ಗಳನ್ನು ಅಂತರಿಕ್ಷ ಲೋಕವನ್ನು ಹಿಂದೆ ಮಾಡಿದ ನಿರಂತರ ಅಭ್ಯಾಸದ ಬಲದಿಂದ ವಿಲಕ್ಷಣವಾದ ಧನುರ್ವಿದ್ಯೆಯಿಂದ ತುಂಬಿದನು.

**ಚಕ್ರೇ ಸಾರಥ್ಯಂ ಕೇಶವೇನೈತದರ್ಥೇ**
**ಸುಶಿಕ್ಷಿತಾ ತಸ್ಯ ಸಮ್ಯಕ್ ಸುಭದ್ರಾ ।**
**ತಯಾ ಪಾರ್ಥೋ ವಾರಿತೋ ನೈವ ಕಂಚಿದ್**
**ಭಿನ್ನತ್ವಚಂ ಕೃತವಾನ್ ಕ್ರೀಡಮಾನಃ ॥ ೧೯೧ ॥**

ಪದಚ್ಛೇದ :- **ಚಕ್ರೇ, ಸಾರಥ್ಯಂ, ಕೇಶವೇನ, ಏತದರ್ಥೇ, ಸುಶಿಕ್ಷಿತಾ, ತಸ್ಯ, ಸಮ್ಯಕ್, ಸುಭದ್ರಾ, ತಯಾ, ಪಾರ್ಥಃ, ವಾರಿತಃ, ನ, ಏವ, ಕಂಚಿದ್, ಭಿನ್ನತ್ವಚಂ, ಕೃತವಾನ್, ಕ್ರೀಡಮಾನಃ ।**

ಅರ್ಥ :- **ಕೇಶವೇನ** = ಶ್ರೀಕೃಷ್ಣಪರಮಾತ್ಮನಿಂದ, **ಏತದರ್ಥೇ** = ಅರ್ಜುನನ ಸಾರಥಿಯಾಗಲು, **ಸಮ್ಯಕ್** = ಚೆನ್ನಾಗಿ, **ಸುಶಿಕ್ಷಿತಾ** = ಅಭ್ಯಾಸ ಮಾಡಿಸಲ್ಪಟ್ಟ, **ಸುಭದ್ರಾ** = ಸುಭದ್ರೆಯು, **ತಸ್ಯ** = ಅರ್ಜುನನ, **ಸಾರಥ್ಯಂ** = ಸಾರಥ್ಯವನ್ನು, **ಚಕ್ರೇ** = ಮಾಡಿದಳು, **ತಯಾ** = ಸುಭದ್ರೆಯಿಂದ, **ವಾರಿತಃ** = ತಡೆದ, **ಪಾರ್ಥಃ** = ಅರ್ಜುನನು, **ಕ್ರೀಡಮಾನಃ** = ಆಟವಾಡುತ್ತ, **ಕಂಚಿದ್** = ಯಾರನ್ನು, **ಭಿನ್ನತ್ವಚಂ** = ಚರ್ಮ ಕೀಳುವಂತೆ (ಗಾಯವಾಗುವಂತ), **ನೈವ ಕೃತವಾನ್** = ಮಾಡಲಿಲ್ಲ.

ತಾತ್ಪರ್ಯ :- ಅರ್ಜುನನಿಗೆ ಸುಭದ್ರೆಯು ಸಾರಥಿ ಆದಳು. ಅರ್ಜುನನ ಸಾರಥ್ಯವನ್ನು ಮಾಡುವುದಕ್ಕಾಗಿಯೇ ಹಿಂದೆ ಶ್ರೀಕೃಷ್ಣನು ಸುಭದ್ರೆಗೆ ಶಿಕ್ಷಣವನ್ನು ನೀಡಿದ್ದ. ಅರ್ಜುನನು ಸುಭದ್ರೆಯ ಪ್ರಾರ್ಥನೆಗೆ ಓಗೊಟ್ಟು ಸೇನೆಯಲ್ಲಿ ಇರುವವರಿಗೆ ಗಾಯವನ್ನು ಮಾಡದೆ ಅವರ ಜೊತೆ ಆಟವಾಡಿದ.

**ಸ ಶಿಕ್ಷಯಾ ತ್ವದ್ಭುತಯಾ ಶರೌಘೈ-**
**ರ್ವಿದ್ರಾವ್ಯ ತಾನ್ ಭೀಷಯಿತ್ವೈವ ಸರ್ವಾನ್ ।**

ನಿರ್ಗತ್ಯ ಪುರ್ಯಾ ವಿಪೃಥುಂ ದದರ್ಶ
ರಾಮೇಣ ಪುರ್ಯಾ ರಕ್ಷಣೇ ಸನ್ನಿಯುಕ್ತಮ್ ॥ ೧೯೨ ॥

ಪದಚ್ಛೇದ :- ಸಃ, ಶಿಕ್ಷಯಾ, ತು, ಅದ್ಭುತಯಾ, ಶರೌಘೈಃ, ವಿದ್ರಾವ್ಯ, ತಾನ್, ಭೀಷಯಿತ್ವಾ, ಏವ, ಸರ್ವಾನ್, ನಿರ್ಗತ್ಯ, ಪುರ್ಯಾಃ, ವಿಪೃಥುಂ, ದದರ್ಶ, ರಾಮೇಣ, ಪುರ್ಯಾಃ, ರಕ್ಷಣೆ, ಸನ್ನಿಯುಕ್ತಮ್ ।

ಅರ್ಥ :- ಸಃ ತು = ಆ ಅರ್ಜುನನಾದರೊ, ಅದ್ಭುತಯಾ = ಅದ್ಭುತವಾದ, ಶಿಕ್ಷಯಾ = ವಿದ್ಯಾಭ್ಯಾಸದ ಬಲದಿಂದ, ತಾನ್ = ಆ ಸೈನಿಕರನ್ನು, ಶರೌಘೈಃ = ಬಾಣಗಳ ಸಮೂಹದಿಂದ, ಭೀಷಯಿತ್ವೈವ = ಹೆದರಿಸಿಯೆ, ವಿದ್ರಾವ್ಯ = ಓಡಿಸಿ, ಪುರ್ಯಾಃ = ನಗರದಿಂದ, ನಿರ್ಗತ್ಯ = ಹೊರಗೆ ಬಂದು, ರಾಮೇಣ = ಬಲರಾಮನಿಂದ, ಪುರ್ಯಾಃ = ಪಟ್ಟಣದ, ರಕ್ಷಣೆ = ರಕ್ಷಣೆಗಾಗಿ, ಸನ್ನಿಯುಕ್ತಂ = ನಿಯೋಜಿಸಲ್ಪಟ್ಟ, ವಿಪೃಥುಂ = ವಿಪೃಥುವನ್ನು, ದದರ್ಶ = ನೋಡಿದನು.

ತಾತ್ಪರ್ಯ :- ಅರ್ಜುನನು ಅದ್ಭುತವಾದ ಧನುರ್ವಿದ್ಯಾ ಬಲದಿಂದ ಯಾದವರಿಗೆ ಗಾಯವನ್ನು ಮಾಡದೆ ಹೆದರಿಸಿದ. ಆನಂತರ ಪುರವನ್ನು ದಾಟುವಾಗಲೇ ಬಲರಾಮನಿಂದ ಪುರದ ರಕ್ಷಣೆಗೆ ನಿಯುಕ್ತನಾದ ವಿಪೃಥುವನ್ನು ಕಂಡು.

ಪ್ರಿಯಂ ಕುರ್ವನ್ನಿವ ರಾಮಸ್ಯ ಸೋಽಪಿ
ವ್ಯಾಜೇನ ಪಾರ್ಥಂ ಸೇನಯೈವಾಽವೃಣೋತ್ ತಮ್ ।
ಕೃಷ್ಣಾದೇಶಾನ್ನೈವ ಪಾರ್ಥಸ್ಯ ಚಕ್ರೇ
ಸಮ್ಯಗ್ರೋಧಂ ಯುಯುಧೇ ಚ ಚ್ಛಲೇನ ॥ ೧೯೩ ॥

ಪದಚ್ಛೇದ :- ಪ್ರಿಯಂ, ಕುರ್ವನ್, ಇವ, ರಾಮಸ್ಯ, ಸಃ, ಅಪಿ, ವ್ಯಾಜೇನ, ಪಾರ್ಥಂ, ಸೇನಯಾ, ಏವ, ಆವೃಣೋತ್, ತಮ್, ಕೃಷ್ಣಾದೇಶಾತ್, ನ, ಏವ, ಪಾರ್ಥಸ್ಯ, ಚಕ್ರೆ, ಸಮ್ಯಕ್, ರೋಧಂ, ಯುಯುಧೇ, ಚ, ಛಲೇನ ।

ಅರ್ಥ :- ಸಃ ಅಪಿ = ಆ ವಿಪೃಥುವಾದರೂ, ರಾಮಸ್ಯ = ಬಲರಾಮನಿಗೆ, ಪ್ರಿಯಂ = ಪ್ರೀತಿಯನ್ನು, ಕುರ್ವನ್ ಇವ =

ಉಂಟುಮಾಡುವಂತೆ, **ತಮ್** = ಆ, **ಪಾರ್ಥಂ** = ಅರ್ಜುನನನ್ನು, **ವ್ಯಾಜೇನ** = ನೆಪದಿಂದ, **ಸೇನಯಾ** = ಸೇನೆಯಿಂದ, **ಆವೃಣೋತ್** = ಆವರಿಸಿದನು, **ಕೃಷ್ಣಾದೇಶಾತ್** = ಭಗವಂತನ ಆದೇಶದಿಂದ, **ಪಾರ್ಥಸ್ಯ** = ಅರ್ಜುನನಿಗೆ, **ಸಮ್ಯಕ್** = ಚೆನ್ನಾಗಿ, **ರೋಧಂ** = ವಿರೋಧವನ್ನು, **ನೈವ ಚಕ್ರೇ** = ಮಾಡಲಿಲ್ಲ, **ಚ** = ಮತ್ತು, **ಛಲೇನ** = ನೆಪ ಮಾತ್ರದಿಂದ, **ಯುಯುಧೇ** = ಯುದ್ಧವನ್ನು ಮಾಡಿದನು.

**ತಾತ್ಪರ್ಯ** :- ವಿಪೃಥುವು ಬಲರಾಮನಿಗೆ ಸಂತೋಷಗೊಳಿಸಬೇಕೆಂಬ ಉದ್ದೇಶದಿಂದ ಅರ್ಜುನನನ್ನು ಯುದ್ಧ ಮಾಡಬೇಕೆಂಬ ನೆಪದಿಂದ ಸೇನೆಯಿಂದ ಆವರಿಸಿದನು. ಆದರೆ ಶ್ರೀಕೃಷ್ಣನ ಆಜ್ಞಾನುಸಾರ ಅವನಿಗೆ ಯಾವ ಅಡ್ಡಿ ಮಾಡಲಿಲ್ಲ.

**ಏಕೋ ಹ್ಯಸೌ ಮರುತಾಂ ಸೌಮ್ಯನಾಮಾ**
**ಶುಶ್ರೂಷಾರ್ಥಂ ವಾಸುದೇವಸ್ಯ ಜಾತಃ ।**
**ತಂ ಯಾದವಂ ಶರವರ್ಷೈರ್ವವರ್ಷ**
**ಯಥಾ ಕ್ಷತಂ ನ ಭವೇತ್ ಸವ್ಯಸಾಚೀ ॥ ೧೯೪ ॥**

**ಪದಚ್ಛೇದ** :- ಏಕಃ, ಹಿ, ಅಸೌ, ಮರುತಾಂ, ಸೌಮ್ಯನಾಮಾ, ಶುಶ್ರೂಷಾರ್ಥಂ, ವಾಸುದೇವಸ್ಯ, ಜಾತಃ, ತಂ, ಯಾದವಂ, ಶರವರ್ಷೈಃ, ವವರ್ಷ, ಯಥಾ, ಕ್ಷತಂ, ನ, ಭವೇತ್, ಸವ್ಯಸಾಚೀ ।

**ಅರ್ಥ** :- **ಅಸೌ** = ಈ ವಿಪೃಥುವು, **ಮರುತಾಂ** = ಮರುತ್ತರದಲ್ಲಿ, **ಏಕಃ** = ಒಬ್ಬನಾದ, **ಸೌಮ್ಯನಾಮಾ** = ಸೌಮ್ಯ ಎಂಬ ಹೆಸರುಳ್ಳವನು, **ವಾಸುದೇವಸ್ಯ** = ಶ್ರೀಕೃಷ್ಣನ, **ಶುಶ್ರೂಷಾರ್ಥಂ** = ಸೇವೆಗಾಗಿ, **ಜಾತಃ** = ಹುಟ್ಟಿದವನು, **ಹಿ** = ಆದ್ದರಿಂದಲೇ, **ಸವ್ಯಸಾಚೀ** = ಅರ್ಜುನನು, **ತಂ** = ಆ, **ಯಾದವಂ** = ಯಾದವರಲ್ಲಿ ಹುಟ್ಟಿದ ವಿಪೃಥುವನ್ನು, **ಯಥಾ** = ಹೀಗೆ, **ಕ್ಷತಂ** = ಗಾಯವು, **ನ ಭವೇತ್** = ಆಗುವುದಿಲ್ಲವೋ, **ತಥಾ** = ಹಾಗೆ, **ಶರವರ್ಷೈಃ** = ಬಾಣಗಳ ಮಳೆಯಿಂದ, **ವವರ್ಷಃ** = ವೃಷ್ಟಿಗೈದನು.

**ತಾತ್ಪರ್ಯ** :- ಕೃಷ್ಣನ ಸೇವೆಯನ್ನು ಮಾಡಬೇಕೆಂಬ ಉದ್ದೇಶದಿಂದ ನಲ್ವತ್ತೊಂಬತ್ತು ಮರುತ್ತರಗಳಲ್ಲಿ ಒಬ್ಬನಾದ ಸೌಮ್ಯನೆಂಬ ಮರುತ್

ಯಾದವರಲ್ಲಿ ಹುಟ್ಟಿದ್ದಾನೆ, ಆದ್ದರಿಂದಲೇ ಆ ವಿಪೃಥುವಿಗೆ ಯಾವುದೇ ಗಾಯವು ಆಗದೆ ಇರುವಂತೆ ಬಾಣಗಳ ಮಳೆಯನ್ನು ಸುರಿಸಿದ್ದಾನೆ.

ನಿರಾಯುಧಂ ವಿರಥಂ ಚೈವ ಚಕ್ರೇ
ಪಾರ್ಥಃ ಸೇನಾಂ ತಸ್ಯ ನೈವಾಹನಚ್ಚ ।
ದೃಷ್ಟ್ವಾ ಶರಾಂಸ್ತಸ್ಯ ತೀಕ್ಷ್ಣಾಂಸ್ತ್ವಚೋಽಪಿ
ನ ಚ್ಛೇದಕಾನ್ ವಿಪೃಥುಃ ಸಂತುತೋಷ ॥ ೧೯೫ ॥

ಪದಚ್ಛೇದ :- ನಿರಾಯುಧಂ, ವಿರಥಂ, ಚ, ಏವ, ಚಕ್ರೆ, ಪಾರ್ಥಃ, ಸೇನಾಂ, ತಸ್ಯ, ನ, ಏವ, ಅಹನತ್, ಚ, ದೃಷ್ಟ್ವಾ, ಶರಾನ್, ತಸ್ಯ, ತೀಕ್ಷ್ಣಾನ್, ತ್ವಚಃ, ಅಪಿ, ನ, ಛೇದಕಾನ್, ವಿಪೃಥುಃ, ಸಂತುತೋಷ।

ಅರ್ಥ :- ಪಾರ್ಥಃ = ಅರ್ಜುನನು, ವಿರಥಂ = ರಥವಿಲ್ಲದವನನ್ನಾಗಿ, ಚ = ಮತ್ತು, ನಿರಾಯುಧಂ = ಆಯುಧ ರಹಿತನಾದವನನ್ನಾಗಿ, ಚಕ್ರೇ = ಮಾಡಿದನು, ಚ = ಮತ್ತು, ತಸ್ಯ = ಆ ವಿಪೃಥುವಿನ, ಸೇನಾಂ = ಸೇನೆಯನ್ನು, ನೈವ ಅಹನತ್ = ನಾಶಪಡಿಸಲಿಲ್ಲ, ವಿಪೃಥುಃ = ವಿಪೃಥುವು, ತಸ್ಯ = ಅರ್ಜುನನ, ತೀಕ್ಷ್ಣಾನ್ = ನಿಶಿತವಾದ, ಶರಾನ್ = ಬಾಣಗಳನ್ನು, ತ್ವಚಃ ಅಪಿ = ಚರ್ಮಗಳಿಗೂ, ನ ಛೇದಕಾನ = ಸೀಳದೆ ಇರುವುದನ್ನು, ದೃಷ್ಟ್ವಾ = ನೋಡಿ, ಸಂತುತೋಷ = ಸಂತೋಷಪಟ್ಟನು.

ತಾತ್ಪರ್ಯ :- ಅರ್ಜುನನು ವಿಪೃಥುವಿನ ಆಯುಧಗಳನ್ನು ಧ್ವಂಸಗೊಳಿಸಿ ಅವನ ರಥವನ್ನು ಪುಡಿಪುಡಿ ಮಾಡಿದನು. ಆದರೆ ಅವನ ಸೇನೆಯನ್ನು ನಾಶಗೊಳಿಸಲಿಲ್ಲ. ಅರ್ಜುನನ ಅತ್ಯಂತ ನಿಶಿತವಾದ ಬಾಣಗಳು ಯಾರ ಚರ್ಮಕ್ಕೂ ಗಾಯಮಾಡದೇ ಇರುವುದನ್ನು ಕಂಡು ಆಶ್ಚರ್ಯಚಕಿತನಾದನು.

ಶಿಕ್ಷಾಂ ಪಾರ್ಥಸ್ಯಾಧಿಕಾಂ ಮಾನಯಾನ
ಉಪೇತ್ಯ ಪಾರ್ಥಂ ಚ ಶಶಂಸ ಸರ್ವಮ್ ।
ಆಜ್ಞಾಂ ವಿಷ್ಣೋಃ ಸನ್ನಿಯುಧ್ಯನ್ನಿವಾಸ್ಮೈ
ಕೃತ್ವಾಯುಧಃ ಫಲ್ಗುನೇನೈವ ಪೂರ್ವಮ್ ॥ ೧೯೬ ॥

**ಪದಚ್ಛೇದ :– ಶಿಕ್ಷಾಂ, ಪಾರ್ಥಸ್ಯ, ಅಧಿಕಾಂ, ಮಾನಯಾನಃ, ಉಪೆತ್ಯ, ಪಾರ್ಥ, ಚ, ಶಶಂಸ, ಸರ್ವಮ್, ಆಜ್ಞಾಂ, ವಿಷ್ಣೋಃ, ಸನ್ನಿಯುಧ್ಯನ್, ಇವ, ಅಸ್ಮೈ, ಕೃತ್ತಾಯುಧಃ, ಫಲ್ಗುನೇನ, ಏವ, ಪೂರ್ವಮ್ ।**

**ಅರ್ಥ** :- **ಪಾರ್ಥಸ್ಯ** = ಅರ್ಜುನನ, **ಅಧಿಕಾಂ** = ಹೆಚ್ಚಿನದ್ದಾದ, **ಶಿಕ್ಷಾಂ** = ಶಿಕ್ಷೆಯನ್ನು, **ಮಾನಯಾನಃ** = ಚಿಂತಿಸುತ್ತ, **ಪೂರ್ವಂ** = ಹಿಂದೆ, **ಫಲ್ಗುನೇನೈವ** = ಅರ್ಜುನನಿಂದಲೇ, **ಕೃತ್ತಾಯುಧಃ** = ತುಂಡಾದ ಆಯುಧಗಳುಳ್ಳವನಾಗಿ, **ಸನ್ನಿಯುಧ್ಯನ್ ಇವ** = ಮುಷ್ಟಿಯುದ್ಧಕ್ಕೆ ಹೊರಟವನಂತೆ, **ಪಾರ್ಥಂ** = ಅರ್ಜುನನನ್ನು, **ಉಪೇತ್ಯ** = ಹೊಂದಿ, **ವಿಷ್ಣೋಃ** = ಭಗವಂತನ, **ಸರ್ವಾಮ್** = ಎಲ್ಲ, **ಆಜ್ಞಾಂ** = ಆಜ್ಞೆಯನ್ನು, **ಅಸ್ಮೈ** = ಅರ್ಜುನನಿಗೆ, **ಶಶಂಸ** = ಹೇಳಿದನು.

**ತಾತ್ಪರ್ಯ** :- ಆಯುಧಗಳೆಲ್ಲವು ನಾಶವಾದ ವಿಪ್ರಥುವು ಅರ್ಜುನನೊಂದಿಗೆ ಮುಷ್ಟಿಯುದ್ಧವನ್ನು ಮಾಡುವಂತೆ ಬಂದು ಪಾರ್ಥನಿಗೆ ಶ್ರೀಕೃಷ್ಣನ ಆಜ್ಞೆಯನ್ನು ವಿವರಿಸಿದ್ದಾನೆ.

**ತತಃ ಪರಾಜಿತವಚ್ಛೀಘ್ರಮೇತ್ಯ**
**ಶಶಂಸ ಸರ್ವಂ ಹಲಿನೇಽಥ ಸೋಽಪಿ ।**
**ಪ್ರದ್ಯುಮ್ನಸಾಂಬಾದಿಯುತೋಽಥ ಕೋಪಾ-**
**ದಾಯಾತ್ ಪುರೀಂ ಹಂತುಕಾಮೋಽರ್ಜುನಂ ಚ ॥ ೧೯೭ ॥**

**ಪದಚ್ಛೇದ :– ತತಃ, ಪರಾಜಿತವತ್, ಶೀಘ್ರಮ್, ಏತ್ಯ, ಶಶಂಸ, ಸರ್ವಮ್, ಹಲಿನ, ಅಥ, ಸಃ, ಅಪಿ, ಪ್ರದ್ಯುಮ್ನ, ಸಾಂಬಾದಿಯುತಃ, ಅಥ ಕೋಪಾತ್, ಆಯಾತ್, ಪುರೀಮ್, ಹಂತುಕಾಮಃ, ಅರ್ಜನಂ, ಚ ।**

**ಅರ್ಥ** :- **ಸಃ ಅಪಿ** = ಆ ವಿಪ್ರಥುವಾದರೂ, **ತತಃ** = ಅನಂತರ, **ಶೀಘ್ರಂ** = ಬೇಗನೆ, **ಏತ್ಯ** = ಒಂದು, **ಹಲಿನೆ** = ಬಲರಾಮನಿಗೆ, **ಸರ್ವಂ** = ಎಲ್ಲವನ್ನು, **ಶಶಂಸ** = ಹೇಳಿದನು, **ಅಥ** = ಅನಂತರ, **ಕೋಪಾತ್** = ಕೋಪದಿಂದ, **ಪ್ರದ್ಯುಮ್ನಸಾಂಬಾದಿಯುತಃ** = ಪ್ರದ್ಯುಮ್ನ ಸಾಂಬ ಮೊದಲಾದವರಿಂದ ಕೂಡಿದವನಾಗಿ, **ಅರ್ಜುನಂ** = ಅರ್ಜುನನನ್ನು, **ಹಂತುಕಾಮಃ** = ಕೊಲ್ಲಬೇಕೆಂಬ ಆಸೆಉಳ್ಳವನಾಗಿ, **ಪುರೀ** = ದ್ವಾರಕಾಪಟ್ಟಣಕ್ಕೆ, **ಆಯಾತ್** = ಬಂದಿದ್ದಾನೆ.

ತಾತ್ಪರ್ಯ :- ವಿಪ್ರಥುವು ಪಿಂಡೋದ್ಧಾರಕ್ಕೆ ಹೋಗಿ ಅಲ್ಲಿ ಬಲರಾಮದೇವರ ಬಳಿ ತನ್ನ ಆಯುಧವನ್ನು ರಥವನ್ನು ಧ್ವಂಸಗೊಳಿಸಿದ ಕಥೆಯನ್ನು ಹೇಳಿದ. ಈ ವಾರ್ತೆಯನ್ನು ಕೇಳಿದ ಬಲರಾಮದೇವರು ಪ್ರದ್ಯುಮ್ನ ಸಾಂಬ ಮೊದಲಾದ ಎಲ್ಲ ಯಾದವರೊಂದಿಗೆ ಸೇರಿ ಅರ್ಜುನನನ್ನು ಸಂಹರಿಸಬೇಕೆಂಬ ಇಚ್ಛೆಯಿಂದ ಬಂದಿದ್ದಾರೆ.

**ಕೃಷ್ಣೋऽಪಿ ಸರ್ವಂ ವಿಪೃಥೋರ್ನಿಶಮ್ಯ**
**ಪ್ರಾಪ್ತಃ ಸುಧರ್ಮಾಂ ವಿಮನಾ ಇವಾऽಸೀತ್ ।**
**ಅವಾಙ್ಮುಖಸ್ತತ್ರ ಯದುಪ್ರವೀರಾಃ**
**ಪ್ರದ್ಯುಮ್ನಾದ್ಯಾ ಆಹುರಾಚ್ಚೈರ್ನದಂತಃ ॥ ೧೯೮ ॥**

ಪದಚ್ಛೇದ :- ಕೃಷ್ಣಃ, ಅಪಿ, ಸರ್ವಂ, ವಿಪೃಥೋಃ, ನಿಶಮ್ಯ, ಪ್ರಾಪ್ತಃ, ಸುಧರ್ಮಾಂ, ವಿಮನಾಃ, ಇವ, ಆಸೀತ್, ಅವಾಙ್ಮುಖಃ, ತತ್ರ, ಯದುಪ್ರವೀರಾಃ, ಪ್ರದ್ಯುಮ್ನಾದ್ಯಾಃ, ಆಹುಃ, ಉಚ್ಚೈಃ, ನದಂತಃ ।

ಅರ್ಥ :- **ಕೃಷ್ಣಃ ಅಪಿ** = ಶ್ರೀಕೃಷ್ಣನಾದರೂ, **ವಿಪೃಥೋಃ** = ವಿಪ್ರಥುವಿನಿಂದ, **ಸರ್ವಂ** = ಎಲ್ಲ ವೃತ್ತಾಂತವನ್ನು, **ನಿಶಮ್ಯ** = ಕೇಳಿ, **ಸುಧರ್ಮಾಂ** = ಸುಧರ್ಮ ಸಭೆಗೆ, **ಪ್ರಾಪ್ತಃ** = ಬಂದವನಾಗಿ, **ವಿಮನಾಃ ಇವ** = ದುಃಖಿತರಾದವರಂತೆ, **ಅವಾಙ್ಮುಖಃ** = ಕೆಳಮುಖವನ್ನು ಮಾಡಿದವನಾಗಿ, **ಆಸೀತ್** = ಇದ್ದನು, **ತತ್ರ** = ಅಲ್ಲಿಯೇ, **ಯದುಪ್ರವೀರಾಃ** = ಯಾದವರಲ್ಲಿ ಶ್ರೇಷ್ಠರಾದ, **ಪ್ರದ್ಯುಮ್ನಾದ್ಯಾಃ** = ಪ್ರದ್ಯುಮ್ನ ಮೊದಲಾದವರು, **ಉಚ್ಚೈಃ** = ಗಟ್ಟಿಯಾಗಿ, **ನದಂತಃ** = ಗರ್ಜಿಸುತ್ತ, **ಆಹುಃ** = ಹೇಳಿದರು.

ತಾತ್ಪರ್ಯ :- ಶ್ರೀಕೃಷ್ಣನು ವಿಪ್ರಥುವಿನಿಂದ ಎಲ್ಲ ಸುದ್ದಿಯನ್ನು ತಿಳಿದು. ಸುಧರ್ಮ ಸಭೆಗೆ ಬಂದು ಬಹಳ ಬೇಸರಗೊಂಡವರಂತೆ ತಲೆಕೆಳಗೆ ಹಾಕಿಕೊಂಡು ಕುಳಿತಿದ್ದಾನೆ. ಅಲ್ಲಿ ಪ್ರದ್ಯುಮ್ನ ಸಾಂಬ ಮೊದಲಾದ ಯಾದವ ಪ್ರವೀರರು ಗಟ್ಟಿಯಾಗಿ ಗರ್ಜನೆ ಮಾಡುತ್ತ ಹೇಳಿದರು.

**ಮಾಯಾವ್ರತಂ ತಂ ವಿನಿಹತ್ಯ ಶೀಘ್ರಂ**
**ವಯಂ ಸುಭದ್ರಾಮಾನಯಾಮಃ ಕ್ಷಣೇನ ।**

**ಇತ್ಯುಕ್ತವಾಕ್ಯಾನವದದ್ ಬಲಸ್ತಾನ್**
**ಕೃಷ್ಣಾಜ್ಞಯಾ ಯಾಂತು ನ ಸ್ವೇಚ್ಛಯೈವ ॥ ೯೯ ॥**

**ಪದಚ್ಛೇದ :- ಮಾಯಾವ್ರತಂ, ತಂ, ವಿನಿಹತ್ಯ, ಶೀಘ್ರಂ, ವಯಂ, ಸುಭದ್ರಾಮ್, ಆನಯಾಮಃ, ಕ್ಷಣೇನ, ಇತಿ, ಉಕ್ತವಾಕ್ಯಾನ್, ಅವದತ್, ಬಲಃ, ತಾನ್, ಕೃಷ್ಣಾಜ್ಞಯಾ, ಯಾಂತು, ನ, ಸ್ವೇಚ್ಛಯಾ, ಏವ ।**

**ಅರ್ಥ** :- **ತಂ** = ಆ, **ಮಾಯಾವ್ರತಂ** = ಕಪಟ ವ್ರತವನ್ನು ಆಚರಿಸಿರುವ ಅರ್ಜುನನನ್ನು, **ವಯಂ** = ನಾವು, **ಶೀಘ್ರಂ** = ಬೇಗನೆ, **ವಿನಿಹತ್ಯ** = ಕೊಂದು, **ಕ್ಷಣೇನ** = ಒಂದೇ ಕ್ಷಣದಲ್ಲಿ, **ಸುಭದ್ರಾಂ** = ಸುಭದ್ರೆಯನ್ನು, **ಆನಯಾಮಃ** = ತರೋಣ, **ಇತ್ಯುಕ್ತವಾಕ್ಯಾನ್** = ಹೀಗೆ ಹೇಳಿದವರನ್ನು, **ತಾನ್** = ಆ ಪ್ರದ್ಯುಮ್ನ ಸಾಂಬಾದಿಗಳನ್ನು, **ಬಲಃ** = ಬಲರಾಮದೇವರು, **ಕೃಷ್ಣಾಜ್ಞಯಾ** = ಕೃಷ್ಣನ ಆಜ್ಞೆಯಿಂದ, **ಯಾಂತು** = ಹೊರಡಿರಿ, **ನ ಸ್ವೇಚ್ಛಯಾ ಏವ** = ನಿಮ್ಮ ಸ್ವೇಚ್ಛೆಯಿಂದಲ್ಲ ಎಂದು, **ಅವದತ್** = ಹೇಳಿದರು.

**ತಾತ್ಪರ್ಯ** :- ನಾವೆಲ್ಲರೂ ಸೇರಿ ನಮ್ಮನ್ನು ವಂಚನೆ ಮಾಡಬೇಕೆಂಬ ಉದ್ದೇಶದಿಂದ ಸಂನ್ಯಾಸ ವೇಷವನ್ನು ಧರಿಸಿರುವ ಅರ್ಜುನನನ್ನು ಕೊಂದು. ಒಂದೇ ಕ್ಷಣದಲ್ಲಿ ಸುಭದ್ರೆಯನ್ನು ತರೋಣ ಎಂದು ಹೇಳಿದರು. ಆಗ ಬಲರಾಮದೇವರು ಹೇಳಿದರು ಶ್ರೀಕೃಷ್ಣನ ಆಜ್ಞೆಯನ್ನು ಪಡೆದು ಹೊರಡಿರಿ.

**ಜ್ಞಾತವ್ಯಮೇತಸ್ಯ ಮತಂ ಪುರಸ್ತಾದ್**
**ಹರೇರ್ವಿರೋಧೇ ನ ಜಯೋ ಭವೇದ್ ವಃ ।**
**ಇತ್ಯುಕ್ತವಾಕ್ಯೇ ಹಲಿನಿ ಸ್ಮ ಸರ್ವೇ**
**ಪಪ್ರಚ್ಛುರಾನಮ್ಯ ಜನಾರ್ದನಂ ತಮ್ ॥ ೧೦೦ ॥**

**ಪದಚ್ಛೇದ :- ಜ್ಞಾತವ್ಯಮ್, ಏತಸ್ಯ, ಮತಂ, ಪುರಸ್ತಾತ್, ಹರೇಃ, ವಿರೋಧೆ, ನ, ಜಯಃ, ಭವೇತ್, ವಃ, ಇತಿ, ಉಕ್ತವಾಕ್ಯೇ, ಹಲಿನಿ, ಸ್ಮ, ಸರ್ವೇ, ಪಪ್ರಚ್ಛುಃ, ಆನಮ್ಯ, ಜನಾರ್ದನಂ, ತಮ್ ।**

**ಅರ್ಥ** :- **ಏತಸ್ಯ** = ಶ್ರೀಕೃಷ್ಣನ, **ಮತಂ** = ಅಭಿಪ್ರಾಯವನ್ನು, **ಪುರಸ್ತಾತ್** = ಮೊದಲು, **ಜ್ಞಾತವ್ಯಮ್** = ತಿಳಿದುಕೊಳ್ಳಬೇಕು, **ಹರೇಃ** =

ಭಗವಂತನ, ವಿರೋಧೇ = ಸಮ್ಮತಿ ಇಲ್ಲದಿದ್ದಲ್ಲಿ, ವಃ = ನಿಮಗೆ, ಜಯಃ = ಗೆಲುವು, ನ ಭವೇತ್ = ಆಗುವುದಿಲ್ಲ, ಇತಿ = ಎಂದು, ಹಲಿನಿ = ಬಲರಾಮದೇವರು, ಉಕ್ತವಾಕ್ಯೇ = ಹೇಳಿದಾಗ, ಸರ್ವೇ = ಎಲ್ಲರು, ತಮ್ = ಆ, ಜನಾರ್ದನಂ = ಜನನ ನಾಶಮಾಡುವ ಶ್ರೀಕೃಷ್ಣನನ್ನು, ಆನಮ್ಯ = ನಮಸ್ಕರಿಸಿ, ಪಪ್ರಚ್ಛುಃ = ಕೇಳಿದರು.

ತಾತ್ಪರ್ಯ :- ಶ್ರೀಕೃಷ್ಣನ ಅನುಜ್ಞೆಯನ್ನು ಪಡೆಯದೆ ಅವನಿಗೆ ವಿರುದ್ಧ-ವಾಗಿ ಯುದ್ಧಮಾಡಲು ಹೋದರೆ ನಿಮಗೆ ಗೆಲವು ಸಿಗುವುದು ಸಾಧ್ಯವಿಲ್ಲ. ಆದ್ದರಿಂದ ಶ್ರೀಕೃಷ್ಣನ ಅಭಿಪ್ರಾಯವನ್ನು ಮೊದಲು ತಿಳಿದುಕೊಳ್ಳಿ ಎಂದು ಬಲರಾಮದೇವರು ಹೇಳಿದೊಡನೆ ಎಲ್ಲರು ಶ್ರೀಕೃಷ್ಣನನ್ನು ನಮಸ್ಕರಿಸಿ ಅನುಜ್ಞೆಯನ್ನು ಕೇಳಿದ್ದಾರೆ.

**ಅಥಾಽಬ್ರವೀದ್ ವಾಸುದೇವೋಽಮಿತೌಜಾಃ**
**ಶೃಣ್ವಂತು ಸರ್ವೇ ವಚನಂ ಮದೀಯಮ್ ।**
**ಪುರೈವೋಕ್ತಂ ತನ್ಮಯಾ ಕನ್ಯಕಾಯಾ**
**ಮಾಯಾವ್ರತೋ ನಾರ್ಹತಿ ಸನ್ನಿಧಿಸ್ಥಿತಿಮ್ ॥ ೨೦೧ ॥**

ಪದಚ್ಛೇದ :– **ಅಥ, ಅಬ್ರವೀತ್, ವಾಸುದೇವಃ, ಅಮಿತೌಜಾಃ, ಶೃಣ್ವಂತು, ಸರ್ವೇ, ವಚನಂ, ಮದೀಯಂ, ಪುರೈವ, ಉಕ್ತಂ, ತತ್, ಮಯಾ, ಕನ್ಯಕಾಯಾಃ, ಮಾಯಾವ್ರತಃ, ನ, ಅರ್ಹತಿ, ಸನ್ನಿಧಿಸ್ಥಿತಿಮ್ ।**

ಅರ್ಥ :- **ಅಥ** = ಶ್ರೀಕೃಷ್ಣನನ್ನು ಕೇಳಿದ ನಂತರ, **ಅಮಿತೌಜಾಃ** = ಅತ್ಯಂತ ಪರಾಕ್ರಮಿಯಾದ, **ವಾಸುದೇವಃ** = ಶ್ರೀಕೃಷ್ಣನು, **ಅಬ್ರವೀತ್** = ಹೇಳಿದನು, **ಸರ್ವೇ** = ಎಲ್ಲರು, **ಮದೀಯಂ** = ನನ್ನ, **ವಚನಂ** = ಮಾತನ್ನು, **ಶೃಣ್ವಂತು** = ಕೇಳಿರಿ, **ಮಾಯಾವ್ರತಃ** = ಕಪಟದಿಂದ ಸಂನ್ಯಾಸಿವೇಷವನ್ನು ಧರಿಸಿದವನು, **ಕನ್ಯಕಾಯಾ** = ಕನ್ಯೆಯ, **ಸನ್ನಿಧಿಸ್ಥಿತಿಮ್** = ಹತ್ತಿರದಲ್ಲಿ ಇರುವುದು, **ನ ಅರ್ಹತಿ** = ಯೋಗ್ಯವಲ್ಲ, **ತತ್** = ಈ ವಿಚಾರವು, **ಮಯಾ** = ನನ್ನಿಂದ, **ಪುರಾ ಏವ** = ಹಿಂದೆಯೆ, **ಉಕ್ತಂ** = ಹೇಳಲ್ಪಟ್ಟಿದೆ.

ತಾತ್ಪರ್ಯ :- ಬಳಿಕ ಅಪರಿಮಿತ ಪರಾಕ್ರಮಉಳ್ಳ ಶ್ರೀಕೃಷ್ಣನು ಎಲ್ಲರನ್ನು ಹೇಳಿದನು. ಎಲ್ಲರೂ ನನ್ನ ಮಾತನ್ನ ಆಲಿಸಿರಿ. ನಾನು ಮೊದಲೆ ನಿಮಗೆ ಹೇಳಿದ್ದೆ

ಕಪಟತನದಿಂದ ಸಂನ್ಯಾಸಿ ವೇಷವನ್ನು ಧರಿಸಿದವನ ಬಳಿ ಕನ್ಯಾಮಣಿ ಇರುವುದು ಉಚಿತವಲ್ಲ ಎಂದು.

**ತಾಂ ಮೇ ವಾಚಂ ನಾಗ್ರಹೀದಗ್ರಜೋऽಯಂ**
**ಬಹೂನ್ ದೋಷಾನ್ ವ್ಯಾಹರತೋऽಪ್ಯತೋ ಮಯಾ ।**
**ಅನುಲ್ಲಂಘ್ಯತ್ವಾದಗ್ರಜೋऽನುಪ್ರವೃತ್ತಃ**
**ಕನ್ಯಾಗೃಹೇ ವಾಸನೇ ಕೂಟಬುದ್ಧೇಃ ॥ ೨೦೨ ॥**

ಪದಚ್ಛೇದ :– ತಾಮ್, ಮೇ, ವಾಚಂ, ನ, ಅಗ್ರಹೀತ್, ಅಗ್ರಜಃ, ಅಯಂ, ಬಹೂನ್, ದೋಷಾನ್, ವ್ಯಾಹರತಃ, ಅಪಿ, ಅತಃ, ಮಯಾ, ಅನುಲ್ಲಂಘ್ಯತ್ವಾತ್, ಅಗ್ರಜಃ, ಅನುಪ್ರವೃತ್ತಃ, ಕನ್ಯಾಗೃಹೇ, ವಾಸನೇ, ಕೂಟಬುದ್ಧೇಃ ।

**ಅರ್ಥ** :- **ಅಯಂ** = ಈ, **ಅಗ್ರಜಃ** = ಅಣ್ಣನಾದ ಬಲರಾಮನು, **ಬಹೂನ್ ದೋಷಾನ್** = ಅನೇಕ ದೋಷಗಳನ್ನು, **ವ್ಯಾಹರತಃ ಅಪಿ** = ಹೇಳುತ್ತಿದ್ದರೂ, **ಮೇ** = ನನ್ನ, **ತಾಮ್** = ಆ, **ವಾಚಂ** = ಮಾತನ್ನು, **ನಾಗ್ರಹೀತ್** = ಸ್ವೀಕರಿಸಲಿಲ್ಲ, **ಅನುಲ್ಲಂಘ್ಯತ್ವಾತ್** = ಮೀರಲು ಸಾಧ್ಯವಿಲ್ಲವಾದ್ದರಿಂದ, **ಕೂಟಬುದ್ಧೇಃ** = ಕಪಟಬುದ್ಧಿಉಳ್ಳ ಅರ್ಜುನನ, **ಕನ್ಯಾಗೃಹೇ** = ಕನ್ಯೆಯ ಗೃಹದಲ್ಲಿ, **ವಾಸನೇ** = ಇರಲು, **ಅಗ್ರಜಃ** = ಅಣ್ಣನು, **ಅನುಪ್ರವೃತ್ತಃ** = ಅನುಸರಿಸಲ್ಪಟ್ಟಿದ್ದಾನೆ.

**ತಾತ್ಪರ್ಯ** :- ಸಂನ್ಯಾಸಿಯು ಕನ್ಯಾಗೃಹದಲ್ಲಿ ವಾಸಿಸಿದರೆ ಅನೇಕ ದೋಷಗಳು ಉಂಟು ಎಂದು ಹೇಳುವ ಮೂಲಕ ಎಷ್ಟು ದೋಷಗಳನ್ನು ಹೇಳಿದರೂ ನನ್ನ ಮಾತನ್ನು ನನ್ನ ಅಣ್ಣ ಸ್ವೀಕರಿಸಲಿಲ್ಲ. ಆದರೆ ದೊಡ್ಡವನಾದ ಅಣ್ಣನ ಮಾತು ಮೀರಲು ಸಾಧ್ಯವಿಲ್ಲ ಎಂದು ನಾನು ಕಪಟಿಯಾದ ಸಂನ್ಯಾಸಿಯನ್ನು ಕನ್ಯಾಗೃಹದಲ್ಲಿ ವಾಸಿಸಲು ಪ್ರವೃತ್ತಿ ಮಾಡಿದೆ.

**ಅತೀತಶ್ಚಾಯಂ ಕಾರ್ಯಯೋಗೋऽಸಮಕ್ಷಂ**
**ಹೃತಾ ಕನ್ಯಾऽತೋ ನೋऽತ್ರ ಕಾ ಮಾನಹಾನಿಃ ।**
**ಭೂಯಸ್ತರಾಂ ಮಾನಿನಸ್ತಸ್ಯ ಸಾ ಸ್ಯಾ-**
**ಜ್ಞಾತ್ವಾ ಚ ವೋ ವಿಪೃಥೋಃ ಪಾರ್ಥತಾऽಸ್ಯ ॥ ೨೦೩ ॥**

ಪದಚ್ಛೇದ :- ಅತೀತಃ, ಚ, ಅಯಂ, ಕಾರ್ಯಯೋಗಃ, ಅಸಮಕ್ಷಂ, ಹೃತಾ, ಕನ್ಯಾ, ಅತಃ, ನಃ, ಕಾ, ಮಾನಹಾನಿಃ, ಭೂಯಸ್ತರಾಂ, ಮಾನಿನಃ, ತಸ್ಯ, ಸಾ, ಸ್ಯಾತ್, ಜ್ಞಾತಾ, ಚ, ವಃ, ವಿಪೃಥೋಃ, ಪಾರ್ಥತಾ, ಅಸ್ಯ ।

**ಅರ್ಥ** :- **ಅಯಂ** = ಈ, **ಕಾರ್ಯಯೋಗಃ** = ಸುಭದ್ರೆಯನ್ನು ತೆಗೆದುಕೊಂಡು ಹೋಗುವಂತಹ ಕಾರ್ಯವು, **ಅತೀತಃ** = ಮೀರಿತು, **ನಃ** = ನಮ್ಮ, **ಅಸಮಕ್ಷಂ** = ಕಣ್ಣಿಗೆ ಕಾಣಿಸದೆ, **ಕನ್ಯಾ** = ಕನ್ಯೆಯು, **ಹೃತಾ** = ಅಪಹರಿಸಲ್ಪಟ್ಟಿದ್ದಾಳೆ, **ಅತ್ರ** = ಈ ವಿಷಯದಲ್ಲಿ, **ನಃ** = ನಮಗೆ, **ಕಾ** = ಏನು, **ಮಾನಹಾನಿಃ** = ಅವಮಾನ (ಸ್ವಲ್ಪವೂ ಮಾನಹಾನಿ ಇಲ್ಲ), **ಮಾನಿನಃ** = ಬಹಳ ಶೂರನೆಂದು ಅಭಿಮಾನಉಳ್ಳ, **ತಸ್ಯ** = ಆ ಅರ್ಜುನನಿಗೆ, **ಭೂಯಸ್ತರಾಂ** = ಅಧಿಕವಾದ, **ಸಾ** = ಅವಮಾನವು, **ಸ್ಯಾತ್** = ಆದೀತು, **ಅಸ್ಯ** = ಈ ಸಂನ್ಯಾಸಿಯ, **ಪಾರ್ಥತಾ** = ಅರ್ಜುನನೆಂದು, **ವಃ** = ನಿಮಗೆ, **ಜ್ಞಾತಾ** = ತಿಳಿಯಲ್ಪಟ್ಟಿತು.

**ತಾತ್ಪರ್ಯ** :- ಅಷ್ಟೆ ಅಲ್ಲದೆ ಈಗ ಆ ಕಾರ್ಯ ಆಗಿ ಹೋಗಿದೆ. ನಾವು ಇಲ್ಲದೇ ಇದ್ದಾಗ ನಮ್ಮ ಕಣ್ಣನ್ನು ತಪ್ಪಿಸಿ ಕನ್ಯೆಯನ್ನು ಅಪಹರಿಸಿದ್ದಾನೆ. ಇದರಿಂದ ನಮಗೆ ಏನು ಅವಮಾನವಾಗಿಲ್ಲ ಅವನಿಗೆ ಅವಮಾನವಾದೀತು, ಅಷ್ಟೆ ಅಲ್ಲದೆ ಅವನು ಅರ್ಜುನನೆಂದು ವಿಪೃಥುವಿನಿಂದ ನಮಗೆ ತಿಳಿಯಿತು.

**ದೇಯಾ ಚ ಕನ್ಯಾ ನಾಸ್ತಿ ಪಾರ್ಥೇನ ತುಲ್ಯೋ**
**ವರೋಽಸ್ಮಾಕಂ ಕೌರವೇಯಶ್ಚ ಪಾರ್ಥಃ ।**
**ಪೌತ್ರಶ್ಚ ಕೃಷ್ಣಸ್ಯ ಸುಪೂರ್ಣಶಕ್ತೇಃ**
**ಪೈತೃಷ್ವಸೇಯೋ ವೀರತಮೋ ಗುಣಾಢ್ಯಃ ॥ ೨೦೪ ॥**

ಪದಚ್ಛೇದ :- ದೇಯಾ, ಚ, ಕನ್ಯಾ, ನ, ಅಸ್ತಿ, ಪಾರ್ಥೇನ, ತುಲ್ಯಃ, ವರಃ, ಅಸ್ಮಾಕಂ, ಕೌರವೆಯಃ, ಚ, ಪಾರ್ಥಃ, ಪೌತ್ರಃ, ಚ, ಕೃಷ್ಣಸ್ಯ, ಸುಪೂರ್ಣಶಕ್ತೇಃ, ಪೈತೃಷ್ವಸೇಯಃ, ವೀರತಮಃ, ಗುಣಾಢ್ಯಃ ।

**ಅರ್ಥ** :- **ಕನ್ಯಾ** = ಕನ್ಯೆಯು, **ದೇಯಾ** = ದಾನಮಾಡಲೇಬೇಕು, **ಚ** = ಮತ್ತು, **ಅಸ್ಮಾಕಂ** = ನಮಗೆ, **ಪಾರ್ಥೇನ** = ಅರ್ಜುನನಿಂದ, **ತುಲ್ಯಃ** = ಸದೃಶನಾದ, **ವರಃ** = ವರನು, **ನಾಸ್ತಿ** = ಇಲ್ಲ, **ಕೌರವೇಯಃ** = ಕುರುಕುಲದಲ್ಲಿ

ಹುಟ್ಟಿದ, **ಸುಪೂರ್ಣಶಕ್ತೇಃ** = ಪರಿಪೂರ್ಣಶಕ್ತಿ, **ಕೃಷ್ಣಸ್ಯ** = ವೇದವ್ಯಾಸದೇವರ, **ಪೌತ್ರಃ** = ಮೊಮ್ಮಗನಾದ, **ವೀರತಮಃ** = ಅತ್ಯಂತ ಪರಾಕ್ರಮಿಯಾದ, **ಪೈತೃಷ್ವಸೇಯಃ** = ಸೋದರತ್ತೆಯ ಮಗನಾದ, **ಪಾರ್ಥಃ** = ಅರ್ಜುನನು, **ಗುಣಾಢ್ಯಃ** = ಗುಣಾಢ್ಯನೂ ಆಗಿದ್ದಾನೆ.

**ತಾತ್ಪರ್ಯ** :- ಕನ್ಯೆಯನ್ನು ವರನಿಗೆ ಮದುವೆಮಾಡಿ ಕೊಡಲೇಬೇಕು. ನಮಗಾದರೂ ಅರ್ಜುನನಿಗಿಂತ ಬೇರೆ ವರನಿಲ್ಲ. ಇವನು ಕುರವಂಶ ಸುತನು, ಸಂಪೂರ್ಣಶಕ್ತಿ ಉಳ್ಳ ವೇದವ್ಯಾಸರ ಮೊಮ್ಮಗ, ಶ್ರೀಕೃಷ್ಣನ ಸೋದರತ್ತೆಯ ಮಗನಾಗಿದ್ದಾನೆ ಮತ್ತು ಗುಣಶಾಲಿಯೂ ಆಗಿದ್ದಾನೆ.

**ಅರ್ಥ್ಯೋಽಸ್ಮಾಭಿಃ ಸ್ವಯಮೇವಾಹರತ್ ಸ**
**ಶಕ್ರಾತ್ಮಜೋ ನಾತ್ರ ನಃ ಕಾರ್ಯಹಾನಿಃ ।**
**ಅನುದ್ರುತ್ಯೈನಂ ಯದಿ ಚ ಸ್ಯಾತ್ ಪರಾಜಯೋ**
**ಹಾನಿರ್ದೃಢಂ ಯಶಸೋ ವೋ ಭವೇತ ॥ ೨೦೫ ॥**

**ಪದಚ್ಛೇದ** :- **ಅರ್ಥ್ಯಃ, ಅಸ್ಮಾಭಿಃ, ಸ್ವಯಂ, ಏವ, ಆಹರತ್, ಸಃ, ಶಕ್ರಾತ್ಮಜಃ, ನ, ಅತ್ರ, ನಃ, ಕಾರ್ಯಹಾನಿಃ, ಅನುದ್ರುತ್ಯ, ಏನಂ, ಯದಿ, ಚ, ಸ್ಯಾತ್, ಪರಾಜಯಃ, ಹಾನಿಃ, ದೃಢಂ, ಯಶಸಃ, ವಃ, ಭವೇತ್ ।**

**ಅರ್ಥ** :- **ಅಸ್ಮಾಭಿಃ** = ನಮ್ಮಿಂದ, **ಅರ್ಥ್ಯಃ** = ಬೇಡಲು ಯೋಗ್ಯನಾಗಿದ್ದಾನೆ, **ಸಃ** = ಅಂತಹ, **ಶಕ್ರಾತ್ಮಜಃ** = ಇಂದ್ರನ ಮಗನಾದ ಅರ್ಜುನನು, **ಸ್ವಯಮೇವ** = ತಾನೆಯೇ, **ಆಹರತ್** = ಅಪಹರಿಸಿದ, **ನಃ** = ನಮಗೆ, **ಕಾರ್ಯಹಾನಿಃ** = ಕೆಲಸ ನಾಶವಾಗುವಿಕೆ (ಸೋಲು), **ನ** = ಇಲ್ಲ, **ಯದಿ** = ಒಂದು ವೇಳೆ, **ಏನಂ** = ಈ ಅರ್ಜುನನನ್ನು, **ಅನುದ್ರುತ್ಯ** = ಅನುಸರಿಸಿ ಹೋಗಿ, **ವಃ** = ನಿಮಗೆ, **ಪರಾಜಯಃ** = ಅಪಜಯವು, **ಭವೇತ್** = ಆದಿತೋ, **ವಃ** = ನಿಮ್ಮ, **ಯಶಸಃ** = ಕೀರ್ತಿಗೆ, **ದೃಢಂ** = ನಿಶ್ಚಯವಾಗಿಯೂ, **ಹಾನಿಃ** = ಹಾನಿಯಾದೀತು.

**ತಾತ್ಪರ್ಯ** :- ಅರ್ಜುನನಂಥ ವರನನ್ನು ನಾವೇ ಹುಡುಕಿ ಕೊಡಬೇಕು. ಆದರೆ ಅವನೇ ಕನ್ಯೆಯನ್ನು ಅಪಹರಿಸಿದ್ದಾನೆ. ಈಗ ಅರ್ಜುನನನ್ನು ಬೆನ್ನಟ್ಟಿ ಹೋಗಿ ಯುದ್ಧವನ್ನು ಮಾಡಿದಲ್ಲಿ ನೀವು ಸೋತರೆ ನಮಗೆ ಅಪಕೀರ್ತಿಯೇ ಬರುತ್ತದೆ.

ಜಿತ್ವಾ ಯದ್ಯೇನಂ ಕನ್ಯಕಾ ಚಾಽಹೃತಾ ಚೇತ್
ಪರಾಮೃಷ್ಟಾಂ ನೈವ ಕಶ್ಚಿದ್ಧಿ ಲಿಪ್ಸೇತ್ ।
ಅತೋ ನ ಮೇ ರೋಚತೇ ವೋಽನುಯಾನ-
ಮಿತ್ಯೂಚಿವಾನಾಸ ತೂಷ್ಣೀಂ ಪರೇಶಃ ॥ ೨೦೬ ॥

ಪದಚ್ಛೇದ :- ಜಿತ್ವಾ, ಯದಿ, ಏನಂ, ಕನ್ಯಕಾ, ಚ, ಆಹೃತಾ, ಚೇತ್, ಪರಾಮೃಷ್ಟಾಂ, ನ, ಏವ, ಕಶ್ಚಿತ್, ವಿಲಿಪ್ಸೇತ್, ಅತಃ, ನ, ಮೇ, ರೋಚನೆ, ವಃ, ಅನುಯಾನಂ, ಇತಿ, ಉಚಿವಾನ್, ಆಸ, ತೂಷ್ಣೀ, ಪರೇಶಃ ।

**ಅರ್ಥ** :- **ಯದಿ** = ಒಂದು ವೇಳೆ, **ಏನಂ** = ಅರ್ಜುನನನ್ನು, **ಜಿತ್ವಾ** = ಗೆದ್ದು, **ಚ** = ಮತ್ತು, **ಕನ್ಯಕಾ** = ಕನ್ಯೆಯು, **ಆಹೃತಾ ಚೇತ್** = ತರಲ್ಪಟ್ಟರೆ, **ಪರಾಮೃಷ್ಟಾಂ** = ಇನ್ನೊಬ್ಬರು ಸ್ಪರ್ಶಿಸಿದ, **ಕಶ್ಚಿತ್** = ಯಾವನಾದರೂ, **ನೈವ ವಿಲಿಪ್ಸೇತ್** = ಇಚ್ಛಿಸಲಾರ, **ಅತಃ** = ಆದ್ದರಿಂದ, **ಮೇ** = ನನಗೆ, **ವಃ** = ನಿಮ್ಮ, **ಅನುಯಾನಂ** = ಪ್ರಯಾಣವು, **ನ ರೋಚತೆ** = ಇಷ್ಟವಾಗುವುದಿಲ್ಲ, **ಇತಿ** = ಎಂದು, **ಪರೇಶಃ** = ಬ್ರಹ್ಮಾದಿಗಳಿಗೆ ಒಡೆಯನಾದ ಕೃಷ್ಣನು, **ಉಚಿವಾನ್** = ಹೇಳಿದನು.

**ತಾತ್ಪರ್ಯ** :- ಒಂದುವೇಳೆ ಅರ್ಜುನನನ್ನು ಗೆದ್ದು ಕನ್ಯೆಯನ್ನು ಮರಳಿ ತಂದರೆ ಇನ್ನೊಬ್ಬರು ಸ್ಪರ್ಶಿಸಿರುವ ಕನ್ಯೆಯನ್ನು ಯಾರೂ ವಿವಾಹ ಮಾಡಿಕೊಳ್ಳುವುದಿಲ್ಲ. ಆದ್ದರಿಂದ ನನಗೆ ನಿಮ್ಮ ಪ್ರಯಾಣ ಇಷ್ಟವಾಗುತ್ತಿಲ್ಲ ಎಂದು ಹೇಳಿ ಕೃಷ್ಣನು ಸುಮ್ಮನಾದನು.

ಶ್ರುತ್ವಾ ಹಲೀ ಕೃಷ್ಣವಾಕ್ಯಂ ಬಭಾಷೇ
ಮಾ ಯಾತ ಚಿತ್ತಂ ವಿದಿತಂ ಮಯಾಸ್ಯ ।
ಅಸ್ಯಾನುವೃತ್ತಿರ್ವಿಜಯಾಯ ನಃ ಸ್ಯಾತ್
ಶುಭಾಯ ಶಾಂತ್ಯೈ ಪರತಶ್ಚ ಮುಕ್ತ್ಯೈ ॥ ೨೦೭ ॥

ಪದಚ್ಛೇದ :- ಶ್ರುತ್ವಾ, ಹಲೀ, ಕೃಷ್ಣವಾಕ್ಯಂ, ಬಭಾಷೆ, ಮಾ, ಯಾತ, ಚಿತ್ತಂ, ವಿದಿತಮ್, ಮಯಾ, ಅಸ್ಯ, ಅಸ್ಯಾನುವೃತ್ತಿಃ, ವಿಜಯಾಯ, ನ, ಸ್ಯಾತ್, ಶುಭಾಯ, ಶಾಂತ್ಯೈ, ಪರತಃ, ಚ, ಮುಕ್ತ್ಯೈ ।

**ಅರ್ಥ** :- **ಹಲೀ** = ಬಲರಾಮನು, **ಕೃಷ್ಣವಾಕ್ಯಂ** = ಶ್ರೀಕೃಷ್ಣನ ವಾಕ್ಯವನ್ನು, **ಶ್ರುತ್ವಾ** = ಕೇಳಿ, **ಬಭಾಷೆ** = ಹೇಳಿದನು, **ಮಾ ಯಾತ** = ನೀವು ಹೋಗಬೇಡಿರಿ, **ಮಯಾ** = ನನ್ನಿಂದ, **ಅಸ್ಯ** = ಕೃಷ್ಣನ, **ಚಿತ್ತಂ** = ಚಿತ್ತವು, **ವಿದಿತವಮ್** = ತಿಳಿಯಲ್ಪಟ್ಟಿತು, **ಅಸ್ಯ** = ಕೃಷ್ಣನ, **ಅನುವೃತ್ತಿಃ** = ಅನುಸರಿಸುವುದು, **ನಃ** = ನಮ್ಮ, **ವಿಜಯಾಯ** = ಗೆಲುವಿಗೋಸ್ಕರ, **ಶುಭಾಯ** = ಮಂಗಳಕ್ಕೋಸ್ಕರ, **ಶಾಂತ್ಯೈ** = ಎಲ್ಲ ಅನಿಷ್ಟಗಳ ನಾಶವಾಗಲು, **ಪರತಃ ಮುಕ್ತೈ** = ಪರಲೋಕದಲ್ಲಿ ಮುಕ್ತಿ ಸಿಗಲು, **ಸ್ಯಾತ್** = ಆದೀತು.

**ತಾತ್ಪರ್ಯ** :- ಶ್ರೀಕೃಷ್ಣನ ಮಾತನ್ನು ಆಲಿಸಿ ಬಲರಾಮನು ಹೇಳುತ್ತಾನೆ ಕೃಷ್ಣನ ಮಾತಿನ ಅಭಿಪ್ರಾಯ ನನಗೆ ತಿಳಿದಿದೆ. ನಾವು ಕೃಷ್ಣ ಹೇಳಿದಂತೆ ನಡೆದುಕೊಂಡಲ್ಲಿ ಜಯ ಕಟ್ಟಿಟ್ಟ ಬುತ್ತಿ. ಎಲ್ಲ ಅನಿಷ್ಟಗಳು ನಾಶವಾಗುತ್ತದೆ. ಮಂಗಳವೂ ಆಗುತ್ತದೆ. ಪರಲೋಕದಲ್ಲಿ ಮುಕ್ತಿಯೂ ಸಿಗುತ್ತದೆ.

**ತತೋಽರ್ಜುನೋ ಯತ್ರ ತಿಷ್ಠನ್ ನ ಕಶ್ಚಿತ್**
**ಪರಾಜಯಂ ಯಾತಿ ಕೃಷ್ಣಾಜ್ಞಯೈವ ।**
**ರಥೇನ ತೇನೈವ ಯಯೌ ಸಭಾರ್ಯಃ**
**ಶಕ್ರಪ್ರಸ್ಥಂ ಚಾವಿಶದ್ ಭ್ರಾತೃಗುಪ್ತಮ್ ॥ ೨೦೮ ॥**

**ಪದಚ್ಛೇದ** :– **ತತಃ, ಅರ್ಜುನಃ, ಯತ್ರ, ತಿಷ್ಠನ್, ನ, ಕಶ್ಚಿತ್, ಪರಾಜಯಂ, ಯಾತಿ, ಕೃಷ್ಣಾಜ್ಞಯಾ, ಏವ, ರಥೇನ, ತೇನ, ಏವ, ಯಯೌ, ಸಭಾರ್ಯಃ, ಶಕ್ರಪ್ರಸ್ಥಂ, ಚ, ಆವಿಶತ್, ಭ್ರಾತೃಗುಪ್ತಮ್ ।**

**ಅರ್ಥ** :- **ತತಃ** = ಅನಂತರ, **ಅರ್ಜುನಃ** = ಅರ್ಜುನನು, **ಯತ್ರ** = ಯಾವ ಕೃಷ್ಣನ ರಥದಲ್ಲಿ, **ಕಶ್ಚಿತ್** = ಯಾವನೇ ಒಬ್ಬ ವ್ಯಕ್ತಿಯು, **ಕೃಷ್ಣಾಜ್ಞಯೈವ** = ಕೃಷ್ಣನ ಅಪ್ಪಣೆಯಿಂದ, **ತೇನೈವ** = ಅದೇ, **ರಥೇನ** = ರಥದಿಂದ, **ಸಭಾರ್ಯಃ** = ಹೆಂಡತಿ ಸಮೇತನಾಗಿ, **ಯಯೌ** = ಹೋದನು, **ಭ್ರಾತೃಗುಪ್ತಂ** = ಅಣ್ಣಂದಿರಿಂದ ರಕ್ಷಿಸಲ್ಪಟ್ಟ, **ಶಕ್ರಪ್ರಸ್ಥಂ** = ಇಂದ್ರಪ್ರಸ್ಥವನ್ನು, **ಆವಿಶತ್** = ಪ್ರವೇಶಿಸಿದನು.

**ತಾತ್ಪರ್ಯ** :- ವೇದವ್ಯಾಸರ ಅಪ್ಪಣೆಯಿಂದ ಅರ್ಜುನನಿದ್ದಲ್ಲಿ ಎಲ್ಲ ಕಡೆ ಜಯವೆ ಆಗುತ್ತದೆ ಪರಾಜಯವು ಖಂಡಿತ ಇಲ್ಲ, ಆದ್ದರಿಂದ ಅರ್ಜುನನು

ಶ್ರೀಕೃಷ್ಣನ ರಥದಿಂದ ತನ್ನ ಹೆಂಡತಿಯಿಂದ ಕೂಡಿಕೊಂಡು ಅಣ್ಣಂದಿರಿಂದ ಸುರಕ್ಷಿತವಾದ ಇಂದ್ರಪ್ರಸ್ಥವನ್ನು ಪ್ರವೇಶಿಸಿದ.

**ಸಂಭಾವಿತೋ ಭ್ರಾತೃಭಿಶ್ಚಾತಿತುಷ್ಟೈ-**
**ರೂಚೇऽಥ ಸರ್ವಂ ತೇಷು ಯಚ್ಚಾऽತ್ಮವೃತ್ತಮ್ ।**
**ಶಾಂತೇಷು ವಾಕ್ಯಾದಾತ್ಮನೋ ಯಾದವೇಷು**
**ಕೃಷ್ಣೋ ಯುಕ್ತೋ ಹಲಿನಾऽಗಾಚ್ಚ ಪಾರ್ಥಾನ್ ॥ ೨೦೯ ॥**

ಪದಚ್ಛೇದ :- ಸಂಭಾವಿತಃ, ಭ್ರಾತೃಭಿಃ, ಚ, ಅತಿತುಷ್ಟೈಃ, ಊಚೆ, ಅಥ, ಸರ್ವಂ, ತೇಷು, ಯತ್, ಚ, ಆತ್ಮವೃತ್ತಂ, ಶಾಂತೇಷು, ವಾಕ್ಯಾತ್, ಆತ್ಮನಃ, ಯಾದವೇಷು, ಕೃಷ್ಣಃ, ಯುಕ್ತಃ, ಹಲಿನಾ, ಅಗಾತ್, ಚ, ಪಾರ್ಥಾನ್ ।

**ಅರ್ಥ** :- **ಅತಿತುಷ್ಟೈಃ** = ಅತ್ಯಂತ ಸಂತುಷ್ಟರಾದ, **ಭ್ರಾತೃಭಿಃ** = ಅಣ್ಣಂದಿರಿಂದ, **ಸಂಭಾವಿತಃ** = ಪೂಜಿಸಲ್ಪಟ್ಟಿದ್ದಾನೆ, **ಚ** = ಮತ್ತು, **ಅಥ** = ಅನಂತರ, **ತೇಷು** = ಅಣ್ಣಂದಿರಲ್ಲಿ, **ಯಚ್ಚ** = ಯಾವ, **ಆತ್ಮವೃತ್ತಂ** = ತನ್ನ ವೃತ್ತಾಂತವು, **ತತ್ ಸರ್ವಂ** = ಅದೆಲ್ಲವೂ, **ಊಚೆ** = ಹೇಳಲ್ಪಟ್ಟಿತು, **ಯಾದವೇಷು** = ಯಾದವರೆಲ್ಲರೂ, **ಶಾಂತೇಷು** = ಶಾಂತರಾಗಲು, **ಹಲಿನಾ** = ಬಲರಾಮನಿಂದ, **ಯುಕ್ತಃ** = ಕೂಡಿದ, **ಕೃಷ್ಣಃ** = ಕೃಷ್ಣನು, **ಪಾರ್ಥಾನ್** = ಪಾಂಡವರನ್ನು ಕುರಿತು, **ಅಗಾತ್** = ಹೋದನು.

**ತಾತ್ಪರ್ಯ** :- ಸಹೋದರರೆಲ್ಲರೂ ಬಹಳ ಸಂತೋಷದಿಂದ ಅರ್ಜುನನು ಆದರಿಸಿದ್ದಾರೆ. ಬಳಿಕ ಅರ್ಜುನ ತನ್ನ ವೃತ್ತಾಂತವನ್ನು ನಿರೂಪಿಸಿದ್ದಾನೆ. ಅನಂತರ ಯಾದವರ ಕೋಪ ನಾಶವಾದಾಗ ಕೃಷ್ಣ ಬಲರಾಮನೊಂದಿಗೆ ಪಾಂಡವರನ್ನು ನೋಡಲು ಇಂದ್ರಪ್ರಸ್ಥಕ್ಕೆ ತೆರಳಿದ.

**ಸಾರ್ಧಂ ಯಯೌ ಶಕಟ್ಯೈ ರತ್ನಪೂರ್ಣೈಃ**
**ಶಕ್ರಪ್ರಸ್ಥಂ ಪೂಜಿತಸ್ತತ್ರ ಪಾರ್ಥೈಃ ।**
**ದದೌ ತೇಷಾಂ ತಾನಿ ರಾಮೇಣ ಯುಕ್ತ-**
**ಸ್ತಥಾ ಕೃಷ್ಣಾಯೈ ಭೂಷಣಾನಿ ಸ್ವಸುಶ್ಚ ॥ ೨೧೦ ॥**

**ಪದಚ್ಛೇದ :–** ಸಾರ್ಧಂ, ಯಯೌ, ಶಕಟೈಃ, ರತ್ನಪೂರ್ಣೈಃ, ಶಕ್ರಪ್ರಸ್ಥಂ, ಪೂಜಿತಃ, ತತ್ರ, ಪಾರ್ಥೈಃ, ದದೌ, ತೇಷಾಂ, ತಾನಿ, ರಾಮೇಣ, ಯುಕ್ತಃ, ತಥಾ, ಕೃಷ್ಣಾಯೈ, ಭೂಷಣಾನಿ, ಸ್ವಸುಃ, ಚ ।

**ಅರ್ಥ :–** **ರತ್ನಪೂರ್ಣೈಃ** = ರತ್ನಗಳಿಂದ ತುಂಬಿದ, **ಶಕಟೈಃ** = ಬಂಡಿಗಳಿಂದ, **ಸಾರ್ಧಂ** = ಜೊತೆಗೆ, **ಶಕ್ರಪ್ರಸ್ಥಂ** = ಇಂದ್ರಪ್ರಸ್ಥವನ್ನು ಕುರಿತು, **ಯಯೌ** = ಹೋದನು, **ತತ್ರ** = ಆ ಇಂದ್ರಪ್ರಸ್ಥದಲ್ಲಿ, **ಪಾರ್ಥೈಃ** = ಪಾಂಡವರಿಂದ, **ಪೂಜಿತಃ** = ಪೂಜಿಸಲ್ಪಟ್ಟ ಕೃಷ್ಣನು, **ರಾಮೇಣ** = ಬಲರಾಮನಿಂದ, **ಯುಕ್ತಃ** = ಕೂಡಿದವನಾಗಿ, **ತಾನಿ** = ಆ ರತ್ನಗಳನ್ನು, **ತೇಷಾಂ** = ಪಾಂಡವರಿಗೆ, **ತಥಾ** = ಹಾಗೆಯೆ, **ಕೃಷ್ಣಾಯೈ** = ದ್ರೌಪದಿಗೆ, **ಸ್ವಸುಃ ಚ** = ತಂಗಿಯಾದ ಸುಭದ್ರೆಗೂ, **ದದೌ** = ಕೊಟ್ಟನು.

**ತಾತ್ಪರ್ಯ :–** ಶ್ರೀಕೃಷ್ಣನು ಅನೇಕ ರತ್ನಗಳಿಂದ ತುಂಬಿದ ಬಂಡಿಗಳಿಂದ ಇಂದ್ರಪ್ರಸ್ಥಕ್ಕೆ ತೆರಳಿದ. ಅಲ್ಲಿ ಪಾಂಡವರು ಕೃಷ್ಣನನ್ನು ಸತ್ಕರಿಸಿದ್ದಾರೆ. ಬಲರಾಮನೊಂದಿಗೆ ಕೂಡಿಕೊಂಡು ಪಾಂಡವರಿಗೆ ದ್ರೌಪದಿಗೆ ಸುಭದ್ರೆಗೆ ಅನೇಕ ಆಭರಣಗಳನ್ನು ಕೊಟ್ಟಿದ್ದಾನೆ.

**ಮಾಸಾನುಷಿತ್ವಾ ಕತಿಚಿದ್ ರೌಹಿಣೇಯೋ**
**ಯಯೌ ಪುರೀಂ ಕೇಶವೋಽತ್ರಾವಸಚ್ಚ ।**
**ಬಹೂನ್ ವರ್ಷಾನ್ ಪಾಂಡವೈಃ ಪೂಜ್ಯಮಾನಃ**
**ಪ್ರೀತಿಂ ತೇಷಾಮಾದಧಾನೋಽಧಿಕಾಂ ಚ ॥ ೨೧೧ ॥**

**ಪದಚ್ಛೇದ :–** ಮಾಸಾನ್, ಉಷಿತ್ವಾ, ಕತಿಚಿತ್, ರೋಹಿಣೆಯಃ, ಯಯೌ, ಪುರೀಂ, ಕೇಶವಃ, ಅತ್ರ, ಆವಸತ್, ಚ, ಬಹೂನ್, ವರ್ಷಾನ್, ಪಾಂಡವೈಃ, ಪೂಜ್ಯಮಾನಃ, ಪ್ರೀತಿಂ, ತೇಷಾಂ, ಆದಧಾನಃ, ಅಧಿಕಾಂ, ಚ ।

**ಅರ್ಥ :–** **ರೌಹಿಣೆಯಃ** = ಬಲರಾಮನು, **ಕತಿಚಿತ್** = ಕೆಲವು, **ಮಾಸಾನ್** = ತಿಂಗಳುಗಳನ್ನು, **ಉಷಿತ್ವಾ** = ಇಂದ್ರಪ್ರಸ್ಥದಲ್ಲಿಯೆ ವಾಸ ಮಾಡಿ, **ಸ್ವಾಂ ಪುರೀ** = ತನ್ನದ್ದಾದ ದ್ವಾರಕಾಪಟ್ಟಣವನ್ನು ಕುರಿತು, **ಯಯೌ** = ಹೋದನು, **ಪಾಂಡವೈಃ** = ಪಾಂಡವರಿಂದ, **ಪೂಜ್ಯಮಾನಃ** = ಪೂಜಿಸಲ್ಪಡುವ, **ತೇಷಾಂ** = ಆ ಪಾಂಡವರಲ್ಲಿ, **ಅಧಿಕಾಂ** = ಹೆಚ್ಚಿನದಾದ, **ಪ್ರೀತಿ** = ಪ್ರೀತಿಯನ್ನು,

ಆದಧಾನಃ = ಬೆಳೆಸುತ್ತಿರುವ, ಕೇಶವಃ = ಶ್ರೀಕೃಷ್ಣನು, ಬಹೂನ್ ವರ್ಷಾನ್ = ಅನೇಕ ವರ್ಷಗಳ ಕಾಲ, ಆವಸತ್ = ಚೆನ್ನಾಗಿ ವಾಸಮಾಡಿದನು.

ತಾತ್ಪರ್ಯ :- ಬಲರಾಮನು ಒಂದು ತಿಂಗಳು ಅಲ್ಲಿಯೆ ಇದ್ದು ನಂತರ ತನ್ನ ದ್ವಾರಕಾಪಟ್ಟಣಕ್ಕೆ ಹೋಗಿದ್ದಾನೆ. ಶ್ರೀಕೃಷ್ಣನು ಪಾಂಡವರಿಂದ ಅದೃತವಾಗಿ ಅನೇಕ ವರ್ಷಗಳ ಕಾಲ ಅಲ್ಲಿಯೆ ವಾಸಮಾಡಿದನು. ಪಾಂಡವರಲ್ಲಿ ಪ್ರತಿನಿತ್ಯವೂ ಪ್ರೀತಿಯು ಬೆಳೆಯಿತು.

**ಆಸನ್ ಕೃಷ್ಣಾಯಾಃ ಪಂಚ ಸುತಾ ಗುಣಾಢ್ಯಾ**
**ವಿಶ್ವೇದೇವಾಃ ಪಂಚಗಂಧರ್ವಮುಖ್ಯೈಃ ।**
**ಆವಿಷ್ಟಾಸ್ತೇ ಚಿತ್ರರಥಾಭಿತಾಮ್ರ-**
**ಕಿಶೋರಗೋಪಾಲಬಲೈಃ ಕ್ರಮೇಣ ॥ ೨೧೨ ॥**

ಪದಚ್ಛೇದ :- **ಆಸನ್, ಕೃಷ್ಣಾಯಾಃ, ಪಂಚ, ಸುತಾ, ಗುಣಾಢ್ಯಾಃ, ವಿಶ್ವೇದೇವಾಃ, ಪಂಚಗಂಧರ್ವಮುಖ್ಯೈಃ, ಆವಿಷ್ಟಾಃ, ತೇ, ಚಿತ್ರರಥಾಭಿತಾಮ್ರಕಿಶೋರಗೋಪಾಲ-ಬಲೈಃ, ಕ್ರಮೇಣ ।**

ಅರ್ಥ :- **ಕೃಷ್ಣಾಯಾಃ** = ದ್ರೌಪದೀದೇವಿಗೆ, **ಗುಣಾಢ್ಯಾಃ** = ಗುಣಪೂರ್ಣರಾದ, **ಪಂಚ** = ಐದು, **ಸುತಾಃ** = ಮಕ್ಕಳು, **ಆಸನ್** = ಹುಟ್ಟಿದರು, **ತೇ ಚ** = ಅವರಾದರೂ, **ಚಿತ್ರರಥಾಭಿತಾಮ್ರಕಿಶೋರಗೋಪಾಲ-ಬಲೈಃ** = ಚಿತ್ರರಥ, ಅಭಿತಾಮ್ರ, ಕಿಶೋರ, ಗೋಪಾಲ, ಬಲ ಎಂಬ, **ಪಂಚಗಂಧರ್ವಮುಖ್ಯೈಃ** = ಐದು ಶ್ರೇಷ್ಠ ಗಂಧರ್ವರಿಂದ, **ಕ್ರಮೇಣ** = ಕ್ರಮವಾಗಿ, **ಆವಿಷ್ಟಾಃ** = ಆವಿಷ್ಟರಾದ, **ವಿಶ್ವೇದೇವಾಃ** = ಹಿಂದೆ ವಿಶ್ವದೇವತೆಗಳು.

ತಾತ್ಪರ್ಯ :- ದ್ರೌಪದೀದೇವಿಗೆ ಗುಣಪೂರ್ಣರಾದ ಐದು ಮಕ್ಕಳು ಹುಟ್ಟಿದರು. ಈ ಐವರು ಚಿತ್ರರಥ, ಅಭಿತಾಮ್ರ, ಕಿಶೋರ, ಗೋಪಾಲ, ಬಲ ಎಂಬ ಐದು ಗಂಧರ್ವರಿಂದ ಆವಿಷ್ಟರಾದ ವಿಶ್ವೇದೇವತೆಗಳು.

**ಪ್ರತಿವಿಂಧ್ಯಃ ಶ್ರುತಸೋಮಃ ಶ್ರುತಾಖ್ಯ-**
**ಕೀರ್ತಿಃ ಶತಾನೀಕಃ ಉತ ಶ್ರುತಕ್ರಿಯಃ ।**

**ಯುಧಿಷ್ಠಿರಾದ್ಯೈಃ ಕ್ರಮಶಃ ಪ್ರಜಾತಾಃ**
**ತೇಷಾಂ ದ್ವಯೋಶ್ಚಾವರಜೋಽಭಿಮನ್ಯುಃ ॥ ೨೧೩ ॥**

**ಪದಚ್ಛೇದ :– ಪ್ರತಿವಿಂಧ್ಯಃ, ಶ್ರುತಸೋಮಃ, ಶ್ರುತಾಖ್ಯಕೀರ್ತಿಃ, ಶತಾನೀಕಃ, ಉತ, ಶ್ರುತಕ್ರಿಯಃ, ಯುಧಿಷ್ಠಿರಾದ್ಯೈಃ, ಕ್ರಮಶಃ, ಪ್ರಜಾತಾಃ, ತೇಷಾಂ, ದ್ವಯೋಃ, ಚ, ಅವರಜಃ, ಅಭಿಮನ್ಯುಃ ।**

**ಅರ್ಥ :-** **ಪ್ರತಿವಿಂಧ್ಯಃ** = ಪ್ರತಿವಿಂಧ್ಯನು, **ಶ್ರುತಸೋಮಃ** = ಶ್ರುತಸೋಮನು, **ಅವರಜಃ** = ತಮ್ಮನಾದ, **ಶ್ರುತಾಖ್ಯಕೀರ್ತಿಃ** = ಶ್ರುತಕೀರ್ತಿಯು, **ಶತಾನೀಕಃ** = ಶತಾನೀಕನು, **ಶ್ರುತಕ್ರಿಯಃ** = ಶ್ರುತಕ್ರಿಯನು, **ಯುಧಿಷ್ಠಿರಾದ್ಯೈಃ** = ಯುಧಿಷ್ಠಿರ ಮೊದಲಾದ ಐವರಿಂದ, **ಕ್ರಮಶಃ** = ಕ್ರಮವಾಗಿ, **ಪ್ರಜಾತಾಃ** = ಹುಟ್ಟಿದರು, **ದ್ವಯೋಃ ಚ** = ಪ್ರತಿವಿಂಧ್ಯ ಶ್ರುತಸೋಮರ ನಂತರ, **ಅಭಿಮನ್ಯುಃ** = ಅಭಿಮನ್ಯುವು, **ಪ್ರಜಾತಃ** = ಹುಟ್ಟಿದನು.

**ತಾತ್ಪರ್ಯ :-** ಯುಧಿಷ್ಠಿರ ಭೀಮಸೇನ ಮೊದಲಾದ ಪಂಚ ಪಾಂಡವರಿಂದ ಪ್ರತಿವಿಂಧ್ಯ ಶೃತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಕ್ರಿಯ ಎಂದು ಐದು ಮಕ್ಕಳು ದ್ರೌಪದಿಯಲ್ಲಿ ಹುಟ್ಟಿದ್ದಾರೆ. ಇವರಲ್ಲಿ ಪ್ರತಿವಿಂಧ್ಯ ಶ್ರುತಸೋಮನಾದ ಬಳಿಕ ತಮ್ಮನಾದ ಅಭಿಮನ್ಯು ಹುಟ್ಟಿದ್ದಾನೆ.

**ಚಂದ್ರಾಂಶಯುಕ್ತೋಽತಿತರಾಂ ಬುಧೋಽಸೌ**
**ಜಾತಃ ಸುಭದ್ರಾಜಠರೇಽರ್ಜುನೇನ ।**
**ಧರ್ಮೇರಶಕ್ರಾಂಶಯುತೋಽಶ್ವಿನೋಶ್ಚ**
**ತಥೈವ ಕೃಷ್ಣಸ್ಯ ಸ ಸನ್ನಿಧಾನಯುಕ್ ॥ ೨೧೪ ॥**

**ಪದಚ್ಛೇದ :– ಚಂದ್ರಾಂಶಯುಕ್ತಃ, ಅತಿತರಾಮ್, ಬುಧಃ, ಅಸೌ, ಜಾತಃ, ಸುಭದ್ರಾಜಠರೆ, ಅರ್ಜುನೇನ, ಧರ್ಮೇರಶಕ್ರಾಂಶಯುತಃ, ಅಶ್ವಿನೋಃ, ಚ, ತಥೈವ, ಕೃಷ್ಣಸ್ಯ, ಚ, ಸನ್ನಿಧಾನಯುಕ್ ।**

**ಅರ್ಥ :-** **ಅಸೌ** = ಈ ಅಭಿಮನ್ಯುವು, **ಚಂದ್ರಾಂಶಯುಕ್ತಃ** = ಚಂದ್ರನ ಅಂಶಉಳ್ಳ, **ಬುಧಃ** = ಬುಧನು, **ಸುಭದ್ರಾಜಠರೇ** = ಸುಭದ್ರೆಯ ಜಠರದಲ್ಲಿ,

**ಅರ್ಜುನೇನ** = ಅರ್ಜುನನಿಂದ, **ಜಾತಃ** = ಹುಟ್ಟಿದನು, **ತಥೈವ** = ಹಾಗೆಯೆ, **ಧರ್ಮೇರಶಂಕ್ರಾಶಯುತಃ** = ಯಮಧರ್ಮ ವಾಯು ಇಂದ್ರರ ಅಂಶದಿಂದ ಕೂಡಿದವನಾಗಿ, **ಅಶ್ವಿನೋಃ** = ಅಶ್ವಿನೀ ದೇವತೆಗಳ, **ಕೃಷ್ಣಸ್ಯ** = ಕೃಷ್ಣನ, **ಸನ್ನಿಧಾನಯುಕ್** = ಸನ್ನಿಧಾನ ಉಳ್ಳವನು.

**ತಾತ್ಪರ್ಯ** :- ಚಂದ್ರನ ಅಂಶದಿಂದ ಕೂಡಿದ ಬುಧನೇ ಸುಭದ್ರೆಯ ಉದರದಿಂದ ಅರ್ಜುನನಿಂದ ಅಭಿಮನ್ಯುವಾಗಿ ಹುಟ್ಟಿರುವವನು ಈ ಅಭಿಮನ್ಯುವಿನಲ್ಲಿ ಯಮ, ಮುಖ್ಯಪ್ರಾಣ, ಇಂದ್ರ, ಅಶ್ವಿನೀದೇವತೆಗಳ ಮತ್ತು ಕೃಷ್ಣನ ಸನ್ನಿಧಾನವೂ ಇತ್ತು.

**ಸರ್ವೇಽಪಿ ತೇ ವೀರ್ಯವಂತಃ ಸುರೂಪಾ**
**ಭಕ್ತಾ ವಿಷ್ಣೋಃ ಸರ್ವಶಾಸ್ತ್ರೇಷ್ವಭಿಜ್ಞಾಃ ।**
**ಮೋದಂ ಯಯುಃ ಪಾಂಡವಾಸ್ತೈಃ ಸುತೈಶ್ಚ**
**ವಿಶೇಷತಃ ಸಾತ್ತ್ವತೀನಂದನೇನ ॥ ೨೧೫ ॥**

**ಪದಚ್ಛೇದ** :- ಸರ್ವೇ, ಅಪಿ, ತೇ, ವೀರ್ಯವಂತಃ, ಸುರೂಪಾಃ, ಭಕ್ತಾಃ, ವಿಷ್ಣೋಃ, ಸರ್ವಶಾಸ್ತ್ರೇಷು, ಅಭಿಜ್ಞಾಃ, ಮೋದಂ, ಯಯುಃ, ಪಾಂಡವಾಃ, ತೈಃ, ಸುತೈಃ, ಚ, ವಿಶೇಷತಃ, ಸಾತ್ವತೀನಂದನೇನ ।

**ಅರ್ಥ** :- **ತೇ ಸರ್ವೇಽಪಿ** = ಆ ಪಾಂಡವರ ಮಕ್ಕಳೆಲ್ಲರೂ, **ವೀರ್ಯವಂತಃ** = ಪರಾಕ್ರಮಿಗಳು, **ಸುರೂಪಾಃ** = ಒಳ್ಳೆ ರೂಪವುಳ್ಳವರು, **ಸರ್ವಶಾಸ್ತ್ರೇಷು** = ಸಕಲ ಶಾಸ್ತ್ರಗಳಲ್ಲಿ, **ಅಭಿಜ್ಞಾಃ** = ಆಮೂಲಾಗ್ರ ಪರಿಚಯವುಳ್ಳವರು, **ಭಕ್ತಾಃ** = ವಿಷ್ಣುಭಕ್ತಿಯುಳ್ಳವರು, **ತೈಃ ಸುತೈಃ** = ಆ ಮಕ್ಕಳಿಂದ, **ಪಾಂಡವಾಃ** = ಪಾಂಡವರು, **ಮೋದಂ** = ಸಂತೋಷವನ್ನು, **ಯಯುಃ** = ಹೊಂದಿದರು, **ವಿಶೇಷತಃ** = ವಿಶೇಷವಾಗಿ, **ಸಾತ್ವತೀನಂದನೇನ** = ಸುಭದ್ರೆಯ ಮಗನಾದ ಅಭಿಮನ್ಯುವಿನಿಂದ.

**ತಾತ್ಪರ್ಯ** :- ಪಂಚಪಾಂಡವರ ಮಕ್ಕಳೆಲ್ಲರೂ ಅತ್ಯಂತ ಪರಾಕ್ರಮಶಾಲಿಗಳು ಸುಂದರ ರೂಪವುಳ್ಳವರು. ಸಕಲಶಾಸ್ತ್ರಪಾರಂಗತರು ಭಗವಂತನ ಭಕ್ತರು ಆಗಿದ್ದರು. ಪಾಂಡವರು ಈ ಮಕ್ಕಳಲ್ಲಿ ಮತ್ತು ವಿಶೇಷವಾಗಿ ಅಭಿಮನ್ಯುವಿನ ಮೇಲೆ ಪ್ರೀತಿಯನ್ನು ಇಟ್ಟಿದ್ದರು.

**ತತಃ ಕದಾಚಿತ್ ಖಾಂಡವಂ ಕೃಷ್ಣಪಾರ್ಥೌ**
**ಚಿಕ್ರೀಡಿಷೂ ಸತ್ಯಭಾಮಾಸುಭದ್ರೇ ।**
**ಆದಾಯ ಯಾತೌ ಪರಿಚಾರಕೈಶ್ಚ**
**ರಥೇನ ಗಂಧರ್ವವರಾನುಗೀತೌ ॥ ೨೧೬ ॥**

ಪದಚ್ಛೇದ :- ತತಃ, ಕದಾಚಿತ್, ಖಾಂಡವಂ, ಕೃಷ್ಣಪಾರ್ಥೌ, ಚಿಕ್ರೀಡಿಷೂ, ಸತ್ಯಭಾಮಾಸುಭದ್ರೆ, ಆದಾಯ, ಯಾತೌ, ಪರಿಚಾರಕೈಃ, ಚ, ರಥೇನ, ಗಂಧರ್ವವರಾನುಗೀತೌ ।

**ಅರ್ಥ** :- **ತತಃ** = ಅನಂತರ, **ಕದಾಚಿತ್** = ಒಮ್ಮೆ, **ಕೃಷ್ಣಪಾರ್ಥೌ** = ಶ್ರೀಕೃಷ್ಣ ಮತ್ತು ಅರ್ಜುನರು, **ಚಿಕ್ರೀಡಿಷೂ** = ವಿಹಾರಮಾಡಲು ಇಚ್ಛೆ ಉಳ್ಳವರಾಗಿ, **ಸತ್ಯಭಾಮಾಸುಭದ್ರೇ** = ಸತ್ಯಭಾಮಾ ಸುಭದ್ರೆಯರನ್ನು, **ಆದಾಯ** = ಕರೆದುಕೊಂಡು, **ಪರಿಚಾರಕೈಃ** = ಸೇವಕರಿಂದ, **ಗಂಧರ್ವವರಾನುಗೀತೌ** = ಗಂಧರ್ವ ಶ್ರೇಷ್ಠರಿಂದ ಗಾನಮಾಡಲ್ಪಟ್ಟವರಾಗಿ, **ರಥೇನ** = ರಥದಿಂದ, **ಖಾಂಡವಂ** = ಖಾಂಡವವನವನ್ನು, **ಯಾತೌ** = ಹೋದರು.

**ತಾತ್ಪರ್ಯ** :- ಒಂದು ದಿನ ಕೃಷ್ಣ ಮತ್ತು ಅರ್ಜುನರು ವಿಹಾರ ಮಾಡಲು ಇಚ್ಛೆ ಉಳ್ಳವರಾಗಿ ಸತ್ಯಭಾಮಾ ಸುಭದ್ರೆಯಿಂದ ಕೂಡಿಕೊಂಡು, ಅನೇಕ ಸೇವಕರಿಂದ ಕೂಡಿದವರಾಗಿ ಗಂಧರ್ವರಿಂದ ಸ್ತುತರಾಗಿ ಖಾಂಡವವನಕ್ಕೆ ತೆರಳಿದ್ದಾರೆ.

ಸ್ವೈರಂ ತಯೋಸ್ತತ್ರ ವಿಕ್ರೀಡತೋಶ್ಚ
ಸ್ತ್ರೀರತ್ನಾಭ್ಯಾಂ ಮಂದವಾತಾನುಜುಷ್ಟೇ ।
ವನೇ ಪ್ರಸೂನಸ್ತಬಕೋರುರಾಜಿತೇ
ಜಲೇ ಚ ತಿಗ್ಮದ್ಯುತಿಕನ್ಯಕಾಯಾಃ ॥ ೨೧೭ ॥

ಪದಚ್ಛೇದ :- ಸ್ವೈರಂ, ತಯೋಃ, ತತ್ರ, ವಿಕ್ರೀಡತೋಃ, ಚ, ಸ್ತ್ರೀರತ್ನಾಭ್ಯಾಂ, ಮಂದವಾತಾನುಜುಷ್ಟೆ , ವನೇ, ಪ್ರಸೂನಸ್ತಬಕೋರುರಾಜಿತೇ, ಜಲೇ, ಚ, ತಿಗ್ಮದ್ಯುತಿಕನ್ಯಕಾಯಾಃ ।

**ಅರ್ಥ** :- ತಯೋಃ = ಆ ಕೃಷ್ಣಾರ್ಜುನರು, ಸ್ತ್ರೀರತ್ನಾಭ್ಯಾಂ = ಸ್ತ್ರೀರತ್ನರಿಂದ, ಮಂದವಾತಾನುಜುಷ್ಟೆ = ಮಂದಮಾರುತರಿಂದ

ಸೇವಿಸಲ್ಪಡುವ, ಪ್ರಸೂನಸ್ತಬಕೋರುರಾಜಿತೆ = ಹೂವಿನ ಗೊಂಚಲುಗಳಿಂದ ಶೋಭಾಯಮಾನವಾದ, ವನೇ = ವನದಲ್ಲಿ, ತಿಗ್ಮದ್ಯುತಿಕನ್ಯಕಾಯಾಃ = ಸೂರ್ಯನ ಮಗಳಾದ ಯಮುನೆಯ, ಜಲೇ = ನೀರಿನಲ್ಲಿ, ವಿಕ್ರೀಡತೋಃ = ಕ್ರೀಡೆಯಾಡುತ್ತಿದ್ದಾಗ.

ತಾತ್ಪರ್ಯ :- ತಂಪಾದ ಗಾಳಿ ಬೀಸುತ್ತಿರುವ ಅನೇಕ ಪುಷ್ಪಗಳ ಗೊಂಚಲುಗಳಿಂದ ಅಲಂಕೃತವಾದ ಖಾಂಡವವನದಲ್ಲಿ ಯಮುನೆಯ ನೀರಿನಲ್ಲಿ ಕೃಷ್ಣಾರ್ಜುನರು ವಿಹಾರ ಮಾಡುವಾಗ.

**ಭೂತ್ವಾ ವಿಪ್ರಸ್ತೌ ಯಯಾಚೇಽನ್ನಮೇತ್ಯ**
**ಕೃಶಾನುರೂಚೇ ಚ ಮತೇ ರಮೇಶಿತುಃ ।**
**ಪಾರ್ಥಃ ಕೀದೃಕ್ ತೇಽನ್ನಮಿಷ್ಟಂ ವದೇತಿ**
**ಸ ಚಾವಾದೀದ್ ವಹ್ನಿರಹಂ ವನಾರ್ಥೀ ॥ ೨೧೮ ॥**

**ಪದಚ್ಛೇದ :- ಭೂತ್ವಾ, ವಿಪ್ರಃ, ತೌ, ಯಯಾಚೇ, ಅನ್ನಮ್, ಏತ್ಯ, ಕೃಶಾನುಃ, ಊಚೆ, ಅನುಮತೆ, ರಮೇಶಿತುಃ, ಪಾರ್ಥಃ, ಕೀದೃಕ್, ತೇ, ಅನ್ನಂ, ಇಷ್ಟಂ, ವದ, ಇತಿ, ಸ, ಚ, ಅವಾದೀತ್, ವಹ್ನಿಃ, ಅಹಂ, ವನಾರ್ಥೀ ।**

ಅರ್ಥ :- **ಕೃಶಾನುಃ** = ಅಗ್ನಿದೇವನು, **ವಿಪ್ರಃ ಭೂತ್ವಾ** = ಬ್ರಾಹ್ಮಣನಾಗಿ, **ತೌ** = ಅವರನ್ನು ಹೊಂದಿ, **ಅನ್ನಂ** = ಅನ್ನವನ್ನು, **ಯಯಾಚೆ** = ಬೇಡಿದನು, **ಪಾರ್ಥಃ** = ಅರ್ಜುನನು, **ರಮೇಶಿತುಃ** = ರಮಾವಲ್ಲಭನಾದ ಶ್ರೀಕೃಷ್ಣನ, **ಅನುಮತೇಃ** = ಅನುಮತಿಯಿಂದ, **ತೇ** = ನಿನಗೆ, **ಕೀದೃಕ್** = ಎಂತಹ, **ಅನ್ನಂ** = ಅನ್ನವು, **ಇಷ್ಟಂ** = ಇಷ್ಟವೆಂದು, **ವದ** = ಹೇಳು, **ಸ ಚ ಅಗ್ನಿಃ** = ಆ ಅಗ್ನಿಯಾದರೊ, **ಅಹಂ** = ನಾನು, **ವಹ್ನಿಃ** = ಅಗ್ನಿಯು, **ವನಾರ್ಥೀ** = ಖಾಂಡವವನವನ್ನು ಅಪೇಕ್ಷಿಸುವೆನು, **ಇತಿ** = ಎಂದು, **ಅವಾದೀತ್** = ಹೇಳಿದನು.

ತಾತ್ಪರ್ಯ :- ಹೀಗೆ ಕೃಷ್ಣಾರ್ಜುನರು ವಿಹರಿಸುವಾಗ ಅಗ್ನಿದೇವನು ಬ್ರಾಹ್ಮಣನ ವೇಷವನ್ನು ಧರಿಸಿ ಅವರಿಬ್ಬರಲ್ಲಿ ಅನ್ನವನ್ನು ಬೇಡಿದ. ಅರ್ಜುನನು ಶ್ರೀಕೃಷ್ಣನ ಅನುಜ್ಞೆಯನ್ನು ಪಡೆದು ನಿನಗೆ ಇಷ್ಟವಾದ ಅನ್ನ ಯಾವುದು ಎಂದು

ಕೇಳಿದ. ಅಗ್ನಿ ಉತ್ತರಿಸುತ್ತಾನೆ ನಾನು ಅಗ್ನಿದೇವನು ನನಗೆ ಖಾಂಡವವನವೆಂಬ ಅನ್ನ ಬೇಕು ಎಂದು.

ಪ್ರಯಾಜಾನ್ ದೇವಾನನುಯಾಜಾಂಶ್ಚ ಶುಲ್ಕಂ
ಹವಿರ್ದಾನೇ ದೇವತಾನಾಮಯಾಚಿಷಮ್ ।
ಬಲಹ್ರಾಸಸ್ತವ ಭೂಯಾದಿತಿ ಸ್ಮ
ಶಪ್ತ್ವೈವ ತೇ ತಾಂಶ್ಚ ದದುಃ ಪುರಾ ಮಮ ॥ ೨೧೯ ॥

ಪದಚ್ಛೇದ :- ಪ್ರಯಾಜಾನ್, ದೇವಾನ್, ಅನುಯಾಜಾನ್, ಚ, ಶುಕ್ಲಂ, ಹವಿರ್ದಾನೇ, ದೇವತಾನಾಂ, ಅಯಾಚಿಷಂ, ಬಲಹ್ರಾಸಃ, ತವ, ಭೂಯಾತ್, ಇತಿ, ಸ್ಮ ಶಪ್ತ್ವಾ , ಏವ, ತೇ, ತಾನ್, ಚ, ದದುಃ, ಪುರಾ, ಮಮ ।

**ಅರ್ಥ** :- **ಪುರಾ** = ಹಿಂದೆ, **ಅಹಂ** = ನಾನು, **ದೇವತಾನಾಂ** = ದೇವತೆಗಳಿಗೆ, **ಹವಿರ್ದಾನೆ** = ಹವಿಸ್ಸನ್ನು ಕೊಡುವುದಕ್ಕಾಗಿ, **ಪ್ರಯಾಜಾನ್ ಅನುಯಾಜಾನ್** = ಪ್ರಯಾಜ ಮತ್ತು ಅನುಯಾಜಗಳೆಂಬ ಆಹುತಿಗಳನ್ನು, **ಶುಲ್ಕಂ** = ಸಂಬಳವನ್ನಾಗಿ, **ಅಯಾಚಿಷಂ** = ಬೇಡಿದೆನು, **ತೇ ಚ** = ಅವರಾದರೊ, **ತವ** = ನಿನಗೆ, **ಬಲಹ್ರಾಸಃ** = ಪಚನಶಕ್ತಿಯ ಹ್ರಾಸವು, **ಭೂಯಾತ್ ಸ್ಮ** = ಆಗಲಿ, **ಇತಿ** = ಎಂದು, **ಶಪ್ತ್ವೈವ** = ಶಪಿಸಿಯೆ, **ತಾಂಶ್ಚ** = ಆ ಆಹುತಿಗಳನ್ನು, **ಮಮ** = ನನಗೆ, **ದದುಃ** = ಕೊಟ್ಟರು.

**ತಾತ್ಪರ್ಯ** :- ಹಿಂದೆ ದೇವತೆಗಳಿಗೆ ಹವಿಸ್ಸನು ತಲಪಿಸುವದಕ್ಕಾಗಿ ನಾನು ಪ್ರಯಾಜ ಅನುಯಾಜಗಳೆಂಬ ಆಹುತಿಗಳನ್ನು ಸಂಬಳವೆಂದು ಕೊಡಲು ದೇವತೆಗಳ ಬಳಿ ಯಾಚಿಸಿದ್ದೆ. ಆಗ ಆ ದೇವತೆಗಳು, ನಿನಗೆ ಜೀರ್ಣಶಕ್ತಿ ಕುಂದುಹೋಗಲಿ ಎಂದು ಶಪಿಸಿ ನನಗೆ ಆಹುತಿಗಳನ್ನು ಕೊಟ್ಟರು.

ಪುನಃ ಪೂರ್ತಿಃ ಕೇನ ಮೇ ಸ್ಯಾದ್ ಬಲಸ್ಯೇ-
ತ್ಯಬ್ಜೋದ್ಭವಂ ಪೃಷ್ಟವಾನಸ್ಮಿ ನತ್ವಾ ।
ಯದಾ ವನಂ ಖಾಂಡವಂ ಹಿ ತ್ವಮತ್ಸಿ
ತದಾ ಬಲಂ ತೇ ಭವತೀತಿ ಸೋಽಬ್ರವೀತ್ ॥ ೨೨೦ ॥

ಪದಚ್ಛೇದ :– ಪುನಃ, ಪೂರ್ತಿಃ, ಕೇನ, ಮೇ, ಸ್ಯಾತ್, ಬಲಸ್ಯ, ಇತಿ, ಅಬ್ಜೋದ್ಭವಂ, ಪೃಷ್ಟವಾನ್, ಅಸ್ಮಿ, ನತ್ವಾ, ಯದಾ, ವನಂ, ಖಾಂಡವಂ, ಹಿ, ತ್ವಮ್, ಅತ್ಸಿ, ತದಾ, ಬಲಂ, ತೇ, ಭವತಿ, ಇತಿ, ಸಃ, ಅಬ್ರವೀತ್ ।

**ಅರ್ಥ** :- **ಮೇ** = ನನ್ನ, **ಬಲಸ್ಯ** = ಪಚನಶಕ್ತಿಯ, **ಪುನಃ** = ಮತ್ತೆ, **ಪೂರ್ತಿಃ** = ಪೂರ್ಣತೆಯು, **ಕೇನ** = ಯಾವುದರಿಂದ, **ಸ್ಯಾತ್** = ಆದೀತು, **ಇತಿ** = ಎಂದು, **ಅಬ್ಜೋದ್ಭವಂ** = ಬ್ರಹ್ಮದೇವರನ್ನು, **ನತ್ವಾ** = ನಮಸ್ಕರಿಸಿ, **ಪೃಷ್ಟವಾನ್ ಅಸ್ಮಿ** = ಕೇಳಿದ್ದೇನೆ, **ಸಃ** = ಆ ಬ್ರಹ್ಮದೇವರು, **ಯದಾ** = ಯಾವಾಗ, **ಖಾಂಡವಂ ವನಂ** = ಖಾಂಡವವನವನ್ನು, **ತ್ವಮ್** = ನೀನು, **ಅಸ್ಮಿ** = ತಿನ್ನುವಿಯೊ, **ತದಾ** = ಆವಾಗ, **ತೇ** = ನಿನಗೆ, **ಬಲಂ** = ಪಚನಶಕ್ತಿಯು, **ಭವತಿ** = ಅಭಿವೃದ್ಧಿ ಆಗುತ್ತದೆ, **ಇತಿ** = ಎಂದು, **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ಅನಂತರ ಬ್ರಹ್ಮದೇವರನ್ನು ನಮಸ್ಕರಿಸಿ ಕೇಳಿದೆ. ನನ್ನ ಜೀರ್ಣಶಕ್ತಿಯು ಯಾವಾಗ ಬೆಳೆಯುವುದು ಎಂದು ಆಗ ಬ್ರಹ್ಮದೇವರು ಹೇಳಿದರು ಯಾವಾಗ ನೀನು ಖಾಂಡವವನವನ್ನು ತಿನ್ನುತ್ತೀಯೊ ಆಗ ಮತ್ತೆ ಪಚನಶಕ್ತಿ ಬೆಳೆಯುವುದು ಎಂದು.

**ಶಕ್ರಸ್ಯೇದಂ ಖಾಂಡವಂ ತೇನ ವಿಘ್ನಂ**
**ಕರೋತ್ಯಸೌ ತೇನ ವಾಂ ಪ್ರಾರ್ಥಯಾಮಿ ।**
**ಇತ್ಯುಕ್ತೇ ತಂ ಪಾರ್ಥ ಊಚೇ ಯದಿ ಸ್ಯಾದ್**
**ರಥೋ ಧನುಶ್ಚಾಥ ಶಕ್ರಂ ನಿರೋತ್ಸ್ಯೇ ॥ ೨೨೧ ॥**

ಪದಚ್ಛೇದ :– ಶಕ್ರಸ್ಯ, ಇದಂ, ಖಾಂಡವಂ, ತೇನ, ವಿಘ್ನಂ, ಕರೋತಿ, ಅಸೌ, ತೇನ, ವಾಂ, ಪಾರ್ಥಯಾಮಿ, ಇತಿ, ಉಕ್ತೇ, ತಂ, ಪಾರ್ಥಃ, ಊಚೆ, ಯದಿ, ಸ್ಯಾತ್, ರಥಃ, ಧನುಃ, ಚ, ಅಥ, ಶಕ್ರಂ, ನಿರೋತ್ಸ್ಯೇ ।

**ಅರ್ಥ** :- **ಇದಂ** = ಈ, **ಖಾಂಡವಂ** = ಖಾಂಡವವನವು, **ಶಕ್ರಸ್ಯ** = ಇಂದ್ರನದ್ದು, **ತೇನ** = ಆದ್ದರಿಂದ, **ಅಸೌ** = ಈ ಇಂದ್ರನು, **ವಿಘ್ನಂ** = ವಿಘ್ನವನ್ನು, **ಕರೋತಿ** = ಮಾಡುತ್ತಾನೆ, **ತೇನ** = ಆ ಕಾರಣದಿಂದ, **ವಾಂ** = ನಿಮ್ಮಿಬ್ಬರನ್ನು, **ಪ್ರಾರ್ಥಯಾಮಿ** = ಪ್ರಾರ್ಥಿಸುತ್ತೇನೆ, **ಇತಿ** = ಎಂದು, **ಉಕ್ತೇ** = ಅಗ್ನಿಯು ಹೇಳಲು, **ತಂ** = ಆ ಅಗ್ನಿಯನ್ನು, **ಪಾರ್ಥಃ** = ಅರ್ಜುನನು,

**ಊಚೇ** = ಹೇಳಿದನು, **ಯದಿ** = ಒಂದು ವೇಳೆ, **ರಥಃ** = ಉತ್ತಮವಾದ ರಥವು, **ಧನುಃ ಚ** = ಧನುಸ್ಸು ಕೂಡ, **ಸ್ಯಾತ್** = ಇದ್ದಿತು, **ಅಥ** = ಅನಂತರ, **ಶಕ್ರಮ್** = ಇಂದ್ರನನ್ನು, **ನಿರೋತ್ಸ್ಯೇ** = ಗೆಲ್ಲಬಲ್ಲೆನು.

**ತಾತ್ಪರ್ಯ :-** ಈ ಖಾಂಡವವನ ಇಂದ್ರನದ್ದು ಆದ್ದರಿಂದ ನಾನು ತಿನ್ನಲು ಹೊರಟರೆ ಅವನು ವಿಘ್ನವನ್ನು ಮಾಡುತ್ತಾನೆ. ಆದ್ದರಿಂದ ವಿಘ್ನವನ್ನು ತಡೆಯಲು ನಿಮ್ಮನ್ನು ಪಾರ್ಥಿಸುತ್ತೇನೆ ಆಗ ಅರ್ಜುನ ಉತ್ತರಸಿದ ಒಂದು ವೇಳೆ ಉತ್ತಮವಾದ ಧನುಸ್ಸು ರಥ ಇದ್ದರೆ ಇಂದ್ರನನ್ನು ಗೆಲ್ಲುತ್ತೇನೆ.

**ನರಾವೇಶಾದನ್ನದಾನಪ್ರತಿಶ್ರವಾತ್**
**ಸ್ವಸ್ಯಾಪಿ ಶಕ್ರಸ್ಯ ವಿರೋಧಮೈಚ್ಛತ್ ।**
**ಪಾರ್ಥಃ ಕೃಷ್ಣಸ್ಯ ಪ್ರೇರಣಾಚ್ಚೈವ ವಹ್ನಿಃ**
**ಪಾರ್ಥಂ ಯಯಾಚೇ ಶಕ್ರವಿರೋಧಶಾಂತ್ಯೈ ॥ ೨೨೨ ॥**

**ಪದಚ್ಛೇದ :- ನರಾವೇಶಾತ್, ಅನ್ನದಾನಪ್ರತಿಶ್ರವಾತ್, ಸ್ವಸ್ಯ, ಅಪಿ, ಶಕ್ರಸ್ಯ, ವಿರೋಧಂ, ಐಚ್ಛತ್, ಪಾರ್ಥಃ, ಕೃಷ್ಣಸ್ಯ ಪ್ರೇರಣಾತ್, ಚ, ಏವ, ವಹ್ನಿಃ, ಪಾರ್ಥಂ, ಯಯಾಚೇ, ಶಕ್ರವಿರೋಧಶಾಂತ್ಯೈ ।**

**ಅರ್ಥ :- ಪಾರ್ಥಃ** = ಅರ್ಜುನನು, **ನರಾವೇಶಾತ್** = ನರನ ಆವೇಶದಿಂದ, ಕೂಡಿರುವುದರಿಂದ, **ಅನ್ನದಾನಪ್ರತಿಶ್ರವಾತ್** = ಅನ್ನದಾನವನ್ನು ಮಾಡುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿರುವುದರಿಂದ, **ಕೃಷ್ಣಪ್ರೇರಣಾತ್** = ಶ್ರೀಕೃಷ್ಣನ ಪ್ರೇರಣೆಯಿಂದ, **ಸ್ವಸ್ಯಾಪಿ** = ತನ್ನದೇ ಆದ ಮೂಲರೂಪದೊಂದಿಗೆ, **ವಿರೋಧಂ** = ವಿರೋಧವನ್ನು, **ಐಚ್ಛತ್** = ಬಯಸಿದನು, **ವಹ್ನಿಃ** = ಅಗ್ನಿಯು, **ಶಕ್ರವಿರೋಧಶಾಂತ್ಯೈ** = ಇಂದ್ರವಿರೋಧವನ್ನು ಉಪಶಮಗೊಳಿಸವಿಕೆ, **ಪಾರ್ಥಂ ಏವ** = ಅರ್ಜುನನ್ನೇ, **ಯಯಾಚೆ** = ಬೇಡಿದನು.

**ತಾತ್ಪರ್ಯ :-** ಅರ್ಜುನನು ತನ್ನದೇ ಆದ ಮೂಲರೂಪದ ವಿರೋಧವನ್ನು ಮಾಡಲು ಮೂರು ಕಾರಣಗಳಿವೆ. ಅವನಲ್ಲಿ ನರನ ಆವೇಶ ಇತ್ತು ಮತ್ತು ಅವನು ಅನ್ನವನ್ನು ಕೊಡುತ್ತೇನೆ ಎಂದು ಪ್ರತಿಜ್ಞೆಯನ್ನು

ಮಾಡಿದ್ದನು. ಮತ್ತು ಶ್ರೀಕೃಷ್ಣನ ಅನುಗ್ರಹ ಇದೆ ಆದ್ದರಿಂದ ತನ್ನ ಮೂಲರೂಪಕ್ಕೆ ವಿರೋಧವನ್ನು ಮಾಡಿದ.

**ನಹಿ ಸ್ವದತ್ತಸ್ಯ ಪುನಃ ಸ್ಯ ವೈರಂ**
**ಶಕ್ರಃ ಕುರ್ಯಾತ್ ಸ್ವಯಮಿಂದ್ರೋ ಹಿ ಪಾರ್ಥಃ ।**
**ನಾಪ್ರೇರಿತೋ ವಿಷ್ಣುನಾ ತಸ್ಯ ರೋಧಂ**
**ಪಾರ್ಥಃ ಕುರ್ಯಾದಿತಿ ಕೃಷ್ಣಂ ಯಯಾಚೇ ॥ ೨೨೩ ॥**

ಪದಚ್ಛೇದ :- ನ, ಹಿ, ಸ್ವದತ್ತಸ್ಯ, ಪುನಃ, ಸಃ, ವೈರಂ, ಶಕ್ರಃ, ಕುರ್ಯಾತ್, ಸ್ವಯಂ, ಇಂದ್ರಃ, ಹಿ, ಪಾರ್ಥಃ, ನ, ಅಪ್ರೇರಿತಃ, ವಿಷ್ಣುನಾ, ತಸ್ಯ, ರೋಧಂ, ಪಾರ್ಥಃ, ಕುರ್ಯಾತ್, ಇತಿ, ಕೃಷ್ಣಂ, ಯಯಾಚೇ ।

**ಅರ್ಥ** :- **ಯಸ್ಮಾತ್** = ಯಾವ ಕಾರಣದಿಂದ, **ಪಾರ್ಥಃ** = ಅರ್ಜುನನು, **ಸ್ವಯಂ** = ತಾನೆ, **ಇಂದ್ರಃ** = ಇಂದ್ರನು, **ತಸ್ಮಾತ್** = ಆದ್ದರಿಂದ, **ಸಃ ಶಕ್ರಃ** = ಆ ಇಂದ್ರದೇವರು, **ಸ್ವದತ್ತಸ್ಯ** = ತಾನೇ ಕೊಟ್ಟಿರುವ ವನಕ್ಕೆ, **ಪುನಃ** = ಮತ್ತೆ, **ವೈರಂ** = ವಿರೋಧವನ್ನು, **ನ ಕುರ್ಯಾತ್ ಹಿ** = ಮಾಡಲಾರನು, **ವಿಷ್ಣುನಾ** = ಶ್ರೀಕೃಷ್ಣನಿಂದ, **ಅಪ್ರೇರಿತಃ** = ಪ್ರೇರಿಸಲ್ಪಡದಿರುವ, **ಪಾರ್ಥಃ** = ಅರ್ಜುನನು, **ತಸ್ಯ** = ಆ ಇಂದ್ರನ, **ರೋಧಂ** = ವಿರೋಧವನ್ನು, **ನ ಕುರ್ಯಾತ್** = ಮಾಡಲಾರನು, **ಇತಿ** = ಎಂದು, **ಕೃಷ್ಣಂ** = ಕೃಷ್ಣನನ್ನು, **ಯಯಾಚೇ** = ಬೇಡಿದನು.

**ತಾತ್ಪರ್ಯ** :- ಅಗ್ನಿಯು ಉಳಿದವರನ್ನು ತ್ಯಜಿಸಿ ಕೃಷ್ಣಾರ್ಜುನರನ್ನು ಬೇಡಲು ಏನು ಕಾರಣ ಎಂದರೆ ಇಂದ್ರನೇ ಅರ್ಜುನನಾಗಿ ಅವತರಿಸಿರುವನು. ಅರ್ಜುನನೇ ವನವನ್ನು ತಿನ್ನಲು ಅಪ್ಪಣೆ ಕೊಟ್ಟಾಗ ಇಂದ್ರನು ಈ ಕರ್ಮವನ್ನು ತಡೆಯಲಾರ. ಮತ್ತು ಕೃಷ್ಣನ ಪ್ರೇರಣೆ ಇಲ್ಲದೆ ಅರ್ಜುನ ವಿರೋಧಿಸಲಾರ ಆದ್ದರಿಂದ ಕೃಷ್ಣಾರ್ಜುನರನ್ನು ಅಗ್ನಿದೇವ ಯಾಚಿಸಿದ.

**ನಚಾಯುಕ್ತಃ ಕೇಶವೇನೈಷ ಶಕ್ತ**
**ಇತಿಸ್ಮ ಕೃಷ್ಣಾದಾಪ ಭೂಯೋಽಪ್ಯನುಜ್ಞಾಮ್ ।**
**ಯಯೌ ಸಮೀಪಂ ಚ ಹರೇರ್ಬದರ್ಯಾ-**
**ಮಾದಾಯ ಚಕ್ರಂ ಚಾಮುತಃ ಕೇಶವೇಽದಾತ್ ॥ ೨೨೪ ॥**

ಪದಚ್ಛೇದ :- ನ, ಚ, ಅಯುಕ್ತಃ, ಕೇಶವೇನ, ಏಷಃ, ಶಕ್ತಃ, ಇತಿ, ಸ್ಮ ಕೃಷ್ಣಾತ್, ಆಪ, ಭೂಯಃ, ಅಪಿ, ಅನುಜ್ಞಾಂ, ಯಯೌ, ಸಮೀಪಂ, ಚ, ಹರೇಃ, ಬದರ್ಯಾಂ, ಆದಾಯ, ಚಕ್ರಂ, ಚ, ಅಮುತಃ, ಕೇಶವೆ, ಅದಾತ್ ।

**ಅರ್ಥ** :- **ಕೇಶವೇನ** = ಶ್ರೀಕೃಷ್ಣನಿಂದ, **ಅಯುಕ್ತಃ** = ಸಹಾಯ ರಹಿತನಾದ, **ಏಷಃ** = ಅರ್ಜುನನು, **ನ ಶಕ್ತಃ** = ತಡೆಯಲು ಸಮರ್ಥನಾಗುವುದಿಲ್ಲ, **ಇತಿ** = ಎಂದು, **ಕೃಷ್ಣಂ** = ಶ್ರೀಕೃಷ್ಣನನ್ನು, **ಯಯಾಚೇ ಸ್ಮ** = ಬೇಡಿದನಷ್ಟೆ, **ಭೂಯಃ** = ಪ್ರಾರ್ಥಿಸಿದ ನಂತರ, **ಕೃಷ್ಣಾತ್** = ಶ್ರೀಕೃಷ್ಣನಿಂದ, **ಅನುಜ್ಞಾಮ್** = ಅನುಜ್ಞೆಯನ್ನು, **ಆಪ** = ಹೊಂದಿದನು, **ಬದರ್ಯಾಂ** = ಬದರಿಯಲ್ಲಿ ಇರುವ, **ಹರೇಃ** = ನಾರಾಯಣನ, **ಸಮೀಪಂ** = ಹತ್ತಿರ, **ಯಯೌ** = ಹೋದನು, **ಅಮುತಃ** = ಆ ನಾರಾಯಣನಿಂದ, **ಚಕ್ರಂ** = ಚಕ್ರವನ್ನು, **ಆದಾಯ** = ತೆಗೆದುಕೊಂಡು, **ಕೇಶವೇ** = ಶ್ರೀಕೃಷ್ಣನಿಗೆ, **ಅದಾತ್** = ಕೊಟ್ಟನು.

**ತಾತ್ಪರ್ಯ** :- ಕೃಷ್ಣನ ಸಹಾಯವಿಲ್ಲದಿದ್ದಲ್ಲಿ ಅರ್ಜುನ ಇಂದ್ರನನ್ನು ಎದುರಿಸಲಾರ ಎಂದು ತಿಳಿದು ಕೃಷ್ಣನನ್ನು ಮತ್ತೆ ಪ್ರಾರ್ಥಿಸಿ ಬದರಿಗೆ ಹೋಗಿ ಅಲ್ಲಿ ನಾರಾಯಣನ ಚಕ್ರವನ್ನು ಸ್ವೀಕರಿಸಿ ಕೃಷ್ಣನಿಗೆ ಇತ್ತನು.

**ಚಕ್ರಂ ಗೋಮಂತೇ ಕೃಷ್ಣಮಾಪಾಪಿ ಪೂರ್ವಂ**
**ಭಕ್ತ್ಯಾ ವಹ್ನಿಃ ಕೇಶವೇಽದಾತ್ ಪುನಸ್ತತ್ ।**
**ಚಕ್ರಂ ಚ ವಿಷ್ಣೋರ್ಬಹುಧಾ ವ್ಯವಸ್ಥಿತಂ**
**ತದಗ್ನಿದತ್ತಂ ಪ್ರಾಕ್ತನಂ ಚೈಕಧಾಽಽಸೀತ್ ॥ ೨೨೫ ॥**

ಪದಚ್ಛೇದ :- ಚಕ್ರಂ, ಗೋಮಂತೇ, ಕೃಷ್ಣಂ, ಆಪ, ಅಪಿ, ಪೂರ್ವಂ, ಭಕ್ತ್ಯಾ, ವಹ್ನಿಃ, ಕೇಶವೇ, ಅದಾತ್, ಪುನಃ, ತತ್, ಚಕ್ರೆ, ಚ, ವಿಷ್ಣೋಃ, ಬಹುಧಾ, ವ್ಯವಸ್ಥಿತಂ, ತತ್, ಅಗ್ನಿದತ್ತಂ, ಪ್ರಾಕ್ತನಂ, ಚ, ಏಕಧಾ, ಆಸೀತ್ ।

**ಅರ್ಥ** :- **ಪೂರ್ವಂ** = ಹಿಂದೆ, **ಗೋಮಂತೆ** = ಗೋಮಂತ ಪರ್ವತದಲ್ಲಿ, **ಚಕ್ರಂ** = ಚಕ್ರವು, **ಕೃಷ್ಣಂ** = ಶ್ರೀಕೃಷ್ಣನನ್ನು, **ಆಪ ಅಪಿ** = ಹೊಂದಿದ್ದರೂ, **ಪುನಃ** = ಮತ್ತೆ, **ತತ್** = ಅದೇ ಚಕ್ರವನ್ನು, **ವಹ್ನಿಃ** = ಅಗ್ನಿಯು, **ಭಕ್ತ್ಯಾ** = ಭಕ್ತಿಯಿಂದ, **ಕೇಶವೇ** = ಶ್ರೀಕೃಷ್ಣನಿಗೆ, **ಅದಾತ್** = ಕೊಟ್ಟನು, **ವಿಷ್ಣೋಃ**

= ನಾರಾಯಣನ, **ಚಕ್ರಂ ಚ** = ಚಕ್ರವಾದರೊ, **ಬಹುಧಾ** = ಅನೇಕ ರೂಪದಿಂದ, **ವ್ಯವಸ್ಥಿತಂ** = ವ್ಯವಸ್ಥಿತವಾಗಿದೆ, **ತತ್** = ಆದ್ದರಿಂದ, **ಅಗ್ನಿದತ್ತಂ** = ಅಗ್ನಿ ಕೊಟ್ಟಿರುವ, **ಪ್ರಾಕ್ತನಂ ಚ** = ಹಿಂದೆ ಇರುವ ಚಕ್ರವು, **ಏಕಧಾ** = ಒಂದೇ, **ಆಸೀತ್** = ಆಯಿತು.

ತಾತ್ಪರ್ಯ :- ಹಿಂದೆ ಶ್ರೀಕೃಷ್ಣನು ಗೋಮಂತ ಪರ್ವತದಲ್ಲಿರುವಾಗ ಸುದರ್ಶನ ಚಕ್ರ ಬಂದಿತ್ತು. ಈಗ ಮತ್ತೆ ಅಗ್ನಿಯು ಅದೇ ಚಕ್ರವನ್ನು ಭಕ್ತಿಯಿಂದ ಅರ್ಪಿಸಿದಾಗ ಹಿಂದೆ ಇರುವ ಆ ಚಕ್ರವು ಅಗ್ನಿ ಕೊಟ್ಟಿರುವ ಚಕ್ರವು ಒಂದೇ ಆಯಿತು.

**ಧನುಶ್ಚ ಗಾಂಡೀವಮಥಾಬ್ಜಜಸ್ಯ**
**ಕರೋತಿ ಯೇನಾಖಿಲಸಂಹೃತಿಂ ಸಃ ।**
**ಅಂಶೇನ ದತ್ತಂ ತದುಮಾಪತೇಶ್ಚ**
**ಶಕ್ರಸ್ಯ ಸೋಮಸ್ಯ ಜಲೇಶಿತುಶ್ಚ ॥ ೨೨೬ ॥**

ಪದಚ್ಛೇದ :- ಧನುಃ, ಚ, ಗಾಂಡೀವಂ, ಅಥ, ಅಬ್ಜಜಸ್ಯ, ಕರೋತಿ, ಯೇನ, ಅಖಿಲಸಂಹೃತಿಂ, ಸಃ, ಅಂಶೇನ, ದತ್ತಂ, ತತ್, ಉಮಾಪತೇಃ, ಚ ಶಕ್ರಸ್ಯ, ಸೋಮಸ್ಯ, ಜಲೇಶಿತುಃ, ಚ ।

ಅರ್ಥ :- **ಅಥ** = ಅನಂತರ, **ಅಬ್ಜಜಸ್ಯ** = ಬ್ರಹ್ಮದೇವರ, **ಗಾಂಡೀವಂ ಧನುಃ ಚ** = ಗಾಂಡೀವ ಧನುಸ್ಸು ಆದರೋ, **ಪಾರ್ಥಾಯ** = ಅರ್ಜುನನಿಗೆ, **ಆದತಿ** = ಕೊಟ್ಟನು, **ಯೇನ** = ಯಾವ ಗಾಂಡೀವ ಧನುಸ್ಸಿನಿಂದ, **ಅಖಿಲಸಂಹೃತಿಂ** = ಎಲ್ಲ ಜಗತ್ತಿನ ಲಯವನ್ನು, **ಕರೋತಿ** = ಮಾಡುತ್ತಾನೊ, **ಸಃ** = ಅಂತಹ ಗಾಂಡೀವಧನುಸ್ಸು, **ಅಂಶೇನ** = ಅಂಶದಿಂದ, **ಉಮಾಪತೇಃ** = ರುದ್ರದೇವರಿಗೆ, **ಚ** = ಮತ್ತು, **ಶಕ್ರಸ್ಯ** = ಇಂದ್ರನಿಗೆ, **ಚ** = ಮತ್ತು, **ಜಲೇಶಿತುಃ** = ವರುಣನಿಗೂ, **ಚ** = ಮತ್ತು, **ಸೋಮಸ್ಯ** = ಚಂದ್ರನಿಗೆ, **ದತ್ತಮ್** = ಕೊಡಲ್ಪಟ್ಟಿತು.

ತಾತ್ಪರ್ಯ :- ಅಗ್ನಿಯು ವರುಣನಿಂದ ಗಾಂಡೀವ ಧನುಸ್ಸನ್ನು ಸ್ವೀಕರಿಸಿ ಅರ್ಜುನನಿಗೆ ಕೊಟ್ಟ ಈ ಗಾಂಡೀವ ಧನುಸ್ಸು ಬ್ರಹ್ಮದೇವರದ್ದು. ಇದರಿಂದ ಬ್ರಹ್ಮದೇವರು ಸಮಗ್ರ ಪ್ರಪಂಚದ ಲಯವನ್ನು ಮಾಡುತ್ತಾರೆ. ಈ ಗಾಂಡೀವ

ಧನುಸ್ಸಿನ ಒಂದು ಅಂಶ ರುದ್ರದೇವರಿಗೆ ಮತ್ತು ಇಂದ್ರನಿಗೆ ಮತ್ತೆ ಚಂದ್ರನಿಗೆ ಕೊಟ್ಟಿತು.

ತೇನೈವ ತೇ ಜಿಗ್ಯುರಥೋ ಜಗತ್‌ತ್ರಯಂ
ಪ್ರಸಾದತಸ್ತೇ ಕ್ರಮಶೋऽಬ್ಜಯೋನೇಃ ।
ಅನನ್ಯಧಾರ್ಯಂ ವಿಜಯಾವಹಂ ಚ
ಭಾರೇಣ ಲಕ್ಷಸ್ಯ ಸಮಂ ಶುಭಾವಹಮ್ ॥ ೨೨೭ ॥

ಪದಚ್ಛೇದ :- ತೇನ, ಏವ, ತೇ, ಜಿಗ್ಯುಃ, ಅಥೋ, ಜಗತ್ತ್ರಯಂ, ಪ್ರಸಾದತಃ, ತೇ, ಕ್ರಮಶಃ, ಅಬ್ಜಯೋನೇಃ, ಅನನ್ಯಧಾರ್ಯಂ, ವಿಜಯಾವಹಂ, ಚ, ಭಾರೇಣ, ಲಕ್ಷಸ್ಯ, ಸಮಂ, ಶುಭಾವಹಂ ।

**ಅರ್ಥ** :- **ಅಥೋ** = ಅನಂತರ, **ತೇ** = ಆ ರುದ್ರಾದಿ ದೇವತೆಗಳು, **ಅಬ್ಜಯೋನೇಃ** = ಬ್ರಹ್ಮದೇವರ, **ಪ್ರಸಾದತಃ** = ಅನುಗ್ರಹದಿಂದ, **ತೇನೈವ** = ಅದೇ ಗಾಂಡೀವ ಧನುಸ್ಸಿನಿಂದ, **ಜಗತ್ತ್ರಯಂ** = ಮೂರು ಲೋಕವನ್ನು, **ಜಿಗ್ಯುಃ** = ಗೆದ್ದರು, **ಲಕ್ಷಸ್ಯಭಾರೇಣ** = ಒಂದುಲಕ್ಷ ಭಾರದಿಂದ, **ಅನನ್ಯಧಾರ್ಯಂ** = ಇನ್ನೊಬ್ಬರಿಂದ ಎತ್ತಲು ಅಸಾಧ್ಯವಾದ, **ವಿಜಯಾವಹಂ** = ಎಲ್ಲರಿಗೂ ಜಯವನ್ನು ಕೊಡುವಂತಹದು, **ಶುಭಾವಹಂ** = ಮಂಗಳಕರವಾದದ್ದು.

**ತಾತ್ಪರ್ಯ** :- ಬ್ರಹ್ಮದೇವರ ಈ ಗಾಂಡೀವ ಧನುಸ್ಸಿನಿಂದಲೇ ರುದ್ರಾದಿದೇವತೆಗಳು ಮೂರು ಲೋಕವನ್ನು ಗೆದ್ದಿದ್ದಾರೆ. ಅಷ್ಟೆ ಅಲ್ಲದೆ ಇದು ಒಂದು ಲಕ್ಷ ಭಾರದಿಂದ ಕೂಡಿರುವುದು. ಬೇರೆಯವರಿಂದ ಧರಿಸಲು ಅಸಾಧ್ಯ- ವಾದದ್ದು ಜಯವನ್ನು ಕೊಡುವಂತಹದ್ದು ಮಂಗಳವನ್ನು ಉಂಟು- ಮಾಡುವಂತಹದ್ದು.

ರಥಂ ಚ ಶುಭ್ರಾಶ್ವಯುತಂ ಜಯಾವಹಂ
ತೂಣೌ ತಥಾಚಾಕ್ಷಯಸಾಯಕೌ ಶುಭೌ ।
ಧ್ವಜಂ ಚ ರಾಮಸ್ಯ ಹನೂಮದಂಕ-
ಮಾದಾಯ ಸರ್ವಂ ವರುಣಾದರ್ಜುನೇऽದಾತ್ ॥ ೨೨೮ ॥

ಪದಚ್ಛೇದ :- ರಥಂ, ಚ, ಶುಭ್ರಾಶ್ವಯುತಂ, ಜಯಾವಹಂ, ತೂಣೌ, ತಥಾ, ಚ, ಅಕ್ಷಯಸಾಯಕೌ, ಶುಭೌ, ಧ್ವಜಂ, ಚ, ರಾಮಸ್ಯ, ಹನೂಮದಂಕಂ, ಆದಾಯ, ಸರ್ವಂ, ವರುಣಾತ್, ಅರ್ಜುನೇ, ಅದಾತ್ ।

**ಅರ್ಥ** :- **ಶುಭ್ರಾಶ್ವಯುತಂ** = ಶುಭ್ರವಾದ ಬಿಳಿಕುದುರೆಯಿಂದ ಕೂಡಿರುವ, **ರಥಂ ಚ** = ರಥವಾದರೊ, **ಶುಭಾವಹಂ** = ಮಂಗಳಕರವಾದದು, **ತಥಾ** = ಹಾಗೆಯೆ, **ಅಕ್ಷಯಸಾಯಕೌ** = ಅಕ್ಷಯ ಬಾಣಗಳುಳ್ಳ, **ತೂಣೌ** = ಬತ್ತಳಿಕೆಗಳು, **ಶುಭೌ** = ಮಂಗಳಕರವಾದವುಗಳು, **ಹನೂಮದಂಕಂ** = ಹನುಮಂತನ ಚಿಹ್ನೆಯುಳ್ಳ, **ರಾಮಸ್ಯ** = ಶ್ರೀರಾಮನ, **ಧ್ವಜಂ** = ಧ್ವಜವನ್ನು, **ಸರ್ವಂ** = ಎಲ್ಲವನ್ನು, **ವರುಣಾತ್** = ವರುಣನಿಂದ, **ಅರ್ಜುನೇ** = ಅರ್ಜುನನಿಗೆ, **ಅದಾತ್** = ಕೊಟ್ಟನು.

**ತಾತ್ಪರ್ಯ** :- ಶುಭ್ರವಾದ ಕುದುರೆಯುಳ್ಳ ಮಂಗಳಕರವಾದ ರಥವನ್ನು ಮಂಗಳಕರವಾದ ಅನೇಕ ಬಾಣಗಳುಳ್ಳ ಅಕ್ಷಯ ಬತ್ತಳಿಕೆಯನ್ನು ಹನುಮಂತನ ಚಿಹ್ನೆಯಿಂದ ಕೂಡಿದ ಶ್ರೀರಾಮನ ಧ್ವಜವನ್ನು ಎಲ್ಲವನ್ನು ವರುಣನಿಂದ ತೆಗೆದುಕೊಂಡು ಅರ್ಜುನನಿಗೆ ಕೊಟ್ಟನು.

**ವಿಶೇಷತೋ ಧ್ವಜಸಂಸ್ಥೇ ಹನೂಮ-**
**ತ್ಯಜೇಯತಾ ಸ್ಯಾಜ್ಜಯರೂಪೋ ಯತೋಽಸೌ ।**
**ಸರ್ವಂ ಚ ತದ್ ದಿವ್ಯಮಭೇದ್ಯಮೇವ**
**ವಿದ್ಯುತ್ಪ್ರಭಾ ಜ್ಯಾ ಚ ಗಾಂಡೀವಸಂಸ್ಥಾ ॥ ೨೯ ॥**

ಪದಚ್ಛೇದ :- ವಿಶೇಷತಃ, ಧ್ವಜಸಂಸ್ಥೇ, ಹನೂಮತಿ, ಅಜೇಯತಾ, ಸ್ಯಾತ್, ಜಯರೂಪಃ, ಯತಃ, ಅಸೌ, ಸರ್ವಂ, ಚ, ತದ್, ದಿವ್ಯಂ, ಅಭೇದ್ಯಂ, ಏವ, ವಿದ್ಯುತ್ಪ್ರಭಾ, ಜ್ಯಾ, ಚ, ಗಾಂಡೀವಸಂಸ್ಥಾ ।

**ಅರ್ಥ** :- **ಯತಃ** = ಯಾವ ಕಾರಣದಿಂದ, **ಅಸೌ** = ಈ ಹನುಮಂತನು, **ಜಯರೂಪಃ** = ಜಯ ಸ್ವರೂಪನು, **ಅತಃ** = ಆದ್ದರಿಂದ, **ವಿಶೇಷತಃ** = ವಿಶೇಷವಾಗಿ, **ಹನೂಮತಿ** = ಹನುಮಂತನು, **ಧ್ವಜಸಂಸ್ಥೇ** = ಧ್ವಜದಲ್ಲಿ ಇರಲು, **ಅಜೇಯತಾ** = ಅಜೇಯತ್ವವು, **ಸ್ಯಾತ್** = ಬಂದೀತು, **ತತ್ ಸರ್ವಂ ಚ** = ಆ ಗಾಂಡೀವ ಮೊದಲಾದವುಗಳೆಲ್ಲವೂ, **ದಿವ್ಯಂ** = ಲೋಕವಿಲಕ್ಷಣ-

ವಾದದ್ದು, **ಅಭೇದ್ಯಮೇವ** = ತುಂಡರಿಸಲು ಅಸಾಧ್ಯವೇ, **ಗಾಂಡೀವಸಂಸ್ಥಾ** = ಗಾಂಡೀವದಲ್ಲಿರುವ, **ಜ್ಯಾ ಚ** = ಹಗ್ಗವಾದರೋ, **ವಿದ್ಯುತ್ಪ್ರಭಾ** = ಮಿಂಚಿನಂತೆ ಹೊಳೆಯುವಂತಹದ್ದು.

**ತಾತ್ಪರ್ಯ :-** ಧ್ವಜದಲ್ಲಿ ಹನುಮಂತನಿದ್ದಾಗ ವಿಶೇಷವಾಗಿ ಜಯ ಉಂಟಾಗುವುದು. ಏಕೆಂದರೆ ಅವನು ಜಯಸ್ವರೂಪನು ಹೀಗೆ ಲೋಕವಿಲಕ್ಷಣವಾದ ಯಾರಿಂದಲೂ ತುಂಡರಿಸಲು ಅಸಾಧ್ಯವಾದ ಗಾಂಡೀವ ಧನಸ್ಸನ್ನು ಕೊಟ್ಟನು. ಅದರಲ್ಲಿ ಗಾಂಡೀವದಲ್ಲಿರುವ ಹಗ್ಗ ಮಿಂಚಿನಂತೆ ಹೊಳೆಯುವಂತಹದ್ದು.

**ಗಾಂಡೀವಮಪ್ಯಾಸ ಕೃಷ್ಣಪ್ರಸಾದಾ-**
**ಚ್ಛಕ್ಯಂ ಧರ್ತುಂ ಪಾಂಡವಸ್ಯಾಪ್ಯಧಾರ್ಯಮ್ ।**
**ದೇವೈಶ್ಚ ತೈರ್ಬ್ರಹವರಾದ್ ಧೃತಂ ತದ್**
**ಬ್ರಹ್ಮೈವ ಸಾಕ್ಷಾತ್ ಪ್ರಭುರಸ್ಯ ಧಾರಣೇ ॥ ೨೩೦ ॥**

**ಪದಚ್ಛೇದ :- ಗಾಂಡೀವಂ, ಅಪಿ, ಆಸ, ಕೃಷ್ಣಪ್ರಸಾದಾತ್, ಶಕ್ಯಂ, ಧರ್ತುಂ, ಪಾಂಡವಸ್ಯ, ಅಪಿ, ಅಧಾರ್ಯಂ, ದೇವೈಃ, ಚ, ತದ್, ಬ್ರಹ್ಮವರಾತ್, ಧೃತಂ, ತತ್, ಬ್ರಹ್ಮಾ ಏವ, ಸಾಕ್ಷಾತ್, ಪ್ರಭುಃ, ಅಸ್ಯ, ಧಾರಣೇ ।**

**ಅರ್ಥ :- ಅಧಾರ್ಯಂ** = ಬೇರೆಯವರಿಂದ ಧರಿಸಲು ಅಸಾಧ್ಯವಾದ, **ಗಾಂಡೀವಮಪಿ** = ಗಾಂಡೀವವಾದರೊ, **ಪಾಂಡವಸ್ಯ** = ಅರ್ಜುನನಿಗೆ, **ಕೃಷ್ಣಪ್ರಸಾದಾತ್** = ಶ್ರೀಕೃಷ್ಣನ ಅನುಗ್ರಹದಿಂದ, **ಧರ್ತುಂ** = ಧರಿಸಲು, **ಶಕ್ಯಂ** = ಸಾಧ್ಯವಾಗಿತ್ತು, **ಅಸ್ಯ** = ಈ ಗಾಂಡೀವ ಧನುಸ್ಸಿನ, **ಧಾರಣೇ** = ಧರಿಸುವಿಕೆಯಲ್ಲಿ, **ಬ್ರಹ್ಮಾ ಏವ** = ಬ್ರಹ್ಮದೇವರೆ, **ಸಾಕ್ಷಾತ್** = ನೇರವಾಗಿ, **ಪ್ರಭುಃ** = ಸಮರ್ಥರು, **ತತ್** = ಆ ಧನುಸ್ಸು, **ದೇವೈಃ** = ದೇವತೆಗಳಿಂದ, **ಬ್ರಹ್ಮವರಾತ್** = ಬ್ರಹ್ಮದೇವರ ವರಬಲದಿಂದ, **ಧೃತಂ** = ಧರಿಸಲ್ಪಟ್ಟಿತು.

**ತಾತ್ಪರ್ಯ :-** ಗಾಂಡೀವಧನುಸ್ಸನ್ನು ಹೊತ್ತುಕೊಳ್ಳುವ ಸಾಮರ್ಥ್ಯ ಬ್ರಹ್ಮದೇವರಿಗೆ ಬಿಟ್ಟು ಬೇರೆ ಯಾರಿಗೂ ಇಲ್ಲ ಅರ್ಜುನನು ಕೂಡ ಭಗವಂತನ ಅನುಗ್ರಹದಿಂದ ಎತ್ತಲು ಸಮರ್ಥನಾದ. ಅದೇರೀತಿ ಉಳಿದ ದೇವತೆಗಳೂ ಕೂಡ ಬ್ರಹ್ಮದೇವರ ವರದಿಂದ ಧರಿಸುವ ಸಾಮರ್ಥ್ಯ ಉಳ್ಳವರಾಗಿದ್ದರು.

ಇಂದ್ರಸ್ಯ ದತ್ತಶ್ಚ ವರಃ ಸ್ವಯಂಭುವಾ
ತೇನಾಪಿ ಪಾರ್ಥಸ್ಯ ಬಭೂವ ಧಾರ್ಯಮ್ ।
ಇಂದ್ರೋ ಹ್ಯಸೌ ಫಲ್ಗುನತ್ವೇನ ಜಾತಃ
ತತಃ ಸೋಽಸ್ತ್ರೈಃ ಶರಶಾಲಾಂ ಚಕಾರ ॥ ೨೩೧ ॥

ಪದಚ್ಛೇದ :- ಇಂದ್ರಸ್ಯ, ದತ್ತಃ, ಚ, ವರಃ, ಸ್ವಯಂಭುವಾ, ತೇನ, ಅಪಿ, ಪಾರ್ಥಸ್ಯ, ಬಭೂವ, ಧಾರ್ಯಂ, ಇಂದ್ರಃ, ಹಿ, ಅಸೌ, ಫಲ್ಗುನೇನ, ಜಾತಃ, ತತಃ, ಸಃ, ಅಸ್ತ್ರೈಃ, ಶರಶಾಲಾಂ, ಚಕಾರ।

ಅರ್ಥ :- ಸ್ವಯಂಭುವಾ = ಬ್ರಹ್ಮದೇವರಿಂದ, ಇಂದ್ರಸ್ಯ = ಇಂದ್ರನಿಗೆ, ವರಃ = ವರವು, ದತ್ತಃ = ಕೊಡಲ್ಪಟ್ಟಿತು, ತೇನ = ಆ ಕಾರಣದಿಂದ, ಪಾರ್ಥಸ್ಯಾಪಿ = ಅರ್ಜುನನಿಗೂ, ಧಾರ್ಯಮ್ = ಧರಿಸಲು ಯೋಗ್ಯವಾದದ್ದು, ಬಭೂವ = ಆಯಿತು, ಅಸೌ = ಈ ಇಂದ್ರನು, ಫಲ್ಗುನೇನ = ಅರ್ಜುನನಾಗಿ, ಜಾತಃ ಹಿ = ಹುಟ್ಟಿದನಷ್ಟೆ, ತತಃ = ಆ ಧನುಸ್ಸು ಸಿಕ್ಕನಂತರ, ಸಃ = ಅರ್ಜುನನು, ಅಸ್ತ್ರೈಃ = ಅಸ್ತ್ರಗಳಿಂದ, ಶರಶಾಲಾಂ = ಬಾಣಗಳ ಭವನವನ್ನು, ಚಕ್ರಾರ = ಮಾಡಿದನು.

ತಾತ್ಪರ್ಯ :- ಬ್ರಹ್ಮದೇವರು ಇಂದ್ರನಿಗೆ ವರವನ್ನು ನೀಡಿದ್ದರು. ಆ ಇಂದ್ರನೇ ಅರ್ಜುನನಾದ್ದರಿಂದ ಅವನಿಗೂ ಆ ಸಾಮರ್ಥ್ಯ ಬಂದಿದೆ. ಆದ್ದರಿಂದ ಅನೇಕ ಅಸ್ತ್ರಗಳಿಂದ ಬಾಣಗಳಿಂದ ಮನೆಯನ್ನೇ ನಿರ್ಮಿಸಿದ್ದಾನೆ.

ಸ ಯೋಜನದ್ವಾದಶಕಾಭಿವಿಸ್ತೃತಂ
ಪುರಂ ಚಕಾರಾಽಶು ಪುರಂದರಾತ್ಮಜಃ ।
ಹುತಾಶನೋಽಪ್ಯಾಶು ವನಂ ಪ್ರಗೃಹ್ಯ
ಪ್ರಭಕ್ಷಯಾಮಾಸ ಸಮುದ್ಧತಾರ್ಚಿಃ ॥ ೨೩೨ ॥

ಪದಚ್ಛೇದ :- ಸಃ, ಯೋಜನದ್ವಾದಶಕಾಭಿವಿಸ್ತೃತಂ, ಪುರಂ, ಚಕಾರ, ಆಶು, ಪುರಂದರಾತ್ಮಜ, ಹುತಾಶನಃ, ಅಪಿ, ಆಶು, ವನಂ, ಪ್ರಗೃಹ್ಯ, ಪ್ರಭಕ್ಷಯಾಮಾಸ, ಸಮುದ್ಧತಾರ್ಚಿಃ।

ಅರ್ಥ :- ಪುರಂದರಾತ್ಮಜಃ ಸಃ = ಆ ಇಂದ್ರನ ಮಗನಾದ ಅರ್ಜುನನು, ಆಯೋಜನದ್ವಾದಶಕಾಭಿವಿಸ್ತೃತಂ = ಹನ್ನೆರಡು ಯೋಜನೆಗಳಿಂದ ವಿಸ್ತೃತವಾದ,

**ಪುರಂ** = ಪಟ್ಟಣವನ್ನು, **ಆಶು** = ಶೀಘ್ರವಾಗಿ, **ಚಕಾರ** = ಮಾಡಿದನು, **ಹತಾಶನಃ ಅಪಿ** = ಅಗ್ನಿದೇವನಾದರೂ, **ಸಮುದ್ಧತಾರ್ಚಿಃ** = ಬೆಳೆದ ಜ್ವಾಲೆಯಿಂದ, **ಆಶು** = ಶೀಘ್ರವಾಗಿ, **ವನಂ** = ಖಾಂಡವವನವನ್ನು, **ಪ್ರಗೃಹ್ಯ** = ಹಿಡಿದು, **ಪ್ರಭಕ್ಷಯಾಮಾಸ** = ತಿಂದನು.

**ತಾತ್ಪರ್ಯ** :- ಇಂದ್ರನ ಮಗನಾದ ಅರ್ಜುನನೂ ಕೂಡ ಹನ್ನೆರಡು ಯೋಜನವಿಸ್ತೃತವಾದ ಬಾಣಗಳ ಪಟ್ಟಣವನ್ನೇ ನಿರ್ಮಿಸಿದ ಅಗ್ನಿದೇವನೂ ಕೂಡ ಖಾಂಡವವನದಲ್ಲಿ ಚೆನ್ನಾಗಿ ಉರಿಯುತ್ತ ವನವನ್ನೇ ಭಕ್ಷಿಸಿದನು.

**ಪ್ರಭಕ್ಷ್ಯಮಾಣಂ ನಿಜಕಕ್ಷಮೀಕ್ಷ್ಯ**
**ಸಂಧುಕ್ಷಯಾಮಾಸ ತದಾಽಽಶುಶುಕ್ಷಣಿಮ್ ।**
**ಅಕ್ಷೋಪಮಾಭಿರ್ಬಹುಲೇಕ್ಷಣೋಽಂಭಸಾಂ**
**ಧಾರಾಭಿರಾಕ್ಷುಬ್ಧಮನಾಃ ಕ್ಷಯಾಯ ॥ ೨೩೩ ॥**

ಪದಚ್ಛೇದ :– ಪ್ರಭಕ್ಷ್ಯಮಾಣಂ, ನಿಜಕಕ್ಷ್ಯಂ, ಈಕ್ಷ್ಯ, ಸಂಧುಕ್ಷಯಾಮಾಸ, ತದಾ, ಆಶುಶುಕ್ಷಣಿಂ, ಅಕ್ಷೋಪಮಾಭಿಃ, ಬಹುಲೇಕ್ಷಣಃ, ಅಂಭಸಾಂ, ಧರಾಭಿಃ, ಆಕ್ಷುಬ್ಧಮನಾಃ, ಕ್ಷಯಾಯ ।

**ಅರ್ಥ** :- **ಬಹುಲೇಕ್ಷಣಃ** = ಅನೇಕ ಕಣ್ಣುಗಳುಳ್ಳ ಇಂದ್ರನು, **ನಿಜಕಕ್ಷ್ಯಂ** = ತನ್ನ ವನವನ್ನು, **ಪ್ರಭಕ್ಷ್ಯಮಾಣಂ** = ತಿನ್ನುತ್ತಿರುವ, **ಆಶುಶುಕ್ಷಣಿಂ** = ಅಗ್ನಿಯನ್ನು, **ವೀಕ್ಷ್ಯ** = ನೋಡಿ, **ಆಕ್ಷುಬ್ಧಮನಾಃ** = ಕೋಪಗೊಂಡ ಮನಸ್ಸುಳ್ಳವನಾಗಿ, **ಅಕ್ಷೋಪಮಾಭಿಃ** = ರಥದ ಚಕ್ರದ ಮಧ್ಯದಲ್ಲಿರುವ ಕಟ್ಟಿಗೆಯ ದಪ್ಪದಷ್ಟು, **ಅಂಭಸಾಂ ಧಾರಾಭಿಃ** = ಜಲಧಾರೆಯಿಂದ, **ಕ್ಷಯಾಯ** = ನಾಶಕ್ಕಾಗಿ, **ಸಂಧುಕ್ಷಯಾಮಾಸ** = ಆರಿಸಲು ಯತ್ನಿಸಿದನು.

**ತಾತ್ಪರ್ಯ** :- ಅಗ್ನಿಯು ಇಂದ್ರನ ಖಾಂಡವ ವನವನ್ನು ತಿನ್ನುವುದನ್ನು ಕಂಡು ಕೋಪಗೊಂಡು ರಥದ ಚಕ್ರದ ಮಧ್ಯದಲ್ಲಿರುವ ಕಟ್ಟಿಗೆಯಷ್ಟು ದಪ್ಪವಾದ ಹನಿಗಳಿಂದ ಅಗ್ನಿಯನ್ನು ಆರಿಸಲು ಪ್ರಯತ್ನ ಮಾಡಿದ.

**ಅಸ್ತ್ರೈಸ್ತು ವೃಷ್ಟಿಂ ವಿನಿವಾರ್ಯ ಕೃಷ್ಣಃ**
**ಪಾರ್ಥಶ್ಚ ಶಕ್ರಂ ಸುರಪೂಗಯುಕ್ತಮ್ ।**

ಅಯುಧ್ಯತಾಂ ಸೋऽಪಿ ಪರಾಜಿತೋऽಭೂತ್
ಪ್ರೀತಶ್ಚ ದೃಷ್ಟ್ವಾ ಬಲಮಾತ್ಮನಸ್ತತ್ ॥ ೨೩೪ ॥

ಪದಚ್ಛೇದ :- ಅಸ್ತ್ರೈಃ, ತು, ವೃಷ್ಟಿಂ, ವಿನಿವಾರ್ಯ, ಕೃಷ್ಣಃ, ಪಾರ್ಥಃ, ಚ, ಶಕ್ರಂ, ಸುರಪೂಗಯುಕ್ತಂ, ಅಯುಧ್ಯತಾಂ, ಸಃ, ಅಪಿ, ಪರಾಜಿತಃ, ಅಭೂತ್, ಪ್ರೀತಃ, ಚ, ದೃಷ್ಟ್ವಾ, ಬಲಂ, ಆತ್ಮನಃ, ತತ್ ।

ಅರ್ಥ :- ಕೃಷ್ಣಃ = ಶ್ರೀಕೃಷ್ಣನು, ಪಾರ್ಥಶ್ಚ = ಅರ್ಜುನನೂ ಕೂಡ, **ಅಸ್ತ್ರೈಃ** = ವಾಯವ್ಯಾದಿ ಅಸ್ತ್ರಗಳಿಂದ, ವೃಷ್ಟಿಂ = ಮಳೆಯನ್ನು, ವಿನಿವಾರ್ಯಃ = ತಡೆದು, **ಸುರಪೂಗಯುಕ್ತಂ** = ದೇವತೆಗಳ ಸಮೂಹದಿಂದ ಕೂಡಿದ ಇಂದ್ರನನ್ನು, **ಅಯುಧ್ಯತಾಮ್** = ಯುದ್ಧವನ್ನು ಮಾಡಿದರು, **ಸೋऽಪಿ** = ಆ ಇಂದ್ರನಾದರೊ, **ಪರಾಜಿತಃ ಸನ್** = ಸೋತವನಾಗಿ, **ಆತ್ಮನಃ** = ತನ್ನದ್ದೇ ಆದ (ಇನ್ನೊಂದು ರೂಪದ), ಬಲಂ = ಸಾಮರ್ಥ್ಯವನ್ನು, **ದೃಷ್ಟ್ವಾ** = ನೋಡಿ, **ಪ್ರೀತಃ ಅಭೂತ** = ಸಂತುಷ್ಟನಾದನು.

ತಾತ್ಪರ್ಯ :- ಕೃಷ್ಣ ಮತ್ತು ಅರ್ಜುನರು ವಾಯವ್ಯ ಮೊದಲಾದ ಅನೇಕ ಅಸ್ತ್ರಗಳಿಂದ ಮಳೆಯ ಧಾರೆಯನ್ನು ತಡೆದು ದೇವತೆಗಳ ಸಮೂಹದಿಂದ ಕೂಡಿದ ಇಂದ್ರನೊಂದಿಗೆ ಯುದ್ಧವನ್ನು ಮಾಡಿದ್ದಾರೆ. ಅನಂತರ ಇಂದ್ರನು ತನ್ನದೇ ಆದ ಇನ್ನೊಂದು ರೂಪದ ಸಾಮರ್ಥ್ಯ ಕಂಡು ಬೆರಗಾದನು.

ಸ್ನೇಹಂ ಚ ಕೃಷ್ಣಸ್ಯ ತಮರ್ಜುನೇ ಧೃತಂ
ವಿಲೋಕ್ಯ ಪಾರ್ಥಸ್ಯ ಬಲಂ ಚ ತಾದೃಶಮ್ ।
ನಿವರ್ತ್ಯ ಮೇಘಾನತಿತುಷ್ಟಚಿತ್ತಃ
ಪ್ರಣಮ್ಯ ಕೃಷ್ಣಂ ತನಯಂ ಸಮಾಶ್ಲಿಷತ್ ॥ ೨೩೫ ॥

ಪದಚ್ಛೇದ :- ಸ್ನೇಹಂ, ಚ, ಕೃಷ್ಣಸ್ಯ, ತಮ್, ಅರ್ಜುನೇ, ಧೃತಂ, ವಿಲೋಕ್ಯ, ಪಾರ್ಥಸ್ಯ, ಬಲಂ ಚ, ತಾವೃಶಮ್, ನಿವರ್ತ್ಯ, ಮೇಘಾನ್, ಅತಿ ತುಷ್ಟಚಿತ್ತಃ, ಪ್ರಣಮ್ಯ, ಕೃಷ್ಣಂ, ತನಯಂ, ಸಮಾಶ್ಲಿಷತ್ ।

ಅರ್ಥ :- ಕೃಷ್ಣಸ್ಯ = ಶ್ರೀಕೃಷ್ಣನ, ಅರ್ಜುನೇ = ಅರ್ಜುನನಲ್ಲಿ, ಧೃತಂ = ಇಡಲ್ಪಟ್ಟ, ಸ್ನೇಹಂ = ಅಪಾರವಾದ ಪ್ರೀತಿಯನ್ನು, ವಿಲೋಕ್ಯ = ಕಂಡು,

**ಪಾರ್ಥಸ್ಯ** = ಅರ್ಜುನನ, **ತಾದೃಶಂ** = ಅಂತಹ, **ಬಲಂ** = ಬಲವನ್ನು, **ವಿಲೋಕ್ಯ** = ಕಂಡು, **ಮೇಘಾನ್** = ಮೋಡಗಳನ್ನು, **ನಿವರ್ತ್ಯ** = ಹಿಂದೆ ತಿರುಗಿಸಿ, **ಅತಿತುಷ್ಟಚಿತ್ತಃ** = ಅತ್ಯಂತ ಸಂತುಷ್ಟ ಚಿತ್ತನಾಗಿ, **ಕೃಷ್ಣಂ** = ಶ್ರೀಕೃಷ್ಣನನ್ನು, **ಪ್ರಣಮ್ಯ** = ನಮಸ್ಕರಿಸಿ, **ತನಯಂ** = ಮಗನಾದ ಅರ್ಜುನನ್ನು, **ಸಮಾಶ್ಲಿಷತ್** = ಆಲಿಂಗನ ಮಾಡಿದನು.

**ತಾತ್ಪರ್ಯ** :- ಶ್ರೀಕೃಷ್ಣನು ಅರ್ಜುನನಲ್ಲಿ ಮಾಡಿರುವ ಸ್ನೇಹವನ್ನು ಹಾಗೂ ಅರ್ಜುನನ ಅಪರಿಮಿತ ಪರಾಕ್ರಮವನ್ನು ಕಂಡು ಅತ್ಯಂತ ಸಂತೋಷದಿಂದ ಕೂಡಿದವನಾಗಿ ಮೋಡಗಳನ್ನು ಹಿಂದೆ ತಿರುಗಿಸಿ ತನ್ನ ಮಗನಾದ ಅರ್ಜುನನನ್ನು ಆಲಿಂಗಿಸಿದನು.

**ವಿಷ್ಣುಶ್ಚ ಶಕ್ರೇಣ ಸಹೇತ್ಯ ಕೇಶವಂ**
**ಸಮಾಶ್ಲಿಷನ್ನಿರ್ವಿಶೇಷೋಽಪ್ಯನಂತಮ್ ।**
**ಸ ಕೇವಲಂ ಕ್ರೀಡಮಾನಃ ಸಶಕ್ರಃ**
**ಸ್ಥಿತೋ ಹಿ ಪೂರ್ವಂ ಯುಯುಧೇ ನ ಕಿಂಚಿತ್ ।। ೨೩೬ ।।**

ಪದಚ್ಛೇದ :- **ವಿಷ್ಣುಃ, ಚ, ಶಕ್ರೇಣ, ಸಹ, ಏತ್ಯ, ಕೇಶವಂ, ಸಮಾಶ್ಲಿಷತ್, ನಿರ್ವಿಶೇಷಃ, ಅಪಿ, ಅನಂತಂ, ಸಃ, ಕೇವಲಂ, ಕ್ರೀಡಮಾನಃ, ಸಶಕ್ರಃ, ಸ್ಥಿತಃ, ಹಿ, ಪೂರ್ವಂ, ಯುಯುಧೇ, ನ, ಕಿಂಚಿತ್ ।**

**ಅರ್ಥ** :- **ವಿಷ್ಣುಃ ಚ** = ಉಪೇಂದ್ರನಾದರೋ, **ನಿರ್ವಿಶೇಷಃ ಅಪಿ** = ಯಾವುದೇ ಭೇದರಹಿತನಾದರೂ, **ಅನಂತಃ** = ದೇಶಕಾಲಗಳಿಂದ ವ್ಯಾಪ್ತನಾದ, **ಶಕ್ರೇಣ ಸಹ** = ಇಂದ್ರನೊಂದಿಗೆ, **ಏತ್ಯ** = ಬಂದು, **ಕೇಶವಂ** = ಕೃಷ್ಣನನ್ನು, **ಸಮಾಶ್ಲಿಷತ್** = ಆಲಿಂಗಿಸಿದನು, **ಸಃ** = ಆ ವಾಮನನು, **ಕೇವಲಂ** = ಕೇವಲ, **ಕ್ರೀಡಮಾನಃ** = ಆಟವಾಡುತ್ತಾ, **ಸಶಕ್ರಃ** = ಇಂದ್ರನಿಂದ ಸಹಿತನಾಗಿ, **ಪೂರ್ವಂ** = ಮೊದಲು, **ಸ್ಥಿತಃ** = ಇದ್ದವನಾಗಿ, **ನ ಕಿಂಚಿತ್** = ಸ್ವಲ್ಪವೂ ಕೂಡ, **ನ ಯುಯುಧೇ** = ಯುದ್ಧ ಮಾಡಲಿಲ್ಲ.

**ತಾತ್ಪರ್ಯ** :- ಇಂದ್ರನ ತಮ್ಮನಾದ ವಾಮನನೂ ಕೂಡ ಇಂದ್ರನೊಂದಿಗೆ ಬಂದು ಶ್ರೀಕೃಷ್ಣನನ್ನು ಆಲಿಂಗಿಸಿದ್ದಾನೆ. ಇಂದ್ರನು ಅರ್ಜುನನೊಂದಿಗೆ ಕೇವಲ ಆಟವಾಡಲು ಯುದ್ಧವನ್ನು ಮಾಡಿದ್ದಾನೆ ಹೊರತು ವಿರೋಧದಿಂದ ಮಾಡಿಲ್ಲ.

ಬ್ರಹ್ಮಾ ಚ ಶರ್ವಶ್ಚ ಸಮೇತ್ಯ ಕೃಷ್ಣಂ
ಪ್ರಣಮ್ಯ ಪಾರ್ಥಸ್ಯ ಚ ಕೃಷ್ಣನಾಮ ।
ಸಂಚಕ್ರತುಶ್ಚಾಪಿ ಶಿಕ್ಷಾಪ್ರಕರ್ಷಾತ್
ಚಕ್ರುಶ್ಚ ಸರ್ವೇ ಸ್ವಾಸ್ತ್ರದಾನೇ ಪ್ರತಿಜ್ಞಾಮ್ ॥ ೨೩೭ ॥

ಪದಚ್ಛೇದ :- ಬ್ರಹ್ಮಾ, ಚ, ಶರ್ವ, ಚ, ಸಮೇತ್ಯ, ಕೃಷ್ಣಂ, ಪ್ರಣಮ್ಯ, ಪಾರ್ಥಸ್ಯ, ಚ, ಕೃಷ್ಣನಾಮ, ಸಂಚಕ್ರತುಃ, ಚ, ಅಪಿ, ಶಿಕ್ಷಾಪ್ರಕರ್ಷಾತ್, ಚಕ್ರುಃ, ಚ, ಸರ್ವೇ, ಸ್ವಾಸ್ತ್ರದಾನೆ, ಪ್ರತಿಜ್ಞಾಮ್ ।

ಅರ್ಥ :- ಬ್ರಹ್ಮಾ ಚ = ಬ್ರಹ್ಮನೂ, ಶರ್ವಶ್ಚ = ರುದ್ರನೂ, ಸಮೇತ್ಯ = ಬಂದು, ಕೃಷ್ಣಂ = ಕೃಷ್ಣನನ್ನು, ಪ್ರಣಮ್ಯ = ನಮಸ್ಕರಿಸಿ, ಪಾರ್ಥಸ್ಯ = ಅರ್ಜುನನ, ಶಿಕ್ಷಾಪ್ರಕರ್ಷಾತ್ = ಉತ್ಕೃಷ್ಟವಾದ ಶಸ್ತ್ರಾಭ್ಯಾಸದಿಂದ, ಕೃಷ್ಣನಾಮ = ಕೃಷ್ಣನೆಂಬ ಹೆಸರನ್ನು, ಸಂಚಕ್ರತುಃ = ಮಾಡಿದರು, ಚ = ಮತ್ತು, ಸರ್ವೇ = ಎಲ್ಲ ದೇವತೆಗಳು, ಸ್ವಾಸ್ತ್ರದಾನೆ = ಅರ್ಜುನನಿಗೆ ತಮ್ಮ ತಮ್ಮ ಅಸ್ತ್ರವನ್ನು ಕೊಡುವಲ್ಲಿ, ಪ್ರತಿಜ್ಞಾಂ = ಪ್ರತಿಜ್ಞೆಯನ್ನು, ಚಕ್ರುಃ = ಮಾಡಿದರು.

ತಾತ್ಪರ್ಯ :- ಬ್ರಹ್ಮದೇವರು ರುದ್ರದೇವರು ಎಲ್ಲರೂ ಬಂದು ಶ್ರೀಕೃಷ್ಣನನ್ನು ನಮಸ್ಕರಿಸಿದರು. ಅರ್ಜುನನ ಅಪರಿಮಿತವಾದ ವಿದ್ಯೆಯ ಕೌಶಲ್ಯವನ್ನು ಕಂಡು ಅವನಿಗೆ ಕೃಷ್ಣ ಎಂದು ನಾಮಕರಣ ಮಾಡಿದರು ಮತ್ತು ತಮ್ಮ ಅಸ್ತ್ರಗಳನ್ನು ಕೊಟ್ಟರು.

ಅನುಜ್ಞಾತಾಸ್ತೇ ಪ್ರಯಯುಃ ಕೇಶವೇನ
ಕ್ರೀಡಾರ್ಥಮಿಂದ್ರೋ ಯುಯುಧೇ ಹಿ ತತ್ರ ।
ಪ್ರೀತ್ಯಾ ಕೀರ್ತಿಂ ದಾತುಮಪ್ಯರ್ಜುನಸ್ಯ
ತತಸ್ತುಷ್ಟಃ ಸಹ ದೇವೈರ್ಯಸ್ತಯೋಃ ಸಃ ॥ ೨೩೮ ॥

ಪದಚ್ಛೇದ :- ಅನುಜ್ಞಾತಾಃ, ತೇ, ಪ್ರಯಯುಃ, ಕೇಶವೇನ, ಕ್ರೀಡಾರ್ಥಂ, ಇಂದ್ರಃ, ಯುಯುಧೇ, ಹಿ, ತತ್ರ, ಪ್ರೀತ್ಯಾ, ಕೀರ್ತಿಂ, ದಾತುಂ, ಅಪಿ, ಅರ್ಜುನಸ್ಯ, ತತಃ, ತುಷ್ಟಃ, ಸಹ, ದೆವೈಃ, ತಯೊಃ, ಸಃ ।

ಅರ್ಥ :- ತೇ = ಆ ಬ್ರಹ್ಮಾದಿದೇವತೆಗಳು, ಕೇಶವೇನ = ಶ್ರೀಕೃಷ್ಣನಿಂದ, ಅನುಜ್ಞಾತಾಃ = ಅನುಜ್ಞೆಯನ್ನು ಪಡೆದವರಾಗಿ, ಪ್ರಯಯುಃ = ಹೋದರು,

**ತತ್ರ** = ಆ ಖಾಂಡವವನ ದಹನದ ಸ್ಥಳದಲ್ಲಿ, **ಇಂದ್ರಃ** = ಇಂದ್ರನು, **ಕ್ರೀಡಾರ್ಥಂ** = ಕ್ರೀಡೆಗಾಗಿ, **ಅರ್ಜುನಸ್ಯ** = ಅರ್ಜುನನಿಗೆ, **ಕೀರ್ತಿಂ** = ಕೀರ್ತಿಯನ್ನು, **ದಾತುಮಪಿ** = ಕೊಡುವುದಕ್ಕಾಗಿಯೂ, **ಯುಯುಧೇ** = ಯುದ್ಧ ಮಾಡಿದನು, **ತತಃ** = ಅನಂತರ, **ತುಷ್ಟಃ** = ಸಂತುಷ್ಟನಾದವನಾಗಿ, **ಸಃ** = ಆ ಇಂದ್ರನು, **ದೇವೈಃ ಸಹ** = ದೇವತೆಗಳಿಂದ ಕೂಡಿದವನಾಗಿ, **ಯಯೌ** = ಹೋದನು.

**ತಾತ್ಪರ್ಯ** :- ಅನಂತರ ಶ್ರೀಕೃಷ್ಣನ ಅನುಜ್ಞೆಯನ್ನು ಪಡೆದು ಬ್ರಹ್ಮಾದಿ ದೇವತೆಗಳು ದೇವಲೋಕಕ್ಕೆ ತೆರಳಿದ್ದಾರೆ. ಇಂದ್ರನೂ ಕೂಡ ಅರ್ಜುನನ ಕೀರ್ತಿ ಅಭಿವೃದ್ಧಿಗೋಸ್ಕರ ಯುದ್ಧವನ್ನು ಮಾಡಿ ದೇವತೆಗಳಿಂದ ಕೂಡಿ ದೇವಲೋಕಕ್ಕೆ ಹೋದನು.

**ದೈತ್ಯಾಶ್ಚ ನಾಗಾಶ್ಚ ಪಿಶಾಚಯಕ್ಷಾ**
**ಹತಾಃ ಸರ್ವೇ ತದ್ವನಸ್ಥಾ ಹಿ ತಾಭ್ಯಾಮ್ ।**
**ಋತೇ ಚತುಃಪಕ್ಷಿಣಶ್ಚಾಶ್ವಸೇನಂ**
**ಮಯಂ ಚ ನಾನ್ಯತ್ ಕಿಂಚಿದಾಸಾತ್ರ ಮುಕ್ತಮ್ ॥ ೨೩೯ ॥**

**ಪದಚ್ಛೇದ** :- ದೈತ್ಯಾಃ, ಚ, ನಾಗಾಃ, ಚ, ಪಿಶಾಚಯಕ್ಷಾಃ, ಹತಾಃ, ಚ, ಸರ್ವೇ, ತದ್ವನಸ್ಥಾಃ, ಹಿ, ತಾಭ್ಯಾಂ, ಋತೇ, ಚತುಃ, ಪಕ್ಷಿಣಃ, ಚ, ಆಶ್ವಸೇನಂ, ಮಯಂ, ಚ, ನ, ಅನ್ಯತ್, ಕಿಂಚಿತ್, ಆಸ, ಅತ್ರ, ಮುಕ್ತಂ ।

**ಅರ್ಥ** :- **ತದ್ವನಸ್ಥಾಃ** = ಆ ವನದಲ್ಲಿರುವ, **ದೈತ್ಯಾಃ** = ದೈತ್ಯರು, **ಚ** = ಮತ್ತು, **ನಾಗಾಃ** = ಸರ್ಪಗಳು, **ಚ** = ಮತ್ತು, **ಪಿಶಾಚಯಕ್ಷಾಃ** = ಪಿಶಾಚಿಗಳು ಯಕ್ಷರು, **ಸರ್ವೇ** = ಎಲ್ಲರೂ, **ಹತಾ** = ಕೊಲ್ಲಲ್ಪಟ್ಟರು, **ಚತುಃ ಪಕ್ಷಿಣಃ** = ನಾಲ್ಕು ಪಕ್ಷಿಗಳನ್ನು, **ಅಶ್ವಸೇನಂ** = ಅಶ್ವಸೇನ ಎಂಬ ನಾಗನನ್ನು, **ಮಯಂ ಚ** = ಮಯಾ ಸುರನನ್ನು, **ಋತೇ** = ಹೊರತುಪಡಿಸಿ, **ಅನ್ಯತ್** = ಬೇರೆಯಾವುದೂ, **ಮುಕ್ತಂ ನ ಆಸ** = ಉಳಿಲಿಲ್ಲ.

**ತಾತ್ಪರ್ಯ** :- ಖಾಂಡವ ವನದ ದಹನ ಸಂದರ್ಭದಲ್ಲಿ ದೈತ್ಯರು ನಾಗಗಳು ಪಿಶಾಚಿಗಳು ರಾಕ್ಷಸರು ನಾಶವನ್ನು ಹೊಂದಿದ್ದಾರೆ. ಆದರೆ ನಾಲ್ಕು ಹಕ್ಕಿಗಳು, ಅಶ್ವಸೇನ, ಮಯಾಸುರ ಇವರನ್ನು ಬಿಟ್ಟು ಯಾರೂ ಉಳಿಯಲಿಲ್ಲ.

ಅಯಮಗ್ನೇ ಜರಿತೇತ್ಯಾದಿಮಂತ್ರೈಃ
ಸ್ತುತ್ವಾ ವಹ್ನಿಂ ಪಕ್ಷಿಣೋ ನೋಪದಗ್ಧಾಃ ।
ಅಶ್ವಸೇನಃ ಪುತ್ರಕಸ್ತಕ್ಷಕಸ್ಯ
ಮಾತ್ರಾ ಗ್ರಸ್ತಃ ಪ್ರಾತಿಲೋಮ್ಯೇನ ಕಂಠೇ ॥ ೨೪೦ ॥

ಪದಚ್ಛೇದ :- ಅಯಂ, ಅಗ್ನೆ, ಜರಿತೇತ್ಯಾದಿಮಂತ್ರೈಃ, ಸ್ತುತ್ವಾ, ವಹ್ನಿಂ, ಪಕ್ಷಿಣಃ, ನ, ಏವ, ದಗ್ಧಾಃ, ಸ, ಚ, ಅಶ್ವಸೇನಃ, ಪುತ್ರಕಃ, ತಕ್ಷಕಸ್ಯ, ಮಾತ್ರಾ, ಗ್ರಸ್ತಃ, ಪ್ರಾತಿಲೊಮ್ಯೆನ, ಕಂಠೆ ।

ಅರ್ಥ :- ಅಯಮಗ್ನೇಜರಿತೇತ್ಯಾದಿಮಂತ್ರೈಃ = ಅಯಮಗ್ನೇ ಜರಿತ ಮೊದಲಾದ ಮಂತ್ರಗಳಿಂದ, ವಹ್ನಿ = ಅಗ್ನಿಯನ್ನು, ಸ್ತುತ್ವಾ = ಸ್ತೋತ್ರಮಾಡಿ, ಪಕ್ಷಿಣಃ = ಪಕ್ಷಿಗಳು, ನೈವ ದಗ್ಧಾಃ = ಸುಡಲ್ಪಡಲಿಲ್ಲ, ತಕ್ಷಕಸ್ಯ = ತಕ್ಷಕನ, ಪುತ್ರಕಃ = ಮಗನಾದ, ಸ ಚ ಅಶ್ವಸೇನಃ = ಆ ಅಶ್ವಸೇನನಾದರೂ, ಮಾತ್ರಾ = ತಾಯಿಯಿಂದ, ಪ್ರಾತಿಲೋಮ್ಯೇನ = ವಿಪರಿತವಾಗಿ, ಕಂಠೆ = ಕಂಠದಲ್ಲಿ, ಗ್ರಸ್ತಃ = ನುಂಗಲ್ಪಟ್ಟನು.

ತಾತ್ಪರ್ಯ :- ನಾಲ್ಕು ಹಕ್ಕಿಗಳು 'ಅಯಮಗ್ನೇ ಜರಿತಾ' ಮೊದಲಾದ ಮಂತ್ರಗಳಿಂದ ಅಗ್ನಿಯನ್ನು ಸ್ತೋತ್ರ ಮಾಡಿದರು. ಆದ್ದರಿಂದ ಅವರನ್ನು ಅಗ್ನಿ ಸುಡಲಿಲ್ಲ. ಹಾಗೆಯೇ ಅಶ್ವಸೇನನನ್ನು ಅವಳ ತಾಯಿ ತಕ್ಷಕನ ಹೆಂಡತಿ ಹಿಂದು ಮುಂದಾಗಿ ನುಂಗಿದ್ದಾಳೆ.

ಛಿನ್ನೇಽರ್ಜುನೇನಾಂತರಿಕ್ಷೇ ಪತಂತ್ಯಾ-
ಸ್ತಸ್ಯಾಃ ಶಕ್ರೇಣಾವಿತಶ್ಛಿನ್ನಪುಚ್ಛಃ ।
ವಧಾನ್ಮಾತುಃ ಪುಚ್ಛಭಂಗಾಚ್ಚ ರೋಷಾದ್
ಹಂತುಂ ಪಾರ್ಥಂ ಕರ್ಣತೂಣೀರಗೋಽಭೂತ್ ॥ ೨೪೧ ॥

ಪದಚ್ಛೇದ :- ಛಿನ್ನೇ, ಅರ್ಜುನೇನ, ಅಂತರಿಕ್ಷೇ, ಪತಂತ್ಯಾಃ, ತಸ್ಯಾಃ, ಶಕ್ರೆಣಾವಿತಚ್ಛಿನ್ನಪುಚ್ಛಃ, ವಧಾತ್, ಮಾತುಃ, ಪುಚ್ಛಭಂಗಾತ್, ಚ, ರೊಷಾತ್, ಹಂತುಂ, ಪಾರ್ಥಂ, ಕರ್ಣತುಣೀರಗಃ, ಅಭೂತ್ ।

ಅರ್ಥ :- ಅಂತರಿಕ್ಷೇ = ಆಕಾಶದಲ್ಲಿ, ಪತಂತ್ಯಾಃ = ಹಾರುತ್ತಿರುವ, ತಸ್ಯಾಃ = ತಕ್ಷಕನ ಹೆಂಡತಿಯ, ಛಿನ್ನೇ = ಕುತ್ತಿಗೆಯ ನಾಶವಾಗಲು,

**ಶಕ್ರೇಣಾವಿತಶ್ಛಿನ್ನಪುಚ್ಛಃ** = ಇಂದ್ರನಿಂದ ರಕ್ಷಿಸಲ್ಪಟ್ಟ ಬಾಲವುಳ್ಳ ಅಶ್ವಸೇನನನ್ನು, **ಮಾತುಃ ವಧಾತ್** = ತಾಯಿಯ ಸಂಹಾರದ ನಿಮಿತ್ತದಿಂದ, **ಪುಚ್ಛಭಂಗಾತ್ ಚ** = ತನ್ನ ಬಾಲ ತುಂಡರಿಸುವುದರಿಂದ, **ಪಾರ್ಥಂ ಹಂತುಂ** = ಅರ್ಜುನನ್ನು ಕೊಲ್ಲಲು, **ಕರ್ಣತುಣೀರಗಃ** = ಕರ್ಣನ ಬತ್ತಳಿಕೆಯಲಿ ಇದ್ದವನಾಗಿ, **ಅಭೂತ್** = ಆದನು.

**ತಾತ್ಪರ್ಯ** :- ಅರ್ಜುನನು ಆ ತಕ್ಷಕನ ಹೆಂಡತಿಯ ಕುತ್ತಿಗೆಯನ್ನು ಬಾಣದಿಂದ ತುಂಡರಿಸಿದ. ಆದರೆ ಅಶ್ವಸೇನನ ಬಾಲವು ಮಾತ್ರ ತುಂಡಾಗಿದೆ. ಇಂದ್ರ ಅಶ್ವಸೇನನನ್ನು ರಕ್ಷಿಸಿದ. ನಂತರ ತನ್ನ ತಾಯಿಯನ್ನು ಕೊಂದಿರುವ ಸಿಟ್ಟಿನಿಂದ ಅಶ್ವಸೇನ ಕರ್ಣನ ಬತ್ತಳಿಕೆಯಲ್ಲಿ ಹೋಗಿ ಸೇರಿದ.

**ಮಯಃ ಕೃಷ್ಣೇನಾऽತ್ತಚಕ್ರೇಣ ದೃಷ್ಟೋ**
**ಯಯೌ ಪಾರ್ಥಂ ಶರಣಂ ಜೀವನಾರ್ಥೀ ।**
**ಪಾರ್ಥಾರ್ಥಮೇನಂ ನ ಜಘಾನ ಕೃಷ್ಣಃ**
**ಸ್ವಭಕ್ತಶ್ಚೇತ್ಯತಿಮಾಯಂ ಪರೇಶಃ ॥ ೨೪೨ ॥**

**ಪದಚ್ಛೇದ :- ಮಯಃ, ಕೃಷ್ಣೇನ, ಆತ್ತಚಕ್ರೇಣ, ದೃಷ್ಟಃ, ಯಯೌ, ಪಾರ್ಥಂ, ಶರಣಂ, ಜೀವನಾರ್ಥೀಂ, ಪಾರ್ಥಾರ್ಥಂ, ಏನಂ, ನ ಜಘಾನ, ಕೃಷ್ಣಃ, ಸ್ವಭಕ್ತಃ, ಚ, ಇತಿ, ಅತಿಮಾಯಂ, ಪರೇಶಃ ।**

**ಅರ್ಥ** :- **ಆತ್ತಚಕ್ರೇಣ** = ಚಕ್ರವನ್ನು ಧರಿಸಿದ, **ಕೃಷ್ಣೇನ** = ಶ್ರೀಕೃಷ್ಣನಿಂದ, **ದೃಷ್ಟ** = ನೋಡಲ್ಪಟ್ಟ, **ಮಯಃ** = ಮಯಾಸುರನು, **ಜೀವನಾರ್ಥೀ** = ಪ್ರಾಣರಕ್ಷಣೆಗಾಗಿ, **ಪಾರ್ಥಂ** = ಅರ್ಜುನನನ್ನು, **ಶರಣಂ** = ರಕ್ಷಣೆಗಾಗಿ, **ಯಯೌ** = ಹೊಂದಿದನು, **ಪರೇಶಃ** = ಎಲ್ಲರಿಗೂ ಶ್ರೇಷ್ಠನಾದ, **ಕೃಷ್ಣಃ** **ಪಾರ್ಥಾರ್ಥಂ** = ಅರ್ಜುನನಿಗಾಗಿ, **ಚ** = ಮತ್ತು, **ಅತಿಮಾಯಂ** = ಮಾಯಾವಿಯಾದ, **ಏನಂ** = ಈ ಮಯಾಸುರನನ್ನು, **ಸ್ವಭಕ್ತಃ** = ತನ್ನ ಭಕ್ತನೆಂದು, **ನ ಜಘಾನ** = ಕೊಲ್ಲಲಿಲ್ಲ.

**ತಾತ್ಪರ್ಯ** :- ಸುದರ್ಶನ ಚಕ್ರವನ್ನು ಧರಿಸಿದ ಶ್ರೀಕೃಷ್ಣನನ್ನು ಮಯಾಸುರನು ಕಂಡ ನಂತರ ಅವನು ಅರ್ಜುನನ್ನು ಶರಣು ಹೊಂದಿದಾಗ ಅರ್ಜುನನಿಗೋಸ್ಕರ ಅವನನ್ನು ಸಂಹರಿಸಲಿಲ್ಲ ಅಷ್ಟೇ ಅಲ್ಲದೆ ಇವನು ಶ್ರೀಕೃಷ್ಣನ

ಭಕ್ತನೂ ಆಗಿದ್ದಾನೆ. ಆದ್ದರಿಂದ ಮಾಯಾವಿಯಾದ ಮಯಾಸುರನನ್ನು ಕೊಲ್ಲಲಿಲ್ಲ.

**ದೇವಾರಿರಿತ್ಯೇವ ಮಯಿ ಪ್ರಕೋಪಃ**
**ಕೃಷ್ಣಸ್ಯ ತೇನಾಹಮಿಮಂ ಪುರಂದರಮ್ ।**
**ಪಾರ್ಥಾತ್ಮಕಂ ಶರಣಂ ಯಾಮಿ ತೇನ**
**ಕೃಷ್ಣಪ್ರಿಯಃ ಸ್ಯಾಮಿತಿ ತಸ್ಯ ಬುದ್ಧಿಃ ॥ ೨೪೩ ॥**

ಪದಚ್ಛೇದ :– ದೇವಾರಿಃ, ಇತಿ, ಏವ, ಮಯಿ, ಪ್ರಕೋಪಃ, ಕೃಷ್ಣಸ್ಯ, ತೇನ, ಅಹಂ, ಇಮಂ, ಪುರಂದರಂ, ಪಾರ್ಥತ್ಮಕಂ, ಶರಣಂ, ಯಾಮಿ, ತೇನ, ಕೃಷ್ಣಪ್ರಿಯಃ, ಸ್ಯಾಂ, ಇತಿ, ತಸ್ಯ, ಬುದ್ಧಿಃ ।

**ಅರ್ಥ** :- **ಕೃಷ್ಣಸ್ಯ** = ಶ್ರೀಕೃಷ್ಣನಿಗೆ, **ಅಹಂ** = ನಾನು, **ದೇವಾರಿಃ** = ದೇವತೆಗಳ ಶತ್ರುವು, **ಇತ್ಯೇವ** = ಎಂದು, **ಪ್ರಕೋಪಃ** = ಸಿಟ್ಟು ಇದೆ, **ತೇನ** = ಆದ್ದರಿಂದ, **ಪಾರ್ಥಾತ್ಮಕಂ** = ಅರ್ಜುನ ರೂಪದಲ್ಲಿರುವ, **ಪುರಂದರಮ್** = ಇಂದ್ರನನ್ನು, **ಶರಣಂ** = ರಕ್ಷಣೆಗಾಗಿ **ಯಾಮಿ** = ಹೊಂದುತ್ತೇನೆ, **ತೇನ** = ಅರ್ಜುನನ ರಕ್ಷಣೆಯಿಂದ, **ಕೃಷ್ಣಪ್ರಿಯಃ** = ಕೃಷ್ಣನಿಗೆ ಪ್ರಿಯನು, **ಸ್ಯಾಮ್** = ಆದೇನು, **ಇತಿ** = ಎಂದು, **ತಸ್ಯ** = ಅವನ, **ಬುದ್ಧಿಃ** = ಬುದ್ಧಿಯು.

**ತಾತ್ಪರ್ಯ** :- ಮಯಾಸುರನು ಆಲೋಚಿಸುವನು. ನಾನು ದೇವತೆಗಳ ವಿರೋಧ ಪಕ್ಷದವನಾದ್ದರಿಂದ ನನ್ನ ಮೇಲೆ ಸಿಟ್ಟು ಇದೆ. ಆದ್ದರಿಂದ ಅರ್ಜುನನಾಗಿ ಅವತರಿಸಿದ ಇಂದ್ರನನ್ನು ಶರಣು ಹೊಂದಿದರೆ ಕೃಷ್ಣನಿಗೆ ಪ್ರಿಯವನ್ನು ಮಾಡಿದಂತೆ ಆಗುತ್ತದೆ ಎಂದು ತಿಳಿದು ಅರ್ಜುನನ್ನು ಮೊರೆ ಹೊಕ್ಕಿದ್ದಾನೆ.

**ಪ್ರಾಣೋಪಕೃತ್ ಪ್ರತ್ಯುಪಕಾರಮಾರು**
**ಕಿಂ ತೇ ಕರೋಮೀತಿ ಸ ಪಾರ್ಥಮಾಹ ।**
**ಕೃಷ್ಣಪ್ರಸಾದಾದ್ಧಿ ಭವಾನ್ ವಿಮುಕ್ತ-**
**ಸ್ತಸ್ಮೈ ಕರೋತ್ವಿತ್ಯವದತ್ ಸ ಪಾರ್ಥಃ ॥ ೨೪೪ ॥**

ಪದಚ್ಛೇದ :- ಪ್ರಾಣೋಪಕೃತ್, ಪ್ರತ್ಯುಪಕಾರಂ, ಆಶು, ಕಿಂ, ತೇ, ಕರೋಮಿ, ಇತಿ, ಸ, ಪಾರ್ಥಂ, ಆಹ, ಕೃಷ್ಣಪ್ರಸಾದಾತ್, ಹಿ, ಭವಾನ್, ವಿಮುಕ್ತಃ, ತಸ್ಮೈ, ಕರೋತು, ಇತಿ, ಅವದತ್, ಸ, ಪಾರ್ಥಃ ।

ಅರ್ಥ :- ಸಃ = ಆ ಮಯಾಸುರನು, ಪ್ರಾಣೋಪಕೃತ್ = ಪ್ರಾಣ ರಕ್ಷಣೆಯನ್ನು ಪಡೆದಿರುವ, ಅಹಂ = ನಾನು, ತೇ = ನಿನಗೆ, ಕಿಂ ಪ್ರತ್ಯುಪಕಾರಂ = ಏನು ಉಪಕಾರವನ್ನು, ಕರೋಮಿ = ಮಾಡುವೆನು, ಇತಿ = ಎಂದು, ಪಾರ್ಥಂ = ಅರ್ಜುನನನ್ನು, ಅವದತ್ = ಕೇಳಿದನು, ಸಃ ಪಾರ್ಥಃ = ಆ ಅರ್ಜುನನಾದರೊ, ಕೃಷ್ಣಪ್ರಾಸಾದಾತ್ = ಶ್ರೀಕೃಷ್ಣನ ಅನುಗ್ರಹದಿಂದ, ಭವಾನ್ = ನೀನು, ವಿಮುಕ್ತಃ = ಉಳಿದಿದ್ದಿ, ತಸ್ಮೈ = ಆ ಶ್ರೀಕೃಷ್ಣನಿಗೆ, ಕರೋತು = ಉಪಕಾರವನ್ನು ಮಾಡು, ಇತಿ = ಎಂದು, ಅವದತ್ = ಹೇಳಿದನು.

ತಾತ್ಪರ್ಯ :- ಮಯಾಸುರನು ಅರ್ಜುನನ ಬಳಿ ಕೇಳುತ್ತಾನೆ. ನನ್ನ ಪ್ರಾಣವನ್ನು ಉಳಿಸಿದ್ದಕ್ಕೆ ನಾನು ಪ್ರತಿಯಾಗಿ ಏನು ಉಪಕಾರ ಮಾಡಬೇಕು ಎಂದು. ಅರ್ಜುನ ಹೇಳಿದ ಕೃಷ್ಣನ ಅನುಗ್ರಹದಿಂದ ಬದುಕಿದ್ದಿ. ಆದ್ದರಿಂದ ಕೃಷ್ಣನಿಗೆ ಉಪಕಾರವನ್ನು ಮಾಡು.

ಕೃಷ್ಣೋಽಪಿ ರಾಜ್ಞೋಽತಿವಿಚಿತ್ರರೂಪ-
ಸಭಾಕೃತಾವದಿಶತ್ ತಾಂ ಸ ಚಕ್ರೇ ।
ಅನಿರ್ಗಮಂ ಪ್ರಾಣಿನಾಮರ್ಥಿತೌ ತೌ
ಹುತಾಶನೇನಾಥ ವಿಧಾಯ ಜಗ್ಮತುಃ ॥ ೨೪೫ ॥

ಪದಚ್ಛೇದ :- ಕೃಷ್ಣಃ, ಅಪಿ, ರಾಜ್ಞಃ, ಅತಿವಿಚಿತ್ರರೂಪಸಭಾಕೃತೌ, ಆದಿಶತ್, ತಾಂ, ಸ, ಚಕ್ರೆ, ಅನಿರ್ಗಮಂ, ಪ್ರಾಣಿನಾಂ, ಅರ್ಥಿತೌ, ತೌ, ಹುತಾಶನೇನ, ಅಥ, ವಿಧಾಯ, ಜಗ್ಮತುಃ ।

ಅರ್ಥ :- ಕೃಷ್ಣಃ ಅಪಿ = ಶ್ರೀಕೃಷ್ಣನಾದರೂ, ರಾಜ್ಞಃ ಏತಃ = ಧರ್ಮರಾಜನಿಗಾಗಿ, ಅತಿವಿಚಿತ್ರರೂಪಸಭಾಕೃತೌ = ಅತ್ಯಂತ ವಿಲಕ್ಷಣವಾದ

ಸಭೆಯನ್ನು ನಿರ್ಮಾಣ ಮಾಡುವುದರಲ್ಲಿ, **ಅದಿಶತ್** = ಪ್ರೇರಿಸಿದನು, **ಸಃ** = ಆ ಮಯಾಸುರನು, **ತಾಂ** = ಆ ಸಭೆಯನ್ನು, **ಚಕ್ರೆ** = ಮಾಡಿದನು, **ಹುತಾಶನೇನ** = ಅಗ್ನಿಯಿಂದ, **ಪ್ರಾರ್ಥಿತೌ** = ಪ್ರಾರ್ಥಿಸಲ್ಪಟ್ಟ, **ತೌ** = ಆ ಕೃಷ್ಣಾರ್ಜುನರು, **ಪ್ರಾಣಿನಾಂ** = ಪ್ರಾಣಿಗಳ, **ಅನಿರ್ಗಮಂ** = ಹೊರಗೆ ಹೋಗದಿರುವಿಕೆಯನ್ನು, **ನಿಧಾಯ** = ಮಾಡಿ, **ಜಗ್ಮತುಃ** = ಹೋದರು.

**ತಾತ್ಪರ್ಯ** :- ಶ್ರೀಕೃಷ್ಣನ ಬಳಿ ಮಯಾಸುರನು ಏನು ಉಪಕಾರವನ್ನು ಮಾಡಲಿ ಎಂದು ಕೇಳಿದಾಗ ಧರ್ಮರಾಜನಿಗೆ ಲೋಕವಿಲಕ್ಷಣವಾದ ಸಭೆಯನ್ನು ಮಾಡಿಕೊಡು ಎಂದು ಕೃಷ್ಣ ಆದೇಶಿಸಿದ. ಅದರಂತೆ ಮಯನೂ ಅಂತಹ ಸಭೆಯನ್ನು ನಿರ್ಮಾಣ ಮಾಡಿಕೊಟ್ಟಿದ್ದಾನೆ. ಖಾಂಡವ ವನದ ದಹನದ ಸಂದರ್ಭದಲ್ಲಿ ಯಾವ ಪ್ರಾಣಿಗಳೂ ಹೊರಗೆ ಹೋಗದಿರುವಂತೆ ಅಗ್ನಿ ಬೇಡಿದ್ದ ಅವನ ಪಾರ್ಥನೆಯನ್ನು ಮನ್ನಿಸಿ ಯಾವ ಪ್ರಾಣಿಗಳನ್ನು ಹೊರಗೆ ಹೋಗದೇ ಇರುವಂತೆ ಮಾಡಿದರು.

**ದೃಷ್ಟ್ವಾ ಚ ತೌ ಪಾಂಡವಾಃ ಸರ್ವ ಏವ**
**ಮಹಾಮುದಂ ಪ್ರಾಪುರೇತನ್ನಿಶಮ್ಯ ।**
**ಕೃಷ್ಣೋऽಪಿ ಪಾರ್ಥೈರ್ಮುಮುದೇऽನಂತಶಕ್ತಿ-**
**ಸುಖಜ್ಞಾನಪ್ರಭವೌದಾರ್ಯವೀರ್ಯಃ ॥ ೨೪೬ ॥**

ಪದಚ್ಛೇದ :- **ದೃಷ್ಟ್ವಾ, ಚ, ತೌ, ಪಾಂಡವಾಃ, ಸರ್ವೇ, ಏವ, ಮಹಾಮುದಂ, ಪ್ರಾಪುಃ, ಏತತ್, ನಿಶಮ್ಯ, ಕೃಷ್ಣಃ, ಅಪಿ, ಪಾರ್ಥೈಃ, ಮುಮುದೇ, ಅನಂತಶಕ್ತಿಃ, ಸುಖಜ್ಞಾನಪ್ರಭವೌದಾರ್ಯವೀರ್ಯಃ।**

**ಅರ್ಥ** :- **ಸರ್ವೇ** = ಎಲ್ಲಾ, **ಪಾಂಡವಾಃ** = ಪಾಂಡವರು, **ತೌ** = ಕೃಷ್ಣಾರ್ಜುನರನ್ನು, **ದೃಷ್ಟ್ವಾ** = ನೋಡಿ, **ಏತತ್** = ಈ ಖಾಂಡವ ವನದಹನ ವಿಚಾರವನ್ನು, **ನಿಶಮ್ಯ** = ಕೇಳಿ, **ಮಹಾಮುದಂ** = ಅತ್ಯಂತ ಸಂತೋಷವನ್ನು, **ಪ್ರಾಪುಃ** = ಹೊಂದಿದರು, **ಅನಂತಶಕ್ತಿಃ** = ಅಪರಿಮಿತಶಕ್ತಿಯುಳ್ಳ, **ಸುಖಜ್ಞಾನಪ್ರಭವೌದಾರ್ಯವೀರ್ಯಃ** = ಸುಖ, ಜ್ಞಾನ, ಪ್ರಭುತ್ವ

ಔದಾರ್ಯ, ಪರಾಕ್ರಮಗಳುಳ್ಳ, **ಕೃಷ್ಣಃ ಅಪಿ** = ಕೃಷ್ಣನೂ ಕೂಡ, **ಪಾರ್ಥೈಃ** = ಪಾಂಡವರಿಂದ, **ಮುಮುದೇ** = ಸಂತಸಪಟ್ಟನು.

**ತಾತ್ಪರ್ಯ** :- ಅನಂತರ ಎಲ್ಲ ಪಾಂಡವರು ಕೃಷ್ಣ ಮತ್ತು ಅರ್ಜುನರನ್ನು ನೋಡಿ ಆನಂದಿಸಿದ್ದಾರೆ. ಅಷ್ಟೇ ಅಲ್ಲದೆ ಅವರು ಮಾಡಿದ ಅತಿಗಹನವಾದ ಖಾಂಡವವನ ದಹನದ ವಿಚಾರವನ್ನು ತಿಳಿದು ಸಂತುಷ್ಟರಾಗಿದ್ದಾರೆ. ಇದೆ ರೀತಿ ಅಪಾರಶಕ್ತಿ, ಸುಖ, ಜ್ಞಾನ, ಉದಾರತೆ, ಪರಾಕ್ರಮ, ಸ್ವಾಮಿತ್ವ ಮೊದಲಾದ ಅನಂತಗುಣಗಳಿಂದ ಯುಕ್ತನಾದ ಕೃಷ್ಣನು ಸಹ ಪಾಂಡವರೊಂದಿಗೆ ಸಂತೋಷಪಟ್ಟನು.

ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ
ಶ್ರೀಮಹಾಭಾರತತಾತ್ಪರ್ಯನಿರ್ಣಯೇ
ಖಾಂಡವದಾಹೋ ನಾಮ
ವಿಂಶೋಽಧ್ಯಾಯಃ

# ಅಧ್ಯಾಯ - 21

ಪಾಂಡವವನಪ್ರವೇಶಃ

**ಜನಾರ್ದನಾಜ್ಞಯಾ ಮಯಃ ಸಮಸ್ತಕೌತುಕೋತ್ತರಾಮ್ ।**
**ಸಭಾಂ ವಿಧಾಯ ಭೂಭೃತೇ ದದೌ ಗದಾಂ ವೃಕೋದರೇ ॥ ೧ ॥**

ಪದಚ್ಛೇದ :- ಜನಾರ್ದನಾಜ್ಞಯಾ, ಮಯಃ, ಸಮಸ್ತಕೌತುಕೋತ್ತರಾಮ್, ಸಭಾಮ್, ವಿಧಾಯ, ಭೂಭೃತೇ, ದದೌ, ಗದಾಮ್, ವೃಕೋದರೇ ।

**ಅರ್ಥ** :- **ಮಯಃ** = ಮಯನು, **ಜನಾರ್ದನಾಜ್ಞಯಾ** = ಭಗವಂತನ ಆಜ್ಞೆಯಿಂದ, **ಸಮಸ್ತಕೌತುಕೋತ್ತರಾಂ** = ಎಲ್ಲ ವಿಧವಾದ ವಿಸ್ಮಯಗಳಿಂದ ಶ್ರೇಷ್ಠವಾದ, **ಸಭಾಂ** = ಸಭೆಯನ್ನು, **ವಿಧಾಯ** = ನಿರ್ಮಾಣ ಮಾಡಿ, **ಭೂಭೃತೇ** = ರಾಜನಾದ ಯುಧಿಷ್ಠಿರನಿಗೆ, **ದದೌ** = ಕೊಟ್ಟನು, **ವೃಕೋದರೇ** = ಭೀಮಸೇನನಿಗೆ, **ಸಮಸ್ತಕೌತುಕೋತ್ತರಾಂ** = ಎಲ್ಲರಿಗೂ ವಿಸ್ಮಯಗಳನ್ನು ಉಂಟುಮಾಡುವ ಮತ್ತು ಶ್ರೇಷ್ಠವಾದ, **ಗದಾಂ** = ಗದೆಯನ್ನು, **ದದೌ** = ಕೊಟ್ಟನು.

**ತಾತ್ಪರ್ಯ** :- ಈ ಅಧ್ಯಾಯದಲ್ಲಿ ಸಭಾಪರ್ವದ ಕಥೆಯನ್ನು ಸಂಗ್ರಹಿಸಿದ್ದಾರೆ. ಮಯನು ಭಗವಂತನ ಆಜ್ಞೆಯಿಂದ ಅತ್ಯದ್ಭುತವಾದ ಅನೇಕ ಕೌತುಕಗಳಿಂದ ಕೂಡಿದ ಸಭಾಭವನವನ್ನು ನಿರ್ಮಿಸಿ ಧರ್ಮರಾಜನಿಗೆ ಕೊಟ್ಟನು. ಹಾಗೆ ಅತ್ಯಂತ ವಿಸ್ಮಯಕಾರಿಯಾದ ಶ್ರೇಷ್ಠವಾದ ಗದೆಯನ್ನು ಭೀಮಸೇನನಿಗೆ ಕೊಟ್ಟನು.

**ಸ ವಾಯುಧಾರಿತಾಂ ಗದಾಂ ಹಿ ಯೌವನಾಶ್ವಭೂಭೃತಾ ।**
**ಪ್ರಸಾದತೋಽಸ್ಯ ಲಂಭಿತಾಮವಾಪ್ಯ ಮೋದಮಾಪ ಹ ॥ ೨ ॥**

ಪದಚ್ಛೇದ :- ಸಃ, ವಾಯುಧಾರಿತಾಂ, ಗದಾಂ, ಹಿ, ಯೌವನಾಶ್ವಭೂಭೃತಾ, ಪ್ರಸಾದತಃ, ಅಸ್ಯ, ಲಂಭಿತಾಂ, ಅವಾಪ್ಯ, ಮೋದಮ್, ಆಪ, ಹ ।

**ಅರ್ಥ** :- **ಸಃ** = ಆ ಭೀಮಸೇನನು, **ಅಸ್ಯ** = ಅಕಾರ ವಾಚ್ಯನಾದ ಭಗವಂತನ, **ಪ್ರಸಾದತಃ** = ಅನುಗ್ರಹದಿಂದ, **ವಾಯುಧಾರಿತಾಂ** =

ವಾಯುದೇವರಿಂದ ಧರಿಸಲ್ಪಟ್ಟ, **ಅಸ್ಯ** = ಈ ವಾಯುದೇವರ, **ಪ್ರಸಾದತಃ** = ಅನುಗ್ರಹದಿಂದ, **ಯೌವ್ವನಾಶ್ವಭೂಭೃತಾ** = ಮಾಂಧಾತೃರಾಜನಿಂದ, **ಲಂಭಿತಾಂ** = ಹೊಂದಲ್ಪಟ್ಟ, **ಗದಾಂ** = ಗದೆಯನ್ನು, **ಅವಾಪ್ಯ** = ಹೊಂದಿ, **ಮೋದಂ** = ಸಂತೋಷವನ್ನು, **ಆಪ ಹ** = ಹೊಂದಿದನಷ್ಟೆ.

**ತಾತ್ಪರ್ಯ** :- ಭಗವಂತನ ಅನುಗ್ರಹದಿಂದ ವಾಯುದೇವರು ಗದಾಧಾರಿಗಳಾಗಿದ್ದಾರೆ. ಆ ವಾಯುದೇವರ ಅನುಗ್ರಹದಿಂದ ಮಾಂಧಾತೃ ರಾಜ ಆ ಗದೆಯನ್ನು ಪಡೆದ. ಆ ಗದೆಯನ್ನು ಮಯನಿಂದ ಪಡೆದ ಭೀಮ ಸಂತಸಗೊಂಡ.

**ಪುನಶ್ಚ ವತ್ಸರದ್ವಯಂ ಸಮುಷ್ಯ ಕೇಶವೋ ಯಯೌ ।**
**ಸಮರ್ಚಿತಶ್ಚ ಪಾಂಡವೈರ್ವಿಯೋಜನೇಽಸ್ಯ ಚಾಕ್ಷಮೈಃ ॥ ೩ ॥**

**ಪದಚ್ಛೇದ** :- **ಪುನಃ, ಚ, ವತ್ಸರದ್ವಯಂ, ಸಮುಷ್ಯ, ಕೇಶವಃ, ಯಯೌ, ಸಮರ್ಚಿತಃ, ಚ, ಪಾಂಡವೈಃ, ವಿಯೋಜನೇ, ಅಸ್ಯ, ಚ, ಅಕ್ಷಮೈಃ ।**

**ಅರ್ಥ** :- **ಕೇಶವಃ** = ಶ್ರೀಕೃಷ್ಣನು, **ಪುನಶ್ಚ** = ಮತ್ತು, **ವತ್ಸರದ್ವಯಂ** = ಎರಡು ವರ್ಷ, **ಸಮುಷ್ಯ** = ಇಂದ್ರಪ್ರಸ್ಥದಲ್ಲೆ ವಾಸಮಾಡಿ, **ಅಸ್ಯ** = ಶ್ರೀಕೃಷ್ಣನ, **ವಿಯೋಜನೇ** = ವಿಯೋಗದಲ್ಲಿ, **ಅಕ್ಷಮೈಃ** = ಅಸಮರ್ಥರಾದ, **ಪಾಂಡವೈಃ** = ಪಾಂಡವರಿಂದ, **ಸಮರ್ಚಿತಃ** = ಚೆನ್ನಾಗಿ ಪೂಜಿಸಲ್ಪಟ್ಟವನಾಗಿ, **ಯಯೌ** = ಹೊರಟನು.

**ತಾತ್ಪರ್ಯ** :- ಅರ್ಜುನನ ತೀರ್ಥಯಾತ್ರಾ ಸಂದರ್ಭ, ಪ್ರತಿವಿಂಧ್ಯಾದಿ ಪಾಂಡವಪುತ್ರರ ಜನನ ಮುಂತಾದ ಪ್ರಸಂಗಗಳಲ್ಲಿ ಪ್ರಾಯಃ ನಾಲ್ಕೈದು ವರ್ಷ ಶ್ರೀಕೃಷ್ಣ ಇಂದ್ರಪ್ರಸ್ಥದಲ್ಲೆ ಇದ್ದ. ಪಾಂಡವರ ಪ್ರಾರ್ಥನೆಯಂತೆ ಮತ್ತೂ ಎರಡು ವರ್ಷ ಇಲ್ಲೆ ಇದ್ದ. ಪಾಂಡವರಿಗೆ ಶ್ರೀಕೃಷ್ಣನ ವಿಯೋಗ ಸಹಿಸಲು ಆಗದು. ಆದರೂ ಸಹಿಸಿಕೊಂಡು ಶ್ರೀಕೃಷ್ಣನನ್ನು ಮತ್ತೆ ಮತ್ತೆ ಅರ್ಚಿಸಿ ಬೀಳ್ಕೊಟ್ಟರು. ಶ್ರೀಕೃಷ್ಣ ಹೊರಟ.

**ತತೋ ವಸನ್ ಸ್ವಪುರ್ಯಜಃ ಕ್ವಚಿದ್ ರವಿಗ್ರಹೇ ಹರಿಃ ।**
**ಸದಾರಪುತ್ರಬಾಂಧವಃ ಸಮಂತಪಂಚಕಂ ಯಯೌ ॥ ೪ ॥**

ಪದಚ್ಛೇದ :- ತತಃ, ವಸನ್, ಸ್ವಪುರಿ, ಅಜಃ, ಕ್ವಚಿತ್, ರವಿಗ್ರಹೇ, ಹರಿಃ, ಸದಾರಪುತ್ರ ಬಾಂಧವಃ, ಸಮಂತಪಂಚಕಂ, ಯಯೌ ।

**ಅರ್ಥ** :- **ತತಃ** = ಅನಂತರ, **ಅಜಃ** = ಜನನರಹಿತನಾದ, **ಹರಿಃ** = ಶ್ರೀಕೃಷ್ಣನು, **ಸ್ವಪುರಿ** = ತನ್ನ ನಗರವಾದ ದ್ವಾರಕೆಯಲ್ಲಿ, **ವಸನ್** = ವಾಸಿಸುತ್ತಾ, **ಕ್ವಚಿತ್** = ಒಮ್ಮೆ, **ರವಿಗ್ರಹೇ** = ಸೂರ್ಯಗ್ರಹಣದ ಸಂದರ್ಭದಲ್ಲಿ, **ಸದಾರಪುತ್ರಬಾಂಧವಃ (ಸನ್)** = ಹೆಂಡತಿ ಮಕ್ಕಳು ಮತ್ತು ಬಂಧುಗಳೊಂದಿಗೆ ಕೂಡಿದವನಾಗಿ, **ಸಮಂತಪಂಚಕಂ** = ಸುತ್ತಲೂ ಪರಶುರಾಮ ನಿರ್ಮಿತವಾದ ಐದು ತೀರ್ಥಗಳುಳ್ಳ ಕುರುಕ್ಷೇತ್ರವನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ** :- ಶ್ರೀಕೃಷ್ಣನು ದ್ವಾರಕೆಯಲ್ಲಿ ವಾಸಿಸುತ್ತಿದ್ದನು. ಒಮ್ಮೆ ಸೂರ್ಯಗ್ರಹಣದ ಸಂದರ್ಭ. ಆಗ ಶ್ರೀಕೃಷ್ಣ ಹೆಂಡತಿ ಮಕ್ಕಳು ಪರಿವಾರದೊಂದಿಗೆ ಕುರುಕ್ಷೇತ್ರಕ್ಕೆ ಹೋದನು. ಈ ಕುರುಕ್ಷೇತ್ರದ ಸುತ್ತಲು ಪರಶುರಾಮ ದೇವರು ಐದು ತೀರ್ಥಗಳನ್ನು ನಿರ್ಮಿಸಿದ್ದಾರೆ. ಆದುದರಿಂದ ಇದು ಸಮಂತ ಪಂಚಕವೆಂದು ಪ್ರಸಿದ್ಧವಾಗಿದೆ.

**ಪೃಥಾಸುತಾಶ್ಚ ಸರ್ವಶಃ ಸದಾರಪುತ್ರಮಾತೃಕಾಃ**
**ಕ್ಷಿತೀಶ್ವರಾಶ್ಚ ಸರ್ವಶಃ ಪ್ರಿಯಾಪ್ರಿಯಾ ಹರೇಶ್ಚ ಯೇ ॥ ೫ ॥**

**ತಥೈವ ನಂದಗೋಪಕಃ ಸದಾರಗೋಪಗೋಪಿಕಃ ।**
**ಮುನೀಶ್ವರಾಶ್ಚ ಸರ್ವತಃ ಸಮೀಯುರತ್ರ ಚ ಪ್ರಜಾಃ ॥ ೬ ॥**

ಪದಚ್ಛೇದ :- ಪೃಥಾಸುತಾಃ, ಚ, ಸರ್ವಶಃ, ಸದಾರಪುತ್ರಮಾತೃಕಾಃ, ಕ್ಷಿತೀಶ್ವರಾಃ, ಚ, ಸರ್ವಶಃ, ಪ್ರಿಯಾಪ್ರಿಯಾಃ, ಹರೇಃ, ಚ, ಯೇ, ತಥಾ, ಏವ, ನಂದಗೋಪಕಃ, ಸದಾರಗೋಪಗೋಪಿಕಃ, ಮುನೀಶ್ವರಾಃ, ಚ, ಸರ್ವತಃ, ಸಮೀಯುಃ, ಅತ್ರ, ಚ, ಪ್ರಜಾಃ ।

**ಅರ್ಥ** :- **ಸದಾರಪುತ್ರಮಾತೃಕಾಃ** = ಹೆಂಡತಿ ಮಕ್ಕಳು ಮತ್ತು ತಾಯಿಯಾದ ಕುಂತಿ ಇವರಿಂದ ಕೂಡಿದ, **ಸರ್ವಶಃ** = ಎಲ್ಲಾ, **ಪೃಥಾಸುತಾಃ** = ಪಾಂಡವರು, **ಚ** = ಮತ್ತು, **ಸರ್ವಶಃ** = ಎಲ್ಲಾ ದಿಕ್ಕುಗಳಿಂದ, **ಕ್ಷಿತೀಶ್ವರಾಃ** = ರಾಜರುಗಳು, **ಚ** = ಮತ್ತು, **ಯೇ** = ಯಾರು, **ಹರೇಃ** = ಶ್ರೀಕೃಷ್ಣನಿಗೆ,

ಪ್ರಿಯಾಪ್ರಿಯಾಃ = ಪ್ರಿಯರಾದ ದೇವವರ್ಗ ಮತ್ತು ಅಪ್ರಿಯರಾದ ಅಸುರ ವರ್ಗದವರೋ ಅವರೂ, ತಥೈವ = ಹಾಗೇ, ಸದಾರಗೋಪಗೋಪಿಕಃ = ಹೆಂಡತಿ ಮತ್ತು ಗೊಲ್ಲ, ಗೊಲ್ಲತಿಯರಿಂದ ಕೂಡಿದ, ನಂದಗೋಪಕಃ = ನಂದಗೋಪನು, ಚ = ಮತ್ತು, ಸರ್ವತಃ = ಎಲ್ಲ ಕಡೆಗಳಿಂದ, ಮುನೀಶ್ವರಾಃ = ಮುನಿಶ್ರೇಷ್ಠರು, ಚ = ಮತ್ತು, ಪ್ರಜಾಃ = ಪ್ರಜೆಗಳು, ಅತ್ರ = ಈ ಕುರುಕ್ಷೇತ್ರದಲ್ಲಿ, ಸಮೀಯುಃ = ಸೇರಿದರು.

ತಾತ್ಪರ್ಯ :- ಶ್ರೀಕೃಷ್ಣ ಕುರುಕ್ಷೇತ್ರಕ್ಕೆ ಹೋದಾಗ ಅಲ್ಲಿ ಕುಂತಿ ಮತ್ತು ಹೆಂಡತಿ ಮಕ್ಕಳ ಜೊತೆಗೆ ಪಾಂಡವರು ಬಂದು ಸೇರಿದರು. ಅದರಂತೆ ಎಲ್ಲ ರಾಜರೂ, ಶ್ರೀಕೃಷ್ಣನ ಪ್ರಿಯರಾದ ದೇವವರ್ಗದವರೂ ಅಪ್ರಿಯರಾದ ಅಸುರವರ್ಗದವರೂ ಎಲ್ಲರೂ ಬಂದರು. ನಂದಗೋಪನೂ ಕೂಡ ಗೋಪ ಗೋಪಿಯರ ಜೊತೆಗೆ ಬಂದನು. ಎಲ್ಲ ಋಷಿಮುನಿಗಳೂ ಪ್ರಜೆಗಳೂ ಕೂಡ ಇಲ್ಲಿ ಸೇರಿದರು.

ಪ್ರಿಯಾಶ್ಚ ಯೇ ರಮೇಶಿತುರ್ಹರಿಂ ತ್ರಿರೂಪಮೇತ್ಯ ತೇ ।
ವಸಿಷ್ಠವೃಷ್ಣಿನಂದನಂ ಭೃಗೂತ್ತಮಂ ತಥಾಽಽರ್ಚಯನ್ ॥ ೭ ॥

ಕೃತಾರ್ಥತಾಂ ಚ ತೇ ಯಯೂ ರಮೇಶಪಾದದರ್ಶನಾತ್ ।
ರವಿಗ್ರಹೇ ಸಮಾಪ್ಲುತಾ ಭೃಗೂದ್ವಹೋತ್ಥತೀರ್ಥಕೇ ॥ ೮ ॥

ಪದಚ್ಛೇದ :- ಪ್ರಿಯಾಃ, ಯೇ, ರಮೇಶಿತುಃ, ಹರಿಂ, ತ್ರಿರೂಪಂ, ಏತ್ಯ, ತೇ, ವಸಿಷ್ಠ, ವೃಷ್ಣಿನಂದನಂ, ಭೃಗೂತ್ತಮಂ, ತಥಾ, ಅರ್ಚಯನ್, ಕೃತಾರ್ಥತಾಂ, ಚ, ತೇ, ಯಯುಃ, ರಮೇಶಪಾದದರ್ಶನಾತ್, ರವಿಗ್ರಹೇ, ಸಮಾಪ್ಲುತಾಃ, ಭೃಗೂದ್ವಹೋತ್ಥತೀರ್ಥಕೇ ।

ಅರ್ಥ :- ಯೇ = ಯಾರು, ರಮೇಶಿತುಃ = ಲಕ್ಷ್ಮೀಪತಿಯಾದ ಶ್ರೀಹರಿಗೆ, ಪ್ರಿಯಾಃ = ಪ್ರಿಯರೋ, ತೇ = ಅವರು, ತ್ರಿರೂಪಂ = ಮೂರು ರೂಪದಲ್ಲಿರುವ, ಹರಿಂ = ಶ್ರೀಹರಿಯನ್ನು, ಏತ್ಯ = ಹೊಂದಿ, ವಸಿಷ್ಠವೃಷ್ಣಿನಂದನಂ = ವಾಸಿಷ್ಠ ಕೃಷ್ಣ ಮತ್ತು ಯಾದವ ಕೃಷ್ಣನನ್ನು, ತಥಾ = ಹಾಗೆಯೇ, ಭೃಗೂತ್ತಮಂ = ಭೃಗುಶ್ರೇಷ್ಠನಾದ ಪರಶುರಾಮನನ್ನು, ಅರ್ಚಯನ್ = ಪೂಜಿಸುತ್ತಾ, ರವಿಗ್ರಹೇ = ಸೂರ್ಯಗ್ರಹಣ ಕಾಲದಲ್ಲಿ,

**ಭೃಗೂದ್ವಹೋತ್ಥತೀರ್ಥಕೇ** = ಪರಶುರಾಮದೇವರಿಂದ ನಿರ್ಮಿತವಾದ ತೀರ್ಥದಲ್ಲಿ, **ಸಮಾಪ್ಲುತಾಃ** = ಅವಗಾಹನೆ ಮಾಡಿದವರಾಗಿ, **ರಮೇಶಪಾದ ದರ್ಶನಾತ್** = ಶ್ರೀಕೃಷ್ಣನ ಪಾದದರ್ಶನದಿಂದ, **ಕೃತಾರ್ಥತಾಂ ಚ** = ಕೃತಕೃತ್ಯತೆಯನ್ನು, **ಯಯುಃ** = ಹೊಂದಿದರು.

**ತಾತ್ಪರ್ಯ** :- ಎಲ್ಲರೂ ಅಲ್ಲಿ ನೆರೆದಿದ್ದರೂ ಕೂಡ ಶ್ರೀಹರಿಗೆ ಪ್ರಿಯರಾದ ಭಕ್ತರು ಭಗವಂತನ ವ್ಯಾಸ-ಕೃಷ್ಣ-ಪರಶುರಾಮವೆಂಬ ಮೂರು ರೂಪಗಳನ್ನು ಹೊಂದಿ, ಭಕ್ತಿಯಿಂದ ಅರ್ಚಿಸಿ ಆ ಸೂರ್ಯಗ್ರಹಣ ಕಾಲದಲ್ಲಿ ಈ ಕುರು ಕ್ಷೇತ್ರದಲ್ಲಿರುವ ಪರಶುರಾಮ ದೇವರಿಂದ ನಿರ್ಮಿತವಾದ ತೀರ್ಥಗಳಲ್ಲಿ ಮುಳುಗಿ ಸ್ನಾನ ಮಾಡಿ, ಭಗವಂತನ ಪಾದದರ್ಶನ ಮಾಡಿ ಕೃತಕೃತ್ಯರಾದರು.

**ಅನುಗ್ರಹಂ ವಿಧಾಯ ಸ ಸ್ವಕೇಷು ಕೇಶವಸ್ತ್ರಿವೃತ್ ।**
**ಅಯಾಜಯಚ್ಚ ಶೂರಜಂ ಮಖೈಃ ಸಮಾಪ್ತದಕ್ಷಿಣೈಃ ॥ ೯ ॥**

ಪದಚ್ಛೇದ :- ಅನುಗ್ರಹಂ, ವಿಧಾಯ, ಸಃ, ಸ್ವಕೇಷು, ಕೇಶವಃ, ತ್ರಿವೃತ್, ಅಯಾಜಯತ್, ಚ, ಶೂರಜಂ, ಮಖೈಃ, ಸಮಾಪ್ತದಕ್ಷಿಣೈಃ ।

**ಅರ್ಥ** :- **ತ್ರಿವೃತ್** = ಮೂರು ರೂಪವನ್ನು ಧರಿಸಿರುವ, **ಸಃ ಕೇಶವಃ** = ಷಡ್ಗುಣ ಪೂರ್ಣನಾದ ಶ್ರೀಕೃಷ್ಣನು, **ಸ್ವಕೇಷು** = ತನ್ನವರಾದ ಸಾತ್ವಿಕರಲ್ಲಿ, **ಅನುಗ್ರಹಂ** = ಅನುಗ್ರಹವನ್ನು, **ವಿಧಾಯ** = ಮಾಡಿ, **ಚ** = ಮತ್ತು, **ಶೂರಜಂ** = ಶೂರನ ಮಗನಾದ ವಸುದೇವನನ್ನು (ವಸುದೇವನಿಂದ), **ಸಮಾಪ್ತದಕ್ಷಿಣೈಃ** = ಚೆನ್ನಾಗಿ ಕೊಡಲ್ಪಟ್ಟ ದಕ್ಷಿಣೆಗಳುಳ್ಳ, **ಮಖೈಃ** = ಯಾಗಗಳಿಂದ, **ಅಯಾಜಯತ್** = ಭಗವಂತನನ್ನು ಪೂಜಿಸಿದನು.

**ತಾತ್ಪರ್ಯ** :- ವ್ಯಾಸ-ಕೃಷ್ಣ-ರಾಮ ರೂಪದಿಂದ ಸನ್ನಿಹಿತನಾದ ಶ್ರೀಹರಿಯು ತನ್ನ ಭಕ್ತರಾದ ಸಾತ್ವಿಕ ಜೀವರಾಶಿಗಳಿಗೆ ಅನುಗ್ರಹ ಮಾಡಿದ. ಹಾಗೆ ವಸುದೇವನ ಕೈಯಿಂದ ಅನೇಕ ಯಜ್ಞಗಳನ್ನು ಮಾಡಿಸಿದ - ಆ ಯಜ್ಞಗಳಲ್ಲಿ ಯಾಜ್ಞಿಕರಿಗೆ ಪರಿಪೂರ್ಣ ದಕ್ಷಿಣೆ ವಿತರಣೆಯಾಗಿತ್ತು.

**ಸಮಸ್ತಲೋಕಸಂಸ್ಥಿತಾತ್ಮಭಕ್ತಿಮಜ್ಜನಸ್ಯ ಸಃ ।**
**ಸುಕಾಲದರ್ಶನಾತ್ ಪರಂ ವ್ಯಧಾದನುಗ್ರಹಂ ಹರಿಃ ॥ ೧೦ ॥**

ಪದಚ್ಛೇದ :- ಸಮಸ್ತಲೋಕಸಂಸ್ಥಿತಾತ್ಮಭಕ್ತಿಮಜ್ಜನಸ್ಯ, ಸಃ, ಸುಕಾಲದರ್ಶನಾತ್, ಪರಂ, ವ್ಯಧಾತ್, ಅನುಗ್ರಹಂ, ಹರಿಃ ॥

**ಅರ್ಥ** :- **ಸಃ ಹರಿಃ** = ಆ ಶ್ರೀಕೃಷ್ಣನು, **ಸಮಸ್ತ ಲೋಕ ಸಂಸ್ಥಿತಾತ್ಮಭಕ್ತಿಮಜ್ಜನಸ್ಯ** = ಎಲ್ಲ ಲೋಕಗಳಲ್ಲಿರುವ ತನ್ನ ಭಕ್ತ ಜನರಿಗೆ, **ಸುಕಾಲದರ್ಶನಾತ್** = ಸೂರ್ಯಗ್ರಹಣದ ಪರ್ವಕಾಲದಲ್ಲಿ ದರ್ಶನ ಕೊಡುವಿಕೆಯಿಂದ, **ಪರಂ** = ಉತ್ತಮವಾದ, **ಅನುಗ್ರಹಂ** = ಅನುಗ್ರಹವನ್ನು, **ವ್ಯಧಾತ್** = ಮಾಡಿದನು.

**ತಾತ್ಪರ್ಯ** :- ಶ್ರೀಕೃಷ್ಣ ಸೂರ್ಯಗ್ರಹಣದ ಕಾಲದಲ್ಲಿ ತನ್ನ ದರ್ಶನವನ್ನು ಮಾಡಿಸಿ, ಭುವ ಆದಿ ಲೋಕಗಳಿಂದಲೂ ಬಂದಿದ್ದ ಎಲ್ಲಾ ತನ್ನ ಭಕ್ತರಿಗೆ ಉತ್ತಮ ಅನುಗ್ರಹ ಮಾಡಿದ.

**ತತೋ ಯಯೌ ಸ್ವಕಾಂ ಪುರೀಂ ಪೃಥಾಸುತೈಃ ಸಹಾಚ್ಯುತಃ ।**
**ಚಕಾರ ತತ್ರ ಚಾऽಹ್ನಿಕಂ ಕ್ರತುಂ ಮಹಾಶ್ವಮೇಧಕಮ್ ॥ ೧೧ ॥**

ಪದಚ್ಛೇದ :- ತತಃ, ಯಯೌ, ಸ್ವಕಾಂ, ಪುರೀಂ, ಪೃಥಾಸುತೈಃ, ಸಹ, ಅಚ್ಯುತಃ, ಚಕಾರ, ತತ್ರ, ಚ, ಆಹ್ನಿಕಮ್, ಕ್ರತುಮ್, ಮಹಾಶ್ವಮೇಧಕಮ್ ।

**ಅರ್ಥ** :- **ತತಃ** = ಅನಂತರ, **ಅಚ್ಯುತಃ** = ಶ್ರೀಕೃಷ್ಣನು, **ಪೃಥಾಸುತೈಃ ಸಹ** = ಪಾಂಡವರೊಂದಿಗೆ, **ಸ್ವಕಾಂ** = ತನ್ನದ್ದಾದ, **ಪುರೀಂ** = ಪಟ್ಟಣವಾದ ದ್ವಾರಕೆಯನ್ನು ಕುರಿತು, **ಯಯೌ** = ಹೋದನು, **ಚ** = ಮತ್ತು, **ತತ್ರ** = ಅಲ್ಲಿ, **ಆಹ್ನಿಕಂ** = ಒಂದು ದಿನದಲ್ಲಿ ನಿರ್ವಹಿಸಲ್ಪಡುವ, **ಮಹಾಶ್ವಮೇಧಕಂ** = ಮಹಾಶ್ವಮೇಧವೆಂಬ, **ಕ್ರತುಂ** = ಯಾಗವನ್ನು, **ಚಕಾರ** = ಮಾಡಿದನು.

**ತಾತ್ಪರ್ಯ** :- ನಂತರ ಶ್ರೀಕೃಷ್ಣನು ಪಾಂಡವರ ಜೊತೆಗೆ ದ್ವಾರಕೆಗೆ ಬಂದ. ಅಲ್ಲಿ ಒಂದು ದಿನದ ಅಶ್ವಮೇಧ ಯಾಗವನ್ನು ಮಾಡಿದ.

**ಹಯಂ ಸಭೀಮಫಲ್ಗುನಾ ಹರೇ ರಥಂ ಸಮಾಸ್ಥಿತಾಃ ।**
**ವ್ಯಚಾರಯನ್ ಹರೇಃ ಸುತಾ ದಿನಸ್ಯ ಪಾದಮಾತ್ರತಃ ॥ ೧೨ ॥**

ಪದಚ್ಛೇದ :- ಹಯಂ, ಸಭೀಮಫಲ್ಗುನಾಃ, ಹರೇಃ, ರಥಮ್, ಸಮಾಸ್ಥಿತಾಃ, ವ್ಯಚಾರಯನ್, ಹರೇಃ, ಸುತಾಃ, ದಿನಸ್ಯ, ಪಾದಮಾತ್ರತಃ ।

**ಅರ್ಥ** :- **ಸಭೀಮಫಲ್ಗುನಾಃ** = ಭೀಮಾರ್ಜುನರಿಂದ ಕೂಡಿದ, **ಹರೇಃ ಸುತಾಃ** = ಶ್ರೀಕೃಷ್ಣನ ಮಕ್ಕಳು, **ಹರೇಃ** = ಶ್ರೀಕೃಷ್ಣನ, **ರಥಂ** = ರಥವನ್ನು, **ಸಮಾಸ್ಥಿತಾಃ** = ಏರಿದವರಾಗಿ, **ದಿನಸ್ಯ** = ಹಗಲಿನ, **ಪಾದಮಾತ್ರತಃ** = ಕಾಲುಭಾಗದಲ್ಲಿಯೇ (೭ ½ ಘಳಿಗೆಯಲ್ಲಿ), **ಹರೇಃ** = ಶ್ರೀಕೃಷ್ಣನ, **ಹಯಂ** = ಕುದುರೆಯನ್ನು, **ವ್ಯಚಾರಯನ್** = ವಿವಿಧ ರಾಜ್ಯಗಳಲ್ಲಿ ತಿರುಗಿಸಿದರು.

**ತಾತ್ಪರ್ಯ** :- ಅಶ್ವಮೇಧಯಾಗಕ್ಕೆ ಕುದುರೆಯನ್ನು ಬಿಡಬೇಕು. ಅದು ಹೋಗುವ ರಾಜ್ಯದವರು ಕಪ್ಪ ಕಾಣಿಕೆ ಸಲ್ಲಿಸಬೇಕು. ಇಲ್ಲದಿದ್ದರೆ ಯುದ್ಧ ಮಾಡಬೇಕು. ಈ ರೀತಿ ಶ್ರೀಕೃಷ್ಣನ ಪುತ್ರರು ಭೀಮಾರ್ಜುನರ ಜೊತೆಗೆ ಶ್ರೀಕೃಷ್ಣನ ರಥವನ್ನೇರಿ ಕೇವಲ ೭ ½ ಘಳಿಗೆಯಲ್ಲಿ ವಿವಿಧ ರಾಜ್ಯಗಳಲ್ಲಿ ಯಾಗದ ಕುದುರೆಯನ್ನು ಸಂಚಾರ ಮಾಡಿಸಿದರು.

**ಜಿತಾಃ ಸಮಸ್ತಭೂಭೃತೋ ಜರಾಸುತಾದಯಃ ಕ್ಷಣಾತ್ ।**
**ವೃಕೋದರಾದಿಭಿಸ್ತು ತೈರ್ಹಯಶ್ಚ ದಿವ್ಯ ಆಯಯೌ ॥ ೧೩ ॥**

**ಪದಚ್ಛೇದ** :- **ಜಿತಾಃ, ಸಮಸ್ತಭೂಭೃತಃ, ಜರಾಸುತಾದಯಃ, ಕ್ಷಣಾತ್, ವೃಕೋದರಾದಿಭಿಃ, ತು, ತೈಃ, ಹಯಃ, ಚ, ದಿವ್ಯಃ, ಆಯಯೌ ।**

**ಅರ್ಥ** :- **ವೃಕೋದರಾದಿಭಿಃ** = ಭೀಮಸೇನನೇ ನೇತೃವಾಗಿವುಳ್ಳ, **ತೈಃ** = ಆ ಶ್ರೀಕೃಷ್ಣನ ಮಕ್ಕಳಿಂದ, **ಜರಾಸುತಾದಯಃ** = ಜರಾಸಂಧನೇ ಮೊದಲಾದ, **ಸಮಸ್ತಭೂಭೃತಃ** = ಎಲ್ಲ ರಾಜರು, **ಕ್ಷಣಾತ್** = ಕ್ಷಣಮಾತ್ರದಲ್ಲಿ, **ಜಿತಾಃ** = ಸೋಲಿಸಲ್ಪಟ್ಟರು, **ಚ** = ಮತ್ತು, **ದಿವ್ಯಃ** = ದಿವ್ಯವಾದ, **ಹಯಃ** = ಕುದುರೆಯು, **ಆಯಾಯೌ** = ಹಿಂದಿರುಗಿತು.

**ತಾತ್ಪರ್ಯ** :- ಶ್ರೀಕೃಷ್ಣನ ಪುತ್ರರಿಗೆ ಭೀಮನೇ ನಾಯಕ. ಹೀಗಾಗಿ ಅವರು ಜರಾಸಂಧನೇ ಮೊದಲಾದ ಸಮಸ್ತ ರಾಜರನ್ನೂ ಕ್ಷಣಮಾತ್ರದಲ್ಲಿ ಸೋಲಿಸಿದರು. ಎಲ್ಲೆಡೆ ತಿರುಗಿದ ದಿವ್ಯವಾದ ಕುದುರೆ ದ್ವಾರಕೆಗೆ ಹಿಂದಿರುಗಿತು.

**ಹಯಃ ಸ ಕೃಷ್ಣನಿರ್ಮಿತೋ ದಿನೇನ ಲಕ್ಷಯೋಜನಮ್ ।**
**ಕ್ಷಮೋ ಹಿ ಗಂತುಮಂಜಸಾ ದಿನಾಶ್ವಮೇಧಸಿದ್ಧಯೇ ॥ ೧೪ ॥**

**ಪದಚ್ಛೇದ :-** ಹಯಃ, ಸಃ, ಕೃಷ್ಣನಿರ್ಮಿತಃ, ದಿನೇನ, ಲಕ್ಷಯೋಜನಂ, ಕ್ಷಮಃ, ಹಿ, ಗಂತುಂ, ಅಂಜಸಾ, ದಿನಾಶ್ವಮೇಧಸಿದ್ಧಯೇ ।

**ಅರ್ಥ :-** ಕೃಷ್ಣನಿರ್ಮಿತಃ = ಶ್ರೀಕೃಷ್ಣನಿಂದ ಸೃಷ್ಟಿಸಲ್ಪಟ್ಟ, ಸಃ ಹಯಃ = ಆ ಕುದುರೆಯು, ದಿನಾಶ್ವಮೇಧಸಿದ್ಧಯೇ = ಒಂದು ದಿನದ ಅಶ್ವಮೇಧ ಯಾಗಕ್ಕಾಗಿ, ದಿನೇನ = ದಿನದಲ್ಲಿ, ಲಕ್ಷಯೋಜನಂ = ಒಂದು ಲಕ್ಷಯೋಜನ ದೂರವನ್ನು, ಗಂತುಂ = ಹೋಗಲು, ಕ್ಷಮಃ ಹಿ = ಸಮರ್ಥವಷ್ಟೆ.

**ತಾತ್ಪರ್ಯ :-** ಒಂದೇ ದಿನದಲ್ಲಿ ಅಶ್ವಮೇಧಯಾಗ ನೆರವೇರಲು ಶ್ರೀಕೃಷ್ಣನು ದಿವ್ಯವಾದ ಕುದುರೆಯನ್ನು ಸೃಷ್ಟಿಸಿದ್ದ. ಆ ಕುದುರೆ ಒಂದು ದಿನದಲ್ಲಿ ಒಂದು ಲಕ್ಷಿ ಯೋಜನ ದೂರ ಹೋಗಲು ಸಮರ್ಥವಿತ್ತು.

**ಪರಾಶರಾತ್ಮಜೋ ಹರಿರ್ಹರಿಂ ಯದಾ ತ್ವದೀಕ್ಷಯತ್ ।**
**ತದಾಽಽಸಸಾದ ಹ ದ್ವಿಜಸ್ತೃಣಾವಹೋ ರುರಾವ ಚ ॥ ೧೫ ॥**

**ಪದಚ್ಛೇದ :-** ಪರಾಶರಾತ್ಮಜಃ, ಹರಿಃ, ಹರಿಂ, ಯದಾ, ತು, ಅದೀಕ್ಷಯತ್, ತದಾ, ಆಸಸಾದ, ಹ, ದ್ವಿಜಃ, ತೃಣಾವಹಃ, ರುರಾವ, ಚ ।

**ಅರ್ಥ :-** ಯದಾ ತು = ಯಾವಾಗ, ಪರಾಶರಾತ್ಮಜಃ = ಪರಾಶರ ಮುನಿಯ ಪುತ್ರರಾದ, ಹರಿಃ = ವ್ಯಾಸರೂಪಿಯಾದ ಶ್ರೀಹರಿಯು, ಹರಿಂ = ಶ್ರೀಕೃಷ್ಣನನ್ನು, ಅದೀಕ್ಷಯತ್ = ಯಜ್ಞದೀಕ್ಷಿತನನ್ನಾಗಿ ಮಾಡಿದನೋ, ತದಾ = ಆಗ, ತೃಣಾವಹಃ = ಕೈಯಲ್ಲಿ ಹುಲ್ಲನ್ನು ಹಿಡಿದ, ದ್ವಿಜಃ = ಬ್ರಾಹ್ಮಣನು, ಆಸಸಾದ = ಬಂದನು, ಚ = ಮತ್ತು, ರುರಾವ = ಗೋಳಾಡಿದನು.

**ತಾತ್ಪರ್ಯ :-** ಅಶ್ವಮೇಧಯಾಗಕ್ಕೆ ಶ್ರೀಕೃಷ್ಣನನ್ನು ದೀಕ್ಷಿತನನ್ನಾಗಿ ವ್ಯಾಸರು ಕುಳ್ಳಿರಿಸಿದ್ದಾರೆ. ಇದೇ ಸಮಯದಲ್ಲಿ ಒಬ್ಬ ಬ್ರಾಹ್ಮಣ ಕೈಯಲ್ಲಿ ಹುಲ್ಲನ್ನು ಹಿಡಿದುಕೊಂಡು ಶ್ರೀಕೃಷ್ಣನ ಸಮೀಪಕ್ಕೆ ಬಂದಿದ್ದಾನೆ. ತನ್ನ ಮಕ್ಕಳ ಸಾವನ್ನು ಕಂಡು, ಸಹಿಸಲಾರದೇ ಶ್ರೀಕೃಷ್ಣನ ಬಳಿ ನಿವೇದಿಸಿ ಗೋಳಾಡಿದನು.

**ವ್ರಜಂತಿ ಜನ್ಮನೋಽನು ಮೇ ಸದಾ ಸುತಾ ಅದೃಶ್ಯತಾಮ್ ।**
**ಇತೀರಿತೇಽರ್ಜುನೋಽಬ್ರವೀದಹಂ ಹಿ ಪಾಮಿ ತೇ ಸುತಾನ್ ॥ ೧೬ ॥**

ಪದಚ್ಛೇದ :- ವ್ರಜಂತಿ, ಜನ್ಮನಃ, ಅನು, ಮೇ, ಸದಾ, ಸುತಾಃ, ಅದೃಶ್ಯತಾಂ, ಇತಿ, ಈರಿತೇ, ಅರ್ಜುನಃ, ಅಬ್ರವೀತ್, ಅಹಂ, ಹಿ, ಪಾಮಿ, ತೇ, ಸುತಾನ್ ।

**ಅರ್ಥ** :- **ಮೇ** = ನನ್ನ, **ಸುತಾಃ** = ಮಕ್ಕಳು, **ಜನ್ಮನಃ ಅನು** = ಹುಟ್ಟಿದ ಕೂಡಲೇ, **ಸದಾ** = ಯಾವಾಗಲೂ, **ಅದೃಶ್ಯತಾಂ** = ಅದೃಶ್ಯತೆಯನ್ನು, **ವ್ರಜಂತಿ** = ಹೊಂದುತ್ತಾರೆ, **ಇತಿ** = ಎಂದು, **ಈರಿತೇ** = ಹೇಳಲ್ಪಡುತ್ತಿರಲು, **ಅರ್ಜುನಃ** = ಅರ್ಜುನನು, **ತೇ** = ನಿನ್ನ, **ಸುತಾನ್** = ಮಕ್ಕಳನ್ನು, **ಅಹಂ** = ನಾನು, **ಪಾಮಿ ಹಿ** = ರಕ್ಷಿಸುತ್ತೇನಷ್ಟೆ, **ಇತಿ** = ಎಂದು, **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ಆ ಬ್ರಾಹ್ಮಣನು ಹೇಳುತ್ತಾನೆ. ನನಗೆ ಮೂರು ಮಕ್ಕಳು ಹುಟ್ಟಿದವು. ಅವು ಹುಟ್ಟಿದ ಕ್ಷಣದಲ್ಲಿಯೇ ಕಣ್ಮರೆಯಾದವು. ನಾಲ್ಕನೆ ಮಗುವನ್ನು ನೀನು ರಕ್ಷಿಸು ಎಂದು. ಈ ಮಾತನ್ನು ಕೇಳಿದ ಕೂಡಲೇ ಅರ್ಜುನನು 'ನಾನು ನಿನ್ನ ಮಕ್ಕಳನ್ನು ರಕ್ಷಿಸುತ್ತೇನೆ' ಎಂದು ಹೇಳಿದ.

**ನ ಕೃಷ್ಣರಾಮಕಾರ್ಷ್ಣಿಭಿಃ ಸುತಾ ನು ಮೇಽತ್ರ ಪಾಲಿತಾಃ ।**
**ಕ್ವ ತೇಽತ್ರ ಶಕ್ತಿರಿತ್ಯಮುಂ ಜಗಾದ ಸೋಽರ್ಜುನಂ ದ್ವಿಜಃ ॥ ೧೭ ॥**

ಪದಚ್ಛೇದ :- ನ, ಕೃಷ್ಣರಾಮಕಾರ್ಷ್ಣಿಭಿಃ, ಸುತಾಃ, ನು, ಮೇ, ಅತ್ರ, ಪಾಲಿತಾಃ, ಕ್ವ, ತೇ, ಅತ್ರ, ಶಕ್ತಿಃ, ಇತಿ, ಅಮುಂ, ಜಗಾದ, ಸಃ, ಅರ್ಜುನಂ, ದ್ವಿಜಃ ।

**ಅರ್ಥ** :- **ಅತ್ರ** = ಈ ಸಂಕಟದ ಸಮಯದಲ್ಲಿ, **ಮೇ** = ನನ್ನ, **ಸುತಾಃ** = ಮಕ್ಕಳು, **ಕೃಷ್ಣ-ರಾಮ-ಕಾರ್ಷ್ಣಿಭಿಃ** = ಶ್ರೀಕೃಷ್ಣ - ಬಲರಾಮ ಮತ್ತು ಕೃಷ್ಣನ ಮಕ್ಕಳು ಮೊಮ್ಮಕ್ಕಳಾದ ಪ್ರದ್ಯುಮ್ನ, ಅನಿರುದ್ಧಾದಿಗಳಿಂದಲೂ, **ನ ಪಾಲಿತಾಃ ನು** - ರಕ್ಷಿಸಲ್ಪಡಲಿಲ್ಲವಷ್ಟೆ, **ತೇ** = ನಿನಗೆ, **ಅತ್ರ** = ಈ ವಿಷಯದಲ್ಲಿ, **ಶಕ್ತಿಃ** = ಸಾಮರ್ಥ್ಯವು, **ಕ್ವ** = ಎಲ್ಲಿ, **ಇತಿ** = ಎಂದು, **ಅಮುಂ** = ಈ, **ಅರ್ಜುನಂ** = ಅರ್ಜುನನನ್ನು ಕುರಿತು, **ಸಃ** = ಆ, **ದ್ವಿಜಃ** = ಬ್ರಾಹ್ಮಣನು, **ಜಗಾದ** = ಹೇಳಿದನು.

**ತಾತ್ಪರ್ಯ** :- ನನ್ನ ಮಕ್ಕಳು ಕಣ್ಮರೆಯಾಗುತ್ತಿದ್ದಾಗ ಶ್ರೀಕೃಷ್ಣನಾಗಲಿ, ಬಲರಾಮನಾಗಲಿ ಅಥವಾ ಕೃಷ್ಣನ ಸಂಬಂಧಿಗಳಾದ ಪ್ರದ್ಯುಮ್ನ ಅನಿರುದ್ಧರೇ

ಆಗಲಿ ರಕ್ಷಿಸಲು ಸಮರ್ಥರಾಗಲಿಲ್ಲ, ನಿನಗೆ ಆ ಶಕ್ತಿ ಇರಲು ಹೇಗೆ ಸಾಧ್ಯ ? ಎಂದು ಅರ್ಜುನನಿಗೆ ಆ ಬ್ರಾಹ್ಮಣ ಪ್ರಶ್ನೆ ಮಾಡುತ್ತಾನೆ.

**ತದಾ ಜಗಾದ ಫಲ್ಗುನೋಽಸುರ್ಯೈರ್ವಿದೂಷಿತಾತ್ಮನಾ ।**
**ನ ವಿಪ್ರ ತಾದೃಶೋಽಸ್ಮ್ಯಹಂ ಯಥೈವ ಕೇಶವಾದಯಃ ॥ ೧೮ ॥**

**ಮಯಾ ಜಿತಾ ಹಿ ಖಾಂಡವೇ ಸುರಾಸ್ತಥಾಽಸುರಾನಹಮ್ ।**
**ನಿವಾತವರ್ಮನಾಮಕಾನ್ ವಿಜೇಷ್ಯ ಉತ್ತರತ್ರ ಹಿ ॥ ೧೯ ॥**

**ಪದಚ್ಛೇದ** :– ತದಾ, ಜಗಾದ, ಫಲ್ಗುನಃ, ಅಸುರ್ಯೈಃ, ವಿದೂಷಿತಾತ್ಮನಾ, ನ, ವಿಪ್ರ, ತಾದೃಶಃ, ಅಸ್ಮಿ, ಅಹಂ, ಯಥಾ, ಏವ, ಕೇಶವಾದಯಃ, ಮಯಾ, ಜಿತಾಃ, ಹಿ, ಖಾಂಡವೇ, ಸುರಾಃ, ತಥಾ, ಅಸುರಾನ್, ಅಹಂ, ನಿವಾತವರ್ಮನಾಮಕಾನ್, ವಿಜೇಷ್ಯೆ, ಉತ್ತರತ್ರ, ಹಿ ।

**ಅರ್ಥ** :- **ತದಾ** = ಆಗ, **ಅಸುರ್ಯೈಃ** = ದುಷ್ಟ ಶಕ್ತಿಗಳಿಂದ, **ವಿದೂಷಿತಾತ್ಮನಾ** = ಕಲುಷಿತವಾದ ಮನಸ್ಸಿನಿಂದ, **ಫಲ್ಗುನಃ** = ಅರ್ಜುನನು, **ವಿಪ್ರ** = ಬ್ರಾಹ್ಮಣನೇ, **ಯಥೈವ** = ಹೇಗೆ, **ಕೇಶವಾದಯಃ** = ಶ್ರೀಕೃಷ್ಣ ಮೊದಲಾದವರೋ, **ತಾದೃಶಃ** = ಅಂತಹವನು, **ಅಹಂ** = ನಾನು, **ನ ಅಸ್ಮಿ** = ಆಗಿಲ್ಲ, **ಮಯಾ** = ನನ್ನಿಂದ, **ಖಾಂಡವೇ** = ಖಾಂಡವ ವನದಲ್ಲಿ, **ಸುರಾಃ** = ದೇವತೆಗಳು, **ಜಿತಾಃ ಹಿ** = ಗೆಲ್ಲಲ್ಪಟ್ಟಿದ್ದಾರೆ ತಾನೇ, **ತಥಾ** = ಹಾಗೇ, **ಅಹಂ** = ನಾನು, **ಉತ್ತರತ್ರ** = ಮುಂದೆ, **ನಿವಾತವರ್ಮನಾಮಕಾನ್** = ನಿವಾತ ಕವಚರೆಂದು ಹೆಸರುಳ್ಳ, **ಅಸುರಾನ್** = ಅಸುರರನ್ನು, **ವಿಜೇಷ್ಯೆ ಹಿ** = ನಿಶ್ಚಯವಾಗಿಯೂ ಗೆಲ್ಲುತ್ತೇನಷ್ಟೆ, **ಇತಿ** = ಎಂದು, **ಜಗಾದ** = ಹೇಳಿದನು.

**ತಾತ್ಪರ್ಯ** :- ಆಗ ಅರ್ಜುನ ಆ ಬ್ರಾಹ್ಮಣನನ್ನು ಕುರಿತು ತನ್ನನ್ನು ಮಹಾಪರಾಕ್ರಮಿ ಎಂದು ಬಿಂಬಿಸುತ್ತಾ ಈ ರೀತಿ ಹೇಳುತ್ತಾನೆ - ನಾನು ಶ್ರೀಕೃಷ್ಣಾದಿಗಳಂತೆ ಅಲ್ಲ ಖಾಂಡವ ದಾಹ ಪ್ರಸಂಗದಲ್ಲಿ ಎಲ್ಲ ದೇವತೆಗಳನ್ನು ಗೆದ್ದಿದ್ದೇನೆ. ಅದರಂತೆ ಮುಂದೆ ನಿವಾತ ಕವಚರೆಂಬ ಅಸುರನ್ನು ಗೆಲ್ಲುತ್ತೇನೆ. ಅಂತಹ ಶಕ್ತಿವಂತನಾದ ನಾನು ನಿನ್ನ ಮಕ್ಕಳನ್ನು ರಕ್ಷಿಸುತ್ತೇನೆ ಎಂದು ಅಹಂಕಾರದಿಂದ ಹೇಳಿದ.

**ವಿಶೇಷ ವಿಚಾರ :-** ಅರ್ಜುನ ನನ್ನನ್ನು ಹೊಗಳಿಕೊಳ್ಳುವಾಗ ಮುಂದೆ ನಾನು ನಿವಾಸ ಕವಚರನ್ನು ಗೆಲ್ಲುತ್ತೇನೆ ಎಂದು ಹೇಳುತ್ತಾನೆ. ಇದು 'ಮಯ್ಯೆವ ನಿಹತಾಃ' ಎಂಬ ಭಾಗವತ ವಾಕ್ಯದ ತಾತ್ಪರ್ಯವನ್ನು ಆಚಾರ್ಯರು ಹೇಳಿದ್ದು. ಏಕಾಹ ಅಶ್ವಮೇಧಕ್ಕಿಂತ ಮೊದಲು ನಿವಾತಕವಚರ ನಿಗ್ರಹ ಅರ್ಜುನನಿಂದ ನಡೆದಿರಲಿಲ್ಲ. ಆದರೂ ಮುಂದೆ ತನ್ನಿಂದ ಆ ಕಾರ್ಯ ನಿಶ್ಚಯವಾಗಿಯೂ ನಡೆಯುತ್ತದೆ ಎಂಬ ಅಭಿಪ್ರಾಯದಿಂದ 'ನಿಹತಾಃ' ಎಂಬ ಭೂತಾರ್ಥಕ ಪ್ರಯೋಗವನ್ನು ಅರ್ಜುನ ಮಾಡಿದ. ಅದರ ತಾತ್ಪರ್ಯವನ್ನು 'ವಿಜೇಷ್ಯೆ ಹಿ' ಎಂದು ಭವಿಷ್ಯಾರ್ಥದಲ್ಲೆ ಆಚಾರ್ಯರು ಪ್ರಯೋಗ ಮಾಡುವ ಮೂಲಕ ತಿಳಿಸಿದ್ದಾರೆ. ಅರ್ಜುನನಿಗೆ ಈ ನಿಶ್ಚಯ ಹೇಗೆ ಬಂತು? ಎಂಬ ಪ್ರಶ್ನೆಗೆ ಈ ರೀತಿ ಉತ್ತರ – ಅರ್ಜುನ ಹುಟ್ಟಿದಾಗ ಅವನ ಭವಿಷ್ಯವನ್ನು ಅಶರೀರವಾಣಿ ತಿಳಿಸಿತ್ತು. ಕುಂತಿಯು ಅದನ್ನು ಅರ್ಜುನನಿಗೆ ಹೇಳಿದಳು. ಅದರಲ್ಲಿ ಖಾಂಡವ ದಾಹ ಮತ್ತು ನಿವಾತಕವಚರ ನಿಗ್ರಹ ಮುಖ್ಯವಾದವು. ಈಗಾಗಲೇ ಖಾಂಡವದಾಹ ಪ್ರಸಂಗ ನಡೆದಿದೆ. ಆದುದರಿಂದ ಅಶರೀರವಾಣಿ ಸುಳ್ಳಾಗದು. ಹೀಗಾಗಿ ನಿವಾತಕವಚರನ್ನು ತಾನು ನಿಗ್ರಹಿಸುವುದು ನಿಶ್ಚಯ ಎಂದು ಅರ್ಜುನನ ಭಾವ. ಇದೂ ಒಂದು ಅಹಂಕಾರದ ಮಾತೇ ಆಗಿದೆ.

**ಉದೀರ್ಯ ಚೇತಿ ಕೇಶವಂ ಸ ಊಚಿವಾನ್ ವ್ರಜಾಮ್ಯಹಮ್ ।**
**ಇತೀರಿತೋಽವದದ್ಧರಿಸ್ತವಾತ್ರ ಶಕ್ಯತೇ ನು ಕಿಮ್ ॥ ೨೦ ॥**

ಪದಚ್ಛೇದ :- **ಉದೀರ್ಯ, ಚ, ಇತಿ, ಕೇಶವಂ, ಸಃ, ಊಚಿವಾನ್, ವ್ರಜಾಮಿ, ಅಹಮ್, ಇತಿ, ಈರಿತಃ, ಅವದತ್, ಹರಿಃ, ತವ, ಅತ್ರ, ಶಕ್ಯತೇ, ನು, ಕಿಂ ।**

**ಅರ್ಥ :-** **ಸಃ** = ಅರ್ಜುನನು, **ಇತಿ** = ಹೀಗೆಂದು, **ಉದೀರ್ಯ** = ಬ್ರಾಹ್ಮಣನನ್ನು ಕುರಿತು ಹೇಳಿ, **ಕೇಶವಂ** = ಶ್ರೀ ಕೃಷ್ಣನನ್ನು ಕುರಿತು, **ಅಹಂ** = ನಾನು, **ವ್ರಜಾಮಿ** = ಬ್ರಾಹ್ಮಣ ಪುತ್ರ ರಕ್ಷಣೆಗೆ ಹೋಗುತ್ತೇನೆ ಎಂದು, **ಊಚಿವಾನ್** = ಹೇಳಿದನು, **ಇತಿ** = ಈ ರೀತಿಯಾಗಿ, **ಈರಿತಃ** = ಹೇಳಲ್ಪಟ್ಟ, **ಹರಿಃ** = ಶ್ರೀಕೃಷ್ಣನು, **ಅತ್ರ** = ಬ್ರಾಹ್ಮಣನ ಮಗನ ರಕ್ಷಣೆಯ ವಿಷಯದಲ್ಲಿ, **ತವ** = ನಿನಗೆ, **ಶಕ್ಯತೇ ನು ಕಿಮ್** = ಸಾಮರ್ಥ್ಯವಿದೆಯಷ್ಟೇ (ಎಂದು), **ಅವದತ್** = ಹೇಳಿದನು.

ತಾತ್ಪರ್ಯ :- ತಾನೇ ಸಮರ್ಥ ಎಂಬ ಅಹಂಕಾರದ ಮಾತುಗಳನ್ನು ಆಡಿ, ಶ್ರೀಕೃಷ್ಣನ ಹತ್ತಿರ ತಾನು ಹೋಗಿ ಬರುತ್ತೇನೆ ಎಂದು ಅರ್ಜುನ ಹೇಳಿದ. ಆಗ ಶ್ರೀಕೃಷ್ಣ ನಿನಗೆ ಈ ಬ್ರಾಹ್ಮಣನ ಮಗನನ್ನು ರಕ್ಷಿಸುವ ಶಕ್ತಿ ಇದೆಯಾ ? ಎಂದು ಪರಿಹಾಸ ಪೂರ್ವಕ ಪ್ರಶ್ನೆ ಮಾಡಿದ.

ವಿಲಜ್ಜಮಾನಮೀಕ್ಷ್ಯ ತಂ ಜಗಾದ ಕೇಶವೋಽರಿಹಾ ।
ವ್ರಜೇತಿ ಸ ಪ್ರತಿಶ್ರವಂ ಚಕಾರ ಹಾಪ್ಯರಕ್ಷಣೇ ॥ ೨೧ ॥

**ಪದಚ್ಛೇದ :- ವಿಲಜ್ಜಮಾನಂ, ಈಕ್ಷ್ಯ, ತಂ, ಜಗಾದ, ಕೇಶವಃ, ಅರಿಹಾ, ವ್ರಜ, ಇತಿ, ಸಃ, ಪ್ರತಿಶ್ರವಂ, ಚಕಾರ, ಹ, ಅಪಿ, ಅರಕ್ಷಣೇ ।**

**ಅರ್ಥ :- ವಿಲಜ್ಜಮಾನಂ** = ಅವಮಾನದಿಂದ ನಾಚಿಕೊಂಡ, **ತಂ** = ಅರ್ಜುನನನ್ನು, **ಈಕ್ಷ್ಯ** = ನೋಡಿ, **ಅರಿಹಾ** = ಶತ್ರುಸಂಹಾರಕನಾದ, **ಕೇಶವಃ** = ಶ್ರೀಕೃಷ್ಣನು, **ವ್ರಜ** = ಹೋಗು (ಎಂದು), **ಜಗಾದ** = ಹೇಳಿದನು, **ಸಃ** = ಆ ಅರ್ಜುನನು, **ಅರಕ್ಷಣೇ** = ಬ್ರಾಹ್ಮಣ ಪುತ್ರರನ್ನು ರಕ್ಷಿಸದಿದ್ದಲ್ಲಿ, **ಪ್ರತಿಶ್ರವಮ್ ಅಪಿ** = ಪ್ರತಿಜ್ಞೆಯನ್ನೂ ಕೂಡ, **ಚಕಾರ ಹ** = ಮಾಡಿದನಷ್ಟೇ.

ತಾತ್ಪರ್ಯ :- ನಿನಗೆ ಶಕ್ತಿ ಇದೆಯಾ? ಎಂದಾಗ ಅರ್ಜುನನಿಗೆ ಅವಮಾನವಾಯಿತು. ನಾಚಿಕೊಂಡ ಇವನನ್ನು ಕಂಡ ಶ್ರೀಕೃಷ್ಣ 'ಹೋಗಿಬಾ' ಎಂದು ಅನುಜ್ಞೆ ನೀಡಿದ. ಆಗ ಅರ್ಜುನ ತಾನು ರಕ್ಷಣೆ ಮಾಡದಿದ್ದರೆ ಮುಂದೆ ಹೇಳುವ ರೀತಿಯಲ್ಲಿ ಪ್ರತಿಜ್ಞೆಯನ್ನು ಮಾಡಿದ.

ವಹ್ನಿಂ ಪ್ರವೇಕ್ಷ್ಯೇಽಶಕ್ತಶ್ಚೇದಿತ್ಯುಕ್ತ್ವಾ ಸರ್ವಯಾದವೈಃ ।
ಯಯೌ ನ ರಾಮಪ್ರದ್ಯುಮ್ನಾವನಿರುದ್ಧಂ ಚ ಕೇಶವಃ ।
ನ್ಯಯೋಜಯತ್ ತತ್ಸಹಾಯೇ ಯಶಸ್ತೇಷ್ವಭಿರಕ್ಷಿತುಮ್ ॥ ೨೨ ॥

**ಪದಚ್ಛೇದ :- ವಹ್ನಿಂ, ಪ್ರವೇಕ್ಷ್ಯೇ, ಅಶಕ್ತಃ, ಚೇತ್, ಇತಿ, ಉಕ್ತ್ವಾ, ಸರ್ವಯಾದವೈಃ, ಯಯೌ, ನ, ರಾಮಪ್ರದ್ಯುಮ್ನೌ, ಅನಿರುದ್ಧಂ, ಚ, ಕೇಶವಃ, ನ್ಯಯೋಜಯತ್, ತತ್ಸಹಾಯೇ, ಯಶಃ, ತೇಷು, ಅಭಿರಕ್ಷಿತುಂ ।**

**ಅರ್ಥ :- ಅಶಕ್ತಃ ಚೇತ್** = ಬ್ರಾಹ್ಮಣ ಮಗನನ್ನು ರಕ್ಷಿಸುವಲ್ಲಿ ಅಸಮರ್ಥನಾದರೆ, **ವಹ್ನಿಂ** = ಬೆಂಕಿಯನ್ನು, **ಪ್ರವೇಕ್ಷ್ಯೇ** = ಪ್ರವೇಶಿಸುತ್ತೇನೆ,

ಇತಿ = ಎಂದು, ಉಕ್ತ್ವಾ = ಹೇಳಿ, ಸರ್ವಯಾದವೈಃ = ಪ್ರಮುಖರಾದ ಎಲ್ಲ ಯಾದವರೊಂದಿಗೆ, ಯಯೌ = ಹೋದನು, ಕೇಶವಶ್ಚ = ಶ್ರೀಕೃಷ್ಣನಾದರೂ, ತೇಷು = ಬಲರಾಮ - ಪ್ರದ್ಯುಮ್ನ - ಅನಿರುದ್ಧರಲ್ಲಿ, ಯಶಃ = ಕೀರ್ತಿಯನ್ನು, ಅಭಿರಕ್ಷಿತುಂ = ರಕ್ಷಿಸಲು, ತತ್ಸಹಾಯೇ = ಅರ್ಜುನನ ಸಹಾಯಕ್ಕೆ, ರಾಮಪ್ರದ್ಯುಮ್ನೌ = ಬಲರಾಮ ಪ್ರದ್ಯುಮ್ನರನ್ನು, ಚ = ಮತ್ತು, ಅನಿರುದ್ಧಂ = ಅನಿರುದ್ಧನನ್ನು, ನ ನ್ಯಯೋಜಯತ್ = ನಿಯೋಜಿಸಿ ಕಳುಹಿಸಲಿಲ್ಲ.

ತಾತ್ಪರ್ಯ :- ಅರ್ಜುನನು ತಾನು ಬ್ರಾಹ್ಮಣಸುತನನ್ನು ರಕ್ಷಿಸಲು ಶಕ್ತನಾಗದಿದ್ದರೆ ಅಗ್ನಿಪ್ರವೇಶ ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡಿ ಹೊರಟ. ಅವನ ಸಹಾಯಕ್ಕೆ ಯಾದವ ಪ್ರಮುಖರು ಹೊರಟರು. ಆದರೆ ಬಲರಾಮ, ಪ್ರದ್ಯುಮ್ನ ಮತ್ತು ಅನಿರುದ್ಧರನ್ನು ಶ್ರೀಕೃಷ್ಣ ಕಳುಹಿಸಲಿಲ್ಲ. ಏಕೆಂದರೆ ಅರ್ಜುನ ವಿಫಲನಾದಾಗ ಇವರ ಕೀರ್ತಿ ಹಾಳಾಗಬಾರದು ಎಂದು.

ಪ್ರಿಯೋ ಹಿ ನಿತರಾಂ ರಾಮಃ ಕೃಷ್ಣಸ್ಯಾನು ಚ ತಂ ಸುತಃ ॥ ೨೩ ॥

ಅನಿರುದ್ಧಃ ಕಾರ್ಷ್ಣಿಮನು ಪ್ರದ್ಯುಮ್ನಾದ್ ಯೋಽಜನಿಷ್ಟ ಹಿ ।
ರುಗ್ಮಿಪುತ್ರ್ಯಾಂ ರುಗ್ಮವತ್ಯಾಮಾಹೃತಾಯಾಂ ಸ್ವಯಂವರೇ ॥ ೨೪ ॥

ರತಿರೇವ ಹಿ ಯಾ ತಸ್ಯಾಂ ಜಾತೋಽಸೌ ಕಾಮನಂದನಃ ।
ಪೂರ್ವಮಪ್ಯನಿರುದ್ಧಾಖ್ಯೋ ವಿಷ್ಣೋಸ್ತನ್ನಾಮ್ನ ಏವಚ ॥ ೨೫ ॥

ಆವೇಶಯುಕ್ತೋ ಬಲವಾನ್ ರೂಪವಾನ್ ಸರ್ವಶಾಸ್ತ್ರವಿತ್ ।
ತಸ್ಮಾತ್ ತಾಂಸ್ತ್ರೀನೃತೇ ಕೃಷ್ಣಃ ಪಾರ್ಥಸಾಹಾಯ್ಯಕಾರಣಾತ್ ॥ ೨೬ ॥

ಪದಚ್ಛೇದ :- ಪ್ರಿಯಃ, ಹಿ, ನಿತರಾಂ, ರಾಮಃ, ಕೃಷ್ಣಸ್ಯ, ಅನು, ಚ, ತಂ, ಸುತಃ, ಅನಿರುದ್ಧಃ, ಕಾರ್ಷ್ಣಿಂ, ಅನು, ಪ್ರದ್ಯುಮ್ನಾತ್, ಯಃ, ಅಜನಿಷ್ಟ, ಹಿ, ರುಗ್ಮಿಪುತ್ರ್ಯಾಂ, ರುಗ್ಮವತ್ಯಾಂ, ಆಹೃತಾಯಾಂ, ಸ್ವಯಂವರೇ, ರತಿಃ, ಏವ, ಹಿ, ಯಾ, ತಸ್ಯಾಂ, ಜಾತಃ, ಅಸೌ, ಕಾಮನಂದನಃ, ಪೂರ್ವಂ, ಅಪಿ, ಅನಿರುದ್ಧಾಖ್ಯಃ, ವಿಷ್ಣೋಃ, ತನ್ನಾಮ್ನಃ, ಏವ, ಚ, ಆವೇಶಯುಕ್ತಃ, ಬಲವಾನ್, ರೂಪವಾನ್, ಸರ್ವಶಾಸ್ತ್ರವಿತ್, ತಸ್ಮಾತ್, ತಾನ್, ತ್ರೀನ್, ಋತೇ, ಕೃಷ್ಣಃ, ಪಾರ್ಥಸಾಹಾಯ್ಯಕಾರಣಾತ್, ನ್ಯಯೋಜಯತ್ ।

ತಾತ್ಪರ್ಯ :- ತಾನೇ ಸಮರ್ಥ ಎಂಬ ಅಹಂಕಾರದ ಮಾತುಗಳನ್ನು ಆಡಿ, ಶ್ರೀಕೃಷ್ಣನ ಹತ್ತಿರ ತಾನು ಹೋಗಿ ಬರುತ್ತೇನೆ ಎಂದು ಅರ್ಜುನ ಹೇಳಿದ. ಆಗ ಶ್ರೀಕೃಷ್ಣ ನಿನಗೆ ಈ ಬ್ರಾಹ್ಮಣನ ಮಗನನ್ನು ರಕ್ಷಿಸುವ ಶಕ್ತಿ ಇದೆಯಾ ? ಎಂದು ಪರಿಹಾಸ ಪೂರ್ವಕ ಪ್ರಶ್ನೆ ಮಾಡಿದ.

ವಿಲಜ್ಜಮಾನಮೀಕ್ಷ್ಯ ತಂ ಜಗಾದ ಕೇಶವೋಽರಿಹಾ ।
ವ್ರಜೇತಿ ಸ ಪ್ರತಿಶ್ರವಂ ಚಕಾರ ಹಾಪ್ಯರಕ್ಷಣೇ ॥ ೨೧ ॥

ಪದಚ್ಛೇದ :- ವಿಲಜ್ಜಮಾನಂ, ಈಕ್ಷ್ಯ, ತಂ, ಜಗಾದ, ಕೇಶವಃ, ಅರಿಹಾ, ವ್ರಜ, ಇತಿ, ಸಃ, ಪ್ರತಿಶ್ರವಂ, ಚಕಾರ, ಹ, ಅಪಿ, ಅರಕ್ಷಣೇ ।

ಅರ್ಥ :- ವಿಲಜ್ಜಮಾನಂ = ಅವಮಾನದಿಂದ ನಾಚಿಕೊಂಡ, ತಂ = ಅರ್ಜುನನನ್ನು, ಈಕ್ಷ್ಯ = ನೋಡಿ, ಅರಿಹಾ = ಶತ್ರುಸಂಹಾರಕನಾದ, ಕೇಶವಃ = ಶ್ರೀಕೃಷ್ಣನು, ವ್ರಜ = ಹೋಗು (ಎಂದು), ಜಗಾದ = ಹೇಳಿದನು, ಸಃ = ಆ ಅರ್ಜುನನು, ಅರಕ್ಷಣೇ = ಬ್ರಾಹ್ಮಣ ಪುತ್ರರನ್ನು ರಕ್ಷಿಸದಿದ್ದಲ್ಲಿ, ಪ್ರತಿಶ್ರವಮ್ ಅಪಿ = ಪ್ರತಿಜ್ಞೆಯನ್ನೂ ಕೂಡ, ಚಕಾರ ಹ = ಮಾಡಿದನಷ್ಟೇ.

ತಾತ್ಪರ್ಯ :- ನಿನಗೆ ಶಕ್ತಿ ಇದೆಯಾ? ಎಂದಾಗ ಅರ್ಜುನನಿಗೆ ಅವಮಾನವಾಯಿತು. ನಾಚಿಕೊಂಡ ಇವನನ್ನು ಕಂಡ ಶ್ರೀಕೃಷ್ಣ 'ಹೋಗಿಬಾ' ಎಂದು ಅನುಜ್ಞೆ ನೀಡಿದ. ಆಗ ಅರ್ಜುನ ತಾನು ರಕ್ಷಣೆ ಮಾಡದಿದ್ದರೆ ಮುಂದೆ ಹೇಳುವ ರೀತಿಯಲ್ಲಿ ಪ್ರತಿಜ್ಞೆಯನ್ನು ಮಾಡಿದ.

ವಹ್ನಿಂ ಪ್ರವೇಕ್ಷ್ಯೇಽಶಕ್ತಶ್ಚೇದಿತ್ಯುಕ್ತ್ವಾ ಸರ್ವಯಾದವೈಃ ।
ಯಯೌ ನ ರಾಮಪ್ರದ್ಯುಮ್ನಾವನಿರುದ್ಧಂ ಚ ಕೇಶವಃ ।
ನ್ಯಯೋಜಯತ್ ತತ್ಸಹಾಯೇ ಯಶಸ್ತೇಷ್ವಭಿರಕ್ಷಿತುಮ್ ॥ ೨೨ ॥

ಪದಚ್ಛೇದ :- ವಹ್ನಿಂ, ಪ್ರವೇಕ್ಷ್ಯೇ, ಅಶಕ್ತಃ, ಚೇತ್, ಇತಿ, ಉಕ್ತ್ವಾ, ಸರ್ವಯಾದವೈಃ, ಯಯೌ, ನ, ರಾಮಪ್ರದ್ಯುಮ್ನೌ, ಅನಿರುದ್ಧಂ, ಚ, ಕೇಶವಃ, ನ್ಯಯೋಜಯತ್, ತತ್ಸಹಾಯೇ, ಯಶಃ, ತೇಷು, ಅಭಿರಕ್ಷಿತುಂ ।

ಅರ್ಥ :- ಅಶಕ್ತಃ ಚೇತ್ = ಬ್ರಾಹ್ಮಣ ಮಗನನ್ನು ರಕ್ಷಿಸುವಲ್ಲಿ ಅಸಮರ್ಥನಾದರೆ, ವಹ್ನಿಂ = ಬೆಂಕಿಯನ್ನು, ಪ್ರವೇಕ್ಷ್ಯೇ = ಪ್ರವೇಶಿಸುತ್ತೇನೆ,

ಇತಿ = ಎಂದು, ಉಕ್ತ್ವಾ = ಹೇಳಿ, ಸರ್ವಯಾದವೈಃ = ಪ್ರಮುಖರಾದ ಎಲ್ಲ ಯಾದವರೊಂದಿಗೆ, ಯಯೌ = ಹೋದನು, ಕೇಶವಶ್ಚ = ಶ್ರೀಕೃಷ್ಣನಾದರೂ, ತೇಷು = ಬಲರಾಮ - ಪ್ರದ್ಯುಮ್ನ - ಅನಿರುದ್ಧರಲ್ಲಿ, ಯಶಃ = ಕೀರ್ತಿಯನ್ನು, ಅಭಿರಕ್ಷಿತುಂ = ರಕ್ಷಿಸಲು, ತತ್ಸಹಾಯೇ = ಅರ್ಜುನನ ಸಹಾಯಕ್ಕೆ, ರಾಮಪ್ರದ್ಯುಮ್ನೌ = ಬಲರಾಮ ಪ್ರದ್ಯುಮ್ನರನ್ನು, ಚ = ಮತ್ತು, ಅನಿರುದ್ಧಂ = ಅನಿರುದ್ಧನನ್ನು, ನ ನ್ಯಯೋಜಯತ್ = ನಿಯೋಜಿಸಿ ಕಳುಹಿಸಲಿಲ್ಲ.

ತಾತ್ಪರ್ಯ :- ಅರ್ಜುನನು ತಾನು ಬ್ರಾಹ್ಮಣಸುತನನ್ನು ರಕ್ಷಿಸಲು ಶಕ್ತನಾಗದಿದ್ದರೆ ಅಗ್ನಿಪ್ರವೇಶ ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡಿ ಹೊರಟ. ಅವನ ಸಹಾಯಕ್ಕೆ ಯಾದವ ಪ್ರಮುಖರು ಹೊರಟರು. ಆದರೆ ಬಲರಾಮ, ಪ್ರದ್ಯುಮ್ನ ಮತ್ತು ಅನಿರುದ್ಧರನ್ನು ಶ್ರೀಕೃಷ್ಣ ಕಳುಹಿಸಲಿಲ್ಲ. ಏಕೆಂದರೆ ಅರ್ಜುನ ವಿಫಲನಾದಾಗ ಇವರ ಕೀರ್ತಿ ಹಾಳಾಗಬಾರದು ಎಂದು.

ಪ್ರಿಯೋ ಹಿ ನಿತರಾಂ ರಾಮಃ ಕೃಷ್ಣಸ್ಯಾನು ಚ ತಂ ಸುತಃ ॥ ೨೩ ॥

ಅನಿರುದ್ಧಃ ಕಾರ್ಷ್ಣಿಮನು ಪ್ರದ್ಯುಮ್ನಾದ್ ಯೋಽಜನಿಷ್ಟ ಹಿ ।
ರುಗ್ಮಿಪುತ್ರ್ಯಾಂ ರುಗ್ಮವತ್ಯಾಮಾಹೃತಾಯಾಂ ಸ್ವಯಂವರೇ ॥ ೨೪ ॥

ರತಿರೇವ ಹಿ ಯಾ ತಸ್ಯಾಂ ಜಾತೋಽಸೌ ಕಾಮನಂದನಃ ।
ಪೂರ್ವಮಪ್ಯನಿರುದ್ಧಾಖ್ಯೋ ವಿಷ್ಣೋಸ್ತನ್ನಾಮ್ನ ಏವಚ ॥ ೨೫ ॥

ಆವೇಶಯುಕ್ತೋ ಬಲವಾನ್ ರೂಪವಾನ್ ಸರ್ವಶಾಸ್ತ್ರವಿತ್ ।
ತಸ್ಮಾತ್ ತಾಂಸ್ತ್ರೀನೃತೇ ಕೃಷ್ಣಃ ಪಾರ್ಥಸಾಹಾಯ್ಯಕಾರಣಾತ್ ॥ ೨೬ ॥

ಪದಚ್ಛೇದ :- ಪ್ರಿಯಃ, ಹಿ, ನಿತರಾಂ, ರಾಮಃ, ಕೃಷ್ಣಸ್ಯ, ಅನು, ಚ, ತಂ, ಸುತಃ, ಅನಿರುದ್ಧಃ, ಕಾರ್ಷ್ಣಿಂ, ಅನು, ಪ್ರದ್ಯುಮ್ನಾತ್, ಯಃ, ಅಜನಿಷ್ಟ, ಹಿ, ರುಗ್ಮಿಪುತ್ರ್ಯಾಂ, ರುಗ್ಮವತ್ಯಾಂ, ಆಹೃತಾಯಾಂ, ಸ್ವಯಂವರೇ, ರತಿಃ, ಏವ, ಹಿ, ಯಾ, ತಸ್ಯಾಂ, ಜಾತಃ, ಅಸೌ, ಕಾಮನಂದನಃ, ಪೂರ್ವಂ, ಅಪಿ, ಅನಿರುದ್ಧಾಖ್ಯಃ, ವಿಷ್ಣೋಃ, ತನ್ನಾಮ್ನಃ, ಏವ, ಚ, ಆವೇಶಯುಕ್ತಃ, ಬಲವಾನ್, ರೂಪವಾನ್, ಸರ್ವಶಾಸ್ತ್ರವಿತ್, ತಸ್ಮಾತ್, ತಾನ್, ತ್ರೀನ್, ಋತೇ, ಕೃಷ್ಣಃ, ಪಾರ್ಥಸಾಹಾಯ್ಯಕಾರಣಾತ್, ನ್ಯಯೋಜಯತ್ ।

**ಅರ್ಥ :-** **ಕೃಷ್ಣಸ್ಯ** = ಶ್ರೀಕೃಷ್ಣನಿಗೆ, **ರಾಮಃ** = ಶೇಷವತಾರಿಯಾದ ಬಲರಾಮನು, **ನಿತರಾಂ** = ಅತ್ಯಂತ, **ಪ್ರಿಯಃ ಹಿ** = ಪ್ರಿಯನಷ್ಟೆ, **ತಂ ಅನು** = ಅವನ ಅನಂತರ, **ಸುತಃ** = ಮಗನಾದ ಪ್ರದ್ಯುಮ್ನ, **ಪ್ರಿಯಃ** = ಪ್ರಿಯನು, **ಕಾರ್ಷ್ಣಿಂ ಅನು** = ಪ್ರದ್ಯುಮ್ನನ ಅನಂತರ, **ಯಾ ಹಿ** = ಯಾರು ತಾನೇ, **ರತಿಃ ಏವ** = ಮೂಲ ರೂಪದಲ್ಲಿ ಕಾಮಪತ್ನಿಯಾದ ರತಿಯೇ ಆಗಿದ್ದಾಳೋ, **ತಸ್ಯಾಂ** = ಅಂತಹ, **ಸ್ವಯಂವರೇ** = ಸ್ವಯಂವರದಲ್ಲಿ, **ಆಹೃತಾಯಾಂ** = ಅಪಹರಿಸಲ್ಪಟ್ಟ, **ರುಗ್ಮಿಪುತ್ರ್ಯಾಂ** = ರುಗ್ಮಿಯ ಮಗಳಾದ, **ರುಗ್ಮವತ್ಯಾಂ** = ರುಗ್ಮವತಿಯಲ್ಲಿ, **ಯಃ ಹಿ** = ಯಾರು, **ಪ್ರದ್ಯುಮ್ನಾತ್ ಅಜನಿಷ್ಟ** = ಮೂಲ ರೂಪದಲ್ಲಿಯೂ ಪ್ರದ್ಯುಮ್ನನಿಂದ ಹುಟ್ಟಿದ್ದನೋ, **ಪೂರ್ವಂ ಅಪಿ** = ಮೂಲ ರೂಪದಲ್ಲಿಯೂ, **ಅನಿರುದ್ಧಾಖ್ಯಃ** = ಅನಿರುದ್ಧನೆಂದು ಹೆಸರುಳ್ಳ, **ಚ** = ಮತ್ತು, **ತನ್ನಾಮ್ನಃ ಏವ** = ಅನಿರುದ್ಧನೆಂದೆ ಹೆಸರುಳ್ಳ, **ವಿಷ್ಣೋಃ** = ಶ್ರೀಹರಿಯ, **ಆವೇಶಯುಕ್ತಃ** = ಆವೇಶವುಳ್ಳ ಆದುದರಿಂದಲೇ, **ಬಲವಾನ್** = ಬಲಿಷ್ಠನಾದ, **ರೂಪವಾನ್** = ಸುರೂಪವುಳ್ಳ, **ಸರ್ವಶಾಸ್ತ್ರವಿತ್** = ಎಲ್ಲ ಶಾಸ್ತ್ರಗಳನ್ನು ತಿಳಿದ, **ಕಾಮನಂದನಃ** = ಮನ್ಮಥಪುತ್ರನಾದ, **ಅಸೌ** = ಅನಿರುದ್ಧನು, **ಪ್ರದ್ಯುಮ್ನಾತ್** = ಶ್ರೀಕೃಷ್ಣನ ಮಗನಾದ ಪ್ರದ್ಯುಮ್ನನಿಂದ, **ಜಾತಃ** = ಹುಟ್ಟಿದನೋ ಅಂತಹ ಅನಿರುದ್ಧನು, **ಪ್ರಿಯಃ** = ಪ್ರಿಯನು, **ತಸ್ಮಾತ್** = ಆದುದರಿಂದ, **ಕೃಷ್ಣಃ** = ಶ್ರೀಕೃಷ್ಣನು, **ತಾನ್ ತ್ರೀನ್ ಋತೇ** = ಬಲರಾಮ, ಪ್ರದ್ಯುಮ್ನ ಮತ್ತು ಅನಿರುದ್ಧ ಈ ಮೂವರನ್ನು ಹೊರತು ಪಡಿಸಿ ಉಳಿದವರನ್ನು, **ಪಾರ್ಥಸಾಹಾಯ್ಯಕಾರಣಾತ್** = ಅರ್ಜುನನ ಸಹಾಯದ ಕಾರಣದಿಂದ, **ನ್ಯಯೋಜಯನ್** = ನಿಯಮಿಸಿದನು.

**ತಾತ್ಪರ್ಯ :-** ಬಲರಾಮ, ಪ್ರದ್ಯುಮ್ನ ಮತ್ತು ಅನಿರುದ್ಧ, ಈ ಮೂವರು ಶ್ರೀಕೃಷ್ಣನಿಗೆ ಅತ್ಯಂತ ಪ್ರೀತಿ ಪಾತ್ರರು. ಏಕೆಂದರೆ ಬಲರಾಮ ಶೇಷಾವತಾರಿ ಅವನು ಮೊದಲ ಪ್ರೀತಿಪಾತ್ರ. ಅವನ ನಂತರ ತನ್ನ ಮಗನಾದ ಮೂಲರೂಪದಲ್ಲಿಯೂ ಮಗನಾದ ಪ್ರದ್ಯುಮ್ನನಾಮಕ ತನ್ನ ಆವೇಶವುಳ್ಳ ಪ್ರದ್ಯುಮ್ನ ಪ್ರೀತಿಪಾತ್ರ. ಅವನ ನಂತರ ಅನಿರುದ್ಧ. ಈ ಅನಿರುದ್ಧ ಮೂಲರೂಪದಲ್ಲಿಯೂ ಅನಿರುದ್ಧ ಎಂದೇ ಹೆಸರುಳ್ಳವ. ಮತ್ತು ಪ್ರದ್ಯುಮ್ನನೆನಿಸುವ ಕಾಮನ ಮಗ ಮತ್ತು ಅನಿರುದ್ಧ ನಾಮಕ ಭಗವಂತನ ಆವೇಶವುಳ್ಳವ. ಆದುದರಿಂದಲೇ ಇವನು ಬಲಿಷ್ಠ, ಸೌಂದರ್ಯವುಳ್ಳವ ಮತ್ತು

ಸಕಲ ಶಾಸ್ತ್ರಗಳನ್ನು ತಿಳಿದವನು. ಇವನು ಪ್ರದ್ಯುಮ್ನ ಮತ್ತು ರುಗ್ಮವತಿಯರ ಮಗ. ಶ್ರೀಕೃಷ್ಣನ ಮೊಮ್ಮಗ. ರುಗ್ಮವತಿ ಮೂಲರೂಪದಲ್ಲಿ ಮನ್ಮಥ ಮಡದಿ ರತಿಯೇ ಆಗಿದ್ದಾಳೆ. ಈ ರುಗ್ಮವತಿಯನ್ನು ಪ್ರದ್ಯುಮ್ನನು ಸ್ವಯಂವರ ಮಂಟಪದಿಂದ ಬಲಾತ್ಕಾರದಿಂದ ಅಪಹರಿಸಿ ತಂದು ಮದುವೆಯಾಗಿದ್ದ. ಈ ಮೂವರು ಶ್ರೀಕೃಷ್ಣನಿಗೆ ಅತಿ ಪ್ರೀತಿಪಾತ್ರರು ಆದುದರಿಂದ ಅವರಿಗೆ ಅಪಕೀರ್ತಿ ಬರಬಾರದು ಎಂಬ ಉದ್ದೇಶದಿಂದ ಅವರನ್ನು ಪಾರ್ಥನ ಸಹಾಯಕ್ಕೆ ಕಳುಹಿಸಲಿಲ್ಲ. ಬೇರೆ ಯಾದವರನ್ನು ಕಳುಹಿಸಿದ.

**ನ್ಯಯೋಜಯತ್ ಸೂತಿಕಾಲೇ ಬ್ರಾಹ್ಮಣ್ಯಾಃ ಸ ಚ ಫಲ್ಗುನಃ ।**
**ಅಸ್ತ್ರೈಶ್ಚಕಾರ ದಿಗ್ಬಂಧಂ ಕುಮಾರೋಽಥಾಪಿತು ಕ್ಷಣಾತ್ ॥ ೨೭ ॥**

**ಅದರ್ಶನಂ ಯಯೌ ಪಾರ್ಥೋ ವಿಷಣ್ಣಃ ಸಹ ಯಾದವೈಃ ।**
**ಅಧಿಕ್ಷಿಪ್ತೋ ಬ್ರಾಹ್ಮಣೇನ ಯಯೌ ಯತ್ರ ಶ್ರಿಯಃಪತಿಃ ॥ ೨೮ ॥**

**ಪದಚ್ಛೇದ :- ಸೂತಿಕಾಲೇ, ಬ್ರಾಹ್ಮಣ್ಯಾಃ, ಸಃ, ಚ, ಫಲ್ಗುನಃ, ಅಸ್ತ್ರೈಃ, ಚಕಾರ, ದಿಗ್ಬಂಧಂ, ಕುಮಾರಃ, ಅಥಾಪಿ, ತು, ಕ್ಷಣಾತ್, ಅದರ್ಶನಂ, ಯಯೌ, ಪಾರ್ಥಃ, ವಿಷಣ್ಣಃ, ಸಹ , ಯಾದವೈಃ, ಅಧಿಕ್ಷಪ್ತಃ, ಬ್ರಾಹ್ಮಣೇನ, ಯಯೌ, ಯತ್ರ, ಶ್ರಿಯಃ, ಪತಿಃ ।**

**ಅರ್ಥ :- ಸಃ ಫಲ್ಗುನಃ ಚ** = ಆ ಅರ್ಜುನನಾದರೂ, **ಬ್ರಾಹ್ಮಣ್ಯಾಃ** = ಬ್ರಾಹ್ಮಣ ಸ್ತ್ರೀಯ, **ಸೂತಿಕಾಲೇ** = ಪ್ರಸವದ ಸಮಯದಲ್ಲಿ, **ಅಸ್ತ್ರೈಃ** = ಅಸ್ತ್ರಗಳಿಂದ, **ದಿಗ್ಬಂಧಂ** = ದಿಗ್ಬಂಧನವನ್ನು, **ಚಕಾರ** = ಮಾಡಿದನು, **ಅಥಾಪಿತು** = ಹಾಗಿದ್ದರೂ ಕೂಡ, **ಕುಮಾರಃ** = ಹುಟ್ಟಿದ ಮಗನು, **ಕ್ಷಣಾತ್** = ಕ್ಷಣಮಾತ್ರದಲ್ಲಿ, **ಅದರ್ಶನಂ ಯಯೌ** = ಕಣ್ಮರೆಯಾದನು, **ಬ್ರಾಹ್ಮಣೇನ** = ಬ್ರಾಹ್ಮಣನಿಂದ, **ಅಧಿಕ್ಷಿಪ್ತಃ** = ಆಕ್ಷೇಪ ಪೂರ್ವಕವಾಗಿ ನಿಂದಿಸಲ್ಪಟ್ಟ, **ಪಾರ್ಥಃ** = ಅರ್ಜುನನು, **ವಿಷಣ್ಣಃ** = ದುಃಖಗೊಂಡವನಾಗಿ, **ಯಾದವೈಃ ಸಹ** = ಯಾದವರೊಂದಿಗೆ, **ಯತ್ರ** = ಎಲ್ಲಿ, **ಶ್ರಿಯಃಪತಿಃ** = ಲಕ್ಷ್ಮೀಪತಿಯಾದ ಶ್ರೀಕೃಷ್ಣನಿರುವನೋ ಅಂತಹ ದ್ವಾರಕೆಗೆ, **ಯಯೌ** = ಹೋದನು.

**ತಾತ್ಪರ್ಯ :-** ಮಗುವನ್ನು ರಕ್ಷಿಸುತ್ತೇನೆಂದು ಹೋದ ಅರ್ಜುನ ಅಲ್ಲಿ ಆ ಬ್ರಾಹ್ಮಣಸ್ತ್ರೀಯ ಪ್ರಸವಕಾಲದಲ್ಲಿ ರಕ್ಷಣೆಗಾಗಿ ತಾನು ಸಾಧಿಸಿದ ಅಸ್ತ್ರಗಳಿಂದ

ದಿಗ್ಬಂಧನ ಮಾಡಿದ. ಯಾರು ಮಗುವನ್ನು ಅಪಹರಿಸಲಾರರು ಎಂದು ತಿಳಿದಿದ್ದ. ಆದರೆ ಹುಟ್ಟಿದ ಕ್ಷಣದಲ್ಲಿಯೇ ಮಗು ಕಣ್ಮರೆಯಾಯಿತು. ಆಗ ಆ ಬ್ರಾಹ್ಮಣ ಅರ್ಜುನನನ್ನು ಬಹಳಷ್ಟು ನಿಂದಿಸಿದ. ದುಃಖಿತನಾದ ಅರ್ಜುನ ಯಾದವರೊಂದಿಗೆ ಶ್ರೀಕೃಷ್ಣನಿರುವ ದ್ವಾರಕೆಗೆ ಹಿಂದಿರುಗಿದ.

**ವಹ್ನಿಂ ವಿವಿಕ್ಷಂತಮಮುಂ ನಿವಾರ್ಯ**
**ಯಯೌ ಸವಿಪ್ರಃ ಸಹಫಲ್ಗುನೋ ಹರಿಃ ।**
**ಆಶಾಮುದೀಚೀಂ ಬೃಹತಾ ರಥೇನ**
**ಕ್ಷಣೇನ ತೀರ್ತ್ವೈವ ಚ ಸಪ್ತವಾರಿಧೀನ್ ॥ ೨೯ ॥**

**ಪದಚ್ಛೇದ :- ವಹ್ನಿಂ, ವಿವಿಕ್ಷಂತಂ, ಅಮುಂ, ನಿವಾರ್ಯ, ಯಯೌ, ಸವಿಪ್ರಃ, ಸಹಫಾಲ್ಗುನಃ, ಹರಿಃ, ಆಶಾಂ, ಉದೀಚೀಂ, ಬೃಹತಾ, ರಥೇನ, ಕ್ಷಣೇನ, ತೀರ್ತ್ವಾ, ಏವ, ಚ, ಸಪ್ತವಾರಿಧೀನ್ ।**

**ಅರ್ಥ :- ವಹ್ನಿಂ** = ಬೆಂಕಿಯನ್ನು, **ವಿವಿಕ್ಷಂತಂ** = ಪ್ರವೇಶಿಸಲು ಬಯಸುತ್ತಿರುವ, **ಅಮುಂ** = ಅರ್ಜುನನನ್ನು, **ನಿವಾರ್ಯ** = ತಡೆದು, **ಹರಿಃ** = ಶ್ರೀಕೃಷ್ಣನು, **ಸವಿಪ್ರಃ** = ಬ್ರಾಹ್ಮಣನೊಂದಿಗೆ, **ಸಹಫಾಲ್ಗುನಃ** = ಅರ್ಜುನನ ಜೊತೆಗೆ ಕೂಡಿದವನಾಗಿ, **ಉದೀಚೀಂ ಆಶಾಂ** = ಉತ್ತರದಿಕ್ಕನ್ನು ಕುರಿತು, **ಬೃಹತಾ ರಥೇನ** = ದೊಡ್ಡ ರಥದೊಂದಿಗೆ, **ಕ್ಷಣೇನ ಏವ** = ಕ್ಷಣಮಾತ್ರದಲ್ಲಿಯೇ, **ಸಪ್ತವಾರಿಧೀನ್** = ಏಳು ಸಮುದ್ರಗಳನ್ನು, **ಚ** = ಮತ್ತು ಸಪ್ತದ್ವೀಪಗಳನ್ನು, **ತೀರ್ತ್ವಾ** = ದಾಟಿ, **ಯಯೌ** = ಹೋದನು.

**ತಾತ್ಪರ್ಯ :-** ಬ್ರಾಹ್ಮಣನ ಮಗನನ್ನು ರಕ್ಷಿಸಲಾಗಲಿಲ್ಲ. ಹೀಗಾಗಿ ಅರ್ಜುನ ತನ್ನ ಪ್ರತಿಜ್ಞೆಯಂತೆ ಅಗ್ನಿ ಪ್ರವೇಶಕ್ಕೆ ಸಿದ್ಧನಾದ. ಅವನನ್ನು ಶ್ರೀಕೃಷ್ಣ ತಡೆದ. ಅನಂತರ ಆಬ್ರಾಹ್ಮಣ ಮತ್ತು ಅರ್ಜುನನ ಜೊತೆಗೆ ದೊಡ್ಡ ರಥವನ್ನೇರಿ ಉತ್ತರ ದಿಕ್ಕಿಗೆ ಹೊರಟ. ಕ್ಷಣಮಾತ್ರದಲ್ಲಿ ಸಪ್ತಸಾಗರ ಸಪ್ತದ್ವೀಪಗಳನ್ನು ದಾಟಿದ.

**ದದುಶ್ಚ ಮಾರ್ಗಂ ಗಿರಯೋಽಬ್ಧಯಸ್ತಥಾ**
**ವಿದಾರ್ಯ ಚಕ್ರೇಣ ತಮೋಽಂಧಮೀಶಃ ।**

ಘನೋದಕಂ ಚಾಪ್ಯತಿತೀರ್ಯ ತತ್ರ
ದದರ್ಶ ಧಾಮ ಸ್ವಮನಂತವೀರ್ಯಃ ॥ ೩೦ ॥

ಪದಚ್ಛೇದ :- ದದುಃ, ಚ, ಮಾರ್ಗಂ, ಗಿರಯಃ, ಅಬ್ಧಯಃ, ತಥಾ, ವಿದಾರ್ಯ, ಚಕ್ರೇಣ, ತಮಃ, ಅಂಧಂ, ಈಶಃ, ಘನೋದಕಂ, ಚ, ಅಪಿ, ಅತಿತೀರ್ಯ, ತತ್ರ, ದದರ್ಶ, ಧಾಮ, ಸ್ವಂ, ಅನಂತವೀರ್ಯಃ।

ಅರ್ಥ :- **ಗಿರಿಯಃ** = ಸಪ್ತದ್ವೀಪದಲ್ಲಿರುವ ಪರ್ವತಗಳು, **ಚ** = ಮತ್ತು, **ಅಬ್ಧಯಃ** = ಸಮುದ್ರಗಳು, **ಮಾರ್ಗಂ** = ದಾರಿಯನ್ನು, **ದದುಃ** = ಕೊಟ್ಟವು, **ಈಶಃ** = ಸಮರ್ಥನಾದ ಶ್ರೀಕೃಷ್ಣನು, **ತಥಾ** = ಹಾಗೆಯೇ, **ಅಂಧಂ ತಮಃ** = ಗಾಢಾಂಧಕಾರವನ್ನು, **ಚಕ್ರೇಣ** = ಸುದರ್ಶನ ಚಕ್ರದಿಂದ, **ವಿದಾರ್ಯ** = ಸೀಳಿ, **ಘನೋದಕಂ ಚ** = ಘನೋದಕವನ್ನೂ ಕಂಡ, **ಅತಿತೀರ್ಯ** = ದಾಟಿ, **ತತ್ರ** = ಅಲ್ಲಿ, **ಅನಂತವೀರ್ಯಃ** = ಅನಂತ ಪರಾಕ್ರಮಿಯಾದ ಶ್ರೀಕೃಷ್ಣನು, **ಸ್ವಂ ಧಾಮ** = ತೇಜೋಮಯವಾದ ತನ್ನ ಸದನವನ್ನು, **ದದರ್ಶ** = ನೋಡಿದನು.

ತಾತ್ಪರ್ಯ :- ಶ್ರೀಕೃಷ್ಣ ಹೋಗುತ್ತಿರುವಾಗ ದಾರಿಯಲ್ಲಿ ಸಿಕ್ಕ ಪರ್ವತ, ಸಮುದ್ರಗಳು ತಾವೇ ದಾರಿಯನ್ನು ಬಿಟ್ಟು ಕೊಟ್ಟವು. ದಾರಿಯಲ್ಲಿ ಗಾಢವಾದ ಅಂಧಕಾರ ಸಿಕ್ಕಿತು. ಅದನ್ನು ಚಕ್ರದಿಂದ ಸೀಳಿ ಶ್ರೀಕೃಷ್ಣ ಮುಂದುವರೆದ. ಅವನು ಸರ್ವಸಮರ್ಥ. ಮುಂದೆ ಘನೋದಕವನ್ನು ದಾಟಿ ಅಲ್ಲಿ ತನ್ನ ಮಂದಿರವನ್ನು ಕಂಡ.

ಸಂಸ್ಥಾಪ್ಯ ದೂರೇ ಸರಥಂ ಸವಿಪ್ರಂ
ಪಾರ್ಥಂ ಸ್ವರೂಪೇ ದ್ವಿಚತುಷ್ಕಬಾಹೌ ।
ಸಮಸ್ತರತ್ನೋಜ್ಜ್ವಲದಿವ್ಯಭೂಷಣೇ
ವಿವೇಶ ನಿತ್ಯೋರುಗುಣಾರ್ಣವೇ ಪ್ರಭುಃ ॥ ೩೧ ॥

ಸಹಸ್ರಮೂರ್ಧನ್ಯುರುಶೇಷಭೋಗ
ಆಸೀನರೂಪೇಽಮಿತಸೂರ್ಯದೀಧಿತೌ ।
ರಮಾಸಹಾಯೇ ತಟಿದುಜ್ಜ್ವಲಾಂಬರೇ
ಮುಕ್ತೈರ್ವಿರಿಂಚಾದಿಭಿರರ್ಚಿತೇ ಸದಾ ॥ ೩೨ ॥

**ಪದಚ್ಛೇದ :- ಸಂಸ್ಥಾಪ್ಯ, ದೂರೇ, ಸರಥಂ, ಸವಿಪ್ರಂ, ಪಾರ್ಥಂ, ಸ್ವರೂಪೇ, ದ್ವಿಚತುಷ್ಕಬಾಹೌ, ಸಮಸ್ತರತ್ನೋಜ್ವಲದಿವ್ಯಭೂಷಣೇ, ವಿವೇಶ, ನಿತ್ಯೋರುಗುಣಾರ್ಣವೇ, ಪ್ರಭುಃ, ಸಹಸ್ರಮೂರ್ಧನಿ, ಉರುಶೇಷಭೋಗೇ, ಆಸೀನರೂಪೇ, ಅಮಿತಸೂರ್ಯಧೀಧಿತೌ, ರಮಾಸಹಾಯೇ, ತಟಿದುಜ್ವಲಾಂಬರೇ, ಮುಕ್ತೈಃ, ವಿರಿಂಚಾದಿಭಿಃ, ಅರ್ಚಿತೇ, ಸದಾ ।**

**ಅರ್ಥ :- ಪ್ರಭುಃ** = ಸಮರ್ಥನಾದ ಶ್ರೀಕೃಷ್ಣನು, **ಸರಥಂ** = ರಥದಿಂದ ಕೂಡಿರುವ, **ಸವಿಪ್ರಂ** = ಬ್ರಾಹ್ಮಣನೊಂದಿಗೆ ಇರುವ, **ಪಾರ್ಥಂ** = ಅರ್ಜುನನನ್ನು, **ದೂರೇ** = ದೂರದಲ್ಲಿ, **ಸಂಸ್ಥಾಪ್ಯ** = ಇರಿಸಿ, **ದಿಚತುಷ್ಕಬಾಹೌ** = ಎಂಟು ಬಾಹುಗಳುಳ್ಳ, **ಸಮಸ್ತರತ್ನೋಜ್ವಲದಿವ್ಯಭೂಷಣೇ** = ಎಲ್ಲ ರತ್ನಗಳಿಂದ ಪ್ರಕಾಶಿಸುವ ದಿವ್ಯವಾದ ಆಭರಣಗಳುಳ್ಳ, **ನಿತ್ಯೋರುಗುಣಾರ್ಣವೇ** = ನಿತ್ಯವಾದ ಉತ್ಕೃಷ್ಟವಾದ ಗುಣಗಳಿಂದ ಸಮುದ್ರದಂತಿರುವ, **ಸಹಸ್ರಮೂರ್ಧನಿ ಉರುಶೇಷಭೋಗೇ** = ಸಾವಿರ ತಲೆಯವನಾದ ಶ್ರೇಷ್ಠನಾದ ಶೇಷನ ಶರೀರದಲ್ಲಿ, **ಆಸೀನರೂಪೇ** = ಮಲಗಿದ ಸ್ವರೂಪವುಳ್ಳ, **ಅಮಿತ ಸೂರ್ಯದೀಧಿತೌ** = ಅನಂತ ಸೂರ್ಯರ ಕಾಂತಿಯಂತೆ ಕಾಂತಿಯುಳ್ಳ, **ರಮಾಸಹಾಯೇ** = ಲಕ್ಷ್ಮಿ ಸಮೇತನಾದ, **ತಟಿದುಜ್ವಲಾಂಬರೇ** = ಮಿಂಚಿನಂತೆ ಹೊಳೆಯುವ ಪೀತಾಂಬರವುಳ್ಳ, **ವಿರಿಂಚಾದಿಭಿಃ** = ಬ್ರಹ್ಮನೇ ಮೊದಲಾದ, **ಮುಕ್ತೈಃ** = ಮುಕ್ತರಿಂದ, **ಸದಾ** = ಯಾವಾಗಲೂ, **ಅರ್ಚಿತೇ** = ಅರ್ಚಿಸಲ್ಪಟ್ಟ, **ಸ್ವರೂಪೇ** = ತನ್ನ ಸ್ವರೂಪದಲ್ಲಿ, **ವಿವೇಶ** = ಪ್ರವೇಶ ಮಾಡಿದನು.

**ತಾತ್ಪರ್ಯ :-** ಅನಂತಾಸನದಲ್ಲಿ ಶ್ರೀಕೃಷ್ಣನು ಈ ಬ್ರಾಹ್ಮಣ ಮತ್ತು ಅರ್ಜುನನನ್ನು ರಥದೊಂದಿಗೆ ದೂರದಲ್ಲಿ ನಿಲ್ಲಿಸಿದ. ಅವರಿಗೆ ಒಳಪ್ರವೇಶಿಸುವ ಅರ್ಹತೆ ಇನ್ನೂ ಬಂದಿಲ್ಲ. ತಾನು ಪ್ರವೇಶಿಸಿ, ತನ್ನದ್ದೆ ಆದ ಅಲ್ಲಿರುವ ರೂಪವನ್ನು ಪ್ರವೇಶಿಸಿದ. ಆ ರೂಪ ಹೇಗಿತ್ತು ಎಂದರೆ ಅದು ಅಷ್ಟಬಾಹುವಿನಿಂದ ಕೂಡಿದ ರೂಪ, ಒಳ್ಳೆಯ ರತ್ನ ಖಚಿತವಾದ ಆಭರಣಗಳಿಂದ ಭೂಷಿತವಾಗಿತ್ತು, ನಿತ್ಯವಾದ ದೋಷದ ಸಂಪರ್ಕವೂ ಇಲ್ಲದ ಗುಣಗಳಿಂದ ತುಂಬಿತ್ತು. ಸಾವಿರ ತಲೆಯುಳ್ಳ ಶೇಷನ ಮೇಲೆ ಪವಡಿಸಿದ ರೂಪವದು. ಅನಂತ ಸೂರ್ಯರ ಕಾಂತಿಯಂತೆ ಹೊಳೆಯುತ್ತಿತ್ತು. ಮಿಂಚಿನಂತೆ

ಹೊಳೆಯುವ ಪೀತಾಂಬರಧಾರಿರೂಪ. ಮುಕ್ತರಾದ ಬ್ರಹ್ಮಾದಿಗಳು ಸದಾ ಅರ್ಚಿಸುತ್ತಿರುವ ರಮಾಸಹಿತವಾದ ಆ ರೂಪ ಅದನ್ನು ಶ್ರೀಕೃಷ್ಣ ಪ್ರವೇಶಿಸಿದ.

ಸ್ಥಿತ್ವೈಕರೂಪೇಣ ಮುಹೂರ್ತಮೀಶ್ವರೋ
ವಿನಿರ್ಯಯೌ ವಿಪ್ರಸುತಾನ್ ಪ್ರಗೃಹ್ಯ ।
ಸುನಂದನಂದಾದಯ ಏವ ಪಾರ್ಷದಾ-
ಸ್ತೇ ವೈಷ್ಣವಾ ಭೂಮಿತಳೇ ಪ್ರಜಾತಾಃ ॥ ೩೩ ॥

ಪದಚ್ಛೇದ :- ಸ್ಥಿತ್ವಾ, ಏಕರೂಪೇಣ, ಮುಹೂರ್ತಮ್, ಈಶ್ವರಃ, ವಿನಿರ್ಯಯೌ, ವಿಪ್ರಸುತಾನ್, ಪ್ರಗೃಹ್ಯ, ಸುನಂದನಂದಾದಯಃ, ಏವ, ಪಾರ್ಷದಾಃ, ತೇ, ವೈಷ್ಣವಾಃ, ಭೂಮಿತಲೇ, ಪ್ರಜಾತಾಃ ।

ಅರ್ಥ :- ಈಶ್ವರಃ = ಸಮರ್ಥನಾದ ಶ್ರೀಕೃಷ್ಣನು, ಮುಹೂರ್ತಂ = ಒಂದು ಮುಹೂರ್ತಕಾಲ, ಏಕರೂಪೇಣ ಸ್ಥಿತ್ವಾ = ಮೂಲರೂಪದೊಂದಿಗೆ ಏಕರೂಪವಾಗಿದ್ದು, ಸುನಂದನಂದಾದಯಃ = ಸುನಂದ ನಂದನೇ ಮೊದಲಾದ, ವೈಷ್ಣವಾಃ ಪಾರ್ಷದಾಃ ಏವ = ಭಗವಂತನ ಸೇವಕರೇ, ಭೂಮಿತಲೇ = ಭೂಲೋಕದಲ್ಲಿ, ಪ್ರಜಾತಾಃ = ಹುಟ್ಟಿದ್ದರೋ ಅಂತಹ, ವಿಪ್ರಸುತಾನ್ = ನಾಲ್ಕು ಮಂದಿ ಬ್ರಾಹ್ಮಣನ ಮಕ್ಕಳನ್ನು, ಪ್ರಗೃಹ್ಯ = ಹಿಡಿದುಕೊಂಡು, ವಿನಿರ್ಯಯೌ = ಭೂಮಿಗೆ ಬಂದನು.

ತಾತ್ಪರ್ಯ :- ಶ್ರೀಕೃಷ್ಣ ತನ್ನ ಮೂಲರೂಪದೊಂದಿಗೆ ಏಕೀಭೂತನಾಗಿ ಒಂದು ಮುಹೂರ್ತಕಾಲ ಇದ್ದ. ಅನಂತರ ತನ್ನ ಸೇವಕರಾದ ಯಾವ ನಂದ ಸುನಂದ, ಕುಮುದ, ಕುಮುದೇಕ್ಷಣರು ಭೂಮಿಯಲ್ಲಿ ಈ ಬ್ರಾಹ್ಮಣನ ಮಕ್ಕಳಾಗಿ ಹುಟ್ಟಿದ್ದರೋ ಅಂತಹ ನಾಲ್ಕು ಮಕ್ಕಳನ್ನು ಹಿಡಿದುಕೊಂಡು ಭೂಲೋಕದತ್ತ ಹೊರಟನು.

ದರ್ಪಂ ನಿಹಂತುಂ ಹರಿರರ್ಜುನಸ್ಯ
ಸಮಾನಯದ್ ವಿಪ್ರಸುತಾನ್ ಪರೇಶಃ ।
ಪ್ರೀತಿರ್ಮಹತ್ಯೇವ ಯತೋಽರ್ಜುನೇ ಹರೇಃ
ಸಂಶಿಕ್ಷಯಾಮಾಸ ತತಃ ಸ ಏನಮ್ ॥ ೩೪ ॥

ಪದಚ್ಛೇದ :- ದರ್ಪಂ, ನಿಹಂತುಂ, ಹರಿಃ, ಅರ್ಜುನಸ್ಯ, ಸಮಾನಯತ್, ವಿಪ್ರಸುತಾನ್, ಪರೇಶಃ, ಪ್ರೀತಿಃ, ಮಹತೀ, ಏವ, ಯತಃ, ಅರ್ಜುನೇ, ಹರೇಃ, ಸಂಶಿಕ್ಷಯಾಮಾಸ, ತತಃ, ಸಃ, ಏನಂ ।

ಅರ್ಥ :- ಹರಿಃ = ಶ್ರೀಕೃಷ್ಣನು, ಅರ್ಜುನಸ್ಯ = ಅರ್ಜುನನ, ದರ್ಪಂ = ಅಹಂಕಾರವನ್ನು, ನಿಹಂತುಂ = ನಾಶಪಡಿಸಲು, ವಿಪ್ರಸುತಾನ್ = ಬ್ರಾಹ್ಮಣನ ಮಕ್ಕಳನ್ನು, ಸಮಾನಯತ್ = ಕರೆದೊಯ್ದನು, ಯತಃ = ಯಾವ ಕಾರಣದಿಂದ, ಹರೇಃ = ಶ್ರೀಕೃಷ್ಣನಿಗೆ, ಅರ್ಜುನೇ = ಅರ್ಜುನನಲ್ಲಿ, ಪ್ರೀತಿಃ = ಪ್ರೀತಿಯು, ಮಹತೀ ಏವ = ಅತ್ಯಂತ ಹೆಚ್ಚಾದದ್ದೇ, ತತಃ = ಆ ಕಾರಣದಿಂದ, ಪರೇಶಃ = ಶ್ರೇಷ್ಠರಾದ ಬ್ರಹ್ಮಾದಿಗಳಿಗೂ ಒಡೆಯನಾದ, ಸಃ = ಶ್ರೀಕೃಷ್ಣನು, ಏನಂ = ಈ ಅರ್ಜುನನನ್ನು, ಸಂಶಿಕ್ಷಯಾಮಾಸ = ಚೆನ್ನಾಗಿ ಶಿಕ್ಷಣ ಕೊಟ್ಟನು.

ತಾತ್ಪರ್ಯ :- ತಾನೇ ಎಲ್ಲ ಮಾಡುವೆ ಎಂಬ ಅಹಂಕಾರ ಅರ್ಜುನನಿಗೆ. ಅರ್ಜುನನ ಮೇಲೆ ಅಪಾರ ಪ್ರೀತಿ ಶ್ರೀಕೃಷ್ಣನಿಗೆ. ಹೀಗಾಗಿ ಅರ್ಜುನನ ಅಹಂಕಾರ ನಾಶಮಾಡಿ ಅವನನ್ನು ಸರಿದಾರಿಗೆ ತರುವುದಕ್ಕೋಸ್ಕರ ಶ್ರೀಕೃಷ್ಣ ಈ ಬ್ರಾಹ್ಮಣ ಮಕ್ಕಳನ್ನು ಕಣ್ಮರೆ ಮಾಡಿ ಪುನಃ ತರುವ ಮೂಲಕ ಅರ್ಜುನನಿಗೆ ಒಳ್ಳೆಯ ಪಾಠ ಕಲಿಸಿದ.

**ಅಪ್ರಾಕೃತಾತ್ ಸದನಾದ್ ವಾಸುದೇವೋ**
**ನಿಸ್ಸೃತ್ಯ ಸೂರ್ಯಾಧಿಕಲಕ್ಷದೀಧಿತೇಃ ।**
**ರಥಂ ಸಮಾರುಹ್ಯ ಸಪಾರ್ಥವಿಪ್ರ**
**ಆಗಾತ್ ಸುತಾಂಶ್ಚೈವ ದದೌ ದ್ವಿಜಾಯ ॥ ೩೫ ॥**

ಪದಚ್ಛೇದ :- ಅಪ್ರಾಕೃತಾತ್, ಸದನಾತ್, ವಾಸುದೇವಃ, ನಿಸ್ಸೃತ್ಯ, ಸೂರ್ಯಾಧಿ ಕಲಕ್ಷದೀಧಿತೇಃ, ರಥಂ, ಸಮಾರುಹ್ಯ, ಸಪಾರ್ಥವಿಪ್ರಃ, ಆಗಾತ್, ಸುತಾನ್, ಚ, ಏವ, ದದೌ, ದ್ವಿಜಾಯ ॥

ಅರ್ಥ :- ಸೂರ್ಯಾಧಿಕಲಕ್ಷದೀಧಿತೇಃ = ಲಕ್ಷಾನುಗಟ್ಟಲೆ ಸೂರ್ಯರಿಗಿಂತ ಹೆಚ್ಚಿನ ಕಾಂತಿಯುಳ್ಳ, ಅಪ್ರಾಕೃತಾತ್ = ಪ್ರಾಕೃತವಿಲ್ಲದ, ಸದನಾತ್ = ಅನಂತ ಸದನದಿಂದ, ವಾಸುದೇವಃ = ಶ್ರೀಕೃಷ್ಣನು, ನಿಸ್ಸೃತ್ಯ = ಹೊರಬಂದು,

**ರಥಂ** = ರಥವನ್ನು, **ಸಪಾರ್ಥವಿಪ್ರಃ** = ಅರ್ಜುನ ಮತ್ತು ಆ ಬ್ರಾಹ್ಮಣನೊಂದಿಗೆ, **ಸಮಾರುಹ್ಯ** = ಏರಿ, **ಆಗಾತ್** = ಭೂಲೋಕಕ್ಕೆ ಬಂದನು, **ಚ** = ಮತ್ತು, **ಸುತಾನ್** = ಆ ಮಕ್ಕಳನ್ನು, **ದ್ವಿಜಾಯ ಏವ** = ಆ ಬ್ರಾಹ್ಮಣನಿಗೇ, **ದದೌ** = ಕೊಟ್ಟನು.

ತಾತ್ಪರ್ಯ :- ಭಗವಂತನ ಲೋಕ ಲಕ್ಷಾನುಗಟ್ಟಲೆ ಸೂರ್ಯರ ಕಾಂತಿಯನ್ನೂ ಮೀರಿಸುತ್ತದೆ. ಅಂತಹ ಸದನದಿಂದ ಹೊರಬಂದ ಶ್ರೀಕೃಷ್ಣ, ಅರ್ಜುನ ಮತ್ತು ಬ್ರಾಹ್ಮಣನ ಜೊತೆಗೆ ರಥವನ್ನೇರಿ ಮತ್ತೆ ಭೂಲೋಕಕ್ಕೆ ಬಂದ. ಆ ಮಕ್ಕಳನ್ನು ಆ ಬ್ರಾಹ್ಮಣನಿಗೇನೆ ಕೊಟ್ಟ.

**ಲೋಕಶಿಕ್ಷಾರ್ಥಮೇವಾಸೌ ಪ್ರಾಯಶ್ಚಿತ್ತಂ ಚ ಚಾಲನೇ ।**
**ಚಕ್ರೇ ಸಾರ್ಧಮುಹೂರ್ತೇನ ಸಮಾಗಮ್ಯ ಪುನರ್ಮಖಮ್ ॥ ೩೬ ॥**

ಪದಚ್ಛೇದ :- **ಲೋಕಶಿಕ್ಷಾರ್ಥಂ, ಏವ, ಅಸೌ, ಪ್ರಾಯಶ್ಚಿತ್ತಂ, ಚ, ಚಾಲನೇ, ಚಕ್ರೇ, ಸಾರ್ಧ, ಮುಹೂರ್ತೇನ, ಸಮಾಗಮ್ಯ, ಮನಃ, ಮಖಂ ।**

ಅರ್ಥ :- **ಅಸೌ** = ಈ ಶ್ರೀಕೃಷ್ಣನು, **ಸಾರ್ಧಮುಹೂರ್ತೇನ** = ಮೂರು ಘಳಿಗೆಗಳಲ್ಲಿ, **ಸಮಾಗಮ್ಯ** = ತಿರುಗಿ ಬಂದು, **ಚಾಲನೇ** = ಯಜ್ಞದ ನಿಯಮ ಭಂಗಕ್ಕೋಸ್ಕರ, **ಪ್ರಾಯಶ್ಚಿತ್ತಂ ಚ** = ಪ್ರಾಯಶ್ಚಿತ್ತವನ್ನು ಕೂಡ, **ಲೋಕಶಿಕ್ಷಾರ್ಥವೇವ** = ಜನರ ಶಿಕ್ಷಣಕೋಸ್ಕರವೇ, **ಚಕ್ರೇ** = ಮಾಡಿದನು, **ಪುನಃ** = ಮತ್ತೆ, **ಮಖಂ ಚ** = ಯಾಗವನ್ನೂ ಕೂಡ, **ಚಕ್ರೇ** = ಮಾಡಿದನು.

ತಾತ್ಪರ್ಯ :- ಶ್ರೀಕೃಷ್ಣ ಕೇವಲ ಮೂರು ಘಳಿಗೆಯಲ್ಲಿ ತನ್ನ ಲೋಕಕ್ಕೆ ಹೋಗಿ ಮಕ್ಕಳನ್ನು ಕರೆದುಕೊಂಡು ಹಿಂದಿರುಗಿದ್ದಾನೆ. ಯಜ್ಞ ದೀಕ್ಷಿತ ಯಜ್ಞದ ಸ್ಥಳವನ್ನು ಬಿಟ್ಟು ಕದಲುವಂತಿಲ್ಲ. ಆದರೂ ಕೃಷ್ಣ ಹೋಗಿ ಬಂದ. ಈ ದೋಷ ಪರಿಹಾರಕ್ಕಾಗಿ ಪ್ರಾಯಶ್ಚಿತ್ತ ಕರ್ಮವನ್ನು ಆಚರಿಸಿದ. ಶ್ರೀಕೃಷ್ಣನಿಗೆ ಯಾವುದೇ ದೋಷವಿಲ್ಲದಿದ್ದರೂ ಲೋಕ ಶಿಕ್ಷಣಕ್ಕಾಗಿ ಈ ರೀತಿ ಮಾಡಿದ. ನಂತರ ಯಾಗವನ್ನು ಮುಂದುವರಿಸಿ ಮುಗಿಸಿದ.

**ಬ್ರಹ್ಮಾದೀನಾಗತಾಂಶ್ಚೈವ ಸದಾ ಸ್ವಪರಿಚಾರಕಾನ್ ।**
**ಪೂಜಯಿತ್ವಾऽಭ್ಯನುಜ್ಞಾಯ ಬ್ರಾಹ್ಮಣಾನಪ್ಯಪೂಜಯತ್ ॥ ೩೭ ॥**

**ಪದಚ್ಛೇದ** :- ಬ್ರಹ್ಮಾದೀನ್, ಆಗತಾನ್, ಚ, ಏವ, ಸದಾ, ಸ್ವಪರಿಚಾರಕಾನ್, ಪೂಜಯಿತ್ವಾ, ಅಭ್ಯನುಜ್ಞಾಯ, ಬ್ರಾಹ್ಮಣಾನ್, ಅಪಿ, ಅಪೂಜಯತ್ ।

**ಅರ್ಥ** :- **ಸದಾ** = ಯಾವಾಗಲೂ, **ಸ್ವಪರಿಚಾರಕಾನ್ ಏವ** = ತನ್ನ ಸೇವಕರೇ ಆದ, **ಆಗತಾನ್** = ಬಂದಿರುವ, **ಬ್ರಹ್ಮಾದೀನ್ ಚ** = ಬ್ರಹ್ಮನೇ ಮೊದಲಾದ ದೇವತೆಗಳನ್ನು ಕೂಡ, **ಪೂಜಯಿತ್ವಾ ಅಭ್ಯನುಜ್ಞಾಯ** = ಬಂದದಕ್ಕೆ ಅಭಿನಂದಿಸಿ ಹೊಗಲು ಅನುಮತಿಸಿ, **ಬ್ರಾಹ್ಮಣಾನ್ ಅಪಿ** = ತನ್ನ ಪೂಜಕರೇ ಆದ ಬ್ರಾಹ್ಮಣರನ್ನೂ ಕೂಡ, **ಅಪೂಜಯತ್** = ಪೂಜಿಸಿದನು.

**ತಾತ್ಪರ್ಯ** :- ಯಜ್ಞಕ್ಕೆ ಬಂದಿದ್ದ ಬ್ರಹ್ಮಾದಿದೇವತೆಗಳು ಸದಾ ಭಗವಂತನ ಸೇವಕರೇ. ಹಾಗಿದ್ದರೂ ಅವರನ್ನು ಭಗವಂತ ಶ್ರೀಕೃಷ್ಣ ಸತ್ಕರಿಸಿದ. ಅವರು ಯಾಗಕ್ಕೆ ಬಂದದಕ್ಕೆ ಅಭಿನಂದಿಸಿ, ಹೋಗಲು ಅನುಮತಿ ನೀಡಿದ. ಅನಂತರ ಬ್ರಾಹ್ಮಣರನ್ನೂ ಪೂಜಿಸಿದ. ಇದೂ ಕೂಡ ಲೋಕ ಶಿಕ್ಷಣವೇ.

**ಸಸ್ನಾವವಭೃಥಂ ಕೃಷ್ಣಃ ಸದಾರಃ ಸಸುಹೃಜ್ಜನಃ ।**
**ಆಯಾಂತಂ ದ್ವಾರಕಾಂ ಕೃಷ್ಣಂ ದಂತವಕ್ರೋ ರುರೋಧ ಹ ॥ ೩೮ ॥**

**ಪದಚ್ಛೇದ** :- ಸಸ್ನೌ, ಅವಭೃಥಂ, ಕೃಷ್ಣಃ, ಸದಾರಃ, ಸಸುಹೃಜ್ಜನಃ, ಆಯಾಂತಂ, ದ್ವಾರಕಾಂ, ಕೃಷ್ಣಂ, ದಂತವಕ್ರಃ, ರುರೋಧ, ಹ ।

**ಅರ್ಥ** :- **ಸದಾರಃ** = ಹೆಂಡತಿಯಿಂದ ಕೂಡಿದ, **ಸಸುಹೃಜ್ಜನಃ** = ಎಲ್ಲ ಮಿತ್ರಜನರಿಂದ ಕೂಡಿದ, **ಕೃಷ್ಣಃ** = ಶ್ರೀಕೃಷ್ಣನು, **ಅವಭೃಥಂ ಸಸ್ನೌ** = ಅವಭೃಥ ಸ್ನಾನವನ್ನು ಮಾಡಿದ, **ದ್ವಾರಕಾಂ** = ದ್ವಾರಕೆಯನ್ನು ಕುರಿತು, **ಆಯಾಂತಂ** = ಬರುತ್ತಿರುವ, **ಕೃಷ್ಣಂ** = ಕೃಷ್ಣನನ್ನು, **ದಂತವಕ್ರಃ** = ದಂತವಕ್ರನು, **ರುರೋಧ ಹ** = ತಡೆದನಷ್ಟೆ.

**ತಾತ್ಪರ್ಯ** :- ಯಜ್ಞನ ಕೊನೆಗೆ ಯಮುನೆಯಲ್ಲಿ ಹೆಂಡತಿ ಮಿತ್ರರಿಂದ ಕೂಡಿ ಶ್ರೀಕೃಷ್ಣ ಅವಭೃಥ ಸ್ನಾನ ಮಾಡಿದ. ನಂತರ ದ್ವಾರಕೆಗೆ ಹೊರಟ. ಆಗ ಅವನನ್ನು ದಂತವಕ್ರ ಪಡೆದ.

**ಜಘಾನ ಗದಯಾ ಕೃಷ್ಣಸ್ತಂ ಕ್ಷಣಾತ್ ಸವಿಡೂರಥಮ್ ।**
**ವಿಡೂರಥಸ್ತಮೋಽಗಚ್ಛದ್ ದಂತವಕ್ರೇ ಚ ಯೋಽಸುರಃ ॥ ೩೯ ॥**

**ಹರೇಃ ಪಾರ್ಷದಃ ಕ್ಷಿಪ್ರಂ ಹರಿಮೇವ ಸಮಾಶ್ರಿತಃ ।**
**ಕೃಷ್ಣೇ ಪ್ರಾಪ್ತೇ ಸ್ವಲೋಕಂ ಚ ನಿಸ್ಸೃತ್ಯಾಸ್ಮಾತ್ ಸ್ವರೂಪತಃ ।**
**ಏಕೀಭಾವಂ ಸ್ವರೂಪೇಣ ದ್ವಾರಪೇಣ ಗಮಿಷ್ಯತಿ ।। ೪೦ ।।**

ಪದಚ್ಛೇದ :- ಜಘಾನ, ಗದಯಾ, ಕೃಷ್ಣಃ, ತಂ, ಕ್ಷಣಾತ್, ಸವಿಢೂರಥಂ, ವಿಢೂರಥಃ, ತಮಃ, ಅಗಚ್ಛತ್, ದಂತವಕ್ರೇ, ಚ, ಯಃ, ಅಸುರಃ, ಹರೇಃ, ಪಾರ್ಷದಃ, ಕ್ಷಿಪ್ರಂ, ಹರಿಂ, ಏವ, ಸಮಾಶ್ರಿತಃ, ಕೃಷ್ಣೇ, ಪ್ರಾಪ್ತೇ, ಸ್ವಲೋಕಂ, ಚ, ನಿಸ್ಸೃತ್ಯ, ಅಸ್ಮಾತ್, ಸ್ವರೂಪತಃ, ಏಕೀಭಾವಂ, ಸ್ವರೂಪೇಣ, ದ್ವಾರಪೇಣ, ಗಮಿಷ್ಯತಿ ।

**ಅರ್ಥ :-** **ಕೃಷ್ಣಃ** = ಶ್ರೀಕೃಷ್ಣನು, **ಸವಿಢೂರಥಂ** = ತಮ್ಮನಾದ ವಿಡೂರಥನೊಂದಿಗೆ ಕೂಡಿದ, **ತಂ** = ಆ ದಂತವಕ್ರನನ್ನು, **ಗದಯಾ** = ಗದೆಯಿಂದ, **ಜಘಾನ** = ಕೊಂದನು, **ವಿಢೂರಥಃ** = ವಿಡೂರಥನು, **ತಮಃ** = ತಮಸ್ಸನ್ನು ಕುರಿತು, **ಅಗಚ್ಛತ್** = ಹೋದನು, **ಚ** = ಮತ್ತು, **ದಂತವಕ್ರೇ** = ದಂತವಕ್ರನಲ್ಲಿ, **ಯಃ** = ಯಾವ, **ಅಸುರಃ** = ಹಿರಣ್ಯಾಕ್ಷನೆಂಬ ಅಸುರನೋ ಅವನು, **ತಮಃ** = ತಮಸ್ಸನ್ನು ಕುರಿತು, **ಅಗಚ್ಛತ್** = ಹೋದನು, **ಹರೇಃ** = ಶ್ರೀಹರಿಯ, **ಪಾರ್ಷದಃ** = ಸೇವಕನಾದ ವಿಜಯನು, **ಕ್ಷಿಪ್ರಂ** = ಶೀಘ್ರವಾಗಿ, **ಹರಿ ಏವ** = ಶ್ರೀಕೃಷ್ಣನನ್ನೆ, **ಸಮಾಶ್ರಿತಃ** = ಆಶ್ರಯಿಸಿದನು, **ಚ** = ಮತ್ತು, **ಕೃಷ್ಣೇ** = ಶ್ರೀಕೃಷ್ಣನು, **ಸ್ವಲೋಕಂ** = ವೈಕುಂಠವನ್ನು, **ಪ್ರಾಪ್ತೇ ಸತಿ** = ಹೊಂದುತ್ತಿರಲು, **ಅಸ್ಮಾತ್** = ಕೃಷ್ಣನಿಂದ, **ಸ್ವರೂಪತಃ** = ದಂತವಕ್ರ ಸ್ವರೂಪದಿಂದ, **ನಿಃಸೃತ್ತ** = ಹೊರಬಂದು, **ಸ್ವರೂಪೇಣ** = ತನ್ನ ಮೂಲರೂಪವಾದ, **ದ್ವಾರಪೇಣ** = ದ್ವಾರಪಾಲಕ ವಿಜಯರೂಪದಿಂದ, **ಏಕೀಭಾವಂ** = ಐಕ್ಯವನ್ನು, **ಗಮಿಷ್ಯತಿ** = ಹೊಂದುತ್ತಾನೆ.

**ತಾತ್ಪರ್ಯ :-** ಅಡ್ಡಬಂದ ದಂತವಕ್ರನನ್ನು, ಅವನ ತಮ್ಮನಾದ ವಿಡೂರಥನ ಜೊತೆಗೆ ಗದೆಯಿಂದ ಹೊಡೆದು ಕೊಂದ ಶ್ರೀಕೃಷ್ಣ. ವಿಡೂರಥ ಅಸುರನಾದುದರಿಂದ ಅಂಧಂತಮಸ್ಸಿಗೆ ಹೋದ. ದಂತವಕ್ರನಲ್ಲಿ ಹಿರಣ್ಯಾಕ್ಷ ಎಂಬ ಅಸುರನಿದ್ದ. ಅವನು ತಮಸ್ಸಿಗೆ ಹೋದ. ಅವನಲ್ಲಿ ಇದ್ದ ದ್ವಾರಪಾಲಕ ವಿಜಯ, ಶ್ರೀಕೃಷ್ಣನ ಶರೀರವನ್ನು ಪ್ರವೇಶಿಸಿದ. ಮುಂದೆ ಶ್ರೀಕೃಷ್ಣ ಅವತಾರ ಸಮಾಪ್ತಿಯಾಗಿ ವೈಕುಂಠ ಸೇರುವಾಗ ಈ ವಿಜಯ ಅವನಿಂದ ಹೊರಬಂದು ಮೂಲ ರೂಪವನ್ನು ಪಡೆಯುತ್ತಾನೆ.

ತತಃ ಕೃಷ್ಣಃ ಪುರೀಮೇತ್ಯ ಬೋಧಯಾಮಾಸ ಫಲ್ಗುನಮ್ ।
ಕಿಮೇತದ್ ದೃಷ್ಟಮಿತ್ಯೇವ ತೇನ ಪೃಷ್ಟೋ ರಮಾಪತಿಃ ॥ ೪೧ ॥

ಪದಚ್ಛೇದ :- ತತಃ, ಕೃಷ್ಣಃ, ಪುರೀಂ, ಏತ್ಯ, ಬೋಧಯಾಮಾಸ, ಫಲ್ಗುನಂ, ಕಿಂ, ಏತತ್, ಇತಿ, ಏವ, ತೇನ, ಪೃಷ್ಟಃ, ರಮಾಪತಿಃ ।

ಅರ್ಥ :- ತತಃ = ಅನಂತರ, ಪುರೀಂ = ದ್ವಾರಕೆಯನ್ನು ಕುರಿತು, ಏತ್ಯ = ಬಂದು, ಏತತ್ = ಈ ಅದ್ಭುತ ದೃಶ್ಯವು, ಕಿಂ = ಏನು, ಇತಿ = ಎಂಬುದಾಗಿ, ತೇನ = ಆ ಅರ್ಜುನನಿಂದ, ಪೃಷ್ಟಃ = ಕೇಳಲ್ಪಟ್ಟ, ರಮಾಪತೀಃ = ಲಕ್ಷ್ಮೀಪತಿಯಾದ, ಕೃಷ್ಣಃ = ಶ್ರೀಕೃಷ್ಣನು, ಫಲ್ಗುನಂ = ಅರ್ಜುನನನ್ನು, ಬೋಧಯಾಮಾಸ = ಆಯಾಯ ಲೋಕಗಳ ಸ್ವರೂಪವನ್ನು ತಿಳಿಸಿದನು.

ತಾತ್ಪರ್ಯ :- ಶ್ರೀಕೃಷ್ಣ ದ್ವಾರಕೆಗೆ ಬಂದ ಮೇಲೆ ಅರ್ಜುನ ತಾನು ಕಂಡ ಅದ್ಭುತ ದೃಶ್ಯಗಳ ಬಗ್ಗೆ ಪ್ರಶ್ನೆ ಮಾಡಿದ. ಆಗ ಶ್ರೀಕೃಷ್ಣ ಆ ಎಲ್ಲ ಲೋಕಗಳ ವಿಸ್ತಾರ ಮುಂತಾದ ವಿಚಾರಗಳನ್ನು ಅರ್ಜುನನಿಗೆ ತಿಳಿಸಿದ.

ಅಯಂ ದ್ವೀಪಃ ಸಾಗರಶ್ಚ ಲಕ್ಷಯೋಜನವಿಸ್ತೃತೌ ।
ತದನ್ಯೇ ತು ಕ್ರಮೇಣೈವ ದ್ವಿಗುಣೇನೋತ್ತರೋತ್ತರಾಃ ॥ ೪೨ ॥

ಅಂತ್ಯಾಧ್ಯರ್ಧಸ್ಥಲಂ ಹೈಮಂ ಬಾಹ್ಯತೋ ವಾಜ್ರಲೇಪಿಕಮ್ ।
ಏತತ್ ಸರ್ವಂ ಲೋಕನಾಮ ಹ್ಯೇತಸ್ಮಾದ್ ದ್ವಿಗುಣಂ ತಮಃ ॥ ೪೩ ॥

ಅಂಧಂ ಯತ್ರ ಪತಂತ್ಯುಗ್ರಾ ಮಿಥ್ಯಾಜ್ಞಾನಪರಾಯಣಾಃ ॥ ೪೪ ॥

ಪದಚ್ಛೇದ :- ಅಯಂ, ದ್ವೀಪಃ, ಸಾಗರಃ, ಚ, ಲಕ್ಷಯೋಜನವಿಸ್ತೃತೌ, ತದನ್ಯೇ, ತು, ಕ್ರಮೇಣ, ಏವ, ದ್ವಿಗುಣೇನ, ಉತ್ತರೋತ್ತರಾಃ, ಅಂತ್ಯಾಧ್ಯರ್ಧಸ್ಥಲಂ, ಹೈಮಂ, ಬಾಹ್ಯತಃ, ವಾಜ್ರಲೇಪಿಕಂ, ಏತತ್, ಸರ್ವಂ, ಲೋಕನಾಮ, ಹಿ, ಏತಸ್ಮಾತ್, ದ್ವಿಗುಣಂ, ತಮಃ, ಅಂಧಂ, ಯತ್ರ, ಪತಂತಿ, ಉಗ್ರಾಃ, ಮಿಥ್ಯಾಜ್ಞಾನಪರಾಯಣಾಃ ।

ಅರ್ಥ :- ಅಯಂ = ಈ, ದ್ವೀಪಃ = ದ್ವೀಪವು, ಚ = ಮತ್ತು, ಸಾಗರಃ = ಲವಣ ಸಮುದ್ರವು, ಲಕ್ಷಯೋಜನವಿಸ್ತೃತೌ = ಲಕ್ಷಯೋಜನ

ವಿಸ್ತಾರವುಳ್ಳವುಗಳು, **ತದನ್ಯೇ** = ಇದಕ್ಕಿಂತ ಭಿನ್ನವಾದ, **ಉತ್ತರೋತ್ತರಾಃ** = ಮುಂದೆ ಮುಂದೆ ಇರುವ ಆರು ದ್ವೀಪಗಳು ಮತ್ತು ಆರು ಸಮುದ್ರಗಳು, **ಕ್ರಮೇಣೈವ** = ಕ್ರಮವಾಗಿ, **ದ್ವಿಗುಣೇನ (ಮಾನೇನ)** = ಎರಡೆರಡು ಪಟ್ಟು ಹೆಚ್ಚಿನ ಪ್ರಮಾಣದಿಂದ (ವಿಸ್ತಾರವುಳ್ಳವುಗಳು) **ಬಾಹ್ಯತಃ** = ಇವುಗಳ ಹೊರಗಿರುವ, **ವಾಜ್ರಲೇಪಿಕಂ** = ವಜ್ರಲೇಪಿತವಾದ, **ಹೈಮಂ** = ಬಂಗಾರಮಯವಾದದ್ದು, **ಅಂತ್ಯಾಧ್ಯರ್ಧಸ್ಥಲಂ** = ಕೊನೆಯ ಸ್ವಾದೂದಕ ಸಮುದ್ರದ ಮಾನಕ್ಕಿಂತ ಒಂದೂವರೆ ಪಟ್ಟು ಹೆಚ್ಚಿನ ಆಳತೆಯ ಸ್ಥಳವು, **ಏತತ್ ಸರ್ವಂ** = ಈ ಎಲ್ಲವೂ, **ಲೋಕನಾಮ** = ಲೋಕವೆಂದು ಹೆಸರುಳ್ಳದ್ದು, **ಯತ್ರ** = ಎಲ್ಲಿ, **ಮಿಥ್ಯಾಜ್ಞಾನಪರಾಯಣಾಃ** = ಮಿಥ್ಯಾಜ್ಞಾನಿಗಳಾದ, **ಉಗ್ರಾಃ** = ಕ್ರೂರರು, **ಪತಂತಿ** = ಬೀಳುತ್ತಾರೆಯೋ ಅಂತಹ, **ಅಂಧಂ ತಮಃ** = ಅಂಧಂತಮಸ್ಸು, **ಏತಸ್ಮಾತ್** = ಈ ಲೋಕಕ್ಕಿಂತ, **ದ್ವಿಗುಣಂ ಹಿ** = ಎರಡು ಪಟ್ಟು ವಿಸ್ತಾರವುಳ್ಳದ್ದಷ್ಟೆ.

ಈ ಭಾಗದಲ್ಲಿ ಶ್ರೀಕೃಷ್ಣ ವಿವರಿಸಿದ ದ್ವೀಪ ಮತ್ತು ಸಮುದ್ರಗಳ ಆಳತೆಯನ್ನು ಹೇಳುತ್ತಿದ್ದಾರೆ.

| ದ್ವೀಪ | ಸಮುದ್ರ | ಮಾನ |
|---|---|---|
| ಜಂಬೂದ್ವೀಪ | ಲವಣ ಸಮುದ್ರ | ೧,೦೦,೦೦೦. ಯೋಜನ |
| ಪ್ಲಕ್ಷ | ಇಕ್ಷು | ೨,೦೦,೦೦೦ ಯೋಜನ |
| ಶಾಲ್ಮಲ | ಸುರೋದ | ೪,೦೦,೦೦೦. ಯೋಜನ |
| ಕುಶ | ಸಾರ್ಷಪ | ೮,೦೦,೦೦೦. ಯೋಜನ |
| ಕ್ರೌಂಚ | ದಧಿಮಂಡೋದ | ೧೬,೦೦,೦೦೦. ಯೋಜನ |
| ಶಾಕ | ಕ್ಷೀರ | ೩೨,೦೦,೦೦೦. ಯೋಜನ |
| ಪುಷ್ಕರ | ಸ್ವಾದೂದ | ೬೪,೦೦,೦೦೦. ಯೋಜನ |

ಇವುಗಳ ಹೊರಭಾಗದಲ್ಲಿ ೯೬,೦೦,೦೦೦ ಯೋಜನ ವಿಸ್ತೃತವಾದ ವಜ್ರಲೇಪಿತ ಬಂಗಾರಮಯವಾದ ಸ್ಥಲವಿದೆ.

**ತಾತ್ಪರ್ಯ** :- ಮೇರು ಪರ್ವತವನ್ನು ಕೇಂದ್ರೀಕರಿಸಿಕೊಂಡು ಇರುವ ಈ ಜಂಬೂದ್ವೀಪದ ವಿಸ್ತಾರ ಒಂದು ಲಕ್ಷ ಯೋಜನ. ಹೀಗಾಗಿ ಮೇರು

ಕೇಂದ್ರದಿಂದ ಲವಣ ಸಮುದ್ರದವರೆಗಿನ ದೂರ ೫೦,೦೦೦ ಯೋಜನ ಎಂದಿಟ್ಟುಕೊಂಡಾಗ ಒಟ್ಟು ಲೋಕಗಳ ಮಾನ ೩ ಕೋಟಿ ೪೯ ಲಕ್ಷ ೫೦ ಸಾವಿರ ಯೋಜನಗಳು. ಇದರ ಎರಡು ಪಟ್ಟು ಅಂದರೆ ೬ ಕೋಟಿ ೯೯ ಲಕ್ಷ ಯೋಜನಗಳು ಅಂಧಂತಮಸ್ಸಿನ ಹರಿವು. ಈ ಅಂಧಂತಮಸ್ಸಿನಲ್ಲಿ ಮಿಥ್ಯಾಜ್ಞಾನಿಗಳಾದ, ಕ್ರೂರಿಗಳು ಬಂದು ಬೀಳುತ್ತಾರೆ.

**ಘನೋದಕಂ ತದ್ ದ್ವಿಗುಣಂ ತದಂತೇ ಧಾಮ ಮಾಮಕಮ್ ।**
**ಯತ್ತದ್ ದೃಷ್ಟಂ ತ್ವಯಾ ಪಾರ್ಥ ತತ್ರ ಮುಕ್ತೈರಜಾದಿಭಿಃ ।**
**ಸೇವ್ಯಮಾನಃ ಸ್ಥಿತೋ ನಿತ್ಯಂ ಸರ್ವೈಃ ಪರಮಪೂರುಷಃ ॥ ೪೫ ॥**

**ಪದಚ್ಛೇದ :–** ಘನೋದಕಂ, ತದ್ವಿಗುಣಂ, ತದಂತೇ, ಧಾಮ, ಮಾಮಕಂ, ಯತ್, ತತ್, ದೃಷ್ಟಂ, ತ್ವಯಾ, ಪಾರ್ಥ, ತತ್ರ, ಮುಕ್ತೈಃ, ಅಜಾದಿಭಿಃ, ಸೇವ್ಯಮಾನಃ, ಸ್ಥಿತಃ, ನಿತ್ಯಂ, ಸರ್ವೈಃ, ಪರಮಪುರುಷಃ ।

**ಅರ್ಥ :-** **ಘನೋದಕಂ** = ಘನೋದಕವು, **ತದ್ವಿಗುಣಂ** = ಅಂಧಂತಮಸ್ಸಿಗಿಂತ ಎರಡು ಪಟ್ಟು ಹೆಚ್ಚು ವಿಸ್ತೃತಿಯಾದದ್ದು, **ತದಂತೇ** = ಇವುಗಳ ಕೊನೆಗೆ, **ಪಾರ್ಥ** = ಅರ್ಜುನನೇ, **ಯತ್** = ಯಾವುದು, **ತ್ವಯಾ** = ನಿನ್ನಿಂದ, **ದೃಷ್ಟಂ** = ನೋಡಲ್ಪಟ್ಟಿತೋ, **ತತ್** = ಅಂತಹ, **ಮಾಮಕಂ** = ನನ್ನದ್ದಾದ, **ಧಾಮ** = ವೈಕುಂಠಲೋಕವು, **ತತ್ರ** = ಅಲ್ಲಿ, **ಮುಕ್ತೈಃ** = ಮುಕ್ತರಾದ, **ಅಜಾದಿಭಿಃ** = ಬ್ರಹ್ಮನೇ ಮೊದಲಾದ, **ಸರ್ವೈಃ** = ಎಲ್ಲರಿಂದಲೂ, **ಸೇವ್ಯಮಾನಃ** = ಸೇವಿಸಲ್ಪಟ್ಟವನಾಗಿ, **ಪರಮಪುರುಷಃ** = ಸರ್ವೋತ್ತಮನಾದ ಶ್ರೀಹರಿಯು, **ಸ್ಥಿತಃ** = ಇದ್ದಾನೆ.

**ತಾತ್ಪರ್ಯ :-** ಘನೋದಕವು ತಮಸ್ಸಿಗಿಂತಲು ಎರಡು ಪಟ್ಟು ಅಂದರೆ ೧೩ ಕೋಟಿ ೯೮ ಲಕ್ಷ ಯೋಜನ. ಅದರ ನಂತರ ಇರುವುದೇ ಭಗವಂತನ ವೈಕುಂಠಲೋಕ ಇದು ಮೂರು ಲಕ್ಷಯೋಜನ. ಈ ವೈಕುಂಠದಲ್ಲಿ ಪರಮ ಪುರುಷನಾದ ಶ್ರೀಹರಿಯನ್ನು ಮುಕ್ತರಾದ ಎಲ್ಲ ಬ್ರಹ್ಮಾದಿಗಳೂ ಯಾವಾಗಲೂ ಸೇವೆ ಮಾಡುತ್ತಾರೆ.

**ಲೋಕಾಲೋಕಪ್ರದೇಶಸ್ತು ಪಂಚಾಶಲ್ಲಕ್ಷವಿಸ್ತೃತಃ ।**
**ಸಪಂಚಾಶತ್ಸಹಸ್ರಶ್ಚ ತಸ್ಯಾಪಿ ಗಣನಂ ತಥಾ ॥ ೪೬ ॥**

ಯೋಜನಾನಾಂ ಪಂಚವಿಂಶತ್ಕೋಟಯೋ ಮೇರುಪರ್ವತಾತ್ ।
ಚತಸೃಷ್ವಪಿ ದಿಕ್ಷೂರ್ಧ್ವಮಧಶ್ಚಾಂಡಂ ಪ್ರಕೀರ್ತಿತಮ್ ॥ ೪೭ ॥

ಪದಚ್ಛೇದ :- ಲೋಕಾಲೋಕಪ್ರದೇಶಃ, ತು, ಪಂಚಾಶಲ್ಲಕ್ಷವಿಸ್ತೃತಃ, ಸಪಂಚಾಶತ್ ಸಹಸ್ರಃ, ಚ, ತಸ್ಯ, ಅಪಿ, ಗಣನಂ, ತಥಾ, ಯೋಜನಾನಾಂ, ಪಂಚವಿಂಶ ತ್ಕೋಟಯಃ, ಮೇರುಪರ್ವತಾತ್, ಚತಸೃಷು, ಅಪಿ, ದಿಕ್ಷು, ಊರ್ಧ್ವಂ, ಅಧಃ, ಚ, ಅಂಡಂ, ಪ್ರಕೀರ್ತಿತಂ।

ಅರ್ಥ :- ಲೋಕಾಲೋಕಪ್ರದೇಶಃ ತು = ಲೋಕಾಲೋಕಪರ್ವತ ಪ್ರದೇಶವಾದರೂ, ಪಂಚಾಶಲ್ಲಕ್ಷವಿಸ್ತೃತಃ = ೫೦ ಲಕ್ಷಯೋಜನ ವಿಸ್ತಾರ ವುಳ್ಳದ್ದು, ಚ = ಮತ್ತು, ಸಪಂಚಾಶತ್‌ಸಹಸ್ರಃ = ಐವತ್ತು ಸಾವಿರದಿಂದ ಕೂಡಿದೆ, ತಸ್ಯ ಅಪಿ = ಲೋಕಾಲೋಕಪರ್ವತದ, ಗಣನಂ = ಲೆಕ್ಕಾಚಾರವೂ, ತಥಾ = ಹಾಗೆಯೇ (ಭಾಗವತಾದಿಗಳಲ್ಲಿ ಹೇಳಲ್ಪಟ್ಟಿದೆ), ಮೇರುಪರ್ವತಾತ್ = ಮೇರು ಪರ್ವತದಿಂದ, ಚತಸೃಷ್ವಪಿ ದಿಕ್ಷು = ನಾಲ್ಕು ದಿಕ್ಕುಗಳಲ್ಲಿ, ಊರ್ಧ್ವಂ ಅಧಃ ಚ = ಮೇಲೂ ಕೆಳಗೂ, ಅಂಡಂ = ಬ್ರಹ್ಮಾಂಡವು, ಯೋಜನಾನಾಂ ಪಂಚವಿಂಶತ್ಕೋಟಯಃ = ೨೫ ಕೋಟಿ ಯೋಜನಗಳು ಎಂದು, ಪ್ರಕೀರ್ತಿತಂ = ಹೇಳಲ್ಪಟ್ಟಿದೆ.

ತಾತ್ಪರ್ಯ :- ಲೋಕದ ನಂತರ ತಮಸ್ಸಿಗೆ ಮೊದಲು ೫೦ ಲಕ್ಷ ೫೦ ಸಾವಿರ ವಿಸ್ತಾರವುಳ್ಳ ಲೋಕಾಲೋಕಪರ್ವತ ಪ್ರದೇಶವಿದೆ. ಇದರ ಗಣನೆಯೂ ಭಾಗವತಾದಿಗಳಲ್ಲಿ ಬಂದಿದೆ. ಹೀಗೆ ಮೇರು ಪರ್ವತ ರೂಪ ಜಂಬೂದ್ವೀಪ ಕೇಂದ್ರದಿಂದ ಆರಂಭಿಸಿ ಒಟ್ಟು ಬ್ರಹ್ಮಾಂಡದ ಪ್ರಮಾಣ ೨೫ ಕೋಟಿ ಯೋಜನಗಳು. ಅದು ಈ ರೀತಿಯಾಗಿದೆ.

| | |
|---|---|
| ಲೋಕಗಳು | ೩,೪೯,೫೦,೦೦೦ |
| ಲೋಕಾಲೋಕ | ೫೦,೫೦,೦೦೦ |
| ತಮಸ್ಸು | ೬,೯೯,೦೦,೦೦೦ |
| ಘನೋದಕ | ೧೩,೯೮,೦೦,೦೦೦ |
| ವೈಕುಂಠ | ೩,೦೦,೦೦೦ |
| | ೨೫,೦೦,೦೦,೦೦೦ ಯೋಜನಗಳು |
| ಒಟ್ಟು | ೫೦,೦೦,೦೦,೦೦೦ |

ಭೂಮಧ್ಯದಿಂದ ಅಧೋಲೋಕ ೨೫,೦೦,೦೦,೦೦೦ ಯೋಜನಗಳು

ಅಬಗ್ನೀರನಭೋಹಂಕೃನ್ಮಹತ್ತತ್ವಗುಣತ್ರಯೈಃ ।
ಕ್ರಮಾದ್ ದಶೋತ್ತರೈರೇತದಾವೃತಂ ಪರತಸ್ತತಃ ॥ ೪೮ ॥

ವ್ಯಾಪ್ತೋಽಹಂ ಸರ್ವಗೋಽನಂತೋಽನಂತರೂಪೋ ನಿರಂತರಃ ॥ ೪೯ ॥
ಅನಂತಶೀರ್ಷೋಽನಂತಾಕ್ಷೋಽನಂತಪಾದಕರೋರುಕಃ ।
ಅನಂತಗುಣಮಾಹಾತ್ಮ್ಯಶ್ಚಿದಾನಂದಶರೀರಕಃ ॥ ೫೦ ॥

ಪದಚ್ಛೇದ :- ಅಬಗ್ನೀರನಭೋಹಂಕೃನ್ಮಹತ್ತತ್ವಗುಣತ್ರಯೈಃ, ಕ್ರಮಾತ್, ದಶೋತ್ತರೈಃ, ಏತತ್ ಆವೃತಂ, ಪರತಃ, ತತಃ, ವ್ಯಾಪ್ತಃ, ಅಹಂ, ಸರ್ವಗಃ, ಅನಂತಃ, ಅನಂತರೂಪಃ, ನಿರಂತರಃ, ಅನಂತಶೀರ್ಷಃ, ಅನಂತಾಕ್ಷಃ, ಅನಂತಪಾದಕರೋರುಕಃ, ಅನಂತಗುಣಮಾಹಾತ್ಮ್ಯಃ, ಚಿದಾನಂದ ಶರೀರಕಃ ।

**ಅರ್ಥ** :- **ತತಃ** = ಆ ಭಗವಂತನ ಲೋಕದ, **ಪರತಃ** = ಹೊರಭಾಗದಲ್ಲಿ, **ಏತತ್** = ಈ ಬ್ರಹ್ಮಾಂಡವು, **ಕ್ರಮಾತ್** = ಕ್ರಮವಾಗಿ, **ದಶೋತ್ತರೈಃ** = ಹತ್ತುಪಟ್ಟು ಹೆಚ್ಚಾದ, **ಅಬಗ್ನೀರನಭೋಹಂಕೃನ್ಮಹತ್ತತ್ವ ಗುಣತ್ರಯೈಃ** = ನೀರು, ಅಗ್ನಿ, ವಾಯು, ಆಕಾಶ, ಅಹಂಕಾರ, ಮಹತ್ತತ್ವ ಮತ್ತು ಗುಣತ್ರಯಗಳೆಂಬ ಒಂಭತ್ತರಿಂದ, **ಆವೃತಂ** = ಆವರಿಸಲ್ಪಟ್ಟಿದೆ, **ತತಃ** = ಆ ಬ್ರಹ್ಮಾಂಡಾವರಣಕ್ಕಿಂತಲೂ, **ಪರತಃ** = ಹೊರಗೆ, **ವ್ಯಾಪ್ತಃ** = ಸರ್ವತ್ರ ವ್ಯಾಪಿಸಿರುವ, **ಸರ್ವಗಃ** = ಎಲ್ಲದರ ಒಳಗೂ ಇರುವ, **ಅನಂತಃ** = ಕಾಲದಿಂದಲೂ ಗುಣದಿಂದಲೂ ಕೊನೆ ಇರದ, **ಅನಂತ ರೂಪಃ** = ಅನಂತ ರೂಪಗಳುಳ್ಳ, **ನಿರಂತರಃ** = ಆ ರೂಪಗಳಿಂದ ಭೇದರಹಿತನಾದ, **ಅನಂತ ಶೀರ್ಷಃ** = ಅನಂತಶಿರವುಳ್ಳ, **ಅನಂತಾಕ್ಷಃ** = ಅನಂತ ಕಣ್ಣುಗಳುಳ್ಳ, **ಅನಂತಪಾದ ಕರೋರುಕಃ** = ಅನಂತ ಪಾದಗಳು, ಕೈಗಳೂ, ತೊಡೆಗಳು ಇರುವ, **ಅನಂತ ಗುಣಮಾಹಾತ್ಮ್ಯಃ** = ಅನಂತ ಗುಣಗಳು, ಮಹಿಮೆಗಳು ಇರುವ, **ಚಿದಾನಂದ ಶರೀರಕಃ** = ಜ್ಞಾನ ಮತ್ತು ಆನಂದ ಇವುಗಳೇ ಶರೀರವಾಗಿವುಳ್ಳ, **ಅಹಂ** = ನಾನು (ಇದ್ದೇನೆ).

**ತಾತ್ಪರ್ಯ** :- ಬ್ರಹ್ಮಾಂಡ ಒಟ್ಟು ಪ್ರಮಾಣ ೫೦ ಕೋಟಿ ಯೋಜನ. ಅದಕ್ಕೆ ಪೃಥಿವ್ಯಾವರಣ ಎರಡುಪಟ್ಟು ಅಂದರೆ ನೂರು ಕೋಟಿಯೋಜನ.

ಅನಂತರ ಜಲಾವರಣ ಹತ್ತುಪಟ್ಟು ಅಂದರೆ ಸಾವಿರ ಕೋಟಿ ಯೋಜನ. ಅನಂತರ ಅಗ್ನ್ಯಾವರಣ ಹತ್ತುಸಾವಿರ ಕೋಟಿ ಯೋಜನ. ಅನಂತರ ವಾಯು ಆವರಣ ಲಕ್ಷಕೋಟಿ ಯೋಜನ. ನಂತರದ ಆಕಾಶಾವರಣ ಹತ್ತುಲಕ್ಷಕೋಟಿ ಯೋಜನ. ನಂತರ ಅಹಂಕಾರ ತತ್ವಾವರಣ ಕೋಟಿ ಕೋಟಿ ಯೋಜನ. ಅನಂತರ ಮಹತ್ತತ್ವಾವರಣ ಹತ್ತುಕೋಟಿ ಯೋಜನ. ಅನಂತರ ಗುಣತ್ರಯಾತ್ಮಕವಾದ ಪ್ರಕೃತಿಯ ಆವರಣ ಶತಕೋಟಿ ಕೋಟಿ ಯೋಜನ. ಈ ಬ್ರಹ್ಮಾಂಡದ ಹೊರಗೆ ಸರ್ವತ್ರ ವ್ಯಾಪ್ತನಾದ ಪರಮಾತ್ಮ ಶ್ರೀಮನ್ನಾರಾಯಣ ಇದ್ದಾನೆ. ಅವನು ಎಲ್ಲೆಡೆ ಇದ್ದಾನೆ ಎಲ್ಲ ಕಾಲದಲ್ಲೂ ಇದ್ದಾನೆ. ಎಲ್ಲ ಗುಣಗಳಿಂದಲೂ ಪರಿಪೂರ್ಣ ಅನಂತ ರೂಪಗಳು ಅವನಿಗಿವೆ. ಆದರೂ ಆ ಎಲ್ಲ ರೂಪಗಳಿಂದ ಯಾವುದೇ ಭೇದವಿಲ್ಲ. ಅವನ್ನು ಅನಂತ ಶಿರಸ್ಸು, ಕಣ್ಣು, ಪಾದ, ಕೈ, ತೊಡೆ ಮುಂತಾದ ಅವಯವಗಳುಳ್ಳವನು. ಅನಂತ ಗುಣ ಮತ್ತು ಮಹಿಮೆ ಉಳ್ಳವನು. ಜ್ಞಾನ ಆನಂದಗಳೇ ಅವನ ದೇಹ, ಸ್ವರೂಪ. ಇಂತಹ ಭಗವಂತ ಬ್ರಹ್ಮಾಂಡಾವರಣಗಳ ಹೊರಗೂ ಇದ್ದಾನೆ.

**ಮದ್ವಶಾ ಏವ ಸರ್ವೇऽಪಿ ತ್ವಂ ಚಾನ್ಯೇ ಚ ಧನಂಜಯ ।**
**ಮತ್ಪ್ರಸಾದಾದ್ ಬಲಂ ಚೈವ ವಿಜಯಶ್ಚಾಖಿಲಾ ಗುಣಾಃ ।**
**ತಸ್ಮಾನ್ನ ವಿಸ್ಮಯಃ ಕಾರ್ಯೋ ನ ದರ್ಪಶ್ಚ ತ್ವಯಾऽನಘ ॥ ೫೧ ॥**

**ಪದಚ್ಛೇದ :- ಮದ್ವಶಾಃ, ಏವ, ಸರ್ವೇ, ಅಪಿ, ತ್ವಂ, ಚ, ಅನ್ಯೇ, ಚ, ಧನಂಜಯ, ಮತ್ಪ್ರಸಾದಾತ್, ಬಲಂ, ಚ, ಏವ, ವಿಜಯಃ,ಚ, ಅಖಿಲಾಃ, ಗುಣಾಃ, ತಸ್ಮಾತ್, ನ, ವಿಸ್ಮಯಃ, ಕಾರ್ಯಃ, ನ, ದರ್ಪಃ, ಚ, ತ್ವಯಾ, ಅನಘ ।**

**ಅರ್ಥ :- ಧನಂಜಯ** = ಅರ್ಜುನನೇ, **ತ್ವಂ ಚ** = ನೀನೂ, **ಅನ್ಯೇ ಚ** = ಬೇರೆಯವರೂ, **ಸರ್ವೇ ಅಪಿ** = ಎಲ್ಲರೂ, **ಮದ್ವಶಾಃ ಏವ** = ನನ್ನ ಅಧೀನರೇ ಆಗಿದ್ದಾರೆ, **ಮತ್ಪ್ರಸಾದಾತ್ ಏವ** = ನನ್ನ ಅನುಗ್ರಹದಿಂದಲೇ, **ಬಲಂ** = ಪರಾಕ್ರಮ, **ಚ** = ಮತ್ತು, **ವಿಜಯಃ** = ಗೆಲುವು, **ಚ** = ಮತ್ತು, **ಅಖಿಲಾಃ ಗುಣಾಃ** = ಜ್ಞಾನಾದಿ ಗುಣಗಳು, **ಅನಘ** = ಸ್ವಭಾವತಃ ಪಾಪ ರಹಿತನೇ, **ತಸ್ಮಾತ್** = ಆದುದರಿಂದ, **ತ್ವಯಾ** = ನಿನ್ನಿಂದ, **ವಿಸ್ಮಯಃ** = ನಾನೇ ಎಲ್ಲವನ್ನೂ ತಿಳಿದವನೂ, ನನಗೆ ತಿಳಿಯದ್ದು ಯಾವುದೂ ಇಲ್ಲ ಎಂದು ಒಳಗೊಳಗೆ ಸಂತಸ ಪಡುವುದು ವಿಸ್ಮಯ, **ಚ** = ಮತ್ತು, **ದರ್ಪಃ** = ನನಗೆ ಸದೃಶರು ಯಾರೂ ಇಲ್ಲವೆಂಬ ಅಹಂಕಾರ ಇವು, **ನ ಕಾರ್ಯಃ** = ಮಾಡಲ್ಪಡಬಾರದು.

ತಾತ್ಪರ್ಯ :- ಭಗವಂತ ಅರ್ಜುನನಿಗೆ ಹೇಳುತ್ತಿದ್ದಾನೆ ''ನೀನೂ, ಬೇರೆಯವರೂ, ಜಗತ್ತಿನ ಎಲ್ಲರೂ, ಎಲ್ಲವೂ ನನ್ನ ಅಧೀನವೇ ಆಗಿವೆ. ನನ್ನ ಅನುಗ್ರಹದಿಂದಲೇ ಶಕ್ತಿ - ಪರಾಕ್ರಮಗಳು, ಜಯ - ವಿಜಯಗಳೂ, ಜ್ಞಾನ - ಆನಂದ ಮೊದಲಾದ ಗುಣಗಳೂ ಲಭಿಸುತ್ತವೆ. ಆದುದರಿಂದ ನಾನೇ ಎಲ್ಲವನ್ನೂ ತಿಳಿದಿರುವೆ ಎಂಬ ಹುಸಿ ನಗೆಯಾಗಲೀ ನನ್ನ ಸದೃಶರು ಯಾರೂ ಇಲ್ಲವೆಂಬ ಅಹಂಕಾರವಾಗಲೀ ನಿನಗೆ ಬಾರದಿರಲಿ'' ಎಂದು.

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥ ೫೨ ॥**

**ಪದಚ್ಛೇದ :– ಮನ್ಮನಾಃ, ಭವ, ಮದ್ಭಕ್ತಃ, ಮದ್ಯಾಜೀ, ಮಾಂ, ನಮಸ್ಕುರು, ಮಾಂ, ಏವ, ಏಷ್ಯಸಿ, ಸತ್ಯಂ, ತೇ, ಪ್ರತಿಜಾನೇ, ಪ್ರಿಯಃ, ಅಸಿ, ಮೇ ।**

**ಅರ್ಥ :- ಮನ್ಮನಾಃ** = ನನ್ನಲ್ಲೆ (ಭಗವಂತನಲ್ಲಿಯೇ) ಮನಸ್ಸುಳ್ಳವನು, **ಭವ** = ಆಗು, **ಮದ್ಭಕ್ತಃ** = ನನ್ನ ಭಕ್ತನು (ಆಗು), **ಮದ್ಯಾಜೀ** = ಏನೇನನ್ನು ಮಾಡುತ್ತೀಯೋ ಅದೆಲ್ಲವನ್ನೂ ನನ್ನ ಪೂಜೆ ಎಂಬ ಭಾವನೆಯಿಂದ ಮಾಡು, **ಮಾಂ** = ನನ್ನನ್ನು, **ನಮಸ್ಕುರು** = ನಮಸ್ಕಾರ ಮಾಡು, **ಮಾಂ ಏವ** = ನನ್ನನ್ನೇ, **ಏಷ್ಯಸಿ** = ಹೊಂದುವಿ, **ತೇ** = ನಿನಗೆ, **ಸತ್ಯಂ ಪ್ರತಿಜಾನೇ** = ಪ್ರತಿಜ್ಞಾಪೂರ್ವಕವಾಗಿ ಪ್ರತಿಜ್ಞೆ ಮಾಡುತ್ತೇನೆ, **ಮೇ** = ನನಗೆ (ನೀನು), **ಪ್ರಿಯಃ** = ಪ್ರೀತಿಪಾತ್ರನು, **ಅಸಿ** = ಆಗಿರುವಿ.

ತಾತ್ಪರ್ಯ :- ಭಗವಂತ ಅರ್ಜುನನ್ನು ಕುರಿತು ಹೇಳುತ್ತಿದ್ದಾನೆ. ನನ್ನಲ್ಲೆ ಮನಸ್ಸನ್ನಿಡು, ನನ್ನ ಭಕ್ತನಾಗು, ಯಾವುದೇ ಕೆಲಸ ಮಾಡಿದರು ನನ್ನ ಪೂಜೆ ಎಂದು ಮಾಡು. ನನ್ನನ್ನು ನಮಿಸು ಆಗ ನನ್ನನ್ನೆ ಹೊಂದುವಿ ನಾನು ಪ್ರತಿಜ್ಞೆ ಮಾಡಿ ಹೇಳುತ್ತಿದ್ದೇನೆ ನೀನು ನನಗೆ ಅತ್ಯಂತ ಪ್ರಿಯನಾದವ.

**ಇತ್ಯುಕ್ತಃ ಪ್ರಣಿಪತ್ಯೈನಂ ಕ್ಷಮಸ್ವೇತ್ಯಾಹ ಫಲ್ಗುನಃ ।**
**ಉಷಿತ್ವಾ ಕತಿಚಿನ್ಮಾಸಾನ್ ಯಯುಃ ಸರ್ವೇಽಪಿ ಪಾಂಡವಾಃ ॥ ೫೩ ॥**

**ಅನುಜ್ಞಾತಾಃ ಕೇಶವೇನ ಭಕ್ತಿನಮ್ರಧಿಯೋಽಚ್ಯುತೇ ।**
**ಸಂಭಾವಿತಾಃ ಕೇಶವೇನ ಸೌಹಾರ್ದೇನಾಧಿಕೇನ ಚ ॥ ೫೪ ॥**

ಪದಚ್ಛೇದ :- ಇತಿ, ಉಕ್ತಃ, ಪ್ರಣಿಪತ್ಯ, ಏನಂ, ಕ್ಷಮಸ್ವ, ಇತಿ, ಆಹ, ಫಲ್ಗುನಃ, ಉಷಿತ್ವಾ, ಕತಿಚಿತ್, ಮಾಸಾನ್, ಯಯುಃ, ಸರ್ವೇ, ಅಪಿ, ಪಾಂಡವಾಃ, ಅನುಜ್ಞಾತಾಃ, ಕೇಶವೇನ, ಭಕ್ತಿನಮ್ರಧಿಯಃ, ಅಚ್ಯುತೇ, ಸಂಭಾವಿತಾಃ, ಕೇಶವೇನ, ಸೌಹಾರ್ದೇನ, ಅಧಿಕೇನ, ಚ ।

**ಅರ್ಥ** :- **ಇತಿ** = ಹಿಂದೆ ಹೇಳಿದ ರೀತಿಯಲ್ಲಿ, **ಉಕ್ತಃ** = ಹೇಳಲ್ಪಟ್ಟ, **ಫಲ್ಗುನಃ** = ಅರ್ಜುನನು, **ಏನಂ** = ಈ ಶ್ರೀಕೃಷ್ಣನನ್ನು, **ಪ್ರಣಿಪತ್ಯ** = ನಮಸ್ಕರಿಸಿ, **ಕ್ಷಮಸ್ವ** = ಅಪರಾಧವನ್ನು ಕ್ಷಮಿಸು, **ಇತಿ** = ಎಂದು, **ಆಹ** = ಹೇಳಿದನು, **ಸರ್ವೇ ಅಪಿ** = ಎಲ್ಲಾ, **ಪಾಂಡವಾಃ** = ಪಾಂಡವರು, **ಕತಿಚಿತ್** = ಕೆಲವು, **ಮಾಸಾನ್** = ತಿಂಗಳುಗಳನ್ನು, **ಉಷಿತ್ವಾ** = ಕೃಷ್ಣನೊಟ್ಟಿಗೆ ವಾಸಮಾಡಿ, **ಅಚ್ಯುತೇ** = ಶ್ರೀಕೃಷ್ಣನಲ್ಲಿ, **ಭಕ್ತಿನಮ್ರಧಿಯಃ** = ಭಕ್ತಿಯಿಂದ ಬಾಗಿದ ಮನಸ್ಸುಳ್ಳವರಾಗಿ, **ಅನುಜ್ಞಾತಾಃ** = ಶ್ರೀಕೃಷ್ಣನ ಅನುಜ್ಞೆಯನ್ನು ಪಡೆದವರಾಗಿ, **ಅಧಿಕೇನ** = ಮನುಷ್ಯರಿಗಿಂತ ಹೆಚ್ಚಾದ, **ಸೌಹಾರ್ದೇನ** = ಅನುಗ್ರಹದಿಂದ, **ಸಂಭಾವಿತಾಃ** = ಸತ್ಕರಿಸಲ್ಪಟ್ಟವರಾಗಿ, **ಯಯುಃ** = ತಮ್ಮ ಪುರವಾದ ಹಸ್ತಿನಪುರವನ್ನು ಕುರಿತು ಹೊರಟರು.

**ತಾತ್ಪರ್ಯ** :- ಹೀಗೆ ಭಗವಂತನಾದ ಶ್ರೀಕೃಷ್ಣನು ಬ್ರಹ್ಮಾಂಡ, ಎಲ್ಲ ಲೋಕಗಳು ಭಗವನ್ಮಂದಿರ, ಆವರಣಗಳು ಭಗವಂತನ ಸ್ವರೂಪ, ಮಹಿಮೆ, ಮೊದಲಾದಗಳನ್ನು ವರ್ಣಿಸಿದಾಗ, ಅರ್ಜುನ ಅವನ ಪಾದಕ್ಕೆರಗಿ ಕ್ಷಮಿಸು ನನ್ನ ಅಪರಾಧಗಳನ್ನು ಎಂದು ಬೇಡಿದ. ಭಗವಂತ ಮನ್ನಿಸಿದ. ಆನಂತರ ಕೆಲವು ತಿಂಗಳುಗಳವರೆಗೆ ಶ್ರೀಕೃಷ್ಣನೊಂದಿಗೆ ಪಾಂಡವರು ವಾಸಿಸಿದರು. ಈ ಪಾಂಡವರು ಭಗವಂತನಲ್ಲಿ ಅತಿಶಯ ಭಕ್ತಿ ಇರುವವರು, ಭಗವಂತ ಉಳಿದೆಲ್ಲರಿಗಿಂತ ಪಾಂಡವರ ಮೇಲೆ ಹೆಚ್ಚಿನ ಅನುಗ್ರಹ ಮಾಡಿ ಇವರನ್ನು ಸತ್ಕರಿಸಿ ಬೀಳ್ಕೊಟ್ಟ ನಂತರ ತಮ್ಮ ನಗರಕ್ಕೆ ಪಾಂಡವರು ಹೊರಟರು.

**ತತಃ ಕದಾಚಿತ್ ಪ್ರವರೇ ಸಭಾತಳೇ**
**ಧರ್ಮಾತ್ಮಜೋ ರಾಜಭಿರ್ಭ್ರಾತೃಭಿಶ್ಚ ।**
**ವೃತೋ ನಿಶಮ್ಯೈವ ಸಭಾಃ ಸುರಾಣಾಂ**
**ಯಥಾ ಸ್ಥಿತಾ ನಾರದಮನ್ವಪೃಚ್ಛತ್ ॥ ೫೫ ॥**

**ಪದಚ್ಛೇದ** :- ತತಃ, ಕದಾಚಿತ್, ಪ್ರವರೇ, ಸಭಾತಲೇ, ಧರ್ಮಾತ್ಮಜಃ, ರಾಜಭಿಃ, ಭ್ರಾತೃಭಿಃ, ಚ, ವೃತಃ, ನಿಶಮ್ಯ, ಏವ, ಸಭಾಃ, ಸುರಾಣಾಂ, ಯಥಾ, ಸ್ಥಿತಾಃ, ನಾರದಂ, ಅನ್ವಪೃಚ್ಛತ್ ।

**ಅರ್ಥ** :- **ತತಃ** = ಅನಂತರ, **ಕದಾಚಿತ್** = ಒಮ್ಮೆ, **ಪ್ರವರೇ** = ಶ್ರೇಷ್ಠನಾದ, **ಸಭಾತಲೇ** = ಸಭೆಯಲ್ಲಿ, **ರಾಜಭಿಃ** = ಸಾಮಂತ ರಾಜರುಗಳಿಂದ, **ಚ** = ಮತ್ತು, **ಭ್ರಾತೃಭಿಃ** = ತಮ್ಮಂದಿರಿಂದ, **ವೃತಃ** = ಕೂಡಿದ, **ಧರ್ಮಾತ್ಮಜಃ** = ಯುಧಿಷ್ಠಿರನು, **ಸುರಾಣಾಂ** = ದೇವತೆಗಳ, **ಸಭಾಃ** = ಸಭೆಗಳನ್ನು, **ಯಥಾಸ್ಥಿತಾಃ** = ಹೇಗಿವೆಯೋ ಹಾಗೆ, **ನಿಶಮ್ಯ** = ನಾರದರಿಂದ ಕೇಳಿ, **ನಾರದಂ** = ನಾರದರನ್ನು, **ಅನ್ವಪೃಚ್ಛತ್** = ಅನುವಾದಪೂರ್ವಕವಾಗಿ ಪ್ರಶ್ನಿಸಿದನು.

**ತಾತ್ಪರ್ಯ** :- ಒಮ್ಮೆ ಧರ್ಮರಾಜ ಎಲ್ಲ ಸಾಮಂತ ರಾಜರೊಂದಿಗೆ ಮತ್ತು ಭೀಮನೇ ಮೊದಲಾದ ತಮ್ಮಂದಿರ ಜೊತೆಗೆ ಸಭೆಯಲ್ಲಿದ್ದ. ಆಗ ನಾರದರು ದೇವತೆಗಳ ಸಭೆಯನ್ನು ಅವು ಹೇಗಿದ್ದವೋ ಹಾಗೆ ವರ್ಣಿಸಿದರು. ಅದನ್ನು ಕೇಳಿದ ಯುಧಿಷ್ಠಿರ ನಾರದರು ಹೇಳಿದ್ದನ್ನು ಅನುವಾದ ಮಾಡಿ ಪ್ರಶ್ನೆ ಮಾಡಿದ.

**ಅಂತರಿಕ್ಷಂ ತ್ವಯಾ ಪ್ರೋಕ್ತಂ ಲಕ್ಷಯೋಜನಮುಚ್ಛ್ರಿತಮ್ ।**
**ಅರ್ಧಕೋಟ್ಯುಚ್ಛ್ರಿತಃ ಸ್ವರ್ಗೋ ವಿಮಾನಾವಲಿಸಂಕುಲಃ ॥ ೫೬ ॥**

**ಪದಚ್ಛೇದ** :- ಅಂತರಿಕ್ಷಂ, ತ್ವಯಾ, ಪ್ರೋಕ್ತಂ, ಲಕ್ಷಯೋಜನಂ, ಉಚ್ಛ್ರಿತಂ, ಅರ್ಧಕೋಟ್ಯುಚ್ಛ್ರಿತಃ, ಸ್ವರ್ಗಃ, ವಿಮಾನಾವಲಿಸಂಕುಲಃ ।

**ಅರ್ಥ** :- **ತ್ವಯಾ** = ನಿನ್ನಿಂದ, **ಲಕ್ಷಯೋಜನಂ** = ಲಕ್ಷಯೋಜನಗಳಷ್ಟು, **ಉಚ್ಛ್ರಿತಂ** = ವ್ಯಾಪಿಸಿದ, **ಅಂತರಿಕ್ಷಂ** = ಅಂತರಿಕ್ಷವು, **ಪ್ರೋಕ್ತಂ** = ಹೇಳಲ್ಪಟ್ಟಿತು, **ವಿಮಾನಾವಲಿಸಂಕುಲಃ** = ದೇವರಥಗಳ ಸಮೂಹದಿಂದ ಕೂಡಿದ, **ಅರ್ಧಕೋಟ್ಯುಚ್ಛ್ರಿತಃ** = ೫೦ ಲಕ್ಷ ಯೋಜನ ವಿಸ್ತೃತವಾದ, **ಸ್ವರ್ಗಃ** = ಸ್ವರ್ಗಲೋಕವು (ಹೇಳಲ್ಪಟ್ಟಿತು).

**ತಾತ್ಪರ್ಯ** :- ಪೃಥಿವೀಗಿಂತ ಮೇಲೆ ಲಕ್ಷ ಯೋಜನಗಳು ಅಂತರಿಕ್ಷ ಲೋಕ, ೫೦ ಲಕ್ಷ ಯೋಜನೆಗಳಷ್ಟು ಸ್ವರ್ಗಲೋಕ ದೇವತೆಗಳ ರಥಗಳ ಸಮೂಹದಿಂದ ಕೂಡಿದೆ. ಅಂದರೆ ಸ್ವರ್ಗವು ದೇವಲೋಕ.

ಭುವಃ ಸ್ವರ್ಗಶ್ಚ ಕೋಟ್ಯೈವ ಯೋಜನಾನಾಂ ಪ್ರವಿಸ್ಕೃತೌ ।
ಮಹರ್ಜನಸ್ತಪಶ್ಚೈವ ಕ್ರಮಾದಧ್ಯರ್ಧಯೋಜನಾಃ ।
ಪಂಚಾಶತ್ಕೋಟಿವಿಸ್ತಾರಾ ಯೋಜನಾನಾಂ ಸಮಸ್ತಶಃ ॥ ೫೭ ॥

ಪದಚ್ಛೇದ :- ಭುವಃ, ಸ್ವರ್ಗಃ, ಚ, ಕೋಟ್ಯಾ, ಏವ, ಯೋಜನಾನಾಂ, ಪ್ರವಿಸ್ಕೃತೌ, ಮಹಃ, ಜನಃ, ತಪಃ, ಚ, ಏವ, ಕ್ರಮಾತ್, ಅಧ್ಯರ್ಧಯೋಜನಾಃ ।

**ಅರ್ಥ** :- **ಭುವಃ** = ಅಂತರಿಕ್ಷಲೋಕವು, **ಚ** = ಮತ್ತು, **ಸ್ವರ್ಗಃ** = ಸ್ವರ್ಗಲೋಕವು, **ಯೋಜನಾನಾಂ ಕೊಟ್ಯಾ ಏವ** = ಕೋಟಿ ಯೋಜನಗಳಿಂದ, **ಪ್ರವಿಸ್ಕೃತೌ** = ವಿಸ್ತಾರವುಳ್ಳವುಗಳು (ಪೂರ್ವದಿಂದ ಪಶ್ಚಿಮಕ್ಕೆ ದಕ್ಷಿಣದಿಂದ ಉತ್ತರಕ್ಕೆ ಹೀಗೆ ಅಳತೆ ಮಾಡಿದಾಗ) (**ಉದ್ದ X ಅಗಲ** = ವಿಸ್ತಾರ), **ಮಹಃ** = ಮಹಲೋಕವು, **ಚ** = ಮತ್ತು, **ಜನಃ** = ಜನೋಲೋಕವು, **ತಪಃ ಏವ** = ತಪೋಲೋಕವೂ ಕೂಡ, **ಕ್ರಮಾತ್** = ಕ್ರಮವಾಗಿ, **ಅಧ್ಯರ್ಧಯೋಜನಾಃ** = ಹಿಂದಿನಕ್ಕಿಂತ ಅರ್ಧ ಅಂಶ ಹೆಚ್ಚಾದ ಯೋಜನವುಳ್ಳವುಗಳು.

**ತಾತ್ಪರ್ಯ** :- ಅಂತರಿಕ್ಷ ಲೋಕ ಮತ್ತು ಸ್ವರ್ಗಲೋಕ ಎರಡೂ ಕೂಡ ಪ್ರತ್ಯೇಕವಾಗಿ ಒಂದು ಕೋಟಿ ವಿಸ್ತಾರವುಳ್ಳ ಉಳ್ಳವುಗಳು. ಮಹಲೋಕ ಜನಲೋಕ ಮತ್ತು ತಪೋಲೋಕಗಳು ಹಿಂದಿನ ಲೋಕಗಳಿಗಿಂತ ಅರ್ಧದಷ್ಟು ಹೆಚ್ಚು ಯೋಜನಗಳಷ್ಟಿವೆ.

ಹೀಗಾಗಿ ಒಟ್ಟು ಲೋಕಗಳ ಅಳತೆಯು ಈ ರೀತಿ ಇದೆ.

| | |
|---|---|
| ಭೂಮಧ್ಯದಿಂದ ಮೇಲ್ಭಾಗ | ೫೦,೦೦೦ ಯೋಜನಗಳು |
| ಭುವೋಲೋಕ (ಅಂತರಿಕ್ಷ) | ೧,೦೦,೦೦೦ ಯೋಜನಗಳು |
| ಸ್ವರ್ಗಲೋಕ | ೫೦,೦೦,೦೦೦ ಯೋಜನಗಳು |
| ಮಹೋಲೋಕ | ೭೭,೨೫,೦೦೦ ಯೋಜನಗಳು |
| | (೫೧,೫೦,೦೦೦ +೨೫,೭೫,೦೦೦) |
| ಜನೋಲೋಕ | ೧,೧೫,೮೭,೫೦೦ ಯೋಜನಗಳು |
| | (೭೭,೨೫,೦೦೦ + ೩೮,೬೨,೫೦೦) |
| ತಪೋಲೋಕ | ೧,೭೩,೮೧,೨೫೦ ಯೋಜನಗಳು |
| | (೧,೧೫,೮೭,೫೦೦ + ೫೭,೯೩,೭೫೦) |
| ಒಟ್ಟು | ೪,೧೭,೪೩,೭೫೦ |

**ಯಾವಂತ ಏತೇ ಮಿಳಿತಾಸ್ತತ್ಪ್ರಮಾಣ ಉದೀರಿತಃ ।**
**ಸತ್ಯಾಖ್ಯೋ ಬ್ರಹ್ಮಲೋಕಸ್ತು ಯತ್ರ ಬ್ರಹ್ಮಾ ವಿರಾಜತೇ ॥ ೫೮ ॥**

**ತತಶ್ಚ ದ್ವಿಗುಣಃ ಪ್ರೋಕ್ತೋ ವಿಷ್ಣುಲೋಕಃ ಸನಾತನಃ ।**
**ಉತ್ತರೋತ್ತರತಃ ಸರ್ವೇ ಸುಖೇ ಶತಗುಣೋತ್ತರಾಃ ॥ ೫೯ ॥**

ಪದಚ್ಛೇದ :- ಪಂಚಾಶತ್ಕೋಟಿವಿಸ್ತಾರಾಃ, ಯೋಜನಾನಾಂ, ಸಮಸ್ತಶಃ, ಯಾವಂತಃ, ಏತೇ, ಮಿಳಿತಾಃ, ತತ್ಪ್ರಮಾಣಃ, ಉದೀರಿತಃ, ಸತ್ಯಾಖ್ಯಃ, ಬ್ರಹ್ಮಲೋಕಃ, ತು, ಯತ್ರ, ಬ್ರಹ್ಮಾ, ವಿರಾಜತೇ, ತತಃ, ಚ, ದ್ವಿಗುಣಃ, ಪ್ರೋಕ್ತಃ, ವಿಷ್ಣುಲೋಕಃ, ಸನಾತನಃ ।

**ಅರ್ಥ :-** **ಮಹೋಲೋಕ** = ಜನೋಲೋಕ, ತಪೋಲೋಕಗಳು, **ಯೋಜನಾನಾಂ ಪಂಚಾಶತ್ಕೋಟಿವಿಸ್ತಾರಾಃ** = ಐವತ್ತುಕೋಟಿ ಯೋಜನ ವಿಸ್ತಾರವುಳ್ಳವುಗಳು, **ಯತ್ರ** = ಯಾವ ಲೋಕದಲ್ಲಿ, **ಬ್ರಹ್ಮಾ** = ಚತುರ್ಮುಖ ಬ್ರಹ್ಮನು, **ವಿರಾಜತೇ** = ರಾರಾಜಿಸುತ್ತಾನೋ ಅಂತಹ, **ಸತ್ಯಾಖ್ಯಃ** = ಸತ್ಯವೆಂದು ಹೆಸರುಳ್ಳ, **ಬ್ರಹ್ಮಲೋಕಃ** = ಬ್ರಹ್ಮಲೋಕವು, **ಏತೇ** = ಈ ಲೋಕಗಳು, **ಸಮಸ್ತಶಃ** = ಎಲ್ಲವೂ, **ಮಿಲಿತಾಃ** = ಕೂಡಿ, **ಯಾವಂತಃ** = ಎಷ್ಟು ಅಳತೆಯುಳ್ಳವುಗಳೋ, **ತತ್ಪ್ರಮಾಣಃ** = ಅಷ್ಟು ಪ್ರಮಾಣವುಳ್ಳದ್ದು, **ಸನಾತನಃ** = ನಿತ್ಯವಾದ, **ವಿಷ್ಣುಲೋಕಃ** = ವಿಷ್ಣುಲೋಕವು, **ತತಃ** = ಈ ಎಲ್ಲ ಲೋಕಕ್ಕಿಂತ, **ದ್ವಿಗುಣಃ** = ಎರಡು ಪಟ್ಟು (ಎಂದು), **ಪ್ರೋಕ್ತಂ** = ಹೇಳಲ್ಪಟ್ಟಿದೆ.

ತಾತ್ಪರ್ಯ :- ಮಹೋಲೋಕ, ಜನೋಲೋಕ ತಪೋಲೋಕಗಳ ವಿಸ್ತಾರ ೫೦ ಕೋಟಿ ಯೋಜನಗಳು. ಹಿಂದೆ ಹೇಳಿದಂತೆ ಭೂಮಧ್ಯದಿಂದಾರಂಭಿಸಿ ತಪೋಲೋಕದವರೆಗೆ, ಎಷ್ಟು ಪರಿಮಾಣವಿದೆಯೋ ಅಷ್ಟು ಬ್ರಹ್ಮಲೋಕದ ಪರಿಮಾಣ. ಈ ಬ್ರಹ್ಮಲೋಕಕ್ಕೆ ಸತ್ಯಲೋಕ ಎಂದು ಹೆಸರು. ಮತ್ತು ಇಲ್ಲಿ ಚತುರ್ಮುಖ ಬ್ರಹ್ಮದೇವರು ವಿರಾಜಮಾನರಾಗಿದ್ದಾರೆ. ಈ ಎಲ್ಲ ಲೋಕದ ಎರಡರಷ್ಟು ವಿಷ್ಣುಲೋಕ.

ಹೀಗಾಗಿ –

| | | |
|---|---|---|
| ಬ್ರಹ್ಮಲೋಕ | - | ೪,೧೭,೪೩,೭೫೦ ಯೋಜನಗಳು |
| ಎಲ್ಲ ಲೋಕಗಳು + ಬ್ರಹ್ಮಲೋಕ | - | ೮,೩೪,೮೭,೫೦೦ ಯೋಜನಗಳು |
| ವಿಷ್ಣುಲೋಕ | - | ೧೬,೬೯,೭೫,೦೦೦ |
| ಹೀಗಾಗಿ ಭೂರಾದಿ ತಪೋಲೋಕ ... | | ೪,೧೭,೪೩,೭೫೦ |
| ಸತ್ಯಲೋಕ | | ೪,೧೭,೪೩,೭೫೦ |
| ವಿಷ್ಣುಲೋಕ | | ೧೬,೬೯,೭೫,೦೦೦ |

ಒಟ್ಟು ಊರ್ಧ್ವಲೋಕಗಳ ಪರಿಮಾಣ ೨೫,೦೪,೬೨,೫೦೦ ಯೋಜನಗಳು

ಇದನ್ನೆ ಅಂದಾಜು ೨೫ ಕೋಟಿ ಯೋಜನಗಳು ಎಂದು ಹೇಳಿದ್ದಾರೆ. ಸ್ವಲ್ಪ ಹೆಚ್ಚು ಎಂದರ್ಥ.

**ಅನಂತಜನಸಂಪೂರ್ಣಾ ಅಪಿ ತೇ ಹೀಚ್ಛಯಾ ಹರೇಃ ।**
**ಅವಕಾಶವಂತೋ ದಿವ್ಯತ್ವಾತ್ ಪೂರ್ಯಂತೇ ನ ಕದಾಚನ ।**
**ಸರ್ವಕಾಮಸುಖೈಃ ಪೂರ್ಣಾ ದಿವ್ಯಸ್ತ್ರೀಪುರುಷೋಜ್ಜ್ವಲಾಃ ॥ ೬೦-೬೧ ॥**

**ಪದಚ್ಛೇದ :-** ಉತ್ತರೋತ್ತರತಃ, ಸರ್ವೇ, ಸುಖೇ, ಶತಗುಣೋತ್ತರಾಃ, ಅನಂತ ಜನ ಸಂಪೂರ್ಣಾಃ, ಅಪಿ, ತೇ, ಹಿ, ಇಚ್ಛಯಾ,ಹರೇಃ, ಅವಕಾಶವಂತಃ, ದಿವ್ಯತ್ವಾತ್, ಪೂರ್ಯಂತೇ, ನ, ಕದಾಚನ, ಸರ್ವಕಾಮಸುಖೈಃ, ಪೂರ್ಣಾಃ, ದಿವ್ಯಸ್ತ್ರೀಪುರುಷೋಜ್ವಲಾಃ।

**ಅರ್ಥ :-** **ಸರ್ವೇ** = ಭೂರಾದಿ ಎಲ್ಲ ಲೋಕಗಳೂ, **ಸುಖೇ** = ಆನಂದದಲ್ಲಿ, **ಉತ್ತರೋತ್ತರತಃ** = ಹಿಂದಿನ ಹಿಂದಿನಕ್ಕಿಂತ, **ಶತಗುಣೋತ್ತರಾಃ** = ಯಥಾಯೋಗ್ಯವಾಗಿ ನೂರಾರುಪಟ್ಟು ಹೆಚ್ಚು ಆನಂದವುಳ್ಳವುಗಳು, **ಅನಂತಜನಸಂಪೂರ್ಣಾಃ ಅಪಿ** = ಅನಂತ ಜನರಿಂದ ಪೂರ್ಣವಾಗಿದ್ದರೂ ಕೂಡ, **ತೇ** = ಆ ಲೋಕಗಳು, **ಹರೇಃ** = ಭಗವಂತನ, **ಇಚ್ಛಯಾ** = ಇಚ್ಛೆಯಿಂದ, **ಅವಕಾಶವಂತಃ** = ಮತ್ತೂ ಅವಕಾಶವುಳ್ಳವುಗಳಾಗಿ, **ಕದಾಚನ**

= ಯಾವಾಗಲೂ, **ನ ಪೂರ್ಯಂತೇ ಹಿ** = ಪೂರ್ಣವಾಗುವುದೇ ಇಲ್ಲವಷ್ಟೇ (ಈ ಲೋಕಗಳು), **ಸರ್ವಕಾಮ ಸುಖೈಃ** = ಎಲ್ಲ ವಿಧವಾದ ಕಾಮಿತಾರ್ಥಗಳಿಂದ, **ಪೂರ್ಣಾಃ** = ಪೂರ್ಣವಾದವುಗಳು, **ದಿವ್ಯಸ್ತ್ರೀಪುರುಷೋಜ್ವಲಾಃ** = ದಿವ್ಯರಾದ ಸ್ತ್ರೀಪುರುಷರಿಂದ ಕಂಗೊಳಿಸುತ್ತಿವೆ.

**ತಾತ್ಪರ್ಯ** :- ಹಿಂದೆ ಹೇಳಿದ ಭೂರಾದಿ ಎಲ್ಲ ಲೋಕಗಳಲ್ಲಿ ಆನಂದದ ಪರಿಮಾಣವನ್ನು ಮತ್ತು ಆ ಲೋಕಗಳ ಸ್ವರೂಪವನ್ನು ಇಲ್ಲಿ ವರ್ಣಿಸಿದೆ. ಹಿಂದಿನ ಲೋಕಕ್ಕಿಂತ ಮುಂದಿನ ಮುಂದಿನ ಲೋಕಗಳಲ್ಲಿ ಆನಂದವು ನೂರಾರು ಪಟ್ಟು ಹೆಚ್ಚಿದೆ. ಎಲ್ಲ ಲೋಕಗಳೂ ಅನಂತ ಜೀವರಿಂದ ಪೂರ್ಣವಾಗಿವೆ. ಹಾಗಿದ್ದರೂ ಭಗವದಿಚ್ಛೆಯಿಂದ ಮತ್ತೂ ಅವಕಾಶವಿದೆ. ಎಂದೂ ಇವು ಪೂರ್ಣವಾಯಿತು, ಜಾಗವೇ ಇಲ್ಲ ಎಂದಾಗುವುದಿಲ್ಲ. ಇಲ್ಲಿ ದಿವ್ಯರಾದ ಸ್ತ್ರೀ ಪುರುಷರು ಕಂಗೊಳಿಸುತ್ತಿದ್ದಾರೆ. ಎಲ್ಲ ವಿಧದ ಕಾಮಸುಖದಿಂದ ಪೂರ್ಣವಾಗಿದೆ.

**ದಿವ್ಯರತ್ನಸಮಾಕೀರ್ಣಂ ತಥಾ ಪಾತಾಳಸಪ್ತಕಮ್ ।**
**ಅಧಸ್ತಾಚ್ಛೇಷದೇವೇನ ಬಲಿನಾ ಸಮಧಿಷ್ಠಿತಮ್ ॥ ೬೨ ॥**

**ಪದಚ್ಛೇದ** :- ದಿವ್ಯರತ್ನಸಮಾಕೀರ್ಣಂ, ತಥಾ, ಪಾತಾಳಸಪ್ತಕಂ, ಅಧಸ್ತಾತ್, ಶೇಷದೇವೇನ, ಬಲಿನಾ, ಸಮಧಿಷ್ಠಿತಂ ।

**ಅರ್ಥ** :- **ಅಧಸ್ತಾತ್** = ಕೆಳಭಾಗದಲ್ಲಿ, **ಬಲಿನಾ** = ಬಲಿಚಕ್ರವರ್ತಿಯಿಂದ, **ಶೇಷದೇವೇನ** = ಶೇಷನಿಂದ, ಶೇಷನಿಗೂ ದೇವನಾದ ಕೂರ್ಮರೂಪಿ, ವಾಯು ಮತ್ತು ಭಗವಂತನಿಂದ, **ಸಮಧಿಷ್ಠಿತಂ** = ಚೆನ್ನಾಗಿ ಧರಿಸಲ್ಪಟ್ಟ, **ದಿವ್ಯರತ್ನಸಮಾಕೀರ್ಣಂ** = ದಿವ್ಯರತ್ನಗಳಿಂದ ತುಂಬಿರುವ, **ಪಾತಾಳಸಪ್ತಕಂ** = ಏಳು ಕೆಳ ಲೋಕಗಳು, **ತಥಾ** = ಭೂಮಧ್ಯದಿಂದ ೨೫ ಕೋಟಿ ಯೋಜನ ಪರಿಮಾಣವುಳ್ಳದ್ದು.

**ತಾತ್ಪರ್ಯ** :- ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಲ ಎಂಬ ಏಳು ಅಧೋಲೋಕಗಳು. ಇವುಗಳನ್ನು ಬಲಿಚಕ್ರವರ್ತಿ ಆಳುತ್ತಾನೆ. ಕೆಳಭಾಗದಲ್ಲಿ ಶೇಷ, ವಾಯುಕೂರ್ಮ ಮತ್ತು ಕೂರ್ಮರೂಪಿ ಭಗವಂತ ಹೊತ್ತಿದ್ದಾರೆ. ಇವುಗಳು ದಿವ್ಯವಾದ ಮಣಿ ರತ್ನಗಳಿಂದ ತುಂಬಿದ್ದಾವೆ. ಇವುಗಳೂ ಕೂಡ ಹೇಗೆ ಮೇಲ್ಲೋಕ ೨೫ ಕೋಟಿ ಯೋಜನವೋ ಹಾಗೇ ೨೫

ಕೋಟಿ ಯೋಜನವುಳ್ಳವುಗಳು. ಒಟ್ಟು ಪಾತಾಳದಿಂದ ಆರಂಭಿಸಿ ವಿಷ್ಣುಲೋಕ ಸೇರಿ ೫೦ ಕೋಟಿ ಯೋಜನ ಪರಿಮಾಣ.

**ಕಾಮಭೋಗಸಮಾಯುಕ್ತಾ ಬಹುವರ್ಷಸಹಸ್ರಿಣಃ ।**
**ಸಪ್ತದ್ವೀಪೇಷು ಪುರುಷಾ ನಾರ್ಯಶ್ಚೋಕ್ತಾಃ ಸುರೂಪಿಣಃ ॥ ೬೩ ॥**

ಪದಚ್ಛೇದ :- ಕಾಮಭೋಗಸಮಾಯುಕ್ತಾಃ, ಬಹುವರ್ಷಸಹಸ್ರಿಣಃ, ಸಪ್ತದ್ವೀಪೇಷು, ಪುರುಷಾಃ, ನಾರ್ಯಃ, ಚ, ಉಕ್ತಾಃ, ಸುರೂಪಿಣಃ ।

**ಅರ್ಥ** :- **ಸಪ್ತದ್ವೀಪೇಷು** = ಸಪ್ತದ್ವೀಪಗಳಲ್ಲಿ, **ಸುರೂಪಿಣಃ** = ಸುಂದರರಾದ, **ಪುರುಷಾಃ** = ಪುರುಷರು, **ಚ** = ಮತ್ತು, **ನಾರ್ಯಃ** = ಸ್ತ್ರೀಯರೂ ಕೂಡ, **ಕಾಮಭೋಗಸಮಾಯುಕ್ತಾಃ** = ಕಾಮಭೋಗಗಳಿಂದ ಕೂಡಿದವರಾಗಿ, **ಬಹುವರ್ಷಸಹಸ್ರಿಣಃ** = ನೂರಾರು ವರ್ಷ ಇರುತ್ತಾರೆಂದು, **ಉಕ್ತಾಃ** = ಹೇಳಲ್ಪಟ್ಟಿದ್ದಾರೆ.

**ತಾತ್ಪರ್ಯ** :- ಈ ಸಪ್ತದ್ವೀಪಗಳಲ್ಲಿ ಸಾಧನ ಭೂಮಿಯನ್ನು ಹೊರತುಪಡಿಸಿ, ಜಂಬೂ, ಪ್ಲಕ್ಷ, ಪುಷ್ಕರ ಮೊದಲಾದ ದ್ವೀಪಗಳಲ್ಲಿ ಸುಂದರರಾದ ಪುರುಷ ಸ್ತ್ರೀಯರು ಕಾಮೋಪಭೋಗವನ್ನು ಅನುಭವಿಸುತ್ತಾ ಸಾವಿರಾರು ವರ್ಷ ಬದುಕುತ್ತಾರೆ.

**ಏಷಾಂ ಚ ಸರ್ವಲೋಕಾನಾಂ ಧಾತಾ ನಾರಾಯಣಃ ಪರಃ ।**
**ವಿಷ್ಣುಲೋಕಸ್ಥಿತೋ ಮುಕ್ತೈಃ ಸದಾ ಸರ್ವೈರುಪಾಸ್ಯತೇ ॥ ೬೪ ॥**

ಪದಚ್ಛೇದ :- ಏಷಾಂ, ಚ, ಸರ್ವಲೋಕಾನಾಂ, ಧಾತಾ, ನಾರಾಯಣಃ, ಪರಃ, ವಿಷ್ಣುಲೋಕಸ್ಥಿತಃ, ಮುಕ್ತೈಃ, ಸದಾ, ಸರ್ವೈಃ, ಉಪಾಸ್ಯತೇ ।

**ಅರ್ಥ** :- **ಏಷಾಂ** = ಹಿಂದೆ ಹೇಳಿದ, **ಸರ್ವಲೋಕಾನಾಂ ಚ** = ಎಲ್ಲಾ ೧೪ ಲೋಕಗಳ, **ಧಾತಾ** = ಧಾರಕನಾದ, **ಪರಃ** = ಸರ್ವೋತ್ತಮನಾದ, **ನಾರಾಯಣಃ** = ಭಗವಂತನು, **ವಿಷ್ಣುಲೋಕಸ್ಥಿತಃ** = ವಿಷ್ಣುಲೋಕದಲ್ಲಿ ದೃಶ್ಯನಾಗಿದ್ದುಕೊಂಡು, **ಸರ್ವೈಃ ಮುಕ್ತೈಃ** = ಎಲ್ಲಾ ಮುಕ್ತರಿಂದ, **ಸದಾ** = ಯಾವಾಗಲೂ, **ಉಪಾಸ್ಯತೇ** = ಉಪಾಸಿಸಲ್ಪಡುತ್ತಾನೆ.

ತಾತ್ಪರ್ಯ :- ಎಲ್ಲಾ ಹದಿನಾಲ್ಕು ಲೋಕಗಳ ಧಾರಕ ಶ್ರೀಹರಿ. ಅವನು ಸರ್ವೋತ್ತಮ ಅವನು ವಿಷ್ಣುಲೋಕದಲ್ಲಿ ಎಲ್ಲ ಮುಕ್ತರ ಸೇವೆಯನ್ನು ಯಾವಾಗಲೂ ಪಡೆಯುತ್ತಾನೆ.

**ಸೇವಕಾ ಬ್ರಹ್ಮಣಶ್ಚೈವ ದೇವಾ ವೇದಾಶ್ಚ ಸರ್ವಶಃ ।**
**ಶಕ್ರಸ್ಯ ಮುನಯಃ ಸರ್ವೇ ಹರಿಶ್ಚಂದ್ರಶ್ಚ ಭೂಮಿಪಃ ॥ ೬೫ ॥**

ಪದಚ್ಛೇದ :- **ಸೇವಕಾಃ, ಬ್ರಹ್ಮಣಃ, ಚ, ಏವ, ದೇವಾಃ, ವೇದಾಃ, ಚ, ಸರ್ವಶಃ, ಶಕ್ರಸ್ಯ, ಮುನಯಃ, ಸರ್ವೇ, ಹರಿಶ್ಚಂದ್ರಃ, ಚ, ಭೂಮಿಪಃ ।**

**ಅರ್ಥ** :- **ಸರ್ವಶಃ** = ಎಲ್ಲಾ, **ದೇವಾಃ** = ದೇವತೆಗಳು, **ಚ** = ಮತ್ತು, **ವೇದಾಃ** = ವೇದಾಭಿಮಾನಿಗಳೂ ಕೂಡ, **ಬ್ರಹ್ಮಣಃ** = ಚತುರ್ಮುಖ ಬ್ರಹ್ಮದೇವರ, **ಸೇವಕಾಃ ಏವ** = ಸೇವಕರೇ ಆಗಿದ್ದಾರೆ, **ಸರ್ವೇ** = ಎಲ್ಲ, **ಮುನಯಃ** = ಮುನಿಗಳು, **ಚ** = ಮತ್ತು, **ಭೂಮಿಪಃ** = ರಾಜನಾದ, **ಹರಿಶ್ಚಂದ್ರಃ** = ಹರಿಶ್ಚಂದ್ರನು, **ಶಕ್ರಸ್ಯ** = ದೇವೇಂದ್ರನ, **ಸೇವಕಾಃ** = ಸೇವಕರು.

ತಾತ್ಪರ್ಯ :- ಎಲ್ಲ ದೇವತೆಗಳು, ವೇದಾಭಿಮಾನಿಗಳೂ ಕೂಡ ಬ್ರಹ್ಮದೇವರ ಸೇವಕರು. ಎಲ್ಲ ಮುನಿಗಳು ಮತ್ತು ರಾಜನಾದ ಹರಿಶ್ಚಂದ್ರನು ಇಂದ್ರನ ಸೇವಕರು.

**ಅಖಿಲಾ ಅಪಿ ರಾಜಾನಃ ಪಾಂಡುಶ್ಚಾಸ್ಮತ್ಪಿತಾ ಮುನೇ ।**
**ಯಮಸ್ಯೈವಾನುಗಾಃ ಪ್ರೋಕ್ತಾ ರಾಜಭಿಸ್ತೈರ್ಯಮೇನ ಚ ॥ ೬೬ ॥**

**ಉಪಾಸ್ಯಮಾನೋ ಭಗವಾನ್ ರಾಮೋ ಯಮಸಭಾತಳೇ ।**
**ಉಕ್ತ ಇಂದ್ರೇಣ ಚೋಪಾಸ್ಯೋ ವಾಮನಾತ್ಮಾ ಜನಾರ್ದನಃ ॥ ೬೭ ॥**

ಪದಚ್ಛೇದ :- **ಅಖಿಲಾಃ, ಅಪಿ, ರಾಜಾನಃ, ಪಾಂಡುಃ, ಚ, ಅಸ್ಮತ್ಪಿತಾ, ಮುನೇ, ಯಮಸ್ಯ, ಏವ, ಅನುಗಾಃ, ಪ್ರೋಕ್ತಾಃ, ರಾಜಭಿಃ, ತೈಃ, ಯಮೇನ, ಚ, ಉಪಾಸ್ಯಮಾನಃ, ಭಗವಾನ್, ರಾಮಃ, ಯಮಸಭಾತಳೇ, ಉಕ್ತಃ, ಇಂದ್ರೇಣ, ಚ, ಉಪಾಸ್ಯಃ, ವಾಮನಾತ್ಮಾ ಜನಾರ್ದನಃ ।**

**ಅರ್ಥ** :- **ಅಖಿಲಾಃ ಅಪಿ** = ಎಲ್ಲಾ, **ರಾಜನಃ** = ರಾಜರುಗಳು, **ಚ** = ಮತ್ತು, **ಅಸ್ಮತ್ಪಿತಾ** = ನಮ್ಮ ತಂದೆಯಾದ, **ಪಾಂಡುಃ** = ಪಾಂಡುರಾಜನು,

ಯಮಸ್ಯ ಏವ = ಯಮನದ್ದೇ, ಅನುಗಾಃ = ಸೇವಕರೆಂದು, ಪ್ರೋಕ್ತಾಃ = ಹೇಳಲ್ಪಟ್ಟಿದ್ದಾರೆ, ಮುನೇ = ಮುನಿಗಳಾದ ನಾರದರೇ, ತೈಃ = ಆ, ರಾಜಭಿಃ = ರಾಜರಿಂದ, ಚ = ಮತ್ತು, ಯಮೇನ = ಯಮನಿಂದಲೂ, ಯಮಸಭಾತಳೇ = ಯಮಸಭೆಯಲ್ಲಿ, ಉಪಾಸ್ಯಮಾನಃ = ಸೇವಿಸಲ್ಪಡುವ, ರಾಮಃ = ರಾಮನು, ಉಕ್ತಃ = ಹೇಳಲ್ಪಟ್ಟಿದ್ದಾನೆ, ವಾಮನಾತ್ಮಾ = ವಾಮನ ರೂಪಿಯಾದ, ಜನಾರ್ದನಃ ಚ = ಜನಾರ್ದನನಾದರೂ, ಇಂದ್ರೇಣ = ದೇವೇಂದ್ರನಿಂದ, ಉಪಾಸ್ಯಃ = ಉಪಾಸಿಸಲ್ಪಡುವವನು.

ತಾತ್ಪರ್ಯ :- ಹರಿಶ್ಚಂದ್ರ ಬಿಟ್ಟು ಉಳಿದೆಲ್ಲ ರಾಜರೂ, ಧರ್ಮರಾಜಾದಿಗಳ ತಂದೆಯಾದ ಪಾಂಡುರಾಜನೂ ಕೂಡ ಯಮನ ಸೇವಕರೇ ಹೊರತು ಇಂದ್ರಾನುಚರರಲ್ಲ. ಯಮ ಮತ್ತು ಈ ಎಲ್ಲ ರಾಜರು ಯಮ ಸಭೆಯಲ್ಲಿ ಶ್ರೀರಾಮನ ಉಪಾಸನೆ ಮಾಡುತ್ತಾರೆ. ದೇವೇಂದ್ರನು ವಾಮನ ರೂಪಿ ಭಗವಂತನ ಉಪಾಸಕ.

ಪ್ರಾದುರ್ಭಾವಾಶ್ಚ ನಿಖಿಲಾ ಬ್ರಹ್ಮಣೋಪಾಸಿತಾಃ ಸದಾ ।
ವರುಣಸ್ಯಾನುಗಾ ನಾಗಾಸ್ತತ್ರ ಮತ್ಸ್ಯಾಕೃತಿರ್ಹರಿಃ ॥ ೬೮ ॥

ಗಂಧರ್ವಾ ಧನದಸ್ಯಾಪಿ ತತ್ರ ಕಲ್ಕೀ ಹರಿಃ ಪ್ರಭುಃ ।
ರುದ್ರಸ್ಯೋಗ್ರಾಣಿ ಭೂತಾನಿ ನೃಸಿಂಹಾತ್ಮಾ ಶಿವೇನ ಚ ॥ ೬೯ ॥

ಉಪಾಸ್ಯತೇ ಸದಾ ವಿಷ್ಣುರಿತ್ಯಾದ್ಯುಕ್ತಂ ತ್ವಯಾಽನಘ ।
ಸರ್ವರತ್ನಸ್ಥಲಾನ್ ದಿವ್ಯಾನ್ ದೇವಲೋಕಾನ್ ಪ್ರಭಾಷತಾ ॥ ೭೦ ॥

ಪದಚ್ಛೇದ :- ಪ್ರಾದುರ್ಭಾವಾಃ, ಚ, ನಿಖಿಲಾಃ, ಬ್ರಹ್ಮಣಾ, ಉಪಾಸಿತಾಃ, ಸದಾ, ವರುಣಸ್ಯ, ಅನುಗಾಃ, ನಾಗಾಃ, ತತ್ರ, ಮತ್ಸ್ಯಾಕೃತಿಃ, ಹರಿಃ, ಗಂಧರ್ವಾಃ, ಧನದಸ್ಯ, ಅಪಿ, ತತ್ರ, ಕಲ್ಕೀ, ಹರಿಃ, ಪ್ರಭುಃ, ರುದ್ರಸ್ಯ, ಉಗ್ರಾಣಿ, ಭೂತಾನಿ, ನೃಸಿಂಹಾತ್ಮಾ ಶಿವೇನ, ಚ, ಉಪಾಸ್ಯತೇ, ಸದಾ, ವಿಷ್ಣುಃ, ಇತ್ಯಾದಿ, ಉಕ್ತಂ, ತ್ವಯಾ, ಅನಘ, ಸರ್ವರತ್ನಸ್ಥಲಾನ್, ದಿವ್ಯಾನ್, ದೇವಲೋಕಾನ್, ಪ್ರಭಾಷತಾ ।

ಅರ್ಥ :- ನಿಖಿಲಾಃ = ಎಲ್ಲಾ, ಪ್ರಾದುರ್ಭಾವಾಶ್ಚ = ಅವತಾರ ರೂಪಗಳೂ ಕೂಡ, ಬ್ರಹ್ಮಣಾ = ಚತುರ್ಮುಖ ಬ್ರಹ್ಮ ದೇವರಿಂದ, ಸದಾ = ಯಾವಾಗಲೂ, ಉಪಾಸಿತಾಃ = ಉಪಾಸಿಸಲ್ಪಟ್ಟಿವೆ, ನಾಗಾಃ = ನಾಗಗಳು,

**ವರುಣಸ್ಯ** = ವರುಣನ, **ಅನುಗಾಃ** = ಅನುಚರರು, **ತತ್ರ** = ಆ ವರುಣಲೋಕದಲ್ಲಿ, **ಮತ್ಸ್ಯಾಕೃತಿಃ** = ಮತ್ಸ್ಯರೂಪಿಯಾದ, **ಹರಿಃ** = ಭಗವಂತನು (ಉಪಾಸಿಸಲ್ಪಡುತ್ತಾನೆ), **ಧನದಸ್ಯ ಅಪಿ** = ಕುಬೇರನಿಗೂ ಕೂಡ, **ಗಂಧರ್ವಾಃ** = ಗಂಧರ್ವರು (ಅನುಚರರು), **ತತ್ರ** = ಆ ಕುಬೇರ ಲೋಕದಲ್ಲಿ, **ಕಲ್ಕೀ** = ಕಲ್ಕಿರೂಪಿಯಾದ, **ಪ್ರಭುಃ** = ಸಮರ್ಥನಾದ, **ಹರಿಃ** = ಭಗವಂತನು (ಉಪಾಸ್ಯನು), **ರುದ್ರಸ್ಯ** = ರುದ್ರ ದೇವರಿಗೆ, **ಉಗ್ರಾಣಿ ಭೂತಾನಿ** = ಉಗ್ರಸ್ವರೂಪರಾದ ಭೂತಗಳು (ಅನುಚರರು), **ನೃಸಿಂಹಾತ್ಮಾ ವಿಷ್ಣುಃ** = ನರಸಿಂಹರೂಪಿಯಾದ ಶ್ರೀಹರಿಯು, **ಶಿವೇನ ಚ** = ರುದ್ರದೇವರಿಂದಲೂ, **ಉಪಾಸ್ಯತೇ** = ಉಪಾಸಿಸಲ್ಪಡುತ್ತಾನೆ, **ಇತ್ಯಾದಿ** = ಇವೇ ಮೊದಲಾದವುಗಳು, **ಅನಘ** = ದೋಷರಹಿತವಾದವನೇ, **ಉಕ್ತಂ** = ಹೇಳಲ್ಪಟ್ಟಿತು, **ಸರ್ವರತ್ನಸ್ಥಲಾನ್** = ರತ್ನಮಯ ಪ್ರದೇಶವುಳ್ಳ, **ದಿವ್ಯಾನ್** = ಪ್ರಕಾಶಿಸುತ್ತಿರುವ, **ದೇವಲೋಕಾನ್** = ದೇವ ಲೋಕಗಳನ್ನು, **ಪ್ರಭಾಷತಾ** = ಹೇಳುತ್ತಿರುವ, **ತ್ವಯಾ** = ನಿನ್ನಿಂದ.

**ತಾತ್ಪರ್ಯ** :- ಬ್ರಹ್ಮದೇವರು ಯಾವಾಗಲೂ ಭಗವಂತನ ಎಲ್ಲ ಅವತಾರ ರೂಪಗಳ ಉಪಾಸನೆ ಮಾಡುತ್ತಾರೆ. ಎಲ್ಲ ನಾಗಗಳು ವರುಣನ ಅನುಚರರು ಅವರು ವರುಣನೊಟ್ಟಿಗೆ ಮತ್ಸ್ಯರೂಪಿ ಹರಿಯ ಉಪಾಸನೆ ಮಾಡುತ್ತಾರೆ. ಅದರಂತೆ ಗಂಧರ್ವರು ಕುಬೇರನ ಸೇವಕರು. ಅವರೆಲ್ಲರೂ ಕಲ್ಕಿರೂಪನಾದ ಹರಿಯ ಸೇವೆ ಮಾಡುತ್ತಾರೆ. ಉಗ್ರರೂಪದ ಭೂತಗಳು ರುದ್ರದೇವರ ಅನುಚರರು. ಇವರು ಮತ್ತು ರುದ್ರದೇವರು ನರಸಿಂಹ ದೇವರ ಉಪಾಸನೆ ಮಾಡುತ್ತಾರೆ. ಇಷ್ಟು ವಿಷಯಗಳನ್ನು ರತ್ನಮಯವಾದ ಪ್ರಕಾಶಮಾನವಾದ ದೇವಲೋಕಗಳನ್ನು ವರ್ಣಿಸುತ್ತಿರುವ ನಾರದರು ಧರ್ಮರಾಜನಿಗೆ ಹೇಳಿದರು.

**ತತ್ರ ಮೇ ಸಂಶಯೋ ಭೂಯಾನ್ ಹರಿಶ್ಚಂದ್ರಃ ಕಥಂ ನೃಪಃ ।**
**ಐಂದ್ರಂ ಸಭಾತಳಂ ಪ್ರಾಪ್ತಃ ಪಾಂಡುರ್ನಾಸ್ಮತ್ಪಿತಾ ಮುನೇ ॥ ೭೧ ॥**

ಪದಚ್ಛೇದ :- ತತ್ರ, ಮೇ, ಸಂಶಯಃ, ಭೂಯಾನ್, ಹರಿಶ್ಚಂದ್ರಃ, ಕಥಂ, ನೃಪಃ, ಐಂದ್ರಂ, ಸಭಾತಲಂ, ಪ್ರಾಪ್ತಃ, ಪಾಂಡುಃ, ನ, ಅಸ್ಮತ್ಪಿತಾ, ಮುನೇ ।

**ಅರ್ಥ** :- **ಮುನೇ** = ನಾರದರೇ, **ನೃಪಃ** = ರಾಜನಾದ, **ಹರಿಶ್ಚಂದ್ರಃ** = ಹರಿಶ್ಚಂದ್ರನು, **ಕಥಂ** = ಹೀಗೆ, **ಐಂದ್ರಂ ಸಭಾತಲಂ** = ಇಂದ್ರ ಸಭೆಯನ್ನು,

**ಪ್ರಾಪ್ತಃ** = ಹೊಂದಿದನು, **ಅಸ್ಮತ್ಪಿತಾ** = ನಮ್ಮ ತಂದೆಯಾದ, **ಪಾಂಡುಃ** = ಪಾಂಡುರಾಜನು, **ಕಥಂ** = ಹೀಗೆ, **ನ ಪ್ರಾಪ್ತಃ** = ಹೊಂದಿಲ್ಲ ಎಂದು, **ತತ್ರ** = ಈ ವಿಷಯದಲ್ಲಿ, **ಮೇ** = ನನಗೆ, **ಭೂಯಾನ್** = ಬಹಳವಾದ, **ಸಂಶಯಃ** = ಸಂಶಯವು (ಇದೆ).

**ತಾತ್ಪರ್ಯ** :- ಹರಿಶ್ಚಂದ್ರ ಇಂದ್ರ ಸಭೆಯಲ್ಲಿ ಇದ್ದಾನೆ. ನಮ್ಮ ತಂದೆ ಪಾಂಡು ಅಲ್ಲಿಲ್ಲ. ಯಮ ಸಭೆಯಲ್ಲಿ ಇದ್ದಾನೆ ಏಕೆ ಹೀಗೆ ಎಂಬ ಸಂಶಯ ನನಗಿದೆ ಎಂದು ಧರ್ಮರಾಜ ಕೇಳಿದ.

**ಇತ್ಯುಕ್ತೋ ನಾರದಃ ಪ್ರಾಹ ರಾಜಸೂಯಕೃತೋನ್ನತಿಮ್ ।**
**ಹರಿಶ್ಚಂದ್ರಸ್ಯ ತಾಂ ದೃಷ್ಟ್ವಾ ಪಿತಾ ಯಮಸಭಾತಲೇ ।**
**ಸ್ಥಿತಸ್ತ್ವಾಮವದತ್ ಪಾಂಡೂ ರಾಮದ್ವಯಸುದೈವತೇ ॥ ೭೨ ॥**

**ಕರೋತು ರಾಜಸೂಯಂ ಮೇ ಪುತ್ರೋಽಜೇಯಾನುಜಾರ್ಚಿತಃ ।**
**ಪಾಲಿತೋ ವಾಸುದೇವೇನ ಕಿಂ ತಸ್ಯಾಸಾಧ್ಯಮತ್ರ ಹಿ ॥ ೭೩ ॥**

**ಪದಚ್ಛೇದ** :- ಇತಿ, ಉಕ್ತಃ, ನಾರದಃ, ಪ್ರಾಹ, ರಾಜಸೂಯಕೃತೋನ್ನತಿಂ, ಹರಿಶ್ಚಂದ್ರಸ್ಯ, ತಾಂ, ದೃಷ್ಟ್ವಾ, ಪಿತಾ, ಯಮಸಭಾತಲೇ, ಸ್ಥಿತಃ, ತ್ವಾಂ, ಅವದತ್, ಪಾಂಡುಃ, ರಾಮದ್ವಯಸುದೈವತೇ, ಕರೋತು, ರಾಜಸೂಯಂ, ಮೇ, ಪುತ್ರಃ, ಅಜೇಯಾನುಜಾರ್ಚಿತಃ, ಪಾಲಿತಃ, ವಾಸುದೇವೇನ, ಕಿಂ, ತಸ್ಯ, ಅಸಾಧ್ಯಂ, ಅತ್ರ, ಹಿ ।

**ಅರ್ಥ** :- **ಇತಿ** = ಈ ರೀತಿಯಾಗಿ, **ಉಕ್ತಃ** = ಹೇಳಲ್ಪಟ್ಟ, **ನಾರದಃ** = ನಾರದನು, **ಪ್ರಾಹ** = ಹೇಳಿದನು, **ಹರಿಶ್ಚಂದ್ರಸ್ಯ** = ಹರಿಶ್ಚಂದ್ರನ, **ತಾಂ** = ಆ ಯಾವ, **ರಾಜಸೂಯಕೃತೋನ್ನತಿಂ** = ರಾಜಸೂಯಯಾಗದಿಂದ ಮಾಡಲ್ಪಟ್ಟ ಉನ್ನತಿಯನ್ನು (ಇಂದ್ರ ಸಭಾಪ್ರವೇಶ), **ದೃಷ್ಟ್ವಾ** = ನೋಡಿ, **ರಾಮದ್ವಯ ಸುದೈವತೇ** = ದಾಶರಥ ರಾಮ ಮತ್ತು ಪರಶುರಾಮರ ಉಪಸ್ಥಿತಿ ಇರುವ, **ಯಮಸಭಾತಲೇ** = ಯಮ ಸಭೆಯಲ್ಲಿ, **ಸ್ಥಿತಃ** = ಇರುವ, **ಪಿತಾ** = ನಿನ್ನ ತಂದೆಯಾದ, **ಪಾಂಡುಃ** = ಪಾಂಡು ರಾಜನು, **ತಾಂ** = ನಿನ್ನನ್ನು ಕುರಿತು, **ವಾಸುದೇವೇನ** = ಶ್ರೀಕೃಷ್ಣನಿಂದ, **ಪಾಲಿತಃ** = ಪಾಲಿಸಲ್ಪಟ್ಟ, **ಅಜೇಯಾನುಜಾರ್ಚಿತಃ** = ಅಜೇಯರಾದ ಭೀಮ ಮತ್ತು ಅರ್ಜುನರಿಂದ

**ಕೂಡಿದ, ಮೇ** = ನನ್ನ, **ಪುತ್ರಃ** = ಮಗನಾದ ಧರ್ಮರಾಜನು, **ರಾಜಸೂಯಂ** = ರಾಜಸೂಯ ಯಾಗವನ್ನು, **ಕರೋತು** = ಮಾಡಲಿ, **ತಸ್ಯ** = ಶ್ರೀಕೃಷ್ಣ ಮತ್ತು ಭೀಮಾರ್ಜುನರಿಂದ ಸಹಿತನಾದ ಧರ್ಮರಾಜನಿಗೆ, **ಅತ್ರ** = ಈ ರಾಜಸೂಯ ವಿಷಯದಲ್ಲಿ, **ಅಸಾಧ್ಯಂ** = ಅಸಾಧ್ಯವಾದದು, **ಕಿಂ ಹಿ** = ಯಾವುದು, ತಾನೆ (ಇದೆ) (ಎಂದು), **ಅವದತ್** = ಹೇಳಿದನು.

**ತಾತ್ಪರ್ಯ :-** ನಾರದರ ಹತ್ತಿರ ಧರ್ಮರಾಜ ಪ್ರಶ್ನಿಸಿದಾಗ ಪಾಂಡುರಾಜನ ಸಂದೇಶವನ್ನು ನಾರದರು ತಿಳಿಸುತ್ತಾರೆ. ಪಾಂಡುರಾಜ ಹರಿಶ್ಚಂದ್ರನ ಉನ್ನತಿಗೆ ಅವನು ಮಾಡಿದ ರಾಜಸೂಯ ಯಾಗ ಕಾರಣ ಎಂದು ತಿಳಿದ. ಆದುದರಿಂದ ಅವನು ಇಂದ್ರ ಸಭೆಯಲ್ಲಿದ್ದಾನೆ ಇವನು ಶ್ರೀರಾಮ ಮತ್ತು ಪರಶುರಾಮರಿರುವ (ಯಮನ ಉಪಾಸ್ಯಮೂರ್ತಿಗಳಾಗಿ) ಯಮ ಸಭೆಯಲ್ಲಿದ್ದಾನೆ. ಶ್ರೀಕೃಷ್ಣ ಮತ್ತು ಭೀಮಾರ್ಜುನರಿಂದ ಸಹಿತನಾದ ನಿನಗೆ ಯಾವುದೂ ಅಸಾಧ್ಯವಲ್ಲ ಆದುದರಿಂದ ನೀನೂ ಕೂಡ ರಾಜಸೂಯಯಾಗ ಮಾಡು ಎಂದು ನಿನ್ನ ತಂದೆ ಪಾಂಡು ಹೇಳಿದ್ದಾನೆ ಎಂದು.

**ವಿಶೇಷಾಂಶ :-** ಇಲ್ಲಿ

**ಹರಿಶ್ಚಂದ್ರಸ್ಯ ತಾಂ ದೃಷ್ಟ್ವಾ ಪಿತಾ ಮಾಂ ಪ್ರಾಹ ।**
**ಪಾಂಡವ ಕರೋತು ರಾಜಸೂಯಂ ಮೇ**

ಇತ್ಯಾದಿ ಪ್ರಚಲಿತ ಪಾಠ. ಆದರೆ

**ಹರಿಶ್ಚಂದ್ರಸ್ಯ ತಾಂ ದೃಷ್ಟ್ವಾ ಪಿತಾ ಯಮ ಸಭಾತಳೇ**
**ಸ್ಥಿತಸ್ತ್ವಾಮವದತ್ ಪಾಂಡೂ ರಾಮದ್ವಯಸುದೈವತೇ**

ಕರೋತು ರಾಜಸೂಯಂ ... ಎಂಬ ಪ್ರಾಚೀನ ಪಾಠ ಆಧರಿಸಲಾಗಿದೆ.

ಮಹಾಭಾರತದಲ್ಲಿ 'ರಾಮೋ ದಾಶರಥಿಶ್ಚಾಪಿ, ದೃಷ್ಟೋ ಯಮಸಭಾತಲೇ, ಜಾಮದಗ್ನ್ಯಶ್ಚ ರಾಮೋಽಥ, ಎಂದು ಯಮಸಭೆಯಲ್ಲಿ ಇಬ್ಬರು ರಾಮರ ಉಪಸ್ಥಿತಿಯ ಉಲ್ಲೇಖವಿದೆ. ಅದರ ಭಾವವನ್ನು ಆಚಾರ್ಯರು ಇಲ್ಲಿ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಆದುದರಿಂದ ಪ್ರಾಚೀನ

ಪಾಠ ಹೆಚ್ಚು ರಮಣೀಯ. ಗ್ರಾಹ್ಯ. ಪ್ರಚಲಿತ ಪಾಠದಲ್ಲಿ ಎಲ್ಲೋ ಲೋಪವಾಗಿದೆ.

**ಏತಚ್ಛ್ರುತ್ವಾ ಧರ್ಮಸುತೋ ಭ್ರಾತೃಭಿಃ ಸಹಿತೋ ವಶೀ ।**
**ಅವಾಪ್ತಿಂ ರಾಜಸೂಯಸ್ಯ ಮಂತ್ರಯಾಮಾಸ ಧರ್ಮವಿತ್ ।। ೭೪ ।।**

**ಪದಚ್ಛೇದ :-** ಏತತ್, ಶ್ರುತ್ವಾ, ಧರ್ಮಸುತಃ, ಭ್ರಾತೃಭಿಃ, ಸಹಿತಃ, ವಶೀ, ಅವಾಪ್ತಿಂ, ರಾಜಸೂಯಸ್ಯ, ಮಂತ್ರಯಾಮಾಸ, ಧರ್ಮವಿತ್ ।

**ಅರ್ಥ :- ಏತತ್** = ನಾರದರ ಮೂಲಕ ಪಾಂಡುರಾಜ ಕಳುಹಿಸಿದ ಸಂದೇಶವನ್ನು, **ಶ್ರುತ್ವಾ** = ಕೇಳಿ, **ವಶೀ** = ಎಲ್ಲವನ್ನೂ ತನ್ನ ವಶದಲ್ಲಿರಿಸಿರುವ, **ಧರ್ಮವಿತ್** = ಧರ್ಮಜ್ಞನಾದ, **ಧರ್ಮಸುತಃ** = ಯುಧಿಷ್ಠಿರನು, **ಭ್ರಾತೃಭಿಃ ಸಹಿತಃ** = ತಮ್ಮಂದಿರಿಂದ ಕೂಡಿದವನಾಗಿ, **ರಾಜಸೂಯಸ್ಯ** = ರಾಜಸೂಯಯಾಗದ, **ಅವಾಪ್ತಿಂ** = ಲಭ್ಯತೆಯನ್ನು, **ಮಂತ್ರಯಾಮಾಸ** = ವಿಚಾರ ಮಾಡಿದನು.

**ತಾತ್ಪರ್ಯ :-** ರಾಜಸೂಯ ಯಾಗವನ್ನು ಮಾಡಬೇಕೆಂಬ ಪಾಂಡುರಾಜನ ಸಂದೇಶವನ್ನು ಕೇಳಿದ ಧರ್ಮರಾಜ ತಮ್ಮಂದಿರಿಂದ ಜೊತೆಗೂಡಿ ರಾಜಸೂಯ ಯಾಗದ ಬಗ್ಗೆ ವಿಚಾರ ವಿನಿಮಯ ಮಾಡಿದ.

**ಸುಕಾರ್ಯಮೇತದಿತ್ಯಲಂ ನಿಶಮ್ಯ ಸೋದರೋದಿತಮ್ ।**
**ಅಯಾತಯತ್ ಸ್ವಸಾರಥಿಂ ಸ ಕೇಶವಾಯ ಭೂಪತಿಃ ।। ೭೫ ।।**

**ಪದಚ್ಛೇದ :-** ಸುಕಾರ್ಯಂ, ಏತತ್, ಇತಿ, ಅಲಂ, ನಿಶಮ್ಯ, ಸೋದರೋದಿತಂ, ಅಯಾತಯತ್, ಸ್ವಸಾರಥಿಂ, ಸಃ, ಕೇಶವಾಯ, ಭೂಪತಿಃ ।

**ಅರ್ಥ :- ಸೋದರೋದಿತಂ** = ತಮ್ಮಂದಿರಿಂದ ಹೇಳಲ್ಪಟ್ಟ, **ಏತತ್** = ಈ ರಾಜಸೂಯವು, **ಸುಕಾರ್ಯಂ** = ಸುಲಭವಾಗಿ ಮಾಡಲು ಶಕ್ಯ, **ಇತಿ** = ಎಂಬ ಮಾತನ್ನು, **ಅಲಂ** = ಚೆನ್ನಾಗಿ, **ನಿಶಮ್ಯ** = ಕೇಳಿ, **ಸಃ ಭೂಪತಿಃ** = ರಾಜನಾದ ಧರ್ಮರಾಜನು, **ಕೇಶವಾಯ** = ಶ್ರೀಕೃಷ್ಣನಿಗೆ, **ಸ್ವಸಾರಥಿಂ** = ತನ್ನ ಸಾರಥಿಯಿಂದ ಇಂದ್ರಸೇನನನ್ನು, **ಅಯಾತಯತ್** = ಕಳುಹಿಸಿದನು.

**ಕೂಡಿದ, ಮೇ** = ನನ್ನ, **ಪುತ್ರಃ** = ಮಗನಾದ ಧರ್ಮರಾಜನು, **ರಾಜಸೂಯಂ** = ರಾಜಸೂಯ ಯಾಗವನ್ನು, **ಕರೋತು** = ಮಾಡಲಿ, **ತಸ್ಯ** = ಶ್ರೀಕೃಷ್ಣ ಮತ್ತು ಭೀಮಾರ್ಜುನರಿಂದ ಸಹಿತನಾದ ಧರ್ಮರಾಜನಿಗೆ, **ಅತ್ರ** = ಈ ರಾಜಸೂಯ ವಿಷಯದಲ್ಲಿ, **ಅಸಾಧ್ಯಂ** = ಅಸಾಧ್ಯವಾದದು, **ಕಿಂ ಹಿ** = ಯಾವುದು, ತಾನೆ (ಇದೆ) (ಎಂದು), **ಅವದತ್** = ಹೇಳಿದನು.

**ತಾತ್ಪರ್ಯ** :- ನಾರದರ ಹತ್ತಿರ ಧರ್ಮರಾಜ ಪ್ರಶ್ನಿಸಿದಾಗ ಪಾಂಡುರಾಜನ ಸಂದೇಶವನ್ನು ನಾರದರು ತಿಳಿಸುತ್ತಾರೆ. ಪಾಂಡುರಾಜ ಹರಿಶ್ಚಂದ್ರನ ಉನ್ನತಿಗೆ ಅವನು ಮಾಡಿದ ರಾಜಸೂಯ ಯಾಗ ಕಾರಣ ಎಂದು ತಿಳಿದ. ಆದುದರಿಂದ ಅವನು ಇಂದ್ರ ಸಭೆಯಲ್ಲಿದ್ದಾನೆ ಇವನು ಶ್ರೀರಾಮ ಮತ್ತು ಪರಶುರಾಮರಿರುವ (ಯಮನ ಉಪಾಸ್ಯಮೂರ್ತಿಗಳಾಗಿ) ಯಮ ಸಭೆಯಲ್ಲಿದ್ದಾನೆ. ಶ್ರೀಕೃಷ್ಣ ಮತ್ತು ಭೀಮಾರ್ಜುನರಿಂದ ಸಹಿತನಾದ ನಿನಗೆ ಯಾವುದೂ ಅಸಾಧ್ಯವಲ್ಲ ಆದುದರಿಂದ ನೀನೂ ಕೂಡ ರಾಜಸೂಯಯಾಗ ಮಾಡು ಎಂದು ನಿನ್ನ ತಂದೆ ಪಾಂಡು ಹೇಳಿದ್ದಾನೆ ಎಂದು.

**ವಿಶೇಷಾಂಶ** :- ಇಲ್ಲಿ

**ಹರಿಶ್ಚಂದ್ರಸ್ಯ ತಾಂ ದೃಷ್ಟ್ವಾ ಪಿತಾ ಮಾಂ ಪ್ರಾಹ ।**
**ಪಾಂಡವ ಕರೋತು ರಾಜಸೂಯಂ ಮೇ**

ಇತ್ಯಾದಿ ಪ್ರಚಲಿತ ಪಾಠ. ಆದರೆ

**ಹರಿಶ್ಚಂದ್ರಸ್ಯ ತಾಂ ದೃಷ್ಟ್ವಾ ಪಿತಾ ಯಮ ಸಭಾತಳೇ**
**ಸ್ಥಿತಸ್ತ್ವಾಮವದತ್ ಪಾಂಡೂ ರಾಮದ್ವಯಸುದೈವತೇ**

ಕರೋತು ರಾಜಸೂಯಂ ... ಎಂಬ ಪ್ರಾಚೀನ ಪಾಠ ಆಧರಿಸಲಾಗಿದೆ.

ಮಹಾಭಾರತದಲ್ಲಿ 'ರಾಮೋ ದಾಶರಥಿಶ್ಚಾಪಿ, ದೃಷ್ಟೋ ಯಮಸಭಾತಲೇ, ಜಾಮದಗ್ನ್ಯಶ್ಚ ರಾಮೋಽಥ, ಎಂದು ಯಮಸಭೆಯಲ್ಲಿ ಇಬ್ಬರು ರಾಮರ ಉಪಸ್ಥಿತಿಯ ಉಲ್ಲೇಖವಿದೆ. ಅದರ ಭಾವವನ್ನು ಆಚಾರ್ಯರು ಇಲ್ಲಿ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಆದುದರಿಂದ ಪ್ರಾಚೀನ

ಪಾಠ ಹೆಚ್ಚು ರಮಣೀಯ. ಗ್ರಾಹ್ಯ. ಪ್ರಚಲಿತ ಪಾಠದಲ್ಲಿ ಎಲ್ಲೋ ಲೋಪವಾಗಿದೆ.

**ಏತಚ್ಛ್ರುತ್ವಾ ಧರ್ಮಸುತೋ ಭ್ರಾತೃಭಿಃ ಸಹಿತೋ ವಶೀ ।**
**ಅವಾಪ್ತಿಂ ರಾಜಸೂಯಸ್ಯ ಮಂತ್ರಯಾಮಾಸ ಧರ್ಮವಿತ್ ॥ ೭೪ ॥**

**ಪದಚ್ಛೇದ :-** ಏತತ್, ಶ್ರುತ್ವಾ, ಧರ್ಮಸುತಃ, ಭ್ರಾತೃಭಿಃ, ಸಹಿತಃ, ವಶೀ, ಅವಾಪ್ತಿಂ, ರಾಜಸೂಯಸ್ಯ, ಮಂತ್ರಯಾಮಾಸ, ಧರ್ಮವಿತ್ ।

**ಅರ್ಥ :- ಏತತ್** = ನಾರದರ ಮೂಲಕ ಪಾಂಡುರಾಜ ಕಳುಹಿಸಿದ ಸಂದೇಶವನ್ನು, **ಶ್ರುತ್ವಾ** = ಕೇಳಿ, **ವಶೀ** = ಎಲ್ಲವನ್ನೂ ತನ್ನ ವಶದಲ್ಲಿರಿಸಿರುವ, **ಧರ್ಮವಿತ್** = ಧರ್ಮಜ್ಞನಾದ, **ಧರ್ಮಸುತಃ** = ಯುಧಿಷ್ಠಿರನು, **ಭ್ರಾತೃಭಿಃ ಸಹಿತಃ** = ತಮ್ಮಂದಿರಿಂದ ಕೂಡಿದವನಾಗಿ, **ರಾಜಸೂಯಸ್ಯ** = ರಾಜಸೂಯಯಾಗದ, **ಅವಾಪ್ತಿಂ** = ಲಭ್ಯತೆಯನ್ನು, **ಮಂತ್ರಯಾಮಾಸ** = ವಿಚಾರ ಮಾಡಿದನು.

**ತಾತ್ಪರ್ಯ :-** ರಾಜಸೂಯ ಯಾಗವನ್ನು ಮಾಡಬೇಕೆಂಬ ಪಾಂಡುರಾಜನ ಸಂದೇಶವನ್ನು ಕೇಳಿದ ಧರ್ಮರಾಜ ತಮ್ಮಂದಿರಿಂದ ಜೊತೆಗೂಡಿ ರಾಜಸೂಯ ಯಾಗದ ಬಗ್ಗೆ ವಿಚಾರ ವಿನಿಮಯ ಮಾಡಿದ.

**ಸುಕಾರ್ಯಮೇತದಿತ್ಯಲಂ ನಿಶಮ್ಯ ಸೋದರೋದಿತಮ್ ।**
**ಅಯಾತಯತ್ ಸ್ವಸಾರಥಿಂ ಸ ಕೇಶವಾಯ ಭೂಪತಿಃ ॥ ೭೫ ॥**

**ಪದಚ್ಛೇದ :-** ಸುಕಾರ್ಯಂ, ಏತತ್, ಇತಿ, ಅಲಂ, ನಿಶಮ್ಯ, ಸೋದರೋದಿತಂ, ಅಯಾತಯತ್, ಸ್ವಸಾರಥಿಂ, ಸಃ, ಕೇಶವಾಯ, ಭೂಪತಿಃ ।

**ಅರ್ಥ :- ಸೋದರೋದಿತಂ** = ತಮ್ಮಂದಿರಿಂದ ಹೇಳಲ್ಪಟ್ಟ, **ಏತತ್** = ಈ ರಾಜಸೂಯವು, **ಸುಕಾರ್ಯಂ** = ಸುಲಭವಾಗಿ ಮಾಡಲು ಶಕ್ಯ, **ಇತಿ** = ಎಂಬ ಮಾತನ್ನು, **ಅಲಂ** = ಚೆನ್ನಾಗಿ, **ನಿಶಮ್ಯ** = ಕೇಳಿ, **ಸಃ ಭೂಪತಿಃ** = ರಾಜನಾದ ಧರ್ಮರಾಜನು, **ಕೇಶವಾಯ** = ಶ್ರೀಕೃಷ್ಣನಿಗೆ, **ಸ್ವಸಾರಥಿಂ** = ತನ್ನ ಸಾರಥಿಯಿಂದ ಇಂದ್ರಸೇನನನ್ನು, **ಅಯಾತಯತ್** = ಕಳುಹಿಸಿದನು.

ತಾತ್ಪರ್ಯ :- ಎಲ್ಲ ತಮ್ಮಂದಿರು ರಾಜಸೂಯವನ್ನು ಸುಲಭವಾಗಿ ಮಾಡಬಹುದೆಂದು ಅಭಿಪ್ರಾಯ ವ್ಯಕ್ತಪಡಿಸಿದಾಗ ಧರ್ಮರಾಜ ಕೃಷ್ಣನನ್ನು ಕರೆತರಲು ತನ್ನ ಸಾರಥಿಯಾದ ಇಂದ್ರಸೇನನನ್ನು ಕಳುಹಿಸಿದ.

**ತದೈವ ಕೇಶವಸ್ಯ ಯಾಃ ಸ್ತ್ರಿಯಸ್ತದೀಯತಾತಕೈಃ ।**
**ಸಹೋದರೈಶ್ಚ ಯಾಪಿತಃ ಸುದೂತ ಆಪ ಮಾಧವಮ್ ॥ ೭೬ ॥**

ಪದಚ್ಛೇದ :- ತದಾ, ಏವ, ಕೇಶವಸ್ಯ, ಯಾಃ, ಸ್ತ್ರೀಯಃ, ತದೀಯತಾತಕೈಃ, ಸಹೋದರೈಃ, ಚ, ಯಾಪಿತಃ, ಸುದೂತಃ, ಆಪ, ಮಾಧವಂ ।

**ಅರ್ಥ** :- **ತದಾ ಏವ** = ಆ ಕಾಲದಲ್ಲಿಯೆ, **ಕೇಶವಸ್ಯ** = ಶ್ರೀಕೃಷ್ಣನ, **ಯಾಃ** = ಯಾವ, **ಸ್ತ್ರಿಯಃ** = ಪತ್ನಿಯರೋ, **ತದೀಯತಾತಕೈಃ** = ಅವರ ತಂದೆಯರಿಂದ, **ಚ** = ಮತ್ತು, **ಸಹೋದರೈಃ** = ಸೋದರರಿಂದ, **ಯಾಪಿತಃ** = ಕಳುಹಿಸಲ್ಪಟ್ಟ, **ಸುದೂತಃ** = ವಿಶ್ವಾಸಾರ್ಹನಾದ ದೂತನು, **ಮಾಧವಂ** = ಶ್ರೀಕೃಷ್ಣನನ್ನು, **ಆಪ** = ಹೊಂದಿದನು.

ತಾತ್ಪರ್ಯ :- ಧರ್ಮರಾಜ ದೂತನನ್ನು ಕಳುಹಿಸಿದ ಸಮಯದಲ್ಲಿಯೇ, ಶ್ರೀಕೃಷ್ಣ ಪತ್ನಿಯರ ತಂದೆ ಮತ್ತು ಸಹೋದರರೂ ಒಬ್ಬ ದೂತನನ್ನು ಕೃಷ್ಣನ ಹತ್ತಿರ ಕಳುಹಿಸಿದರು. ಅವನು ಶ್ರೀಕೃಷ್ಣನ ಬಳಿಗೆ ಬಂದನು.

**ಪ್ರಣಮ್ಯ ಕೇಶವಂ ವಚಃ ಸ ಆಹ ಮಾಗಧೇನ ತೇ ।**
**ವಿವಾಹಬಾಂಧವಾ ರಣೇ ವಿಜಿತ್ಯ ರೋಧಿತಾ ಗಿರೌ ॥ ೭೭ ॥**

**ನೃಪಾಯುತದ್ವಯೇನ ಸೋಽಷ್ಟವಿಂಶಕೈಃ ಶತೈರಪಿ ।**
**ಯಿಯಕ್ಷುರುಗ್ರರೂಪಿಣಂ ತ್ರಿಲೋಚನಂ ತ್ವಯಿ ಸ್ಥಿತೇ ॥ ೭೮ ॥**

**ವಿಮೋಚಯಸ್ವ ತಾನ್ ಪ್ರಭೋ ನಿಹತ್ಯ ಮಾಗಧೇಶ್ವರಮ್ ।**
**ಅವೈದಿಕಂ ಮಖಂ ಚ ತಂ ವಿಲುಂಪ ಧರ್ಮಗುಪ್ತಯೇ ॥ ೭೯ ॥**

ಪದಚ್ಛೇದ :- ಪ್ರಣಮ್ಯ, ಕೇಶವಂ, ವಚಃ, ಸಃ, ಆಹ, ಮಾಗಧೇನ, ತೇ, ವಿವಾಹ ಬಾಂಧವಾಃ, ರಣೇ, ವಿಜಿತ್ಯ, ರೋಧಿತಾಃ, ಗಿರೌ, ನೃಪಾಯುತದ್ವಯೇನ, ಸಃ, ಅಷ್ಟವಿಂಶಕೈಃ, ಶತೈಃ, ಅಪಿ, ಯಿಯಕ್ಷುಃ, ಉಗ್ರರೂಪಿಣಂ, ತ್ರಿಲೋಚನಂ, ತ್ವಯಿ,

ಸ್ಥಿತೇ, ವಿಮೋಚಯಸ್ವ, ತಾನ್, ಪ್ರಭೋ, ನಿಹತ್ಯ, ಮಾಗಧೇಶ್ವರಂ, ಅವೈದಿಕಂ, ಮಖಂ, ಚ, ತಂ, ವಿಲುಂಪ, ಧರ್ಮಗುಪ್ತಯೇ ।

**ಅರ್ಥ** :- **ಸಃ** = ಆ ದೂತನು, **ಕೇಶವಂ** = ಶ್ರೀಕೃಷ್ಣನನ್ನು, **ಪ್ರಣಮ್ಯ** = ನಮಸ್ಕರಿಸಿ, **ವಚಃ** = ಮುಂದಿನ ಮಾತುಗಳನ್ನು, **ಆಹ** = ಹೇಳಿದನು, **ಪ್ರಭೋ** = ಶ್ರೀಕೃಷ್ಣನೇ, **ತೇ** = ನಿನ್ನ, **ವಿವಾಹ ಬಾಂಧವಾಃ** = ಪತ್ನಿಯರ ಸೋದರರೇ ಮೊದಲಾದ ಬಂಧುಗಳು, **ಮಾಗಧೇನ** = ಜರಾಸಂಧನಿಂದ, **ರಣೇ** = ಯುದ್ಧದಲ್ಲಿ, **ವಿಜಿತ್ಯ** = ಗೆದ್ದು, **ಗಿರೌ** = ಪರ್ವತದಲ್ಲಿ, **ರೋಧಿತಾಃ** = ಬಂಧಿಸಲ್ಪಟ್ಟಿದ್ದಾರೆ, **ಸಃ** = ಆ ಜರಾಸಂಧನು, **ನೃಪಾಯುತ ದ್ವಯೇನ ಅಷ್ಟವಿಂಶಕೈಃ ಶತೈಃ ಅಪಿ** = ೨೨,೮೦೦ ರಾಜರು(ಗಳನ್ನು ಬಲಿಕೊಟ್ಟು)ಗಳಿಂದ, **ತ್ವಯಿ ಸ್ಥಿತೇ** = ಅವರು, ನೀನು ಇನ್ನೂ ಭೂಲೋಕದಲ್ಲಿರುತ್ತಿರಲು (ನಿನ್ನನ್ನು ಕಡೆಗಣಿಸಿ), **ಉಗ್ರರೂಪಿಣಂ** = ಉಗ್ರ ರೂಪಿಯಾದ, **ತ್ರಿಲೋಚನಂ** = ರುದ್ರದೇವರನ್ನು ಕುರಿತು, **ಯಿಯಕ್ಷುಃ (ಅಸ್ತಿ)** = ಯಾಗ ಮಾಡಲು, ಇಚ್ಛಿಸಿದವನು ಆಗಿದ್ದಾನೆ, **ಮಾಗಧೇಶ್ವರಂ** = ಮಾಗಧಾಧಿಪನಾದ ಜರಾಸಂಧನನ್ನು, **ನಿಹತ್ಯ** = ಕೊಂದು, **ತಾನ್** = ಆ ರಾಜರನ್ನು, **ವಿಮೋಚಯಸ್ವ** = ಬಿಡುಗಡೆಗೊಳಿಸು, **ಚ** = ಮತ್ತು, **ಧರ್ಮಗುಪ್ತಯೇ** = ಧರ್ಮರಕ್ಷಣೆಗಾಗಿ, **ತಂ** = ಆ, **ಅವೈದಿಕಂ** = ವೇದ ವಿರುದ್ಧವಾದ, **ಮಖಂ** = ಯಾಗವನ್ನು, **ವಿಲುಂಪ** = ಭಂಗಗೊಳಿಸು.

**ತಾತ್ಪರ್ಯ** :- ಆ ದೂತನು ಶ್ರೀಕೃಷ್ಣನನ್ನು ನಮಿಸಿ ಈ ರೀತಿ ಹೇಳಿದ. ನಿನ್ನ ಪತ್ನಿಯರ ಬಾಂಧವರ ಜೊತೆ ಜರಾಸಂಧ ಯುದ್ಧ ಮಾಡಿ ಅವರನ್ನು ಸೋಲಿಸಿ ಬಂಧಿಸಿದ್ದಾನೆ. ಅವರು ೨೨,೮೦೦ ಮಂದಿ. ಅವರನ್ನು ಬಲಿ ಕೊಟ್ಟು ರುದ್ರದೇವರ ಯಾಗ ಮಾಡಲು ಇಚ್ಛಿಸಿದ್ದಾನೆ. ನೀನು ಇನ್ನೂ ಭೂಲೋಕದಲ್ಲಿ ಇರುವಿ. ಆದರೂ ನಿನ್ನನ್ನು ಕಡೆಗಣಿಸಿದ್ದಾನೆ. ನೀನು, ಈ ಅವೈದಿಕ ಯಜ್ಞವನ್ನು ನಿಲ್ಲಿಸಿ, ಧರ್ಮರಕ್ಷಣೆಯನ್ನು ಮಾಡಬೇಕು ಮತ್ತು ಈ ರಾಜಕುಮಾರರನ್ನು ಕಾಪಾಡಬೇಕು ಎಂದು.

**ಇತೀರಿತೋಽಥ ಸಾರಥಿಂ ನಿಶಾಮ್ಯ ಧರ್ಮಜಸ್ಯ ಚ ।**
**ನಿಶಮ್ಯ ತದ್ ವಚಸ್ತದಾ ಜಗಾಮ ಪಾಂಡವಾಲಯಮ್ ॥ ೮೦ ॥**

ಪದಚ್ಛೇದ :- ಇತಿ, ಈರಿತಃ, ಅಥ, ಸಾರಥಿಂ, ನಿಶಾಮ್ಯ, ಧರ್ಮಜಸ್ಯ, ಚ, ನಿಶಮ್ಯ, ತದ್ವಚಃ, ತದಾ, ಜಗಾಮ, ಪಾಂಡವಾಲಯಂ ।

**ಅರ್ಥ** :- ಇತಿ = ಈ ರೀತಿಯಾಗಿ, ಈರಿತಃ = ದೂತನಿಂದ ಹೇಳಲ್ಪಟ್ಟ ಶ್ರೀಕೃಷ್ಣನು, ಅಥ = ಅನಂತರ, ಧರ್ಮಜಸ್ಯ = ಯುಧಿಷ್ಠಿರನ, ಸಾರಥಿಂ ಚ = ಸಾರಥಿಯನ್ನು ಕೂಡ, ನಿಶಾಮ್ಯ = ನೋಡಿ, ತದ್ವಚಃ = ಅವನ ಮಾತನ್ನು, ನಿಶಮ್ಯ = ಕೇಳಿ, ತದಾ = ಆಗ, ಪಾಂಡವಾಲಯಂ = ಪಾಂಡವರ ವಾಸಸ್ಥಳವಾದ ಇಂದ್ರಪ್ರಸ್ಥನನ್ನು ಕುರಿತು, ಜಗಾಮ = ಹೋದನು.

**ತಾತ್ಪರ್ಯ** :- ಆ ದೂತನ ಮಾತುಗಳನ್ನು ಕೇಳಿದ ನಂತರ ಧರ್ಮರಾಜನ ದೂತನನ್ನು ಕೃಷ್ಣ ನೋಡಿದ. ಅವನ ಮಾತನ್ನು ಕೇಳಿದ ನಂತರ ಪಾಂಡವರ ಇಂದ್ರಪ್ರಸ್ಥಕ್ಕೆ ಹೋದ.

**ಸ ಪಾಂಡವೈಃ ಸಮರ್ಚಿತೋ ಮಖಾಯ ಧರ್ಮಜೇನ ಚ ।**
**ಪ್ರಪೃಷ್ಟ ಆಹ ಮಾಧವೋ ವಚೋ ಜಗತ್ಸುಖಾವಹಮ್ ॥ ೮೧ ॥**

**ಪದಚ್ಛೇದ** :- ಸಃ, ಪಾಂಡವೈಃ, ಸಮರ್ಚಿತಃ, ಮಖಾಯ, ಧರ್ಮಜೇನ, ಚ, ಪ್ರಪೃಷ್ಟಃ, ಆಹ, ಮಾಧವಃ, ವಚಃ, ಜಗತ್ಸುಖಾವಹಂ ।

**ಅರ್ಥ** :- ಪಾಂಡವೈಃ = ಪಾಂಡವರಿಂದ, ಸಮರ್ಚಿತಃ = ಚೆನ್ನಾಗಿ ಪೂಜಿಸಲ್ಪಟ್ಟ, ಸಃ ಮಾಧವಃ = ಶ್ರೀಕೃಷ್ಣನು, ಚ = ಮತ್ತು, ಮಖಾಯ = ರಾಜಸೂಯ ಯಾಗ ಸಿದ್ಧಿಗಾಗಿ, ಧರ್ಮಜೇನ = ಯುಧಿಷ್ಠಿರನಿಂದ, ಪ್ರಪೃಷ್ಟಃ = ಯಾಗದ ಬಗ್ಗೆ ಚೆನ್ನಾಗಿ ಪ್ರಶ್ನಿಸಲ್ಪಟ್ಟವನಾಗಿ, ಜಗತ್ಸುಖಾವಹಂ = ಜಗತ್ತಿಗೆ ಆನಂದಕರವಾದ, ವಚಃ = ಮಾತನ್ನು, ಆಹ = ಆಡಿದನು.

**ತಾತ್ಪರ್ಯ** :- ಇಂದ್ರಪ್ರಸ್ಥಕ್ಕೆ ಶ್ರೀಕೃಷ್ಣ ಬಂದಾಗ ಪಾಂಡವರೆಲ್ಲರು ಸತ್ಕಾರ ಮಾಡಿದರು. ರಾಜಸೂಯದ ಬಗ್ಗೆ ಪ್ರಶ್ನಿಸಿದರು. ಆಗ ಶ್ರೀಕೃಷ್ಣ ಮುಂದಿನ ಮಾತುಗಳನ್ನು ಆಡಿದ. ಆ ಮಾತುಗಳು ಜಗದಾನಂದಕರವಾಗಿದ್ದವು.

**ಕ್ರತುರ್ಯಥಾವಿಧಾನತಃ ಕೃತೋ ಹಿ ಪಾರಮೇಷ್ಠ್ಯಕಮ್ ।**
**ಪದಂ ನಯೇತ ತತ್ಪದೇ ಸುಯೋಗ್ಯಮೇಷ ನಾನ್ಯಥಾ ॥ ೮೨ ॥**

**ಅಯೋಗ್ಯಕಾನ್ಮಹಾಪದೇ ವಿಧಾತುರೇಷ ಹಿ ಕ್ರತುಃ ।**
**ಸಮಾನಯೋಗ್ಯತಾಗಣಾತ್ ಕರೋತಿ ಮುಕ್ತಿಗಂ ವರಮ್ ॥ ೮೩ ॥**

ಪದಚ್ಛೇದ :- ಕ್ರತುಃ, ಯಥಾ, ವಿಧಾನತಃ, ಕೃತಃ, ಹಿ, ಪಾರಮೇಷ್ಠ್ಯಕಂ, ಪದಂ, ನಯೇತ, ತತ್ಪದೇ, ಸುಯೋಗ್ಯಂ, ಏಷಃ, ನ, ಅನ್ಯಥಾ, ಅಯೋಗ್ಯಕಾನ್, ಮಹಾಪದೇ, ವಿಧಾತುಃ, ಏಷಃ, ಹಿ, ಕ್ರತುಃ, ಸಮಾನಯೋಗ್ಯತಾಗಣಾತ್, ಕರೋತಿ, ಮುಕ್ತಿಗಂ, ವರಂ ।

**ಅರ್ಥ** :- **ವಿಧಾನತಃ** = ಶಾಸ್ತ್ರವಿಧಿಗನುಗುಣವಾಗಿ, **ಕೃತಃ** = ಮಾಡಲ್ಪಟ್ಟ, **ಏಷಃ ಕ್ರತುಃ** = ಈ ರಾಜಸೂಯಯಾಗವು, **ಯಥಾ** = ಹೇಗೆ, **ತತ್ಪದೇ** = ಪಾರಮೇಷ್ಠ್ಯಸ್ಥಾನದಲ್ಲಿ, **ಸುಯೋಗ್ಯಂ** = ಯೋಗ್ಯನಾದವನನ್ನು, **ಪಾರಮೇಷ್ಠ್ಯಕಂ ಪದಂ** = ಪಾರಮೇಷ್ಠ್ಯ ಸ್ಥಾನವನ್ನು, **ನಯೇತ್** = ಹೊಂದಿಸುತ್ತದೆಯೋ, (**ತಥಾ** = ಹಾಗೆ), **ವಿಧಾತುಃ** = ಬ್ರಹ್ಮದೇವರ, **ಮಹಾಪದೇ** = ಸ್ಥಾನದಲ್ಲಿ, **ಅಯೋಗ್ಯಕಾನ್** = ಅಯೋಗ್ಯರಾದವರನ್ನು, **ಏಷಃ ಕ್ರತುಃ** = ಈ ರಾಜಸೂಯಯಾಗವು, **ಸಮಾನಯೋಗ್ಯತಾಗಣಾತ್** = ಯೋಗ್ಯತೆಯಲ್ಲಿ ಸಮರಿದ್ದು ರಾಜಸೂಯ ಮಾಡದವರಿಗಿಂತ, **ವರಂ** = ಶ್ರೇಷ್ಠವಾದ, **ಮುಕ್ತಿಗಂ** = ಮೋಕ್ಷ ಸುಖವನ್ನು, **ಕರೋತಿ ಹಿ** = ಮಾಡುತ್ತದೆಯಷ್ಟೇ, **ಅನ್ಯಥಾ** = ವಿಧಿಬದ್ಧವಲ್ಲದಿದ್ದರೆ, **ನ** = ಅಲ್ಲ, (ಯಾವ ಶ್ರೇಷ್ಠ ಫಲವನ್ನು ಕೊಡಲಾರದು).

**ತಾತ್ಪರ್ಯ** :- ಶ್ರೀಕೃಷ್ಣನ ಮಾತುಗಳನ್ನು ಇಲ್ಲಿ ಸಂಗ್ರಹಿಸಿದ್ದಾರೆ. ರಾಜಸೂಯ ಯಾಗವನ್ನು ಕ್ರಮಬದ್ಧವಾಗಿ ಮಾಡಬೇಕು. ಇದರಿಂದ ಯಾರು ಬ್ರಹ್ಮಪದವಿಗೆ ಯೋಗ್ಯರೋ ಅವರಿಗೆ ಬ್ರಹ್ಮಪದವಿ ಲಭಿಸುತ್ತದೆ. ಯಾರು ಯೋಗ್ಯರಲ್ಲವೋ ಅವರಿಗೆ ಮುಕ್ತಿಯಲ್ಲಿ ಸ್ವಸಮಾನರಿಗಿಂತ ಹೆಚ್ಚಿನ ಆನಂದ ಲಭಿಸುತ್ತದೆ. ವಿಧಿ ಬದ್ಧವಲ್ಲದಿದ್ದರೆ ಈ ಫಲ ದೊರಕಲಾರದು.

**ಪುರಾ ತು ಮುಕ್ತಿತೋऽಧಿಕಂ ಸ್ವಜಾತಿತಃ ಕರೋತಿ ಚ ।**
**ಅತಸ್ತ್ರಿಶಂಕುಪುತ್ರಕೋ ನೃಪಾನತೀತ್ಯ ವರ್ತತೇ ॥ ೮೪ ॥**

ಪದಚ್ಛೇದ :- ಪುರಾ, ತು, ಮುಕ್ತಿತಃ, ಅಧಿಕಂ, ಸ್ವಜಾತಿತಃ, ಕರೋತಿ, ಚ, ಅತಃ, ತ್ರಿಶಂಕುಪುತ್ರಕಃ, ನೃಪಾನ್, ಅತೀತ್ಯ, ವರ್ತತೇ ।

**ಅರ್ಥ** :- **ಮುಕ್ತಿತಃ** = ಮೋಕ್ಷಕ್ಕಿಂತ, **ಪುರಾ ತು** = ಮೊದಲೂ ಕೂಡ, **ಸ್ವಜಾತಿತಃ** = ತನ್ನ ಸಮಾನರಿಗಿಂತ, **ಅಧಿಕಂ** = ಹೆಚ್ಚಿನವನನ್ನಾಗಿ, **ಕರೋತಿ** =

ಮಾಡುತ್ತದೆ, **ಅತಃ** = ಆದುದರಿಂದ, **ತ್ರಿಶಂಕುಪುತ್ರಕಃ** = ತ್ರಿಶಂಕುವಿನ ಮಗನಾದ ಹರಿಶ್ಚಂದ್ರನು, **ನೃಪಾನ್** = ಎಲ್ಲ ರಾಜರನ್ನು, **ಅತೀತ್ಯ** = ಮೀರಿ, **ವರ್ತತೇ** = ಇಂದ್ರ ಲೋಕದಲ್ಲಿ ಇದ್ದಾನೆ.

**ತಾತ್ಪರ್ಯ** :- ರಾಜಸೂಯ ಯಾಗ ಮೋಕ್ಷಕ್ಕಿಂತ ಮೊದಲೂ ಕೂಡ ತನ್ನ ಸಮಾನರಿಗಿಂತ ಉತ್ತಮನನ್ನಾಗಿ ಮಾಡುತ್ತದೆ. ಆದುದರಿಂದ ಹರಿಶ್ಚಂದ್ರ ಎಲ್ಲರನ್ನೂ ಮೀರಿ ಇಂದ್ರಲೋಕ ಪಡೆದಿದ್ದಾನೆ.

**ಸುರಾಂಶಕೋऽಪಿ ತೇ ಪಿತಾ ವಿನಾ ಹಿ ರಾಜಸೂಯತಃ ।**
**ನ ಶಕ್ಷ್ಯತಿ ತ್ರಿಶಂಕುಜಾದ್ ವರತ್ವಮಾಪ್ತುಮದ್ಯ ತು ॥ ೮೫ ॥**

**ಪದಚ್ಛೇದ** :- ಸುರಾಂಶಕಃ, ಅಪಿ, ತೇ, ಪಿತಾ, ವಿನಾ, ಹಿ, ರಾಜಸೂಯತಃ, ನ, ಶಕ್ಷ್ಯತಿ, ತ್ರಿಶಂಕುಜಾತ್, ವರತ್ವಂ, ಆಪ್ತುಂ, ಅದ್ಯ, ತು ।

**ಅರ್ಥ** :- **ತೇ** = ನಿನ್ನ, **ಪಿತಾ** = ತಂದೆಯಾದ ಪಾಂಡುವು, **ಸುರಾಂಶಕಃ ಅಪಿ** = ದೇವಾಂಶ ಸಂಭೂತನಾದರೂ, **ರಾಜಸೂಯತಃ ವಿನಾ** = ರಾಜಸೂಯ ಯಾಗವಿಲ್ಲದೇ, **ಅದ್ಯ ತು** = ಇಂದಿಗೂ ಕೂಡ, **ತ್ರಿಶಂಕುಜಾತ್** = ಹರಿಶ್ಚಂದ್ರನಿಗಿಂತ, **ವರತ್ವಂ** = ಉತ್ತಮತೆಯನ್ನು, **ಆಪ್ತುಂ** = ಪಡೆಯಲು, **ನ ಶಕ್ಷ್ಯತಿ** = ಸಮರ್ಥನಾಗಿಲ್ಲ.

**ತಾತ್ಪರ್ಯ** :- ನಿನ್ನ ತಂದೆ ದೇವಾಂಶ, ಆದರೂ ರಾಜಸೂಯಯಾಗ ಮಾಡಿಲ್ಲ. ಹೀಗಾಗಿ ಅವನು ಹರಿಶ್ಚಂದ್ರನನ್ನು ಮೀರಲು ಇಂದಿಗೂ ಆಗಿಲ್ಲ.

**ತಪಶ್ಚರನ್ ಸಮಾಗತೇ ಶಚೀಪತೌ ಪಿತಾ ತವ ।**
**ಮರುದ್ಗಣೋತ್ತಮಃ ಪುರಾ ನ ತೂತ್ಥಿತಃ ಶಶಾಪ ಸಃ ॥ ೮೬ ॥**

**ಪದಚ್ಛೇದ** :- ತಪಃ, ಚರನ್, ಸಮಾಗತೇ, ಶಚೀಪತೌ, ಪಿತಾ, ತವ, ಮರುದ್ಗಣೋತ್ತಮಃ, ಪುರಾ, ನ, ತು, ಉತ್ಥಿತಃ, ಶಶಾಪ, ಸಃ ।

**ಅರ್ಥ** :- **ಪುರಾ** = ಹಿಂದೆ, **ಮರುದ್ಗಣೋತ್ತಮಃ** = ಮರುತ್ತುಗಳಲ್ಲಿ ಶ್ರೇಷ್ಠನಾದ, **ತಪಃ** = ತಪಸ್ಸನ್ನು, **ಚರನ್** = ಮಾಡುತ್ತಿರುವ, **ತವ** = ನಿನ್ನ, **ಪಿತಾ** = ತಂದೆಯು, **ಶಚೀಪತೌ** = ಇಂದ್ರನು, **ಸಮಾಗತೇ** = ಬರುತ್ತಿರಲು,

ನ ತು ಉತ್ಥಿತಃ = ಎದ್ದು ನಿಂತು ಗೌರವಿಸಲಿಲ್ಲ, ಸಃ = ಆ ಇಂದ್ರನು, ಶಶಾಪ = ಶಾಪಕೊಟ್ಟನು.

ತಾತ್ಪರ್ಯ :- ನಿನ್ನ ತಂದೆ ಪಾಂಡುರಾಜ ಮೂಲ ರೂಪದಲ್ಲಿ ಮರುದ್ಗಣಕ್ಕೆ ಸೇರಿದವನು. ಅವನು ಹಿಂದೆ ತಪಸ್ಸನ್ನು ಮಾಡುತ್ತಿದ್ದ. ಆಗ ಅಲ್ಲಿಗೆ ದೇವೇಂದ್ರ ಬಂದಾಗ ಎದ್ದು ನಿಂತು ಗೌರವಿಸಲಿಲ್ಲ. ಅವಮಾನವೆಂದು ತಿಳಿದ ಇಂದ್ರ ಶಪಿಸಿದ.

**ವ್ರಜಸ್ವ ಮಾನುಷೀಂ ತನುಂ ತತೋ ಮೃತಃ ಪುನರ್ದಿವಮ್ ।**
**ಗತೋಽಪಿ ನಃ ಸ್ವಕಾಂ ತನುಂ ಪ್ರವೇಷ್ಟುಮತ್ರ ನೇಶಸೇ ॥ ೮೭ ॥**

ಪದಚ್ಛೇದ :– ವ್ರಜಸ್ವ, ಮಾನುಷೀಂ, ತನುಂ, ತತಃ, ಮೃತಃ, ಪುನಃ, ದಿವಂ, ಗತಃ, ಅಪಿ, ಚ, ಸ್ವಕಾಂ, ತನುಂ, ಪ್ರವೇಷ್ಟುಂ, ಅತ್ರ, ನ ಈಶಸೇ ।

ಅರ್ಥ :- **ಮಾನುಷಿಂ** = ಮನುಷ್ಯರ, **ತನುಂ** = ದೇಹವನ್ನು, **ವ್ರಜಸ್ವ** = ಹೊಂದು, **ತತಃ** = ಅನಂತರ, **ಮೃತಃ** = ಮರಣಹೊಂದಿ, **ದಿವಂ** = ಸ್ವರ್ಗವನ್ನು, **ಗತಃ ಅಪಿ** = ಪಡೆದವನಾದರೂ, **ಅತ್ರ** = ಇಲ್ಲಿ, **ಸ್ವಕಾಂ** = ನಿನ್ನ, **ತನುಂ** = ಶರೀರವನ್ನು (ಮೂಲರೂಪವನ್ನು), **ಪ್ರವೇಷ್ಟುಂ** = ಪ್ರವೇಶಿಸಲು, **ನ ಈಶಸೇ** = ಸಮರ್ಥನಾಗುವುದಿಲ್ಲ.

ತಾತ್ಪರ್ಯ :- ಶಾಪ ಏನು ಎಂದು ಇಲ್ಲಿ ಹೇಳುತ್ತಿದ್ದಾರೆ – 'ನೀನು ಮನುಷ್ಯ ಶರೀರವನ್ನು ಪಡೆ. ಸತ್ತ ಮೇಲೆ ಸ್ವರ್ಗಕ್ಕೆ ಬಂದರೂ ನಿನಗೆ ನಿನ್ನ ಮೂಲರೂಪವನ್ನು ಪಡೆಯಲು ಆಗದಿರಲಿ' ಎಂದು.

**ತದಾಽಧಿಕಸ್ತ್ರಿಶಂಕುಜೋ ಭವಿಷ್ಯತು ತ್ವದಿತ್ಯಥ ।**
**ಕ್ಷಮಾಪಿತಶ್ಚ ವಾಸವೋ ಜಗಾದ ರಾಜಸೂಯತಃ ।**
**ತ್ರಿಶಂಕುಜಾಧಿಕೋ ಭವಾನವಾಪ್ಸ್ಯತಿ ಸ್ವಕಾಂ ತನುಮ್ ॥ ೮೮ ॥**

ಪದಚ್ಛೇದ :– ತದಾ, ಅಧಿಕಃ, ತ್ರಿಶಂಕುಜಃ, ಭವಿಷ್ಯತು, ತ್ವತ್, ಇತಿ, ಅಥ, ಕ್ಷಮಾಪಿತಃ, ಚ, ವಾಸವಃ, ಜಗಾದ, ರಾಜಸೂಯತಃ, ತ್ರಿಶಂಕುಜಾಧಿಕಃ, ಭವಾನ್, ಅವಾಪ್ಸ್ಯತಿ, ಸ್ವಕಾಂ, ತನುಂ ।

**ಅರ್ಥ** :- **ತದಾ** = ಆಗ, **ತ್ರಿಶಂಕುಜಃ** = ಹರಿಶ್ಚಂದ್ರನು, **ತ್ವತ್** = ನಿನಗಿಂತ, **ಅಧಿಕಃ** = ಹೆಚ್ಚಿನವನು, **ಭವಿಷ್ಯತು** = ಆಗಲಿ, **ಇತಿ** = ಎಂದು, **ಅಥ** = ಶಾಪವನ್ನು ಕೇಳಿದ ತಕ್ಷಣದಲ್ಲಿ, **ಕ್ಷಮಾಪಿತಃ** = ಕ್ಷಮೆಗಾಗಿ ಪ್ರಾರ್ಥಿಸಲ್ಪಟ್ಟ, **ವಾಸವಃ** = ಇಂದ್ರನು, **ತ್ರಿಶಂಕುಜಾಧಿಕಃ** = ಹರಿಶ್ಚಂದ್ರನಿಗಿಂತ, **ಅಧಿಕಃ** = ಯೋಗ್ಯತೆಯಲ್ಲಿ ಹೆಚ್ಚಿನವನಾದ, **ಭವಾನ್** = ನೀನು, **ರಾಜಸೂಯತಃ** = ರಾಜಸೂಯದಿಂದ, **ಸ್ವಕಾಂ** = ತನ್ನದ್ದಾದ, **ತನುಂ** = ಶರೀರವನ್ನು, **ಅವಾಪ್ಸ್ಯತಿ** = ಪಡೆಯುತ್ತಿ ಎಂದು, **ಜಗಾದ** = ಹೇಳಿದನು.

**ತಾತ್ಪರ್ಯ** :- ದೇವಲೋಕದಲ್ಲಿಯೂ ಹರಿಶ್ಚಂದ್ರನೇ ನಿನಗಿಂತ ಉತ್ತಮ ಸ್ಥಾನ ಪಡೆಯಲಿ ಎಂದು ಶಪಿಸಿದ. ಕೂಡಲೇ ಮರುತ್ತು ಪ್ರಾರ್ಥಿಸಿದ. ಆಗ ದೇವೇಂದ್ರ ರಾಜಸೂಯಯಾಗದಿಂದ ಮೂಲ ರೂಪವನ್ನು ಪಡೆಯಲು ಸಾಧ್ಯ ಎಂದು ಹೇಳಿದ.

**ಅತಃ ಸುಕಾರ್ಯ ಏವ ತೇ ಯುಧಿಷ್ಠಿರ ಕ್ರತೂತ್ತಮಃ ।**
**ಭವದ್ಭಿರಪ್ಯವಾಪ್ಯತೇ ಸ್ವಯೋಗ್ಯತಾऽಮುನಾऽಖಿಲಾ ॥ ೮೯ ॥**

**ಪದಚ್ಛೇದ** :– **ಅತಃ, ಸುಕಾರ್ಯಃ, ಏವ, ತೇ, ಯುಧಿಷ್ಠಿರ, ಕ್ರತೂತ್ತಮಃ, ಭವದ್ಭಿಃ, ಅಪಿ, ಅವಾಪ್ಯತೇ, ಸ್ವಯೋಗ್ಯತಾ, ಅಮುನಾ, ಅಖಿಲಾ ।**

**ಅರ್ಥ** :- **ಅತಃ** = ಆದುದರಿಂದ, **ಯುಧಿಷ್ಠಿರ** = ಯುಧಿಷ್ಠಿರನೇ, **ಕ್ರತೂತ್ತಮಃ** = ಉತ್ತಮಯಾಗವಾದ ರಾಜಸೂಯವು, **ತೇ** = ನಿನಗೆ, **ಸುಕಾರ್ಯ ಏವ** = ಅವಶ್ಯ ಕರ್ತವ್ಯವೇ ಆಗಿದೆ, **ಅಮುನಾ** = ಈ ಯಾಗದಿಂದ, **ಭವದ್ಭಿಃ ಅಪಿ** = ನಿಮ್ಮಿಂದಲೂ ಕೂಡ, **ಅಖಿಲಾ** = ಎಲ್ಲಾ, **ಸ್ವಯೋಗ್ಯತಾ** = ನಿಮ್ಮ ನಿಮ್ಮ ಯೋಗ್ಯತೆಯು, **ಅವಾಪ್ಯತೇ** = ಹೊಂದಲ್ಪಡುತ್ತದೆ.

**ತಾತ್ಪರ್ಯ** :- ಯುಧಿಷ್ಠಿರ ನಿನ್ನ ತಂದೆಯ ಉನ್ನತಿಗಾಗಿ ನೀನು ರಾಜಸೂಯವನ್ನು ಮಾಡಲೇಬೇಕು. ಇದರಿಂದ ನಿಮ್ಮ ಯೋಗ್ಯತೆಗೆ ಅನುಗುಣವಾದ ಫಲವೂ ನಿಮಗೆ ದೊರೆಯುತ್ತದೆ.

**ಉದೀರ್ಯ ಚೈವಮೀಶ್ವರಃ ಕ್ರತೋರಮುಷ್ಯ ಯೋಗ್ಯತಾ ।**
**ವೃಕೋದರೇ ಯತೋऽಖಿಲಾ ಚತುರ್ಮುಖತ್ವಯೋಗ್ಯತಾ ॥ ೯೦ ॥**

ತತಃ ಸುಪೂರ್ಣಮಸ್ಯ ತತ್ ಫಲಂ ವಿಧಾತುಮಂಜಸಾ ।
ಜಗಾದ ವಾಯುವಾಹನೋ ವಚೋ ಯುಧಿಷ್ಠಿರಂ ತ್ವಿದಮ್ ॥ ೯೧ ॥

ಪದಚ್ಛೇದ :- ಉದೀರ್ಯ, ಚ, ಏವಂ, ಈಶ್ವರಃ, ಕ್ರತೋಃ, ಅಮುಷ್ಯ, ಯೋಗ್ಯತಾ, ವೃಕೋದರೇ, ಯತಃ, ಅಖಿಲಾ, ಚತುರ್ಮುಖತ್ವಯೋಗ್ಯತಾ, ತತಃ, ಸುಪೂರ್ಣಂ, ಅಸ್ಯ, ತತ್, ಫಲಂ, ವಿಧಾತುಂ, ಅಂಜಸಾ, ಜಗಾದ, ವಾಯುವಾಹನಃ, ವಚಃ, ಯುಧಿಷ್ಠಿರಂ, ತು, ಇದಂ ।

**ಅರ್ಥ** :- **ಈಶ್ವರಃ** = ಶ್ರೀಕೃಷ್ಣನು, ಏವಂ = ಹಿಂದೆ ಹೇಳಿದ ರೀತಿಯಲ್ಲಿ, **ಉದೀರ್ಯ** = ಮಾತನ್ನು ಆಡಿ, **ಯತಃ** = ಯಾವ ಕಾರಣದಿಂದ, **ಅಮುಷ್ಯ** = ಈ, **ಕ್ರತೋಃ** = ಯಾಗದ, **ಯೋಗ್ಯತಾ** = ಯೋಗ್ಯತೆಯು, **ಚತುರ್ಮುಖತ್ವಯೋಗ್ಯತಾ** = ಚತುರ್ಮುಖ ಪದ ಪ್ರಾಪ್ತಿಯ ಯೋಗ್ಯತೆಯೋ (ಆದುದರಿಂದ), **ಅಮುಷ್ಯ** = ಈ ಯಾಗದ, **ಅಖಿಲಾಯೋಗ್ಯತಾ** = ಎಲ್ಲ ಯೋಗ್ಯತೆಯೂ, **ವೃಕೋದರೇ ಏವ** = ಭೀಮಸೇನನಲ್ಲಿಯೇ (ಇದೆ), **ತತಃ** = ಆದುದರಿಂದ, **ಸುಪೂರ್ಣಂ** = ಸಂಪೂರ್ಣವಾದ, **ತತ್ ಫಲಂ** = ರಾಜಸೂಯ ಯಾಗದ ಫಲವನ್ನು, **ಅಂಜಸಾ** = ಚೆನ್ನಾಗಿ, **ವಿಧಾತುಂ** = ಉಂಟು ಮಾಡಲು, **ವಾಯುವಾಹನಃ** = ಶ್ರೀಕೃಷ್ಣನು, **ಯುಧಿಷ್ಠಿರಂ** = ಧರ್ಮರಾಜನನ್ನು ಕುರಿತು, **ಇದಂ** = ಈ, **ವಚಃ** = ಮಾತನ್ನು, **ಜಗಾದ** = ಆಡಿದನು.

**ತಾತ್ಪರ್ಯ** :- ರಾಜಸೂಯಯಾಗದ ಮುಖ್ಯಫಲ ಚತುರ್ಮುಖ ಪದಪ್ರಾಪ್ತಿ. ಆ ಯೋಗ್ಯತೆ ಪೂರ್ಣವಾಗಿ ಇರುವುದು ಭೀಮಸೇನನಲ್ಲಿ. ಹೀಗಾಗಿ ಭೀಮಸೇನನಿಗೆ ಈ ಫಲವನ್ನು ಚೆನ್ನಾಗಿ ಕೊಡಿಸಲು ವಾಯುವಾಹನನಾದ ಶ್ರೀಕೃಷ್ಣನು ಧರ್ಮರಾಜನಿಗೆ ಮುಂದಿನ ಮಾತನ್ನು ಹೇಳಿದನು.

ಕ್ವ ರಾಜಸೂಯಮದ್ಯ ತೇ ಜರಾಸುತೇ ತು ಜೀವತಿ ।
ಜಯೇತ್ ಕ ಏವ ತಂ ಯುಧಾ ಮೃತೋ ನ ಯೋಽಪಿ ಸೀರಿಣಾ ॥ ೯೨ ॥

ಪದಚ್ಛೇದ :- ಕ್ವ, ರಾಜಸೂಯಂ, ಅದ್ಯ, ತೇ, ಜರಾಸುತೇ, ತು, ಜೀವತಿ, ಜಯೇತ್, ಕಃ, ಏವ, ತಂ, ಯುಧಾ, ಮೃತಃ, ನ, ಯಃ, ಅಪಿ, ಸೀರಿಣಾ ।

**ಅರ್ಥ** :- **ಜರಾಸುತೇ ತು** = ಜರಾಸಂಧನಾದರು, **ಜೀವತಿ(ಸತಿ)** = ಬದುಕಿರುತ್ತಿರಲು, **ಅದ್ಯ** = ಇಂದು, **ತೇ** = ನಿನಗೆ, **ರಾಜಸೂಯಂ** = ರಾಜಸೂಯಯಾಗವು, **ಕ್ವ** = ಎಲ್ಲಿ , **ಯಃ** = ಯಾವ ಜರಾಸಂಧನು, **ಯುಧಾ** = ಯುದ್ಧದಿಂದ, **ಸೀರಿಣಾ ಅಪಿ** = ಬಲರಾಮನಿಂದಲೂ, **ನ ಮೃತಃ** = ಸಾಯಲಿಲ್ಲವೋ, **ತಂ** = ಅವನನ್ನು, **ಕಃ** = ಯಾರು **ಜಯೇತ್** = ಗೆದ್ದಾರು.

**ತಾತ್ಪರ್ಯ** :- ಜರಾಸಂಧನನ್ನು ಜಯಿಸದೇ ರಾಜಸೂಯ ಮಾಡಲು ಅಸಾಧ್ಯ. ಅವನು ಇನ್ನೂ ಬದುಕಿದ್ದಾನೆ. ಬಲರಾಮನಿಂದಲೂ ಅವನನ್ನು ಸಂಹರಿಸಲು ಆಗಲಿಲ್ಲ. ಅವನನ್ನು ಗೆಲ್ಲುವವರು ಯಾರು? ನೀನು ಹೇಗೆ ತಾನೆ ರಾಜಸೂಯ ಯಾಗ ಮಾಡಲು ಸಾಧ್ಯ? ಎಂದು.

**ವಿರಿಂಚಶರ್ವವಾಕ್ಯತಃ ಸಮಸ್ತಲೋಕಜಾಯಿನಿ ।**
**ಸ್ಥಿತೇ ತು ತೇ ಜರಾಸುತೇ ನ ಸೇತ್ಸ್ಯತಿ ಕ್ರತೂತ್ತಮಃ ॥ ೯೩ ॥**

**ಪದಚ್ಛೇದ** :- **ವಿರಿಂಚಶರ್ವವಾಕ್ಯತಃ, ಸಮಸ್ತಲೋಕಜಾಯಿನಿ, ಸ್ಥಿತೇ, ತು, ತೇ, ಜರಾಸುತೇ, ನ, ಸೇತ್ಸ್ಯತಿ, ಕ್ರತೂತ್ತಮಃ ।**

**ಅರ್ಥ** :- **ವಿರಿಂಚಶರ್ವವಾಕ್ಯತಃ** = ಬ್ರಹ್ಮದೇವರ ಮತ್ತು ರುದ್ರದೇವರ ವರದಿಂದ, **ಸಮಸ್ತಲೋಕಜಾಯಿನಿ** = ಎಲ್ಲ ಲೋಕವನ್ನು ಗೆದ್ದಿರುವ, **ಜರಾಸುತೇ** = ಜರಾಸಂಧನು, **ಸ್ಥಿತೇ ತು** = ಇರುತ್ತಿರಲು, **ತೇ** = ನಿನಗೆ, **ಕ್ರತೂತ್ತಮಃ** = ರಾಜಸೂಯವು, **ನ ಸೇತ್ಸ್ಯತಿ** = ಸಿದ್ಧಿಸುವುದಿಲ್ಲ.

**ತಾತ್ಪರ್ಯ** :- ಜರಾಸಂಧನಿಗೆ ಬ್ರಹ್ಮದೇವರ ಮತ್ತು ರುದ್ರದೇವರ ವರವಿರುವುದರಿಂದ ಅವನು ಎಲ್ಲ ಲೋಕಗಳನ್ನು ಗೆದಿದ್ದಾನೆ. ಅವನು ಅಜೇಯನಾಗಿದ್ದಾನೆ. ಈ ಸಂದರ್ಭದಲ್ಲಿ ನೀನು ರಾಜಸೂಯವನ್ನು ಮಾಡಲಾರೆ ಎಂದು.

**ಇತೀರಿತೇ ರಥಾಂಗಿನಾ ಜಗಾದ ಧರ್ಮನಂದನಃ ।**
**ನಿವರ್ತಿತಂ ಮನಃ ಕ್ರತೋರಲಂ ಮಮಾಮುನಾ ಪ್ರಭೋ ॥ ೯೪ ॥**

**ಬಭೂವುರೇವ ಭೂಭೃತೋ ನಚಾಽಧಿರಾಜ್ಯಮಾಪಿರೇ ।**
**ಯದಾ ಚ ಚಕ್ರವರ್ತಿನಸ್ತದೇದೃಶಾ ನ ಶತ್ರವಃ ॥ ೯೫ ॥**

ಪದಚ್ಛೇದ :- ಇತಿ, ಈರಿತೇ, ರಥಾಂಗಿನಾ, ಜಗಾದ, ಧರ್ಮನಂದನಃ, ನಿವರ್ತಿತಂ, ಮನಃ, ಕ್ರತೋಃ, ಅಲಂ, ಮಮ, ಅಮುನಾ, ಪ್ರಭೋ, ಬಭೂವುಃ, ಏವ, ಭೂಭೃತಃ, ನ, ಚ, ಆಧಿರಾಜ್ಯಂ, ಆಪಿರೇ, ಯದಾ, ಚ, ಚಕ್ರವರ್ತಿನಃ, ತದಾ, ಈದೃಶಾಃ, ನ, ಶತ್ರವಃ ।

**ಅರ್ಥ** :- **ಇತಿ** = ಹಿಂದೆ ಹೇಳಿದ ರೀತಿಯಲ್ಲಿ, **ರಥಾಂಗಿನಾ** = ಶ್ರೀಕೃಷ್ಣನಿಂದ, **ಈರಿತೇ** = ಹೇಳಲ್ಪಡುತ್ತಿರಲು, **ಧರ್ಮನಂದನಃ** = ಧರ್ಮರಾಜನು, **ಜಗಾದ** = ಹೇಳಿದನು, **ಪ್ರಭೋ** = ಸ್ವಾಮಿಯೇ, **ಮಮ** = ನನ್ನ, **ಮನಃ** = ಮನಸ್ಸು, **ಕ್ರತೋಃ** = ರಾಜಸೂಯ ಯಾಗದಿಂದ, **ನಿವರ್ತಿತಂ** = ಹಿಂತೆಗೆಯಲ್ಪಟ್ಟಿದೆ, **ಅಮುನಾ** = ಈ ಯಾಗದಿಂದ, **ಅಲಂ** = ಸಾಕು, **ಭೂಭೃತಃ** = ಎಲ್ಲ ರಾಜರು, **ಆಧಿರಾಜ್ಯಂ** = ಚಕ್ರವರ್ತಿತ್ವವನ್ನು, **ನ ಚ ಆಪಿರೇ ಏವ** = ಹೊಂದಿಯೇ ಇಲ್ಲ, **ಯದಾ ಚ** = ಯಾವಾಗ, **ಚಕ್ರವರ್ತಿನಃ** = ಚಕ್ರವರ್ತಿಗಳಾಗುವರೋ, ತದಾ = ಆಗ, **ಈದೃಶಾಃ** = ಇಂತಹವರು, **ನ ಶತ್ರವಃ** = ಶತ್ರುಗಳಿರುವುದಿಲ್ಲ.

**ತಾತ್ಪರ್ಯ** :- ಜರಾಸಂಧನ ವಿಚಾರವನ್ನು ಶ್ರೀಕೃಷ್ಣ ಹೇಳಿದಾಗ ಧರ್ಮರಾಜ ಹೇಳಿದ - 'ನನಗೆ ರಾಜಸೂಯ ಯಾಗ ಮಾಡಬೇಕೆಂಬ ಇಚ್ಛೆ ಹೊರಟು ಹೋಗಿದೆ. ಕಷ್ಟಸಾಧ್ಯವಾದ ಈ ರಾಜಸೂಯ ಯಾಗ ಬೇಡ. ಇಷ್ಟಕ್ಕೂ ಎಲ್ಲ ರಾಜರೂ ರಾಜಸೂಯ ಮಾಡಿ ಚಕ್ರವರ್ತಿಗಳೇನೂ ಆಗಿಲ್ಲ. ಎಲ್ಲರೂ ಚಕ್ರವರ್ತಿಗಳಾದರೆ ಇಂತಹ ಶತ್ರುಗಳು ಇರುವುದಿಲ್ಲ' ಎಂದು.

**ಇತೀರಿತೇಽಮುನಾಽವದತ್ ಪ್ರಧಾನಮಾರುತಾತ್ಮಜಃ ।**
**ಪದಂ ಚತುರ್ಮುಖಸ್ಯ ವಾ ಸುಸಾಧ್ಯಮೇವ ಯತ್ನತಃ ॥ ೯೬ ॥**

**ನಿಜಾನುಭಾವವರ್ಜಿತಾ ಹರೇರನುಗ್ರಹೋಜ್ಝಿತಾಃ ।**
**ಮಹಾಪ್ರಯತ್ನವರ್ಜಿತಾ ಜನಾ ನ ಜಗ್ಮುರುನ್ನತಿಮ್ ॥ ೯೭ ॥**

**ಸ್ಥಿರೋಽನುಭಾವ ಏವ ಮೇ ಮಹಾನನುಗ್ರಹೋ ಹರೇಃ ।**
**ಪ್ರಯತ್ನಮೇಕಮಗ್ರತೋ ನಿಧಾಯ ಭೂತಿಮಾಪ್ನುಮಃ ॥ ೯೮ ॥**

**ಪದಚ್ಛೇದ :-** ಇತಿ, ಈರಿತೇ, ಅಮುನಾ, ಅವದತ್, ಪ್ರಧಾನಮಾರುತಾತ್ಮಜಃ, ಪದಂ, ಚತುರ್ಮುಖಸ್ಯ, ವಾ, ಸುಸಾಧ್ಯಂ, ಏವ, ಯತ್ನತಃ, ನಿಜಾನುಭಾವವರ್ಜಿತಾಃ, ಹರೇಃ, ಅನುಗ್ರಹೋಜ್ಝಿತಾಃ, ಮಹಾಪ್ರಯತ್ನವರ್ಜಿತಾಃ, ಜನಾಃ, ನ, ಜಗ್ಮುಃ, ಉನ್ನತಿಂ, ಸ್ಥಿರಃ, ಅನುಭಾವಃ, ಏವ, ಮೇ, ಮಹಾನ್, ಅನುಗ್ರಹಃ, ಹರೇಃ, ಪ್ರಯತ್ನಂ, ಏಕಂ, ಅಗ್ರತಃ, ನಿಧಾಯ, ಭೂತಿಂ, ಆಪ್ನುಮಃ ।

**ಅರ್ಥ :- ಅಮುನಾ** = ಧರ್ಮರಾಜನಿಂದ, **ಇತಿ** = ಈ ರೀತಿಯಾಗಿ, **ಈರಿತೇ (ಸತಿ)** = ಹೇಳಲ್ಪಡುತ್ತಿರಲು, **ಪ್ರಧಾನ ಮಾರುತಾತ್ಮಜಃ** = ಮುಖ್ಯ ವಾಯುಪುತ್ರನಾದ ಭೀಮನು, **ಅವದತ್** = ಮುಂದಿನ ಮಾತುಗಳನ್ನು ಹೇಳಿದನು, **ಚತುರ್ಮುಖಸ್ಯ** = ಬ್ರಹ್ಮದೇವರ, **ಪದಂ ವಾ** = ಪದವಿಯೂ ಕೂಡ, **ಯತ್ನತಃ** = ಪ್ರಯತ್ನದಿಂದ, **ಸುಸಾಧ್ಯಂ ಏವ** = ಅನಾಯಾಸವಾಗಿ ಸಾಧ್ಯವೇ ಆಗಿದೆ, **ನಿಜಾನುಭಾವವರ್ಜಿತಾಃ** = ಸಹಜವಾದ, ದೇಹ, ಮನಸ್ಸು ಮತ್ತು ಆತ್ಮಸ್ವರೂಪದ ಸಾಮರ್ಥ್ಯದಿಂದ ರಹಿತರಾದ, **ಹರೇಃ** = ಶ್ರೀಹರಿಯ, **ಅನುಗ್ರಹೋಜ್ಝಿತಾಃ** = ಅನುಗ್ರಹದಿಂದ ರಹಿತರಾದ, **ಮಹಾಪ್ರಯತ್ನವರ್ಜಿತಾಃ** = ಪ್ರಾಮಾಣಿಕವಾದ ಮತ್ತು ಫಲಸಿದ್ಧಿಯವರೆಗೆ ನಿಲ್ಲಿಸದ ಪ್ರಯತ್ನದಿಂದ ರಹಿತರಾದ, **ಜನಾಃ** = ಜನರು, **ಉನ್ನತಿಂ** = ಶ್ರೇಯಸ್ಸನ್ನು, **ನ ಜಗ್ಮುಃ** = ಹೊಂದಲಾರರು, **ಸ್ಥಿರಃ** = ಸಹಜವಾದ, **ಅನುಭಾವಃ** = ಶರೀರ ಮನಸ್ಸು ಮತ್ತು ಸ್ವರೂಪದ ಸಾಮರ್ಥ್ಯವು (ಮತ್ತು), **ಹರೇಃ** = ಶ್ರೀಹರಿಯ, **ಮಹಾನ್ ಅನುಗ್ರಹಃ** = ಮಹತ್ತರವಾದ ಅನುಗ್ರಹವೂ, **ಮೇ** = ನನಗೆ (ಇದೆ) ಆದುದರಿಂದ, **ಪ್ರಯತ್ನಂ ಏಕಂ** = ಪ್ರಯತ್ನವನ್ನು ಮಾತ್ರ, **ಅಗ್ರತೋ ನಿಧಾಯ** = ಮುಂದೆ ಮಾಡಿ, **ಭೂತಿಂ** = ಅಭೀಷ್ಟಿ ಸಿದ್ಧಿಯನ್ನು, **ಆಪ್ನುಮಃ** = ಪಡೆಯೋಣ.

**ತಾತ್ಪರ್ಯ :-** ಧರ್ಮರಾಜ ನಿರಾಶೆಯ ಮಾತನ್ನಾಡಿದಾಗ ವಾಯು ಅವತಾರಿಯಾದ ಭೀಮ ಹೀಗೆ ಹೇಳಿದ. ಪ್ರಯತ್ನ ಪಟ್ಟರೇ ಬ್ರಹ್ಮಪದವಿಯೂ ಅಶಕ್ಯವಲ್ಲ. ಆದರೆ ಪ್ರಯತ್ನ ಮಾತ್ರ ಸಾಲದು. ಸಹಜವಾದ ಯೋಗ್ಯತೆ ಇರಬೇಕು. ಜೊತೆಗೆ ಭಗವಂತನ ವಿಶೇಷ ಅನುಗ್ರಹಬೇಕು. ಈ ಮೂರು ಇಲ್ಲದವರು ಅಭೀಷ್ಟ ಸಿದ್ಧಿಯನ್ನು ಹೊಂದಲಾರರು. ನನಗೆ ಸಹಜವಾಗಿ ಯೋಗ್ಯತೆ ಇದೆ. ಶ್ರೀಹರಿಯ ಅನುಗ್ರಹವೂ ವಿಶೇಷವಾಗಿದೆ. ಆದುದರಿಂದ ಪ್ರಯತ್ನವನ್ನೆ ಮುಖ್ಯವಾಗಿ ಮಾಡಿ ಯಾಗಸಿದ್ಧಿಯನ್ನು ಪಡೆಯೋಣ ಎಂದು.

**ಇತೀರಿತೇऽಮುನಾ ಹರಿಃ ಸಮುದ್ಯಮಾತ್ ಪ್ರಧಾನತಃ ।**
**ಸ್ಥಿತೇ ಹಿ ಯಜ್ಞಕಾರಣೇ ವೃಕೋದರೇ ಜಗಾದ ಹ ॥ ೯೯ ॥**

ಪದಚ್ಛೇದ :- ಇತಿ, ಈರಿತೇ, ಅಮುನಾ, ಹರಿಃ, ಸಮುದ್ಯಮಾತ್, ಪ್ರಧಾನತಃ, ಸ್ಥಿತೇ, ಹಿ, ಯಜ್ಞಕಾರಣೇ, ವೃಕೋದರೇ, ಜಗಾದ, ಹಿ ।

**ಅರ್ಥ** :- **ಪ್ರಧಾನತಃ** = ಮುಖ್ಯವಾದ, **ಸಮುದ್ಯಮಾತ್** = ಕರ್ತವ್ಯಕರ್ಮಕ್ಕೆ ಉಚಿತವಾದ ಮತ್ತು ಉತ್ಸಾಹದಿಂದ ಕೂಡಿದ ಶ್ರದ್ಧೆಯಿಂದ, **ಅಮುನಾ** = ಈ ಭೀಮಸೇನನಿಂದ, **ಇತಿ** = ಈ ರೀತಿಯಾಗಿ, **ಈರಿತೇ (ಸತಿ)** ಹೇಳಲ್ಪಡುತ್ತಿರಲು, **ಯಜ್ಞಕಾರಣೇ** = ಯಾಗದ ಮುಖ್ಯ ಕಾರಣವಾದ, **ವೃಕೋದರೇ** = ಭೀಮಸೇನನು, **ಸ್ಥಿತೇ** = ಇರುತ್ತಿರಲು, **ಹರಿಃ** = ಶ್ರೀಕೃಷ್ಣನು, **ಜಗಾದ ಹ** = ಸಂತೋಷಕರವಾದ ಮಾತನ್ನಾಡಿದನು.

**ತಾತ್ಪರ್ಯ** :- ಉತ್ಸಾಹದಿಂದ, ಅತಿಮುಖ್ಯವಾದ ಶ್ರದ್ಧೆಯಿಂದ ಭೀಮಸೇನ ಮಾತುಗಳನ್ನಾಡಿದಾಗ ಯಾಗದ ಮುಖ್ಯಕಾರಣ ಭೀಮನ ಮುಂದೆ ಮುಂದಿನ ಮಾತನ್ನು ಶ್ರೀಕೃಷ್ಣ ಆಡುತ್ತಾನೆ.

**ಸ ಏಕ ಏವ ಪೂರುಷೋ ಜರಾಸುತೋऽದ್ಯ ವರ್ತತೇ ।**
**ಸಮಸ್ತಸದ್ವಿರೋಧಿನಾಂ ಬಲಂ ಕಲೇರನಂತರಃ ॥ ೧೦೦ ॥**

ಪದಚ್ಛೇದ :- ಸಃ, ಏಕಃ, ಏವ, ಪುರುಷಃ, ಜರಾಸುತಃ, ಅದ್ಯ, ವರ್ತತೇ, ಸಮಸ್ತಸದ್ವಿರೋಧಿನಾಂ, ಬಲಂ, ಕಲೇಃ, ಅನಂತರಃ ।

**ಅರ್ಥ** :- **ಅದ್ಯ** = ಈವತ್ತಿನ ದಿವಸದಲ್ಲಿ, **ಕಲೇಃ** = ಕಲಿಪುರುಷನಾದ ದುರ್ಯೋಧನನ, **ಅನಂತರಃ** = ಎರಡನೇ ಸ್ಥಾನದಲ್ಲಿ, **ಸಮಸ್ತಸದ್ವಿರೋಧಿನಾಂ** = ಎಲ್ಲ ಸಜ್ಜನರ ವಿರೋಧಿಗಳ, **ಬಲಂ** = ಆಶ್ರಯನಾಗಿ, **ಸಃ** = ಆ ಜರಾಸಂಧನು, **ಏಕ ಏವ ಪುರುಷಃ** = ಮುಖ್ಯ ಪುರುಷನಾಗಿ, **ವರ್ತತೇ** = ಇದ್ದಾನೆ.

**ತಾತ್ಪರ್ಯ** :- ವರ್ತಮಾನ ಕಾಲದಲ್ಲಿ ಎಲ್ಲ ದುಷ್ಟರಿಗೆ ಮುಖ್ಯ ಆಶ್ರಯನಾಗಿ ಇರುವವನು ಕಲಿ ಪುರುಷನಾದ ದುರ್ಯೋಧನ ಅವನ ನಂತರ ಈ ಜರಾಸಂಧ.

**ತಥಾ ಸತಾಂ ಸಮಾಶ್ರಯೋ ಯದುದ್ಭವಾಃ ಸತಾಂ ಗುಣಾಃ ।**
**ಸ ಏಕ ಏವ ತಾದೃಶಸ್ತ್ವಯಾ ವಿಚಿಂತ್ಯ ಯಾತ್ಯತಾಮ್ ॥ ೧೦೧ ॥**

**ಪದಚ್ಛೇದ :-** ತಥಾ, ಸತಾಂ, ಸಮಾಶ್ರಯಃ, ಯದುದ್ಭವಾಃ, ಸತಾಂ, ಗುಣಾಃ, ಸಃ, ಏಕಃ, ಏವ, ತಾದೃಶಃ, ತ್ವಯಾ, ವಿಚಿಂತ್ಯ, ಯಾತ್ಯತಾಮ್ ।

**ಅರ್ಥ :-** **ತಥಾ** = ಅದರಂತೆ, **ಸತಾಂ** = ಸಜ್ಜನರ, **ಗುಣಾಃ** = ವಿಷ್ಣುಭಕ್ತ್ಯಾದಿ ಗುಣಗಳು, **ಯದುದ್ಭವಾಃ** = ಯಾರನ್ನು ಅವಲಂಬಿಸಿ ಪ್ರವೃತ್ತವಾಗಿವೆಯೋ, **ಸಃ ಏಕ ಏವ** = ಅವನೊಬ್ಬನೇ, **ಸತಾಂ** = ಸಜ್ಜನರಿಗೆ, **ಸಮಾಶ್ರಯಃ** = ಆಶ್ರಯನಾದವನು, **ತ್ವಯಾ** = ನಿನ್ನಿಂದ, **ತಾದೃಶಃ** = ಅಂತಹವನು, **ವಿಚಿಂತ್ಯ** = ಆಲೋಚಿಸಿ, **ಯಾತ್ಯತಾಂ** = ಕಳುಹಿಸಲ್ಪಡಲಿ.

**ತಾತ್ಪರ್ಯ :-** ''ದುರ್ಜನರಿಗೆ ಜರಾಸಂಧನಂತೆ, ಸಜ್ಜನರಿಗೊಬ್ಬ ಆಶ್ರಯನಿದ್ದಾನೆ. ಅವನಿಂದಲೇ ಸಜ್ಜನರ ಭಕ್ತಿ, ವಿರಕ್ತಿ ಮೊದಲಾದ ಗುಣಗಳು ಆಚರಿಸಲ್ಪಡುತ್ತವೆ. ಅವನೇ ಸಜ್ಜನರ ನಾಯಕ. ಅವನಾರೆಂದು ಯೋಚಿಸಿ, ತೀರ್ಮಾನಿಸಿ ಅವನನ್ನು ಕಳುಹಿಸು''.

**ಯದಿ ಸ್ಮ ತೇನ ಮಾಗಧೋ ನಿಹನ್ಯತೇ ಸತಾಂ ಜಯಃ ।**
**ವಿಪರ್ಯಯೇಣ ಚಾಸತಾಮಿತಿ ಸ್ಮ ವಿದ್ಧಿ ನಾನ್ಯಥಾ ॥ ೧೦೨ ॥**

**ಪದಚ್ಛೇದ :-** ಯದಿ, ಸ್ಮ, ತೇನ, ಮಾಗಧಃ, ನಿಹನ್ಯತೇ, ಸತಾಂ, ಜಯಃ, ವಿಪರ್ಯಯೇಣ, ಚ, ಅಸತಾಂ, ಇತಿ, ಸ್ಮ, ವಿದ್ಧಿ, ನ, ಅನ್ಯಥಾ ।

**ಅರ್ಥ :-** **ಯದಿ** = ಒಂದುವೇಳೆ, **ತೇನ** = ಆ ನಾಯಕನಿಂದ, **ಮಾಗಧಃ** = ಜರಾಸಂಧನು, **ನಿಹನ್ಯತೇ** = ಕೊಲ್ಲಲ್ಪಟ್ಟರೇ (ಆಗ), **ಸತಾಂ** = ಸಜ್ಜನರಿಗೆ, **ಜಯಃ** = ಗೆಲುವು, **ವಿಪರ್ಯಯೇಣ** = ವಿರುದ್ಧವಾದರೇ, **ಅಸತಾಂ** = ದುರ್ಜನರ ಗೆಲುವು, **ಇತಿ** = ಎಂದು, **ವಿದ್ಧಿ** = ತಿಳಿ, **ಅನ್ಯಥಾ ನ** = ಬೇರೆ ರೀತಿ ಇಲ್ಲ.

**ತಾತ್ಪರ್ಯ :-** ''ಆ ಸಜ್ಜನರ ಮುಖಂಡ ಜರಾಸಂಧನನ್ನು ಕೊಂದರೆ ಸಜ್ಜನರಿಗೆ ಜಯ, ಇಲ್ಲದಿದ್ದರೆ ದುರ್ಜನರ ಗೆಲವು, ಇಲ್ಲಿರುವ ತತ್ವ ಇಷ್ಟೆ ಬೇರೆ ಅಲ್ಲ''.

**ಸ ಪಾರಮೇಷ್ಠ್ಯಸತ್ಪದಂ ಪ್ರಯಾತ್ಯಸಂಶಯಂ ಯುಧಿ ।**
**ಯ ಏವ ಹಂತಿ ಮಾಗಧಂ ಸ ವೇದಧರ್ಮಪಾಲಕಃ ॥ ೧೦೩ ॥**

**ಪದಚ್ಛೇದ :- ಸಃ, ಪಾರಮೇಷ್ಠ್ಯಸತ್ಪದಂ, ಪ್ರಯಾತಿ, ಅಸಂಶಯಂ, ಯುಧಿ, ಯಃ, ಏವ, ಹಂತಿ, ಮಾಗಧಂ, ಸಃ, ವೇದಧರ್ಮಪಾಲಕಃ ।**

**ಅರ್ಥ :-** **ಯಃ** = ಯಾರು, **ಯುಧಿ** = ಯುದ್ಧದಲ್ಲಿ, **ಮಾಗಧಂ** = ಜರಾಸಂಧನನ್ನು, **ಹಂತಿ ಏವ** = ನಿಶ್ಚಿತವಾಗಿಯೂ ಕೊಲ್ಲುತ್ತಾನೋ, **ಸಃ** = ಅವನು, **ಅಸಂಶಯಂ** = ನಿಶ್ಚಯವಾಗಿಯೂ, **ಪಾರಮೇಷ್ಠ್ಯಸತ್ಪದಂ** = ಬ್ರಹ್ಮದೇವರ ಶ್ರೇಷ್ಠ ಪದವಿಯನ್ನು, **ಪ್ರಯಾತಿ** = ಹೊಂದುತ್ತಾನೆ, **ಸಃ** = ಅವನು, **ವೇದಧರ್ಮಪಾಲಕಃ** = ವೇದಗಳ ಮತ್ತು ವೇದೋಕ್ತ ಧರ್ಮಗಳ ಪಾಲಕನು (ಆಗುತ್ತಾನೆ).

**ತಾತ್ಪರ್ಯ :-** ''ಯುದ್ಧದಲ್ಲಿ ಜರಾಸಂಧನನ್ನು ಕೊಂದವನು ಬ್ರಹ್ಮ ಪದವಿಯನ್ನು ಪಡೆದೆ ಪಡೆಯುತ್ತಾನೆ ಅವನೆ ವೇದ ಮತ್ತು ಧರ್ಮಗಳ ರಕ್ಷಕನೆನಿಸುತ್ತಾನೆ''.

**ನಿಹಂತಿ ಮಾಗಧೇಶ್ವರಂ ಯ ಏಷ ವೈಷ್ಣವಂ ಜಗತ್ ।**
**ಕರೋತಿ ಶರ್ವಪಾಲಿತೋ ಯತಃ ಸ ಬಾರ್ಹದ್ರಥಃ ॥ ೧೦೪ ॥**

**ಪದಚ್ಛೇದ :- ನಿಹಂತಿ, ಮಾಗಧೇಶ್ವರಂ, ಯಃ, ಏಷಃ, ವೈಷ್ಣವಂ, ಜಗತ್, ಕರೋತಿ, ಶರ್ವಪಾಲಿತಃ, ಯತಃ, ಸಃ, ಬಾರ್ಹದ್ರಥಃ ।**

**ಅರ್ಥ :-** **ಯತಃ** = ಯಾವ ಕಾರಣದಿಂದ, **ಬಾರ್ಹದ್ರಥಃ** = ಜರಾಸಂಧನು, **ಶರ್ವಪಾಲಿತಃ** = ರುದ್ರ ದೇವರ ವರದಿಂದ ರಕ್ಷಿತನೋ (ಆ ಕಾರಣದಿಂದ), **ಯಃ** = ಯಾರು, **ಮಾಗಧೇಶ್ವರಂ** = ಜರಾಸಂಧನನ್ನು, **ನಿಹಂತಿ** = ಕೊಲ್ಲುತ್ತಾನೋ, **ಏಷಃ** = ಇವನು, **ಜಗತ್** = ಜಗತ್ತನ್ನು, **ವೈಷ್ಣವಂ** = ವೈಷ್ಣವವನ್ನಾಗಿ, **ಕರೋತಿ** = ಮಾಡುತ್ತಾನೆ.

**ತಾತ್ಪರ್ಯ :-** ಜರಾಸಂಧ ಶಿವಭಕ್ತ ವಿಷ್ಣುದ್ವೇಷ, ಆದುದರಿಂದ ಎಲ್ಲರನ್ನು ಶೈವರನ್ನಾಗಿ ಮಾಡುತ್ತಿದ್ದ. ಅಂತಹ ಜರಾಸಂಧನನ್ನು ಕೊಲ್ಲುವವನು ಜಗತ್ತನ್ನು ವೈಷ್ಣವವನ್ನಾಗಿ ಮಾಡುತ್ತಾನೆ. ಇದೇ ವೇದ ವೈದಿಕ ಧರ್ಮಗಳ ಪಾಲನೆ.

**ನಿಹಂತಿ ಶೈವನಾಯಕಂ ಯ ಏಷ ವೈಷ್ಣವಾಗ್ರಣೀಃ ।**
**ಇತಿ ಸ್ಮ ಭಾವಸಂಯುತೇ ವದತ್ಯಜೇಽಬಿಭೇನ್ನೃಪಃ ॥ ೧೦೫ ॥**

**ಪದಚ್ಛೇದ :-** ನಿಹಂತಿ, ಶೈವನಾಯಕಂ, ಯಃ, ಏಷಃ, ವೈಷ್ಣವಾಗ್ರಣೀಃ, ಇತಿ, ಸ್ಮ, ಭಾವಸಂಯುತೇ, ವದತಿ, ಅಜೇ, ಅಬಿಭೇತ್, ನೃಪಃ ।

**ಅರ್ಥ :-** **ಯಃ** = ಯಾರು, **ಶೈವನಾಯಕಂ** = ಶಿವಭಕ್ತಾಗ್ರೇಸರನಾದ ಜರಾಸಂಧನನ್ನು, **ನಿಹಂತಿ** = ಕೊಲ್ಲುತ್ತಾನೋ, **ಏಷಃ** = ಇವನು, **ವೈಷ್ಣವಾಗ್ರಣೀಃ** = ವಿಷ್ಣುಭಕ್ತಾಗ್ರೇಸರನು, **ಇತಿ** = ಎಂದು, **ಭಾವಸಂಯುತೇ** = ಅಭಿಪ್ರಾಯ ವಿಶೇಷದಿಂದ ಕೂಡಿದ, **ಅಜೇ** = ಶ್ರೀಕೃಷ್ಣನು, **ವದತಿ(ಸತಿ)** = ಹೇಳುತ್ತಿರಲು, **ನೃಪಃ** = ರಾಜನಾದ ಧರ್ಮರಾಜನು, **ಅಬಿಭೇತ್** = ಹೆದರಿದನು.

**ತಾತ್ಪರ್ಯ :-** ಜರಾಸಂಧ ಶಿವಭಕ್ತರ ನಾಯಕ. ಅವನನ್ನು ಕೊಲ್ಲುವವನು ವಿಷ್ಣು ಭಕ್ತರ ನಾಯಕ. ಎಂಬ ಮಾತುಗಳನ್ನು ಅಭಿಪ್ರಾಯಗರ್ಭಿತನಾಗಿ ಶ್ರೀಕೃಷ್ಣ ಹೇಳಿದ. ಶ್ರೀಕೃಷ್ಣನ ಅಭಿಪ್ರಾಯ ಭೀಮಸೇನನೇ ಜರಾಸಂಧನನ್ನು ಕೊಲ್ಲುವವನು. ಅವನಿಗೆ ರಾಜಸೂಯದ ಪೂರ್ಣಫಲ ಸಿಗಬೇಕು ಎಂದು. ಈ ಮಾತುಗಳನ್ನು ಕೇಳಿದ ಧರ್ಮರಾಜ ಹೆದರಿದ.

**ಯುಧಿಷ್ಠಿರೇ ಬ್ರುವತ್ಯಜಂ ಮಖೇನ ಮೇ ತ್ವಲಂ ತ್ವಿತಿ ।**
**ತಮಾಹ ಮಾರುತಾತ್ಮಜೋ ನಿಹನ್ಮಿ ಮಾಗಧಂ ರಣೇ ॥ ೧೦೬ ॥**

**ಪದಚ್ಛೇದ :-** ಯುಧಿಷ್ಠಿರೇ, ಬ್ರುವತಿ, ಅಜಂ, ಮಖೇನ, ಮೇ, ತು, ಅಲಂ, ತು, ಇತಿ, ತಂ, ಆಹ, ಮಾರುತಾತ್ಮಜಃ, ನಿಹನ್ಮಿ, ಮಾಗಧಂ, ರಣೇ ।

**ಅರ್ಥ :-** **ಮೇ** = ನನಗೆ, **ಮಖೇನ** = ಯಾಗದಿಂದ, **ಅಲಂ** = ಸಾಕು, **ಇತಿ** = ಎಂದು, **ಯುಧಿಷ್ಠಿರೇ** = ಯುಧಿಷ್ಠಿರನು, **ಅಜಂ** = ಶ್ರೀಕೃಷ್ಣನನ್ನು ಕುರಿತು, **ಬ್ರುವತಿ ಸತಿ** = ಹೇಳುತ್ತಿರಲು, **ತಂ** = ಆ ಧರ್ಮಜನನ್ನು ಕುರಿತು, **ಮಾರುತಾತ್ಮಜಃ** = ಭೀಮಸೇನನು, **ರಣೇ** = ಯುದ್ಧದಲ್ಲಿ, **ಮಾಗಧಂ** = ಜರಾಸಂಧನನ್ನು, **ನಿಹನ್ಮಿ** = ಕೊಲ್ಲುತ್ತೇನೆ (ಎಂದು), **ಆಹ** = ಹೇಳಿದನು.

ತಾತ್ಪರ್ಯ :- ಈ ಕಷ್ಟಸಾಧ್ಯವಾದ ಯಾಗವನ್ನು ನಾನು ಮಾಡಲಾರೆ ಎಂದು ಧರ್ಮರಾಜ ನುಡಿದಾಗ ಜರಾಸಂಧನನ್ನು ಯುದ್ಧದಲ್ಲಿ ನಾನು ಕೊಲ್ಲುತ್ತೇನೆ ಎಂದು ಭೀಮ ಹೇಳಿದ.

**ಇತೀರಿತೇಽವದದ್ಧರಿರ್ವ್ರಜಾಮಹೇ ವಯಂ ತ್ರಯಃ ।**
**ಅಹಂ ಚ ಭೀಮಫಲ್ಗುನೌ ನಿಹಂತುಮೇವ ಮಾಗಧಮ್ ॥ ೧೦೭ ॥**

**ಪದಚ್ಛೇದ :– ಇತಿ, ಈರಿತೇ, ಅವದತ್, ಹರಿಃ, ವ್ರಜಾಮಹೇ, ವಯಂ, ತ್ರಯಃ, ಅಹಂ, ಚ, ಭೀಮಫಲ್ಗುನೌ, ನಿಹಂತುಂ, ಏವ, ಮಾಗಧಂ ।**

**ಅರ್ಥ** :- **ಇತಿ** = ಹಿಂದಿನಂತೆ (ಭೀಮನು), **ಈರಿತೇ** = ಹೇಳುತ್ತಿರಲು, **ಹರಿಃ** = ಶ್ರೀಕೃಷ್ಣನು, **ಅಹಂ** = ನಾನು, **ಚ** = ಮತ್ತು, **ಭೀಮಫಲ್ಗುನೌ** = ಭೀಮ ಮತ್ತು ಅರ್ಜುನರು, **ವಯಂ** = ನಾವು, **ತ್ರಯಃ** = ಮೂವರು, **ಮಾಗಧಂ** = ಜರಾಸಂಧನನ್ನು, **ನಿಹಂತುಂ** = ಕೊಲ್ಲಲು, **ವ್ರಜಾಮಹೇ** = ಹೋಗುತ್ತೇವೆ (ಎಂದು), **ಅವದತ್** = ಹೇಳಿದನು.

ತಾತ್ಪರ್ಯ :- ಭೀಮ ಈ ರೀತಿ ಹೇಳಿದಾಗ - ನಾನು, ಭೀಮ ಮತ್ತು ಅರ್ಜುನರು ನಾವು ಮೂವರು ಜರಾಸಂಧನನ್ನು ಕೊಲ್ಲಲು ಹೋಗುತ್ತೇವೆ ಎಂದು ಶ್ರೀಕೃಷ್ಣ ಹೇಳಿದ.

**ವೃಕೋದರೇಣ ಹನ್ಯತೇ ಯದಿ ಸ್ಮ ಮಾಗಧಾಧಿಪಃ ।**
**ಮಖಶ್ಚ ಸೇತ್ಸ್ಯತೇ ಧ್ರುವಂ ಜಗಚ್ಚ ತೇ ವಶೇ ಭವೇತ್ ॥ ೧೦೮ ॥**

**ಪದಚ್ಛೇದ :– ವೃಕೋದರೇಣ, ಹನ್ಯತೇ, ಯದಿ, ಸ್ಮ, ಮಾಗಧಾಧಿಪಃ, ಮಖಃ, ಚ, ಸೇತ್ಸ್ಯತೇ, ಧ್ರುವಂ, ಜಗತ್, ಚ, ತೇ, ವಶೇ, ಭವೇತ್ ।**

**ಅರ್ಥ** :- **ಯದಿ** = ಒಂದು ವೇಳೆ, **ಮಾಗಧಾಧಿಪಃ** = ಜರಾಸಂಧನು, **ವೃಕೋದರೇಣ** = ಭೀಮಸೇನನಿಂದ, **ಹನ್ಯತೇ ಸ್ಮ** = ಕೊಲ್ಲಲ್ಪಟ್ಟರೇ, **ಧ್ರುವಂ** = ನಿಶ್ಚಯವಾಗಿಯೂ, **ಮಖಃ** = ಯಾಗವು, **ಸೇತ್ಸ್ಯತೇ** = ಸಿದ್ಧಿಸುತ್ತದೆ, **ಚ** = ಮತ್ತು, **ಜಗತ್** = ಪ್ರಪಂಚವು, **ತೇ** = ನಿನ್ನ, **ವಶೇ** = ಆಧೀನದಲ್ಲಿ, **ಭವೇತ್** = ಬರುತ್ತದೆ.

**ತಾತ್ಪರ್ಯ** :- ಭೀಮನು ಜರಾಸಂಧನನ್ನು ಕೊಂದಾಗ, ರಾಜಸೂಯ ಯಾಗ ಸಂಪನ್ನವಾಗುತ್ತದೆ. ಆಗ ಪ್ರಪಂಚ ನಿನ್ನ ವಶವಾಗುತ್ತದೆ.

**ಇತೀರಿತೇ ತು ಶೌರಿಣಾ ಜಗಾದ ಧರ್ಮನಂದನಃ ।**
**ಸ ಶೂರಸೇನಮಂಡಲಪ್ರಹಾಣತೋ ಹರೇಸ್ತ್ರಸನ್ ॥ ೧೮೯ ॥**

ಪದಚ್ಛೇದ :- ಇತಿ, ಈರಿತೇ, ತು, ಶೌರಿಣಾ, ಜಗಾದ, ಧರ್ಮನಂದನಃ, ಸಃ, ಶೂರಸೇನಮಂಡಲಪ್ರಹಾಣತಃ, ಹರೇಃ, ತ್ರಸನ್ ।

**ಅರ್ಥ** :- **ಶೌರಿಣಾ** = ಶ್ರೀಕೃಷ್ಣನಿಂದ, **ಇತಿ** = ಈ ರೀತಿಯಾಗಿ, **ಈರಿತೇ ತು** = ಹೇಳಲ್ಪಡುತ್ತಿರಲು, **ಹರೇಃ** = ಶ್ರೀಕೃಷ್ಣನ, **ಶೂರಸೇನ ಮಂಡಲ ಪ್ರಹಾಣತಃ** = ಶೂರಸೇನ ರಾಜ್ಯವಾದ ಮಧುರಾ ಪಟ್ಟಣದ ಬಿಡುವಿಕೆಯಿಂದ, **ತ್ರಸನ್** = ಉದ್ವೇಗಗೊಂಡ, **ಧರ್ಮನಂದನಃ** = ಧರ್ಮರಾಜನು, **ಜಗಾದ** = ಹೇಳಿದನು.

**ತಾತ್ಪರ್ಯ** :- ಶ್ರೀಕೃಷ್ಣ ಈ ರೀತಿ ಹೇಳಿದಾಗ ಕೃಷ್ಣ ಮೊದಲಾದ ಯಾದವರು ಮಧುರೆ ಬಿಟ್ಟು ದ್ವಾರಕೆಗೆ ಬಂದ ಘಟನೆ ನೆನೆದು ಧರ್ಮರಾಜ ಮುಂದಿನ ಮಾತನ್ನು ಹೇಳಿದ.

**ಭಯಾದ್ಧಿ ಯಸ್ಯ ಮಾಧುರಂ ವಿಹಾಯ ಮಂಡಲಂ ಗತಾಃ ।**
**ಭವಂತ ಏವ ಸಾಗರಂ ತತೋ ಬಿಭೇಮ್ಯಹಂ ರಿಪೋಃ ॥ ೧೧೦ ॥**

ಪದಚ್ಛೇದ :- ಭಯಾತ್, ಹಿ, ಯಸ್ಯ, ಮಾಧುರಂ, ವಿಹಾಯ, ಮಂಡಲಂ, ಗತಾಃ, ಭವಂತಃ, ಏವ, ಸಾಗರಂ, ತತಃ, ಬಿಭೇಮಿ, ಅಹಂ, ರಿಪೋಃ ।

**ಅರ್ಥ** :- **ಯಸ್ಯ** = ಯಾವ ಜರಾಸಂಧನ, **ಭಯಾತ್ ಹಿ** = ಭಯದಿಂದಲೇ, **ಭವಂತಃ** = ನೀವು, **ಮಾಧುರಂ ಮಂಡಲಂ** = ಮಧುರಾ ಪಟ್ಟಣವನ್ನು, **ವಿಹಾಯ** = ಬಿಟ್ಟು, **ಸಾಗರಂ ಏವ** = ಸಮುದ್ರವನ್ನೆ, **ಗತಾಃ** = ಹೋದಿರಿ, **ತತಃ** = ಆದುದರಿಂದ, **ಅಹಂ** = ನಾನು, **ರಿಪೋಃ** = ಶತ್ರುವಾದ ಜರಾಸಂದನಿಂದ, **ಬಿಭೇಮಿ** = ಹೆದರುತ್ತೇನೆ.

ತಾತ್ಪರ್ಯ :- ''ಶ್ರೀಕೃಷ್ಣ, ಜರಾಸಂಧನ ಭಯದಿಂದ ನೀವೇ ನಿಮ್ಮ ನಗರ ಮಧುರೆಯನ್ನು ಬಿಟ್ಟು ಸಾಗರ ಮಧ್ಯೆ ದ್ವಾರಕೆಗೆ ಹೊರಟಿರಿ. ಆ ಜರಾಸಂಧನನ್ನು ನೆನೆದರೆ ಭಯವಾಗುತ್ತದೆ''.

**ಇಮೌ ಹಿ ಭೀಮಫಲ್ಗುನೌ ಮಮಾಕ್ಷಿಣೀ ಸದಾ ಪ್ರಭೋ ।**
**ಮನೋನಿಭೋ ಭವಾನ್ ಸದಾ ನ ವೋ ವಿನಾಽಸ್ಮ್ಯತಃ ಪುಮಾನ್ ॥ ೧೧೧ ॥**

ಪದಚ್ಛೇದ :- ಇಮೌ, ಹಿ, ಭೀಮಫಲ್ಗುನೌ, ಮಮ, ಅಕ್ಷಿಣೀ, ಸದಾ, ಪ್ರಭೋ, ಮನೋನಿಭಃ, ಭವಾನ್, ಸದಾ, ನ, ವಃ, ವಿನಾ, ಅಸ್ಮಿ, ಅತಃ, ಪುಮಾನ್ ।

**ಅರ್ಥ** :- **ಪ್ರಭೋ** = ಸಮರ್ಥನಾದ ಶ್ರೀಕೃಷ್ಣನೇ, **ಇಮೌ** = ಈ, **ಭೀಮಫಲ್ಗುನೌ** = ಭೀಮ ಮತ್ತು ಅರ್ಜುನರು, **ಸದಾ** = ಯಾವಾಗಲೂ, **ಮಮ** = ನನ್ನ, **ಅಕ್ಷಿಣೀ** = ಕಣ್ಣುಗಳು, **ಭವಾನ್** = ನೀನು, **ಸದಾ** = ಯಾವಾಗಲೂ, **ಮನೋನಿಭಃ** = ಮನಸ್ಸಿನಂತೆ, **ವಃ** = ನಿಮ್ಮಿಂದ, **ವಿನಾ** = ಹೊರತಾಗಿ, **ಪುಮಾನ್** = ಪುರುಷನು, **ನ ಅಸ್ಮಿ** = ಆಗುವುದಿಲ್ಲ.

ತಾತ್ಪರ್ಯ :- ಧರ್ಮರಾಜ ಮಾತನ್ನು ಮುಂದುವರೆಸುತ್ತಾನೆ – ''ಭೀಮ ಮತ್ತು ಅರ್ಜುನನು ನನ್ನ ಎರಡು ಕಣ್ಣುಗಳು, ಕೃಷ್ಣ, ನೀನು ನನ್ನ ಮನಸ್ಸು ಆದುದರಿಂದ ನೀವು ಇಲ್ಲದೇ, ನಾನು ಪುರುಷನೇ ಅಲ್ಲ'' ಎಂದು.

**ಅತೋ ನ ಜೀವಿತಾತ್ ಪ್ರಿಯಾನಹಂ ರಿಪೋರ್ಬಲೀಯಸಃ ।**
**ಸಕಾಶಮಾತ್ಮಹೇತುತಃ ಪ್ರಯಾತಯಾಮಿ ವೋ ವಿಭೋ ॥ ೧೧೨ ॥**

ಪದಚ್ಛೇದ :- ಅತಃ, ನ, ಜೀವಿತಾತ್, ಪ್ರಿಯಾನ್, ಅಹಂ, ರಿಪೋಃ, ಬಲೀಯಸಃ, ಸಕಾಶಂ, ಆತ್ಮಹೇತುತಃ, ಪ್ರಯಾತಯಾಮಿ, ವಃ, ವಿಭೋ ।

**ಅರ್ಥ** :- **ವಿಭೋ** = ಶ್ರೀಕೃಷ್ಣನೇ, **ಅತಃ** = ಆದುದರಿಂದ, **ಜೀವಿತಾತ್** = ಬದುಕಿಗಿಂತಲೂ, **ಪ್ರಿಯಾನ್** = ಪ್ರಿಯರಾದ, **ವಃ** = ನಿಮ್ಮನ್ನು, **ಆತ್ಮಹೇತುತಃ** = ಸ್ವಾರ್ಥಕ್ಕಾಗಿ, **ಬಲೀಯಸಃ** = ಬಲಿಷ್ಠನಾದ, **ರಿಪೋಃ** = ಶತ್ರುವಿನ, **ಸಕಾಶಂ** = ಸಮೀಪಕ್ಕೆ, **ನ ಪ್ರಯಾತಯಾಮಿ** = ಬಲವಂತದಿಂದ ಕಳುಹಿಸುವುದಿಲ್ಲ.

**ತಾತ್ಪರ್ಯ** :- ಧರ್ಮರಾಜ ಹೇಳುತ್ತಾನೆ. ಶ್ರೀಕೃಷ್ಣ, ನನ್ನ ಜೀವನಕ್ಕಿಂತಲೂ ನೀವು ಮೂವರು ನನಗೆ ಪ್ರಿಯರು. ಆದುದರಿಂದ ನನ್ನ ಸ್ವಾರ್ಥಕ್ಕಾಗಿ ಪ್ರಬಲ ಶತ್ರುವಾದ ಜರಾಸಂಧನ ಬಳಿಗೆ ನಿಮ್ಮನ್ನು ಕಳುಹಿಸುವುದಿಲ್ಲ ಎಂದು.

**ಇತೀರಿತೇಽವದತ್ ಪುನರ್ವೃಕೋದರೋಽರಿಕಕ್ಷಭುಕ್ ।**
**ಯದೀಯನೇತೃಕಾ ರಮಾವಿರಿಂಚಶರ್ವಪೂರ್ವಕಾಃ ॥ ೧೧೩ ॥**

**ವಶೇ ಚ ಯಸ್ಯ ತದ್ ಬಲಂ ಸುರಾಸುರೋರಗಾದಿನಾಮ್ ।**
**ಸ ಏಷ ಕೇಶವಃ ಪ್ರಭುಃ ಕ್ವ ಚಾಸ್ಯ ಬಾರ್ಹದ್ರಥಃ ॥ ೧೧೪ ॥**

**ಪದಚ್ಛೇದ** :- **ಇತಿ, ಈರಿತೇ, ಅವದತ್, ಪುನಃ, ವೃಕೋದರಃ, ಅರಿರಕ್ಷಭುಕ್, ಯದೀಯನೇತೃಕಾಃ, ರಮಾವಿರಿಂಚಶರ್ವಪೂರ್ವಕಾಃ, ವಶೇ, ಚ, ಯಸ್ಯ, ತತ್, ಬಲಂ, ಸುರಾಸುರೋರಗಾದಿನಾಂ, ಸಃ, ಏಷಃ, ಕೇಶವಃ, ಪ್ರಭುಃ, ಕಃ, ಚ, ಅಸ್ಯ, ಬಾರ್ಹದ್ರಥಃ ।**

**ಅರ್ಥ** :- **ಇತಿ** = ಈ ರೀತಿಯಾಗಿ, **ಈರಿತೇ** = ಧರ್ಮರಾಜನು ಹೇಳುತ್ತಿರಲು, **ಅರಿಕಕ್ಷಭುತ್** = ಶತ್ರುಗಳೆಂಬ ಒಣಗಿದ ಹುಲ್ಲಿಗೆ ಬೆಂಕಿಯಂತಿರುವ, **ವೃಕೋದರಃ** = ಭೀಮಸೇನನು, **ಪುನಃ** = ಮತ್ತೊಮ್ಮೆ, **ಅವದತ್** = ಹೇಳಿದನು, **ರಮಾವಿರಿಂಚಶರ್ವಪೂರ್ವಕಾಃ** = ಲಕ್ಷ್ಮೀ ಬ್ರಹ್ಮ ರುದ್ರಾದಿ ದೇವತೆಗಳು, **ಯದೀಯನೇತೃಕಾಃ** = ಯಾರ ಅಧೀನರಾಗಿದ್ದು, ನಿಯಾಮಕರಾಗಿದ್ದಾರೋ, **ಸುರಾಸುರೋರಗಾದಿನಾಂ** = ದೇವತೆಗಳು, ಅಸುರರು, ಸರ್ಪಾದಿಗಳು ಇವುಗಳು, **ತದ್** = ಪ್ರಸಿದ್ಧವಾದ, **ಬಲಂ** = ಶಕ್ತಿಯು, **ಯಸ್ಯ ಚ** = ಯಾರ, **ವಶೇ** = ಅಧೀನದಲ್ಲಿದೆಯೋ, **ಪ್ರಭುಃ** = ಸರ್ವಸಮರ್ಥನಾದ, **ಸಃ** = ಆ, **ಕೇಶವಃ** = ಶ್ರೀಮನ್ನಾರಾಯಣನು, **ಏಷಃ** = ಈ ಶ್ರೀಕೃಷ್ಣನು, **ಅಸ್ಯ** = ಇವನಿಗೆ, **ಬಾರ್ಹದ್ರಥಃ** = ಜರಾಸಂಧನು, **ಕ್ವ** = ಎಲ್ಲಿ?

**ತಾತ್ಪರ್ಯ** :- ಜರಾಸಂಧನ ವಿಷಯದಲ್ಲಿ ಧರ್ಮರಾಜ ಹೆದರಿ ಮಾತನಾಡಿದಾಗ ಭೀಮಸೇನ ಮಾತನ್ನಾಡುತ್ತಾನೆ. ''ಈ ಶ್ರೀಕೃಷ್ಣ ಬೇರೆ ಯಾರೂ ಅಲ್ಲ. ಶ್ರೀಮನ್ನಾರಾಯಣನೇ. ಅವನ ಅಧೀನದಲ್ಲಿಯೇ ಇದ್ದು

ರಮಾ ಬ್ರಹ್ಮ ಶಿವ ಮೊದಲಾದ ದೇವತೆಗಳು ನಿಯಾಮಕರಾಗಿದ್ದಾರೆ. ಸುರರೂ, ಅಸುರರೂ, ಸರ್ಪಗಳೂ ಎಲ್ಲರ ಬಲ ಶಕ್ತಿ ಅವನ ಅಧೀನ. ಇವನ ಮುಂದೆ ಜರಾಸಂಧ ಲೆಕ್ಕಕ್ಕೆ ಇಲ್ಲ ಎಂದು.

**ಅಧೃಷ್ಯಮಸ್ತಿ ಮೇ ಬಲಂ ಹರಿಃ ಪ್ರಣಾಯಕೋಽಸ್ಯ ಚ ।**
**ಸಮಸ್ತಲೋಕನೇತರಿ ಪ್ರಭೌ ಹಿ ಸರ್ವಶಕ್ತಿತಾ ॥ ೧೧೫ ॥**

ಪದಚ್ಛೇದ :- **ಅಧೃಷ್ಯಂ, ಅಸ್ತಿ, ಮೇ, ಬಲಂ, ಹರಿಃ, ಪ್ರಣಾಯಕಃ, ಅಸ್ಯ, ಚ, ಸಮಸ್ತಲೋಕನೇತರಿ, ಪ್ರಭೌ, ಹಿ, ಸರ್ವಶಕ್ತಿತಾ ।**

**ಅರ್ಥ** :- **ಮೇ** = ನನ್ನ, **ಬಲಂ** = ಶಕ್ತಿಯು, **ಅಧೃಷ್ಯಂ** = ಯಾರಿಂದಲೂ ಸಹಿಸಲಾಗದ್ದು, **ಅಸ್ತಿ** = ಆಗಿದೆ, **ಚ** = ಮತ್ತು, **ಅಸ್ಯ** = ಈ ಬಲಕ್ಕೆ, **ಹರಿಃ** = ಶ್ರೀಹರಿಯು, **ಪ್ರಣಾಯಕಃ** = ಸಾಕ್ಷಾತ್ತಾಗಿ ನಿಯಾಮಕ, **ಹಿ** = ಅದು ಸರಿಯೇ, **ಸಮಸ್ತಲೋಕನೇತರಿ** = ಸಕಲ ಜಗನ್ನಿಯಾಮಕನಾದ, **ಪ್ರಭೌ** = ಸಮರ್ಥನಾದ ಶ್ರೀಹರಿಯಲ್ಲಿ, **ಸರ್ವಶಕ್ತಿತಾ** = ಸರ್ವವಿಷಯ ಶಕ್ತಿಯು (**ಅಸ್ತಿ** = ಇದೆ).

**ತಾತ್ಪರ್ಯ** :- ಶ್ರೀಕೃಷ್ಣ ಅಷ್ಟು ಸಮರ್ಥನಾದರೆ, ಅವನ ಅನುಗ್ರಹ ದಿಂದಲೇ ನನ್ನಲ್ಲಿ ಯಾರಿಂದಲೂ ಸಹಿಸಲಾಗದ ಮೀರಲಾರದ ಶಕ್ತಿ ಇದೆ.

**ಅಜೇಯತಾ ತಥಾಽರ್ಜುನೇ ಹರೇರ್ವರೋದ್ಭವಾಽಸ್ತಿ ಹಿ ।**
**ಅತೋ ವಯಂ ತ್ರಯೋಽದ್ಯ ತಂ ಪ್ರಯಾಮ ಮಾಗಧಂ ರಿಪುಮ್ ॥ ೧೧೬ ॥**

ಪದಚ್ಛೇದ :- **ಅಜೇಯತಾ, ತಥಾ, ಅರ್ಜುನೇ, ಹರೇಃ, ವರೋದ್ಭವಾ, ಅಸ್ತಿ, ಹಿ, ಅತಃ, ವಯಂ, ತ್ರಯಃ, ಅದ್ಯ, ತಂ, ಪ್ರಯಾಮ, ಮಾಗಧಂ, ರಿಪುಂ ।**

**ಅರ್ಥ** :- **ತಥಾ** = ಹಾಗೆಯೇ, **ಅರ್ಜುನೇ** = ಅರ್ಜುನನಲ್ಲಿ, **ಹರೇಃ** = ಶ್ರೀಹರಿಯ, **ವರೋದ್ಭವಾ** = ವರದಿಂದ ಪ್ರಾಪ್ತವಾದ, **ಅಜೇಯತಾ** = ಅಜೇಯತ್ವವು, **ಅಸ್ತಿ ಹಿ** = ಇದೆಯಷ್ಟೇ, **ಅತಃ** = ಆದುದರಿಂದ, **ವಯಂ ತ್ರಯಃ** = ನಾವು ಮೂವರು, **ತಂ ಮಾಗಧಂ ರಿಪುಂ** = ಶತ್ರುವಾದ ಜರಾಸಂಧನನ್ನು ಕುರಿತು, **ಅದ್ಯ** = ಈಗ, **ಪ್ರಯಾಮ** = ಹೊರಡುತ್ತೇವೆ.

**ತಾತ್ಪರ್ಯ** :- ಇನ್ನು ಅರ್ಜುನ, ಅವನು 'ನಾನು ಭೂಮಿಯಲ್ಲಿರುವಷ್ಟು ಕಾಲ ನಿನ್ನ ಯಾರೂ ಗೆಲ್ಲಲಾರರು' ಎಂದು ಶ್ರೀಹರಿ ಕೊಟ್ಟ ವರದಿಂದ

ಅಜೇಯನಾಗಿದ್ದಾನೆ. ಯಾರಿಂದಲೂ ಅವನಿಗೆ ಸೋಲಿಲ್ಲ. ಆದುದರಿಂದ ಚಿಂತಿಸಬೇಡ. ನಾವು ಮೂವರ ಜರಾಸಂಧನ ನಾಡಿಗೆ ಹೋಗುತ್ತೇವೆ.

**ಹನಿಷ್ಯ ಏವ ಮಾಗಧಂ ಹರೇಃ ಪುರೋ ನ ಸಂಶಯಃ ।**
**ಇತೀರಿತೇಽಮುನಾ ಹರಿರ್ಜಗಾದ ಧರ್ಮನಂದನಮ್ ॥ ೧೧೭ ॥**

**ಪದಚ್ಛೇದ :- ಹನಿಷ್ಯೇ, ಏವ, ಮಾಗಧಂ, ಹರೇಃ, ಪುರಃ, ನ, ಸಂಶಯಃ, ಇತಿ, ಈರಿತೇ, ಅಮುನಾ, ಹರಿಃ, ಜಗಾದ, ಧರ್ಮನಂದನಂ ।**

**ಅರ್ಥ :- ಹರೇಃ ಪುರಃ** = ಶ್ರೀಕೃಷ್ಣನ ಎದುರಿಗೆ, **ಮಾಗಧಂ** = ಜರಾಸಂಧನನ್ನು, **ಹನಿಷ್ಯೇ ಏವ** = ಕೊಂದೇ ಕೊಲ್ಲುತ್ತೇನೆ, **ನ ಸಂಶಯಃ** = ಸಂಶಯವಿಲ್ಲ, **ಇತಿ** = ಎಂದು, **ಅಮುನಾ** = ಭೀಮಸೇನನಿಂದ, **ಈರಿತೇ** = ಹೇಳಲ್ಪಡುತ್ತಿರಲು, **ಹರಿಃ** = ಶ್ರೀಕೃಷ್ಣನು, **ಧರ್ಮನಂದನಂ** = ಧರ್ಮಜನನ್ನು ಕುರಿತು, **ಜಗಾದ** = ಹೇಳಿದನು.

**ತಾತ್ಪರ್ಯ :-** ಶ್ರೀಕೃಷ್ಣನ ಎದುರಿಗೆ ಜರಾಸಂಧನನ್ನು ಕೊಲ್ಲುವುದು ನಿಶ್ಚಯ ಎಂದು ಭೀಮ ಹೇಳಿದಾಗ ಶ್ರೀಕೃಷ್ಣ ಯುಧಿಷ್ಠಿರನಿಗೆ ಹೇಳಿದ.

**ವಯಂ ತ್ರಯಃ ಸಮೇತ್ಯ ತಂ ಪ್ರಯಾತಯಾಮ ಮೃತ್ಯವೇ ।**
**ಹನಿಷ್ಯತಿ ಸ್ಫುಟಂ ರಣೇ ವೃಕೋದರೋ ಜರಾಸುತಮ್ ॥ ೧೧೮ ॥**

**ಪದಚ್ಛೇದ :- ವಯಂ, ತ್ರಯಃ, ಸಮೇತ್ಯ, ತಂ, ಪ್ರಯಾತಯಾಮ, ಮೃತ್ಯವೇ, ಹನಿಷ್ಯತಿ, ಸ್ಫುಟಂ, ರಣೇ, ವೃಕೋದರಃ, ಜರಾಸುತಂ ।**

**ಅರ್ಥ :- ವಯಂ ತ್ರಯಃ** = ನಾವು ಮೂವರು, **ಸಮೇತ್ಯ** = ಕೂಡಿಕೊಂಡು, **ತಂ** = ಆ ಜರಾಸಂಧನನ್ನು, **ಮೃತ್ಯವೇ** = ಮೃತ್ಯುವಿಗೆ, **ಪ್ರಯಾತಯಾಮ** = ಕಳುಹಿಸುತ್ತೇವೆ, **ವೃಕೋದರಃ** = ಭೀಮಸೇನನು, **ಸ್ಫುಟಂ** = ನಿಶ್ಚಯವಾಗಿಯೂ, **ರಣೇ** = ಯುದ್ಧದಲ್ಲಿ, **ಜರಾಸುತಂ** = ಜರಾಸಂಧನನ್ನು, **ಹನಿಷ್ಯತಿ** = ಕೊಲ್ಲುತ್ತಾನೆ.

**ತಾತ್ಪರ್ಯ :-** ನಾವು ಮೂವರು ಸೇರಿ ಜರಾಸಂಧನನ್ನು ಮುಗಿಸುತ್ತೇವೆ. ಯುದ್ಧದಲ್ಲಿ ಭೀಮ ಜರಾಸಂಧನನ್ನು ನಿಶ್ಚಯನಾಗಿ ಕೊಲ್ಲುತ್ತಾನೆ.

**ಭಯಂ ನ ಕಾರ್ಯಮೇವ ತೇ ಮಯಾ ಹತಃ ಸ ನೇತಿ ಹ ।**
**ಮಯಾ ಹಿ ನೀತಿಹೇತುತಃ ಸ್ವಯಂ ನ ಹನ್ಯತೇ ರಿಪುಃ ॥ ೧೧೯ ॥**

ಪದಚ್ಛೇದ :- ಭಯಂ, ನ, ಕಾರ್ಯಂ, ಏವ, ತೇ, ಮಯಾ, ಹತಃ, ಸಃ, ನ, ಇತಿ, ಹ, ಮಯಾ, ಹಿ, ನೀತಿಹೇತುತಃ, ಸ್ವಯಂ, ನ, ಹನ್ಯತೇ, ರಿಪುಃ ।

**ಅರ್ಥ** :- **ಮಯಾ** = ನನ್ನಿಂದ, **ಸಃ** = ಜರಾಸಂಧನು, **ನ ಹತಃ** = ಕೊಲ್ಲಲ್ಪಡಲಿಲ್ಲ, **ಇತಿ** = ಎಂದು, **ತೇ** = ನಿನ್ನಿಂದ, **ಭಯಂ** = ಭಯವು, **ನ ಕಾರ್ಯಂ** = ಮಾಡಲ್ಪಡಬಾರದು, **ಮಯಾ ಹಿ** = ನನ್ನಿಂದಲಾದರೂ, **ಸ್ವಯಂ** = ಸ್ವತಃ, **ನೀತಿಹೇತುತಃ** = ನೀತಿಯನ್ನು ತಿಳಿಸುವುದಕ್ಕಾಗಿ, **ರಿಪುಃ** = ಜರಾಸಂಧನು, **ನ ಹನ್ಯತೇ** = ಕೊಲ್ಲಲ್ಪಟ್ಟಿಲ್ಲ.

**ತಾತ್ಪರ್ಯ** :- ಹಿಂದೆ ನಾನು ಜರಾಸಂಧನನ್ನು ಕೊಲ್ಲಲಿಲ್ಲ. ಏಕೆಂದರೆ ಶತ್ರುಗಳು ಬಂದಾಗ ಅವರನ್ನು ಬಿಟ್ಟು ಸೈನಿಕರನ್ನು ಮಾತ್ರ ಕೊಂದರೆ, ಮತ್ತಷ್ಟು ಸೈನಿಕರೊಡನೆ ಮತ್ತೆ ಬರುತ್ತಾರೆ. ಹೀಗಾಗಿ ಅನೇಕ ಮಂದಿ ದುಷ್ಟರನ್ನು ಕೊಲ್ಲುವ ಉದ್ದೇಶದಿಂದ ಅಷ್ಟೇ. ಆದ್ದರಿಂದ ನೀನು ಭಯಪಡಬೇಕಿಲ್ಲ.

**ಸ ಶರ್ವಸಂಶ್ರಯಾಗ್ರಣೀರ್ಮದಾಶ್ರಯೋತ್ತಮೇನ ತು ।**
**ನಿಹನ್ಯತೇ ಯದಾ ತದಾ ಪ್ರಕಾಶಿತಂ ಹಿ ಮೇ ಬಲಮ್ ॥ ೧೨೦ ॥**

ಪದಚ್ಛೇದ :- ಸಃ, ಶರ್ವಸಂಶ್ರಯಾಗ್ರಣೀಃ, ಮದಾಶ್ರಯೋತ್ತಮೇನ, ತು, ನಿಹನ್ಯತೇ, ಯದಾ, ತದಾ, ಪ್ರಕಾಶಿತಂ, ಹಿ, ಮೇ, ಬಲಂ ।

**ಅರ್ಥ** :- **ಶರ್ವಸಂಶ್ರಯಾಗ್ರಣೀಃ** = ರುದ್ರಭಕ್ತರಲ್ಲಿ ಅಗ್ರಗಣ್ಯನಾದ, **ಸಃ** = ಜರಾಸಂಧನು, **ಯದಾ** = ಯಾವಾಗ, **ಮದಾಶ್ರಯೋತ್ತಮೇನ** = ನನ್ನ ಭಕ್ತಶ್ರೇಷ್ಠನಿಂದ, **ನಿಹನ್ಯತೇ** = ಕೊಲ್ಲಲ್ಪಡುತ್ತಾನೆ, **ತದಾ** = ಆಗ, **ಮೇ** = ನನ್ನ, **ಬಲಂ** = ಶಕ್ತಿಯು, **ಪ್ರಕಾಶಿತಂ ಹಿ** = ಪ್ರಕಾಶಿಸಲ್ಪಟ್ಟಿತಷ್ಟೇ.

**ತಾತ್ಪರ್ಯ** :- ಜರಾಸಂಧ ಶಿವಭಕ್ತ. ಅವನನ್ನು ನನ್ನ ಭಕ್ತೋತ್ತಮ ಭೀಮ ಸಂಹರಿಸಿದರೆ ನನ್ನ ಶಕ್ತಿಯೇ ಪ್ರಕಾಶಿತವಾಗುವುದು.

**ಅತೋ ನ ಶಂಕಿತಂ ಮನಃ ಕುರುಷ್ವ ಭೂಪತೇ ಕ್ವಚಿತ್ ।**
**ಪ್ರದರ್ಶಯಾಮಿ ತೇಽನುಜೌ ನಿಹತ್ಯ ಮಾಗಧೇಶ್ವರಮ್ ॥ ೧೨೧ ॥**

**ಪದಚ್ಛೇದ :- ಅತಃ, ನ, ಶಂಕಿತಂ, ಮನಃ, ಕುರುಷ್ವ, ಭೂಪತೇ, ಕ್ವಚಿತ್, ಪ್ರದರ್ಶಯಾಮಿ, ತೇ, ಅನುಜೌ, ನಿಹತ್ಯ, ಮಾಗಧೇಶ್ವರಂ ।**

**ಅರ್ಥ** :- **ಭೂಪತೇ** = ರಾಜನೇ, **ಅತಃ** = ಆದುದರಿಂದ, **ಕ್ವಚಿತ್** = ಯಾವ ವಿಷಯದಲ್ಲಿಯೂ, **ಮನಃ** = ಮನಸ್ಸನ್ನು, **ಶಂಕಿತಂ** = ಶಂಕೆ ಉಳ್ಳದ್ದನ್ನಾಗಿ, **ನ ಕುರುಷ್ವ** = ಮಾಡಬೇಡ, **ಮಾಗಧೇಶ್ವರಂ** = ಜರಾಸಂಧನನ್ನು, **ನಿಹತ್ಯ** = ಕೊಂದು, **ತೇ** = ನಿನ್ನ, **ಅನುಜೌ** = ತಮ್ಮಂದಿರನ್ನು, **ಪ್ರದರ್ಶಯಾಮಿ** = ತೋರಿಸುತ್ತೇನೆ.

**ತಾತ್ಪರ್ಯ** :- ಯಾವ ವಿಷಯದಲ್ಲಿಯೂ ಮನಸ್ಸಿನಲ್ಲಿ ಸಂಶಯ ಪಡಬೇಡ. ಜರಾಸಂಧನನ್ನು ಕೊಂದು ನಿನ್ನ ತಮ್ಮಂದಿರನ್ನು ಸುರಕ್ಷಿತರನ್ನಾಗಿ ನಿನಗೆ ತೋರಿಸುವೆ.

**ಇತೀರಿತಃ ಸ ವಿಷ್ಣುನಾ ವಿಚಾರ್ಯ ತದ್ಗುಣಾನ್ ಪರಾನ್ ।**
**ತಥೇತಿ ಚಾಽಽಹ ತೇ ತ್ರಯಃ ಪ್ರತಸ್ಥುರಾಶು ಮಾಗಧಾನ್ ॥ ೧೨೨ ॥**

**ಪದಚ್ಛೇದ :- ಇತಿ, ಈರಿತಃ, ಸಃ, ವಿಷ್ಣುನಾ, ವಿಚಾರ್ಯ, ಸದ್ಗುಣಾನ್, ಪರಾನ್, ತಥಾ, ಇತಿ, ಚ, ಆಹ, ತೇ, ತ್ರಯಃ, ಪ್ರತಸ್ಥುಃ, ಆಶು, ಮಾಗಧಾನ್ ।**

**ಅರ್ಥ** :- **ಇತಿ** = ಹಿಂದೆ ಹೇಳಿದ ರೀತಿಯಲ್ಲಿ, **ವಿಷ್ಣುನಾ** = ಶ್ರೀಕೃಷ್ಣನಿಂದ, **ಈರಿತಃ** = ಹೇಳಲ್ಪಟ್ಟ, **ಸಃ** = ಧರ್ಮರಾಜನು, **ಪರಾನ್** = ಶ್ರೇಷ್ಠಗಳಾದ, **ತದ್ಗುಣಾನ್** = ಶ್ರೀಕೃಷ್ಣನ ಗುಣಗಳನ್ನು, **ವಿಚಾರ್ಯ** = ಚಿಂತಿಸಿ, **ಚ** = ಮತ್ತು, **ತಥಾ** = ಹಾಗೇ ಆಗಲಿ, **ಇತಿ** = ಎಂದು, **ಆಹ** = ಹೇಳಿದ, **ತೇ ತ್ರಯಃ** = ಆ ಮೂವರು, **ಮಾಗಧಾನ್** = ಮಗಧದೇಶವನ್ನು ಕುರಿತು, **ಪ್ರತಸ್ಥುಃ** = ಹೊರಟರು.

**ತಾತ್ಪರ್ಯ** :- ಇಷ್ಟು ಮಾತುಗಳನ್ನು ಕೇಳಿದ ಧರ್ಮರಾಜ ಶ್ರೀಕೃಷ್ಣನ ಗುಣಗಳ ಚಿಂತನೆ ನಡೆಸಿದ. ಅನಂತರ ಹಾಗೆ ಆಗಲಿ ಎಂದು ಒಪ್ಪಿಗೆ ಕೊಟ್ಟ. ಆಗ ಕೃಷ್ಣ ಭೀಮ ಅರ್ಜುನ ಈ ಮೂವರು ಮಗಧದೇಶಕ್ಕೆ ಪ್ರಯಾಣ ಬೆಳೆಸಿದರು.

ಸಮೇತ್ಯ ಮಾಗಧಾಂಸ್ತು ತೇ ಶಿವೋರುಲಿಂಗಮಿತ್ಯಲಮ್ ।
ಸುಮಾಲ್ಯವಸ್ತ್ರಭೂಷಣೈಃ ಸಮರ್ಚಿತಂ ಗಿರಿಂ ಯಯುಃ ॥ ೧೨೩ ॥

ಪದಚ್ಛೇದ :- ಸಮೇತ್ಯ, ಮಾಗಧಾನ್, ತು, ತೇ, ಶಿವೋರುಲಿಂಗಂ, ಇತಿ, ಅಲಂ, ಸುಮಾಲ್ಯವಸ್ತ್ರಭೂಷಣೈಃ, ಸಮರ್ಚಿತಂ, ಗಿರಿಂ, ಯಯುಃ ।

ಅರ್ಥ :- ಮಾಗಧಾನ್ = ಮಗಧ ದೇಶವನ್ನು, ಸಮೇತ್ಯ ತು = ಹೊಂದಿಯಾದರೂ, ತೇ = ಆ ಮೂರುಮಂದಿ, ಶಿವೋರುಲಿಂಗಂ = ಶಿವನ ಉತ್ಕೃಷ್ಟ ಲಿಂಗ, ಇತಿ = ಎಂದು, ಅಲಂ = ಚೆನ್ನಾಗಿ, ಸುಮಾಲ್ಯವಸ್ತ್ರಭೂಷಣೈಃ = ಒಳ್ಳೆ ಹಾರ ವಸ್ತ್ರ ಆಭರಣಗಳಿಂದ, ಸಮರ್ಚಿತಂ = ಚೆನ್ನಾಗಿ ಪೂಜಿಸಲ್ಪಟ್ಟ, ಗಿರಿಂ = ಪರ್ವತವನ್ನು, ಯಯುಃ = ಹೊಂದಿದರು.

ತಾತ್ಪರ್ಯ :- ಈ ಮೂವರು ಮಗಧದೇಶಕ್ಕೆ ಬಂದರು. ಅಲ್ಲಿ ಒಂದು ಪರ್ವತಕ್ಕೆ ಬಂದರು. ಆ ಪರ್ವತವನ್ನು ಜರಾಸಂಧ ಶಿವನ ಲಿಂಗ ಎಂದು ಶಿವನ ಸನ್ನಿಧಾನವಿಲ್ಲದಿದ್ದರೂ ಭ್ರಮೆಯಿಂದ ವಸ್ತ್ರ ಅಲಂಕಾರ ಮಾಡಲಾದವುಗಳಿಂದ ಪೂಜಿಸುತ್ತಿದ್ದ. ಅಂತಹ ಪರ್ವತಕ್ಕೆ ಬಂದರು.

ಸ್ವಶೀರ್ಷತೋಽಪಿ ಚಾಽದೃತಂ ಜರಾಸುತೇನ ತೇ ಗಿರಿಮ್ ।
ನ್ಯಪಾತಯಂತ ಬಾಹುಭಿಸ್ತಮಸ್ಯ ಚೋತ್ತಮಾಂಗವತ್ ॥ ೧೨೪ ॥

ಪದಚ್ಛೇದ :- ಸ್ವಶೀರ್ಷತಃ, ಅಪಿ, ಚ, ಆದೃತಂ, ಜರಾಸುತೇನ, ತೇ, ಗಿರಿಂ, ನ್ಯಪಾತಯಂತ, ಬಾಹುಭಿಃ, ತಂ, ಅಸ್ಯ, ಚ, ಉತ್ತಮಾಂಗವತ್ ।

ಅರ್ಥ :- ತೇ = ಆ ಮೂರುಮಂದಿ, ಜರಾಸುತೇನ = ಜರಾಸಂಧನಿಂದ, ಸ್ವಶೀರ್ಷಿತಃ ಅಪಿ = ತನ್ನ ತಲೆಗಿಂತಲೂ, ಆದೃತಂ = ಆದರಿಸಲ್ಪಟ್ಟ, ಗಿರಿಂ = ಪರ್ವತವನ್ನು, ಅಸ್ಯ = ಈ ಜರಾಸಂಧನ, ಉತ್ತಮಾಂಗವತ್ = ತಲೆಯನ್ನೆಂಬಂತೆ, ಬಾಹುಭಿಃ = ಕೈಗಳಿಂದ, ನ್ಯಪಾತಯಂತ = ಕೆಳಗೆ ಬೀಳಿಸಿದರು.

ತಾತ್ಪರ್ಯ :- ಜರಾಸಂಧ ಆ ಪರ್ವತವನ್ನು ತನ್ನ ತಲೆಗಿಂತಲೂ ಹೆಚ್ಚು ಗೌರವಿಸುತ್ತಿದ್ದ. ಆ ಪರ್ವತಕ್ಕೆ ಬಂದ ಈ ಮೂವರು ಅವನ ತಲೆಯಂತೆ ಈ ಪರ್ವತವನ್ನು ಕೈಗಳಿಂದಲೇ ಹೊಡೆದು ಬಿಳಿಸಿದರು.

**ಅದ್ವಾರತಸ್ತೇ ನಗರಂ ಪ್ರವಿಶ್ಯ**
**ಮಾಷಸ್ಯ ನಾಳೇನ ಕೃತಾಸ್ತ್ರಿಭೇರೀಃ ।**
**ಪುಷ್ಟಿಪ್ರದಾ ಬಿಭಿದುಸ್ತಸ್ಯ ಕೀರ್ತಿ-**
**ಶಾಸ್ತ್ರೋಪಮಾ ನ್ಯಕ್ಕೃತಮಾಗಧೇಶಾಃ ॥ ೧೨೫ ॥**

ಪದಚ್ಛೇದ :- ಅದ್ವಾರತಃ, ತೇ, ನಗರಂ, ಪ್ರವಿಶ್ಯ, ಮಾಷಸ್ಯ, ನಾಲೇನ, ಕೃತಾಃ, ತ್ರಿಭೇರೀಃ, ಪುಷ್ಟಿಪ್ರದಾಃ, ಬಿಭಿದುಃ, ತಸ್ಯ, ಕೀರ್ತಿಶಾಸ್ತ್ರೋಪಮಾಃ, ನ್ಯಕ್ಕೃತಮಾಗಧೇಶಾಃ ।

**ಅರ್ಥ** :- **ನ್ಯಕ್ಕೃತಮಾಗಧೇಶಾಃ** = ತಿರಸ್ಕರಿಸಲ್ಪಟ್ಟ ಜರಾಸಂಧನುಳ್ಳ, **ತೇ** = ಕೃಷ್ಣಭೀಮಾರ್ಜುನರು, **ಅದ್ವಾರತಃ** = ಹಿಂದಿನ ಬಾಗಿಲಿನಿಂದ, **ನಗರಂ** = ನಗರವನ್ನು, **ಪ್ರವಿಶ್ಯ** = ಪ್ರವೇಶ ಮಾಡಿ, **ಮಾಷಸ್ಯ** = ಮಾಷಾಸುರನ, **ನಾಲೇನ** = ಕುತ್ತಿಗೆಯ ಚರ್ಮದಿಂದ, **ಕೃತಾಃ** = ಮಾಡಲ್ಪಟ್ಟ, **ಪುಷ್ಟಿಪ್ರದಾಃ** = ನಾದ ಮಾತ್ರದಿಂದ ಪುಷ್ಟಿಯನ್ನು ಕೊಡುವ, **ತಸ್ಯ** = ಆ ಜರಾಸಂಧನ, **ಕೀರ್ತಿಶಾಸ್ತ್ರೋಪಮಾಃ** = ಕೀರ್ತಿಯನ್ನು ಹೊಗಳು ಶಾಸ್ತ್ರಗಳಂತಿರುವ, **ತ್ರಿಭೇರೀಃ** = ಮೂರು ನಗಾರಿಗಳನ್ನು, **ಬಿಭಿದುಃ** = ಸೀಳಿ ಹಾಕಿದರು.

**ತಾತ್ಪರ್ಯ** :- ಜರಾಸಂಧನನ್ನು ಧಿಕ್ಕರಿಸಿದ್ದಾರೆಂದು ತಿಳಿಸಲು ನಗರವನ್ನು ಹಿಂಬಾಗಿಲಿನಿಂದ ಪ್ರವೇಶ ಮಾಡಿದ ಕೃಷ್ಣ-ಭೀಮಾರ್ಜುನರು ಅಲ್ಲಿದ್ದ ಮೂರು ನಗಾರಿಗಳು ಹೊಡೆದು ಸೀಳಿ ಹಾಕಿದರು. ಈ ನಾಗರಿಗಳನ್ನು ಮಾಷ ಎಂಬ ಅಸುರನ ಕೊಂದು ಅವನ ಕಂಠನಾಳದಿಂದ ನಿರ್ಮಿಸಲಾಗಿತ್ತು. ಈ ನಗಾರಿಗಳು ನಾದ ಎಲ್ಲಿಯವರೆಗೂ ಕೇಳುತ್ತಿತ್ತೋ ಅಲ್ಲಿಯವರೆಗೆ ಎಲ್ಲ ವಿಧವಾದ ಪುಷ್ಟಿ ಇರುತ್ತಿತ್ತು. ಈ ನಗಾರಿಗಳು ಆ ಜರಾಸಂಧನ ಕೀರ್ತಿಯನ್ನು ಹೊಗಳುವ ಶಾಸ್ತ್ರಗಳಂತೆ ಇದ್ದವು.

**ತಥಾಽಪಣೇಭ್ಯೋ ಬಹುಮಾಲ್ಯಗಂಧಾನ್**
**ಪ್ರಸಹ್ಯ ಸಂಗೃಹ್ಯ ಶುಭಾಂಶ್ಚ ದಧ್ರುಃ ।**
**ಅದ್ವಾರತಸ್ತಸ್ಯ ಗೃಹಂ ಚ ಸಸ್ರು-**
**ರ್ಭೋಽಶಬ್ದತಸ್ತಂ ಚ ನೃಪಂ ಪ್ರಸಸ್ರುಃ ॥ ೧೨೬ ॥**

ಪದಚ್ಛೇದ :- ತಥಾ, ಆಪಣೇಭ್ಯಃ, ಬಹುಮಾಲ್ಯಗಂಧಾನ್, ಪ್ರಸಹ್ಯ, ಶುಭಾನ್, ಚ, ದಧ್ರುಃ, ಅದ್ವಾರತಃ, ತಸ್ಯ, ಗೃಹಂ, ಚ, ಸಸ್ರುಃ, ಭೋಶಬ್ದತಃ, ತಂ ಚ, ನೃಪಂ, ಪ್ರಸಸ್ರುಃ ।

ಅರ್ಥ :- ತಥಾ = ಹಾಗೆಯೇ, ಆಪಣೇಭ್ಯಃ = ಅಂಗಡಿಗಳಿಂದ, ಶುಭಾನ್ = ಮಂಗಳಕರಗಳಾದ, ಬಹುಮಾಲ್ಯಗಂಧಾನ್ = ಬಹಳವಾದ ಹಾರ ಗಂಧಗಳನ್ನು, ಪ್ರಸಹ್ಯ = ಬಲಾತ್ಕಾರವಾಗಿ ಕಿತ್ತು, ದಧ್ರುಃ = ಧರಿಸಿದರು, ಚ = ಮತ್ತು, ಅದ್ವಾರತಃ = ಹಿಂಬಾಗಿಲಿನಿಂದ, ತಸ್ಯ = ಆ ಜರಾಸಂಧನ, ಗೃಹಂ = ಮನೆಯನ್ನು, ಸಸ್ರುಃ = ಪ್ರವೇಶಿಸಿದರು, ಚ = ಮತ್ತು, ಭೋಶಬ್ದತಃ = ಭೋ ಎಂದು ಕರೆಯುತ್ತಾ, ತಂ = ಆ, ನೃಪಂ = ಜರಾಸಂಧನನ್ನು, ಪ್ರಸಸ್ರುಃ = ಸಮೀಪಿಸಿದರು.

ತಾತ್ಪರ್ಯ :- ನಂತರ ಅಂಗಡಿಗಳಲ್ಲಿ ಗಂಧಮಾಲ್ಯಗಳನ್ನು ಬಲಾತ್ಕಾರದಿಂದ ಕಿತ್ತು ಧರಿಸಿದರು. ಆಮೇಲೆ ಅವನ ಮನೆಯನ್ನು ಹಿಂಬಾಗಿಲಿನಿಂದ ಪ್ರವೇಶಿಸಿ ಎಲೈ ಎಂದು ಕರೆಯುತ್ತಾ ಜರಾಸಂಧನ ಹತ್ತಿರ ಬಂದರು.

ತಾನ್ ವಿಪ್ರವೇಷಾನ್ ಸ ನಿಶಾಮ್ಯ ರಾಜಾ
ಮಹಾಭುಜಾನ್ ಸ್ನಾತಕವೇಷಯುಕ್ತಾನ್ ।
ದ್ವಿತೀಯವರ್ಣಾನ್ ಪ್ರವಿಚಿಂತ್ಯ ಬಾಹೂನ್
ಜ್ಯಾಕರ್ಕಶಾನ್ ವೀಕ್ಷ್ಯ ಬಭಾಷ ಏತಾನ್ ॥ ೧೨೭ ॥

ಪದಚ್ಛೇದ :- ತಾನ್, ವಿಪ್ರವೇಷಾನ್, ಸಃ, ನಿಶಾಮ್ಯ, ರಾಜಾ, ಮಹಾಭುಜಾನ್, ಸ್ನಾತಕವೇಷಯುಕ್ತಾನ್, ದ್ವಿತೀಯವರ್ಣಾನ್, ಪ್ರವಿಚಿಂತ್ಯ, ಬಾಹೂನ್, ಜ್ಯಾಕರ್ಕಶಾನ್, ವೀಕ್ಷ್ಯ, ಬಭಾಷೇ, ಏತಾನ್ ।

ಅರ್ಥ :- ಸಃ ರಾಜಾ = ಆ ಜರಾಸಂಧನು, ವಿಪ್ರವೇಷಾನ್ = ಬ್ರಾಹ್ಮಣವೇಷದಲ್ಲಿರುವ (ಅದರಲ್ಲಿಯೂ), ಸ್ನಾತಕವೇಷಯುಕ್ತಾನ್ = ಸ್ನಾತಕರ ವೇಷದಿಂದ ಕೂಡಿರುವ, ತಾನ್ = ಅವರನ್ನು, ನಿಶಾಮ್ಯ = ನೋಡಿ, ಜ್ಯಾಕರ್ಕಶಾನ್ = ಜ್ಯಾದಿಂದ ಕಠೋರವಾದ, ಬಾಹೂನ್ = ಬಾಹುಗಳನ್ನು, ವೀಕ್ಷ್ಯ = ನೋಡಿ, ಮಹಾಭುಜಾನ್ = ಮಹಾಭುಜರಾದ, ದ್ವಿತೀಯ

ವರ್ಣಾನ್ = ಕ್ಷತ್ರಿಯರನ್ನಾಗಿ, ಪ್ರವಿಚಿಂತ್ಯ = ಚಿಂತಿಸಿ, ಏತಾನ್ = ಇವರನ್ನು ಕುರಿತು, ಬಭಾಷೇ = ಆಡಿದನು.

ತಾತ್ಪರ್ಯ :- ಕೃಷ್ಣ-ಭೀಮಾರ್ಜುನರು ಬ್ರಾಹ್ಮಣ ವೇಷದಲ್ಲಿದ್ದರು. ಅದರಲ್ಲೂ ಸ್ನಾತಕವೇಷಧಾರಿಗಳಾಗಿದ್ದರು. ಹಾಗಿದ್ದರು, ಇವರ ಭುಜ, ಜ್ಯಾವನ್ನು ಧರಿಸಿ ಕರ್ಕಶವಾಗಿದ್ದನ್ನು ಕಂಡ ಜರಾಸಂಧ ಇವರನ್ನು ಪರಾಕ್ರಮಿಗಳಾದ ಕ್ಷತ್ರಿಯರೆಂದು ತಿಳಿದು ಮಾತನಾಡಿದ.

**ಕೇ ಸ್ಥಾಥ ಕಿಂಹೇತುತ ಆಗತಾಶ್ಚ**
**ಕುತಶ್ಚ ಮೇ ಪರ್ವತಲಿಂಗಭೇದನಮ್ ।**
**ಕೃತಂ ಭವದ್ಭಿಃ ಕುತ ಏವ ದುರ್ನಯಾಃ**
**ಕೃತಾಸ್ತಥಾಽನ್ಯೇ ದ್ವಿಜವರ್ಯವೇಷೈಃ ॥ ೧೨೮ ॥**

ಪದಚ್ಛೇದ :- ಕೇ, ಸ್ಥ, ಅಥ, ಕಿಂಹೇತುತಃ, ಆಗತಾಃ, ಚ, ಕುತಃ, ಚ, ಮೇ, ಪರ್ವತಲಿಂಗಭೇದನಂ, ಕೃತಂ, ಭವದ್ಭಿಃ, ಕುತಃ, ಏವ, ದುರ್ನಯಾಃ, ಕೃತಾಃ, ತಥಾ, ಅನ್ಯೇ, ದ್ವಿಜವರ್ಯವೇಷೈಃ ।

ಅರ್ಥ :- **ಕೇ ಸ್ಥ** = ಯಾರು ನೀವು?, **ಅಥ** = ಮತ್ತು, **ಕಿಂಹೇತುತಃ** = ಯಾವ ಕಾರಣದಿಂದ, **ಆಗತಾಃ** = ಬಂದಿರುವಿರಿ, **ಚ** = ಮತ್ತು, **ಮೇ** = ನನ್ನ, **ಪರ್ವತ ಲಿಂಗಭೇದನಂ** = ಲಿಂಗರೂಪದ ಪರ್ವತದ ಸೀಳುವಿಕೆಯು, **ಕುತಃ** = ಏತಕೋಸ್ಕರ, **ಕೃತಂ** = ಮಾಡಲ್ಪಟ್ಟಿತು, **ದ್ವಿಜವರ್ಯವೇಷೈಃ** = ಬ್ರಾಹ್ಮಣರ ವೇಷದಲ್ಲಿರುವ, **ಭವದ್ಭಿಃ** = ನಿಮ್ಮಿಂದ, **ತಥಾ** = ಹಾಗೆಯೇ, **ಅನ್ಯೇ** = ಬೇರೆ, **ದುರ್ನಯಾಃ** = ಭೇರಿ ಸೀಳುವಿಕೆ ಮೊದಲಾದ ಕೆಟ್ಟ ಕೆಲಸಗಳು, **ಕುತಃ** = ಯಾಕಾಗಿ, **ಕೃತಾಃ** = ಮಾಡಲ್ಪಟ್ಟವು?

ತಾತ್ಪರ್ಯ :- ಜರಾಸಂಧ ಪ್ರಶ್ನೆ ಮಾಡುತ್ತಿದ್ದಾನೆ - ನೀವು ಯಾರು? ಇಲ್ಲಿಗೆ ಏಕೆ ಬಂದಿದ್ದೀರಿ? ನಾನು ಪೂಜಿಸುತ್ತಿದ್ದ ಪರ್ವತ ಲಿಂಗವನ್ನು ಒಡೆದದ್ದೇಕೆ? ಬ್ರಾಹ್ಮಣ ವೇಷದಲ್ಲಿರುವ ನೀವು ಮಾಡಿದ ಕೆಟ್ಟ ಕೆಲಸಗಳ ಕಾರಣ ಏನು ? ಎಂದು.

**ಇತಿ ಬ್ರುವಾಣಂ ಭಗವಾನುವಾಚ**
**ಕಾರ್ಯಂ ಹಿ ಶತ್ರೋರಖಿಲಂ ಪ್ರತೀಪಮ್ ।**

ಇತ್ಯುಕ್ತ ಊಚೇ ನಹಿ ವಿಪ್ರಶತ್ರು-
ರಹಂ ಕುತೋ ವೋ ಮಮ ಶತ್ರುತಾ ಭವೇತ್ ॥ ೧೨೯ ॥

ಪದಚ್ಛೇದ :- ಇತಿ, ಬ್ರುವಾಣಂ, ಭಗವಾನ್, ಉವಾಚ, ಕಾರ್ಯಂ, ಹಿ, ಶತ್ರೋಃ, ಅಖಿಲಂ, ಪ್ರತೀಪಂ, ಇತಿ, ಉಕ್ತಃ, ಊಚೇ, ನ, ಹಿ, ವಿಪ್ರಶತ್ರುಃ, ಅಹಂ, ಕುತಃ, ವಃ, ಮಮ, ಶತ್ರುತಾ, ಭವೇತ್ ।

ಅರ್ಥ :- ಇತಿ = ಈ ರೀತಿಯಾಗಿ, ಬ್ರುವಾಣಂ = ಹೇಳುತ್ತಿರುವ ಜರಾಸಂಧನನ್ನು ಕುರಿತು, ಭಗವಾನ್ = ಶ್ರೀಕೃಷ್ಣನು, ಉವಾಚ = ಹೇಳಿದನು, ಶತ್ರೋಃ = ಶತ್ರುವಿಗೆ, ಪ್ರತೀಪಂ = ವಿರುದ್ಧವಾದದ್ದು, ಅಖಿಲಂ = ಎಲ್ಲವೂ, ಕಾರ್ಯಂ ಹಿ = ಮಾಡಲ್ಪಡಬೇಕಷ್ಟೇ, ಇತಿ = ಈ ರೀತಿಯಾಗಿ, ಉಕ್ತಃ = ಹೇಳಲ್ಪಟ್ಟ ಜರಾಸಂಧನು, ಊಚೇ = ಹೇಳಿದನು, ಅಹಂ = ನಾನು, ವಿಪ್ರಶತ್ರುಃ = ಬ್ರಾಹ್ಮಣ ಶತ್ರುವು, ನ ಹಿ = ಅಲ್ಲವಷ್ಟೇ, ವಃ = ನಿಮಗೆ, ಮಮ = ನನ್ನ, ಶತ್ರುತಾ = ಶತ್ರುತ್ವವು, ಕುತಃ = ಹೇಗೆ ತಾನೇ, ಭವೇತ್ = ಆದೀತು.

ತಾತ್ಪರ್ಯ :- ಜರಾಸಂಧ ಈ ಪ್ರಶ್ನೆಗಳನ್ನು ಕೇಳಿದಾಗ ಶ್ರೀಕೃಷ್ಣ ಉತ್ತರಿಸಿದ 'ಶತ್ರುಗಳಿಗೆ ವಿರುದ್ಧವಾದ ಎಲ್ಲವನ್ನು ಮಾಡಬೇಕು' ಎಂದು. ಆಗ ಜರಾಸಂಧ ಪ್ರಶ್ನಿಸಿದ ನನಗೆ ಬ್ರಾಹ್ಮಣರು ಶತ್ರುಗಳಲ್ಲ. ನಿಮಗೆ ನಾನು ಹೇಗೆ ಶತ್ರು ಎಂದು.

ಇತ್ಯುಕ್ತವಾಕ್ಯಂ ನೃಪತಿಂ ಜಗಾದ
ಜನಾರ್ದನೋ ನೈವ ಹಿ ತಾದೃಶಾ ದ್ವಿಜಾಃ ।
ವಯಂ ರಿಪುಸ್ತೇಽಸ್ಮಿ ಹಿ ವಾಸುದೇವ
ಇಮೌ ಚ ಭೀಮಾರ್ಜುನನಾಮಧೇಯೌ ॥ ೧೩೦ ॥

ಪದಚ್ಛೇದ :- ಇತಿ, ಉಕ್ತವಾಕ್ಯಂ, ನೃಪತಿಂ, ಜಗಾದ, ಜನಾರ್ದನಃ, ನ, ಏವ, ಹಿ, ತಾದೃಶಾಃ, ದ್ವಿಜಾಃ, ವಯಂ, ರಿಪುಃ, ತೇ, ಅಸ್ಮಿ ಹಿ, ವಾಸುದೇವಃ, ಇಮೌ, ಚ, ಭೀಮಾರ್ಜುನನಾಮಧೇಯೌ ।

ಅರ್ಥ :- ಇತಿ = ಈ ರೀತಿಯಾಗಿ, ಉಕ್ತವಾಕ್ಯಂ = ಹೇಳಿದ, ನೃಪತಿಂ = ಜರಾಸಂಧನನ್ನು ಕುರಿತು, ಜನಾರ್ದನಃ = ಶ್ರೀಕೃಷ್ಣನು, ಜಗಾದ = ಹೇಳಿದನು,

**ವಯಂ** = ನಾವು, **ತಾದೃಶಾಃ** = ನೀನು ದ್ವೇಷಿಸದ ವಿಪ್ರರೂಪದ, **ದ್ವಿಜಾಃ** = ದ್ವಿಜರು, **ನೈವ ಹಿ** = ಅಲ್ಲವಷ್ಟೆ, **ತೇ** = ನಿನ್ನ, **ರಿಪುಃ** = ಶತ್ರುವಾದ, **ವಾಸುದೇವಃ** = ವಾಸುದೇವನು, **ಅಸ್ಮಿ** = ಆಗಿದ್ದೇನೆ, **ಇಮೌ ಚ** = ಇವರಿಬ್ಬರಾದರೂ, **ಭೀಮಾರ್ಜುನನಾಮಧೇಯೌ** = ಭೀಮ, ಅರ್ಜುನ ಎಂದು ಹೆಸರುಳ್ಳವರು.

**ತಾತ್ಪರ್ಯ** :- ಶ್ರೀಕೃಷ್ಣ ಜರಾಸಂಧನಿಗೆ ಹೇಳಿದ - ನೀನು ತಿಳಿದಂತೆ ನಾವು ವಿಪ್ರರಲ್ಲ. ನಾನು ನಿನ್ನ ಶತ್ರುವಾದ ವಾಸುದೇವ ಈ ಇಬ್ಬರು ಭೀಮಾರ್ಜುನರು.

**ಯದ್ ಬಾಂಧವಾನ್ ನಃ ಪಿಶಿತಾಶಿಧರ್ಮತೋ**
**ರೌದ್ರೇ ಮಖೇ ಕಲ್ಪಯಿತುಂ ಪಶುತ್ವೇ ।**
**ಇಚ್ಛಸ್ಯರೇ ವೇದಪಥಂ ವಿಹಾಯ**
**ತಂ ತ್ವಾಂ ಬಲಾಚ್ಛಾಸ್ತುಮಿಹಾಽಗತಾ ವಯಮ್ ॥ ೧೩೧ ॥**

**ಪದಚ್ಛೇದ** :- **ಯತ್, ಬಾಂಧವಾನ್, ನಃ, ಪಿಶಿತಾಶಿಧರ್ಮತಃ, ರೌದ್ರೇ, ಮಖೇ, ಕಲ್ಪಯಿತುಂ, ಪಶುತ್ವೇ, ಇಚ್ಛಸಿ, ಅರೇ, ವೇದಪಥಂ, ವಿಹಾಯ, ತಂ, ತ್ವಾಂ, ಬಲಾತ್, ಶಾಸ್ತುಂ, ಇಹ, ಆಗತಾಃ, ವಯಂ ।**

**ಅರ್ಥ** :- **ಅರೇ** = ದುಷ್ಟನೇ, **ಯತ್** = ಯಾವ ಕಾರಣದಿಂದ, **ನಃ** = ನಮ್ಮ, **ಬಾಂಧವಾನ್** = ಬಂಧುಗಳನ್ನು, **ವೇದಪಥಂ** = ವೈದಿಕ ಮಾರ್ಗವನ್ನು, **ವಿಹಾಯ** = ಬಿಟ್ಟು, **ಪಿಶಿತಾಶಿಧರ್ಮತಃ** = ಪಿಶಾಚಧರ್ಮದಂತೆ, **ರೌದ್ರೆ ಮಖೇ** = ರುದ್ರಯಾಗದಲ್ಲಿ, **ಪಶುತ್ವೇ** = ಪಶುಗಳನ್ನಾಗಿ, **ಕಲ್ಪಯಿತುಂ** = ಕಲ್ಪಿಸಲು, **ಇಚ್ಛಸಿ** = ಬಯಸಿರುವಿ, **ತಂ** = ಅಂತಹ, **ತ್ವಾಂ** = ನಿನ್ನನ್ನು, **ಬಲಾತ್** = ಶಕ್ತಿಯಿಂದ, **ಶಾಸ್ತುಂ** = ನಿಗ್ರಹಿಸಲು, **ಇಹ** = ಇಲ್ಲಿಗೆ, **ವಯಂ** = ನಾವು, **ಆಗತಾಃ** = ಬಂದಿರುವೆವು.

**ತಾತ್ಪರ್ಯ** :- ನೀನು ವೈದಿಕ ರೀತಿಯನ್ನು ಬಿಟ್ಟು ಪಿಶಾಚ ಪದ್ಧತಿಯಂತೆ ರುದ್ರಯಾಗದಲ್ಲಿ ನಮ್ಮವರನ್ನು ಪಶುಗಳಂತೆ ಬಲಿ ಕೊಡಲು ಇಚ್ಛೆ ಪಟ್ಟಿರುವೆ. ಆದ್ದರಿಂದ ನಿನ್ನನ್ನು ನಿಗ್ರಹಿಸಲು ನಾವು ಮೂವರು ಬಂದಿದ್ದೇವೆ.

ವಿಮೋಕ್ಷಯಾಮಃ ಸ್ವಜನಾನ್ ಯದಿ ತಂ
ನ ಮೋಚಯಸ್ಯದ್ಯ ನಿಗೃಹ್ಯ ಚ ತ್ವಾಮ್ ।
ಮುಂಚಾಥವಾ ತಾನಭಿಯಾಹಿ ವಾಽಸ್ಮಾನ್
ರಣಾಯ ಮರ್ತುಂ ಕೃತನಿಶ್ಚಯೋಽತ್ರ ॥ ೧೩೨ ॥

ಪದಚ್ಛೇದ :- ವಿಮೋಕ್ಷಯಾಮಃ, ಸ್ವಜನಾನ್, ಯದಿ, ತ್ವಂ, ನ, ಮೋಚಯಸಿ, ಅದ್ಯ, ನಿಗೃಹ್ಯ, ಚ, ತ್ವಾಂ, ಮುಂಚ, ಅಥವಾ, ತಾನ್, ಅಭಿಯಾಹಿ, ವಾ, ಅಸ್ಮಾನ್, ರಣಾಯ, ಮರ್ತುಂ, ಕೃತನಿಶ್ಚಯಃ, ಅತ್ರ ।

ಅರ್ಥ :- ಚ = ಮತ್ತು, ಸ್ವಜನಾನ್ = ನಮ್ಮ ಬಂಧುಜನರನ್ನು, ಯದಿ = ಒಂದು ವೇಳೆ, ತ್ವಂ = ನೀನು, ನ ಮೋಚಯಸಿ = ಬಿಡುವುದಿಲ್ಲವಾದರೆ, ಅದ್ಯ = ಇಂದು, ತ್ವಾಂ = ನಿನ್ನನ್ನು, ನಿಗೃಹ್ಯ = ಕೊಂದು, ವಿಮೋಕ್ಷಯಾಮಃ = ಬಿಡಿಸುತ್ತೇವೆ, ತಾನ್ = ಅವರನ್ನು, ಮುಂಚ = ಬಿಡು ಅಥವಾ = ಹಾಗಲ್ಲದಿದ್ದರೆ, ಅತ್ರ = ಈ ಕೊನೆಯುದ್ಧದಲ್ಲಿ, ಮರ್ತುಂ = ಸಾಯಲು, ಕೃತನಿಶ್ಚಯಃ = ನಿಶ್ಚಯ ಮಾಡಿದವನಾಗಿ, ಅಸ್ಮಾನ್ = ನಮ್ಮನ್ನು, ಅಭಿಯಾಹಿ = ಯುದ್ಧದಲ್ಲಿ ಎದುರಿಸು.

ತಾತ್ಪರ್ಯ :- ನಮ್ಮ ಬಂಧು ಜನರನ್ನು ನೀನಾಗಿಯೇ ಬಿಡದಿದ್ದರೆ, ನಿನ್ನನ್ನು ಕೊಂದು ಬಿಡುಗಡೆಗೊಳಿಸುತ್ತೇವೆ. ಆದುದರಿಂದ ನಿನಗೆ ಎರಡು ಮಾರ್ಗವಿದೆ ಒಂದು ನಮ್ಮವರನ್ನು ಬಿಡು ಅಥವಾ ನಮ್ಮೊಂದಿಗೆ ಯುದ್ಧಕ್ಕೆ ಬಾ. ಆದರೆ ಈ ಯುದ್ಧ ನಿನಗೆ ಕೊನೆಯುದ್ಧ. ಇಲ್ಲಿ ನಿನ್ನನ್ನು ನಾವು ಕೊಲ್ಲುತ್ತೇವೆ.

ಇತೀರಿತೋಽಸೌ ಮಗಧಾಧಿಪೋ ರುಷಾ
ಜಗಾದ ನಾಹಂ ಶಿವಯಾಗಯುಕ್ತಾನ್ ।
ಯೋತ್ಸ್ಯೇ ಮೋಕ್ಷ್ಯೇ ಪಶೂನ್ ಯುಗಪದ್ವಾ ಕ್ರಮೇಣ
ಚ ವೋಽಥಾಪಿ ಚಮೂಸಹಾಯಾನ್ ॥ ೧೩೩ ॥

ಪದಚ್ಛೇದ :- ಇತಿ, ಈರಿತಃ, ಅಸೌ, ಮಗಧಾಧಿಪಃ, ರುಷಾ, ಜಗಾದ, ನ, ಅಹಂ, ಶಿವಯಾಗಯುಕ್ತಾನ್, ಮೋಕ್ಷ್ಯೇ, ಪಶೂನ್, ಯುಗಪತ್, ವಾ, ಕ್ರಮೇಣ, ಯೋತ್ಸ್ಯೇ, ಚ, ವಃ, ಅಥಾಪಿ, ಚಮೂಸಹಾಯಾನ್ ।

**ಅರ್ಥ** :- **ಇತಿ** = ಹೀಗೆಂದು, **ಈರಿತಃ** = ಹೇಳಲ್ಪಟ್ಟ, **ಅಸೌ** = ಈ, **ಮಗಧಾಧಿಪಃ** = ಜರಾಸಂಧನು, **ರುಷಾ** = ಸಿಟ್ಟಿನಿಂದ, **ಜಗಾದ** = ಹೇಳಿದನು, **ಅಹಂ** = ನಾನು, **ಶಿವಯಾಗಯುಕ್ತಾನ್** = ರುದ್ರಯಾಗಕ್ಕಾಗಿ ನಿಯೋಜಿತರಾದ, **ಪಶೂನ್** = ಪಶುಗಳನ್ನು, **ನ ಮೋಕ್ಷ್ಯೇ** = ಬಿಡುವುದಿಲ್ಲ, **ವಃ** = ನಿಮ್ಮನ್ನು, **ಯುಗಪತ್ ವಾ** = ಒಟ್ಟಿಗೆಯೋ, **ಕ್ರಮೇಣ ಚ** = ಪ್ರತ್ಯೇಕವಾಗಿಯೋ, **ಯೋತ್ಸ್ಯೇ** = ಯುದ್ಧದಲ್ಲಿ ಎದುರಿಸುತ್ತೇನೆ, **ಅಥಾಪಿ** = ಅಥವಾ, **ಚಮೂಸಹಾಯಾನ್** = ಸೇನಾ ಸಮೇತರಾದ ನಿಮ್ಮನ್ನು ಎದುರಿಸುತ್ತೇನೆ.

**ತಾತ್ಪರ್ಯ** :- ಜರಾಸಂಧ ಸಿಟ್ಟಿನಿಂದ ಹೀಗೆಂದ – ''ನಾನು ನಿನ್ನ ಬಂಧುಗಳನ್ನು ಬಿಡುವುದಿಲ್ಲ. ಅವರು ಶಿವಯಾಗದಲ್ಲಿ ಪಶುಗಳೆಂದು ಈಗಾಗಲೇ ನಿಯೋಜಿತರಾಗಿದ್ದಾರೆ. ಆದುದರಿಂದ ನಾನು ಯುದ್ಧವನ್ನು ಮಾಡುತ್ತೇನೆ. ಅದು ಹೇಗೂ ಆಗಬಹುದು. ನೀವು ಮೂವರು ಒಮ್ಮೆಲೆ ಯುದ್ಧಕ್ಕೆ ಬರಬಹುದು. ಅಥವಾ ಕ್ರಮವಾಗಿ ಬರಬಹುದು. ಅಥವಾ ಸೇನೆಯನ್ನು ಸೇರಿಸಿ ಜೊತೆಗೆ ಬರಬಹುದು'' ಎಂದು.

**ನಿರಾಯುಧಃ ಸಾಯುಧೋ ವಾ ಯುಷ್ಮದಿಷ್ಟಾಯುಧೇನ ವಾ ।**
**ಏಕೋಽಪಿ ಸಕಲೈರ್ಯೋತ್ಸ್ಯೇ ಸಸೇನೋ ವಾ ಸಸೈನಿಕಾನ್ ॥ ೧೩೪ ॥**

**ಪದಚ್ಛೇದ** :- **ನಿರಾಯುಧಃ, ಸಾಯುಧಃ, ವಾ, ಯುಷ್ಮದಿಷ್ಟಾಯುಧೇನ, ವಾ, ಏಕಃ, ಅಪಿ, ಸಕಲೈಃ, ಯೋತ್ಸ್ಯೇ, ಸಸೇನಃ, ವಾ, ಸಸೈನಿಕಾನ್ ।**

**ಅರ್ಥ** :- **ನಿರಾಯುಧಃ** = ಆಯುಧ ರಹಿತನಾಗಿಯಾಗಲಿ, **ವಾ** = ಅಥವಾ, **ಸಾಯುಧಃ** = ಆಯುಧ ಸಹಿತವಾಗಿಯಾಗಲೀ, **ವಾ** = ಅಥವಾ, **ಯುಷ್ಮದಿಷ್ಟಾಯುಧೇನ** = ನಿಮಗಿಷ್ಟವಾದ ಆಯುಧ ಧರಿಸಿ, **ಏಕಃ ಅಪಿ** = ಒಬ್ಬನೇ, **ಸಕಲೈಃ** = ಎಲ್ಲರೊಂದಿಗೆ, **ಯೋತ್ಸ್ಯೇ** = ಯುದ್ಧ ಮಾಡುತ್ತೇನೆ, **ವಾ** = ಅಥವಾ, **ಸಸೇನಃ** = ಸೇನಾ ಸಹಿತವಾಗಿ, **ಸಸೈನಿಕಾನ್** = ಸೇನೆಯೊಂದಿಗಿರುವ ನಿಮ್ಮನ್ನು ಎದುರಿಸುತ್ತೇನೆ.

**ತಾತ್ಪರ್ಯ** :- ನಾನು ಆಯುಧ ಧರಿಸಲು ನೀವು ಸೂಚಿಸಿದರೆ ಧರಿಸುತ್ತೇನೆ. ಇಲ್ಲದಿದ್ದರೆ ಇಲ್ಲ ಅಥವಾ ಯಾವ ಆಯುಧ ಹಿಡಿಯಬೇಕೆಂದು

ಸೂಚಿಸಿದರೆ ಅದನ್ನೆ ಧರಿಸುತ್ತೇನೆ ನಾನೊಬ್ಬನೆ ನಿಮ್ಮೆಲ್ಲನ್ನೂ ಎದುರಿಸುತ್ತೇನೆ ಅಥವಾ ನೀವೂ ಸೇನೆಯೊಂದಿಗೆ ಬನ್ನಿ ನಾನೂ ಸೇನಾ ಸಹಿತವಾಗಿ ಯುದ್ಧ ಮಾಡುತ್ತೇನೆ' ಎಂದು ಜರಾಸಂಧ ಹೇಳಿದ.

**ಇತ್ಯುಕ್ತವಂತಮವದದಜಿತೋರುಬಲೋ ಹರಿಃ ।**
**ಏಹ್ಯೇಕಮೇಕೋ ವಾಽಸ್ಮಾಸು ಸಸೈನ್ಯೋ ವಾ ರಣೇ ನೃಪ ॥ ೧೩೫ ॥**

**ಯೇನ ಕಾಮಯಸೇ ಯೋದ್ಧುಂ ತಂ ನ ಆಸಾದಯ ದ್ರುತಮ್ ।**
**ನಿರಾಯುಧಃ ಸಾಯುಧೋ ವಾ ತ್ವದಭೀಷ್ಟಾಯುಧೇನ ವಾ ॥ ೧೩೬ ॥**

**ಪದಚ್ಛೇದ :-** ಇತಿ, ಉಕ್ತವಂತಂ, ಅವದತ್, ಅಜಿತೋರುಬಲಃ, ಹರಿಃ, ಏಹಿ, ಏಕಂ, ಏಕಃ,ವಾ, ಅಸ್ಮಾಸು, ಸಸೈನ್ಯಃ, ವಾ, ರಣೇ, ನೃಪ, ಯೇನ, ಕಾಮಯಸೇ, ಯೋದ್ಧುಂ, ತಂ, ನಃ, ಆಸಾದಯ, ದ್ರುತಂ, ನಿರಾಯುಧಃ, ಸಾಯುಧಃ, ವಾ, ತ್ವದಭೀಷ್ಟಾಯುಧೇನ, ವಾ ।

**ಅರ್ಥ :-** **ಇತಿ** = ಈ ರೀತಿಯಾಗಿ, **ಉಕ್ತವಂತಂ** = ಹೇಳುತ್ತಿರುವ ಜರಾಸಂಧನನ್ನು ಕುರಿತು, **ಅಜಿತೋರುಬಲಃ** = ಅಜೇಯವಾದ ಉತ್ಕೃಷ್ಟವಾದ ಬಲವುಳ್ಳ, **ಹರಿಃ** = ಶ್ರೀಕೃಷ್ಣನು, **ನೃಪ** = ರಾಜನೇ, **ಅಸ್ಮಾಸು** = ನಮ್ಮಲ್ಲಿ, **ಏಕಂ** = ಒಬ್ಬನನ್ನು, **ಏಕೋ ವಾ** = ಒಬ್ಬನೆ ಆಗಲಿ, **ಸಸೈನ್ಯಃ ವಾ** = ಸೈನ್ಯ ಸಮೇತನಾಗಿ ಆಗಲಿ, **ರಣೇ** = ಯುದ್ಧದಲ್ಲಿ, **ಏಹಿ** = ಎದುರಿಸು, **ಯೇನ** = ಯಾರೊಂದಿಗೆ, **ಯೋದ್ಧುಂ** = ಯುದ್ಧ ಮಾಡಲು, **ಕಾಮಯಸೇ** = ಬಯಸುವೆಯೋ, **ತಂ** = ಅವನನ್ನು, **ನಿರಾಯುಧಃ** = ಆಯುಧ ರಹಿತನಾಗಿಯೇ ಆಗಲಿ, **ಸಾಯುಧೋ ವಾ** = ಆಯುಧ ಸಹಿತನಾಗಿಯೇ ಆಗಲಿ, **ತ್ವದಭೀಷ್ಟಾಯುಧೇನ ವಾ** = ನಿನ್ನ ಇಷ್ಟದ ಆಯುಧದೊಂದಿಗೋ, **ದ್ರುತಂ** = ಶೀಘ್ರವಾಗಿ, **ಆಸಾದಯ** = ಎದುರಿಸು.

**ತಾತ್ಪರ್ಯ :-** ಜರಾಸಂಧನ ಮಾತಿಗೆ ಶ್ರೀಕೃಷ್ಣ ಹೇಳಿದ - ''ನಮ್ಮಲ್ಲಿ ಒಬ್ಬನನ್ನು ನೀನು ಆಯ್ಕೆ ಮಾಡಿಕೋ, ಅವರೊಂದಿಗೆ ನೀನು ಹೇಗೆ ಬೇಕಾದರೂ ಯುದ್ಧ ಮಾಡಬಹುದು. ಒಬ್ಬನೇ ಬರಬಹುದು ಅಥವಾ ಸೇನೆಯೊಂದಿಗೂ ಬರಬಹುದು. ಆಯುಧ ಹಿಡಿಯಬಹುದು ಅಥವಾ ನಿರಾಯುಧನಾಗಿಯೇ ಬರಬಹುದು ಅಥವಾ ನಿನ್ನ ಇಷ್ಟದ ಆಯುಧ ಧರಿಸಿಯೇ ಯುದ್ಧ ಮಾಡಬಹುದು. ಬೇಗ ಯುದ್ಧಕ್ಕೆ ಸಿದ್ಧನಾಗು''.

**ಇತ್ಯಾಽಹ ಭಗವಾನ್ ಶತ್ರುಂ ಯಶೋ ಭೀಮೇ ವಿವರ್ಧಯನ್ ।**
**ಘಾತಯಿತ್ವಾ ಸ್ವಶತ್ರುಂ ಚ ಭೀಮೇನಾನುಗ್ರಹಂ ಪರಮ್ ॥ ೧೩೭ ॥**

**ಭೀಮಸ್ಯ ಕರ್ತುಮಿಚ್ಛಂಶ್ಚ ಭಕ್ತಿಜ್ಞಾನಾದಿವರ್ಧನಮ್ ।**
**ತೃಣೀಕರ್ತುಂ ರಿಪುಂ ಚೈವ ನಿರಾಯುಧತಯಾಽಗಮತ್ ॥ ೧೩೮ ॥**

**ಪದಚ್ಛೇದ :– ಇತಿ, ಆಹ, ಭಗವಾನ್, ಶತ್ರುಂ, ಯಶಃ, ಭೀಮೇ, ವಿವರ್ಧಯನ್, ಘಾತಯಿತ್ವಾ, ಸ್ವಶತ್ರುಂ, ಚ, ಭೀಮೇನ, ಅನುಗ್ರಹಂ, ಪರಂ, ಭೀಮಸ್ಯ, ಕರ್ತುಂ, ಇಚ್ಛನ್, ಚ, ಭಕ್ತಿಜ್ಞಾನಾದಿವರ್ಧನಂ, ತೃಣೀಕರ್ತುಂ, ರಿಪುಂ, ಚ, ಏವ, ನಿರಾಯುಧತಯಾ, ಅಗಮತ್ ।**

**ಅರ್ಥ :-** **ಸ್ವಶತ್ರುಂ** = ತನ್ನ ಶತ್ರುವಾದ ಜರಾಸಂಧನನ್ನು, **ಭೀಮೇನ** = ಭೀಮಸೇನನಿಂದ, **ಘಾತಯಿತ್ವಾ** = ಕೊಲ್ಲಿಸಿ, **ಭೀಮೇ** = ಭೀಮನಲ್ಲಿ, **ಯಶಃ** = ಕೀರ್ತಿಯನ್ನು, **ವಿವರ್ಧಯನ್** = ಹೆಚ್ಚಿಸುತ್ತಾ, **ಭೀಮಸ್ಯ** = ಭೀಮನಿಗೆ, **ಪರಂ** = ಹೆಚ್ಚಾದ, **ಅನುಗ್ರಹಂ** = ಅನುಗ್ರಹವನ್ನು, **ಚ** = ಮತ್ತು, **ಭಕ್ತಿಜ್ಞಾನಾದಿವರ್ಧನಂ** = ಭಕ್ತಿ, ಜ್ಞಾನ ಮೊದಲಾದ ಸದ್ಗುಣಗಳ ವೃದ್ಧಿಯನ್ನು, **ಕರ್ತುಂ** = ಮಾಡಲು, **ಇಚ್ಛನ್** = ಇಚ್ಛಿಸುತ್ತಾ, **ಭಗವಾನ್** = ಶ್ರೀಕೃಷ್ಣನು, **ಶತ್ರುಂ** = ಶತ್ರುವಾದ ಜರಾಸಂಧನನ್ನು ಕುರಿತು, **ಇತಿ** = ಹಿಂದೆ ಹೇಳಿದ ರೀತಿಯಲ್ಲಿ, **ಆಹ** = ಹೇಳಿದನು, **ಚ** = ಮತ್ತು, **ರಿಪುಂ** = ಜರಾಸಂಧನನ್ನು, **ತೃಣೀಕರ್ತುಂ ಏವ** = ತುಚ್ಛೀಕರಿಸಲೇ, **ನಿರಾಯುಧತಯಾ** = ನಿರಾಯುಧವಾಗಿ, **ಅಗಮತ್** = ಜರಾಸಂಧನಲ್ಲಿಗೆ ಬಂದನು.

**ತಾತ್ಪರ್ಯ :-** ರಾಜಸೂಯ ಮಾಡಿಸಿ ತನ್ಮೂಲಕ ಭೀಮನಿಗೆ ಅಪಾರ ಕೀರ್ತಿಯನ್ನು ತಂದುಕೊಡಲು ಶ್ರೀಕೃಷ್ಣ ಜರಾಸಂಧನನ್ನು ಭೀಮನಿಂದ ಕೊಲ್ಲಿಸುತ್ತಾನೆ. ತನ್ನ ಶತ್ರುವನ್ನು ಭೀಮನಿಂದ ಕೊಲ್ಲಿಸಿ, ಅವನಿಗೆ ಅಪಾರವಾದ ಅನುಗ್ರಹ ಮತ್ತು ಭಕ್ತಿಜ್ಞಾನಾದಿಗಳ ಅಭಿವೃದ್ಧಿಯನ್ನು ಮಾಡಲು ಶ್ರೀಕೃಷ್ಣ ಜರಾಸಂಧನ ಹತ್ತಿರ ಹಿಂದಿನ ಮಾತುಗಳನ್ನು ಆಡಿದ. ಜರಾಸಂಧ ತಮ್ಮ ಮುಂದೆ ಹುಲ್ಲುಕಡ್ಡಿಗೆ ಸಮ ಎಂದು ಸೂಚಿಸಲು ನಿರಾಯುಧನಾಗಿ ಬಂದ.

**ಕೃಷ್ಣಭೀಮಾರ್ಜುನಾಸ್ತೇನ ವಿಪ್ರವೇಷಾಶ್ಚ ತೇಽಭವನ್ ।**
**ನಿರಾಯುಧಃ ಕ್ಷತ್ರವೇಷೋ ನೈವ ಯೋಗ್ಯಃ ಕಥಂಚನ ।**

ತತೋ ಜಗ್ಮುರ್ವಿಪ್ರವೇಷಾಸ್ತೃಣೀಕರ್ತುಂ ಹಿ ಮಾಗಧಮ್ ॥ ೧೩೯ ॥

ಪದಚ್ಛೇದ :- ಕೃಷ್ಣಭೀಮಾರ್ಜುನಾಃ, ತೇನ, ವಿಪ್ರವೇಷಾಃ, ಚ, ತೇ, ಅಭವನ್, ನಿರಾಯುಧಃ, ಕ್ಷತ್ರವೇಷಃ, ನ, ಏವ, ಯೋಗ್ಯಃ, ಕಥಂಚನ, ತತಃ, ಜಗ್ಮುಃ, ವಿಪ್ರವೇಷಾಃ, ತೃಣೀಕರ್ತುಂ, ಹಿ, ಮಾಗಧಂ।

ಅರ್ಥ :- ತೇನ ಚ = ನಿರಾಯುಧರಾದುದರಿಂದಲೇ, ತೇ ಕೃಷ್ಣಭೀಮಾರ್ಜುನಾಃ = ಆ ಕೃಷ್ಣ ಭೀಮ ಮತ್ತು ಅರ್ಜುನರು, ವಿಪ್ರವೇಷಾಃ = ಬ್ರಾಹ್ಮಣರ ವೇಷವುಳ್ಳವರು, ಅಭವನ್ = ಆದರು, ಕ್ಷತ್ರವೇಷಃ = ಕ್ಷತ್ರಿಯ ರೂಪದಲ್ಲಿರುವವನನ್ನು, ಕಥಂಚನ = ಯಾವ ಕಾರಣದಿಂದಲೂ, ನಿರಾಯುಧಃ = ಆಯುಧವಿಲ್ಲದವನು, ನೈವ ಯೋಗ್ಯಃ = ಆಗಲು ಯೋಗ್ಯನಲ್ಲ, ತತಃ = ಆದುದರಿಂದ, ವಿಪ್ರವೇಷಾಃ = ಬ್ರಾಹ್ಮಣವೇಷವುಳ್ಳವರಾಗಿ, ಮಾಗಧಂ = ಜರಾಸಂಧನನ್ನು, ತೃಣೀಕರ್ತೃಂ = ತುಚ್ಛೀಕರಿಸಲು, ಜಗ್ಮುಃ ಹಿ = ಹೋದರಷ್ಟೇ.

ತಾತ್ಪರ್ಯ :- ಜರಾಸಂಧನನ್ನು ಧಿಕ್ಕರಿಸಲು ನಿರಾಯುಧರಾಗಿ ಹೋದರು. ಆದರೇ ಕ್ಷತ್ರಿಯ ವೇಷದಲ್ಲಿ ಇರಬಹುದಿತ್ತಲ್ಲವೇ? ಎಂದರೆ ಇಲ್ಲ. ಕ್ಷತ್ರಿಯನು ಯಾವತ್ತೂ ನಿರಾಯುಧನಾಗಿರಬಾರದು. ಹೀಗಾಗಿ ಜರಾಸಂಧನನ್ನು ತುಚ್ಛೀಕರಿಸಲು ನಿರಾಯುಧರಾಗಿ, ನಿರಾಯುಧರಾಗಲು ಬ್ರಾಹ್ಮಣ ವೇಷಧರಿಸಿ ಆ ಕೃಷ್ಣ, ಭೀಮ, ಅರ್ಜುನರು ಹೋದರು.

ಮಾಗಧಸ್ಯ ಸಸೈನ್ಯಸ್ಯ ಸ್ವಗೃಹೇ ಸಂಸ್ಥಿತಸ್ಯ ಚ ।
ನಿರಾಯುಧೇನ ಭೀಮೇನ ಸಮಾಹ್ವಾನೇ ಕೃತೇಽಮಿತಮ್ ।
ಧರ್ಮಂ ಯಶಶ್ಚ ಭೀಮಸ್ಯ ವರ್ಧಯಾಮಾಸ ಕೇಶವಃ ॥ ೧೪೦-೧೪೧ ॥

ಪದಚ್ಛೇದ :- ಮಾಗಧಸ್ಯ, ಸಸೈನ್ಯಸ್ಯ, ಸ್ವಗೃಹೇ, ಸಂಸ್ಥಿತಸ್ಯ, ಚ, ನಿರಾಯುಧೇನ, ಭೀಮೇನ, ಸಮಾಹ್ವಾನೇ, ಕೃತೇ, ಅಮಿತಂ, ಧರ್ಮಂ, ಯಶಃ, ಚ, ಭೀಮಸ್ಯ, ವರ್ಧಯಾಮಾಸ, ಕೇಶವಃ।

ಅರ್ಥ :- ಸಸೈನ್ಯಸ್ಯ = ಸೈನ್ಯಸಮೇತನಾದ, ಚ = ಮತ್ತು, ಸ್ವಗೃಹೇ = ತನ್ನ ಮನೆಯಲ್ಲಿ, ಸಂಸ್ಥಿತಸ್ಯ = ಇರುವ, ಮಾಗಧಸ್ಯ = ಜರಾಸಂಧನಿಗೆ, ನಿರಾಯುಧೇನ = ಆಯುಧರಹಿತನಾದ, ಭೀಮೇನ = ಭೀಮಸೇನನಿಂದ,

**ಸಮಾಹ್ವಾನೇ** = ಯುದ್ಧಕ್ಕಾಗಿ ಆಹ್ವಾನವು, **ಕೃತೇ** = ಮಾಡಲ್ಪಡುತ್ತಿರಲು, **ಭೀಮಸ್ಯ** = ಭೀಮನಿಗೆ, **ಅಮಿತಂ** = ಅಪಾರವಾದ, **ಧರ್ಮಂ** = ಧರ್ಮವನ್ನು, **ಚ** = ಮತ್ತು, **ಯಶಃ** = ಕೀರ್ತಿಯನ್ನು, **ಕೇಶವಃ** = ಶ್ರೀಕೃಷ್ಣನು, **ವರ್ಧಯಾಮಾಸ** = ಹೆಚ್ಚಿಸಿದನು.

**ತಾತ್ಪರ್ಯ** :- ಆಯುಧ ಸಹಿತನಾದ ಮತ್ತು ತನ್ನ ಮನೆಯಲ್ಲಿಯೇ ಇರುವ ಜರಾಸಂಧನೊಂದಿಗೆ ನಿರಾಯುಧನಾದ ಭೀಮ ಯುದ್ಧ ಮಾಡಿದರೇ ಆಗ ಭೀಮನಿಗೆ ಅಪಾರವಾದ ಧರ್ಮ ಮತ್ತು ಕೀರ್ತಿಯು ಉಂಟಾಗುತ್ತದೆ ಎಂಬ ಕಾರಣದಿಂದ ಭೀಮನನ್ನು ತನ್ನ ಜೊತೆ ಕರೆದುಕೊಂಡು ಹೋದನು.

**ತೃತೀಯಮರ್ಜುನಂ ಚೈವ ಸಮಾದಾಯ ಯಯೌ ರಿಪುಮ್ ।**
**ಹರಿಸ್ತಸ್ಮಾಚ್ಚ ಭೀಮಸ್ಯ ಮಹಾಧಿಕ್ಯಂ ಪ್ರಕಾಶಯನ್ ।**
**ಮುಖೇನ ಮಾಗಧಸ್ಯೈವ ವೃಣ್ವೇಕಂ ನ ಇತಿ ಬ್ರುವನ್ ॥ ೧೪೨ ॥**

**ಪದಚ್ಛೇದ** :- **ತೃತೀಯಂ, ಅರ್ಜುನಂ, ಚ, ಏವ, ಸಮಾದಾಯ, ಯಯೌ, ರಿಪುಂ, ಹರಿಃ, ತಸ್ಮಾತ್, ಚ, ಭೀಮಸ್ಯ, ಮಹಾಧಿಕ್ಯಂ, ಪ್ರಕಾಶಯನ್, ಮುಖೇನ, ಮಾಗಧಸ್ಯ, ಏವ, ವೃಣು, ಏಕಂ, ನಃ ಇತಿ, ಬ್ರುವನ್ ।**

**ಅರ್ಥ** :- **ಚ** = ಮತ್ತು, **ನಃ** = ನಮ್ಮಲ್ಲಿ, **ಏಕಂ** = ಒಬ್ಬನನ್ನು, **ವೃಣು** = ಯುದ್ಧಕ್ಕೆ ಆರಿಸು, **ಇತಿ** = ಎಂದು, **ಬ್ರುವನ್** = ಹೇಳುತ್ತಾ, **ಮಾಗಧಸ್ಯ** = ಜರಾಸಂಧನ, **ಮುಖೇನ ಏವ** = ಮುಖಾಂತರವೇ, **ತಸ್ಮಾತ್** = ಆ ಅರ್ಜುನನಿಗಿಂತ, **ಭೀಮಸ್ಯ** = ಭೀಮಸೇನನಿಗೆ, **ಮಹಾಧಿಕ್ಯಂ** = ಅತ್ಯಂತ ಆಧಿಕ್ಯವನ್ನು, **ಪ್ರಕಾಶಯನ್** = ತೋರಿಸುತ್ತಾ, **ತೃತೀಯಂ** = ಮೂರನೆಯವನನ್ನಾಗಿ, **ಅರ್ಜುನಂ ಏವ** = ಅರ್ಜುನನನ್ನೇ, **ಸಮಾದಾಯ** = ಕರೆದುಕೊಂಡು, **ರಿಪುಂ** = ಶತ್ರುವಾದ ಜರಾಸಂಧನನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ** :- ಶ್ರೀಕೃಷ್ಣನು ಅರ್ಜುನನನ್ನು ಜೊತೆಗೆ ಕರೆದುಕೊಂಡು ಹೋದ. ಇದಕ್ಕೆ ಕಾರಣವನ್ನು ಇಲ್ಲಿ ತಿಳಿಸಿದ್ದಾರೆ. ಅರ್ಜುನನಿಗಿಂತ ಭೀಮ ಅತ್ಯಂತ ಬಲಶಾಲಿ ಎಂದು ಜರಾಸಂಧನ ಮೂಲಕವೇ ನಿರೂಪಿಸುವುದಕ್ಕೋಸ್ಕರ ಮೂರನೆಯವನನ್ನಾಗಿ ಅರ್ಜುನನನ್ನು ಆಯ್ಕೆ ಮಾಡಿ ಕರೆದೊಯ್ದ.

ವೃಣ್ವೇಕಮಸ್ಮಾಸ್ವಿತಿ ಸ ಪ್ರೋಕ್ತ ಆಹ ಜರಾಸುತಃ ।
ಕುರ್ಯಾಂ ನೈವಾರ್ಜುನೇನಾಹಮಬಲೇನೈವ ಸಂಗರಮ್ ॥ ೧೪೩ ॥

ಪಂಚಪಂಚಾಶದಬ್ದೋಽದ್ಯ ಹ್ಯಯಮೇವಂ ಚ ಬಾಲವತ್ ।
ಅಬಲತ್ವಾದ್ ಯುವಾಽಪ್ಯೇಷ ಬಾಲ ಏವ ಮತೋ ಮಮ ॥ ೧೪೪ ॥

ಇತ್ಯುಕ್ತೋಽಪ್ಯರ್ಜುನೋ ನಾಽಹ ಕುರು ತರ್ಹಿ ಪರೀಕ್ಷಣಮ್ ।
ಬಾಹುಭ್ಯಾಂ ಧನುಷಾ ವೇತಿ ಶಂಕಮಾನಃ ಪರಾಜಯಮ್ ॥ ೧೪೫ ॥

ಅತೋ ಭೀಮೇ ಬಲಾಧಿಕ್ಯಂ ಸುಪ್ರಸಿದ್ಧಮಭೂನ್ಮಹತ್ ॥ ೧೪೬ ॥

ಪದಚ್ಛೇದ :- ವೃಣು, ಏಕಂ, ಅಸ್ಮಾಸು, ಇತಿ, ಸಃ, ಪ್ರೋಕ್ತಃ, ಆಹ, ಜರಾಸುತಃ, ಕುರ್ಯಾಂ, ನ, ಏವ, ಅರ್ಜುನೇನ, ಅಹಂ, ಅಬಲೇನ, ಏವ, ಸಂಗರಂ, ಪಂಚಪಂಚಾಶದಬ್ದಃ, ಅದ್ಯ, ಹಿ, ಅಯಂ, ಏವಂ, ಚ, ಬಾಲವತ್, ಅಬಲತ್ವಾತ್, ಯುವಾ, ಅಪಿ, ಏಷಃ, ಬಾಲಃ, ಏವ, ಮತಃ, ಮಮ, ಇತಿ, ಉಕ್ತಃ, ಅಪಿ, ಅರ್ಜುನಃ, ನ, ಆಹ, ಕುರು, ತರ್ಹಿ, ಪರೀಕ್ಷಣಂ, ಬಾಹ್ಯಭ್ಯಾಂ, ಧನುಷಾ, ವಾ, ಇತಿ, ಶಂಕಮಾನಃ, ಪರಾಜಯಂ, ಅತಃ, ಭೀಮೇ, ಬಲಾಧಿಕ್ಯಂ, ಸುಪ್ರಸಿದ್ಧಂ, ಅಭೂತ್, ಮಹತ್ ।

**ಅರ್ಥ :- ಅಸ್ಮಾಸು** = ನಮ್ಮ ಈ ಮೂವರಲ್ಲಿ, **ಏಕಂ** = ಒಬ್ಬನನ್ನು, **ವೃಣು** = ಯುದ್ಧಕ್ಕಾಗಿ ಆಯ್ಕೆ ಮಾಡು, **ಇತಿ** = ಎಂದು, **ಪ್ರೋಕ್ತಃ** = ಹೇಳಲ್ಪಟ್ಟ, **ಸಃ** = ಆ, **ಜರಾಸುತಃ** = ಜರಾಸಂಧನು, **ಅಹಂ** = ನಾನು, **ಅಬಲೇನ** = ನಿಃಶಕ್ತನಾದ, **ಅರ್ಜುನೇನ ಏವ** = ಅರ್ಜುನನ ಜೊತೆಯಲ್ಲಿಯೇ, **ಸಂಗರಂ** = ಯುದ್ಧವನ್ನು, **ನೈವ ಕುರ್ಯಾಂ** = ಮಾಡುವುದೇ ಇಲ್ಲ, **ಅದ್ಯ** = ಇಂದು, **ಅಯಂ** = ಈ ಅರ್ಜುನನು, **ಪಂಚಪಂಚಾಶದಬ್ದಃ, ಹಿ** = ಐವತ್ತೈದು ವರ್ಷದವನಷ್ಟೇ, **ಏವಂ ಚ** = ಹಾಗಿದ್ದರೂ, **ಬಲವತ್** = ಬಾಲಕನಂತೆಯೇ, **ಏಷಃ** = ಈ ಅರ್ಜುನನು, **ಯುವಾ ಅಪಿ** = ಯುವಕನಾಗಿದ್ದರೂ, **ಅಬಲತ್ವಾತ್** = ಬಲಹೀನನಾದುದರಿಂದ, **ಮಮ** = ನನಗೆ, **ಬಾಲ ಏವ** = ಬಾಲಕನಾಗಿಯೇ, **ಮತಃ** = ಸಮ್ಮತನು, **ಇತಿ** = ಈ ರೀತಿಯಾಗಿ, **ಉಕ್ತಃ ಅಪಿ** = ಹೇಳಲ್ಪಟ್ಟರೂ ಕೂಡ, **ಅರ್ಜುನಃ** = ಅರ್ಜುನನು, **ಪರಾಜಯಂ** = ಸೋಲನ್ನು, **ಶಂಕಮಾನಃ** = ಶಂಕಿಸುವವನಾಗಿ, **ತರ್ಹಿ** =

ಹಾಗಿದ್ದರೆ, **ಬಾಹುಭ್ಯಾಂ** = ಬಾಹುಗಳಿಂದಾಗಲೀ, **ವಾ** = ಅಥವಾ, **ಧನುಷಾ** = ಧನುಸ್ಸಿನಿಂದಾಗಲೀ, **ಪರೀಕ್ಷಣಂ** = ಪರೀಕ್ಷೆಯನ್ನು, **ಕುರು** = ಮಾಡು, **ಇತಿ** = ಎಂದು, **ನ ಆಹ** = ಹೇಳಲಿಲ್ಲ, **ಅತಃ** = ಜರಾಸಂಧನು ಆಹ್ವಾನಿಸದೇ ಅವಮಾನಿಸಿದರೂ ಪ್ರತ್ಯುತ್ತರ ನೀಡದಿದ್ದರಿಂದ, **ಭೀಮೇ** = ಭೀಮನಲ್ಲಿ, **ಮಹತ್** = ಹೆಚ್ಚಾದ, **ಬಲಾಧಿಕ್ಯಂ** = ಬಲದ ಹೆಚ್ಚುಗಾರಿಕೆಯು, **ಸುಪ್ರಸಿದ್ಧಂ** = ಸುಪ್ರಸಿದ್ಧವು, **ಅಭೂತ್** = ಆಯಿತು.

**ತಾತ್ಪರ್ಯ** :- ನಮ್ಮ ಮೂವರಲ್ಲಿ ಒಬ್ಬನನ್ನು ಆರಿಸು ಎಂದು ಕೃಷ್ಣ ಹೇಳಿದಾಗ ಜರಾಸಂಧನು 'ಅರ್ಜುನ ೫೫ ವರ್ಷದ ಯುವಕನಾದರೂ ಬಲಶಾಲಿಯಲ್ಲ ಆದುದರಿಂದ ನನಗೆ ಬಾಲಕನೇ. ಆದುದರಿಂದ ಅವನೊಂದಿಗೆ ಯುದ್ಧ ಮಾಡಲಾರೆ' ಎನ್ನುತ್ತಾನೆ. ಆಗ ಅರ್ಜುನ 'ಹಾಗಿದ್ದರೆ ಬಲ ಪರೀಕ್ಷೆ ನಡೆಯಲಿ. ಅದು ಬಾಹುಯುದ್ಧವೂ ಆಗಬಹುದು. ಅಥವಾ ಧನುರ್ಯುದ್ಧವೂ ಆಗಬಹುದು' ಎಂದು ಹೇಳಬಹುದಿತ್ತು. ಆದರೆ ತಾನು ಸೋಲಬಹುದೆಂದು ಶಂಕಿಸಿ ನಿರುತ್ತರನಾದ. ಇದರಿಂದ ಭೀಮನ ಬಲ ಅರ್ಜುನನ ಬಲಕ್ಕಿಂತ ಅಧಿಕ ಎಂದು ಅತ್ಯಂತ ಪ್ರಸಿದ್ಧವಾಯ್ತು.

**ಏತದರ್ಥಂ ಹಿ ಕೃಷ್ಣೇನ ಸಹಾಽನೀತಃ ಸ ಫಲ್ಗುನಃ ॥ ೧೪೭ ॥**

**ಪದಚ್ಛೇದ** :- ಏತದರ್ಥಂ, ಹಿ, ಕೃಷ್ಣೇನ, ಸಃ, ಆನೀತಃ, ಸಃ, ಫಲ್ಗುನಃ ।

**ಅರ್ಥ** :- **ಏತದರ್ಥಂ** = ಭೀಮನು ಬಲವನ್ನು ಪ್ರಸಿದ್ಧಗೊಳಿಸುವುದಕ್ಕಾಗಿಯೇ, **ಸಃ ಫಲ್ಗುನಃ** = ಆ ಅರ್ಜುನನು, **ಕೃಷ್ಣೇನ** = ಶ್ರೀಕೃಷ್ಣನಿಂದ, **ಸಹ ಆನೀತಃ ಹಿ** = ಜೊತೆಗೆ ಕರೆತರಲ್ಪಟ್ಟಿದ್ದಾನಷ್ಟೆ.

**ತಾತ್ಪರ್ಯ** :- ಭೀಮನ ಬಲವನ್ನು ಪ್ರಚುರ ಪಡಿಸುವುದಕ್ಕಾಗಿಯೇ ಶ್ರೀಕೃಷ್ಣನು ಅರ್ಜುನನನ್ನು ಜರಾಸಂಧನಲ್ಲಿಗೆ ಕರೆದುಕೊಂಡು ಹೋಗಿದ್ದು.

**ಜಾನನ್ ಕೃಷ್ಣೇ ಬಲಂ ಘೋರಮವಿಷಹ್ಯಂ ಚ ಮಾಗಧಃ ।**
**ಕುತ್ಸಯನ್ ಗೋಪ ಇತಿ ತಂ ಭಯಾನ್ನೈವಾಽಹ್ವಯತ್ ಪ್ರಭುಮ್ ।**
**ಆಹ್ವಯಾಮಾಸ ಭೀಮಂ ತು ಸ್ಯಾದ್ ವಾ ಮೇ ಜೀವನಂ ತ್ವಿತಿ ॥ ೧೪೮ ॥**

ಪದಚ್ಛೇದ :- ಜಾನನ್, ಕೃಷ್ಣೇ, ಬಲಂ, ಘೋರಂ, ಅವಿಷಹ್ಯಂ, ಸಃ, ಮಾಗಧಃ, ಕುತ್ಸಯನ್, ಗೋಪಃ, ಇತಿ, ತಂ, ಭಯಾತ್, ನ, ಏವ, ಆಹ್ವಯತ್, ಪ್ರಭುಂ, ಆಹ್ವಯಾಮಾಸ, ಭೀಮಂ, ತು, ಸ್ಯಾತ್, ವಾ, ಜೀವನಂ, ಮೇ, ತು, ಇತಿ ।

**ಅರ್ಥ** :- **ಸಃ** = ಆ, **ಮಾಗಧಃ** = ಜರಾಸಂಧನು, **ಕೃಷ್ಣೇ** = ಶ್ರೀಕೃಷ್ಣನಲ್ಲಿ, **ಅವಿಷಹ್ಯಂ** = ಸಹಿಸಲು ಅಸಾಧ್ಯವಾದ, **ಘೋರಂ** = ಭಯಂಕರವಾದ, **ಬಲಂ** = ಶಕ್ತಿಯನ್ನು, **ಜಾನನ್** = ತಿಳಿದವನಾಗಿ, **ಭಯಾತ್** = ಹೆದರಿಕೆಯಿಂದ, **ತಂ** = ಆ ಶ್ರೀಕೃಷ್ಣನನ್ನು, **ಗೋಪಃ ಇತಿ** = ಗೊಲ್ಲ ಎಂದು, **ಕುತ್ಸಯನ್** = ನಿಂದಿಸುತ್ತಾ, **ಪ್ರಭುಂ** = ಸಮರ್ಥನಾದ ಶ್ರೀಕೃಷ್ಣನನ್ನು, **ನೈವ ಆಹ್ವಯತ್** = ಯುದ್ಧಕ್ಕೆ ಆಹ್ವಾನಿಸಲಿಲ್ಲ, **ಮೇ** = ನನಗೆ, **ಜೀವನಂ ತು** = ಜೀವನವಾದರೂ, **ಸ್ಯಾತ್ ವಾ** = ಇರಬಹುದೇನೋ ಎಂಬ ಸಂಶಯದಿಂದ, **ಭೀಮಂ ತು** = ಭೀಮನನ್ನಾದರೂ, **ಆಹ್ವಯಾಮಾಸ** = ಆಹ್ವಾನಿಸಿದನು.

**ತಾತ್ಪರ್ಯ** :- ಜರಾಸಂಧನಿಗೆ ಶ್ರೀಕೃಷ್ಣನ ಅಪರಿಮಿತವಾದ ಭಯಾನಕ ಬಲದ ಅರಿವಿತ್ತು ಹೀಗಾಗಿ 'ನೀನು ಗೊಲ್ಲ' ಎಂದು ನಿಂದಿಸಿ, ಅವನನ್ನು ಭಯದಿಂದಲೇ ತಿರಸ್ಕರಿಸಿದ. ಅವನ ಜೊತೆ ಯುದ್ಧ ಮಾಡುವುದಕ್ಕಿಂತ ಭೀಮನ ಜೋತೆ ಸೆಣಸಿದರೆ ಜೀವ ಉಳಿದರೂ ಉಳಿಯಬಹುದೆಂಬ ಆಸೆಯಿಂದ ಭೀಮನನ್ನೆ ಯುದ್ಧಕ್ಕೆ ಆಹ್ವಾನಿಸಿದ.

**ಹನಿಷ್ಯತ್ಯೇವ ಮಾಂ ಕೃಷ್ಣ ಇತ್ಯಾಸೀನ್ನೃಪತೇರ್ಭಯಮ್ ।**
**ತಸ್ಮಾತ್ ತಂ ನಾಽಹ್ವಯಾಮಾಸ ವಾಸುದೇವಂ ಸ ಮಾಗಧಃ ॥ ೧೪೯ ॥**

ಪದಚ್ಛೇದ :- ಹನಿಷ್ಯತಿ, ಏವ, ಮಾಂ, ಕೃಷ್ಣಃ, ಇತಿ, ಆಸೀತ್, ನೃಪತೇಃ, ಭಯಂ, ತಸ್ಮಾತ್, ತಂ, ನ, ಆಹ್ವಯಾಮಾಸ, ವಾಸುದೇವಂ, ಸಃ, ಮಾಗಧಃ ।

**ಅರ್ಥ** :- **ಮಾಂ** = ನನ್ನನ್ನು, **ಕೃಷ್ಣಃ** = ಶ್ರೀಕೃಷ್ಣನು, **ಹನಿಷ್ಯತಿ ಏವ** = ಕೊಂದೇ ಕೊಲ್ಲುತ್ತಾನೆ, **ಇತಿ** = ಎಂದು, **ನೃಪತೇಃ** = ಜರಾಸಂಧನಿಗೆ, **ಭಯಂ** = ಹೆದರಿಕೆಯು, **ಆಸೀತ್** = ಇತ್ತು, **ತಸ್ಮಾತ್** = ಆದುದರಿಂದ, **ಸಃ** = ಆ, **ಮಾಗಧಃ** = ಜರಾಸಂಧನು, **ತಂ** = ಆ, **ವಾಸುದೇವಂ** = ಶ್ರೀಕೃಷ್ಣನನ್ನು, **ನಾಹ್ವಯಾಮಾಸ** = ಯುದ್ಧಕ್ಕೆ ಆಹ್ವಾನಿಸಲಿಲ್ಲ.

ಹಾಗಿದ್ದರೆ, **ಬಾಹುಭ್ಯಾಂ** = ಬಾಹುಗಳಿಂದಾಗಲೀ, **ವಾ** = ಅಥವಾ, **ಧನುಷಾ** = ಧನುಸ್ಸಿನಿಂದಾಗಲೀ, **ಪರೀಕ್ಷಣಂ** = ಪರೀಕ್ಷೆಯನ್ನು, **ಕುರು** = ಮಾಡು, **ಇತಿ** = ಎಂದು, **ನ ಆಹ** = ಹೇಳಲಿಲ್ಲ, **ಅತಃ** = ಜರಾಸಂಧನು ಆಹ್ವಾನಿಸದೇ ಅವಮಾನಿಸಿದರೂ ಪ್ರತ್ಯುತ್ತರ ನೀಡದಿದ್ದರಿಂದ, **ಭೀಮೇ** = ಭೀಮನಲ್ಲಿ, **ಮಹತ್** = ಹೆಚ್ಚಾದ, **ಬಲಾಧಿಕ್ಯಂ** = ಬಲದ ಹೆಚ್ಚುಗಾರಿಕೆಯು, **ಸುಪ್ರಸಿದ್ಧಂ** = ಸುಪ್ರಸಿದ್ಧವು, **ಅಭೂತ್** = ಆಯಿತು.

**ತಾತ್ಪರ್ಯ** :- ನಮ್ಮ ಮೂವರಲ್ಲಿ ಒಬ್ಬನನ್ನು ಆರಿಸು ಎಂದು ಕೃಷ್ಣ ಹೇಳಿದಾಗ ಜರಾಸಂಧನು 'ಅರ್ಜುನ ೫೫ ವರ್ಷದ ಯುವಕನಾದರೂ ಬಲಶಾಲಿಯಲ್ಲ ಆದುದರಿಂದ ನನಗೆ ಬಾಲಕನೇ. ಆದುದರಿಂದ ಅವನೊಂದಿಗೆ ಯುದ್ಧ ಮಾಡಲಾರೆ' ಎನ್ನುತ್ತಾನೆ. ಆಗ ಅರ್ಜುನ 'ಹಾಗಿದ್ದರೆ ಬಲ ಪರೀಕ್ಷೆ ನಡೆಯಲಿ. ಅದು ಬಾಹುಯುದ್ಧವೂ ಆಗಬಹುದು. ಅಥವಾ ಧನುರ್ಯುದ್ಧವೂ ಆಗಬಹುದು' ಎಂದು ಹೇಳಬಹುದಿತ್ತು. ಆದರೆ ತಾನು ಸೋಲಬಹುದೆಂದು ಶಂಕಿಸಿ ನಿರುತ್ತರನಾದ. ಇದರಿಂದ ಭೀಮನ ಬಲ ಅರ್ಜುನನ ಬಲಕ್ಕಿಂತ ಅಧಿಕ ಎಂದು ಅತ್ಯಂತ ಪ್ರಸಿದ್ಧವಾಯ್ತು.

**ಏತದರ್ಥಂ ಹಿ ಕೃಷ್ಣೇನ ಸಹಾಽನೀತಃ ಸ ಫಲ್ಗುನಃ ॥ ೧೪೭ ॥**

**ಪದಚ್ಛೇದ** :- ಏತದರ್ಥಂ, ಹಿ, ಕೃಷ್ಣೇನ, ಸಃ, ಆನೀತಃ, ಸಃ, ಫಲ್ಗುನಃ ।

**ಅರ್ಥ** :- **ಏತದರ್ಥಂ** = ಭೀಮನು ಬಲವನ್ನು ಪ್ರಸಿದ್ಧಗೊಳಿಸುವುದಕ್ಕಾಗಿಯೇ, **ಸಃ ಫಲ್ಗುನಃ** = ಆ ಅರ್ಜುನನು, **ಕೃಷ್ಣೇನ** = ಶ್ರೀಕೃಷ್ಣನಿಂದ, **ಸಹ ಆನೀತಃ ಹಿ** = ಜೊತೆಗೆ ಕರೆತರಲ್ಪಟ್ಟಿದ್ದಾನಷ್ಟೆ.

**ತಾತ್ಪರ್ಯ** :- ಭೀಮನ ಬಲವನ್ನು ಪ್ರಚುರ ಪಡಿಸುವುದಕ್ಕಾಗಿಯೇ ಶ್ರೀಕೃಷ್ಣನು ಅರ್ಜುನನನ್ನು ಜರಾಸಂಧನಲ್ಲಿಗೆ ಕರೆದುಕೊಂಡು ಹೋಗಿದ್ದು.

**ಜಾನನ್ ಕೃಷ್ಣೇ ಬಲಂ ಘೋರಮವಿಷಹ್ಯಂ ಚ ಮಾಗಧಃ ।**
**ಕುತ್ಸಯನ್ ಗೋಪ ಇತಿ ತಂ ಭಯಾನ್ನೈವಾಽಹ್ವಯತ್ ಪ್ರಭುಮ್ ।**
**ಆಹ್ವಯಾಮಾಸ ಭೀಮಂ ತು ಸ್ಯಾದ್ ವಾ ಮೇ ಜೀವನಂ ತ್ವಿತಿ ॥ ೧೪೮ ॥**

**ಪದಚ್ಛೇದ :– ಜಾನನ್, ಕೃಷ್ಣೇ, ಬಲಂ, ಘೋರಂ, ಅವಿಷಹ್ಯಂ, ಸಃ, ಮಾಗಧಃ, ಕುತ್ಸಯನ್, ಗೋಪಃ, ಇತಿ, ತಂ, ಭಯಾತ್, ನ, ಏವ, ಆಹ್ವಯತ್, ಪ್ರಭುಂ, ಆಹ್ವಯಾಮಾಸ, ಭೀಮಂ, ತು, ಸ್ಯಾತ್, ವಾ, ಜೀವನಂ, ಮೇ, ತು, ಇತಿ ।**

**ಅರ್ಥ :–** **ಸಃ** = ಆ, **ಮಾಗಧಃ** = ಜರಾಸಂಧನು, **ಕೃಷ್ಣೇ** = ಶ್ರೀಕೃಷ್ಣನಲ್ಲಿ, **ಅವಿಷಹ್ಯಂ** = ಸಹಿಸಲು ಅಸಾಧ್ಯವಾದ, **ಘೋರಂ** = ಭಯಂಕರವಾದ, **ಬಲಂ** = ಶಕ್ತಿಯನ್ನು, **ಜಾನನ್** = ತಿಳಿದವನಾಗಿ, **ಭಯಾತ್** = ಹೆದರಿಕೆಯಿಂದ, **ತಂ** = ಆ ಶ್ರೀಕೃಷ್ಣನನ್ನು, **ಗೋಪಃ ಇತಿ** = ಗೊಲ್ಲ ಎಂದು, **ಕುತ್ಸಯನ್** = ನಿಂದಿಸುತ್ತಾ, **ಪ್ರಭುಂ** = ಸಮರ್ಥನಾದ ಶ್ರೀಕೃಷ್ಣನನ್ನು, **ನೈವ ಆಹ್ವಯತ್** = ಯುದ್ಧಕ್ಕೆ ಆಹ್ವಾನಿಸಲಿಲ್ಲ, **ಮೇ** = ನನಗೆ, **ಜೀವನಂ ತು** = ಜೀವನವಾದರೂ, **ಸ್ಯಾತ್ ವಾ** = ಇರಬಹುದೇನೋ ಎಂಬ ಸಂಶಯದಿಂದ, **ಭೀಮಂ ತು** = ಭೀಮನನ್ನಾದರೂ, **ಆಹ್ವಯಾಮಾಸ** = ಆಹ್ವಾನಿಸಿದನು.

**ತಾತ್ಪರ್ಯ :–** ಜರಾಸಂಧನಿಗೆ ಶ್ರೀಕೃಷ್ಣನ ಅಪರಿಮಿತವಾದ ಭಯಾನಕ ಬಲದ ಅರಿವಿತ್ತು ಹೀಗಾಗಿ 'ನೀನು ಗೊಲ್ಲ' ಎಂದು ನಿಂದಿಸಿ, ಅವನನ್ನು ಭಯದಿಂದಲೇ ತಿರಸ್ಕರಿಸಿದ. ಅವನ ಜೊತೆ ಯುದ್ಧ ಮಾಡುವುದಕ್ಕಿಂತ ಭೀಮನ ಜೋತೆ ಸೆಣಸಿದರೆ ಜೀವ ಉಳಿದರೂ ಉಳಿಯಬಹುದೆಂಬ ಆಸೆಯಿಂದ ಭೀಮನನ್ನೆ ಯುದ್ಧಕ್ಕೆ ಆಹ್ವಾನಿಸಿದ.

**ಹನಿಷ್ಯತ್ಯೇವ ಮಾಂ ಕೃಷ್ಣ ಇತ್ಯಾಸೀನ್ನೃಪತೇರ್ಭಯಮ್ ।**
**ತಸ್ಮಾತ್ ತಂ ನಾಽಹ್ವಯಾಮಾಸ ವಾಸುದೇವಂ ಸ ಮಾಗಧಃ ॥ ೧೪೯ ॥**

**ಪದಚ್ಛೇದ :– ಹನಿಷ್ಯತಿ, ಏವ, ಮಾಂ, ಕೃಷ್ಣಃ, ಇತಿ, ಆಸೀತ್, ನೃಪತೇಃ, ಭಯಂ, ತಸ್ಮಾತ್, ತಂ, ನ, ಆಹ್ವಯಾಮಾಸ, ವಾಸುದೇವಂ, ಸಃ, ಮಾಗಧಃ ।**

**ಅರ್ಥ :–** **ಮಾಂ** = ನನ್ನನ್ನು, **ಕೃಷ್ಣಃ** = ಶ್ರೀಕೃಷ್ಣನು, **ಹನಿಷ್ಯತಿ ಏವ** = ಕೊಂದೇ ಕೊಲ್ಲುತ್ತಾನೆ, **ಇತಿ** = ಎಂದು, **ನೃಪತೇಃ** = ಜರಾಸಂಧನಿಗೆ, **ಭಯಂ** = ಹೆದರಿಕೆಯು, **ಆಸೀತ್** = ಇತ್ತು, **ತಸ್ಮಾತ್** = ಆದುದರಿಂದ, **ಸಃ** = ಆ, **ಮಾಗಧಃ** = ಜರಾಸಂಧನು, **ತಂ** = ಆ, **ವಾಸುದೇವಂ** = ಶ್ರೀಕೃಷ್ಣನನ್ನು, **ನಾಹ್ವಯಾಮಾಸ** = ಯುದ್ಧಕ್ಕೆ ಆಹ್ವಾನಿಸಲಿಲ್ಲ.

ತಾತ್ಪರ್ಯ :- ಹಿಂದಿನ ಅನುಭವದಿಂದ ಜರಾಸಂಧನಿಗೆ ಶ್ರೀಕೃಷ್ಣ ತನ್ನನ್ನು ಕೊಲ್ಲುತ್ತಾನೆ ಎಂಬ ಭಯವಿದ್ದೆ ಇತ್ತು. ಆದುದರಿಂದ ಜರಾಸಂಧ ಶ್ರೀಕೃಷ್ಣನನ್ನು ಯುದ್ಧಕ್ಕೆ ಆಹ್ವಾನ ಮಾಡಲಿಲ್ಲ.

**ಅರ್ಜುನೇ ತು ಜಿತೇ ಕೃಷ್ಣಭೀಮೌ ಮಾಂ ನಿಹನಿಷ್ಯತಃ ।**
**ತ್ರಯಾಣಾಂ ದುರ್ಬಲಾಹ್ವಾನಾನ್ನಶ್ಯೇತ್ ಕೀರ್ತಿಶ್ಚ ಮೇ ಧ್ರುವಾ ॥೧೫೦॥**

ಪದಚ್ಛೇದ :- ಅರ್ಜುನೇ, ತು, ಜಿತೇ, ಕೃಷ್ಣಭೀಮೌ, ಮಾಂ, ನಿಹನಿಷ್ಯತಃ, ತ್ರಯಾಣಾಂ, ದುರ್ಬಲಾಹ್ವಾನಾತ್, ನಶ್ಯೇತ್, ಕೀರ್ತಿಃ, ಚ, ಮೇ, ಧ್ರುವಾ ।

ಅರ್ಥ :- ಅರ್ಜುನೇ = ಅರ್ಜುನನು, ಜಿತೇ ಸತಿ = ಸೋಲುತ್ತಿರಲು, ಕೃಷ್ಣಭೀಮೌ ತು = ಕೃಷ್ಣ ಮತ್ತು ಭೀಮರಾದರು, ಮಾಂ = ನನ್ನನ್ನು, ನಿಹನಿಷ್ಯತಃ = ಕೊಲ್ಲುತ್ತಾರೆ, ತ್ರಯಾಣಾಂ = ಮೂವರಲ್ಲಿ, ದುರ್ಬಲಾಹ್ವಾನಾತ್ = ದುರ್ಬಲನಾದ ಅರ್ಜುನನ ಆಹ್ವಾನದಿಂದ, ಮೇ = ನನ್ನ, ಕೀರ್ತಿಶ್ಚ = ಕೀರ್ತಿಯೂ ಕೂಡ, ನಶ್ಯೇತ್ = ನಾಶವಾದೀತು.

ತಾತ್ಪರ್ಯ :- ಅರ್ಜುನನನ್ನು ಆಹ್ವಾನಿಸದಿರಲು ಎರಡು ಕಾರಣ - ಒಂದು - ಅರ್ಜುನ ಸೋತ ಮೇಲೆ ಕೃಷ್ಣ ಭೀಮರು ಜರಾಸಂಧನನನ್ನು ಕೊಂದೇ ಕೊಲ್ಲುತ್ತಾರೆ. ಮತ್ತೊಂದು - ಮೂವರಲ್ಲಿ ಒಬ್ಬರನ್ನು ಆಹ್ವಾನಿಸು ಎಂದಾಗ ದುರ್ಬಲನಾದ ಅರ್ಜುನನನ್ನು ಆಹ್ವಾನಿಸಿದರೆ ಜರಾಸಂಧನ ಕೀರ್ತಿಯೂ ಹಾಳಾಗುತ್ತದೆ. ಈ ಎರಡು ಕಾರಣದಿಂದ ಜರಾಸಂಧ ಅರ್ಜುನನನ್ನು ಆಹ್ವಾನಿಸಲಿಲ್ಲ.

**ಇತಿ ಮತ್ವಾಽಹ್ವಾಯಾಮಾಸ ಭೀಮಸೇನಂ ಸ ಮಾಗಧಃ ।**
**ಕಥಂಚಿಜ್ಜೀವಿತಂ ವಾ ಸ್ಯಾನ್ನತು ನಶ್ಯತಿ ಮೇ ಯಶಃ ॥ ೧೫೧ ॥**

ಪದಚ್ಛೇದ :- ಇತಿ, ಮತ್ವಾ, ಆಹ್ವಯಾಮಾಸ, ಭೀಮಸೇನಂ, ಸಃ, ಮಾಗಧಃ, ಕಥಂಚಿತ್, ಜೀವಿತಂ, ವಾ, ಸ್ಯಾತ್, ನ, ತು, ನಶ್ಯತಿ, ಮೇ, ಯಶಃ ।

ಅರ್ಥ :- ಕಥಂಚಿತ್ = ಹೇಗಾದರೂ, ಜೀವಿತಂ = ಬದುಕು, ಸ್ಯಾತ್ = ಆದೀತು, ಮೇ = ನನ್ನ, ಯಶಃ ತು = ಕೀರ್ತಿಯಾದರೂ, ನ ನಶ್ಯತಿ = ನಾಶವಾಗುವುದಿಲ್ಲ, ಇತಿ = ಈ ರೀತಿ, ಮತ್ವಾ = ತಿಳಿದು, ಸಃ = ಆ, ಮಾಗಧಃ

= ಜರಾಸಂಧನು, ಭೀಮಸೇನಂ = ಭೀಮಸೇನನನ್ನು, ಆಹ್ವಯಾಮಾಸ = ಆಹ್ವಾನಿಸಿದನು.

ತಾತ್ಪರ್ಯ :- ಭೀಮಸೇನ ಜೊತೆಗೆ ಯುದ್ಧ ಮಾಡಿದರೆ ಬದುಕಿದರೂ ಬದುಕಬಹುದು. ಜೊತೆಗೆ ಬಲಿಷ್ಠನಾದ ಯುವಕನೊಂದಿಗೆ ಯುದ್ಧ ಮಾಡಿದರೆ, ಸೋತರೂ ಅಪಕೀರ್ತಿಯೂ ಬರುವುದಿಲ್ಲ ಎಂದು ಚಿಂತಿಸಿ ಭೀಮನನ್ನು ಯುದ್ಧಕ್ಕೆ ಕರೆದ.

ಇತಿ ಸ್ಮ ಭೀಮಂ ಪ್ರತಿಯೋಧನಾಯ
ಸಂಗೃಹ್ಯ ರಾಜಾ ಸ ಜರಾಸುತೋ ಬಲೀ ।
ರಾಜ್ಯೇ ನಿಜಂ ಚಾಽತ್ಮಜಮಭ್ಯಷಿಂಚತ್
ಪುರಾ ಖ್ಯಾತಂ ಪತ್ರತಾಪಾಖ್ಯರುದ್ರಮ್ ॥ ೧೫೨ ॥

ಪದಚ್ಛೇದ :- ಇತಿ, ಸ್ಮ, ಭೀಮಂ, ಪ್ರತಿಯೋಧನಾಯ, ಸಂಗೃಹ್ಯ, ರಾಜಾ, ಸಃ, ಜರಾಸುತಃ, ಬಲೀ, ರಾಜ್ಯೇ, ನಿಜಂ, ಚ, ಆತ್ಮಜಂ, ಅಭ್ಯಷಿಂಚತ್, ಪುರಾ, ಖ್ಯಾತಂ, ಪತ್ರತಾಪಾಖ್ಯರುದ್ರಂ।

ಅರ್ಥ :- ಇತಿ = ಈ ರೀತಿಯಾಗಿ, ಬಲೀ = ಬಲಿಷ್ಠನಾದ, ರಾಜಾ ಜರಾಸುತಃ = ರಾಜನಾದ ಜರಾಸಂಧನು, ಭೀಮಂ = ಭೀಮನನ್ನು, ಪ್ರತಿಯೋಧನಾಯ = ಯುದ್ಧಕ್ಕಾಗಿ, ಸಂಗೃಹ್ಯ = ಆರಿಸಿಕೊಂಡು, ರಾಜ್ಯೆ = ರಾಜ್ಯದಲ್ಲಿ, ಪುರಾ = ಹಿಂದಿನ ರೂಪದಲ್ಲಿ, ಪತ್ರತಾಪಾಖ್ಯರುದ್ರಂ = ಪತ್ರತಾಪನೆಂಬ ರುದ್ರನಾದ, ಖ್ಯಾತಂ = ಪ್ರಸಿದ್ಧನಾದ, ನಿಜಂ = ನನ್ನ, ಆತ್ಮಜಂ = ಮಗನನ್ನು, ಅಭ್ಯಷಿಂಚತ್ = ಪಟ್ಟಾಭಿಷೇಕ ಮಾಡಿದನು.

ತಾತ್ಪರ್ಯ :- ಹೀಗೆ ಯುದ್ಧಕ್ಕೆ ಭೀಮನನ್ನು ಆರಿಸಿಕೊಂಡ ಬಲಶಾಲಿಯಾದ ಜರಾಸಂಧ, ತನ್ನ ಮಗನಾದ ಸಹದೇವನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದ. ಇವನು ಹಿಂದೆ ಪತ್ರತಾಪನೆಂಬ ರುದ್ರ.

ಬಲಂ ಭೀಮೇ ಮನ್ಯಮಾನೋಽಧಿಕಂ ತು
ಗದಾಶಿಕ್ಷಾಮಾತ್ಮನಿ ಚಾಧಿಕಾಂ ನೃಪಃ ।
ಭೀತೋ ನಿಯುದ್ಧೇಽಸ್ಯ ದದೌ ಗದಾಂ ಸ
ಭೀಮಾಯ ಚಾನ್ಯಾಂ ಸ್ವಯಮಗ್ರಹೀದ್ ಬಲೀ ॥ ೧೫೩ ॥

**ಪದಚ್ಛೇದ :– ಬಲಂ, ಭೀಮೇ, ಮನ್ಯಮಾನಃ, ಅಧಿಕಂ, ತು, ಗದಾಶಿಕ್ಷಾಂ, ಆತ್ಮನಿ, ಚ, ಅಧಿಕಾಂ, ನೃಪಃ, ಭೀತಃ, ನಿಯುದ್ಧೇ, ಅಸ್ಯ, ದದೌ, ಗದಾಂ, ಸಃ, ಭೀಮಾಯ, ಚ, ಅನ್ಯಾಂ, ಸ್ವಯಂ, ಅಗ್ರಹೀತ್, ಬಲೀ ।**

**ಅರ್ಥ :– ಭೀಮೇ** = ಭೀಮಸೇನನಲ್ಲಿ, **ಅಧಿಕಂ** = ಹೆಚ್ಚಾದ, **ಬಲಂ** = ಶಕ್ತಿಯನ್ನು, **ಚ** = ಮತ್ತು, **ಆತ್ಮನಿ** = ತನ್ನಲ್ಲಿ, **ಗದಾಶಿಕ್ಷಾಂ ತು** = ಗದಾಯುದ್ಧದ ಶಿಕ್ಷಣವನ್ನಾದರೂ, **ಅಧಿಕಂ** = ಹೆಚ್ಚಾದದನ್ನಾಗಿ, **ಮನ್ಯಮಾನಃ** = ತಿಳಿದ, **ಅಸ್ಯ** = ಈ ಭೀಮನ, **ನಿಯುದ್ಧೇ** = ಬಾಹು ಯುದ್ಧದಲ್ಲಿ, **ಭೀತಃ** = ಹೆದರಿದ, **ಸಃ** = ಆ, **ಬಲೀ** = ಬಲಿಷ್ಠನಾದ, **ನೃಪಃ** = ಜರಾಸಂಧನು, **ಭೀಮಾಯ** = ಭೀಮನಿಗೆ, **ಗದಾಂ** = ಗದೆಯನ್ನು, **ದದೌ** = ಕೊಟ್ಟನು, **ಚ** = ಮತ್ತು, **ಸ್ವಯಂ** = ತಾನು, **ಅನ್ಯಾಂ** = ಬೇರೆ ಗದೆಯನ್ನು, **ಅಗ್ರಹಿತ್** = ಸ್ವೀಕರಿಸಿದನು.

**ತಾತ್ಪರ್ಯ :–** ಭೀಮನ ಬಲದ ಅರಿವಿದ್ದ ಜರಾಸಂಧ, ಬಾಹುಯುದ್ಧ ಮಾಡಲು ಹೆದರಿದ ಮತ್ತು ತನಗೆ ಗದಾಯುದ್ಧದ ಶಿಕ್ಷಣ ಚನ್ನಾಗಿ ಆಗಿರುವುದರಿಂದ ಗದಾಯುದ್ಧವನ್ನು ಮಾಡುವುದೆಂದು ಭೀಮನಿಗೆ ಒಂದು ಗದೆ ಕೊಟ್ಟು ತಾನೊಂದು ಗದೆಯನ್ನು ಧರಿಸಿದ.

**ತದರ್ಥಮೇವಾಽಶು ಗದಾಂ ಪ್ರಗೃಹ್ಯ**
**ಭೀಮೋ ಯಯೌ ಮಾಗಧಸಂಯುತೋ ಬಹಿಃ ।**
**ಪುರಾತ್ ಸಕೃಷ್ಣಾರ್ಜುನ ಏವ ತತ್ರ**
**ತ್ವಯುಧ್ಯತಾಂ ಕೇಶವಪಾರ್ಥಯೋಃ ಪುರಃ ॥ ೧೫೪ ॥**

**ಪದಚ್ಛೇದ :– ತದರ್ಥಂ, ಏವ, ಆಶು, ಗದಾಂ, ಪ್ರಗೃಹ್ಯ, ಭೀಮಃ, ಯಯೌ, ಮಾಗಧಸಂಯುತಃ, ಬಹಿಃ, ಪುರಾತ್, ಸಕೃಷ್ಣಾರ್ಜುನಃ, ಏವ, ತತ್ರ, ತು, ಅಯುಧ್ಯತಾಂ, ಕೇಶವಪಾರ್ಥಯೋಃ, ಪುರಃ ।**

**ಅರ್ಥ :– ತದರ್ಥಂ ಏವ** = ಜರಾಸಂಧನ ಅಪೇಕ್ಷೆಯನ್ನು ಪೂರೈಸುವುದಕ್ಕಾಗಿಯೇ, **ಆಶು** = ಕೂಡಲೇ, **ಭೀಮಃ** = ಭೀಮನು, **ಗದಾಂ** = ಗದೆಯನ್ನು, **ಪ್ರಗೃಹ್ಯ** = ಹಿಡಿದು, **ಸಕೃಷ್ಣಾರ್ಜುನಃ** = ಕೃಷ್ಣ ಮತ್ತು ಅರ್ಜುನನ ಜೊತೆಗೆ, **ಮಾಗಧಸಂಯುತಃ** = ಜರಾಸಂಧನಿಂದ ಕೂಡಿ, **ಪುರಾತ್** = ನಗರದಿಂದ, **ಬಹಿಃ** = ಹೊರಗೆ, **ಯಯೌ** = ಹೋದನು, **ತತ್ರ ತು** =

ಅಲ್ಲಿಯಾದರೂ, **ಕೇಶವ ಪಾರ್ಥಯೋಃ** = ಶ್ರೀಕೃಷ್ಣ ಮತ್ತು ಅರ್ಜುನರ, **ಪುರಃ** = ಎದುರಿಗೆ, **ಅಯುಧ್ಯತಾಂ** = ಯುದ್ಧ ಮಾಡಿದನು.

**ತಾತ್ಪರ್ಯ** :- ಗದಾಯುದ್ಧವನ್ನು ಮಾಡೋಣ ಎಂದು ಸೂಚಿಸಿದ ಜರಾಸಂಧನ ಇಚ್ಛೆಯನ್ನು ಈಡೇರಿಸುವುದಕ್ಕಾಗಿ ಗದೆಯನ್ನು ಹಿಡಿದ ಭೀಮ ಕೃಷ್ಣಾರ್ಜುನ ಜೊತೆಗೆ ಜರಾಸಂಧನೊಟ್ಟಿಗೆ ಊರ ಹೊರಗೆ ಹೋಗಿ ಅಲ್ಲಿ ಶ್ರೀಕೃಷ್ಣ ಅರ್ಜುನರ ಸಮ್ಮುಖ ಯುದ್ಧ ಮಾಡಿದನು.

**ವಾಚಾಽಜಯತ್ ತಂ ಪ್ರಥಮಂ ವೃಕೋದರಃ**
**ಶಿವಾಶ್ರಯಂ ವಿಷ್ಣುಗುಣಪ್ರಕಾಶಯಾ ।**
**ತತೋ ಗದಾಭ್ಯಾಮಭಿಪೇತತುಸ್ತೌ**
**ವಿಚಿತ್ರಮಾರ್ಗಾನಪಿ ದರ್ಶಯಂತೌ ॥ ೧೫೫ ॥**

**ಪದಚ್ಛೇದ** :– ವಾಚಾ, ಅಜಯತ್, ತಂ, ಪ್ರಥಮಂ, ವೃಕೋದರಃ, ಶಿವಾಶ್ರಯಂ, ವಿಷ್ಣುಗುಣಪ್ರಕಾಶಯಾ, ತತಃ, ಗದಾಭ್ಯಾಂ, ಅಭಿಪೇತತುಃ, ತೌ, ವಿಚಿತ್ರಮಾರ್ಗಾನ್, ಅಪಿ, ದರ್ಶಯಂತೌ ।

**ಅರ್ಥ** :- **ವೃಕೋದರಃ** = ಭೀಮಸೇನನು, **ಪ್ರಥಮಂ** = ಮೊದಲು, **ಶಿವಾಶ್ರಯಂ** = ಶಿವನನ್ನು ಆಶ್ರಯಿಸಿದ, **ತಂ** = ಆ ಜರಾಸಂಧನನ್ನು, **ವಿಷ್ಣುಗುಣಪ್ರಕಾಶಯಾ** = ಭಗವಂತನ ಗುಣಗಳನ್ನು ವರ್ಣಿಸುವ, **ವಾಚಾ** = ಮಾತುಗಳಿಂದ, **ಅಜಯತ್** = ಗೆದ್ದನು, **ತತಃ** = ಅನಂತರ, **ತೌ** = ಅವರಿಬ್ಬರು, **ವಿಚಿತ್ರಮಾರ್ಗಾನ್** = ಗದಾಯುದ್ಧದ ವಿಚಿತ್ರ ರೀತಿಗಳನ್ನು, **ದರ್ಶಯಂತೌ** = ತೋರಿಸುತ್ತಾ, **ಗದಾಭ್ಯಾಂ** = ಗದೆಯಿಂದ, **ಅಭಿಪೇತತುಃ** = ಯುದ್ಧ ಮಾಡಿದರು.

**ತಾತ್ಪರ್ಯ** :- ಭೀಮ ಮೊದಲು ವಿಷ್ಣು ಮಹಿಮೆ ಹೇಳುವ ಮಾತುಗಳಿಂದ ಶೈವನಾದ ಮಾಗಧನನ್ನು ಸೋಲಿಸಿದ. ಅನಂತರ ಗದಾಯುದ್ಧ ಆರಂಭವಾಯಿತು. ಇದರಲ್ಲಿ ಅವರಿಬ್ಬರೂ ಗದಾಯುದ್ಧದ ವಿಚಿತ್ರ-ವಿಚಿತ್ರ ರೀತಿಗಳನ್ನು ತೋರಿಸಿದರು.

**ತಯೋರ್ಗದೇ ತೇಽಶನಿಸನ್ನಿಕಾಶೇ**
**ಚೂರ್ಣೀಕೃತೇ ದೇಹಮಹಾದೃಢಿಮ್ನಾ ।**
**ಅನ್ಯೋನ್ಯಯೋರ್ವಕ್ಷಸಿ ಪಾತಿತೇ ರುಷಾ**
**ಯಥಾಽಶ್ಮನೋಃ ಪಾಂಸುಪಿಂಡೌ ಸುಮುಕ್ತೌ ॥ ೧೫೬ ॥**

**ಪದಚ್ಛೇದ :- ತಯೋಃ, ಗದೇ, ತೇ, ಅಶನಿಸನ್ನಿಕಾಶೇ, ಚೂರ್ಣೀಕೃತೇ, ದೇಹಮಹಾದೃಢಿಮ್ನಾ, ಅನ್ಯೋನ್ಯಯೋಃ, ವಕ್ಷಸಿ, ಪಾತಿತೇ, ರುಷಾ, ಯಥಾ, ಅಶ್ಮನೋಃ, ಪಾಂಸುಪಿಂಡೌ, ಸುಮುಕ್ತೌ ।**

**ಅರ್ಥ :- ಅಶನಿಸನ್ನಿಕಾಶೇ** = ವಜ್ರಾಯುಧಕ್ಕೆ ಸದೃಶವಾದ, **ತಯೋಃ** = ಅವರಿಬ್ಬರ, **ತೇ** = ಆ, **ಗದೇ** = ಗದೆಗಳೆರಡು, **ರುಷಾ** = ಕೋಪದಿಂದ, **ಅನ್ಯೋನ್ಯಯೋಃ** = ಪರಸ್ಪರರ, **ವಕ್ಷಸಿ** = ಎದೆಯಲ್ಲಿ, **ಪಾತಿತೇ** = ಬೀಳಲ್ಪಟ್ಟಾಗ, **ಯಥಾ** = ಹೇಗೆ, **ಅಶ್ಮನೋಃ** = ಕಲ್ಲು ಬಂಡೆಯಲ್ಲಿ, **ಸುಮುಕ್ತೌ** = ಬೀಳಲ್ಪಟ್ಟ, **ಪಾಂಸುಪಿಂಡೌ** = ಧೂಳಿನ ಮುದ್ದೆಯು (ಪುಡಿ ಪುಡಿಯಾಗುವುದೋ), **ತಥಾ** = ಹಾಗೆ, **ದೇಹಮಹಾದೃಢಿಮ್ನಾ** = ದೇಹದ ಧೃಡತೆಯಿಂದಾಗಿ, **ಚೂರ್ಣೀಕೃತೇ** = ಪುಡಿಪುಡಿಯಾದವು.

**ತಾತ್ಪರ್ಯ :-** ಇಬ್ಬರು ಯುದ್ಧ ಮಾಡುತ್ತಿದ್ದಾರೆ. ಸಿಟ್ಟಿನಿಂದ ಎದೆಗೆ ಗದೆಯಿಂದ ಹೊಡೆದುಕೊಂಡರು. ಆಗ ಅವರ ಎದೆಯ ಗಟ್ಟಿತನಕ್ಕೆ ವಜ್ರಾಯುಧದಂತಿದ್ದ ಗದೆಗಳೇ ಪುಡಿ ಪುಡಿ ಆದವು. ಧೂಳಿನ ಮೃದುವಾದ ಮುದ್ದೆಯನ್ನು ಕಲ್ಲಿಗೆ ಅಪ್ಪಳಿಸಿದಾಗ ಹೇಗೋ ಹಾಗೆ.

**ಸಂಚೂರ್ಣಿತಗದೌ ವೀರೌ ಜಘ್ನತುರ್ಮುಷ್ಟಿಭಿರ್ಮಿಥಃ ।**
**ಬ್ರಹ್ಮಾಂಡಸ್ಫೋಟಸಂಕಾಶೈರ್ಯಥಾ ಕೇಶವಕೈಟಭೌ ॥ ೧೫೭ ॥**

**ಪದಚ್ಛೇದ :- ಸಂಚೂರ್ಣಿತಗದೌ, ವೀರೌ, ಜಘ್ನತುಃ, ಮುಷ್ಟಿಭಿಃ, ಮಿಥಃ, ಬ್ರಹ್ಮಾಂಡಸ್ಫೋಟಸಂಕಾಶೈಃ, ಯಥಾ, ಕೇಶವಕೈಟಭೌ ।**

**ಅರ್ಥ :- ಸಂಚೂರ್ಣಿತಗದೌ** = ಪುಡಿ ಪುಡಿಯಾದ ಗದೆಯುಳ್ಳ, **ವೀರೌ** = ಪರಾಕ್ರಮಿಗಳಾದ ಭೀಮ-ಮಾಗಧರು, **ಯಥಾ** = ಹಾಗೆ, **ಕೇಶವಕೈಟಭೌ** = ವಿಷ್ಣು ಮತ್ತು ಕೈಟಭರೋ ಹಾಗೆ, **ಬ್ರಹ್ಮಾಂಡ ಸ್ಫೋಟ ಸಂಕಾಶೈಃ** =

ಬ್ರಹ್ಮಾಂಡ ಸ್ಫೋಟದ ಶಬ್ದಕ್ಕೆ ಸದೃಶವಾದ ಶಬ್ದವುಳ್ಳ, **ಮುಷ್ಟಿಭಿಃ** = ಮುಷ್ಟಿಗಳಿಂದ, **ಮಿಥಃ** = ಪರಸ್ಪರವಾಗಿ, **ಜಘ್ನತುಃ** = ಹೊಡೆದಾಡಿದರು.

ತಾತ್ಪರ್ಯ :- ಸೃಷ್ಟಿಗಿಂತ ಮೊದಲು ಶ್ರೀಹರಿ ಮತ್ತು ಕೈಟಭರು ಮುಷ್ಟಿಯುದ್ಧ ಮಾಡಿದ್ದರು. ಅದರಂತೆ ಗದೆ ಪುಡಿಯಾದ ನಂತರ ಭೀಮ ಮತ್ತು ಜರಾಸಂಧರೂ ಕೂಡ ಮುಷ್ಟಿಯುದ್ಧ ಮಾಡಿದರು. ಈ ಮುಷ್ಟಿಗಳ ಹೊಡೆತನದಿಂದ ಬರುವ ಶಬ್ದ ಬ್ರಹ್ಮಾಂಡ ಸ್ಫೋಟಗೊಂಡಾಗ ಬರುವ ಶಬ್ದದಂತೆ ಭಯಾನಕವಾಗಿತ್ತು.

**ಚಚಾಲ ಪೃಥ್ವೀ ಗಿರಯಶ್ಚ ಚೂರ್ಣಿತಾಃ**
**ಕುಲಾಚಲಾಶ್ಚೇಲುರಲಂ ವಿಚುಕ್ಷುಭುಃ ।**
**ಸಮಸ್ತವಾರಾಂಪತಯಃ ಸುರಾಸುರಾ**
**ವಿರಿಂಚಶರ್ವಾದಯ ಆಸದನ್ನಭಃ ॥ ೧೫೮ ॥**

ಪದಚ್ಛೇದ :- ಚಚಾಲ, ಪೃಥ್ವೀ, ಗಿರಯಃ, ಚ, ಚೂರ್ಣಿತಾಃ, ಕುಲಾಚಲಾಃ, ಚೇಲುಃ, ಅಲಂ, ವಿಚುಕ್ಷುಭುಃ, ಸಮಸ್ತವಾರಾಂಪತಯಃ, ಸುರಾಸುರಾಃ, ವಿರಿಂಚಶರ್ವಾದಯಃ, ಆಸದನ್, ನಭಃ ।

ಅರ್ಥ :- **ಪೃಥ್ವೀ** = ಭೂಮಿಯು, **ಚಚಾಲ** = ಕಂಪಿಸಿತು, **ಚ** = ಮತ್ತು, **ಗಿರಯಃ** = ಸಣ್ಣಸಣ್ಣ ಪರ್ವತಗಳು, **ಚೂರ್ಣಿತಾಃ** = ಪುಡಿಯಾದವು, **ಕುಲಾಚಲಾಃ** = ಮೂಲ ಪರ್ವತಗಳು, **ಚೇಲುಃ** = ಅಲುಗಾಡಿದವು, **ಸಮಸ್ತವಾರಾಂಪತಯಃ** = ಸಮುದ್ರಗಳು, **ಅಲಂ** = ಚೆನ್ನಾಗಿ, **ವಿಚುಕ್ಷುಭುಃ** = ಅಲ್ಲೋಲಕಲ್ಲೋಲವಾದವು, **ವಿರಿಂಚಶರ್ವಾದಯಃ** = ಬ್ರಹ್ಮ ಮತ್ತು ರುದ್ರರೇ ಮೊದಲಾದ, **ಸುರಾಸುರಃ** = ದೇವತೆಗಳೂ ದೈತ್ಯರೂ, **ನಭಃ** = ಗಗನವನ್ನು, **ಅಸದನ್** = ಆಶ್ರಯಿಸಿದರು.

ತಾತ್ಪರ್ಯ :- ಮುಷ್ಟಿಯುದ್ಧ ಆರಂಭಗೊಂಡಾಗ ಭೂಮಿ ನಡುಗಿತು. ಚಿಕ್ಕ ಚಿಕ್ಕ ಪರ್ವತಗಳು ಪುಡಿಪುಡಿ ಆದರೆ ದೊಡ್ಡದೊಡ್ಡ ಮೂಲ ಪರ್ವತಗಳು ಕಂಪಿಸಿದವು. ಸಮುದ್ರ ಅಲ್ಲೋಲ ಕಲ್ಲೋಲವಾಯಿತು. ಈಗ ಗಗನದಲ್ಲಿ ಬ್ರಹ್ಮ ರುದ್ರ ಸೇರಿದಂತೆ ಎಲ್ಲ ಸುರರೂ-ಅಸುರರೂ ನೆರೆದರು.

**ಸುರಾಸ್ತು ಭೀಮಸ್ಯ ಜಯಾಭಿಕಾಂಕ್ಷಿಣ-**
**ಸ್ತಥಾಽಸುರಾದ್ಯಾ ಮಗಧಾಧಿಪಸ್ಯ ।**
**ಪಶ್ಯಂತಿ ಸರ್ವೇ ಕ್ರಮಶೋ ಬಲಂ ಸ್ವಂ**
**ಸಮಾದದೇ ಮಾರುತನಂದನೋಽಪಿ ॥ ೧೫೯ ॥**

ಪದಚ್ಛೇದ :- ಸುರಾಃ, ತು, ಭೀಮಸ್ಯ, ಜಯಾಭಿಕಾಂಕ್ಷಿಣಃ, ತಥಾ, ಅಸುರಾದ್ಯಾಃ, ಮಗಧಾಧಿಪಸ್ಯ, ಪಶ್ಯಂತಿ, ಸರ್ವೇ, ಕ್ರಮಶಃ, ಬಲಂ, ಸ್ವಂ, ಸಮಾದದೇ, ಮಾರುತನಂದನಃ, ಅಪಿ ।

**ಅರ್ಥ :- ಸುರಾಃ ತು** = ದೇವತೆಗಳಾದರೂ, **ಭೀಮಸ್ಯ** = ಭೀಮನ, **ಜಯಾಭಿಕಾಂಕ್ಷಿಣಃ** = ಜಯವನ್ನು ಬಯಸುವವರು, **ತಥಾ** = ಹಾಗೇ, **ಅಸುರಾದ್ಯಾಃ** = ಅಸುರ ಸ್ವಭಾವದ ತಾಮಸರು, **ಮಗಧಾಧಿಪಸ್ಯ** = ಜರಾಸಂಧನ ಜಯ ಬಯಸುವವರಾಗಿ, **ಸರ್ವೇ** = ಎಲ್ಲರೂ, **ಪಶ್ಯಂತಿ** = ಯುದ್ಧವನ್ನು ನೋಡುತ್ತಾರೆ, **ಮಾರುತನಂದನಃ ಅಪಿ** = ಭೀಮನೂ ಕೂಡ, **ಕ್ರಮಶಃ** = ಹಂತಹಂತವಾಗಿ, **ಸ್ವಂ** = ತನ್ನ, **ಬಲಂ** = ಶಕ್ತಿಯನ್ನು, **ಸಮಾದದೇ** = ಪ್ರಕಟಿಸಿದನು.

**ತಾತ್ಪರ್ಯ :-** ಸಾತ್ವಿಕರಾದ ದೇವತೆಗಳು ಭೀಮನ ಜಯವನ್ನು ಬಯಸಿದರೆ ತಾಮಸರಾದ ಅಸುರರು ಜರಾಸಂಧನ ಜಯ ಬಯಸಿ, ಎಲ್ಲರೂ ಯುದ್ಧವನ್ನು ನೋಡಿದರು. ಭೀಮ ಹಂತ ಹಂತವಾಗಿ ನನ್ನ ಶಕ್ತಿಯನ್ನು ಪ್ರಕಟಿಸುತ್ತಾ ಯುದ್ಧ ಮಾಡಿದ.

**ಮಾನಯಿತ್ವಾ ವರಂ ಧಾತುರ್ದಿವಸಾನ್ ದಶ ಪಂಚ ಚ ।**
**ವಾಸುದೇವಾಜ್ಞಯಾ ಭೀಮಃ ಶತ್ರುಂ ಹಂತುಂ ಮನೋ ದಧೇ ॥ ೧೬೦ ॥**

ಪದಚ್ಛೇದ :- ಮಾನಯಿತ್ವಾ, ವರಂ, ಧಾತುಃ, ದಿವಸಾನ್, ದಶ, ಪಂಚ, ಚ, ವಾಸುದೇವಾಜ್ಞಯಾ, ಭೀಮಃ, ಶತ್ರುಂ, ಹಂತುಂ, ಮನಃ, ದಧೇ ।

**ಅರ್ಥ :- ಧಾತುಃ** = ಬ್ರಹ್ಮದೇವರ, **ವರಂ** = ವರವನ್ನು, **ಮಾನಯಿತ್ವಾ** = ಗೌರವಿಸಿ, **ದಶಪಂಚ ಚ ದಿವಸಾನ್** = ಹದಿನೈದು ದಿವಸಗಳ ಕಾಲ (ಯುದ್ಧ ಮಾಡಿ), **ಭೀಮೋ** = ಭೀಮನು, **ವಾಸುದೇವಾಜ್ಞಯಾ** = ಶ್ರೀಕೃಷ್ಣನ

ಆಜ್ಞೆಯಿಂದ, ಶತ್ರುಂ = ಶತ್ರುವಾದ ಜರಾಸಂಧನನ್ನು, ಹಂತುಂ = ಕೊಲ್ಲಲು, ಮನಃ = ಮನಸ್ಸನ್ನು, ದಧೇ = ಮಾಡಿದನು.

**ತಾತ್ಪರ್ಯ :-** ಹೀಗೆ ಬ್ರಹ್ಮದೇವರ ವರವನ್ನು ಗೌರವಿಸಲು ಭೀಮನು ಹದಿನೈದು ದಿನ ಯುದ್ಧ ಮಾಡಿದ. ನಂತರ ಶ್ರೀಕೃಷ್ಣನ ಅಪ್ಪಣೆಯಂತೆ ಅವನನ್ನು ಕೊಲ್ಲಲು ಇಚ್ಛಿಸಿದ.

**ಸ ಪ್ರಣಮ್ಯ ಹೃಷೀಕೇಶಂ ಹರ್ಷಾದಾಶ್ಲಿಷ್ಯ ಫಲ್ಗುನಮ್ ।**
**ರಿಪುಂ ಜಗ್ರಾಹ ಮಕುಟೇ ವಾರಣಂ ಮೃಗರಾಡಿವ ॥ ೧೬೧ ॥**

**ಪದಚ್ಛೇದ :-** ಸಃ, ಪ್ರಣಮ್ಯ, ಹೃಷೀಕೇಶಂ, ಹರ್ಷಾತ್, ಆಶ್ಲಿಷ್ಯ, ಫಲ್ಗುನಂ, ರಿಪುಂ, ಜಗ್ರಾಹ, ಮಕುಟೇ, ವಾರಣಂ, ಮೃಗರಾಟ್, ಇವ ।

**ಅರ್ಥ :-** **ಸಃ** = ಆ ಭೀಮಸೇನನು, **ಹೃಷೀಕೇಶಂ** = ಶ್ರೀಕೃಷ್ಣನನ್ನು, **ಪ್ರಣಮ್ಯ** = ನಮಸ್ಕರಿಸಿ, **ಹರ್ಷಾತ್** = ಸಂತೋಷದಿಂದ, **ಫಲ್ಗುನಂ** = ಅರ್ಜುನನನ್ನು, **ಆಶ್ಲಿಷ್ಯ** = ಆಲಂಗಿಸಿ, **ವಾರಣಂ** = ಆನೆಯನ್ನು, **ಮೃಗರಾಟ್ ಇವ** = ಸಿಂಹವು ಹೇಗೋ ಹಾಗೇ, **ರಿಪುಂ** = ಜರಾಸಂಧನನ್ನು, **ಮುಕುಟೇ** = ಕೇಶಪಾಶದಲ್ಲಿ, **ಜಗ್ರಾಹ** = ಹಿಡಿದನು.

**ತಾತ್ಪರ್ಯ :-** ಕೊಲ್ಲಲು ಇಚ್ಛಿಸಿದ ಭೀಮ, ಶ್ರೀಕೃಷ್ಣನಿಗೆ ನಮಿಸಿದ. ಅರ್ಜುನನನ್ನು ಸಂತಸದಿಂದ ಅಪ್ಪಿಕೊಂಡ. ನಂತರ ಆನೆಯನ್ನು ಕೊಲ್ಲಲು ಸಿಂಹ ಹೀಗೆ ಅದರ ತಲೆಭಾಗವನ್ನು ಹಿಡಿಯುವುದೇ ಹಾಗೆ ಜರಾಸಂಧನನ್ನು ಹಿಡಿದ.

**ಪೃಷ್ಠೇಽಸ್ಯ ಜಾನುಮಾಧಾಯ ಕೂರ್ಮದೇಶಂ ಬಭಂಜ ಹ ।**
**ಮೃತಿಕಾಲೇ ಪುನರ್ದೇಹಂ ವಿದದಾರ ಯಥಾ ಪುರಾ ॥ ೧೬೨ ॥**

**ಪದಚ್ಛೇದ :-** ಪೃಷ್ಠೇ, ಅಸ್ಯ, ಜಾನುಂ, ಆಧಾಯ, ಕೂರ್ಮದೇಶಂ, ಬಭಂಜ, ಹ, ಮೃತಿಕಾಲೇ, ಪುನಃ, ದೇಹಂ, ವಿದದಾರ, ಯಥಾ, ಪುರಾ ।

**ಅರ್ಥ :-** **ಅಸ್ಯ** = ಈ ಜರಾಸಂಧನ, **ಪೃಷ್ಠೇ** = ಪೃಷ್ಠಭಾಗದಲ್ಲಿ, **ಜಾನುಂ** = ತನ್ನ ಮೊಣಕಾಲನ್ನು, **ಆಧಾಯ** = ಇರಿಸಿ, **ಕೂರ್ಮದೇಶಂ** = ಪೃಷ್ಠದ ಉನ್ನತ ಭಾಗವನ್ನು, **ಬಭಂಜ ಹ** = ಸೀಳಿದನಷ್ಟೇ, **ಪುನಃ** = ಮತ್ತೆ, **ಮೃತಿಕಾಲೇ**

= ಸಾಯುವ ವೇಳೆ, **ದೇಹಂ** = ಜರಾಸಂಧನ ಶರೀರವನ್ನು, **ಪುನಃ ಯಥಾ** = ಹಿಂದೆ ಹುಟ್ಟುವಾಗ ಹೇಗಿತ್ತೋ ಹಾಗೆ, **ವಿದದಾರ** = ಸೀಳಿದನು.

**ತಾತ್ಪರ್ಯ :-** ಕೆಳಮುಖವಾಗಿ ಬಿದ್ದ ಜರಾಸಂಧನ ಪೃಷ್ಠಭಾಗದಲ್ಲಿ ತನ್ನ ಮೊಣಕಾಲಿರಿಸಿ ಆ ಭಾಗವನ್ನು ಸೀಳಿದ. ಕೊನೆಗೆ ಅವನು ಸಾಯುವ ಕಾಲ ಬಂದಾಗ ಜರೆ ಜೋಡಿಸುವ ಮೊದಲು ಹೇಗಿತ್ತೋ ಹಾಗೆ ದೇಹವನ್ನು ಸೀಳಿ ಹಾಕಿದ.

**ಮರ್ಮಣ್ಯೇವ ನ ಹಂತವ್ಯೋ ಮಯಾಽಯಮಿತಿ ಮಾರುತಿಃ ।**
**ಸ್ವಪೌರುಷಪ್ರಕಾಶಾಯ ಬಭಂಜೈನಮಮರ್ಮಣಿ ॥ ೧೬೩ ॥**

**ಪದಚ್ಛೇದ :-** ಮರ್ಮಣಿ, ಏವ, ನ, ಹಂತವ್ಯಃ, ಮಯಾ, ಅನುಮ್, ಇತಿ, ಮಾರುತಿಃ, ಸ ಪೌರುಷ, ಪ್ರಕಾಶಾಯ, ಬಭಂಜ, ಏನಮ್, ಅಮರ್ಮಣಿ ।

**ಅರ್ಥ :- ಮಾರುತಿಃ** = ಭೀಮನು, **ಮಯಾ** = ನನ್ನಿಂದ, **ಅಯಂ** = ಈ ಜರಾಸಂಧನು, **ಮರ್ಮಣಿ ಏವ** = ಮರ್ಮಸ್ಥಾನದಲ್ಲಿಯೇ, **ನ ಹಂತವ್ಯಃ** = ಹೊಡೆಯಲ್ಪಡಬಾರದು, **ಇತಿ** = ಎಂದು, **ಸ್ವ ಪೌರುಷ ಪ್ರಕಾಶಾಯ** = ತನ್ನ ಪೌರುಷವನ್ನು ಪ್ರಕಾಶ ಪಡಿಸುವುದಕ್ಕಾಗಿ, **ಏನಂ** = ಈ ಜರಾಸಂಧನನ್ನು, **ಅಮರ್ಮಣಿ** = ಮರ್ಮಸ್ಥಾನವಲ್ಲದ ಸೊಂಟದ ಭಾಗದಲ್ಲಿ, **ಬಭಂಜ** = ಸೀಳಿದನು.

**ತಾತ್ಪರ್ಯ :-** ತಾನು ಮರ್ಮಸ್ಥಾನದಲ್ಲಿ ಹೊಡೆದುಕೊಂಡರೆ, ತನ್ನ ಸಾಮರ್ಥ್ಯ ಪ್ರಕಟವಾಗುವುದಿಲ್ಲ. ಆದುದರಿಂದ ಇವನಿಗೆ ಮರ್ಮಸ್ಥಾನದಲ್ಲಿ ಹೊಡೆಯಬಾರದು ಎಂದು ನಿಶ್ಚಯಿಸಿದ ಭೀಮಸೇನ ಜರಾಸಂಧನನ್ನು ಸೊಂಟಭಾಗದಲ್ಲಿಯೇ ಹೊಡೆದು ಸೀಳಿದ.

**ಭಜ್ಯಮಾನೇ ಶರೀರೇಽಸ್ಯ ಬ್ರಹ್ಮಾಂಡಸ್ಫೋಟಸನ್ನಿಭಃ ।**
**ಬಭೂವ ರಾವೋ ಯೇನೈವ ತ್ರಸ್ತಮೇತಜ್ಜಗತ್‌ತ್ರಯಮ್ ॥ ೧೬೪ ॥**

**ಪದಚ್ಛೇದ :-** ಭಜ್ಯಮಾನೇ, ಶರೀರೇ, ಅಸ್ಯ, ಬ್ರಹ್ಮಾಂಡಸ್ಫೋಟಸನ್ನಿಭಃ, ಬಭೂವ, ರಾವಃ, ಯೇನ, ಏವ, ತ್ರಸ್ತಂ, ಏತತ್, ಜಗತ್ರಯಂ ।

**ಅರ್ಥ** :- **ಯೇನ ಏವ** = ಯಾವ ಜರಾಸಂಧನಿಂದಲೇ, **ಏತತ್** = ಈ, **ಜಗತ್ರಯಂ** = ಮೂರು ಲೋಕವು, **ತ್ರಸ್ತಂ** = ಭಯಗೊಂಡಿತ್ತು ಅಂತಹ, **ಅಸ್ಯ** = ಈ ಜರಾಸಂಧನ, **ಶರೀರೇ** = ದೇಹವು, **ಭಜ್ಯಮಾನೇ** = ಸೀಳುತ್ತಿರಲು, **ಬ್ರಹ್ಮಾಂಡಸ್ಫೋಟಸನ್ನಿಭಃ** = ಬ್ರಹ್ಮಾಂಡದ ಸ್ಫೋಟಕ್ಕೆ ಸದೃಶವಾದ, **ರಾವಃ** = ಶಬ್ದವು, **ಬಭೂವ** = ಆಯಿತು.

**ತಾತ್ಪರ್ಯ** :- ಮೂರು ಲೋಕವನ್ನೂ ಹೆದರಿಸಿದ್ದ ಜರಾಸಂಧ ಸಾಯುವಾಗಲೂ ಬ್ರಹ್ಮಾಂಡವೇ ಸಿಡಿದರೆ ಯಾವ ಶಬ್ದ ಬರಬಹುದೋ ಅಂತಹ ಶಬ್ದ ಅವನ ದೇಹ ಸೀಳಿದಾಗ ಉಂಟಾದ್ದರಿಂದ ಹೆದರಿಸಿಯೇ ಸತ್ತ.

**ನಿಹತ್ಯ ಕೃಷ್ಣಸ್ಯ ರಿಪುಂ ಸ ಭೀಮಃ**
**ಸಮರ್ಪಯಾಮಾಸ ತದರ್ಚನಂ ಹರೇಃ ।**
**ಕೃತಾಂ ಹಿ ಭೀಮೇನ ಸಮರ್ಚನಾಂ ತಾಂ**
**ಸಮಕ್ಷಮಾದಾತುಮಿಹಾಽಗತೋ ಹ್ಯಜಃ ॥ ೧೬೫ ॥**

ಪದಚ್ಛೇದ :- **ನಿಹತ್ಯ, ಕೃಷ್ಣಸ್ಯ, ರಿಪುಂ, ಸಃ, ಭೀಮಃ, ಸಮರ್ಪಯಾಮಾಸ, ತದರ್ಚನಂ, ಹರೇಃ, ಕೃತಾಂ, ಹಿ, ಭೀಮೇನ, ಸಮರ್ಚನಾಂ, ತಾಂ, ಸಮಕ್ಷಂ, ಆದಾತುಂ, ಇಹ, ಆಗತಃ, ಹಿ, ಅಜಃ ।**

**ಅರ್ಥ** :- **ಸಃ** = ಆ, **ಭೀಮಃ** = ಭೀಮನು, **ಕೃಷ್ಣಸ್ಯ** = ಶ್ರೀಕೃಷ್ಣನ, **ರಿಪುಂ** = ಶತ್ರುವಾದ ಮಾಗಧನನ್ನು, **ನಿಹತ್ಯ** = ಕೊಂದು, **ತದರ್ಚನಂ** = ಆ ಪೂಜೆಯನ್ನು, **ಹರೇಃ** = ಶ್ರೀಕೃಷ್ಣನಿಗೆ, **ಸಮರ್ಪಯಾಮಾಸ** = ಅರ್ಪಿಸಿದನು, **ಭೀಮೇನ** = ಭೀಮನಿಂದ, **ಕೃತಾಂ** = ಮಾಡಲ್ಪಟ್ಟ, **ತಾಂ** = ಆ, **ಸಮರ್ಚನಾಂ** = ಶ್ರೇಷ್ಠವಾದ ಪೂಜೆಯನ್ನು, **ಸಮಕ್ಷಂ** = ಪ್ರತ್ಯಕ್ಷವಾಗಿಯೇ, **ಆದಾತುಂ** = ಸ್ವೀಕರಿಸಲು, **ಅಜಃ** = ಶ್ರೀಕೃಷ್ಣನು, **ಇಹ** = ಇಲ್ಲಿ, **ಆಗತಃ ಹಿ** = ಬಂದಿದ್ದನಷ್ಟೇ.

**ತಾತ್ಪರ್ಯ** :- ಹೀಗೆ ಭೀಮಸೇನ ಶ್ರೀಕೃಷ್ಣನ ಶತ್ರುವಾದ ಜರಾಸಂಧನನ್ನು ಸಂಹರಿಸಿದ. ಈ ಒಂದು ಪೂಜೆಯನ್ನು ಕೃಷ್ಣನಿಗೆ ಅರ್ಪಿಸಿದ. ಇಂತಹ ಶ್ರೇಷ್ಠಪೂಜೆಯನ್ನು ತಾನು ಪ್ರತ್ಯಕ್ಷವಾಗಿಯೇ ಸ್ವೀಕರಿಸಬೇಕೆಂದು ಇಲ್ಲಿಗೆ ಶ್ರೀಕೃಷ್ಣನು ಬಂದದ್ದು.

ಸ್ವೀಕೃತ್ಯ ಪೂಜಾಂ ಚ ವೃಕೋದರಸ್ಯ
ದೃಢಂ ಸಮಾಶ್ಲಿಷ್ಯ ಚ ತಂ ಜನಾರ್ದನಃ ।
ಪ್ರೀತೋ ನಿತಾಂತಂ ಪುನರೇವ ಕೃಷ್ಣಂ
ನನಾಮ ಭೀಮಃ ಪ್ರಣತೋಽರ್ಜುನೇನ ॥ ೧೬೬ ॥

ಪದಚ್ಛೇದ :- ಸ್ವೀಕೃತ್ಯ, ಪೂಜಾಂ, ಚ, ವೃಕೋದರಸ್ಯ, ದೃಢಂ, ಸಮಾಶ್ಲಿಷ್ಯ, ಚ, ತಂ, ಜನಾರ್ದನಃ, ಪ್ರೀತಃ, ನಿತಾಂತಂ, ಪುನಃ, ಏವ, ಕೃಷ್ಣಂ, ನನಾಮ, ಭೀಮಃ, ಪ್ರಣತಃ, ಅರ್ಜುನೇನ ।

ಅರ್ಥ :- ವೃಕೋದರಸ್ಯ = ಭೀಮಸೇನನ, ಪೂಜಾಂ = ಪೂಜೆಯನ್ನು, ಸ್ವೀಕೃತ್ಯ = ಸ್ವೀಕರಿಸಿ, ಚ = ಮತ್ತು ಅವನನ್ನು, ದೃಢಂ = ಗಟ್ಟಿಯಾಗಿ, ಸಮಾಶ್ಲಿಷ್ಯ = ಆಲಂಗಿಸಿ, ಜನಾರ್ದನಃ = ಶ್ರೀಕೃಷ್ಣನು, ನಿತಾಂತಂ = ಬಹಳವಾಗಿ, ಪ್ರೀತಃ = ಸಂತುಷ್ಟನಾದನು, ಅರ್ಜುನೇನ = ಅರ್ಜುನನಿಂದ, ಪ್ರಣತಃ = ನಮಸ್ಕರಿಸಲ್ಪಟ್ಟ, ಭೀಮಃ = ಭೀಮನು, ಕೃಷ್ಣಂ = ಶ್ರೀಕೃಷ್ಣನನ್ನು, ಪುನಃ ಏವ = ಮತ್ತೊಮ್ಮೆ, ನನಾಮ = ನಮಸ್ಕರಿಸಿದ.

ತಾತ್ಪರ್ಯ :- ಹೀಗೆ ಶ್ರೀಕೃಷ್ಣ ಭೀಮನ ಪೂಜೆ ಸ್ವೀಕರಿಸಿ, ಅವನನ್ನು ಗಾಢವಾಗಿ ಆಲಂಗಿಸಿ ಪ್ರೀತನಾದ. ಆಗ ಅರ್ಜುನ ಭೀಮನಿಗೆ ನಮಿಸಿದ. ಭೀಮ ಮತ್ತೊಮ್ಮೆ ಶ್ರೀಕೃಷ್ಣನಿಗೆ ನಮಸ್ಕರಿಸಿದ.

ಜಗ್ಮುಃ ಸುರಾಶ್ಚಾತಿತರಾಂ ಪ್ರಹೃಷ್ಟಾ
ಬ್ರಹ್ಮಾದಯೋ ದೀನತರಾಶ್ಚ ದೈತ್ಯಾಃ ।
ಬಲಾದುಮೇಶಸ್ಯ ವರೇ ಪ್ರಭಗ್ನೇ
ವೃಕೋದರೇಣಾಚ್ಯುತಸಂಶ್ರಯೇಣ ॥ ೧೬೭ ॥

ಪದಚ್ಛೇದ :- ಜಗ್ಮುಃ, ಸುರಾಃ, ಚ, ಅತಿತರಾಂ, ಪ್ರಹೃಷ್ಟಾಃ, ಬ್ರಹ್ಮಾದಯಃ, ದೀನತರಾಃ, ಚ, ದೈತ್ಯಾಃ, ಬಲಾದ್, ಉಮೇಶಸ್ಯ, ವರೇ, ಪ್ರಭಗ್ನೇ, ವೃಕೋದರೇಣ, ಅಚ್ಯುತಸಂಶ್ರಯೇಣ ।

ಅರ್ಥ :- ಅಚ್ಯುತಸಂಶ್ರಯೇಣ = ಶ್ರೀಕೃಷ್ಣನನ್ನು ಆಶ್ರಯಿಸಿದ, ವೃಕೋದರೇಣ = ಭೀಮನಿಂದ, ಬಲಾತ್ = ನಿಜಬಲದಿಂದ, ಉಮೇಶಸ್ಯ =

ರುದ್ರದೇವರ, ವರೇ = ವರವು, ಪ್ರಭಗ್ನೇ ಸತಿ = ಮುರಿಯುತ್ತಿರಲು, ಅತಿತರಾಂ = ಅತ್ಯಂತ, ಪ್ರಹೃಷ್ಟಾಃ = ಸಂತೋಷಗೊಂಡ, ಬ್ರಹ್ಮಾದಯಃ ಸುರಾಃ = ಬ್ರಹ್ಮಾದಿ ದೇವತೆಗಳು, ಚ = ಮತ್ತು, ದೀನತರಾಃ = ಅತ್ಯಂತ ದುಃಖಗೊಂಡ, ದೈತ್ಯಾಃ = ದೈತ್ಯರು, ಜಗ್ಮು = ಹೊರಟರು.

ತಾತ್ಪರ್ಯ :- ಭೀಮ ಜರಾಸಂಧನನ್ನು ಶ್ರೀಕೃಷ್ಣನ ಆಶ್ರಯ ಶಕ್ತಿಯಿಂದ ಮತ್ತು ನಿಜ ಬಲದಿಂದ ಕೊಂದ. ಹೀಗೆ ರುದ್ರದೇವರ ವರವನ್ನು ಮೀರಿದಾಗ ದೇವತೆಗಳಿಗೆ ಅತ್ಯಂತ ಆನಂದ ಮತ್ತು ಅಸುರರಿಗೆ ದುಃಖ ಆಯಿತು. ಹೀಗೆ ಎಲ್ಲರೂ ಅಲ್ಲಿಂದ ಹೊರಟರು.

**ಸುತೋ ಯಯೌ ಶರಣಂ ತಾನ್ ರಮೇಶ-**
**ಭೀಮಾರ್ಜುನಾನ್ ಸಹದೇವೋಽಸ್ಯ ಧೀಮಾನ್ ।**
**ರಥಂ ಸ್ವಸಾರಂ ಚ ದದೌ ಸ ಮಾರುತೇ-**
**ರ್ನನಾಮ ಕೃಷ್ಣಂ ಪರಯಾ ಚ ಭಕ್ತ್ಯಾ ॥ ೧೬೮ ॥**

ಪದಚ್ಛೇದ :- ಸುತಃ, ಯಯೌ, ಶರಣಂ, ತಾನ್, ರಮೇಶಭೀಮಾರ್ಜುನಾನ್, ಸಹದೇವಃ, ಅಸ್ಯ, ಧೀಮಾನ್, ರಥಂ, ಸ್ವಸಾರಂ, ಚ, ದದೌ, ಸಃ, ಮಾರುತೇಃ, ನನಾಮ, ಕೃಷ್ಣಂ, ಪರಯಾ, ಚ, ಭಕ್ತ್ಯಾ ।

ಅರ್ಥ :- ಧೀಮಾನ್ = ಬುದ್ಧಿವಂತನಾದ, ಅಸ್ಯ = ಈ ಜರಾಸಂಧನ, ಸುತಃ = ಮಗನಾದ, ಸಹದೇವಃ = ಸಹದೇವನು, ತಾನ್ = ಆ, ರಮೇಶಭೀಮಾರ್ಜುನಾನ್ = ಶ್ರೀಕೃಷ್ಣ ಭೀಮ ಅರ್ಜುನರನ್ನು, ಶರಣಂ = ರಕ್ಷಕರನ್ನಾಗಿ, ಯಯೌ = ಹೊಂದಿದನು, ಚ = ಮತ್ತು, ರಥಂ = ರಥವನ್ನು, ಸ್ವಸಾರಂ = ತಂಗಿಯನ್ನು, ಮಾರುತೇಃ = ಭೀಮನಿಗೆ, ದದೌ = ಕೊಟ್ಟನು, ಚ = ಮತ್ತು, ಕೃಷ್ಣಂ = ಶ್ರೀಕೃಷ್ಣನನ್ನು, ಪರಯಾ = ಶ್ರೇಷ್ಠವಾದ, ಭಕ್ತ್ಯಾ = ಭಕ್ತಿಯಿಂದ, ನನಾಮ = ನಮಿಸಿದನು.

ತಾತ್ಪರ್ಯ :- ಮಾಗಧನ ವಧೆಯಾದ ಕೂಡಲೇ ಬುದ್ಧಿವಂತನಾದ ಅವನ ಮಗ ಸಹದೇವ ಶ್ರೀಕೃಷ್ಣಭೀಮ ಅರ್ಜುನರ ರಕ್ಷಣೆ ಬೇಡಿ ಬಂದ. ರಥವನ್ನು ತನ್ನ ತಂಗಿಯನ್ನು ಭೀಮನಿಗೆ ಉಡುಗೋರೆ ನೀಡಿದ. ಶ್ರೀಕೃಷ್ಣನಿಗೆ ಭಕ್ತಿಯಿಂದ ನಮಸ್ಕರಿಸಿದ.

**ರಥೋ ಹ್ಯಸೌ ವಸುನಾ ವಾಸುದೇವಾ-**
**ಚ್ಛಕ್ರಾಂತರಾಽಪ್ತೋ ವಸುವಂಶಜತ್ವಾತ್ ।**
**ಜರಾಸುತಸ್ಯಾಽಸ ವೃಕೋದರಸ್ತಂ**
**ಹರೇ ರಥಂ ಪ್ರಾರ್ಪಯಾಮಾಸ ತಸ್ಮೈ ॥ ೧೬೯ ॥**

**ಪದಚ್ಛೇದ :-** ರಥಃ, ಹಿ, ಅಸೌ, ವಸುನಾ, ವಾಸುದೇವಾತ್, ಶಕ್ರಾಂತರಾ, ಆಪ್ತಃ, ವಸುವಂಶಜತ್ವಾತ್, ಜರಾಸುತಸ್ಯ, ಆಸ, ವೃಕೋದರಃ, ತಂ, ಹರೇಃ, ರಥಂ, ಪ್ರಾರ್ಪಯಾಮಾಸ, ತಸ್ಮೈ ।

**ಅರ್ಥ :- ಅಸೌ** = ಈ, **ರಥಃ** = ರಥವು, **ವಾಸುದೇವಾತ್** = ಶ್ರೀಮನ್ನಾರಾಯಣನಿಂದ, **ಶಕ್ರಾಂತರಾ** = ಇಂದ್ರನ ಮೂಲಕ, **ವಸುನಾ** = ಉಪರಿಚರ ವಸುವಿನಿಂದ, **ಆಪ್ತಃ ಹಿ** = ಹೊಂದಲ್ಪಟ್ಟಿತ್ತಷ್ಟೆ, **ವಸುವಂಶಜತ್ವಾತ್** = ವಸುವಿನ ವಂಶದವನಾದ್ದರಿಂದ, **ಜರಾಸುತಸ್ಯ** = ಜರಾಸಂಧನಿಗೆ, **ಆಸ** = ಇತ್ತು, **ವೃಕೋದರಃ** = ಭೀಮನು, **ತಂ ಹರೇಃ ರಥಂ** = ಆ ಶ್ರೀಹರಿಯ ರಥವನ್ನು, **ತಸ್ಮೈ** = ಶ್ರೀಕೃಷ್ಣನಿಗೆ, **ಪ್ರಾರ್ಪಯಾಮಾಸ** = ಅರ್ಪಿಸಿದ.

**ತಾತ್ಪರ್ಯ :-** ಹಿಂದೆ ಶ್ರೀಮನ್ನಾರಾಯಣ ಈ ರಥವನ್ನು ಇಂದ್ರನಿಗೆ ನೀಡಿದ್ದ. ಅದನ್ನು ಅವನು ವಸುವಿಗೆ ಕೊಟ್ಟಿದ್ದ. ಈ ರಥದಿಂದ ಆಕಾಶಮಾರ್ಗದಲ್ಲಿ ಹೋಗುತ್ತಿದ್ದ ವಸುವಿಗೆ ಉಪರಿಚರವಸು ಎಂದು ಹೆಸರು ಬಂದಿತು. ಆ ವಸುವಿನ ಮಗ ಬೃಹದ್ರಥ. ಅವನ ಮಗ ಜರಾಸಂಧ. ಆದುದರಿಂದ ಜರಾಸಂಧನ ಬಳಿ ಈ ರಥವಿತ್ತು. ಭೀಮನಿಗೆ ಉಡುಗೋರೆಯಾಗಿ ಬಂದ ಈ ನಾರಾಯಣ ರಥವನ್ನು ಅವನಿಗೇ ಅರ್ಪಿಸಿದ ಈ ಭೀಮಸೇನ.

**ಕೃಷ್ಣೋಽಸ್ಮರದ್ ಗರುಡಂ ಸ ಧ್ವಜೇಽಭೂದ್**
**ರಥಂ ಕೃಷ್ಣೋಽಥಾಽರುಹತ್ ಪಾಂಡವಾಭ್ಯಾಮ್ ।**
**ಭೀಮಃ ಕನ್ಯಾಂ ಸಹದೇವಸ್ಯ ಹೇತೋಃ**
**ಸಮಗ್ರಹೀದನುಜಸ್ಯಾಽತ್ಮನಃ ಸಃ ॥ ೧೭೦ ॥**

ಪದಚ್ಛೇದ :- ಕೃಷ್ಣಃ, ಅಸ್ಮರತ್, ಗರುಡಂ, ಸಃ, ಧ್ವಜೇ, ಅಭೂತ್, ರಥಂ, ಕೃಷ್ಣಃ, ಅಥ, ಆರುಹತ್, ಪಾಂಡವಾಭ್ಯಾಂ, ಭೀಮಃ, ಕನ್ಯಾಂ, ಸಹದೇವಸ್ಯ, ಹೇತೋಃ, ಸಮಗ್ರಹೀತ್, ಅನುಜಸ್ಯ, ಆತ್ಮನಃ, ಸಃ ।

ಅರ್ಥ :- ಕೃಷ್ಣಃ = ಶ್ರೀಕೃಷ್ಣನು, ಗರುಡಂ = ಗರುಡನನ್ನು, ಅಸ್ಮರತ್ = ಸ್ಮರಿಸಿದನು, ಸಃ = ಆ ಗರುಡನು, ಧ್ವಜೇ = ರಥದ ಧ್ವಜದಲ್ಲಿ, ಅಭೂತ್ = ಪ್ರತಿಷ್ಠಿತನಾದನು, ಅಥ = ಅನಂತರ, ಪಾಂಡವಾಭ್ಯಾಂ = ಭೀಮಾರ್ಜುನರೊಟ್ಟಿಗೆ, ಕೃಷ್ಣಃ = ಶ್ರೀಕೃಷ್ಣನು, ರಥಂ = ರಥವನ್ನು, ಆರುಹತ್ = ಏರಿದನು, ಸಃ ಭೀಮಃ = ಭೀಮಸೇನನು, ಆತ್ಮನಃ = ತನ್ನ, ಅನುಜಸ್ಯ = ತಮ್ಮನಾದ, ಸಹದೇವಸ್ಯ ಹೇತೋಃ = ಸಹದೇವನಿಗಾಗಿ, ಕನ್ಯಾಂ = ಕನ್ಯೆಯನ್ನು, ಸಮಗ್ರಹೀತ್ = ಸ್ವೀಕರಿಸಿದನು.

ತಾತ್ಪರ್ಯ :- ಕೃಷ್ಣ ಗರುಡನನ್ನು ನೆನೆದ. ಬಂದ ಗರುಡ ರಥದ ಧ್ವಜಭಾಗದಲ್ಲಿ ಕುಳಿತ. ಭೀಮಾರ್ಜುನರೊಂದಿಗೆ ಕೃಷ್ಣ ರಥವನ್ನೇರಿದ. ಸಹದೇವ ಕೊಟ್ಟ ಕನ್ಯೆಯನ್ನು ಭೀಮಸೇನ ತನ್ನ ತಮ್ಮನಾದ ಸಹದೇವನಿಗೆ ಮದುವೆ ಮಾಡಿಸಲು ಸ್ವೀಕರಿಸಿದ.

**ನಕುಲಸ್ಯಾऽದಾನ್ಮದ್ರರಾಜೋ ಹಿ ಪೂರ್ವಂ**
**ಸ್ವೀಯಾಂ ಕನ್ಯಾಂ ಸಾ ತಥೈಷಾऽಪ್ಯುಷಾ ಹಿ ।**
**ಏಕಾ ಪೂರ್ವಂ ತೇ ಅಶ್ವಿನೋಶ್ಚೈವ ಭಾರ್ಯಾ**
**ಯಮೌ ರೇಮಾತೇ ಯದುಷಾ ಅಶ್ವಿಭಾರ್ಯಾ ॥ ೧೭೧ ॥**

ಪದಚ್ಛೇದ :- ನಕುಲಸ್ಯ, ಅದಾತ್, ಮದ್ರರಾಜಃ, ಹಿ, ಪೂರ್ವಂ, ಸ್ವೀಯಾಂ, ಕನ್ಯಾಂ, ಸಾ, ತಥಾ, ಏಷಾ, ಅಪಿ, ಉಷಾಃ, ಹಿ, ಏಕಾ, ಪೂರ್ವಂ, ತೇ, ಅಶ್ವಿನೋಃ, ಚ, ಏವ, ಭಾರ್ಯಾ, ಯಮೌ, ರೇಮಾತೇ, ಯತ್, ಉಷಾಃ, ಅಶ್ವಿಭಾರ್ಯಾ ।

ಅರ್ಥ :- ಪೂರ್ವಂ = ಹಿಂದೆ, ಮದ್ರರಾಜಃ = ಮದ್ರರಾಜನು, ಸ್ವೀಯಾಂ = ತನ್ನ, ಕನ್ಯಾಂ = ಕನ್ಯೆಯಾದ ಉಷೋದೇವಿಯನ್ನು, ನಕುಲಸ್ಯ = ನಕುಲನಿಗೆ, ಅದಾತ್ ಹಿ = ಮದುವೆಮಾಡಿ ಕೊಟ್ಟಿದ್ದನಷ್ಟೇ, ಸಾ = ಆ ಮದ್ರರಾಜನ ಮಗಳು, ತಥಾ = ಹಾಗೆ, ಏಷಾ ಅಪಿ = ಈ ಜರಾಸಂಧನ ಮಗಳೂ, ಪೂರ್ವಂ = ಮೂಲ ರೂಪದಲ್ಲಿ, ಏಕಾ = ಒಬ್ಬಳೇ, ತೇ =

ಇವರಿಬ್ಬರೂ, **ಅಶ್ವಿನೋಃ** = ಅಶ್ವಿನೀ ದೇವತೆಗಳ, **ಭಾರ್ಯಾ ಏವ** = ಹೆಂಡತಿಯೇ, **ಯತ್** = ಯಾವ ಕಾರಣದಿಂದ, **ಉಷಾಃ** = ಉಷೋದೇವಿಯು, **ಅಶ್ವಿಭಾರ್ಯಾ** = ಅಶ್ವಿನೀ ದೇವತೆಗಳ ಹೆಂಡತಿಯೋ ಆ ಕಾರಣದಿಂದ, **ಯಮೌ** = ನಕುಲ, ಸಹದೇವರು ಅವರಿಬ್ಬರೊಂದಿಗೆ, **ರೇಮಾತೇ** = ರಮಿಸಿದರು.

**ತಾತ್ಪರ್ಯ** :- ಮದ್ರರಾಜ ನಕುಲನಿಗೆ ಹಿಂದೆಯೇ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದ್ದ. ಹೀಗಾಗಿ ಭೀಮ ಸಹದೇವನಿಗಾಗಿ ಕನ್ಯೆಯನ್ನು ಸ್ವೀಕರಿಸಿದ. ಮದ್ರರಾಜನ ಮಗಳು ಮತ್ತು ಜರಾಸಂಧನ ಮಗಳು ಇಬ್ಬರೂ ಮೂಲರೂಪದಲ್ಲಿ ಅಶ್ವಿನೀ ದೇವತೆಗಳ ಹೆಂಡತಿಯಾದ ಉಷೋದೇವಿಯರೇ ಆದುದರಿಂದ ನಕುಲ ಸಹದೇವರು ಎರಡು ಕಡೆ ಅವತರಿಸಿದ ಉಷೋದೇವಿಯರೊಟ್ಟಿಗೆ ರಮಿಸಿದರು. ಇವರು ಅನಿರುದ್ಧ ಪತ್ನಿಯಾದ ಉಷಾದೇವಿ ಅಲ್ಲ ಹೊರತು ಉಷೋದೇವಿ.

**ತತಃ ಕೃಷ್ಣಾಯಾಮಗ್ರಜಭ್ರಾತೃಭಾರ್ಯಾ-**
**ವೃತ್ತಿಂ ಹಿ ತೌ ಚಕ್ರತುರ್ಮಾದ್ರಿಪುತ್ರೌ ।**
**ಜರಾಸುತಸ್ಯಾಽತ್ಮಜಃ ಕೇಶವಾದೀನ್**
**ರತ್ನೈಃ ಸಮಭ್ಯರ್ಚ್ಯ ಯಯಾವನುಜ್ಞಯಾ ॥ ೧೭೨ ॥**

**ಪದಚ್ಛೇದ** :- ತತಃ, ಕೃಷ್ಣಾಯಾಂ, ಅಗ್ರಜಭ್ರಾತೃಭಾರ್ಯಾವೃತ್ತಿಂ, ಹಿ, ತೌ, ಚಕ್ರತುಃ, ಮಾದ್ರಿಪುತ್ರೌ, ಜರಾಸುತಸ್ಯ, ಆತ್ಮಜಃ, ಕೇಶವಾದೀನ್, ರತ್ನೈಃ, ಸಮಭ್ಯರ್ಚ್ಯ, ಯಯೌ, ಅನುಜ್ಞಯಾ ।

**ಅರ್ಥ** :- **ತತಃ** = ಅನಂತರ, **ತೌ** = ಆ, **ಮಾದ್ರಿಪುತ್ರೌ** = ಮಾದ್ರಿಯ ಮಕ್ಕಳಾದ ನಕುಲ ಸಹದೇವರು, **ಕೃಷ್ಣಾಯಾಂ** = ದ್ರೌಪದೀದೇವಿಯಲ್ಲಿ, **ಅಗ್ರಜಭ್ರಾತೃಭಾರ್ಯಾವೃತ್ತಿಂ** = ಅತ್ತಿಗೆಯಲ್ಲಿನ ನಡುವಳಿಕೆಯನ್ನು, **ಚಕ್ರತುಃ ಹಿ** = ಮಾಡಿದರಷ್ಟೆ, **ಜರಾಸುತಸ್ಯ** = ಜರಾಸಂಧನ, **ಆತ್ಮಜಃ** = ಮಗನಾದ ಸಹದೇವನು, **ಕೇಶವಾದೀನ್** = ಶ್ರೀಕೃಷ್ಣ ಮೊದಲಾದವರನ್ನು, **ರತ್ನೈಃ** = ರತ್ನಗಳಿಂದ, **ಸಮಭ್ಯರ್ಚ್ಯ** = ಅರ್ಚಿಸಿ, **ಅನುಜ್ಞಯಾ** = ಅಪ್ಪಣೆ ಪಡೆದು, **ಯಯೌ** = ಹೋದನು.

ತಾತ್ಪರ್ಯ :- ತಮ್ಮ ನಿಯತ ಪತ್ನಿಯರು ಸಿಕ್ಕಿದ ಕ್ಷಣದಿಂದ ದ್ರೌಪದಿಯನ್ನು ನಕುಲ-ಸಹದೇವರು ಅತ್ತಿಗೆಯಂತೆ ಕಂಡರು. ಹಿಂದೆ ಹೆಂಡತಿಯಂತೆ ಅವಳಲ್ಲಿ ರಮಿಸಿದ್ದರು. ಮುಂದೆ ಅವಳ ಸಂಗ ಮಾಡಲಿಲ್ಲ. ಈಕಡೆ ಜರಾಸಂಧನ ಮಗ ಶ್ರೀಕೃಷ್ಣ-ಭೀಮ-ಅರ್ಜುನರನ್ನು ರತ್ನಗಳಿಂದ ಪೂಜಿಸಿ, ಅವರ ಆಜ್ಞೆ ಪಡೆದು ಹೊರಟನು.

**ತದಾಜ್ಞಯಾ ಪಿತೃಕಾರ್ಯಾಣಿ ಕೃತ್ವಾ**
**ತದಾಜ್ಞಯೈವಾಮುಚತ್ ತಾನ್ ನೃಪಾಂಶ್ಚ ।**
**ತೈಃ ಸಂಸ್ತುತಃ ಕೇಶವೋ ಭೀಮಪಾರ್ಥ-**
**ಯುಕ್ತೋ ಯಯೌ ಭಕ್ತಿನಮ್ರೈರ್ಯಥಾವತ್ ॥ ೧೭೩ ॥**

ಪದಚ್ಛೇದ :- **ತದಾಜ್ಞಯಾ, ಪಿತೃಕಾರ್ಯಾಣಿ, ಕೃತ್ವಾ, ತದಾಜ್ಞಯಾ, ಏವ, ಅಮುಚತ್, ತಾನ್, ನೃಪಾನ್, ಚ, ತೈಃ, ಸಂಸ್ತುತಃ, ಕೇಶವಃ, ಭೀಮಪಾರ್ಥಯುಕ್ತಃ, ಯಯೌ, ಭಕ್ತಿನಮ್ರೈಃ, ಯಥಾವತ್ ।**

ಅರ್ಥ :- **ತದಾಜ್ಞಯಾ** = ಶ್ರೀಕೃಷ್ಣನ ಆಜ್ಞೆಯಿಂದ, **ಪಿತೃಕಾರ್ಯಾಣಿ** = ತಂದೆಯ ಔರ್ಧ್ವದೇಹಿಕ ಕ್ರಿಯೆಗಳನ್ನು, **ಕೃತ್ವಾ** = ಮಾಡಿ, **ತದಾಜ್ಞಯಾ ಏವ** = ಆ ಶ್ರೀಕೃಷ್ಣನ ಆಜ್ಞೆಯಿಂದಲೇ, **ತಾನ್ ನೃಪಾನ್ ಚ** = ಆ ಜರಾಸಂಧ ಬಂಧಿಸಿದ್ದ ರಾಜರುಗಳನ್ನು, **ಅಮುಚತ್** = ಬಿಟ್ಟನು, **ಭಕ್ತಿನಮ್ರಃ** = ಭಕ್ತಿಯಿಂದ ನಮ್ರರಾದ, **ತೈಃ** = ಆ ರಾಜರುಗಳಿಂದ, **ಸಂಸ್ತುತಃ** = ಸ್ತುತಿಸಲ್ಪಟ್ಟ, **ಕೇಶವಃ** = ಶ್ರೀಕೃಷ್ಣನು, **ಭೀಮಪಾರ್ಥಯುಕ್ತಃ ಸನ್** = ಭೀಮಾರ್ಜುನರಿಂದ ಕೂಡಿದವನಾಗಿ, **ಯಥಾವತ್** = ಹಿಂದಿನಂತೆ, **ಯಯೌ** = ಹೊರಟನು.

ತಾತ್ಪರ್ಯ :- ಸಹದೇವನು ಶ್ರೀಕೃಷ್ಣನ ಆಜ್ಞೆಯಿಂದ ತಂದೆಯ ಮರಣೋತ್ತರ ಕ್ರಿಯೆಗಳನ್ನೆಲ್ಲ ಮಾಡಿದ. ಅವನ ಆಜ್ಞೆಯಂತೆ ಜರಾಸಂಧ ಬಂಧನದಲ್ಲಿರಿಸಿದ್ದ ರಾಜರ ಬಿಡುಗಡೆ ಮಾಡಿದ. ಆ ರಾಜರು ಶ್ರೀಕೃಷ್ಣನನ್ನು ಭಕ್ತಿಯಿಂದ ಸ್ತೋತ್ರ ಮಾಡಿದರು. ನಂತರ ಭೀಮಾರ್ಜುನರ ಜೊತೆಗೆ ಹಿಂದಿನಂತೆ ಹೊರಟ ಶ್ರೀಕೃಷ್ಣ.

**ಸಂಭಾವಿತಾಸ್ತೇ ಸಹದೇವೇನ ಸಮ್ಯಕ್**
**ಪ್ರಶಸ್ಯ ಕೃಷ್ಣಂ ಭೀಮಸೇನಂ ಚ ಸರ್ವೇ ।**

**ಯಯುರ್ಗೃಹಾನ್ ಸ್ವಾನಪತತ್ ಕೇಶವದ್ವಿಟ್**
**ಜರಾಸುತೋಽನ್ಧೇ ತಮಸಿ ಕ್ರಮೇಣ ॥ ೧೭೪ ॥**

ಪದಚ್ಛೇದ :- ಸಂಭಾವಿತಾಃ, ತೇ, ಸಹದೇವೇನ, ಸಮ್ಯಕ್, ಪ್ರಶಸ್ಯ, ಕೃಷ್ಣಂ, ಭೀಮಸೇನಂ, ಚ, ಸರ್ವೇ, ಯಯುಃ, ಗೃಹಾನ್, ಸ್ವಾನ್, ಅಪತತ್, ಕೇಶವದ್ವಿಟ್, ಜರಾಸುತಃ, ಅಂಧೇತಮಸಿ, ಕ್ರಮೇಣ ।

ಅರ್ಥ :- ಸಹದೇವೇನ = ಸಹದೇವನಿಂದ, ಸಂಭಾವಿತಾಃ = ಸತ್ಕರಿಸಲ್ಪಟ್ಟ, ತೇ ಸರ್ವೇ = ಆ ಎಲ್ಲಾ ರಾಜರು, ಕೃಷ್ಣಂ = ಶ್ರೀಕೃಷ್ಣನನ್ನು, ಭೀಮಸೇನಂ ಚ = ಭೀಮನನ್ನೂ ಕೂಡ, ಸಮ್ಯಕ್ = ಚೆನ್ನಾಗಿ, ಪ್ರಶಸ್ಯ = ಹೊಗಳಿ, ಸ್ವಾನ್ = ತಮ್ಮ, ಗೃಹಾನ್ = ಮನೆಯನ್ನು ಕುರಿತು, ಯಯುಃ = ಹೋದರು, ಕೇಶವದ್ವಿಟ್ = ಕೃಷ್ಣದ್ವೇಷಿಯಾದ, ಜರಾಸುತಃ = ಜರಾಸಂಧನು, ಕ್ರಮೇಣ = ಸಾಧನಕ್ರಮದಿಂದ ಕಾಲಕ್ರಮದಲ್ಲಿ, ಅಂಧೇತಮಸಿ = ಅಂಧಃತಮಸ್ಸಿನಲ್ಲಿ, ಅಪತತ್ = ಬಿದ್ದನು.

ತಾತ್ಪರ್ಯ :- ಬಂಧ ಮುಕ್ತಗೊಳಿಸಿದ ಆ ಎಲ್ಲ ರಾಜರಿಗೆ ಸಹದೇವ ಸತ್ಕಾರ ಮಾಡಿದ. ಅವರೆಲ್ಲರೂ ಶ್ರೀಕೃಷ್ಣ ಮತ್ತು ಭೀಮನನ್ನು ಚೆನ್ನಾಗಿ ಹೊಗಳಿ ತಮ್ಮ ತಮ್ಮ ಮನೆಗೆ ಹೋದರು. ಈ ಜರಾಸಂಧ ಭಗವಂತನನ್ನು ದ್ವೇಷಿಸಿದ ಫಲವಾಗಿ ಮುಂದೆ ಕಾಲಕ್ರಮದಲ್ಲಿ ಅಂಧಃತಮಸ್ಸಿನಲ್ಲಿ ಬಿದ್ದ.

**ಕೃಷ್ಣಶ್ಚ ಪಾರ್ಥೌ ಚ ತಥೈಕಯಾನಂ**
**ಸಮಾಸ್ಥಿತಾ ಧರ್ಮಜಮಭ್ಯಗಚ್ಛನ್ ।**
**ತೇಷಾಂ ಶಂಖಧ್ವನಿಸಂಬೋಧಿತಾತ್ಮಾ**
**ರಾಜಾ ಪ್ರೀತಶ್ಚಾತಿತರಾಂ ಬಭೂವ ॥ ೧೭೫ ॥**

ಪದಚ್ಛೇದ :- ಕೃಷ್ಣಃ, ಚ, ಪಾರ್ಥೌ, ಚ, ತಥಾ, ಏಕಯಾನಂ, ಸಮಾಸ್ಥಿತಾಃ, ಧರ್ಮಜಂ, ಅಭ್ಯಗಚ್ಛನ್, ತೇಷಾಂ, ಶಂಖಧ್ವನಿಸಂಬೋಧಿತಾತ್ಮಾ, ರಾಜಾ, ಪ್ರೀತಃ, ಚ, ಅತಿತರಾಂ, ಬಭೂವ ।

ಅರ್ಥ :- ಕೃಷ್ಣಃ ಚ = ಕೃಷ್ಣನೂ, ತಥಾ = ಹಾಗೆಯೇ, ಪಾರ್ಥೌ ಚ = ಭೀಮಾರ್ಜುನರೂ, ಏಕಯಾನಂ = ಒಂದೇ ರಥವನ್ನು, ಸಮಾಸ್ಥಿತಾಃ =

ಆಶ್ರಯಿಸಿದವರಾಗಿ, **ಧರ್ಮಜಂ** = ಯುಧಿಷ್ಠಿರನನ್ನು ಕುರಿತು, **ಅಭ್ಯಗಚ್ಛನ್** = ಹೋದರು, **ತೇಷಾಂ** = ಅವರ, **ಶಂಖಧ್ವನಿ ಸಂಬೋಧಿತಾತ್ಮಾ** = ಶಂಖಧ್ವನಿಯಿಂದ ತಿಳಿಯಲ್ಪಟ್ಟ ವಿಷಯವುಳ್ಳ, **ರಾಜಾ** = ಧರ್ಮರಾಜನು, **ಅತಿತರಾಂ** = ಬಹಳವಾಗಿ, **ಪ್ರೀತಃ ಬಭೂವ** = ಸಂತುಷ್ಟನಾದನು.

**ತಾತ್ಪರ್ಯ** :- ಕೃಷ್ಣಭೀಮಾರ್ಜುನರೂ ಎಲ್ಲರೂ ಒಂದೇ ರಥದಲ್ಲಿ ಕುಳಿತು ಧರ್ಮರಾಜನಲ್ಲಿಗೆ ಬಂದರು. ಹತ್ತಿರ ಬರುವಾಗಲೇ ಶಂಖಧ್ವನಿಯನ್ನು ಮಾಡಿದರು. ಇದರಿಂದ ಧರ್ಮರಾಜನಿಗೆ ಜರಾಸಂಧ ವಧೆ ಮೊದಲಾದ ವಿಷಯ ಮನದಟ್ಟಾಯಿತು. ಹೀಗಾಗಿ ಅವನು ಬಹಳ ಸಂತೋಷಪಟ್ಟ.

**ದ್ವೈಪಾಯನೋಽಥ ಭಗವಾನಭಿಗಮ್ಯ ಪಾರ್ಥಾ-**
**ನಾಜ್ಞಾಪಯತ್ ಸಕಲಸಂಭೃತಿಸಾಧನಾಯ ।**
**ತಂ ರಾಜಸೂಯಸಹಿತಂ ಪರಮಾಶ್ವಮೇಧ-**
**ಯಜ್ಞಂ ಸಮಾದಿಶದನನ್ಯಕೃತಂ ವಿರಿಂಚಾತ್ ॥ ೧೭೬ ॥**

**ಪದಚ್ಛೇದ** :- ದ್ವೈಪಾಯನಃ, ಅಥ, ಭಗವಾನ್, ಅಭಿಗಮ್ಯ, ಪಾರ್ಥಾನ್, ಆಜ್ಞಾಪಯತ್, ಸಕಲಸಂಭೃತಿಸಾಧನಾಯ, ತಂ, ರಾಜಸೂಯಸಹಿತಂ, ಪರಂ, ಅಶ್ವಮೇಧಯಜ್ಞಂ, ಸಮಾದಿಶತ್, ಅನನ್ಯಕೃತಂ, ವಿರಿಂಚಾತ್ ।

**ಅರ್ಥ** :- **ಅಥ** = ಅನಂತರ, **ಭಗವಾನ್** = ಪೂಜ್ಯರಾದ, **ದ್ವೈಪಾಯನಃ** = ವೇದವ್ಯಾಸದೇವರು, **ಅಭಿಗಮ್ಯ** = ಒಂದು, **ಸಕಲಸಂಭೃತಿಸಾಧನಾಯ** = ಯಜ್ಞಕ್ಕೆ ಬೇಕಾದ ಸಾಮಗ್ರಿಗಳ ಸಂಪಾದನೆಗಾಗಿ, **ಪಾರ್ಥಾನ್** = ಪಾಂಡವರನ್ನು, **ಆಜ್ಞಾಪಯತ್** = ಆಜ್ಞಾಪಿಸಿದರು, **ತಂ** = ಆ, **ಪರಂ** = ಶ್ರೇಷ್ಠವಾದ, **ವಿರಿಂಚಾತ್ ಅನನ್ಯಕೃತಂ** = ಬ್ರಹ್ಮದೇವರ ಹೊರತಾಗಿ ಬೇರೆಯವರಿಂದ ಮಾಡಲ್ಪಡದಿರುವ, **ರಾಜಸೂಯಸಹಿತಂ** = ರಾಜಸೂಯಯಾಗದಿಂದ ಕೂಡಿದ, **ಅಶ್ವಮೇಧಂ** = ಅಶ್ವಮೇಧಯಾಗವನ್ನು, **ಸಮಾದಿಶತ್** = ಆದೇಶಿಸಿದರು.

**ತಾತ್ಪರ್ಯ** :- ಆಗ ಅಲ್ಲಿ ವೇದವ್ಯಾಸದೇವರು ಪ್ರತ್ಯಕ್ಷರಾಗಿ ಯಾಗದ ಎಲ್ಲ ಸಾಮಗ್ರಿಗಳನ್ನು ಸಿದ್ಧಪಡಿಸಲು ಆಜ್ಞಾಪಿಸಿದರು. ಮತ್ತು ಈ ರಾಜಸೂಯ

ಸಹಿತ ಅಶ್ವಮೇಧಯಾಗವನ್ನು ಬ್ರಹ್ಮದೇವರು ಬಿಟ್ಟು ಯಾರೂ ಮಾಡಿಲ್ಲ. ಆದುದರಿಂದ ನೀವು ಮಾಡಬೇಕು ಎಂದು ಆದೇಶ ಮಾಡಿದರು.

**ಕರ್ತಾ ಹಿ ತಸ್ಯ ಪರಮೇಷ್ಠಿಪದಂ ಪ್ರಯಾತಿ**
**ಯದ್ಯನ್ಯಸದ್ಗುಣವರೈಃ ಪರಮೇಷ್ಠಿತುಲ್ಯಃ ।**
**ಭೀಮೇ ಮಖಸ್ಯ ಫಲಮತ್ಯಧಿಕಂ ನಿಧಾತುಂ**
**ವ್ಯಾಸಃ ಕ್ರತುಂ ತಮದಿಶದ್ ಗುರುರಬ್ಜಜಸ್ಯ ॥ ೧೭೭ ॥**

**ಪದಚ್ಛೇದ :- ಕರ್ತಾ, ಹಿ, ತಸ್ಯ, ಪರಮೇಷ್ಠಿಪದಂ, ಪ್ರಯಾತಿ, ಯದಿ, ಅನ್ಯಸದ್ಗುಣವರೈಃ, ಪರಮೇಷ್ಠಿತುಲ್ಯಃ, ಭೀಮೇ, ಮಖಸ್ಯ, ಫಲಂ, ಅತ್ಯಧಿಕಂ, ನಿಧಾತುಂ, ವ್ಯಾಸಃ, ಕ್ರತುಂ, ತಂ, ಆದಿಶತ್, ಗುರುಃ, ಅಬ್ಜಜಸ್ಯ ।**

**ಅರ್ಥ :- ತಸ್ಯ** = ಈ ರಾಜಸೂಯಾಶ್ವಮೇಧಯಾಗದ, **ಕರ್ತಾ** = ಕರ್ತೃವು, **ಯದಿ** = ಒಂದು ವೇಳೆ, **ಅನ್ಯಸದ್ಗುಣವರೈ** = ಬೇರೆ ಶ್ರೇಷ್ಠ ಸದ್ಗುಣಗಳಿಂದ, **ಪರಮೇಷ್ಠಿತುಲ್ಯಃ** = ಬ್ರಹ್ಮಸಮನಾಗಿದ್ದರೆ, **ಪರಮೇಷ್ಠಿಪದಂ** = ಬ್ರಹ್ಮಪದವಿಯನ್ನು, **ಪ್ರಯಾತಿ** = ಪಡೆಯುತ್ತಾನೆ, **ಅಬ್ಜಜಸ್ಯ** = ಬ್ರಹ್ಮದೇವರಿಗೆ, **ಗುರುಃ** = ಗುರುವಾದ, **ವ್ಯಾಸಃ** = ವೇದವ್ಯಾಸರು, **ಮಖಸ್ಯ** = ಈ ಯಾಗದ, **ಫಲಂ** = ಫಲವನ್ನು, **ಭೀಮೇ** = ಭೀಮನಲ್ಲಿ, **ಅತ್ಯಧಿಕಂ** = ಬಹಳ ಹೆಚ್ಚಿನ ಭಾಗವನ್ನು, **ನಿಧಾತುಂ** = ಇರಿಸಲು, **ತಂ ಕ್ರತುಂ** = ಈ ಯಾಗವನ್ನು, **ಆದಿಶತ್** = ಆದೇಶಿಸಿದರು.

**ತಾತ್ಪರ್ಯ :-** ಈ ಯಾಗವನ್ನು ಮಾಡುವವನು, ಬ್ರಹ್ಮಪದವಿಗೆ ಯೋಗ್ಯವಾದ ಸದ್ಗುಣಗಳುಳ್ಳವನಾದರೆ, ಬ್ರಹ್ಮಪದವಿ ಪಡೆಯುತ್ತಾನೆ. ಅದೇ ಇದರ ಫಲ. ಹೀಗಾಗಿ ಬ್ರಹ್ಮದೇವರಿಗೂ ಗುರುಗಳಾದ ವೇದವ್ಯಾಸರು ಈ ಯಾಗದ ಹೆಚ್ಚಿನ ಫಲವನ್ನು ಬ್ರಹ್ಮಪದವಿಗೆ ಯೋಗ್ಯನಾದ ಭೀಮನಲ್ಲಿರಿಸಲು ಯಾಗ ಮಾಡಲು ಆದೇಶಿಸಿದರು.

**ಅಸಾಧಾರಣಹೇತುರ್ಯಃ ಕರ್ಮಣೋ ಯಸ್ಯ ಚೇತನಃ ।**
**ಸ ಏವ ತತ್ಫಲಂ ಪೂರ್ಣಂ ಭುಂಕ್ತೇऽನ್ಯೋऽಲ್ಪಮಿತಿ ಸ್ಥಿತಿಃ ॥ ೧೭೮ ॥**

**ಪದಚ್ಛೇದ :- ಅಸಾಧಾರಣಹೇತುಃ, ಯಃ, ಕರ್ಮಣಃ, ಯಸ್ಯ, ಚೇತನಃ, ಸಃ, ಏವ, ತತ್ಫಲಂ, ಪೂರ್ಣಂ, ಭುಂಕ್ತೇ, ಅನ್ಯಃ, ಅಲ್ಪಂ, ಇತಿ, ಸ್ಥಿತಿಃ ।**

ಅರ್ಥ :- ಯಸ್ಯ = ಯಾವ, ಕರ್ಮಣಃ = ಕರ್ಮಕ್ಕೆ, ಯಃ = ಯಾವ, ಚೇತನಃ = ಜೀವಿಯು, ಅಸಾಧಾರಣ ಹೇತುಃ = ಅಸಾಧಾರಣ ಕಾರಣನೋ, ಸಃ ಏವ = ಅವನೇ, ತತ್ಫಲಂ = ಆ ಕರ್ಮದ ಫಲವನ್ನು, ಪೂರ್ಣಂ = ಪರಿಪೂರ್ಣವಾಗಿ, ಭುಂಕ್ತೇ = ಅನುಭವಿಸುತ್ತಾನೆ, ಅನ್ಯಃ = ಬೇರೆಯವರು, ಅಲ್ಪಂ = ಅಲ್ಪಫಲವನ್ನು, ಇತಿ = ಎಂಬುದಾಗಿ, ಸ್ಥಿತಿ = ವ್ಯವಸ್ಥೆಯು.

ತಾತ್ಪರ್ಯ :- ಯಾವ ಕರ್ಮಕ್ಕೆ ಯಾರು ಮುಖ್ಯ ಕರ್ತೃವೋ ಅವನೇ ಆ ಕರ್ಮದ ಪೂರ್ಣ ಫಲವನ್ನು ಅನುಭವಿಸುವವನು. ಇತರರು ಅಲ್ಪ ಸ್ವಲ್ಪ ಸಹಾಯ ಮಾಡಿರುತ್ತಾರೆ. ಅವರಿಗೆ ಫಲವೂ ಅಲ್ಪ ಎಂದು ನಿರ್ಣಯವಿದೆ.

ವಿನಾ ವಿಷ್ಣುಂ ನಿರ್ಣಯೋऽಯಂ ಸ ಹಿ ಕರ್ಮಫಲೋಜ್ಝಿತಃ ।
ಹೇತವೋऽಪಿ ಹಿ ಪಾಪಸ್ಯ ನ ಪ್ರಾಯಃ ಫಲಭಾಗಿನಃ ।
ದೇವಾಃ ಪುಣ್ಯಸ್ಯ ದೈತ್ಯಾಶ್ಚ ಮಾನುಷಾಸ್ತದ್ದ್ವಿಭಾಗಿನಃ ॥ ೧೭೯ ॥

ಪದಚ್ಛೇದ :- ವಿನಾ, ವಿಷ್ಣುಂ, ನಿರ್ಣಯಃ, ಅಯಂ, ಸಃ, ಹಿ, ಕರ್ಮಫಲೋಜ್ಝಿತಃ, ಹೇತವಃ, ಅಪಿ, ಹಿ, ಪಾಪಸ್ಯ, ನ, ಪ್ರಾಯಃ, ಫಲಭಾಗಿನಃ, ದೇವಾಃ, ಪುಣ್ಯಸ್ಯ, ದೈತ್ಯಾಃ, ಚ, ಮಾನುಷಾಃ, ತದ್ದ್ವಿಭಾಗಿನಃ ।

ಅರ್ಥ :- ಅಯಂ = ಹಿಂದೆ ಹೇಳಿದ ಈ, ನಿರ್ಣಯಃ = ನಿರ್ಣಯವು, ವಿನಾವಿಷ್ಣುಂ = ಶ್ರೀಹರಿಯನ್ನು ಹೊರತುಪಡಿಸಿ, ಸಃ = ಆ ಶ್ರೀಹರಿಯು, ಕರ್ಮಫಲೋಜ್ಝಿತಃ ಹಿ = ಕರ್ಮಫಲರಹಿತನಷ್ಟೆ, ಪಾಪಸ್ಯ = ಪಾಪಕರ್ಮಕ್ಕೆ, ಹೇತವಃ ಅಪಿ = ಕಾರಣರಾಗಿದ್ದರೂ, ದೇವಾಃ = ದೇವತೆಗಳು, ಪ್ರಾಯಃ = ಹೆಚ್ಚಾಗಿ, ನ ಫಲಭಾಗಿನಃ ಹಿ = ಪಾಪ ಫಲವನ್ನು ಅನುಭವಿಸುವವರು ಅಲ್ಲವಷ್ಟೆ, ಚ = ಮತ್ತು, ದೈತ್ಯಾಃ = ದೈತ್ಯರು, ಪುಣ್ಯಸ್ಯ = ಪುಣ್ಯಫಲವನ್ನು ಅನುಭವಿಸುವುದಿಲ್ಲ, ಮಾನುಷಾಃ = ಮನುಷ್ಯರು, ತದ್‌ದ್ವಿಭಾಗಿನಃ = ಪುಣ್ಯ ಮತ್ತು ಪಾಪ ಎರಡರ ಫಲವನ್ನುಣ್ಣುವವರು.

ತಾತ್ಪರ್ಯ :- ಎಲ್ಲಾ ಕರ್ಮಕ್ಕೂ ಮುಖ್ಯ ಕಾರಣ ಶ್ರೀಹರಿ. ಆದರೂ ಅವನು ಆಯಾ ಕರ್ಮದ ಫಲವನ್ನು ಅನುಭವಿಸುವುದಿಲ್ಲ. ಏಕೆಂದರೆ ಅವನು ಕರ್ಮಫಲ ರಹಿತ. ಅವನಿಗೆ ಬೇಕಿಲ್ಲ. ಅವನು ಪೂರ್ಣ. ಹಾಗೆಯೇ ದೇವತೆಗಳು ಪಾಪಕರ್ಮಕ್ಕೆ ಕಾರಣರಾದರೂ ಅದರ ಫಲ ಅವರಿಗೆ ಇಲ್ಲ.

ದೈತ್ಯರಿಗೆ ಪುಣ್ಯದ ಫಲವು ಇಲ್ಲ. ಇವರೆಡನ್ನು ಅನುಭವಿಸುವವರು ಮನುಷ್ಯರು ಮಾತ್ರ.

**ಅಸಾಧಾರಣಹೇತುಶ್ಚ ಭೀಮ ಏವ ಪ್ರಕೀರ್ತಿತಃ ।**
**ಯಜ್ಞಸ್ಯಾಸ್ಯ ಜರಾಸಂಧವಧಾತ್ ಕರ್ಣಜಯಾದಪಿ ॥ ೧೮೦ ॥**

**ಜಯಾಚ್ಚ ಕೀಚಕಾದೀನಾಮನ್ಯೈರ್ಜೇತುಮಶಕ್ಯತಃ ।**
**ದ್ವಿತೀಯಃ ಫಲ್ಗುನಶ್ಚೈವ ತೃತೀಯಸ್ತು ಯುಧಿಷ್ಠಿರಃ ॥ ೧೮೧ ॥**

**ಪದಚ್ಛೇದ :-** ಅಸಾಧಾರಣಹೇತುಃ, ಚ, ಭೀಮಃ, ಏವ, ಪ್ರಕೀರ್ತಿತಃ, ಯಜ್ಞಸ್ಯ, ಅಸ್ಯ, ಜರಾಸಂಧವಧಾತ್, ಕರ್ಣಜಯಾತ್, ಅಪಿ, ಜಯಾತ್, ಚ, ಕೀಚಕಾದೀನಾಂ, ಅನ್ಯೈಃ, ಜೇತುಂ, ಅಶಕ್ಯತಃ, ದ್ವಿತೀಯಃ, ಫಲ್ಗುನಃ, ಚ, ಏವ, ತೃತೀಯಃ, ತು, ಯುಧಿಷ್ಠಿರಃ ।

**ಅರ್ಥ :-** **ಜರಾಸಂಧವಧಾತ್** = ಜರಾಸಂಧನ ಸಂಹಾರದಿಂದ, **ಚ** = ಮತ್ತು, **ಅನ್ಯೈಃ** = ಬೇರೆಯವರಿಂದ, **ಜೇತುಂ** = ಗೆಲ್ಲಲು, **ಅಶಕ್ಯತಃ** = ಅಶಕ್ಯರಾದ, **ಕೀಚಕಾದೀನಾಂ** = ಕೀಚಕನೇ ಮೊದಲಾದವರ, **ಜಯಾತ್** = ಗೆಲ್ಲುವಿಕೆಯಿಂದ, **ಕರ್ಣಜಯಾತ್ ಅಪಿ** = ಕರ್ಣನನ್ನು ಗೆದ್ದಿದ್ದರಿಂದಲೂ ಕೂಡ, **ಅಸ್ಯ** = ಈ, **ಯಜ್ಞಸ್ಯ** = ರಾಜಸೂಯಾಶ್ವಮೇಧಯಾಗಕ್ಕೆ, **ಅಸಾಧಾರಣ ಹೇತುಃ** = ಮುಖ್ಯ ಕಾರಣನು, **ಭೀಮಃ ಏವ** = ಭೀಮನೇ, **ಪ್ರಕೀರ್ತಿತಃ** = ಹೇಳಲ್ಪಟ್ಟಿದ್ದಾನೆ, **ಚ** = ಮತ್ತು, **ಫಲ್ಗುನಃ ಏವ** = ಅರ್ಜುನನೇ, **ದ್ವಿತೀಯಃ** = ಎರಡನೆಯವ, **ಯುಧಿಷ್ಠಿರಃ ತು** = ಧರ್ಮರಾಜನಾದರೂ, **ತೃತೀಯಃ** = ಮೂರನೆಯವನು.

**ತಾತ್ಪರ್ಯ :-** ಜರಾಸಂಧನ ಹತ್ಯೆಯನ್ನು ಭೀಮನೇ ಮಾಡಿದ್ದಾನೆ. ಬೇರೆಯವರಿಗೆ ಆಗದ ಕೀಚಕ, ಕರ್ಣಾದಿಗಳ ಜಯವನ್ನು ಪಡೆದಿದ್ದಾನೆ. ಹೀಗಾಗಿ ಈ ಯಾಗಕ್ಕೆ ಭೀಮನೇ ಮುಖ್ಯ ಕಾರಣ ಎರಡನೆಯವ ಅರ್ಜುನ ಮೂರನೆಯವ ಯುಧಿಷ್ಠಿರ.

**ತಸ್ಮಾದ್ ಬ್ರಹ್ಮಪದಾವಾಪ್ತ್ಯೈ ವ್ಯಾಸೋ ಭೀಮಸ್ಯ ತಂ ಕ್ರತುಮ್ ।**
**ಅನನ್ಯಕೃತಮಾದಿಶ್ಯ ದಿಶಾಂ ವಿಜಯಮಾದಿಶತ್ ॥ ೧೮೨ ॥**

ಪದಚ್ಛೇದ :- ತಸ್ಮಾತ್, ಬ್ರಹ್ಮಪದಾವಾಪ್ತ್ಯೈ, ವ್ಯಾಸಃ, ಭೀಮಸ್ಯ, ತಂ, ಕ್ರತುಂ, ಅನನ್ಯಕೃತಂ, ಆದಿಶ್ಯ, ದಿಶಾಂ, ವಿಜಯಂ, ಆದಿಶತ್ ।

ಅರ್ಥ :- ತಸ್ಮಾತ್ = ಆದುದರಿಂದ, ಭೀಮಸ್ಯ = ಭೀಮನಿಗೆ, ಬ್ರಹ್ಮಪದಾವಾಪ್ತ್ಯೈ = ಬ್ರಹ್ಮ ಪದವಿಯ ಪ್ರಾಪ್ತಿಗಾಗಿ, ವ್ಯಾಸಃ = ವೇದವ್ಯಾಸ ದೇವರು, ಅನನ್ಯ ಕೃತಂ = ಬೇರೊಬ್ಬರು ಮಾಡದ, ತಂ = ಆ, ಕ್ರತುಂ = ಯಾಗವನ್ನು, ಆದಿಶ್ಯ = ಮಾಡಲು ಆಜ್ಞೆ ಮಾಡಿ, ದಿಶಾಂ ವಿಜಯಂ = ದಿಗ್ವಿಜಯವನ್ನು, ಆದಿಶಿತ್ = ಆದೇಶಿಸಿದರು.

ತಾತ್ಪರ್ಯ :- ಭೀಮನೇ ಮುಖ್ಯ ಕಾರಣ ಆದುದರಿಂದ ಅವನಿಗೆ ಬ್ರಹ್ಮ ಪದವಿಗಾಗಿ ಈವರೆಗೆ ಯಾರೂ ಮಾಡದ ಈ ಯಾಗವನ್ನು ಮಾಡಲು ಆದೇಶಿಸುವುದರ ಜೊತೆಗೆ ದಿಗ್ವಿಜಯವನ್ನು ಮಾಡಿ ಎಂದೂ ಆದೇಶಿಸಿದರು ಶ್ರೀ ವೇದವ್ಯಾಸದೇವರು.

ಅಥಾಽಬ್ರವೀದ್ ಧನಂಜಯೋ ಧನುರ್ಧ್ವಜೋ ರಥೋ ವರಃ ।
ಮಮಾಸ್ತಿ ತದ್ದಿಶಾಂ ಜಯೋ ಮಮೈವ ವಾಂಛಿತಃ ಪ್ರಭೋ ॥ ೧೮೩ ॥

ಪದಚ್ಛೇದ :- ಅಥ, ಅಬ್ರವೀತ್, ಧನಂಜಯಃ, ಧನುರ್ಧ್ವಜಃ, ರಥಃ, ವರಃ, ಮನು, ಅಸ್ತಿ, ತದ್ದಿಶಾಂ, ಜಯ, ಮಮ, ಏವ, ವಾಂಛಿತಃ, ಪ್ರಭೋ ।

ಅರ್ಥ :- ಅಥ = ಅನಂತರ, ಧನಂಜಯಃ = ಅರ್ಜುನನು, ಧನುರ್ಧ್ವಜಃ = ಶ್ರೇಷ್ಠವಾದ ಧನಸ್ಸು, ವರಃ = ಶ್ರೇಷ್ಠವಾದ, ರಥಃ = ರಥವು, ಮಮ = ನನಗೆ, ಅಸ್ತಿ = ಇದೆ, ಪ್ರಭೋ = ಶ್ರೀಕೃಷ್ಣನೇ, ಮಮ = ನನಗೆ, ತದ್ದಿಶಾಂ = ಎಲ್ಲಾ ದಿಕ್ಕುಗಳ, ಜಯಃ = ಜಯವು, ವಾಂಛಿತಃ ಏವ = ಇಷ್ಟವೇ ಆಗಿದೆ ಎಂದು, ಅಬ್ರವೀತ್ = ಹೇಳಿದನು.

ತಾತ್ಪರ್ಯ :- ದಿಗ್ವಿಜಯ ಮಾಡಿ ಅಶ್ವಮೇಧಯಾಗ ಮಾಡಬೇಕೆಂದು ವ್ಯಾಸರು ಆದೇಶಿಸಿದಾಗ ಅರ್ಜುನ ತನ್ನಲ್ಲಿ ಒಳ್ಳೆಯ ಧನಸ್ಸು ಇದೆ ಶ್ರೇಷ್ಠ ರಥವಿದೆ. ದಿಗ್ವಿಜಯ ಮಾಡುವ ಬಯಕೆಯೂ ಇದೆ ಎಂದು ಹೇಳಿದ.

ಇತೀರಿತೋಽಖಿಲಪ್ರಭುರ್ಜಗಾದ ಸತ್ಯಮಸ್ತಿ ತೇ ।
ಸಮಸ್ತಸಾಧನೋನ್ನತಿರ್ಮಹಚ್ಚ ವೀರ್ಯಮಸ್ತಿ ತೇ ॥ ೧೮೪ ॥

**ಪದಚ್ಛೇದ** :- ಇತಿ, ಈರಿತಃ, ಅಖಿಲಪ್ರಭುಃ, ಜಗಾದ, ಸತ್ಯಂ, ಅಸ್ತಿ, ತೇ, ಸಮಸ್ತ ಸಾಧನೋನ್ನತಿಃ, ಮಹತ್, ಚ, ವೀರ್ಯಂ, ಅಸ್ತಿ, ತೇ ।

**ಅರ್ಥ** :- **ಇತಿ** = ಈ ರೀತಿಯಾಗಿ, **ಈರಿತಃ** = ಹೇಳಲ್ಪಟ್ಟ, **ಅಖಿಲಪ್ರಭುಃ** = ಸರ್ವಸಮರ್ಥಶ್ರೀಕೃಷ್ಣ, **ಜಗಾದ** = ಹೇಳಿದನು, **ತೇ** = ನಿನಗೆ, **ಸಮಸ್ತಸಾಧನೋನ್ನತಿಃ** = ಧನಸ್ಸು, ರಥ ಮೊದಲಾದ ಯುದ್ಧ ಸಾಧನಗಳ ಉನ್ನತಿಯು, **ಅಸ್ತಿ** = ಇದೆ, **ಚ** = ಮತ್ತು, **ಮಹತ್** = ಬಹಳ, **ವೀರ್ಯಂ** = ಶಕ್ತಿಯು, **ಅಸ್ತಿ** = ಇದೆ.

**ತಾತ್ಪರ್ಯ** :- ಆಗ ಶ್ರೀಕೃಷ್ಣ ಮುಂದಿನ ಮಾತುಗಳನ್ನು ಆಡುತ್ತಾನೆ. ಅರ್ಜುನ ನೀನು ಹಿಂದೆ ಹೇಳಿದ ರೀತಿ ನಿನಗೆ ಧನಸ್ಸು, ಬತ್ತಳಿಕೆ, ಅಸ್ತ್ರ-ಶಸ್ತ್ರ ರಥ ಮುಂತಾದ ಯುದ್ಧ ಸಾಮಗ್ರಿಗಳು ಉತ್ತಮವಾಗಿಯೇ ಇವೆ ಅದರಂತೆ ನಿನಗೆ ಶಕ್ತಿಯೂ ಇದೆ.

**ತಥಾಽಪಿ ಕೀಚಕಾದಯೋ ವೃಕೋದರಾದೃತೇ ವಶಮ್ ।**
**ನ ಯಾಂತಿ ನಾಪಿ ತೇ ವಶಂ ಪ್ರಯಾತಿ ಕರ್ಣ ಏವ ಚ ॥ ೧೮೫ ॥**

**ಪದಚ್ಛೇದ** :- ತಥಾ, ಅಪಿ, ಕೀಚಕಾದಯಃ, ವೃಕೋದರಾತ್, ಋತೇ, ವಶಂ, ನ, ಯಾಂತಿ, ನ, ಅಪಿ, ತೇ, ವಶಂ, ಪ್ರಯಾತಿ, ಕರ್ಣಃ, ಏವ, ಚ ।

**ಅರ್ಥ** :- **ತಥಾಪಿ** = ಹಾಗಿದ್ದರೂ, **ವೃಕೋದರಾತ್ ಋತೇ** = ಭೀಮನ ಹೊರತಾಗಿ, **ಕೀಚಕಾದಯಃ** = ಕೀಚಕನ ರೀತಿಯ ಶಿವವರ ರಕ್ಷಿತರಾದ ಶಿಶುಪಾಲ ಪೌಂಡ್ರಕಾದಿಗಳು, **ತೇ** = ನಿನ್ನ, **ವಶಂ** = ಅಧೀನರು, **ನ ಯಾಂತಿ** = ಆಗಲಾರರು, **ಕರ್ಣಃ ಏವ ಚ** = ಕರ್ಣನೂ ಕೂಡ, **ತೇ** = ನಿನ್ನ, **ವಶಂ ನ ಪ್ರಯಾತಿ** = ವಶನಾಗುವುದಿಲ್ಲ.

**ತಾತ್ಪರ್ಯ** :- ನೀನು ಎಷ್ಟೇ ಸಂಪನ್ನನಾಗಿದ್ದರೂ ಶಿವ ವರದಿಂದ ಕೂಡಿದ ಕೀಚಕ, ಪೌಂಡ್ರಕ, ಶಿಶುಪಾಲ ಇಂತಹವರನ್ನು ನೀನು ಸೋಲಿಸಲು ಸಾಧ್ಯವಿಲ್ಲ. ಕರ್ಣನೂ ಕೂಡ ನಿನ್ನ ವಶನಾಗುವುದಿಲ್ಲ.

**ಬಲಾಧಿಕೋಽಸಿ ಕರ್ಣತಸ್ತಥಾಽಪಿ ಸಾಮ್ಯತಃ ಕರಮ್ ।**
**ದದಾತಿ ತೇ ಹ್ಯತಿಸ್ಪೃಧಾ ನ ವಧ್ಯ ಏಷ ತೇಽದ್ಯ ಚ ।**

ಸವರ್ಮಕುಂಡಲತ್ವತೋ ನ ವಧ್ಯ ಏಷ ಯತ್ ತ್ವಯಾ ॥ ೧೮೬ ॥

ಪದಚ್ಛೇದ :- ಬಲಾಧಿಕಃ, ಅಸಿ, ಕರ್ಣತಃ, ತಥಾ, ಅಪಿ, ನ, ಅಮೃತಃ, ಕರಂ, ದದಾತಿ, ತೇ, ಹಿ, ಅತಿಸ್ಪೃಧಾ, ನ, ವಧ್ಯಃ, ಏಷಃ, ತೇ, ಅದ್ಯ, ಚ, ಸವರ್ಮಕುಂಡಲತ್ವತಃ, ನ, ವಧ್ಯಃ, ಏಷಃ, ಯತ್, ತ್ವಯಾ।

ಅರ್ಥ :- ಕರ್ಣತಃ = ಕರ್ಣನಿಗಿಂತಲೂ, ಬಲಾಧಿಕಃ = ಹೆಚ್ಚು ಬಲವುಳ್ಳವನು, ಅಸಿ = ಆಗಿರುವಿ, ತಥಾಪಿ = ಹಾಗಿದ್ದರೂ, ಏಷಃ = ಈ ಕರ್ಣನು, ಅಮೃತಃ = ಸಾಯದೇ, ತೇ = ನಿನಗೆ, ಕರಂ = ಕಪ್ಪಕಾಣಿಕೆಯನ್ನು, ನ ದದಾತಿ ಹಿ = ಕೊಡುವುದಿಲ್ಲವಷ್ಟೇ, ಯತ್ = ಯಾವ ಕಾರಣದಿಂದ, ಅದ್ಯ = ಈಗ, ಏಷಃ = ಈ ಕರ್ಣನು, ಸ ವರ್ಮಕುಂಡಲತ್ವತಃ = ಕವಚ, ಕುಂಡಲಗಳಿಂದ ಕೂಡಿದವನಾದ್ದರಿಂದ, ತ್ವಯಾ = ನಿನ್ನಿಂದ, ವಧ್ಯಃ = ಕೊಲ್ಲಲು ಶಕ್ಯನಲ್ಲವೋ ಆದುದರಿಂದ, ಅತಿಸ್ಪೃಧಾ = ಅತಿ ಸ್ಪರ್ಧೆಯಿಂದ, ತೇ = ನಿನಗೆ, ಏಷಃ = ಈ ಕರ್ಣನು, ನ ವಧ್ಯಃ = ಕೊಲ್ಲಲು ಯೋಗ್ಯನಲ್ಲ.

ತಾತ್ಪರ್ಯ :- ಅರ್ಜುನ, ಕರ್ಣನಿಗಿಂತ ನೀನೇ ಬಲಶಾಲಿ ಹಾಗಿದ್ದರೂ, ಅವನು ಸಾಯದೇ ಸೋತ ಮಾತ್ರಕ್ಕೆ ನಿನಗೆ ಕಪ್ಪ ಕೊಡುವುದಿಲ್ಲ. ಆದರೇ ಈಗ ಅವನನ್ನು ನೀನು ಕೊಲ್ಲಲು ಆಗುವುದಿಲ್ಲ. ಏಕೆಂದರೆ ಕರ್ಣಕುಂಡಲ ಧಾರಿಯಾಗಿದ್ದಾನೆ ಆದ್ದರಿಂದ ಅವಧ್ಯ.

ತತೋ ವೃಕೋದರೋ ದಿಶಂ ಪ್ರಯಾತು ತೇ ಪಿತುಃ ಪ್ರಿಯಾಮ್ ।
ಜೀವಗ್ರಾಹಭಯಾತ್ ಕರ್ಣೋ ದದಾತಿ ಕರಮಂಜಸಾ ॥ ೧೮೭ ॥

ಭೀಮಾಯ ನಾತ್ರ ಸಂದೇಹೋ ಜಿತೋಽನೇನ ಚ ಸಂಯುಗೇ ॥೧೮೮॥

ಪದಚ್ಛೇದ :- ತತಃ, ವೃಕೋದರಃ, ದಿಶಂ, ಪ್ರಯಾತು, ತೇ, ಪಿತುಃ, ಪ್ರಿಯಾಂ, ಜೀವಗ್ರಾಹಭಯಾತ್, ಕರ್ಣಃ, ದದಾತಿ, ಕರಂ, ಅಂಜಸಾ, ಭೀಮಾಯ, ನ, ಅತ್ರ, ಸಂದೇಹಃ, ಜಿತಃ, ಅನೇನ, ಚ, ಸಂಯುಗೇ।

ಅರ್ಥ :- ತತಃ = ಆದುದರಿಂದ, ವೃಕೋದರಃ = ಭೀಮಸೇನನು, ತೇ = ನಿನ್ನ, ಪಿತುಃ = ತಂದೆಯಾದ ಇಂದ್ರನಿಗೆ, ಪ್ರಿಯಾಂ ದಿಶಂ = ಪ್ರಿಯವಾದ

ಪೂರ್ವದಿಕ್ಕನ್ನು, **ಪ್ರಯಾತು** = ಹೋಗಲಿ, **ಅನೇನ ಚ** = ಈ ಭೀಮನಿಂದಲಾದರೂ, **ಸಂಯುಗೇ** = ಯುದ್ಧದಲ್ಲಿ, **ಜಿತಃ** = ಸೋತಿದ್ದ, **ಕರ್ಣಃ** = ಕರ್ಣನು, **ಜೀವಗ್ರಾಹಭಯಾತ್** = ಜೀವಸಹಿತ ಸೆರೆ ಹಿಡಿಯುವ ಭಯದಿಂದ, **ಭೀಮಾಯ** = ಭೀಮನಿಗೆ, **ಕರಂ** = ಕಪ್ಪವನ್ನು, **ಅಂಜಸಾ** = ಚೆನ್ನಾಗಿ, **ದದಾತಿ** = ಕೊಡುತ್ತಾನೆ, **ಅತ್ರ** = ಈ ವಿಷಯದಲ್ಲಿ, **ನ ಸಂದೇಹಃ** = ಸಂದೇಹವಿಲ್ಲ.

**ತಾತ್ಪರ್ಯ** :- ಅರ್ಜುನ ಈ ಕಾರಣದಿಂದಾಗಿ ಪೂರ್ವದಿಕ್ಕಿಗೆ ಭೀಮನೇ ಹೋಗಲಿ. ಭೀಮನಿಂದ ಹಿಂದೆ ಯುದ್ಧದಲ್ಲಿ ಕರ್ಣ ಸೋತಿದ್ದ. ಆದ್ದರಿಂದ ಈಗ ಜೀವ ಸಹಿತ ಸೆರೆ ಹಿಡಿಯಬಹುದು ಎಂಬ ಭಯದಿಂದ ಕರ್ಣ ಅವನಿಗೆ ಕಪ್ಪ ಕೊಟ್ಟೇ ಕೊಡುತ್ತಾನೆ.

**ಅಜೇಯೌ ಶರ್ವವಚನಾದ್ ರಣೇ ಕೀಚಕಪೌಂಡ್ರಕೌ ।**
**ವಶಂ ಪ್ರಯಾತೋ ಭೀಮಸ್ಯ ತಥಾಽವಧ್ಯೋಽಪಿ ಚೇದಿಪಃ ॥ ೧೮೯ ॥**

**ಪದಚ್ಛೇದ** :- **ಅಜೇಯೌ, ಶರ್ವವಚನಾತ್, ರಣೇ, ಕೀಚಕಪೌಂಡ್ರಕೌ, ವಶಂ, ಪ್ರಯಾತಃ, ಭೀಮಸ್ಯ, ತಥಾ, ಅವಧ್ಯಃ, ಅಪಿ, ಚೇದಿಪಃ ।**

**ಅರ್ಥ** :- **ಶರ್ವವಚನಾತ್** = ರುದ್ರದೇವರ ವರದಿಂದ, **ರಣೇ** = ಯುದ್ಧದಲ್ಲಿ, **ಅಜೇಯೌ** = ಅಜೇಯರಾದ, **ಕೀಚಕಪೌಂಡ್ರಕೌ** = ಕೀಚಕ ಮತ್ತು ಪೌಂಡ್ರಕರು, **ಭೀಮಸ್ಯ** = ಭೀಮನ, **ವಶಂ** = ವಶವನ್ನು, **ಪ್ರಯಾತಃ** = ಹೊಂದುತ್ತಾರೆ, **ತಥಾ** = ಹಾಗೆಯೇ, **ಅವಧ್ಯಃ** = ಅವಧ್ಯನಾದ, **ಚೇದಿಪಃ ಅಪಿ** = ಶಿಶುಪಾಲನೂ ಕೂಡ (ವಶನಾಗುತ್ತಾನೆ).

**ತಾತ್ಪರ್ಯ** :- ಪೌಂಡ್ರಕ ಮತ್ತು ಕೀಚಕರು ರುದ್ರದೇವರ ವರದಿಂದ ಅಜೇಯರಾಗಿದ್ದಾರೆ ಅದರಂತೆ ಶಿಶುಪಾಲ ಅವಧ್ಯನಾಗಿದ್ದಾನೆ ಹಾಗಿದ್ದರೂ ಇವರೆಲ್ಲರೂ ಭೀಮನ ವಶರಾಗುತ್ತಾರೆ.

**ಜೀವಗ್ರಾಹಭಯಂ ಹ್ಯೇಷಾಂ ಭೀಮಾನ್ಮಾಗಧಪಾತನಾತ್ ।**
**ತಸ್ಮಾತ್ ಕರಂ ಪ್ರಯಚ್ಛಂತಿ ಜಿತಾ ವಾ ಪೂರ್ವಮೇವ ವಾ ॥ ೧೯೦ ॥**

ಪದಚ್ಛೇದ :- ಜೀವಗ್ರಾಹಭಯಂ, ಹಿ, ಏಷಾಂ, ಭೀಮಾತ್, ಮಾಗಧಪಾತನಾತ್, ತಸ್ಮಾತ್, ಕರಂ, ಪ್ರಯಚ್ಛಂತಿ, ಜಿತಾಃ, ವಾ, ಪೂರ್ವಂ, ಏವ, ವಾ ।

**ಅರ್ಥ** :- **ಮಾಗಧಪಾತನಾತ್** = ಜರಾಸಂಧ ವಧೆಯಿಂದಾಗಿ, **ಏಷಾಂ** = ಈ ಕೀಚಕಾದಿಗಳಿಗೆ, **ಭೀಮಾತ್** = ಭೀಮನಿಂದ, **ಜೀವಗ್ರಾಹಭಯಂ** = ಜೀವಂತ ಸೆರೆಹಿಡಿಯುವ ಭಯವಷ್ಟೇ, **ತಸ್ಮಾತ್** = ಆದುದರಿಂದ, **ಜಿತಾಃ** = ಸೋತು, **ವಾ** = ಅಥವಾ, **ಪೂರ್ವಮೇವ ವಾ** = ಮೊದಲೇ, **ಕರಂ** = ಕಪ್ಪವನ್ನು, **ಪ್ರಯಚ್ಛಂತಿ** = ಕೊಡುತ್ತಾರೆ.

**ತಾತ್ಪರ್ಯ** :- ಜರಾಸಂಧನನ್ನು ಭೀಮ ಕೊಂದಿದ್ದರಿಂದ ಭೀಮನಿಂದ ಕೀಚಕಾದಿ ಎಲ್ಲರಿಗೂ ಭಯವಿದೆ. ಆದುದರಿಂದ ಸೋತು ಅಥವಾ ಯುದ್ಧಕ್ಕೆ ಮೊದಲೇ ಕಾಣಿಕೆಯನ್ನು ಒಪ್ಪಿಸುತ್ತಾರೆ.

**ಪ್ರಯಾಹಿ ಚ ತ್ವಂ ಧನದಪ್ರಪಾಲಿತಾಂ**
**ದಿಶಂ ದ್ವೀಪಾನ್ ಸಪ್ತ ಚಾಶೇಷದಿಕ್ಷು ।**
**ನಾಗಾಂಶ್ಚ ದೈತ್ಯಾಂಶ್ಚ ತಥಾಽಧರಸ್ಥಾನ್**
**ವಿಜಿತ್ಯ ಶೀಘ್ರಂ ಪುನರೇಹಿ ಚಾತ್ರ ॥ ೧೯೧ ॥**

ಪದಚ್ಛೇದ :- ಪ್ರಯಾಹಿ, ಚ, ತ್ವಂ, ಧನದ ಪ್ರಪಾಲಿತಾಂ, ದಿಶಂ, ದ್ವೀಪಾನ್, ಸಪ್ತ, ಚ, ಅಶೇಷದಿಕ್ಷು, ನಾಗಾನ್, ಚ, ದೈತ್ಯಾನ್, ಚ, ತಥಾ, ಅಧರಸ್ಥಾನ್, ವಿಜಿತ್ಯ, ಶೀಘ್ರಂ, ಪುನಃ, ಏಹಿ, ಚ, ಅತ್ರ ।

**ಅರ್ಥ** :- **ತ್ವಂ ಚ** = ನೀನಾದರೂ, **ಧನದಪ್ರಪಾಲಿತಾಂ** = ಕುಬೇರದಿಂದ ರಕ್ಷಿತವಾದ, **ದಿಶಂ** = ಉತ್ತರ ದಿಕ್ಕನ್ನು ಕುರಿತು, **ಪ್ರಯಾಹಿ** = ಹೋಗು, **ಚ** = ಮತ್ತು, **ಅಶೇಷದಿಕ್ಷು** = ಎಲ್ಲಾ ದಿಕ್ಕುಗಳಲ್ಲಿ, **ಸಪ್ತದ್ವೀಪಾನ್** = ಏಳು ದ್ವೀಪಗಳನ್ನು, **ಚ** = ಮತ್ತು, **ನಾಗಾನ್** = ನಾಗಗಳನ್ನು, **ದೈತ್ಯಾನ್ ಚ** = ದೈತ್ಯರನ್ನೂ ಕೂಡ, **ತಥಾ** = ಹಾಗೆಯೇ, **ಅಧರಸ್ಥಾನ್** = ಕೆಳಲೋಕದಲ್ಲಿರುವವರನ್ನು, **ವಿಜಿತ್ಯ** = ಗೆದ್ದು, **ಶೀಘ್ರಂ** = ಕೂಡಲೇ, **ಪುನಃ** = ಮತ್ತೆ, **ಅತ್ರ** = ಇಲ್ಲಿಗೆ, **ಏಹಿ** = ಬಾ ।

ತಾತ್ಪರ್ಯ :- ಅರ್ಜುನ, ನೀನು ಉತ್ತರ ದಿಕ್ಕಿಗೆ ಹೋಗು. ಎಲ್ಲ ದಿಕ್ಕುಗಳಲ್ಲಿರುವ ಸಪ್ತದ್ವೀಪಗಳನ್ನು ಗೆಲ್ಲು. ಹಾಗೆ ನಾಗರನ್ನು ದೈತ್ಯರನ್ನು ಕೆಳಲೋಕಗಳನ್ನೂ ಕೂಡ ಗೆದ್ದು ಬೇಗ ಬಾ.

**ರಥೋ ಹಿ ದಿವ್ಯೋಽಂಬರಗಸ್ತವಾಸ್ತಿ**
**ದಿವ್ಯಾನಿ ಚಾಸ್ತ್ರಾಣಿ ಧನುಶ್ಚ ದಿವ್ಯಮ್ ।**
**ಯೇಽನ್ಯೇ ಚ ಬಾಣಪ್ರಮುಖಾ ಅಜೇಯಾಃ**
**ಶರ್ವಾಶ್ರಯಾಸ್ತಾನಪಿ ಭೀಮ ಏತು ॥ ೧೯೨ ॥**

**ಪದಚ್ಛೇದ** :- ರಥಃ, ಹಿ, ದಿವ್ಯಃ, ಅಂಬರಗಃ, ತವ, ಅಸ್ತಿ, ದಿವ್ಯಾನಿ, ಚ, ಅಸ್ತ್ರಾಣಿ, ಧನುಃ, ಚ, ದಿವ್ಯಂ, ಯೇ, ಅನ್ಯೇ, ಚ, ಬಾಣಪ್ರಮುಖಾಃ, ಅಜೇಯಾಃ, ಶರ್ವಾಶ್ರಯಾಃ, ತಾನ್, ಅಪಿ, ಭೀಮಃ, ಏತು ।

**ಅರ್ಥ** :- **ಹಿ** = ಅದು ಸರಿಯಾದದ್ದು, **ತವ** = ನಿನಗೆ, **ಅಂಬರಗಃ** = ಆಕಾಶದಲ್ಲಿ ಹೋಗುವ, **ದಿವ್ಯಃ** = ದಿವ್ಯವಾದ, **ರಥಃ** = ರಥವು, **ಚ** = ಮತ್ತು, **ದಿವ್ಯಾನಿ** = ದಿವ್ಯವಾದ, **ಅಸ್ತ್ರಾಣಿ** = ಅಸ್ತ್ರಗಳು, **ಚ** = ಮತ್ತು, **ದಿವ್ಯಂ** = ದಿವ್ಯವಾದ, **ಧನುಃ** = ಧನಸ್ಸು, **ಅಸ್ತಿ** = ಇದೆ, **ಯೇ ಚ** = ಯಾರು, **ಅನ್ಯೇ** = ಬೇರೆಯವರಾದ, **ಶರ್ವಾಶ್ರಯಾಃ** = ರುದ್ರದೇವರನ್ನಾಶ್ರಯಿಸಿದ, **ಅಜೇಯಾಃ** = ಅಜೇಯರಾದ, **ಬಾಣಪ್ರಮುಖಾಃ** = ಬಾಣನೇ ಮೊದಲಾದವರಿದ್ದಾರೋ, **ತಾನ್ ಅಪಿ** = ಅವರನ್ನು ಕೂಡ, **ಭೀಮಃ** = ಭೀಮನು, **ಏತು** = ಹೋಗಲಿ.

ತಾತ್ಪರ್ಯ :- ಸಪ್ತದ್ವೀಪಾದಿಗಳನ್ನು ಜಯಿಸುವ ಶಕ್ತಿ ಅರ್ಜುನನಿಗೆ ಇದೆ. ಏಕೆಂದರೆ ಅವನ ಹತ್ತಿರ ಆಕಾಶ ಮಾರ್ಗದಲ್ಲಿ ಸಂಚರಿಸುವ ದಿವ್ಯವಾದ ರಥವಿದೆ. ಹಾಗೆಯೇ ದಿವ್ಯ ಅಸ್ತ್ರಗಳು ಧನಸ್ಸು ಇವೆ. ಆದರೆ ರುದ್ರದೇವರ ವರದಿಂದ ಅಜೇಯರಾದ ಬಾಣ ಮೊದಲಾದವರನ್ನು ಜಯಿಸಲು ಭೀಮನೇ ಸಮರ್ಥ. ಅವನೇ ಹೋಗಲಿ.

**ತಥಾ ಸುರಾಶ್ಚಾಪಿ ಸಮಸ್ತಶೋಽಸ್ಯ**
**ಬಲಿಂ ಪ್ರಯಚ್ಛಂತಿ ಮದಾಜ್ಞಯೇತರೇ ।**
**ದಿಶಂ ಪ್ರತೀಚೀಮಥ ದಕ್ಷಿಣಾಂ ಚ**
**ಯಾತಾಂ ಯಮೌ ಕ್ರಮಶೋ ಹ್ಯಧ್ವರಾರ್ಥೇ ॥ ೧೯೩ ॥**

ಪದಚ್ಛೇದ :- ತಥಾ, ಸುರಾಃ, ಚ, ಅಪಿ, ಸಮಸ್ತಶಃ, ಅಸ್ಯ, ಬಲಿಂ, ಪ್ರಯಚ್ಛಂತಿ, ಮದಾಜ್ಞಯಾ, ಇತರೇ, ದಿಶಂ, ಪ್ರತೀಚೀಂ, ಅಥ, ದಕ್ಷಿಣಾಂ, ಚ, ಯಾತಾಂ, ಯಯೌ, ಕ್ರಮಶಃ, ಹಿ, ಅಧ್ವರಾರ್ಥೇ।

ಅರ್ಥ :- ತಥಾ = ಹೇಗೆ ಬಾಣಾದಿ ಅಸುರರೋ, ತಥಾ = ಹಾಗೆ, ಸುರಾಃ ಅಪಿ = ದೇವತೆಗಳೂ ಕೂಡ, ಚ = ಮತ್ತು, ಇತರೇ = ಅರ್ಜುನನಿಂದ ಸೋಲಿಸಲ್ಪಡದ ಬೇರೆಯವರು, ಮದಾಜ್ಞಯಾ = ನನ್ನ ಅಪ್ಪಣೆಯಿಂದ, ಸಮಸ್ತಶಃ = ಎಲ್ಲ ಕಡೆಯಲ್ಲಿಯೂ, ಅಸ್ಯ = ಈ ಭೀಮನಿಗೆ, ಬಲಂ = ಕಾಣಿಕೆಯನ್ನು, ಪ್ರಯಚ್ಛಂತಿ = ಕೊಡುತ್ತಾರೆ, ಅಥ = ಅನಂತರ, ಅಧ್ವರಾರ್ಥೇ = ಯಾಗಕ್ಕೋಸ್ಕರ, ಯಮೌ = ನಕುಲ, ಸಹದೇವರು, ಕ್ರಮಶಃ = ಕ್ರಮವಾಗಿ, ಪ್ರತೀಚೀಂ = ಪಶ್ಚಿಮದ, ಚ = ಮತ್ತು, ದಕ್ಷಿಣಾಂ = ದಕ್ಷಿಣದ, ದಿಶಂ = ದಿಕ್ಕನ್ನು, ಯಾತಾಂ = ಹೋಗಲಿ.

ತಾತ್ಪರ್ಯ :- ಭೀಮ ಎಲ್ಲಿಗೇ ಹೋದರೂ ಅಲ್ಲಿ ಅಸುರರು ಹೇಗೆ ಕಾಣಿಕೆ ಕೊಡುತ್ತಾರೋ ಅದರಂತೆ ದೇವತೆಗಳೂ ಕೂಡ ನನ್ನ ಅಪ್ಪಣೆಯಂತೆ ಕಪ್ಪ ಕೊಡುತ್ತಾರೆ ಇನ್ನು ಪಶ್ಚಿಮಕ್ಕೆ ನಕುಲ ಮತ್ತು ದಕ್ಷಿಣಕ್ಕೆ ಸಹದೇವ ಹೋಗಲಿ.

ಯಶಶ್ಚ ಧರ್ಮಶ್ಚ ತಯೋರಪಿ ಸ್ಯಾ-
ದಿತಿ ಸ್ಮ ಕೃಷ್ಣೇನ ಸುತೇನ ಕಾಳ್ಯಾಃ ।
ಉಕ್ತೇ ಯಯುಸ್ತೇ ತಮಭಿಪ್ರಣಮ್ಯ
ದಿಶೋ ಯಥೋಕ್ತಾಃ ಪರಮೋರುಸದ್ಗುಣಾಃ ॥ ೧೯೪ ॥

ಪದಚ್ಛೇದ :- ಯಶಃ, ಚ, ಧರ್ಮಃ, ಚ, ತಯೋಃ, ಅಪಿ, ಸ್ಯಾತ್, ಇತಿ, ಸ್ಮ ಕೃಷ್ಣೇನ, ಸುತೇನ, ಕಾಲ್ಯಾಃ, ಉಕ್ತೇ, ಯಯುಃ, ತೇ, ತಂ, ಅಭಿಪ್ರಣಮ್ಯ, ದಿಶಃ, ಯಥೋಕ್ತಾಃ, ಪರಮೋರುಸದ್ಗುಣಾಃ।

ಅರ್ಥ :- ತಯೋಃ ಅಪಿ = ಆ ನಕುಲ ಸಹದೇವರಿಗೂ, ಯಶಃ = ಯಶಸ್ಸು, ಚ = ಮತ್ತು, ಧರ್ಮಃ = ಧರ್ಮವು, ಸ್ಯಾತ್ = ಆಗಲಿ, ಇತಿ = ಎಂದು, ಕಾಲ್ಯಾಃ ಸುತೇನ = ಸತ್ಯವತೀ ಸುತರಾದ, ಕೃಷ್ಣೇನ = ವ್ಯಾಸರಾದ, ಉಕ್ತೇ = ಹೇಳಲ್ಪಡುತ್ತಿರಲು, ಪರಮೋರುಸದ್ಗುಣಾಃ = ಉತ್ತಮವಾದ ಗುಣಗಳುಳ್ಳ, ತೇ = ಆ ಭೀಮಾದಿಗಳು, ತಂ = ವ್ಯಾಸರನ್ನು, ಅಭಿಪ್ರಣಮ್ಯ

= ನಮಸ್ಕರಿಸಿ, ಯಥೋಕ್ತಾಃ = ವ್ಯಾಸರು ಹೇಳಿದ, ದಿಶಃ = ದಿಕ್ಕುಗಳನ್ನು, ಕುರಿತು, ಯಯುಃ = ಹೋದರು.

ತಾತ್ಪರ್ಯ :- ನಕುಲ ಸಹದೇವರಿಗೂ ಕೀರ್ತಿ ಧರ್ಮ ಲಭಿಸಬೇಕೆಂದು ವ್ಯಾಸರು ಅವರನ್ನೂ ದಿಗ್ವಿಜಯಕ್ಕೆ ಕಳುಹಿಸಿದರು. ಇಷ್ಟು ಮಾತನ್ನು ವ್ಯಾಸರು ಆಡಿದಾಗ ಎಲ್ಲರೂ ಅವರನ್ನು ನಮಿಸಿ, ತಮಗೆ ನಿರ್ದಿಷ್ಟ ದಿಕ್ಕಿಗೆ ಹೋದರು.

ವೃಕೋದರೋಽಜಯನ್ನೃಪಾನ್ ವಿರಾಟಮಾಸಸಾದ ಹ ।
ಜಿತೇಽತ್ರ ಕೀಚಕೇ ರಣೇ ಸಮಾದದೇ ಕರಂ ತತಃ ॥ ೧೯೫ ॥

ಪದಚ್ಛೇದ :- ವೃಕೋದರಃ, ಜಯನ್, ನೃಪಾನ್, ವಿರಾಟಮ್, ಆಸಸಾದ, ಹ, ಜಿತೇ, ಅತ್ರ, ಕೀಚಕೇ, ರಣೇ, ಸಮಾದದೇ, ಕರಂ, ತತಃ ।

ಅರ್ಥ :- ವೃಕೋದರಃ = ಭೀಮನು, ನೃಪಾನ್ = ರಾಜರುಗಳನ್ನು, ಜಯನ್ = ಗೆಲ್ಲುತ್ತಾ, ವಿರಾಟಂ = ವಿರಾಟ ರಾಜನನ್ನು, ಆಸಸಾದ ಹ = ಹೊಂದಿದನಷ್ಟೇ, ಅತ್ರ = ಈ ವಿರಾಟನ ರಾಜ್ಯದಲ್ಲಿ, ರಣೇ = ಯುದ್ಧದಲ್ಲಿ, ಕೀಚಕೇ = ಕೀಚಕನು, ಜಿತೇ = ಸೋಲುತ್ತಿರಲು, ತತಃ = ಆ ವಿರಾಟನಿಂದ, ಕರಂ = ಕಪ್ಪವನ್ನು, ಸಮಾದದೇ = ಸ್ವೀಕರಿಸಿದನು.

ತಾತ್ಪರ್ಯ :- ಭೀಮ ಎಲ್ಲ ರಾಜರನ್ನು ಜಯಿಸುತ್ತಾ ವಿರಾಟನ ಆಸ್ಥಾನಕ್ಕೆ ಬಂದ. ಅಲ್ಲಿ ಯುದ್ಧದಲ್ಲಿ ಕೀಚಕನನ್ನು ಸೋಲಿಸಿದಾಗ ವಿರಾಟ ಭೀಮನಿಗೆ ಕಪ್ಪವನ್ನು ಅರ್ಪಿಸಿದ.

ತತಃ ಕ್ರಮಾನ್ನೃಪಾನ್ ಜಿತ್ವಾ ಚೇದೀನಾಂ ವಿಷಯಂ ಗತಃ ।
ಮಾತೃವಾಕ್ಯಾದ್ ಭಯಾಚ್ಚೈವ ಶಿಶುಪಾಲೇನ ಪೂಜಿತಃ ॥ ೧೯೬ ॥

ಮಾತೃಷ್ವಸುರ್ಗೃಹೇ ಚೋಷ್ಯ ದಿವಸಾನ್ ಕತಿಚಿತ್ ಸುಖಮ್ ।
ಕರಂ ಸುಮಹದಾದಾಯ ತತಃ ಪೂರ್ವಾಂ ದಿಶಂ ಯಯೌ ॥ ೧೯೭ ॥

ಪದಚ್ಛೇದ :- ತತಃ, ಕ್ರಮಾತ್, ನೃಪಾನ್, ಜಿತ್ವಾ, ಚೇದೀನಾಂ, ವಿಷಯಂ, ಗತಃ, ಮಾತೃವಾಕ್ಯಾತ್, ಭಯಾತ್, ಚ, ಏವ, ಶಿಶುಪಾಲೇನ, ಪೂಜಿತಃ, ಮಾತೃಷ್ವಸುಃ, ಗೃಹೇ, ಚ, ಉಷ್ಯ, ದಿವಸಾನ್, ಕತಿಚಿತ್, ಸುಖಂ, ಕರಂ, ಸುಮಹತ್, ಆದಾಯ, ತತಃ, ಪೂರ್ವಾಂ, ದಿಶಂ, ಯಯೌ ।

**ಅರ್ಥ** :- **ತತಃ** = ಅನಂತರ, **ಕ್ರಮಾತ್** = ಕ್ರಮವಾಗಿ, **ನೃಪಾನ್** = ರಾಜರುಗಳನ್ನು, **ಜಿತ್ವಾ** = ಗೆದ್ದು, **ಚೇದೀನಾಂ ವಿಷಯಂ** = ಚೇದಿರಾಜ್ಯವನ್ನು ಕುರಿತು, **ಗತಃ** = ಹೋದನು, **ಮಾತೃವಾಕ್ಯಾತ್** = ತಾಯಿಯಾದ ಶೃತಶ್ರವಸೆಯ ಮಾತಿನಿಂದ, **ಚ** = ಮತ್ತು, **ಭಯಾತ್ ಏವ** = ಭಯದಿಂದಲೇ, **ಶಿಶುಪಾಲೇನ** = ಶಿಶುಪಾಲನಿಂದ, **ಪೂಜಿತಃ** = ಪೂಜಿಸಲ್ಪಟ್ಟವನಾಗಿ, **ಚ** = ಮತ್ತು, **ಮಾತೃಶ್ವಸುಃ** = ಚಿಕ್ಕಮ್ಮನಾದ ಶೃತಶ್ರವಸೆಯ, **ಗೃಹೇ** = ಮನೆಯಲ್ಲಿ, **ಕತಿಚಿತ್ ದಿವಸಾನ್** = ಕೆಲವು ದಿವಸಗಳಕಾಲ, **ಉಷ್ಯ** = ವಾಸಿಸಿ, **ತತಃ** = ಆ ಶಿಶುಪಾಲನಿಂದ, **ಸುಮಹತ್ ಕರಂ** = ತುಂಬಾ ಕಪ್ಪ-ಕಾಣಿಕೆಯನ್ನು, **ಆದಾಯ** = ಸ್ವೀಕರಿಸಿ, **ಪೂರ್ವಾಂ ದಿಶಂ** = ಪೂರ್ವ ದಿಕ್ಕನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ** :- ಹೀಗೆ ಎಲ್ಲ ರಾಜರನ್ನು ಗೆಲ್ಲುತ್ತಾ ಚೇದಿರಾಜ್ಯಕ್ಕೆ ಭೀಮ ಬಂದ. ಅಲ್ಲಿ ಶಿಶುಪಾಲ ಅವನನ್ನು ತನ್ನ ತಾಯಿಯ ಮಾತಿನಂತೆ ಮತ್ತು ಸ್ವತಃ ಭಯದಿಂದ ಆದರಿಸಿದ. ಶಿಶುಪಾಲನ ಅಮ್ಮ ಶೃತಶ್ರವಸೆ ಕುಂತಿಯ ಸಹೋದರಿ. ಹೀಗಾಗಿ ಭೀಮನಿಗೆ ಚಿಕ್ಕಮ್ಮ. ಅವಳ ಮನೆಯಲ್ಲಿ ಹದಿಮೂರು ದಿವಸ ಭೀಮ ಇದ್ದ. ಅವನಿಗೆ ಶಿಶುಪಾಲ ಭಾರಿ ಕಪ್ಪ ಅರ್ಪಿಸಿದ. ಅದನ್ನು ತೆಗೆದುಕೊಂಡು ಪೂರ್ವದಿಕ್ಕಿಗೆ ಭೀಮ ಹೊರಟನು.

**ಕ್ರಮೇಣ ಸರ್ವಾನ್ ನಿರ್ಜಿತ್ಯ ಪೌಂಡ್ರಕಂ ಚ ಮಹಾಬಲಮ್ ।**
**ವಿರಥೀಕೃತ್ಯ ಕರ್ಣಂ ಚ ಕರಮಾದಾಯ ಸರ್ವತಃ ॥ ೧೯೮ ॥**

ಪದಚ್ಛೇದ :- ಕ್ರಮೇಣ, ಸರ್ವಾನ್, ನಿರ್ಜಿತ್ಯ, ಪಾಂಡ್ರಕಂ, ಚ, ಮಹಾಬಲಂ, ವಿರಥೀಕೃತ್ಯ, ಕರ್ಣಂ, ಚ, ಕರಂ, ಆದಾಯ, ಸರ್ವತಃ ।

**ಅರ್ಥ** :- **ಕ್ರಮೇಣ** = ಕ್ರಮವಾಗಿ, **ಸರ್ವಾನ್** = ಎಲ್ಲರನ್ನೂ, **ನಿರ್ಜಿತ್ಯ** = ಸೋಲಿಸಿ, **ಚ** = ಮತ್ತು, **ಮಹಾಬಲಂ** = ಬಲಿಷ್ಠನಾದ, **ಪೌಂಡ್ರಕಂ** = ಪೌಂಡ್ರಕನನ್ನು, **ನಿರ್ಜಿತ್ಯ** = ಸೋಲಿಸಿ, **ಕರ್ಣಂ ಚ** = ಕರ್ಣನನ್ನೂ ಕೂಡ, **ವಿರಥೀಕೃತ್ಯ** = ರಥ ರಹಿತನನ್ನಾಗಿ ಮಾಡಿ, **ಸರ್ವತಃ** = ಎಲ್ಲರಿಂದಲೂ, **ಕರಂ** = ಕಪ್ಪವನ್ನು, **ಆದಾಯ** = ಸ್ವೀಕರಿಸಿ, **ಯಯೌ** = ಹೋದನು.

ತಾತ್ಪರ್ಯ :- ಹೀಗೆ ಎಲ್ಲರನ್ನೂ ಗೆಲ್ಲುತ್ತಾ ಪೌಂಡ್ರಕನನ್ನೂ ಗೆದ್ದು, ಕರ್ಣನ ರಥವನ್ನು ಪುಡಿ ಮಾಡಿ ಎಲ್ಲರಿಂದಲೂ ಭೀಮ ಕಪ್ಪ ಸ್ವೀಕರಿಸಿದ.

**ಹಿಮವಚ್ಛಿಖರೇ ದೇವಾನ್ ಜಿತ್ವಾ ಶಕ್ರಪುರೋಗಮಾನ್ ।**
**ಕ್ರೀಡಾರ್ಥಂ ಯುಧ್ಯತಸ್ತೇಭ್ಯಸ್ತುಷ್ಟೇಭ್ಯೋ ರತ್ನಸಂಚಯಮ್ ॥ ೧೯೯ ॥**

ಪದಚ್ಛೇದ :- **ಹಿಮವಚ್ಛಿಕರೇ, ದೇವಾನ್, ಜಿತ್ವಾ, ಶಕ್ರಪುರೋಗಮಾನ್, ಕ್ರೀಡಾರ್ಥಂ, ಯುಧ್ಯತಃ, ತೇಭ್ಯಃ, ತುಷ್ಟೇಭ್ಯಃ, ರತ್ನಸಂಚಯಂ ।**

ಅರ್ಥ :- **ಹಿಮವಚ್ಛಿಖರೇ** = ಹಿಮಾಲಯದ ಶಿಖರದಲ್ಲಿ, **ಕ್ರೀಡಾರ್ಥಂ** = ಆಟಕ್ಕೋಸ್ಕರ, **ಯುಧ್ಯತಃ** = ಯುದ್ಧ ಮಾಡುತ್ತಿರುವ, **ಶಕ್ರಪುರೋಗಮಾನ್** = ಇಂದ್ರನೇ ಮೊದಲಾದ, **ದೇವಾನ್** = ದೇವತೆಗಳನ್ನು, **ಜಿತ್ವಾ** = ಗೆದ್ದು, **ತುಷ್ಟೇಭ್ಯಃ** = ಸಂತುಷ್ಟರಾದ, **ತೇಭ್ಯಃ** = ಅವರಿಂದ, **ರತ್ನಸಂಚಯಂ** = ರತ್ನ ಸಮೂಹವನ್ನು ಸ್ವೀಕರಿಸಿದನು.

ತಾತ್ಪರ್ಯ :- ಹಿಮಾಲಯದಲ್ಲಿ ದೇವತೆಗಳೊಂದಿಗೆ ಯುದ್ಧ ಮಾಡಿದ. ಇಂದ್ರ ಮೊದಲಾದ ದೇವತೆಗಳು ಭೀಮನೊಂದಿಗೆ ಆಟಕ್ಕೋಸ್ಕರ ಯುದ್ಧ ಮಾಡುತ್ತಿದ್ದರು. ಅವರನ್ನು ಗೆದ್ದು, ಸಂತುಷ್ಟರಾದ ಅವರಿಂದ ರತ್ನರಾಶಿಯನ್ನು ಕಪ್ಪವನ್ನಾಗಿ ಪಡೆದ.

**ಬಾಹುಯುದ್ಧೇನ ಶೇಷಂ ಚ ಗರುಡಂ ಚ ಮಹಾಬಲಮ್ ।**
**ಕ್ರೀಡಮಾನೌ ವಿನಿರ್ಜಿತ್ಯ ಭೂಷಣಾನ್ಯಾಪ ತೋಷತಃ ।**
**ತಾಭ್ಯಾಂ ಚ ದೃಢಮಾಶ್ಲಿಷ್ಟಃ ಸ್ನೇಹವಿಕ್ಲಿನ್ನಯಾ ಧಿಯಾ ॥ ೨೦೦ ॥**

ಪದಚ್ಛೇದ :- **ಬಾಹು ಯುದ್ಧೇನ, ಶೇಷಂ, ಚ, ಗರುಡಂ, ಚ, ಮಹಾಬಲಂ, ಕ್ರೀಡಮಾನಃ, ವಿನಿರ್ಜಿತ್ಯ, ಭೂಷಣಾನಿ, ಆಪ, ತೋಷತಃ, ತಾಭ್ಯಾಂ, ಚ, ದೃಢಂ, ಆಶ್ಲಿಷ್ಟಃ, ಸ್ನೇಹವಿಕ್ಲಿನ್ನಯಾ, ಧಿಯಾ ।**

ಅರ್ಥ :- **ಕ್ರೀಡಮಾನಃ** = ಆಡುತ್ತಿರುವ ಭೀಮಸೇನನು, **ಬಾಹುಯುದ್ಧೇನ** = ಬಾಹುಯುದ್ಧದಿಂದ, **ಮಹಾಬಲಂ** = ಬಲಿಷ್ಠನಾದ, **ಶೇಷಂ** = ಶೇಷನನ್ನು, **ಚ** = ಮತ್ತು, **ಗರುಡಂ ಚ** = ಗರುಡನನ್ನೂ ಕೂಡ, **ವಿನಿರ್ಜಿತ್ಯ** = ಗೆದ್ದು, **ತಾಭ್ಯಾಂ** = ಅವರಿಬ್ಬರಿಂದ, **ತೋಷತಃ** =

ಸಂತೋಷದಿಂದ, **ದೃಢಂ** = ಗಾಢವಾಗಿ, **ಆಶ್ಲಿಷ್ಟಃ** = ಆಲಿಂಗಿತನಾಗಿ, **ಸ್ನೇಹವಿಕ್ಲಿನ್ನಯಾ** = ಸ್ನೇಹದಿಂದ ಆರ್ದ್ರವಾದ, **ಧಿಯಾ** = ಬುದ್ಧಿಯಿಂದ, **ಭೂಷಣಾನಿ** = ಆಭರಣಗಳನ್ನು, **ಆಪ** = ಪಡೆದನು.

**ತಾತ್ಪರ್ಯ** :- ಇಲ್ಲಿ ಯುದ್ಧವನ್ನು ಆಟದಂತೆ ಆಡುವ ಭೀಮನು ಮಹಾಪರಾಕ್ರಮಿಗಳಾದ ಶೇಷ ಮತ್ತು ಗರುಡರನ್ನು ಬಾಹುಯುದ್ಧದಿಂದ ಎದುರಿಸಿ ಅವರನ್ನು ಗೆದ್ದ. ಸಂತುಷ್ಟರಾದ ಗರುಡ-ಶೇಷರು ಭೀಮನನ್ನು ಗಾಢವಾಗಿ ಆಲಿಂಗಿಸಿದರು. ಅವರ ಮೇಲಿನ ಸ್ನೇಹದಿಂದ ಅವರಿಂದ ಆಭರಣಗಳನ್ನು ಭೀಮ ಕಾಣಿಕೆಯನ್ನಾಗಿ ಪಡೆದ.

**ಪೋಪ್ಲೂಯಮಾನಃ ಸ ತತೋಽಂಬುಧೌ ಬಲೀ**
**ಜಗಾಮ ಬಾಣಸ್ಯ ಪುರಂ ಹರಂ ಚ ।**
**ರಣೇಽಜಯದ್ ವಾರಣರೂಪಮಾಸ್ಥಿತಂ**
**ಕ್ರೀಡಂತಮೇತೇನ ಚ ತೋಷಿತೋ ಹರಃ ॥ ೨೦೦ ॥**

**ಪದಚ್ಛೇದ** :- **ಪೋಪ್ಲೂಯಮಾನಃ, ಸಃ, ತತಃ, ಅಂಬುಧೌ, ಬಲೀ, ಜಗಾಮ, ಬಾಣಸ್ಯ, ಪುರಂ, ಹರಂ, ಚ, ರಣೇ, ಅಜಯತ್, ವಾರಣರೂಪಂ, ಆಸ್ಥಿತಂ, ಕ್ರೀಡಂತಂ, ಏತೇನ, ಚ, ತೋಷಿತಃ, ಹರಃ ।**

**ಅರ್ಥ** :- **ಬಲೀ** = ಬಲಿಷ್ಠನಾದ, **ಸಃ** = ಆ ಭೀಮನು, **ಅಂಬುಧೌ** = ಸಮುದ್ರದಲ್ಲಿ, **ಪೋಪ್ಲೂಯಮಾನಃ** = ಹಾರುತ್ತಾ, **ಬಾಣಸ್ಯ** = ಬಾಣನ, **ಪುರಂ** = ಪಟ್ಟಣವನ್ನು, **ಜಗಾಮ** = ಹೋದನು, **ಚ** = ಮತ್ತು, **ರಣೇ** = ಯುದ್ಧದಲ್ಲಿ, **ವಾರಣರೂಪಂ** = ಆನೆಯ ರೂಪವನ್ನು, **ಆಸ್ಥಿತಂ** = ಪಡೆದಿರುವ, **ಕ್ರೀಡಂತಂ** = ಆಡುತ್ತಿರುವ, **ಹರಂ** = ರುದ್ರದೇವರನ್ನು, **ಅಜಯತ್** = ಗೆದ್ದನು, **ಏತೇನ ಚ** = ಇದರಿಂದಾಗಿ, **ಹರಃ** = ರುದ್ರನು, **ತೋಷಿತಃ** = ಸಂತೋಷಿಸಲ್ಪಟ್ಟನು.

**ತಾತ್ಪರ್ಯ** :- ನಂತರ ಭೀಮನು ಸಮುದ್ರದಲ್ಲಿ ಹಾರುತ್ತಾ ಬಾಣಾಸುರನ ಪುರಕ್ಕೆ ಬಂದನು. ಅಲ್ಲಿ ರುದ್ರದೇವರೊಂದಿಗೆ ಯುದ್ಧಮಾಡಿದ. ಅಲ್ಲಿ ರುದ್ರದೇವರು ಆನೆಯ ರೂಪ ತೊಟ್ಟು ಕ್ರೀಡಿಸುತ್ತಿದ್ದರು. ಅವರನ್ನು ಗೆದ್ದದ್ದರಿಂದ ರುದ್ರದೇವರಿಗೆ ಸಂತಸವಾಯಿತು.

ಪೃಷ್ಟಶ್ಚ ಗಿರಿಶೇನಾಸೌ ವಿಸ್ತರಂ ದಿಗ್ಜಯಸ್ಯ ಚ ।
ಸಿಂಹವ್ಯಾಘ್ರಾದಿರೂಪಾಶ್ಚ ಆತ್ಮನಾ ವಿಜಿತಾ ಯಥಾ ।
ಗರುತ್ಮಚ್ಛೇಷಶಕ್ರಾದ್ಯಾ ದೇವಾಃ ಸರ್ವೇ ತದಬ್ರವೀತ್ ॥ ೨೦೨ ॥

ಪದಚ್ಛೇದ :- ಪೃಷ್ಟಃ, ಚ, ಗಿರಿಶೇನ, ಅಸೌ, ವಿಸ್ತರಂ, ದಿಗ್ಜಯಸ್ಯ, ಚ, ಸಿಂಹವ್ಯಾಘ್ರಾದಿರೂಪಾಃ, ಚ, ಆತ್ಮನಾ, ವಿಜಿತಾಃ, ಯಥಾ, ಗರುತ್ಮಚ್ಛೇಷಶಕ್ರಾದ್ಯಾಃ, ದೇವಾಃ, ಸರ್ವೇ, ತತ್, ಅಬ್ರವೀತ್ ।

ಅರ್ಥ :- ಗಿರಿಶೇನ = ರುದ್ರದೇವರಿಂದ, ಪೃಷ್ಟಃ = ಕೇಳಲ್ಪಟ್ಟ, ಅಸೌ = ಈ ಭೀಮಸೇನನು, ಸಿಂಹವ್ಯಾಘ್ರಾದಿರೂಪಾಃ = ಸಿಂಹ, ಹುಲಿ ಮೊದಲಾದ ರೂಪಧರಿಸಿದ, ಗರುತ್ಮಚ್ಛೇಷಶಕ್ರಾದ್ಯಾಃ = ಗರುಡಶೇಷ ಇಂದ್ರರೇ ಮೊದಲಾದ, ಸರ್ವೇ = ಎಲ್ಲಾ, ದೇವಾಃ = ದೇವತೆಗಳು, ಆತ್ಮನಾ = ತನ್ನಿಂದ, ಯಥಾ = ಹೇಗೆ, ವಿಜಿತಾಃ = ಸೋಲಿಸಲ್ಪಟ್ಟರೋ ಅಂತಹ, ದಿಗ್ವಿಜಯಸ್ಯ = ದಿಗ್ವಿಜಯದ, ವಿಸ್ತರಂ = ವಿಸ್ತಾರವೋ, ತತ = ಅದನ್ನು, ಅಬ್ರವೀತ್ = ಹೇಳಿದನು.

ತಾತ್ಪರ್ಯ :- ರುದ್ರದೇವರು ಭೀಮನ ದಿಗ್ವಿಜಯದ ಕಥೆಯನ್ನು ಕೇಳಿದರು. ಆಗ ಸಿಂಹ-ಹುಲಿ ಮೊದಲಾದ ವೇಷಧರಿಸಿ, ಬಂದ ಗರುಡ ಶೇಷ ಇಂದ್ರರನ್ನು ತಾನು ಜಯಿಸಿದ ಬಗೆಯನ್ನು ನಿರೂಪಿಸಿದನು.

ನಿಶಮ್ಯ ಶಂಕರೋಽಖಿಲಂ ಮಖಸ್ಯ ಚ ಪ್ರಸಾಧಕಮ್ ।
ಹರಿಂ ತತೋ ಬಲೇಃ ಸುತಾದ್ ದದೌ ಚ ರತ್ನಸಂಚಯಮ್ ॥ ೨೦೩ ॥

ಪದಚ್ಛೇದ :- ನಿಶಮ್ಯ, ಶಂಕರಃ, ಅಖಿಲಂ, ಮಖಸ್ಯ, ಚ, ಪ್ರಸಾದಕಂ, ಹರಿಂ, ತತಃ, ಬಲೇಃ, ಸುತಾತ್, ದದೌ, ಚ, ರತ್ನಸಂಚಯಂ ।

ಅರ್ಥ :- ಶಂಕರಃ = ರುದ್ರದೇವರು, ಅಖಿಲಂ = ಎಲ್ಲವನ್ನೂ, ನಿಶಮ್ಯ = ಕೇಳಿ, ಚ = ಮತ್ತು, ಮಖಸ್ಯ = ಯಾಗದ, ಪ್ರಸಾದಕಂ = ಸಾಧಕನಾದ, ಹರಿಂ = ಶ್ರೀಹರಿಯನ್ನು, ನಿಶಮ್ಯ = ತಿಳಿದು, ಬಲೇಃ = ಬಲಿಯ, ಸುತಾತ್ = ಮಗನಿಗೆ ಅಜ್ಞಾಪಿಸಿ, ರತ್ನಸಂಚಯಂ = ರತ್ನಸಮೂಹವನ್ನು, ದದೌ = ಕೊಟ್ಟನು.

ತಾತ್ಪರ್ಯ :- ರುದ್ರದೇವರು ಎಲ್ಲವನ್ನೂ ಕೇಳಿದರು. ಯಾಗದ ಪ್ರಧಾನ ಸಾಧಕ ಶ್ರೀಹರಿ ಎರಡೂ ತಿಳಿದು ಬಲಿಯ ಮಗನಾದ ಬಾಣನಿಗೆ ಆಜ್ಞೆ ಮಾಡಿ ಅವನಿಂದ ರತ್ನದ ರಾಶಿಯನ್ನು ಕಪ್ಪವನ್ನಾಗಿ ಕೊಡಿಸಿದನು.

**ಸ ಬಾಣದೈತ್ಯತೋ ಮಹಚ್ಛಿವೇನ ದತ್ತಮುತ್ತಮಮ್ ।**
**ಪ್ರಗೃಹ್ಯ ರತ್ನಸಂಚಯಂ ಸ್ವಕಂ ಪುರಂ ಸಮಾಯಯೌ ॥ ೨೦೪ ॥**

ಪದಚ್ಛೇದ :- ಸಃ, ಬಾಣದೈತ್ಯತಃ, ಮಹತ್, ಶಿವೇನ, ದತ್ತಂ, ಉತ್ತಮಂ, ಪ್ರಗೃಹ್ಯ, ರತ್ನಸಂಚಯಂ, ಸ್ವಕಂ, ಪುರಂ, ಸಮಾಯಯೌ ।

ಅರ್ಥ :- ಸಃ = ಆ ಭೀಮಸೇನನು, ಶಿವೇನ = ರುದ್ರದೇವರಿಂದ, ಬಾಣದೈತ್ಯತಃ = ಬಾಣನೆಂಬ ದೈತ್ಯನನ್ನು ಆಜ್ಞಾಪಿಸಿ, ದತ್ತಂ = ಕೊಡಲ್ಪಟ್ಟ, ಮಹತ್ = ಬಹಳವಾದ, ಉತ್ತಮಂ = ಉತ್ತಮವಾದ, ರತ್ನಸಂಚಯಂ = ರತ್ನ ರಾಶಿಯನ್ನು, ಪ್ರಗೃಹ್ಯ = ತೆಗೆದುಕೊಂಡು, ಸ್ವಕಂ = ತನ್ನ, ಪುರಂ = ಪಟ್ಟಣವನ್ನು ಕುರಿತು, ಸಮಾಯಯೌ = ಹೋದನು.

ತಾತ್ಪರ್ಯ :- ರುದ್ರದೇವರು ಬಾಣನ ಮೂಲಕ ಕೊಡಿಸಿದ ಶ್ರೇಷ್ಠವಾದ ರತ್ನರಾಶಿಯನ್ನು ತೆಗೆದುಕೊಂಡು ತನ್ನ ನಗರಕ್ಕೆ ಭೀಮಸೇನ ಹೋದ.

**ಸ ವಿಪ್ರಯಾದವೇಶ್ವರಂ ದ್ವಿಧಾಸ್ಥಿತಂ ಜನಾರ್ದನಮ್ ।**
**ಪುರೋ ನಿಧಾಯ ತದ್ ವಸು ಪ್ರಭೂತಮಾನಮತ್ ತದಾ ॥ ೨೦೫ ॥**

ಪದಚ್ಛೇದ :- ಸಃ, ವಿಪ್ರಯಾದವೇಶ್ವರಂ, ದ್ವಿಧಾ, ಸ್ಥಿತಂ, ಜನಾರ್ದನಂ, ಪುರಃ, ನಿಧಾಯ, ತತ್, ವಸು, ಪ್ರಭೂತಂ, ಆನಮತ್, ತದಾ ।

ಅರ್ಥ :- ಸಃ = ಆ ಭೀಮಸೇನನು, ದ್ವಿಧಾ ಸ್ಥಿತಂ = ಎರಡು ರೂಪದಲ್ಲಿರುವ, ವಿಪ್ರಯಾದವೇಶ್ವರಂ = ಬ್ರಾಹ್ಮಣರಿಗೆ ಮತ್ತು ಯಾದವರಿಗೆ ಒಡೆಯನಾದ ವ್ಯಾಸ ಮತ್ತು ಕೃಷ್ಣರೂಪಿಯಾದ, ಜನಾರ್ದನಂ = ಶ್ರೀಹರಿಯನ್ನು, ಪ್ರಭೂತಂ = ಬಹಳವಾದ, ತತ್ ವಸು = ಆ ಸಂಪತ್ತನ್ನು, ಪುರಃ = ಎದುರಿಗೆ, ನಿಧಾಯ = ಇಟ್ಟು, ಆನಮತ್ = ನಮಸ್ಕರಿಸಿದನು.

**ತಾತ್ಪರ್ಯ** :- ಭೀಮಸೇನನು, ಆ ಅಪರಿಮಿತವಾದ ಸಂಪತ್ತನ್ನು ವ್ಯಾಸ ಮತ್ತು ಕೃಷ್ಣ ಎಂಬ ಎರಡು ರೂಪದ ಶ್ರೀಹರಿಯ ಎದುರಿಗೆ ಇರಿಸಿ, ನಮಸ್ಕರಿಸಿದನು.

**ಸೋಽಭಿವಾದ್ಯಾಗ್ರಜಂ ಚೈವ ಯಥಾವೃತ್ತಂ ನ್ಯವೇದಯತ್ ।**
**ಆತ್ಮನಃ ಕೃಷ್ಣಯೋಃ ಸರ್ವಂ ಧರ್ಮರಾಜಾಗ್ರತೋ ಮುದಾ ॥ ೨೦೬ ॥**

**ಪದಚ್ಛೇದ** :- ಸಃ, ಅಭಿವಾದ್ಯ, ಅಗ್ರಜಂ, ಚ, ಏವ, ಯಥಾವೃತ್ತಂ, ನ್ಯವೇದಯತ್, ಆತ್ಮನಃ, ಕೃಷ್ಣಯೋಃ, ಸರ್ವಂ, ಧರ್ಮರಾಜಾಗ್ರತಃ, ಮುದಾ ।

**ಅರ್ಥ** :- **ಸಃ** = ಆ ಭೀಮನು, **ಅಗ್ರಜಂ ಚ** = ಅಣ್ಣನಾದ ಧರ್ಮರಾಜನನ್ನೂ ಕೂಡ, **ಅಭಿವಾದ್ಯ** = ನಮಸ್ಕರಿಸಿ, **ಮುದಾ** = ಸಂತೋಷದಿಂದ, **ಆತ್ಮನಃ** = ತನ್ನ, **ಯಥಾವೃತ್ತಂ** = ಎಲ್ಲಾ ವೃತ್ತಾಂತಗಳನ್ನು, **ಕೃಷ್ಣಯೋಃ** = ವ್ಯಾಸ ಮತ್ತು ಕೃಷ್ಣರ ಮುಂದೆ, **ಧರ್ಮರಾಜಾಗ್ರತಃ** = ಧರ್ಮರಾಜನ ಮುಂದೆ, **ಸರ್ವಂ** = ಎಲ್ಲವನ್ನೂ, **ನ್ಯವೇದಯತ್** = ನಿವೇದಿಸಿದನು.

**ತಾತ್ಪರ್ಯ** :- ಅಣ್ಣನಾದ ಧರ್ಮರಾಜನಿಗೂ ನಮಿಸಿದ ಭೀಮಸೇನ, ನಡೆದ ಎಲ್ಲ ಘಟನೆಗಳನ್ನು ಶ್ರೀಕೃಷ್ಣನ ವ್ಯಾಸರ ಮತ್ತು ಧರ್ಮಜನ ಮುಂದೆ ನಿವೇದಿಸಿದನು.

**ಯಥಾ ಜಿತಾಃ ಕೀಚಕಾದ್ಯಾ ಏಕಲವ್ಯಸಹಾಯವಾನ್ ।**
**ಯಥಾ ಜಿತಃ ಪೌಂಡ್ರಕಶ್ಚಕರ್ಣಾದ್ಯಾಶ್ಚ ತಥಾಽಪರೇ ॥ ೨೦೭ ॥**

**ಯಥಾ ಸಿಂಹಾದಿತನವಃ ಶೇಷವೀಂದ್ರೇಂದ್ರಪೂರ್ವಕಾಃ ।**
**ಯಥಾ ಗಜತನುಃ ಶರ್ವಸ್ತಚ್ಚ ಸರ್ವಮವರ್ಣಯತ್ ॥ ೨೦೮ ॥**

**ಪದಚ್ಛೇದ** :- ಯಥಾ, ಜಿತಾಃ, ಕೀಚಕಾದ್ಯಾಃ, ಏಕಲವ್ಯ ಸಹಾಯವಾನ್, ಯಥಾ, ಜಿತಃ, ಪೌಂಡ್ರಕಃ, ಚ, ಕರ್ಣಾದ್ಯಾಃ, ಚ, ತಥಾ, ಅಪರೇ, ಯಥಾಸಿಂಹಾದಿತನವಃ, ಶೇಷವೀಂದ್ರೇಂದ್ರಪೂರ್ವಕಾಃ, ಯಥಾ, ಗಜತನುಃ, ಶರ್ವಃ, ತತ್, ಚ, ಸರ್ವಂ, ಅವರ್ಣಯತ್ ।

**ಅರ್ಥ** :- **ಯಥಾ** = ಯಾವ ರೀತಿಯಲ್ಲಿ, **ಕೀಚಕಾದ್ಯಾಃ** = ಕೀಚಕನೇ ಮೊದಲಾದವರು, **ಜಿತಾಃ** = ಸೋತರೋ, **ಯಥಾ** = ಯಾವ ರೀತಿಯಲ್ಲಿ, **ಏಕಲವ್ಯ ಸಹಾಯವಾನ್** = ಏಕಲವ್ಯನ ಸಹಾಯ ಪಡೆದ, **ಪೌಂಡ್ರಕಃ** = ಪೌಂಡ್ರಕ ವಾಸುದೇವನು, **ಜಿತಃ** = ಗೆಲ್ಲಲ್ಪಟ್ಟನೋ, **ತಥಾ** = ಹಾಗೇ, **ಅಪರೇ** = ಬೇರೆಯವರಾದ, **ಕರ್ಣಾದ್ಯಾಶ್ಚ** = ಕರ್ಣನೇ ಮೊದಲಾದವರೂ ಕೂಡ, **ಜಿತಾಃ** = ಸೋತರೋ, **ಯಥಾ** = ಹೇಗೆ, **ಸಿಂಹಾದಿತನವಃ** = ಸಿಂಹವೇ ಮೊದಲಾದ ವೇಷವುಳ್ಳ, **ಶೇಷವೀಂದ್ರೇಂದ್ರಪೂರ್ವಕಾಃ** = ಶೇಷ, ಗರುಡ, ಇಂದ್ರನೇ ಮೊದಲಾದವರು ಸೋತರೋ, **ಯಥಾ** = ಹೇಗೆ, **ಗಜತನುಃ** = ಆನೆಯ ರೂಪದ, **ಶರ್ವಃ** = ರುದ್ರನು ಸೋತನೋ, **ತತ್ ಸರ್ವಂ** = ಆ ಎಲ್ಲವನ್ನೂ, **ಅವರ್ಣಯತ್** = ವರ್ಣಿಸಿದನು.

**ತಾತ್ಪರ್ಯ** :- ಭೀಮಸೇನ ತಾನು ಕೀಚಕನನ್ನು ಹೇಗೆ ಸೋಲಿಸಿದೆ. ಏಕಲವ್ಯನ ಸಹಾಯ ಪಡೆದ ಪೌಂಡ್ರಕನನ್ನು ಮತ್ತು ಕರ್ಣಾದಿಗಳನ್ನು ಸೋಲಿಸಿದ ಬಗೆಯನ್ನು ಮತ್ತು ಸಿಂಹ-ಹುಲಿ ಮೊದಲಾದ ಪ್ರಾಣಿಗಳ ರೂಪದಿಂದ ಬಂದ ಗರುಡ-ಶೇಷ ಇಂದ್ರಾದಿ ದೇವತೆಗಳನ್ನು ಮತ್ತು ಆನೆ ರೂಪದಿಂದ ಬಂದ ರುದ್ರದೇವನನ್ನು ಸೋಲಿಸಿದ ರೀತಿಯನ್ನೂ ವಿವರಿಸಿದ.

**ಸಂಭಾವಿತಶ್ಚ ಕೃಷ್ಣಾಭ್ಯಾಂ ರಾಜ್ಞಾ ಚ ಸುಮಹಾಬಲಃ ।**
**ಆಜ್ಞಯಾ ವ್ಯಾಸದೇವಸ್ಯ ಯಜ್ಞಾಂಗಾನಿ ಸಮಾರ್ಜಯತ್ ॥ ೨೧೯ ॥**

**ಪದಚ್ಛೇದ** :- ಸಂಭಾವಿತಃ, ಚ, ಕೃಷ್ಣಾಭ್ಯಾಂ, ರಾಜ್ಞಾ, ಚ, ಸುಮಹಾಬಲಃ, ಆಜ್ಞಯಾ, ವ್ಯಾಸದೇವಸ್ಯ, ಯಜ್ಞಾಂಗಾನಿ, ಸಮಾರ್ಜಯತ್ ।

**ಅರ್ಥ** :- **ಕೃಷ್ಣಾಭ್ಯಾಂ** = ಶ್ರೀಕೃಷ್ಣ ಮತ್ತು ವ್ಯಾಸರಿಂದ, **ಚ** = ಮತ್ತು, **ರಾಜ್ಞಾ ಚ** = ರಾಜನಾದ ಧರ್ಮರಾಜನಿಂದಲೂ, **ಸಂಭಾವಿತಃ** = ಗೌರವಿಸಲ್ಪಟ್ಟ, **ಸುಮಹಾಬಲಃ** = ಅತ್ಯಂತ ಬಲಶಾಲಿಯಾದ ಭೀಮಸೇನನು, **ವ್ಯಾಸದೇವಸ್ಯ** = ವೇದವ್ಯಾಸರ, **ಆಜ್ಞಯಾ** = ಆಜ್ಞೆಯಿಂದ, **ಯಜ್ಞಾಂಗಾನಿ** = ಯಜ್ಞ ಸಾಮಗ್ರಿಗಳನ್ನು, **ಸಮಾರ್ಜಯತ್** = ಸಂಪಾದಿಸಿದನು.

**ತಾತ್ಪರ್ಯ** :- ಭೀಮಸೇನನನ್ನು ಶ್ರೀಕೃಷ್ಣ, ವ್ಯಾಸ ಮತ್ತು ಧರ್ಮರಾಜರು ಅಭಿನಂದಿಸಿದರು. ನಂತರ ವೇದವ್ಯಾಸರ ಆಜ್ಞೆಯಂತೆ ಭೀಮ ಯಜ್ಞ ಸಾಮಗ್ರಿಗಳನ್ನು ಸಿದ್ಧಪಡಿಸಿದ.

ಊಚೇ ತಂ ಭಗವಾನ್ ವ್ಯಾಸೋ ಜಿತಂ ಸರ್ವಂ ತ್ವಯಾಽರಿಹನ್ ।
ಜಯೇ ಸರ್ವಸ್ಯ ಯಜ್ಞೋಽಯಂ ಪೂರ್ಣೋ ಭವತಿ ನಾನ್ಯಥಾ ।
ವಿರಿಂಚಃ ಸರ್ವಜಿತ್ ಪೂರ್ವಂ ದ್ವಿತೀಯಸ್ತ್ವಮಿಹಾಭವಃ ॥ ೨೧೦ ॥

ಪದಚ್ಛೇದ :- ಊಚೇ, ತಂ, ಭಗವಾನ್, ವ್ಯಾಸಃ, ಜಿತಂ, ಸರ್ವಂ, ತ್ವಯಾ, ಅರಿಹನ್, ಜಯೇ, ಸರ್ವಸ್ಯ, ಯಜ್ಞಃ, ಅಯಂ, ಪೂರ್ಣಃ, ಭವತಿ, ನ, ಅನ್ಯಥಾ, ವಿರಿಂಚಃ, ಸರ್ವಜಿತ್, ಪೂರ್ವಂ, ದ್ವಿತೀಯಃ, ತ್ವಂ, ಇಹ, ಅಭವಃ ।

ಅರ್ಥ :- ತಂ = ಆ ಭೀಮನನ್ನು, ಭಗವಾನ್ = ಪೂಜ್ಯರಾದ, ವ್ಯಾಸಃ = ವೇದವ್ಯಾಸರು, ಊಚೇ = ಹೇಳಿದರು, ಅರಿಹನ್ = ಶತ್ರುಸಂಹಾರಕನೇ, ತ್ವಯಾ = ನಿನ್ನಿಂದ, ಸರ್ವಂ = ಸಮಸ್ತ ಲೋಕವು, ಜಿತಂ = ಗೆಲ್ಲಲ್ಪಟ್ಟಿತು, ಸರ್ವಸ್ಯ = ಎಲ್ಲರ , ಜಯೇ = ಗೆಲ್ಲುವಿಕೆ ಆಗುತ್ತಿರಲು, ಅಯಂ = ಈ, ಯಜ್ಞಃ = ಯಜ್ಞವು, ಪೂರ್ಣಃ = ಪೂರ್ಣವು, ಭವತಿ = ಆಗುತ್ತದೆ, ಅನ್ಯಥಾ = ಹಾಗಲ್ಲದಿದ್ದರೆ, ನ = ಇಲ್ಲ, ಪೂರ್ವಂ = ಹಿಂದೆ, ವಿರಿಂಚಃ = ಚತುರ್ಮುಖನು, ಸರ್ವಜಿತ್ = ಎಲ್ಲರನ್ನು ಗೆದ್ದಿದ್ದನು, ಇಹ = ಇಲ್ಲಿ, ತ್ವಂ = ನೀನು, ದ್ವಿತೀಯಃ = ಎರಡನೆಯವನು, ಅಭವಃ = ಆಗಿರುವಿ.

ತಾತ್ಪರ್ಯ :- ಭೀಮನನ್ನು ಕುರಿತು ವ್ಯಾಸರು ಮುಂದಿನ ಮಾತುಗಳನ್ನು ಹೇಳುತ್ತಾರೆ. ಎಲ್ಲರನ್ನು ಗೆದ್ದರೆ ಮಾತ್ರ ಈ ಯಜ್ಞ ಪರಿಪೂರ್ಣವಾಗುವುದು. ನೀನು ಈಗ ಎಲ್ಲರನ್ನು ಗೆದ್ದಿರುವಿ. ಹಿಂದೆ ಚತುರ್ಮುಖ ಬ್ರಹ್ಮ ದೇವರು ಮಾತ್ರ ಎಲ್ಲರನ್ನು ಗೆದ್ದಿದ್ದರು. ಈಗ ನೀನು ಎರಡನೆಯವ ಎಂದು.

ಇತ್ಯುಕ್ತ್ವೈನಂ ಸಮಾಶ್ಲಿಷ್ಯ ಯಜ್ಞಾಂಗಾನಿ ಸಮಾದಿಶತ್ ॥ ೨೧೧ ॥

ಪದಚ್ಛೇದ :- ಇತಿ, ಉಕ್ತ್ವಾ, ಏನಂ, ಸಮಾಶ್ಲಿಷ್ಯ, ಯಜ್ಞಾಂಗಾನಿ, ಸಮಾದಿಶತ್.

ಅರ್ಥ :- ಇತಿ = ಈ ರೀತಿ, ಉಕ್ತ್ವಾ = ಹೇಳಿ, ಏನಂ = ಈ ಭೀಮನನ್ನು, ಸಮಾಶ್ಲಿಷ್ಯ = ಆಲಿಂಗಿಸಿ, ಯಜ್ಞಾಂಗಾನಿ = ಯಜ್ಞದ ಸಾಮಗ್ರಿಗಳನ್ನು, ಸಮಾದಿಶತ್ = ಸಂಪಾದಿಸಲು ಆದೇಶಿಸಿದರು.

ತಾತ್ಪರ್ಯ :- ಈ ರೀತಿ ಭೀಮನಿಗೆ ಹೇಳಿ ಅವನನ್ನು ಆಲಿಂಗಿಸಿ ಯಜ್ಞ ಸಾಮಗ್ರಿಗಳನ್ನು ಸಂಪಾದಿಸು ಎಂದು ಅಪ್ಪಣೆ ಮಾಡಿದರು ಭಗವಾನ್ ವೇದವ್ಯಾಸರು.

**ತದೈವಾನ್ಯೇ ದಿಶೋ ಜಿತ್ವಾ ಸಮೀಯುಸ್ತಸ್ಯ ಯೇಽನುಜಾಃ ।**
**ಸಹದೇವೋ ದಕ್ಷಿಣಾಶಾಂ ಜಿತ್ವಾ ರತ್ನಾನ್ಯುಪಾಹರತ್ ॥ ೨೧೨ ॥**

ಪದಚ್ಛೇದ :– ತದಾ, ಏವ, ಅನ್ಯೇ, ದಿಶಃ, ಜಿತ್ವಾ, ಸಮೀಯುಃ, ತಸ್ಯ, ಯೇ, ಅನುಜಾಃ, ಸಹದೇವಃ, ದಕ್ಷಿಣಾಶಾಂ, ಜಿತ್ವಾ, ರತ್ನಾನಿ, ಉಪಾಹರತ್ ।

**ಅರ್ಥ** :- **ತದಾ ಏವ** = ಆಗಲೇ, **ತಸ್ಯ** = ಆ ಭೀಮನ, **ಯೇ** = ಯಾರು, **ಅನ್ಯೇ ಅನುಜಾಃ** = ಬೇರೆ ತಮ್ಮಂದಿರೋ ಅವರು, **ದಿಶಃ ಜಿತ್ವಾ** = ದಿಗ್ವಿಜಯ ಮಾಡಿ, **ಸಮೀಯುಃ** = ಬಂದರು, **ಸಹದೇವಃ** = ಸಹದೇವನು, **ದಕ್ಷಿಣಾಶಾಂ** = ದಕ್ಷಿಣ ದಿಕ್ಕನ್ನು, **ಜಿತ್ವಾ** = ಗೆದ್ದು **ರತ್ನಾನಿ** ರತ್ನಗಳನ್ನು, **ಉಪಾಹರತ್** = ತಂದನು.

ತಾತ್ಪರ್ಯ :- ಇದೇ ಸಮಯದಲ್ಲಿ ಬೇರೆ ತಮ್ಮಂದಿರೂ ದಿಗ್ವಿಜಯ ಮುಗಿಸಿ ಬಂದಿದ್ದಾರೆ. ಅವರಲ್ಲಿ ಸಹದೇವ ದಕ್ಷಿಣ ದಿಕ್ಕನ್ನು ಗೆದ್ದು ರತ್ನಗಳನ್ನು ತಂದಿದ್ದಾನೆ.

**ತತ್ರ ರುಗ್ಮೀ ನ ಯುಯುಧೇ ಸಹದೇವೇನ ವೀರ್ಯವಾನ್ ।**
**ಜಿತಃ ಕೃಷ್ಣೇನ ಪೂರ್ವಂ ಯಃ ಶರ್ವಾದಾಪ ಧನುರ್ವರಮ್ ॥ ೨೧೩ ॥**

**ತಪಸಾ ತೋಷಿತಾತ್ ಕೃಷ್ಣಾದನ್ಯಾನೇವಾಮುನಾಽಖಿಲಾನ್ ।**
**ವಿಜೇಷ್ಯಸಿ ಯದಾ ಕೃಷ್ಣವಿರೋಧಸ್ತೇ ತದಾ ಧನುಃ ।**
**ಮಾಮೇಷ್ಯತೀತಿ ತೇನೋಕ್ತೋ ನ ವ್ಯರುಧ್ಯತ ಕೇಶವೇ ॥ ೨೧೪ ॥**

ಪದಚ್ಛೇದ :– ತತ್ರ, ರುಗ್ಮೀ, ನ, ಯುಯುಧೇ, ಸಹದೇವೇನ, ವೀರ್ಯವಾನ್, ಜಿತಃ, ಕೃಷ್ಣೇನ, ಪೂರ್ವಂ, ಯಃ, ಶರ್ವಾದ್, ಆಪ, ಧನುರ್ವರಂ, ತಪಸಾ, ತೋಷಿತಾತ್, ಕೃಷ್ಣಾತ್, ಅನ್ಯಾನ್, ಏವ, ಅಮುನಾ, ಅಖಿಲಾನ್, ವಿಜೇಷ್ಯಸಿ, ಯದಿ, ಕೃಷ್ಣವಿರೋಧಃ, ತೇ, ತದಾ, ಧನುಃ, ಮಾಂ, ಏಷ್ಯತಿ, ಇತಿ, ತೇನ, ಉಕ್ತಃ, ನ, ವ್ಯರುಧ್ಯತ, ಕೇಶವೇ ।

**ಅರ್ಥ** :- **ತತ್ರ** = ಅಕಾಲದಲ್ಲಿ, **ಯಃ** = ಯಾರು, **ತಪಸಾ** = ತಪಸ್ಸಿನಿಂದ, **ತೋಷಿತಾತ್** = ಸಂತೋಷಗೊಳಿಸಲ್ಪಟ್ಟ, **ಶರ್ವಾತ್** = ರುದ್ರದೇವರಿಂದ, **ಧನುರ್ವರಂ** = ಶ್ರೇಷ್ಠ ಧನುಸ್ಸನ್ನು, **ಆಪ** = ಹೊಂದಿದ್ದನೋ, **ಪೂರ್ವಂ** = ಹಿಂದೆ, **ಕೃಷ್ಣೇನ** = ಶ್ರೀಕೃಷ್ಣನಿಂದ, **ಜಿತಃ** = ಸೋತಿದ್ದನೋ ಅಂತಹ, **ವೀರ್ಯವಾನ್** = ಪರಾಕ್ರಮಿಯಾದ, **ರುಗ್ಮೀ** = ರುಗ್ಮಿಯು, **ಸಹದೇವೇನ** = ಸಹದೇವನೊಂದಿಗೆ, **ನ ಯುಯುಧೇ** = ಯುದ್ಧ ಮಾಡಲಿಲ್ಲ, **ಕೃಷ್ಣಾತ್** = ಶ್ರೀಕೃಷ್ಣನ ಹೊರತಾಗಿ, **ಅನ್ಯಾನ್** = ಬೇರೆಯವರಾದ, **ಅಖಿಲಾನ್** ಏವ = ಎಲ್ಲರನ್ನೂ, **ಅಮುನಾ** = ಈ ಧನುಸ್ಸಿನಿಂದ, **ವಿಜೇಷ್ಯಸಿ** = ಗೆಲ್ಲುತ್ತಿ, **ಯದಿ** = ಒಂದುವೇಳೆ, **ತೇ** = ನಿನಗೆ, **ಕೃಷ್ಣವಿರೋಧಃ** = ಶ್ರೀಕೃಷ್ಣನಲ್ಲಿ ವಿರೋಧವೋ, **ತದಾ** = ಆಗ, **ಧನುಃ** = ಧನುಸ್ಸು, **ಮಾಂ** = ನನ್ನನ್ನು ಕುರಿತು, ಏಷ್ಯತಿ = ಬರುತ್ತದೆ, **ಇತಿ** = ಎಂದು, **ತೇನ** = ಆ ಶಿವನಿಂದ, **ಉಕ್ತಃ** = ಹೇಳಲ್ಪಟ್ಟ ರುಗ್ಮಿಯು, **ಕೇಶವೇ** = ಶ್ರೀಕೃಷ್ಣನಲ್ಲಿ, **ನವ್ಯರುದ್ಯತ** = ವಿರೋಧ ಮಾಡಲಿಲ್ಲ.

**ತಾತ್ಪರ್ಯ** :- ಆ ಕಾಲದಲ್ಲಿ ಪರಾಕ್ರಮಿಯಾದ ರುಗ್ಮಿಯು ಸಹದೇವನೊಟ್ಟಿಗೆ ಯುದ್ಧವನ್ನೆ ಮಾಡಲಿಲ್ಲ. ಅದಕ್ಕೆ ಕಾರಣವನ್ನು ಹೇಳುತ್ತಾರೆ ಅವನು ಈ ಹಿಂದೆ ಕೃಷ್ಣನಿಂದ ಅವನು ತಪಸ್ಸನ್ನು ಮಾಡಿ ರುದ್ರದೇವರನ್ನು ಒಲಿಸಿಕೊಂಡು ಒಂದು ಉತ್ತಮವಾದ ಧನುಸ್ಸನ್ನು ಪಡೆದಿದ್ದ. ಆಗ ರುದ್ರದೇವರು 'ಶ್ರೀಕೃಷ್ಣನನ್ನು ಬಿಟ್ಟು ಎಲ್ಲರನ್ನೂ ಈ ಧನುಸ್ಸಿನಿಂದ ನೀನು ಗೆಲ್ಲುತ್ತಿ ಆದರೆ ಕೃಷ್ಣನನ್ನು ವಿರೋಧಿಸಿದರೆ ಈ ಧನುಸ್ಸು ಪುನಃ ನನ್ನನ್ನೆ ಸೇರುತ್ತದೆ' ಎಂದು ಎಚ್ಚರಿಸಿದ್ದರು. ಹೀಗಾಗಿ ನಂತರ ರುಗ್ಮಿಯು ಶ್ರೀಕೃಷ್ಣನನ್ನು ವಿರೋಧಿಸಲೇ ಇಲ್ಲ.

ರುಗ್ಮಿಯು ಸಹದೇವನಿಗೆ ಕರವನ್ನು ಕೊಟ್ಟನು. ಇದಕ್ಕೆ ಮೂರು ಕಾರಣ. ಒಂದು ರುಗ್ಮಿಣಿಯ ಮೇಲಿನ ಪ್ರೀತಿ, ಎರಡು ಶ್ರೀಕೃಷ್ಣ ಯಜ್ಞದ ನೇತ್ರ, ಮೂರು ಭೀಮಾರ್ಜುನರ ಭಯ.

### ಸಹದೇವನ ದಿಗ್ವಿಜಯ

**ಸ್ವಸುಃ ಸ್ನೇಹಾಚ್ಚ ಕೃಷ್ಣಸ್ಯ ಯಜ್ಞಕಾರಯಿತೃತ್ವತಃ ।**
**ಭೀಮಾರ್ಜುನಬಲಾಚ್ಚೈವ ಮಾದ್ರೇಯಾಯ ದದೌ ಕರಮ್ ॥ ೨೧೫ ॥**

ಪದಚ್ಛೇದ :- ಸ್ವಸುಃ, ಸ್ನೇಹಾತ್, ಚ, ಕೃಷ್ಣಸ್ಯ, ಯಜ್ಞಕಾರಯಿತೃತ್ವತಃ, ಭೀಮಾರ್ಜುನಬಲಾತ್, ಚ, ಏವ, ಮಾದ್ರೇಯಾಯ, ದದೌ, ಕರಂ ।

**ಅರ್ಥ** :- **ಸ್ವಸುಃ** = ತಂಗಿಯಾದ ರುಗ್ಮಿಣಿಯ ಮೇಲಿನ, **ಸ್ನೇಹಾತ್** = ಸ್ನೇಹದಿಂದ, **ಚ** = ಮತ್ತು, **ಕೃಷ್ಣಸ್ಯ** = ಶ್ರೀಕೃಷ್ಣನ, **ಯಜ್ಞಕಾರಯಿತೃತ್ವತಃ** = ಯಜ್ಞದ ಮಾಡಿಸುವಿಕೆಯಲ್ಲಿ ನೇತೃತ್ವವಿರುವುದರಿಂದ, **ಚ** = ಮತ್ತು, **ಭೀಮಾರ್ಜುನಬಲಾತ್** = ಭೀಮಾರ್ಜುನರ ಪರಾಕ್ರಮದಿಂದ, **ಮಾದ್ರೇಯಾಯ** = ಸಹದೇವನಿಗೆ, **ಕರಂ** = ಕರವನ್ನು, **ದದೌ** = ಕೊಟ್ಟನು.

**ತಾತ್ಪರ್ಯ** :- ರುಕ್ಮಿಯು ಸಹದೇವನೊಡನೆ ಯುದ್ಧ ಮಾಡಲಿಲ್ಲ. ಏಕೆಂದರೆ, ತಂಗಿಯಾದ ರುಕ್ಮಿಣಿಯ ಮೇಲಿನ ಪ್ರೀತಿ ಮತ್ತು ಸ್ವಯಂ ಕೃಷ್ಣನೇ ಪಾಂಡವರ ಮೂಲಕ ಯಾಗ ಮಾಡಿಸುತ್ತಿದ್ದಾನೆ. ಹಾಗೂ ಸಹದೇವನಿಗೆ ಭೀಮಾರ್ಜುನರ ಬಲವೂ ಇದೆ. ಆದ್ದರಿಂದ ಅವನಿಗೆ ಯುದ್ಧ ಮಾಡದೇ ಕಪ್ಪವನ್ನು ಕೊಟ್ಟನು.

**ಜಿಗ್ಯೇ ಬಲೇನಾನ್ಯನೃಪಾನ್ ಸಹದೇವಃ ಪ್ರತಾಪವಾನ್ ॥ ೨೧೬ ॥**

ಪದಚ್ಛೇದ :- ಜಿಗ್ಯೇ, ಬಲೇನ, ಅನ್ಯಾನ್, ನೃಪಾನ್, ಸಹದೇವಃ, ಪ್ರತಾಪವಾನ್ ।

**ಅರ್ಥ** :- **ಪ್ರತಾಪವಾನ್** = ಪರಾಕ್ರಮಿಯಾದ, **ಸಹದೇವಃ** = ಸಹದೇವನು, **ಬಲೇನ** = ತನ್ನ ಸ್ವಾಭಾವಿಕ ಬಲದಿಂದಲೇ, **ಅನ್ಯಾನ್** = ಬೇರೆ, **ನೃಪಾನ್** = ರಾಜರನ್ನು, **ಜಿಗ್ಯೇ** = ಗೆದ್ದನು.

**ತಾತ್ಪರ್ಯ** :- ಸಹದೇವನು ಹಾಗೆಯೇ ದಕ್ಷಿಣ ದಿಕ್ಕಿನಲ್ಲಿದ್ದ ಬೇರೆ ಬೇರೆ ಎಲ್ಲಾ ರಾಜರನ್ನು ತನ್ನ ಸ್ವಸಾಮರ್ಥ್ಯದಿಂದ ಗೆದ್ದನು.

**ತಥಾ ಸ್ಮೃತಂ ಸಮಾಗತಂ ಘಟೋತ್ಕಚಂ ವಿಭೀಷಣೇ ।**
**ಸಮಾದಿಶದ್ ಯಯೌ ಚ ಸೋಽಪ್ಯಸೌ ದದೌ ಮಹಾಕರಮ್ ॥ ೨೧೭ ॥**

ಪದಚ್ಛೇದ :- ತಥಾ, ಸ್ಮೃತಂ, ಸಮಾಗತಂ, ಘಟೋತ್ಕಚಂ, ವಿಭೀಷಣೇ, ಸಮಾದಿಶತ್, ಯಯೌ, ಚ, ಸಃ, ಅಪಿ, ಅಸೌ, ದದೌ, ಮಹಾಕರಂ ।

**ಅರ್ಥ** :- **ತಥಾ** = ಪ್ರತಿಜ್ಞಾನುಸಾರದಿಂದ, **ಸ್ಮೃತಂ** = ಸಹದೇವನಿಂದ ಸ್ಮರಿಸಲ್ಪಟ್ಟವನಾಗಿ, **ಸಮಾಗತಂ** = ಸಂತೋಷದಿಂದ ಬಂದಿರುವ, **ಘಟೋತ್ಕಚಂ** = ಘಟೋತ್ಕಚನನ್ನು, **ವಿಭೀಷಣೇ** = ವಿಭೀಷಣನ ವಿಜಯ ವಿಷಯದಲ್ಲಿ, **ಸಮಾದಿಶತ್** = ಕಳುಹಿಸಿದನು, **ಸಃ ಚ** = ಆ ಘಟೋತ್ಕಚನಾದರೂ, **ಯಯೌ** = ವಿಭೀಷಣನ ಬಳಿಗೆ ಹೋದನು, **ಅಸೌ ಅಪಿ** = ಈ ವಿಭೀಷಣನೂ ಕೂಡ, **ಮಹಾಕರಂ** = ಬಹಳ ಕಪ್ಪವನ್ನು, **ದದೌ** = ಕೊಟ್ಟನು.

**ತಾತ್ಪರ್ಯ** :- ಹಿಂದೆ ಸ್ಮರಿಸಿದ ಕೂಡಲೇ ಬರುವೆನೆಂದು ಹಿಡಿಂಬೆಯಿಂದ ಪ್ರತಿಜ್ಞಾತವಾಗಿತ್ತು. ಅದರಂತೆ ಈಗ ಸಹದೇವನು ಸ್ಮರಿಸಿದೊಡನೆ ಬಂದ ಘಟೋತ್ಕಚನನ್ನು ವಿಭೀಷಣನ ಬಳಿಗೆ ಕಳುಹಿಸಿದನು. ಪರಾಕ್ರಮಿಯಾದ ವಿಭೀಷಣನು ಬಹಳಷ್ಟು ಕಪ್ಪವನ್ನು ಕೊಟ್ಟನು.

**ಪುರಾ ಹಿ ರಾಘವೋದಿತಂ ತದಸ್ಯ ಸೋಽಖಿಲಂ ತದಾ ।**
**ವಿಚಾರ್ಯ ಕೇಶವಂ ಚ ತಂ ಬಲಂ ಚ ಭೀಮಪಾರ್ಥಯೋಃ ।**
**ದಿವೌಕಸಶ್ಚ ಪಾಂಡವಾನವೇತ್ಯ ಸೋಽದದಾತ್ ಕರಮ್ ॥ ೨೧೮ ॥**

**ಪದಚ್ಛೇದ** :- **ಪುರಾ, ಹಿ, ರಾಘವೋದಿತಂ, ತತ್, ಅಸ್ಯ, ಸಃ, ಅಖಿಲಂ, ತದಾ, ವಿಚಾರ್ಯ, ಕೇಶವಂ, ಚ, ತಂ, ಬಲಂ, ಚ, ಭೀಮಪಾರ್ಥಯೋಃ, ದಿವೌಕಸಃ, ಚ, ಪಾಂಡವಾನ್, ಅವೇತ್ಯ, ಸಃ, ಅದದಾತ್, ಕರಂ ।**

**ಅರ್ಥ** :- **ಸಃ** = ಆ ವಿಭೀಷಣನು, **ತದಾ** = ಘಟೋತ್ಕಚ ಬಂದ ಸಮಯದಲ್ಲಿ, **ಪುರಾ ಹಿ** = ಹಿಂದೆ, (**ಯತ್** = ಯಾವುದೆಲ್ಲಾ), **ರಾಘವೋದಿತಂ** = ರಾಮನಿಂದ ಹೇಳಲ್ಪಟ್ಟಿತ್ತೋ, **ತತ್** = ಅವೆಲ್ಲವನ್ನು, (**ಅಸ್ಮರತ್** = ಸ್ಮರಿಸಿಕೊಂಡು), **ಚ** = ಮತ್ತು, **ತಂ** = ಆ ಕೃಷ್ಣನನ್ನು, **ಕೇಶವಂ** = ರಾಮನೆಂದೇ, **ವಿಚಾರ್ಯ** = ತಿಳಿದು, **ಭೀಮಪಾರ್ಥಯೋಃ** = ಭೀಮಾರ್ಜುನರ, **ಬಲಂ ಚ** = ಬಲವನ್ನೂ ತಿಳಿದು, **ಪಾಂಡವಾನ್** = ಪಾಂಡವರನ್ನು, **ದಿವೌಕಸಃ** = ದೇವತೆಗಳೆಂದೂ, **ಅವೇತ್ಯ** = ತಿಳಿದು, **ಕರಂ** = ಕಪ್ಪವನ್ನು, **ಅದದಾತ್** = ಕೊಟ್ಟನು.

**ತಾತ್ಪರ್ಯ** :- ಘಟೋತ್ಕಚನ ಆಗಮನವನ್ನು ನೋಡಿದ ವಿಭೀಷಣನು ''ಘಟೋತ್ಕಚನು ಬಂದರೆ ಕಪ್ಪವನ್ನು ಕೊಡು'' ಎಂದು ಹಿಂದೆ ರಾಮನು

ಹೇಳಿದ್ದನ್ನು ಸ್ಮರಿಸಿಕೊಂಡು, ಈ ಕೃಷ್ಣನೇ ಆ ರಾಮನೆಂದು ಆಲೋಚಿಸಿ, ಭೀಮಾರ್ಜುನರ ಪರಾಕ್ರಮವನ್ನೂ ತಿಳಿದು ಪಾಂಡವರೆಲ್ಲರೂ ದೇವತೆಗಳೆಂದೂ ಭಾವಿಸಿ ಕಪ್ಪವನ್ನು ಕೊಟ್ಟನು.

**ಮಹೌಘರತ್ನಸಂಚಯಂ ಸ ಆಪ್ಯ ಭೀಮಸೇನಜಃ ।**
**ಯಯೌ ಚ ಮಾದ್ರಿನಂದನಂ ಸ ಚಾಽಯಯೌ ಸ್ವಕಂ ಪುರಮ್ ॥ ೨೨೦ ॥**

ಪದಚ್ಛೇದ :- ಮಹೌಘರತ್ನಸಂಚಯಂ, ಸಃ, ಆಪ್ಯ, ಭೀಮಸೇನಜಃ, ಯಯೌ, ಚ, ಮಾದ್ರಿನಂದನಂ, ಸಃ, ಚ, ಆಯಯೌ, ಸ್ವಕಂ, ಪುರಂ ।

**ಅರ್ಥ** :- **ಸಃ** = ಆ, **ಭೀಮಸೇನಜಃ** = ಘಟೋತ್ಕಚನು (ವಿಭೀಷಣನಿಂದ), **ಮಹೌಘರತ್ನಸಂಚಯಂ** = ಮಹೌಘ ರತ್ನರಾಶಿಯನ್ನು, **ಆಪ್ಯ** = ಹೊಂದಿ, **ಮಾದ್ರಿನಂದನಂ** = ಸಹದೇವನನ್ನು ಕುರಿತು, **ಯಯೌ** = ಹೋದನು, **ಸಃ ಚ** = ಆ ಸಹದೇವನಾದರೂ, **ಸ್ವಕಂ** = ತನ್ನ, **ಪುರಂ** = ಪಟ್ಟಣವನ್ನು ಕುರಿತು, **ಅಯಯೌ** = ಹಿಂತಿರುಗಿದನು.

ತಾತ್ಪರ್ಯ :- ಮಹೌಘವೆಂದರೆ ಒಂದು ಕೋಟಿಗೆ ಅರವತ್ತು ಸೊನ್ನೆಗಳನ್ನು ಸೇರಿಸಿದರೆ ಸಿಗುವಂಥದ್ದು. ಅಷ್ಟು ಸಂಖ್ಯೆಯಲ್ಲಿ ರತ್ನಗಳ ರಾಶಿಯನ್ನು ಘಟೋತ್ಕಚನು ವಿಭೀಷಣನಿಂದ ಪಡೆದುಕೊಂಡು ಸಹದೇವನನ್ನು ಹೊಂದಿದನು. ನಂತರ ಇವೆಲ್ಲದರ ಜೊತೆಗೆ ಸಹದೇವನು ತನ್ನ ನಗರಕ್ಕೆ ಹಿಂದಿರುಗಿದನು.

### ನಕುಲನ ದಿಗ್ವಿಜಯ

**ನಕುಲಃ ಪಶ್ಚಿಮಾಶಾಯಾಂ ವಿಜಿಗ್ಯೇಽಖಿಲಭೂಭೃತಃ ।**
**ಕರಮಾಪ ಚ ವೀರೋಽಸೌ ಸೌಹಾರ್ದಾದೇವ ಮಾತುಲಾತ್ ।**
**ಆಯಯೌ ಚ ಮಹಾರತ್ನಸಂಚಯೇನ ಸ್ವಕಂ ಪುರಮ್ ॥ ೨೨೧ ॥**

ಪದಚ್ಛೇದ :- ನಕುಲಃ, ಪಶ್ಚಿಮಾಶಾಯಾಂ, ವಿಜಿಗ್ಯೇ, ಅಖಿಲಭೂಭೃತಃ, ಕರಂ, ಆಪ, ಚ, ವೀರಃ, ಅಸೌ, ಸೌಹಾರ್ದಾತ್, ಏವ, ಮಾತುಲಾತ್, ಆಯಯೌ, ಚ, ಮಹಾರತ್ನಸಂಚಯೇನ, ಸ್ವಕಂ, ಪುರಂ ।

**ಅರ್ಥ** :- **ನಕುಲಃ** = ನಕುಲನು, **ಪಶ್ಚಿಮಾಶಾಯಾಂ** = ಪಶ್ಚಿಮ ದಿಕ್ಕಿನಲ್ಲಿರುವ, **ಅಖಿಲಭೂಭೃತಃ** = ಎಲ್ಲಾ ರಾಜರನ್ನು, **ವಿಜಿಗ್ಯೇ** = ಗೆದ್ದನು, **ವೀರಃ ಚ** = ವೀರನಾದರೂ, **ಸೌಹಾರ್ದಾದೇವ** = ಪ್ರೀತಿಯಿಂದಲೇ, **ಮಾತುಲಾತ್** = ಸೋದರಮಾವನಾದ ಶಲ್ಯನಿಂದ, **ಕರಂ** = ಕಪ್ಪವನ್ನು, **ಆಪ** = ಹೊಂದಿದನು, **ಚ** = ಮತ್ತು, **ಮಹಾರತ್ನ ಸಂಚಯೇನ** = ಉತ್ತಮವಾದ ರತ್ನ ಸಮೂಹದಿಂದ ಕೂಡಿದವನಾಗಿ, **ಸ್ವಕಂ** = ತನ್ನ, **ಪುರಂ** = ನಗರವನ್ನು ಕುರಿತು, **ಆಯಯೌ** = ಹಿಂದಿರುಗಿದನು.

**ತಾತ್ಪರ್ಯ** :- ನಕುಲನು ಪಶ್ಚಿಮದಿಕ್ಕಿನ ದಿಗ್ವಿಜಯದಲ್ಲಿ ಎಲ್ಲಾ ರಾಜರನ್ನು ಗೆದ್ದನು. ಹಾಗೆಯೇ ತನ್ನ ಸೋದರ ಮಾವನಾದ (ಹೆಣ್ಣು ಕೊಟ್ಟ ಮಾವನೂ ಆದ) ಶಲ್ಯನನ್ನು ತಾನು ಪರಾಕ್ರಮಿಯಾದರೂ ಸ್ನೇಹದಿಂದಲೇ ಕರವನ್ನು ಹೊಂದಿದನು. ಹೀಗೆ ಬಹಳವಾದ ರತ್ನಗಳ ರಾಶಿಯಿಂದ ತನ್ನ ನಗರಕ್ಕೆ ಹಿಂದಿರುಗಿದನು.

### ಅರ್ಜುನನ ದಿಗ್ವಿಜಯ

**ಅರ್ಜುನಃ ಕಪಿವರೋಚ್ಛ್ರಿತಧ್ವಜಂ**
**ಸ್ಯಂದನಂ ಸಮಧಿರುಹ್ಯ ಗಾಂಡಿವೀ ।**
**ಯಾತ ಏವ ದಿಶಮುತ್ತರಾಂ ಯದಾ**
**ಪಾರ್ವತೇಯಕುನೃಪಾಃ ಸಮಾಯಯುಃ ॥ ೨೨೨ ॥**

ಪದಚ್ಛೇದ :- ಅರ್ಜುನಃ, ಕಪಿವರಃ, ಉಚ್ಛ್ರಿತಧ್ವಜಂ, ಸ್ಯಂದನಂ, ಸಮಧಿರುಹ್ಯ, ಗಾಂಡಿವೀ, ಯಾತಃ, ಏವ, ದಿಶಂ, ಉತ್ತರಾಂ, ತದಾ, ಪಾರ್ವತೇಯಕುನೃಪಾಃ, ಸಮಾಯಯುಃ।

**ಅರ್ಥ** :- **ಅರ್ಜುನಃ** = ಅರ್ಜುನನು, **ಕಪಿವರೋಚ್ಛ್ರಿತಿಧ್ವಜಂ** = ಕಪಿವರ - ಕಪಿಶ್ರೇಷ್ಠನಾದ ಹನುಮಂತನಿಂದ, **ಉಚ್ಛ್ರಿತ** - ಯುಕ್ತವಾದ, **ಧ್ವಜಂ** - ಪತಾಕೆಯುಳ್ಳ, **ಸ್ಯಂದನಂ** = ರಥವನ್ನು, **ಸಮಧಿರುಹ್ಯ** = ಏರಿ, **ಉತ್ತರಾಂ** = ಉತ್ತರದ್ದಾದ, **ದಿಶಂ** = ದಿಕ್ಕನ್ನು ಕುರಿತು, **ಯಾತ ಏವ** = ಹೋದನೋ, **ತದಾ** = ಆಗ, **ಪಾರ್ವತೇಯ ಕುನೃಪಾಃ** = ಪಾರ್ವತೇಯ - ಪರ್ವತದಲ್ಲಿರುವ, **ಕುನೃಪಾಃ** - ಕ್ಷುದ್ರರಾಜರುಗಳು, **ಸಮಾಯಾಯಃ** = ಯುದ್ಧಕ್ಕಾಗಿ ಬಂದರು.

ತಾತ್ಪರ್ಯ :- ನಕುಲ ಸಹದೇವರಂತೆ ಅರ್ಜುನನು ಶ್ರೇಷ್ಠನಾದ ಹನುಮಂತನಿಂದ ಕೂಡಿದ ಧ್ವಜವುಳ್ಳ ರಥವನ್ನು ಏರಿ ಉತ್ತರದಿಕ್ಕಿಗೆ ಹೋದಾಗಲೇ ಪರ್ವತವಾಸಿಗಳಾದ ಉತ್ತಮಕ್ಷತ್ರಿಯ ಕುಲದಲ್ಲಿ ಹುಟ್ಟಿದಿರುವ ಆ ಧೀರ ನಿಷಾದ ಮುಂತಾದ ಪಂಗಡದ ಕ್ಷುದ್ರ ರಾಜರು ಯುದ್ಧಕ್ಕಾಗಿ ಅರ್ಜುನನ ಬಳಿಗೆ ಬಂದರು.

**ತ್ರೈಗರ್ತಾಃ ಪಾರ್ವತೇಯಾಶ್ಚ ಸಹಿತಾಃ ಪಾಂಡುನಂದನಮ್ ।**
**ಅಭ್ಯೇತ್ಯ ಯೋಧಯಾಮಾಸುರ್ಜಾನಂತಸ್ತಚ್ಚಿಕೀರ್ಷಿತಮ್ ॥ ೨೨೩ ॥**

ಪದಚ್ಛೇದ :- **ತ್ರೈಗರ್ತಾಃ, ಪಾರ್ವತೆಯಾಃ, ಚ, ಸಹಿತಾಃ, ಪಾಂಡುನಂದನಂ, ಅಭ್ಯೇತ್ಯ, ಯೋಧಯಾಮಾಸುಃ, ಜಾನಂತಃ, ತಚ್ಚಿಕೀರ್ಷಿತಂ ।**

**ಅರ್ಥ** :- **ತ್ರೈಗರ್ತಾಃ** = ತ್ರಿಗರ್ತದೇಶದ ರಾಜನಿಂದ, **ಸಹಿತಾಃ** = ಕೂಡಿದ, **ಪಾರ್ವತೇಯಾಃ** = ಪರ್ವತರಾಜ್ಯಗಳ ನಾಯಕರು, **ಪಾಂಡುನಂದನಂ** = ಪಾಂಡುಕುಮಾರನಾದ ಅರ್ಜುನನನ್ನು, **ಅಭ್ಯೇತ್ಯ** = ಸಮೀಪಿಸಿ, **ತಚ್ಚಿಕೀರ್ಷಿತಂ** = ಅರ್ಜುನನಿಗೆ ಮಾಡಲು ಇಷ್ಟವಾದುದನ್ನು, **ಜಾನಂತಃ (ಸಂತಃ)** = ತಿಳಿದವರಾಗಿ, **ಯೋಧಯಾಮಾಸುಃ** = ಯುದ್ಧ ಮಾಡಿದರು.

ತಾತ್ಪರ್ಯ :- ತ್ರಿಗರ್ತದೇಶದ ರಾಜನಿಂದ ಕೂಡಿದ ಪರ್ವತವಾಸಿಗಳಾದ ಕ್ಷುದ್ರರಾಜರು ಅರ್ಜುನನ ಬಳಿಗೆ ಬಂದು ಅವನಿಗಿಷ್ಟವಾದ ಯುದ್ಧವನ್ನು ಮಾಡಿದರು.

**ತಾನ್ ವಿಜಿತ್ಯ ಯುಗಪತ್ ಸ ಪಾಂಡವಃ**
**ಸಂಜಯನ್ ಕ್ರಮಶ ಏವ ತಾಂ ದಿಶಮ್ ।**
**ಪ್ರಾವ್ರಜಚ್ಚ ಭಗದತ್ತಮೂರ್ಜಿತಂ**
**ತೇನ ಚಾಸ್ಯ ಸಮಭೂನ್ಮಹಾರಣಃ ॥ ೨೨೪ ॥**

ಪದಚ್ಛೇದ :- **ತಾನ್, ವಿಜಿತ್ಯ, ಯುಗಪತ್, ಸಃ, ಪಾಂಡವಃ, ಸಂಜಯನ್, ಕ್ರಮಶಃ, ಏವ, ತಾಂ, ದಿಶಂ, ಪ್ರಾವ್ರಜತ್, ಚ, ಭಗದತ್ತಂ, ಊರ್ಜಿತಂ, ತೇನ, ಚ, ಅಸ್ಯ, ಸಮಭೂತ್, ಮಹಾರಣಃ ।**

**ಅರ್ಥ** :- **ಸಃ** = ಆ, **ಪಾಂಡವಃ** = ಅರ್ಜುನನು, **ತಾನ್** = ಅವರೆಲ್ಲರನ್ನು, **ಯುಗಪತ್** = ಒಮ್ಮೆಲೇ, **ವಿಜಿತ್ಯ** = ಗೆದ್ದು, **ಕ್ರಮಶ ಏವ** = ಅದೇ ಕ್ರಮದಲ್ಲಿ, **ತಾಂ** = ಆ, **ದಿಶಂ** = ಉತ್ತರದಿಕ್ಕನ್ನು, **ಸಂಜಯನ್** = ಗೆಲ್ಲುತ್ತಾ, **ಊರ್ಜಿತಂ** = ಬಲಿಷ್ಠನಾದ, **ಭಗದತ್ತಂ** = ಭಗದತ್ತನನ್ನು, **ಪ್ರಾವ್ರಜತ್** = ಹೊಂದಿದನು, **ತೇನ ಚ** = ಅವನೊಂದಿಗೆ, **ಅಸ್ಯ** = ಈ ಅರ್ಜುನನಿಗೆ, **ಮಹಾರಣಃ** = ದೊಡ್ಡ ಯುದ್ಧವು, **ಸಮಭೂತ್** = ನಡೆಯಿತು.

**ತಾತ್ಪರ್ಯ** :- ಅರ್ಜುನನಾದರೋ ತ್ರಿಗರ್ತರಾಜನಿಂದ ಸಹಿತರಾದ ಆ ಕ್ಷುದ್ರ ರಾಜರೆಲ್ಲರನ್ನು ಒಮ್ಮೆಲೇ ಗೆದ್ದು, ಉತ್ತರ ದಿಕ್ಕನ್ನೂ ಗೆಲ್ಲುತ್ತಾ ಭಗದತ್ತನಲ್ಲಿಗೆ ಬಂದು ಅವನೊಂದಿಗೆ ದೊಡ್ಡ ಯುದ್ಧವು ನಡೆಯಿತು.

**ಸೋಽಭಿಯುಧ್ಯ ಸಗಜೋ ದಿನಾಷ್ಟಕಂ**
**ಶ್ರಾಂತ ಆಹ ಪುರುಹೂತನಂದನಮ್ ।**
**ಬ್ರೂಹಿ ತೇ ಸಮರಕಾರಣಂ ತ್ವಿತಿ**
**ಪ್ರಾಹ ದೇಹಿ ಕರಮಿತ್ಯಥಾರ್ಜುನಃ ॥ ೨೨೫ ॥**

**ಪದಚ್ಛೇದ** :- ಸಃ, ಅಭಿಯುಧ್ಯ, ಸಗಜಃ, ದಿನಾಷ್ಟಕಂ, ಶ್ರಾಂತಃ, ಆಹ, ಪುರುಹೂತನಂದನಂ, ಬ್ರೂಹಿ, ತೇ, ಸಮರಕಾರಣಂ, ತು, ಇತಿ, ಪ್ರಾಹ, ದೇಹಿ, ಕರಂ, ಇತಿ, ಅಥ, ಅರ್ಜುನಃ ।

**ಅರ್ಥ** :- **ಅಥ** = ಅನಂತರ, **ಸಃ** = ಆ ಭಗದತ್ತನು, **ಸಗಜಃ** = ಆನೆಯನ್ನೇರಿ, **ದಿನಾಷ್ಟಕಂ** = ಎಂಟು ದಿನಗಳವರೆಗೆ, **ಅಭಿಯುಧ್ಯ** = ಯುದ್ಧಮಾಡಿ, **ಶ್ರಾಂತಃ ಸನ್** = ಆಯಾಸಗೊಂಡವನಾಗಿ, **ಪುರುಹೂತನಂದನಂ** = ಇಂದ್ರನ ಮಗನಾದ ಅರ್ಜುನನನ್ನು ಕುರಿತು, **ಆಹ** = ಹೇಳಿದನು, **ತೇ** = ನಿನ್ನ, **ಸಮರಕಾರಣಂ ತು** = ಯುದ್ಧ ಕಾರಣವನ್ನಾದರೂ, **ಬ್ರೂಹಿ** = ಹೇಳು, **ಇತಿ** = ಎಂದು, **ಪ್ರಾಹ** = ಹೇಳಿದನು, **ಅರ್ಜುನಃ** = ಅರ್ಜುನನು, **ಕರಂ** = ಕಪ್ಪವನ್ನು, **ದೇಹಿ** = ಕೊಡು, **ಇತಿ** = ಎಂದು, **ಪ್ರಾಹ** = ಹೇಳಿದನು.

**ತಾತ್ಪರ್ಯ** :- ಅನಂತರ ಭಗದತ್ತನು ಸುಪ್ರತೀಕವೆಂಬ ಆನೆಯನ್ನೇರಿ ಎಂಟು ದಿನಗಳ ಕಾಲ ಯುದ್ಧ ಮಾಡಿ ಆಯಾಸಗೊಂಡು ''ನಿನ್ನ ಯುದ್ಧಕ್ಕೆ

ಕಾರಣವೇನು ಹೇಳು'' ಎಂದು ಅರ್ಜುನನನ್ನು ಕೇಳಿದಾಗ ಅರ್ಜುನನು ಕಪ್ಪವನ್ನು ಕೊಂಡು ಎಂದನು.

**ಸೋऽಪ್ಯದಾತ್ ಕರಮಮುಷ್ಯ ವಾಸವೋ ಮದ್ಗುರುಸ್ತವ ಪಿತೇತಿ ಸಾದರಮ್ ।**
**ನೈವ ಜೇತುಮಿಹ ಶಕ್ಷ್ಯಸಿ ತ್ವಮಿತ್ಯಾವದದ್ಧರಿವರಾಸ್ತ್ರತೇಜಸಾ ।। ೨೨೬ ।।**

**ಪದಚ್ಛೇದ :- ಸಃ, ಅಪಿ, ಅದಾತ್, ಕರಂ, ಅಮುಷ್ಯ, ವಾಸವಃ, ಮದ್ಗುರುಃ, ತವ, ಪಿತಾ, ಇತಿ, ಸಾದರಂ, ನ, ಏವ, ಜೇತುಂ, ಇಹ, ಶಕ್ಷ್ಯಸಿ, ತ್ವಂ, ಇತಿ, ಅವದತ್, ಹರಿವರಾಸ್ತ್ರತೇಜಸಾ ।**

**ಅರ್ಥ :- ಸಃ ಅಪಿ** = ಆ ಭಗದತ್ತನಾದರೂ, **ತವ** = ನಿನ್ನ, **ಪಿತಾ** = ತಂದೆಯಾದ, **ವಾಸವಃ** = ಇಂದ್ರನು, **ಮದ್ಗುರುಃ** = ನನಗೆ ಗುರುವು, **ಇತಿ** = ಎಂದು, **ಸಾದರಂ** = ಆದರದಿಂದ, **ಕರಂ** = ಕಪ್ಪವನ್ನು, **ಅದಾತ್** = ಕೊಟ್ಟನು, **ಇಹ** = ನನ್ನಲ್ಲಿರುವ, **ಹರಿಮಾಸ್ತ್ರತೇಜಸಾ** = ವೈಷ್ಣವಾಸ್ತ್ರದ ತೇಜಸ್ಸಿನಿಂದ, **ತ್ವಂ** = ನೀನು (**ಮಾಂ** = ನನ್ನನ್ನು), **ಜೇತುಂ** = ಗೆಲ್ಲಲು, **ನೈವ ಶಕ್ಷ್ಯಸಿ** = ಸಮರ್ಥನಾಗುವುದಿಲ್ಲ, **ಇತಿ** = ಎಂದು, **ಅವದತ್** = ಹೇಳಿದನು.

ತಾತ್ಪರ್ಯ :- ಭಗದತ್ತನು ಅರ್ಜುನನಿಗೆ ''ನಿನ್ನ ತಂದೆಯಾದ ಇಂದ್ರನು ನನಗೆ ಗುರು'' ಎಂದು ಹೇಳಿ ಆದರಪೂರ್ವಕವಾಗಿ ಕಪ್ಪವನ್ನು ಕೊಟ್ಟನು. ಆದರೆ ವೈಷ್ಣವಾಸ್ತ್ರದ ಬಲದಿಂದ ನನ್ನನ್ನು ಗೆಲ್ಲಲಾರೆ ಎಂದು ಹೇಳಿದನು.

**ಸ್ನೇಹಪೂರ್ವಂ ಪ್ರದತ್ತೇತು ಕರೇ ನೈವಾऽಹ ಚೋತ್ತರಮ್ ।**
**ಅರ್ಜುನೋ ವ್ಯರ್ಥಕಲಹಮನಿಚ್ಛನ್ ಸ್ನೇಹಯಂತ್ರಿತಃ ।। ೨೨೭ ।।**

**ಪದಚ್ಛೇದ :- ಸ್ನೇಹಪೂರ್ವಂ, ಪ್ರದತ್ತೇ, ತು, ಕರೇ, ನ, ಏವ, ಆಹ, ಚ, ಉತ್ತರಂ, ಅರ್ಜುನಃ, ವ್ಯರ್ಥಕಲಹಂ, ಅನಿಚ್ಛನ್, ಸ್ನೇಹಯಂತ್ರಿತಃ ।**

**ಅರ್ಥ :- ಸ್ನೇಹಪೂರ್ವಂ** = ಸ್ನೇಹಪೂರ್ವಕವಾಗಿ, **ಕರೇ** = ಕಪ್ಪವು, **ಪ್ರದತ್ತೇತು** = ಕೊಡಲ್ಪಡುತ್ತಿರಲು, **ಅರ್ಜುನಃ** = ಅರ್ಜುನನು, **ನೈವ ಆಹ** = ಏನೂ ಹೇಳಲಿಲ್ಲ, **ಚ** = ಮತ್ತು, **ಸ್ನೇಹಯಂತ್ರಿತಃ** = ಸ್ನೇಹಬದ್ಧನಾಗಿ, **ವ್ಯರ್ಥಕಲಹಂ** = ವೃಥಾಕಲಹವನ್ನು, **ಅನಿಚ್ಛನ್** = ಬಯಸದೆ (ಸುಮ್ಮನಾದ).

ತಾತ್ಪರ್ಯ :- ಸ್ನೇಹದಿಂದ ಭಗದತ್ತನು ಕಪ್ಪವನ್ನು ಕೊಟ್ಟನಂತರ, ತಂದೆಯ ಶಿಷ್ಯನಾದವನು ನನಗೂ ಶಿಷ್ಯನೆಂದು ಭಾವಿಸಿ ತನ್ನ ಅಪಕರ್ಷವನ್ನು ಕೇಳಿಯೂ ಸ್ನೇಹಕ್ಕೆ ಕಟ್ಟುಬಿದ್ದು ಕಪ್ಪ ಬಂದ ಮೇಲೆ ವ್ಯರ್ಥ ಕಲಹ ಬೇಡವೆಂದು ಸುಮ್ಮನಾದ.

**ಪಾರ್ಥೋ ಜಿತ್ವಾಽಷ್ಟವರ್ಷಾಣಿ ಷಡ್ ದ್ವೀಪಾನಪರಾನಪಿ ।**
**ಅಜಯಚ್ಚತುರ್ದಿಶಮಪಿ ಸರ್ವಶಸ್ತ್ರಾಸ್ತ್ರತೇಜಸಾ ॥ ೨೨೮ ॥**

**ಪದಚ್ಛೇದ :- ಪಾರ್ಥಃ, ಜಿತ್ವಾ, ಅಷ್ಟವರ್ಷಾಣಿ, ಷಟ್‌ದ್ವೀಪಾನ್, ಅಪರಾನ್, ಅಪಿ, ಅಜಯತ್, ಚತುರ್ದಿಶಂ, ಅಪಿ, ಸರ್ವಶಸ್ತ್ರಾಸ್ತ್ರತೇಜಸಾ ।**

**ಅರ್ಥ** :- **ಪಾರ್ಥಃ** = ಅರ್ಜುನನು, **ಅಷ್ಟವರ್ಷಾಣಿ** = ಎಂಟು ವರ್ಷಗಳನ್ನೂ, **ಅಪರಾನ್** = ಜಂಬೂದ್ವೀಪಾತಿರಿಕ್ತವಾದ, **ಷಟ್‌ದ್ವೀಪಾನ್ ಅಪಿ** = ಆರು ದ್ವೀಪಗಳನ್ನೂ, **ಜಿತ್ವಾ** = ಗೆದ್ದು, **ಸರ್ವಶಸ್ತ್ರಾಸ್ತ್ರತೇಜಸಾ** = ಎಲ್ಲಾ ಶಸ್ತ್ರಾಸ್ತ್ರಗಳ ಪ್ರಭಾವದಿಂದ, **ಚತುರ್ದಿಶಮಪಿ** = ನಾಲ್ಕು ದಿಕ್ಕನ್ನೂ, **ಅಜಯತ್** = ಗೆದ್ದನು.

ತಾತ್ಪರ್ಯ :- ನಾವಿರುವ ಈ ಜಂಬೂದ್ವೀಪದಲ್ಲಿ ಭಾರತವರ್ಷದಂತೆ ಇನ್ನೂ ಕಿಂಪುರಷ, ಹರಿವರ್ಷ, ಇಲಾವೃತ, ಭದ್ರಾಶ್ವ, ಕೇತುಮಾಲ, ಹಿರಣ್ಮಯ, ರಮ್ಯಕ, ಕುರು ಎಂಬ ಎಂಟು ದ್ವೀಪಗಳಿವೆ. ಇವೆಲ್ಲವನ್ನೂ ಜೊತೆಗೆ ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪುಷ್ಕರವೆಂಬ ಆರು ದ್ವೀಪಗಳನ್ನೂ ವಶಪಡಿಸಿಕೊಂಡು ಹಾಗೂ ಪೂರ್ವಾದಿ ನಾಲ್ಕು ದಿಕ್ಕುಗಳನ್ನೂ ಗೆದ್ದನು.

**ಪಾತಾಳಸಪ್ತಕಂ ಗತ್ವಾ ಜಿತ್ವಾ ದೈತೇಯದಾನವಾನ್ ।**
**ಬಲೇಶ್ಚ ವಿಷ್ಣುವಚನಾತ್ ಕರಂ ಜಗ್ರಾಹ ಸಾಮತಃ ॥ ೨೨೯ ॥**

**ಪದಚ್ಛೇದ :- ಪಾತಾಲಸಪ್ತಕಂ, ಗತ್ವಾ, ಜಿತ್ವಾ, ದೈತೇಯದಾನವಾನ್, ಬಲೇಃ, ಚ, ವಿಷ್ಣುವಚನಾತ್, ಕರಂ, ಜಗ್ರಾಹ, ಸಾಮತಃ ।**

**ಅರ್ಥ** :- (**ಅರ್ಜುನಃ** = ಅರ್ಜುನು), **ಪಾತಾಲಸಪ್ತಕಂ** = ಏಳು ಪಾತಾಳಗಳನ್ನು ಕುರಿತು, **ಗತ್ವಾ** = ಹೋಗಿ, (**ತತ್ರ** = ಅಲ್ಲಿ), **ದೈತೇಯ ದಾನವಾನ್** = ದೈತ್ಯದಾನವರನ್ನು, **ಜಿತ್ವಾ** = ಗೆದ್ದು, **ವಿಷ್ಣುವಚನಾತ್** = ಹರಿಯ

ಆಜ್ಞೆಯಂತೆ, ಬಲೇಶ್ಚ = ಬಲಿಚಕ್ರವರ್ತಿಯಿಂದಲಾದರೂ, ಸಾಮತಃ = ಪ್ರೀತಿಯಿಂದಲೇ, ಕರಂ = ಕಪ್ಪವನ್ನು, ಜಗ್ರಾಹ = ಪಡೆದನು.

ತಾತ್ಪರ್ಯ :- ಅರ್ಜುನನು ಪಾತಾಲಾದಿ ಲೋಕದಲ್ಲಿರುವ ಎಲ್ಲಾ ದೈತ್ಯರು ದಾನವರೆಲ್ಲರನ್ನೂ ಗೆದ್ದು, ಅಲ್ಲೇ ಇದ್ದ ಬಲಿಯ ಬಳಿಯಿಂದ ಭಗವಂತನ ಆದೇಶದಂತೆ ಪ್ರೀತಿಯಿಂದ ಕಪ್ಪವನ್ನು ತೆಗೆದುಕೊಂಡನು.

**ಜಿತ್ವಾ ಚ ವಾಸುಕಿಂ ಭೂರಿ ರತ್ನಮಾದಾಯ ಸತ್ವರಃ ।**
**ಆಜಗಾಮ ಪುರಂ ಸ್ವೀಯಂ ವೀರೋ ವತ್ಸರಮಾತ್ರತಃ ॥ ೨೩೦ ॥**

ಪದಚ್ಛೇದ :- ಜಿತ್ವಾ, ಚ, ವಾಸುಕಿಂ, ಭೂರಿರತ್ನಂ, ಆದಾಯ, ಸತ್ವರಃ, ಆಜಗಾಮ, ಪುರಂ ಸ್ವೀಯಂ, ವೀರಃ, ವತ್ಸರಮಾತ್ರತಃ ।

ಅರ್ಥ :- ವಾಸುಕಿಂ = ವಾಸುಕಿಯನ್ನು, ಜಿತ್ವಾ = ಗೆದ್ದು, ಚ = ಮತ್ತು, ಭೂರಿರತ್ನಂ = ಬಹಳ ರತ್ನವನ್ನು, ಆದಾಯ = ತೆಗೆದುಕೊಂಡು, ಸತ್ವರಃ = ಕೂಡಲೇ, ವೀರಃ = ಪರಾಕ್ರಮಿಯಾದ ಅರ್ಜುನನು, ವತ್ಸರಮಾತ್ರತಃ = ಒಂದೇ ವರ್ಷದಲ್ಲಿ, ಸ್ವೀಯಂ = ತನ್ನ, ಪುರಂ = ಪಟ್ಟಣವನ್ನು ಕುರಿತು, ಆಜಗಾಮ = ಬಂದನು.

ತಾತ್ಪರ್ಯ :- ಪಾತಾಳಾದಿ ಲೋಕಗಳಲ್ಲಿಯೇ ಇದ್ದ ವಾಸುಕಿಯನ್ನೂ ಗೆದ್ದು ಎಲ್ಲೆಡೆಯಿಂದಲೂ ಹೊಂದಿದ ಬಹಳವಾದ ರತ್ನರಾಶಿಯನ್ನು ತೆಗೆದುಕೊಂಡು ಒಂದೇ ವರ್ಷದಲ್ಲಿ ತನ್ನ ನಗರಕ್ಕೆ ಹಿಂತಿರುಗಿದನು.

**ಸುವರ್ಣರತ್ನಗಿರಯಶ್ಚತುರ್ಭಿಸ್ತೈಃ ಸಮಾರ್ಜಿತಾಃ ।**
**ಚತ್ವಾರೋ ಯೋಜನಾನಾಂ ಹಿ ದಶ ತ್ರಿಂಶಚ್ಛತಂ ತಥಾ ॥ ೨೩೧ ॥**

**ಚತುಃಶತಂ ಚ ಕ್ರಮಶ ಉಚ್ಛ್ರಿತಾ ದಿಗ್ಜಯಾರ್ಜಿತಾಃ ।**
**ಪ್ರತೀಚ್ಯಾದ್ಯಪಸವ್ಯೇನ ಕ್ರಮಾದ್ ದಿಗ್ಭ್ಯಃ ಸಮಾರ್ಜಿತಾಃ ॥ ೨೩೨ ॥**

ಪದಚ್ಛೇದ :- ಸುವರ್ಣರತ್ನಗಿರಯಃ, ಚತುರ್ಭಿಃ, ತೈಃ, ಸಮಾರ್ಜಿತಾಃ, ಚತ್ವಾರಃ, ಯೋಜನಾನಾಂ, ಹಿ, ದಶತ್ರಿಂಶಚ್ಛತಂ, ತಥಾ, ಚತುಃಶತಂ, ಚ, ಕ್ರಮಶಃ, ಉಚ್ಛ್ರಿತಾಃ, ದಿಗ್ಜಯಾರ್ಜಿತಾಃ, ಪ್ರತೀಚ್ಯಾದ್ಯಪಸವ್ಯೇನ, ಕ್ರಮಾತ್, ದಿಗ್ಭ್ಯಃ, ಸಮಾರ್ಜಿತಾಃ ।

**ಅರ್ಥ** :- **ತೈಃ** = ಆ, **ಚತುರ್ಭಿಃ** = ನಾಲ್ವರಿಂದ, (**ಯೇ** = ಯಾವ), **ಚತ್ವಾರಃ** = ನಾಲ್ಕು, **ಸುವರ್ಣರತ್ನಗಿರಯಃ** = ಬಂಗಾರದ ರತ್ನಗಳ ಪರ್ವತಗಳು, **ಸಮಾರ್ಜಿತಾಃ (ಆಸನ್)** = ಸಂಪಾದಿಸಲ್ಪಟ್ಟವೋ, (**ತೇ** = ಆ), **ದಿಗ್ವಿಜಯಾರ್ಜಿತಾಃ** = ದಿಗ್ವಿಜಯದಲ್ಲಿ ಸಂಪಾದಿಸಿದ, **ಪ್ರತೀಚ್ಯಾದಿ** = ಪಶ್ಚಿಮದಿಂದ ಆರಂಭಿಸಿ, **ಅಪಸವ್ಯೇನ** = ಅಪ್ರದಕ್ಷಿಣದ, **ಕ್ರಮಾತ್** = ಕ್ರಮದಿಂದ, **ಸಮಾರ್ಜಿತಾಃ** = ಸಂಪಾದಿಸಲ್ಪಟ್ಟವುಗಳು, **ಕ್ರಮಶಃ** = ಕ್ರಮವಾಗಿ, **ದಶತ್ರಿಂಶಚ್ಛತಂ** = ಹತ್ತು ಮೂವತ್ತು ನೂರು, **ತಥಾ** = ಹಾಗೆಯೇ, **ಚತುಶ್ಶತಂ** = ನಾನ್ನೂರು, **ಯೋಜನಾನಾಂ** = ಯೋಜನಗಳವರೆಗೆ, **ಉಚ್ಛ್ರಿತಾಃ** = ವಿಸ್ತೃತಗೊಂಡಿದ್ದವು, **ಹಿ** = ಅದು ಪ್ರಸಿದ್ಧವು.

**ತಾತ್ಪರ್ಯ** :- ನಕುಲಸಹದೇವ ಭೀಮಾರ್ಜುನರು ಬಂಗಾರ ರತ್ನಗಳ ನಾಲ್ಕು ಬೆಟ್ಟಗಳನ್ನೇ ಸಂಪಾದಿಸಿದರು. ಪಶ್ಚಿಮದಿಂದ ಅಪ್ರದಕ್ಷಿಣವಾಗಿ ಅವರಿಂದ ಸಂಪಾದಿಸಿದ ಅವುಗಳ ಪ್ರಮಾಣವು ಕ್ರಮವಾಗಿ ಹತ್ತು ಮೂವತ್ತು ನೂರು ಹಾಗು ನಾನ್ನೂರು ಯೋಜನಗಳಷ್ಟು ವಿಸ್ತಾರಗೊಂಡಿದ್ದವು.

**ವಿಶ್ವಕರ್ಮಕೃತತ್ವಾತ್ತು ಪುರಸ್ಯಾಲ್ಪೇಽಪಿ ಚ ಸ್ಥಲೇ ।**
**ಅಂತರ್ಗತಾಸ್ತೇ ಗಿರಯಸ್ತದದ್ಭುತಮಿವಾಭವತ್ ॥ ೨೩೩ ॥**

**ಪದಚ್ಛೇದ** :- **ವಿಶ್ವಕರ್ಮ, ಕೃತತ್ವಾತ್, ತು, ಪುರಸ್ಯ, ಅಲ್ಪೇ, ಅಪಿ, ಚ, ಸ್ಥಲೇ, ಅಂತರ್ಗತಾಃ, ತೇ, ಗಿರಯಃ, ತತ್, ಅದ್ಭುತಂ, ಇವ, ಅಭೂತ್ ।**

**ಅರ್ಥ** :- **ಪುರಸ್ಯ** = ನಗರದ, **ಸ್ಥಲೇ ಚ** = ಸ್ಥಳಾವಕಾಶವಾದರೂ, **ಅಲ್ಪೇ ಅಪಿ** = ಕಡಿಮೆಯಾದರೂ, **ವಿಶ್ವಕರ್ಮಕೃತತ್ವಾತ್** = ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟಿದ್ದರಿಂದ, **ತೇ** = ಆ ಎಲ್ಲಾ, **ಗಿರಯಃ** = ರತ್ನಪರ್ವತಗಳು, **ಅಂತರ್ಗತಾಃ** = ಒಳಗೆ ಸೇರಿಕೊಂಡವು, **ತತ್** = ಆ ಸೇರುವಿಕೆಯು, **ಅದ್ಭುತಂ ಇವ** = ಆಶ್ಚರ್ಯದಂತೆ, **ಅಭವತ್** = ಆಯಿತು.

**ತಾತ್ಪರ್ಯ** :- ನಕುಲಾದಿಗಳಿಂದ ಕ್ರಮವಾಗಿ ಸಂಪಾದಿಸಲ್ಪಟ್ಟ ವಿಸ್ತಾರವಾದ ಆ ರತ್ನಪರ್ವತಗಳು ಇಂದ್ರಪ್ರಸ್ಥನಗರವು ಅತ್ಯಂತ ಚಿಕ್ಕದಾಗಿದ್ದರೂ ದೇವಶಿಲ್ಪಿಯಾದ ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟಿದ್ದರಿಂದ ಆ

ಪರ್ವತಗಳೆಲ್ಲವೂ ಅದರೊಳಗೆ ಸೇರಿಕೊಂಡಿತು. ಇದು ನೋಡುಗರಿಗೆ ಬಹಳ ಅದ್ಭುತವೆನಿಸಿತ್ತು.

### ರಾಜಸೂಯಯಾಗ

**ತತೋ ಯಜ್ಞಃ ಪ್ರವವೃತೇ ಕೃಷ್ಣದ್ವೈಪಾಯನೇರಿತಃ ।**
**ಋತ್ವಿಜೋ ಮುನಯೋಽತ್ರಾಽಸನ್ ಸರ್ವವಿದ್ಯಾಸು ನಿಷ್ಠಿತಾಃ ॥ ೨೩೪ ॥**

ಪದಚ್ಛೇದ :- ತತಃ, ಯಜ್ಞಃ, ಪ್ರವವೃತೇ, ಕೃಷ್ಣದ್ವೈಪಾಯನೇರಿತಃ, ಋತ್ವಿಜಃ, ಮುನಯಃ, ಅತ್ರ, ಆಸನ್, ಸರ್ವವಿದ್ಯಾಸು, ನಿಷ್ಠಿತಾಃ ।

**ಅರ್ಥ** :- **ತತಃ** = ದಿಗ್ವಿಜಯದ ಅನಂತರ, **ಯಜ್ಞಃ** = ರಾಜಸೂಯ ಯಾಗವು, **ಕೃಷ್ಣದ್ವೈಪಾಯನೇರಿತಃ** = ವೇದವ್ಯಾಸರ ನೇತೃತ್ವದಲ್ಲಿ, **ಪ್ರವವೃತೇ** = ಪ್ರಾರಂಭವಾಯಿತು, **ಸರ್ವವಿದ್ಯಾಸು** = ಎಲ್ಲಾ ವಿದ್ಯೆಗಳಲ್ಲಿ, **ನಿಷ್ಠಿತಾಃ** = ಪರಿಣಿತರಾದ, **ಮುನಯಃ** = ಮುನಿಗಳು, **ಅತ್ರ** = ಈ ಯಾಗದಲ್ಲಿ, **ಋತ್ವಿಜಃ** = ಋತ್ವಿಕ್ಕುಗಳಾಗಿ, **ಆಸನ್** = ಆದರು.

ತಾತ್ಪರ್ಯ :- ನಾಲ್ವರಿಂದಲೂ ದಿಗ್ವಿಜಯ ಮುಗಿದ ನಂತರ ವೇದವ್ಯಾಸರಿಂದ ಸೂಚಿಸಲ್ಪಟ್ಟಂತೆ ರಾಜಸೂಯ ಯಾಗವು ಆರಂಭವಾಯಿತು. ಆ ಯಾಗದಲ್ಲಿ ಯಾಜ್ಞವಲ್ಕ್ಯ, ಪೈಲ, ಧೌಮ್ಯ, ಸುಸಾಮ ಎಂಬ ಇವರೇ ಮೊದಲಾದ ಎಲ್ಲಾ ವಿದ್ಯೆಗಳಲ್ಲಿ ಪಾರಂಗತರಾದ ಹದಿನೇಳು ಮಂದಿ ಮುನಿಗಳು ಋತ್ವಿಜರಾದರು.

**ದ್ವೈಪಾಯನೋಕ್ತವಿಧಿನಾ ದೀಕ್ಷಯಾಂಚಕ್ರಿರೇ ನೃಪಮ್ ।**
**ಜ್ಯೇಷ್ಠತ್ವಾದ್ ಯಾಜಮಾನ್ಯಂ ತು ಪ್ರಣಿಧಾಯ ಯುಧಿಷ್ಠಿರೇ ।**
**ಭೀಮಾರ್ಜುನಾದಯಃ ಸರ್ವೇ ಸಹ ತೇನ ಸಮಾಸಿರೇ ॥ ೨೩೫ ॥**

ಪದಚ್ಛೇದ :- ದ್ವೈಪಾಯನೋಕ್ತವಿಧಿನಾ, ದೀಕ್ಷಿತಂ, ಚಕ್ರಿರೇ, ನೃಪಂ, ಜ್ಯೇಷ್ಠತ್ವಾತ್, ಯಾಜಮಾನ್ಯಂ, ತು, ಪ್ರಣಿಧಾಯ, ಯುಧಿಷ್ಠಿರೇ, ಭೀಮಾರ್ಜುನಾದಯಃ, ಸರ್ವೇ, ಸಹ, ತೇನ, ಸಮಾಸಿರೇ ।

**ಅರ್ಥ** :- **ದ್ವೈಪಾಯನೋಕ್ತವಿಧಿನಾ** = ವೇದವ್ಯಾಸರು ಹೇಳಿದಂತೆ, **ನೃಪಂ** = ರಾಜನಾದ ಯುಧಿಷ್ಠಿರನನ್ನು, **ದೀಕ್ಷಿತಂ** = ಯಜ್ಞದೀಕ್ಷಿತನನ್ನಾಗಿ,

**ಚಕ್ರೇ** = ಮಾಡಿದರು, **ಭೀಮಾರ್ಜುನಾದಯಃ** = ಭೀಮಾರ್ಜುನನೇ ಮೊದಲಾದ, **ಸರ್ವೇ** = ಎಲ್ಲರೂ, **ಜ್ಯೇಷ್ಠತ್ವಾತ್ ತು** = ಹಿರಿಯನಾದ್ದರಿಂದ, **ಯಜಮಾನ್ಯಂ** = ಯಜಮಾನತ್ವವನ್ನು, **ಯುಧಿಷ್ಠಿರೇ** = ಧರ್ಮರಾಜನಲ್ಲಿ, **ಪ್ರಣಿಧಾಯ** = ಇರಿಸಿ, **ತೇನ ಸಹ** = ಅವನೊಂದಿಗೆ, **ಸಮಾಸಿರೇ** = ಕುಳಿತರು.

**ತಾತ್ಪರ್ಯ** :- ಪೈಲ ಧೌಮ್ಯ ಇವರೇ ಮೊದಲಾದ ಋತ್ವಿಜರು ವೇದವ್ಯಾಸರ ಆದೇಶದಂತೆ ಧರ್ಮರಾಜನನ್ನು ಯಜ್ಞದಲ್ಲಿ ದೀಕ್ಷಿತನನ್ನಾಗಿ ಮಾಡಿದರು. ಅದರಂತೆ ಭೀಮಾರ್ಜುನಾದಿಗಳೆಲ್ಲರೂ ಹಿರಿಯನಾದ ಪ್ರಯುಕ್ತ ಧರ್ಮರಾಜನನ್ನೇ ಯಜಮಾನನ್ನಾಗಿ ಮಾಡಿ ಅವನ ಜೊತೆ ಕುಳಿತರು.

**ಬ್ರಹ್ಮಾಣೀಪದಯೋಗ್ಯತ್ವಾತ್ ಕೃಷ್ಣೈಕಾ ಯಜ್ಞಪತ್ನ್ಯಭೂತ್ ॥ ೨೩೬ ॥**

**ಪದಚ್ಛೇದ** :- ಬ್ರಹ್ಮಾಣೀಪದಯೋಗ್ಯತ್ವಾತ್, ಕೃಷ್ಣಾ, ಏಕಾ, ಯಜ್ಞಪತ್ನೀ, ಅಭೂತ್ ।

**ಅರ್ಥ** :- **ಬ್ರಹ್ಮಾಣೀಪದಯೋಗ್ಯತ್ವಾತ್** = ಸರಸ್ವತೀ ಪದವಿಗೆ ಯೋಗ್ಯಳಾದ್ದರಿಂದ, **ಕೃಷ್ಣಾ ಏಕಾ** = ದ್ರೌಪದಿಯೊಬ್ಬಳೇ, **ಯಜ್ಞಪತ್ನೀ** = ಯಜಮಾನನ (ಪತ್ನಿ = ಹೆಂಡತಿಯಾಗಿ), **ಅಭೂತ್** = ಆದಳು.

**ತಾತ್ಪರ್ಯ** :- ಬ್ರಹ್ಮನ ಹೆಂಡತಿಯಾದ ಸರಸ್ವತೀ ಪದವಿಗೆ ಹೋಗಲು ದ್ರೌಪದಿ ಯೋಗ್ಯಳಾದ್ದರಿಂದ ಅವಳು ಮಾತ್ರ ಯಜಮಾನನ ಪತ್ನಿಯಾಗಿ ಯಾಗದಲ್ಲಿ ಆಸೀನಳಾದಳು.

**ಪದಾಯೋಗ್ಯತಯಾ ನಾನ್ಯಾಃ ಪತ್ನ್ಯಸ್ತೇಷಾಂ ಸಹಾऽಸಿರೇ ।**
**ಆಜ್ಞಯೈವ ಜಗದ್ಧಾತುರ್ವ್ಯಾಸಸ್ಯಾನಂತತೇಜಸಃ ॥ ೨೩೭ ॥**

**ಪದಚ್ಛೇದ :- ಪದಾಯೋಗ್ಯತಯಾ, ನ, ಅನ್ಯಾಃ, ಪತ್ನ್ಯಃ, ತೇಷಾಂ, ಸಹ, ಆಸಿರೇ, ಆಜ್ಞಯಾ, ಏವ, ಜಗದ್ಧಾತುಃ, ವ್ಯಾಸಸ್ಯ, ಅನಂತತೇಜಸಃ ।**

**ಅರ್ಥ** :- **ಪದಾಯೋಗ್ಯತಯಾ** = ಸರಸ್ವತೀ ಪದ ಅಯೋಗ್ಯರಾದ್ದರಿಂದ, **ಅನ್ಯಾಃ** = ಬೇರೆ, **ಪತ್ನ್ಯಃ** = ಹೆಂಡತಿಯರು, **ಅನಂತತೇಜಸಃ** = ಅಮಿತಕಾಂತಿಯುಳ್ಳ, **ಜಗದ್ಧಾತುಃ** = ಲೋಕವನ್ನು ಧರಿಸಿದ, **ವ್ಯಾಸಸ್ಯ** =

ವೇದವ್ಯಾಸರ, **ಆಜ್ಞಯಾ ಏವ** = ಆದೇಶದಿಂದಲೇ, **ತೇಷಾಂ** = ಆ ಪಾಂಡವರ, **ಸಹ** = ಜೊತೆಯಲ್ಲಿ, **ಆಸಿರೇ** = ಕುಳಿತುಕೊಂಡರು.

ತಾತ್ಪರ್ಯ :- ಪಾಂಡವರ ಉಳಿದ ಪತ್ನಿಯರು ಸರಸ್ವತೀ ಪದವಿಗೆ ಅಯೋಗ್ಯರಾದ್ದರಿಂದ ಅವರಾರೂ ಕೂಡ ಅನಂತಶಕ್ತಿಯುಳ್ಳ ಜಗತ್ತನ್ನು ಧರಿಸಿದ ವೇದವ್ಯಾಸರ ಅಪ್ಪಣೆಯಂತೆ ಯಜಮಾನನ ಹೆಂಡತಿಯರಾಗಿ ಪಾಂಡವರ ಜೊತೆ ಯಾಗದಲ್ಲಿ ಆಸೀನರಾಗಲಿಲ್ಲ.

**ಸ್ಥಲಮಪ್ಯತ್ರ ಸರ್ವಂ ಹಿ ರತ್ನಹೇಮಮಯಂ ತ್ವಭೂತ್ ।**
**ಕಿಮು ಪಾತ್ರಾದಿಕಂ ಸರ್ವಂ ಶಿಬಿರಾಣಿ ಚ ಸರ್ವಶಃ ।। ೨೩೮ ।।**

ಪದಚ್ಛೇದ :- ಸ್ಥಲಂ, ಅಪಿ, ಅತ್ರ, ಸರ್ವಂ, ಹಿ, ರತ್ನಹೇಮಮಯಂ, ತು, ಅಭೂತ್, ಕಿಮು, ಪಾತ್ರಾದಿಕಂ, ಸರ್ವಂ, ಶಿಬಿರಾಣಿ, ಚ, ಸರ್ವಶಃ ।

ಅರ್ಥ :- **ಅತ್ರ** = ಈ ಯಾಗಶಾಲೆಯಲ್ಲಿ, **ಸ್ಥಲಮಪಿ** = ಎಲ್ಲಾ ಸ್ಥಳಗಳು, **ಸರ್ವಂ ತು** = ಆಸನ ಮೊದಲಾದವುಗಳೂ, **ರತ್ನಹೇಮಮಯಂ** = ಬಂಗಾರ ರತ್ನಮಯವಾಗಿ, **ಅಭೂತ್** = ಆಗಿತ್ತು, **ಸರ್ವಂ** = ಎಲ್ಲಾ, **ಪಾತ್ರಾದಿಕಂ** = ಯಜ್ಞಪಾತ್ರೆ ಮೊದಲಾದವು, **ಚ** = ಮತ್ತು, **ಸರ್ವಶಃ** = ಎಲ್ಲಾ, **ಶಿಬಿರಾಣಿ** = ಯಜ್ಞಶಾಲೆ, ಅಶ್ವ ಶಾಲೆಗಳು, **ಕಿಮು** = ರತ್ನಮಯವೆಂದು ಹೇಳಬೇಕೆನು?

ತಾತ್ಪರ್ಯ :- ಧರ್ಮರಾಜನ ಈ ಯಾಗಶಾಲೆಯಲ್ಲಿ ಎಲ್ಲಾ ಸ್ಥಳಗಳೂ ಬಂಗಾರ ರತ್ನಮಯಗಳಾಗಿದ್ದವು ಎಂದ ಮೇಲೆ ಯಜ್ಞಪಾತ್ರೆಗಳು ಅಶ್ವಶಾಲೆ ಶಿಬಿರಗಳೆಲ್ಲವೂ ಹೇಮರತ್ನಮಯವೆಂದು ಬೇರೆ ಹೇಳಬೇಕೇನು? ಎಲ್ಲವೂ ಬಂಗಾರಮಯವೆಂದು ಭಾವ.

**ಆಹೂತಂ ದಿಗ್ಜಯೇ ಪಾರ್ಥೈಸ್ತದಾ ಲೋಕದ್ವಿಸಪ್ತಕಮ್ ।**
**ಸರ್ವಮತ್ರಾऽಗಮದ್ ಬ್ರಹ್ಮಶರ್ವಶಕ್ರಾದಿಪೂರ್ವಕಮ್ ।। ೨೩೯ ।।**

ಪದಚ್ಛೇದ :- ಆಹೂತಂ, ದಿಗ್ಜಯೇ, ಪಾರ್ಥೈಃ, ತದಾ, ಲೋಕದ್ವಿಸಪ್ತಕಂ, ಸರ್ವಂ, ಅತ್ರ, ಅಗಮತ್, ಬ್ರಹಶಕ್ರಾದಿಪೂರ್ವಕಂ ।

**ಅರ್ಥ** :- **ಪಾರ್ಥೈಃ** = ಭೀಮಾದಿಗಳಿಂದ, **ದಿಗ್ಜಯೇ** = ದಿಗ್ವಿಜಯ ಕಾಲದಲ್ಲಿ, **ಲೋಕದ್ವಿಸಪ್ತಕಂ** = ಹದಿನಾಲ್ಕು ಲೋಕವು, **ಆಹೂತಂ** = ಕರೆಯಲ್ಪಟ್ಟಿತು, (**ಅತಃ** = ಆದ್ದರಿಂದ), **ತದಾ** = ಯಜ್ಞದ ಸಮಯದಲ್ಲಿ, **ಬ್ರಹ್ಮಶಕ್ರಾದಿ ಪೂರ್ವಕಂ** = ಬ್ರಹ್ಮ ರುದ್ರ ಇಂದ್ರನೇ ಮೊದಲಾದ, **ಸರ್ವಂ** = ಎಲ್ಲರೂ, **ಅತ್ರ** = ಈ ಯಾಗ ಸ್ಥಳವನ್ನು ಕುರಿತು, **ಅಗಮತ್** = ಬಂದರು.

**ತಾತ್ಪರ್ಯ** :- ಭೀಮಾರ್ಜುನಾದಿಗಳು, ಪೂರ್ವಾದಿ ದಿಕ್ಕುಗಳ ದಿಗ್ವಿಜಯ ಸಮಯದಲ್ಲಿ ಪಾತಾಳಾದಿ ಏಳು ಹಾಗೂ ಪೃಥಿವ್ಯಾದಿ ಏಳು ಲೋಕಗಳಲ್ಲಿರುವವರೆಲ್ಲರಿಗೂ ಯಾಗಕ್ಕಾಗಿ ಆಹ್ವಾನಿಸಿದ್ದರು. ಆದ್ದರಿಂದ ಯಾಗ ನಡೆಯುವ ಸಂದರ್ಭದಲ್ಲಿ ಬ್ರಹ್ಮಾದಿ ದೇವತೆಗಳೆಲ್ಲರೂ ಈ ರಾಜಸೂಯಯಾಗಕ್ಕೆ ಆಗಮಿಸಿದರು.

**ಭೀಷ್ಮೋ ದ್ರೋಣಶ್ಚ ವಿದುರೋ ಧೃತರಾಷ್ಟ್ರಃ ಸಹಾತ್ಮಜಃ ।**
**ಸಸ್ತ್ರೀಕಾ ಆಯಯುಸ್ತತ್ರ ಬಾಹ್ಲೀಕಶ್ಚ ಸಹಾತ್ಮಜಃ ॥ ೨೪೦ ॥**

ಪದಚ್ಛೇದ :– **ಭೀಷ್ಮಃ, ದ್ರೋಣಃ, ಚ, ವಿದುರಃ, ಧೃತರಾಷ್ಟ್ರಃ, ಸಹಾತ್ಮಜಃ, ಸಸ್ತ್ರೀಕಾಃ, ಆಯಯುಃ, ತತ್ರ, ಬಾಹ್ಲೀಕಃ, ಚ, ಸಹಾತ್ಮಜಃ ।**

**ಅರ್ಥ** :- **ಭೀಷ್ಮಃ** = ಭೀಷ್ಮಾಚಾರ್ಯರು, **ದ್ರೋಣ** = ದ್ರೋಣಾಚಾರ್ಯರು, **ಚ** = ಮತ್ತು, **ವಿದುರಃ** = ವಿದುರನು, **ಸಹಾತ್ಮಜಃ** = ಮಕ್ಕಳಿಂದ ಕೂಡಿದ, **ಧೃತರಾಷ್ಟ್ರಃ** = ಧೃತರಾಷ್ಟ್ರನು, **ಸಸ್ತ್ರೀಕಾಃ** = ಹೆಂಡತಿಯರು, **ಚ** = ಮತ್ತು, **ಸಹಾತ್ಮಜಃ** = ಮಕ್ಕಳಿಂದ ಕೂಡಿದ, **ಬಾಹ್ಲೀಕಃ** = ಬಾಹ್ಲೀಕ ಮೊದಲಾದವರು, **ತತ್ರ** = ಯಾಗ ಶಾಲೆಗೆ, **ಆಯಯುಃ** = ಬಂದರು.

**ತಾತ್ಪರ್ಯ** :- ಕುರುಕುಲ ಪಿತಾಮಹನೆನಿಸಿದ ಭೀಷ್ಮರು, ಗುರುಗಳಾದ ದ್ರೋಣರು, ಮಕ್ಕಳೊಂದಿಗೆ ಧೃತರಾಷ್ಟ್ರ, ಹೆಂಡಂದಿರು ಹಾಗೂ ಬಾಹ್ಲೀಕ ಅವನ ಮಕ್ಕಳೆಲ್ಲರೂ ಯಾಗಶಾಲೆಗೆ ಬಂದರು.

**ತಥೈವ ಯಾದವಾಃ ಸರ್ವೇ ಬಲಭದ್ರಪುರೋಗಮಾಃ ।**
**ರುಗ್ಮಿಣೀಸತ್ಯಭಾಮಾದ್ಯಾ ಮಹಿಷ್ಯಃ ಕೇಶವಸ್ಯ ಚ ॥ ೨೪೧ ॥**

ಪದಚ್ಛೇದ :- ತಥಾ, ಏವ, ಯಾದವಾಃ, ಸರ್ವೇ, ಬಲಭದ್ರಪುರೋಗಮಾಃ, ರುಕ್ಮಿಣೀಸತ್ಯಭಾಮಾದ್ಯಾಃ, ಮಹಿಷ್ಯಃ, ಕೇಶವಸ್ಯ, ಚ ।

ಅರ್ಥ :- ತಥೈವ = ಹಾಗೆಯೇ, ಬಲಭದ್ರಪುರೋಗಮಾಃ = ಬಲರಾಮನೇ ಮುಂತಾದ, ಸರ್ವೇ = ಎಲ್ಲಾ, ಯಾದವಾಃ = ಯಾದವರೂ, ಚ = ಮತ್ತು, ರುಕ್ಮಿಣೀಸತ್ಯಭಾಮಾದ್ಯಾಃ = ರುಕ್ಮಿಣೀ ಸತ್ಯಭಾಮಾ ಮೊದಲಾದ, ಕೇಶವಸ್ಯ = ಕೃಷ್ಣನ, ಮಹಿಷ್ಯಃ = ಪತ್ನಿಯರು (ಬಂದರು).

ತಾತ್ಪರ್ಯ :- ಬ್ರಹ್ಮಾದಿ ದೇವತೆಗಳು ಮತ್ತು ಭೀಷ್ಮಾದಿಗಳು ಬಂದಂತೆ ಬಲರಾಮನೇ ಮೊದಲಾದ ಎಲ್ಲಾ ಯಾದವರೂ ಹಾಗು ರುಕ್ಮಿಣೀ ಸತ್ಯಭಾಮಾ ಮೊದಲಾದ ಹದಿನಾರು ಸಾವಿರ ನೂರು ಜನ ಕೃಷ್ಣನ ಮಡದಿಯರೆಲ್ಲರೂ ಬಂದರು.

ತತ್ರ ಸರ್ವಜಗದೇಕಸಂಗಮೇ
ತತ್ತ್ವನಿರ್ಣಯಕಥಾ ಬಭೂವಿರೇ ।
ಪ್ರಾಶ್ನಿಕೋಽತ್ರ ಪರಿಪೂರ್ಣಚಿದ್‌ಘನೋ
ವ್ಯಾಸ ಏವ ಭಗವಾನ್ ಬಭೂವ ಹ ॥ ೨೪೨ ॥

ಪದಚ್ಛೇದ :- ತತ್ರ, ಸರ್ವಜಗದೇಕಸಂಗಮೇ, ತತ್ತ್ವನಿರ್ಣಯಕಥಾಃ, ಬಭೂವಿರೇ, ಪ್ರಾಶ್ನಿಕಃ, ಅತ್ರ, ಪರಿಪೂರ್ಣಚಿದ್ಘನಃ, ವ್ಯಾಸಃ, ಏವ, ಭಗವಾನ್, ಬಭೂವ, ಹ ।

ಅರ್ಥ :- ಸರ್ವಜಗದೇಕಸಂಗಮೇ = ಎಲ್ಲಾ ಲೋಕದ ಜನರು ಒಂದೆಡೆ ಸೇರಿದ್ದ, ತತ್ರ = ಆ ಯಾಗ ಶಾಲೆಯಲ್ಲಿ, ತತ್ವನಿರ್ಣಯಕಥಾಃ = ತತ್ವನಿರ್ಣಯಕ್ಕಾಗಿ ವಿಚಾರಗೋಷ್ಠಿಗಳು, ಬಭೂವಿರೇ = ನಡೆದವು, ತತ್ರ = ಆ ವಿವಾದಕಥೆಯಲ್ಲಿ, ಪರಿಪೂರ್ಣಚಿದ್ಘನಃ = ಸಂಪೂರ್ಣ ಜ್ಞಾನ ಸ್ವರೂಪರಾದ, ಭಗವಾನ್ = ಪೂಜ್ಯರಾದ, ವ್ಯಾಸ ಏವ = ವೇದವ್ಯಾಸರೇ, ಪ್ರಾಶ್ನಿಕಃ = ಪ್ರಾಶ್ನಿಕರಾಗಿ, ಬಭೂವ ಹ = ಆದರಷ್ಟೇ.

ತಾತ್ಪರ್ಯ :- ಹದಿನಾಲ್ಕು ಲೋಕದ ಎಲ್ಲಾ ಜನರೂ ಸೇರಿದ ಆ ಯಾಗಶಾಲೆಯಲ್ಲಿ ತತ್ವವಾದಕ್ಕಾಗಿ ವಿಚಾರ ಗೋಷ್ಠಿಗಳು ನಡೆದವು. ಅವುಗಳಲ್ಲಿ ಯಾರು ಗೆದ್ದರು ಯಾರು ಸೋತರು ಎಂದು ತೀರ್ಮಾನಿಸುವ ಪರಿಪೂರ್ಣ ಜ್ಞಾನಸ್ವರೂಪರಾದ ಸಾಕ್ಷಾತ್ ವೇದವ್ಯಾಸರೇ ಪ್ರಾಶ್ನಿಕರಾಗಿದ್ದರು.

**ತತ್ತ್ವನಿರ್ಣಯಕಥಾಸು ನಿರ್ಣಯೋ**
**ವಾಸುದೇವಗುಣವಿಸ್ತರೋಽಭವತ್ ।**
**ನಾಸ್ತಿ ತತ್ಸದೃಶ ಉತ್ತಮಃ ಕುತಃ**
**ಪಾರ ಏಷ ನ ತತೋಽನ್ಯ ಇತ್ಯಪಿ ॥ ೨೪೩ ॥**

**ಪದಚ್ಛೇದ :-** ತತ್ತ್ವನಿರ್ಣಯಕಥಾಸು, ನಿರ್ಣಯಃ, ವಾಸುದೇವಗುಣವಿಸ್ತರಃ, ಅಭವತ್, ನ, ಅಸ್ತಿ, ತತ್ಸದೃಶಃ, ಉತ್ತಮಃ, ಕುತಃ, ಪಾರಃ, ಏಷಃ, ನ, ತತಃ, ಅನ್ಯಃ, ಇತಿ, ಅಪಿ ।

**ಅರ್ಥ :- ತತ್ತ್ವನಿರ್ಣಯಕಥಾಸು** = ತತ್ತ್ವನಿರ್ಣಯಕ್ಕಾಗಿ ನಡೆದ ಆ ವಾದಗಳಲ್ಲಿ, **ವಾಸುದೇವಗುಣವಿಸ್ತರಃ** = ಭಗವಂತನ ಗುಣಪೂರ್ಣತ್ವದ ಬಗ್ಗೆ, **ನಿರ್ಣಯಃ** = ನಿರ್ಣಯವು, **ಅಭವತ್** = ಆಯಿತು, **ತತ್ಸದೃಶಃ** = ಹರಿಗೆ ಸಮಾನನೇ, **ನ ಅಸ್ತಿ** = ಇಲ್ಲ, **ಉತ್ತಮಃ** = ಉತ್ತಮನು, **ಕುತಃ** = ಎಲ್ಲಿ?, **ಏಷಃ** = ಈ ಹರಿಯೇ, **ಪಾರಃ** = ಕೊನೆ, **ತತಃ** = ಅವನಿಗಿಂತ, **ಅನ್ಯಃ** = ಇನ್ನೊಬ್ಬ ಉತ್ತಮನು, **ನ** = ಇಲ್ಲ, **ಇತ್ಯಪಿ** = ಎಂಬುದಾಗಿಯೂ (ತೀರ್ಮಾನವಾಯಿತು).

**ತಾತ್ಪರ್ಯ :-** ಯಾಗಶಾಲೆಯಲ್ಲಿ ನಡೆದ ವಾದಗಳಲ್ಲಿ ಶ್ರೀಹರಿಯ ಗುಣಪೂರ್ಣತ್ವವು ತೀರ್ಮಾನವಾಯಿತು, ಆ ಹರಿಗೆ ಸಮಾನರಾರೂ ಇಲ್ಲವೆಂದ ಮೇಲೆ ಉತ್ತಮರಂತೂ ಎಲ್ಲಿಂದ ಶ್ರೀಹರಿಯೇ ತಾರತಮ್ಯದಲ್ಲಿ ಕೊನೆ ಅವನ ಮೇಲೆ ಯಾರೂ ಇಲ್ಲವೆಂದೂ ನಿರ್ಣಯವಾಯಿತು.

### ಭೀಷ್ಮಾಚಾರ್ಯರನ್ನು ಕೇಳಿದ್ದರ ಸಮರ್ಥನೆ

**ಬಾದರಾಯಣಭೃಗೂತ್ಥರಾಮಯೋಃ**
**ಶೃಣ್ವತೋಃ ಪರಮನಿರ್ಣಯೇ ಕೃತೇ ।**
**ಮೋದಮಾನಜನತಾಸಮಾಗಮೇಽ-**
**ಪೃಚ್ಛದತ್ರ ನೃಪತಿರ್ಯತವ್ರತಮ್ ॥ ೨೪೪ ॥**

**ಪದಚ್ಛೇದ :-** ಬಾದರಾಯಣಭೃಗೂತ್ಥರಾಮಯೋಃ, ಶೃಣ್ವತೋಃ, ಪರಮನಿರ್ಣಯೇ, ಕೃತೇ, ಮೋದಮಾನಜನತಾಸಮಾಗಮೇ, ಅಪೃಚ್ಛತ್, ಅತ್ರ, ನೃಪತಿಃ, ಯತವ್ರತಂ ।

**ಅರ್ಥ** :- **ಬಾದರಾಯಣಭೃಗೂತ್ತಮಯೋಃ** = ವೇದವ್ಯಾಸರು ಮತ್ತು ಪರಶುರಾಮರು, **ಶೃಣ್ವತೋಃ** = ಕೇಳುತ್ತಿರುವಾಗಲೇ, **ಪರಮನಿರ್ಣಯೇ** = ಪರತತ್ತ್ವನಿರ್ಣಯವು, **ಕೃತೇ ಸತಿ** = ಮಾಡುತ್ತಿರಲು, **ಮೋದಮಾನ ಜನತಾಸಮಾಗಮೇ** = **ಮೋದಮಾನ** - ಸಂತುಷ್ಟರಾದ, **ಜನತಾ** - ಜನರ, **ಸಮಾಗಮೇ** - ಗೋಷ್ಠಿಯಲ್ಲಿ, **ನೃಪತಿಃ** = ರಾಜನಾದ ಯುಧಿಷ್ಠಿರನು, **ಯತವತ್ರಂ** = ಭೀಷ್ಮನನ್ನು, **ಅತ್ರ** = ಈ ಯಾಗಶಾಲೆಯಲ್ಲಿ, **ಅಪೃಚ್ಛತ್** = ಕೇಳಿದನು.

**ತಾತ್ಪರ್ಯ** :- ವೇದವ್ಯಾಸರು ಹಾಗೂ ಪರಶುರಾಮರು ಪ್ರಾಶ್ನಿಕರಾಗಿ ಕೇಳಿ ಹರಿಯ ಗುಣಪೂರ್ಣತ್ವವು ನಿರ್ಣಯವಾಗುತ್ತಿರಲು ಸಂತುಷ್ಟರಾದ ಆ ಜನರ ವಿಚಾರ ಗೋಷ್ಠಿಯಲ್ಲಿ ಧರ್ಮರಾಜನು ಯಾಗಶಾಲೆಯಲ್ಲಿ ಭೀಷ್ಮರನ್ನು ಮುಂದೆ ಹೇಳುವಂತೆ ಕೇಳಿದನು.

**ಜಾನಮಾನೋऽಪಿ ನೃಪತಿಃ ಕೃಷ್ಣಂ ಪೂಜ್ಯತಮಂ ಹರಿಮ್ ।**
**ಸಂಶಯಂ ಭೂಭೃತಾಂ ಭೇತ್ತುಂ ಭೀಷ್ಮಂ ಪಪ್ರಚ್ಛ ಧರ್ಮವಿತ್ ॥ ೨೪೫ ॥**

ಪದಚ್ಛೇದ :- **ಜಾನಮಾನಃ, ಅಪಿ, ನೃಪತಿಃ, ಕೃಷ್ಣಂ, ಪೂಜ್ಯತಮಂ, ಹರಿಂ, ಸಂಶಯಂ, ಭೂಭೃತಾಂ, ಭೇತ್ತುಂ, ಭೀಷ್ಮಂ, ಪಪ್ರಚ್ಛ, ಧರ್ಮವಿತ್ ।**

**ಅರ್ಥ** :- **ನೃಪತಿಃ** = ರಾಜನಾದ ಯುಧಿಷ್ಠಿರನು, **ಕೃಷ್ಣಂ** = ಕೃಷ್ಣನನ್ನು, **ಪೂಜ್ಯತಮಂ** = ಅತ್ಯಂತ ಪೂಜ್ಯನಾದ, **ಹರಿಂ** = ಭಗವಂತನೇ ಎಂದು, **ಜಾನಮಾನಃ ಅಪಿ** = ತಿಳಿದವನಾದರೂ, **ಭೂಭೃತಾಂ** = ರಾಜರ, **ಸಂಶಯಂ** = ಸಂಶಯವನ್ನು, **ಭೇತ್ತುಂ** = ಸೀಳಲು, **ಧರ್ಮವಿತ್** = ಯುಧಿಷ್ಠಿರನು, **ಭೀಷ್ಮಂ** = ಭೀಷ್ಮಾಚಾರ್ಯರನ್ನು, **ಪಪ್ರಚ್ಛ** = ಕೇಳಿದನು.

**ತಾತ್ಪರ್ಯ** :- ಎಲ್ಲರಿಂದಲೂ ಶ್ರೀಕೃಷ್ಣನು ಪೂಜ್ಯನೆಂದು ಅವನೇ ಶ್ರೀಹರಿಯೆಂದು ತಿಳಿದಿದ್ದರೂ, ಉಳಿದ ರಾಜರಿಗೆ ಕೃಷ್ಣನು ನಾರಾಯಣನೋ ಅಲ್ಲವೋ ಎಂಬ ಸಂಶಯವನ್ನು ಹೋಗಲಾಡಿಸಲು ಧರ್ಮರಾಜನು ಭೀಷ್ಮಾಚಾರ್ಯರನ್ನು ಕೇಳಿದನು.

**ನಾಸ್ತಿ ನಾರಾಯಣಸಮಮಿತಿ ವಾದೇನ ನಿರ್ಣಯೇ ।**
**ಕೃತೇ ಬ್ರಹ್ಮಾದಿಭಿರಪಿ ಕೃಷ್ಣಂ ಮರ್ತ್ಯಂ ಹಿ ಮೇನಿರೇ ॥ ೨೪೬ ॥**

ಪದಚ್ಛೇದ :- ನ, ಅಸ್ತಿ, ನಾರಾಯಣಸಮಂ, ಇತಿ, ವಾದೇನ, ನಿರ್ಣಯೇ, ಕೃತೇ, ಬ್ರಹ್ಮಾದಿಭಿಃ, ಅಪಿ, ಕೃಷ್ಣಂ, ಮರ್ತ್ಯಂ, ಹಿ, ಮೇನಿರೇ ।

ಅರ್ಥ :- ನಾರಾಯಣಸಮಂ = ನಾರಾಯಣನಿಗೆ ಸಮಾನರಾದವರು, ನಾಸ್ತಿ = ಇಲ್ಲ, ಇತಿ = ಎಂದು, ಬ್ರಹ್ಮಾದಿಭಿಃ = ಚತುರ್ಮುಖ ಬ್ರಹ್ಮನೇ ಮೊದಲಾದವರಿಂದ, ವಾದೇನ = ವಾದದಿಂದ, ನಿರ್ಣಯೇ = ನಿರ್ಣಯವು, ಕೃತೇ ಅಪಿ = ಮಾಡಲ್ಪಟ್ಟಿದ್ದರೂ, (ನೃಪಾಃ = ರಾಜರು), ಕೃಷ್ಣಂ = ಕೃಷ್ಣನನ್ನು, ಮರ್ತ್ಯಂ = ಮನುಷ್ಯನೆಂದೇ, ಮೇನಿರೇ = ತಿಳಿದರು.

ತಾತ್ಪರ್ಯ :- ಯಾಗಶಾಲೆಯಲ್ಲಿ ನಡೆದ ವಿಚಾರ ಗೋಷ್ಠಿಯಲ್ಲಿ ಬ್ರಹ್ಮಾದಿ ದೇವತೆಗಳೆಲ್ಲರೂ ವಿಷ್ಣುವೇ ಗುಣಪೂರ್ಣನೆಂದು ನಿಶ್ಚಯ ಮಾಡಿದ್ದರೂ ಆ ಶ್ರೀಕೃಷ್ಣನು ಸಾಧಾರಣ ಮನುಷ್ಯನೆಂದು ರಾಜರು ತಿಳಿದಿದ್ದರು.

ನೃಪಾಸ್ತಸ್ಮಾದಯಂ ಕೃಷ್ಣೋ ನಾರಾಯಣ ಇತಿ ಸ್ಮ ಹ ।
ಸಮ್ಯಗ್ ಜ್ಞಾಪಯಿತುಂ ಧರ್ಮಸೂನುರ್ಭೀಷ್ಮಮಪೃಚ್ಛತ ॥ ೨೪೭ ॥

ಪದಚ್ಛೇದ :- ನೃಪಾಃ, ತಸ್ಮಾತ್, ಅಯಂ, ಕೃಷ್ಣಃ, ನಾರಾಯಣಃ, ಇತಿ, ಸ್ಮ, ಹ, ಸಮ್ಯಕ್, ಜ್ಞಾಪಯಿತುಂ, ಧರ್ಮಸೂನುಃ, ಭೀಷ್ಮಂ, ಅಪೃಚ್ಛತ ।

ಅರ್ಥ :- ತಸ್ಮಾತ್ = ಆದ್ದರಿಂದ, ಅಯಂ = ಈ, ಕೃಷ್ಣಃ = ಶ್ರೀಕೃಷ್ಣನು, ನಾರಾಯಣಃ = ನಾರಾಯಣನೇ, ಇತಿ = ಎಂದು, ಸಮ್ಯಕ್ = ಚೆನ್ನಾಗಿ, ಜ್ಞಾಪಯಿತುಂ = ತಿಳಿಸಲು, ಧರ್ಮಸೂನುಃ = ಧರ್ಮರಾಜನು, ಭೀಷ್ಮಂ = ಭೀಷ್ಮಾಚಾರ್ಯರನ್ನು, ಅಪೃಚ್ಛತ = ಕೇಳಿದನು.

ತಾತ್ಪರ್ಯ :- ಉಳಿದೆಲ್ಲಾ ರಾಜರು ಹೀಗೆ ತಿಳಿದಿದ್ದರಿದ ಈ ಕೃಷ್ಣನು ಸಾಕ್ಷಾತ್ ನಾರಾಯಣನೇ ಎಂದು ಚೆನ್ನಾಗಿ ಮನವೊಲಿಸಲು ಧರ್ಮರಾಜನು ಭೀಷ್ಮರನ್ನು ಕೇಳಿದನು.

ಬ್ರಹ್ಮಾದಯಃ ಸುರಾ ಯಸ್ಮಾದ್ ದೃಶ್ಯಂತೇ ಮರ್ತ್ಯವನ್ನೃಭಿಃ ।
ನ ಚೈವಾತಿತರಾಭ್ಯಾಸೋ ನೃಣಾಮಸ್ತಿ ಮುನಿಷ್ವಪಿ ॥ ೨೪೮ ॥

ಪದಚ್ಛೇದ :- ಬ್ರಹ್ಮಾದಯಃ, ಸುರಾಃ, ಯಸ್ಮಾತ್, ದೃಶ್ಯಂತೇ, ಮರ್ತ್ಯವತ್, ನೃಭಿಃ, ನ, ಚ, ಏವ, ಅತಿತರಾಭ್ಯಾಸಃ, ನೃಣಾಂ, ಅಸ್ತಿ, ಮುನಿಷು, ಅಪಿ ।

**ಅರ್ಥ** :- **ಯಸ್ಮಾತ್** = ಯಾವ ಕಾರಣದಿಂದ, **ಬ್ರಹ್ಮಾದಯಃ** = ಬ್ರಹ್ಮನೇ ಮೊದಲಾದ, **ಸುರಾಃ** = ದೇವತೆಗಳು, **ನೃಭಿಃ** = ಮನುಷ್ಯರಿಂದ, **ಮರ್ತ್ಯವತ್** = ಮನುಷ್ಯರಂತೆ, **ದೃಶ್ಯಂತೇ** = ಕಂಡರೋ, **ಚ** = ಮತ್ತು, **ಮುನಿಷ್ವಪಿ** = ಮುನಿಗಳಲ್ಲಿಯೂ, **ನೃಣಾಂ** = ಮನುಷ್ಯರಿಗೆ, **ಅತಿತರಾಭ್ಯಾಸಃ** = ಅತಿಯಾದ ಪರಿಚಯವು, **ನಾಸ್ತಿ** = ಇಲ್ಲ, **ತಸ್ಮಾತ್** = ಆ ಕಾರಣದಿಂದ (ವಿಶ್ವಾಸವಿರಲಿಲ್ಲ).

**ತಾತ್ಪರ್ಯ** :- ಯುಧಿಷ್ಠಿರನು ಬ್ರಹ್ಮಾದಿ ದೇವತೆಗಳೆಲ್ಲರೂ ಇರುವಾಗ ಭೀಷ್ಮರನ್ನು ಏಕೆ ಕೇಳಿದ? ಎಂದರೆ ಆ ಎಲ್ಲಾ ದೇವತೆಗಳು ಮನುಷ್ಯವೇಷದಲ್ಲಿ ಬಂದಿದ್ದರು ಮನುಷ್ಯರಿಗೆ ಮನುಷ್ಯರಂತೆಯೇ ಕಂಡರು ಹಾಗಾಗಿ ಅವರಲ್ಲಿ ಮನುಷ್ಯರಿಗೆ ವಿಶ್ವಾಸ ಬರುವುದಿಲ್ಲ. ಹಾಗಾದರೆ ಮುನಿಗಳನ್ನೇಕೆ ಕೇಳಲಿಲ್ಲ? ಅವರೂ ಕೂಡ ಸದಾ ಕಾಡಿನಲ್ಲಿರುವವರಾದ್ದರಿಂದ ಅವರಲ್ಲಿ ಮನುಷ್ಯರಿಗೆ ವಿಶ್ವಾಸವಿರಲಿಲ್ಲ.

**ಸರ್ವಶಾಸ್ತ್ರವಿದಂ ಭೀಷ್ಮಂ ಜಾನಂತ್ಯೇತೇ ನೃಪಾ ಅಪಿ ।**
**ತಸ್ಮಾದ್ ಭೀಷ್ಮಮಪೃಚ್ಛತ್ ಸ ಕುಲವೃದ್ಧತ್ವತಸ್ತಥಾ ॥ ೨೯ ॥**

ಪದಚ್ಛೇದ :- ಸರ್ವಶಾಸ್ತ್ರವಿದಂ, ಭೀಷ್ಮಂ, ಜಾನಂತಿ, ಏತೇ, ನೃಪಾಃ, ಅಪಿ, ತಸ್ಮಾತ್, ಭೀಷ್ಮಂ, ಅಪೃಚ್ಛತ್, ಸಃ, ಕುಲವೃದ್ಧತ್ವತಃ, ತಥಾ ।

**ಅರ್ಥ** :- **ನೃಪಾಃ ಅಪಿ** = ರಾಜರಾದರೋ, **ಭೀಷ್ಮಂ** = ಭೀಷ್ಮರನ್ನು, **ಸರ್ವಶಾಸ್ತ್ರವಿದಂ** = ಎಲ್ಲಾ ಶಾಸ್ತ್ರಗಳನ್ನು ತಿಳಿದವನನ್ನಾಗಿ, **ಜಾನಂತಿ** = ತಿಳಿದಿದ್ದಾನೆ, **ತಸ್ಮಾತ್** = ಆ ಕಾರಣದಿಂದ, (**ಚ** = ಮತ್ತು), **ಸಃ** = ಆ ಭೀಷ್ಮರು, **ಕುಲವೃದ್ಧತ್ವತಃ** = ಕುರುಕುಲದಲ್ಲಿ ಹಿರಿಯನಾದ್ದರಿಂದಲೂ, **ಭೀಷ್ಮಂ** = ಭೀಷ್ಮಾಚಾರ್ಯರನ್ನು, **ತಥಾ** = ಮುಂದೆ ಹೇಳುವ ರೀತಿಯಲ್ಲಿ, **ಅಪೃಚ್ಛತ್** = ಕೇಳಿದನು.

**ತಾತ್ಪರ್ಯ** :- ಎಲ್ಲಾ ಜನರೂ ರಾಜರುಗಳೂ ಭೀಷ್ಮರನ್ನು ಎಲ್ಲಾ ಶಾಸ್ತ್ರಗಳನ್ನು ಬಲ್ಲವರೆಂದು ತಿಳಿದಿದ್ದಾರೆ, ಹಾಗೆಯೇ ಅವರು ಕುರುಕುಲ

ಪಿತಾಮಹರೆನ್ನುವ ಕಾರಣದಿಂದಲೂ ಅವರನ್ನು ಧರ್ಮರಾಜನು ಮುಂದೆ ಹೇಳುವ ಪ್ರಶ್ನೆಯನ್ನು ಕೇಳಿದನು.

ಧರ್ಮರಾಜನ ಪ್ರಶ್ನೆ

**ಪಿತಾಮಹಾಗ್ರ್ಯಪೂಜಾರ್ಹಃ ಕೋಽತ್ರ ಲೋಕಸಮಾಗಮೇ ।**
**ಬ್ರಹ್ಮಶರ್ವಾದಯಶ್ಚಾತ್ರ ಸಂತಿ ರಾಜಾನ ಏವ ಚ ॥ ೨೫೦ ॥**

ಪದಚ್ಛೇದ :- **ಪಿತಾಮಹ, ಅಗ್ರ್ಯಪೂಜಾರ್ಹಃ, ಕಃ, ಅತ್ರ, ಲೋಕಸಮಾಗಮೇ, ಬ್ರಹ್ಮಶರ್ವಾದಯಃ, ಚ, ಅತ್ರ, ಸಂತಿ, ರಾಜಾನಃ, ಏವ, ಚ ।**

ಅರ್ಥ :- **ಪಿತಾಮಹ** = ತಾತನೇ, **ಲೋಕಸಮಾಗಮೇ** = ಎಲ್ಲಾ ಜನರು ಸೇರಿದ, **ಅತ್ರ** = ಈ ಯಾಗಮಂಟಪದಲ್ಲಿ, **ಅಗ್ರ್ಯಪೂಜಾರ್ಹಃ** = ಅಗ್ರಪೂಜೆಗೆ ಅರ್ಹನು, **ಕಃ** = ಯಾರು?, **ಅತ್ರ** = ಇಲ್ಲಿ, **ಬ್ರಹ್ಮಶರ್ವಾದಯಃ** = ಬ್ರಹ್ಮರುದ್ರಾದಿಗಳೂ, **ಚ** = ಮತ್ತು, **ರಾಜಾನಃ** = ರಾಜರುಗಳೂ, **ಸಂತಿ ಏವ** = ಇದ್ದಾರಷ್ಟೇ.

ತಾತ್ಪರ್ಯ :- ಪಿತಾಮಹರೆನಿಸಿದ ಭೀಷ್ಮಾಚಾರ್ಯರೇ ಈ ರಾಜಸೂಯ ಯಾಗ ಮಂಟಪದಲ್ಲಿ ಅಗ್ರಪೂಜೆಗೆ ಅರ್ಹರು ಯಾರಿದ್ದಾರೆ? ಇಲ್ಲಿ ಬ್ರಹ್ಮರುದ್ರಾದಿ ದೇವತೆಗಳೂ ಹಾಗು ಅನೇಕ ರಾಜರುಗಳೂ ಇದ್ದಾರೆ.

**ಇತಿ ಪೃಷ್ಟೋಽಬ್ರವೀತ್ ಭೀಷ್ಮಃ ಕೃಷ್ಣಂ ಪೂಜ್ಯತಮಂ ಪ್ರಭುಮ್ ॥೨೫೧॥**

ಪದಚ್ಛೇದ :- **ಇತಿ, ಪೃಷ್ಟಃ, ಅಬ್ರವೀತ್, ಭೀಷ್ಮಃ, ಕೃಷ್ಣಂ, ಪೂಜ್ಯತಮಂ, ಪ್ರಭುಂ ।**

ಅರ್ಥ :- **ಇತಿ** = ಈ ರೀತಿಯಾಗಿ, **ಪೃಷ್ಟಃ** = ಕೇಳಲ್ಪಟ್ಟ, **ಭೀಷ್ಮಃ** = ಭೀಷ್ಮರು, **ಪ್ರಭುಂ** = ಸ್ವಾಮಿಯಾದ, **ಕೃಷ್ಣಂ** = ಕೃಷ್ಣನನ್ನು, **ಪೂಜ್ಯತಮಂ** = ಪರಮ ಪೂಜ್ಯನೆಂದು, **ಅಬ್ರವೀತ್** = ಹೇಳಿದರು.

ತಾತ್ಪರ್ಯ :- ಹೀಗೆ ಧರ್ಮರಾಜನು ಪ್ರಶ್ನೆಯನ್ನು ಕೇಳಿದರೆ ಭೀಷ್ಮರು ಸರ್ವಸ್ವಾಮಿಯಾದ ಕೃಷ್ಣನನ್ನು ಪರಮಪೂಜ್ಯನೆಂದು ಹೇಳಿದರು.

ಯದ್ಯಪ್ಯೇಕಸ್ತ್ರಿಧಾ ವಿಷ್ಣುರ್ವಸಿಷ್ಠಭೃಗುವೃಷ್ಣಿಷು ।
ಪ್ರಾದುರ್ಭೂತಸ್ತಥಾಽಪ್ಯೇತೇ ನೃಪಾ ಹಿ ವ್ಯಾಸರಾಮಯೋಃ ॥ ೨೫೨ ॥

ವಿಪ್ರತ್ವಾನ್ನ ವಿರುಧ್ಯಂತೇ ತತ ಏವ ಚ ಯುಕ್ತತಾಮ್ ।
ಮನ್ಯಂತೇ ನ ವಿರೋಧಶ್ಚ ತೇಷಾಂ ತತ್ರ ಹಿ ತಾದೃಶಃ ॥ ೨೫೩ ॥

ಪದಚ್ಛೇದ :- ಯದ್ಯಪಿ, ಏಕಃ, ತ್ರಿಧಾ, ವಿಷ್ಣುಃ, ವಸಿಷ್ಠಭೃಗುವೃಷ್ಣಿಷು, ಪ್ರಾದುರ್ಭೂತಃ, ತಥಾಪಿ, ಏತೇ, ನೃಪಾಃ, ಹಿ, ವ್ಯಾಸರಾಮಯೋಃ, ವಿಪ್ರತ್ವಾತ್, ನ, ವಿರುಧ್ಯಂತೇ, ತತಃ, ಏವ, ಚ, ಯುಕ್ತತಾಂ, ಮನ್ಯಂತೇ, ನ, ವಿರೋಧಃ, ಚ, ತೇಷಾಂ, ತತ್ರ, ಹಿ, ತಾದೃಶಃ ।

**ಅರ್ಥ** :- **ಯದ್ಯಪಿ** = ವಾಸ್ತವಿಕವಾಗಿ, **ಏಕಃ** = ಒಬ್ಬನೇ, **ವಿಷ್ಣುಃ** = ಶ್ರೀಹರಿಯು, **ವಸಿಷ್ಠಭೃಗುವೃಷ್ಣಿಷು** = ವಸಿಷ್ಠಭೃಗುವೃಷ್ಣಿ ಕುಲಗಳಲ್ಲಿ, **ಪ್ರಾದುರ್ಭೂತಃ** = ಅವತರಿಸಿದನು, **ತಥಾಪಿ** = ಹಾಗಿದ್ದರೂ, **ಏತೇ** = ಈ, **ನೃಪಾಃ ಹಿ** = ರಾಜರಾದರೂ, **ವ್ಯಾಸರಾಮಯೋಃ** = ವೇದವ್ಯಾಸ ಪರಶುರಾಮರಲ್ಲಿ, **ವಿಪ್ರತ್ವಾತ್** = ಬ್ರಾಹ್ಮಣರಾದ್ದರಿಂದ, **ನ ವಿರುಧ್ಯಂತೇ** = ವಿರೋಧ ಹೊಂದುವುದಿಲ್ಲ, **ಚ** = ಮತ್ತು, **ತತ ಏವ** = ಆ ಕಾರಣದಿಂದಲೇ, **ಯುಕ್ತತಾಂ** = ಅಗ್ರಪೂಜಾರ್ಹತೆಯು, **ಯುಕ್ತತಾಂ** = ಸರಿಯೆಂದೂ, **ಮನ್ಯಂತೇ** = ತಿಳಿಯುತ್ತಾರೆ, **ತೇಷಾಂ** = ಆ ರಾಜರಿಗೆ, **ತಾದೃಶಃ** = ಕೃಷ್ಣನಲ್ಲಿರುವಂತೆ, **ತತ್ರ** = ವ್ಯಾಸ ಪರಶುರಾಮರಲ್ಲಿ, **ವಿರೋಧಶ್ಚ** = ವಿರೋಧವಾದರೂ, **ನ** = ಇರಲಿಲ್ಲ.

**ತಾತ್ಪರ್ಯ** :- ಒಬ್ಬನೇ ಭಗವಂತನು ವಸಿಷ್ಠ ಭೃಗು ವೃಷ್ಣಿ ಕುಲಗಳಲ್ಲಿ ವ್ಯಾಸ ಪರಶುರಾಮ ಕೃಷ್ಣನಾಗಿ ಅವತರಿಸಿದರೂ ರಾಜರುಗಳು ವ್ಯಾಸ ಪರಶುರಾಮರು ಬ್ರಾಹ್ಮಣರಾದ್ದರಿಂದ ಅವರಲ್ಲಿ ಯಾವ ವಿರೋಧವೂ ಇಲ್ಲ ಮತ್ತು ಅಗ್ರಪೂಜೆಗೆ ಅರ್ಹತೆಯನ್ನು ಒಪ್ಪುತ್ತಾರೆ. ಆ ರಾಜರಿಗೆ ಕೃಷ್ಣನಲ್ಲಿ ಯಾವ ರೀತಿಯಾದ ವೈರವಿತ್ತೋ ಹಾಗೆ ಅವರಿಬ್ಬರಲ್ಲಿ ಇರಲಿಲ್ಲ.

ಅವಿವಾದೇ ಪ್ರಸಿದ್ಧಿಶ್ಚ ನೈವಾಸ್ಯ ಭವಿತಾ ಕ್ವಚಿತ್ ।
ತಸ್ಮಾತ್ ಕೃಷ್ಣಾಯ ದಾತವ್ಯಮಿತಿ ಭೀಷ್ಮೇಣ ಚಿಂತಿತಮ್ ॥ ೨೫೪ ॥

ಪದಚ್ಛೇದ :- ಅವಿವಾದೇ, ಪ್ರಸಿದ್ಧಿಃ, ಚ, ನ, ಏವ, ಅಸ್ಯ, ಭವಿತಾ, ಕ್ವಚಿತ್, ತಸ್ಮಾತ್, ಕೃಷ್ಣಾಯ, ದಾತವ್ಯಂ, ಇತಿ, ಭೀಷ್ಮೇಣ, ಚಿಂತಿತಂ ।

ಅರ್ಥ :- ಅವಿವಾದೇ ಸತಿ = ಯಾವುದೇ ವಿವಾದವಿಲ್ಲದಿದ್ದರೇ, ಅಸ್ಯ = ಈ ಶ್ರೀಕೃಷ್ಣನಿಗೆ, ಪ್ರಸಿದ್ಧಿಶ್ಚ = ಪ್ರಸಿದ್ಧಿಯಾದರೂ, ಕ್ವಚಿತ್ = ಎಂದಿಗೂ, ನೈವಭವಿತಾ = ಆಗುತ್ತಿರಲಿಲ್ಲ, ತಸ್ಮಾತ್ = ಆದ್ದರಿಂದ, ಕೃಷ್ಣಾಯ = ಕೃಷ್ಣನಿಗೆ, ದಾತವ್ಯಂ = ಅಗ್ರಪೂಜೆಯು ಕೊಡಲ್ಪಡಬೇಕು, ಇತಿ = ಎಂದು, ಭೀಷ್ಮೇಣ = ಭೀಷ್ಮರಿಂದ, ಚಿಂತಿತಂ = ಆಲೋಚಿಸಲ್ಪಟ್ಟಿತು.

ತಾತ್ಪರ್ಯ :- ವ್ಯಾಸ ಪರಶುರಾಮರು ಬ್ರಾಹ್ಮಣರು ಎಂದು ಅವರಿಗೆ ವಿರೋಧಿಸಲಾರರು ಹೊರತು ಭಗವಂತನೆಂದಲ್ಲಿ. ವಿರೋಧವಿಲ್ಲದಿದ್ದರೆ ಕೃಷ್ಣನು ವಿಷ್ಣುವಿನ ಅವತಾರವೆಂದು ಯಾರೂ ತಿಳಿಯುತ್ತಿರಲಿಲ್ಲ. ಆದ್ದರಿಂದ ಕೃಷ್ಣನಿಗೇ ಅಗ್ರಪೂಜೆ ಆಗಬೇಕೆಂದು ಭೀಷ್ಮರು ಚಿಂತಿಸಿದರು.

### ಅಗ್ರಪೂಜೆ

ಕೃಷ್ಣಾಯ ದತ್ತೇ ರಾಜಾನೋ ವಿವಾದಂ ಕುರ್ಯುರಂಜಸಾ ।
ವಿವಾದೇನ ಚ ಕೀರ್ತಿಃ ಸ್ಯಾದ್ ವಾಸುದೇವಸ್ಯ ವಿಸ್ತೃತಾ ।
ತತಃ ಕೃಷ್ಣಾಯಾಗ್ರಪೂಜಾ ದತ್ತಾ ಪಾರ್ಥೈರ್ಜಗತ್ಪುರಃ ॥ ೨೫೫ ॥

ಪದಚ್ಛೇದ :- ಕೃಷ್ಣಾಯ, ದತ್ತೇ, ರಾಜಾನಃ, ವಿವಾದಂ, ಕುರ್ಯುಃ, ಅಂಜಸಾ, ವಿವಾದೇನ, ಚ, ಕೀರ್ತಿಃ, ಸ್ಯಾತ್, ವಾಸುದೇವಸ್ಯ, ವಿಸ್ತೃತಾ, ತತಃ, ಕೃಷ್ಣಾಯ, ಅಗ್ರ್ಯಪೂಜಾ, ದತ್ತಾ, ಪಾರ್ಥೈಃ, ಜಗತ್ಪುರಃ ।

ಅರ್ಥ :- ಕೃಷ್ಣಾಯ = ಕೃಷ್ಣನಿಗೆ, ದತ್ತೇ ಸತಿ = ನೀಡುತ್ತಿರಲು, ರಾಜಾನಃ = ರಾಜರು, ಅಂಜಸಾ = ಬಹಳವಾಗಿ, ವಿವಾದಂ = ವಿವಾದವನ್ನು, ಕುರ್ಯುಃ = ಮಾಡುತ್ತಾರೆ, ವಿವಾದೇನ ಚ = ವಿವಾದದಿಂದಾದರೂ, ವಾಸುದೇವಸ್ಯ = ಕೃಷ್ಣನಿಗೆ, ವಿಸ್ತೃತಾ = ವಿಪುಲವಾದ, ಕೀರ್ತಿಃ = ಕೀರ್ತಿಯು, ಸ್ಯಾತ್ = ಉಂಟಾಗುತ್ತದೆ, ತತಃ = ಆ ಕಾರಣದಿಂದಲೇ, ಪಾರ್ಥೈಃ = ಪಾಂಡವರಿಂದ, ಅಗ್ರ್ಯಪೂಜಾ = ಅಗ್ರಪೂಜೆಯು, ಜಗತ್ಪುರಃ = ಲೋಕವು ನೋಡುತ್ತಿರುವಂತೆಯೇ, ಕೃಷ್ಣಾಯ = ಕೃಷ್ಣನಿಗೆ, ದತ್ತಾ = ಕೊಡಲ್ಪಟ್ಟಿತು.

ತಾತ್ಪರ್ಯ :- ಕೃಷ್ಣನಿಗೆ ಅಗ್ರ್ಯಪೂಜೆ ಮಾಡಿದರೆ ಎಲ್ಲಾ ರಾಜರೂ ಚೆನ್ನಾಗಿ ವಿವಾದ ಮಾಡುತ್ತಾರೆ. ಆ ವಿವಾದದಿಂದ ಕೃಷ್ಣನ ಕೀರ್ತಿಯು ಎಲ್ಲೆಡೆ ಹರಡುತ್ತದೆ ಎಂದು ಭೀಷ್ಮರು ಆಲೋಚಿಸಿದರು. ಹಾಗೆ ಆಗಲೆಂದೇ ಪಾಂಡವರು ಎಲ್ಲರ ಎದುರಿಗೆ ಕೃಷ್ಣನಿಗೆ ಅಗ್ರಪೂಜೆಯನ್ನು ನೀಡಿದರು.

**ವ್ಯಾಸಭಾರ್ಗವಯೋಃ ಸಾಕ್ಷಾತ್ ತದೈಕ್ಯಾತ್ ತದನಂತರಮ್ ।**
**ಅಗ್ರ್ಯಾಂ ಪೂಜಾಂ ದದುಶ್ಚಾನ್ಯಾನ್ ಯಥಾಯೋಗ್ಯಮಪೂಜಯನ್ ॥ ೨೫೬ ॥**

ಪದಚ್ಛೇದ :- ವ್ಯಾಸಭಾರ್ಗವಯೋಃ, ಸಾಕ್ಷಾತ್, ತದೈಕ್ಯಾತ್, ತದನಂತರಂ, ಅಗ್ರ್ಯಾಂ, ಪೂಜಾಂ, ದದುಃ, ಚ, ಅನ್ಯಾನ್, ಯಥಾಯೋಗ್ಯಂ, ಅಪೂಜಯನ್ ।

**ಅರ್ಥ** :- **ತದನಂತರಂ** = ಕೃಷ್ಣನಿಗೆ, **ಅಗ್ರಪೂಜೆ** = ನೀಡಿದ ನಂತರ, **ವ್ಯಾಸಭಾರ್ಗವಯೋಃ** = ವ್ಯಾಸ ಪರಶುರಾಮರಿಗೆ, **ಸಾಕ್ಷಾತ್** = ಅತ್ಯಂತವಾಗಿ, **ತದೈಕ್ಯಾತ್** = ಕೃಷ್ಣನಿಂದ ಅಭೇದವಿರುವುದರಿಂದ, **ಅಗ್ರ್ಯಾಂ ಪೂಜಾಂ** = ಅಗ್ರಪೂಜೆಯನ್ನು, **ದದುಃ** = ನೀಡಿದರು, **ಚ** = ಮತ್ತು, **ಅನ್ಯಾನ್** = ಉಳಿದ ಬೇರೆಯವರನ್ನು, **ಯಥಾಯೋಗ್ಯಂ** = ಅವರವರ ಯೋಗ್ಯತೆಗನುಗುಣವಾಗಿ, **ಅಪೂಜಯನ್** = ಪೂಜಿಸಿದರು.

ತಾತ್ಪರ್ಯ :- ಶ್ರೀಕೃಷ್ಣನ ಅಗ್ರಪೂಜೆಯ ಅನಂತರ ಸ್ವಲ್ಪವೂ ವೈಲಕ್ಷಣ್ಯವಿಲ್ಲದ ಅತ್ಯಂತ ಅಭಿನ್ನರಾದ ವೇದವ್ಯಾಸ ಪರಶುರಾಮನಿಗೆ ಅಗ್ರಪೂಜೆಯನ್ನು ಮಾಡಿ, ನಂತರ ಇನ್ನುಳಿದವರನ್ನು ಅವರ ಯೋಗ್ಯತೆಗನುಸಾರವಾಗಿ ಪೂಜಿಸಿದರು.

### ಶಿಶುಪಾಲ ವಧ

**ಅಗ್ರ್ಯೋಪಹಾರ ಉಪಯಾಪಿತ ಏವ ಕೃಷ್ಣೇ**
**ಕೋಪಾದನಿಂದದಮುಮಾಶು ಚ ಚೇದಿರಾಜಃ ।**
**ಶ್ರುತ್ವೈವ ತತ್ ಪವನಜೋಽಭಿಯಯೌ ನೃಪಂ ತಂ**
**ಹಂತುಂ ಜಗದ್ಗುರುವಿನಿಂದಕಮೃದ್ಧಮನ್ಯುಃ ॥ ೨೫೭ ॥**

ಪದಚ್ಛೇದ :- ಅಗ್ರ್ಯೋಪಹಾರೇ, ಉಪಯಾಪಿತೇ, ಏವ, ಕೃಷ್ಣೇ, ಕೋಪಾತ್, ಅನಿಂದತ್, ಅಮುಂ, ಆಶು, ಚ, ಚೇದಿರಾಜಃ, ಶ್ರುತ್ವಾ, ಏವ, ತತ್, ಪವನಜಃ, ಅಭಿಯಯೌ, ನೃಪಂ, ತಂ, ಹಂತುಂ, ಜಗದ್ಗುರುವಿನಿಂದಕಂ, ಋದ್ಧಮನ್ಯುಃ ।

**ಅರ್ಥ** :- **ಕೃಷ್ಣೇ** = ಕೃಷ್ಣವಿಷಯಕವಾದ, **ಅಗ್ರ್ಯೋಪಹಾರೇ** = ಅಗ್ರಪೂಜೆಯು, **ಉಪಯಾಪಿತೇ (ಸತಿ)** = ನಡೆಯುತ್ತಿರಲು, **ಚೇದಿರಾಜಃ** = ಶಿಶುಪಾಲನು, **ಅಮುಂ** = ಈ ಕೃಷ್ಣನನ್ನು, **ಆಶು** = ಬೇಗನೇ, **ಕೋಪಾತ್** = ಕೋಪದಿಂದ, **ಅನಿಂದತ್** = ನಿಂದಿಸಿದನು, **ತತ್** = ಆ ನಿಂದೆಯನ್ನು, **ಶ್ರುತ್ವಾ ಏವ** = ಕೇಳಿದ ಕೂಡಲೇ, **ಋದ್ಧಮನ್ಯುಃ** = ಕೆರಳಿದ ಕೋಪವುಳ್ಳ, **ಪವನಜಃ** = ಭೀಮನು, **ಜಗದ್ಗುರುವಿನಿಂದಕಂ** = ಕೃಷ್ಣನ ನಿಂದಕನಾದ, **ತಂ ನೃಪಂ** = ಆ ಶಿಶುಪಾಲನನ್ನು, **ಹಂತುಂ** = ಸಂಹರಿಸಲು, **ಅಭಿಯಯೌ ಏವ** = ಹೊರಟೇಬಿಟ್ಟನು.

ತಾತ್ಪರ್ಯ :- ರಾಜಸೂಯಯಾಗವು ಸಮಾಪ್ತಿಯಾದ ನಂತರ ಕುರುಕುಲಪಿತಾಮಹರಾದ ಭೀಷ್ಮರ ಅನುಮತಿಯಂತೆ ಧರ್ಮರಾಜನು ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಸಲ್ಲಿಸಿದನು. ಅದನ್ನು ಸಹಿಸದ ಶಿಶುಪಾಲನು ಸಭೆಯಲ್ಲಿ ಕೃಷ್ಣನನ್ನು ನಿಂದಿಸಿದನು. ಜಗದ್ಗುರುವಾದ ಕೃಷ್ಣನ ನಿಂದೆಯನ್ನು ಕೇಳಿದೊಡನೆಯೇ ಭೀಮನು ಶಿಶುಪಾಲನನ್ನು ಸಂಹರಿಸಲು ಮುಂದಾದನು.

**ದೂರೇಽಪಿ ಕೇಶವವಿನಿಂದನಕಾರಿಜಿಹ್ವಾ-**
**ಮುಚ್ಛೇತ್ಸ್ಯ ಇತ್ಯುರುತರಾಽಸ್ಯ ಸದಾ ಪ್ರತಿಜ್ಞಾ ।**
**ಭೀಮಸ್ಯ ತಂ ತು ಜಗೃಹೇ ಸರಿದಾತ್ಮಜೋಽಥ**
**ಸಂಪ್ರೋಚ್ಯ ಕೇಶವವಚೋ ನಿಜಯೋರ್ವಧಾಯ ॥ ೨೫೪ ॥**

ಪದಚ್ಛೇದ :- ದೂರೇ, ಅಪಿ, ಕೇಶವನಿಂದನಕಾರಿಜಿಹ್ವಾಂ, ಉಚ್ಛೇತ್ಸ್ಯೇ, ಇತಿ, ಉರುತರಾ, ಅಸ್ಯ, ಸದಾ, ಪ್ರತಿಜ್ಞಾ, ಭೀಮಸ್ಯ, ತಂ,ತು, ಜಗೃಹೇ, ಸರಿದಾತ್ಮಜಃ, ಅಥ, ಸಂಪ್ರೋಚ್ಯ, ಕೇಶವವಚಃ, ನಿಜಯೋಃ, ವಧಾಯ ।

**ಅರ್ಥ** :- **ದೂರೇಽಪಿ** = ಪರೋಕ್ಷದಲ್ಲಾದರೂ, **ಕೇಶವನಿಂದಾಕಾರಿಜಿಹ್ವಾಂ** = ಶ್ರೀಹರಿಯನ್ನು ನಿಂದಿಸುವವರ ನಾಲಿಗೆಯನ್ನು, **ಉಚ್ಛೇತ್ಸ್ಯೇ** = ಸೀಳುತ್ತೇನೆ (ಕತ್ತರಿಸುತ್ತೇನೆ), **ಇತಿ** = ಹೀಗೆಂಬುದಾಗಿ, **ಅಸ್ಯ ಭೀಮಸ್ಯ** = ಈ ಭೀಮನ, **ಉರುತರಾ ಪ್ರತಿಜ್ಞಾ** = ದೃಢವಾದ ಪ್ರತಿಜ್ಞೆಯು, **ಸದಾ** = ಯಾವಾಗಲೂ, (**ಅಸ್ತಿ** = ಇದೆ), **ಸರಿದಾತ್ಮಜಃ** = ಗಂಗಾಪುತ್ರನಾದ ಭೀಷ್ಮನು, **ಅಥ** = ಅನಂತರದಲ್ಲಿ, **ನಿಜಯೋಃ** = ಭಗವಂತನ ದ್ವಾರಪಾಲಕರಾದ

ಜಯವಿಜಯರ ವಿಷಯದಲ್ಲಿ ಇರುವ, **ಕೇಶವವಚಃ** = ಪರಮಾತ್ಮನ ವರವನ್ನು, **ಸಂಪ್ರೋಚ್ಯ** = ಭೀಮನಿಗೆ ಹೇಳಿ, **ತಂ ತು** = ಆ ಭೀಮನನ್ನು, **ಜಗೃಹೇ** = ತಡೆದನು.

**ತಾತ್ಪರ್ಯ :-** 'ಪರೋಕ್ಷದಲ್ಲಾದರೂ ಯಾರು ಹರಿನಿಂದಕರೋ ಅವರ ನಾಲಿಗೆಯನ್ನು ಕತ್ತರಿಸುತ್ತೇನೆ' ಎಂಬುದು ಭೀಮನ ದೃಢವಾದ ಪ್ರತಿಜ್ಞೆ ಆದ್ದರಿಂದ ಭೀಮನು ಶಿಶುಪಾಲನ ನಾಲಿಗೆಯನ್ನು ಕತ್ತರಿಸಲು ಅವನೆಡೆಗೆ ಧಾವಿಸಿದ ಆದರೆ ಭಗವಂತನ ದ್ವಾರಪಾಲಕರಾದ ಜಯವಿಜಯರಿಗೆ ಸನಕಾದಿಗಳ ಶಾಪ ಸಂದರ್ಭದಲ್ಲಿ ''ಮೂರು ಜನ್ಮಗಳಲ್ಲಿಯೂ ನನ್ನಿಂದಲೇ ನಿಮಗೆ ವಧೆಯಾಗಲಿ'' ಎಂದು ಭಗವಂತ ವರವಿತ್ತಿದ್ದ. ಈ ವಿಷಯವನ್ನು ಭೀಮನಿಗೆ ಜ್ಞಾಪಿಸಿದ ಭೀಷ್ಮಾಚಾರ್ಯರು ಭೀಮನನ್ನು ತಡೆದರು.

**ಮಯ್ಯೈವ ವಧ್ಯಾವಿತಿ ತಾವಾಹ ಯತ್ ಕೇಶವಃ ಪುರಾ ।**
**ತಚ್ಛ್ರುತ್ವಾ ಭೀಮಸೇನೋऽಪಿ ಸ್ಥಿತೋ ಭೀಷ್ಮಕರಗ್ರಹಾತ್ ॥ ೨೫ ॥**

**ಪದಚ್ಛೇದ :- ಮಯಾ, ಏವ, ವಧ್ಯೌ, ಇತಿ, ತೌ, ಆಹ, ಯತ್, ಕೇಶವಃ, ಪುರಾ, ತತ್, ಶ್ರುತ್ವಾ, ಭೀಮಸೇನಃ, ಅಪಿ, ಸ್ಥಿತಃ, ಭೀಷ್ಮಕರಗ್ರಹಾತ್ ।**

**ಅರ್ಥ :- ಪುರಾ** = ಹಿಂದೆ, **ಕೇಶವಃ** = ನಾರಾಯಣನು, **ಮಯಾ ಏವ** = ನನ್ನಿಂದಲೇ, **ವಧ್ಯೌ (ಭವತಃ)** = ನಾಶವನ್ನು ಹೊಂದುವವರಾಗಿರಿ, **ಇತಿ ಯತ್** = ಹೀಗೆಂಬ ಯಾವ ಮಾತನ್ನು, **ತೌ** = ಜಯ ವಿಜಯರನ್ನು ಅರಿತು, **ಆಹ** = ಹೇಳಿದ್ದನೋ, **ತತ್** = ಆ ಮಾತನ್ನು, **ಶ್ರುತ್ವಾ** = ಭೀಷ್ಮರಿಂದ ಕೇಳಿ, **ಭೀಮಸೇನೋऽಪಿ** = ಶತ್ರುಗಳಿಗೆ ಭಯಂಕರನಾದರೂ ಭೀಮನು, **ಭೀಷ್ಮಕರಗ್ರಹಾತ್** = ಭೀಷ್ಮರು ತನ್ನ ಕೈ ಹಿಡಿದು ತಡೆದದ್ದರಿಂದ, **ಸ್ಥಿತಃ** = ಸುಮ್ಮನಾದನು.

**ತಾತ್ಪರ್ಯ :-** ಭೀಮನು ಸ್ವಭಾವತಃ ಶತ್ರುಭಯಂಕರನಾದರೂ ಭಗವಂತನು ತನ್ನ ದ್ವಾರಪಾಲಕರಿಗೆ ಇತ್ತ ವರವನ್ನು ಭೀಷ್ಮರ ಮೂಲಕ ತಿಳಿದು ಅವರು ತನ್ನ ಕೈಹಿಡಿದು ತಡೆದುದರಿಂದ ಶಿಶುಪಾಲನ ವಧೋದ್ಯೋಗದಿಂದ ತಾನು ಹಿಂದೆ ಸರಿದು ನಿಂತ.

**ಜಾನನ್ನಪಿ ಹರೇರಿಷ್ಟಂ ಸ್ವಕರ್ತವ್ಯತಯೋತ್ಥಿತಃ ।**
**ಭೀಮ ಏತಾವದುಚಿತಮಿತಿ ಮತ್ವಾ ಸ್ಥಿತಃ ಪುನಃ ॥ ೨೬೦ ॥**

ಪದಚ್ಛೇದ :– **ಜಾನನ್, ಅಪಿ, ಹರೇಃ, ಇಷ್ಟಂ, ಸ್ವಕರ್ತವ್ಯತಯಾ, ಉತ್ಥಿತಃ, ಭೀಮಃ, ಏತಾವತ್, ಉಚಿತಂ, ಇತಿ, ಮತ್ವಾ, ಸ್ಥಿತಃ, ಪುನಃ ।**

**ಅರ್ಥ** :- **ಹರೇಃ** = ಭಗವಂತನ, **ಇಷ್ಟಂ** = ಅಭಿಲಷಿತವನ್ನು, **ಜಾನನ್ ಅಪಿ** = ತಿಳಿದವನಾದರೂ ಕೂಡ, **ಭೀಮಃ** = ಸರ್ವಜ್ಞನಾದ ಭೀಮನು, **ಸ್ವಕರ್ತವ್ಯತಯಾ** = ಪ್ರತಿಜ್ಞಾಪಾಲನೆಯು ತನ್ನ ಕರ್ತವ್ಯ ಎಂದು ಭಾವಿಸಿ, **ಉತ್ಥಿತಃ** = ಕಾರ್ಯೋನ್ಮುಖನಾದನು, **ಏತಾವತ್** = ಇಷ್ಟೇ, **ಉಚಿತಂ** = ಯೋಗ್ಯವಾದುದು, **ಇತಿ ಮತ್ವಾ** = ಎಂದು ತಿಳಿದು, **ಸ್ಥಿತಃ** = ಸುಮ್ಮನಾದನು, **ಪುನಃ** = ಮತ್ತೆ ಶಿಶುಪಾಲನನ್ನು ಕೊಲ್ಲುವ ಉದ್ಯೋಗವನ್ನು ಮಾಡಲಿಲ್ಲ.

**ತಾತ್ಪರ್ಯ** :- ಶಿಶುಪಾಲನನ್ನು ಭಗವಂತನೇ ಸಂಹರಿಸಬೇಕು. ತಾನು ಸಂಹರಿಸಬಾರದು ಇದೇ ಭಗವಂತನಿಗೆ ಪ್ರಿಯವಾದುದು ಎಂದು ಸರ್ವಜ್ಞನಾದ ಭೀಮ ತಿಳಿದವನಾದರೂ ತನ್ನ ಪ್ರತಿಜ್ಞೆ ಸುಳ್ಳಾಗಬಾರದು ಎಂಬ ದೃಷ್ಟಿಯಿಂದ ಶಿಶುಪಾಲನನ್ನು ಸಂಹರಿಸಲು ಉದ್ಯುಕ್ತನಾದ. ಈ ರೀತಿ ಉದ್ಯುಕ್ತನಾದುದರಿಂದಲೇ ತನ್ನ ಪ್ರತಿಜ್ಞೆಯು ಈಡೇರಿತು ಎಂದು ತಿಳಿದು ಮತ್ತು ಭೀಷ್ಮಾಚಾರ್ಯರು ತನ್ನನ್ನು ತಡೆದರು ಎಂಬ ಕಾರಣದಿಂದಲೂ ಭೀಮನು ಶಿಶುಪಾಲನ ವಧೋದ್ಯೋಗದಿಂದ ಹಿಂದೆ ಸರಿದು ನಿಂತ. ಮತ್ತೆ ಅವನನ್ನು ಕೊಲ್ಲಲು ಉದ್ಯುಕ್ತನಾಗಲಿಲ್ಲ.

**ದೇವಸಂಘಭವಿನಾಂ ಮಹಾನಭೂತ್**
**ವೀಕ್ಷ್ಯ ತೋಷ ಇಹ ಕೇಶವೇಽಧಿಕಾಮ್ ।**
**ಅರ್ಚನಾಂ ಯ ಇಹ ಮಾನುಷೋ ಜನೋ**
**ಮಧ್ಯ ಏವ ಸ ತು ಸಂಸ್ಥಿತೋಽಭವತ್ ॥ ೨೬೧ ॥**

ಪದಚ್ಛೇದ :– **ದೇವಸಂಘಭವಿನಾಂ, ಮಹಾನ್, ಅಭೂತ್, ವೀಕ್ಷ್ಯ, ತೋಷಃ, ಇಹ, ಕೇಶವೇ, ಅಧಿಕಾಂ, ಅರ್ಚನಾಂ, ಯಃ,ಇಹ, ಮಾನುಷಃ, ಜನಃ, ಮಧ್ಯೇ, ಏವ, ಸಃ, ತು, ಸಂಸ್ಥಿತಃ, ಅಭವತ್ ।**

**ಅರ್ಥ** :- **ಇಹ ಕೇಶವೇ** = ಈ ಕೃಷ್ಣಪರಮಾತ್ಮನಲ್ಲಿ ನಡೆದ, **ಅಧಿಕಾಂ ಅರ್ಚನಾಂ** = ಶ್ರೇಷ್ಠವಾದ ಅಗ್ರಪೂಜೆಯನ್ನು, **ವೀಕ್ಷ್ಯ** = ಕಂಡು **ದೇವಸಂಘಭವಿನಾಂ** = ದೇವ ಸಮೂಹದಲ್ಲಿ ಹುಟ್ಟಿದ ಸಜ್ಜನರಿಗೆ, **ಮಹಾನ್ ತೋಷಃ** = ಮಹತ್ತರವಾದ ಆನಂದವು ಉಂಟಾಯಿತು, **ಇಹ** = ಈ ಸಭೆಯಲ್ಲಿ, **ಯಃ ಮಧ್ಯಮಃ ಮಾನುಷಃ ಜನಃ** = ಮಧ್ಯಮರಾದ (ನಿತ್ಯಸಂಸಾರಿಗಳಾದ) ಮನುಷ್ಯರೋ ಅವರು, **ಮಧ್ಯೇ ಏವ** = ಮಧ್ಯಮಾವಸ್ಥೆಯಲ್ಲಿಯೇ (ತಟಸ್ಥರಾಗಿಯೇ), **ಸಂಸ್ಥಿತಃ ಅಭವತ್** = ಇದ್ದರು.

**ತಾತ್ಪರ್ಯ** :- ಭೀಷ್ಮರ ಆದೇಶದಂತೆ ಧರ್ಮರಾಜನು ಶ್ರೀ ಕೃಷ್ಣನಿಗೆ ವೈಭವೋಪೇತವಾದ ಅಗ್ರಪೂಜೆಯನ್ನು ಸಲ್ಲಿಸಿದಾಗ ಆ ವೈಭವವನ್ನು ಕಂಡ ದೇವತೆಗಳ ಅವತಾರಭೂತರಾದ ಎಲ್ಲ ಸಜ್ಜನರೂ ಅತ್ಯಂತ ಸಂತೋಷ ಭರಿತರಾದರು. ಮಧ್ಯಮರಾದ ಮನುಷ್ಯರು ತಟಸ್ಥರಾಗಿಯೇ ಉಳಿದರು. (ಜನಾರ್ದನ ಭಟ್ಟರ ವ್ಯಾಖ್ಯಾನದಂತೆ ಮಧ್ಯರು ಎಂದರೆ ನಿತ್ಯಸಂಸಾರಿಗಳು. ನಿತ್ಯ ಸಂಸಾರಿಗಳು ಸುಖದುಃಖಮಿಶ್ರರಾದುದರಿಂದ ಅವರು ದೇವತೆಗಳಂತೆ ಅತಿ ಸಂತೋಷವನ್ನೂ ಹೊಂದಲಿಲ್ಲ. ಅತಿ ದುಃಖವನ್ನೂ ಹೊಂದಲಿಲ್ಲ. ತಟಸ್ಥರಾಗಿಯೇ ಇದ್ದರು.)

**ಆಸುರಾ ಇಹ ಸುಯೋಧನಾದಯ-**
**ಸ್ತತ್ರ ತೇ ವಿಮನಸೋ ಬಭೂವಿರೇ ।**
**ದುರ್ವಚೋಭಿರಧಿಕಂ ಚ ಚೇದಿಪಃ**
**ಕೃಷ್ಣಮಾರ್ಚ್ಛದುರುಸದ್ಗುಣಾರ್ಣವಮ್ ॥ ೨೬೨ ॥**

ಪದಚ್ಛೇದ :- ಆಸುರಾಃ, ಇಹ, ಸುಯೋಧನಾದಯಃ, ತತ್ರ, ತೇ, ವಿಮನಸಃ, ಬಭೂವಿರೇ, ದುರ್ವಚೋಭಿಃ, ಅಧಿಕಂ, ಚ, ಚೇದಿಪಃ, ಕೃಷ್ಣಂ, ಆರ್ಚ್ಛತ್, ಉರು, ಸದ್ಗುಣಾರ್ಣವಂ ।

**ಅರ್ಥ** :- **ತತ್ರ** = ಕೃಷ್ಣನಿಗೆ ಅಗ್ರಪೂಜೆಯ ವಿಷಯದಲ್ಲಿ, **ಇಹ** = ಈ ಸಭೆಯಲ್ಲಿ ನೆರೆದ, **ಸುಯೋಧನಾದಯಃ** = ದುರ್ಯೋಧನನೇ ಮೊದಲಾದ, **ತೇ ಆಸುರಾಃ** = ಆ ಅಸುರ ಸ್ವಭಾವದ ದೈತ್ಯರು, **ವಿಮನಸಃ** = ಅಸಂತುಷ್ಟರಾಗಿ, **ಬಭೂವಿರೇ** = ಆದರು, **ಚೇದಿಪಃ** = ಶಿಶುಪಾಲನು, **ಉರು ಸದ್ಗುಣಾರ್ಣವಂ**

= ಉತ್ಕೃಷ್ಟವಾದ ಸದ್ಗುಣಗಳಿಂದ ಸಾಗರದಂತಿರುವ ಕೃಷ್ಣನನ್ನು, **ಅಧಿಕಂ ಚ** = ತುಂಬಾ ಹೆಚ್ಚಾಗಿ, **ದುರ್ವಚೋಭಿಃ** = ಕೆಟ್ಟ ಮಾತುಗಳಿಂದ, **ಆರ್ಚ್ಛತ್** = ಹೊಂದಿದನು (ನಿಂದಿಸಿದನು).

**ತಾತ್ಪರ್ಯ** :- ಅತಿ ಸಂಭ್ರಮದ ಅಗ್ರ ಪೂಜೆಯನ್ನು ಕಂಡ ದುಷ್ಟರಾದ ದುರ್ಯೋಧನನೇ ಮೊದಲಾದ ಅಸುರರು ಮನಸ್ಸಿನಲ್ಲಿ ಕೊರಗಿದರು. ತುಂಬಾ ದುಷ್ಟನಾದ ಶಿಶುಪಾಲನು. ಸಕಲಸದ್ಗುಣ ಸಮುದ್ರನಾದ ಶ್ರೀಕೃಷ್ಣನನ್ನು ಕೆಟ್ಟ ಮಾತುಗಳಿಂದ ಚೆನ್ನಾಗಿ ನಿಂದಿಸಿದನು. ಹೀಗೆ ಕೃಷ್ಣನ ಅಗ್ರಪೂಜೆಯನ್ನು ಕಂಡ ತ್ರಿವಿಧ ಜೀವರಾಶಿಗಳು ಅವರವರ ಯೋಗ್ಯತೆಗೆ ತಕ್ಕಂತೆ ನಡೆದುಕೊಂಡರು.

**ಸಮಾಹ್ವಯಚ್ಚ ಕೇಶವಂ ಯುಧೇ ತಮಾಶು ಕೇಶವಃ ।**
**ನಿವಾರ್ಯ ತಸ್ಯ ಸಾಯಕಾನ್ ಜಘಾನ ಚಾರಿಣಾ ಪ್ರಭುಃ ॥ ೨೬೩ ॥**

**ಪದಚ್ಛೇದ** :- **ಸಮಾಹ್ವಯತ್, ಚ, ಕೇಶವಂ, ಯುಧೇ, ತಂ, ಆಶು, ಕೇಶವಃ, ನಿವಾರ್ಯ, ತಸ್ಯ, ಸಾಯಕಾನ್, ಜಘಾನ್, ಚ, ಅರಿಣಾ, ಪ್ರಭುಃ ।**

**ಅರ್ಥ** :- (ಶಿಶುಪಾಲನು) **ಯುಧೇ** = ಯುದ್ಧಕ್ಕಾಗಿ, **ಕೇಶವಂ** = ಶ್ರೀಕೃಷ್ಣನನ್ನು, **ಸಮಾಹ್ವಯತ್** = ಆಹ್ವಾನಿಸಿದನು, **ಪ್ರಭುಃ** = ಸಮರ್ಥನಾದ, **ಕೇಶವಃ** = ಶ್ರೀಕೃಷ್ಣನು, **ಆಶು** = ಬೇಗನೇ, **ತಸ್ಯ** = ಆ ಶಿಶುಪಾಲನ, **ಸಾಯಕಾನ್** = ಬಾಣಗಳನ್ನು, **ನಿವಾರ್ಯ** = ತಡೆದು, **ಅರಿಣಾ** = ಚಕ್ರಾಯುಧದಿಂದ, **ತಂ** = ಅವನನ್ನು, **ಜಘಾನ** = ಕೊಂದನು.

**ತಾತ್ಪರ್ಯ** :- ಶ್ರೀಕೃಷ್ಣನ ಸಂಭ್ರಮವನ್ನು ಕಂಡು ತಡೆಯಲಾರದ ಶಿಶುಪಾಲನು ಶ್ರೀಕೃಷ್ಣನನ್ನು ಯುದ್ಧಕ್ಕೆ ಕರೆದನು. ಸರ್ವ ಸಮರ್ಥನಾದ ಶ್ರೀಕೃಷ್ಣನು ಶಿಶುಪಾಲನ ಎಲ್ಲ ಬಾಣಗಳನ್ನು (ಎದುರಿಸಿ) ನಿವಾರಿಸಿ ಅವನನ್ನು ತನ್ನ ಸುದರ್ಶನ ಚಕ್ರಾಯುಧದಿಂದ ಸಂಹರಿಸಿದನು.

**ನಿಕೃತ್ಯಮಾನಕಂಧರಃ ಸ ಭಕ್ತಿಮಾನಭೂದ್ಧರೌ ।**
**ತಮಾಶ್ರಿತಶ್ಚ ಯೋಽಸುರೋ ಮಹಾತಮಃ ಪ್ರಪೇದಿವಾನ್ ॥ ೨೬೪ ॥**

**ಪದಚ್ಛೇದ** :- **ನಿಕೃತ್ಯಮಾನಕಂಧರಃ, ಸಃ, ಭಕ್ತಿಮಾನ್, ಅಭೂತ್, ಹರೌ, ತಂ, ಆಶ್ರಿತಃ, ಚ, ಯಃ, ಅಸುರಃ, ಮಹಾತಮಃ, ಪ್ರಪೇದಿವಾನ್ ।**

**ಅರ್ಥ** :- **ನಿಕೃತ್ಯಮಾನಕಂಧರಃ** = ಶಿರಚ್ಛೇದನಗೊಂಡ, **ಸಃ** = ಆ ಜಯನು (ಶಿಶುಪಾಲನು), **ಹರೌ** = ಭಗವಂತನಲ್ಲಿ, **ಭಕ್ತಿಮಾನ್** = ಭಕ್ತಿಯುಳ್ಳವನಾಗಿ, **ಅಭೂತ್** = ಆದನು, **ತಂ** = ಆ ಜಯನನ್ನು (ಶಿಶುಪಾಲನನ್ನು), **ಆಶ್ರಿತಃ** = ಆಶ್ರಯಿಸಿಕೊಂಡಿದ್ದ, **ಅಸುರಃ** = ದೈತ್ಯನು (ಆದಿ ಹಿರಣ್ಯಕಶಿಪುವು), **ಮಹಾತಮಃ** = ಅಂಧಂತಮಸ್ಸನ್ನು, **ಪ್ರಪೇದಿವಾನ್** = ಹೊಂದಿದನು.

**ತಾತ್ಪರ್ಯ** :- ಶಿಶುಪಾಲನ ಶರೀರದಲ್ಲಿ ಜೀವದ್ವಯರ ಆವೇಶವಿತ್ತು, ವೈಕುಂಠದ ದ್ವಾರಪಾಲಕನಾದ ಜಯ ಮತ್ತು ಆದಿ ಹಿರಣ್ಯಕಶಿಪು ಎಂಬ ಇಬ್ಬರು ಜೀವರಿದ್ದರು. ಚಕ್ರಾಯುಧದಿಂದ ಶಿಶುಪಾಲನ ಶಿರಚ್ಛೇದನವಾಗುತ್ತಿದ್ದಂತೆ ಬಳಸಿರುವ ಜಯ ಎಂಬ ದ್ವಾರಪಾಲಕನು ಕೃಷ್ಣನಲ್ಲಿ ಭಕ್ತಿ ಭರಿತನಾದನು. ಅದೇ ಶರೀರದಲ್ಲಿ ಜಯನ ಜೊತೆಯಲ್ಲಿದ್ದ ಅಸುರನು ಅಂಧಂತಮಸ್ಸಿಗೆ ಹೋದನು.

**ಜಯಃ ಪ್ರವಿಶ್ಯ ಕೇಶವಂ ಪುನಶ್ಚ ಪಾರ್ಷದೋಽಭವತ್ ।**
**ಅಸೌ ಚ ಪಾಂಡವೈಃ ಕ್ರತುಃ ಪ್ರವರ್ತಿತೋ ಯಥೋದಿತಃ ॥ ೨೬೫ ॥**

**ಪದಚ್ಛೇದ :– ಜಯಃ, ಪ್ರವಿಶ್ಯ, ಕೇಶವಂ, ಪುನಃ, ಚ, ಪಾರ್ಷದಃ, ಅಭವತ್, ಅಸೌ, ಚ, ಪಾಂಡವೈಃ, ಕ್ರತುಃ, ಪ್ರವರ್ತಿತಃ, ಯಥಾ, ಉದಿತಃ ।**

**ಅರ್ಥ** :- **ಜಯಃ** = ಜಯನು, **ಕೇಶವಂ** = ಶ್ರೀಕೃಷ್ಣನನ್ನು, **ಪ್ರವಿಶ್ಯ** = ಪ್ರವೇಶಿಸಿ, **ಪುನಃ** = ಮತ್ತೆ, **ಪಾರ್ಷದಃ** = ದ್ವಾರಪಾಲಕನಾಗಿ, **ಅಭವಚ್ಚ** = ಆದನು, **ಅಸೌ** = ಈ, **ಕ್ರತುಃ** = ರಾಜಸೂಯಯಾಗವು, **ಪಾಂಡವೈಃ** = ಪಾಂಡವರಿಂದ, **ಯಥೋದಿತಃ** = ವಿಧ್ಯುಕ್ತವಾಗಿ, **ಪ್ರವರ್ತಿತಃ** = ಮುಂದುವರೆಸಲ್ಪಟ್ಟಿತು.

**ತಾತ್ಪರ್ಯ** :- ಚಕ್ರಾಯುಧದ ಸ್ಪರ್ಶದಿಂದ ಅತ್ಯಂತ ಭಕ್ತಿಯುಕ್ತನಾದ ಜಯನು ಎಲ್ಲರೂ ನೋಡುತ್ತಿದ್ದಂತೆಯೇ ತೇಜೋರೂಪದಿಂದ ಶ್ರೀಕೃಷ್ಣನ ಒಳಗೆ ಪ್ರವೇಶಿಸಿದನು. ಶ್ರೀಕೃಷ್ಣನು ಭೂಲೋಕದ ವ್ಯಾಪಾರವನ್ನು ಮುಗಿಸಿ ಪುನಃ ವೈಕುಂಠಕ್ಕೆ ತೆರಳಿದಾಗ ಈ ಜಯನು ಪುನಃ ವೈಕುಂಠದ ದ್ವಾರಪಾಲಕನಾದನು. ಅನಂತರ ಪಾಂಡವರು ರಾಜಸೂಯ ಯಾಗವನ್ನು ವಿಧ್ಯುಕ್ತವಾಗಿ ಮುಂದುವರೆಸಿದರು.

### ರಾಜಸೂಯ ಯಾಗದ ವೈಭವ

**ಸುವರ್ಣರತ್ನಭಾರಕಾನ್ ಬಹೂನ್ ನೃಪಾ ಉಪಾನಯನ್ ।**
**ಉಪಾಯನೇ ಸುಯೋಧನಂ ನೃಪೋऽದಿಶದ್ ಗ್ರಹೇऽಸ್ಯ ಚ ॥ ೨೬೬ ॥**

ಪದಚ್ಛೇದ :- ಸುವರ್ಣರತ್ನಭಾರಕಾನ್, ಬಹೂನ್, ನೃಪಾಃ, ಉಪಾನಯನ್, ಉಪಾಯನೇ, ಸುಯೋಧನಂ, ನೃಪಃ, ಅದಿಶತ್, ಗ್ರಹೇ, ಅಸ್ಯ, ಚ ।

**ಅರ್ಥ** :- **ನೃಪಾಃ** = ರಾಜಸೂಯ ಯಾಗಕ್ಕೆ ಬಂದಿರುವ ಎಲ್ಲ ರಾಜರು, **ಬಹೂನ್** = ಬಹುಸಂಖ್ಯಾತಗಳಾದ, **ಸುವರ್ಣರತ್ನಭಾರಕಾನ್** = ಬಂಗಾರ (ಮುತ್ತು) ರತ್ನಗಳ ಭಾರಗಳನ್ನು, **ಉಪಾಯನೇ** = ಕಪ್ಪಕಾಣಿಕೆ ರೂಪದಲ್ಲಿ, **ಉಪಾನಯನ್** = ತಂದರು, **ನೃಪಃ** = ಧರ್ಮರಾಜನು, **ಅಸ್ಯ ಚ** = ಈ ಬಂಗಾರ ರತ್ನಸಮೂಹದ, **ಗ್ರಹೇ** = ತೆಗೆದುಕೊಳ್ಳುವ ಕಾರ್ಯದಲ್ಲಿ, **ಸುಯೋಧನಂ** = ದುರ್ಯೋಧನನನ್ನು, **ಅದಿಶತ್** = ನಿಯಮಿಸಿದನು.

**ತಾತ್ಪರ್ಯ** :- ರಾಜಸೂಯ ಯಾಗಕ್ಕಾಗಿ ಬಂದಿದ್ದ ಸಾವಿರಾರು ರಾಜರು ಕಪ್ಪಕಾಣಿಕೆ ರೂಪದಲ್ಲಿ ಯಥೇಚ್ಛವಾಗಿ ಬಂಗಾರ ರತ್ನ ಮುಂತಾದ ಸಂಪತ್ತನ್ನು ತಂದಿದ್ದರು. ಭಾರ ಎಂದರೆ ಇಪ್ಪತ್ತು ತೊಲೆಯ ತೂಕ ಎಲ್ಲರಾಜರೂ ಸಹಸ್ರಕ್ಕೆ ಕಡಿಮೆ ಇಲ್ಲದಂತೆ ಈ ತೂಕದ ಸಂಪತ್ತನ್ನು ತಂದಿದ್ದರು. ಎಲ್ಲರೂ ತಂದಿರುವ ಸಂಪತ್ತಿನ ಸಂಗ್ರಹದ ಕೆಲಸವನ್ನು ಧರ್ಮರಾಜನು ದುರ್ಯೋಧನನಿಗೆ ವಹಿಸಿದ್ದ.

**ಅಭೋಜಯಂಸ್ತಥಾ ದ್ವಿಜಾನ್ ಯಥೇಷ್ಟಭಕ್ಷ್ಯಭೋಜ್ಯಕೈಃ ।**
**ಸುವರ್ಣರತ್ನಭಾರಕಾನ್ ಬಹೂಂಶ್ಚ ದಕ್ಷಿಣಾ ದದುಃ ॥ ೨೬೭ ॥**

ಪದಚ್ಛೇದ :- ಅಭೋಜಯನ್, ತಥಾ, ದ್ವಿಜಾನ್, ಯಥೇಷ್ಟಭಕ್ಷ್ಯಭೋಜ್ಯಕೈಃ, ಸುವರ್ಣರತ್ನಭಾರಕಾನ್, ಬಹೂನ್, ಚ, ದಕ್ಷಿಣಾಃ, ದದುಃ ।

**ಅರ್ಥ** :- (ಪಾಂಡವರು) **ತಥಾ** = ಹಾಗೆಯೇ, **ಯಥೇಷ್ಟಭಕ್ಷ್ಯಭೋಜ್ಯಕೈಃ** = ಯಥೇಚ್ಛ ಭಕ್ಷ್ಯಭೋಜ್ಯಗಳಿಂದ, **ದ್ವಿಜಾನ್** = ಬ್ರಾಹ್ಮಣರನ್ನು, **ಅಭೋಜಯನ್** = ಊಟ ಮಾಡಿಸಿದರು, **ಬಹೂನ್** = ಬಹುಸಂಖ್ಯಾತವಾದ, **ಸುವರ್ಣರತ್ನಭಾರಕಾನ್** = ಬಂಗಾರ ರತ್ನಗಳ ಭಾರಗಳನ್ನು

(ಬ್ರಾಹ್ಮಣರಿಗೆ), ದಕ್ಷಿಣಾಃ = ದಕ್ಷಿಣೆ ರೂಪವಾಗಿ, ದದುಃ = ಕೊಟ್ಟರು.

ತಾತ್ಪರ್ಯ :- ರಾಜಸೂಯಯಾಗದ ಸಂದರ್ಭದಲ್ಲಿ ಪಾಂಡವರು ಯಥೇಚ್ಛ ಭಕ್ಷ್ಯಭೋಜ್ಯಾದಿಗಳಿಂದ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿದರು. ಮತ್ತು ಬಂಗಾರ ರತ್ನ ಮೊದಲಾದ ಸಂಪತ್ತುಗಳ ಭಾರಗಳನ್ನು ದಕ್ಷಿಣೆಯನ್ನಾಗಿ ಕೊಟ್ಟರು.

**ಯದಿಷ್ಟಮಾಸ ಯಸ್ಯ ಚ ಪ್ರದತ್ತಮೇವ ಪಾಂಡವೈಃ ।**
**ಸಮಸ್ತಮತ್ರ ಸರ್ವಶೋಽಥ ಸಸ್ನುರುದ್ಧತಾ ಮುದಾ ॥ ೨೬೮ ॥**

**ಪದಚ್ಛೇದ :- ಯತ್, ಇಷ್ಟಂ, ಆಸ, ಯಸ್ಯ, ಚ, ಪ್ರದತ್ತಂ, ಏವ, ಪಾಂಡವೈಃ, ಸಮಸ್ತಂ, ಅತ್ರ, ಸರ್ವಶಃ, ಅಥ, ಸಸ್ನುಃ, ಉದ್ಧತಾಃ, ಮುದಾ ।**

**ಅರ್ಥ** :- **ಅತ್ರ** = ಈ ರಾಜಸೂಯಯಾಗದಲ್ಲಿ, **ಯಸ್ಯ** = ಯಾರು ಯಾರಿಗೆ, **ಯತ್** = ಯಾವುದಾವುದು, **ಇಷ್ಟಂ** = ಬೇಕಾದುದೋ, **ತತ್ ಸಮಸ್ತಂ** = ಅದೆಲ್ಲವೂ, **ಪಾಂಡವೈಃ** = ಪಾಂಡವರಿಂದ, **ಪ್ರದತ್ತಮೇವ** = ಕೊಡಲ್ಪಟ್ಟಿತು, **ಅಥ** = ಯಾಗಾನಂತರದಲ್ಲಿ, **ಸರ್ವಶಃ** = ಎಲ್ಲ ಬಾಂಧವರಿಂದ ಕೂಡಿದ ಪಾಂಡವರು, **ಮುದಾ ಉದ್ಧತಾಃ** = ಸಂತೋಷದಿಂದ ಉದ್ರಿಕ್ತರಾಗಿ, **ಸಸ್ನುಃ** = ಅವಭೃತಸ್ನಾನವನ್ನು ಮಾಡಿದರು.

ತಾತ್ಪರ್ಯ :- ರಾಜಸೂಯಯಾಗ ಸಂದರ್ಭದಲ್ಲಿ ಯಾರಿಗೂ ಯಾವ ಕೊರತೆಯೂ ಆಗದಂತೆ ಯಾರಾರಿಗೆ ಏನೇನು ಬೇಕೋ ಅದೆಲ್ಲವನ್ನೂ ಕೊಟ್ಟು ಪಾಂಡವರು ಎಲ್ಲರನ್ನೂ ತೃಪ್ತಿಪಡಿಸಿದರು. ಯಾಗ ಸಮಾಪ್ತಿಯಾದ ನಂತರ ಎಲ್ಲ ಬಂಧು ಬಾಂಧವರಿಂದ ಒಡಗೂಡಿ ಅತ್ಯಂತ ಸಂತೋಷಭರಿತರಾಗಿ ಅವಭೃತಸ್ನಾನವನ್ನು ಮಾಡಿದರು.

**ನದತ್ಸುರೋರುದುಂದುಭಿಪ್ರಗೀತದೇವಗಾಯಕಾಃ ।**
**ಪ್ರನೃತ್ತದಿವ್ಯಯೋಷಿತಃ ಸುರಾಪಗಾಂ ವ್ಯಗಾಹಯನ್ ॥ ೨೬೯ ॥**

**ಪದಚ್ಛೇದ :- ನದತ್ಸುರೋರುದುಂದುಭಿಪ್ರಗೀತದೇವಗಾಯಕಾಃ, ಪ್ರನೃತ್ತದಿವ್ಯಯೋಷಿತಃ, ಸುರಾಪಗಾಂ, ವ್ಯಗಾಹಯನ್ ।**

**ಅರ್ಥ** :- **ನದತ್ಸುರೋರುದುಂದುಭಿಪ್ರಗೀತದೇವಗಾಯಕಾಃ** = **ನದತ್** - ಚೆನ್ನಾಗಿ ಶಬ್ದಮಾಡುವ ಸುರ - ದೇವತೆಗಳ ಉರು - ಉತ್ಕೃಷ್ಟವಾದ, **ದುಂದುಭಯಃ** - ದುಂದುಭಿಗಳುಳ್ಳ, **ಪ್ರನೃತ್ತದಿವ್ಯಯೋಷಿತಃ** = **ಪ್ರ** - ಚೆನ್ನಾಗಿ, **ನೃತ್ತ** - ನರ್ತನ ಮಾಡುವ, **ದಿವ್ಯಯೋಷಿತಃ** - ದೇವಸ್ತ್ರೀಯರುಳ್ಳ ಪಾಂಡವರು, **ಸುರಾಪಗಾಂ** = ಗಂಗಾನದಿಯನ್ನು ಪ್ರವೇಶಿಸಿ, **ವ್ಯಗಾಹಯನ್** = ಅವಗಾಹನ ಸ್ನಾನ ಮಾಡಿದರು.

**ತಾತ್ಪರ್ಯ** :- ದೇವಲೋಕದ ಗಾಯಕರಾದ ಗಂಧರ್ವರು ಚೆನ್ನಾಗಿ ಹಾಡಿದರು. ದೇವಲೋಕದ ಶ್ರೇಷ್ಠವಾದ ದುಂದುಭಿಗಳು ಮೊಳಗಿದವು. ದೇವಸ್ತ್ರೀಯರು ಪ್ರಕೃಷ್ಟವಾಗಿ ನಾಟ್ಯವಾಡಿದರು. ಇಂಥ ಸುಸಂದರ್ಭದಲ್ಲಿ ಪಾಂಡವರು ಗಂಗಾನದಿಯನ್ನು ಪ್ರವೇಶಿಸಿ ಅವಗಾಹನ ಸ್ನಾನವಿಧಿಯನ್ನು ಅನುಸರಿಸಿ ಅಘಮರ್ಷಣ ಮಂತ್ರವನ್ನು ಉಚ್ಚರಿಸುತ್ತಾ ನೀರಿನಲ್ಲಿ ಮುಳುಗಿ ಸ್ನಾನ ಮಾಡಿದರು.

**ಸಮಸ್ತರಾಜಸಂಯುತಾ ವಿಗಾಹ್ಯ ಜಾಹ್ನವೀಜಲೇ ।**
**ಪುರಂ ಯಯುಃ ಪುನಶ್ಚ ತೇ ಸುಸದ್ಮ ಚಾಗಮನ್ ಸುರಾಃ ॥ ೨೭೦ ॥**

**ಪದಚ್ಛೇದ** :- **ಸಮಸ್ತರಾಜಸಂಯುತಾಃ, ವಿಗಾಹ್ಯ, ಜಾಹ್ನವೀಜಲೇ, ಪುರಂ, ಯಯುಃ, ಪುನಃ, ಚ, ತೇ, ಸ್ವಸದ್ಮ, ಚ, ಆಗಮನ್, ಸುರಾಃ ।**

**ಅರ್ಥ** :- **ಸಮಸ್ತರಾಜಸಂಯುತಾಃ** = ಎಲ್ಲ ರಾಜರಿಂದೊಡಗೂಡಿದ ಪಾಂಡವರು, **ಜಾಹ್ನವೀಜಲೇ** = ಗಂಗಾನದಿಯಲ್ಲಿ, **ವಿಗಾಹ್ಯ** = ಅವಗಾಹನ ಸ್ನಾನ ಮಾಡಿದ ನಂತರ, **ಪುರಂ** = ಇಂದ್ರಪ್ರಸ್ಥವನ್ನು ಕುರಿತು, **ಯಯುಃ** = ಹೋದರು, **ತೇ ಸುರಾಃ ಪುನಃ** = ಆ ದೇವತೆಗಳಾದರೂ, **ಸ್ವಸದ್ಮ** = ತಮ್ಮ ಲೋಕವನ್ನು ಕುರಿತು, **ಯಯುಃ** = ಹೋದರು.

**ತಾತ್ಪರ್ಯ** :- ರಾಜಸೂಯಯಾಗಕ್ಕೆ ಬಂದಿರುವ ಎಲ್ಲ ರಾಜಾಧಿರಾಜರಿಂದ ಸಹಿತರಾಗಿ ಪಾಂಡವರು ಗಂಗಾಜಲದಲ್ಲಿ ಅವಗಾಹನ ಸ್ನಾನವನ್ನು ಮಾಡಿ ಇಂದ್ರಪ್ರಸ್ಥಕ್ಕೆ ಹೊರಟರು. ರಾಜಸೂಯ ಯಾಗಕ್ಕೆ ಬಂದಿದ್ದ ಎಲ್ಲ ದೇವತೆಗಳು ತಮ್ಮ ತಮ್ಮ ಲೋಕಗಳಿಗೆ ಹಿಂದಿರುಗಿದರು.

ದುರ್ಯೋಧನ ಅಪಹಾಸಕ್ಕೆ ಗುರಿಯಾದ

**ಗತೇಷು ಸರ್ವರಾಜಸು ಸ್ವಕಾಂ ಪುರಂ ಸ್ವಕೇಷು ಚ ।**
**ಸಭೀಷ್ಮಕೇಷು ಸರ್ವಶಃ ಸಹಾಽಂಬಿಕೇಯಕೇಷು ಚ ॥ ೨೭೧ ॥**

**ವಿಚಿತ್ರರತ್ನಕಾರಿತೇ ರವಿಪ್ರಭೇ ಸಭಾತಳೇ ।**
**ಸಕೇಶವೋ ವರಾಸನೇ ವಿವೇಶ ಧರ್ಮನಂದನಃ ॥ ೨೭೨ ॥**

ಪದಚ್ಛೇದ :- ಗತೇಷು, ಸರ್ವರಾಜಸು, ಸ್ವಕಂ, ಪುರಂ, ಸ್ವಕೇಷು, ಚ, ಸಭೀಷ್ಮಕೇಷು, ಸರ್ವಶಃ, ಸಹಾಂಬಿಕೇಯಕೇಷು, ಚ, ವಿಚಿತ್ರರತ್ನಕಾರಿತೇ, ರವಿಪ್ರಭೇ, ಸಭಾತಲೇ, ಸ, ಕೇಶವಃ, ವರಾಸನೇ, ವಿವೇಶ, ಧರ್ಮನಂದನಃ।

**ಅರ್ಥ** :- **ಸರ್ವರಾಜಸು** = ಎಲ್ಲ ರಾಜರೂ, **ಸ್ವಕಂ ಪುರಂ** = ತಮ್ಮ ತಮ್ಮ ಊರುಗಳಿಗೆ, **ಗತೇಷು (ಸತ್ಸು)** = ಹೋಗುತ್ತಿರಲು, **ಸಭೀಷ್ಮಕೇಷು** = ಭೀಷ್ಮಾಚಾರ್ಯರಿಂದ ಕೂಡಿದ, **ಸಹಾಂಬಿಕೇಯಕೇಷು** = ಅಂಬಿಕೆಯ ಮಗನಾದ ಧೃತರಾಷ್ಟ್ರನಿಂದ ಕೂಡಿದ, **ಸ್ವಕೇಷು ಚ** = ತಮ್ಮವರಾದ, **ಸರ್ವಶಃ** = ಎಲ್ಲರೂ ಹಸ್ತಿನಾವತಿಗೆ ಹೋಗುತ್ತಿರಲು, **ಧರ್ಮನಂದನಃ** = ಧರ್ಮರಾಜನು, **ರವಿಪ್ರಭೇ** = ಸೂರ್ಯನಂತೆ ಪ್ರಕಾಶಮಾನವಾದ, **ವಿಚಿತ್ರರತ್ನಕಾರಿತೇ** = ಚಿತ್ರವಿಚಿತ್ರವಾದ ರತ್ನಗಳಿಂದ ಮಯನು ಸಿದ್ಧಪಡಿಸಿದ, **ಸಭಾತಲೇ** = ಸಭಾಮಂಟಪದಲ್ಲಿರುವ, **ವರಾಸನೇ** = ಶ್ರೇಷ್ಠವಾದ ಆಸನದಲ್ಲಿ, **ಸಕೇಶವಃ** = ಕೃಷ್ಣನೊಂದಿಗೆ, **ವಿವೇಶ** = ಕುಳಿತುಕೊಂಡನು.

ತಾತ್ಪರ್ಯ :- ರಾಜಸೂಯಯಾಗಕ್ಕೆ ಬಂದ ಎಲ್ಲ ರಾಜರೂ ತಮ್ಮ ತಮ್ಮ ಊರಿಗೆ ಹೊರಟರು. ತಮ್ಮವರೆಲ್ಲರೂ ಭೀಷ್ಮಾಚಾರ್ಯರು ಮತ್ತು ಧೃತರಾಷ್ಟ್ರನೊಂದಿಗೆ ಹಸ್ತಿನಾವತಿಗೆ ಹೊರಟರು. ಅನಂತರ ಧರ್ಮರಾಜನು ಇಂದ್ರಪ್ರಸ್ಥದಲ್ಲಿ ಮಯನಿಂದ ನಿರ್ಮಿತವಾದ ಸೂರ್ಯನಂತೆ ಪ್ರಕಾಶಮಾನವಾದ ಬಹುರತ್ನ ಖಚಿತವಾದ ಸಭಾಮಂಟಪದಲ್ಲಿರುವ ಶ್ರೇಷ್ಠವಾದ ಆಸನದಲ್ಲಿ ಶ್ರೀಕೃಷ್ಣನ ಜೊತೆಯಲ್ಲಿ ಕುಳಿತನು.

**ತಥೈವ ರುಗ್ಮಿಣೀಮುಖಾಃ ಪರಿಗ್ರಹಾ ರಮೇಶಿತುಃ ।**
**ತಥೈವ ಭೀಮಫಲ್ಗುನಾವುಪಾವಿಶನ್ ಹರೇರುಪ ॥ ೨೭೩ ॥**

**ಅರ್ಥ** :- **ನದತ್ಸುರೋರುದುಂದುಭಿಪ್ರಗೀತದೇವಗಾಯಕಾಃ** = ನದತ್ - ಚೆನ್ನಾಗಿ ಶಬ್ದಮಾಡುವ ಸುರ - ದೇವತೆಗಳ ಉರು - ಉತ್ಕೃಷ್ಟವಾದ, **ದುಂದುಭಯಃ** - ದುಂದುಭಿಗಳುಳ್ಳ, **ಪ್ರನೃತ್ತದಿವ್ಯಯೋಷಿತಃ** = ಪ್ರ - ಚೆನ್ನಾಗಿ, ನೃತ್ತ - ನರ್ತನ ಮಾಡುವ, **ದಿವ್ಯಯೋಷಿತಃ** - ದೇವಸ್ತ್ರೀಯರುಳ್ಳ ಪಾಂಡವರು, **ಸುರಾಪಗಾಂ** = ಗಂಗಾನದಿಯನ್ನು ಪ್ರವೇಶಿಸಿ, **ವ್ಯಗಾಹಯನ್** = ಅವಗಾಹನ ಸ್ನಾನ ಮಾಡಿದರು.

**ತಾತ್ಪರ್ಯ** :- ದೇವಲೋಕದ ಗಾಯಕರಾದ ಗಂಧರ್ವರು ಚೆನ್ನಾಗಿ ಹಾಡಿದರು. ದೇವಲೋಕದ ಶ್ರೇಷ್ಠವಾದ ದುಂದುಭಿಗಳು ಮೊಳಗಿದವು. ದೇವಸ್ತ್ರೀಯರು ಪ್ರಕೃಷ್ಟವಾಗಿ ನಾಟ್ಯವಾಡಿದರು. ಇಂಥ ಸುಸಂದರ್ಭದಲ್ಲಿ ಪಾಂಡವರು ಗಂಗಾನದಿಯನ್ನು ಪ್ರವೇಶಿಸಿ ಅವಗಾಹನ ಸ್ನಾನವಿಧಿಯನ್ನು ಅನುಸರಿಸಿ ಅಘಮರ್ಷಣ ಮಂತ್ರವನ್ನು ಉಚ್ಚರಿಸುತ್ತಾ ನೀರಿನಲ್ಲಿ ಮುಳುಗಿ ಸ್ನಾನ ಮಾಡಿದರು.

**ಸಮಸ್ತರಾಜಸಂಯುತಾ ವಿಗಾಹ್ಯ ಜಾಹ್ನವೀಜಲೇ ।**
**ಪುರಂ ಯಯುಃ ಪುನಶ್ಚ ತೇ ಸುಸದ್ಮ ಚಾಗಮನ್ ಸುರಾಃ ॥ ೨೭೦ ॥**

ಪದಚ್ಛೇದ :- ಸಮಸ್ತರಾಜಸಂಯುತಾಃ, ವಿಗಾಹ್ಯ, ಜಾಹ್ನವೀಜಲೇ, ಪುರಂ, ಯಯುಃ, ಪುನಃ, ಚ, ತೇ, ಸ್ವಸದ್ಮ, ಚ, ಆಗಮನ್, ಸುರಾಃ ।

**ಅರ್ಥ** :- **ಸಮಸ್ತರಾಜಸಂಯುತಾಃ** = ಎಲ್ಲ ರಾಜರಿಂದೊಡಗೂಡಿದ ಪಾಂಡವರು, **ಜಾಹ್ನವೀಜಲೇ** = ಗಂಗಾನದಿಯಲ್ಲಿ, **ವಿಗಾಹ್ಯ** = ಅವಗಾಹನ ಸ್ನಾನ ಮಾಡಿದ ನಂತರ, **ಪುರಂ** = ಇಂದ್ರಪ್ರಸ್ಥವನ್ನು ಕುರಿತು, **ಯಯುಃ** = ಹೋದರು, **ತೇ ಸುರಾಃ ಪುನಃ** = ಆ ದೇವತೆಗಳಾದರೂ, **ಸ್ವಸದ್ಮ** = ತಮ್ಮ ಲೋಕವನ್ನು ಕುರಿತು, **ಯಯುಃ** = ಹೋದರು.

**ತಾತ್ಪರ್ಯ** :- ರಾಜಸೂಯಯಾಗಕ್ಕೆ ಬಂದಿರುವ ಎಲ್ಲ ರಾಜಾಧಿ ರಾಜರಿಂದ ಸಹಿತರಾಗಿ ಪಾಂಡವರು ಗಂಗಾಜಲದಲ್ಲಿ ಅವಗಾಹನ ಸ್ನಾನವನ್ನು ಮಾಡಿ ಇಂದ್ರಪ್ರಸ್ಥಕ್ಕೆ ಹೊರಟರು. ರಾಜಸೂಯ ಯಾಗಕ್ಕೆ ಬಂದಿದ್ದ ಎಲ್ಲ ದೇವತೆಗಳು ತಮ್ಮ ತಮ್ಮ ಲೋಕಗಳಿಗೆ ಹಿಂದಿರುಗಿದರು.

ದುರ್ಯೋಧನ ಅಪಹಾಸಕ್ಕೆ ಗುರಿಯಾದ

ಗತೇಷು ಸರ್ವರಾಜಸು ಸ್ವಕಾಂ ಪುರಂ ಸ್ವಕೇಷು ಚ ।
ಸಭೀಷ್ಮಕೇಷು ಸರ್ವಶಃ ಸಹಾऽಂಬಿಕೇಯಕೇಷು ಚ ॥ ೨೭೧ ॥

ವಿಚಿತ್ರರತ್ನಕಾರಿತೇ ರವಿಪ್ರಭೇ ಸಭಾತಳೇ ।
ಸಕೇಶವೋ ವರಾಸನೇ ವಿವೇಶ ಧರ್ಮನಂದನಃ ॥ ೨೭೨ ॥

ಪದಚ್ಛೇದ :- ಗತೇಷು, ಸರ್ವರಾಜಸು, ಸ್ವಕಂ, ಪುರಂ, ಸ್ವಕೇಷು, ಚ, ಸಭೀಷ್ಮಕೇಷು, ಸರ್ವಶಃ, ಸಹಾಂಬಿಕೇಯಕೇಷು, ಚ, ವಿಚಿತ್ರರತ್ನಕಾರಿತೇ, ರವಿಪ್ರಭೇ, ಸಭಾತಲೇ, ಸ, ಕೇಶವಃ, ವರಾಸನೇ, ವಿವೇಶ, ಧರ್ಮನಂದನಃ ।

ಅರ್ಥ :- ಸರ್ವರಾಜಸು = ಎಲ್ಲ ರಾಜರೂ, ಸ್ವಕಂ ಪುರಂ = ತಮ್ಮ ತಮ್ಮ ಊರುಗಳಿಗೆ, ಗತೇಷು (ಸತ್ಸು) = ಹೋಗುತ್ತಿರಲು, ಸಭೀಷ್ಮಕೇಷು = ಭೀಷ್ಮಾಚಾರ್ಯರಿಂದ ಕೂಡಿದ, ಸಹಾಂಬಿಕೇಯಕೇಷು = ಅಂಬಿಕೆಯ ಮಗನಾದ ಧೃತರಾಷ್ಟನಿಂದ ಕೂಡಿದ, ಸ್ವಕೇಷು ಚ = ತಮ್ಮವರಾದ, ಸರ್ವಶಃ = ಎಲ್ಲರೂ ಹಸ್ತಿನಾವತಿಗೆ ಹೋಗುತ್ತಿರಲು, ಧರ್ಮನಂದನಃ = ಧರ್ಮರಾಜನು, ರವಿಪ್ರಭೇ = ಸೂರ್ಯನಂತೆ ಪ್ರಕಾಶಮಾನವಾದ, ವಿಚಿತ್ರರತ್ನಕಾರಿತೇ = ಚಿತ್ರವಿಚಿತ್ರವಾದ ರತ್ನಗಳಿಂದ ಮಯನು ಸಿದ್ಧಪಡಿಸಿದ, ಸಭಾತಲೇ = ಸಭಾಮಂಟಪದಲ್ಲಿರುವ, ವರಾಸನೇ = ಶ್ರೇಷ್ಠವಾದ ಆಸನದಲ್ಲಿ, ಸಕೇಶವಃ = ಕೃಷ್ಣನೊಂದಿಗೆ, ವಿವೇಶ = ಕುಳಿತುಕೊಂಡನು.

ತಾತ್ಪರ್ಯ :- ರಾಜಸೂಯಯಾಗಕ್ಕೆ ಬಂದ ಎಲ್ಲ ರಾಜರೂ ತಮ್ಮ ತಮ್ಮ ಊರಿಗೆ ಹೊರಟರು. ತಮ್ಮವರೆಲ್ಲರೂ ಭೀಷ್ಮಾಚಾರ್ಯರು ಮತ್ತು ಧೃತರಾಷ್ಟನೊಂದಿಗೆ ಹಸ್ತಿನಾವತಿಗೆ ಹೊರಟರು. ಅನಂತರ ಧರ್ಮರಾಜನು ಇಂದ್ರಪ್ರಸ್ಥದಲ್ಲಿ ಮಯನಿಂದ ನಿರ್ಮಿತವಾದ ಸೂರ್ಯನಂತೆ ಪ್ರಕಾಶ ಮಾನವಾದ ಬಹುರತ್ನ ಖಚಿತವಾದ ಸಭಾಮಂಟಪದಲ್ಲಿರುವ ಶ್ರೇಷ್ಠವಾದ ಆಸನದಲ್ಲಿ ಶ್ರೀಕೃಷ್ಣನ ಜೊತೆಯಲ್ಲಿ ಕುಳಿತನು.

ತತ್ರೈವ ರುಗ್ಮಿಣೀಮುಖಾಃ ಪರಿಗ್ರಹಾ ರಮೇಶಿತುಃ ।
ತತ್ರೈವ ಭೀಮಫಲ್ಗುನಾವುಪಾವಿಶನ್ ಹರೇರುಪ ॥ ೨೭೩ ॥

**ಸಹೈವ ವಾಯುಸೂನುನಾ ತಥೈವ ಪಾರ್ಷತಾತ್ಮಜಾ ।**
**ಉಪೈವ ರುಗ್ಮಿಣೀಂ ಶುಭಾಂ ತಥೈವ ಸತ್ಯಭಾಮಿನೀಮ್ ॥ ೨೭೪ ॥**

ಪದಚ್ಛೇದ :- ತಥಾ, ಏವ, ರುಕ್ಮಿಣೀಮುಖಾಃ, ಪರಿಗ್ರಹಾಃ, ರಮೇಶಿತುಃ, ತಥಾ, ಏವ, ಭೀಮಫಲ್ಗುನೌ, ಉಪಾವಿಶನ್, ಹರೇಃ, ಉಪ, ಸಹ, ಏವ, ವಾಯುಸೂನುನಾ, ತಥಾ, ಏವ, ಪಾರ್ಷತಾತ್ಮಜಾ, ಉಪ, ಏವ, ರುಕ್ಮಿಣೀಂ, ಶುಭಾಂ, ತಥಾ, ಏವ, ಸತ್ಯಭಾಮಿನೀಮ್ ।

ಅರ್ಥ :- ತಥಾ ಏವ = ಹಾಗೆಯೇ, ರುಕ್ಮಿಣೀ ಮುಖಾಃ = ರುಕ್ಮಿಣಿಯೇ ಮೊದಲಾದ, ರಮೇಶಿತುಃ = ಶ್ರೀಕೃಷ್ಣನ, ಪರಿಗ್ರಹಾಃ = ಹೆಂಡಂದಿರು, ತಥಾ ಏವ = ಹಾಗೆಯೇ, ಭೀಮ ಫಲ್ಗುನೌ = ಭೀಮಾರ್ಜುನರು, ಹರೇಃ ಉಪ = ಶ್ರೀಕೃಷ್ಣನ ಸಮೀಪದಲ್ಲಿ, ಉಪಾವಿಶನ್ = ಕುಳಿತುಕೊಂಡರು, ತಥಾ ಏವ = ಅದರಂತೆಯೇ, ಪಾರ್ಷತಾತ್ಮಜಾ = ದ್ರುಪದರಾಜನ ಮಗಳಾದ ದ್ರೌಪದಿಯು, ವಾಯುಸೂನುನಾ ಸಹ = ಭೀಮನೊಂದಿಗೆ, ಶುಭಾಂ = ಮಂಗಳಕರಳಾದ, ರುಕ್ಮಿಣೀಂ = ರುಕ್ಮಿಣಿಯು, ತಥಾ ಏವ = ಹಾಗೆಯೇ, ಶುಭಾಂ = ಮಂಗಳಾತ್ಮಕಳಾದ, ಸತ್ಯಭಾಮೀನೀಂ ಉಪ ಏವ = ಸತ್ಯಭಾಮೆಯರ ಸಮೀಪದಲ್ಲಿಯೇ ಕುಳಿತಳು.

ತಾತ್ಪರ್ಯ :- ಕೃಷ್ಣನ ಹೆಂಡಂದಿರಾದ ರುಕ್ಮಿಣೀ ಸತ್ಯಭಾಮೆಯರು ಹಾಗೂ ಭೀಮಾರ್ಜುನರು ಶ್ರೀಕೃಷ್ಣನ ಸಮೀಪದಲ್ಲಿ ಕುಳಿತರು. ದ್ರೌಪದೀದೇವಿಯು ಭೀಮನಿಂದ ಸಹಿತಳಾಗಿ ರುಕ್ಮಿಣೀ ಸತ್ಯಭಾಮೆಯರ ಸನಿಹದಲ್ಲಿ ಕುಳಿತಳು.

**ಯಮೌ ಚ ಪಾರ್ಷತಾದಯೋ ಧನಂಜಯಾಂತಿಕೇಽವಿಶನ್ ।**
**ತಥೈವ ರಾಮಸಾತ್ಯಕೀ ಸಮೀಪ ಏವ ಭೂಭೃತಃ ॥ ೨೭೫ ॥**

**ಸಮಾಸತಾಂ ತು ಸಾ ಸಭಾ ವ್ಯರೋಚತಾಧಿಕಂ ತದಾ ।**
**ಯಥಾ ಸಭಾ ಸ್ವಯಂಭುವಃ ಸಮಾಸ್ಥಿತಾ ಚ ವಿಷ್ಣುನಾ ॥ ೨೭೬ ॥**

ಪದಚ್ಛೇದ :- ಯಮೌ, ಚ, ಪಾರ್ಷತಾದಯಃ, ಧನಂಜಯಾಂತಿಕೇ, ಅವಿಶನ್, ತಥಾ, ಏವ, ರಾಮಸಾತ್ಯಕೀ, ಸಮೀಪೇ, ಏವ, ಭೂಭೃತಃ, ಸಮಾಸತಾಂ, ತು, ಸಾ,

ಸಭಾ, ವ್ಯರೋಚತ, ಅಧಿಕಂ, ತಥಾ, ಯಥಾ, ಸಭಾ, ಸ್ವಯಂಭುವಃ, ಸಮಾಸ್ಥಿತಾ, ಚ, ವಿಷ್ಣುನಾ ।

**ಅರ್ಥ** :- **ಯವಮೌ** = ನಕುಲಸಹದೇವರು, **ಚ** = ಮತ್ತು, **ಪಾರ್ಷತಾದಯಃ** = ದ್ರುಪದರಾಜನ ಮಗನಾದ ಧೃಷ್ಟದ್ಯುಮ್ನನೇ ಮೊದಲಾದ ಬಂಧುಗಳು, **ಧನಂಜಯಾಂತಿಕೇ** = ಅರ್ಜುನನ ಸಮೀಪದಲ್ಲಿ, **ಅವಿಶನ್** = ಕುಳಿತರು, **ತಥಾ ಏವ** = ಅದರಂತೆಯೇ, **ರಾಮಸಾತ್ಯಕೀ** = ಬಲರಾಮ ಮತ್ತು ಸಾತ್ಯಕಿ ಇವರು, **ಭೂಭೃತಃ** = ಧರ್ಮರಾಜನ, **ಸಮೀಪೇ ಏವ** = ಸನಿಹದಲ್ಲಿಯೇ, **ಸಮಾಸತಾಂ** = ಕುಳಿತುಕೊಂಡರು, **ತದಾ** = ಆಗ, **ಸಾ ಸಭಾ ತು** = ಆ ಧರ್ಮರಾಜನ ಸಭೆಯಾದರೂ, **ವಿಷ್ಣುನಾ** = ಶ್ರೀಹರಿಯಿಂದ, **ಸಮಾಸ್ಥಿತಾಃ** = ಅಲಂಕೃತವಾದ, **ಸ್ವಯಂಭುವಃ** = ಚತುರ್ಮುಖ ಬ್ರಹ್ಮದೇವರ, **ಸಭಾ** = ಸಭೆಯು, **ಯಥಾ** = ಹೇಗೆ ಶೋಭಾಯಮಾನವಾಗುತ್ತದೋ, **ತಥಾ** = ಅದರಂತೆ, **ಅಧಿಕಂ** = ಬಹಳವಾಗಿ, **ವ್ಯರೋಚತ** = ಶೋಭಿಸಿತು.

**ತಾತ್ಪರ್ಯ** :- ನಕುಲ ಸಹದೇವರು ಹಾಗು ಧೃಷ್ಟದ್ಯುಮ್ನನೇ ಮುಂತಾದ ಎಲ್ಲ ಬಾಂಧವರು ಅರ್ಜುನನ ಸಮೀಪದಲ್ಲಿ ಕುಳಿತರು. ಬಲರಾಮ ಸಾತ್ಯಕಿಯರು ಧರ್ಮರಾಜನ ಸಮೀಪದಲ್ಲಿಯೇ ಕುಳಿತರು. ಹೀಗೆ ಈ ಎಲ್ಲ ಮಹಾನುಭಾವರಿಂದ ಕೂಡಿದ ಆ ಧರ್ಮರಾಜನ ಸಭೆಯು ಶ್ರೀ ಮಹಾ ವಿಷ್ಣುವಿನಿಂದ ಸನ್ನಿಹಿತವಾದ ಬ್ರಹ್ಮದೇವರ ಸಭೆಯಂತೆ ಶೋಭಾಯ ಮಾನವಾಯಿತು.

**ವಿಚಿತ್ರಹೇಮಮಾಲಿನಃ ಶುಭಾಂಬರಾಶ್ಚ ತೇಽಧಿಕಮ್ ।**
**ಸ್ಫುರತ್ಕಿರೀಟಕುಂಡಲಾ ವಿರೇಜುರತ್ರ ತೇ ನೃಪಾಃ ॥ ೨೭೭ ॥**

ಪದಚ್ಛೇದ :– ವಿಚಿತ್ರಹೇಮಮಾಲಿನಃ, ಶುಭಾಂಬರಾಃ, ಚ, ತೇ, ಅಧಿಕಂ, ಸ್ಫುರತ್, ಕಿರೀಟಕುಂಡಲಾಃ, ವಿರೇಜುಃ, ಅತ್ರ, ತೇ, ನೃಪಾಃ ।

**ಅರ್ಥ** :- **ವಿಚಿತ್ರಹೇಮಮಾಲಿನಃ** = ಆಶ್ಚರ್ಯಕರವಾದ ಬಂಗಾರದ ಮಾಲೆಗಳನ್ನು ಧರಿಸಿರುವ, ಶುಭ್ರವಾದ ವಸ್ತ್ರಗಳನ್ನು ಧರಿಸಿರುವ, **ಸ್ಫುರತ್ ಕಿರೀಟಕುಂಡಲಾಃ** = ಪ್ರಕಾಶಮಾನಗಳಾದ ಕಿರೀಟಕುಂಡಲಧಾರಿಗಳಾದ, **ತೇ**

= ಕುಲವೀರ್ಯಜ್ಞಾನಾದಿಗುಣಗಳಿಂದ ಪ್ರಸಿದ್ಧರಾದ, **ತೇ ನೃಪಾಃ** = ಈ ಸಭೆಯಲ್ಲಿ ಕುಳಿತಿರುವ ರಾಜರು, **ಅತ್ರ** = ಈ ಸಭೆಯಲ್ಲಿ, **ಅಧಿಕಂ** = ಬಹಳವಾಗಿ, **ವಿರೇಜುಃ** = ಶೋಭಿಸಿದರು.

**ತಾತ್ಪರ್ಯ :-** ಈ ಧರ್ಮರಾಜನ ಸಭೆಯಲ್ಲಿ ವಿರಾಜಮಾನರಾದ ರಾಜರು ಆಶ್ಚರ್ಯಕರವಾದ ಬಂಗಾರದ ಹಾರಗಳನ್ನು ಶುಭ್ರವಾದ ಬಟ್ಟೆಗಳನ್ನೂ ಪ್ರಕಾಶಮಾನವಾದ ಕಿರೀಟ ಕುಂಡಲಾದಿಗಳನ್ನು ಧರಿಸಿದವರಾಗಿ ತಮ್ಮ ಕುಲ-ವೀರ್ಯ-ಜ್ಞಾನ ಮೊದಲಾದ ಗುಣಗಳಿಂದ ಭರಿತರಾಗಿ ಅತ್ಯಂತ ಶೋಭಿಸಿದರು.

**ವಿಶೇಷತೋ ಜನಾರ್ದನಃ ಸಭಾರ್ಯಕೋ ಜಗತ್ಪ್ರಭುಃ ।**
**ಯಥಾ ದಿವೌಕಸಾಂ ಸದಸ್ಯನಂತಸದ್ಗುಣಾರ್ಣವಃ ।। ೨೭೮ ।।**

**ಪದಚ್ಛೇದ :- ವಿಶೇಷತಃ, ಜನಾರ್ದನಃ, ಸಭಾರ್ಯಕಃ, ಜಗತ್ಪ್ರಭುಃ, ಯಥಾ, ದಿವೌಕಸಾಂ, ಸದಸಿ, ಅನಂತಸದ್ಗುಣಾರ್ಣವಃ ।**

**ಅರ್ಥ :- ಸಭಾರ್ಯಕಃ** = ಹೆಂಡಂದಿರಿಂದ ಕೂಡಿದ, **ಜನಾರ್ದನಃ** = ಶ್ರೀ ಕೃಷ್ಣನು, **ಅನಂತಸದ್ಗುಣಾರ್ಣವಃ** = ಅನಂತಾನಂತ ಕಲ್ಯಾಣ ಗುಣಸಮುದ್ರನಾದ, **ಜಗತ್ಪ್ರಭುಃ** = ಜಗದೊಡೆಯನಾದ ವಿಷ್ಣುವು, **ದಿವೌಕಸಾಂ** = ದೇವತೆಗಳ, **ಸದಸಿ** = ಸಭೆಯಲ್ಲಿ, **ಯಥಾ ತಥಾ** = ಹೇಗೋ ಹಾಗೆ, **ವಿಶೇಷತಃ** = ವಿಶೇಷವಾಗಿ, **ವಿರೇಜೇ** = ಶೋಭಿಸಿದನು.

**ತಾತ್ಪರ್ಯ :-** ಅನಂತ ಕಲ್ಯಾಣ ಗುಣ ಪರಿಪೂರ್ಣನಾದ ಜಗದೊಡೆಯನಾದ ಶ್ರೀಹರಿಯು ದೇವತೆಗಳ ಸಭೆಯಲ್ಲಿ ಹೇಗೆ ಪ್ರಕಾಶಮಾನನಾಗುತ್ತಾನೆಯೋ ಅದರಂತೆ ಈ ಧರ್ಮರಾಜನ ಸಭೆಯಲ್ಲಿ ರುಕ್ಮಿಣೀ ಸತ್ಯಭಾಮೆಯರಿಂದ ಸಹಿತನಾದ ಶ್ರೀಕೃಷ್ಣನು ವಿಶೇಷವಾಗಿ ಶೋಭಿಸಿದನು.

**ಉಪಾಸಿರೇ ಚ ತಂ ನೃಪಾಃ ಸಮಸ್ತತಃ ಸುಹೃದ್ಗಣಾಃ ।**
**ತದಾऽऽಜಗಾಮ ಖಡ್ಗಭೃತ್ ಸಹಾನುಜಃ ಸುಯೋಧನಃ ।। ೨೭೯ ।।**

ಪದಚ್ಛೇದ :- ಉಪಾಸಿರೇ, ಚ, ತಂ, ನೃಪಾಃ, ನಮಸ್ತಶಃ, ಸುಹೃದ್ಗಣಾಃ, ತದಾ, ಆಜಗಾಮ, ಖಡ್ಗಭೃತ್, ಸಹಾನುಜಃ, ಸುಯೋಧನಃ ।

**ಅರ್ಥ** :- **ನೃಪಾಃ** = ಎಲ್ಲ ರಾಜರು, **ಚ** = ಮತ್ತು, **ಸಮಸ್ತಶಃ** = ಎಲ್ಲ, **ಸುಹೃದ್ಗಣಾಃ** = ಸ್ನೇಹಿತರ ಸಮೂಹಗಳು, **ತಂ** = ಶ್ರೀಕೃಷ್ಣನನ್ನು, **ಉಪಾಸಿರೇ** = ಆರಾಧಿಸಿದರು, **ತದಾ** = ಆ ಸಮಯದಲ್ಲಿ, **ಖಡ್ಗಭೃತ್** = ಖಡ್ಗಧಾರಿಯಾದ, **ಸುಯೋಧನಃ** = ದುರ್ಯೋಧನನು, **ಸಹಾನುಜಃ** = ತನ್ನ ತಮ್ಮಂದಿರೊಂದಿಗೆ, **ಆಜಗಾಮ** = ಆ ಸಭೆಗೆ ಬಂದನು.

**ತಾತ್ಪರ್ಯ** :- ಆ ಸಭೆಯಲ್ಲಿ ನೆರೆದ ಎಲ್ಲ ರಾಜರೂ ಹಾಗೂ ಸ್ನೇಹಿತ ಬಾಂಧವರೆಲ್ಲರೂ ಶ್ರೀಕೃಷ್ಣನನ್ನು ಉಪಾಸನೆಗೈದರು. ಆ ಸಮಯದಲ್ಲಿ ತಮ್ಮಂದಿರಿಂದ ಸಹಿತನಾದ ದುರ್ಯೋಧನನು ಖಡ್ಗಧಾರಿಯಾಗಿ ಆ ಸಭೆಗೆ ಪ್ರವೇಶಿಸಿದನು.

**ದ್ವಾರಂ ಸಭಾಯಾ ಹರಿನೀಲರಶ್ಮಿ-**
**ವ್ಯೂಢಂ ತ್ವಜಾನನ್ ಸ ವಿಹಾಯ ಭಿತ್ತಿಮ್ ।**
**ಅಭ್ಯಂತರಾಣಾಂ ದೃಶಿನೋ ವಿಘಾತಿನೀಂ**
**ಸಂಸ್ಫಾಟಿಕಾಮಾತು ದೃಢಂ ಚುಚುಂಬೇ ॥ ೨೮೦ ॥**

ಪದಚ್ಛೇದ :- ದ್ವಾರಂ, ಸಭಾಯಾಃ, ಹರಿನೀಲರಶ್ಮಿವ್ಯೂಢಂ, ತು, ಅಜಾನನ್, ಸಃ, ವಿಹಾಯ, ಭಿತ್ತಿಂ, ಅಭ್ಯಂತರಾಣಾಂ, ದೃಶಿ ನಃ, ಅವಿಘಾತಿನೀಂ, ಸಂಸ್ಫಾಟಿಕಾಂ, ಆಶು, ದೃಢಂ, ಚುಚುಂಬೇ ।

**ಅರ್ಥ** :- **ಸಃ** = ಆ ದುರ್ಯೋಧನನು, **ಹರಿನೀಲರಶ್ಮಿವ್ಯೂಢಂ** = ಇಂದ್ರ ನೀಲಮಣಿಯ ಪ್ರಕಾಶದಿಂದ ಆವೃತವಾದ, **ಸಭಾದ್ವಾರಂ** = ಸಭಾಂಗಣದ, **ದ್ವಾರಂ** = ಬಾಗಿಲನ್ನು, **ಅಜಾನನ್** = ತಿಳಿಯದೇ, **ವಿಹಾಯ** = ಮಹಾ ದ್ವಾರವನ್ನು ಬಿಟ್ಟು, **ಸಂಸ್ಫಾಟಿಕಾಂ** = ಒಳ್ಳೆಯ ಸ್ಫಟಿಕದಿಂದ ನಿರ್ಮಿತವಾದ (ಆದ್ದರಿಂದಲೇ), **ಅಭ್ಯಂತರಾಣಾಂ** = ಒಳಗಿರುವ ಪದಾರ್ಥಗಳ, **ದೃಶಿನಃ** = ನೋಟಕ್ಕೆ, **ಅವಿಘಾತಿನೀಂ** = ಪ್ರತಿಬಂಧಕವಲ್ಲದ, **ಭಿತ್ತಿಂ** = ಸಭಾಗೃಹದ ಗೋಡೆಯನ್ನು, **ದೃಢಂ** = ಗಟ್ಟಿಯಾಗಿ, **ಚುಚುಂಬೇ** = (ಚುಂಬಿಸಿದನು) ತಾಗಿಸಿಕೊಂಡನು.

ತಾತ್ಪರ್ಯ :- ಧರ್ಮರಾಜನ ಸಭಾಗೃಹವನ್ನು ಪ್ರವೇಶಿಸಲು ಉದ್ಯುಕ್ತನಾದ ದುರ್ಯೋಧನನು ಸಭಾಗೃಹದ ಮಹಾದ್ವಾರವು ಇಂದ್ರ ನೀಲಮಣಿಯ ಕಾಂತಿಯಿಂದ ಆಚ್ಛಾದಿತವಾದುದರಿಂದ ಅದು ಬಾಗಿಲು ಎಂದು ತಿಳಿಯದೇ ಆ ದ್ವಾರದಲ್ಲಿ ಪ್ರವೇಶಿಸಲಿಲ್ಲ. ಅದರ ಬದಲಾಗಿ ಸ್ವಲ್ಪ ಪಕ್ಕಕ್ಕೆ ಸರಿದಾಗ ಸ್ಫಟಿಕದಿಂದ ನಿರ್ಮಿತವಾದ ಸಭಾಂಗಣದ ಗೋಡೆಯು ಗೋಡೆಯೊಳಗಿರುವ ಪದಾರ್ಥಗಳು ಕಾಣುವಂತೆ ಇದ್ದುದರಿಂದ ಇದೇ ಬಾಗಿಲು ಎಂದು ಭಾವಿಸಿ ಒಳಗೆ ಪ್ರವೇಶಿಸಲು ಯತ್ನಿಸಿ ಆ ಗೋಡೆಯನ್ನು ತನ್ನ ಮುಖಕ್ಕೆ ಚೆನ್ನಾಗಿ ತಾಗಿಸಿಕೊಂಡನು.

**ಪ್ರವೇಶಯೇತಾಂ ಚ ಯಮೌ ತಮಾಶು**
**ಸಭಾಂ ಭುಜೌ ಗೃಹ್ಯ ನೃಪೋಪದಿಷ್ಟೌ ।**
**ತತ್ರೋಪವಿಶ್ಯ ಕ್ಷಣಮನ್ಯತೋಽಗಾದ್**
**ಅಮೃಷ್ಯಮಾಣಃ ಶ್ರಿಯಮೇಷು ದಿವ್ಯಾಮ್ ॥ ೨೮೧ ॥**

ಪದಚ್ಛೇದ :- **ಪ್ರವೇಶಯೇತಾಂ, ಚ, ಯಮೌ, ತಂ, ಆಶು, ಸಭಾಂ, ಭುಜೌ, ಗೃಹ್ಯ, ನೃಪೋಪದಿಷ್ಟೌ, ತತ್ರ, ಉಪವಿಷ್ಟಃ, ಕ್ಷಣಂ, ಅನ್ಯತಃ, ಅಗಾತ್, ಅಮೃಷ್ಯಮಾಣಃ, ಶ್ರಿಯಂ, ಏಷು, ದಿವ್ಯಾಂ ।**

ಅರ್ಥ :- **ನೃಪೋಪದಿಷ್ಟೌ** = ಧರ್ಮರಾಜನಿಂದ ಆಜ್ಞಪ್ತರಾದ, **ಯಮೌ** = ನಕುಲ ಸಹದೇವರು, **ಆಶು** = ಬೇಗನೇ, **ಭುಜೌ** = ಆ ದುರ್ಯೋಧನನ ಕೈಗಳನ್ನು, **ಗೃಹ್ಯ** = ಹಿಡಿದು, **ಸಭಾಂ** = ಸಭೆಯೊಳಗೆ, **ಪ್ರವೇಶಯೇತಾಂ** = ಕರೆತಂದು ಕುಳ್ಳಿರಿಸಿದರು, **ತತ್ರ** = ಆ ಸಭೆಯಲ್ಲಿ, **ಕ್ಷಣಂ** = ಕ್ಷಣಕಾಲಮಾತ್ರ, **ಉಪವಿಷ್ಟಃ** = ಕುಳಿತುಕೊಂಡ ದುರ್ಯೋಧನನು, **ಏಷು** = ಈ ಪಾಂಡವರಲ್ಲಿರುವ (ಈ ಪದಾರ್ಥಗಳಲ್ಲಿರುವ), **ದಿವ್ಯಾಂ** = ಅಲೌಕಿಕವಾದ, **ಶ್ರಿಯಂ** = ಸಂಪತ್ತನ್ನು (ಕಂಡು), **ಅಮೃಷ್ಯಮಾಣಃ** = ಸಹಿಸಲಾಗದವನಾಗಿ, **ಅನ್ಯತಃ** = ಬೇರೆಡೆಗೆ, **ಅಗಾತ್** = ಹೊರಟನು.

ತಾತ್ಪರ್ಯ :- ದುರ್ಯೋಧನನ ದುರವಸ್ಥೆಯನ್ನು ಕಂಡ ಧರ್ಮರಾಜನ ಆಜ್ಞಾನುಸಾರವಾಗಿ ನಕುಲ ಸಹದೇವರು ಬೇಗನೇ ಬಂದು ದುರ್ಯೋಧನನ ಕೈಗಳನ್ನು ಹಿಡಿದು 'ಇದು ಬಾಗಿಲು ಇದು ಬಾಗಿಲು' ಎನ್ನುತ್ತ ಸಭೆಯೊಳಗೆ ಪ್ರವೇಶಿಸಿ ಕುಳ್ಳಿರಿಸಿದರು. ಅಲ್ಲಿ ಒಂದು ಕ್ಷಣಮಾತ್ರ ಕುಳಿತ ದುರ್ಯೋಧನನು

ಪಾಂಡವರಲ್ಲಿರುವ ಅಪಾರವಾದ ಅಲೌಕಿಕವಾದ ಸಂಪತ್ತನ್ನು ಅಥವಾ ಈ ಸಭಾಭವನದ ಪದಾರ್ಥಗಳಲ್ಲಿರುವ ಅಪಾರವಾದ ದಿವ್ಯಸಂಪತ್ತನ್ನು ಕಂಡು ಸಹಿಸಲಾರದವನಾಗಿ ಅಲ್ಲಿಂದ ಎದ್ದು ಬೇರೆಡೆಗೆ ಹೊರಟನು.

**ತತ್ರೇಂದ್ರನೀಲಭುವಿ ರತ್ನಮಯಾನಿ ದೃಷ್ಟ್ವಾ**
**ಪದ್ಮಾನಿ ನೀರಮನಸಾ ಜಗೃಹೇ ಸ್ವವಸ್ತ್ರಮ್ ।**
**ರತ್ನೋರುದೀಧಿತಿನಿಗೂಢಜಲಂ ಸ್ಥಲಂ ಚ**
**ಮತ್ವಾ ಪಪಾತ ಸಹಿತೋಽವರಜೈರ್ಜಲೌಘೇ ॥ ೨೮೨ ॥**

**ಪದಚ್ಛೇದ** :- ತತ್ರ, ಇಂದ್ರನೀಲಭುವಿ, ರತ್ನಮಯಾನಿ, ದೃಷ್ಟ್ವಾ, ಪದ್ಮಾನಿ, ನೀರಮನಸಾ, ಜಗೃಹೇ, ಸ್ವವಸ್ತ್ರಂ, ರತ್ನೋರುದೀಧಿತಿ, ನಿಗೂಢಜಲಂ, ಸ್ಥಲಂ, ಚ, ಮತ್ವಾ, ಪಪಾತ, ಸಹಿತಃ, ಅವರಜೈಃ, ಜಲೌಘೇ ।

**ಅರ್ಥ** :- (ಆ ದುರ್ಯೋಧನನು) **ತತ್ರ** = ಬೇರೆಡೆ ಹೋಗುವ ಸಂದರ್ಭದಲ್ಲಿ, **ಇಂದ್ರನೀಲಭುವಿ** = ಇಂದ್ರ ನೀಲಮಣಿಯಿಂದ ನಿರ್ಮಿತವಾದ ನೆಲದಲ್ಲಿ, **ರತ್ನಮಯಾನಿ** = ರತ್ನಖಚಿತವಾದ, **ಪದ್ಮಾನಿ** = ಕಮಲಗಳನ್ನು, **ದೃಷ್ಟ್ವಾ** = ನೋಡಿ, **ನೀರಮನಸಾ** = ಇದು ನೀರು ಎಂಬ ಭ್ರಾಂತಿಯಿಂದ, **ಸ್ವವಸ್ತ್ರಂ** = ತಾನು ಉಟ್ಟಿರುವ ಬಟ್ಟೆಯನ್ನು, **ಜಗೃಹೇ** = ಮೇಲೆತ್ತಿಕೊಂಡನು, **ರತ್ನೋರುದೀಧಿತಿನಿಗೂಢಜಲಂ** = ರತ್ನಗಳ ಉತ್ಕೃಷ್ಟವಾದ ಕಾಂತಿಯಿಂದ ಆಚ್ಛಾದಿತವಾದ ನೀರನ್ನು, **ಸ್ಥಲಂ ಇತಿ ಚ** = ಇದು ನೆಲ ಎಂಬುದಾಗಿ, **ಮತ್ವಾ** = ತಿಳಿದು, **ಅವರಜೈಃ** = ತನ್ನ ತಮ್ಮಂದಿರಿಂದ, **ಸಹಿತಃ** = ಸಹಿತನಾಗಿ, **ಜಲೌಘೇ** = ಆಳವಾದ ನೀರಿನಲ್ಲಿ, **ಪಪಾತ** = ಬಿದ್ದನು.

**ತಾತ್ಪರ್ಯ** :- ಅಸಹನೆಯಿಂದ ಅಲ್ಲಿಂದ ಎದ್ದು ತನ್ನ ತಮ್ಮಂದಿರೊಡನೆ ಬೇರೆಡೆಗೆ ನಡೆದ ದುರ್ಯೋಧನನು ಇಂದ್ರನೀಲಮಣಿಯಿಂದ ನಿರ್ಮಿತವಾದ ನೆಲದಲ್ಲಿ ರತ್ನಖಚಿತವಾದ ಪದ್ಮಗಳನ್ನು ಕಂಡು ಇದು ನೀರು ಎಂದು ಭ್ರಮಿಸಿ ತನ್ನ ಬಟ್ಟೆಗಳು ಒದ್ದೆಯಾಗಬಾರದೆಂದು ಬಟ್ಟೆಗಳನ್ನು ಎತ್ತಿ ಹಿಡಿದುಕೊಂಡನು. ಸ್ವಲ್ಪ ಮುಂದೆ ನಡೆದು ರತ್ನಗಳ ಶ್ರೇಷ್ಠವಾದ ಪ್ರಕಾಶದಿಂದ ಆಚ್ಛಾದಿತವಾದ ನೀರನ್ನು ಕಂಡು ಇದು ನೆಲ ಎಂದು ಭ್ರಮಿಸಿ ಮುನ್ನಡೆದು ತನ್ನ ಎಲ್ಲ ತಮ್ಮಂದಿರೊಡನೆ ಆಳವಾದ ನೀರಿನಲ್ಲಿ ಬಿದ್ದನು.

ತಂ ಪ್ರಾಹಸದ್ ಭಗವತಾ ಕ್ಷಿತಿಭಾರನಾಶ-
ಹೇತೋಃ ಸುಸೂಚಿತ ಉರುಸ್ವರತೋಽತ್ರ ಭೀಮಃ ।
ಪಾಂಚಾಲರಾಜಸುತಯಾ ಚ ಸಮಂ ತಥಾಽನ್ಯೈಃ
ಸ್ವೀಯೈಸ್ತಥಾಽನು ಜಹಸುರ್ಭಗವನ್ಮಹಿಷ್ಯಃ ॥ ೨೮೩ ॥

ಪದಚ್ಛೇದ :- ತಂ, ಪ್ರಾಹಸತ್, ಭಗವತಾ, ಕ್ಷಿತಿಭಾರನಾಶಹೇತೋಃ, ಸುಸೂಚಿತಃ, ಉರುಸ್ವರತಃ, ಅತ್ರ, ಭೀಮಃ, ಪಾಂಚಾಲರಾಜಸುತಯಾ, ಚ, ಸಮಂ, ತಥಾ, ಅನ್ಯೈಃ, ಸ್ವೀಯೈಃ, ತಥಾ, ಅನು, ಜಹಸುಃ, ಭಗವನ್ಮಹಿಷ್ಯಃ ।

ಅರ್ಥ :- ಕ್ಷಿತಿಭಾರನಾಶಹೇತೋಃ = ಭೂಮಿಗೆ ಭಾರವಾದ ದುರ್ಯೋಧನಾದಿಗಳ ನಾಶಕ್ಕಾಗಿ, ಭಗವತಾ = ಶ್ರೀಕೃಷ್ಣನಿಂದ, ಸುಸೂಚಿತಃ = ಕಣ್ಸನ್ನೆಯಿಂದ ಸೂಚಿಸಿಕೊಂಡ, ಭೀಮಃ = ಭೀಮನು, ಅತ್ರ = ಸಭೆಯಲ್ಲಿ, ಪಾಂಚಾಲರಾಜಸುತಯಾ = ಪಾಂಚಾಲ ರಾಜನ ಮಗಳಾದ ದ್ರೌಪದಿಯ ಜೊತೆಗೆ, ಚ = ಮತ್ತು, ತಥಾ = ಹಾಗೆಯೇ, ಸ್ವೀಯೈಃ = ತನ್ನವರಾದ, ಅನ್ಯೈಃ = ಸಾತ್ಯಕಿ ಧೃಷ್ಟದ್ಯುಮ್ನಾದಿ ಬಂಧುಗಳಿಂದ, ಸಮಂ = ಒಡಗೂಡಿ, ತಂ = ದುರ್ಯೋಧನನನ್ನು ಕುರಿತು, ಉರುಸ್ವರತಃ = ಗಟ್ಟಿಯಾದ ಸ್ವರದಿಂದ, ಪ್ರಾಹಸತ್ = ನಕ್ಕನು, ತಥಾ = ಅದರಂತೆಯೇ, ಅನು = ಭೀಮನನ್ನು ಅನುಸರಿಸಿ, ಮಹಿಷ್ಯಃ = ಶ್ರೀಕೃಷ್ಣನ ಮಡದಿಯರು, ಜಹಸುಃ = ನಕ್ಕರು.

ತಾತ್ಪರ್ಯ :- ಭೂಮಿಗೆ ಭಾರರಾದ ದುರ್ಯೋಧನಾದಿಗಳ ನಾಶವನ್ನು ಬಯಸಿದ ಶ್ರೀಕೃಷ್ಣಪರಮಾತ್ಮನ ಕಣ್ಸನ್ನೆಯಂತೆ ಭೀಮನು ಆ ತುಂಬಿದ ಸಭೆಯಲ್ಲಿ ದ್ರೌಪದಿಯ ಜೊತೆಯಲ್ಲಿ ದುರ್ಯೋಧನನ ದುರವಸ್ಥೆಯನ್ನು ಕಂಡು ಗಟ್ಟಿಯಾಗಿ ನಕ್ಕನು. ಅಲ್ಲಿ ಸನ್ನಿಹಿತರಾದ ಸಾತ್ಯಕಿ ಧೃಷ್ಟದ್ಯುಮ್ನ ಮೊದಲಾದ ಬಂಧುಗಳೂ ಭೀಮನ ಜೊತೆಯಲ್ಲಿ ಸೇರಿ ನಕ್ಕರು. ಕೃಷ್ಣನ ಹೆಂಡಂದಿರಾದ ರುಕ್ಮಿಣೀ ಸತ್ಯಭಾಮೆಯರೂ ನಕ್ಕರು.

ಮಂದಸ್ಮಿತೇನ ವಿಲಸದ್ವದನೇಂದುಬಿಂಬೋ
ನಾರಾಯಣಸ್ತು ಮುಖಮೀಕ್ಷ್ಯ ಮರುತ್ಸುತಸ್ಯ ।
ನೋವಾಚ ಕಿಂಚಿದಥ ಧರ್ಮಸುತೋ ನಿವಾರ್ಯ
ಪ್ರಾಸ್ಥಾಪಯದ್ ವಸನಮಾಲ್ಯವಿಲೇಪನಾನಿ ॥ ೨೮೪ ॥

ಪದಚ್ಛೇದ :- ಮಂದಸ್ಮಿತೇನ, ವಿಲಸದ್ವದನೇಂದುಬಿಂಬಃ, ನಾರಾಯಣಃ, ತು, ಮುಖಂ, ಈಕ್ಷ್ಯ, ಮರುತ್ಸುತಸ್ಯ, ನ, ಉವಾಚ, ಕಿಂಚಿತ್, ಅಥ, ಧರ್ಮಸುತಃ, ನಿವಾರ್ಯ, ಪ್ರಾಸ್ಥಾಪಯತ್, ವಸನಮಾಲ್ಯವಿಲೇಪನಾನಿ ।

ಅರ್ಥ :- ವಿಲಸದ್ವದನೇಂದುಬಿಂಬಃ = ಚಂದ್ರನಂತೆ ಪ್ರಕಾಶಮಾನವಾದ ಮುಖವುಳ್ಳ, ನಾರಾಯಣಃ ತು = ಶ್ರೀಕೃಷ್ಣನಾದರೂ, ಮಂದಸ್ಮಿತೇನ = ಮುಗುಳು ನಗೆಯಿಂದ ಯುಕ್ತನಾಗಿ, ಮರುತ್‌ಸುತಸ್ಯ = ಭೀಮನ, ಮುಖಂ = ಮುಖವನ್ನು, ಈಕ್ಷ್ಯ = ನೋಡಿ, ಕಿಂಚಿತ್ = ಏನನ್ನೂ, ನ ಉವಾಚ = ಹೇಳಲಿಲ್ಲ, ಅಥ = ಅನಂತರದಲ್ಲಿ, ಧರ್ಮಸುತಃ = ಧರ್ಮರಾಜನು, ನಿವಾರ್ಯ = ನಗುವನ್ನು ತಡೆದು, ನೀರಿನಲ್ಲಿ ಬಿದ್ದವರಿಗಾಗಿ, ವಸನಮಾಲ್ಯವಿಲೇಪನಾನಿ = ಬಟ್ಟೆ ಮಾಲೆ ಮತ್ತು ಗಂಧಾದಿಗಳನ್ನು, ಪ್ರಾಸ್ಥಾಪಯತ್ = ಕಳುಹಿಸಿಕೊಟ್ಟನು.

ತಾತ್ಪರ್ಯ :- ಚಂದ್ರಬಿಂಬದಂತೆ ಸುಂದರವಾದ ಮುಖವುಳ್ಳ ಶ್ರೀಕೃಷ್ಣನು ನಗುಮೊಗದಿಂದ ಭೀಮನನ್ನು ನೋಡಿದನು. ಆದರೆ ಏನೂ ಮಾತಾಡಲಿಲ್ಲ. ಅನಂತರ ಧರ್ಮರಾಜನು ನಗಬೇಡಿ ನಗಬೇಡಿ ಎಂದು ಎಲ್ಲರ ನಗುವನ್ನು ತಡೆದು ನೀರಿನಲ್ಲಿ ಬಿದ್ದವರಿಗೆ ಅನುಕೂಲವಾಗುವಂತೆ ಧರಿಸಲು ಬಟ್ಟೆಗಳನ್ನು ಹೂ ಮಾಲೆಗಳನ್ನು ಮತ್ತು ಲೇಪಿಸಿಕೊಳ್ಳಲು ಗಂಧವನ್ನು ಕಳುಹಿಸಿಕೊಟ್ಟನು.

**ಕೃಷ್ಣಾವೃಕೋದರಗತಂ ಬಹುಲಂ ನಿಧಾಯ**
**ಕ್ರೋಧಂ ಯಯೌ ಸಶಕುನಿರ್ಧೃತರಾಷ್ಟ್ರಪುತ್ರಃ ।**
**ಸುವ್ರೀಡಿತೋ ನೃಪತಿದತ್ತವರಾಂಬರಾದೀನ್**
**ನ್ಯಕ್‌ಕೃತ್ಯ ಮಾರ್ಗಗತ ಆಹ ಸ ಮಾತುಲಂ ಸ್ವಮ್ ॥ ೨೮೫ ॥**

ಪದಚ್ಛೇದ :- ಕೃಷ್ಣಾವೃಕೋದರಗತಂ, ಬಹುಲಂ, ನಿಧಾಯ, ಕ್ರೋಧಂ, ಯಯೌ, ಸಶಕುನಿಃ, ಧೃತರಾಷ್ಟ್ರಸೂನುಃ, ಸುವ್ರೀಡಿತಃ, ನೃಪತಿದತ್ತವರಾಂಬರಾದೀನ್, ನ್ಯಕ್ಕೃತ್ಯ, ಮಾರ್ಗಗತಃ, ಆಹ, ಸಃ, ಮಾತುಲಂ, ಸ್ವಂ ।

ಅರ್ಥ :- ಸಶಕುನಿಃ = ಶಕುನಿಯಿಂದ ಸಹಿತನಾದ, ಧೃತರಾಷ್ಟ್ರಪುತ್ರಃ = ಧೃತರಾಷ್ಟ್ರನ ಮಗನಾದ, ದುರ್ಯೋಧನನು, ಸುವ್ರೀಡಿತಃ (ಸನ್) = ತುಂಬಾ ನಾಚಿಕೆ ಪಟ್ಟವನಾಗಿ, ನೃಪತಿದತ್ತವರಾಂಬರಾದೀನ್ = ಧರ್ಮರಾಜ ಕಳುಹಿಸಿದ

ಶ್ರೇಷ್ಠವಾದ ಬಟ್ಟೆ ಮಾಲೆ ಗಂಧಾದಿಗಳನ್ನು, **ನ್ಯಕೃತ್ಯ** = ಧಿಕ್ಕರಿಸಿ, **ಕೃಷ್ಣಾವೃಕೋದರಗತಂ** = ದ್ರೌಪದಿ ಮತ್ತು ಭೀಮರ ವಿಷಯದಲ್ಲಿ, **ಬಹುಲಂ** = ಬಹಳವಾದ, **ಕ್ರೋಧಂ** = ಕ್ರೋಧವನ್ನು, **ನಿಧಾಯ** = ಮನಸ್ಸಿನಲ್ಲಿರಿಸಿಕೊಂಡು, **ಯಯೌ** = ತನ್ನ ಪಟ್ಟಣವಾದ ಹಸ್ತಿನಾವತಿಗೆ ಹೊರಟನು, **ಮಾರ್ಗಗತಃ** = ಮಾರ್ಗದಲ್ಲಿ ಹೋಗುತ್ತಿರುವ, **ಸಃ** = ಆ ದುರ್ಯೋಧನನು, **ಸ್ವಂ** = ತನ್ನ, **ಮಾತುಲಂ** = ಸೋದರಮಾವನಾದ ಶಕುನಿಯನ್ನು ಕುರಿತು, **ಆಹ** = (ಮುಂದೆ ಹೇಳುವ ರೀತಿಯಲ್ಲಿ) ಹೇಳಿದನು.

**ತಾತ್ಪರ್ಯ** :- ಶಕುನಿಯಿಂದ ಕೂಡಿದ ದುರ್ಯೋಧನನು ಈ ಘಟನೆಯಿಂದ ತುಂಬಾ ನಾಚಿಕೆ ಪಟ್ಟವನಾಗಿ ಧರ್ಮರಾಜನು ಕಳುಹಿಸಿದ ಉತ್ತಮವಾದ ಬಟ್ಟೆ ಮೊದಲಾದವುಗಳನ್ನು ತಿರಸ್ಕರಿಸಿ ದ್ರೌಪದಿ ಮತ್ತು ಭೀಮರ ಬಗ್ಗೆ ಪ್ರಬಲವಾದ ಕ್ರೋಧವನ್ನು ಮನದಲ್ಲಿರಿಸಿಕೊಂಡು ಹಸ್ತಿನಾವತಿಗೆ ಹೊರಟನು. ಮಾರ್ಗಮಧ್ಯದಲ್ಲಿ ಶಕುನಿಯನ್ನು ಕುರಿತು ಇಂತೆಂದನು.

### ಜೂಜಿನ ಸಲಹೆ

**ಯೌ ಮಾಮಹಸತಾಂ ಕೃಷ್ಣಾಭೀಮೌ ಕೃಷ್ಣಸ್ಯ ಸನ್ನಿಧೌ ।**
**ತಯೋರಕೃತ್ವಾ ಸಂತಾಪಂ ನಾಹಂ ಜೀವಿತುಮುತ್ಸಹೇ ॥ ೨೮೬ ॥**

**ಪದಚ್ಛೇದ** :- **ಯೌ, ಮಾಂ, ಅಪಹಸತಾಂ, ಕೃಷ್ಣಾಭೀಮೌ, ಕೃಷ್ಣಸ್ಯ, ಸನ್ನಿಧೌ, ತಯೋಃ, ಅಕೃತ್ವಾ, ಸಂತಾಪಂ, ನ, ಅಹಂ, ಜೀವಿತುಂ, ಉತ್ಸಹೇ ।**

**ಅರ್ಥ** :- **ಕೃಷ್ಣಸ್ಯ ಸನ್ನಿಧೌ** = ಕೃಷ್ಣನ ಎದುರಿನಲ್ಲಿ, **ಯೌ ಕೃಷ್ಣಭೀಮೌ** = ಯಾವ ದ್ರೌಪದಿ ಮತ್ತು ಭೀಮರು, **ಮಾಂ** = ನನ್ನನ್ನು, **ಅಪಹಸತಾಂ** = ಅಪಹಾಸ ಮಾಡಿದರೋ, **ತಯೋಃ** = ಅವರಿಬ್ಬರಿಗೆ, **ಸಂತಾಪಂ** = ಮಹತ್ತರವಾದ ದುಃಖವನ್ನು, **ಅಕೃತ್ವಾ** = ಉಂಟುಮಾಡದೇ, **ಅಹಂ** = ನಾನು, **ಜೀವಿತುಂ** = ಜೀವಿಸಲು, **ನ ಉತ್ಸಹೇ** = ಅಪೇಕ್ಷಿಸುವುದಿಲ್ಲ.

**ತಾತ್ಪರ್ಯ** :- ಕೃಷ್ಣನ ಎದುರಿನಲ್ಲೇ ನನಗೆ ಅವಮಾನ ಮಾಡಿದ ದ್ರೌಪದೀ ಭೀಮರಿಗೆ ದುಃಖವನ್ನುಂಟು ಮಾಡದೇ ನಾನು ಬದುಕಿರಲಾರೆ. ಅವರಿಬ್ಬರೂ ನಕ್ಕಾಗ ಕೃಷ್ಣ ಸುಮ್ಮನಿದ್ದ. ಆದ್ದರಿಂದ ಅದು ಅವನಿಗೆ ಸಮ್ಮತ ಎಂದಾಯಿತು.

ಆದ್ದರಿಂದ ಭೀಮದ್ರೌಪದಿಯರಿಗೆ ದುಃಖವನ್ನುಂಟು ಮಾಡಬೇಕು. ಅದನ್ನು ಕಂಡು ಕೃಷ್ಣನು ಮರುಗುವಂತಾಗಬೇಕು. ಎಂಬುದು ದುರ್ಯೋಧನನ ಆಂತರ್ಯ.

**ಯದಿ ಮೇ ಶಕ್ತಿರತ್ರ ಸ್ಯಾದ್ ಘಾತಯೇಯಂ ವೃಕೋದರಮ್ ।**
**ಅಗ್ರಪೂಜಾಂ ಚ ಕೃಷ್ಣಸ್ಯ ವಿಲುಂಪೇಯಂ ನ ಸಂಶಯಃ ॥ ೨೮೭ ॥**

ಪದಚ್ಛೇದ :- ಯದಿ, ಮೇ, ಶಕ್ತಿಃ, ಅತ್ರ, ಸ್ಯಾತ್, ಘಾತಯೇಯಂ, ವೃಕೋದರಂ, ಅಗ್ರ-ಸೂಜಾಂ, ಚ, ಕೃಷ್ಣಸ್ಯ, ವಿಲುಂ ವೇಯಂ, ನ, ಸಂಶಯಃ।

**ಅರ್ಥ :-** **ಅತ್ರ** = ಈ ಅಪಹಾಸ ವಿಷಯದಲ್ಲಿ, **ಯದಿ** = ಒಂದು ವೇಳೆ, **ಮೇ** = ನನಗೆ, **ಶಕ್ತಿಃ ಸ್ಯಾತ್** = ಸಾಮರ್ಥ್ಯ ಇದ್ದಿದ್ದರೆ, **ವೃಕೋದರಂ** = ಭೀಮನನ್ನು, **ಘಾತಯೇಯಂ** = ಸಂಹರಿಸುತ್ತಿದ್ದೆ, **ಕೃಷ್ಣಸ್ಯ** = ಕೃಷ್ಣನ, **ಅಗ್ರಪೂಜಾಂ** = ಅಗ್ರಪೂಜೆಯನ್ನು, **ವಿಲುಂಪೇಯಂ** = ತಪ್ಪಿಸುತ್ತಿದ್ದೆ, **ನ ಸಂಶಯಃ** = ಈ ವಿಷಯದಲ್ಲಿ ಸಂಶಯವೇ ಇಲ್ಲ.

**ತಾತ್ಪರ್ಯ :-** ನನಗೆ ಶಕ್ತಿ ಇದ್ದಿದ್ದರೆ ದ್ರೌಪದೀ ಭೀಮರು ನಕ್ಕು ನನ್ನನ್ನು ಅವಮಾನಿಸಿದಾಗಲೇ ಭೀಮನನ್ನು ಕೊಂದು ಬಿಡುತ್ತಿದ್ದೆ. ಹಾಗೆಯೇ ರಾಜಸೂಯಾಗದ ಕೊನೆಯಲ್ಲಿ ಕೃಷ್ಣನಿಗೆ ನಡೆದ ಅಗ್ರಪೂಜೆಯನ್ನು ತಪ್ಪಿಸುತ್ತಿದ್ದೆ. ಆದರೆ ಆ ಶಕ್ತಿ ನನಗೆ ಇಲ್ಲ ಎಂದು ಅರಿತು ಸುಮ್ಮನಾದೆ ಎನ್ನುತ್ತಾನೆ ದುರ್ಯೋಧನ.

**ಈದೃಶಂ ಪಾಂಡವೈಶ್ವರ್ಯಂ ದೃಷ್ಟ್ವಾ ಕೋ ನಾಮ ಜೀವಿತಮ್ ।**
**ಇಚ್ಛೇತ ಕರದಾ ಯೇಷಾಂ ವೈಶ್ಯವತ್ ಸರ್ವಭೂಮಿಪಾಃ ॥ ೨೮೮ ॥**

ಪದಚ್ಛೇದ :- ಈದೃಶಂ, ಪಾಂಡವೈಶ್ವರ್ಯಂ, ದೃಷ್ಟ್ವಾ, ಕಃ, ನಾಮ, ಜೀವಿತಂ, ಇಚ್ಛೇತ, ಕರದಾಃ, ಯೇಷಾಂ, ವೈಶ್ಯವತ್, ಸರ್ವಭೂಮಿಪಾಃ।

**ಅರ್ಥ :-** **ಸರ್ವಭೂಮಿಪಾಃ** = ಎಲ್ಲ ರಾಜರು, **ವೈಶ್ಯವತ್** = ವೈಶ್ಯರಂತೆ, **ಯೇಷಾಂ** = ಯಾವ ಪಾಂಡವರಿಗೆ, **ಕರದಾಃ** = ಕಪ್ಪವನ್ನು ಕೊಡುತ್ತಾರೆಯೋ, **ಈದೃಶಂ** = ಇಂಥ, **ಪಾಂಡವೈಶ್ವರ್ಯಂ** = ಪಾಂಡವರ ಸಂಪತ್ತನ್ನು, **ದೃಷ್ಟ್ವಾ** = ಕಂಡು, **ಕಃ ನಾಮ** = ಯಾರು ತಾನೇ, **ಜೀವಿತಂ** = ಬದುಕುವಿಕೆಯನ್ನು, **ಇಚ್ಛೇತ** = ಅಪೇಕ್ಷಿಸಿಯಾನು.

ತಾತ್ಪರ್ಯ :- ಎಲ್ಲ ರಾಜಾಧಿರಾಜರು ವೈಶ್ಯರಂತೆ ಪಾಂಡವರಿಗೆ ಕಪ್ಪಕಾಣಿಕೆಗಳನ್ನು ಕೊಡುತ್ತಿದ್ದಾರೆ. ಇಂಥ ಪಾಂಡವರ ಸಂಪತ್ತನ್ನು ನೋಡಿ ಯಾರು ತಾನೇ ಬದುಕಿರಲು ಸಾಧ್ಯ? ಎನ್ನುತ್ತಾನೆ ದುರ್ಯೋಧನ.

**ಇತ್ಯುಕ್ತಃ ಶಕುನಿರ್ವೈರಂ ದೃಢೀಕರ್ತುಂ ವಚೋಽಬ್ರವೀತ್ ।**
**ಕಿಂ ತೇ ವೈರೇಣ ರಾಜೇಂದ್ರ ಬಲಿಭಿರ್ಭ್ರಾತೃಭಿಃ ಪುನಃ ॥ ೨೮೯ ॥**

ಪದಚ್ಛೇದ :- ಇತ್ಯುಕ್ತಃ, ಶಕುನಿಃ, ವೈರಂ, ದೃಢೀಕರ್ತುಂ, ವಚಃ, ಅಬ್ರವೀತ್, ಕಿಂ, ತೇ, ವೈರೇಣ, ರಾಜೇಂದ್ರ, ಬಲಿಭಃ, ಭ್ರಾತೃಭಿಃ, ಪುನಃ ।

ಅರ್ಥ :- ಇತ್ಯುಕ್ತಃ = ದುರ್ಯೋಧನನಿಂದ ಹೀಗೆ (ಹೇಳಲ್ಪಟ್ಟ) ಹೇಳಿಸಿಕೊಂಡ, ಶಕುನಿಃ = ಶಕುನಿಯು, ವೈರಂ = ಪಾಂಡವರಲ್ಲಿರುವ, ವೈರಂ = ದ್ವೇಷವನ್ನು, ಧೃಢೀಕರ್ತುಂ = ದೃಢಪಡಿಸಲು, ರಾಜೇಂದ್ರ = ದುರ್ಯೋಧನನೇ, ಬಲಿಭಿಃ = ಬಲಶಾಲಿಗಳಾದ, ಭ್ರಾತೃಭಿಃ = ನಿನ್ನ ಸಹೋದರರೊಡನೆ, ಪುನಃ = ಮತ್ತೆ, ವೈರೇಣ = ದ್ವೇಷದಿಂದ, ತೇ = ನಿನಗೆ, ಕಿಂ = ಏನು ಪ್ರಯೋಜನವು?, ಇತಿ = ಹೀಗೆಂಬ, ವಚಃ = ಮಾತನ್ನು, ಅಬ್ರವೀತ್ = ಹೇಳಿದನು.

ತಾತ್ಪರ್ಯ :- ದುರ್ಯೋಧನನ ಮಾತುಗಳನ್ನು ಕೇಳಿಸಿಕೊಂಡ ಶಕುನಿಯು ಪಾಂಡವರ ಹಾಗೂ ಕೌರವರ ದ್ವೇಷವನ್ನು ದೃಢಪಡಿಸುವ ಉದ್ದೇಶದಿಂದ ''ದುರ್ಯೋಧನನೇ ಬಲಶಾಲಿಗಳಾದ ನಿನ್ನ ಸಹೋದರರಲ್ಲಿ ದ್ವೇಷಮಾಡಿ ಈಗಾಗಲೇ ಅವರನ್ನು ಮನೆ ಬಿಟ್ಟು ಹೊರಹಾಕಲಾಗಿದೆ. ಆದರೆ ಅದರಿಂದ ಪ್ರಯೋಜನವಾಗಿಲ್ಲ. ಈಗ ಪುನಃ ಅವರಲ್ಲಿ ದ್ವೇಷಮಾಡುವುದರಿಂದ ನಿನಗೆ ಏನು ಪ್ರಯೋಜನ'' ಎಂದನು.

**ಅನುಜೀವಸ್ವ ತಾನ್ ವೀರಾನ್ ಗುಣಜ್ಯೇಷ್ಠಾನ್ ಬಲಾಧಿಕಾನ್ ।**
**ಇತೀರಿತೋಽತಿಸಂವೃದ್ಧಕೋಪ ಆಹ ಸುಯೋಧನಃ ॥ ೨೯೦ ॥**

ಪದಚ್ಛೇದ :- ಅನುಜೀವಸ್ವ, ತಾನ್, ವಿರಾನ್, ಗುಣಜ್ಯೇಷ್ಠಾನ್, ಬಲಾಧಿಕಾನ್, ಇತಿ, ಈರಿತಃ, ಅತಿಸಂವೃದ್ಧಕೋಪಃ, ಆಹ, ಸುಯೋಧನಃ ।

**ಅರ್ಥ** :- **ಗುಣಜ್ಯೇಷ್ಠಾನ್** = ಗುಣಶಾಲಿಗಳಾದ, **ಬಲಾಧಿಕಾನ್** = ಬಲಶಾಲಿಗಳಾದ, **ವೀರಾನ್** = ಪರಾಕ್ರಮಶಾಲಿಗಳಾದ, **ತಾನ್** = ಆ ಪಾಂಡವರನ್ನು, **ಅನುಜೀವಸ್ವ** = ಅನುಸರಿಸಿ ಬದುಕು, **ಇತಿ** = ಹೀಗೆಂಬುದಾಗಿ, **ಈರಿತಃ** = ಶಕುನಿಯಿಂದ ಹೇಳಲ್ಪಟ್ಟ, **ಸುಯೋಧನಃ** = ದುರ್ಯೋಧನನು, **ಅತಿಸಂವೃದ್ಧಕೋಪಃ** = ಅತ್ಯಂತ ಕೆರಳಿದ ಕೋಪವುಳ್ಳವನಾಗಿ, **ಆಹ** = ನುಡಿದನು.

**ತಾತ್ಪರ್ಯ** :- 'ಮಹಾವೀರಾಧಿವೀರರಾದ ಪಾಂಡವರು ಗುಣಶಾಲಿಗಳು ಹಾಗು ಬಲಶಾಲಿಗಳು ಆದ್ದರಿಂದ ಅವರನ್ನೆ ಅನುಸರಿಸಿ ಬದುಕುವವನಾಗು' ಎಂದು ಶಕುನಿಯ ಚುಚ್ಚು ಮಾತುಗಳಿಂದ ಕೆರಳಿದ ಕೋಪವುಳ್ಳ ದುರ್ಯೋಧನನು ಇಂತೆಂದನು.

**ಯದಿ ತೇಷಾಂ ತದೈಶ್ವರ್ಯಂ ನ ಮಾಂ ಗಚ್ಛೇದಶೇಷತಃ ।**
**ಸರ್ವಥಾ ನೈವ ಜೀವೇಯಮಿತಿ ಸತ್ಯಂ ಬ್ರವೀಮಿ ತೇ ॥ ೨೯೧ ॥**

**ಪದಚ್ಛೇದ** :- **ಯದಿ, ತೇಷಾಂ, ತದೈಶ್ವರ್ಯಂ, ನ, ಮಾಂ, ಗಚ್ಛೇತ್, ಅಶೇಷತಃ, ಸರ್ವಥಾ, ನ, ಏವ, ಜೀವೇಯಂ, ಇತಿ, ಸತ್ಯಂ, ಬ್ರವೀಮಿ, ತೇ ।**

**ಅರ್ಥ** :- **ತೇಷಾಂ** = ಆ ಪಾಂಡವರ, **ತದೈಶ್ವರ್ಯಂ** = ಆ ಅಪಾರವಾದ ಸಂಪತ್ತು, **ಅಶೇಷತಃ** = ಸಮಸ್ತವೂ, **ಮಾಂ** = ನನ್ನನ್ನು, **ನ ಗಚ್ಛೇತ್ ಯದಿ** = ನನ್ನನ್ನು ಕುರಿತು ಬಾರದಿದ್ದಲ್ಲಿ (ನಾನು), **ಸರ್ವಥಾ** = ನಿಶ್ಚಯವಾಗಿಯೂ, **ನ ಜೀವೇಯಂ ಏವ** = ಬದುಕುವುದೇ ಇಲ್ಲ, **ಇತಿ** = ಹೀಗೆಂದು, **ತೇ** = ನಿನಗೆ, **ಸತ್ಯಂ** = ಸತ್ಯವಾಗಿಯೇ, **ಬ್ರವೀಮಿ** = ಹೇಳುತ್ತೇನೆ.

**ತಾತ್ಪರ್ಯ** :- ''ಮಾವ! ಪಾಂಡವರ ಅಪಾರವಾದ ಆ ಸಂಪತ್ತು ನನ್ನ ವಶವಾಗಲೇಬೇಕು. ಆ ಸಂಪತ್ತು ನನ್ನದಾಗದಿದ್ದಲ್ಲಿ ನಾನು ಖಂಡಿತವಾಗಿಯೂ ಬದುಕಿರಲಾರೆ. ಈ ಮಾತು ಸತ್ಯ ಸತ್ಯವನ್ನೇ ನಿನಗೆ ಹೇಳುತ್ತಿದ್ದೇನೆ'' ಎನ್ನುತ್ತಾನೆ ದುರ್ಯೋಧನ.

**ನ ಚ ಬಾಹುಬಲಾಚ್ಛಕ್ಯ ಆದಾತುಂ ತಾಂ ಶ್ರಿಯಂ ಕ್ವಚಿತ್ ।**
**ನೇಂದ್ರೋಽಪಿ ಸಮರೇ ಶಕ್ತಸ್ತಾನ್ ಜೇತುಂ ಕಿಮು ಮಾನುಷಾಃ ॥ ೨೯೨ ॥**

**ಪದಚ್ಛೇದ :-** ನ, ಚ(ತು), ಬಾಹುಬಲಾತ್, (ಶಕ್ಯಂ) ಶಕ್ಷ್ಯೇ, ಆದಾತುಂ, ತಾಂ, ಶ್ರಿಯಂ, ಕ್ವಚಿತ್, ನ, ಇಂದ್ರೋಽಪಿ, ಸಮರೇ, ಶಕ್ತಃ, ತಾನ್, ಜೇತುಂ, ಕಿಮು, ಮಾನುಷಾಃ ।

**ಅರ್ಥ :- ತಾಂ ಶ್ರಿಯಂ** = ಆ ಪಾಂಡವರ ಸಂಪತ್ತನ್ನು, **ಬಾಹುಬಲಾತ್** = ಬಾಹುಬಲದಿಂದ, **ಆದಾತುಂ** = ಸ್ವೀಕರಿಸಲು (ನಾನು), **ನ ಚ ಶಕ್ಯೇ** = ಸಮರ್ಥನಾಗಿಲ್ಲ, (**ನ ಶಕ್ಯಂ** = ಸಾಧ್ಯವಿಲ್ಲ), **ಇಂದ್ರೋಽಪಿ** = ದೇವೇಂದ್ರನೂ ಕೂಡ, **ತಾನ್** = ಪಾಂಡವರನ್ನು, **ಸಮರೇ** = ಯುದ್ಧದಲ್ಲಿ, **ಜೇತುಂ** = ಗೆಲ್ಲಲು, **ಕ್ವಚಿತ್** = ಎಂದೂ, **ನ ಶಕ್ತಃ** = ಸಮರ್ಥನಲ್ಲ, **ಮಾನುಷಾಃ ಕಿಮು?** = ಮನುಷ್ಯರು ಅಸಮರ್ಥರು ಎಂದು ಹೇಳುವುದೇನಿದೆ.

**ತಾತ್ಪರ್ಯ :-** ಬಲಶಾಲಿಗಳಾದ ಪಾಂಡವರನ್ನು ಯುದ್ಧದಲ್ಲಿ ಬಾಹುಬಲದಿಂದ ಸೋಲಿಸಿ ಅವರ ಸಂಪತ್ತನ್ನು ವಶಪಡಿಸಿಕೊಳ್ಳಲು ಸಾಧ್ಯವಿಲ್ಲ, ಸ್ವರ್ಗಾಧಿಪತಿಯಾದ ಇಂದ್ರನೂ ಯುದ್ಧದಲ್ಲಿ ಪಾಂಡವರನ್ನು ಎದುರಿಸಲಾರ. ಹೀಗಿರುವಾಗ ನಮ್ಮಂಥ ಸಾಮಾನ್ಯ ಮನುಷ್ಯರು ಅವರನ್ನು ಗೆಲ್ಲಲು ಅಸಮರ್ಥರು ಎಂದು ಹೇಳುವುದೇನಿದೆ ? ಹೇಳಬೇಕಾಗಿಲ್ಲ. (ಹೀಗೆಂದು ದುರ್ಯೋಧನ ತನ್ನ ಅಸಾಮರ್ಥ್ಯವನ್ನು ಹಾಗೂ ಅಸಹಾಯಕತೆಯನು ಶಕುನಿ ಮಾವನ ಎದುರು ವಿವರಿಸಿದ.)

**ಇತೀರಿತಃ ಪಾಪತಮ ಆಹ ಗಾಂಧಾರಕೋ ನೃಪಃ ।**
**ಪಾಪಾನಾಮಖಿಲಾನಾಂ ಚ ಪ್ರಧಾನಂ ಚಕ್ರವರ್ತಿನಾಮ್ ॥ ೨೯೩ ॥**

**ಪದಚ್ಛೇದ :-** ಇತಿ, ಈರಿತಃ, ಪಾಪತಮಃ, ಆಹ, ಗಾಂಧಾರಕಃ, ನೃಪಃ, ಪಾಪಿನಾಂ, ಅಖಿಲಾನಾಂ, ಚ, ಪ್ರಧಾನಂ, ಚಕ್ರವರ್ತಿನಾಂ ।

**ಅರ್ಥ :- ಇತಿ** = ಹಿಂದೆ ಹೇಳಿದಂತೆ, **ಈರಿತಃ** = ಹೇಳಲ್ಪಟ್ಟ, **ಪಾಪತಮಃ** = ಮಹಾಪಾಪಿಯಾದ, **ಗಾಂಧಾರಕಃ ನೃಪಃ** = ಗಾಂಧಾರದೇಶದ ರಾಜನಾದ ಶಕುನಿಯು, **ಪಾಪಿನಾಂ** = ಪಾಪಿಷ್ಠರಾದ, **ಅಖಿಲಾನಾಂ** = ಎಲ್ಲ **ಚಕ್ರವರ್ತಿನಾಂ** = ಚಕ್ರವರ್ತಿಗಳಿಗೆ, **ಪ್ರಧಾನಂ** = ಮುಖ್ಯನಾದ ದುರ್ಯೋಧನನ್ನು ಕುರಿತು, **ಆಹ** = ಮುಂದೆ ತಿಳಿಸುವಂತೆ ಹೇಳಿದನು.

ತಾತ್ಪರ್ಯ :- ದುರ್ಯೋಧನನ ಮಾತುಗಳನ್ನು ಆಲಿಸಿದ ಮಹಾಪಾಪಿಯಾದ ಗಾಂಧಾರದೇಶದ ರಾಜನಾದ ಶಕುನಿಯು, ಪಾಪಿಷ್ಠರಾದ ಎಲ್ಲ ಚಕ್ರವರ್ತಿಗಳಲ್ಲಿ ಮುಖ್ಯನಾದ ದುರ್ಯೋಧನನನ್ನು ಕುರಿತು ಹೀಗೆಂದನು.

**ಯಾಂಯಾಂ ಶ್ರಿಯಂ ಪ್ರದೀಪ್ತಾಂ ತ್ವಂ ಪಾಂಡವೇಷು ಪ್ರಪಶ್ಯಸಿ ।**
**ತಾಮಕ್ಲೇಶತ ಆದಾಸ್ಯೇ ಕ್ರೀಡನ್ನಕ್ಷೈಸ್ತ್ವದಂತಿಕೇ ॥ ೨೯೪ ॥**

ಪದಚ್ಛೇದ :- ಯಾಂ, ಯಾಂ, ಶ್ರಿಯಂ, ಪ್ರದೀಪಾಂ, ತ್ವಂ, ಪಾಂಡವೇಷು, ಪ್ರಪಶ್ಯಸಿ, ತಾಂ, ಅಕ್ಲೇಶತಃ, ಆದಾಸ್ಯೇ, ಕ್ರೀಡನ್, ಅಕ್ಷೈಃ, ತ್ವದಂತಿಕೇ ।

**ಅರ್ಥ** :- **ಪ್ರದೀಪ್ತಾಂ** = ಪ್ರಕಾಶಮಾನವಾದ, **ಯಾಂ ಯಾಂ** = ಯಾವ ಯಾವ, **ಶ್ರಿಯಂ** = ಸಂಪತ್ತನ್ನು, **ತ್ವಂ** = ನೀನು, **ಪಾಂಡವೇಷು** = ಪಾಂಡವರಲ್ಲಿ, **ಪ್ರಪಶ್ಯಸಿ** = ಚೆನ್ನಾಗಿ ನೋಡುತ್ತಿರುವೆಯೋ, **ತಾಂ** = ಆ ಎಲ್ಲ ಸಂಪತ್ತನ್ನು, **ಅಕ್ಲೇಶತಃ** = ಅನಾಯಾಸವಾಗಿ, **ಅಕ್ಷೈಃ** = ಜೂಜಿನ ದಾಳಗಳಿಂದ, **ಕ್ರೀಡನ್** = ಆಡುವವನಾಗಿ, **ತ್ವದಂತಿಕೇ** = ನಿನ್ನ ಬಳಿಯಲ್ಲಿ, **ಆದಾಸ್ಯೇ** = ತರುತ್ತೇನೆ.

ತಾತ್ಪರ್ಯ :- ''ದುರ್ಯೋಧನನೇ ಪಾಂಡವರಲ್ಲಿ ಅತ್ಯಂತ ಪ್ರಕಾಶಮಾನವಾದ ಯಾವ ಸಂಪತ್ತನ್ನು ನೀನು ಕಾಣುತ್ತಿರುವೆಯೋ ಆ ಎಲ್ಲ ಸಂಪತ್ತು ಅನಾಯಾಸವಾಗಿ ಜೂಜಿನ ದಾಳಗಳಿಂದ ಜೂಜಾಟವನ್ನು ಆಡುತ್ತಲೇ ನಿನ್ನೆಡೆಗೆ ಬರುವಂತೆ ಮಾಡುವೆನು'' ಎಂದು ಶಕುನಿಯು ನುಡಿದನು.

**ಇತೀರಿತಃ ಪ್ರಸನ್ನಧೀಃ ಸುಯೋಧನೋ ಬಭೂವ ಹ ।**
**ಪ್ರಜಗ್ಮತುಶ್ಚ ತಾವುಭೌ ವಿಚಿತ್ರವೀರ್ಯಜಂ ನೃಪಮ್ ॥ ೨೯೫ ॥**

ಪದಚ್ಛೇದ :- ಇತಿ, ಈರಿತಃ, ಪ್ರಸನ್ನಧೀಃ, ಸುಯೋಧನಃ, ಬಭೂವ, ಹ, ಪ್ರಜಗ್ಮತುಃ, ಚ, ತೌ, ವಿಭೌ, ವಿಚಿತ್ರವೀರ್ಯಜಂ, ನೃಪಂ ।

**ಅರ್ಥ** :- **ಇತಿ** = ಈ ರೀತಿಯಾಗಿ, **ಈರಿತಃ** = ಶಕುನಿಯಿಂದ ಹೇಳಲ್ಪಟ್ಟ, **ಸುಯೋಧನಃ** = ದುರ್ಯೋಧನನು, **ಪ್ರಸನ್ನಧೀಃ** = ಪ್ರಸನ್ನ ಮನಸ್ಸುಳ್ಳವನಾಗಿ,

ಬಭೂವ ಹ = ಆದನಷ್ಟೇ, ಚ = ಮತ್ತು, ತೌ ಉಭೌ = ಶಕುನಿ ಮತ್ತು ದುರ್ಯೋಧನರಿಬ್ಬರೂ, ವಿಚಿತ್ರವೀರ್ಯಜಂ = ವಿಚಿತ್ರವೀರ್ಯನ ಮಗನಾದ, ನೃಪಂ = ಧೃತರಾಷ್ಟ್ರನನ್ನು ಕುರಿತು, ಜಗ್ಮತುಃ = ಹೋದರು.

ತಾತ್ಪರ್ಯ :- ಶಕುನಿಯ ಮಾತುಗಳನ್ನು ಆಲಿಸಿದ ದುರ್ಯೋಧನನು ಪ್ರಸನ್ನ ಚಿತ್ತನಾದನು. ನಂತರ ಅವರಿಬ್ಬರೂ ಸೇರಿ ಧೃತರಾಷ್ಟ್ರನ ಬಳಿಗೆ (ಜೂಜಾಟದ) ಪಗಡೆ ಆಟದ ಅನುಮತಿಯನ್ನು ಪಡೆಯಲು ತೆರಳಿದರು.

### ಧೃತರಾಷ್ಟ್ರನ ಸಮ್ಮತಿ

ಧೃತರಾಷ್ಟ್ರಮಥೋವಾಚ ದ್ವಾಪರಾಂಶೋऽತಿಪಾಪಕೃತ್ ।
ನಾಸ್ತಿಕ್ಯರೂಪಃ ಶಕುನಿರ್ವಿವರ್ಣಂ ಹರಿಣಂ ಕೃಶಮ್ ॥ ೨೯೬ ॥

ದುರ್ಯೋಧನಂ ತು ತಚ್ಛ್ರುತ್ವಾ ಕುತ ಇತ್ಯಾಹ ದುರ್ಮನಾಃ ।
ಅಬ್ರೂತಾಂ ತೌ ನೃಪಾಯಾऽಶು ದ್ವಾಭ್ಯಾಂ ಯನ್ಮಂತ್ರಿತಂ ಪಥಿ ॥ ೨೯೭ ॥

ಪದಚ್ಛೇದ :- ಧೃತರಾಷ್ಟ್ರಂ, ಅಥ, ಉವಾಚ, ದ್ವಾಪರಾಂಶಃ, ಅತಿಪಾಪಕೃತ್, ನಾಸ್ತಿಕ್ಯರೂಪಃ, ಶಕುನಿಃ, ವಿವರ್ಣಂ, ಹರಿಣಂ, ಕೃಶಂ, ದುರ್ಯೋಧನಂ, ತು, ತತ್, ಶ್ರುತ್ವಾ, ಕುತಃ, ಇತಿ, ಆಹ, ದುರ್ಮನಾಃ, ಅಬ್ರೂತಾಂ, ತೌ, ನೃಪಾಯ, ಆಶು, ದ್ವಾಭ್ಯಾಂ, ಯತ್, ಮಂತ್ರಿತಂ, ಪಥಿ।

ಅರ್ಥ :- ಅಥ = ಧೃತರಾಷ್ಟ್ರನಲ್ಲಿಗೆ ಹೋದ ನಂತರದಲ್ಲಿ, ದ್ವಾಪರಾಂಶಃ = ದ್ವಾಪರ ಎಂಬ ಅಸುರನ ಅಂಶನಾದ, ಅತಿಪಾಪಕೃತ್ = ಅತ್ಯಂತ ಪಾಪಿಷ್ಠನಾದ, ನಾಸ್ತಿಕ್ಯರೂಪಃ = ನಾಸ್ತಿಕ್ಯಕ್ಕೆ ಅಭಿಮಾನಿಯಾದ, ಶಕುನಿಃ = ಶಕುನಿಯು, ಧೃತರಾಷ್ಟ್ರಂ = ಧೃತರಾಷ್ಟ್ರನನ್ನು ಕುರಿತು, ದುರ್ಯೋಧನಂ = ದುರ್ಯೋಧನನನ್ನು, ವಿವರ್ಣಂ = ಮೊದಲಿನ ಬಣ್ಣಕ್ಕಿಂತ ವಿಪರೀವಾದ ಬಣ್ಣವುಳ್ಳವನು, ಹರಿಣಂ = ಬಿಳಿಚಿಕೊಂಡವನು ಮತ್ತು, ಕೃಶಂ = ತುಂಬಾ ಕೃಶನಾದವನು ಎಂಬುದಾಗಿ, ಉವಾಚ = ಹೇಳಿದನು, ತತ್ = ಈ ಶಕುನಿಯ ಮಾತನ್ನು, ಶ್ರುತ್ವಾ = ಕೇಳಿ, ದುರ್ಮನಾಃ = ದುಃಖಿತನಾದ ಧೃತರಾಷ್ಟ್ರನು, ಕುತಃ = ಏಕೆ ಹೀಗೆ ಆಗಿದ್ದಾನೆ, ಇತಿ = ಎಂಬುದಾಗಿ, ಆಹ = ಹೇಳಿದನು ಆಗ, ತೌ = ಶಕುನಿ ದುರ್ಯೋಧನರಿಬ್ಬರೂ, ಪಥಿ = ಮಾರ್ಗದಲ್ಲಿ, ಯತ್

= ಯಾವುದು, ದ್ವಾಭ್ಯಾಂ = ತಮ್ಮಿಬ್ಬರಿಂದ, ಮಂತ್ರಿತಂ = ಚರ್ಚಿತವಾಗಿತ್ತೋ, ತತ್ = ಆ ವಿಷಯವನ್ನು, ಆಶು = ಬೇಗನೇ, ನೃಪಾಯ = ಧೃತರಾಷ್ಟ್ರನಿಗೆ, ಅಬ್ರೂತಾಂ = ಹೇಳಿದರು.

ತಾತ್ಪರ್ಯ :- ಶಕುನಿ ದುರ್ಯೋಧನರಿಬ್ಬರೂ ಧೃತರಾಷ್ಟ್ರನ ಬಳಿಗೆ ಹೋಗಿ ಅವನನ್ನು ನೋಡಿದ ನಂತರ ದ್ವಾಪರನಾಮಕ ಅಸುರನ ಅಂಶನಾದ ಮಹಾಪಾಪಿಷ್ಠನಾದ ನಾಸ್ತಿಕ್ಯಾಭಿಮಾನಿಯಾದ ಶಕುನಿಯು ''ಮಹಾರಾಜಾ! ನಿನ್ನ ಮಗನಾದ ದುರ್ಯೋಧನನು ಮೊದಲಿನ ಸೌಂದರ್ಯವನ್ನು ಕಳೆದುಕೊಂಡಿದ್ದಾನೆ. ಮೈ ಎಲ್ಲಾ ಬಿಳಿಚಿಕೊಂಡಿದ್ದಾನೆ. ತುಂಬಾ ಕೃಶನಾಗಿದ್ದಾನೆ'' ಎಂದು ಧೃತರಾಷ್ಟ್ರನ ಎದುರು ದುರ್ಯೋಧನನ್ನು ಬಣ್ಣಿಸಿದನು. ಈ ಮಾತನ್ನು ಕೇಳಿ ದುಃಖಿತನಾದ ಧೃತರಾಷ್ಟ್ರನು ''ಇದಕ್ಕೆ ಕಾರಣ ಏನು?'' ಏಕೆ ದುರ್ಯೋಧನನು ಈ ದುರವಸ್ಥೆಯನ್ನು ಹೊಂದಿದ್ದಾನೆ ಎಂದು ಕೇಳಿದನು. ಆಗ ದುರ್ಯೋಧನ ಮತ್ತು ಶಕುನಿ ಇವರಿಬ್ಬರೂ ಸೇರಿ ಇಂದ್ರಪ್ರಸ್ಥದಿಂದ ಹಸ್ತಿನಾವತಿಗೆ ಬರುವ ಮಾರ್ಗದಲ್ಲಿ ಏನೇನು ಮಂತ್ರಾಲೋಚನೆ ಮಾಡಿದ್ದರೋ ಅದೆಲ್ಲವನ್ನೂ ಅವರಿಬ್ಬರೂ ಧೃತರಾಷ್ಟ್ರನಿಗೆ ಹೇಳಿದರು.

**ಶ್ರುತ್ವೈವ ತನ್ನೇತ್ಯವದತ್ ಸ ಭೂಪತಿ-**
**ರ್ವಿರೋಧಿ ಧರ್ಮಸ್ಯ ವಿನಾಶಕಾರಣಮ್ ।**
**ಕುಮಂತ್ರಿತಂ ವೋ ನ ಮಮೈತದಿಷ್ಟಂ**
**ಸ್ವಬಾಹುವೀರ್ಯಾಪ್ತಮಹಾಶ್ರಿಯೋ ಹಿ ತೇ ॥ ೨೯೮ ॥**

ಪದಚ್ಛೇದ :- ಶ್ರುತ್ವಾ, ಏವ, ತತ್, ನ, ಇತಿ, ಅವದತ್, ಸ, ಭೂಪತಿಃ, ವಿರೋಧಿ, ಧರ್ಮಸ್ಯ, ವಿನಾಶಕಾರಣಂ, ಕುಮಂತ್ರಿತಂ, ವಃ, ನ, ಮಮ, ಏತತ್, ಇಷ್ಟಂ, ಸ್ವಮಾಹುವೀರ್ಯಾಪ್ತಮಹಾಶ್ರಿಯಃ, ಹಿ ತೇ ।

**ಅರ್ಥ** :- **ಸಃ ಭೂಪತಿಃ** = ಆ ಧೃತರಾಷ್ಟ್ರನು, **ತತ್** = ಪಗಡೆ ಆಟದ ಮಾತನ್ನು, **ಶ್ರುತ್ವಾ ಏವ** = ಕೇಳಿದ ಕೂಡಲೇ, **ನ ಇತಿ** = ಪಗಡೆ ಆಟವು ಬೇಡ ಎಂದು, **ಅವದತ್** = ಹೇಳಿದನು, **ಇದಂ** = ಈ ಆಟವು, **ಧರ್ಮಸ್ಯ** = ಧರ್ಮಮಾರ್ಗಕ್ಕೆ, **ವಿರೋಧಿ** = ವಿರುದ್ಧವಾದುದು, **ವಿನಾಶಕಾರಣಂ** = (ನಿಮ್ಮ) ನಾಶಕ್ಕೆ ಕಾರಣವಾದುದು, **ಏತತ್** = ಈ, **ವಃ** = ನಿಮ್ಮ, **ಕುಮಂತ್ರಿತಂ**

= ಕೆಟ್ಟವಿಚಾರವು, ಮಮ = ನನಗೆ, ನ ಇಷ್ಟಂ = ಅಪೇಕ್ಷಿತವಾಗುವುದಿಲ್ಲ, **ತೇ** = ಆ ಪಾಂಡವರು, **ಸ್ವಬಾಹುವೀರ್ಯಾಪ್ತಮಹಾಶ್ರಿಯಃ ಹಿ** = ತಮ್ಮ ಬಾಹುಬಲದಿಂದ ಸಂಪಾದಿಸಿದ ಮಹಾಸಂಪತ್ತುಳ್ಳವರಾಗಿದ್ದಾರೆ ಅಷ್ಟೇ (ಎಂದನು).

**ತಾತ್ಪರ್ಯ** :- ಶಕುನಿ ದುರ್ಯೋಧನರ ಮಂತ್ರಾಲೋಚನೆಯನ್ನು ಆಲಿಸಿದ ಧೃತರಾಷ್ಟ್ರನು. ಮಾತನ್ನು ಕೇಳಿದ ಕೂಡಲೇ ''ಈ ಪಗಡೆ ಆಟವು ಬೇಡ ಎಂದನು. ಇದು ಧರ್ಮವಿರೋಧಿ ಆದುದು. ಇದರಿಂದ ನಿಮ್ಮ ನಾಶವಾಗುತ್ತದೆ. ನಿಮ್ಮ ಈ ಕೆಟ್ಟ ವಿಚಾರವು ನನಗೆ ಸಮ್ಮತವಲ್ಲ. ಪಾಂಡವರು ಕಷ್ಟಪಟ್ಟು ತಮ್ಮ ಬಾಹುಬಲದಿಂದ ಮಹಾಸಂಪತ್ತನ್ನು ಸಂಪಾದಿಸಿದ್ದಾರೆ. ಅವರು ಅಧರ್ಮದಿಂದ ಸಂಪತ್ತನ್ನು ಸಂಪಾದಿಸಿಲ್ಲ'' ಎಂದನು.

**ತ್ವಯಾಽಪಿ ನಿರ್ಜಿತ್ಯ ದಿಶೋ ಮಖಾಗ್ರ್ಯಾಃ**
**ಕಾರ್ಯಾಃ ಸ್ಪೃಧೋ ಮಾ ಗುಣವತ್ತಮೈಸ್ತೈಃ ।**
**ವಿಶೇಷತೋ ಭ್ರಾತೃಭಿರಗ್ರ್ಯಪೌರುಷೈ-**
**ರಿತ್ಯುಕ್ತ ಆಹಾಽಶು ಸುಯೋಧನಸ್ತಮ್ ॥ ೨೯ ॥**

**ಪದಚ್ಛೇದ :- ತ್ವಯಾ, ಅಪಿ, ನಿರ್ಜಿತ್ಯ, ದಿಶಃ, ಮಖಾಗ್ರ್ಯಾಃ, ಕಾರ್ಯಾಃ, ಸ್ಪೃಧಃ, ಮಾ, ಗುಣವತ್ತಮೈಃ, ತೈಃ, ವಿಶೇಷತಃ, ಭ್ರಾತೃಭಿಃ, ಅಗ್ರ್ಯಪೌರುಷೈಃ, ಇತಿ, ಉಕ್ತಃ, ಆಹ, ಆಶು, ಸುಯೋಧನಃ, ತಂ ।**

**ಅರ್ಥ** :- **ತ್ವಯಾ ಅಪಿ** = ನಿನ್ನಿಂದಲೂ, **ದಿಶಃ** = ದಿಕ್ಕುಗಳು **ನಿರ್ಜಿತ್ಯ** ಗೆದ್ದು, **ಮಖಾಗ್ರ್ಯಾಃ** = ಶ್ರೇಷ್ಠವಾದ ಯಜ್ಞಗಳು, **ಕಾರ್ಯಾಃ** = ಮಾಡಲ್ಪಡಲಿ, **ಗುಣವತ್ತಮೈಃ** = ಗುಣಶಾಲಿಗಳಾದ, **ವಿಶೇಷತಃ** = ಅದರಲ್ಲಿಯೂ ವಿಶೇಷವಾಗಿ, **ಭ್ರಾತೃಭಿಃ** = ಸಹೋದರರಾದ, **ಅಗ್ರ್ಯಪೌರುಷೈಃ** = ಮಹಾಪರಾಕ್ರಮಶಾಲಿಗಳಾದ, **ತೈಃ** = ಆ ಪಾಂಡವರ ಜೊತೆಯಲ್ಲಿ, **ಸ್ಪೃಧಃ** = ಸ್ಪರ್ಧೆಯು (ಅಸೂಯೆಯು), **ಮಾ** = ಬೇಡ'' **ಇತಿ** = ಹೀಗೆಂದು, **ಉಕ್ತಃ** = ಹೇಳಲ್ಪಟ್ಟ, **ಸುಯೋಧನಃ** = ದುರ್ಯೋಧನನು, **ಆಶು** = ಬೇಗನೇ, **ತಂ** = ಧೃತರಾಷ್ಟ್ರನನ್ನು ಕುರಿತು, **ಆಹ** = ಮುಂದೆ ತಿಳಿಸುವ ರೀತಿಯಲ್ಲಿ ಹೇಳಿದನು.

**ಯದಿ ಶ್ರಿಯಂ ಪಾಂಡವಾನಾಂ ನಾಕ್ಷೈರಾಚ್ಛೇತ್ತುಮಿಚ್ಛಸಿ ।**
**ಮೃತಮೇವಾದ್ಯ ಮಾಂ ವಿದ್ಧಿ ಪಾಂಡವೈಸ್ತ್ವಂ ಸುಖೀ ಭವ ॥ ೩೦೦ ॥**

ಪದಚ್ಛೇದ :- ಯದಿ, ಶ್ರಿಯಂ, ಪಾಂಡವಾನಾಂ, ನ, ಅಕ್ಷೈಃ, ಆಚ್ಛೇತ್ತುಂ, ಇಚ್ಛಸಿ, ಮೃತಂ, ಏವ, ಅದ್ಯ, ಮಾಂ, ವಿದ್ಧಿ, ಪಾಂಡವೈಃ, ತ್ವಂ ಸುಖೀಭವ ।

**ಅರ್ಥ** :- ಪಾಂಡವಾನಾಂ = ಪಾಂಡವರ, ಶ್ರಿಯಂ = ಸಂಪತ್ತನ್ನು, ಅಕ್ಷೈಃ = ಜೂಜಾಟಗಳಿಂದ, ಆಚ್ಛೇತ್ತುಂ = ಸೆಳೆಯಲು, ತ್ವಂ = ನೀನು, ಯದಿ ನ ಇಚ್ಛಸಿ = ಇಷ್ಟಪಡುವುದಿಲ್ಲವಾದರೆ, ಅದ್ಯ = ಇಂದು, ಮಾಂ = ನನ್ನನ್ನು, ಮೃತಂ ಏವ = ಸತ್ತವನನ್ನಾಗಿಯೇ, ವಿದ್ಧಿ = ತಿಳಿ, ತ್ವಂ = ನೀನು, ಪಾಂಡವೈಃ = ಪಾಂಡವರ ಜೊತೆಯಲ್ಲಿ, ಸುಖೀ ಭವ = ಸುಖವಾಗಿರು.

**ತಾತ್ಪರ್ಯ** :- ''ಪಾಂಡವರ ಜೊತೆಯಲ್ಲಿ ಜೂಜಾಟವನ್ನು ಆಡಿ ಅವರ ಅಪಾರವಾದ ಸಂಪತ್ತನ್ನು ಸೆಳೆಯಲು ನೀನು ಸಮ್ಮತಿಸದೇ ಹೋದಲ್ಲಿ ಇಂದು ನಾನು ಸತ್ತೇ ಹೋಗುತ್ತೇನೆ. ನೀನು ಪಾಂಡವರ ಜೊತೆಯಲ್ಲಿ ಸುಖವಾಗಿರು'' ಎಂದನು.

**ಯದಿ ಮಜ್ಜೀವಿತಾರ್ಥೀ ತ್ವಮಾನಯಾಽಶ್ವಿಹ ಪಾಂಡವಾನ್ ।**
**ಸಭಾರ್ಯಾನ್ ದೇವನಾಯೈವ ನಚಾಧರ್ಮೋಽತ್ರ ಕಶ್ಚನ ॥ ೩೦೧ ॥**

ಪದಚ್ಛೇದ :- ಯದಿ, ಮಜ್ಜೀವಿತಾರ್ಥಿ, ತ್ವಂ, ಆನಯ, ಆಶು, ಇಹ, ಪಾಂಡವಾನ್, ಸಭಾರ್ಯಾನ್, ದೇವನಾಯ, ಏವ, ನ, ಚ, ಅಧರ್ಮಃ, ಅತ್ರ, ಕಶ್ಚನ ।

**ಅರ್ಥ** :- ತ್ವಂ = ನೀನು, ಮಜ್ಜೀವಿತಾರ್ಥೀ ಯದಿ = ನಾನು ಬದುಕಿರಬೇಕೆಂದು ಅಪೇಕ್ಷಿಸುವೆಯಾದರೆ, ಆಶು = ಬೇಗನೇ, ಸಭಾರ್ಯಾನ್ = ಪತ್ನೀಸಹಿತರಾದ, ಪಾಂಡವಾನ್ = ಪಾಂಡವರನ್ನು, ಇಹ = ಹಸ್ತಿನಾವತಿಗೆ, ದೇವನಾಯ = ಜೂಜಾಟಕ್ಕಾಗಿ, ಆನಯ = ಕರೆಯಿಸು, ಅತ್ರ = ಜೂಜಿನ ವಿಷಯದಲ್ಲಿ, ಕಶ್ಚನ = ಯಾವ, ಅಧರ್ಮಃ = ಅಧರ್ಮನು, ನಾಸ್ತ್ಯೇವ = ಇಲ್ಲವೇ ಇಲ್ಲ.

**ತಾತ್ಪರ್ಯ** :- ನಾನು ಸಾಯಬಾರದು ಬದುಕಿರಬೇಕು ಎಂದು ನಿನ್ನ ಇಚ್ಛೆ ಇದ್ದರೆ ಸಪತ್ನೀಕರಾದ ಪಾಂಡವರನ್ನು ಜೂಜಿಗಾಗಿ ಹಸ್ತಿನಾವತಿಗೆ ಬೇಗ

ಕರೆಯಿಸು. ಧರ್ಮದಿಂದಾಗಲೀ ಅಧರ್ಮದಿಂದಾಗಲೀ ಶತ್ರುಗಳನ್ನು ಜಯಿಸಿ ಬದುಕಬೇಕಾದುದು ಕ್ಷತ್ರಿಯನ ಧರ್ಮ. ಆದ್ದರಿಂದ ಜೂಜಿನ ವಿಷಯದಲ್ಲಿ ಅಧರ್ಮವನ್ನು ನೀನು ಭಾವಿಸಬೇಕಾಗಿಲ್ಲ ಎಂದ ದುರ್ಯೋಧನ.

**ವೇದಾನುಜೀವಿನೋ ವಿಪ್ರಾಃ ಕ್ಷತ್ರಿಯಾಃ ಶಸ್ತ್ರಜೀವಿನಃ ।**
**ತ್ರುಟ್ಯತೇ ಯೇನ ಶತ್ರುಶ್ಚ ತಚ್ಛಸ್ತ್ರಂ ನೈವ ಚೇತರತ್ ॥ ೩೦೨ ॥**

**ಪದಚ್ಛೇದ :– ವೇದಾನುಜೀವಿನಃ, ವಿಪ್ರಾಃ, ಕ್ಷತ್ರಿಯಾಃ, ಶಸ್ತ್ರಜೀವಿನಃ, ತ್ರುಟ್ಯತೇ, ಯೇನ, ಶತ್ರುಃ, ಚ, ತತ್, ಶಸ್ತ್ರಂ, ನ, ಏವ, ಚ, ಇತರತ್ ।**

**ಅರ್ಥ :–** **ವಿಪ್ರಾಃ** = ಬ್ರಾಹ್ಮಣರು, **ವೇದಾನುಜೀವಿನಃ** = ವೇದಗಳಿಂದ ಜೀವಿಸುವವರು, **ಕ್ಷತ್ರಿಯಾಃ** = ಕ್ಷತ್ರಿಯರು, **ಶಸ್ತ್ರಜೀವಿನಃ** = ಶಸ್ತ್ರದಿಂದ ಜೀವಿಸುವವರು, **ಯೇನ ಚ** = ಯಾವ ಉಪಾಯದಿಂದ, **ಶತ್ರುಃ** = ಶತ್ರುವು, **ತ್ರುಟ್ಯತೇ** = ಛೇದಿಸಲ್ಪಡುವನೋ, **ತತ್ ಏವ** = ಅದೇ, **ಶಸ್ತ್ರಂ** = ಶಸ್ತ್ರವು, **ಇತರತ್** = ಬೇರೆ ಯಾವುದೂ, **ನ ಚ ಶಸ್ತ್ರಂ ಏವ** = ಶಸ್ತ್ರವು ಅಲ್ಲವೇ ಅಲ್ಲ.

**ತಾತ್ಪರ್ಯ :–** ವೇದಾಧ್ಯಯನವನ್ನು ಮಾಡಿ ಆ ವೇದಗಳಿಂದ ಜೀವಿಸುವವರು ಬ್ರಾಹ್ಮಣರು. ಶಸ್ತ್ರಾಭ್ಯಾಸವನ್ನು ಮಾಡಿ ಆ ಶಸ್ತ್ರಗಳಿಂದ ಬದುಕುವವರು ಕ್ಷತ್ರಿಯರು. 'ಶ' ಎಂದರೆ ಶತ್ರು 'ತ್ರ' ಎಂದರೆ ನಾಶಪಡಿಸುವ ಸಾಧನ. ರಹಸ್ಯವಾಗಿಯೋ ಪ್ರಕಟವಾಗಿಯೋ ಯಾವ ಉಪಾಯವು ಶತ್ರುಗಳನ್ನು ನಾಶಪಡಿಸುತ್ತದೆಯೋ ಅದೇ ಶಸ್ತ್ರ. ಜೂಜು ಎಂಬುದ ಗುಪ್ತವಾಗಿ ಶತ್ರುಗಳನ್ನು ನಾಶಪಡಿಸುವ ಸಾಧನವಾಗಿದೆ. ಆದ್ದರಿಂದ ಜೂಜಿನಿಂದ ಶತ್ರುಗಳನ್ನು ಸಂಹರಿಸುವುದು ಕ್ಷತ್ರಿಯನ ಧರ್ಮವೇ ಆಗಿದೆ ಇದರಲ್ಲಿ ಅಧರ್ಮದ ಪ್ರಶ್ನೆಯೇ ಇಲ್ಲ. ಶಸ್ತ್ರಗಳಿಂದ ಶತ್ರು ಸಂಹಾರವೇ ಕ್ಷತ್ರಿಯನ ಧರ್ಮ. ಅದನ್ನು ಬಿಟ್ಟು ಬೇರೆಯಾವುದೂ ಕ್ಷತ್ರಿಯನ ಧರ್ಮ ಅಲ್ಲ. ಆದ್ದರಿಂದ ನೀನು ಜೂಜನ್ನು ಸಮ್ಮತಿಸು ಎನ್ನುತ್ತಾನೆ ದುರ್ಯೋಧನ.

**ಅತಃ ಸ್ವಧರ್ಮ ಏವಾಯಂ ತವಾಪಿ ಸ್ಯಾತ್ ಫಲಂ ಮಹತ್ ।**
**ಇತ್ಯುಕ್ತೋ ಮಾ ಫಲಂ ಮೇಽಸ್ತು ತವೈವಾಸ್ತ್ವಿತಿ ಸೋಽಬ್ರವೀತ್ ॥ ೩೦೩ ॥**

ಪದಚ್ಛೇದ :- ಅತಃ, ಸ್ವಧರ್ಮಃ, ಏವ, ಅಯಂ, ತವ, ಅಪಿ, ಸ್ಯಾತ್, ಫಲಂ, ಮಹತ್, ಇತಿ, ಉಕ್ತಃ, ಮಾ, ಫಲಂ, ಮೇ, ಅಸ್ತು, ತವ, ಏವ, ಅಸ್ತು, ಇತಿ, ಸಃ, ಅಬ್ರವೀತ್ ।

**ಅರ್ಥ** :- **ಅತಃ** = ಆದ್ದರಿಂದ, **ಅಯಂ** = ಈ ಜೂಜಾಟವು, **ಸ್ವಧರ್ಮ ಏವ** = ನನಗೆ ಸ್ವಧರ್ಮವೇ ಆಗಿದೆ, **ತವ ಅಪಿ** = ನಿನಗೂ ಕೂಡ ಇದರಿಂದ, **ಮಹತ್** = ಮಹತ್ತರವಾದ, **ಫಲಂ** = ಫಲವು, **ಸ್ಯಾತ್** = ದೊರೆಯುತ್ತದೆ, **ಇತಿ** = ಹೀಗೆಂದು, **ಉಕ್ತಃ** = ಹೇಳಲ್ಪಟ್ಟ, **ಸಃ** = ಧೃತರಾಷ್ಟ್ರನು, **ಮೇ** = ನನಗೆ, **ಫಲಂ** = ಫಲವು, **ಮಾ ಅಸ್ತು** = ಬೇಡ, **ತವ ಏವ** = ನಿನಗೇ, **ಅಸ್ತು** = ಆ ಫಲವು ಇರಲಿ, **ಇತಿ** = ಹೀಗೆಂದು, **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ''ಜೂಜು ಎಂಬ ಶಸ್ತ್ರದಿಂದ ಶತ್ರುಗಳನ್ನು ಸಂಹರಿಸುವುದು ಕ್ಷತ್ರಿಯನಾದ ನನಗೆ ಧರ್ಮವೇ ಆಗಿದೆ. ಆದ್ದರಿಂದ ಜೂಜಿನಲ್ಲಿ ಮುಂದುವರೆಯುವುದು ಅಧರ್ಮವೇನಲ್ಲ. ಅಲ್ಲದೇ ಮಕ್ಕಳನ್ನು ರಕ್ಷಣೆ ಮಾಡಿದ ನಿನಗೂ ಇದರ ಮಹಾಫಲವು ಲಭಿಸುತ್ತದೆ'' ಎಂದು ದುರ್ಯೋಧನನು ನುಡಿದಾಗ ''ಈ ಜೂಜಿನ ಫಲವು ನಿನಗೇ ಇರಲಿ. ಆ ಫಲವು ನನಗೆ ಬೇಡವೇ ಬೇಡ'' ಎನ್ನುತ್ತಾನೆ ಧೃತರಾಷ್ಟ್ರ.

**ಏವಂ ಬ್ರುವನ್ನಪಿ ನೃಪ ಆವಿಷ್ಟಃ ಕಲಿನಾ ಸ್ವಯಮ್ ।**
**ಪುತ್ರಸ್ನೇಹಾಚ್ಚ ವಿದುರಮಾದಿಶತ್ ಪಾಂಡವಾನ್ ಪ್ರತಿ ॥ ೩೦೪ ॥**

ಪದಚ್ಛೇದ :- ಏವಂ, ಬ್ರುವನ್, ಅಪಿ, ನೃಪಃ, ಆವಿಷ್ಟಃ, ಕಲಿನಾ, ಸ್ವಯಂ, ಪುತ್ರಸ್ನೇಹಾಚ್ಚ, ವಿದುರಂ, ಆದಿಶತ್, ಪಾಂಡೂನ್, ಪ್ರತಿ ।

**ಅರ್ಥ** :- **ಏವಂ** = ಈ ರೀತಿಯಾಗಿ, **ಬ್ರುವನ್ ಅಪಿ** = ಹೇಳುತ್ತಿರುವವನಾದರೂ, **ಕಲಿನಾ** = ಕಲಿಯಿಂದ, **ಆವಿಷ್ಟಃ** = ಆವಿಷ್ಟನಾದ, **ನೃಪಃ** = ಧೃತರಾಷ್ಟ್ರನು, **ಪುತ್ರಸ್ನೇಹಾತ್ ಚ** = ಮಗನ ಮೇಲಿರುವ ಸ್ನೇಹದಿಂದಲೂ, **ಸ್ವಯಂ** = ತಾನಾಗಿಯೇ, **ಪಾಂಡವಾನ್ ಪ್ರತಿ** = ಪಾಂಡವರನ್ನು ಕರೆತರಲು, **ವಿದುರಂ** = ವಿದುರನನ್ನು, **ಆದಿಶತ್** = ಆಜ್ಞಾಪಿಸಿದನು.

ತಾತ್ಪರ್ಯ :- ಜೂಜು ಅಧರ್ಮ, ಅದರ ಫಲ ನನಗೆ ಬೇಡ ಎಂದು ಹೇಳುತ್ತಿದ್ದರೂ ಕಲಿಯಿಂದ ಆವಿಷ್ಟನಾದ ಧೃತರಾಷ್ಟ್ರನು ಮಗನ ಮೇಲಿನ ಮೋಹದಿಂದ ಪಾಂಡವರನ್ನು ಜೂಜಿಗಾಗಿ ಕರೆತರಲು ವಿದುರನನ್ನು ಕಳುಹಿಸಿದನು.

**ಆವಿವೇಶ ಕಲಿಸ್ತಂ ಹಿ ಯದಾ ಪುತ್ರತ್ವಸಿದ್ಧಯೇ ।**
**ಅಂಶೇನ ತತ ಆರಭ್ಯ ನೈವಾಸ್ಮಾದಪಜಗ್ಮಿವಾನ್ ॥ ೩೦೫ ॥**

**ಪದಚ್ಛೇದ** :- ಆವಿವೇಶ, ಕಲಿಃ, ತಂ, ಹಿ, ಯದಾ, ಪುತ್ರತ್ವಸಿದ್ಧಯೇ, ಅಂಶೇನ, ತತಃ, ಆರಭ್ಯ, ನ, ಏವ, ಅಸ್ಮಾತ್, ಅಪಜಗ್ಮಿವಾನ್ ।

ಅರ್ಥ :- **ಕಲಿಃ** = ಕಲಿಯು, **ಪುತ್ರತ್ವಸಿದ್ಧಯೇ** = ಧೃತರಾಷ್ಟ್ರನ ಮಗನಾಗುವುದಕ್ಕಾಗಿ, **ಯದಾ** = ಯಾವಾಗ, **ತಂ** = ಆ ಧೃತರಾಷ್ಟ್ರನನ್ನು, **ಆವಿವೇಶ** = ಪ್ರವೇಶಿಸಿದನೋ, **ನ ತತಃ** = ಅಂದಿನಿಂದ, **ಆರಭ್ಯ** = ಆರಂಭಿಸಿ, **ಅಂಶೇನ** = ಒಂದಂಶದಿಂದ (ಅವನಲ್ಲೇ ಇದ್ದು), **ಅಸ್ಮಾತ್** = ಈ ಧೃತರಾಷ್ಟ್ರನಿಂದ, **ನೈವ ಅಪಜಗ್ಮಿವಾನ್** = ದೂರ ಹೋಗಲಿಲ್ಲ.

ತಾತ್ಪರ್ಯ :- ಜೀವನು ತಾಯಿಯ ಗರ್ಭವನ್ನು ಪ್ರವೇಶ ಮಾಡುವ ಮೂರು ತಿಂಗಳು ಮೊದಲು ತಂದೆಯ ಶರೀರವನ್ನು ಪ್ರವೇಶಿಸುತ್ತಾನೆ. ಆ ಕ್ರಮದಲ್ಲಿ ಕಲಿಯು ಧೃತರಾಷ್ಟ್ರನ ಮಗನಾಗಿ ಹುಟ್ಟುವುದಕ್ಕೋಸ್ಕರ ಎಂದು ಪ್ರವೇಶಿಸಿದನೋ ಅಂದಿನಿಂದ ಆರಂಭಿಸಿ ಧೃತರಾಷ್ಟ್ರನು ಪುರವನ್ನು ಬಿಟ್ಟು ಕಾಡನ್ನು ಪ್ರವೇಶಿಸಿದನೋ ಅಲ್ಲಿಯವರೆಗೂ ಒಂದಂಶದಿಂದ ಅವನನ್ನು ಬಿಟ್ಟು ದೂರಹೋಗಲೇ ಇಲ್ಲ.

**ಯಾವತ್ ಪುರಂ ಪರಿತ್ಯಜ್ಯ ವನಮೇವ ವಿವೇಶ ಹ ।**
**ತದಂತರಾ ತತಸ್ತಸ್ಯ ಪಾಪಯುಕ್ತಂ ಮನೋಽಭವತ್ ॥ ೩೦೬ ॥**

**ಪದಚ್ಛೇದ** :- ಯಾವತ್, ಪುರಂ, ಪರಿತ್ಯಜ್ಯ, ವನಂ, ಏವ, ವಿವೇಶ ಹ, ತದಂತರಾ, ತತಃ, ತಸ್ಯ, ಪಾಪಯುಕ್ತಂ, ಮನಃ, ಅಭವತ್ ।

ಅರ್ಥ :- (**ತಸ್ಮಾತ್** = ಆದ್ದರಿಂದ), **ಯಾವತ್** = ಎಲ್ಲಿಯವರೆಗೆ, **ಪುರಂ** = ಹಸ್ತಿನಾವತಿಯನ್ನು, **ಪರಿತ್ಯಜ್ಯ ವನಂ ಏವ** = ಕಾಡನ್ನೇ, **ವಿವೇಶ ಹ** =

ಪ್ರವೇಶಿಸಿದನೋ, **ತದಂತರಾ** = ಆ ಮಧ್ಯದ ಸಮಯದಲ್ಲಿ, **ತತಃ** = ಕಲಿಯ ಆವೇಶದಿಂದ, **ತಸ್ಯ** = ಆ ಧೃತರಾಷ್ಟ್ರನ, **ಮನಃ** = ಮನಸ್ಸು, **ಪಾಪಯುಕ್ತಂ** = ಪಾಪದಿಂದ ಕೂಡಿದ್ದಾಗಿ, **ಅಭವತ್** = ಆಯಿತು.

**ತಾತ್ಪರ್ಯ** :- ಕಲಿಯ ಆವಿಷ್ಟನಾದ್ದರಿಂದ ಧೃತರಾಷ್ಟ್ರನು ಎಂದು ಹಸ್ತಿನಾವತಿಯನ್ನು ಬಿಟ್ಟು ಕಾಡನ್ನು ಪ್ರವೇಶಿಸಿದನೋ ಆ ಮಧ್ಯದ ಅವಧಿ ಯಲ್ಲಿ ಭೀಮಸೇನ ವಿದುರರ ನೀನು ಕಾಡಿಗೆ ಹೋಗು ಎಂದು ಉಪದೇಶಿಸುವವರೆಗೂ ಆ ಕಲಿಯ ಆವೇಶದಿಂದ ಅವನ ಮನಸ್ಸು ಪಾಪದಿಂದಲೇ ಕೂಡಿತ್ತು.

### ವಿದುರನ ಉಪದೇಶ

**ನ್ಯವಾರಯತ್ ತಂ ವಿದುರೋ ಮಹತ್ ತೇ**
**ಪಾಪಂ ಕುಲಸ್ಯಾಪಿ ವಿನಾಶಕೋಽಯಮ್ ।**
**ಸಮುದ್ಯಮೋ ನಾತ್ರ ವಿಚಾರ್ಯಮಸ್ತಿ**
**ಕೃಥಾ ನ ತಸ್ಮಾದಯಶಶ್ಚ ತೇ ಸ್ಯಾತ್ ॥ ೩೦೭ ॥**

**ಪದಚ್ಛೇದ** :- ನ್ಯವಾರಯತ್, ತಂ, ವಿದುರಃ, ಮಹತ್, ತೇ, ಪಾಪಂ, ಕುಲಸ್ಯ, ಅಪಿ, ವಿನಾಶಕಃ, ಅಯಂ, ಸಮುದ್ಯಮಃ, ನ, ಅತ್ರ, ವಿಚಾರ್ಯಂ, ಅಸ್ತಿ, ಕೃಥಾ, ನ, ತಸ್ಮಾತ್, ಅಯಶಃ, ಚ, ತೇ, ಸ್ಯಾತ್ ।

**ಅರ್ಥ** :- **ವಿದುರಃ** = ವಿದುರನು, **ಅಯಂ** = ಈ, **ಸಮುದ್ಯಮಃ** = ಪ್ರಯತ್ನವು, **ತೇ** = ನಿನಗೆ, **ಮಹತ್** = ದೊಡ್ಡದಾದ, **ಪಾಪಂ** = ಪಾಪವು, **ಕುಲಸ್ಯಾಪಿ** = ವಂಶಕ್ಕೂ, **ವಿನಾಶಕಃ** = ನಾಶಕ್ಕೆ ಕಾರಣವು, **ಅತ್ರ** = ಈ ವಿಷಯದಲ್ಲಿ, **ವಿಚಾರ್ಯಂ** = ವಿಚಾರ ಮಾಡಲ್ಪಡಬೇಕಾದದ್ದು, **ನ ಅಸ್ತಿ** = ಏನೂ ಇಲ್ಲ, **ನ ಕೃಥಾಃ** = ಹಾಗೆ ಮಾಡಬೇಡ, **ತಸ್ಮಾತ್** = ಹಾಗೆ ಮಾಡುವುದರಿಂದ, **ತೇ** = ನಿನಗೆ, **ಅಯಶಃ ಚ** = ಅಪಕೀರ್ತಿಯು, **ಸ್ಯಾತ್** = ಉಂಟಾಗುವುದು, (**ಇತಿ** = ಎಂದು), **ತಂ** = ಆ ಧೃತರಾಷ್ಟ್ರನನ್ನು, **ನ್ಯವಾರಯತ್** = ತಡೆದನು.

**ತಾತ್ಪರ್ಯ** :- ಕಲಿಯ ಆವೇಶದಿಂದ ಕುಕೃತ್ಯವನ್ನು ಮಾಡಲು ಹೊರಟ ಧೃತರಾಷ್ಟ್ರನನ್ನು ಕುರಿತು ನೀನು ಮಾಡುವ ಈ ಪ್ರಯತ್ನವು ನಿನಗೆ ಮಹಾ

ಪಾಪದಾಯಕವು ಮತ್ತು ಕುಲವನ್ನೂ ನಾಶಮಾಡುವುದು. ಈ ವಿಷಯದಲ್ಲಿ ವಿಚಾರ ಮಾಡಲೂ ಏನೂ ಇಲ್ಲ ಆದ್ದರಿಂದ ಹೀಗೆ ಮಾಡಬೇಡ. ಅದರಿಂದ ನಿನಗೆ ಅಪಕೀರ್ತಿಯು ಬರುವುದೆಂದು ಹೇಳಿ ತಡೆಯಲು ಪ್ರಯತ್ನಿಸಿದನು.

### ಧೃತರಾಷ್ಟ್ರನ ಉತ್ತರ

ಇತಿ ಬ್ರುವಾಣಂ ಕಲಹೋಽತ್ರ ನ ಸ್ಯಾತ್
ನಿವಾರಯಾಮೋ ವಯಮೇವ ಯಸ್ಮಾತ್ ।
ದ್ರಷ್ಟುಂ ಸುತಾನ್ ಕ್ರೀಡತ ಏಕಸಂಸ್ಥಾ-
ನಿಚ್ಛಾಮಿ ಪಾರ್ಥಾಂಶ್ಚ ಸುಯೋಧನಾದೀನ್ ॥ ೩೦೮ ॥

ಪದಚ್ಛೇದ :- ಇತಿ, ಬ್ರುವಾಣಂ, ಕಲಹಃ, ಅತ್ರ, ನ, ಸ್ಯಾತ್, ನಿವಾರಯಾಮಃ, ವಯಂ, ಏವ, ಯಸ್ಮಾತ್, ದ್ರಷ್ಟುಂ, ಸುತಾನ್, ಕ್ರೀಡತಃ, ಏಕಸಂಸ್ಥಾನ್, ಇಚ್ಛಾಮಿ, ಪಾರ್ಥಾನ್, ಚ, ಸುಯೋಧನಾದೀನ್ ।

ಅರ್ಥ :- ಇತಿ = ಈ ರೀತಿಯಾಗಿ, ಬ್ರುವಾಣಂ = ಹೇಳುತ್ತಿರಲುವ ವಿದುರನನ್ನು ಕುರಿತು ಧೃತರಾಷ್ಟ್ರನು, ಅತ್ರ = ಈ ದ್ಯೂತದಲ್ಲಿ, ಕಲಹಃ = ಜಗಳವು, ನ ಸ್ಯಾತ್ = ಆಗುವುದಿಲ್ಲ, ವಯಮೇವ ನಿವಾರಯಾಮಃ = ನಾವೇ ತಡೆಯುತ್ತೇವೆ, ಯಸ್ಮಾತ್ = ಯಾವ ಕಾರಣದಿಂದ, ಏಕಸಂಸ್ಥಾನ್ = ಒಂದೆಡೆ ಕುಳಿತು, ಕ್ರೀಡತಃ = ಆಡುತ್ತಿರುವ, ಸುತಾನ್ = ಮಕ್ಕಳಾದ, ಪಾರ್ಥಾನ್ = ಪಾಂಡವರನ್ನು, ಚ = ಮತ್ತು, ಸುಯೋಧನಾದೀನ್ = ದುರ್ಯೋಧನಾದಿಗಳನ್ನು, ದ್ರಷ್ಟುಂ = ನೋಡಲು, ಇಚ್ಛಾಮಿ = ಬಯಸುತ್ತೇನೆ, (ತಸ್ಮಾತ್ = ಆ ಕಾರಣದಿಂದ ಕಲಹವಾಗುವುದಿಲ್ಲ).

ತಾತ್ಪರ್ಯ :- ವಿದುರನು ಹೀಗೆ ತಡೆಯುವಾಗ ಧೃತರಾಷ್ಟ್ರನೆಂದ ಈ ಜೂಜಿನಲ್ಲಿ ಯಾವುದೇ ಜಗಳವಾಗದಂತೆ ನಾವೇ ತಡೆಯುತ್ತೇವೆ. ಮಕ್ಕಳಾದ ಪಾಂಡವದುರ್ಯೋಧನಾದಿಗಳು ಒಂದೆಡೆ ಸೇರಿ ಆಡುವುದನ್ನು ನೋಡಲು ಇಚ್ಛಿಸುತ್ತೇನೆ ಹಾಗಾಗಿ ಕಲಹವಾಗುವುದಿಲ್ಲ.

### ಧರ್ಮರಾಜನಿಗೆ ಕರೆ

ಅತಃ ಕ್ಷಿಪ್ರಮುಪಾನೇಯಾಃ ಪಾರ್ಥಾ ಇತಿ ಬಲೋದಿತಃ ।
ಯಯೌ ಸ ವಿದುರಃ ಪಾರ್ಥಾನ್ ದ್ವಾರಕಾಂ ಕೇಶವೇ ಗತೇ ॥ ೩೦೯ ॥

ಪದಚ್ಛೇದ :- ಅತಃ, ಕ್ಷಿಪ್ರಂ, ಉಪಾನೇಯಾಃ, ಪಾರ್ಥಾಃ, ಇತಿ, ಬಲೋದಿತಃ, ಯಯೌ, ಸಃ, ವಿದುರಃ, ಪಾರ್ಥಾನ್, ದ್ವಾರಕಾಂ, ಕೇಶವೇ, ಗತೇ ।

**ಅರ್ಥ** :- **ಅತಃ** = ಆದ್ದರಿಂದ, **ಕ್ಷಿಪ್ರಂ** = ಬೇಗನೇ, **ಪಾರ್ಥಾಃ** = ಪಾಂಡವರು, **ಉಪಾನೇಯಾಃ** = ಕರೆತರಲ್ಪಡಬೇಕು, **ಇತಿ** = ಎಂದು, **ಬಲೋದಿತಃ** = ಬಲಾತ್ಕಾರವಾಗಿ ಹೇಳಲ್ಪಡುತ್ತಿರಲು, **ಸಃ** = ಆ, **ವಿದುರಃ** = ವಿದುರನು, **ಕೇಶವೇ** = ಶ್ರೀಕೃಷ್ಣನು, **ದ್ವಾರಕಾಂ** = ದ್ವಾರಕೆಯನ್ನು ಕುರಿತು, **ಗತೇ ಸತಿ** = ಹೋಗುತ್ತಿರಲು, **ಪಾರ್ಥಾನ್** = ಪಾಂಡವರನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ** :- ಯಾವುದೇ ಕಲಹವಾಗಲು ನಾವು ಬಿಡುವುದಿಲ್ಲವಾದ್ದರಿಂದ ಈ ಕೂಡಲೇ ಪಾಂಡವರನ್ನು ಇಲ್ಲಿಗೆ ಕರೆದು ತಾ ಎಂದು ಧೃತರಾಷ್ಟ್ರನು ಬಲಾತ್ಕಾರವಾಗಿ ಹೇಳಿದಾಗ ವಿದುರನು ಶ್ರೀಕೃಷ್ಣನು ದ್ವಾರಕೆಗೆ ಹೋದ ಸಂದರ್ಭದಲ್ಲಿ ಪಾಂಡವರ ಬಳಿಗೆ ಹೋದನು.

### ಸಾಲ್ವನ ಪುನರಾಗಮನ

**ಗತೇ ಹಿ ಪಾರ್ಥಸನ್ನಿಧೇಃ ಸುಯೋಧನೇ ತು ನಾರದಃ ।**
**ಶಶಂಸ ಧರ್ಮಸೂನುನಾ ಪ್ರಚೋದಿತೋಽರಿಮಾಗತಮ್ ॥ ೩೧೦ ॥**

ಪದಚ್ಛೇದ :- ಗತೇ, ಹಿ, ಪಾರ್ಥಸನ್ನಿಧೇಃ, ಸುಯೋಧನೇ, ಅಥ, ನಾರದಃ, ಶಶಂಸ, ಧರ್ಮಸೂನುನಾ, ಪ್ರಚೋದಿತಃ, ಅರಿಂ, ಆಗತಂ ।

**ಅರ್ಥ** :- **ಪಾರ್ಥಸನ್ನಿಧೇಃ** = ಪಾಂಡವರ ಸಮೀಪದಿಂದ, **ಸುಯೋಧನೇ** = ದುರ್ಯೋಧನನು, **ಗತೇ ಸತಿ** = ಹೋಗುತ್ತಿರಲು, **ಅಥ** = ಅನಂತರ, **ನಾರದಃ** = ನಾರದರು, **ಧರ್ಮಸೂನುನಾ** = ಧರ್ಮರಾಜನಿಂದ, **ಪ್ರಚೋದಿತಃ** = ವಾರ್ತೆಯನ್ನು ಹೇಳೆಂದು ಪ್ರೇರಿಸಲ್ಪಟ್ಟವರಾಗಿ, **ಆಗತಂ** = ಬಂದಿರುವ, **ಅರಿಂ** = ಶತ್ರುವಾದ ಸಾಲ್ವನನ್ನು ಕುರಿತು, **ಶಶಂಸ** = ಹೇಳಿದನು.

**ತಾತ್ಪರ್ಯ** :- ಪಾಂಡವರಿಂದ ಶ್ರೀಕೃಷ್ಣ ಹೋದಂತೆ ದುರ್ಯೋಧನನೂ ಹೊರಟ ನಂತರ ನಾರದರು ಬಂದರು. ಅವರಲ್ಲಿ ಧರ್ಮರಾಜನು

ವಾರ್ತೆಯನ್ನು ಹೇಳಿರೆಂದು ಪ್ರಚೋದಿಸಿದಾಗ ನಾರದರು ವೈರಿಯಾದ ಸಾಲ್ವನ ಆಗಮನದ ವಾರ್ತೆಯನ್ನು ಹೇಳಿದರು.

**ಕ ಉದ್ಯಮೀ ನೃಪೇಷ್ವಿತಿ ಪ್ರಪೃಷ್ಟ ಆಹ ನಾರದಃ ।**
**ಸ ಸೌಭರಾಡ್ ವರಂ ಶಿವಾದವಾಪ ವೃಷ್ಣಿನಿರ್ಜಯಮ್ ॥ ೩೧೧ ॥**

**ಪದಚ್ಛೇದ :-** ಕಃ, ಉದ್ಯಮೀ, ನೃಪೇಷು, ಇತಿ, ಪ್ರಪೃಷ್ಟಃ, ಆಹ, ನಾರದಃ, ಸಃ, ಸೌಭರಾಟ್, ವರಂ, ಶಿವಾತ್, ಅವಾಪ, ವೃಷ್ಣಿನಿರ್ಜಯಂ ।

**ಅರ್ಥ :-** **ನೃಪೇಷು** = ರಾಜರುಗಳಲ್ಲಿ, **ಉದ್ಯಮೀ** = ಜಯಕ್ಕಾಗಿ ಪ್ರಯತ್ನಿಸುವವರು, **ಕಃ** = ಯಾರಿದ್ದಾರೆ, **ಇತಿ** = ಎಂದು, **ಪ್ರಪೃಷ್ಟಃ** = ಕೇಳಲ್ಪಟ್ಟ, **ನಾರದಃ** = ನಾರದರು, **ಆಹ** = ಹೇಳಿದರು, **ಸಃ** = ಆ, **ಸೌಭರಾಟ್** = ಸಾಲ್ವನು, **ಶಿವಾತ್** = ರುದ್ರನಿಂದ, (**ಪೂರ್ವಂ** = ಹಿಂದೆಯೇ), **ವರಂ** = ವರವನ್ನು, **ಅವಾಪ** = ಪಡೆದಿದ್ದನು, **ವೃಷ್ಣಿನಿರ್ಜಯಂ** = ರುಕ್ಮಿಣಿಯ ಹರಣದಲ್ಲಿ ಪಾರಾಜಯವನ್ನು (**ಪ್ರಾಪ್ಯ** = ಹೊಂದಿ).

**ತಾತ್ಪರ್ಯ :-** ಈ ರಾಜರುಗಳ ಮಧ್ಯದಲ್ಲಿ ಯಾವ ವ್ಯಕ್ತಿಯು ವಿಜಯಕ್ಕೆ ಪ್ರಯತ್ನಿಸುವನು ಎಂದು ಧರ್ಮರಾಜನು ಕೇಳಲು ನಾರದರು ಹೇಳಿದರು. ಸಾಲ್ವನು ಹಿಂದೆಯೇ ಶಿವನಿಂದ ವರವನ್ನು ಪಡೆದಿದ್ದರೂ ರುಕ್ಮಿಣಿಯ ಸ್ವಯಂವರ ಸಮಯದಲ್ಲಿ ಕೃಷ್ಣನಿಂದ ಸೋತನು.

**ಪಾಂಸುಮುಷ್ಟಿಂ ಸಕೃದ್‌ಗ್ರಾಸೀ ಬಹೂನಬ್ದಾಂಸ್ತಪಶ್ಚರನ್ ।**
**ಆಜಗಾಮ ಹರಾದಾಪ್ಯ ವರಂ ಕೃಷ್ಣಜಯೇ ಪುನಃ ॥ ೩೧೨ ॥**

**ಪದಚ್ಛೇದ :-** ಪಾಂಸುಮುಷ್ಟಿಂ, ಸಕೃತ್, ಗ್ರಾಸೀ, ಬಹೂನ್, ಅಬ್ದಾನ್, ತಪಃ, ಚರನ್, ಆಜಗಾಮ, ಹರಾತ್, ಆಪ್ಯ, ವರಂ, ಕೃಷ್ಣಜಯೇ, ಪುನಃ ।

**ಅರ್ಥ :-** (**ತತಃ** = ಅನಂತರ), **ಸಕೃತ್** = ದಿನಕ್ಕೊಮ್ಮೆ, **ಪಾಂಸುಮುಷ್ಟಿಂ** = ಮುಷ್ಟಿದೂಳನ್ನು ಮಾತ್ರ, **ಗ್ರಾಸೀ** = ತಿನ್ನುತ್ತಾ, **ಬಹೂನ್** = ಬಹಳ, **ವರ್ಷಾನ್** = ವರ್ಷಕಾಲ, **ತಪಃ** = ತಪಸ್ಸನ್ನು, **ಚರನ್** = ಮಾಡುತ್ತಾ, **ಕೃಷ್ಣಜಯೇ** = ಕೃಷ್ಣನ ಜಯದ ವಿಷಯದಲ್ಲಿ, **ಹರಾತ್** = ಶಿವನಿಂದ, **ವರಂ**

= ವರವನ್ನು, **ಆಪ್ಯ** = ಪಡೆದು, **ಪುನಃ** = ಮತ್ತೊಮ್ಮೆ, **ಅಜಗಾಮಃ** = ಬಂದಿರುವನು.

**ತಾತ್ಪರ್ಯ :-** ಹೀಗೆ ಕೃಷ್ಣನಿಂದ ಪರಾಜಿತನಾದರೂ ದಿನಕ್ಕೊಮ್ಮೆ ಮುಷ್ಟಿಯಷ್ಟು ದೂಳನ್ನು ಮಾತ್ರ ತಿನ್ನುತ್ತಾ ಅನೇಕ ವರ್ಷಗಳವರೆಗೆ ತಪಸ್ಸು ಮಾಡಿ ರುದ್ರನಿಂದ ಕೃಷ್ಣನನ್ನು ಜಯಿಸಬೇಕೆಂದು ವರ ಪಡೆದು ಮತ್ತೆ ಬಂದಿದ್ದಾನೆ.

**ಸ ಶ್ರುತ್ವಾ ಮಾಗಧವಧಂ ದಿಶಾಂ ವಿಜಯಮೇವ ಚ ।**
**ರಾಜಸೂಯಂ ಕ್ರತುಂ ಚೈವ ಶಿಶುಪಾಲವಧಂ ತಥಾ ॥ ೩೧೩ ॥**

**ಯದೂನ್ ಪ್ರತ್ಯುದ್ಯಮಂ ತೂರ್ಣಂ ಕರೋತೀತಿ ನಿಶಮ್ಯ ತತ್ ।**
**ಸಮೈಕ್ಷದ್ ಧರ್ಮಜಃ ಕೃಷ್ಣಮುಖಶೀತಾಂಶುಮಂಡಲಮ್ ॥ ೩೧೪ ॥**

**ಪದಚ್ಛೇದ :-** ಸಃ, ಶ್ರುತ್ವಾ, ಮಾಗಧವಧಂ, ದಿಶಾಂ, ವಿಜಯಂ, ಏವ, ಚ, ರಾಜಸೂಯಂ, ಕ್ರತುಂ, ಚ, ಏವ, ಶಿಶುಪಾಲವಧಂ, ತಥಾ, ಯದೂನ್, ಪ್ರತಿ ಉದ್ಯಮಂ, ತೂರ್ಣಂ, ಕರೋತಿ, ಇತಿ, ನಿಶಮ್ಯ, ತತ್, ಸಮೈಕ್ಷತ್, ಧರ್ಮಜಃ, ಕೃಷ್ಣಮುಖಶೀತಾಂಶುಮಂಡಲಂ।

**ಅರ್ಥ :-** **ಸಃ** = ಆ ಸಾಲ್ವನು, **ಮಾಗಧವಧಂ** = ಜರಾಸಂಧನ ವಧೆಯನ್ನು, **ಚ** = ಮತ್ತು, **ದಿಶಾಂ** = ದಿಕ್ಕುಗಳ, **ವಿಜಯಂ** = ವಿಜಯವನ್ನು, **ತಥಾ** = ಹಾಗೆಯೇ, **ರಾಜಸೂಯಂ ಕ್ರತುಂ** = ರಾಜಸೂಯ ಯಾಗವನ್ನು, **ಚ** = ಮತ್ತು, **ಶಿಶುಪಾಲವಧಂ** = ಶಿಶುಪಾಲನ ಸಂಹಾರವನ್ನೂ, **ಶ್ರುತ್ವಾ** = ಕೇಳಿ, **ಯದೂನ್ ಪ್ರತಿ** = ಯಾದವರನ್ನು ಕುರಿತು, **ತೂರ್ಣಂ** = ಬೇಗನೇ, **ಉದ್ಯಮಂ** = ಯುದ್ಧವನ್ನು, **ಕರೋತಿ** = ಮಾಡುತ್ತಾನೆ, **ಇತಿ** = ಈ ರೀತಿಯಾದ, **ತತ್** = ಮಾತನ್ನು, **ನಿಶಮ್ಯ** = ಕೇಳಿ, **ಧರ್ಮಜಃ** = ಧರ್ಮರಾಜನು, **ಕೃಷ್ಣಮುಖಶೀತಾಂಶುಮಂಡಲಂ** = ಕೃಷ್ಣನ ಮುಖಚಂದ್ರನನ್ನು, **ಸಮೈಕ್ಷತ್** = ಕಂಡನು.

**ತಾತ್ಪರ್ಯ :-** ನಂತರ ಆ ಸಾಲ್ವನು ಗುರುವಾದ ಜರಾಸಂಧನ ಸಂಹಾರ ಪಾಂಡವರ ದಿಗ್ವಿಜಯ, ರಾಜಸೂಯ ಯಾಗ, ಶಿಶುಪಾಲನ ವಧ ಇವನ್ನೆಲ್ಲಾ

ಕೇಳಿ ಯಾದವರ ಮೇಲೆ ಯುದ್ಧವನ್ನು ಮಾಡುವನು ಎಂಬುದನ್ನು ಕೇಳಿ ಧರ್ಮಜನು ಶ್ರೀಕೃಷ್ಣ ಮುಖಚಂದ್ರನನ್ನು ನೋಡಿದನು.

**ಅಸ್ತ್ವಿತ್ಯುಕ್ತ್ವಾ ಸ ಗೋವಿಂದಃ ಪ್ರೇಷಯಾಮಾಸ ಯಾದವಾನ್ ।**
**ಪ್ರದ್ಯುಮ್ನಾದೀನ್ ದಿನೈಃ ಕೈಶ್ಚಿತ್ ಸ್ವಯಂ ಚಾಗಾತ್ ಸಹಾಗ್ರಜಃ ॥ ೩೧೫ ॥**

ಪದಚ್ಛೇದ :- **ಅಸ್ತು, ಇತಿ, ಉಕ್ತ್ವಾ, ಸಃ, ಗೋವಿಂದಃ, ಪ್ರೇಕ್ಷಯಾಮಾಸ, ಯಾದವಾನ್, ಪ್ರದ್ಯುಮ್ನಾದೀನ್, ದಿನೈಃ, ಕೈಶ್ಚಿತ್, ಸ್ವಯಂ, ಚ, ಆಗಾತ್, ಸಹಾಗ್ರಜಃ ।**

**ಅರ್ಥ** :- **ಸಃ** = ಆ, **ಗೋವಿಂದಃ** = ಗೋಪಾಲಕನಾದ ಶ್ರೀಕೃಷ್ಣನು, **ಅಸ್ತು** = ಹಾಗೇ ಆಗಲಿ, **ಇತಿ** = ಎಂದು, **ಉಕ್ತ್ವಾ** = ಹೇಳಿ, **ಪ್ರದ್ಯುಮ್ನಾದೀನ್** = ಪ್ರದ್ಯುಮ್ನನೇ ಮೊದಲಾದ, **ಯಾದವಾನ್** = ಯಾದವರನ್ನು, **ಪ್ರೇಕ್ಷಯಾಮಾಸ** = ಕಳುಹಿಸಿಕೊಟ್ಟನು, **ಕೈಶ್ಚಿತ್ ದಿನೈಃ** = ಕೆಲವು ದಿನಗಳ ನಂತರ, **ಸ್ವಯಂ ಚ** = ತಾನೂ ಕೂಡ, **ಸಹಾಗ್ರಜಃ** = ಬಲರಾಮನೊಂದಿಗೆ, **ಆಗಾತ್** = ಹೋದನು.

ತಾತ್ಪರ್ಯ :- ಹಾಗೇ ಆಗಲೆಂದು ಕೃಷ್ಣನು ಹೇಳಿ ಪ್ರದ್ಯುಮ್ನನೇ ಮೊದಲಾದ ಯಾದವರನ್ನು ಮೊದಲು ಕಳುಹಿಸಿ ಕೊಟ್ಟು, ಬಲರಾಮನೊಂದಿಗೆ ಸ್ವಲ್ಪ ದಿನಗಳ ನಂತರ ತಾನೂ ಹೊರಟು ಹೋದನು.

### ದ್ಯೂತಕ್ಕಾಗಿ ಧರ್ಮರಾಜನ ಆಗಮನ

**ವಿದುರಸ್ತು ತತೋ ಗತ್ವಾ ಧರ್ಮರಾಜಮಥಾಽಹ್ವಯತ್ ।**
**ಭ್ರಾತೃಭಿರ್ವಾರ್ಯಮಾಣೋಽಪಿ ಕೃಷ್ಣಯಾ ಚ ಸ ಧರ್ಮರಾಟ್ ॥ ೩೧೬ ॥**

**ಸಾರ್ಧಂ ಮಾತ್ರಾ ಭ್ರಾತೃಭಿಶ್ಚ ಕೃಷ್ಣಯಾ ಚ ಯಯೌ ದ್ರುತಮ್ ॥೩೧೭॥**

ಪದಚ್ಛೇದ :- **ವಿದುರಃ, ತು, ತತಃ, ಗತ್ವಾ, ಧರ್ಮರಾಜಂ, ಅಥ, ಆಹ್ವಯತ್, ಭ್ರಾತೃಭಿಃ, ವಾರ್ಯಮಣಃ, ಅಪಿ, ಕೃಷ್ಣಯಾ, ಚ, ಸಃ, ಧರ್ಮರಾಟ್, ಸಾರ್ಧಂ, ಮಾತ್ರಾ, ಭ್ರಾತೃಭಿಃ, ಚ, ಕೃಷ್ಣಯಾ, ಚ, ಯಯೌ, ದ್ರುತಂ ।**

**ಅರ್ಥ** :- ತತಃ = ಅನಂತರ, ವಿದುರಃ ತು = ವಿದುರನಾದರೂ, **ಗತ್ವಾ** = ಹೋಗಿ, **ಧರ್ಮರಾಜಂ** = ಧರ್ಮರಾಜನನ್ನು, **ಆಹ್ವಯತ್** = ಕರೆದನು, **ಸಃ** = ಆ **ಧರ್ಮರಾಟ್** = ಧರ್ಮರಾಜನು, **ಭ್ರಾತೃಭಿಃ** = ಸಹೋದರರಿಂದ, **ಕೃಷ್ಣಯಾ ಚ** = ದ್ರೌಪದಿಯಿಂದಲೂ, **ವಾರ್ಯಮಾಣಃ ಅಪಿ** = ತಡೆಯಲ್ಪಟ್ಟವನಾದರೂ, **ಮಾತ್ರಾ** = ತಾಯಿಯಾದ ಕುಂತಿಯಿಂದ, **ಚ** = ಮತ್ತು, **ಭ್ರಾತೃಭಿಃ** = ತಮ್ಮಂದಿರಿಂದ, **ಕೃಷ್ಣಯಾ ಚ** = ದ್ರೌಪದಿಯಿಂದಲೂ, **ಸಾರ್ಧಂ** = ಕೂಡಿಕೊಂಡು, **ದ್ರುತಂ** = ಕೂಡಲೇ, **ಯಯೌ** = ಹೊರಟನು.

**ತಾತ್ಪರ್ಯ** :- ಧೃತರಾಷ್ಟ್ರನ ಮಾತುಗಳನ್ನು ಕೇಳಿದ ನಂತರ ಹಸ್ತಿನಾವತಿಯಿಂದ ಇಂದ್ರಪ್ರಸ್ಥಕ್ಕೆ ಹೋಗಿ ಧರ್ಮರಾಜನನ್ನು ಜೂಜಿಗಾಗಿ ಕರೆದನು. ಆದರೆ ಆ ಧರ್ಮರಾಜನು ಭೀಮಾದಿಗಳು ಹಾಗು ದ್ರೌಪದಿ ತಡೆದರೂ, ಕುಂತಿ ಹಾಗೂ ತಮ್ಮಂದಿರು ಮತ್ತು ದ್ರೌಪದಿಯಿಂದ ಸಹಿತನಾಗಿ ತಡಮಾಡದೇ ಕೂಡಲೇ ಹಸ್ತಿನಾವತಿಗೆ ಹೊರಟನು.

**ಜ್ಯೇಷ್ಠಾಜ್ಞಯೈವ ವಿದುರ ಆಹ್ವಯನ್ನಪಿ ಧರ್ಮಜಮ್ ।**
**ನಾಽಗಂತವ್ಯಮಿತಿ ಪ್ರಾಹ ದೋಷಾನುಕ್ತ್ವಾಽಕ್ಷಜಾನ್ ಬಹೂನ್ ॥ ೩೧೮ ॥**

**ಪದಚ್ಛೇದ** :- **ಜೇಷ್ಠಾಜ್ಞಯಾ, ಏವ, ವಿದುರಃ, ಆಹ್ವಯನ್, ಅಪಿ, ಧರ್ಮಜಂ, ನ, ಆಗಂತವ್ಯಂ, ಇತಿ, ಪ್ರಾಹ, ದೋಷಾನ್, ಉಕ್ತ್ವಾ, ಅಕ್ಷಜಾನ್, ಬಹೂನ್ ।**

**ಅರ್ಥ** :- **ವಿದುರಃ** = ವಿದುರನು, **ಜೇಷ್ಠಾಜ್ಞಯೈವ** = ಹಿರಿಯರ ಅಪ್ಪಣೆಯಿಂದಲೇ, **ಆಹ್ವಯನಪಿ** = ಜೂಜಿಗೆ ಕರೆದರೂ, **ಧರ್ಮಜಂ** = ಧರ್ಮರಾಜನನ್ನು ಕುರಿತು, **ಅಕ್ಷಜಾನ್** = ಜೂಜಿನ, **ಬಹೂನ್** = ಬಹಳವಾದ, **ದೋಷಾನ್** = ದೋಷಗಳನ್ನು, **ಉಕ್ತ್ವಾ** = ಹೇಳಿ, **ನಾಗಂತವ್ಯಮಿತಿ** = ಜೂಜಿಗಾಗಿ ಹಸ್ತಿನಾವತಿಗೆ ಬರಬಾರದೆಂದು, **ಪ್ರಾಹ** = ಹೇಳಿದನು.

**ತಾತ್ಪರ್ಯ** :- ವಿದುರನು ಇಂದ್ರಪ್ರಸ್ಥಕ್ಕೆ ಬಂದು ಧರ್ಮರಾಜನನ್ನು ಹಿರಿಯರ ಆಜ್ಞೆಯಂತೆ ಕರೆದನು. ಆದರೆ ಮನಸ್ಸಾರೆ ಧರ್ಮರಾಜನಿಗೆ ಜೂಜಿನಲ್ಲಿ ಇರುವ ದೋಷಗಳನ್ನು ತಿಳಿಸಿ, ಹಸ್ತಿನಾವತಿಗೆ ಬರಬಾರದೆಂದು ಹೇಳಿದನು.

**ಇತೀಹ ದೋಷಸಂಚಯಸ್ತಥಾಚ ತೇ ಪಿತುರ್ವಚಃ ।**
**ಸಮೀಕ್ಷ್ಯ ತದ್ ದ್ವಯಂ ಸ್ವಯಂ ಕುರುಷ್ವ ಕಾರ್ಯಮಾತ್ಮನಃ ॥ ೩೧೯ ॥**

**ಪದಚ್ಛೇದ :- ಇತಿ, ಇಹ, ದೋಷಸಂಚಯಃ, ತಥಾ, ಅಪಿ, ತೇ, ಪಿತೃವಚ, ಸಮೀಕ್ಷ್ಯ, ತತ್, ದ್ವಯಂ, ಸ್ವಯಂ, ಕುರುಶ್ವ, ಕಾರ್ಯಂ, ಆತ್ಮನಃ ।**

**ಅರ್ಥ** :- **ಇತಿ** = ಹೀಗೆ, **ಇಹ** = ಜೂಜಿನಲ್ಲಿ, **ದೋಷಸಂಚಯಃ** = ದೋಷಗಳ ಸಮೂಹವು, **ತಥಾಪಿ** = ಹಾಗಿದ್ದರೂ ಸಹ, **ತೇ** = ನಿನ್ನ, **ಪಿತೃವಚಃ** = ದೊಡ್ಡಪ್ಪನ ಮಾತನ್ನು, **ಸಮೀಕ್ಷ್ಯ** = ಆಲೋಚಿಸಿ, **ತದ್ದ್ವಯಂ** = ಆ ಎರಡರಲ್ಲಿ, **ಸ್ವಯಂ** = ನೀನೇ, **ಆತ್ಮನಃ** = ನಿನಗೆ, **ಕಾರ್ಯಂ** = ಮಾಡಲು ಯೋಗ್ಯವಾದದ್ದನ್ನು, **ಕುರುಶ್ವ** = ಮಾಡು.

**ತಾತ್ಪರ್ಯ** :- ವಿದುರನ್ನು ಜೂಜಿನಲ್ಲಿರುವ ಅನರ್ಥಗಳನ್ನು ವಿವರಿಸಿ ಹಾಗೆ ದೊಡ್ಡಪ್ಪನ ಆಜ್ಞೆ ಈ ಎರಡನ್ನು ನಿರೂಪಿಸಿ, ಧರ್ಮಜ್ಞನಾದ ಯುಧಿಷ್ಠಿರನಿಗೆ ಯೋಗ್ಯವಾದ ಕಾರ್ಯವನ್ನು ಮಾಡುವಂತೆ ಸೂಚಿಸುತ್ತಾನೆ.

**ಇತೀರಿತೋಽಪಿ ಪಾಂಡವೋ ಯಯೌ ಕಲಿಪ್ರವೇಶಿತಃ ।**
**ವಿಚಿತ್ರವೀರ್ಯಜಂ ಚ ತಂ ಸಮಾಸದತ್ ಸಸೈನಿಕಃ ॥ ೩೨೦ ॥**

**ಪದಚ್ಛೇದ :- ಇತಿ, ಈರಿತಃ, ಅಪಿ, ಪಾಂಡವಃ, ಯಯೌ, ಕಲಿಪ್ರವೇಶತಃ, ವಿಚಿತ್ರವೀರ್ಯಜಂ, ನೃಪಂ, ಸಮಾಸದತ್, ಸಸೈನಿಕಃ ।**

**ಅರ್ಥ** :- **ಇತಿ** = ಹೀಗೆ, **ಈರಿತೋಽಪಿ** = ವಿದುರನಿಂದ ಹೇಳಲ್ಪಟ್ಟರೂ, **ಕಲಿಪ್ರವೇಶತಃ** = ಕಲಿಯಿಂದ ಪ್ರವಿಷ್ಟನಾದ, **ಪಾಂಡವಃ** = ಧರ್ಮರಾಜನು, **ಸಸೈನಿಕಃ** = ಸೈನ್ಯದಿಂದ ಕೂಡಿದವನಾಗಿ, **ಯಯೌ** = ಹೋದನು, **ನೃಪಂ ವಿಚಿತ್ರವೀರ್ಯಜಂ** = ರಾಜನಾದ ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನನ್ನು, **ಸಮಾಸದತ್** = ಬಳಿಗೆ ಬಂದನು.

**ತಾತ್ಪರ್ಯ** :- ವಿದುರ ಹೀಗೆ ಹೇಳಿದರೂ, ಧರ್ಮರಾಜನು ಕಲಿಯಿಂದ ಆವಿಷ್ಟನಾದವನಾಗಿ ಸೈನ್ಯದಿಂದ ಕೂಡಿಕೊಂಡು ಹೊರಟನು. ರಾಜನಾದ ಧೃತರಾಷ್ಟ್ರನನ್ನು ಬಂದು ಸೇರಿದನು.

**ಕಲ್ಯಾವೇಶಾನ್ನೃಪತಿಃ ಪ್ರತಿಜಜ್ಞೇ ಪೂರ್ವಮೇವ ಧರ್ಮಾತ್ಮಾ ।**
**ಆಹೂತೋ ದ್ಯೂತರಣಾನ್ನಿವರ್ತೇಯಂ ನೈವ ವಾರಿತೋಽಪೀತಿ ॥೩೨೦॥**

ಪದಚ್ಛೇದ :- ಕಲ್ಯಾವೇಶಾತ್, ನೃಪತಿಃ, ಪ್ರತಿಜಜ್ಞೆ, ಪೂರ್ವಂ, ಏವ, ಧರ್ಮಾತ್ಮಾ, ಆಹತಃ, ದ್ಯುತರಣಾತ್, ನಿವರ್ತೇಯಂ, ನ, ಏವ, ವಾರಿತಃ, ಅಪಿ, ಇತಿ ।

**ಅರ್ಥ** :- **ಧರ್ಮಾತ್ಮಾ** = ಧರ್ಮಜ್ಞನಾದ ಆ, **ನೃಪತಿಃ** = ರಾಜಶ್ರೇಷ್ಠನಾದ ಯುಧಿಷ್ಠಿರನು, **ಕಲ್ಯಾವೇಶಾತ್** = ಕಲಿಯ ಆವೇಶದಿಂದ, **ಪೂರ್ವಂ ಏವ** = ಹಿಂದೇ, **ಪ್ರತಿಜಜ್ಞೆ** = ಪ್ರತಿಜ್ಞೆ ಮಾಡಿದ್ದನು, **ದ್ಯುತರಣಾತ್** = ದ್ಯೂತ ಯುದ್ಧಕ್ಕೆ, **ಆಹತಃ** = ಕರೆಯಲ್ಪಟ್ಟವನಾದರೆ, **ವಾರಿತೋ ಅಪಿ** = ತಡೆಯಲ್ಪಟ್ಟರೂ, **ನ ನಿವರ್ತೇಯಂ ಏವ** = ಹಿಂತಿರುಗುವುದೇ ಇಲ್ಲ, **ಇತಿ** = ಎಂದು.

**ತಾತ್ಪರ್ಯ** :- ಹಿಂದೆ ಕಲಿಯ ಆವೇಶದಿಂದ ಧರ್ಮಾತ್ಮನಾದ ಧರ್ಮರಾಜನು ಪ್ರತಿಜ್ಞೆ ಮಾಡಿದ್ದನು. ಜೂಜಿನ ಯುದ್ಧಕ್ಕೆ ಕರೆದರೆ ಯಾರು ತಡೆದರೂ ಹಿಂದಿರುಗುವುದಿಲ್ಲ ಎಂದು.

**ವಿಶೇಷ** :- ೧. ಆಹತೋ ನ ನಿವರ್ತೇಯಮಿತಿ ಮೇ ವ್ರತಮಾಹಿತಂ (ಸಭಾ ೮೪-೧೮) ॥ ೨. ಇದಂ, ವೈ ದೇವನಂ ಪಾಪಮ್ ॥

**ತೇನಾಽಯಾತ್ ಸ್ವಸುಹೃದ್ಭಿರ್ನಿವಾರ್ಯಮಾಣೋಽಪಿ ನಾಗಪುರಮಾಶು ।**
**ನಹಿ ಧರ್ಮೋ ದ್ಯೂತಕೃತೋ ವಿಶೇಷತಃ ಕ್ಷತ್ರಿಯಸ್ಯ ಲೋಕಗುರೋಃ ॥ ೩೨೨ ॥**

ಪದಚ್ಛೇದ :- ತೇನ, ಆಯಾತ್, ಸ್ವಸುಹೃದ್ಭಿಃ, ನಿವಾರ್ಯಮಾಣಃ, ನಾಗಪುರಂ, ಆಶು, ನ, ಹಿ, ಧರ್ಮ, ದ್ಯುತಕುತಃ, ವಿಶೇಷತಃ, ಕ್ಷತ್ರಿಯಸ್ಯ, ಲೋಕಗುರೋಃ ।

**ಅರ್ಥ** :- **ದ್ಯುತಕೃತಃ** = ಜೂಜಾಡುವಿಕೆಯು, **ವಿಶೇಷತಃ** = ವಿಶೇಷವಾಗಿ, **ಲೋಕಗುರೋಃ** = ಲೋಕಕ್ಕೆ ಗುರುವಾದ, **ಕ್ಷತ್ರಿಯಸ್ಯ** = ಕ್ಷತ್ರಿಯನಿಗೆ, **ನ ಹಿ ಧರ್ಮಃ** = ಧರ್ಮವಲ್ಲ, **ಇತಿ ನಿವಾರ್ಯಮಾಣಃ** = ಹೀಗೆ ತಡೆಯುತ್ತಿದ್ದರೂ, **ತೇನ** = ಆ ಧರ್ಮರಾಜನಿಂದ, **ಸ್ವಸುಹೃದ್ಭಿಃ** = ತನ್ನ ಬಂಧುಮಿತ್ರರೊಂದಿಗೆ, **ಆಶು** = ಬೇಗನೆ, **ನಾಗಪುರಂ** = ಹಸ್ತಿನಾವತಿಗೆ, **ಆಯಾತ್** = ಬಂದನು.

ತಾತ್ಪರ್ಯ :- 'ಜೂಜಾಡುವಿಕೆಯು ಮನುಷ್ಯರಿಗೆ ಧರ್ಮವಲ್ಲ. ವಿಶೇಷವಾಗಿ ಲೋಕಕ್ಕೆ ಗುರುವಾದ ನಿನಗೆ ಖಂಡಿತವಾಗಿಯೂ ಅಲ್ಲ' ಎಂದು ತಡೆಯುತ್ತಿದ್ದರು ಧರ್ಮರಾಜನು ತನ್ನ ಬಂಧುಮಿತ್ರರಿಂದ ಕೂಡಿಕೊಂಡು ಹಸ್ತಿನಾವತಿಗೆ ಬಂದನು.

ವೈಚಿತ್ರವೀರ್ಯತನಯೇನ ತು ಪಾಂಡುಪುತ್ರಾಃ
ಸಂಭಾವಿತಾಸ್ತಮುಪ ಚ ನ್ಯವಿಶನ್ ನಿಶಾಂ ತಾಮ್ ।
ಪ್ರಾತಶ್ಚ ಭೀಷ್ಮಮುಖರಾಃ ಸಕಲಾಶ್ಚ ಭೂಪಾ
ಆಸೇದುರಾಶು ಚ ಸಭಾಂ ಸಹ ಪಾಂಡುಪುತ್ರೈಃ ॥ ೩೨೩ ॥

ಪದಚ್ಛೇದ :- ವೈಚಿತ್ರವೀರ್ಯತನಯೇನ, ತು, ಪಾಂಡುಪುತ್ರಾಃ, ಸಂಭಾವಿತಾಃ, ತಂ, ಉಪ, ಚ, ನ್ಯವಸತ್, ನಿಶಾಯಾಂ, ಪ್ರಾತಃ, ತು, ಭೀಷ್ಮಮುಖರಾಃ, ಸಕಲಾಃ, ಚ, ಭೂಪಾಃ, ಆಸೆದುಃ, ಆಶು, ಚ, ಸಭಾಂ, ಸಹ, ಪಾಂಡುಪುತ್ರೈಃ ।

ಅರ್ಥ :- ಪಾಂಡುಪುತ್ರಾಃ = ಪಾಂಡವರು, ವೈಚಿತ್ರವೀರ್ಯತನಯೇನ = ಧೃತರಾಷ್ಟ್ರನಿಂದ, ಸಂಭಾವಿತಾಃ ತು = ಆದರಿಸಲ್ಪಟ್ಟವರಾಗಿ, ತಂ = ಆ ಧೃತರಾಷ್ಟ್ರನ, ಉಪ = ಬಳಿಯೇ, ನಿಶಾಯಾಂ = ರಾತ್ರಿಯಲ್ಲಿ, ನ್ಯವಸತ್ = ವಾಸಿಸಿದರು, ಪ್ರಾತುಃ ತು = ಬೆಳಗ್ಗೆಯಾದರು, ಭೀಷ್ಮಮುಖರಾಃ = ಭೀಷ್ಮ ಮೊದಲಾದವರು, ಚ = ಮತ್ತು, ಸಕಲಾಃ = ಎಲ್ಲಾ, ಭೂಪಾ ಚ = ರಾಜರುಗಳು, ಪಾಂಡುಪುತ್ರೈಃ ಸಹ = ಪಾಂಡವರೊಂದಿಗೆ, ಆಶು = ಬೇಗನೆ, ಸಭಾಂ = ಸಭೆಯಲ್ಲಿ, ಆಸೇದುಃ = ಸೇರಿದರು.

ತಾತ್ಪರ್ಯ :- ಧೃತರಾಷ್ಟ್ರನಿಂದ ಸತ್ಕರಿಸಲ್ಪಟ್ಟ ಪಾಂಡವರು ರಾತ್ರಿಯನ್ನು ಅಲ್ಲಿಯೇ ಕಳೆದರು. ಮರುದಿನ ಬೆಳಗ್ಗೆ ಭೀಷ್ಮ ಮೊದಲಾದ ರಾಜರು ಪಾಂಡವರೊಂದಿಗೆ ಬೇಗನೆ ಸಭೆಯನ್ನು ಸೇರಿದರು.

ವೈಚಿತ್ರವೀರ್ಯನೃಪತಿರ್ವಿದುರಾನ್ವಿತೋಽಸ್ಯ
ಗಾಂಧಾರರಾಜಸಹಿತಾಸ್ತನಯಾಃ ಸಕರ್ಣಾಃ ।
ಪ್ರಾಪ್ತಾಃ ಸಭಾತಳಮಥಾಽಹ್ವಯದತ್ರ ಧರ್ಮ-
ರಾಜಂ ಸುತಃ ಸುಬಲಕಸ್ಯ ಸ ದೇವನಾಯ ॥ ೩೨೪ ॥

ಪದಚ್ಛೇದ :- ವೈಚಿತ್ರವೀರ್ಯನೃಪತಿಃ, ವಿದುರಾನ್ವಿತಃ, ಅಸ್ಯ, ಗಾಂಧಾರರಾಜಸಹಿತಾಃ, ತನಯಾಃ, ಸಕರ್ಣಾಃ, ಪ್ರಾಪ್ತಾಃ, ಸಭಾತಲಂ, ಅಥ, ಆಹ್ವಯತ್, ಅತ್ರ, ಧರ್ಮರಾಜಂ, ಸುತಃ, ಸುಬಲಕಸ್ಯ, ಸಃ, ದೇವನಾಯ ।

ಅರ್ಥ :- ವಿದುರಾನ್ವಿತಃ = ವಿದುರನಿಂದ ಅನುಸರಿಸಲ್ಪಟ್ಟ, ವೈಚಿತ್ರವೀರ್ಯನೃಪತಿಃ = ಧೃತರಾಷ್ಟ್ರನು, ಗಾಂಧಾರರಾಜಸಹಿತಾಃ = ಗಾಂಧಾರ ರಾಜನಿಂದ ಕೂಡಿದವರಾಗಿ, ಸಭಾತಲಂ = ಸಭೆಯನ್ನು ಕುರಿತು, ಪ್ರಾಪ್ತಾಃ = ಬಂದರು, ಸಕರ್ಣಾಃ = ಕರ್ಣನಿಂದ ಕೂಡಿದ, ತನಯಾಃ = ಮಕ್ಕಳು, ಸಭಾತಲಂ = ಸಭೆಯನ್ನು ಕುರಿತು, ಪ್ರಾಪ್ತಾಃ = ಬಂದರು, ಅಥ = ಅನಂತರ, ಸಃಸುಬಲಕಸ್ಯಸುತಃ = ಸುಬಲಕ ರಾಜನ ಮಗನಾದ ಶಕುನಿಯು, ಅತ್ರ = ಈ ಸಭೆಯಲ್ಲಿ, ಧರ್ಮರಾಜಂ = ಧರ್ಮರಾಜನನ್ನು, ದೇವನಾಯ = ಜೂಜಿಗಾಗಿ, ಆಹ್ವಯತ್ = ಕರೆದನು.

ತಾತ್ಪರ್ಯ :- ರಾಜನಾದ ಧೃತರಾಷ್ಟ್ರನು ಗಾಂಧಾರ ರಾಜ ವಿದುರಾದಿಗಳಿಂದಲೂ ಹಾಗು ಕೌರವರು ಕರ್ಣಾದಿಗಳಿಂದಲೂ ಕೂಡಿಕೊಂಡು ಸಭೆಗೆ ಬಂದನು. ಶಕುನಿಯು ಧರ್ಮರಾಜನನ್ನು ದ್ಯೂತಕ್ಕೆ ಕರೆದನು.

ಸರ್ವಾಂಶ್ಚ ತತ್ರ ಕಲಿರಾವಿಶದೇವ ಭೀಮ-
ಪೂರ್ವಾನ್ ವಿನೈವ ಚತುರಃ ಸಪೃಥಾಂ ಚ ಕೃಷ್ಣಾಮ್ ।
ಕ್ಷತ್ತಾರಮೇವ ಚ ತತೋ ನಹಿ ಭೀಷ್ಮಮುಖ್ಯೈ-
ಸ್ತೇ ವಾರಿತಾಃ ಕುಲವಿನಾಶನಕರ್ಮವೃತ್ತಾಃ ॥ ೩೨೫ ॥

ಪದಚ್ಛೇದ :- ಸರ್ವಾನ್, ಚ, ತತ್ರ, ಕಲಿ, ಆವಿಶತ್, ಏವ, ಭೀಮಃ, ಪೂರ್ವಾನ್, ವಿನ, ಏವ, ಚತುರಃ, ಸಪೃಥಾಂ, ಚ, ಕೃಷ್ಣಾಂ, ಕ್ಷತ್ತಾರಂ, ಏವ, ಚ, ತತಃ, ನ, ಹಿ, ಭೀಷ್ಮಮುಖ್ಯೈಃ, ತೇ, ವಾರಿತಾಃ, ಕುಲವಿನಾಶನಕರ್ಮವೃತ್ತಾಃ ।

ಅರ್ಥ :- ತತ್ರ = ಅಲ್ಲಿ, ಭೀಷ್ಮಪೂರ್ವಾನ್ = ಭೀಮನೇ ಮೊದಲಾದ, ಚತುರಃ = ನಾಲ್ವರು, ಚ = ಮತ್ತು, ಸಪೃಥಾಂ = ಕುಂತಿಯಿಂದ ಕೂಡಿದ, ಕೃಷ್ಣಾಂ = ದ್ರೌಪದಿಯನ್ನು, ವಿನಾ = ಹೊರತುಪಡಿಸಿ, ಸರ್ವಾನ್ = ಉಳಿದೆಲ್ಲರನ್ನೂ, ಕಲಿಃ ಏವ = ಕಲಿಯೇ, ಆವಿಶತ್ = ಆವೇಶಿಸಿದ್ದನ್ನು, ತತಃ

= ಆದ್ದರಿಂದಲೇ, **ಕುಲವಿನಾಶನಕರ್ಮವೃತ್ತಾಃ** = ಕುಲನಾಶಕವಾದ ಕರ್ಮದಲ್ಲಿ ಪ್ರವೃತ್ತರಾದ, **ಕ್ಷತ್ತಾರಂ** = ಕ್ಷತ್ರಿಯರನ್ನು, **ತೇ** = ಆ, **ಭೀಷ್ಮಮುಖ್ಯೈಃ** = ಭೀಷ್ಮ ಮುಂತಾದವರು, **ನ ವಾರಿತಾಃ** = ತಡೆಯಲಿಲ್ಲ.

**ತಾತ್ಪರ್ಯ** :- ಆ ಸಭೆಯಲ್ಲಿ ಭೀಮ ಮೊದಲಾದ ನಾಲ್ವರಿಗೆ ಕುಂತಿ ಹಾಗೂ ದ್ರೌಪದಿ ಹೊರತಾಗಿ ಎಲ್ಲರಿಗೂ ಕಲಿಯ ಆವೇಶವಾಗಿತ್ತು. ಆದ್ದರಿಂದಲೇ ಆ ರಾಜರು ಕುಲವನ್ನು ನಾಶಮಾಡುವ ಕರ್ಮದಲ್ಲಿ ಪ್ರವೃತ್ತರಾದರೂ ಭೀಷ್ಮಾದಿಗಳೂ ತಡೆಯಲಿಲ್ಲ.

**ಭೀಮಾದಿಭಿಃ ಸ ವಿದುರೇಣ ಚ ವಾರ್ಯಮಾಣೋ**
**ದ್ಯೂತೇ ನಿಧಾಯ ಪಣಮಪ್ಯಖಿಲಂ ಸ್ವವಿತ್ತಮ್ ।**
**ಗಾಂಧಾರಕೇಣ ವಿದಿತಾಕ್ಷಹೃದಾ ಜಿತೋ ದ್ರಾಕ್**
**ಪಾಂಡೋಃ ಸುತೋಽಥ ನಕುಲಂ ನ್ಯದಧಾತ್ ಪಣಾಯ ॥ ೩೨೬ ॥**

**ಪದಚ್ಛೇದ** :- **ಭೀಮಾದಿಭಿಃ, ಸಃ, ವಿದುರೇಣ, ಚ, ವಾರ್ಯಮಾಣಃ, ದ್ಯೂತೇ, ನಿಧಾಯ, ಪಣಂ, ಅಪಿ, ಅಖಿಲಂ, ಸ್ವವಿತ್ತಂ, ಗಾಂಧಾರಕೇಣ, ವಿದಿತಾಕ್ಷಹೃದಾ, ಜಿತಃ, ದ್ರಾಕ್, ಪಾಂಡೋಃ, ಸುತಃ, ಅಥ, ನಕುಲಂ, ನ್ಯದಧಾತ್, ಪಣಾಯ ।**

**ಅರ್ಥ** :- **ಸಃ** = ಆ ಧರ್ಮರಾಜನು, **ಭೀಮಾದಿಭಿಃ** = ಭೀಮನೇ ಮೊದಲಾದವರದಿಂದ, **ಚ** = ಮತ್ತು, **ವಿದುರೇಣ** = ವಿದುರನಿಂದ, **ವಾರ್ಯಮಾಣೋಽಪಿ** = ತಡೆಯುತ್ತಿದ್ದರೂ, **ಅಖಿಲಂ** = ಎಲ್ಲಾ, **ಸ್ವವಿತ್ತಂ** = ತನ್ನ ಸಂಪತ್ತನ್ನು, **ದ್ಯೂತೇ** = ಜೂಜಿನಲ್ಲಿ, **ಪಣಂ** = ಪಣವನ್ನಾಗಿ, **ನಿಧಾಯ** = ಇಟ್ಟು, **ವಿದಿತಾಕ್ಷಹೃದಾ** = ತಿಳಿಯಲ್ಪಟ್ಟ ಅಕ್ಷ ವಿದ್ಯೆಯುಳ್ಳ, **ಗಾಂಧಾರಕೇಣ** = ಶಕುನಿಯಿಂದ, **ದ್ರಾಕ್** = ಬೇಗನೆ, **ಜಿತಃ** = ಗೆಲ್ಪಟ್ಟಿತ್ತು, **ಅಥ** = ಅನಂತರ, **ಪಾಂಡೋಃ** = ಪಾಂಡುರಾಜನ, **ಸುತಃ** = ಮಗನಾದ ಧರ್ಮರಾಜನು, **ನಕಲಂ** = ನಕುಲನನ್ನು, **ಪಣಾಯ** = ಪಣಕ್ಕಾಗಿ, **ನ್ಯದಧಾತ್** = ಇಟ್ಟನು.

**ತಾತ್ಪರ್ಯ** :- ಭೀಮ, ವಿದುರು ಮುಂತಾದಪವರು ಧರ್ಮರಾಜನನ್ನು ತಡೆಯುತ್ತಿದ್ದರೂ ತನ್ನ ಎಲ್ಲಾ ಸಂಪತ್ತನ್ನು ಪಣವನ್ನಾಗಿಸಿ ಜೂಜಿನಲ್ಲಿ ಕುಶಲನಾದ ಶಕುನಿಯಿಂದ ಗೆಲ್ಪಟ್ಟಿತು. ಪುನಃ ಧರ್ಮರಾಜನು ನಕುಲನನ್ನು ಪಣವಾಗಿಸಿದನು.

ತಸ್ಮಿನ್ ಜಿತೇಽಥ ಸಹದೇವಮಥಾರ್ಜುನಂ ಚ
ಭೀಮಂ ಚ ಸೋಮಕಸುತಾಂ ಸ್ವಮಪಿ ಕ್ರಮೇಣ ।
ರಾಜಾ ನಿಧಾಯ ವಿಜಿತೋಽಥ ಸುಯೋಧನಃ ಸ್ವಂ
ಸೂತಂ ದಿದೇಶ ಪೃಷತಾತ್ಮಜಪುತ್ರಿಕಾಯಾಃ ॥ ೩೨೭ ॥

ಪದಚ್ಛೇದ :- ತಸ್ಮಿನ್, ಜಿತೇ, ಅಥ, ಸಹದೇವಂ, ಅಥ, ಅರ್ಜುನಂ, ಚ, ಭೀಮಂ, ಚ, ಸೋಮಕಸುತಾಂ, ಸ್ವಂ, ಅಪಿ, ಕ್ರಮೇಣ, ರಾಜಾ, ನಿಧಾಯ, ವಿಜಿತಃ, ಅಥ, ಸುಯೋಧನಃ, ಸ್ವಂ, ಸುತಂ, ದಿದೇಶ, ಪೃಷತಾತ್ಮಜಪುತ್ರಿಕಾಯಾಃ ।

**ಅರ್ಥ** :- **ರಾಜಾ** = ರಾಜನಾದ ಧರ್ಮರಾಜನು, **ತಸ್ಮಿನ್** = ಆ ನಕುಲನನ್ನು, **ಜಿತೇ** = ಗೆಲ್ಲಲ್ಪಡಲು, **ಅಥ** = ಅನಂತರ, **ಸಹದೇವಂ** = ಸಹದೇವನನ್ನು, **ಅರ್ಜುನಂ ಚ** = ಅರ್ಜುನನ್ನೂ, **ಭೀಮಂ** = ಭೀಮನನ್ನೂ, **ಸೋಮಕಸುತಾಂ** = ದ್ರೌಪದಿಯನ್ನೂ, **ಸ್ವಮಪಿ** = ತನ್ನನ್ನೂ, **ಕ್ರಮೇಣ** = ಕ್ರಮವಾಗಿ, **ನಿಧಾಯ** = ಜೂಜಿನಲ್ಲಿ ಇಟ್ಟ, **ವಿಜಿತಃ** = ಸೋತನು, **ಅಥ** = ಅನಂತರ, **ಸುಯೋಧನಃ** = ದುರ್ಯೋಧನನು, **ಸ್ವಂಸೂತಂ** = ತನ್ನ ಸೇವಕನನ್ನು, **ಪೃಷತಾತ್ಮಜಪುತ್ರಿಕಾಯಾಃ (ಸಮೀಪೇ)** = ದ್ರೌಪದಿಯ (ಹತ್ತಿರ), **ದಿದೇಶ** = ಕಳುಹಿಸಿದನು.

**ತಾತ್ಪರ್ಯ** :- ಧರ್ಮರಾಜನು ನಕುಲ, ಸಹದೇವ, ಅರ್ಜುನ, ಭೀಮ, ದ್ರೌಪದೀ ಹಾಗೂ ತನ್ನನ್ನೂ ಸಹ ಕ್ರಮವಾಗಿ ಪಣದಲ್ಲಿ ಇಟ್ಟು ಸೋತನು. ಅನಂತರ ದುರ್ಯೋಧನನು ತನ್ನ ಸೇವಕನನ್ನು ದ್ರೌಪದಿಯ ಬಳಿ ಕಳುಹಿಸಿದನು.

ಸೂತೋ ಗತ್ವಾ ತದಂತಂ
ಸಮಕಥಯದಿಮಾಂ ದ್ಯೂತಮಧ್ಯೇ ಜಿತಾಽಸಿ
ಕ್ಷಿಪ್ರಂ ಚಾಽಯಾಹಿ ರಾಜ್ಞಾಂ
ಸಮಿತಿಮುರುತರಾಮಿತ್ಯಥೋ ಸಾಽಪ್ಯವಾದೀತ್ ।
ನಾಹಂ ಯಾಸ್ಯೇ ಗುರೂಣಾಂ
ಸಮಿತಿಮಿತಿ ಯಯೌ ಸೋಽಪ್ಯಮುಂ ಭೀಮಭೀತಂ
ಜ್ಞಾತ್ವಾ ದುಃಶಾಸನಂ ಸೋಽ-
ಪ್ಯದಿಶದಥ ನೃಪೋ ಧಾರ್ತರಾಷ್ಟ್ರೋಽನುಜಂ ಸ್ವಮ್ ॥ ೩೨೮ ॥

**ಪದಚ್ಛೇದ :-** ಸೂತಃ, ಗತ್ವಾ, ತತ್, ಅಂತಂ, ಸಮಕಥಯತ್, ಇಮಾಂ, ದ್ಯೂತಮಧ್ಯೇ, ಜಿತಾ, ಅಸಿ, ಕ್ಷಿಪ್ರಂ, ಚ, ಆಯಾಹಿ, ರಾಜ್ಞಾಂ, ಸಮಿತಿಂ, ಉರುತರಾಂ, ಇತಿ, ಅಧಃ, ಸಾ, ಅಪಿ, ಅವಾದೀತ್, ನ, ಅಹಂ, ಯಾಸ್ಯೇ, ಗುರೂಣಾಂ, ಸಮಿತಿಂ, ಇತಿ, ಯಯೌ, ಸಃ, ಅಪಿ, ಅಮುಂ, ಭೀಮಭೀತಂ, ಜ್ಞಾತ್ವಾ, ದುಃಶಾಸನಂ, ಸಃ, ಅಪಿ, ಆದಿಶತ್, ಅಥ, ನೃಪಃ, ಧಾರ್ತ್ಯರಾಷ್ಟ್ರಃ, ಅನುಜಂ, ಸ್ವಂ ।

**ಅರ್ಥ :-** **ಸೂತಃ** = ಸೇವಕನು, **ತದಂತಂ** = ಆ ದ್ರೌಪದಿಯ ಬಳಿಗೆ, **ಗತ್ವಾ** = ಹೋಗಿ, **ದ್ಯೂತಮಧ್ಯೇ** = ಜೂಜಿನ ಮಧ್ಯದಲ್ಲಿ, **ಜಿತಾಸಿ** = ಗೆಲ್ಲಲ್ಪಟ್ಟಿರುವಿ, **ಕ್ಷಿಪ್ರಂ** = ಬೇಗನೆ, **ಇಮಾಂ** = ಈ, **ಉರೂತರಾಂ ಚ** = ದೊಡ್ಡದಾದ, **ರಾಜ್ಞಾಂ** = ರಾಜರ, **ಸಮಿತಿಂ** = ಸಭೆಯನ್ನು ಕುರಿತು, **ಆಯಾಹಿ** = ಬಾ, **ಇತಿ** = ಎಂದು, **ಸಮಕಥಯತ್** = ಹೇಳಿದನು, **ಅಥ** = ಅನಂತರ, **ಸಾಪಿ** = ದ್ರೌಪದಿಯಾದರೂ, **ಗುರುಣಾಂ** = ಹಿರಿಯರ, **ಸಮಿತಿಂ** = ಸಭೆಯನ್ನು ಕುರಿತು, **ಅಹಂ** = ನಾನು, **ನ ಯಾಸ್ಯೇ** = ಬರುವುದಿಲ್ಲ, **ಇತಿ** = ಎಂದು, **ಅವಾದೀತ್** = ಹೇಳಿದಳು, **ಸೋಽಪಿ** = ಅವನಾದರೂ, **ಯಯೌ** = ಹೋದನು, **ಅಥ** = ಅನಂತರ, **ಸಃ ನೃಪಃ ಧಾರ್ತರಾಷ್ಟ್ರಃ** = ಆ ರಾಜನಾದ ದುರ್ಯೋಧನನು, **ಅಮುಂ** = ಈ ಸೇವಕನು, **ಭೀಮಭೀತಂ** = ಭೀಮನಿಂದ ಹೆದರಿದ್ದಾನೆ, **ಇತಿ** = ಎಂದು, **ಜ್ಞಾತ್ವಾ** = ತಿಳಿದು, **ಸ್ವಂ** = ತನ್ನ, **ಅನುಜಂ** = ತಮ್ಮನಾದ, **ದುಃಶಾಸನಂ ಅಪಿ** = ದುಃಶಾಸನನನ್ನು, **ಆದಿಶತ್** = ಆದೇಶಿಸಿದನು.

**ತಾತ್ಪರ್ಯ :-** ಆ ಸೂತನು ದ್ರೌಪದಿಯ ಬಳಿ ಹೋಗಿ ನಡೆದೆಲ್ಲಾ ವೃತ್ತಾಂತವನ್ನು ತಿಳಿಸಿ ಸಭೆಗೆ ಬರಲು ಹೇಳಿದನು. ದ್ರೌಪದಿಯು ಹಿರಿಯರ ಸಭೆಗೆ ತಾನು ಬರಲಾರೆ ಎಂದು ಹೇಳಿ ಕಳುಹಿಸಿದಳು. ಆ ಸೂತನು ಬಂದದ್ದನ್ನು ಕಂಡು ಇವನು ಭೀಮನಿಗೆ ಹೆದರಿದ್ದಾನೆಂದು ದುರ್ಯೋಧನನು ತಿಳಿದು ತಮ್ಮನಾದ ದುಃಶಾಸನನಿಗೆ ಕರೆತರಲು ಹೇಳಿದನು.

**ಸ ಪಾಪಪೂರುಷೋತ್ತಮಃ ಪ್ರಗೃಹ್ಯ ಕೇಶಪಕ್ಷಕೇ ।**
**ಪುರಃ ಸ್ವಮಾತುರಾನಯತ್ ಸಭಾಮಯುಗ್ಮವಾಸಸೀಮ್ ॥ ೩೨ ॥**

ಪದಚ್ಛೇದ :- ಸಃ, ಪಾಪಪುರುಷೋತ್ತಮಃ, ಪ್ರಗೃಹ್ಯ, ಕೇಶಪಕ್ಷಕೇ, ಪುರಾ, ಸ್ವಮಾತುಃ, ಆನಯತ್, ಸಭಾಂ, ಅಯುಗ್ಮವಾಸಸೀಂ।

ಅರ್ಥ :- ಸಃ = ಆ, ಪಾಪಪುರುಷೋತ್ತಮಃ = ಪಾಪಿಗಳಲ್ಲಿ ಶ್ರೇಷ್ಠನಾದ ದುಃಶಾಸನನು, ಸ್ವಮಾತುಃ = ತನ್ನ ತಾಯಿಯ, ಪುರಃ = ಎದುರೇ, ಅನುಗ್ಮವಾಸಸೀಂ = ಏಕವಸ್ತ್ರಧಾರಿಯಾದ ದ್ರೌಪದಿಯ, ಕೇಶವಕ್ಷಕೇ = ಕೇಶಪಾಶದಲ್ಲಿ, ಪ್ರಗೃಹ್ಯ = ಹಿಡಿದು, ಸಭಾಂ = ಸಭೆಯನ್ನು ಕುರಿತು, ಆನಯತ್ = ಕರೆತಂದನು.

ತಾತ್ಪರ್ಯ :- ಪಾಪಿಶ್ರೇಷ್ಠ ದುಃಶಾಸನನು ತನ್ನ ತಾಯಿಯ ಎದುರಿನಲ್ಲಿಯೇ ಏಕವಸ್ತ್ರಧಾರಿಯಾದ ದ್ರೌಪದಿಯ ಕೇಶಪಾಶಗಳನ್ನು ಹಿಡಿದು ಸಭೆಗೆ ತಂದನು.

**ಸಮಾಹೃತಾ ರಜಸ್ವಲಾ ಜಗಾದ ಭೀಷ್ಮಪೂರ್ವಕಾನ್ ।**
**ಅಧರ್ಮ ಏಷ ವಾರ್ಯತೇ ನ ಧರ್ಮಿಭಿರ್ಭವದ್ವಿಧೈಃ ॥ ೩೩೦ ॥**

ಪದಚ್ಛೇದ :- ಸಮಾಹೃತಾ, ರಜಸ್ವಲಾ, ಜಗಾದ, ಭೀಷ್ಮಪೂರ್ವಕಾನ್, ಅಧರ್ಮಃ, ಏಷಃ, ವಾರ್ಯತೇ, ನ, ಧರ್ಮಿಭಿಃ, ಭವದ್ವಿಧೈಃ।

ಅರ್ಥ :- ಸಮಾಹೃತಾ = ಕರೆತಂದ, ರಜಸ್ವಲಾ = ರಜಸ್ವಲೆಯಾದ ದ್ರೌಪದಿಯು, ಭೀಷ್ಮಪೂರ್ವಕಾನ್ = ಭೀಷ್ಮ ಮೊದಲಾದವರನ್ನು ಕುರಿತು, ಏಷಃ = ಇದು, ಅಧರ್ಮಃ = ಅಧರ್ಮವು, ಧರ್ಮಿಭಿಃ = ಧರ್ಮಿಷ್ಠರಾದ, ಭವದ್ವಿಧೈಃ = ನಿಮ್ಮಂದ, ನ ವಾರ್ಯತೇ = ತಡೆಯುವುದಿಲ್ಲವೇ, (ಇತಿ) ಜಗಾದ = ಹೇಳಿದಳು.

ತಾತ್ಪರ್ಯ :- ಸಭೆಗೆ ತಂದ ರಜಸ್ವಲೆಯಾದ ದ್ರೌಪದಿಯು ಭೀಷ್ಮಾದಿಗಳನ್ನು ಕುರಿತು ಇದು ಅಧರ್ಮ, ನಿಮ್ಮಂಥ ಧಾರ್ಮಿಕರು ಇದನ್ನು ತಡೆಯುತ್ತಿಲ್ಲ ಏಕೆ? ಎಂದು ಆಕ್ಷೇಪಿಸಿದಳು.

**ಕಥಂ ಛಲಾತ್ಮಕೇ ದ್ಯೂತೇ ಜಿತೇ ಧರ್ಮಜಯೋ ಭವೇತ್ ।**
**ನಹಿ ದ್ಯೂತಂ ಧರ್ಮ್ಯಮಾಹುರ್ವಿಶೇಷೇಣ ತು ಭೂಭುಜಾಮ್ ॥೩೩೧॥**

ಪದಚ್ಛೇದ :– ಕಥಂ, ಛಲಾತ್ಮಕೇ, ದ್ಯೂತೇ, ಜಿತೇ, ಧರ್ಮಜಯಃ, ಭವೇತ್, ನ, ಹಿ, ದ್ಯೂತಂ, ಧರ್ಮಂ, ಆಹುಃ, ವಿಶೇಷೇಣ, ಚ, ಭೂಭುಜಾಂ ।

**ಅರ್ಥ** :- **ಛಲಾತ್ಮಕೇ** = ಮೋಸದಿಂದ ಕೂಡಿದ, **ದ್ಯೂತೇ** = ಜೂಜಿನಲ್ಲಿ, **ಜಿತೇ** = ಜಯಿಸಿದರೆ, **ಧರ್ಮಜಯಃ** = ಧರ್ಮದಿಂದ ಜಯಿಸಿದ್ದು, **ಕಥಂ ಭವೇತ್** = ಹೇಗಾದೀತು, **ದ್ಯೂತಂ** = ಜೂಜು, **ವಿಶೇಷೇಣ** = ವಿಶೇಷನಾಗಿ, **ಭೂಭುಜಾಂ** = ರಾಜರಿಗೆ, **ನ ಧರ್ಮಂ** = ಧರ್ಮವಲ್ಲವೆಂದು, **ಆಹುಃ ಹಿ** = ಹೇಳುತ್ತಾರಲ್ಲವೆ.

**ತಾತ್ಪರ್ಯ** :- ಕಪಟದಿಂದ ಆಡಿಗೆದ್ದ ಜೂಜು ಹೀಗೆ ನ್ಯಾಯವಾದ ಗೆಲುವಾದೀತು? ಜೂಜು ವಿಶೇಷವಾಗಿ ಕ್ಷತ್ರಿಯರಿಗೆ ಧರ್ಮಾಚರಣೆ ಅಲ್ಲ ಎಂದು ಜ್ಞಾನಿಗಳು ಹೇಳುತ್ತಾರಲ್ಲವೆ.

**ಯೇ ಧರ್ಮಂ ನ ವದಂತೀಹ ನ ತೇ ವೃದ್ಧಾ ಇತೀರಿತಾಃ ।**
**ಅವೃದ್ಧಮಂಡಿತಾಂ ನೈವ ಸಭೇತ್ಯಾಹುರ್ಮನೀಷಿಣಃ ॥ ೩೩೨ ॥**

ಪದಚ್ಛೇದ :– ಯೇ, ಧರ್ಮಂ, ನ, ವದಂತಿ, ಇಹ, ನ, ತೇ, ವೃದ್ಧಾಃ, ಇತಿ, ಈರಿತಾಃ, ಅವೃದ್ಧಮಂಡಿತಾಂ, ನ, ಏವ, ಸಭಾ, ಇತಿ, ಅಹುಃ, ಮನೀಷಿಣಃ ।

**ಅರ್ಥ** :- **ಇಹ** = ಈ ಸಭೆಯಲ್ಲಿ, **ಯೇ** = ಯಾರು, **ಧರ್ಮಂ** = ಧರ್ಮವನ್ನು, **ನ ವದಂತಿ** = ಹೇಳುವುದಿಲ್ಲವೋ, **ತೇ** = ಅವರು, **ವೃದ್ಧಾಃ ಇತಿ** = ವೃದ್ಧರೆಂದು (ಜ್ಞಾನಿ), **ನ ಈರಿತಾಃ** = ಕರೆಯಲ್ಪಡುವುದಿಲ್ಲ, **ಅವೃದ್ಧಮಂಡಿತಾಂ** = ವೃದ್ಧರಿಲ್ಲದ್ದು, **ನ ಸಭಾ** = ಸಭೆಯಲ್ಲಿ, **ಇತಿ** = ಎಂದು, **ಮನೀಷಿಣಃ ಏವ** = ಜ್ಞಾನಿಗಳೇ, **ಆಹುಃ** = ಹೇಳುತ್ತಾರೆ.

**ತಾತ್ಪರ್ಯ** :- ಸಭೆಯಲ್ಲಿ ಯಾರು ಧರ್ಮವನ್ನು ಹೇಳುವುದಿಲ್ಲವೋ ಅವರು ವೃದ್ಧರು (ಜ್ಞಾನಿಗಳು) ಅಲ್ಲ. ವೃದ್ಧರು ಇಲ್ಲದ್ದು ಸಭೆಯೇ ಅಲ್ಲ ಎಂದು ಜ್ಞಾನಿಗಳು ಹೇಳುತ್ತಾರೆ.

**ಕಥಂ ದ್ಯೂತೇ ಜಿತಾ ಚಾಹಮಜಿತೇ ಸ್ವಪತೌ ಸ್ಥಿತೇ ।**
**ಸಮಾನಧರ್ಮಿಣೀಮಾಹುರ್ಭಾರ್ಯಾಂ ಯಸ್ಮಾದ್ ವಿಪಶ್ಚಿತಃ ॥ ೩೩೩ ॥**

ಪದಚ್ಛೇದ :- ಕಥಂ, ದ್ಯುತೇ, ಜಿತಾ, ಚ, ಅಹಂ, ಅಜಿತೇ, ಸ್ವಪತೌ, ಸ್ಥಿತೇ, ಸಮಾನಧರ್ಮಿಣೀಂ, ಆಹು, ಭಾರ್ಯಾಂ, ಯಸ್ಮಾತ್, ವಿಪಶ್ಚಿತಃ ।

**ಅರ್ಥ** :- **ಅಹಂ** = ನಾನು, **ದ್ಯುತೇ** = ಜೂಜಿನಲ್ಲಿ, **ಕಥಂ ಜಿತಾ** = ಹೇಗೆ ಪರಾಜಿತಳಾದೆ?, **ಸ್ವಪತೌ** = ನನ್ನ ಗಂಡಂದಿರು, **ಅಜಿತೇ ಸ್ಥಿತೇ** = ಪರಾಜಿತನಾಗಿರುವಾಗ, **ಯಸ್ಮಾತ್** = ಯಾವ ಕಾರಣದಿಂದ, **ಭಾರ್ಯಾಂ** = ಹೆಂಡತಿಯನ್ನು, **ಸಮಾನಧರ್ಮಿಣೀಂ** = ಸಹಧರ್ಮಿಣೀ ಎಂದು, **ವಿಪಶ್ಚಿತಃ** = ಜ್ಞಾನಿಗಳು, **ಆಹುಃ** = ಹೇಳುತ್ತಾರೆ.

**ತಾತ್ಪರ್ಯ** :- ನನ್ನ ಪತಿಯು ಪರಾಜಿತನಾಗಿರುವಾಗ ನಾನು ಹೇಗೆ ಪರಾಜಿತಳಾಗುವೆ? ಏಕೆಂದರೆ ಪತ್ನಿಯನ್ನು ಪತಿಯ ಸಹಧರ್ಮಿಣೀ ಎಂದು ತಿಳಿದವರು ಹೇಳುತ್ತಾರೆ.

**ಸಹೈವ ಕರ್ಮ ಕರ್ತವ್ಯಂ ಪತೌ ದಾಸೇ ಹಿ ಭಾರ್ಯಯಾ ।**
**ದಾಸೀತ್ವಂ ನ ಪೃಥಜ್ ಮೇ ಸ್ಯಾಜ್ಜಿತೇಽಪಿ ಹಿ ಪತೋ ತತಃ ॥ ೩೩೪ ॥**

ಪದಚ್ಛೇದ :- ಸಹ, ಏವ, ಕರ್ಮ, ಕರ್ತವ್ಯಂ, ಪತೌ, ದಾಸೀ, ಹಿ, ಭಾರ್ಯಯಾ, ದಾಸೀ, ತ್ವಂ, ಮೇ, ಪೃಥಕ್, ನ, ಸ್ಯಾತ್, ಜಿತೇ, ಅಪಿ, ಹಿ, ಪತೌ, ತತಃ ।

**ಅರ್ಥ** :- **ಪತೌ** = ಪತಿಯಲ್ಲಿ, **ದಾಸೀ ಹಿ** = ದಾಸತ್ವ ಬಂದಿರಲು, **ಭಾರ್ಯಯಾ ಸಹ** = ಹೆಂಡತಿಯೊಂದಿಗೇ, **ಕರ್ಮ** = ಕೆಲಸವನ್ನು, **ಕರ್ತವ್ಯಂ ಏವ** = ಮಾಡಲೇಬೇಕು, **ತತಃ** = ಆದ್ದರಿಂದ, **ತ್ವಂ** = ನೀನು, **ಪತೌ** = ಪತಿಯ, **ಜಿತೇಽಪಿ** = ಗೆದ್ದವನಾಗಿದ್ದರೂ, **ಮೇ** = ನನ್ನಲ್ಲಿ, **ಪೃಥಕ್** = ಪ್ರತ್ಯೇಕವಾಗಿ, **ದಾಸೀ** = ದಾಸತ್ವವು, **ನ ಸ್ಯಾತ್** = ಬರುವುದಿಲ್ಲ.

**ತಾತ್ಪರ್ಯ** :- ಪತಿಯು ದಾಸನಾದರೆ, ಹೆಂಡತಿಯೂ ಅವನ ಜೊತೆಯಲ್ಲಿಯೇ ಕೆಲಸ ಮಾಡಬೇಕು. ಆದ್ದರಿಂದ ನೀನು ನನ್ನ ಪತಿಯನ್ನು ಪರಾಜಿತನಾಗಿಸಿದರೂ ನನಗೆ ಪ್ರತ್ಯೇಕ ದಾಸ್ಯ ಬರುವುದಿಲ್ಲ.

**ಇತ್ಯುಕ್ತಾ ಅಪಿ ಭೀಷ್ಮಾದ್ಯಾಃ ಕಲ್ಯಾವೇಶೇನ ಮೋಹಿತಾಃ ।**
**ಪೃಚ್ಛ ಧರ್ಮಜಮಿತ್ಯುಕ್ತ್ವಾ ತೂಷ್ಣೀಮೇವ ಬಭೂವಿರೇ ॥ ೩೩೫ ॥**

ಪದಚ್ಛೇದ :- ಇತಿ, ಉಕ್ತಾ, ಅಪಿ, ಭೀಷ್ಮಾದ್ಯಾಃ, ಕಲ್ಯಾವೇಶೇನ, ಮೋಹಿತಾಃ, ಪೃಚ್ಛ, ಧರ್ಮಜಂ, ಇತಿ, ಉಕ್ತ್ವಾ, ತೂಷ್ಣಿಂ, ಏವ, ಬಭೂವಿರೇ ।

ಅರ್ಥ :- ಇತಿ = ಹೀಗೆ, ಉಕ್ತಾ ಅಪಿ = ದ್ರೌಪದಿಯು ಹೇಳಿದರೂ, ಕಲ್ಯಾವೇಶೇನ = ಕಲಿಯ ಆವೇಶದಿಂದ, ಮೋಹಿತಾಃ = ಮೊಹಗೊಳಿಸಲ್ಪಟ್ಟ, ಭೀಷ್ಮಾದ್ಯಾಃ = ಭೀಷ್ಮನೇ ಮೊದಲಾದವರು, ಧರ್ಮಜಂ = ಧರ್ಮರಾಜನನ್ನೇ, ಪೃಚ್ಛ = ಕೇಳು, ಇತಿ = ಎಂದು, ಉಕ್ತ್ವಾ = ಹೇಳಿ, ತೂಷ್ಣಿಂ ಏವ = ಸುಮ್ಮನೇ, ಬಭೂವಿರೇ = ಆದರು.

ತಾತ್ಪರ್ಯ :- ದ್ರೌಪದಿಯು ಹೇಗೆ ಹೇಳಿದರೂ ಕಲಿಯ ಆವೇಶದಿಂದ ಮೊಹಿತರಾದ ಭೀಷ್ಮಾದಿಗಳು ಧರ್ಮರಾಜನನ್ನೇ ಕೇಳು ಎಂದು ಹೇಳಿ ಸುಮ್ಮನಾದರು.

ದುರ್ಯೋಧನಪ್ರತೀಪಂ ಹಿ ನ ಕಶ್ಚಿದಶಕತ್ ತದಾ ।
ಉವಾಚ ವಿದುರಸ್ತತ್ರ ನ ಧರ್ಮೋಽಯಮಿತಿ ಸ್ಫುಟಮ್ ॥ ೩೩೬ ॥

ಪದಚ್ಛೇದ :- ದುರ್ಯೋಧನಪ್ರತೀಪಂ, ಹಿ, ನ, ಕಶ್ಚಿತ್, ಅಶಕತ್, ತದಾ, ಉವಾಚ, ವಿದುರಃ, ತತ್ರ, ನ, ಧರ್ಮಃ, ಅಯಂ, ಇತಿ, ಸ್ಫುಟಂ ।

ಅರ್ಥ :- ತತ್ರ = ಆ ಸಭೆಯಲ್ಲಿ, ದುರ್ಯೋಧನಪ್ರತೀಪಂ = ದುರ್ಯೋಧನನ ಎದುರು, ಕಶ್ಚಿತ್ = ಯಾರೊಬ್ಬರೂ, (ವಕ್ತುಂ = ಹೇಳಲು), ನ ಅಶಕತ್ ಹಿ = ಸಮರ್ಥನಾಗಲಿಲ್ಲ, ತದಾ = ಆಗ, ವಿದುರಃ = ವಿದುರನು, ಅಯಂ = ಇದು, ನ ಧರ್ಮಃ = ಧರ್ಮವಲ್ಲ, ಇತಿ = ಎಂದು, ಸ್ಫುಟಂ = ಸ್ಪಷ್ಟವಾಗಿ, ಉವಾಚ = ಹೇಳಿದನು.

ತಾತ್ಪರ್ಯ :- ದುರ್ಯೋಧನನ ವಿರುದ್ಧವಾಗಿ ಆ ಸಭೆಯಲ್ಲಿ ಯಾರೂ ಸಮರ್ಥರಾಗಲಿಲ್ಲ ಆಗ ವಿದುರನು ಇದು ಅಧರ್ಮ ಎಂದು ಸ್ಪಷ್ಟವಾಗಿ ನುಡಿದನು.

ನ ತಸ್ಯ ವಾಚಂ ಜಗ್ರಾಹ ಧೃತರಾಷ್ಟ್ರಃ ಸಹಾತ್ಮಜಃ ।
ಊರ್ಧ್ವಬಾಹುಃ ಸ ಚುಕ್ರೋಶ ದೇವಾನಾಂ ಖ್ಯಾಪಯಂಸ್ತದಾ ॥ ೩೩೭ ॥

ಪದಚ್ಛೇದ :- ನ, ತಸ್ಯ, ವಾಕ್ಯಂ, ಜಗ್ರಾಹ, ಧೃತರಾಷ್ಟ್ರಃ, ಸಹ, ಆತ್ಮಜಃ, ಊರ್ಧ್ವಬಾಹುಃ, ಸಃ, ಚುಕ್ರೋಶ, ದೇವಾನಾಂ, ಖ್ಯಾಪಯನ್, ತದಾ ।

ಅರ್ಥ :- ತಸ್ಯ = ಆ ವಿದುರನ, ವಾಕ್ಯಂ = ಮಾತನ್ನು, ಸಹಾತ್ಮಜಃ = ಮಕ್ಕಳಿಂದ ಕೂಡಿದ, ಧೃತರಾಷ್ಟ್ರಃ = ಧೃತರಾಷ್ಟನು, ನ ಜಗ್ರಾಹ = ಸ್ವೀಕರಿಸಲಿಲ್ಲ, ತದಾ = ಆಗ, ಸಃ = ವಿದುರನು, ದೇವಾನಾಂ = ದೇವತೆಗಳನ್ನು, ಖ್ಯಾಪಯನ್ = ತಿಳಿಸಲು, ಊರ್ಧ್ವಬಾಹುಃ = ಮೇಲೆತ್ತಿದ ಕೈಯುಳ್ಳವನಾಗಿ, ಚುಕ್ರೋಶ = ಗಟ್ಟಿಯಾಗಿ ಹೇಳಿದನು.

ತಾತ್ಪರ್ಯ :- ವಿದುರನ ಮಾತನ್ನು ಧೃತರಾಷ್ಟ ಹಾಗೂ ಅವನ ಮಕ್ಕಳು ಕೇಳಲಿಲ್ಲ. ಆಗ ವಿದುರನು ದೇವತೆಗಳನ್ನು ಸಂಬೋಧಿಸಲು ಮೇಲೆತ್ತಿದ ಕೈಯಿಂದ ಹೇಳಿದನು.

ಸ್ವಾಶಕ್ತಿಂ ದ್ರೌಪದೀಂ ಚಾಽಽಹ ಜಿತಾ ನೈವಾಸಿ ಧರ್ಮತಃ ।
ಅಧರ್ಮೋ ಹಿ ಮಹಾನೇತಾಂ ಸಭಾಮಾಕ್ರಮ್ಯ ತಿಷ್ಠತಿ ॥ ೩೩೮ ॥

ಪದಚ್ಛೇದ :- ಸ್ವ, ಅಶಕ್ತಿಂ, ದ್ರೌಪದಿಂ, ಚ, ಆಹ, ಜಿತಾ, ನ, ಏವ, ಅಸಿ, ಧರ್ಮತಃ, ಅಧರ್ಮಃ, ಹಿ, ಮಹಾನ್, ಏತಾಂ, ಸಭಾಯಾಂ, ಆಕ್ರಮ್ಯ, ತಿಷ್ಠತಿ ।

ಅರ್ಥ :- ಸ್ವ = ತನ್ನ, ಅಶಕ್ತಿಂ = ಅಸಾಮರ್ಥ್ಯವನ್ನು, ಆಹ = ಹೇಳಿದನು, ದ್ರೌಪದೀಂ = ದ್ರೌಪದಿಯನ್ನು, ಧರ್ಮತಃ = ಧರ್ಮದಿಂದ, ನ ಜಿತಾಸಿ = ಗೆದ್ದಿಲ್ಲ, ಏತಾಂ = ಈ, ಸಭಾಯಾಂ = ಸಭೆಯಲ್ಲಿ, ಮಹಾನ್ = ದೊಡ್ಡದ್ದಾದ, ಅಧರ್ಮಃ ಏವ = ಅಧರ್ಮವೇ, ಆಕ್ರಮ್ಯ = ಆಕ್ರಮಿಸಿ, ತಿಷ್ಠತಿ ಹಿ = ನಿಂತಿದೆಯಷ್ಟೆ.

ತಾತ್ಪರ್ಯ :- ವಿದುರನು ತನ್ನ ಅಸಾಮರ್ಥ್ಯವನ್ನು ಪ್ರದರ್ಶಿಸುತ್ತಾ ದ್ರೌಪದಿಗೆ 'ನೀನು ಅಧರ್ಮದಿಂದ ಗೆದ್ದಿರುವಿ ಈ ಸಭೆಯಲ್ಲಿ ದೊಡ್ಡದಾದ ಅಧರ್ಮವೇ ಆವರಿಸಿದೆ ಎಂದು ಹೇಳಿದನು.

ಏವಂ ತು ವಿದುರೇಣೋಕ್ತೇ ವಿಕರ್ಣಃ ಪಾಪಕೋಽಪಿ ಸನ್ ।
ಆಹ ಡಂಭಾರ್ಥಮೇವಾತ್ರ ಧರ್ಮವಿತ್ತ್ವಂ ಪ್ರಕಾಶಯನ್ ॥ ೩೩೯ ॥

ಪದಚ್ಛೇದ :- ಏವಂ, ತು, ವಿದುರೇಣ, ಉಕ್ತೆ, ವಿಕರ್ಣಃ, ಪಾಪಕಃ, ಅಪಿ, ಸನ್, ಆಹ, ಡಂಭಾರ್ಥಂ, ಏವ, ಅತ್ರ, ಧಮವಿತ್ವಂ, ಪ್ರಕಾಶಯನ್ ।

ಅರ್ಥ :- ಏವಂ = ಈ ರೀತಿಯಾಗಿ, ವಿದುರೇಣ = ವಿದುರನಿಂದ, ಉಕ್ತೇ = ಹೇಳಲ್ಪಡುತ್ತಿರಲು, ಅತ್ರ = ಈ ಸಭೆಯಲ್ಲಿ, ಪಾಪಕಃ ಅಪಿ ಸನ್ = ಪಾಪಿಯಾಗಿದ್ದರೂ, ವಿಕರ್ಣಃ ತು = ವಿಕರ್ಣನಾದರೋ, ಡಂಭಾರ್ಥಂ = ಡಂಬಾಚಾರಕ್ಕಾಗಿಯೇ, ಧರ್ಮವಿತ್ವಂ = ಧರ್ಮ ತಿಳಿದವನಂತೆ, ಪ್ರಕಾಶಯನ್ = ಇದು ಅಧರ್ಮವೆಂದು ಪ್ರಕಾಶಿಸುತ್ತಾ, ಆಹ = ಹೇಳಿದನು.

ತಾತ್ಪರ್ಯ :- ವಿದುರನು ಹೀಗೆ ಅಧರ್ಮವನ್ನು ತಿಳಿಸುತ್ತಿರಲು ಪಾಪಿಯಾದ ವಿಕರ್ಣನು ಡಂಬಾಚಾರಕ್ಕಾಗಿಯೇ ತಾನು ಧರ್ಮವನ್ನು ತಿಳಿದವನೆಂದು ತೋರಿಸಲು 'ಇದು ಅಧರ್ಮ' ಎಂದು ಹೇಳಿದನು.

ಅಧರ್ಮ ಏವಾಯಮಿತಿ ಕರ್ಣೋಽಥೈನಮಭರ್ತ್ಸಯತ್ ॥ ೩೪೦ ॥

ಪದಚ್ಛೇದ :- ಅಧರ್ಮಃ, ಏವ, ಅಯಂ, ಇತಿ, ಕರ್ಣಃ, ಅಥ, ಏನಂ, ಅಭರ್ತ್ಸಯತ್ ।

ಅರ್ಥ :- ಅಥ = ಅನಂತರ, ಏನಂ = ಈ ವಿಕರ್ಣನನ್ನು, ಕರ್ಣಃ = ಕರ್ಣನು, ಅಯಂ = ಇದು, ಅಧರ್ಮಃ ಏವ = ಅಧರ್ಮವೇ, ಇತಿ = ಎಂದು, ಅಭರ್ತ್ಸಯತ್ = ಗದರಿದರು.

ತಾತ್ಪರ್ಯ :- ವಿಕರ್ಣನ ಮಾತನ್ನು ಕೇಳಿ ಕರ್ಣನು ಹೌದು 'ಇದು ಅಧರ್ಮವೇ' ಎಂದು ಗದರಿಸಿ ಕೂಡಿಸಿದನು.

ದೃಷ್ಟ್ವಾ ಭೀಮಃ ಕ್ಲಿಶ್ಯಮಾನಾಂ ತು ಕೃಷ್ಣಾಂ
ಧರ್ಮಾತ್ಯಯಂ ಧರ್ಮರಾಜೇ ಚ ದೃಷ್ಟ್ವಾ ।
ರಾಜಾ ಶಾಸ್ಯೋ ಯುವರಾಜೇನ ಧರ್ಮಾ-
ಚ್ಚಲನ್ ಯಸ್ಮಾದ್ ವಾಕ್ಯಮಿದಂ ಬಭಾಷೇ ॥ ೩೪೧ ॥

ಪದಚ್ಛೇದ :- ದೃಷ್ಟ್ವಾ, ಭೀಮಃ, ಕ್ಲಿಶ್ಯಮಾನಾಂ, ಚ, ಕೃಷ್ಣಂ, ಧರ್ಮಾತಿ, ಅಯಂ, ಧರ್ಮರಾಜೇ, ಚ, ದೃಷ್ಟ್ವಾ, ರಾಜಾ, ಶಾಸ್ಯಃ, ಯುವರಾಜೇನ, ಧರ್ಮಾತ್, ಚಲನ್, ಯಸ್ಮಾತ್, ವಾಕ್ಯಂ, ಇದಂ, ಬಭಾಷೆ ।

ಅರ್ಥ :- ಭೀಮಃ = ಭೀಮನು, ಕ್ಲಿಶ್ಯಮಾನಾಂ = ಕಷ್ಟಪಡುತ್ತಿರುವ, ಕೃಷ್ಣಾಂ ಚ = ದ್ರೌಪದಿಯನ್ನಾದರೋ, ದೃಷ್ಟ್ವಾ = ನೋಡಿ, ಅಯಂ = ಈ, ಧರ್ಮಾತಿ = ಧರ್ಮದಲ್ಲಿ ಆಸ್ಥೆಯನಾದ ಭೀಮನು, ಧರ್ಮರಾಜೇ = ಧರ್ಮರಾಜನಲ್ಲಿ, ದೃಷ್ಟ್ವಾ = ದೃಷ್ಟಿಯುಳ್ಳವನಾಗಿ, ಯಸ್ಮಾತ್ = ಯಾವ ಕಾರಣದಿಂದ, ರಾಜಾ = ರಾಜನು, ಧರ್ಮಾತ್ = ಧರ್ಮದಿಂದ, ಚಲನ್ = ಚಂಚಲನಾಗಲು, ಯುವರಾಜೇನ = ಯುವರಾಜನಿಂದ, ಶಾಸ್ಯಃ = ಶಾಸಿಸಲ್ಪಡಬೇಕು, (ಇತಿ = ಎಂದು), ಇದಂ = ಈ, ವಾಕ್ಯಂ = ವಾಕ್ಯವನ್ನು, ಬಭಾಷೆ = ಹೇಳಿದನು.

ತಾತ್ಪರ್ಯ :- ಕಷ್ಟ ಪಡುತ್ತಿರುವ ದ್ರೌಪದಿಯನ್ನು ಕಂಡು ಧರ್ಮಾಸಕ್ತನಾದ ಭೀಮನು, ಧರ್ಮರಾಜನಲ್ಲಿ ದೃಷ್ಟಿಯುಳ್ಳವನಾಗಿ 'ರಾಜನು ಧರ್ಮದಿಂದ ವಿಚಲಿತನಾಗಲು ಯುವ ರಾಜನು ಅವನನ್ನು ಶಾಸಿಸಬೇಕು' ಎಂದು ಹೇಳಿದನು.

**ಇಮಾಂ ನ್ಯಸ್ತವತೋ ದ್ಯೂತೇ ಧಕ್ಷಣೀಯೌ ಹಿ ತೇ ಭುಜೌ ।**
**ನೈವಮಿತ್ಯರ್ಜುನೋಽವಾದೀತ್ ತಮಾಹಾಥ ವೃಕೋದರಃ ।**
**ವಕ್ತವ್ಯಂ ನತು ಕರ್ತವ್ಯಂ ತಸ್ಮಾನ್ನಹಿ ಮಯಾ ಕೃತಮ್ ॥ ೩೪೨ ॥**

ಪದಚ್ಛೇದ :- ಇಮಾಂ, ನ್ಯಸ್ತವತಃ, ದ್ಯೂತೇ, ಧಕ್ಷಣೀಯೌ, ಹಿ, ತೇ, ಭುಜೌ, ನೈವಂ, ಇತಿ, ಅರ್ಜುನಃ, ಅವಾದೀತ್, ತಂ, ಆಹ, ಅಥ, ವೃಕೋದರಃ, ವಕ್ತವ್ಯಂ, ನ, ತು, ಕರ್ತವ್ಯಂ, ತಸ್ಮಾತ್, ನ, ಹಿ, ಮಯಾ, ಕೃತಂ ।

ಅರ್ಥ :- ಇಮಾಂ = ಈ ದ್ರೌಪದಿಯನ್ನು, ದ್ಯೂತೇ = ಜೂಜಿನಲ್ಲಿ, ನ್ಯಸ್ತವತಃ = ನ್ಯಾಸವಾಗಿಸಿದ, ತೇ = ನಿನ್ನ, ಭುಜೌ = ಭುಜಗಳನ್ನು, ಧಕ್ಷಣೀಯೌಹಿ = ಶಿಕ್ಷಿಸಬೇಕು, (ಇತಿ ಉಕ್ತೇ = ಹೇಳಲು), ಅರ್ಜುನಃ = ಅರ್ಜುನನು, ನೈನಂ = ಇವನನ್ನು ಹಾಗೆ ಮಾಡಬಾರದು, ಇತಿ = ಎನ್ನಲು, ಅಥ = ಅನಂತರ, ತಂ = ಆ ಅರ್ಜುನನನ್ನು ಕುರಿತು, ವೃಕೋದರಃ = ಭೀಮನು, ವಕ್ತವ್ಯಂ = ಹೇಳಬೇಕು, ನ ತು ಕರ್ತವ್ಯಂ = ಮಾಡಬಾರದು, ತಸ್ಮಾತ್ = ಆದ್ದರಿಂದ, ಮಯಾ = ನನ್ನಿಂದ, ನ ಹಿ ಕೃತಂ = ಮಾಡಲ್ಪಡಲಿಲ್ಲ (ಇತಿ) ಆಹ = ಹೇಳಿದನು.

**ತಾತ್ಪರ್ಯ** :- 'ಜೂಜಿನಲ್ಲಿ ದ್ರೌಪದಿಯನ್ನು ನ್ಯಾಸವಾಗಿಸಿದ ನಿನ್ನ ಭುಜಗಳನ್ನು ಶಿಕ್ಷಿಸಬೇಕು' ಎಂದು ಭೀಮಸೇನನು ಅನ್ನಲು, ಅರ್ಜುನನು 'ಹಾಗೆ ಮಾಡಬಾರದು' ಎಂದು ನುಡಿಯಲು, ಭೀಮಸೇನನು 'ಹಾಗೆ ಮಾಡಬಾರದು ಕೇವಲ ಹೇಳಬೇಕು ಆದ್ದರಿಂದಲೇ ನಾನು ಹಾಗೆ ಮಾಡಲಿಲ್ಲ' ಎಂದು ಹೇಳಿದನು.

**ಉತ್ತಮೇ ವಚಸಾ ಶಿಕ್ಷಾ ಮಧ್ಯಮೇಽರ್ಥಾಪಹಾರಣಮ್ ।**
**ಅಧಮೇ ದೇಹದಂಡಶ್ಚ ತಸ್ಮಾದ್ ವಾಚ್ಯೋ ಯುಧಿಷ್ಠಿರಃ ॥ ೩೪೩ ॥**

**ಪದಚ್ಛೇದ** :- **ಉತ್ತಮೇ, ವಚಸಾ, ಶಿಕ್ಷಾ, ಮಧ್ಯಮೇ, ಅರ್ಥಾ, ಅಪಹರಣಂ, ಅಧಮೇ, ದೇಹದಂಡಃ, ಚ, ತಸ್ಮಾತ್, ವಾಚ್ಯಃ, ಯುಧಿಷ್ಠಿರಃ ।**

**ಅರ್ಥ** :- **ಉತ್ತಮೇ** = ಉತ್ತಮರಲ್ಲಿ, **ವಚಸಾ** = ಮಾತಿನಿಂದ, **ಶಿಕ್ಷಾ** = ಶಿಕ್ಷೆಯು, **ಮಧ್ಯಮೇ** = ಮಧ್ಯಮರಲ್ಲಿ, **ಅರ್ಥಾ** = ಸಂಪತ್ತನ್ನು, **ಅಪಹರಣಂ** = ಕಸಿದುಕೊಳ್ಳುವಿಕೆ, **ಚ** = ಮತ್ತು, **ಅಧಮೇ** = ಅಧಮರಲ್ಲಿ, **ದೇಹದಂಡ** = ದೇಹ ದಂಡನೆಯು, **ತಸ್ಮಾತ್** = ಆದ್ದರಿಂದ, **ಯುಧಿಷ್ಠಿರಃ** = ಯುಧಿಷ್ಠಿರನು, **ವಾಚ್ಯಃ** = ಮಾತಿನಿಂದ ನಿಂದಿಸಬೇಕು.

**ತಾತ್ಪರ್ಯ** :- ಉತ್ತಮರಿಗೆ ಮಾತಿನಿಂದ ಶಿಕ್ಷಿಸಬೇಕು. ಮಧ್ಯಮರಿಗೆ ಸಂಪತ್ತನ್ನು ಕಸಿದುಕೊಳ್ಳಬೇಕು, ಅಧಮರಲ್ಲಿ ದಂಡವಿಧಿಸಬೇಕು. ಆದ್ದರಿಂದ ನಾನು ಯುಧಿಷ್ಠಿರನನ್ನು ನಿಂದಿಸಿದೆ.

**ಅಥ ಕರ್ಣೋಽಬ್ರವೀತ್ ಕೃಷ್ಣಾಮಪತಿರ್ಹ್ಯಸಿ ಶೋಭನೇ ।**
**ಧಾರ್ತರಾಷ್ಟ್ರಗೃಹಂ ಯಾಹೀತ್ಯಥ ದುರ್ಯೋಧನೋಽವದತ್ ॥ ೩೪೪ ॥**

**ಪದಚ್ಛೇದ** :- **ಅಥ, ಕರ್ಣಃ, ಅಬ್ರವೀತ್, ಕೃಷ್ಣಾಂ, ಅಪತಿ, ಹಿ, ಅಸಿ, ಶೋಭನೇ, ಧಾತೃರಾಷ್ಟ್ರಗ್ರಹಂ, ಯಾಹೀ, ಇತಿ, ಅಥ, ದುರ್ಯೋಧನಃ, ಅವದತ್ ।**

**ಅರ್ಥ** :- **ಅಥ** = ಅನಂತರ, **ಕರ್ಣಃ** = ಕರ್ಣನು, **ಕೃಷ್ಣಾಂ** = ದ್ರೌಪದಿಯನ್ನು ಕುರಿತು, **ಅಬ್ರವೀತ್** = ಹೇಳಿದನು, **ಶೋಭನೇ** = ಮಂಗಳಕರಳೇ, **ಅಪತಿಃ** = ಗಂಡನಿಲ್ಲದವಳು, **ಅಸಿ** = ಆಗಿರುವಿ, **ಧಾರ್ತ್ಯರಾಷ್ಟ್ರಗೃಹಂ** = ದುರ್ಯೋಧನನ ಮನೆಗೆ, **ಯಾಹಿ ಹಿ** = ಹೋಗಷ್ಟೆ

**ಇತಿ** = ಎಂದು, **ಅಥ** = ಅನಂತರ, **ದುರ್ಯೋಧನಃ** = ದುರ್ಯೋಧನನು, **ಅವದತ್** = ಹೇಳಿದನು.

ತಾತ್ಪರ್ಯ :- ಅನಂತರ ಕರ್ಣನು ದ್ರೌಪದಿಗೆ ಗಂಡನಿಲ್ಲದ ನೀನು ದುರ್ಯೋಧನನ ಮನೆಗೆ ಹೋಗು ಎಂದು ಹೇಳಿದನು. ಅನಂತರ ದುರ್ಯೋಧನನು ಹೀಗೆ ಹೇಳಿದನು.

**ಯುಧಿಷ್ಠಿರೋ ದುಃಖಹೇತುಸ್ತವೈಕೋ**
**ಯದ್ಯೇನಮನ್ಯೇ ನ ಗುರುರ್ನ ಏಷಃ ।**
**ಇತಿ ಬ್ರೂಯುರಥವಾ ಭೀಮಪಾರ್ಥಾ-**
**ವೇಕೋಽಪಿವಾ ಭೀಮ ಇಹೋತ್ಸೃಜೇ ತ್ವಾಮ್ ॥ ೩೪೫ ॥**

**ಪರಸ್ಪರವಿರೋಧಾರ್ಥಂ ಪಾಂಡವಾನಾಮಿದಂ ವಚಃ ॥ ೩೪೬ ॥**

**ಪದಚ್ಛೇದ :- ಯುಧಿಷ್ಠಿರಃ, ದುಃಖಹೇತುಃ, ತವ, ಏವ, ಏಕಃ, ಯದಿ, ಏನಂ, ಅನ್ಯೇ, ನ, ಗುರುಃ, ನಃ, ಏಷಃ, ಇತಿ, ಬ್ರೂಯುಃ, ಅಥವಾ, ಭೀಮಪಾರ್ಥೌ, ಏಕಃ, ಅಪಿ, ವಾ, ಭೀಮಃ, ಇಹ, ಉತ್ಸೃಜೇ, ತ್ವಾಂ, ಪರಸ್ಪರ, ವಿರೋಧಾರ್ಥಂ, ಪಾಂಡವಾನಾಂ, ಇದಂ, ವಚಃ ॥**

ಅರ್ಥ :- **ತವ** = ನಿನ್ನ, **ದುಃಖಹೇತುಃ** = ದುಃಖಕ್ಕೆ ಕಾರಣ, **ಯುಧಿಷ್ಠಿರಃ ಏಕಃ ಏವ** = ಯುದಿಷ್ಠಿರನೇ, **ನಃ** = ನಮಗೆ, **ಏಷಃ** = ಈ ಯುಧಿಷ್ಠಿರನು, **ನ ಗುರುಃ** = ಪೂಜ್ಯನಲ್ಲ, **ಇತಿ** = ಎಂದು, **ಅನ್ಯೇ** = ಉಳಿದ ನಾಲ್ವರು, **ಬ್ರೂಯುಃ** = ಹೇಳಲಿ, **ಅಥವಾ** = ಅಥವಾ, **ಭೀಮಪಾರ್ಥೌ** = ಭೀಮಾರ್ಜುನರಿಬ್ಬರು (ಹೇಳಲಿ), **ವಾ** = ಅಥವಾ, **ಭೀಮಃ ಏಕೋಽಪಿ** = ಭೀಮನೊಬ್ಬನೇ (ಹೇಳಲಿ), **ತ್ವಾಂ** = ನಿನ್ನನು, **ಇಹ** = ಇಲ್ಲಿಂದ, **ಉತ್ಸೃಜೇ** = ಬಿಡುತ್ತೇನೆ, **ಇತಿ** = ಎಂದು, (**ಅವದತ್** = ಹೇಳಿದನು), **ಇದಂ** = ಈ, **ವಚಃ** = ಮಾತು, **ಪಾಂಡವಾನಾಂ** = ಪಾಂಡವರಿಗೆ, **ಪರಸ್ಪರಂ** = ಪರಸ್ಪರ, **ವಿರೋಧಾರ್ಥಂ** = ವಿರೋಧ ಉಂಟು ಮಾಡಲು.

ತಾತ್ಪರ್ಯ :- 'ಯುಧಿಷ್ಠಿರನೇ ನಿನ್ನ ದುಃಖಕ್ಕೆ ಕಾರಣ, ಅವನು ಪೂಜ್ಯನಲ್ಲ ಎಂದು ಉಳಿದ ನಾಲ್ವರು ಪಾಂಡವರು, ಅಥವಾ

ಭೀಮಾರ್ಜುನರು ಇಲ್ಲವೇ ಭೀಮನಾಗಲಿ ಹೇಳಲಿ, ನಾನು ನಿನ್ನನ್ನು ಬಿಡುವೆನು' ಎಂದು ದುರ್ಯೋಧನನು ಹೇಳಿದನು. ಇದು ಪಾಂಡವರಲ್ಲಿ ಪರಸ್ಪರ ಭೇದವನ್ನು ಉಂಟುಮಾಡಲು ಹೇಳಿದ್ದು.

**ಇತ್ಯುಕ್ತ ಊಚೇ ಪವಮಾನಸೂನುಃ**
**ಪೂಜ್ಯೋಽಸ್ಮಾಕಂ ಧರ್ಮಜೋಽಸಂಶಯೇನ ।**
**ಗುರುಶ್ಚಾಹಂ ವೋಽಖಿಲಾನಾಂ ಯತೋ ಹಿ**
**ಬಲಜ್ಯೇಷ್ಠಂ ಕ್ಷತ್ರಮಾಹುರ್ಮಹಾಂತಃ ॥ ೩೪೭ ॥**

**ಪದಚ್ಛೇದ :-** ಇತಿ, ಉಕ್ತೇ, ಊಚೇ, ಪವಮಾನಸೂನುಃ, ಪೂಜ್ಯಃ, ಅಸ್ಮಾಕಂ, ಧರ್ಮಜಃ, ಸಂಶಯಃ, ನ, ಗುರುಃ, ಚ, ಅಹಂ, ವಃ, ಅಖಿಲಾನಾಂ, ಯತಃ, ಹಿ, ಬಲಜ್ಯೇಷ್ಠಂ, ಕ್ಷತ್ರಂ, ಆಹು, ಮಹಾಂತಃ ।

**ಅರ್ಥ :- ಇತ್ಯುಕ್ತೇ** = ದುರ್ಯೋಧನನು ಹೀಗೆನ್ನಲು, **ಪವಮಾನಸೂನುಃ** = ಭೀಮಸೇನನು, **ಧರ್ಮಜಃ** = ಯುಧಿಷ್ಠಿರನು, **ಅಸ್ಮಾಕಂ** = ನಮಗೆ, **ಪೂಜ್ಯಃ** = ಪೂಜ್ಯನು, **ನ ಸಂಶಯಃ** = ಸಂಶಯವಿಲ್ಲ, **ಅಹಂ ಚ** = ನಾನಾದರೋ, **ವಃ** = ನಿಮ್ಮ, **ಅಖಿಲಾನಾಂ** = ಎಲ್ಲರಿಗೂ, **ಗುರುಃ** = ಪೂಜ್ಯನು, **ಯತೋ ಹಿ** = ಹೇಗೆಂದರೆ, **ಮಹಾಂತಃ** = ಜ್ಞಾನಿಗಳು, **ಕ್ಷತ್ರಂ** = ಕ್ಷತ್ರಿಯರಲ್ಲಿ, **ಬಲಜ್ಯೇಷ್ಠಂ** = ಬಲಜ್ಯೇಷ್ಠನನ್ನೇ ಪೂಜ್ಯನೆಂದು, **ಆಹುಃ** = ಹೇಳುತ್ತಾರೆ, **ಇತ್ಯುಚೇ** = ಹೀಗೆಂದನು.

**ತಾತ್ಪರ್ಯ :-** ದುರ್ಯೋಧನನು ಪಾಂಡವರನ್ನು ಅಪಹಾಸ್ಯ ಮಾಡಲು, ಭೀಮಸೇನನು 'ನಮಗೆ ಧರ್ಮರಾಜನು ಪೂಜ್ಯನು ಇದರಲ್ಲಿ ಸಂಶಯವಿಲ್ಲ, ನಿಮಗೆ ನಾನೇ ಪೂಜ್ಯನು, ಏಕೆಂದರೆ ಕ್ಷತ್ರಿಯರಲ್ಲಿ ಬಲಜ್ಯೇಷ್ಠನೇ ಪೂಜ್ಯನೆಂದು ತಿಳಿದವರು ಹೇಳುತ್ತಾರೆ' ಎಂದು ಹೇಳಿದನು.

**ಬಲಜ್ಯೈಷ್ಠ್ಯೇ ಯದಿ ವಃ ಸಂಶಯಃ ಸ್ಯಾ-**
**ದುತ್ತಿಷ್ಠಧ್ವಂ ಸರ್ವ ಏವಾದ್ಯ ವೀರಾಃ ।**
**ಮೃದ್ನಾಮಿ ವಃ ಪಾದತಳೇನ ಸರ್ವಾನ್**
**ಸಹಾನುಬಂಧಾನ್ ಯಚ್ಚ ಮಾಂ ಯೋದ್ಧುಕಾಮಃ ॥ ೩೪೮ ॥**

ಪದಚ್ಛೇದ :- ಬಲಜ್ಯೇಷ್ಠೆ, ಯದಿ, ವಃ, ಸಂಶಯಃ, ಸ್ಯಾತ್, ಉತ್ತಿಷ್ಠಧ್ವಂ, ಸರ್ವೇ, ಏವ, ಅದ್ಯ, ವೀರಾಃ, ಮೃದ್ನಾಮಿ, ವಃ, ಪಾದತಲೇನ, ಸರ್ವಾನ್, ಸಹ, ಅನುಬಂಧಾನ್, ಯಃ, ಚ, ಮಾಂ, ಯೋದ್ಧುಕಾಮಃ।

**ಅರ್ಥ** :- ಬಲಜ್ಯೇಷ್ಠೆ = ನನ್ನ ಬಲಜ್ಯೇಷ್ಠದ ವಿಷಯದಲ್ಲಿ, ಯದಿ = ಒಂದು ವೇಳೆ, ವಃ = ನಿಮಗೆ, ಸಂಶಯಃ = ಸಂಶಯವು, ಸ್ಯಾತ್ = ಇದ್ದಲ್ಲಿ, ಅದ್ಯ = ಇಂದು, ಸರ್ವೇ = ಎಲ್ಲಾ, ವಿರಾಃ = ವೀರರು, ಉತ್ತಿಷ್ಠಧ್ವಂ = ಮೇಲೆಳಲಿ, ಮಾಂ = ನನ್ನೊಂದಿಗೆ, ಯಃ = ಯಾರು, ಯೋದ್ಧುಕಾಮಃ = ಯುದ್ಧ ಮಾಡಲಿಚ್ಛಿಸುವವರು, ಅನುಬಂಧಾನ್ ಸಹ = ಪರಿವಾರ ಸಹಿತ, ಸರ್ವಾನ್ ವಃ = ನಿಮ್ಮೆಲ್ಲರನ್ನು, ಪಾದತಲೇನ ಏವ = ಪಾದದಿಂದಲೇ, ಮೃದ್ನಾಮಿ = ಹೊಸೆದು ಹಾಕುತ್ತೇನೆ.

**ತಾತ್ಪರ್ಯ** :- 'ನನ್ನ ಬಲದಲ್ಲಿ ಯಾರಿಗಾದರೂ ಸಂಶಯ ಇದ್ದಲ್ಲಿ ಎದ್ದೇಳಿ, ಯುದ್ಧಿಸಲು ಇಚ್ಛೆಯುಳ್ಳ ಎಲ್ಲರನ್ನೂ ಪರಿವಾರ ಸಹಿತ ನನ್ನ ಪಾದದಿಂದಲೇ ಹೊಸೆದು ಹಾಕುತ್ತೇನೆ.

**ಇತಿ ಬ್ರುವನ್ ಸಮುತ್ಥಿತೋ ನದನ್ ವೃಕೋದರೋ ಯದಾ ।**
**ವಿಘೂರ್ಣಿತಾ ಸಭಾಽಖಿಲಾ ಭಯಾನ್ನಚಾಽಹ ಕಿಂಚನ ॥ ೩೪೯ ॥**

ಪದಚ್ಛೇದ :- ಇತಿ, ಬ್ರುವನ್, ಸಮುತ್ಥಿತಃ, ನದನ್, ವೃಕೋದರಃ, ಯದಾ, ವಿಘುರ್ಣಿತಾ, ಸಭಾ, ಅಖಿಲಾ, ಭಯಾತ್, ನ, ಆಹ, ಕಿಂಚನ।

**ಅರ್ಥ** :- ಇತಿ = ಹೀಗೆ, ಬ್ರುವನ್ = ಹೇಳುತ್ತಾ, ವೃಕೋದರಃ = ಭೀಮನು, ಯದಾ = ಯಾವಾಗ, ಸಮುತ್ಥಿತಃ = ನಿಂತನೋ, ತದಾ = ಆಗ, ಅಖಿಲಾಸಭಾ = ಸಂಪೂರ್ಣ ಸಭೆಯು, ವಿಘೂರ್ಣಿತಾ = ನಡುಗಿತು, ಭಯಾತ್ = ಭಯದಿಂದ, ಕಿಂಚನ = ಏನನ್ನೂ, ನ ಚಾಹ = ಹೇಳಲಿಲ್ಲ.

**ತಾತ್ಪರ್ಯ** :- ಭೀಮಸೇನನು ಹೀಗೆ ಹೇಳುತ್ತಾ ನಿಲ್ಲಲು, ಸಭೆಯು ನಡುಗಿತು, ಸಭೆಯಲ್ಲಿ ಯಾರೂ ಮಾತನಾಡಲಿಲ್ಲ.

**ಭೀಷ್ಮೋ ದ್ರೋಣೋ ವಿದುರಾದ್ಯಾಃ ಕ್ಷಮಸ್ವ**
**ಸರ್ವಂ ತ್ವಯೋಕ್ತಂ ಸತ್ಯಮಿತ್ಯೇವ ಹಸ್ತಾ ।**

**ಗೃಹೀತ್ವೈನಂ ಸ್ಥಾಪಯಾಮಾಸುರಸ್ಮಿನ್**
**ಸ್ಥಿತೇ ಶಾಂತಿಂ ಚಾಪರೇ ಧಾರ್ತರಾಷ್ಟ್ರಾಃ ॥ ೩೫೦ ॥**

**ಪದಚ್ಛೇದ :– ಭೀಷ್ಮಃ, ದ್ರೋಣಃ, ವಿದುರಾದ್ಯಾಃ, ಕ್ಷಮಸ್ವ, ಸರ್ವಂ, ತ್ವಯಾ, ಉಕ್ತಂ, ಸತ್ಯಂ, ಇತಿ, ಏವ, ಹಸ್ತೌ, ಗೃಹೀತ್ವಾ, ಏನಂ, ಸ್ಥಾಪಯಾಮಾಸುಃ, ಅಸ್ಮಿನ್, ಸ್ಥಿತೇ, ಶಾಂತಿಂ, ಚ, ಅಪರೇ, ಧಾರ್ತ್ಯರಾಷ್ಟ್ರಾಃ ।**

**ಅರ್ಥ :– ಭೀಷ್ಮಃ** = ಭೀಷ್ಮಾಚಾರ್ಯರು, **ದ್ರೋಣಃ** = ದ್ರೋಣಾಚಾರ್ಯರು, **ವಿದುರಾದ್ಯಾಃ** = ವಿದುರನೇ ಮೊದಲಾದವರು, **ತ್ವಯಾ** = ನಿನ್ನಿಂದ, **ಸರ್ವಂ** = ಎಲ್ಲಾ, **ಸತ್ಯಂ ಏವ** = ಸತ್ಯವನ್ನೇ, **ಉಕ್ತಂ** = ಹೇಳಲ್ಪಟ್ಟಿತು, **ಇತಿ** = ಎಂದು, **ಏನಂ** = ಈ ಭೀಮಸೇನನನ್ನು, **ಹಸ್ತೌ** = ಕೈಗಳನ್ನು, **ಗೃಹಿತ್ವಾ** = ಹಿಡಿದು, **ಸ್ಥಾಪಯಾಮಾಸುಃ** = ಕೂಡಿಸಿದರು, **ಅಸ್ಮಿನ್** = ಈ ಭೀಮನು, **ಸ್ಥಿತೇ** = ಕೂಡಲು, **ಅಪರೇ ಚ** = ಉಳಿದ, **ಧಾರ್ತ್ಯರಾಷ್ಟ್ರಾಃ** = ಕೌರವರು, **ಶಾಂತಿಂ** = ಶಾಂತಿಯನ್ನು, **(ಆಪುಃ** = ಹೊಂದಿದರು).

**ತಾತ್ಪರ್ಯ :–** ಭೀಮನನ್ನು ಭೀಷ್ಮ, ದ್ರೋಣ, ವಿದುರ ಮುಂತಾದವರು ನೀನು ಸತ್ಯವನ್ನೇ ಹೇಳಿದ್ದೀ ಎಂದು ಕೂಡಿಸಿದರು. ಅನಂತರ ಕೌರವರು ನೆಮ್ಮದಿ ಹೊಂದಿದರು.

**ನಿವಾರಿತೋ ಧರ್ಮಜೇನ ಗುರುಭಿಶ್ಚಾಪರೈಸ್ತದಾ ।**
**ಮಾನನಾರ್ಥಂ ಗುರೂಣಾಂ ತು ನ ಭೀಮಸ್ತಾನ್ ಜಘಾನ ಹ ॥ ೩೫೧ ॥**

**ಪದಚ್ಛೇದ :–** ನಿವಾರಿತಃ, ಧರ್ಮಜೇನ, ಗುರುಭಿಃ, ಚ, ಅಪರೈಃ, ತದಾ, ಮಾನನಾರ್ಥಂ, ಗುರೂಣಾಂ, ತು, ನ, ಭೀಮಃ, ತಾನ್, ಜಘಾನ, ಹ ॥

**ಅರ್ಥ :– ತದಾ** = ಆಗ, **ಧರ್ಮಜೇನ** = ಧರ್ಮರಾಜನಿಂದ, **ಅಪರೈಃ** = ಬೇರೆ, **ಗುರುಭಿಶ್ಚ** = ಹಿರಿಯರಿಂದಲೂ, **ನಿವಾರಿತಃ** = ತಡೆಯಲ್ಪಟ್ಟ, **ಭೀಮಃ** = ಭೀಮಸೇನನು, **ಗುರೂಣಾಂತು** = ಗುರುಗಳ, **ಮಾನನಾರ್ಥಂ** = ಗೌರವಕ್ಕೋಸ್ಕರ, **ತಾನ್** = ಅವರನ್ನು, **ನ ಜಘಾನ ಹ** = ಕೊಲ್ಲಲಿಲ್ಲವಷ್ಟೆ.

ತಾತ್ಪರ್ಯ :- ಧರ್ಮರಾಜನು ಭೀಮನನ್ನು ತಡೆದನು. ಇತರ ಹಿರಿಯರು ಭೀಮಸೇನನನ್ನು ತಡೆದರು. ಹಿರಿಯರಿಗೆ ಗೌರವ ನೀಡಬೇಕೆಂಬ ಧರ್ಮದ ಚೌಕಟ್ಟಿಗೆ ಒಳಪಟ್ಟು ಭೀಮಸೇನನು ಕೌರವರನ್ನು ಆಗ ಕೊಲ್ಲಲಿಲ್ಲ.

**ನೈವಾತಿವರ್ತತೇ ಜ್ಯೇಷ್ಠಂ ಧರ್ಮಾತ್ಮಾನಂ ಯುಧಿಷ್ಠಿರಮ್ ।**
**ತೇಷಾಂ ಪಾಪಾಭಿವೃದ್ಧ್ಯರ್ಥಂ ಜ್ಯೇಷ್ಠವೃತ್ತಿಂ ಚ ದರ್ಶಯನ್ ॥ ೩೫೨ ॥**

ಪದಚ್ಛೇದ :- ನ, ಏವ, ಅತಿವರ್ತತೇ, ಜ್ಯೇಷ್ಠಂ, ಧರ್ಮಾತ್ಮಾನಂ, ಯುಧಿಷ್ಠಿರಂ, ತೇಷಾಂ, ಪಾಪಾಭಿವೃಧ್ಯರ್ಥಂ, ಜ್ಯೇಷ್ಠವೃತ್ತಿಂ, ಚ, ದರ್ಶಯನ್ ।

ಅರ್ಥ :- ಜ್ಯೇಷ್ಠಂ = ಪೂಜ್ಯನಾದ, ಧರ್ಮಾತ್ಮಾನಂ = ಧಾರ್ಮಿಕನಾದ, ಯುಧಿಷ್ಠಿರಂ = ಯುಧಿಷ್ಠಿರನನ್ನು, ನೈವಾತಿವರ್ತತೇ = ಮೀರಲಿಲ್ಲ, ಚ = ಮತ್ತು, ತೇಷಾಂ = ಕೌರವರ, ಪಾಪ = ಪಾಪದ, ಅಭಿವೃಧ್ಯರ್ಥಂ = ಹೆಚ್ಚಿಸಲು, ಜ್ಯೇಷ್ಠವೃತ್ತಿಂ ಚ = ಅಣ್ಣನಲ್ಲಿ ನಡವಳಿಕೆಯನ್ನು, ದರ್ಶಯನ್ = ತೋರಿಸುತ್ತಾ.

ತಾತ್ಪರ್ಯ :- ಭೀಮನು ಅಣ್ಣನ ಮಾತನ್ನು ಮೀರಲಿಲ್ಲ. ಹೊರತು ಅಣ್ಣನಲ್ಲಿ ನಡವಳಿಕೆ ಹೇಗಿರಬೇಕು ಮತ್ತು ಕೌರವರ ಪಾಪವು ಹೆಚ್ಚಾಗಬೇಕೆಂದು ಆ ರೀತಿ ಮಾಡಿದನು.

**ಅಥ ದುರ್ಯೋಧನಃ ಪಾಪೋ ಭೀಮಸೇನಸ್ಯ ಪಶ್ಯತಃ ।**
**ಊರುಂ ಸಂದರ್ಶಯಾಮಾಸ ಕೃಷ್ಣಾಯೈ ಭೀಮ ಆಹ ತಮ್ ॥ ೩೫೩ ॥**

ಪದಚ್ಛೇದ :- ಅಥ, ದುರ್ಯೋಧನ, ಪಾಪಃ, ಭೀಮಸೇನಸ್ಯ, ಪಶ್ಯತಃ, ಊರುಂ, ಸಂದರ್ಶಯಾಮಾಸ, ಕೃಷ್ಣಾಯೈ, ಭೀಮಾ, ಆಹ, ತಂ ।

ಅರ್ಥ :- ಅಥ = ಅನಂತರ, ಪಾಪಃ = ಪಾಪಿಯಾದ, ದುರ್ಯೋಧನಃ = ದುರ್ಯೋಧನನು, ಭೀಮಸೇನಸ್ಯ = ಭೀಮಸೇನ, ಪಶ್ಯತಃ = ನೋಡುವಾಗಲೇ, ಕೃಷ್ಣಾಯೈ = ದ್ರೌಪದಿಗೆ, ಊರುಂ = ತನ್ನ ತೊಡೆಯನ್ನು, ಸಂದರ್ಶಯಾಮಾಸ = ತೋರಿಸಿದನು, ತಂ = ಆ ದುರ್ಯೋಧನನನ್ನು ಕುರಿತು, ಭೀಮಃ = ಭೀಮನು, ಆಹ = ಹೇಳಿದನು.

ತಾತ್ಪರ್ಯ :- ಅನಂತರ ಪಾಪಿಯಾದ ದುರ್ಯೋಧನನು ಭೀಮನು ನೋಡುವಾಗಲೇ, ದ್ರೌಪದಿಗೆ ತನ್ನ ತೊಡೆಯನ್ನು ತೋರಿಸಿದನು. ಇದನ್ನು ಕಂಡ ಭೀಮನು ದುರ್ಯೋಧನನಿಗೆ ಹೇಳಿದನು.

**ತವೋರುಮೇನಂ ಗದಯೋರುವೇಗಯಾ**
**ಬಿಭೇತ್ಸ್ಯ ಇತ್ಯೇವ ಪುನಃ ಸುಯೋಧನಃ ।**
**ಊಚೇ ನಾನ್ಯದ್ ಭವತಾಮಸ್ತಿ ವಿತ್ತಂ**
**ದ್ಯೂತೇ ಕೃಷ್ಣಂ ಸ್ತಾಪಯಧ್ವಂ ಪಣಾಯ ॥ ೩೫೪ ॥**

ಪದಚ್ಛೇದ :- ತವ, ಉರುಂ, ಏನಂ, ಗದಯಾ, ಉರುವೇಗಯಾ, ವಿಭೆತ್ಸ್ಯೇ, ಇತಿ, ಏವ, ಪುನಃ, ಸುಯೋಧನಃ, ಊಚೇ, ನ, ಅನ್ಯತ್, ಭವತಾಂ, ಅಸ್ತಿ, ವಿತ್ತಂ, ದ್ಯೂತೇ, ಕೃಷ್ಣಂ, ಸ್ಥಾಪಯಧ್ವಂ, ಪಣಾಯ ।

ಅರ್ಥ :- ತವ = ನಿನ್ನ, ಉರುಂ = ತೊಡೆಯನ್ನು, ಏನಂ = ಈ, ಗದಯಾ ಏವ = ಗದೆಯಿಂದಲೇ, ಉರುವೇಗಯಾ = ಬಹಳವಾದ ವೇಗದಿಂದ, ವಿಭೆತ್ಸ್ಯೇ = ಸೀಳುತ್ತೇನೆ, ಇತಿ = ಎಂದು, ಊಚೇ = ಹೇಳಿದನು, ಸುಯೋಧನಃ = ದುರ್ಯೋಧನನು, ಪುನಃ = ಮತ್ತೆ, ಭವತಾಂ = ನಿನ್ನ, ವಿತ್ತಂ = ಸಂಪತ್ತು, ಅನ್ಯತ್ = ಬೇರೆ, ನಾಸ್ತಿ = ಇಲ್ಲ, ದ್ಯೂತೇ = ಜೂಜಿನಲ್ಲಿ, ಪಣಾಯ = ಪಣವಾಗಿ, ಕೃಷ್ಣಂ = ಕೃಷ್ಣನನ್ನೇ, ಸ್ಥಾಪಯಧ್ವಂ = ಇಡು.

ತಾತ್ಪರ್ಯ :- ದುರ್ಯೋಧನನ ಮಾತನ್ನು ಕೇಳಿ ಭೀಮನು 'ನಿನ್ನ ತೊಡೆಯನ್ನು ಗದೆಯ ಬಹಳವಾದ ವೇಗದಿಂದ ಸೀಳುವೆನು' ಎಂದನು. ಅನಂತರ ದುರ್ಯೋಧನನು ಧರ್ಮರಾಜನಿಗೆ ನಿನ್ನ ಬಳಿ ಜೂಜಿನಲ್ಲಿ ಇಡಲು ಎಲ್ಲಾ ಸಂಪತ್ತೂ ನಶಿಸಿದೆ, ಶ್ರೀ ಕೃಷ್ಣನನ್ನೇ ಪಣವಾಗಿಡು' ಎಂದನು.

**ಅಥಾಬ್ರವೀದ್ ವೃಕೋದರಃ ಕೃತೇऽವಮಾನನೇ ಹರೇಃ ।**
**ನಿಪಾತ್ಯ ಭೂತಲೇ ಹಿ ತೇ ಶಿರೋ ಮೃದಿಷ್ಯ ಇತ್ಯಲಮ್ ॥ ೩೫೫ ॥**

ಪದಚ್ಛೇದ :- ಅಥ, ಅಬ್ರವೀತ್, ವೃಕೋದರಃ, ಕೃತೇ, ಅವಮಾನನೇ, ಹರೇಃ, ನಿಪಾತ್ಯ, ಭೂತಲೇ, ಹಿ, ತೇ, ಶಿರಃ, ಮೃದಿಷ್ಯೇ, ಇತಿ, ಅಲಂ ।

ಅರ್ಥ :- ಅಥ = ಅನಂತರ, ವೃಕೋದರಃ = ಭೀಮನು, ಹರೇಃ = ಶ್ರೀಕೃಷ್ಣನಿಗೆ, ಅವಮಾನನೇ ಕೃತೇ = ಅವಮಾನ ಮಾಡುವುದು, ಅಲಂ ತೇ = ಸಾಕುಮಾಡು, ತೇ = ನಿನ್ನ, ಶಿರಃ = ತಲೆಯನ್ನು, ಭೂತಲೇ = ಭೂಮಿಯಲ್ಲಿ, ನಿಪಾತ್ಯ = ಬೀಳಿಸಿ, ಮೃದಿಷ್ಯೇ ಹಿ = ತುಳಿಯುವೆನು, ಇತಿ = ಎಂದು, ಅಬ್ರವೀತ್ = ಹೇಳಿದನು.

ತಾತ್ಪರ್ಯ :- ದುರ್ಯೋಧನನು ಶ್ರೀಕೃಷ್ಣನಿಗೆ ಅವಮಾನ ಮಾಡಲು 'ನಿನ್ನ ತಲೆಯನ್ನು ಭೂಮಿಯಲ್ಲಿ ಕೆಡವಿ ತುಳಿಯುವೆನು ಇನ್ನು ಸಾಕುಮಾಡು' ಎಂದನು.

**ಸ ವಧ್ಯ ಏವ ಮೇ ಸದಾ ಪರೋಕ್ಷತೋऽಪಿ ಯೋ ಹರಿಮ್ ।**
**ವಿನಿಂದಯೇದಿತಿ ಧ್ರುವಂ ಪ್ರತಿಶ್ರುತಂ ಹಿ ಮಾರುತೇಃ ॥ ೩೫೬ ॥**

ಪದಚ್ಛೇದ :- ಸಃ, ವಧ್ಯಃ, ಏವ, ಮೇ, ಸದಾ, ಪರೋಕ್ಷತಃ, ಅಪಿ, ಯಃ, ಹರಿಃ, ವಿನಿಂದಯೇತ್, ಇತಿ, ಧೃವಂ, ಪ್ರತಿಶೃತಂ, ಹಿ, ಮಾರುತೇಃ ।

ಅರ್ಥ :- ಸಃ = ಅವನು, ಸದಾ = ಯಾವಾಗಲು, ವಧ್ಯಃ ಏವ = ವಧಾರ್ಹನೇ, ಯಃ = ಯಾವನು, ಹರಿಂ = ಶ್ರೀಹರಿಯನ್ನು, ಪರೋಕ್ಷತಃ ಅಪಿ = ಪರೋಕ್ಷವಾಗಿಯೂ, ವಿನಿಂದಯೇತ್ = ನಿಂದಿಸುವನೋ, ಇತಿ = ಎಂದು, ಮಾರುತೇಃ = ವಾಯುದೇವರ, ಧೃವಂ = ನಿಶ್ಚಯವಾದ, ಪ್ರತಿಶೃತಂ ಹಿ = ಪ್ರತಿಜ್ಞೆಯಷ್ಟೆ.

ತಾತ್ಪರ್ಯ :- 'ಯಾರು ಶ್ರೀಹರಿಯನ್ನು ಪರೋಕ್ಷವಾಗಿಯೂ ನಿಂದಿಸುವನೋ ಅವನು ಸದಾ ವಧೆಗೆ ಅರ್ಹನೇ' ಎಂದು ವಾಯುದೇವರ ನಿಶ್ಚಯವಾದ ಪ್ರತಿಜ್ಞೆಯಷ್ಟೆ.

**ಪುನಶ್ಚ ಪಾಪವೃದ್ಧಯೇ ತದೈವ ನೋ ಜಘಾನ ತಮ್ ।**
**ವಿಕರ್ತನಾತ್ಮಜಃ ಪುನರ್ಜಗಾದ ಸೋಮಕಾತ್ಮಜಾಮ್ ॥ ೩೫೭ ॥**

ಪದಚ್ಛೇದ :- ಪುನಃ, ಚ, ಪಾಪವೃದ್ಧಯೇ, ತದಾ, ಏವ, ನಃ, ಜಘಾನ, ತಂ, ವಿಕರ್ತನಾತ್ಮಜಃ, ಪುನಃ, ಜಗಾದ, ಸೋಮಕಾತ್ಮಜಾಂ ।

**ಅರ್ಥ** :- ಪುನಃ ಚ = ಮತ್ತೂ, ಪಾಪವೃದ್ಧಯೇ = ಪಾಪಹೆಚ್ಚಾಗಲು, ತಂ = ಆ ದುರ್ಯೋಧನನನ್ನು, ತದಾ ಏವ = ಆಗಲೇ, ನ ಜಘಾನ = ಕಲ್ಲಲಿಲ್ಲ, ವಿಕರ್ತನಾತ್ಮಜಃ = ಕರ್ಣನು, ಪುನಃ = ಮತ್ತು, ಸೋಮಕಾತ್ಮಜಾಂ = ದ್ರೌಪದಿಯನ್ನು ಕುರಿತು, ಜಗಾದ್ = ಹೇಳಿದನು.

**ತಾತ್ಪರ್ಯ** :- ಆ ದುರ್ಯೋಧನನ ಪಾಪವು ಹೆಚ್ಚಾಗಲು ಆಗಲೇ ಭೀಮನು ಕೊಲ್ಲಲಿಲ್ಲ ಕರ್ಣನು ದ್ರೌಪದಿಗೆ ಮತ್ತೆ ಹೇಳಿದನು.

**ಪ್ರಯಾಹಿ ಭೂಭೃತೋ ಹಿ ನೋ ಗೃಹಂ ನ ಸಂತಿ ಪಾಂಡವಾಃ ।**
**ಇತೀರಿತೇ ಸಮುತ್ಥಿತೌ ವೃಕೋದರೋಽನು ಚಾರ್ಜುನಃ ॥ ೩೫೮ ॥**

**ಪದಚ್ಛೇದ** :– ಪ್ರಯಾಹಿ, ಭೂಭೃತಃ, ಹಿ, ನಃ, ಗೃಹಂ, ನ, ಸಂತಿ, ಪಾಂಡವಾಃ, ಇತಿ, ಈರಿತೇ, ಸಮುತ್ಥಿತಃ, ವೃಕೋದರಃ, ಅನು, ಚ, ಅರ್ಜುನಃ ।

**ಅರ್ಥ** :- ನಃ = ನಮಗೆ, ಭೂಭೃತಃ = ರಾಜನಾದ ದುರ್ಯೋಧನನ, ಗೃಹಂ = ಮನೆಯನ್ನು ಕುರಿತು, ಪ್ರಯಾಹಿ = ಹೋಗು, ಪಾಂಡವಾಃ = ಪಾಂಡವರು, ನ ಸಂತಿ = ಇಲ್ಲ, ಇತಿ = ಎಂದು, ಈರಿತೇ = ಹೇಳಲು, ವೃಕೋದರಃ = ಭೀಮನು, ಅನು ಚ ಅರ್ಜುನಃ = ಅರ್ಜುನನಿಂದ ಅನುಸರಿಸಿದವನಾಗಿ, ಸಮುತ್ಥಿತಃ = ಎದ್ದನು.

**ತಾತ್ಪರ್ಯ** :- ನಿನಗೆ ಪಾಂಡವರು ಇನ್ನಿಲ್ಲ. ನಮಗೆ ರಾಜನಾದ ದುರ್ಯೋಧನ ಮನೆಗೆ ಹೋಗು ಎನ್ನಲು, ಭೀಮನು ಅರ್ಜುನನೊಂದಿಗೆ ಎದ್ದು ನಿಂತನು.

**ಉಭೌ ಚ ತೌ ಯುಧಿಷ್ಠಿರೋ ನ್ಯವಾರಯತ್ ತಥಾಽಪರೇ ।**
**ತತೋ ನಿಷಣ್ಣಯೋಸ್ತಯೋಃ ಸುಯೋಧನೋ ವಚೋಽಬ್ರವೀತ್ ॥ ೩೫೯ ॥**

**ಪದಚ್ಛೇದ** :– ಉಭೌ, ಚ, ತೌ, ಯುಧಿಷ್ಠಿರಃ, ನ್ಯವಾರಯತ್, ತಥಾ, ಅಪರೇ, ತತಃ, ನಿಷಣ್ಣಯೋಃ, ತಯೋಃ, ಸುಯೋಧನಃ, ವಚಃ, ಅಬ್ರವೀತ್ ।

**ಅರ್ಥ** :- ಉಭೌ ಚ ತೌ = ಅವರಿಬ್ಬರನ್ನೂ, ಯುಧಿಷ್ಠಿರಃ = ಯುಧಿಷ್ಠಿರನು, ತಥಾ = ಹಾಗೆಯೇ, ಅಪರೇ = ಉಳಿದವರು, ನ್ಯವಾರಯತ್ =

ತಡೆದರು, ತತಃ = ಅನಂತರ, ನಿಷಣ್ಣಯೋಃ = ಕುಳಿತ, ತಯೋಃ = ಅವರನ್ನು ಕುರಿತು, ಸುಯೋಧನಃ = ದುರ್ಯೋಧನನು, ವಚಃ = ಮಾತನ್ನು, ಅಬ್ರವೀತ್ = ಹೇಳಿದನು.

ತಾತ್ಪರ್ಯ :- ಆಗ ಅವರಿಬ್ಬರನ್ನೂ ಯುಧಿಷ್ಠಿರನು ಮತ್ತು ಉಳಿದವರು ತಡೆದು ಕೂಡಿಸಿದನು. ಅನಂತರ ದುರ್ಯೋಧನನು ಮಾತನ್ನು ಹೇಳಿದನು.

**ದುಃಶಾಸನೈಷಾಂ ವಾಸಾಂಸಿ ದಾಸಾನಾಂ ನೋ ವ್ಯಪಾಕುರು ।**
**ಇತ್ಯುಕ್ತೋಽಭ್ಯಗಮತ್ ಪಾರ್ಥಾನ್ ಸ್ವವಾಸಾಂಸ್ಯಥ ತೇ ದದುಃ ॥೩೬೦॥**

ಪದಚ್ಛೇದ :- ದು:ಶಾಸನಾ, ಏಷಾಂ, ವಾಸಾಂಸಿ, ದಾಸಾನಾಂ, ನಃ, ವ್ಯಪಾಕುರು, ಇತಿ, ಉಕ್ತಃ, ಅಭ್ಯಗಮತ್, ಪಾರ್ಥಾನ್, ಸ್ವ, ವಾಸಾಂಸಿ, ಅಥ, ತೇ, ದದುಃ ।

ಅರ್ಥ :- ದುಃಶಾಸನಾ = ದುಃಶಾಸನನೇ, ನಃ = ನಮ್ಮ, ಏಷಾಂ ದಾಸಾನಾಂ = ಈ ದಾಸರ, ವಾಸಾಂಸಿ = ಬಟ್ಟೆಗಳನ್ನು, ವ್ಯಪಾಕುರು = ತೆಗೆದುಕೋ, ಇತ್ಯುಕ್ತಃ = ಹೀಗೆಂದನು, ಅಥ = ಅನಂತರ, ಪಾರ್ಥಾನ್ = ಪಾಂಡವರನ್ನು ಕುರಿತು, ಅಭ್ಯಗಮತ್ = ಹೋದನು, ತೇ = ಪಾಂಡವರು, ಸ್ವವಾಸಾಂಸಿ = ತಮ್ಮ ಬಟ್ಟೆಗಳನ್ನು, ದದುಃ = ಕೊಟ್ಟರು.

ತಾತ್ಪರ್ಯ :- 'ದುಃಶಾಸನ ಈ ನಮ್ಮ ದಾಸರ ವಸ್ತ್ರಗಳನ್ನು ಸ್ವೀಕರಿಸು' ಎಂದು ಹೇಳಿದನು. ದುಃಶಾಸನು ಸಮೀಪಕ್ಕೆ ಬರಲು ಪಾಂಡವರು ತಮ್ಮ ಬಟ್ಟೆಗಳನ್ನು ತೆಗೆದುಕೊಟ್ಟರು.

**ತೇ ಚರ್ಮವಸನಾ ಭೂತ್ವಾ ತಾನಶಿಷ್ಟಾನ್ ಪ್ರಕಾಶ್ಯ ಚ ।**
**ನಿಷೇದುಶ್ಚ ಕ್ಷಮಾಯಾಂತೇ ಕ್ಷಮಾಮಾಲಂಬ್ಯ ವಿಸ್ಮೃತಾಮ್ ॥ ೩೬೧ ॥**

ಪದಚ್ಛೇದ :- ತೇ, ಚರ್ಮವಸನಾ, ಭೂತ್ವಾ, ತಾನ್, ಅಶಿಷ್ಟಾನ್, ಪ್ರಕಾಶ್ಯ, ಚ, ನಿಷೇದುಃ, ಚ, ಕ್ಷಮಾಯಾಂ, ತೇ, ಕ್ಷಮಾಂ, ಆಲಂಬ್ಯ, ವಿಸ್ಮೃತಾಂ ।

ಅರ್ಥ :- ತೇ = ಆ ಪಾಂಡವರು, ಚರ್ಮವಸನಾ = ಕೃಷ್ಣಾಜಿನ ವಸ್ತ್ರವುಳ್ಳವರು, ಭೂತ್ವಾ = ಆಗಿ, ತಾನ್ = ಆ ಕೌರವರ, ಅಶಿಷ್ಟಾನ್ = ಅಸಭ್ಯತೆಯನ್ನು, ಪ್ರಕಾಶ್ಯ ಚ = ಪ್ರಕಾಶಿಸಿ, ಕ್ಷಮಾಯಾಂ = ತಾಳ್ಮೆಯಲ್ಲಿಯೂ,

**ಕ್ಷಮಾಂ** = ತಾಳ್ಮೆಯನ್ನು, **ಆಲಂಬ್ಯ** = ಅವಲಂಬಿಸಿ, **ತೇ** = ಪಾಂಡವರು, **ವಿಸ್ಪತಾಂ** = ಭೂಮಿಯಲ್ಲಿ, **ನಿಷೇದುಃ** = ಕುಳಿತರು.

**ತಾತ್ಪರ್ಯ** :- ಪಾಂಡವರು ಕೃಷ್ಣಾಜಿನ ವಸ್ತ್ರವನ್ನು ಧರಿಸಿ, ಕೌರವರ ಅಸಭ್ಯತೆಯನ್ನು ಪ್ರದರ್ಶಿಸಿ ಬಹಳ ತಾಳ್ಮೆಯಿಂದಲೇ ಭೂಮಿಯಲ್ಲಿ ಕುಳಿತರು.

**ಪುನರ್ದುರ್ಯೋಧನೇನೋಕ್ತಃ ಪಾರ್ಥಾನಾಮಥ ಪಶ್ಯತಾಮ್ ।**
**ಚಕರ್ಷ ವಾಸೋ ದ್ರೌಪದ್ಯಾಸ್ತದಾಽವಾದೀದ್ ವೃಕೋದರಃ ॥ ೩೬೨ ॥**

ಪದಚ್ಛೇದ :- **ಪುನಃ, ದುರ್ಯೋಧನೇನ, ಉಕ್ತಃ, ಪಾರ್ಥಾನಾಂ, ಅಥ, ಪಶ್ಯತಾಂ, ಚಕರ್ಷ, ವಾಸಃ, ದ್ರೌಪದ್ಯಾಃ, ತದಾ, ಅವಾದೀತ್, ವೃಕೋದರಃ ।**

**ಅರ್ಥ** :- **ಪುನಃ** = ಮತ್ತೆ, **ದುರ್ಯೋಧನೇನ** = ದುರ್ಯೋಧನನಿಂದ, **ಉಕ್ತಃ** = ಹೇಳಲ್ಪಟ್ಟಿತು, **ಅಥ** = ಅನಂತರ, **ಪಾರ್ಥಾನಾಂ** = ಪಾಂಡವರು, **ಪಶ್ಯತಾಂ** = ನೋಡುವಾಗಲೇ, **ದ್ರೌಪದ್ಯಾಃ** = ದ್ರೌಪದಿಯ, **ವಾಸಃ** = ಬಟ್ಟೆಯನ್ನು, **ಚಕರ್ಷ** = ಸೆಳೆದನು, **ತದಾ** = ಆಗ, **ವೃಕೋದರಃ** = ಭೀಮನು, **ಅವಾದೀತ್** = ಹೇಳಿದನು.

**ತಾತ್ಪರ್ಯ** :- ದುರ್ಯೋಧನನ ಮಾತಿನಂತೆ ದುಃಶಾಸನನು ಪಾಂಡವರು ನೋಡುವಾಗಲೇ ದ್ರೌಪದಿಯ ಸೀರೆಯನ್ನು ಎಳೆದನು ಆಗ ಭೀಮನು ಹೇಳಿದನು.

**ಪಾಪೇಷು ಪೂರ್ವಸ್ಯ ತಥಾಽಧಮಸ್ಯ**
**ವಂಶೇ ಕುರೂಣಾಮುರುಧರ್ಮಶೀಲಿನಾಮ್ ।**
**ದುಃಶಾಸನಸ್ಯಾಸ್ಯ ವಿದಾರ್ಯ ವಕ್ಷಃ**
**ಪಿಬಾಮಿ ರಕ್ತಂ ಜಗತಃ ಸಮಕ್ಷಮ್ ॥ ೩೬೩ ॥**

ಪದಚ್ಛೇದ :- **ಪಾಪೇಷು, ಪೂರ್ವಸ್ಯ, ತಥಾ, ಅಧಮಸ್ಯ, ವಂಶೇ, ಕುರುಣಾಂ, ಉರುಧರ್ಮಶೀಲಿನಾಂ, ದುಃಶಾಸನಸ್ಯ, ಅಸ್ಯ, ವಿದಾರ್ಯ, ವಕ್ಷಃ, ಪಿಬಾಮಿ, ರಕ್ತಂ, ಜಗತಃ, ಸಮಕ್ಷಮ್ ।**

**ಅರ್ಥ** :- **ಪಾಪೇಷು** = ಪಾಪಿಗಳಲ್ಲಿ, **ಪೂರ್ವಸ್ಯ** = ಶ್ರೇಷ್ಠನಾದ, **ತಥಾ** = ಹಾಗೆ, **ಉರುಧರ್ಮಶೀಲಿನಾಂ** = ಉತ್ತಮವಾದ ಧರ್ಮಶೀಲರಾದ, **ಕುರೂಣಾಂ** = ಕುರುಗಳ, **ವಂಶೇ** = ವಂಶದಲ್ಲಿ, **ಅಧರ್ಮಸ್ಯ** = ಅಧರ್ಮಿಯಾದ, **ಅಸ್ಯ** = ಈ, **ದುಃಶಾಸನಸ್ಯ** = ದುಃಶಾಸನನ, **ವಕ್ಷಃ** = ಎದೆಯನ್ನು, **ವಿದಾರ್ಯ** = ಸೀಳಿ, **ಜಗತಃ** = ಜಗತ್ತಿನ, **ಸಮಕ್ಷಂ** = ಎದುರಿನಲ್ಲಿ, **ರಕ್ತಂ** = ರಕ್ತವನ್ನು, **ಪಿಬಾಮಿ** = ಕುಡಿಯುತ್ತೇನೆ.

**ತಾತ್ಪರ್ಯ** :- ಪಾಪಿಯಲ್ಲಿ ಶ್ರೇಷ್ಠನಾದ ಹಾಗೆ ಉತ್ತಮವಾದ ಧರ್ಮಶಿಲಕರ ಕುರುಗಳ ವಂಶದಲ್ಲಿ ಅಧರ್ಮಿಯಾದ ಈ ದುಃಶಾಸನನ ಎದೆಯನ್ನು ಸೀಳಿ ಜಗತ್ತಿನ ಎದುರಿನಲ್ಲಿ ರಕ್ತವನ್ನು ಕುಡಿಯುತ್ತೇನೆ.

**ವಿಕೃಷ್ಯಮಾಣೇ ವಸನೇ ತು ಕೃಷ್ಣಾ**
**ಸಸ್ಮಾರ ಕೃಷ್ಣಂ ಸುವಿಶೇಷತೋಽಪಿ ।**
**ತದಾಽನ್ಯದಾಸೀದ್ ವಸನಂ ಚ ತಸ್ಯಾ**
**ದಿವ್ಯಂ ಸುಸೂಕ್ಷ್ಮಂ ಕನಕಾವದಾತಮ್ ॥ ೩೭೪ ॥**

**ಪದಚ್ಛೇದ :– ವಿಕೃಷ್ಯಮಾಣೇ, ವಸನಾ, ತು, ಕೃಷ್ಣಾ, ಸಸ್ಮಾರ, ಕೃಷ್ಣಂ, ಸುವಿಶೇಷತಃ, ಅಪಿ, ತದಾ, ಅನ್ಯತ್, ಆಸೀತ್, ವಸನಂ, ಚ, ತಸ್ಯಾಃ, ದಿವ್ಯಂ, ಸುಸೂಕ್ಷ್ಮಂ, ಕನಕಾವದಾತಂ ।**

**ಅರ್ಥ** :- **ವಸನಾ** = ಬಟ್ಟೆಯು, **ವಿಕೃಷ್ಣಮಾಣೆ ತು** = ಸೆಳೆಯುತ್ತಿರಲು, **ಕೃಷ್ಣಾಪಿ** = ದ್ರೌಪದಿಯಾದರೂ, **ಸುವಿಶೇಷತಃ** = ಬಹಳವಾಗಿ, **ಕೃಷ್ಣಂ** = ಕೃಷ್ಣನನ್ನು, **ಸಸ್ಮಾರ** = ಸ್ಮರಿಸಿದಳು, **ತದಾ** = ಆಗ, **ತಸ್ಯಾಃ** = ಅವಳಿಗೆ, **ದಿವ್ಯಂ** = ಉತ್ತಮವಾದ, **ಸುಸೂಕ್ಷ್ಮಂ** = ತೆಳ್ಳನೆಯ, **ಚ** = ಮತ್ತು, **ಕನಕಾವದಾತಂ** = ಶುಭ್ರವಾದ, **ಅನ್ಯತ್** = ಇನ್ನೊಂದು, **ವಸನಂ** = ಬಟ್ಟೆಯನ್ನು, **ಆಸೀತ್** = ಇತ್ತು.

**ತಾತ್ಪರ್ಯ** :- ದುಃಶಾಸನನು ಸೀರೆಯನ್ನು ಎಳೆಯುತ್ತಿರಲು ದ್ರೌಪದಿಯು ವಿಶೇಷವಾಗಿ ಶ್ರೀಕೃಷ್ಣನನ್ನು ಸ್ಮರಿಸಿದಳು. ಆಗ ಅವಳಿಗೆ ಉತ್ತಮವಾದ, ತೆಳ್ಳನೆಯ, ಶುಭ್ರವಾದ ಇನ್ನೊಂದ ವಸ್ತ್ರವು ಪಾದುರ್ಭವಿಸಿತು.

ಪುನಃಪುನಶ್ಚೈವ ವಿಕರ್ಷಮಾಣೇ
ದುಃಶಾಸನೇಽನ್ಯಾನಿ ಚ ತಾದೃಶಾನಿ ।
ಬಭೂವುರಂತಂ ನ ಜಗಾಮ ಪಾಪಃ
ಶ್ರಾಂತೋ ನ್ಯಷೀದತ್ ಸ್ವಿನ್ನಗಾತ್ರಃ ಸಭಾಯಾಮ್ ॥ ೩೬೫ ॥

ಪದಚ್ಛೇದ :- ಪುನಃ, ಪುನಃ, ಚ, ಏವ, ವಿಕರ್ಷಮಾಣೆ, ದುಃಶಾಸನೆ, ಅನ್ಯಾನಿ, ಚ, ತಾದೃಶಾನಿ, ಬಭೂವುಃ, ಅಂತಂ, ನ, ಜಗಾಮ, ಪಾಪಃ, ಶ್ರಾಂತಃ, ನ್ಯಷೀದತ್, ಸ್ವಿನ್ನಗಾತ್ರಃ, ಸಬಾಯಾಂ ।

ಅರ್ಥ :- ದುಃಶಾಸನೇ = ದುಃಶಾಸನದಿಂದ, ಪುನಃ ಪುನಃ ಚ = ಮತ್ತೂ ಮತ್ತು, ವಿಕರ್ಷಮಾಣೇ = ವಸ್ತ್ರ ಸೆಳೆಯುತ್ತಿರಲು, ಅನ್ಯಾನಿ = ಬೇರೆ, ಚ = ಮತ್ತು, ತಾದೃಶಾನಿ ಏವ = ಅಂತಹದ್ದೆ ವಸ್ತ್ರವು, ಬಭೂವುಃ = ಬಂದವು, ಅಂತಂ = ಕೊನೆಗೆ, ಪಾಪಃ = ಪಾಪಿಯಾದ ದುಃಶಾಸನನು, ಶ್ರಾಂತಃ = ಸೋತು, ಸ್ವಿನ್ನಗ್ರಾತಃ = ಬೆವರಿನ ಮೈಯುಳ್ಳವನಾಗಿ, ಸಭಾಯಾಂ = ಸಭೆಯಲ್ಲಿ, ನ್ಯಷೀದತ್ = ಕುಳಿತನು.

ತಾತ್ಪರ್ಯ :- ಪುನಃ ಪುನಃ ದುಃಶಾಹನ ಸೀರೆ ಸೆಳೆಯುತ್ತಿದ್ದಂತೆ ಅದೇ ರೀತಿಯ ಬೇರೆ ಸೀರೆಗಳು ಪ್ರಾದುರ್ಭವಿಸಿದವು. ಪಾಪಿಯಾದ ಅವನು ನೋಡಿದರೆ ಸೀರೆಗಳಿಗೆ ಕೊನೆಯೇ ಇರಲಿಲ್ಲ. ಸೋತು ಮೈ ಬೆವೆತುಕೊಂಡು ನೆಲದ ಮೇಲೆ ಕುಸಿದು ಕುಳಿತ.

ವಸ್ತ್ರೋಚ್ಚಯೇ ಶೈಲನಿಭೇ ಪ್ರಜಾತೇ
ದುರ್ಯೋಧನಃ ಪ್ರಾಹ ಸಂಜಾತಕೋಪಃ ।
ಪ್ರವೇಶಯೇಮಾಂ ಗೃಹಮೇವ ಶೀಘ್ರಂ
ಕಿಂ ನಶ್ಚಿರೇಣೇತಿ ಸುಮಂದಬುದ್ಧಿಃ ॥ ೩೬೬ ॥

ಪದಚ್ಛೇದ :- ವಸ್ತ್ರೋಚ್ಚಯೇ, ಶೈಲನಿಭೇ, ಪ್ರಜಾತೇ, ದುರ್ಯೋಧನಃ, ಪ್ರಾಹ, ಸಂಜಾತಕೋಪಃ, ಪ್ರವೇಶ್ಯ, ಏನಾಂ, ಗೃಹಂ, ಏವ, ಶೀಘ್ರಂ, ಕಿಂ, ನಃ, ಚಿರೇಣ, ಇತಿ, ಸುಮಂದಬುದ್ಧಿಃ ।

**ಅರ್ಥ** :- **ಸುಮಂದಬುದ್ಧಿಃ** = ದುಷ್ಟಬುದ್ಧಿಯುಳ್ಳ, **ದುರ್ಯೋಧನಃ** = ದುರ್ಯೋಧನನು, **ಶೈಲನಿಭೇ** = ಬೆಟ್ಟಕ್ಕೆ ಸದೃಶವಾದ, **ವಸ್ತ್ರೋಚ್ಚಯೇ** = ವಸ್ತ್ರಗಳ ಸಮೂಹವನ್ನು ಕಂಡು, **ಸಂಜಾತಕೋಪಃ** = ಕೋಪವುಳ್ಳವನಾಗಿ, **ಪ್ರಜಾತೇ** = ತಮ್ಮನಾದ ದುಃಶಾಸನನಿಗೆ, **ಶೀಘ್ರಂ ಏವ** = ಬೇಗನೆ, **ಏನಾಂ** = ಈ ದ್ರೌಪದಿಯನ್ನು, **ಗೃಹಂ** = ಮನೆಯನ್ನು ಕುರಿತು, **ಪ್ರವೇಶ್ಯ** = ಸೇರಿಸು, **ಚಿರೇಣ ಕಿಂ** = ವಿಳಂಬದಿಂದ ಪ್ರಯೋಜನವೇನು, **ಇತಿ** = ಎಂದು, **ಪ್ರಾಹ** = ಹೇಳಿದನು.

**ತಾತ್ಪರ್ಯ** :- ಸೀರೆಗಳ ರಾಶಿಯು ಬೆಟ್ಟದಂತಿರಲು ದುಷ್ಟಬುದ್ಧಿಯುಳ್ಳ ದುರ್ಯೋಧನನು ಕೊಪಗೊಂಡು 'ದುಃಶಾಸನ ಇನ್ನೇಕೆ ವಿಳಂಬ, ಇವಳನ್ನು ಬೇಗನೆ ಮನೆಗೆ ಸೇರಿಸು' ಎಂದು ನುಡಿದನು.

**ತಚ್ಛ್ರುತ್ವಾ ವಚನಂ ಕೃಷ್ಣಾ ಪ್ರತಿಜ್ಞಾಮಕರೋತ್ ತದಾ ।**
**ಭೀಮೋ ದುರ್ಯೋಧನಂ ಹಂತಾ ಕರ್ಣಂ ಹಂತಾ ಧನಂಜಯಃ ॥೩೬೭॥**

**ಶಕುನಿಂ ತ್ವಕ್ಷಕಿತವಂ ಸಹದೇವೋ ವಧಿಷ್ಯತಿ ।**
**ಇತ್ಯುಕ್ತೇ ತತ್ ತಥೇತ್ಯಾಹ ಭೀಮಸೇನಃ ಸಭಾತಲೇ ॥ ೩೬೮ ॥**

**ಪದಚ್ಛೇದ** :- **ತತ್, ಶ್ರುತ್ವಾ, ವಚನಂ, ಕೃಷ್ಣಾ, ಪ್ರತಿಜ್ಞಾಂ, ಅಕರೋತ್, ತದಾ, ಭೀಮಃ, ದುರ್ಯೋಧನಂ, ಹಂತಾ, ಕರ್ಣಂ, ಹಂತಾ, ಧನಂಜಯಃ, ಶಕುನಿಂ, ತು, ಅಕ್ಷಕಿತವಂ, ಸಹದೇವಃ, ಹನಿಷ್ಯತಿ, ಇತಿ, ಉಕ್ತೇ, ತತ್, ತಥಾ, ಇತಿ, ಆಹ, ಭೀಮಸೇನಃ, ಸಭಾತಲೇ ।**

**ಅರ್ಥ** :- **ತದಾ** = ಆಗ, **ತತ್** = ಆ ದುರ್ಯೋಧನನ, **ವಚನಂ** = ಮಾತನ್ನು, **ಶ್ರುತ್ವಾ** = ಕೇಳಿ, **ಕೃಷ್ಣಾ** = ದ್ರೌಪದಿಯು, **ಪ್ರತಿಜ್ಞಾಂ** = ಪ್ರತಿಜ್ಞೆಯನ್ನು, **ಅಕರೋತ್** = ಮಾಡಿದಳು, **ಭೀಮಃ** = ಭೀಮನು, **ದುರ್ಯೋಧನಂ** = ದುರ್ಯೋಧನನ್ನು, **ಹಂತಾ** = ಕೊಲ್ಲುತ್ತಾನೆ, **ಧನಂಜಯಃ** = ಅರ್ಜುನನು, **ಕರ್ಣಂ** = ಕರ್ಣನನ್ನು, **ಹಂತಾ** = ಕೊಲ್ಲುತ್ತಾನೆ, **ಸಹದೇವಃ ತು** = ಸಹದೇವನು, **ಅಕ್ಷಕಿತವಂ** = ಜೂಜಿನಲ್ಲಿ ವಂಚನೆ ಮಾಡಿದ, **ಶಕುನಿಂ** = ಶಕುನಿಯನ್ನು, **ಹನಿಷ್ಯತಿ** = ಕೊಲ್ಲುತ್ತಾನೆ, **ಇತಿ** = ಎಂದು, **ಉಕ್ತೇ** =

**ಹೇಳಲು, ಭೀಮಸೇನಃ** = ಭೀಮಸೇನನು, **ಸಭಾತಲೇ** = ಸಭಾಮಂಟಪದಲ್ಲಿ, **ತಥಾ** = ಅದು ಹಾಗೆಯೇ, **ಇತಿ** = ಎಂದು, **ಆಹ** = ಹೇಳಿದನು.

**ತಾತ್ಪರ್ಯ** :- ಅದನ್ನು ಕೇಳಿದ ದ್ರೌಪದಿ ಸಭೆಯಲ್ಲಿ ಪ್ರತಿಜ್ಞೆ ಮಾಡಿದಳು. 'ಭೀಮ ದುರ್ಯೋಧನನನ್ನು ಕೊಲ್ಲುತ್ತಾನೆ. ಅರ್ಜುನ ಕರ್ಣನನ್ನು ಕೊಲ್ಲುತ್ತಾನೆ. ಜೂಜಿನಲ್ಲಿ ವಂಚನೆ ಮಾಡುವ ಶಕುನಿಯನ್ನು ಸಹದೇವ ಕೊಲ್ಲುತ್ತಾನೆ' ದ್ರೌಪದಿ ಹೀಗೆ ಹೇಳಿದಾಗ 'ಅದು ಹಾಗೇ ಆಗುವುದು' ಎಂದ, ಭೀಮ.

**ಪ್ರತಿಜ್ಞಾಮಾದದೇ ಪಾರ್ಥಸ್ತಾಂ ಮಾದ್ರೀನಂದನಸ್ತಥಾ ।**
**ನಕುಲಃ ಪ್ರತಿಜಜ್ಞೇಽಥ ಶಾಕುನೇಯವಧಂ ಪ್ರತಿ ॥ ೩೬೯ ॥**

**ಪದಚ್ಛೇದ** :- **ಪ್ರತಿಜ್ಞಾಂ, ಆದದೇ, ಪಾರ್ಥಾಃ, ತಾಂ, ಮಾದ್ರೀನಂದನಃ, ತಥಾ, ನಕುಲಃ, ಪ್ರತಿಜಜ್ಞೆ, ಅಥ, ಶಾಕುನೆಯವಧಂ ಪ್ರತಿ ।**

**ಅರ್ಥ** :- **ಪಾರ್ಥಾಃ** = ಅರ್ಜುನನು, **ತಾಂ** = ಆ, **ಪ್ರತಿತಾಂ** = ಪ್ರತಿಜ್ಞೆಯನ್ನು, **ಆದದೇ** = ಸ್ವೀಕರಿಸಿದನು, **ತಥಾ** = ಹಾಗೆಯೇ, **ಮಾದ್ರೀನಂದನಃ** = ಸಹದೇವನು, **ಪ್ರತಿಜ್ಞಾಂ ತಾಂ** = ಆ ಪ್ರತಿಜ್ಞೆಯನ್ನು, **ಆದದೇ** = ಸ್ವೀಕರಿಸಿದನು, **ಅಥ** = ಅನಂತರ, **ನಕುಲಃ** = ನಕುಲನು, **ಶಾಕುನೇಯವಧಂ ಪ್ರತಿ** = ಶಕುನಿಯ ಮಗನ ವಧೆಯೆಂಬ, **ಪ್ರವಿಜಜ್ಞೆ** = ಪ್ರತಿಜ್ಞೆ ಮಾಡಿದನು.

**ತಾತ್ಪರ್ಯ** :- ಅರ್ಜುನನು ಆ ಪ್ರತಿಜ್ಞೆಯನ್ನು ಸ್ವೀಕರಿಸಿದನು. ಹಾಗೆಯೇ ಸಹದೇವನು ಸ್ವೀಕರಿಸಿದನು. ಅನಂತರ ನಕುಲನು ಶಕುನಿಯ ಮಗನ ವಧೆ ಎಂಬ ಪ್ರತಿಜ್ಞೆಯನ್ನು ಮಾಡಿದನು.

**ತತಃ ಸುಯೋಧನಾನುಜಶ್ಚಕರ್ಷ ಪಾರ್ಷತಾತ್ಮಜಾಮ್ ।**
**ಗೃಹಾಯ ತನ್ನಿಶಾಮ್ಯ ತು ಕ್ರುಧಾಽಽಹ ಮಾರುತಾತ್ಮಜಃ ॥ ೩೭೦ ॥**

**ಪದಚ್ಛೇದ** :- **ತತಃ, ಸುಯೋಧನಾನ್, ಅನುಜಃ, ಚಕರ್ಷಃ, ಪಾರ್ಷತಾತ್ಮಜಾಂ, ಗೃಹಾಯ, ತಾಂ, ನಿಶಾಮ್ಯ, ತು, ಕ್ರುಧಾ, ಆಹ, ಮಾರುತಾತ್ಮಜಃ ।**

**ಅರ್ಥ** :- ತತಃ = ಅನಂತರ, ಸುಯೋಧನಾನನುಜಃ = ದುಃಶಾಸನನು, ಪಾರ್ಷತಾತ್ಮಜಾಂ = ದ್ರೌಪದಿಯನ್ನು, ಗೃಹಾಯ = ಮನೆಗೆ, ಚಕರ್ಷಃ = ಎಳೆದನು, ತಾಂ = ಅದನ್ನು, ನಿಶಾಮ್ಯ = ನೋಡಿ, ಕೃಧಾ = ಕೋಪಗೊಂಡ, ಮಾರುತಾತ್ಮಜಃ ತು = ಭೀಮನಾದರೂ, ಆಹ = ಹೇಳಿದನು.

**ತಾತ್ಪರ್ಯ** :- ಅನಂತರ ದುಃಶಾಸನನು ದ್ರೌಪದಿಯನ್ನು ಮನೆಯೊಳಗೆ ಎಳೆಯಲು, ಅದನು ಕಂಡ ಭೀಮನು ಕೋಪದಿಂದ ಹೇಳಿದನು.

**ಅರ್ಜುನಾರ್ಜುನ ನೈವಾತ್ರ ಕ್ಷಮಾ ಮೇ ತಾತ ರೋಚತೇ ।**
**ಪತಿತಸ್ಯಾಸ್ಯ ದೇಹಸ್ಯ ಕಾಷ್ಠವಿಷ್ಠಾಸಮಸ್ಯ ಚ ।**
**ಫಲಾನಿ ತ್ರೀಣಿ ಶಿಷ್ಯಂತೇ ವಿದ್ಯಾ ಕರ್ಮ ಸುತಾ ಇತಿ ॥ ೩೭೧ ॥**

**ಪದಚ್ಛೇದ** :- ಅರ್ಜುನ, ಅರ್ಜುನ, ನನಂ, ಏವ, ಅತ್ರ, ಕ್ಷಮಾ, ಮೇ, ತಾತ, ರೋಚತೇ, ಪ್ರತೀತಸ್ಯ, ಅಸ್ಯ, ದೇಹಸ್ಯ, ಕಾಷ್ಠವಿಷ್ಠಾಸಮಸ್ಯ, ಚ, ಫಲಾನಿ, ತ್ರೀಣಿ, ಶಿಷ್ಯಂತೇ, ವಿದ್ಯಾ, ಕರ್ಮ, ಸುತಾ, ಇತಿ ।

**ಅರ್ಥ** :- ತಾತ ಅರ್ಜುನಾರ್ಜುನ = ಹೇ ಅರ್ಜುನ ಅರ್ಜುನ, ಅತ್ರ = ಇಲ್ಲಿ, ಕ್ಷಮಾ = ಕ್ಷಮೆಯು, ಮೇ = ನನಗೆ, ನೈವ ರೋಚತೇ = ಸರಿಕಾಣುತ್ತಿಲ್ಲ, ಪತಿತಸ್ಯ = ಮರಣಹೊಂದಿದ, ಅಸ್ಯ ದೇಹಸ್ಯ = ಈ ದೇಹ, ಕಾಷ್ಠಾ = ಕಟ್ಟಿಗೆಯು, ವಿಷ್ಠಾ = ಮಲ, ಸಮಸ್ಯ ಚ = ಸಮಾನವಷ್ಟೆ, ತ್ರೀಣಿ = ಮೂರು, ಫಲಾನಿ = ಫಲಗಳು, ವಿದ್ಯಾ = ವಿದ್ಯೆಯು, ಕರ್ಮ = ಕರ್ಮವು, ಸುತಾ = ಮಗನು, ಶಿಷ್ಯಂತೇ ಇತಿ = ಉಳಿಯುವುವು ಅಷ್ಟೆ.

**ತಾತ್ಪರ್ಯ** :- ಹೇ ಅರ್ಜುನ ಅರ್ಜುನ, ಇಲ್ಲಿ ಸಹನೆಯು ಸರಿಯೆಂದು ಕಾಣುತ್ತಿಲ್ಲ, ಮರಣಹೊಂದಿದ ದೇಹವು ಕಟ್ಟಿಗೆ ಮತ್ತು ಮಲಕ್ಕೆ ಸಮಾನ. ವಿದ್ಯೆ, ಕರ್ಮ ಹಾಗೂ ಮಗ ಈ ಮೂರೇ ಜೀವನದ ಫಲಗಳು ಉಳಿಯುವವು.

**ವಿಶೇಷ ವಿಷಯ** :

ತ್ರೀಣಿ ಜ್ಯೋತೀಂಷಿ ಪುರುಷಃ ಇತಿ ವೈ ದೇವಲೋಽಬ್ರವೀತ್ ।
ಅಪತ್ಯಂ ಕರ್ಮ ವಿದ್ಯಾ ಚ ಯತಃ ಸೃಷ್ಟಾಃ ಪ್ರಜಾಸ್ತತಃ ॥

ತನ್ನೋ ಜ್ಯೋತಿರಭಿಹತಂ ದಾರಾಣಾಮಭಿಮರ್ಶನಾತ್ ।
ಧನಂಜಯ ಕಥಂಸ್ವಿತ್ಸ್ಯಾತ್ ಅಪತ್ಯಮಭಿಮೃಷ್ಟಜಮ್ ॥

(ಸಭಾ. ೯೪-೫-೭)

ಇತಿ ವೇದೋದಿತಂ ವಾಕ್ಯಂ ನ ಸುತೋ ದಾರದೂಷಣೇ ।
ದುಷ್ಟದಾರೋ ನಚಾऽಪ್ನೋತಿ ಲೋಕಾನರ್ಧೋ ಹಿ ದೂಷಿತಃ ।
ಅರಕ್ಷಣಾದ್ ದೂಷಿತಾಯಾ ನ ತ್ಯಾಗಾಚ್ಚ ಶುಭಂ ಭವೇತ್ ॥ ೩೭೨ ॥

ಪದಚ್ಛೇದ :- ಇತಿ, ವೇದೋದಿತಂ, ವಾಕ್ಯಂ, ನ, ಸುತಃ, ದಾರಧರ್ಷಣೆ, ದುಷ್ಟದಾರಃ, ನ, ಚ, ಆಪ್ನೋತಿ, ಲೋಕಾನ್, ಅರ್ಧ, ಹಿ, ದೂಷಿತಃ, ಅರಕ್ಷಣಾತ್, ದೂಷಿತಾಯಾಃ, ನ, ತ್ಯಾಗಾತ್, ಚ, ಶುಭಂ, ಭವೇತ್ ।

ಅರ್ಥ :- ಇತಿ = ಎಂದು, ವೇದೋದಿತಂ = ವೇದದಲ್ಲಿ ಹೇಳಿದ, ವಾಕ್ಯಂ = ಮಾತು, ದಾರಧರ್ಷಣೆ = ಪತ್ನಿಯನ್ನು ಬಲಾತ್ಕರಿಸಿದರೆ, ನ ಸುತಃ = ಉತ್ತಮ ಸಂತಾನವಾಗುವುದಿಲ್ಲ, ಚ = ಮತ್ತು, ದುಷ್ಟದಾರಃ = ಕೆಟ್ಟ ಪತ್ನಿಯಿಂದ, ಅರ್ಧಃ = ಅರ್ಧಾಂಗವು, ದೂಪಿತಃ = ದೂಷ್ಟವಾಗುತ್ತದೆ, ಲೋಕಾನ್ = ಪುಣ್ಯಲೋಕವನ್ನು, ನಾಪ್ನೋತಿ = ಹೊಂದುವುದಿಲ್ಲ, ಹಿ = ಅದು ಯುಕ್ತವೇ, ಅರಕ್ಷಣಾತ್ = ರಕ್ಷಿಸದೇ, ದೂಷಿತಾಯಾಃ = ದೂಷಿತಳಾದ ಪತ್ನಿಯ, ತ್ಯಾಗಾತ್ = ಪರಿತ್ಯಾಗದಿಂದ, ದೂಷಿತಃ ಚ = ದೂಷಿತನಾದ ಗಂಡನು, ಶುಭಂ = ಸುಖವನ್ನು, ನ ಭವೇತ್ = ಹೊಂದುವುದಿಲ್ಲ.

ತಾತ್ಪರ್ಯ :- ಇದು ವೇದೋಕ್ತ ವಚನ ಪತ್ನಿಯನ್ನು ಯಾರಾದರೂ ಬಲಾತ್ಕರಿಸಿದರೆ ಪತಿಗೆ ಸತ್ಸಂತಾನ ಇಲ್ಲವಾಗುವುದು. ಮತ್ತು ಪತ್ನಿ ಕೆಟ್ಟರೆ ಪತಿ ಪುಣ್ಯ ಲೋಕವನ್ನು ಪಡೆಯಲಾರ. ಏಕೆಂದರೆ ಅವನ ಅರ್ಧ ಅಂಗವೇ ಕೆಟ್ಟು ಹೋಗಿರುತ್ತದೆ. ಪತ್ನಿ ಕೆಟ್ಟು ಹೋದ ಬಳಿಕ ತಾನು ರಕ್ಷಣೆ ಮಾಡದಿದ್ದರೂ ಪರಿತ್ಯಾಗ ಮಾಡಿದರೂ ಸುಖವಿಲ್ಲ.

ಅತೋऽದ್ಯ ಸಾನುಬಂಧಕಾನ್ ನಿಹನ್ಮಿ ಧಾರ್ತರಾಷ್ಟ್ರಕಾನ್ ।
ಇತಿ ಬ್ರುವನ್ ವ್ಯಲೋಕಯದ್ ರಿಪೂನ್ ದಹನ್ನಿವೌಜಸಾ ॥ ೩೭೩ ॥

ಪದಚ್ಛೇದ :- ಅತಃ, ಅದ್ಯ, ಸಾನುಬಂಧಕಾನ್, ನಿಹನ್ಮಿ, ಧಾರ್ತರಾಷ್ಟ್ರಕಾನ್, ಇತಿ, ಬ್ರುವನ್, ವ್ಯಲೋಕಯತ್, ರಿಪೂನ್, ದಹನ್, ಇವ, ಓಜಸಾ ।

ಅರ್ಥ :- ಅತಃ = ಆದ್ದರಿಂದ, ಅದ್ಯ = ಇಂದು, ಸಾನುಬಂಧಕಾನ್ = ಪರಿವಾರದಿಂದ ಕೂಡಿದ, ಧಾರ್ತರಾಷ್ಟ್ರಕಾನ್ = ಕೌರವರನ್ನು, ನಿಹನ್ಮಿ = ಕೊಲ್ಲುವೆನು, ಇತಿ = ಎಂದು, ಬ್ರುವನ್ = ಹೇಳುತ್ತಾ, ರಿಪೂನ್ = ಶತ್ರುಗಳನ್ನು, ದಹನ್ ಇವ = ಸುಡುವನಂತೆ, ಓಜಸಾ = ಸಿಟ್ಟಿನಿಂದ, ವ್ಯಲೋಕಯತ್ = ನೋಡಿದನು.

ತಾತ್ಪರ್ಯ :- ಆದ್ದರಿಂದ ಪರಿವಾರ ಸಹಿತ ಈ ಕೌರವರನ್ನು ಕೊಲ್ಲುವೆನು ಎಂದು ಹೇಳಿ ಶತ್ರುಗಳನ್ನು ಸುಡುವನಂತೆ ಸಿಟ್ಟಿನಿಂದ ನೋಡಿದನು.

**ದದರ್ಶ ಚ ಮಹಾಘೋರಮಾದಾತುಂ ಪರಿಘಂ ರುಷಾ ।**
**ಕರ್ತುಂ ವ್ಯವಸಿತೋ ಬುದ್ಧ್ಯಾ ನಿಶ್ಶೇಷಾನ್ ಧಾರ್ತರಾಷ್ಟ್ರಕಾನ್ ॥ ೩೭೪ ॥**

ಪದಚ್ಛೇದ :- ದದರ್ಶ, ಚ, ಮಹಾಘೋರಂ, ಆದಾತುಂ, ಪರಿಘಂ, ರುಷಾ, ಕರ್ತುಂ, ವ್ಯವಸಿತಃ, ಬುದ್ಧ್ಯಾ, ನಿಃಶೇಷಾನ್, ಧಾರ್ತರಾಷ್ಟ್ರಕಾನ್ ।

ಅರ್ಥ :- ಬುದ್ಧ್ಯಾ = ಬುದ್ಧಿಯಿಂದ, ಧಾರ್ತ್ರರಾಷ್ಟ್ರಕಾನ್ = ಕೌರವರನ್ನು, ನಿಃಶೇಷಾನ್ = ಸಂಹರಿಸಲು, ವ್ಯವಸಿತಃ = ನಿಶ್ಚಯಿಸಿದ (ಭೀಮನು), ರುಷಾಚ = ಸಿಟ್ಟಿನಿಂದಲೇ, ಮಹಾಘೋರಂ = ಬಹಳ ದೊಡ್ಡದಾದ, ಪರಿಘಂ = ಕಬ್ಬಿಣದ ಕಂಬವನ್ನು, ಆದಾತುಂ = ತೆಗೆದುಕೊಳ್ಳಲು, ದದರ್ಶ = ನೋಡಿದನು.

ತಾತ್ಪರ್ಯ :- ಬುದ್ಧಿಯಿಂದ ಕೌರವರ ಸಂಹಾರವನ್ನು ನಿಶ್ಚಯಿಸಿದ ಭೀಮಸೇನನು, ಸಿಟ್ಟಿನಿಂದಲೇ ಬಹಳ ದೊಡ್ಡದಾದ ಕಬ್ಬಿಣದ ಕಂಬವನ್ನು ತೆಗೆದುಕೊಳ್ಳಲು ದಿಟ್ಟಿಸಿ ನೋಡಿದನು.

**ತದಾ ಶಿವಾ ವವಾಶಿರೇ ಸುಯೋಧನಾಗ್ನಿಗೇಹತಃ ।**
**ತಥೈವ ತತ್ಪಿತುರ್ಗೃಹೇऽಪ್ಯಭೂದ್ ಭಯಾನಕಂ ಬಹು ॥ ೩೭೫ ॥**

ಪದಚ್ಛೇದ :- ತದಾ, ಶಿವಾಃ, ವವಾಶಿರೆ, ಸುಯೋಧನಾಗ್ನಿಗೇಹತಃ, ತಥಾ, ಏವ, ತತ್ಪಿತುಃ, ಗೃಹೇ, ಅಪಿ, ಅಭೂತ್, ಭಯಾನಕಂ, ಬಹು ।

ಅರ್ಥ :- ತದಾ = ಆಗ, ಸುಯೋಧನಾಗ್ನಿಗೇಹತಃ = ದುರ್ಯೋಧನನ ಯಾಗಶಾಲೆಯಿಂದ, ಶಿವಾಃ = ಹೆಣ್ಣು ನರಿಗಳು, ವವಾಶಿರೇ = ಕೂಗಿದವು,

**ತಥಾ** = ಹಾಗೆ, **ತತ್ಪಿತುಃ** = ಅವನ ತಂದೆಯ, **ಗೃಹೆ ಏವ** = ಮನೆಯಲ್ಲಿಯೇ, **ಬಹುಭಯಾನಕಮಪಿ** = ಬಹಳ ಭಯಾನಕವಾದ ಉತ್ಪಾತಗಳು, **ಅಭೂತ್** = ಆದವು.

**ತಾತ್ಪರ್ಯ** :- ಆಗ ದುರ್ಯೋಧನನ ಯಾಗಶಾಲೆಯಲ್ಲಿ ಹೆಣ್ಣು ನರಿಗಳು ಕೂಗಿದವು, ಹಾಗೆಯೆ ತಂದೆಯಾದ ಧೃತರಾಷ್ಟ್ರನ ಮನೆಯಲ್ಲಿ ಭಯಾನಕವಾದ ಉತ್ಪಾತಗಳು ನಡೆದವು.

**ನಿಮಿತ್ತಾನ್ಯತಿಘೋರಾಣಿ ಕುಪಿತೇ ಮಾರುತಾತ್ಮಜೇ ।**
**ದೃಷ್ಟ್ವಾಽಽಂಬಿಕೇಯೋ ವಿದುರಂ ಪಪ್ರಚ್ಛೈಷಾಂ ಫಲಂ ದ್ರುತಮ್ ॥ ೩.೭೬ ॥**

ಪದಚ್ಛೇದ :- **ನಿಮಿತ್ತಾನಿ, ಅನ್ಯಾನಿ, ಅತಿಘೋರಾಣಿ, ಕುಪಿತೇ, ಮಾರುತಾತ್ಮಜೇ, ದೃಷ್ಟ್ವಾ, ಆಂಬಿಕೇಯಃ, ವಿದುರಂ, ಪಪ್ರಚ್ಛ, ಏಷಾಂ, ಫಲಂ, ಧ್ರುತಮ್ ।**

**ಅರ್ಥ** :- **ಮಾರುತಾತ್ಮಜೇ** = ಭೀಮನು, **ಕುಪಿತೇ** = ಕೋಪಗೊಂಡಿರಲು, **ಅತಿಘೋರಾಣಿ** = ಅತಿಘೋರವಾದ, **ನಿಮಿತ್ತಾನಿ** = ಉತ್ಪಾತಗಳನ್ನು, **ಅನ್ಯಾನಿ** = ಬೇರೆಯದನ್ನು, **ದೃಷ್ಟ್ವಾ** = ಕಂಡು, **ಆಂಬಿಕೇಯಃ** = ಧೃತರಾಷ್ಟ್ರನು, **ಹತಂ** = ಬೇಗನೆ, **ವಿದುರಂ** = ವಿದುರನನ್ನು, **ಏಷಾಂ** = ಈ ಉತ್ಪಾತಗಳ, **ಫಲಂ** = ಫಲವನ್ನು, **ಪಪ್ರಚ್ಛ** = ಕೇಳಿದನು.

**ತಾತ್ಪರ್ಯ** :- ಭೀಮ ಕುಪಿತನಾಗಿರಲು ಅತಿಭಯಾನಕವಾದ ಉತ್ಪಾತಗಳನ್ನು ಕಂಡು ಧೃತರಾಷ್ಟ್ರನು ಬೇಗನೆ ವಿದುರನನ್ನು ಅದರ ಫಲಗಳನ್ನು ಕೇಳಿದನು.

**ಆಹ ತಂ ವಿದುರೋ ಜ್ಯೇಷ್ಠಂ ಕ್ಷಣೇಽಸ್ಮಿಂಸ್ತವ ಪುತ್ರಕಾಃ ।**
**ಸಾನುಬಂಧಾ ನಶಿಷ್ಯಂತಿ ವೃಕೋದರಬಲಾಹತಾಃ ॥ ೩.೭೭ ॥**

ಪದಚ್ಛೇದ :- **ಆಹ, ತಂ, ವಿದುರಃ, ಜ್ಯೇಷ್ಠಂ, ಕ್ಷಣೇ, ಅಸ್ಮಿನ್, ತವ, ಪುತ್ರಕಾಃ, ಸಾನುಬಂಧಾಃ, ನಶಿಷ್ಯಂತಿ, ವೃದೋದರಬಲಾಹತಾಃ ।**

**ಅರ್ಥ** :- **ವಿದುರಃ** = ವಿದುರನು, **ತಂ ಜ್ಯೇಷ್ಠಂ** = ಅಣ್ಣನಾದ ಧೃತರಾಷ್ಟ್ರನನ್ನು ಕುರಿತು, **ಕ್ಷಣೆ** = ಕ್ಷಣಕಾಲದಲ್ಲಿ, **ಸಾನುಬಂಧಾಃ** = ಪರಿವಾರ

ಸಹಿತ, ತವ = ನಿನ್ನ, **ಪುತ್ರಕಾಃ** = ಮಕ್ಕಳು, **ವೃಕೋದರಬಲಾಹತಾಃ** = ಭೀಮನ ಬಲದಿಂದ, **ನಶಿಷ್ಯಂತಿ** = ನಾಶಹೊಂದುತ್ತಾರೆ, **ಆಹ** = ಹೇಳಿದನು.

**ತಾತ್ಪರ್ಯ** :- ವಿದುರ ಅಣ್ಣನಾದ ಧೃತರಾಷ್ಟ್ರನಿಗೆ 'ಕ್ಷಣಕಾಲದಲ್ಲಿ ನಿನ್ನ ಪರಿವಾರ ಸಹಿತ ನಿನ್ನ ಮಕ್ಕಳು ಭೀಮಸೇನನ ಬಲದಿಂದ ನಾಶಹೊಂದುತ್ತಾರೆ' ಎಂದು ಹೇಳಿದನು.

**ಕ್ರೀಡಸೇಽರ್ಭಕವತ್ ತ್ವಂ ಹಿ ಕಿಂ ಜಿತಂ ಕಿಂ ಜಿತಂ ತ್ವಿತಿ ।**
**ಅಧರ್ಮೇಣ ಜಿತಾನತ್ರ ಜಿತಾನ್ ಪಶ್ಯಸಿ ಪಾಂಡವಾನ್ ॥ ೩೭೮ ॥**

**ಪದಚ್ಛೇದ** :- **ಕ್ರಿಡಸೇ, ಅರ್ಭಕವತ್, ತ್ವಂ, ಹಿ, ಕಿಂ, ಜಿತಂ, ಕಿಂ, ಜಿತಂ, ತು, ಇತಿ, ಅಧರ್ಮೇಣ, ಜಿತಾನ್, ಅತ್ರ, ಜಿತಾನ್, ಪಶ್ಯಸಿ, ಪಾಂಡವಾನ್ ।**

**ಅರ್ಥ** :- **ತ್ವಂ ತು** = ನೀನಾದರೋ, **ಅರ್ಭಕವತ್** = ಚಿಕ್ಕ ಮಕ್ಕಳಂತೆ, **ಕಿಂ ಜಿತಂ ಕಿಂ ಜಿತಂ** = ಎನನ್ನು ಗೆದ್ದೆವು, ಎನನ್ನು ಗೆದ್ದೆವು ಎಂದು, **ಕ್ರಿಡಸೇ ಹಿ** = ಆಡುತ್ತಿರುವೆ ಅಷ್ಟೆ, **ಅತ್ರ** = ಇಲ್ಲಿ, **ಪಾಂಡವಾನ್** = ಪಾಂಡವರನ್ನು, **ಅಧರ್ಮೇಣ** = ಅಧರ್ಮದಿಂದ, **ಜಿತಾನ್ ಜಿತಾನ್** = ಗೆಲ್ಲಲ್ಪಟ್ಟಿದೆ ಗಲ್ಲಲ್ಪಟ್ಟಿದೆ, **ಪಶ್ಯಸಿ** = ನೀನು ನೋಡುತ್ತಿರುವೆ.

**ತಾತ್ಪರ್ಯ** :- ನೀನಾದರೋ ಚಿಕ್ಕ ಮಕ್ಕಳಂತೆ ಎನನ್ನು ಗೆದ್ದೆವು ಎನನ್ನು ಗೆದ್ದೆವು ಎಂದು ಆಡುತ್ತಿರುವೆ. ಆದರೆ ಇಲ್ಲಿ ಪಾಂಡವರನ್ನು ಅಧರ್ಮದಿಂದ ಗೆದ್ದು, ಧರ್ಮದಿಂದ ಗೆದ್ದೆವು ಎಂದು ನೋಡುತ್ತಿರುವೆ.

**ಸ್ತ್ರೀಷು ದ್ಯೂತೇಷು ವಾ ದತ್ತಂ ಮದಾಂಧೇನ ನರೇಣ ವಾ ।**
**ನ ದತ್ತಮಾಹುರ್ವಿದ್ವಾಂಸಸ್ತಸ್ಯ ಬಂಧುಭಿರೇವ ಚ ॥ ೩೭೯ ॥**

**ಪದಚ್ಛೇದ** :- ಸ್ತ್ರೀಷು, ದ್ಯೂತೇಷು, ವಾ, ದತ್ತಾಂ, ಮದಾಂಧೇನ, ನರೇಣ, ವಾ, ನ, ದತ್ತಂ, ಆಹುಃ, ವಿದ್ವಾಂಸಃ, ತಸ್ಯ, ಬಂಧುಭಿಃ, ಏವ, ಚ ।

**ಅರ್ಥ** :- **ಸ್ತ್ರೀಷು** = ವೇಶ್ಯಾಸ್ತ್ರೀಯರಿಗೆ, **ದತ್ತಾಂ** = ಕೊಟ್ಟದ್ದು, **ದ್ಯೂತೇಷು** = ಜೂಜಿನಲ್ಲಿ, **ದತ್ತಾಂ** = ಕೊಟ್ಟಿದ್ದು, **ಮದಾಂಧೇನ** = ಮತ್ತೇರಿದ, **ನರೇಣ** = ಮನುಷ್ಯನಿಂದ, **ದತ್ತಾಂ** = ಕೊಟ್ಟಿದ್ದು, **ವಿದ್ವಾಂಸಃ** = ವಿದ್ವಾಂಸರು,

ನ ದತ್ತಂ = ಕೊಟ್ಟಿಲ್ಲವೆಂದು, ಆಹುಃ = ಹೇಳುತ್ತಾರೆ, ತಸ್ಯ = ಆ ಸಂಪತ್ತನ್ನು, ಬಂಧುಭಿಃ ಏವ = ಬಾಂಧವರಿಗೆ, ದತ್ತಂ = ಕೊಡಲ್ಪಡಬೇಕು.

ತಾತ್ಪರ್ಯ :- ವೇಶ್ಯಾಸ್ತ್ರೀಯರಿಗೆ, ಜೂಜಿನಲ್ಲಿ, ಮತ್ತೇರಿದ ಮನುಷ್ಯನಿಂದ ಕೊಟ್ಟಿದ್ದು ವಿದ್ವಾಂಸರು ಕೊಟ್ಟಿಲವೆಂದೇ ಹೇಳುತ್ತಾರೆ. ಆ ಸಂಪತ್ತನ್ನು ಅವನ ಬಾಂಧವರಿಗೆ ಹಿಂತಿರುಗಿಸಬೇಕು.

**ಆಹಾರ್ಯಂ ಪುನರಾಹುಶ್ಚ ತಥಾಽಪಿ ನತು ಪಾಂಡವೈಃ ।**
**ತತ್ ಕೃತಂ ತವ ಪುತ್ರಾಣಾಂ ಖ್ಯಾಪಯದ್ಭಿರಶಿಷ್ಟತಾಮ್ ॥ ೩೮೦ ॥**

ಪದಚ್ಛೇದ :- ಆಹಾರ್ಯಂ, ಪುನಃ, ಆಹುಃ, ಚ, ತಥಾ, ಅಪಿ, ನ, ತು, ಪಾಂಡವೈಃ, ತತ್ಕೃತಂ, ತವ, ಪುತ್ರಾಣಾಂ, ಖ್ಯಾಪಯದ್‌ಭಿಃ, ಅಶಿಷ್ಟತಾಂ ।

ಅರ್ಥ :- ತಥಾಽಪಿ = ಹಾಗಿದ್ದರೂ, ಪಾಂಡವೈಃ = ಪಾಂಡವರಿಂದ, ಪುನಃ ಆಹಾರ್ಯಂ = ಮರಳಿಪಡೆಯುವಿಕೆ, ನ ತತ್ಕೃತಂ = ಮಾಡಲಿಲ್ಲ, ತವ = ನಿನ್ನ, ಪುತ್ರಾಣಾಂ = ಮಕ್ಕಳ, ಅಶಿಷ್ಟತಾಂ = ದುಷ್ಟತನವನ್ನು, ಖ್ಯಾಪಯದ್‌ಭಿಃ ಆಹುಃ = ಲೋಕಕ್ಕೆ ತೋರಿಸುತ್ತಿದ್ದಾರೆ.

ತಾತ್ಪರ್ಯ :- ಹಾಗಾದರೂ ಪಾಂಡವರು ಹಾಗೆ ಮಾಡಲಿಲ್ಲ. ನಿನ್ನ ಮಕ್ಕಳು ಅಸಭ್ಯರೆಂದು ಲೋಕಕ್ಕೆ ತೋರಿಸುತ್ತಿದ್ದಾರೆ.

**ಇತ್ಯುಕ್ತ ಆಹಾಽಂಬಿಕೇಯೋ ನಿಮಿತ್ತಾನಾಂ ಫಲಂ ಕಥಮ್ ।**
**ನ ಭವೇದಿತಿ ಸ ಪ್ರಾಹ ದ್ರುತಂ ಕೃಷ್ಣಾ ವಿಮುಚ್ಯತಾಮ್ ॥ ೩೮೧ ॥**

ಪದಚ್ಛೇದ :- ಇತಿ, ಉಕ್ತಃ, ಆಹ, ಆಂಭಿಕೇಯಃ, ನಿಮಿತ್ತಾನಾಂ, ಫಲಂ, ಕಥಂ, ನ, ಭವೇತ್, ಇತಿ, ಸಃ, ಪ್ರಾಹ, ಹತಂ, ಕೃಷ್ಣಾ, ವಿಮೋಚ್ಯತಾಂ ।

ಅರ್ಥ :- ಇತಿ = ಎಂದು, ನಿಮಿತ್ತಾನಾಂ = ಉತ್ಪಾತಗಳ, ಫಲಂ = ಫಲವು, ಕಥಂ ನ ಭವೇತ್ = ಹೇಗೆ ಆಗುವುದಿಲ್ಲ ಎಂದ, ಉಕ್ತಃ = ವಿದುರನು ಹೇಳಿದನು, ಸಃ ಆಂಭಿಕೇಯಃ = ಧೃತರಾಷ್ಟ್ರನು, ಪ್ರಾಹ = ಹೇಳಿದನು, ಹತಂ = ಬೇಗನೆ, ಕೃಷ್ಣಾ = ದ್ರೌಪದಿಯನ್ನು, ವಿಮೋಚ್ಯತಾಂ = ಬಿಡುಗಡೆ ಮಾಡಲ್ಪಡಲಿ, ಇತಿ = ಎಂದು, ಆಹ = ಹೇಳಿದನು.

ತಾತ್ಪರ್ಯ :- ವಿದುರನು ಹೇಳಿದ್ದನ್ನು ಕೇಳಿದ ಧೃತರಾಷ್ಟ್ರನು 'ಈ ಉತ್ಪಾತಗಳ ಫಲ ಬಾರದಂತೆ ಮಾಡುವ ಬಗೆ ಹೇಗೆ ಎಂದು ಕೇಳಿದ ಒಡನೆ ವಿದುರನೆಂದ ದ್ರೌಪದಿಯನ್ನು ಮೊದಲು ಬಿಡಿಸು' ಎಂದು.

**ತೋಷಯಸ್ವ ವರೈಶ್ಚೈನಾಮನ್ಯಥಾ ತೇ ಸುತಾನ್ ಮೃತಾನ್ ।**
**ವಿದ್ಧಿ ಭೀಮೇನ ನಿಷ್ಪಿಷ್ಟಾನ್ ಮಾऽತ್ರ ತೇ ಸಂಶಯೋ ಭವೇತ್ ॥ ೩೮೨ ॥**

ಪದಚ್ಛೇದ :– ತೋಷಮಸ್ವ, ವರೈಃ, ಚ, ಏನಾಂ, ಅನ್ಯಥಾ, ತೇ, ಸುತಾನ್, ಮೃತಾನ್, ವಿದ್ಧಿ, ಭೀಮೇನ, ನಿಷ್ಪಿಷ್ಟಾನ್, ನ, ಅತ್ರ, ತೇ, ಸಂಶಯಃ, ಭವೇತ್ ।

ಅರ್ಥ :- ಏನಾಂ = ಈ ದ್ರೌಪದಿಯನ್ನು, ವರೈಃ = ವರಗಳಿಂದ, ತೋಷಯಸ್ವ = ಸಂತೋಷಪಡಿಸು, ಅನ್ಯಥಾ = ಇಲ್ಲದಿದ್ದರೆ, ಭೀಮೇನ = ಭೀಮನಿಂದ, ತೇ = ನಿನ್ನ, ಸುತಾನ್ = ಮಕ್ಕಳು, ಮೃತಾನ್ ವಿದ್ಧಿ = ಸತ್ತರೆಂದು ತಿಳಿ, ಅತ್ರ = ಈ ವಿಷಯದಲ್ಲಿ, ಸಂಶಯಃ = ಸಂಶಯ, ನ ಭವೇತ್ = ಇಲ್ಲದಿರಲಿ.

ತಾತ್ಪರ್ಯ :- ದ್ರೌಪದಿಗೆ ವರಗಳಿಂದ ಸಂತೋಷಿಸು, ಇಲ್ಲದಿದ್ದರೆ ನಿನ್ನ ಮಕ್ಕಳು ಭೀಮನಿಂದ ಇಲ್ಲೇ ಹತರಾಗುತ್ತಾರೆ ಈ ವಿಷಯದಲ್ಲಿ ಸಂಶಯ ಬೇಡ.

**ಕೃಷ್ಣಾ ಚ ಪಾಂಡವಾಶ್ಚೈವ ತಪೋವೃದ್ಧಿಮಭೀಪ್ಸವಃ ।**
**ತಪಸಾ ನೈವ ಧಕ್ಷ್ಯಂತಿ ತೇನ ಜೀವಂತಿ ತೇ ಸುತಾಃ ॥ ೩೮೩ ॥**

ಪದಚ್ಛೇದ :– ಕೃಷ್ಣಾ, ಚ, ಪಾಂಡವಾಃ, ಚ, ಏವ, ತಪೋವೃದ್ಧಿಂ, ಅಭೀಪ್ಸವಃ, ತಪಸಾ, ನ, ಏವ, ಧಕ್ಷ್ಯಂತಿ, ತೇನ, ಜೀವಂತಿ, ತೇ, ಸುತಾಃ ।

ಅರ್ಥ :- ಕೃಷ್ಣಾ ಚ = ದ್ರೌಪದಿಯಾಗಲಿ, ಪಾಂಡವಾಃ ಚ = ಪಾಂಡವರಾಗಲಿ, ತಪೋವೃದ್ಧಿಂ = ತಪೋವೃದ್ಧಿಯನ್ನು, ಅಭೀಪ್ಸವಃ ಏವ = ಬಯಸುತ್ತಿದ್ದಾರೆ, ತಪಸಾ = ತಪಸ್ಸಿನಿಂದ, ನೈವ ಧಕ್ಷ್ಯಂತಿ = ಸುಡುತ್ತಿಲ್ಲ, ತೇನ = ಆ ಕಾರಣದಿಂದ, ತೇ = ನಿನ್ನ, ಸುತಾಃ = ಮಕ್ಕಳು, ಜೀವಂತಿ = ಬದುಕಿದ್ದಾರೆ.

ತಾತ್ಪರ್ಯ :- ದ್ರೌಪದಿ ಅಥವಾ ಪಾಂಡವರಾಗಲಿ ತಪೋವೃದ್ಧಿಯನ್ನು ಬಯಸುತ್ತಿದ್ದಾರೆ, ತಪಸ್ಸಿನಿಂದ ಸುಡುತ್ತಿಲ್ಲ. ಆದ್ದರಿಂದಲೇ ನಿನ್ನ ಮಕ್ಕಳು ಇನ್ನೂ ಬದುಕಿದ್ದಾರೆ.

**ತಥಾऽಪಿ ಯದಿ ಕೃಷ್ಣಾಂ ತ್ವಂ ನ ಮೋಚಯಸಿ ತೇ ಸುತಾನ್ ।**
**ಹನಿಷ್ಯತಿ ನ ಸಂದೇಹೋ ಬಲೇನೈವ ವೃಕೋದರಃ ॥ ೩೮೪ ॥**

**ಪದಚ್ಛೇದ :– ತಥಾ, ಅಪಿ, ಯದಿ, ಕೃಷ್ಣಾಂ, ತ್ವಂ, ನ, ಮೋಚಯಸಿ, ತೇ, ಸುತಾನ್, ಹನಿಷ್ಯತಿ, ನ, ಸಂದೇಹಃ, ಬಲೇನ, ಏವ, ವೃಕೋದರಃ ।**

**ಅರ್ಥ** :- **ತಥಾऽಪಿ** = ಹಾಗಿದ್ದರೂ, **ಯದಿ** = ಒಂದುವೇಳೆ, **ತ್ವಂ** = ನೀನು, **ಕೃಷ್ಣಾಂ** = ದ್ರೌಪದಿಯನ್ನು, **ನ ಮೋಚಯಸಿ** = ಬಿಡದಿದ್ದರೆ, **ವೃಕೋದರಃ** = ಭೀಮನು, **ತೇ** = ನಿನ್ನ, **ಸುತಾನ್** = ಮಕ್ಕಳನ್ನು, **ಬಲೇನ** = ಬಲದಿಂದ, **ಹನಿಷ್ಯತಿ** = ಕೊಲ್ಲುತ್ತಾನೆ, **ನ ಸಂದೇಹ** = ಇದರಲ್ಲಿ ಸಂದೇಹ ಬೇಡ.

ತಾತ್ಪರ್ಯ :– ಹೀಗಿದ್ದರೂ ನೀನು ದ್ರೌಪದಿಯನ್ನು ಬಿಡದಿದ್ದರೆ ಭೀಮನ ಬಲದಿಂದಲೇ ನಿನ್ನ ಮಕ್ಕಳನ್ನು ಕೊಲ್ಲುತ್ತಾನೆ ಸಂಶಯ ಬೇಡ.

**ಇತೀರಿತೋ ವಿನಿರ್ಭರ್ತ್ಸ್ಯ ಪುತ್ರಂ ದುಃಶಾಸನಂ ನೃಪಃ ।**
**ಅಮೋಚಯದ್ ವರೈಶ್ಚೈನಾಂ ಛಂದಯಾಮಾಸ ಪಾರ್ಷತೀಮ್ ॥೩೮೫॥**

**ಪದಚ್ಛೇದ :- ಇತಿ, ಈರಿತೇ, ವಿನಿಭರ್ತ್ಸ್ಯ, ಪುತ್ರಂ, ದುಃಶಾಸನಂ, ನೃಪಃ, ಅಮೋಚಯತ್, ವರೈಃ, ಚ, ಏನಾಂ, ಛಂದಯಾಮಾಸ, ಪಾರ್ಷತೀಂ ।**

**ಅರ್ಥ** :- **ಇತಿ** = ಎಂದು, **ಈರಿತೇ** = ವಿದುರನಿಂದ ಹೇಳಲು, **ನೃಪಃ** = ಧೃತರಾಷ್ಟ್ರನು, **ಪುತ್ರಂ ದುಃಶಾಸನಂ** = ಮಗನಾದ ದುಃಶಾಸನನನ್ನು, **ವಿನಿಭರ್ತ್ಸ್ಯ** = ಬೈದು, **ಏನಾಂ ಪಾರ್ಷತೀಂ** = ಈ ದ್ರೌಪದಿಯನ್ನು, **ಅಮೋಚಯತ್** = ಬಿಡಿಸಿದನು, **ಚ** = ಮತ್ತು, **ವರೈಃ** = ವರಗಳಿಂದ, **ಛಂದಯಾಮಾಸ** = ಸಂತೋಷ ಪಡಿಸಿದ.

ತಾತ್ಪರ್ಯ :- ವಿದುರನ ಮಾತನ್ನು ಕೇಳಿ ಧೃತರಾಷ್ಟ್ರನು ದುಃಶಾಸನನ್ನು ಬೈದು ದ್ರೌಪದಿಯನ್ನು ಬಂಧನದಿಂದ ಬಿಡಿಸಿದನು ಮತ್ತು ವರಗಳಿಂದ ಸಂತೋಷಿಸಿದನು.

ಛಂದಿತಾ ಸಾ ವರೈಸ್ತೇನ ಧರ್ಮೇ ಭಾಗವತೇ ಸ್ಥಿತಾ ।
ನೈವಾಽತ್ಮನೋ ವರಾನ್ ವವ್ರೇ ವವ್ರೇ ತೇಷಾಂ ವಿಮೋಕ್ಷಣಮ್ ॥೩೮೬॥

ಪದಚ್ಛೇದ :- ಛಂದಿತಾ, ಸಾ, ವರೈಃ, ತೇನ, ಧರ್ಮೇ, ಭಾಗವತೇ, ಸ್ಥಿತಾ, ನ, ಏವ, ಆತ್ಮನಃ, ವರಾನ್, ವೌವರೇ, ವೌವರೇ, ತೇಷಾಂ, ವಿಮೋಕ್ಷಣಂ ।

ಅರ್ಥ :- ಭಾಗವತೇ ಧರ್ಮೇ ಸ್ಥಿತಾ = ಭಾಗವತ ಧರ್ಮದಲ್ಲಿ ಇರುವ, ಸಾ = ಆ ದ್ರೌಪದಿಯು, ಛಂದಿತಾ = ವರಗಳನ್ನು ಪಡೆಯೆಂದು ಒತ್ತಾಯಿಸಿದನು, ಆತ್ಮನಃ = ತನಗೆ, ನೈವ ವರೈಃ ವೌವರೇ = ವರಗಳನ್ನು ಬೇಡಲಿಲ್ಲ, ತೇಷಾಂ = ಪಾಂಡವರ, ವಿಮೋಕ್ಷಣಂ = ಬಿಡುಗಡೆ ಎಂಬ, ವರಾನ್ = ವರಗಳನ್ನು, ವೌವರೇ = ಬೇಡಿದಳು.

ತಾತ್ಪರ್ಯ :- ವರಗಳನ್ನು ಸ್ವೀಕರಿಸು ಎಂದು ಹೇಳಿದರೂ ಭಾಗವತ ಧರ್ಮದಲ್ಲಿ ಇರುವ ದ್ರೌಪದಿಯು ತನಗೆ ಯಾವ ವರಗಳನ್ನೂ ಬೇಡಲಿಲ್ಲ. ಪಾಂಡವರ ಬಿಡುಗಡೆ ಎಂಬ ವರಗಳನ್ನು ಬೇಡಿದಳು.

ಯುಧಿಷ್ಠಿರಸ್ಯ ಸಭ್ರಾತುಃ ಸರಾಷ್ಟ್ರಸ್ಯ ವಿಮೋಕ್ಷಣಮ್ ।
ದದೌ ನೃಪೋಽಸ್ಯಾ ನ ಪುನಶ್ಛಂದ್ಯಮಾನಾಽಪಿ ಸಾಽವೃಣೋತ್ ॥ ೩೮೭ ॥

ಪದಚ್ಛೇದ :- ಯುಧಿಷ್ಠಿರಸ್ಯ, ಸಭಾತ್ರಾತುಃ, ಸರಾಷ್ಟ್ರಸ್ಯ, ವಿಮೋಕ್ಷಣಂ, ದದೌ, ನೃಪಃ, ಅಸ್ಯಾ, ನ, ಪುನಃ, ಛಂದಾಮಾನಾ, ಅಪಿ, ಸಾ, ಅವೃಣೋತ್ ।

ಅರ್ಥ :- ಸಭಾತ್ರಾತುಃ = ತಮ್ಮಂದಿರಿಂದ ಕೂಡಿದ, ಸರಾಷ್ಟ್ರಸ್ಯ = ಪರಿವಾರ ಸಹಿತ, ಯುಧಿಷ್ಠಿರಸ್ಯ = ಯುಧಿಷ್ಠಿರನು, ವಿಮೋಕ್ಷಣಂ = ಬಿಡುಗಡೆ, ದದೌ = ಕೊಟ್ಟನು, ನೃಪಃ = ಧೃತರಾಷ್ಟ್ರನು, (ಇತಿ = ಎಂದು) ಅಸ್ಯಾಃ = ಈ ದ್ರೌಪದಿಗೆ, ಪುನಃ ಛಂದಾಮಾನಾಪಿ = ಬೇಡೆಂದು ಹೇಳಿದರೂ, ಸಾ = ಅವಳು, ನಾವೃಣೋತ್ = ಬೇಡಲಿಲ್ಲ.

ತಾತ್ಪರ್ಯ :- ಧೃತರಾಷ್ಟ್ರ ಧರ್ಮರಾಜನನ್ನು ಅವನ ತಮ್ಮಂದಿರನ್ನೂ ರಾಜ್ಯಸಹಿತ ಬಿಡುಗಡೆ ಎಂದು ಬೇಡಿದಳು ಪುನಃ ಬೇಡೆಂದರೂ ಬೇಡಲಿಲ್ಲ.

**ಭರ್ತುರ್ವಿಷ್ಣೋಶ್ಚ ನಾನ್ಯಸ್ಮಾದ್ ವರಸ್ವೀಕಾರ ಇಷ್ಯತೇ ।**
**ಏವಂ ಹಿ ಭಗವದ್ಧರ್ಮಸ್ತಸ್ಮಾತ್ ಸಾ ನಾವೃಣೋತ್ ಪರಮ್ ॥ ೩೮೮ ॥**

ಪದಚ್ಛೇದ :- ಭರ್ತುಃ, ವಿಷ್ಣೋಃ, ಚ, ನ, ಅನ್ಯಸ್ಮಾತ್, ವರಸ್ವೀಕಾರಃ, ಇಷ್ಯತೇ, ಏವಂ, ಹಿ, ಭಗವದ್ಧರ್ಮಃ, ತಸ್ಮಾತ್, ಸಾ, ನ, ಅವೃಣೋತ್, ಪರಂ ।

ಅರ್ಥ :- ಭರ್ತುಃ = ಗಂಡನಿಂದ, ಚ = ಮತ್ತು, ವಿಷ್ಣೋಃ = ವಿಷ್ಣುವಿನಿಂದ ಹೊರತು, ಅನ್ಯಸ್ಮಾತ್ = ಬೇರೆಯವರಿಂದ, ವರಸ್ವೀಕಾರಃ = ವರಸ್ವೀಕಾರವು, ನೇಷ್ಯತೇ = ಬಯಸುವುದಿಲ್ಲ, ತಸ್ಮಾತ್ = ಆದ್ದರಿಂದ, ಭಗವದ್ಧರ್ಮಃ ಸಾ = ಭಾಗವತ ಧರ್ಮದಲ್ಲಿ ಇರುವ ಅವಳು, ಪರಂ = ಇನ್ನೊಂದು, ನೈವಾವೃಣೋತ್ = ಬೇಡಲಿಲ್ಲ.

ತಾತ್ಪರ್ಯ :- ಹೆಣ್ಣು ಗಂಡು ಅಥವಾ ವಿಷ್ಣುವಿನಿಂದ ಹೊರತು ಬೇರೆಯವರಿಂದ ವರಬಯಸುವಂತಿಲ್ಲ. ಆದ್ದರಿಂದ ಭಾಗವತ ಧರ್ಮದಲ್ಲಿ ಇರುವ ಅವಳು ಇನ್ನೊಂದು ವರ ಬೇಡಲಿಲ್ಲ.

**ಅಧರ್ಮತೋ ಹೃತತ್ವಾತ್ತು ತದ್‌ದಾನಂ ನ ವರೋ ಭವೇತ್ ।**
**ಇತಿ ಮತ್ವಾ ಪಾಂಡವಾನಾಂ ವವ್ರೇ ಕೃಷ್ಣಾ ವಿಮೋಕ್ಷಣಮ್ ॥ ೩೮೯ ॥**

ಪದಚ್ಛೇದ :- ಅಧರ್ಮತಃ, ಹೃತತ್ವಾತ್, ತು, ತದ್‌ದಾನಂ, ನ, ವರಃ, ಭವೇತ್, ಇತಿ, ಭವೇತ್, ಇತಿ, ಮತ್ವಾ, ಪಾಂಡವಾನಾಂ, ವವ್ರೇ, ಕೃಷ್ಣಾ ವಿಮೋಕ್ಷಣಂ ।

ಅರ್ಥ :- ಅಧರ್ಮತಃ = ಅಧರ್ಮದಿಂದ, ಹೃತತ್ವಾತ್ = ಅಪಹರಿಸಿದ್ದರಿಂದ, ತದ್‌ದಾನಂ ತು = ಅದರ ಕೊಡುವಿಕೆಯು, ನ ವರಃ ಭವೇತ್ = ವರವಾಗುವುದಿಲ್ಲ, ಇತಿ = ಎಂದು, ಮತ್ವಾ = ತಿಳಿದು, ಕೃಷ್ಣಾ = ದ್ರೌಪದಿಯು, ಮತ್ವಾ = ತಿಳಿದು, ಪಾಂಡವಾನಾಂ = ಪಾಂಡವರ, ವಿಮೋಕ್ಷಣಂ = ಬಿಡುಗಡೆಯನ್ನು, ವವರೇ = ಬೇಡಿದಳು.

ತಾತ್ಪರ್ಯ :- ಅನ್ಯಾಯದಿಂದ ಅಪಹರಿಸಿದ್ದನ್ನು ಪಡೆದರೆ ಅದು ವರವಾಗುವುದಿಲ್ಲ ಎಂದು ತಿಳಿದು ದ್ರೌಪದಿಯು ವರವನ್ನು ಬೇಡಿದಳು.

ಶ್ವಶುರಾದ್ಯೈಹಿಕವರಾಃ ಕ್ಷತ್ರಿಯಾಯಾಸ್ತ್ರಯೋ ಯತಃ ।
ಉಕ್ತಾಃ ಶತಂ ಚ ವಿಪ್ರಾಯಾ ಧರ್ಮೇ ಭಾಗವತೇ ತತಃ ।
ಹೇತುನಾಽನೇನ ವವ್ರೇ ಸಾ ನಾನ್ಯತ್ ಕಿಂಚಿದತಃ ಪರಮ್ ॥ ೩೯೦ ॥

ಪದಚ್ಛೇದ :- ಶ್ವಶುರಾತ್, ದೈಹಿಕವರಾಃ, ಕ್ಷತ್ರಿಯಾಯಾಃ, ತ್ರಯಃ, ಯತಃ, ಉಕ್ತಾಃ, ಶತಂ, ಚ, ವಿಪ್ರಾಣಾಂ, ಧರ್ಮೇ, ಭಾಗವತೇ, ತತಃ, ಹೇತುನಾ, ತೇನ, ವವ್ರೇ, ಸಾ, ನ, ಅನ್ಯತ್, ಕಿಂಚಿತ್, ಅತಃ, ಪರಮ್ ।

ಅರ್ಥ :- ಭಾಗವತೇ ಧರ್ಮೇ = ಭಾಗವತ ಧರ್ಮದಲ್ಲಿ ಇರುವ, ಕ್ಷತ್ರಿಯಾಯಾಃ = ಕ್ಷತ್ರಿಯ ಸ್ತ್ರೀಗೆ, ತ್ರಯಃ ಶ್ವಶುರಾತ್ = ಮೂರು ಮಾವನಿಂದ, ದೈಹಿಕವರಾಃ = ಐಹಿತ ವರಗಳು, ಯತಃ = ಯಾವ ಕಾರಣದಿಂದ, ಉಕ್ತಾಃ = ಹೇಳಲ್ಪಟ್ಟಿದೆಯೋ, ವಿಪ್ರಾಯಾಃ = ಬ್ರಾಹ್ಮಣಸ್ತ್ರೀಯರಿಗೆ, ಶತಂ = ನೂರು, ತತಃ ಹೇತುನಾ = ಆ ಕಾರಣದಿಂದ, ತೇನ = ದ್ರೌಪದಿಯಿಂದ, ಪರಂ ನಾನ್ಯತ್ ಕಿಂಚಿತ್ = ಮತ್ತೊಂದು ವರವನ್ನು, ನ ವೌವರೇ = ಬೇಡಲಿಲ್ಲ.

ತಾತ್ಪರ್ಯ :- ಭಾಗವತ ಧರ್ಮದಲ್ಲಿ ಇರುವ ಬ್ರಾಹ್ಮಣ ಸ್ತ್ರೀಯರಿಗೆ ನೂರು ಹಾಗೂ ಕ್ಷತ್ರಿಯರಿಗೆ ಮೂರು ಐಹಿಕ ವರಗಳನ್ನು ಮಾವನಿಂದ ವಿಹಿತ ಆದ್ದರಿಂದ ಬೇರೆ ವರಗಳನ್ನು ಕೇಳಲಿಲ್ಲ.

ತತೋ ವಿಮುಕ್ತಾಃ ಪ್ರಯಯುಶ್ಚ ಪಾರ್ಥಾ
ಗುರೂನ್ ಪ್ರಣಮ್ಯ ಸ್ವಪುರಂ ಸಕೃಷ್ಣಾಃ ।
ದುರ್ಯೋಧನಾನಂತರಜೋ ಜಗಾದ
ತಾತಂ ನಿಜಂ ಪಾಪಕೃತಾಂ ಪ್ರಧಾನಃ ॥ ೩೯೧ ॥

ಪದಚ್ಛೇದ :- ತತಃ, ವಿಮುಕ್ತಾಃ, ಪ್ರಯಯುಃ, ಚ, ಪಾರ್ಥಾಃ, ಗುರುನ್, ಪ್ರಣಮ್ಯ, ಸ್ವಪುರಂ, ಸಕೃಷ್ಣಾಃ, ದುರ್ಯೋಧನಾಂತರರಜಃ, ಜಗಾದ, ತಾತಂ, ನಿಜಂ, ಪಾಪಕೃತಾಂ, ಪ್ರಧಾನಃ ।

**ಅರ್ಥ** :- **ತತಃ** = ಅನಂತರ, **ಸಕೃಷ್ಣಾಃ** = ದ್ರೌಪದಿಯಿಂದ ಕೂಡಿದ, **ಪಾರ್ಥಾಃ** = ಪಾಂಡವರು, **ವಿಮುಕ್ತಾಃ** = ಬಿಡುಗಡೆಗೊಂಡು, **ಗುರುನ್** = ಹಿರಿಯರನ್ನು, **ಪ್ರಣಮ್ಯ ಚ** = ನಮಿಸಿ, **ಸ್ವಪುರಂ** = ತಮ್ಮ ಪಟ್ಟಣವನ್ನು ಕುರಿತು, **ಪ್ರಯಯುಃ** = ಹೊರಟರು, **ಪಾಪಕೃತಾಂ ಪ್ರಧಾನಃ** = ಪಾಪಿಗಳಲ್ಲಿ ಶ್ರೇಷ್ಠರಾದ, **ದುರ್ಯೋಧನಾಂತರರಜಃ** = ದುರ್ಯೋಧನ ಒಳಗೆ ಸಿಟ್ಟುಳ್ಳವನಾಗಿ, **ನಿಜಂ ತಾತಂ** = ತಮ್ಮನಾದ ದುಃಶಾಸನನ್ನು ಕುರಿತು, **ಜಗಾದ** = ಹೇಳಿದನು.

**ತಾತ್ಪರ್ಯ** :- ಅನಂತರ ದ್ರೌಪದಿ ಹಾಗು ಪಾಂಡವರು ಬಿಡುಗಡೆಯನ್ನು ಪಡೆದು ಹಿರಿಯರಿಗೆ ನಮಿಸಿ ತಮ್ಮ ಪಟ್ಟಣಕ್ಕೆ ಹೊರಟರು. ದುರ್ಯೋಧನನು ಒಳಗೆ ಸಿಟ್ಟುಳ್ಳವನಾಗಿ ದುಃಶಾಸನನಿಗೆ ಹೇಳಿದನು.

**ಸಮಸ್ತಪಾಂಡವಶ್ರಿಯಂ ಸಮಾಗತಾಮಹೋ ಪುನಃ ।**
**ವ್ಯಮೋಚಯೋ ವೃಕೋದರಾದ್ ವಧಶ್ಚ ನೋ ಧ್ರುವೋ ಭವೇತ್ ॥ ೩೯೨ ॥**

**ಪದಚ್ಛೇದ** :- ಸಮಸ್ತಪಾಂಡವಶ್ರಿಯಂ, ಸಮಾಗತಾಮಹಃ, ಪುನಃ, ವ್ಯಮೋಚಯಃ, ವೃಕೋದರಾತ್, ವಧಃ, ಚ, ನಃ, ಧ್ರುವಂ, ಭವೇತ್ ।

**ಅರ್ಥ** :- **ಸಮಸ್ತಪಾಂಡವಶ್ರಿಯಂ** = ಪಾಂಡವರ ಸಕಲ ಸಂಪತ್ತು, **ಸಮಾಗತಾಮಹಃ** = ನಮಗೆ ಬಂದಿತ್ತು, **ಪುನಃ ವ್ಯಮೋಚಯಃ** = ಮತ್ತೆ ಬಿಟ್ಟೆವು, **ನಃ** = ನಮಗೆ, **ವೃಕೋದರಾತ್** = ಭೀಮನಿಂದ, **ವಧಶ್ಚ** = ಮರಣವು, **ಭವೇತ್ ಧ್ರುವಂ** = ನಿಶ್ಚಯವಾಗಿ ಆಗುತ್ತದೆ.

**ತಾತ್ಪರ್ಯ** :- ಪಾಂಡವರ ಸಂಪತ್ತು ಬಂದಿತ್ತು ಮತ್ತೆ ಕೈಬಿಟ್ಟೆತು ಇನ್ನು ನಮಗೆ ಭೀಮನಿಂದ ಮರಣವು ನಿಶ್ಚಯ.

**ಅತಃ ಪುನಶ್ಚ ಪಾಂಡವಾನ್ ಸಮಾಹ್ವಯಸ್ವ ನಃ ಕೃತೇ ।**
**ಪುನಶ್ಚ ದೇವನಂ ಭವೇಜ್ಜಿತೋ ವನಂ ಪ್ರಯಾತು ಚ ॥ ೩೯೩ ॥**

**ಪದಚ್ಛೇದ** :- ಅತಃ, ಪುನಃ, ಚ, ಪಾಂತವಾನ್, ಸಮಾಹ್ವಯಸ್ವ, ನಃ, ಕೃತೇ, ಪುನಃ, ಚ, ದೇವನಂ, ಭವೇತ್, ಜಿತಾ, ವನಂ, ಪ್ರಯಾಂತು, ಚ ।

ಅರ್ಥ :- ಅತಃ = ಆದ್ದರಿಂದ, ಪುನಃ = ಮತ್ತೆ, ಪಾಂಡವಾನ್ = ಪಾಂಡವರನ್ನು, ನಃ ಕೃತೇ = ನಮಗಾಗಿ, ಸಮಾಹ್ವಯಸ್ವ ಚ = ಕರೀಸೋಣ, ಪುನಃ ಚ = ಮತ್ತೆ, ದೇವನಂ = ಜೂಜು, ಭವೇತ್ = ಆಗಲಿ, ಜಿತಾ = ಸೂತವನು, ವನಂ = ಕಾಡಿಗೆ, ಪ್ರಯಾತು ಚ = ಹೊಗಲಿ.

ತಾತ್ಪರ್ಯ :- ಆದ್ದರಿಂದ ನಮಗಾಗಿ ಮತ್ತೆ ಪಾಂಡವರನ್ನು ಕರೆಸೋಣ ಮತ್ತೆ ಜೂಜನ್ನು ಆಡೋಣ ಯಾರು ಸೋಲುತ್ತಾರೋ ಅವರು ಕಾಡಿಗೆ ಹೋಗಲಿ.

ತೇನೋಕ್ತಃ ಸ ತದಾ ರಾಜಾ ಪಾಂಡವಾನ್ ಪುನರಾಹ್ವಯತ್ ।
ಪುನಃ ಪಿತ್ರಾ ಸಮಾಹೂತೋ ದೇವನಾಯ ಯುಧಿಷ್ಠಿರಃ ॥ ೩೯೪ ॥

ಪದಚ್ಛೇದ :- ತೇನ, ಉಕ್ತಃ, ಸಃ, ತದಾ, ರಾಜಾ, ಪಾಂಡವಾನ್, ಪುನಃ, ಆಹ್ವಯನ್, ಪುನಃ, ಪಿತಾ, ಸಮಾಹೂತಃ, ದೇವನಾಯ, ಯುಧಿಷ್ಠಿರಃ ।

ಅರ್ಥ :- ತೇನ = ದುರ್ಯೋಧನನಿಂದ, ಉಕ್ತಃ = ಹೋಳಲ್ಪಡಲು, ತದಾ = ಆಗ, ಸಃ ರಾಜಾ = ಧೃತರಾಷ್ಟನು, ಪುನಃ = ಮತ್ತೆ, ಪಾಂಡವಾನ್ = ಪಾಂಡವರನ್ನು, ಆಹ್ವಯತ್ = ಕರೆಸಿದನು, ಪಿತಾ = ದೊಡ್ಡಪ್ಪ, ಯುಧಿಷ್ಠಿರಃ = ಯುಧಿಷ್ಠಿರನನ್ನು, ದೇವನಾಯ = ಜೂಜಿಗಾಗಿ, ಸಮಾಹೂತಃ = ಕರೆಸಿದನು.

ತಾತ್ಪರ್ಯ :- ದುರ್ಯೋಧನನ ಮಾತನ್ನು ಕೇಳಿ ಧೃತರಾಷ್ಟನು ಪಾಂಡವರನ್ನು ಮತ್ತೆ ಜೂಜಿಗಾಗಿ ಕರೆಸಿದನು.

ಭ್ರಾತೃಭಿರ್ವಾರ್ಯಮಾಣೋಽಪಿ ಕೃಷ್ಣಯಾ ಚಾಽಗಮತ್ ಸಭಾಮ್ ॥೩೯೫॥

ದ್ವಾದಶಾಬ್ದಂ ವನೇ ವಾಸಮಜ್ಞಾತತ್ವೇನ ವತ್ಸರಮ್ ।
ವಾಸಂ ಪ್ರಸಿದ್ಧನೃಪತೇಃ ಪುರೇ ನೈವಾತಿದೂರತಃ ॥ ೩೯೬ ॥

ಪದಚ್ಛೇದ :- ಭ್ರಾತೃಭಿಃ, ವಾರ್ಯಮಾಣಃ, ಅಪಿ, ಕೃಷ್ಣಯಾ, ಚ, ಅಗಮತ್, ಸಭಾಂ, ಧ್ವಾದಶಾಬ್ದಂ, ವನೇ, ವಾಸಂ, ಅಜ್ಞಾತಂ, ತು, ಏಕವತ್ಸರಂ, ವಾಸಂ, ಪ್ರಸಿದ್ಧನೃಪತೇಃ, ಪುರೆ, ನ, ಏವ, ಅತಿದೂರತಃ ।

**ಅರ್ಥ :- ಭ್ರಾತೃಭಿಃ** = ತಮ್ಮಂದಿರಿಂದ, **ಚ** = ಮತ್ತು, **ಕೃಷ್ಣಯಾ** = ದ್ರೌಪದಿಯಿಂದಲೂ, **ವಾರ್ಯಮಾಣೋಪಿ** = ತಡೆಯುತ್ತಿದ್ದರೂ, **ಸಭಾಂ** = ಸಭೆಯನ್ನು ಕುರಿತು, **ಅಗಮತ್** = ಬಂದನು, **ದ್ವಾದಶಾಬ್ದಂ** = ಹನ್ನೆರಡು ವರ್ಷ, **ವನೇ** = ಕಾಡಿನಲ್ಲಿ, **ವಾಸಂ** = ವಾಸವು, **ಏಕವತ್ಸರಂ** = ಒಂದು ವರ್ಷವು, **ಪ್ರಸಿದ್ಧನೃಪತೇಃ** = ಪ್ರಸಿದ್ಧವಾದ ರಾಜನ, **ಪುರೆ** = ಹತ್ತಿರದಲ್ಲಿ, **ನೈವಾತಿದೂರತಃ** = ಬಹಳ ದೂರವಿಲ್ಲದೆ ಇರುವ ಕಡೆ, **ಅಜ್ಞಾತಂ ವಾಸಂ** = ಅಜ್ಞಾತ ವಾಸವು.

**ತಾತ್ಪರ್ಯ :-** ತಮ್ಮಂದಿರಿಂದ ಹಾಗೂ ದ್ರೌಪದಿಯಿಂದ ತಡೆಯುತ್ತಿದ್ದರೂ ಧರ್ಮರಾಜನು ಸಭೆಗೆ ಬಂದನು. ಸೋತವರು ಹನ್ನೆರಡು ವರ್ಷ ವನವಾಸ ಹಾಗೂ ಒಂದು ವರ್ಷ ಪ್ರಸಿದ್ಧವಾದ ರಾಜನ ಬಳಿ ಬಹಳ ದೂರವಿಲ್ಲದೇ ಸಮೀಪದಲ್ಲಿಯೇ ಅಜ್ಞಾನವಾಸವು.

**ಕೃಷ್ಣಾಯಾಃ ಪಾಂಡವಾನಾಂ ವಾ ದರ್ಶನೇಽಜ್ಞಾತವಾಸಿನಾಮ್ ।**
**ಏಕಸ್ಯಾಪಿ ಸಮಸ್ತಾನಾಂ ದ್ವಾದಶಾಬ್ದಂ ಪುನರ್ವನಮ್ ॥ ೩೯೭ ॥**

ಪದಚ್ಛೇದ :- ಕೃಷ್ಣಾಯಾಃ, ಪಾಂಡವಾನಾಂ, ವಾ, ದರ್ಶನೇ, ಅಜ್ಞಾತವಾಸಿನಾಂ, ಏಕಸ್ಯ, ಅಪಿ, ಸಮಸ್ತಾನಾಂ, ದ್ವಾದಶಾಬ್ದಂ, ಪುನಃ, ವನಂ ।

**ಅರ್ಥ :- ಅಜ್ಞಾತವಾಸಿನಾಂ** = ಅಜ್ಞಾತ ವಾಸಿಗಳಾದ, **ಕೃಷ್ಣಾಯಾಃ** = ದ್ರೌಪದಿಯ, **ವಾ** = ಅಥವಾ, **ಪಾಂಡವಾನಾಂ** = ಪಾಂಡವರ, **ಏಕಸ್ಯಾಪಿ** = ಯಾರೊಬ್ಬರನ್ನೂ, **ದರ್ಶನೇ** = ನೋಡಿದರೂ, **ಪುನಃ** = ಮತ್ತೆ, **ಸಮಸ್ತಾನಾಂ** = ಎಲ್ಲರೂ, **ದ್ವಾದಶಾಬ್ದಂ** = ಹನ್ನೆರಡು ವರ್ಷ, **ವನಂ** = ವನವಾಸವು.

**ತಾತ್ಪರ್ಯ :-** ಅಜ್ಞಾತವಾಸ ಮಾಡುವಾಗ ದ್ರೌಪದಿಯನ್ನಾಗಲಿ, ಪಾಂಡವರನ್ನಾಗಲಿ ಅಥವಾ ಯಾರೊಬ್ಬರನ್ನು ನೋಡಿದರೂ ಮತ್ತೆ ಪುನಃ ಎಲ್ಲರೂ ಹನ್ನೆರಡು ವರ್ಷ ವನವಾಸವನ್ನು ಮಾಡಬೇಕು.

**ವತ್ಸರಾಜ್ಞಾತವಾಸಂ ಚ ತ್ಯಾಗೇಽಪ್ಯುಕ್ತವಿಧೇಸ್ತಥಾ ।**
**ದುರ್ಯೋಧನಃ ಪಣಂ ಚಕ್ರೇ ಬುದ್ಧ್ಯಾ ದುಃಶಾಸನೋಕ್ತಯಾ ॥ ೩೯೮ ॥**

ಪದಚ್ಛೇದ :- ವತ್ಸರಾಜ್ಞಾತವಾಸಂ, ಚ, ತ್ಯಾಗೇ, ಅಪಿ, ಉಕ್ತವಿಧೇಃ, ತಥಾ, ದುರ್ಯೋಧನಃ, ಪಣಂ, ಚಕ್ರೇ, ಬುದ್ಧ್ಯಾ, ದುಃಶಾಸನೋಕ್ತಯಾ ।

ಅರ್ಥ :- ಚ = ಮತ್ತು, ವತ್ಸರಾಜಾತವಾಸಂ = ಒಂದು ವರ್ಷ ಅಜ್ಞಾತವಾಸವು, ಉಕ್ತವಿಧೇಃ = ಹೇಳಿದ ವಿಧಿಯನ್ನು, ತ್ಯಾಗೇಽಪಿ = ಮಧ್ಯದಲ್ಲಿ ಬಿಟ್ಟರೂ ಮತ್ತೇ ಅದೇ ನಿಯಮ, ತಥಾ = ಹಾಗೆ, ದುಃಶಾಸನೋಕ್ತಯಾ ಬುದ್ಧ್ಯಾ = ದುಃಶಾಸನು ಹೇಳಿದ ಬುದ್ಧಿಯಿಂದ, ದುರ್ಯೋಧನಃ = ದುರ್ಯೋಧನನು, ಪಣಂ = ಪಣವನ್ನು, ಚಕ್ರೇ = ಮಾಡಿದನು.

ತಾತ್ಪರ್ಯ :- ಒಂದು ವರ್ಷ ಅಜ್ಞಾತವಾಸವೂ, ಹಿಂದೆ ಹೇಳಿದ ನಿಯಮವನ್ನು ಮೀರಿದರೆ ಪುನಃ ವನವಾಸ ಮತ್ತು ಅಜ್ಞಾತವಾಸ ಹೀಗೆ ದುಃಶಾಸನನು ಹೇಳಿದ ಬುದ್ಧಿಯಿಂದ ದುರ್ಯೋಧನನು ಪಣವನ್ನು ಇರಿಸಿದನು.

ವಿಶೇಷ ವಿಷಯ :- ಇದರ ಜೊತೆಗೆ ರಾಜ್ಯವನ್ನು ಕಳೆದುಕೊಳ್ಳುವುದು ಇರುತ್ತದೆ.

**ಗಾಂಧಾರೇಣ ಪುನಶ್ಚಾಕ್ಷಹೃದಯಜ್ಞೇನ ಧರ್ಮಜಃ ।**
**ಪರಾಜಿತೋ ವನಂ ಯಾತುಮೈಚ್ಛತ್ ಸಭ್ರಾತೃಕೋ ಯದಾ ॥ ೩೯ ॥**

ಪದಚ್ಛೇದ :- ಗಾಂಧಾರೇಣ, ಪುನಃ, ಚ, ಅಕ್ಷಹೃದಯಜ್ಞೇನ, ಧರ್ಮಜಃ, ಪರಾಜಿತಃ, ವನಂ, ಯಾತುಂ, ಐಚ್ಛತ್, ಸಭ್ರಾತೃಕಃ, ಯದಾ ।

ಅರ್ಥ :- ಅಕ್ಷಹೃದಯಜ್ಞೇನ = ಅಕ್ಷಕ್ರೀಡೆಯಲ್ಲಿ ಪರಿಣಿತನಾದ, ಗಾಂಧಾರೇಣ = ಶಕುನಿಯಿಂದ, ಧರ್ಮಜಃ = ಧರ್ಮರಾಜನು, ಪುನಃ = ಮತ್ತೆ, ಪರಾಜಿತಃ = ಸೋತು, ಯದಾ = ಯಾವಾಗ, ಸಭ್ರಾತೃಕಃ = ತಮ್ಮಂದಿರಿಂದ ಕೂಡಿದ, ಧರ್ಮಜಃ = ಧರ್ಮರಾಜನು, ವನಂ = ಕಾಡನ್ನು ಕುರಿತು, ಯಾತುಂ = ಹೋಗಲು, ಐಚ್ಛತ್ = ಬಯಸಿದ.

ತಾತ್ಪರ್ಯ :- ಅಕ್ಷಕ್ರೀಡೆಯಲ್ಲಿ ಪರಿಣತನಾದ ಶಕುನಿಯಿಂದ ಧರ್ಮರಾಜನು ಮತ್ತೆ ಸೋತನು. ತಮ್ಮಂದಿರಿಂದ ಕೂಡಿಕೊಂಡು ವನವಾಸಕ್ಕೆ ಹೋಗಲು ಯಾವಾಗ ಬಯಸಿದನೋ.

**ತದಾ ನನರ್ತ ಪಾಪಕೃತ್ ಸುಯೋಧನಾನುಜೋ ಹಸನ್ ।**
**ವದಂಶ್ಚ ಮಾರುತಾತ್ಮಜಂ ಪುನಃಪುನಶ್ಚ ಗೌರಿತಿ ॥ ೪೦೦ ॥**

**ಪದಚ್ಛೇದ :- ತದಾ, ನನರ್ತ, ಪಾಪಕೃತ್, ಸುಯೋಧನಾನುಜಃ, ಹಸನ್, ವದನ್, ಚ, ಮಾರುತಾತ್ಮಜಂ, ಪುನಃ, ಪುನಃ, ಗೌಃ, ಇತಿ ।**

ಅರ್ಥ :- **ತದಾ** = ಆಗ, **ಪಾಪಕೃತ್** = ಪಾಪಿಯಾದ, **ಸುಯೋಧನಾನುಜಃ** = ದುಃಶಾಸನನು, **ಹಸನ್** = ನಗುತ್ತಾ, **ನನರ್ತ** = ನರ್ತಿಸಿದನು, **ಚ** = ಮತ್ತು, **ಮಾರುತಾತ್ಮಜಂ** = ಭೀಮನನ್ನು ಕುರಿತು, **ಪುನಃ ಪುನಃ** = ಮತ್ತೆ ಮತ್ತೆ, **ಗೌಃ ಇತಿ** = ಬಸವ ಎಂದು, **ವದನ್** = ಹೇಳಿದನು.

ತಾತ್ಪರ್ಯ :- ಶಕುನಿಯು ಗೆಲ್ಲಲು ಪಾಪಿಯಾದ ದುಃಶಾಸನನು ನಗುತ್ತಾ ನರ್ತಿಸಿದನು, ಹಾಗೂ ಭೀಮಸೇನನಿಗೆ ಬಸವ ಬಸವ ಎಂದು ಮತ್ತೆ ಮತ್ತೆ ಅಂದನು.

**ಉವಾಚ ಚ ಪುನಃ ಕೃಷ್ಣಾಂ ನೃತ್ಯನ್ನೇವ ಸಭಾತಲೇ ।**
**ಅಪತಿರ್ಹ್ಯಸಿ ಕಲ್ಯಾಣಿ ಗಚ್ಛ ದುರ್ಯೋಧನಾಲಯಮ್ ॥ ೪೦೧ ॥**

ಪದಚ್ಛೇದ :- ಉವಾಚ, ಚ, ಪುನಃ, ಕೃಷ್ಣಾಂ, ನೃತ್ಯನ್, ಏವ, ಸಭಾತಲೇ, ಅಪತಿಃ, ಹಿ, ಅಸಿ, ಕಲ್ಯಾಣೀ, ಗಚ್ಛ ದುರ್ಯೋಧನಾಲಯಂ ।

ಅರ್ಥ :- **ಸಭಾತಲೇ** = ಸಭೆಯಲ್ಲಿ, **ನೃತ್ಯನೇವ** = ನರ್ತಿಸುತ್ತಾ, **ಪುನಃ** = ಮತ್ತೆ, **ಕೃಷ್ಣಾಂ** = ದ್ರೌಪದಿಯನ್ನು ಕುರಿತು, **ಕಲ್ಯಾಣೀ** = ಮಂಗಳಕರಳೇ, **ಅಪತಿಃ ಹಿ ಅಸಿ** = ಗಂಡಸಿಲ್ಲದವಳು ಆಗಿರುವೆ, **ದುರ್ಯೋಧನಾಲಯಂ** = ದುರ್ಯೋಧನನ ಮನೆಗೆ, **ಗಚ್ಛ** = ಹೋಗು, **ಉವಾಚ** = ಹೇಳಿದನು.

ತಾತ್ಪರ್ಯ :- ಪುನಃ ಸಭೆಯಲ್ಲಿ ನರ್ತಿಸುತ್ತಾ ದ್ರೌಪದಿಯನ್ನು ಕುರಿತು 'ಹೇ ಮಂಗಳಕರಳೇ ಇನ್ನು ನಿನಗೆ ಗಂಡನಿಲ್ಲ ದುರ್ಯೋಧನನ ಮನೆಗೆ ಹೋಗು' ಎಂದನು.

**ಏತೇಽಖಿಲಾಃ ಷಂಢತಿಲಾಸ್ತಮೋಽಂಧ-**
**ಮಾಪ್ತಾ ನಚೈಷಾಂ ಪುನರುತ್ಥಿತಿಃ ಸ್ಯಾತ್ ।**
**ಇತಿ ಬ್ರುವಾಣೋಽನುಚಕಾರ ಭೀಮಂ**
**ತದಾಽಹಸನ್ ಧಾರ್ತರಾಷ್ಟ್ರಾಶ್ಚ ಸರ್ವೇ ॥ ೪೦೨ ॥**

**ಪದಚ್ಛೇದ :- ಏತೇ, ಅಖಿಲಾಃ, ಷಂಡತಿಲಾಃ, ತಮಃ, ಅಂಧಂ, ಪ್ರಾಪ್ತಾಃ, ನ, ಚ, ಏಷಾಂ, ಪುನಃ, ಉತ್ಥಿತಿಃ, ಸ್ಯಾತ್, ಇತಿ, ಬ್ರುವಾಣಃ, ಅನುಚಕಾರಃ, ಭೀಮಂ, ತದಾ, ಅಹಸನ್, ಧಾರ್ತ್ಯರಾಷ್ಟ್ರಾಃ, ಚ, ಸರ್ವೇ ।**

**ಅರ್ಥ** :- **ಏತೇಽಖಿಲಾಃ** = ಈ ಎಲ್ಲಾ ಪಾಂಡವರು, **ಷಂಡತಿಲಾಃ** = ಎಣ್ಣೆ ಇಲ್ಲ ಎಳ್ಳುಕಾಳಿನಂತೆ ನಪುಂಸಕರು, **ಅಂಧಂ ತಮಃ ಪ್ರಾಪ್ತಾಃ** = ದುಃಸ್ಥಿತಿಗೆ ತಲುಪಿದ್ದಾರೆ, **ಏಷಾಂ** = ಇವರ, **ಉತ್ಥಿತಿಃ** = ಉತ್ಥಾನವು, **ನ ಚ ಸ್ಯಾತ್** = ಉಂಟಾಗುವುದಿಲ್ಲ, **ಇತಿ** = ಎಂದು, **ಬ್ರುವಾಣಃ** = ಹೇಳುತ್ತಾ, **ಚ** = ಮತ್ತು, **ಭೀಮಂ** = ಭೀಮನನ್ನು, **ಅನುಚಕಾರ** = ಅನುಕರಿಸಿದನು, **ತದಾ** = ಆಗ, **ಸರ್ವೇ** = ಎಲ್ಲಾ, **ಧಾರ್ತ್ಯರಾಷ್ಟ್ರಾಃ** = ಕೌರವರು, **ಅಹಸನ್** = ನಕ್ಕರು.

ತಾತ್ಪರ್ಯ :- 'ಪಾಂಡವರೆಲ್ಲಾ ಎಣ್ಣೆ ಇಲ್ಲದ ಎಳ್ಳಿನಂತೆ ಆಗಿದ್ದಾರೆ. ಇವರು ದುಃಸ್ಥಿತಿಯಿಂದ ಮತ್ತೆ ಮೇಲೆ ಎಳುವುದಿಲ್ಲ' ಎಂದು ಭೀಮನನ್ನು ಅನುಕರಿಸಿದನು ಆಗ ಎಲ್ಲಾ ಕೌರವರು ನಕ್ಕರು.

**ತದಾಽಕರೋದ್ ಭೀಮಸೇನಃ ಪ್ರತಿಜ್ಞಾಂ**
**ಹಂತಾಽಸ್ಮಿ ವೋ ನಿಖಿಲಾನ್ ಸಂಗರೇಽಹಮ್ ।**
**ಇತೀರಿತೇ ಶರಣಂ ದ್ರೋಣಮೇವ**
**ಜಗ್ಮುಃ ಸಮಸ್ತಾ ಧೃತರಾಷ್ಟ್ರಪುತ್ರಾಃ ॥ ೪೦೩ ॥**

**ಪದಚ್ಛೇದ :- ತದಾ, ಅಕರೋತ್, ಭೀಮಸೇನಃ, ಪ್ರತಿಜ್ಞಾಂ, ಹಂತಾ, ಅಸ್ಮಿ, ವಃ, ನಿಖಿಲಾನ್, ಸಂಗರೇ, ಅಹಂ, ಇತಿ, ಈರೀತೇ, ಶರಣಂ, ದ್ರೋಣಂ, ಏವ, ಜಗ್ಮುಃ, ಸಮಸ್ತಾ, ಧಾರ್ತ್ಯರಾಷ್ಟ್ರಪುತ್ರಾಃ ।**

**ಅರ್ಥ** :- **ತದಾ** = ಆಗ, **ಭೀಮಸೇನಃ** = ಭೀಮಸೇನನು, **ಅಹಂ** = ನಾನು, **ವಃ ನಿಖಿಲಾನ್** = ನಿಮ್ಮೆಲ್ಲರನ್ನೂ, **ಸಂಗರೆ** = ರಣಾಂಗಣದಲ್ಲಿ, **ಹಂತಾ** = ಕೊಲ್ಲುವವ, **ಅಸ್ಮಿ** = ಆಗುವೆನು, **ಇತಿ** = ಎಂದು, **ಪ್ರತಿಜ್ಞಾಂ** = ಪ್ರತಿಜ್ಞೆಯನ್ನು, **ಅಕರೋತ್** = ಮಾಡಿದನು, **ಇತೀರಿತೇ** = ಹೀಗೆ ಭೀಮನಿಂದ ಹೇಳಲ್ಪಡಲು, **ಸಮಸ್ತಾಃ** = **ಧೃತರಾಷ್ಟ್ರಪುತ್ರಾಃ** = ಎಲ್ಲಾ ಧೃತರಾಷ್ಟ್ರನ ಮಕ್ಕಳು, **ದ್ರೋಣಮೇವ** = ದ್ರೋಣಾಚಾರ್ಯರನು, **ಶರಣಂ** = ಮೊರೆಯನ್ನು, **ಜಗ್ಮುಃ** = ಹೊಂದಿದರು.

**ತಾತ್ಪರ್ಯ** :- ಹೀಗೆ ಕೌರವರು ಮಾಡಲು ಭೀಮಸೇನನು 'ನಾನು ಯುದ್ಧದಲ್ಲಿ ನಿಮ್ಮೆಲ್ಲರನ್ನೂ ಸಂಹರಿಸುವೆನು' ಎಂದು ಪ್ರತಿಜ್ಞೆ ಮಾಡದನು. ಆಗ ಎಲ್ಲಾ ಕೌರವರು ದ್ರೋಣಾಚಾರ್ಯರನ್ನು ಸಮೀಪಿಸಿ ಅಭಯವನ್ನು ಬೇಡಿದರು.

**ಯತ್ರ ದ್ರೋಣಸ್ತತ್ರ ಪುತ್ರಸ್ತತ್ರ ಭೀಷ್ಮಃ ಕೃಪಸ್ತಥಾ ।**
**ನಚಾತ್ಯೇತಿ ಗುರೂನ್ ಭೀಮ ಇತಿ ತಂ ಶರಣಂ ಯಯುಃ ॥ ೪೦೪ ॥**

ಪದಚ್ಛೇದ :- **ಯತ್ರ, ದ್ರೋಣಃ, ತತ್ರ, ಪುತ್ರಃ, ಯತ್ರ, ಭೀಷ್ಮಃ, ಕೃಪಃ, ತಥಾ, ನ, ಚ, ಅತ್ಯೇತಿ, ಗುರುನ್, ಭೀಮಃ, ಇತಿ, ತಂ, ಶರಣಂ, ಯಯುಃ ।**

**ಅರ್ಥ** :- **ಯತ್ರ** = ಎಲ್ಲ, **ದ್ರೋಣಃ** = ದ್ರೋಣನು, **ತತ್ರ** = ಅಲ್ಲಿ, **ಪುತ್ರಃ** = ಅಶ್ವತ್ಥಾಮನು, **ತಥಾ** = ಹಾಗೇ, **ಯತ್ರ** = ಎಲ್ಲಿ, **ಭೀಷ್ಮಃ** = ಭೀಷ್ಮನು, (**ತತ್ರ** = ಅಲ್ಲಿ), **ಕೃಪಃ** = ಕೃಪಾಚಾರ್ಯನು, **ಭೀಮಃ** = ಭೀಮನು, **ಗುರುನ್** = ಗುರುವಾದ ದ್ರೋಣರನ್ನು, **ನ ಚಾತ್ಯೇತಿ** = ಮೀರುವುದಿಲ್ಲ, **ಇತಿ** = ಎಂದು, **ತಂ** = ಆ ದ್ರೋಣರನ್ನು, **ಶರಣಂ** = ಮೊರೆಯನ್ನು, **ಯಯುಃ** = ಹೊಂದಿದರು.

ತಾತ್ಪರ್ಯ :- ಎಲ್ಲಿ ದ್ರೋಣನೋ ಅಲ್ಲಿಯೇ ಮಗನಾದ ಅಶ್ವತ್ಥಾಮ, ಎಲ್ಲಿ ಭೀಷ್ಮನೋ ಅಲ್ಲಿಯೇ ಕೃಪಾಚಾರ್ಯರು ಹಾಗೂ ಭೀಮ ಗುರುವಾದ ದ್ರೋಣರನ್ನು ಎಂದಿಗೂ ಆಕ್ರಮಿಸುವುದಿಲ್ಲ ಎಂದು ದ್ರೋಣರನ್ನು ಮೊರೆ ಹೊಂದಿದರು.

**ಅಬ್ರವೀದ್ ಧಾರ್ತರಾಷ್ಟ್ರಾಂಶ್ಚ ದ್ರೋಣೋ ವಿಪ್ರೋऽಪಿ ಸನ್ನಹಮ್ ।**
**ಸಪುತ್ರಃ ಸಕೃಪಃ ಶಸ್ತ್ರಂ ಗ್ರಹೀಷ್ಯೇ ಭವತಾಂ ಕೃತೇ ॥ ೪೦೫ ॥**

ಪದಚ್ಛೇದ :- **ಅಬ್ರವೀತ್, ಧಾರ್ತ್ಯರಾಷ್ಟ್ರಾ, ಚ, ದ್ರೋಣಃ, ವಿಪ್ರಃ, ಅಪಿ, ಸತ್, ಅಹಂ, ಸಪುತ್ರಃ, ಸಕೃಪಃ, ಶಸ್ತ್ರಂ, ಗೃಹಿಷ್ಯೇ, ಭವತಾಂ, ಕೃತೇ ।**

**ಅರ್ಥ :- ದ್ರೋಣಃ** = ದ್ರೋಣನು, **ಧಾರ್ತ್ಯರಾಷ್ಟ್ರಾನ್** = ಕೌರವರನ್ನು ಕುರಿತು, **ಅಹಂ** = ನಾನು, **ವಿಪ್ರಃ ಸನ್ ಅಪಿ** = ಬ್ರಾಹ್ಮಣನಾಗಿದ್ದರೂ, **ಸಪುತ್ರಃ** = ಪುತ್ರಸಹಿತನಾಗಿ, **ಚ** = ಮತ್ತು, **ಸಕೃಪಃ** = ಕೃಪಸಹಿತನಾಗಿ, **ಭವತಾಂ ಕೃತೇ** = ನಿಮಗಾಗಿ, **ಶಸ್ತ್ರಂ** = ಶಸ್ತ್ರವನ್ನು, **ಗೃಹಿಷ್ಯೇ** = ಹಿಡಿಯುತ್ತೇನೆ, **ಇತಿ** = ಎಂದು, **ಅಬ್ರವೀತ್** = ಹೇಳಿದನು.

ತಾತ್ಪರ್ಯ :- 'ನಾನು ಬ್ರಾಹ್ಮಣನಾದರೂ ಅಶ್ವತ್ಥಾಮ ಹಾಗೂ ಕೃಪನಿಂದ ಕೂಡಿದವನಾಗಿ ನಿಮಗಾಗಿ ಶಸ್ತ್ರವನ್ನು ಧರಿಸುವೆ' ಎಂದು ಕೌರವರಿಗೆ ಹೇಳಿದನು.

**ರಕ್ಷಣೇ ಭವತಾಂ ಚೈವ ಕುರ್ಯಾಂ ಯತ್ನಂ ಸ್ವಶಕ್ತಿತಃ ।**
**ನತು ಭೀಮಾದ್ ರಕ್ಷಿತುಂ ವಃ ಶಕ್ತಃ ಸತ್ಯಂ ಬ್ರವೀಮ್ಯಹಮ್ ॥ ೪೦೬ ॥**

ಪದಚ್ಛೇದ :- **ರಕ್ಷಣೆ, ಭವತಾಂ, ಚ, ಏವ, ಕುರ್ಯಾಂ, ಯತ್ನಂ, ಸ್ವಶಕ್ತಿತಃ, ನ, ತು, ಭೀಮಾತ್, ರಕ್ಷಿತುಂ, ವಃ, ಶಕ್ತಃ, ಸತ್ಯಂ, ಬ್ರವೀಮಿ, ಅಹಂ ।**

**ಅರ್ಥ :- ಭವತಾಂ** = ನಿಮ್ಮ, **ರಕ್ಷಣೆ** = ರಕ್ಷಣೆಯನ್ನು, **ಸ್ವಶಕ್ತಿತಃ** = ಶಕ್ತಿ ಇರುವಷ್ಟು, **ಯತ್ನಂ ಚ ಕುರ್ಯಾಂ** = ಪ್ರಯತ್ನವನ್ನು ಮಾಡುತ್ತೇನೆ, **ವಃ** = ನಿಮ್ಮನ್ನು, **ಭೀಮಾತ್** = ಭೀಮನಿಂದ, **ರಕ್ಷಿತುಂ** = ರಕ್ಷಿಸಲು, **ಅಹಂ** = ನಾನು, **ನ ತು ಶಕ್ತಃ** = ಸಮರ್ಥನಲ್ಲ, **ಅಹಂ** = ನಾನು, **ಸತ್ಯಂ** = ಸತ್ಯವನ್ನು, **ಬ್ರವೀಮಿ** = ಹೇಳುತ್ತೇನೆ.

ತಾತ್ಪರ್ಯ :- ನನ್ನ ಶಕ್ತಿ ಇದ್ದಷ್ಟು ನಿಮ್ಮ ರಕ್ಷಣೆಗೆ ಮಾಡುವೆನು. ಆದರೆ ಭೀಮನಿಂದ ನಿಮ್ಮನ್ನು ರಕ್ಷಿಸಲು ನಾನು ಶಕ್ತನಲ್ಲ. ನಿಜವನ್ನೇ ಹೇಳುತ್ತಿದ್ದೇನೆ.

**ತತೋ ಯಯುಃ ಪಾಂಡವಾಸ್ತೇ ಸಭಾಯಾ**
**ವನಾಯ ಕೃಷ್ಣಾಸಹಿತಾಃ ಸುಶೂರಾಃ ।**
**ಗತ್ಯಾಽನುಚಕ್ರೇ ಯುವಸಿಂಹಖೇಲ-**
**ಗತಿಂ ಭೀಮಂ ಧಾರ್ತರಾಷ್ಟ್ರೋಽಪಹಸ್ಯ ॥ ೪೦೭ ॥**

**ಪದಚ್ಛೇದ** :- ತತಃ, ಯಯುಃ, ಪಾಂಡವಾಃ, ತೇ, ಸಭಾಯಾಃ, ವನಾಯ, ಕೃಷ್ಣಾಸಹಿತಾಃ, ಸುಶೂರಾಃ, ಗತ್ಯಾ, ಅನುಚಕ್ರೆ, ಯುವಹಿಂಸಖೇಲಗತಿಂ, ಭೀಮಂ, ಧಾರ್ತ್ಯರಾಷ್ಟ್ರಃ, ಅಪಹಸ್ಯ ।

**ಅರ್ಥ** :- **ತತಃ** = ಅನಂತರ, **ತೇ** = ಆ, **ಕೃಷ್ಣಾಸಹಿತಃ** = ದ್ರೌಪದಿಯಿಂದ ಕೂಡಿದ, **ಸಶೂರಾಃ ಪಾಂಡವಾಃ** = ಶೂರರಾದ ಪಾಂಡವರು, **ಸಭಾಯಾಃ** = ಸಭೆಯಿಂದ, **ವನಾಯ** = ಕಾಡಿಗೆ, **ಯಯುಃ** = ಹೊರಟರು, **ಯುವಹಿಂಸಖೇಲಗತಿಂ** = ಯೌವನದ ಸಿಂಹದಂತೆ ನಡುಗೆಯುಳ್ಳ, **ಭೀಮಂ** = ಭೀಮನನ್ನು, **ಧಾರ್ತ್ಯರಾಷ್ಟ್ರಃ** = ಕೌರವರು, **ಗತ್ಯಾ** = ನಡುಗೆಯಿಂದ, **ಅಪಹಸ್ಯ** = ಅಪಹಾಸ್ಯ ಮಾಡಿ, **ಅನುಚಕ್ರೆ** = ಅನುಕರಿಸದರು.

ತಾತ್ಪರ್ಯ :- ಆಗ ಶೂರರಾದ ಪಾಂಡವರು ದ್ರೌಪದಿಯಿಂದ ಕೂಡಿಕೊಂಡು ಸಭೆಯಿಂದ ಕಾಡಿಗೆ ಹೊರಟರು. ಯುವ ಸಿಂಹದಂತೆ ನಡುಗೆಯುಳ್ಳ ಭೀಮನ ನಡುಗೆಯನ್ನು ಕೌರವರು ನಡುಗೆಯಿಂದ ಅನುಕರಿಸಿ ಅಪಹಾಸ್ಯ ಮಾಡಿದರು.

ದೃಷ್ಟ್ವಾ ಸಭಾಯಾ ಅರ್ಧನಿಷ್ಕ್ರಾಂತದೇಹೋ
ವ್ಯಾವೃತ್ಯ ಭೀಮಃ ಪ್ರಾಹ ಸಂರಕ್ತನೇತ್ರಃ ।
ಊರುಂ ತವಾಸ್ಯಂ ಚ ರಣೇ ವಿಭೇತ್ಸ್ಯ
ಇತ್ಯುಕ್ತ್ವಾಽಸೌ ನಿರ್ಗತೋಽಸತ್ಸಭಾಯಾಃ ॥ ೪೦೮ ॥

ಪದಚ್ಛೇದ :– ದೃಷ್ಟ್ವಾ, ಸಭಾಯಾಃ, ಅರ್ಧನಿಷ್ಕ್ರಾಂತದೇಹಃ, ವ್ಯಾವೃತ್ಯ, ಭೀಮಃ, ಪ್ರಾಹ, ಸಂರಕ್ತನೇತ್ರಃ, ಊರುಂ, ತವ, ಅನ್ಯಂ, ಚ, ರಣೇ, ವಿಭೇತ್ಸ್ಯೇ, ಇತಿ, ಉಕ್ತ್ವಾ, ಅಸೌ, ನಿರ್ಗತಃ, ಅಸತ್, ಸಭಾಯಾಃ ।

**ಅರ್ಥ** :- ಸಭಾಯಾಃ = ಸಭೆಯನ್ನು, ವ್ಯಾವೃತ್ಯ = ಧಿಕ್ಕರಿಸಿ, ಅರ್ಧನಿಷ್ಕ್ರಾಂತದೇಹಃ = ಅರ್ಧ ಹೊರನಡೆದ ದೇಹವುಳ್ಳ, ಸಂರಕ್ತನೇತ್ರಃ = ಕೆಂಪಾದ ಕಣ್ಣುಗಳುಳ್ಳ, ಭೀಮಃ = ಭೀಮನು, ದೃಷ್ಟ್ವಾ = ನೋಡಿ, ಪ್ರಾಹ = ಹೇಳಿದನು, ರಣೇ = ಯುದ್ಧದಲ್ಲಿ, ತವ = ನಿನ್ನ, ಅನ್ಯಂ ಊರುಂ = ಇನ್ನೊಂದು ತೊಡೆಯನ್ನು, ವಿಭೇತ್ಸ್ಯೇ = ಮುರಿಯುತ್ತೇನೆ, ಇತಿ = ಎಂದು, ಉಕ್ತ್ವಾ = ಹೇಳಿ, ಅಸತ್ಸಭಾಯಾಃ = ದುಷ್ಟ ಸಭೆಯಿಂದ, ಅಸೌ = ಈ ಭೀಮನು, ನಿರ್ಗತಃ = ಹೋದನು.

**ತಾತ್ಪರ್ಯ** :- ಆಗ ಸಭೆಯಿಂದ ಹೊರ ನಡೆದ ಭೀಮನು ಅರ್ಧ ಹೊರಹೋದವನಾಗಿ ಕೆಂಪು ಕಣ್ಣುಗಳಿಂದ ದುರ್ಯೋಧನನಿಗೆ ನಿನ್ನ ಇನ್ನೊಂದ ತೊಡೆಯನ್ನು ಯುದ್ಧದಲ್ಲಿ ಮುರಿಯುತ್ತೇನೆ ಎಂದು ಹೇಳಿ ಆ ಸಭೆಯಿಂದ ಹೋದನು.

ವಿಶೇಷ ವಿಷಯ :- ಹಿಂದೆ ದ್ರೌಪದಿಗೆ ತೊಡೆಯನ್ನು ತೋರಿದಾಗ ಅವನ ಒಂದು ತೊಡೆಯನ್ನು ಮುರಿಯುವೆನು ಎಂದು ಪ್ರತಿಜ್ಞೆ ಮಾಡಿದ್ದನು.

**ಪ್ರಯಾತಾನನು ತಾನ್ ಕುಂತೀ ಪ್ರಯಯೌ ಪುತ್ರಗೃದ್ಧಿನೀ ।**
**ರೋರುದ್ಯಮಾನಾಂ ವಿದುರಃ ಸ್ಥಾಪಯಾಮಾಸ ತಾಂ ಗೃಹೇ ॥ ೪೦೯ ॥**

ಪದಚ್ಛೇದ :– ಪ್ರಯಾತಾನ್, ಅನು, ತಾನ್, ಕುಂತೀ, ಪ್ರಯಯೌ, ಪುತ್ರಗೃದ್ಧಿನೀ, ರೋರುದ್ಯಮಾನಾಂ, ವಿದುರಃ, ಸ್ಥಾಪಯಾಮಾಸ, ತಾಂ, ಗೃಹೇ ।

**ಅರ್ಥ** :- ಪ್ರಯಾತಾನಾನುಂ = ಕಾಡಿಗೆ ಹೋಗುತ್ತಿರುವ, ತಾನ್ = ಆ ಪಾಂಡವರನ್ನು, ಪುತ್ರಗೃದ್ಧಿನೀ = ಮಕ್ಕಳಲ್ಲಿ ಪ್ರೀತಿಯುಳ್ಳ, ರೋರುದ್ಯಮಾನಾಂ = ಅಳುತ್ತಿರುವ, ಕುಂತೀ = ಕುಂತಿಯು, ಪ್ರಯಯೌ = ಹಿಂಬಾಲಿಸಿದಳು, ತಾಂ = ಅವಳನ್ನು, ವಿದುರಾಃ = ವಿದುರನು, ಗೃಹೇ = ಮನೆಯಲ್ಲಿ, ಸ್ಥಾಪಯಾಮಾಸ = ಇರಿಸಿಕೊಂಡನು.

ತಾತ್ಪರ್ಯ :- ಕಾಡಿಗೆ ಹೋಗುತ್ತಿರುವ ಪಾಂಡವರನ್ನು, ಮಕ್ಕಳಲ್ಲಿ ಪ್ರೀತಿಯುಳ್ಳ ಕುಂತಿಯು ಅಳುತ್ತಾ ಹಿಂಬಾಲಿಸಿದಳು. ಅವಳನ್ನು ವಿದುರನು ತನ್ನ ಮನೆಯಲ್ಲಿ ಇರಿಸಿಕೊಂಡನು.

**ಪ್ರಣಮ್ಯ ತಾಂ ಯಯುಃ ಪಾರ್ಥಾಃ ಸಕೃಷ್ಣಾಂ ಶೀಘ್ರಗಾಮಿನಃ ।**
**ಯುಧಿಷ್ಠಿರೋಽವಾಗ್ವದನೋ ಯಯೌ ನ ಕ್ರೋಧಚಕ್ಷುಷಾ ।**
**ದಹೇಯಂ ಕೌರವಾನ್ ಸರ್ವಾನಿತಿ ಕಾರುಣಿಕೋ ನೃಪಃ ॥ ೪೧೦ ॥**

**ಪದಚ್ಛೇದ :-** ಪ್ರಣಮ್ಯ, ತಾಂ, ಯಯುಃ, ಪಾರ್ಥಾಃ, ಸಕೃಷ್ಣಾಃ, ಶೀಘ್ರಗಾಮೀನಃ, ಯುಧಿಷ್ಠಿರಃ, ಅವಾಗ್ವದನಃ, ಯಯೌ, ನ, ಕ್ರೋಧಚಕ್ಷುಷಾ, ದಹೇಯಂ, ಕೌರವಾನ್, ಸರ್ವಾನ್, ಇತಿ, ಕಾರುಣಿಕಃ, ನೃಪಃ ।

**ಅರ್ಥ :-** **ಸಕೃಷ್ಣಾಃ** = ದ್ರೌಪದಿಯಿಂದ ಕೂಡಿದ, **ಪಾರ್ಥಾಃ** = ಪಾಂಡವರು, **ತಾಂ** = ಆ ಕುಂತಿಯನ್ನು, **ಪ್ರಣಮ್ಯ** = ನಮಿಸಿ, **ಶೀಘ್ರಗಾಮಿನಃ** = ಶೀಘ್ರವಾದ ನಡುಗೆಯುಳ್ಳವರಾಗಿ, **ಯಯುಃ** = ಹೊರಟರು, **ಕಾರುಣಿಕಃ** = ಕರುಣಾಳುವಾದ, **ನೃಪಃ ಯುಧಿಷ್ಠಿರಃ** = ರಾಜನಾದ ಯುಧಿಷ್ಠಿರನು, **ಕ್ರೋಧಚಕ್ಷುಷಾ** = ಸಿಟ್ಟಿನ ನೋಟದಿಂದ, **ಸರ್ವಾನ್ ಕೌರವಾನ್** = ಕೌರವರನ್ನು, **ನ ದಹೇಯಂ** = ಸುಡುವುದಿಲ್ಲ, **ಇತಿ** = ಎಂದು, **ಅವಾಗ್ವದನಃ** = ಕಳೆ ಮುಖವುಳ್ಳವನಾಗಿ, **ಯಯೌ** = ಹೋದನು.

ತಾತ್ಪರ್ಯ :- ದ್ರೌಪದಿಯಿಂದ ಕೂಡಿದ ಪಾಂಡವರು ಕುಂತಿಯನ್ನು ನಮಿಸಿ ವೇಗವಾಗಿ ಹೊರಟರು. ರಾಜನಾದ ಯುಧಿಷ್ಠಿರನು ಕರುಣಾಳುವಾಗಿ ತಾನು ತನ್ನ ಸಿಟ್ಟಿನ ನೋಟದಿಂದ ಎಲ್ಲಾ ಕೌರವರನ್ನು ಸುಡಲಾರೆ ಎಂದು ಕಳಮುಖವುಳ್ಳವನಾಗಿ ಹೊರಟನು.

**ಉದ್ಧೃತ್ಯ ಬಾಹೂ ಪ್ರಯಯೌ ಬಾಹುಶಾಲೀ ವೃಕೋದರಃ ।**
**ಆಭ್ಯಾಮೇವಾಖಿಲಾನ್ ಶತ್ರೂನ್ ಶಕ್ತೋ ಹಂತುಮಹಂ ತ್ವಿತಿ ॥ ೪೧೧ ॥**

**ಪದಚ್ಛೇದ :-** ಉದ್ಧೃತ್ಯ, ಬಾಹೂ, ಬಾಹುಶಾಲೀ, ವೃಕೋದರಃ, ಆಭ್ಯಾಂ, ಏವ, ಅಖಿಲಾನ್, ಶತ್ರೂನ್, ಶಕ್ತಃ, ಹಂತುಂ, ಅಹಂ, ತು, ಇತಿ ।

**ಅರ್ಥ** :- **ಬಾಹುಶಾಲೀ** = ಬಲಿಷ್ಠವಾದ ಬಾಹುಗಳುಳ್ಳ, **ವೃಕೋದರಃ** = ಭೀಮನು, **ಆಭ್ಯಾಂ ಏವ** = ಈ ಎರಡು ಕೈಯಿಗಳಿಂದಲೇ, **ಅಖಿಲಾನ್** = ಎಲ್ಲಾ, **ಶತ್ರೂನ್ ತು** = ಶತ್ರುಗಳನ್ನು, **ಹಂತುಂ** = ಕೊಲ್ಲಲು, **ಅಹಂ** = ನಾನು, **ಶಕ್ತಃ** = ಸಮರ್ಥನು, **ಇತಿ** = ಎಂದು, **ಬಾಹು** = ಕೈಗಳನ್ನು, **ಉದ್ಧೃತ್ಯ** = ಮೇಲೆತ್ತಿ, **ಪ್ರಯಯೌ** = ಹೊದನು.

ತಾತ್ಪರ್ಯ :- ಭುಜಪರಾಕ್ರಮಿಯಾದ ಭೀಮಸೇನನು ತನ್ನ ಎರಡೂ ತೋಳುಗಳನ್ನು ಮೇಲೆತ್ತಿ ತೋರುತ್ತಾ ನಡೆದನು. ಎರಡು ತೋಳುಗಳಿಂದಲೇ ಶತ್ರುಗಳ ಸಂಹಾರ ಮಾಡುವೆನೆಂದು ತಿಳಿಸಿದನು.

**ಅಬದ್ಧಕೇಶಾ ಪ್ರಯಯೌ ದ್ರೌಪದೀ ಸಾ ಸಭಾತಲಾತ್ ।**
**ಮುಕ್ತಕೇಶಾಃ ಭವಿಷ್ಯಂತಿ ಧಾರ್ತರಾಷ್ಟ್ರಸ್ತ್ರಿಯಸ್ತ್ವಿತಿ ॥ ೪೧೨ ॥**

ಪದಚ್ಛೇದ :- ಅಬದ್ಧಕೇಶಾ, ಪ್ರಯಯೌ, ದ್ರೌಪದೀ, ಸಾ, ಸಭಾತಲಾತ್, ಮುಕ್ತಕೇಶಾಃ, ಭವಿಷ್ಯಂತಿ, ಧಾರ್ತ್ಯರಾಷ್ಟ್ರಸ್ತ್ರೀಯಃ, ತು, ಇತಿ ।

**ಅರ್ಥ** :- **ಅಬದ್ಧಕೇಶಾ** = ಕಟ್ಟಿದ ಕೂದಲುಳ್ಳ, **ದ್ರೌಪದೀ** = ದ್ರೌಪದಿಯು, **ಧಾತ್ಯರಾಷ್ಟ್ರಸ್ತ್ರಿಯಃ** = ಕೌರವರ ಹೆಂಡತಿಯರು, **ಮುಕ್ಕೇಶಾಃ** = ಬಿಚ್ಚಿದ ಕೂದಲುಳ್ಳವರು, **ಭವಿಷ್ಯಂತಿ** = ಆಗುತ್ತಾರೆ, **ಇತಿ** = ಎಂದು, **ಸಭಾತಲಾತ್** = ಸಭೆಯಿಂದ, **ಪ್ರಯಯೌ** = ಹೋದಳು.

ತಾತ್ಪರ್ಯ :- ಕಟ್ಟಿದ ಕೂದಲುಗಳನ್ನು ದ್ರೌಪದಿಯು, ಕೌರವರ ಪತ್ನಿಯರೂ ಸಹ ಬಿಚ್ಚಿದ ಕೂದಲುಳ್ಳವರು ಆಗುತ್ತಾರೆ ಎಂದು ತಿಳಿಸುತ್ತಾ ಸಭೆಯಿಂದ ಹೊದಳು.

ವಿಶೇಷ ವಿಷಯ :- ಗಂಡನಿಲ್ಲದ ಸ್ತ್ರೀಯರು ಕೇಶಾಲಂಕಾರವಿಲ್ಲದೆ ಸದಾ ಬಿಚ್ಚಿದ ಕೂದಲುಳ್ಳವರೇ ಆಗಿರಬೇಕು. ಆದ್ದರಿಂದ ಇಲ್ಲಿ ಕೌರವರ ಮರಣದಿಂದ ಅವರ ಪತ್ನಿಯರು ವಿಧವೆಯರಾಗುತ್ತಾರೆ ಎಂದು ತಿಳಿಸಿದಳು.

**ವರ್ಷನ್ ಪಾಂಸೂನ್ ಯಯೌ ಪಾರ್ಥ ಇತ್ಥಂ ಶತ್ರುಷು ಸಾಯಕಾನ್ ।**
**ವರ್ಷಯಾನೀತ್ಯಭಿಪ್ರಾಯಃ ಪರಮಾಸ್ತ್ರವಿದಾಂ ವರಃ ॥ ೪೧೩ ॥**

ತಾತ್ಪರ್ಯ :- ಕಾಡಿಗೆ ಹೋಗುತ್ತಿರುವ ಪಾಂಡವರನ್ನು, ಮಕ್ಕಳಲ್ಲಿ ಪ್ರೀತಿಯುಳ್ಳ ಕುಂತಿಯು ಅಳುತ್ತಾ ಹಿಂಬಾಲಿಸಿದಳು. ಅವಳನ್ನು ವಿದುರನು ತನ್ನ ಮನೆಯಲ್ಲಿ ಇರಿಸಿಕೊಂಡನು.

**ಪ್ರಣಮ್ಯ ತಾಂ ಯಯುಃ ಪಾರ್ಥಾಃ ಸಕೃಷ್ಣಾಂ ಶೀಘ್ರಗಾಮಿನಃ ।**
**ಯುಧಿಷ್ಠಿರೋಽವಾಗ್ವದನೋ ಯಯೌ ನ ಕ್ರೋಧಚಕ್ಷುಷಾ ।**
**ದಹೇಯಂ ಕೌರವಾನ್ ಸರ್ವಾನಿತಿ ಕಾರುಣಿಕೋ ನೃಪಃ ॥ ೪೧೦ ॥**

ಪದಚ್ಛೇದ :- ಪ್ರಣಮ್ಯ, ತಾಂ, ಯಯುಃ, ಪಾರ್ಥಾಃ, ಸಕೃಷ್ಣಾಃ, ಶೀಘ್ರಗಾಮೀನಃ, ಯುಧಿಷ್ಠಿರಃ, ಅವಾಗ್ವದನಃ, ಯಯೌ, ನ, ಕ್ರೋಧಚಕ್ಷುಷಾ, ದಹೇಯಂ, ಕೌರವಾನ್, ಸರ್ವಾನ್, ಇತಿ, ಕಾರುಣಿಕಃ, ನೃಪಃ ।

ಅರ್ಥ :- ಸಕೃಷ್ಣಾಃ = ದ್ರೌಪದಿಯಿಂದ ಕೂಡಿದ, ಪಾರ್ಥಾಃ = ಪಾಂಡವರು, ತಾಂ = ಆ ಕುಂತಿಯನ್ನು, ಪ್ರಣಮ್ಯ = ನಮಿಸಿ, ಶೀಘ್ರಗಾಮಿನಃ = ಶೀಘ್ರವಾದ ನಡುಗೆಯುಳ್ಳವರಾಗಿ, ಯಯುಃ = ಹೊರಟರು, ಕಾರುಣಿಕಃ = ಕರುಣಾಳುವಾದ, ನೃಪಃ ಯುಧಿಷ್ಠಿರಃ = ರಾಜನಾದ ಯುಧಿಷ್ಠಿರನು, ಕ್ರೋಧಚಕ್ಷುಷಾ = ಸಿಟ್ಟಿನ ನೋಟದಿಂದ, ಸರ್ವಾನ್ ಕೌರವಾನ್ = ಕೌರವರನ್ನು, ನ ದಹೇಯಂ = ಸುಡುವುದಿಲ್ಲ, ಇತಿ = ಎಂದು, ಅವಾಗ್ವದನಃ = ಕಳೆ ಮುಖವುಳ್ಳವನಾಗಿ, ಯಯೌ = ಹೋದನು.

ತಾತ್ಪರ್ಯ :- ದ್ರೌಪದಿಯಿಂದ ಕೂಡಿದ ಪಾಂಡವರು ಕುಂತಿಯನ್ನು ನಮಿಸಿ ವೇಗವಾಗಿ ಹೊರಟರು. ರಾಜನಾದ ಯುಧಿಷ್ಠಿರನು ಕರುಣಾಳುವಾಗಿ ತಾನು ತನ್ನ ಸಿಟ್ಟಿನ ನೋಟದಿಂದ ಎಲ್ಲಾ ಕೌರವರನ್ನು ಸುಡಲಾರೆ ಎಂದು ಕಳಮುಖವುಳ್ಳವನಾಗಿ ಹೊರಟನು.

**ಉದ್ಧೃತ್ಯ ಬಾಹೂ ಪ್ರಯಯೌ ಬಾಹುಶಾಲೀ ವೃಕೋದರಃ ।**
**ಆಭ್ಯಾಮೇವಾಖಿಲಾನ್ ಶತ್ರೂನ್ ಶಕ್ತೋ ಹಂತುಮಹಂ ತ್ವಿತಿ ॥ ೪೧೧ ॥**

ಪದಚ್ಛೇದ :- ಉದ್ಧೃತ್ಯ, ಬಾಹೂ, ಬಾಹುಶಾಲೀ, ವೃಕೋದರಃ, ಆಭ್ಯಾಂ, ಏವ, ಅಖಿಲಾನ್, ಶತ್ರೂನ್, ಶಕ್ತಃ, ಹಂತುಂ, ಅಹಂ, ತು, ಇತಿ ।

ಅರ್ಥ :- ಬಾಹುಶಾಲೀ = ಬಲಿಷ್ಠವಾದ ಬಾಹುಗಳುಳ್ಳ, ವೃಕೋದರಃ = ಭೀಮನು, ಆಭ್ಯಾಂ ಏವ = ಈ ಎರಡು ಕೈಯಿಗಳಿಂದಲೇ, ಅಖಿಲಾನ್ = ಎಲ್ಲಾ, ಶತ್ರೂನ್ ತು = ಶತ್ರುಗಳನ್ನು, ಹಂತುಂ = ಕೊಲ್ಲಲು, ಅಹಂ = ನಾನು, ಶಕ್ತಃ = ಸಮರ್ಥನು, ಇತಿ = ಎಂದು, ಬಾಹು = ಕೈಗಳನ್ನು, ಉದ್ಧೃತ್ಯ = ಮೇಲೆತ್ತಿ, ಪ್ರಯಯೌ = ಹೊದನು.

ತಾತ್ಪರ್ಯ :- ಭುಜಪರಾಕ್ರಮಿಯಾದ ಭೀಮಸೇನನು ತನ್ನ ಎರಡೂ ತೋಳುಗಳನ್ನು ಮೇಲೆತ್ತಿ ತೋರುತ್ತಾ ನಡೆದನು. ಎರಡು ತೋಳುಗಳಿಂದಲೇ ಶತ್ರುಗಳ ಸಂಹಾರ ಮಾಡುವೆನೆಂದು ತಿಳಿಸಿದನು.

ಅಬದ್ಧಕೇಶಾ ಪ್ರಯಯೌ ದ್ರೌಪದೀ ಸಾ ಸಭಾತಲಾತ್ ।
ಮುಕ್ತಕೇಶಾಃ ಭವಿಷ್ಯಂತಿ ಧಾರ್ತರಾಷ್ಟ್ರಸ್ತ್ರಿಯಸ್ತ್ವಿತಿ ॥ ೪೧೨ ॥

ಪದಚ್ಛೇದ :- ಅಬದ್ಧಕೇಶಾ, ಪ್ರಯಯೌ, ದ್ರೌಪದೀ, ಸಾ, ಸಭಾತಲಾತ್, ಮುಕ್ತಕೇಶಾಃ, ಭವಿಷ್ಯಂತಿ, ಧಾರ್ತ್ಯರಾಷ್ಟ್ರಸ್ತ್ರೀಯಃ, ತು, ಇತಿ ।

ಅರ್ಥ :- ಅಬದ್ಧಕೇಶಾ = ಕಟ್ಟಿದ ಕೂದಲುಳ್ಳ, ದ್ರೌಪದೀ = ದ್ರೌಪದಿಯು, ಧಾತ್ರರಾಷ್ಟ್ರಸ್ತ್ರಿಯಃ = ಕೌರವರ ಹೆಂಡತಿಯರು, ಮುಕ್ಕೇಶಾಃ = ಬಿಚ್ಚಿದ ಕೂದಲುಳ್ಳವರು, ಭವಿಷ್ಯಂತಿ = ಆಗುತ್ತಾರೆ, ಇತಿ = ಎಂದು, ಸಭಾತಲಾತ್ = ಸಭೆಯಿಂದ, ಪ್ರಯಯೌ = ಹೋದಳು.

ತಾತ್ಪರ್ಯ :- ಕಟ್ಟಿದ ಕೂದಲುಗಳನ್ನು ದ್ರೌಪದಿಯು, ಕೌರವರ ಪತ್ನಿಯರೂ ಸಹ ಬಿಚ್ಚಿದ ಕೂದಲುಳ್ಳವರು ಆಗುತ್ತಾರೆ ಎಂದು ತಿಳಿಸುತ್ತಾ ಸಭೆಯಿಂದ ಹೊದಳು.

ವಿಶೇಷ ವಿಷಯ :- ಗಂಡನಿಲ್ಲದ ಸ್ತ್ರೀಯರು ಕೇಶಾಲಂಕಾರವಿಲ್ಲದೆ ಸದಾ ಬಿಚ್ಚಿದ ಕೂದಲುಳ್ಳವರೇ ಆಗಿರಬೇಕು. ಆದ್ದರಿಂದ ಇಲ್ಲಿ ಕೌರವರ ಮರಣದಿಂದ ಅವರ ಪತ್ನಿಯರು ವಿಧವೆಯರಾಗುತ್ತಾರೆ ಎಂದು ತಿಳಿಸಿದಳು.

ವರ್ಷನ್ ಪಾಂಸೂನ್ ಯಯೌ ಪಾರ್ಥ ಇತ್ಥಂ ಶತ್ರುಷು ಸಾಯಕಾನ್ ।
ವರ್ಷಯಾನೀತ್ಯಭಿಪ್ರಾಯಃ ಪರಮಾಸ್ತ್ರವಿದಾಂ ವರಃ ॥ ೪೧೩ ॥

ತಾತ್ಪರ್ಯ :- ಕಾಡಿಗೆ ಹೋಗುತ್ತಿರುವ ಪಾಂಡವರನ್ನು, ಮಕ್ಕಳಲ್ಲಿ ಪ್ರೀತಿಯುಳ್ಳ ಕುಂತಿಯು ಅಳುತ್ತಾ ಹಿಂಬಾಲಿಸಿದಳು. ಅವಳನ್ನು ವಿದುರನು ತನ್ನ ಮನೆಯಲ್ಲಿ ಇರಿಸಿಕೊಂಡನು.

**ಪ್ರಣಮ್ಯ ತಾಂ ಯಯುಃ ಪಾರ್ಥಾಃ ಸಕೃಷ್ಣಾಂ ಶೀಘ್ರಗಾಮಿನಃ ।**
**ಯುಧಿಷ್ಠಿರೋಽವಾಗ್ವದನೋ ಯಯೌ ನ ಕ್ರೋಧಚಕ್ಷುಷಾ ।**
**ದಹೇಯಂ ಕೌರವಾನ್ ಸರ್ವಾನಿತಿ ಕಾರುಣಿಕೋ ನೃಪಃ ॥ ೪೧೦ ॥**

**ಪದಚ್ಛೇದ :- ಪ್ರಣಮ್ಯ, ತಾಂ, ಯಯುಃ, ಪಾರ್ಥಾಃ, ಸಕೃಷ್ಣಾಃ, ಶೀಘ್ರಗಾಮೀನಃ, ಯುಧಿಷ್ಠಿರಃ, ಅವಾಗ್ವದನಃ, ಯಯೌ, ನ, ಕ್ರೋಧಚಕ್ಷುಷಾ, ದಹೇಯಂ, ಕೌರವಾನ್, ಸರ್ವಾನ್, ಇತಿ, ಕಾರುಣಿಕಃ, ನೃಪಃ ।**

**ಅರ್ಥ :- ಸಕೃಷ್ಣಾಃ** = ದ್ರೌಪದಿಯಿಂದ ಕೂಡಿದ, **ಪಾರ್ಥಾಃ** = ಪಾಂಡವರು, **ತಾಂ** = ಆ ಕುಂತಿಯನ್ನು, **ಪ್ರಣಮ್ಯ** = ನಮಿಸಿ, **ಶೀಘ್ರಗಾಮಿನಃ** = ಶೀಘ್ರವಾದ ನಡುಗೆಯುಳ್ಳವರಾಗಿ, **ಯಯುಃ** = ಹೊರಟರು, **ಕಾರುಣಿಕಃ** = ಕರುಣಾಳುವಾದ, **ನೃಪಃ ಯುಧಿಷ್ಠಿರಃ** = ರಾಜನಾದ ಯುಧಿಷ್ಠಿರನು, **ಕ್ರೋಧಚಕ್ಷುಷಾ** = ಸಿಟ್ಟಿನ ನೋಟದಿಂದ, **ಸರ್ವಾನ್ ಕೌರವಾನ್** = ಕೌರವರನ್ನು, **ನ ದಹೇಯಂ** = ಸುಡುವುದಿಲ್ಲ, **ಇತಿ** = ಎಂದು, **ಅವಾಗ್ವದನಃ** = ಕಳೆ ಮುಖವುಳ್ಳವನಾಗಿ, **ಯಯೌ** = ಹೋದನು.

ತಾತ್ಪರ್ಯ :- ದ್ರೌಪದಿಯಿಂದ ಕೂಡಿದ ಪಾಂಡವರು ಕುಂತಿಯನ್ನು ನಮಿಸಿ ವೇಗವಾಗಿ ಹೊರಟರು. ರಾಜನಾದ ಯುಧಿಷ್ಠಿರನು ಕರುಣಾಳುವಾಗಿ ತಾನು ತನ್ನ ಸಿಟ್ಟಿನ ನೋಟದಿಂದ ಎಲ್ಲಾ ಕೌರವರನ್ನು ಸುಡಲಾರೆ ಎಂದು ಕಳಮುಖವುಳ್ಳವನಾಗಿ ಹೊರಟನು.

**ಉದ್ಧೃತ್ಯ ಬಾಹೂ ಪ್ರಯಯೌ ಬಾಹುಷಾಳೀ ವೃಕೋದರಃ ।**
**ಆಭ್ಯಾಮೇವಾಖಿಲಾನ್ ಶತ್ರೂನ್ ಶಕ್ತೋ ಹಂತುಮಹಂ ತ್ವಿತಿ ॥ ೪೧೧ ॥**

ಪದಚ್ಛೇದ :- ಉದ್ಧೃತ್ಯ, ಬಾಹೂ, ಬಾಹುಶಾಲೀ, ವೃಕೋದರಃ, ಆಭ್ಯಾಂ, ಏವ, ಅಖಿಲಾನ್, ಶತ್ರೂನ್, ಶಕ್ತಃ, ಹಂತುಂ, ಅಹಂ, ತು, ಇತಿ ।

**ಅರ್ಥ** :- **ಬಾಹುಶಾಲೀ** = ಬಲಿಷ್ಠವಾದ ಬಾಹುಗಳುಳ್ಳ, **ವೃಕೋದರಃ** = ಭೀಮನು, **ಆಭ್ಯಾಂ ಏವ** = ಈ ಎರಡು ಕೈಯಿಗಳಿಂದಲೇ, **ಅಖಿಲಾನ್** = ಎಲ್ಲಾ, **ಶತ್ರೂನ್ ತು** = ಶತೃಗಳನ್ನು, **ಹಂತುಂ** = ಕೊಲ್ಲಲು, **ಅಹಂ** = ನಾನು, **ಶಕ್ತಃ** = ಸಮರ್ಥನು, **ಇತಿ** = ಎಂದು, **ಬಾಹು** = ಕೈಗಳನ್ನು, **ಉದ್ಧೃತ್ಯ** = ಮೇಲೆತ್ತಿ, **ಪ್ರಯಯೌ** = ಹೊದನು.

**ತಾತ್ಪರ್ಯ** :- ಭುಜಪರಾಕ್ರಮಿಯಾದ ಭೀಮಸೇನನು ತನ್ನ ಎರಡೂ ತೋಳುಗಳನ್ನು ಮೇಲೆತ್ತಿ ತೋರುತ್ತಾ ನಡೆದನು. ಎರಡು ತೋಳುಗಳಿಂದಲೇ ಶತೃಗಳ ಸಂಹಾರ ಮಾಡುವೆನೆಂದು ತಿಳಿಸಿದನು.

**ಅಬದ್ಧಕೇಶಾ ಪ್ರಯಯೌ ದ್ರೌಪದೀ ಸಾ ಸಭಾತಲಾತ್ ।**
**ಮುಕ್ತಕೇಶಾಃ ಭವಿಷ್ಯಂತಿ ಧಾರ್ತರಾಷ್ಟಸ್ತ್ರಿಯಸ್ತ್ವಿತಿ ॥ ೪೧೨ ॥**

**ಪದಚ್ಛೇದ** :- **ಅಬದ್ಧಕೇಶಾ, ಪ್ರಯಯೌ, ದ್ರೌಪದೀ, ಸಾ, ಸಭಾತಲಾತ್, ಮುಕ್ತಕೇಶಾಃ, ಭವಿಷ್ಯಂತಿ, ಧಾರ್ತ್ಯರಾಷ್ಟಸ್ತ್ರೀಯಃ, ತು, ಇತಿ ।**

**ಅರ್ಥ** :- **ಅಬದ್ಧಕೇಶಾ** = ಕಟ್ಟಿದ ಕೂದಲುಳ್ಳ, **ದ್ರೌಪದೀ** = ದ್ರೌಪದಿಯು, **ಧಾತೃರಾಷ್ಟಸ್ತ್ರಿಯಃ** = ಕೌರವರ ಹೆಂಡತಿಯರು, **ಮುಕ್ಕೇಶಾಃ** = ಬಿಚ್ಚಿದ ಕೂದಲುಳ್ಳವರು, **ಭವಿಷ್ಯಂತಿ** = ಆಗುತ್ತಾರೆ, **ಇತಿ** = ಎಂದು, **ಸಭಾತಲಾತ್** = ಸಭೆಯಿಂದ, **ಪ್ರಯಯೌ** = ಹೋದಳು.

**ತಾತ್ಪರ್ಯ** :- ಕಟ್ಟಿದ ಕೂದಲುಗಳನ್ನು ದ್ರೌಪದಿಯು, ಕೌರವರ ಪತ್ನಿಯರೂ ಸಹ ಬಿಚ್ಚಿದ ಕೂದಲುಳ್ಳವರು ಆಗುತ್ತಾರೆ ಎಂದು ತಿಳಿಸುತ್ತಾ ಸಭೆಯಿಂದ ಹೊದಳು.

**ವಿಶೇಷ ವಿಷಯ** :- ಗಂಡನಿಲ್ಲದ ಸ್ತ್ರೀಯರು ಕೇಶಾಲಂಕಾರವಿಲ್ಲದೆ ಸದಾ ಬಿಚ್ಚಿದ ಕೂದಲುಳ್ಳವರೇ ಆಗಿರಬೇಕು. ಆದ್ದರಿಂದ ಇಲ್ಲಿ ಕೌರವರ ಮರಣದಿಂದ ಅವರ ಪತ್ನಿಯರು ವಿಧವೆಯರಾಗುತ್ತಾರೆ ಎಂದು ತಿಳಿಸಿದಳು.

**ವರ್ಷನ್ ಪಾಂಸೂನ್ ಯಯೌ ಪಾರ್ಥ ಇತ್ಥಂ ಶತ್ರುಷು ಸಾಯಕಾನ್ ।**
**ವರ್ಷಯಾನೀತ್ಯಭಿಪ್ರಾಯಃ ಪರಮಾಸ್ತ್ರವಿದಾಂ ವರಃ ॥ ೪೧೩ ॥**

ಪದಚ್ಛೇದ :- ವರ್ಷನ್, ಪಾಂಸೂನ್, ಯಯೌ, ಪಾರ್ಥಃ, ಇತ್ಥಂ, ಶತ್ರುಷು, ಸಾಯಕಾನ್, ವರ್ಷಯಾಮಿ, ಇತಿ, ಅಭಿಪ್ರಾಯಃ, ಪರಮಾಸ್ತ್ರವಿದಾಂ, ವರಃ ।

**ಅರ್ಥ** :- **ಪರಮಾಸ್ತ್ರವಿದಾಂ ವರಃ** = ಉತ್ತಮವಾದ ಅಸ್ತ್ರವಿದ್ಯೆಯುಳ್ಳವರಲ್ಲಿಯೂ ಶ್ರೇಷ್ಠನಾದ, **ಪಾರ್ಥಃ** = ಅರ್ಜುನನು, **ಪಾಂಸೂನ್** = ಧೂಳನ್ನು, **ವರ್ಷನ್** = ಎರಚುತ್ತಾ, **ಇತ್ಥಂ** = ಹೀಗೆಯೇ, **ಶತ್ರುಷು** = ಶತ್ರುಗಳ ಮೇಲೆ, **ಸಾಯಕಾನ್** = ಬಾಣಗಳನ್ನು, **ವರ್ಷಯಾಮಿ** = ಎರಚುತ್ತೇನೆ, **ಇತಿ** = ಎಂಬ, **ಅಭಿಪ್ರಾಯಃ** = ಅಭಿಪ್ರಾಯವುಳ್ಳವನಾಗಿ, **ಯಯೌ** = ಹೋದನು.

**ಯಮಾವವಾಙ್ಮುಖೌ ಯಾತೌ ನಾಽವಯೋಃ ಶತ್ರವೋ ಮುಖಮ್ ।**
**ಪಶ್ಯಂತ್ವಸ್ಯಾಮವಸ್ಥಾಯಾಮಿತ್ಯೇವ ಧೃತಚೇತಸೌ ॥ ೪೧೪ ॥**

ಪದಚ್ಛೇದ :- ಯಮೌ, ಅವಾಙ್ಮುಖೌ, ಯಾತೌ, ನ, ಆವಯೋಃ, ಶತ್ರವಃ, ಮುಖಂ, ಪಶ್ಯಂತು, ಅಸ್ಯಾಂ, ಅವಸ್ಥಾಯಾಂ, ಇತಿ, ಏವ, ಧೃತಚೇತಸೌ ।

**ಅರ್ಥ** :- **ಧೃತಚೇತಸೌ** = ಧೃಡವಾದ ಮನಸ್ಸುಳ್ಳ, **ಯಮೌ** = ಅಶ್ವಿನೀ ದೇವತೆಗಳು (ನಕುಲ ಸಹದೇವರ), **ಅಸ್ಯಾಂ** = ಈ, **ಅವಸ್ಥಾಯಾಂ** = ಅವಸ್ಥೆಯಲ್ಲಿ, **ಶತ್ರವಃ** = ಶತ್ರುಗಳು, **ಆವಯೋಃ** = ನಮ್ಮಿಬ್ಬರು, **ಮುಖಂ** = ಮುಖವನ್ನು, **ನ ಪಶ್ಯಂತು** = ನೋಡಬಾರದೆಂದು, **ಇತಿ ಏವ** = ಎಂದೇ, **ಅಮಾಙ್ಮುಖೌ** = ಕೆಳಮುಖವುಳ್ಳವರಾಗಿ, **ಯಾತೌ** = ಹೋದರು.

**ತಾತ್ಪರ್ಯ** :- ದೃಡವಾದ ಮನಸುಳ್ಳ ನಕುಲಸಹದೇವರು ಈ ಅವಸ್ಥೆಯಲ್ಲಿ ಶತ್ರುಗಳು ನಮ್ಮ ಮುಖವನ್ನು ನೋಡಬಾರದೆಂದು ಕೆಳಮುಖವುಳ್ಳವರಾಗಿ ಹೋದರು.

**ಪ್ರೇತಸಂಸ್ಕಾರಸೂಕ್ತಾನಿ ಪಠನ್ ಧೌಮ್ಯೋಽಗ್ರತೋ ಯಯೌ ।**
**ಹತೇಷು ಧಾರ್ತರಾಷ್ಟ್ರೇಷು ಮಯಾ ಕಾರ್ಯಾಃ ಕ್ರಿಯಾ ಇತಿ ॥ ೪೧೫ ॥**

ಪದಚ್ಛೇದ :- ಪ್ರೇತಸಂಸ್ಕಾರಸೂಕ್ತಾನಿ, ಪಠನ್, ಧೌಮ್ಯಃ, ಅಗ್ರತಃ, ಯಯೌ, ಹತೇಷು, ಧಾರ್ತ್ಯರ್ಷ್ಟ್ರೇಷು, ಮಯಾ, ಕಾರ್ಯಾಃ, ಕ್ರಿಯಾಃ, ಇತಿ ।

**ಅರ್ಥ** :- **ಧೌಮ್ಯಃ** = ಧೌಮ್ಯರು, **ಪ್ರೇತಸಂಸ್ಕಾರಸೂಕ್ತಾನಿ** = ಶವಸಂಸ್ಕಾರ ಸೂಕ್ತಗಳನ್ನೂ, **ಪಠನ್** = ಪಠಿಸುತ್ತಾ, **ಧಾರ್ತ್ಯರಾಷ್ಟ್ರೇಷು**

ಹೇತೇಷು = ಕೌರವರು ಸತ್ತಾಗ, ಮಯಾ = ನನ್ನಿಂದ, ಕ್ರಿಯಾಃ ಕಾರ್ಯಾಃ = ಕಾರ್ಯ ಮಾಡಬೇಕು, ಇತಿ = ಎಂದು, ಅಗ್ರತಃ = ಮುಂದೆ, ಯಯೌ = ಹೋದರು.

ತಾತ್ಪರ್ಯ :- ಶವಸಂಸ್ಕಾರ ಸೂಕ್ತಗಳನ್ನು ಪಠಿಸುತ್ತಾ ಧೌಮ್ಯರು ಮುಂದೆ ನಡೆದರು. ಕೌರವರು ಹತರಾದಾಗ ನಾನು ಈ ಕಾರ್ಯವನ್ನು ನೊಡಬೇಕೆಂದು.

ತಾನಥಾನುಯಯುಃ ಸೂತಾ ರಥೈಃ ಪರಿಚತುರ್ದಶೈಃ ।
ಸೂದಾ ಪೌರೋಗವಾಶ್ಚೈವ ಭೃತ್ಯಾ ಯೇ ತ್ವಾಪ್ತಕಾರಿಣಃ ॥ ೪೧೬ ॥

ಪದಚ್ಛೇದ :- ತಾನ್, ಅಥಾ, ಅನುಯಯುಃ, ಸೂತಾಃ, ರಥೈಃ, ಪರಿಚತುರ್ದಶೈಃ, ಸೂದಾಃ, ಪೌರೋಗವಾಃ, ಚ, ಏವ, ಭೃತ್ಯಾಃ, ಯೇ, ಆಪ್ತಕಾರಿಣಃ ।

ಅರ್ಥ :- ಅಥ = ಅನಂತರ, ತಾನ್ = ಪಾಂಡವರನ್ನು, ರಥೈಃ = ಮಹಾರಥಗಳಿಂದ, ಸೂತಾಃ = ಸಾರಥಿಗಳು, ಚ = ಮತ್ತು, ಪರಿಚತುರ್ದಶೈಃ = ಹದಿನಾಲ್ಕು ಉಪರಥಗಳಿಂದ, ಸೂತಾಃ = ಸಾರಥಿಗಳು, ಸೂದಾಃ = ಪಾಚಕರು, ಪೌರೋಗವಾಃ = ಪಟ್ಟಣಿಗರು, ಚ = ಮತ್ತು, ಆಪ್ತಕಾರಿಣಾಃ = ಪ್ರಿಯರಾದ, ಭೃತ್ಯಾಃ ಏವ = ಸೇವಕರುಗಳೇ, ಯಯುಃ = ಹೋದರು.

ತಾತ್ಪರ್ಯ :- ಪಾಂಡವರನ್ನು ಹದಿನಾಲ್ಕು ಉಪರಥಗಳಿಂದ ಕೂಡಿದ, ಐದು ರಥಗಳ ಸಾರಥಿಗಳೂ ಅಡಿಗೆಯವರು ಪಟ್ಟಣಿಗರು ಬೇರೆ ಆಪ್ತರಾದ ಭೃತ್ಯರೂ ಹಿಂಬಾಲಿಸಿದರು.

ತತಸ್ತೇ ಜಾಹ್ನವೀತೀರೇ ವನೇ ವಟಮುಪಾಶ್ರಿತಾಃ ।
ನ್ಯಷೀದನ್ನಾಗತಾನ್ ದೃಷ್ಟ್ವಾ ಸಮಸ್ತಾನ್ ಪುರವಾಸಿನಃ ॥ ೪೧೭ ॥

ಪದಚ್ಛೇದ :- ವತಃ, ತೇ, ಜಾಹ್ನವೀತೀರೆ, ವನೇ, ವಟಂ, ಉಪಾಶ್ರಿತಾಃ, ನ್ಯಷೀದತ್, ಆಗಾತಾನ್, ದೃಷ್ಟ್ವಾ, ಸಮಸ್ತಾನ್, ಪುರವಾಸಿನಃ ।

ಅರ್ಥ :- (ತತಃ = ಅನಂತರ) ಸಮಸ್ತಾನ್ = ಎಲ್ಲ, ಪುರವಾಸಿನಃ = ಪೌರರು, ಆಗತಾನ್ = ಬಂದಿರುವುದನ್ನು, ದೃಷ್ಟ್ವಾ = ಕಂಡು, ಜಾಹ್ನವೀತೀರೆ = ಗಂಗೆಯ ದಡದಲ್ಲಿ, ವನೇ = ಕಾಡಿನಲ್ಲಿ, ವಟಂ = ಮರದ ಬುಡವನ್ನು, ಉಪಶ್ರಿತಾಃ ನ್ಯಷೀದತ್ = ಆಶ್ರಯಿಸಿದರು.

ತಾತ್ಪರ್ಯ :- ಬಳಿಕ ಪಾಂಡವರೆಲ್ಲ ನಗರವಾಸಿಗಳು ತಮ್ಮನ್ನು ಹಿಂಬಾಲಿಸುವುದನ್ನು ಕಂಡು ಗಂಗೆಯ ದಡದಲ್ಲಿ ಮರದ ಬುಡವನ್ನು ಆಶ್ರಯಿಸಿದರು.

ತತಸ್ತು ತೇ ಸರ್ವಜಗನ್ನಿವಾಸಂ
ನಾರಾಯಣಂ ನಿತ್ಯಸಮಸ್ತಸದ್ಗುಣಮ್ ।
ಸ್ವಯಂಭುಶರ್ವಾದಿಭಿರರ್ಚಿತಂ ಸದಾ
ಭಕ್ತ್ಯಾऽಸ್ಮರನ್ ಭಕ್ತಭವಾಪಹಂ ಪ್ರಭುಮ್ ॥ ೪೧೮ ॥

ಪದಚ್ಛೇದ :- ತತಃ, ತು, ತೇ, ಸರ್ವಜಗನ್ನಿವಾಸಂ, ನಾರಾಯಣಂ, ನಿತ್ಯಸಮಸ್ತಃಸದ್ಗುಣಂ, ಸ್ವಯಂಭುಶರ್ವಾದಿಭಿಃ, ಅರ್ಚಿತಂ, ಸದಾ, ಭಕ್ತ್ಯಾ, ಅಸ್ಮರನ್, ಭಕ್ತಭವಾಪಹಂ, ಪ್ರಭುಂ ।

ಅರ್ಥ :- ತತಃ = ಅನಂತರ, ತೇ ತು = ಪಾಂವರಾದರೂ, ಸರ್ವಜಗನ್ನಿವಾಸಂ = ಎಲ್ಲ ಜಗತ್ತಿನಲ್ಲಿ ವಾಸಿಸುವ, ಸದ್ಗುಣಂ = ಸದ್ಗುಣವಾದ, ಸ್ವಯಂಭುಶರ್ವಾದಿಭೀಃ = ಬ್ರಹ್ಮಾದಿಗಳಿಂದಲೂ, ಸದಾ = ಯಾವಾಗಲೂ, ಅರ್ಚಿತಂ = ಪೂಜಿಸುವ, ನಾರಾಯಣಂ = ನಾರಾಯಣನನ್ನು, ಭಕ್ತ್ಯಾ = ಭಕ್ತಿಯಿಂದ, ಪ್ರಭುಂ = ಸ್ವಾಮಿಯನ್ನು, ಅಸ್ಮರನ್ = ಸ್ಮರಿಸಿದರು.

ತಾತ್ಪರ್ಯ :- ಅನಂತರ ಪಾಂಡವರು ಜಗತ್ತಿನಲ್ಲಿ ವಾಸಿಸುವ, ಸದ್ಗುಣಗಳಿಂದ ಕೂಡಿದ, ಬ್ರಹ್ಮಾದಿಗಳಿಂದಲೇ ಪೂಜಿಸುವ, ನಾರಾಯಣನನ್ನು ಭಕ್ತಿಯಿಂದ ಸ್ವಾಮಿಯನ್ನು ಧ್ಯಾನಿಸಿದರು.

ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ
ಶ್ರೀಮಹಾಭಾರತತಾತ್ಪರ್ಯನಿರ್ಣಯೇ
ಪಾಂಡವವನಪ್ರವೇಶೋ ನಾಮ
ಏಕವಿಂಶೋऽಧ್ಯಾಯಃ

# ಅಧ್ಯಾಯ - 22

ಅರಣೀಪ್ರಾಪ್ತಿಃ

ಆಗಂತುಕಾಮಾನ್ ಪುರವಾಸಿನಸ್ತೇ
ಸಂಸ್ಥಾಪ್ಯ ಕೃಚ್ಛ್ರೇಣ ಕುರುಪ್ರವೀರಾಃ ।
ರಾತ್ರೌ ಪ್ರವಿಷ್ಟಾ ಗಹನಂ ವನಂ ಚ
ಕಿರ್ಮೀರಮಾಸೇದುರಥೋ ನರಾಶಮ್ ॥ ೧ ॥

ಪದಚ್ಛೇದ :-ಆಗಂತುಕಾಮಾನ್, ಪುರವಾಸಿನಃ, ತೇ, ಸಂಸ್ಥಾಪ್ಯ, ಕೃಚ್ಛ್ರೇಣ, ಕುರುಪ್ರವೀರಾಃ, ರಾತ್ರೌ, ಪ್ರವಿಷ್ಟಾಃ ಗಹನಂ, ವನಂ, ಚ, ಕಿರ್ಮೀರಂ, ಆಸೇದುಃ, ಅಥೋ, ನರಾಶಮ್ ॥

ಅರ್ಥ :- ಅಥ = ಅನಂತರ, ತೇ = ಆ ಯಾವ, ಕುರುಪ್ರವೀರಾಃ = ಕುರುಶ್ರೇಷ್ಠರಾದ ಪಾಂಡವರು, ಆಗಂತುಕಾಮಾನ್ = ತಮ್ಮ ಜೊತೆಗೆ ವನವಾಸಕ್ಕೆ ಬರಲು ಬಯಸಿರುವ, ಪುರವಾಸಿನಃ = ಪುರಜನರ, ಕೃಚ್ಛ್ರೇಣ = ಬಹಳ ಕಷ್ಟದಿಂದ, ಸಂಸ್ಥಾಪ್ಯ = ತಡೆದುನಿಲ್ಲಿಸಿ, ರಾತ್ರೌ = ರಾತ್ರಿಯಲ್ಲಿ, ಗಹನಂ = ದಟ್ಟವಾದ (ನಿಬಿಡವಾದ), ವನಂ = ಕಾಡನ್ನು, ಪ್ರವಿಷ್ಟಾಃ = ಪ್ರವೇಶಿಸಿದವರಾಗಿ, ನರಾಶಂ = ನರಭಕ್ಷಕನಾದ, ಕಿರ್ಮೀರಂ = ಕಿರ್ಮೀರ ನಾಮಕನಾದ ರಾಕ್ಷಸನನ್ನು, ಆಸೇದುಃ = ಹೊಂದಿದರು.

ತಾತ್ಪರ್ಯ :- ಹಸ್ತಿನಾವತಿಯಿಂದ ವನವಾಸಕ್ಕಾಗಿ ಹೊರಟ ಪಾಂಡವರು ತಮ್ಮ ಮೇಲಣ ಅಭಿಮಾನದಿಂದ ಸಂಗಾತಿಗಳಾಗಿ ಬರುತ್ತಿರುವ ನಗರವಾಸಿಗಳನ್ನು ಬಲು ಕಷ್ಟದಿಂದ ತಡೆದು ನಿಲ್ಲಿಸಿ ಕತ್ತಲು ಕವಿದ ಆ ಹೊತ್ತಿನಲ್ಲಿ ಕಿರ್ಮೀರನೆಂಬ ರಾಕ್ಷಸನ ವಾಸಸ್ಥಾನವಾದ ಕಾಮ್ಯಕವೆಂಬ ವನವನ್ನು ಪ್ರವೇಶಿಸಿದರು. ನಡುರಾತ್ರಿಯ ಪ್ರವೇಶವನ್ನು ತಿಳಿದು ದೀವಿಟಿಗೆಯ ಹಿಡಿದು ಧುತ್ತನೆಂದು ಪ್ರತ್ಯಕ್ಷನಾದ ಕಿರ್ಮೀರನನ್ನು ಪಾಂಡವರು ಸಂಧಿಸಿದರು.

ಬಕಾನುಜೋಽಸೌ ನಿಖಿಲೈರಜೇಯೋ
ವರಾದ್ ಗಿರೀಶಸ್ಯ ನಿಹಂತುಕಾಮಃ ।
ಸದಾರಸೋದರ್ಯಮಭಿಪ್ರಸಸ್ರೇ
ಭೀಮಂ ಮಹಾವೃಕ್ಷಗಿರೀನ್ ಪ್ರಮುಂಚನ್ ॥ ೨ ॥

**ಪದಚ್ಛೇದ :- ಬಕಾನುಜಃ, ಅಸೌ, ನಿಖಿಲೈಃ, ಅಜೇಯಃ, ವರಾತ್, ಗಿರೀಶಸ್ಯ, ನಿಹಂತುಕಾಮಃ, ಸದಾರಸೋದರ್ಯಂ, ಅಭಿಪ್ರಸಸ್ರೇ, ಭೀಮಂ ಮಹಾವೃಕ್ಷಗಿರೀನ್ ಪ್ರಮುಂಚನ್.**

**ಅರ್ಥ** :- **ಅಸೌ** = ಈ ಯಾವ, **ಬಕಾನುಜಃ** = ಬಕಾಸುರನ ತಮ್ಮನಾದ ಕಿರ್ಮೀರನು, **ಗಿರೀಶಸ್ಯ** = ರುದ್ರದೇವರ, **ವರಾತ್** = ವರಬಲದಿಂದ, **ನಿಖಿಲೈಃ** = ಎಲ್ಲರಿಂದಲೂ, **ಅಜೇಯಃ** = ಸೋಲಿಲ್ಲದವನಾಗಿ (ಗೆಲ್ಲಲ್ಪಡುವವನಾಗಿ) **ಸದಾರಸೋದರ್ಯಂ** = ಹೆಂಡತಿ ಮತ್ತು ಅಣ್ಣತಮ್ಮಂದಿರಿಂದೊಡಗೂಡಿದ, **ಭೀಮಂ** = ಭೀಮಸೇನನನ್ನು, **ನಿಹಂತುಕಾಮಃ** = ಕೊಲ್ಲಲು ಇಚ್ಛಿಸುವವನಾಗಿ, **ಮಹಾವೃಕ್ಷ ಗಿರೀನ್** = ದೊಡ್ಡ ದೊಡ್ಡ ಪರ್ವತಗಳನ್ನು ಹಾಗೂ ಮರಗಳನ್ನು **ಪ್ರಮುಂಚನ್** = ಎಸೆಯುವವನಾಗಿ, **ಅಭಿಪ್ರಸಸ್ರೇ** = ಸಮೀಪಿಸಿದನು.

**ತಾತ್ಪರ್ಯ** :- ಬಕಾಸುರನ ತಮ್ಮನಾದ ಕಿರ್ಮೀರನೆಂಬ ಆ ರಾಕ್ಷಸನು ರುದ್ರದೇವರ ವರದ ಬಲದಿಂದ ಅಜೇಯನಾದವನಾಗಿ ಹೆಂಡತಿ ಮತ್ತು ಅಣ್ಣ ತಮ್ಮಂದಿರಿಂದ ಒಡಗೂಡಿದ ಭೀಮನನ್ನು ಕೊಲ್ಲಲು ಬಯಸಿ ದೊಡ್ಡದಾದ ಮರ ಮತ್ತು ಪರ್ವತಗಳನ್ನು ಕಿತ್ತು ಬಿಸಾಡುವವನಾಗಿ ಭೀಮನ ಸಮೀಪ ಬಂದನು.

**ಸ ಸಂಪ್ರಹಾರಂ ಸಹ ತೇನ ಕೃತ್ವಾ**
**ಭೀಮೋ ನಿಪಾತ್ಯಾऽಶು ಧರಾತಳೇ ತಮ್ ।**
**ಚಕ್ರೇ ಮಖೇ ಸಂಗರನಾಮಧೇಯೇ**
**ಪ್ರಸಹ್ಯ ನಾರಾಯಣದೈವತೇ ಪಶುಮ್ ॥ ೩ ॥**

**ಪದಚ್ಛೇದ :-ಸಃ, ಸಂಪ್ರಹಾರಂ, ಸಹ, ತೇನ, ಕೃತ್ವಾ, ಭೀಮಃ, ನಿಪಾತ್ಯ, ಆಶು, ಧರಾತಲೇ, ತಂ, ಚಕ್ರೇ, ಮಖೇ, ಸಂಗರನಾಮಧೇಯೇ, ಪ್ರಸಹ್ಯ, ನಾರಾಯಣ, ದೈವತೇ, ಪಶುಮ್ ।**

**ಅರ್ಥ** :- **ಸಃ ಭೀಮಃ** = ಆ ಯಾವ ಭೀಮನು, **ತೇನ ಸಹ** = ಆ ಕಿರ್ಮೀರನೊಂದಿಗೆ, **ಸಂಪ್ರಹಾರಂ** = ಯುದ್ಧವನ್ನು, **ಕೃತ್ವಾ** = ಮಾಡಿ, **ತಂ** = ಆ ಕಿರ್ಮೀರನನ್ನು **ಧರಾತಲೇ** = ಭೂಮಿಯಲ್ಲಿ, **ಆಶು** = ಬೇಗನೆ,

ನಿಪಾತ್ಯ = ಬೀಳಿಸಿ, ನಾರಾಯಣದೈವತೇ = ನಾರಾಯಣ ದೇವತಾಕವಾದ ಸಂಗರನಾಮಧೇಯೇ = ಯುದ್ಧಾಖ್ಯವಾದ, ಮಖೇ = ಯಜ್ಞದಲ್ಲಿ, ಪಶುಂ = ಯಜ್ಞಪಶುವನ್ನಾಗಿಸಿ, ಪ್ರಸಹ್ಯ = ಬಲಾತ್ಕಾರದಿಂದ ಕೆಳಗೆ ಮೀಳಿಸಿ, ಚಕ್ರೇ = ಯಾಗ ಮಾಡಿದರು.

ತಾತ್ಪರ್ಯ :- ಮುಂದಿನ ಶ್ಲೋಕದಲ್ಲಿ ಸೇರಿದೆ.

**ನಿಹತ್ಯ ರಕ್ಷೋ ವನಮಧ್ಯಸಂಸ್ಥಾ-**
**ಸ್ತದಾ ಯತೀನಾಮಯುತ್ಯೈಃ ಸಮೇತಾಃ ।**
**ಅಶೀತಿಸಾಹಸ್ರಮುನಿಪ್ರವೀರೈ-**
**ರ್ದಶಾಂಶಯುಕ್ತೈಃ ಸಹಿತಾ ವ್ಯಚಿಂತಯನ್ ॥ ೪ ॥**

ಪದಚ್ಛೇದ :- ನಿಹತ್ಯ, ರಕ್ಷಃ, ವನಮಧ್ಯಸಂಸ್ಥಾಃ, ತದಾ, ಯತೀನಾಂ, ಆಯುತ್ಯೈಃ, ಸಮೇತಾಃ, ಅಶೀತಿಸಾಹಸ್ರ, ಮುನಿಪ್ರವೀರೈಃ, ದಶಾಂಶಯುಕ್ತೈಃ, ಸಹಿತಾಃ, ವ್ಯಚಿಂತಯನ್।

ಅರ್ಥ :- ಯತೀನಾಮಯುತ್ಯೈಃ = ಹತ್ತು ಸಾವಿರ ಯತಿಗಳಿಂದ ಸಮೇತಾಃ = ಕೂಡಿದ, ವನಮಧ್ಯಸಂಸ್ಥಾಃ = ಕಾಡಿನ ಮಧ್ಯಭಾಗದಲ್ಲಿ ವಾಸಮಾಡಿಕೊಂಡಿರುವ ಆ ಪಾಂಡವರು, ರಕ್ಷಃ = ಕಿರ್ಮೀರ ರಾಕ್ಷಸನನ್ನು ನಿಹತ್ಯ = ಕೊಂದು, ದಶಾಂಶಯುಕ್ತೈಃ = (ಎಂಬತ್ತೆಂಟು ಸಾವಿರದ ಹತ್ತನೇ ಭಾಗವಾದ ಸುಮಾರು ೮೮೦೦ರ ಸಂಖ್ಯೆಯಿಂದ ಕೂಡಿದ ಸ್ನಾತಕ ವರ್ಗದಿಂದ ಸಹಿತರಾದ ಅಶೀತಿಸಾಹಸ್ರಮುನಿಪ್ರವೀರೈಃ = ಎಂಬತ್ತೆಂಟು ಸಾವಿರದ ಸಂಖ್ಯಾಕರಾದ ಮುನಿಶ್ರೇಷ್ಠರಿಂದ ಸಹಿತಾಃ = ಕೂಡಿದವರಾಗಿ, ವ್ಯಚಿಂತಯತ್ = ಚಿಂತಿಸಿದರು.

ತಾತ್ಪರ್ಯ :- ಭೀಮಸೇನನು ಕಿರ್ಮೀರ ರಾಕ್ಷಸನೊಡನೆ ಹೋರಾಡಿ ಅವನನ್ನು ಭೂಮಿಗೆ ಬೀಳಿಸಿದ. ಆನಂತರದಲ್ಲಿ ಆಯುದ್ಧವನ್ನು ನಾರಾಯಣ ದೇವತಾಕವಾದ ಯಜ್ಞವೆಂದು ಭಾವಿಸಿ ಆ ಯಜ್ಞನ ಬಲಿಪಶುವನ್ನಾಗಿ ಕಿರ್ಮೀರನನ್ನು ಚಿಂತಿಸಿ ನಾರಾಯಣನಿಗೆ ಸಮರ್ಪಿಸಿ ಯಾಗವನ್ನು ಪೂರ್ಣಗೊಳಿಸಿದ. ಕಿರ್ಮೀರ ನಾಮಕನಾದ ಆ ರಾಕ್ಷಸನನ್ನು ಸದೆಬಡಿದ ಬಳಿಕ ಕಾಡಿನ ಮಧ್ಯಭಾಗಕ್ಕೆ ಬಂದ ಪಾಂಡವರು ತಮ್ಮೊಂದಿಗೆ ಬಂದಿರುವ ಹತ್ತು

ಸಾವಿರ ಯತಿಗಳ ಮತ್ತು ಅನೇಕ ಗೃಹಸ್ಥಬ್ರಾಹ್ಮಣರ ಮತ್ತು ೮೮ ಸಾವಿರ ಸಂಖ್ಯಾಕರಾದ ಯತಿಶ್ರೇಷ್ಠರುಗಳ ದೈನಂದಿನ ಕರ್ತವ್ಯಗಳು ಮತ್ತು ಅಶನವಸನಾದಿಗಳ ಪೂರೈಸುವುದರ ಕುರಿತಾಗಿ ಸಭೆ ಸೇರಿದರು.

**ವಿಚಿಂತ್ಯ ತೇಷಾಂ ಭರಣಾಯ ಧರ್ಮಜಃ**
**ಸಂಪೂಜ್ಯ ಸೂರ್ಯಸ್ಥಿತಮಚ್ಯುತಂ ಪ್ರಭುಮ್ ।**
**ದಿನೇऽಕ್ಷಯಾನ್ನಂ ಪಿಠರಂ ತದಾಪ**
**ರತ್ನಾದಿದಂ ಕಾಮವರಾನ್ನದಂ ಚ ॥ ೫ ॥**

**ಪದಚ್ಛೇದ :–ವಿಚಿಂತ್ಯ, ತೇಷಾಂ, ಭರಣಾಯ, ಧರ್ಮಜಃ, ಸಂಪೂಜ್ಯ, ಸೂರ್ಯಸ್ಥಿತಂ, ಅಚ್ಯುತಂ, ಪ್ರಭುಮ್ । ದಿನೇ, ಅಕ್ಷಯಾನ್ನಂ, ಪಿಠರಂ, ತದಾ, ಆಪ, ರತ್ನಾದಿದಂ, ಕಾಮವರಾನ್ನದಂ, ಚ ।**

**ಅರ್ಥ** :- **ಯಥಾ** = ಆ ಸಂದರ್ಭದಲ್ಲಿ, **ಧರ್ಮಜಃ** = ಧರ್ಮರಾಜನು, **ತೇಷಾಂ** = ತಮ್ಮ ಸಂಗಡಿಗರಾದ ಯತೀಶ್ವರರೇ ಮೊದಲಾದವರ, **ಭರಣಾಯ** = ಪೋಷಣೆಗಾಗಿ **ವಿಚಿಂತ್ಯ** = ಪರಿಹಾರವನ್ನು ಚಿಂತಿಸಿದವನಾಗಿ, **ಪ್ರಭುಂ** = ಸರ್ವಸಮರ್ಥನಾದ **ಸೂರ್ಯಸ್ಥಿತಂ** = ಸೂರ್ಯನ ಅಂತರ್ಯಾಮಿಯಾದ **ಅಚ್ಯುತಂ** = ದೋಷರಹಿತ ನಾರಾಯಣನನ್ನು, **ಸಂಪೂಜ್ಯ** = ಆರಾಧಿಸಿ, **ದಿನೇ** = ಹಗಲಿನಲ್ಲಿ, **ಅಕ್ಷಯಾನ್ನಂ** = ಅಕ್ಷಯವಾದ ಅನ್ನವನ್ನು **ಚ** = ಮತ್ತು **ರತ್ನಾದಿದಂ** = ರತ್ನ ಮುಂತಾದವುಗಳನ್ನು ಕೊಡುವ **ಕಾಮವರಾನ್ನದಂ** = ಕಾಮಿತವಾದ ವರಗಳನ್ನು ನೀಡುವ **ಪಿಠರಂ** = ಪಾತ್ರೆಯೊಂದನ್ನು, **ಆಪ** = ಹೊಂದಿದನು.

**ತಾತ್ಪರ್ಯ** :- ಪಾಂಡವರ ಹಿರಿಯನಾದ ಧರ್ಮರಾಜನು ತಮ್ಮ ಜೊತೆಗಿನ ಯತಿಗಳ ಹಾಗೂ ಮುನೀಶ್ವರರೇ ಮೊದಲಾದವರ ಪೋಷಣೆಯ ಬಗ್ಗೆ ಚಿಂತಿಸಿ ಪರಿಹಾರವೊಂದನ್ನು ಕಂಡುಕೊಂಡವನಾಗಿ ಸೂರ್ಯನ ಅಂತರ್ಯಾಮಿಯಾದ ಭಗವಂತನಾದ ನಾರಾಯಣನನ್ನು ಆರಾಧಿಸಿದನು. ಆರಾಧನೆಯಿಂದ ಪ್ರಸನ್ನನಾದ ಸೂರ್ಯನಾರಾಯಣನು ಅಕ್ಷಯವಾಗಿ ಅನ್ನ ರತ್ನಾಭರಣಗಳನ್ನು ನೀಡುವ ಅಕ್ಷಯ ಪಾತ್ರೆಯೊಂದನ್ನು ನೀಡಿ ಹರಸಿದ.

ಬಭಾರ ತೇನೈವ ಯುಧಿಷ್ಠಿರಸ್ತಾನ್
ಪ್ರತ್ಯೇಕಶಸ್ತ್ರಿಂಶತದಾಸಿದಾಸಕಾನ್ ।
ಸುವರ್ಣಪಾತ್ರೇಷು ಹಿ ಭುಂಜತೇ ಯೇ
ಗೃಹೇ ತದೀಯೇ ಬಹುಕೋಟಿದಾಸಿಕೇ ॥ ೬ ॥

ಪದಚ್ಛೇದ :- ಬಭಾರ, ತೇನ, ಏವ, ಯುಧಿಷ್ಠಿರಃ, ತಾನ್, ಪ್ರತ್ಯೇಕಶಃ, ತ್ರಿಂಶ, ತದಾಸಿವಾಸಕಾನ್ । ಸುವರ್ಣ, ಪಾತ್ರೇಷು, ಹಿ, ಭುಂಜತೇ, ಯೇ, ಗೃಹೇ, ತದೀಯೇ, ಬಹುಕೋಟಿದಾಸಿಕೇ ॥

ಅರ್ಥ :- ಬಹುಕೋಟಿದಾಸಿಕೇ = ಬಹಳ ಕೋಟಿ ಸಂಖ್ಯೆಯಲ್ಲಿ ದಾಸದಾಸಿಯರನ್ನು ಒಳಗೊಂಡ ತದೀಯೇ = ಆ ಧರ್ಮರಾಜನಿಗೆ ಸಂಬಂಧಿಸಿದ, ಗೃಹೇ = ಅರಮನೆಯಲ್ಲಿಯೇ ಯಾವ ಪ್ರತಿಯೊಬ್ಬರೂ, ಪ್ರತ್ಯೇಕಶಃ = ಪ್ರತ್ಯೇಕ ಪ್ರತ್ಯೇಕವಾಗಿ ತ್ರಿಶತದಾಸದಾಸಿಕಾನ್ = ಮೂವತ್ತು ಸಂಖ್ಯೆಯ ದಾಸ ದಾಸಿಯರನ್ನೊಳಗೊಂಡು, ಸುವರ್ಣಪಾತ್ರೇಷು = ಬಂಗಾರದ ಪಾತ್ರೆಗಳಲ್ಲಿ ಭುಂಜತೇ ಹಿ = ಊಟ ಮಾಡುತ್ತಿದ್ದರು, ತಾನ್ = ಅಂತಹವರನ್ನು, ತೇನೈವ = ಅದೇ ವೈಭವದಿಂದಲೇ, ಬಭಾರ = ಪೋಷಿಸಿದನು.

ತಾತ್ಪರ್ಯ :- ಈ ಹಿಂದ ಧರ್ಮರಾಜನ ಅರಮನೆಯಲ್ಲಿ ಬಹುಕೋಟಿ ಸಂಖ್ಯಾಕರಾದ ದಾಸದಾಸೀ ವರ್ಗವಿದ್ದಿತು. ಆ ಧರ್ಮರಾಜನನ್ನು ಬಹಳ ಕಾಲದಿಂದ ಅನುಸರಿಸುತ್ತಾ ಬಂದಿರುವ ಈ ಯತಿಶ್ರೇಷ್ಠರುಗಳೂ ಅಲ್ಲಿದ್ದರು. ಅರಮನೆಯಲ್ಲಿ ಪ್ರತಿಯೊಬ್ಬರೂ ಮೂವತ್ತಕ್ಕಿಂತ ಮಿಗಿಲಾಗಿ ದಾಸದಾಸೀ ವರ್ಗವನ್ನು ಹೊಂದಿ ಬಹಳ ವೈಭವದಿಂದ ಜೀವನ ನಡೆಸುತ್ತಿದ್ದರು. ಬದಲಾದ ಕಾಲಘಟ್ಟದಲ್ಲಿಯೂ ಧರ್ಮರಾಜ ಭಗವಂತನ ಅನುಗ್ರಹವನ್ನು ಹೊಂದಿ ಅದೇ ವೈಭವದಿಂದ ಪೂಜಿಸಿದ.

ಸತ್ಸಂಗಮಾಕಾಂಕ್ಷಿಣ ಏವ ತೇಽವಸನ್
ಪಾರ್ಥೈಃ ಸಹಾನ್ಯೇ ಚ ಮುನೀಂದ್ರವೃಂದಾಃ ।
ಶೃಣ್ವಂತ ಏಭ್ಯಃ ಪರಮಾರ್ಥಸಾರಾಃ
ಕಥಾ ವದಂತಶ್ಚ ಪುರಾತನಾಸ್ತಥಾ ॥ ೭ ॥

ಪದಚ್ಛೇದ :– ಸತ್ಸಂಗಂ, ಆಕಾಂಕ್ಷಿಣ, ಏವ, ತೇ, ಅವಸನ್, ಪಾರ್ಥೈಃ, ಸಹ, ಅನ್ಯೇ, ಚ, ಮುನೀಂದ್ರವೃಂದಾಃ, ಶೃಣ್ವಂತ, ಏಭ್ಯಃ, ಪರಮಾರ್ಥಸಾರಾಃ, ಕಥಾ, ವದಂತ, ಚ, ಪುರಾತನಾಃ, ತಥಾ ।

**ಅರ್ಥ** :- **ತೇ** = ಆ ಯಾವ **ಮುನೀಂದ್ರಬೃಂದಾಃ** = ಮುನಿ ಶ್ರೇಷ್ಠರುಗಳ ಸಮೂಹವು, **ಚ** = ಮತ್ತು, **ಅನ್ಯೇ** = ಇತರೆ ಯತಿಗಳೂ ಮೊದಲಾದವರು, **ಪಾರ್ಥೈಃ ಸಹ** = ಪಾಂಡವರ ಒಡಗೂಡಿ **ಸತ್ಸಂಗಮಾಕಾಂಕ್ಷಿಣ ಏವ** = ಸಜ್ಜನರ ಒಡನಾಟವನ್ನು ಬಯಸುವವರಾಗಿ, **ಏಭ್ಯಃ** = ಈ ಪಾಂಡವರ ದೆಸೆಯಿಂದ **ಪರಮಾರ್ಥಸಾರಾಃ** = ಭಗವದ್ವಿಷಯಕವಾದ ಕಥೆಗಳನ್ನು, **ಶೃಣ್ವಂತಃ** = ಕೇಳುವವರಾಗಿ, **ತಥಾ** = ಹಾಗೆಯೇ, **ಪುರಾತನಾಃ** = ಐತಿಹಾಸಿಕವಾದ, **ಕಥಾಃ** = ಕಥೆಗಳನ್ನು **ವದಂತಃ** = ಹೇಳುವವರಾಗಿ, **ಅವಸನ್** = ವಾಸಮಾಡಿದರು.

**ತಾತ್ಪರ್ಯ** :- ಪಾಂಡವರ ಜೊತೆಗೂಡಿ ವಾಸಮಾಡುತ್ತಿರುವ ಆ ಯತಿ ಸಮೂಹವು ಕೇವಲ ಸಜ್ಜನರ ಸಹವಾಸವನ್ನೇ ಬಯಸಿ ಬಂದಿತ್ತು. ಅಂತಹ ಸಮೂಹವು ಪಾಂಡವರಿಂದ ಭಗವಂತನ ಮಹಾತ್ಮೆಗಳನ್ನು ಕೇಳುತ್ತಾ, ಐತಿಹಾಸಿಕವಾದ ಪುರಾತನವಾದ ಕಥೆಗಳನ್ನು ಹೇಳುತ್ತಾ ಕಾಲವನ್ನು ಕಳೆಯುತ್ತಲಿತ್ತು.

**ಏವಂ ಗಜಾನಾಂ ಬಹುಕೋಟಿವೃಂದಾಂ-**
**ಸ್ತಥಾ ರಥಾನಾಂ ಚ ಹಯಾಂಶ್ಚ ವೃಂದಶಃ ।**
**ವಿಸೃಜ್ಯ ರತ್ನಾನಿ ನರಾಂಶ್ಚ ವೃಂದಶೋ**
**ವನೇ ವಿಜಹ್ರುರ್ದಿವಿ ದೇವವತ್ ಸುಖಮ್ ॥ ೮ ॥**

ಪದಚ್ಛೇದ :– ಏವಂ, ಗಜಾನಾಂ, ಬಹುಕೋಟಿವೃಂದಾನ್, ತಥಾ, ರಥಾನಾಂ, ಚ, ಹಯಾನ್, ಚ, ವೃಂದಶಃ, ವಿಸೃಜ್ಯ, ರತ್ನಾನಿ, ನರಾನ್, ಚ, ವೃಂದಶಃ, ವನೇ, ವಿಜಹ್ರುಃ, ದಿವಿ, ದೇವವತ್, ಸುಖಮ್ ॥

**ಅರ್ಥ** :- **ಏವಂ** = ಈ ಹಿಂದೆ ಹೇಳಿದ ರೀತಿಯಲ್ಲಿ **ಗಜಾನಾಂ** = ಆನೆಗಳ **ಬಹುಕೋಟಿವೃಂದಾನ್** = ಬಹುಕೋಟಿ ಸಂಖ್ಯಾತವಾದ ಸಮೂಹವನ್ನು **ತಥಾ** = ಹಾಗೆಯೇ **ರಥಾನಾಂ** = ರಥಗಳ **ವೃಂದಶಃ** =

ಸಮೂಹಗಳ, ಚ = ಮತ್ತು, ವೃಂದಶಃ = ಬಹುಸಂಖ್ಯಾಕವಾದ ಸಮೂಹಗಳುಳ್ಳ, ಹಯಾನ್ = ಕುದುರೆಗಳನ್ನು, ಚ ಮತ್ತು ರತ್ನಾನಿ = ರತ್ನಗಳನ್ನು, ನರಾನ್ = ಅನುಸರಿಸಿ ಬಂದ ಜನ ಸಮೂಹವನ್ನು, ವಿಸೃಜ್ಯ = ಬಿಟ್ಟು, ದಿವಿ = ಸ್ವರ್ಗದಲ್ಲಿನ, ದೇವವತ್ = ದೇವೇಂದ್ರನೆಂಬಂತೆ, ವನೇ = ಕಾಡಿನಲ್ಲಿ, ಸುಖಂ = ಸುಖವಾಗಿ ವಿಜಹ್ರುಃ = ವಿಹರಿಸಿದರು.

ತಾತ್ಪರ್ಯ :- ಆ ಪಾಂಡವರು ಇಂದ್ರಪ್ರಸ್ಥದ ಅರಮನೆಯಲ್ಲಿದ್ದ ಅನೇಕ ಕೋಟಿಸಂಖ್ಯೆಯ ರಥ ಆನೆ ಕುದುರೆ ಇವೇ ಮುಂತಾದ ಎಲ್ಲಾ ವೈಭವಗಳನ್ನು ಪರಿತ್ಯಜಿಸಿಯೂ ಕಾಡಿನಲ್ಲಿ ಸ್ವರ್ಗದಲ್ಲಿನ ದೇವೇಂದ್ರನ ವೈಭವಕ್ಕೆ ಸರಿಸಾಟಿಯಾಗಿ ಸುಖವಾಗಿ ಬಹುಜನರೊಂದಿಗೆ ವಿಹರಿಸಿದರು.

**ಗವಾಂ ಚ ಲಕ್ಷಂ ಪ್ರದದಾತಿ ನಿತ್ಯಶಃ**
**ಸುವರ್ಣಭಾರಾಂಶ್ಚ ಶತಂ ಯುಧಿಷ್ಠಿರಃ ।**
**ಸಭ್ರಾತೃಕೋಽಸೌ ವನಮಾಪ್ಯ ಶಕ್ರವ-**
**ನ್ಮುಮೋದ ವಿಪ್ರೈಃ ಸಹಿತೋ ಯಥಾಸುಖಮ್ ॥ ೯ ॥**

ಪದಚ್ಛೇದ :- ಗವಾಂ, ಚ, ಲಕ್ಷಂ, ಪ್ರದದಾತಿ, ನಿತ್ಯಶಃ, ಸುವರ್ಣ ಭಾರಾನ್, ಚ, ಶತಂ, ಯುಧಿಷ್ಠಿರಃ । ಸಭ್ರಾತೃಕಃ, ಅಸೌ, ವನಂ, ಆಪ್ಯ, ಶಕ್ರವತ್, ಮುಮೋದ, ವಿಪ್ರೈಃ, ಸಹಿತಃ, ಯಥಾಸುಖಮ್ ॥

ಅರ್ಥ :- ಯುಧಿಷ್ಠಿರಃ = ಧರ್ಮರಾಜನು ನಿತ್ಯಶಃ = ಪ್ರತಿದಿನವೂ, ಲಕ್ಷಂ = ಲಕ್ಷಸಂಖ್ಯಾಕವಾದ, ಗವಾಂ = ಹಸುಗಳನ್ನು, ಚ = ಮತ್ತು, ನಿತ್ಯಂ = ಯಾವಾಗಲೂ, ಶತಂ = ನೂರು ಸುವರ್ಣಭಾರಾನ್ = ಬಹಳವಾದ, (ತೊಲೆಗಟ್ಟಲೆ) ಬಂಗಾರವನ್ನು ಪ್ರದದಾತಿ = ದಾನ ಮಾಡುತ್ತಾನೆ. ಸಭಾತೃಕಃ = ತಮ್ಮಂದಿರಿಂದ ಕೂಡಿದ, ಅಸೌ = ಈ ಯಾವ ಧರ್ಮರಾಜನು, ವನಂ = ಕಾಡನ್ನು, ಆಪ್ಯ = ಹೊಂದಿಯೂ, ವಿಪ್ರೈಃ = ಬ್ರಾಹ್ಮಣರಿಂದ, ಸಹಿತ = ಕೂಡಿದವನಾಗಿ, ಯಥಾಸುಖಂ = ಈ ಹಿಂದಿನ ರೀತಿಯಲ್ಲೇ ಶಕ್ರವತ್ = ದೇವೇಂದ್ರನಂತೆ ಮುಮೋದ = ಆನಂದಿಸಿದನು.

ತಾತ್ಪರ್ಯ :- ಆ ಧರ್ಮರಾಜನು ಕಾಡಿನಲ್ಲಿ ವಾಸಮಾಡುವವ ನಾಗಿದ್ದರು. ಅನುದಿನವೂ ಲಕ್ಷ ಸಂಖ್ಯಾಕವಾದ ಗೋವುಗಳನ್ನು ಮತ್ತು ನೂರು

ತೊಲೆಗಳ ಬಂಗಾರವನ್ನೂ ದಾನ ಮಾಡುತ್ತಿದ್ದಾನೆ. ಆ ಅಕ್ಷಯ ಪಾತ್ರೆಯ ಪ್ರಭಾವದಿಂದ, ಅಂತಹ ಧರ್ಮರಾಜನು ತನ್ನ ತಮ್ಮಂದಿರು ಹಾಗೂ ಬಹು ಮಂದಿ ಬ್ರಾಹ್ಮಣರೊಡನೆ ಈ ಹಿಂದೆ ಇಂದ್ರಪ್ರಸ್ಥ ನಗರಿಯಲ್ಲಿರುವಂತೆಯೇ ಕಾಡಿನಲ್ಲಿಯೂ ದೇವೇಂದ್ರನೆಂಬಂತೆ ಬಹುವಾಗಿ ಸಂತೋಷದಿಂದ ಇದ್ದನು.

**ಪಾರ್ಥೇಷು ಯಾತೇಷು ಕಿಮತ್ರ ಕಾರ್ಯ-**
**ಮಿತಿ ಸ್ಮ ಪೃಷ್ಟೋ ವಿದುರೋಽಗ್ರಜೇನ ।**
**ಆಹೂಯ ರಾಜ್ಯಂ ಪ್ರತಿಪಾದಯೇತಿ**
**ಪ್ರಾಹೈನಮಾಹಾಥ ರುಷಾಽಽಂಬಿಕೇಯಃ ॥ ೧೦ ॥**

**ಪದಚ್ಛೇದ :- ಪಾರ್ಥೇಷು, ಯಾತೇಷು, ಕಿಮ್, ಅತ್ರಕಾರ್ಯಂ, ಇತಿ, ಸ್ಮ ಪೃಷ್ಟೋಃ, ವಿದುರಃ, ಅಗ್ರಜೇನ, ಆಹೂಯ, ರಾಜ್ಯಂ, ಪ್ರತಿಪಾದಯ, ಇತಿ, ಪ್ರಾಹ, ಏನಂ, ಆಹ, ಅಥ, ರುಷಾ, ಅಂಬಿಕೇಯಃ ॥**

**ಅರ್ಥ** :- **ಅಥ** = ಅನಂತರ, **ಪಾರ್ಥೇಷು** = ಪಾಂಡವರು, **ಯಾತೇಷು ಸತ್ಸು** = ಕಾಡಿಗೆ ಹೋಗುತ್ತಿರಲಾಗಿ, **ಅತ್ರ** = ಈ ವಿಷಯದಲ್ಲಿ, **ಕಿಂ ಕಾರ್ಯಂ** = ಮಾಡಬೇಕಾದ ಕರ್ತವ್ಯವಾದರೂ ಏನು, **ಇತಿ** = ಹೀಗೆಂದು, **ಅಗ್ರಜೇನ** = ಅಣ್ಣನಾದ ಧೃತರಾಷ್ಟ್ರನಿಂದ, **ಪೃಷ್ಟೋಃ** = ಕೇಳಲ್ಪಟ್ಟ, **ವಿದುರಃ** = ವಿದುರನು, **ಆಹೂಯ** = ಪಾಂಡವರನ್ನು ಕರೆಯಿಸಿ, **ರಾಜ್ಯಂ** = ರಾಜ್ಯವನ್ನು, **ಪ್ರತಿಪಾದಯ** = ನೀಡು, **ಇತಿ** = ಎಂದು **ಅಹಸ್ಮ** = ಹೇಳಿದನಷ್ಟೇ, **ಸಃ ಅಂಬಿಕೇಯಃ** = ಅಂಬಿಕೆಯ ಮಗನಾದ ಧೃತರಾಷ್ಟ್ರನಿಂದ, **ರುಷಾ** = ಕೋಪದಿಂದ, **ಏನಂ** = ಈ ಯಾವ ವಿದುರನನ್ನು, **ಪ್ರಾಹ** = ಮುಂದೆ ಹೇಳುವ ಮಾತನ್ನು ಹೇಳಿದನು.

**ತಾತ್ಪರ್ಯ** :- ಪಾಂಡವರೆಲ್ಲಾ ಜೂಜಿನಲ್ಲಿ ಸೋತ ಪರಿಣಾಮ ಕಾಡಿಗೆ ಹೋಗಿದ್ದಾರೆ. ಆನಂತರ ಧೃತರಾಷ್ಟ್ರನು ತನ್ನ ತಮ್ಮನಾದ ವಿದುರನನ್ನು ಕರೆದು ಮುಂದಿನ ಕಾರ್ಯದ ಬಗ್ಗೆ ವಿಚಾರಿಸಲಾಗಿ ವಿದುರ ಪಾಂಡವರನ್ನು ಕರೆದು ರಾಜ್ಯವನ್ನು ನೀಡು ಎಂದು ಸಲಹೆ ನೀಡಿದ, ಆ ಮಾತನ್ನು ಕೇಳಿದ ಧೃತರಾಷ್ಟ್ರ ಸಿಟ್ಟುಗೊಂಡು ಮಾತನಾಡಿದ.

ಜ್ಞಾತಂ ಪ್ರತೀಪೋಽಸಿ ಮಮಾಽತ್ಮಜಾನಾಂ
ನ ಮೇ ತ್ವಯಾ ಕಾರ್ಯಮಿಹಾಸ್ತಿ ಕಿಂಚಿತ್ ।
ಯಥೇಷ್ಟತಸ್ತಿಷ್ಠ ವಾ ಗಚ್ಛ ವೇತಿ
ಪ್ರೋಕ್ತೋ ಯಯೌ ವಿದುರಃ ಪಾಂಡುಪುತ್ರಾನ್ ॥ ೧೧ ॥

ಪದಚ್ಛೇದ :- ಜ್ಞಾತಂ, ಪ್ರತೀಪಃ, ಅಸಿ, ಮಮ, ಆತ್ಮಜಾನಾಂ, ನ, ಮೇ, ತ್ವಯಾ, ಕಾರ್ಯಂ, ಇಹ, ಅಸ್ತಿ, ಕಿಂಚಿತ್, ಯಥೇಷ್ಟತಃ, ತಿಷ್ಠ, ವಾ, ಗಚ್ಛ, ವಾ, ಇತಿ, ಪ್ರೋಕ್ತಃ, ಯಯೌ, ವಿದುರಃ, ಪಾಂಡುಪುತ್ರಾನ್ ।

ಅರ್ಥ :- ಮಮ = ನನ್ನ ಆತ್ಮಜಾನಾಂ = ಮಕ್ಕಳಿಗೆ, ಪ್ರತೀಪಃ = ವಿರೋಧಿಯು, ಅಸಿ = ಆಗಿರುವಿ, ಇತಿ = ಹೀಗೆ ಜ್ಞಾತಂ = ತಿಳಿಯಲ್ಪಟ್ಟಿತು, (ನನಗೆ ನಿಶ್ಚಯವಾಯಿತು) (ತ್ವಂ = ನೀನು) ಯಥೇಷ್ಟತಃ = ನಿನ್ನ ಇಷ್ಟಾನುಸಾರವಾಗಿ ತಿಷ್ಠ = ನಿಲ್ಲಬಹುದು (ಉಳಿಯಬಹುದು) ವಾ = ಅಥವಾ ಗಚ್ಛ = ನೀನು ಬಯಸಿದಲ್ಲಿ ಹೋಗಬಹುದು, ಇತಿ = ಹೀಗೆಂದು ಪ್ರೋಕ್ತಃ = ಹೇಳಲ್ಪಟ್ಟವನಾಗಿ, ವಿದುರಃ = ವಿದುರನು ಪಾಂಡುಪುತ್ರಾನ್ = ಪಾಂಡವರನ್ನು ಕುರಿತು ಯಯೌ = ಹೋದನು.

ತಾತ್ಪರ್ಯ :- ಧೃತರಾಷ್ಟ್ರನು ತನ್ನ ತಮ್ಮನಾದ ವಿದುರನನ್ನು ಕುರಿತು ಕೋಪದಿಂದ ಮಾತನಾಡಿದ. ಎಲೈ ವಿದುರ ಇಂದು ನನಗೆ ಸ್ಪಷ್ಟವಾಯಿತು. ಅದೇನೆಂದರೆ ನೀನು ನನ್ನ ಮಕ್ಕಳ ವಿರೋಧಿಯಾಗಿರುವಿ. ಆದ ಕಾರಣ ಇನ್ನು ನೀನು ಇಲ್ಲಿರಬೇಕಾದ ಕಾರಣವಿಲ್ಲ. ನಿನ್ನ ಇಷ್ಟ ಬಂದ ಹಾಗೆ ನೀನು ಇರಬಹುದು. ಅಥವಾ ಪಾಂಡವರ ಜೊತೆಯಲ್ಲಿಯೇ ಹೋಗಬಹುದು. ಎಂದು ಹೇಳಿದ. ಆ ಮಾತನ್ನು ಕೇಳಿದ ವಿದುರ ಆ ಕ್ಷಣದಲ್ಲಿಯೇ ಪಾಂಡವರನ್ನು ಅನುಸರಿಸಿ ಹೊರಟೇಬಿಟ್ಟನು.

ತಸ್ಮಿನ್ ಗತೇ ಭ್ರಾತೃವಿಯೋಗಕರ್ಶಿತಃ
ಪಪಾತ ಭೂಮೌ ಸಹಸೈವ ರಾಜಾ ।
ಸಂಜ್ಞಾಮವಾಪ್ಯಾಽದಿಶದಾಶು ಸಂಜಯಂ
ಜೀವಾಮಿ ಚೇದಾಶು ಮಮಾಽನಯಾನುಜಮ್ ॥ ೧೨ ॥

ಪದಚ್ಛೇದ :– ತಸ್ಮಿನ್, ಗತೇ, ಭ್ರಾತೃವಿಯೋಗಕರ್ಶಿತಃ, ಪಪಾತ, ಭೂಮೌ, ಸಹಸಾ, ಏವ, ರಾಜಾ, ಸಂಜ್ಞಾಂ, ಅವಾಪ್ಯ, ಆದಿಶತ್, ಆಶು, ಸಂಜಯಂ, ಜೀವಾಮಿ, ಚೇತ್, ಆಶು, ಮಮ, ಆನಯ, ಅನುಜಮ್ ।

**ಅರ್ಥ** :- **ತಸ್ಮಿನ್** = ಆ ವಿದುರನು, **ಗತೇಃ** = ಹೋಗಲಾಗಿ, **ಭ್ರಾತೃವಿಯೋಗಕರ್ಶಿತಃ** = ತಮ್ಮನಾದ ವಿದುರನ ವಿಯೋಗದಿಂದ ದುಃಖಿತನಾದ, **ರಾಜಾ** = ರಾಜನಾದ ಧೃತರಾಷ್ಟ್ರನು, **ಸಹಸೈವ** = ಆ ಕೂಡಲೇ **ಭೂಮೌ** = ಭೂಮಿಯಲ್ಲಿ (ಮೂರ್ಛಿತನಾಗಿ) **ಪಪಾತ** = ಬಿದ್ದನು. **ಆಶುಂ** = ಆ ಕೂಡಲೇ **ಸಂಜ್ಞಾಂ** = ಸಂಜ್ಞೆಯನ್ನು **ಅವಾಪ್ಯ** = ಹೊಂದಿ, **ಜೀವಾಮಿ ಚೇತ್** = ನಾನು ಜೀವಿಸಬೇಕಾದರೆ **ಆಶುಃ** = ಈ ಕೂಡಲೇ **ಮಮ** = ನನ್ನ **ಅನುಜಂ** = ತಮ್ಮನಾದ ವಿದುರನನ್ನು **ಆನಯ** = ಕರೆದು ತನ್ನಿ, **ಇತಿ** = ಎಂದು, **ಸಂಜಯಂ** = ಸಂಜಯನನ್ನು **ಆದಿಶತ್** = ಆಜ್ಞಾಪಿಸಿದನು.

**ತಾತ್ಪರ್ಯ** :- ವಿದುರನು ಹೋದಕೂಡಲೇ ವಿದುರನ ವಿರಹದಿಂದ ಧೃತರಾಷ್ಟ್ರನು ಭೂಮಿಯಲ್ಲಿ ಮೂರ್ಛಿತನಾಗಿ ಕೆಳಗೆ ಬಿದ್ದ. ಆ ಕ್ಷಣದಲ್ಲಿಯೇ ಪುನಃ ಪ್ರಜ್ಞೆಯನ್ನು ಮರಳಿ ಪಡೆದವನಾಗಿ ಹತ್ತಿರದಲ್ಲಿದ್ದ ಸಂಜಯನನ್ನು ಆಜ್ಞಾಪಿಸಿದನು. ಹೇ ಸಂಜಯ ನಾನು ಜೀವಂತವಿರುವ ಆಸೆ ನಿಮಗಿದ್ದಲ್ಲಿ ಈ ಕೂಡಲೇ ವಿದುರನನ್ನು ಕರೆದುತನ್ನಿ ಎಂದು.

**ಇತೀರಿತಃ ಸಂಜಯಃ ಪಾಂಡವೇಯಾನ್**
**ಪ್ರಾಪ್ಯಾಽನಯದ್ ವಿದುರಂ ಶೀಘ್ರಮೇವ ।**
**ಸೋಽಪ್ಯಾಗತಃ ಕ್ಷಿಪ್ರಮಪಾಸ್ತದೋಷೋ**
**ಜ್ಯೇಷ್ಠಂ ವವಂದೇಽಥ ಸ ಚೈನಮಾಶ್ಲಿಷತ್ ॥ ೧೩ ॥**

ಪದಚ್ಛೇದ :– ಇತಿ, ಈರಿತಃ ಸಂಜಯ, ಪಾಂಡವೇಯಾನ್, ಪ್ರಾಪ್ಯ, ಆನಯತ್, ವಿದುರಂ, ಶೀಘ್ರಂ, ಏವ, ಸಃ, ಅಪಿ, ಆಗತಃ, ಕ್ಷಿಪ್ರಂ, ಅಪಾಸ್ತದೋಷಃ, ಜ್ಯೇಷ್ಠಂ, ವವಂದೇ, ಅಥ, ಸಃ, ಚ, ಏನಂ, ಆಶ್ಲಿಷತ್ ।

**ಅರ್ಥ** :- **ಅಥ** = ಅನಂತರ, **ಇತಿ** = ಹೀಗೆಂದು, **ಈರಿತಃ** = ಹೇಳಲ್ಪಟ್ಟ, **ಸಂಜಯಃ** = ಸಂಜಯನು, **ಪಾಂಡವೇಯಾನ್** = ಪಾಂಡವರನ್ನು, **ಪ್ರಾಪ್ಯ** = ಹೊಂದಿ **ಶೀಘ್ರಮೇವ** = ಕೂಡಲೇ **ವಿದುರಂ** =

ವಿದುರನನ್ನು **ಆನಯತ್** = ಕರೆತಂದನು. **ಸೋऽಪಿ** = ಆ ವಿದುರನಾದರೂ **ಅಪಾಸ್ತದೋಷಃ** = ಶುದ್ಧ ಮನಸ್ಸುಳ್ಳವನಾಗಿ, **ಕ್ಷಿಪ್ರಂ** = ತಕ್ಷಣವೇ **ಆಗತಃ** = ಬಂದವನಾಗಿ **ಜ್ಯೇಷ್ಠಂ** = ಹಿರಿಯನಾದ ಧೃತರಾಷ್ಟ್ರನನ್ನು, **ವವಂದೇ** = ನಮಸ್ಕರಿಸಿದನು, **ಸಚ** = ಅವನಾದರೂ, **ಏನಂ** = ಈ ವಿದುರನನ್ನು, **ಆಶ್ಲಿಷತ್** = ಆಲಿಂಗಿಸಿದನು.

**ತಾತ್ಪರ್ಯ** :- ರಾಜನ ಆಜ್ಞೆಯನ್ನು ಹೊತ್ತ ಆ ಸಂಜಯನು ಕೂಡಲೇ ಪಾಂಡವರ ಸಮೀಪ ಹೋಗಿ ವಿದುರನನ್ನು ಭೇಟಿ ಮಾಡಿ ರಾಜನ ಬಯಕೆಯನ್ನು ತಿಳಿಸಿದ. ಶುದ್ಧ ಮನಸ್ಕನಾದ ಆ ವಿದುರನು ತಡಮಾಡದೇ ನಾಡಿಗೆ ಹೊರಟು ಬಂದು ತನ್ನ ಹಿರಿಯಣ್ಣನನ್ನು ನಮಸ್ಕರಿಸಿದ. ರಾಜನೂ ಕೂಡ ಅವನನ್ನು ಆಲಂಗಿಸಿ ಸಂತೋಷವನ್ನು ವ್ಯಕ್ತಪಡಿಸಿದ.

**ಅಂಕಂ ಸಮಾರೋಪ್ಯ ಸ ಮೂರ್ಧ್ನಿ ಚೈನ-**
**ಮಾಘ್ರಾಯ ಲೇಭೇ ಪರಮಾಂ ಮುದಂ ತದಾ ।**
**ಕ್ಷತ್ತಾರಮಾಯಾಂತಮುದೀಕ್ಷ್ಯ ಸರ್ವೇ**
**ಸಸೌಬಲಾ ಧಾರ್ತರಾಷ್ಟ್ರಾ ಅಮರ್ಷಾತ್ ।**
**ಸಮ್ಮಂತ್ರ್ಯ ಹಂತುಂ ಪಾಂಡವಾನಾಮುತೈಕಂ**
**ಛನ್ನೋಪಧೇನೈವ ಸಸೂತಜಾ ಯಯುಃ ॥ ೧೪ ॥**

**ಪದಚ್ಛೇದ** :- **ಅಂಕಂ, ಸಮಾರೋಪ್ಯ, ಸಃ, ಮೂರ್ಧ್ನಿ, ಚ, ಏನಂ, ಆಘ್ರಾಯ, ಲೇಭೇ, ಪರಮಾಂ, ಮುದಂ, ತದಾ, ಕ್ಷತ್ತಾರಂ, ಆಯಾಂತಂ, ಉದೀಕ್ಷ್ಯ, ಸರ್ವೇ, ಸಸೌಬಲಾ, ಧಾರ್ತರಾಷ್ಟ್ರಾಃ, ಅಮರ್ಷಾತ್, ಸಂಮತ್ರ್ಯ, ಹಂತುಂ, ಪಾಂಡವಾನಾಂ, ಉತ, ಏಕಂ, ಛನ್ನೋಪಧೇನ, ಏವ, ಸಸೂತಜಾಃ, ಯಯುಃ ।**

**ಅರ್ಥ** :- **ಸಃ** = ಆ ಧೃತರಾಷ್ಟ್ರನು, **ತದಾ** = ಆ ಸಂದರ್ಭದಲ್ಲಿ, **ಏನಂ** = ಈ ವಿದುರನನ್ನು, **ಅಂಕಂ** = ತೊಡೆಯನ್ನು, **ಆರೋಪ್ಯ** = ಏರಿಸಿ, **ಮೂರ್ಧ್ನಿ** = ತಲೆಯನ್ನು, **ಆಘ್ರಾಯ** = ಆಘ್ರಾಣಿಸಿ, **ಪರಮಾಂ** = ಬಹಳವಾದ, **ಮುದಂ** = ಸಂತೋಷವನ್ನು, **ಲೇಭೇ** = ಹೊಂದಿದನು, **ಸಸೌಬಲಾಃ** = ಶಕುನಿಯಿಂದ ಒಡಗೂಡಿದ, **ಸರ್ವೇ** = ಎಲ್ಲಾ **ಧಾರ್ತರಾಷ್ಟ್ರಾಃ** = ದುರ್ಯೋದನಾದಿಗಳು, **ಆಯಾಂತಂ** = ಬರುತ್ತಿರುವ, **ಕ್ಷತ್ತಾರಂ** =

ಪಾಂಡವರ ಪಕ್ಷಪಾತಿಯನ್ನು **ಅಮರ್ಷಾತ್** = ಅಸಹನೆಯಿಂದ **ಉದೀಕ್ಷ್ಯ** = **ನೋಡಿ ಪಾಂಡವಾನಾಂ** = ಪಾಂಡವರಲ್ಲಿ, **ಏಕಂ** = ಒಬ್ಬನನ್ನಾದರೂ **ಹಂತುಂ** = ಕೊಲ್ಲಲು **ಸಂಮಂತ್ರ್ಯ** = ಮಂತ್ರಾಲೋಚನೆ ಮಾಡಿ **ಛನ್ನೋಪಧೇನ** = ಗೂಢವಾದ ಉಪಾಯದೊಂದಿಗೆ, **ಸಸೂತಜಾಃ** = ಕರ್ಣನೊಂದಿಗೆ ಒಡಗೂಡಿ, **ಯಯುಃ** = (ಅರಣ್ಯದರ್ಶನದ ನೆಪದಿಂದ) ಕಾಡಿಗೆ ಹೋದರು.

ತಾತ್ಪರ್ಯ :- ವಿದುರನನ್ನು ಕಂಡ ಧೃತರಾಷ್ಟ್ರನು ವಿದುರನನ್ನು ಬಹುವಾದ ಪ್ರೀತಿಯಿಂದ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಅವನ ತಲೆಯನ್ನು ಆಘ್ರಾಣಿಸಿ ಬಹಳವಾದ ಸಂತೋಷವನ್ನು ಹೊಂದಿದನು. ಇತ್ತ ಶಕುನಿಯಿಂದ ಒಡಗೂಡಿದ ದುರ್ಯೋಧನಾದಿಗಳು ವಿದುರನನ್ನು ಕಂಡು ಅಸೂಯೆಪಡುತ್ತಾ ಅರಣ್ಯದಲ್ಲಿರುವ ಪಾಂಡವರಲ್ಲಿ ಒಬ್ಬನನ್ನಾದರೂ ಕೊಲ್ಲುವ ಬಯಕೆಯಿಂದ ಗೂಢವಾದ ಉಪಾಯವೊಂದನ್ನು ಆಲೋಚಿಸಿ ಕರ್ಣನ ಸಹಿತರಾಗಿ ಅರಣ್ಯದರ್ಶನದ ನೆಪದಿಂದ ಕಾಡಿಗೆ ಹೊರಟರು.

**ವಿಜ್ಞಾಯ ತೇಷಾಂ ಗಮನಂ ಸಮಸ್ತ-**
**ಲೋಕಾಂತರಾತ್ಮಾ ಪರಮೇಶ್ವರೇಶ್ವರಃ ।**
**ವ್ಯಾಸೋಽಭಿಗಮ್ಯಾವದದಾಂಬಿಕೇಯಂ**
**ನಿವಾರಯಾಽಶ್ವೇವ ಸುತಂ ತವೇತಿ ॥ ೧೫ ॥**

ಪದಚ್ಛೇದ :- **ವಿಜ್ಞಾಯ, ತೇಷಾಂ,** ಗಮನಂ, **ಸಮಸ್ತಲೋಕಾಂತರಾತ್ಮಾ, ಪರಮೇಶ್ವರೇಶ್ವರಃ, ವ್ಯಾಸಃ, ಅಭಿಗಮ್ಯ, ಅವದತ್, ಅಂಬಿಕೇಯಂ, ನಿವಾರಯ, ಆಶು, ಏವ, ಸುತಂ, ತವ, ಇತಿ ।**

ಅರ್ಥ :- **ಸಮಸ್ತಲೋಕಾಂತರಾತ್ಮಾ** = ಎಲ್ಲರ ಅಂತರ್ಯಾಮಿಯಾದ, **ಪರಮೇಶ್ವರೇಶ್ವರಃ** = ಬ್ರಹ್ಮರುದ್ರಾದಿ ದೇವತೆಗಳಿಗೂ ಒಡೆಯನಾದ, **ವ್ಯಾಸಃ** = ವ್ಯಾಸರು **ತೇಷಾಂ** = ಆ ದುರ್ಯೋಧನಾದಿಗಳ, **ಗಮನಂ** = ದುರುದ್ದೇಶದಿಂದ ಕಾಡಿಗೆ ಹೋಗುವುದನ್ನು **ವಿಜ್ಞಾಯ** = ತಿಳಿದು **ಆಂಬಿಕೇಯಂ** = ಅಂಬಿಕೆಯ ಮಗನಾದ ಧೃತರಾಷ್ಟ್ರನನ್ನು **ಅಭಿಗಮ್ಯ** = ಸಮೀಪಿಸಿ, **ತವ** = ನಿನ್ನ, **ಸುತಂ** = ಮಗನನ್ನು, **ಆಶು ಏವ** = ಈ ಕೂಡಲೇ **ನಿವಾರಯ** = ನಿವಾರಿಸು, **ಇತಿ** = ಎಂದು **ಅವದತ್** = ಹೇಳಿದರು.

ತಾತ್ಪರ್ಯ :- ಸಮಸ್ತ ಲೋಕದ ಅಂತರ್ಯಾಮಿಯಾಗಿರುವ ಬ್ರಹ್ಮರುದ್ರಾದಿದೇವತೆಗಳ ಒಡೆಯರಾದ ವೇದವ್ಯಾಸರು ಆ ದುರ್ಯೋಧನಾದಿಗಳ ಮನಸ್ಸಿನ ಅಭಿಪ್ರಾಯವನ್ನು ತಿಳಿದವರಾಗಿ ರಾಜನಾದ ಧೃತರಾಷ್ಟ್ರನ ಸಮೀಪ ಬಂದು ಅವನಿಗೆ ಬುದ್ಧಿ ಹೇಳಿದರು. ಧೃತರಾಷ್ಟ್ರ ನೀನು ಈ ಕೂಡಲೇ ನಿನ್ನ ಮಗನನ್ನು ತಡೆದು ನಿಲ್ಲಿಸು. ಅವನ ದುರುದ್ದೇಶವನ್ನು ಕೈ ಬಿಡುವ ಬುದ್ಧಿ ಮಾತು ಹೇಳು ಎಂದು.

**ಅವಾಪ್ಯ ಪಾರ್ಥಾನಯಮದ್ಯ ಮೃತ್ಯುಂ**
**ಸಹಾನುಬಂಧೋ ಗಮಿತಾ ಹ್ಯಸಂಶಯಮ್ ।**
**ಇತೀರಿತೇ ತೇನ ನಿವಾರಯೇತಿ**
**ಪ್ರೋಕ್ತೋ ಹರಿಃ ಪ್ರಾಹ ನ ಸಂವದೇ ತೈಃ ॥ ೧೬ ॥**

**ಪದಚ್ಛೇದ :- ಅವಾಪ್ಯ, ಪಾರ್ಥಾನ್, ಅಯಂ, ಅದ್ಯ, ಮೃತ್ಯುಂ, ಸಹಾನುಬಂಧಃ, ಗಮಿತಾ, ಹಿ, ಅಸಂಶಯಂ, ಇತಿ, ಈರಿತೇ, ತೇನ, ನಿವಾರಯ, ಇತಿ, ಪ್ರೋಕ್ತಃ, ಹರಿಃ, ಪ್ರಾಹ, ಸಃ, ಸಂವದೇ, ತೈಃ ॥**

**ಅರ್ಥ** :- **ಅಯಂ** = ಈ ದುರ್ಯೋಧನನು, **ಅದ್ಯ** = ಇಂದು, **ಪಾರ್ಥಾನ್** = ಪಾಂಡವರನ್ನು, **ಅವಾಪ್ಯ** = (ಕೊಲ್ಲಲು ಹೋಗಿ) ಹೊಂದಿ, **ಅಸಂಶಯಂ** = ನಿಸ್ಸಂಶಯವಾಗಿ **ಸಹಾನುಬಂಧಃ** = ಬಂಧು-ಬಾಂಧವರ ಸಹಿತನಾಗಿ **ಮೃತ್ಯುಂ** = ಮರಣವನ್ನು **ಗಮಿತಾ** = ಹೊಂದಿದವನಾಗುತ್ತಾನೆ. **ಇತಿ** = ಈ ರೀತಿಯಾಗಿ **ಈರಿತೇ** = ಹೇಳಲ್ಪಟ್ಟ, **ತೇನ** = ಆ ಧೃತರಾಷ್ಟ್ರನಿಂದ, **ನಿವಾರಯ** = ತಡೆದು ನಿಲ್ಲಿಸು, **ಇತಿ** = ಹೀಗೆಂದು, **ಪ್ರೋಕ್ತಃ** = ಹೇಳಲ್ಪಟ್ಟ **ಹರಿಃ** = ಶ್ರೀ ಹರಿಯು, **ತೈಃ** = ಅವರೊಂದಿಗೆ (ದುರ್ಯೋಧನಾದಿ ಗಳೊಂದಿಗೆ) **ನ ಸಂವದೇ** = ಮಾತನಾಡುವುದಿಲ್ಲ, **ಇತಿ** = ಎಂದು, **ಪ್ರಾಹ** = ಹೇಳಿದನು.

**ತಾತ್ಪರ್ಯ** :- ವ್ಯಾಸರು ಧೃತರಾಷ್ಟ್ರನಿಗೆ ಹೇಳಿದರು. ಹೇ ಧೃತರಾಷ್ಟ್ರ ಇಂದು ನಿನ್ನ ಮಕ್ಕಳು ಪಾಂಡವರನ್ನು ನಾಶ ಮಾಡಲು ಹೋಗಿ ಖಂಡಿತವಾಗಿಯೂ ನಾಶ ಹೊಂದುತ್ತಾರೆ ಎಂದು. ಆ ಮಾತನ್ನು ಕೇಳಿದ ಧೃತರಾಷ್ಟ್ರ ವ್ಯಾಸರಿಗೆ ನಿವೇದಿಸಿದ, ವ್ಯಾಸರೇ ನೀವೇ ನನ್ನ ಮಿದುಳನ್ನು ತಡೆದು

ನಿಲ್ಲಿಸಿ ಎಂದು. ಆದರೆ ವ್ಯಾಸರು ಹೇಳಿದರು ನಾನು ಯಾವ ಕಾರಣಕ್ಕೂ ಅವರೊಂದಿಗೆ ಮಾತನಾಡೆನು ಎಂದರು.

**ಮೈತ್ರೇಯ ಆಯಾಸ್ಯತಿ ಸೋಽಪಿ ವಾಚಂ**
**ಶಿಕ್ಷಾರ್ಥಮೇತೇಷ್ವಭಿಧಾಸ್ಯತೀಹ ।**
**ತಾಂ ಚೇದ್ ಕರೋತ್ಯೇಷ ಸುತಸ್ತವಾಸ್ಯ**
**ಭದ್ರಂ ತದಾ ಸ್ಯಾಚ್ಛಪ್ಸ್ಯತಿ ತ್ವನ್ಯಥಾ ಸಃ ॥ ೧೭ ॥**

**ಪದಚ್ಛೇದ :-** ಮೈತ್ರೇಯಃ, ಆಯಾಸ್ಯತಿ, ಸಃ, ಅಪಿ, ವಾಚಂ, ಶಿಕ್ಷಾರ್ಥಂ, ಏತೇಷು, ಅಭಿದಾಸ್ಯತಿ, ಇಹ, ತಾಂ, ಚೇತ್, ಕರೋತಿ, ಏಷಃ, ಸುತ, ತವ, ಅಸ್ಯ, ಭದ್ರಂ, ತದಾ, ಶಪ್ಸ್ಯತಿ, ತು, ಅನ್ಯಥಾ, ಸಃ ॥

**ಅರ್ಥ :-** **ಏತೇಷು** = ಇಷ್ಟರಲ್ಲಿಯೇ, **ಮೈತ್ರೇಯಃ** = ಮೈತ್ರೇಯ ಮಹರ್ಷಿಗಳು, **ಆಯಾಸ್ಯತಿ** = ಬರುತ್ತಾರೆ, **ಸೋಽಪಿ** = ಆ ಮೈತ್ರೇಯರಾದರೂ, **ಶಿಕ್ಷಾರ್ಥಂ** = ತಿಳುವಳಿಕೆಗಾಗಿ, **ವಾಚಂ** = ಬುದ್ಧಿ ಮಾತನ್ನು **ಅಭಿದಾಸ್ಯತಿ** = ಹೇಳುತ್ತಾರೆ, **ತದಾ** = ಆ ಸಂದರ್ಭದಲ್ಲಿ, **ಏಷಃ** = ಈ ಯಾವ, **ತವ** = ನಿನ್ನ, **ಸುತಃ** = ಮಗನಾದ ದುರ್ಯೋಧನನು, **ತಾಂ** = ಆ ಮಾತನ್ನು **ಕರೋತಿ** = ನಡೆಸುವವನಾದರೆ, **ತದಾ** = ಆಗ, **ಭದ್ರಂ** = ಮಂಗಳವನ್ನು (ಕಾಣುತ್ತಾನೆ), **ಅನ್ಯಥಾ** = ಹಾಗಲ್ಲವಾದರೇ, **ಸಃ** = ಆ ಮೈತ್ರೇಯರು, **ಶಪ್ಸ್ಯತಿ ತು** = ಶಪಿಸುವರಷ್ಟೇ.

**ತಾತ್ಪರ್ಯ :-** ಹೇ ಧೃತರಾಷ್ಟ್ರ ಇಷ್ಟರಲ್ಲಿಯೇ ಅರಮನೆಗೆ ಮೈತ್ರೇಯರು ಬರುವವರಿದ್ದಾರೆ. ಬಂದ ಅವರು ನಿನ್ನ ಮಗನಿಗೆ ಕೆಲವು ಬುದ್ಧಿಮಾತುಗಳನ್ನು ಹೇಳುವರು. ಆಗ ಆ ಮಾತುಗಳನ್ನು ನಿನ್ನ ಮಗ ಕೇಳಿದ ಎಂದರೆ ಅವನಿಗೆ ಶುಭವಾಗುವುದು. ಇಲ್ಲವಾದಲ್ಲಿ ಅವರು ಶಾಪಕೊಡುವುದು ಖಂಡಿತ.

**ಉಕ್ತ್ವೇತಿ ರಾಜಾನಮನಂತಶಕ್ತಿ-**
**ರ್ವ್ಯಾಸೋ ಯಯೌ ತತ್ರ ಗತೇಷು ತೇಷು ।**
**ಸುಯೋಧನಾದ್ಯೇಷು ಹತೇಷು ಪಾರ್ಥೈ-**
**ರ್ಭೂಭಾರಹಾನಿರ್ನ ಭವೇದಿತಿ ಪ್ರಭುಃ ॥ ೧೮ ॥**

ಪದಚ್ಛೇದ :- ಉಕ್ತ್ವಾ, ಇತಿ, ರಾಜಾನಂ, ಅನಂತಶಕ್ತಿಂ, ವ್ಯಾಸೋ, ಯಯೌ, ತತ್ರ, ಗತೇಷು, ತೇಷು, ಸುಯೋಧನಾದ್ಯೇಷು, ಹತೇಷು, ಪಾರ್ಥೈಃ, ಭೂಭಾರಹಾನಿ, ನ, ಭವೇತ್, ಇತಿ, ಪ್ರಭುಃ।

**ಅರ್ಥ** :- **ಅನಂತಶಕ್ತಿಃ** = ಅಗಾಧ ಸಾಮರ್ಥ್ಯವುಳ್ಳ, **ಪ್ರಭುಃ** = ಸರ್ವ ಸಮರ್ಥರನಾದ, **ವ್ಯಾಸಃ** = ವೇದವ್ಯಾಸರು, **ತತ್ರ** = ಆ ಯಾವ ಕಾಡಿಗೆ, **ಗತೇಷು** = ಹೋದವರಾದ, **ತೇಷು** = ಆ ಯಾವ **ಸುಯೋಧನಾದ್ಯೇಷು** = ದುರ್ಯೋದನಾದಿಗಳಲ್ಲಿ (ಎಲ್ಲರೂ) **ಪಾರ್ಥೈಃ** = ಪಾಂಡವರಿಂದ, **ಹತೇಷು** = ಹತರಾಗುತ್ತಿರಲು **ಭೂಭಾರಹಾನಿಃ** = ಭೂ ಭಾರ ಹರಣವು, **ನ ಭವೇತ್** = ಸಾಧ್ಯವಾಗದು, **ಇತಿ** = ಹೀಗೆಂದು (ವಿಚಾರ ಮಾಡಿ) **ರಾಜಾನಂ** = ರಾಜನಾದ ಧೃತರಾಷ್ಟನನ್ನು, **ಇತಿ ಉಕ್ತ್ವಾ** = ಈ ರೀತಿಯಾಗಿ ಹೇಳಿ.

**ತಾತ್ಪರ್ಯ** :- ಅಸಾಧಾರಣವಾದ ಸಾಮರ್ಥ್ಯವುಳ್ಳ ವೇದವ್ಯಾಸರು ಹೀಗೆಂದು ಚಿಂತಿಸಿದರು. ಕಾಡಿಗೆ ಹೋದ ದುರ್ಯೋದನಾದಿಗಳು ಎಲ್ಲಿಯಾದರೂ ಪಾಂಡವರಿಂದ ಹತರಾದರೇ ಮುಂದಾಗಬೇಕಾದ ಭೂಭಾರಹರಣವು ಹೇಗೆ ತಾನೆ ಸಾಧ್ಯವಾದೀತು ಎಂದು ಚಿಂತಿಸಿ ಅವರು ಧೃತರಾಷ್ಟನಿಗೆ ಹೇಳಿದರು. ಹೇ ರಾಜ ನೀನು ಈ ಕ್ಷಣವೇ ಕಾಡಿಗೆ ಹೊರಟ ಅವರನ್ನು ತಡೆದು ನಿಲ್ಲಿಸು ಎಂದ.

**ಸರ್ವಾಶ್ಚ ಚೇಷ್ಟಾ ಭಗವನ್ನಿಯುಕ್ತಾಃ**
**ಸದಾ ಸಮಸ್ತಸ್ಯ ಚಿತೋಽಚಿತಶ್ಚ ।**
**ತಥಾಽಪಿ ವಿಷ್ಣುರ್ವಿನಿವಾರಯೇತ್ ಕ್ವಚಿದ್**
**ವಾಚಾ ವಿಧತ್ತೇ ಚ ಜನಾನ್ ವಿಡಂಬಯನ್ ॥ ೧೯ ॥**

ಪದಚ್ಛೇದ :- ಸರ್ವಾ, ಚ, ಚೇಷ್ಟಾ, ಭಗವನ್ನಿಯುಕ್ತಾಃ, ಸದಾ, ಸಮಸ್ತಸ್ಯ, ಚಿತಃ, ಅಚಿತಃಶ್ಚ, ಚ, ತಥಾ, ಅಪಿ, ವಿಷ್ಣುಃ, ವಿನಿವಾರಯೇತ್, ಕ್ವಚಿತ್, ವಾಚಾ, ವಿಧತ್ತೇ, ಚ, ಜನಾನ್, ವಿಡಂಬಯನ್।

**ಅರ್ಥ** :- **ಸಮಸ್ತಸ್ಯ** = ಎಲ್ಲಾ, **ಚಿತಃ** = ಚಿತ್ ಪದಾರ್ಥಗಳ, **ಅಚಿತಃ** = ಅಚಿತ್ (ಜಡ) ಪದಾರ್ಥಗಳ, **ಸರ್ವಾಶ್ಚ** = ಎಲ್ಲಾ, **ಚೇಷ್ಟಾಃ** = ವ್ಯಾಪಾರಗಳು, **ಸದಾ** = ಯಾವಾಗಲೂ **ಭಗವನ್ನಿಯುಕ್ತಾಃ** =

ಭಗವಂತನಿಂದಲೇ ಪ್ರೇರಿತವಾಗಿದೆ, ತಥಾಪಿ = ಹಾಗಿದ್ದರೂ, ವಿಷ್ಣುಃ = ನಾರಾಯಣನು ನಿವಾರಯೇತ್ = ಮಾತಿನಿಂದಲೇ ಅಕಾರ್ಯವನ್ನು ತಡೆಯುತ್ತಾನೆ, ಕ್ವಚಿತ್ = ಕೆಲವೊಮ್ಮೆ, ಜನಾನ್ = ಜನರನ್ನು ವಿಡಂಬಯನ್ = ಅನುಕರಿಸುವವನಾಗಿ ವಾಚಾ = ಮಾತಿನಿಂದಲೇ ವಿಧತ್ತೇ = ಸತ್ಕಾರ್ಯವನ್ನು ವಿಧಸುತ್ತಾನೆ.

**ತಾತ್ಪರ್ಯ** :- ಸಮಸ್ತ ಪ್ರಪಂಚದ ಚಿದಚಿತ್ ಪದಾರ್ಥಗಳ ಎಲ್ಲಾ ವ್ಯಾಪಾರಗಳೂ ಭಗವಂತನಿಂದ ಪ್ರೇರಿತನಾಗಿ ನಡೆಯುತ್ತವೆಯಾದರೂ ಕೆಲವೊಮ್ಮೆ ನಾರಾಯಣನು ಒಳಗಡೆಯಿಂದ ಬೇರೆ ರೀತಿಯ ಪ್ರೇರಣೆ ಮಾಡಿ ಹೊರಗಡೆ ಕೆಲವೊಂದು ಅಕಾರ್ಯಗಳನ್ನು ಮಾತಿನ ಮೂಲಕ ತಡೆಯುತ್ತಾನೆ. ಕೆಲವು ಸತ್ಕಾರ್ಯಗಳನ್ನು ಒಳಗಡೆ ಪ್ರೇರಣೆ ಮಾಡದೇ ಕೇವಲ ಜನರ ರೀತಿಯನ್ನು ಅನುಸರಿಸುತ್ತಾ ಸತ್ಕಾರ್ಯಗಳನ್ನು ಮಾತಿನ ಮೂಲಕ ವಿಧಿಸುತ್ತಾನಷ್ಟೇ.

**ಮೈತ್ರೇಯ ಆಗಾದಥ ಭೂಪತಿಶ್ಚ**
**ಪುತ್ರಾನ್ ಸಮಾಹೂಯ ಸಕರ್ಣಸೌಬಲಾನ್ ।**
**ಸಂಪೂಜಯಾಮಾಸ ಮುನಿಂ ಸ ಚಾಽಹ**
**ದಾತುಂ ರಾಜ್ಯಂ ಪಾಂಡವಾನ್ ಸಂಪ್ರಶಂಸನ್ ॥ ೨೦ ॥**

**ಪದಚ್ಛೇದ** :- **ಮೈತ್ರೇಯಃ, ಆಗಾತ್, ಅಥ, ಭೂಪತಿಃ, ಚ, ಪುತ್ರಾನ್, ಸಮೂಹೂಯ, ಸಕರ್ಣಸೌಬಲಾನ್, ಸಂಪೂಜಯಾಮಾಸ, ಮುನಿಂ, ಸಃ, ಚ, ಆಹ, ದಾತುಂ, ರಾಜ್ಯಂ, ಪಾಂಡವಾನ್, ಸಂಪ್ರಶಂಸನ್ ॥**

**ಅರ್ಥ** :- **ಅಥ** = ಅನಂತರ, **ಮೈತ್ರೇಯಃ** = ಮೈತ್ರೇಯ ಋಷಿಗಳು **ಆಗಾತ್** = ಬಂದರು, **ಭೂಪತಿಃ** = ರಾಜನಾದ ಧೃತರಾಷ್ಟ್ರನು, **ಸ ಕರ್ಣ ಸೌಬಲಾನ್** = ಕರ್ಣ ಶಕುನಿ ಮೊದಲಾದವರನ್ನು, **ಪುತ್ರಾನ್** = ಮಕ್ಕಳನ್ನೂ, **ಸಮಹೂಯ** = ಕರೆಸಿ, **ಮುನಿಂ** = ಮೈತ್ರೇಯರನ್ನು, **ಪೂಜಯಾಮಾಸ** = ಆರಾಧಿಸಿದರು. **ಸ ಚ** = ಆ ಮೈತ್ರೇಯರಾದರೂ, **ಪಾಂಡವಾನ್** = ಪಾಂಡವರನ್ನು, **ಸಂಪ್ರಶಂಸನ್** = ಹೊಗಳುವವರಾಗಿ, **ರಾಜ್ಯಂ** = ರಾಜ್ಯವನ್ನು, **ದಾತುಂ** = ನೀಡಲು, **ಆಹ** = ಹೇಳಿದರು.

ತಾತ್ಪರ್ಯ :- ವ್ಯಾಸರ ಮಾತಿಗೆ ಅನುಗುಣವಾಗಿ ಧೃತರಾಷ್ಟ್ರನ ಅರಮನೆಗೆ ಮೈತ್ರೇಯರು ಬಂದರು. ಅಷ್ಟರಲ್ಲಾಗಲೇ ಧೃತರಾಷ್ಟ್ರನು ಕರ್ಣಶಕುನಿ ಮೊದಲಾದವರಿಂದ ಸಹಿತರಾದ ತಮ್ಮ ಮಕ್ಕಳುಗಳನ್ನು ವಾಪಸ್ಸು ಕರೆಯಿಸಿದ. ಮೈತ್ರೇಯರು ಬಂದೊಡನೆ ತನ್ನ ಮಕ್ಕಳ ಒಡಗೂಡಿ ಮುನಿಗಳನ್ನು ಸತ್ಕರಿಸಿದ. ಆ ಮೈತ್ರೇಯರಾದರೂ ನಡೆದ ಪ್ರಸಂಗವನ್ನು ಪಾಂಡವರಿಂದ ಕೇಳಿ ತಿಳಿದು ಬಲ್ಲವರಾದ್ದರಿಂದ ಧೃತರಾಷ್ಟ್ರನಿಗೆ ಪಾಂಡವರಿಗೆ ಅರ್ಧ ರಾಜ್ಯವನ್ನು ಕೊಡಲು ಹೇಳಿದರು.

**ವಿಶೇಷತೋ ಭೀಮಬಲಂ ಶಶಂಸ**
**ಕಿರ್ಮೀರನಾಶಾದಿ ವದನ್ ಮುನೀಂದ್ರಃ ।**
**ಶ್ರುತ್ವಾऽಸಹಂಸ್ತದ್ ಧೃತರಾಷ್ಟ್ರಪುತ್ರ**
**ಆಸ್ಫಾಲಯಾಮಾಸ ನಿಜೋರುಮುಗ್ರಃ ॥ ೨೦ ॥**

ಪದಚ್ಛೇದ :– **ವಿಶೇಷತಃ, ಭೀಮಬಲಂ, ಶಶಂಸ, ಕಿರ್ಮೀರನಾಶಾದಿ, ವದನ್, ಮುನೀಂದ್ರ, ಶೃತ್ವಾ , ಅಸಹನ್, ತತ್, ಧೃತರಾಷ್ಟ್ರಪುತ್ರಃ, ಆಸ್ಫಾಲಯಾಮಾಸ, ನಿಜೋರುಂ, ಉಗ್ರಃ ॥**

**ಅರ್ಥ** :-**ಮುನೀಂದ್ರಃ** = ಮೈತ್ರೇಯರು, **ಕಿರ್ಮೀರನಾಶಾದಿ** = ಕಿರ್ಮೀರ ರಾಕ್ಷಸನ ಸಂಹಾರವೇ ಮೊದಲಾದ ಪಾಂಡವರ ಸಾಹಸಗಳನ್ನು, **ವದನ್** = ಹೇಳುವವರಾಗಿ **ವಿಶೇಷತಃ** = ಹೆಚ್ಚಾಗಿ, **ಭೀಮಬಲಂ** = ಭೀಮಸೇನನ ಪರಾಕ್ರಮವನ್ನು, **ಶಶಂಸ** = ಸ್ತೋತ್ರ ಮಾಡಿದರು. **ತದ್** = ಈ ಮಾತನ್ನು (ಈ ಸ್ತ್ರೋತ್ರವನ್ನು) **ಶೃತ್ವಾ** = ಕೇಳಿ, **ಉಗ್ರಃ** = ಕೆರಳಿದ, **ಧೃತರಾಷ್ಟ್ರಪುತ್ರಃ** = ಧೃತರಾಷ್ಟ್ರನ ಮಗನಾದ ದುರ್ಯೋಧನನು, **ಅಸಹನ್** = ಸಹಿಸಲಾರದವನಾಗಿ, **ನಿಜೋರುಂ** = ತನ್ನ ತೊಡೆಯನ್ನು **ಆಸ್ಫಾಲಯಾಮಾಸ** = ತಟ್ಟಿದನು.

**ತಾತ್ಪರ್ಯ** :- ಮೈತ್ರೇಯರು ಪಾಂಡವರಿಂದ ನಡೆದ ಸಂಗತಿಯನ್ನೆಲ್ಲಾ ತಿಳಿದವರಾದ್ದರಿಂದ ಇವರಿಗೆ ಬುದ್ಧಿ ಮಾತನ್ನು ಹೇಳುತ್ತಿದ್ದಾರೆ. ಹೇ ಧೃತರಾಷ್ಟ್ರ ಕಾಡಿನಲ್ಲಿ ಪಾಂಡವರು ಕಿರ್ಮಿರಾದಿ ರಾಕ್ಷಸರನ್ನು ಕೊಂದು ಅಲ್ಲಿಯೂ ಕ್ಷತ್ರಿಯರುಗಳ ಧರ್ಮಗಳನ್ನು ಪಾಲನೆ ಮಾಡುತ್ತಿದ್ದಾರೆ. ವಿಶೇಷವಾಗಿ

ಭೀಮನು ತನ್ನ ಅಮೋಘವಾದ ಪರಾಕ್ರಮದಿಂದ ಲೋಕಕ್ಕೆ ಕಂಟಕರೆಂದೆನಿಸಿದ ಹಲವು ರಾಕ್ಷಸರನ್ನು ಕೊಂದು ಧರ್ಮಕಾರ್ಯದ ಅಭಿವೃದ್ಧಿಯಲ್ಲಿ ಪಾಲ್ಗೊಳ್ಳುತ್ತಿದ್ದಾನೆ. ಎಂದು ಪಾಂಡವರನ್ನು ವಿಶೇಷವಾಗಿ ಭೀಮನನ್ನು ಮುನಿಗಳು ಹೊಗಳಿದರೆ, ಆ ಹೊಗಳಿಕೆಯನ್ನು ಸಹಿಸದ ಧುರ್ಯೋಧನನು ಸಿಟ್ಟಿನಿಂದ ಕೆರಳಿ ಗಹಗಹಿಸಿ ನಗುತ್ತಾ ಮುನಿಗಳನ್ನು ಕಂಡು ತೊಡೆಯನ್ನು ತಟ್ಟಿದ.

**ಶಶಾಪ ಚೈನಂ ಮುನಿರುಗ್ರತೇಜಾ-**
**ಸ್ತವೋರುಭೇದಾಯ ಭವೇತ್ ಸುಯುದ್ಧಮ್ ।**
**ಇತ್ಯೂಚಿವಾನ್ ಧೃತರಾಷ್ಟ್ರಾನತೋಽಪಿ**
**ಯಯೌ ನ ಚೇದ್ ರಾಜ್ಯದಸ್ತ್ವಂ ತಥೇತಿ ॥ ೨೨ ॥**

ಪದಚ್ಛೇದ :- ಶಶಾಪ ಚ ಏನಂ ಮುನಿಃ ಉಗ್ರತೇಜಾ ತವ ಊರುಭೇಧಾಯ ಭವೇತ್ ಸುಯುದ್ಧಮ್ ಇತಿ ಊಚವಾನ್ ಧೃತರಾಷ್ಟ್ರ ಆನತಃ ಅಪಿ ಯಯೌ ನ ಚೇತ್ ರಾಜ್ಯದ ತ್ವಂ ತಥಾ ಇತಿ.

ಅರ್ಥ :- ಉಗ್ರತೇಜಾ = ಉಗ್ರಪ್ರತಾಪಿಯಾದ, ಮುನಿಃ = ಮೈತ್ರೇಯರು (ದುರ್ಯೋಧನನ್ನು ಕುರಿತು) ತವ = ನಿನ್ನ ಊರುಭೇದಾಯ = ತೊಡೆ ಮುರಿಯುವ ಸಲುವಾಗೇ, ಸುಯುದ್ಧಂ = ಘೋರವಾದ ಯುದ್ಧವೊಂದು ಭವೇತ್ = ನಡೆದು ತೀರುವುದು, ಇತಿ = ಹೀಗೆಂದು, ಏನಂ = ಈ ದುರ್ಯೋಧನನ್ನು, ಶಶಾಪ = ಶಪಿಸಿದರು, ಧೃತರಾಷ್ಟ್ರ = ರಾಜನಾದ ಧೃತರಾಷ್ಟ್ರನು ಆನತ ಅಪಿ = ಸಾಷ್ಟಾಂಗ ಪ್ರಣಾಮ ಮಾಡಿದರೂ, ತ್ವಂ = ನೀನು, ರಾಜ್ಯದ = ಪಾಂಡವರಿಗೆ ರಾಜ್ಯವನ್ನು ಕೊಡತಕ್ಕವನು, ನ ಚೇತ್ = ಆಗುವುದಿಲ್ಲವಾದರೆ, ತಥಾ ಇತಿ = ಹೀಗೆ ಆಗುವುದೆಂದು ಊಚಿವಾನ್ = ಹೇಳಿದವನಾಗಿ ಯಯೌ = ಹೋದನು.

ತಾತ್ಪರ್ಯ :- ಶ್ರೇಷ್ಠ ತಪಸ್ವಿಗಳಾದ ಮೈತ್ರೇಯರು ಧುರ್ಯೋಧನನನ್ನು ತನ್ನ ತೊಡೆ ತಟ್ಟುವುದನ್ನು ಸಹಿಸದೆ ಮುಂದಾಗುವ ಯುದ್ಧದಲ್ಲಿ ನಿನ್ನ ತೊಡೆ ಮುರಿಯಲಿ ಎಂದು ಶಾಪವಿತ್ತರು. ಆ ಶಾಪವನ್ನು ಕೇಳಿ ಥರಥರ ನಡುಗಿದ ಧೃತರಾಷ್ಟ್ರನು ಮೈತ್ರೇಯರನ್ನು ಬಾರಿ ಬಾರಿ

ನಮಸ್ಕರಿಸಿದ ಸಮಾಧಾನ ತಾಳೆಂದು. ಅದರೆ ಅಷ್ಟಕ್ಕೆ ಸಮಾಧಾನವಾಗದ ಮೈತ್ರೇಯರು ಧೃತರಾಷ್ಟ್ರನಿಗೆ ಹೇಳಿದರು. ಹೇ ರಾಜ ನೀನು ಒಂದು ವೇಳೆ ಪಾಂಡವರಿಗೆ ರಾಜ್ಯವನ್ನು ಕೊಡಲಿಲ್ಲವಾದರೆ ಈ ನನ್ನ ಶಾಪದಂತೆ ನಡೆಯುವುದು ದಿಟವೇ ಆಗಿದೆ ಎಂದು ಹೇಳಿ ಅಲ್ಲಿಂದ ಹೊರಟು ಹೋದರು.

ಶ್ರುತ್ವಾ ತು ಕಿರ್ಮೀರವಧಂ ಸ್ವಪಿತ್ರಾ
ಪೃಷ್ಟಕ್ಷತ್ರೋಕ್ತಂ ಸೋಽತ್ರಸದ್ ಧಾರ್ತರಾಷ್ಟ್ರಃ ।
ವನೇ ವಸಂತೋಽಥ ಪೃಥಾಸುತಾಸ್ತೇ
ವಾತಾಂ ಸ್ವಕೀಯಾಂ ಪ್ರಾಪಯಾಮಾಸುರಾಶು ॥ ೨೩ ॥

ಪದಚ್ಛೇದ :- ಶ್ರುತ್ವಾ ತು ಕಿರ್ಮೀರವಧಂ ಸ್ವವಿತ್ರಾ ಪುಟ್ಟಂ ಕ್ಷತಾ ಉತ್ತಂ ಸಃ ಅತ್ರಸತ್ ಧಾತ್ರರಾಷ್ಟ್ರಃ ವನೇ ವಸಂತಃ ಅಥ ಪ್ರಥಾಸುತಾಃ ತೇ ವಾತಾರಂ ಸ್ವಕೀಯಾಂ ಪ್ರಾರ್ಪಯಾಮಾಸುಃ ಆಶು.

**ಅರ್ಥ** :- ಸಃ = ಆ ಯಾವ, ಧಾರ್ತರಾಷ್ಟ್ರಃ = ಧೃತರಾಷ್ಟ್ರನ ಮಗನಾದ ಧುರ್ಯೋದನನು, ಸ್ವಪಿತ್ರಾ = ತನ್ನ ತಂದೆಯಿಂದ ಪೃಷ್ಠೇನ = ಕೇಳಲ್ಪಟ್ಟ, ಕ್ಷತ್ರಾ = ತನ್ನ ಚಿಕ್ಕಪ್ಪನಾದ ವಿದುರನಿಂದ, ಉಕ್ತಂ = ಬಣ್ಣಿಸಲ್ಪಟ್ಟ ಕಿರ್ಮೀರವಧಂ = ಕಿರ್ಮೀರ ರಾಕ್ಷಸನ ಸಂಹಾರವನ್ನು, ಶೃತ್ವಾ = ಕೇಳಿ, ಸಃ = ಆ ಧುರ್ಯೋದನನು ಅತ್ರಸತ್ = ಹೆದರಿದನು, ಅಥ = (ಇದೇ ಸಂದರ್ಭದಲ್ಲಿ) ಅನಂತರ, ಪೃಥಾಸುತಾಃ = ಪಾಂಡವರು, ವನೇ = ಕಾಡಿನಲ್ಲಿ, ವಸಂತಃ = ವಾಸಮಾಡುವವರಾಗಿ, ಸ್ವಕೀಯಾಂ = ತಮಗೆ ಸಂಬಂಧಿತವಾದ ವನವಾಸವೇ ಮುಂತಾದ, ವಾರ್ತಾಂ = ವಾರ್ತೆಯನ್ನು, ಆಶು = ಕೂಡಲೇ ಪ್ರಾಪಯಾಮಾಸುಃ = ತಲುಪಿಸಿದರು.

**ತಾತ್ಪರ್ಯ** :- ಧೃತರಾಷ್ಟ್ರನು ವಿದುರನನ್ನು ಪಾಂಡವರ ಕುರಿತಾಗಿ ಕೇಳಲಾಗಿ ವಿದುರನು ಕಿರ್ಮೀರವಧೆಯನ್ನು ಬಣ್ಣಿಸಿದ್ದಾನೆ. ಆ ಬಣ್ಣನೆಯನ್ನು ಕೇಳಿದ ಧುರ್ಯೋದನನು ಬಹಳಷ್ಟು ಹೆದರಿದ. ಇದೇ ಸಂದರ್ಭದಲ್ಲಿ ಪಾಂಡವರು ಜೂಜಾಡಿದುದರ ಪರಿಣಾಮ ರೂಪವಾದ ವನವಾಸವೇ ಮುಂತಾದ ತಮಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಶ್ರೀಕೃಷ್ಣನೇ ಮುಂತಾದ ತಮ್ಮ ಸಂಬಂಧಿಗಳಿಗೆ ಹೇಳಿ ಕಳುಹಿಸಿದರು.

**ಕೃಷ್ಣೇ ಸೋಽಪಿ ದ್ರುತಮಾಯಾತ್ ಸಸತ್ಯಃ**
**ಸಂಬಂಧಿನೋ ಯೇ ಚ ಪಾಂಚಾಲಮುಖ್ಯಾಃ ।**
**ಕ್ರುದ್ಧಂ ಕೃಷ್ಣಂ ಧಾರ್ತರಾಷ್ಟ್ರಾಯ ಪಾರ್ಥಾಃ**
**ಕ್ಷಮಾಪಯಾಮಾಸುರುಚ್ಚೈರ್ಗೃಣಂತಃ ॥ ೨೪ ॥**

ಪದಚ್ಛೇದ :- ಕೃಷ್ಣೇ, ಸಃ, ಅಪಿ, ದ್ರುತಂ, ಆಯಾತ್, ಸಸತ್ಯಃ, ಸಂಬಂಧಿನಃ, ಯೇ, ಚ, ಪಾಂಚಾಲಮುಖ್ಯಾಃ, ಕ್ರುದ್ಧಂ, ಕೃಷ್ಣಂ, ಧಾರ್ತರಾಷ್ಟ್ರಾಯ, ಪಾರ್ಥಾಃ, ಕ್ಷಮಾಪಯಾಮಾಸುಃ, ಉಚ್ಚೈಃ, ಗೃಣಂತಃ ।

ಅರ್ಥ :- **ಕೃಷ್ಣೇ** = ಕೃಷ್ಣನಿಗೆ ತಿಳಿಯಲಾಗಿ **ಸೋಽಪಿ** = ಶ್ರೀಕೃಷ್ಣನಾದರೂ **ಸಸತ್ಯಃ** = ಸತ್ಯಭಾಮೆಯಿಂದ ಒಡಗೂಡಿದವನಾಗಿ, **ಯೇ ಚ** = ಇತರೆ ಸಂಬಂಧಿತರಾದ **ಪಾಂಚಾಲಮುಖ್ಯಾಃ** = ದ್ರುಪದರಾಜನೇ ಮೊದಲಾದ ಸಂಬಂಧಿಕರುಗಳು **ದ್ರುತಂ** = ಶೀಘ್ರವಾಗಿ, **ಆಯಾತ್** = ಬಂದರು. **ಧಾತ್ರರಾಷ್ಟ್ರಾಯ** = ಧೃತರಾಷ್ಟ್ರನ ಮಗನಾದ ಧುರ್ಯೋದನನ ಕುರಿತಾಗಿ **ಕೃದ್ಧಂ** = ಕೋಪಗೊಂಡ **ಕೃಷ್ಣಂ** = ಶ್ರೀಕೃಷ್ಣನನ್ನು, **ಉಚ್ಚೈಃ** = ಉತ್ಕೃಷ್ಟವಾದ ಸ್ತೋತ್ರಗಳಿಂದ **ಗೃಣಂತಃ** = ಸ್ತೋತ್ರ ಮಾಡುವವರಾಗಿ **ಕ್ಷಮಾಪಯಾಮಾಸುಃ** = ಶಾಂತನನ್ನಾಗಿಸಿದರು.

ತಾತ್ಪರ್ಯ :- ಪಾಂಡವರ ವನವಾಸವನ್ನು ತಿಳಿದ ಶ್ರೀಕೃಷ್ಣನು ಈ ಕೂಡಲೇ ತನ್ನ ಮಡದಿಯಾದ ಸತ್ಯಭಾಮೆಯ ಜೊತೆಗೂಡಿ ಪಾಂಡವರ ಸಮೀಪ ಬಂದನು. ಅಷ್ಟರಲ್ಲಿಯೇ ಇತರೆ ಸಂಬಂಧಿಕರಾದ ದ್ರುಪದಾದಿಗಳೂ ಕೂಡ ಪಾಂಡವರ ಸಮೀಪ ಬಂದವರಾದರು. ಅನಂತರ ಎಲ್ಲಾ ಸಂಗತಿಗಳನ್ನು ವಿಶದವಾಗಿ ಕೇಳಿದ ಕೃಷ್ಣನು ಕೌರವರ ಮೋಸದಾಟಕ್ಕೆ ಸಿಡಿದೆದ್ದನು. ಆಗ ಪಾಂಡವರು ಕೃಷ್ಣನನ್ನು ಉತ್ಕೃಷ್ಟವಾದ ಸ್ತೋತ್ರಗಳಿಂದ ಶಾಂತನಾಗೆಂದು ಸಮಾಧಾನ ಪಡಿಸಿದರು.

**ಗುಣಾಂಸ್ತದೀಯಾನಮಿತಾನ್ ಪ್ರಣಮ್ಯ**
**ತದಾ ರುದಂತೀ ದ್ರೌಪದೀ ಚಾಽಪ ಪಾದೌ ।**
**ಸಾ ಪಾದಯೋಃ ಪತಿತಾ ವಾಸುದೇವ-**
**ಮಸ್ತೌತ್ ಸಮಸ್ತಪ್ರಭುಮಾತ್ಮತಂತ್ರಮ್ ॥ ೨೫ ॥**

**ಪದಚ್ಛೇದ :- ಗುಣಾನ್, ತದೀಯಾನ್, ಅಮಿತಾನ್, ಪ್ರಣಮ್ಯ, ತದಾ, ರುದಂತೀ, ದ್ರೌಪದೀ, ಚ, ಆಪ, ಪಾದೌ, ಸಾ, ಪಾದಯೋಃ, ಪತಿತಾ, ವಾಸುದೇವಂ, ಅಸ್ತೌತ್, ಸಮಸ್ತಪ್ರಭುಂ, ಆತ್ಮತಂತ್ರಮ್ ॥**

**ಅರ್ಥ** :- **ತದಾ** = ಆ ಸಂದರ್ಭದಲ್ಲಿ, **ದ್ರೌಪದೀ** = ದ್ರೌಪದಿಯು, **ರುದಂತೀ** = ರೋಧಿಸುವಳಾಗಿ, **ತದೀಯಾನ್** = ಕೃಷ್ಣನದ್ದಾದ, **ಅಮಿತಾನ್** = ಅನಂತವಾದ, **ಗುಣಾನ್** = ಗುಣಗಳನ್ನು, **ಪ್ರಣಮ್ಯ** = ಸ್ತುತಿಸಿ, **ಪಾದೌ** = ಶ್ರೀಕೃಷ್ಣನ ಪಾದಕಮಲಗಳನ್ನು **ಆಪ** = ಶರಣಾದಳು, **ಪಾದಯೋ** = ಕೃಷ್ಣನ ಪಾದಕಮಲಗಳಲ್ಲಿ **ಪತಿತಾ** = ಶರಣಾದ, **ಸಾ** = ಆ ಯಾವ ದ್ರೌಪದಿಯು, **ಸಮಸ್ತ ಪ್ರಭುಂ** = ಬ್ರಹ್ಮಾಂಡಕ್ಕೆ ಒಡೆಯನಾದ, **ಆತ್ಮತಂತ್ರಂ** = ಸರ್ವತಂತ್ರಸ್ವತಂತ್ರನಾದ, **ವಾಸುದೇವಂ** = ಭಗವಂತನನ್ನು, **ಅಸ್ತೌತ್** = ಸ್ತೋತ್ರ ಮಾಡಿದಳು.

**ತಾತ್ಪರ್ಯ** :- ಪಾಂಡವರು ಕೃಷ್ಣನನ್ನು ಸ್ತೋತ್ರಮಾಡುವ ಸಂದರ್ಭದಲ್ಲಿಯೇ ದ್ರೌಪದೀ ದೇವಿಯು ರೋಧಿಸುವಳಾಗಿ ಭಗವಂತನ ಅನಂತ ಗುಣಗಳನ್ನು ನೆನಸಿಕೊಳ್ಳುವವಳಾಗಿ ಕೃಷ್ಣನ ಪಾದಗಳಿಗೆ ಶರಣಾಗಿ ಬ್ರಹ್ಮಾಂಡಕ್ಕೆ ಒಡೆಯನಾದ ಸರ್ವತಂತ್ರ ಸ್ವತಂತ್ರನಾದ ಆ ಭಗವಂತನನ್ನು ಬಹಳವಾಗಿ ಸ್ತೋತ್ರ ಮಾಡಿದಳು.

**ಅಚಿಂತ್ಯನಿತ್ಯಾವ್ಯಯಪೂರ್ಣಸದ್ಗುಣಾ-**
**ರ್ಣವೈಕದೇಹಾಖಿಲದೋಷದೂರ ।**
**ರಮಾಬ್ಜಜೇಶೇರಸುರೇಂದ್ರಪೂರ್ವ-**
**ವೃಂದಾರಕಾಣಾಂ ಸತತಾಭಿವಂದ್ಯ ॥ ೨೬ ॥**

**ಪದಚ್ಛೇದ** :- **ಅಚಿಂತ್ಯನಿತ್ಯಾವ್ಯಯಪೂರ್ಣಸದ್ಗುಣಾರ್ಣವಏಕದೇಹಅಖಿಲ ದೋಷದೂರ ರಮಾಬ್ಜಜೇಶೇರ ಸುರೇಂದ್ರಪೂರ್ವವೃಂದಾರಕಾಣಾಂ ಸತತಾಭಿವಂದ್ಯ.**

**ಅರ್ಥ** :- **ಹೇ ಅಚಿಂತ್ಯ** = ಅಚಿಂತ್ಯನಾದವನೆ, **ನಿತ್ಯ** = ನಿತ್ಯರೂಪನೇ (ನಾಶವಿಲ್ಲದಿರುವವನೇ) **ಅವ್ಯಯ** = ದೋಷವಿಲ್ಲದವನೇ (ನಿರ್ವಿಕಾರನೇ) **ಪೂರ್ಣ** = ದೇಶತ, **ಗುಣತಃ** = ಪೂರ್ಣನಾದವನೇ, **ಸದ್ಗುಣಾರ್ಣವ** =

ಸದ್ಗುಣಗಳ ಸಮುದ್ರನೇ, **ಏಕದೇಹ** = ಸ್ವಗತ ಭೇದರಹಿತನೇ (ಸ್ವರೂಪ ಭೂತವಾದ ದೇಹವುಳ್ಳವನೇ) **ಅಖಿಲದೋಷದೂರ** = ಸಮಸ್ತದೋಷ ಅಸಂಸ್ಪೃಷ್ಟನೇ, **ರಮಾಬಜ್ಜೇರೇಶಸುರೇಂದ್ರಪೂರ್ವವೃಂದಾರಕಾಣಾಂ** = **ರಮಾ** = ಲಕ್ಷ್ಮೀದೇವಿ **ಅಬ್ಜಜ** = ಬ್ರಹ್ಮದೇವರು, **ಈರ** = ವಾಯುದೇವರು, **ಈಶ** = ರುದ್ರದೇವರು **ಸುರೇಂದ್ರಪೂರ್ವ** = ಇಂದ್ರದೇವರೇ ಮೊದಲಾದ **ವೃಂದಾರಕಾಣಾಂ** = ದೇವತಾ ಸಮೂಹಕ್ಕೆ **ಸತತಾಭಿವಂದ್ಯ** = ಸದಾವಂದ್ಯನೇ.

**ತಾತ್ಪರ್ಯ** :- ಕೃಷ್ಣನ ಕಾಲಿಗೆ ಬಿದ್ದ ದ್ರೌಪದಿಯು ಭಗವಂತನನ್ನು ಸ್ತೋತ್ರ ಮಾಡುತ್ತಿದ್ದಾಳೆ. ಹೇ ಅಚಿಂತ್ಯರೂಪನೇ ನಿತ್ಯವಾದ ನಾಶವಿಲ್ಲದ ಪೂರ್ಣವಾದ ಸದ್ಗುಣಗಳ ಆಗರವೇ ದೇಹವಾಗಿ ಉಳ್ಳವನೇ ಸಮಸ್ತ ದೋಷ ದೂರನೇ, ಮಹಾಲಕ್ಷ್ಮೀ ಬ್ರಹ್ಮರುದ್ರ ವಾಯುದೇವರೇ ಮೊದಲಾದ ದೇವೇಂದ್ರಾದಿಗಳ ದೇವಗಣದಿಂದ ನಿತ್ಯ ವಂದ್ಯನಾದವನೇ. ಹೀಗೆ ಮುಂದೆ ಹೇಳುವ ರೀತಿಯಲ್ಲಿಯೂ ಶ್ರೀಕೃಷ್ಣನನ್ನು ಸ್ತೋತ್ರ ಮಾಡಿದಳು.

**ಸಮಸ್ತಚೇಷ್ಟಾಪ್ರದ ಸರ್ವಜೀವ-**
**ಪ್ರಭೋ ವಿಮುಕ್ತಾಶ್ರಯ ಸರ್ವಸಾರ ।**
**ಇತಿ ಬ್ರುವಂತೀ ಸಕಲಾನುಭೂತಂ**
**ಜಗಾದ ಸರ್ವೇಶಿತುರಚ್ಯುತಸ್ಯ ॥ ೨೭ ॥**

ಪದಚ್ಛೇದ :– **ಸಮಸ್ತಚೇಷ್ಟಾ ಪ್ರದ ಸರ್ವಜೀವ ಪ್ರಭೋ ವಿಮುಕ್ತಾಶ್ರಯ ಸರ್ವಸಾರ ಇತಿ ಬ್ರುವಂತೀ ಸಕಲಾನುಜಾತಂ ಜಗಾದ ಸರ್ವೇಶಿತುಃ ಅಚ್ಯುತಸ್ಯ.**

**ಅರ್ಥ** :- **ಸಮಸ್ತಚೇಷ್ಟಾಪ್ರದ** = ಸಮಸ್ತ ಜೀವರಾಶಿಗಳ ಚೈತನ್ಯರೂಪನೇ **ಸರ್ವಜೀವ ಪ್ರಭೋ** = ಎಲ್ಲಾ ಜೀವಜಾಲದ ಸ್ವಾಮಿಯೇ (ಸರ್ವ ಜೀವೇಶ್ವರ) **ವಿಮುಕ್ತಾಶ್ರಯ** = ಮುಕ್ತರಿಗೆ ಆಶ್ರಯನಾದವನೇ, **ಸರ್ವಸಾರ** = ಸರ್ವರ ಅಂತರ್ಯಾಮಿ ಸ್ವರೂಪನೇ **ಇತಿ** = ಹೀಗೆಂದು, **ಸರ್ವೇಶಿತುಃ** = ಸರ್ವಸಮರ್ಥನಾದ, **ಅಚ್ಯುತಸ್ಯ** = ಶ್ರೀ ಕೃಷ್ಣನ ಕಲ್ಯಾಣಗುಣಗಳನ್ನು **ಬ್ರುವಂತೀ** = ಸ್ತೋತ್ರ ಮಾಡುವವಳಾಗಿ **ಸಕಲಾನುಭೂತಂ** = ತಾನು ಅನುಭವಿಸಿದ ಎಲ್ಲಾ ದುಃಖವನ್ನು, **ಜಗಾದ** = ಹೇಳಿದಳು.

ತಾತ್ಪರ್ಯ :- ದ್ರೌಪದಿ ದೇವಿಯು ಭಗವಂತನನ್ನು ಸಮಸ್ತ ಜೀವ ಜಡಾತ್ಮಕ ಪ್ರಪಂಚದ ಚೈತನ್ಯರೂಪನೇ ಸಕಲ ಚರಾಚರ ಪ್ರಪಂಚದ ಸ್ವಾಮಿಯೇ ಮುಕ್ತಗಣಗಳಿಗೊಡೆಯನೇ ಸರ್ವರ ಅಂತರ್ಯಾಮಿಯೇ ಸರ್ವ ಸಮರ್ಥನೇ ಎಂಬಿವೇ ಮುಂತಾದ ಶ್ರೀಕೃಷ್ಣನ ಕಲ್ಯಾಣ ಗುಣಗಳನ್ನು ಸ್ತೋತ್ರ ಮಾಡುತ್ತಾ ಭಗವಂತನಲ್ಲಿ ತನ್ನ ಒಡಲಾಳದ ದುಃಖವನ್ನು ತೋಡಿಕೊಂಡಳು.

**ಯಸ್ಯಾಧಿಕಾನುಗ್ರಹಪಾತ್ರಭೂತಾ**
**ಸ್ವಯಂ ಹಿ ಶೇಷೇಶವಿಪಾದಿಕೇಭ್ಯಃ ।**
**ಶ್ರುತ್ವಾ ಸಮಸ್ತಂ ಭಗವಾನ್ ಪ್ರತಿಜ್ಞಾಂ**
**ಚಕಾರ ತೇಷಾಮಖಿಲಾಶ್ಚ ಯೋಷಾಃ ॥ ೨೮ ॥**

ಪದಚ್ಛೇದ :- **ಯಸ್ಯಾಃ, ಅಧಿಕಾನುಗ್ರಹಪಾತ್ರಭೂತಾ, ಸ್ವಯಂ, ಹಿ, ಶೇಷೇಶವಿಪಾದಿಕೇಭ್ಯಃ. ಶೃತ್ವಾ , ಸಮಸ್ತಂ, ಭಗವಾನ್, ಪ್ರತಿಜ್ಞಾಂ, ಚಕಾರ, ತೇಷಾಂ, ಅಖಿಲಾಃ, ಚ, ಯೋಷಾಃ ॥**

**ಅರ್ಥ :- ಶೇಷೇಶವಿಪಾದಿಕೇಭ್ಯಃ** = ಶೇಷ ದೇವರು ರುದ್ರದೇವರು ಗರುಡ ದೇವರು ಇವರುಗಳಿಗಿಂತ **ಅಧಿಕ** = ಅಧಿಕವಾದ **ಅನುಗ್ರಹ** = ಅನುಗ್ರಹಕ್ಕೆ **ಪಾತ್ರಭೂತಾ** = ಪಾತ್ರಳಾದ **ಯಸ್ಯಾಃ** = ಯಾವ ದ್ರೌಪದಿಯ (ಭಾರತೀದೇವಿಯ) **ಸಮಸ್ತಂ** = ಎಲ್ಲ ಸಂಗತಿಗಳನ್ನು **ಶೃತ್ವಾ** = ಕೇಳಿ **ಸ್ವಯಂ** = ತಾನೇ **ಭಗವಾನ್** = ಶ್ರೀ ಕೃಷ್ಣನು **ಅಖಿಲಾಶ್ಚ ಯೋಷಾಃ** = ಧುರ್ಯೋದನಾದಿಗಳ ಮಡದಿಯರ ವಿಷಯದಲ್ಲಿ **ಪ್ರತಿಜ್ಞಾಂ** = ಪ್ರತಿಜ್ಞೆಯನ್ನು **ಚಕಾರ** = ಮಾಡಿದನು.

ತಾತ್ಪರ್ಯ :- ದ್ರೌಪದಿಯ ಕರುಣಾಜನಕವಾದ ದುಃಖವನ್ನು ಕೇಳಿದ ಶ್ರೀಕೃಷ್ಣನು ಗರುಡ ಶೇಷ ರುದ್ರ ದೇವರುಗಳಿಗಿಂತ ಮಿಗಿಲಾಗಿ ತನ್ನ ಪರಮಾನುಗ್ರಹ ಪಾತ್ರಳಾದ ದ್ರೌಪದಿಗೆ ಈ ಸ್ಥಿತಿಯನ್ನು ತಂದ ದುರುಳರ ಬಗೆಗೆ ಆಕ್ರೋಶಗೊಂಡು ದುರ್ಯೋಧನಾದಿಗಳ ಹೆಂಡಂದಿರೆಲ್ಲರೂ ಮುಂದೆ ಅನುಭವಿಸಬೇಕಾಗಿಬರುವ ಘೋರ ಸಂಗತಿಯ ಬಗೆಗೆ ಪ್ರತಿಜ್ಞೆಯೊಂದನ್ನು ಕೈಗೊಂಡನು.

ಪತೀನ್ ಸಮಾಲಿಂಗ್ಯ ವಿಮುಕ್ತಕೇಶ್ಯಾನ್
ಭೀಮಾಹತಾನ್ ದರ್ಶಯೇ ನಾನ್ಯಥೇತಿ ।
ತಾಂ ಸಾಂತ್ವಯಿತ್ವಾ ಮಧುರೈಃ ಸುವಾಕ್ಯೈ-
ರ್ನಾರಾಯಣೋ ವಾಚಮಿಮಾಂ ಜಗಾದ ॥ ೨೯ ॥

ಪದಚ್ಛೇದ :- ಪತೀನ್, ಸಮಾಲಿಂಗ್ಯ, ವಿಮುಕ್ತಕೇಶ್ಯಾಃ, ಭೀಮಾಹತಾನ್, ದರ್ಶಯೇ, ನಾನ್ಯಥಾ, ಇತಿ, ತಾಂ, ಸಾಂತ್ವಯಿತ್ವಾ , ಮಧುರೈಃ, ಸುವಾಕ್ಯೈಃ, ನಾರಾಯಣಃ, ವಾಚಂ, ಇಮಾಂ, ಜಗಾದ ।

**ಅರ್ಥ** :- **ಭೀಮಾಹತಾನ್** = ಭೀಮನಿಂದ ಹತರಾದ **ಪತೀನ್** = ಗಂಡಂದಿರುಗಳನ್ನು **ವಿಮುಕ್ತಕೇಶ್ಯಾನ್** = ಜಡೆ ಬಿಚ್ಚಿದ ಕೂದಲುಗಳು ಆ ಧುರ್ಯೋದನಾದಿಗಳ ಮಡದಿಯರು **ಸಮಾಲಿಂಗ್ಯ** = ಆಲಂಗಿಸಿಕೊಂಡು (ದುಃಖಿಪಡುತ್ತಿರುವ ಪ್ರಸಂಗವನ್ನು) **ನಾನ್ಯಥಾ** = ನಿಶ್ಚಯವಾಗಿಯೂ, **ದರ್ಶಯೇ** = ತೋರಿಸುವೆನು. **ಇತಿ** = ಎಂದು **ತಾಂ** = ಆ ದ್ರೌಪದಿಯನ್ನು **ಮಧುರೈಃ** = ಮಧುರವಾದ **ಸುವಾಕ್ಯೈಃ** = ಸುಖಕರವಾದ ಮಾತುಗಳಿಂದ **ಸಾಂತ್ವಯಿತ್ವಾ** = ಸಮಾಧಾನ ಪಡಿಸಿ **ನಾರಾಯಣಃ** = ನಾರಾಯಣನು **ಇಮಾಂ** = ಮುಂದೆ ಹೇಳುವ ಮಾತನ್ನು **ಜಗಾದ** = ಹೇಳಿದನು.

**ತಾತ್ಪರ್ಯ** :- ಹೇ ದ್ರೌಪದೀ ಸದ್ಯದಲ್ಲಿಯೇ ಯುದ್ಧವೊಂದು ನಡೆಯಲಿದೆ. ಆ ಯುದ್ಧದಲ್ಲಿ ದುರ್ಯೋಧನಾದಿಗಳನ್ನು ಈ ನಿನ್ನ ಗಂಡ ಭೀಮಸೇನನು ಪುಡಿಗಟ್ಟುವನು ಹೀಗೆ ಭೀಮನಿಂದ ಹತರಾದ ಧುರ್ಯೋದನಾದಿಗಳ ಶವವನ್ನು ಬಿಚ್ಚಿದ ಜಡೆಗಂಟುಗಳುಳ್ಳ ದುರ್ಯೋಧನಾದಿಗಳ ಹೆಂಡಂದಿರು ಆಲಂಗಿಸಿಕೊಂಡು ರೋಧಿಸುತ್ತಿರುವ ದೃಶ್ಯವನ್ನು ನಾನು ಖಂಡಿತ ನಿನಗೆ ತೋರಿಸುವೆನು. ಈ ನನ್ನ ಮಾತು ಎಂದೆಂದೂ ಸತ್ಯವೇ ಎಂಬಿವೇ ಮುಂತಾದ ಮಾತುಗಳಿಂದ ದ್ರೌಪದಿಯನ್ನು ಸಮಾಧಾನ ಮಾಡಿದನು.

ಯದೀಹಾಹಂ ಸ್ಥಿತೋ ನೈವಂ ಭವಿತಾಽಹಂ ತ್ವಯೋಧಯಮ್ ।
ಸಾಲ್ವರಾಜಂ ದುರಾತ್ಮಾನಂ ಹತಶ್ಚಾಸೌ ಸುಪಾಪಕೃತ್ ॥ ೩೦ ॥

ಪದಚ್ಛೇದ :- ಯದಿ, ಇಹ, ಅಹಂ, ಸ್ಥಿತಃ, ನ, ಏವಂ, ಭವಿತಾ, ಅಹಂ, ತು, ಆಯೋಧಯಂ, ಸಾಲ್ವರಾಜಂ, ದುರಾತ್ಮಾನಂ, ಹತಃ, ಚ, ಅಸೌ, ಸುಪಾಪಕೃತ್ ।

**ಅರ್ಥ** :- **ಯದಿ** = ಒಂದು ವೇಳೆ **ತ್ವಯಾ** = ನಿನ್ನೊಂದಿಗೆ **ಇಹ** = ಈ ದ್ಯೂತ ಪ್ರಸಂಗದಲ್ಲಿ **ಅಹಂ** = ನಾನು **ಸ್ಥಿತಃ** = ಇರುವವನಾಗಿದ್ದರೆ **ಏವಂ** = ರೀತಿಯಾದ ವನವಾಸವು **ನ ಭವಿತಾ** = ಇರುತ್ತಿರಲಿಲ್ಲವಷ್ಟೇ **ಅಹಂ ತು** = ನಾನಾದರೂ **ದುರಾತ್ಮಾನಂ** = ಕೆಟ್ಟವನಾದ, **ಸಾಲ್ವರಾಜಂ** = ಸಾಲ್ವರಾಜನನ್ನು **ಆಯೋಧಯಂ** = ಎದುರಿಸಿದೆನು **ಅಸೌ** = ಈ ಯಾವ **ಸುಪಾಪಕೃತ್** = ಬಹಳ ಪಾಪವನ್ನು ಮಾಡಿದ ಸಾಲ್ವರಾಜನು **ಹತಃ** = ಹತನಾದನು.

**ತಾತ್ಪರ್ಯ** :- ಎಲೈ ದ್ರೌಪದಿಯೇ ಒಂದು ವೇಳೆ ನೀನು ದ್ಯೂತವಾಡುವಾಗ ನನ್ನ ಉಪಸ್ಥಿತಿ ಇರುತ್ತಿದ್ದರೆ ಖಂಡಿತವಾಗಿ ನಿಮ್ಮನ್ನು ನಾನು ಈ ಸ್ಥಿತಿಯಲ್ಲಿರಲು ಬಿಡುತ್ತಿರಲಿಲ್ಲ. ಆ ಸಂದರ್ಭದಲ್ಲಿ ನಾನಾದರೂ ಬಹಳ ಪಾಪಿಷ್ಟನಾದ ಅತ್ಯಂತ ಕೆಟ್ಟವನಾದ ಸಾಲ್ವರಾಜನೊಂದಿಗೆ ಯುದ್ಧ ಮಾಡುತ್ತಿದ್ದೆ. ಅಂತಹ ಸಾಲ್ವರಾಜನಾದರೂ ಈಗ ಹತನಾಗಿದ್ದಾನೆ.

**ಸನ್ನಿಧಾನೇಽಥ ದೂರೇ ವಾ ಕಾಲವ್ಯವಹಿತೇಽಪಿ ವಾ ।**
**ಸ್ವಭಾವಾದ್ ವಾ ವ್ಯವಹಿತೇ ವಸ್ತುವ್ಯವಹಿತೇಽಪಿ ವಾ ॥ ೩೧ ॥**

ಪದಚ್ಛೇದ :-ಸನ್ನಿಧಾನೇ, ಅಥ, ದೂರೇ, ವಾ, ಕಾಲವ್ಯವಹಿತೇ, ಅಪಿ, ವಾ, ಸ್ವಭಾವಾತ್, ವಾ, ವ್ಯವಹಿತೇ, ವಸ್ತುವ್ಯವಹಿತೇ, ಅಪಿ, ವಾ ।

**ಅರ್ಥ** :- **ಸನ್ನಿಧಾನೇ** = ಹತ್ತಿರವಿರಲಿ, **ಅಥ** = ಅಥವಾ, **ದೂರೇ** = ದೂರದಲ್ಲಾಗಲಿ, **ವಾ** = ಅಥವಾ **ಕಾಲವ್ಯವಹಿತೇಽಪಿ ವಿ** = **ಕಾಲತಃ** = ವ್ಯವಧಾನವಿರಲಿ, **ವಾ** = ಅಥವಾ, **ಸ್ವಭಾವಾತ್** = ಸಹಜವಾಗಿಯೇ **ವ್ಯವಹಿತೇ** = ವ್ಯವಧಾನವಿದ್ದಾಗಲೂ, **ವಾ** = ಅಥವಾ, **ವಸ್ತು ವ್ಯವಹಿತೇ** = ಪದಾರ್ಥದಿಂದ ತಡೆಯಿರಲಿ.

**ತಾತ್ಪರ್ಯ** :- ಭಗವಂತನು ದೇಶತಃ ದೂರದಲ್ಲಿದ್ದರೂ ಕಾಲತಃ ಭಿನ್ನಕಾಲವರ್ತಿಯಾದರೂ ಅಥವಾ ದೇಶತಃ ಕಾಲತಃ ವ್ಯವಧಾನವಿಲ್ಲದಿದ್ದರೂ

(ಅತೀಂದ್ರಿಯವಾಗಿಲ್ಲದಿದ್ದರೂ) ಅಥವಾ ಸಹಜವಾಗಿಯೂ ದೇವದಾನವರಂತೆ ವಿರುದ್ಧವಾಗಿದ್ದರೂ ಅಥವಾ ಮೋಡ ಮತ್ತು ಸೂರ್ಯನ ಪ್ರಕಾಶವೆಂಬಂತೆ ತಡೆಯುಳ್ಳವನಾಗಿದ್ದರೂ ಅಥವಾ ಗೋಡೆಯಾಚೆಗಿನ ಮಡಿಕೆ ಎಂಬಂತೆ ತಡೆಯನ್ನು ಹೊಂದಿದ್ದರೂ ಸರ್ವ ಶಕ್ತನಾದ ಭಗವಂತನಿಗೆ ಮುಂದೆ ಹೇಳುವ ಹಾಗೆ ಯಾವುದೇ ರೀತಿಯಲ್ಲೂ ಅಶಕ್ತಿ ಎನ್ನುವುದಿಲ್ಲ. ಅಂದರೆ ಅವನಿಗೆ ಅವ್ಯಹಿತತ್ವ ಮತ್ತು ವ್ಯವಹಿತತ್ವ ಎನ್ನುವುದು ದೋಷವೇ ಆಗಲಾರದು. ಅವನು ಎಲ್ಲೆಡೆಯೂ ವ್ಯಾಪ್ತನಾದ ಪ್ರಯುಕ್ತ.

**ನಾಶಕ್ತಿರ್ವಿದ್ಯತೇ ವಿಷ್ಣೋರ್ನಿತ್ಯಾವ್ಯವಹಿತತ್ವತಃ ।**
**ತಥಾಽಪಿ ನರಲೋಕಸ್ಯ ಕರೋತ್ಯನುಕೃತಿಂ ಪ್ರಭುಃ ॥ ೩೨ ॥**

**ಪದಚ್ಛೇದ :- ನ, ಅಶಕ್ತಿಃ, ವಿದ್ಯತೇ, ವಿಷ್ಣೋಃ, ನಿತ್ಯಾವ್ಯವಹಿತತ್ವತಃ, ತಥಾ, ಅಪಿ, ನರಲೋಕಸ್ಯ, ಕರೋತಿ, ಅನುಕೃತಿಂ, ಪ್ರಭುಃ ।**

**ಅರ್ಥ** :- **ನಿತ್ಯಾವ್ಯವಹಿತತ್ವತಃ** = ಸದಾಕಾಲ ಸರ್ವರೀತಿಯಿಂದಲೂ ಅವ್ಯವಹಿತನಾದ ಕಾರಣ (ಎಲ್ಲೆಡೆಯೂ ವ್ಯಾಪ್ತನಾದ ಕಾರಣ) **ವಿಷ್ಣೋಃ** = ಶ್ರೀಮನ್ನಾರಾಯಣನಿಗೆ, **ಅಶಕ್ತಿಃ** = ವ್ಯವಹಿತತ್ವ ಅವ್ಯವಹಿತತ್ವ ಎನ್ನುವುದು (ಅಸಾಮರ್ಥ್ಯವು) **ನ ವಿದ್ಯತೇ** = ಇರುವುದಿಲ್ಲ, **ತಥಾಪಿ** = ಹಾಗಿದ್ದರೂ **ಪ್ರಭುಃ** = ಸರ್ವ ಸಮರ್ಥನಾದ ನಾರಾಯಣನು **ನರಲೋಕಸ್ಯ** = ಮಾನವರ ಲೋಕದ **ಅನುಕೃತಿಂ** = ಅನುಕರಣೆಯನ್ನು **ಕರೋತಿ** = ಮಾಡುತ್ತಾನೆ.

**ತಾತ್ಪರ್ಯ** :- ಶ್ರೀ ಕೃಷ್ಣನು ದ್ರೌಪದಿಗೆ ಸಮಾಧಾನ ಮಾಡುವಾಗ ನಾನು ನಿಮ್ಮ ಹತ್ತಿರದಲ್ಲಿದ್ದಿದ್ದರೆ ಹೀಗಾಗಲು ನಾನು ಬಿಡುತ್ತಿರಲಿಲ್ಲ ಎಂದು ಹೇಳಿದ್ದಾನೆ. ಹಾಗಾದರೆ ಭಗವಂತನು ಅಶಕ್ತನೇ ಎಂಬ ಪ್ರಶ್ನೆ ಬಂದರೆ ಈ ಎರಡು ಶ್ಲೋಕಗಳಿಂದ ಉತ್ತರಿಸುತ್ತಾರೆ. ಭಗವಂತನು ಸರ್ವವ್ಯಾಪ್ತನಾದ ಕಾರಣ ಅವನಿಗೆ ಈ ದೂರತ್ವ ಸಮೀಪತ್ವಾದಿ ಯಾವ ದೋಷಗಳೂ ಇರುವುದಿಲ್ಲ, ಆದರೆ ಮುಂದಾಗಲೇ ಬೇಕಾದ ಕಾರ್ಯಕ್ಕೆ ಅನುಗುಣವಾಗಿ ಮಾನವರ ಲೋಕಕ್ಕಿಳಿದ ರೀತಿ ನೀತಿಗಳನ್ನು ಅನುಸರಿಸುವವನಾಗಿ ನಟನೆಯನ್ನು ಮಾಡಿದ ಎಂದು ತಿಳಿಯಬೇಕು.

**ದುಷ್ಟಾನಾಂ ದೋಷವೃದ್ಧ್ಯರ್ಥಂ ಭೀಮಾದೀನಾಂ ಗುಣೋನ್ನತೇಃ ।**
**ಯುಧಿಷ್ಠಿರೇಽತಿವೃದ್ಧಂ ತು ರಾಜಸೂಯಾದಿಸಂಭವಮ್ ॥ ೩೩ ॥**

ಪದಚ್ಛೇದ :- ದುಷ್ಟಾನಾಂ, ದೋಷವೃಧ್ಯರ್ಥಂ, ಭೀಮಾದೀನಾಂ, ಗುಣೋನ್ನತೇ । ಯುಧಿಷ್ಠಿರೇ, ಅತಿವೃದ್ಧಂ, ತು, ರಾಜಸೂಯಾದಿಸಂಭವಮ್ ॥

**ಅರ್ಥ** :- **ದುಷ್ಟಾನಾಂ** = ದುರ್ಜನರಿಗೆ **ದೋಷವೃಧ್ಯರ್ಥಂ** = ದೋಷವೃದ್ಧಿಯ ಸಲುವಾಗಿ, **ಭೀಮಾದೀನಾಂ** = ಭೀಮ ಪ್ರಮುಖರಾದ ಪಾಂಡವರ **ಗುಣೋನ್ನತೇಃ** = ಗುಣಾಭಿವೃದ್ಧಿಗಾಗಿಯೂ (ಪುಣ್ಯಭಿವೃದ್ಧಿ-ಗಾಗಿಯೂ) **ಯುಧಿಷ್ಠಿರೇ** = ಯುಧಿಷ್ಠಿರನಲ್ಲಿ **ಅತಿವೃದ್ಧಂ** = ಯೋಗ್ಯತೆ ಮೀರಿ ವೃದ್ಧಿಯಾದ, **ರಾಜಸೂಯಾದಿ ಸಂಭವಮ್** = ರಾಜಸೂಯ ಯಾಗದಿಂದ ಉತ್ಪನ್ನವಾದ ಹೆಚ್ಚಿನ ಪುಣ್ಯವುಳ್ಳ.

**ತಾತ್ಪರ್ಯ** :- ಭಗವಂತನ ಈ ನರಲೋಕದ ರೀತಿಯ ವಿಡಂಬನೆಯು ನೋಡುಗರಾದ ದುರ್ಜನರಿಗೆ ದೋಷವು ವೃದ್ಧಿಯಾಗುವಂತೆಯೂ ಭೀಮಾದಿಗಳ ಪುಣ್ಯದ ಅಭಿವೃದ್ಧಿಯ ದೆಸೆಯಿಂದಲೋ ಎಂಬಂತೆ ಅಷ್ಟೇ ಅಲ್ಲದೆ ರಾಜಸೂಯ ಯಾಗವನ್ನು ತಾನೇ ನಿಂತು ನಡೆಸಿದರ ಪರಿಣಾಮವಾಗಿ ಅವನ ಯೋಗ್ಯತೆಗೆ ಮೀರಿ ಸಂಪಾದಿಸಿದ ಪುಣ್ಯವನ್ನು ಹಂಚುವ ಸಲುವಾಗಿಯೂ ಈ ವಿಡಂಬನೆಯನ್ನು ನಡೆಸಿದ. (ಅಂದರೆ ಅವನ ಕೈಯಲ್ಲಿ ಜೂಜಾಡಿಸಿದ)

**ಧರ್ಮಂ ಚ ಸಂಕ್ರಾಮಯಿತುಂ ಕೃಷ್ಣಾಯಾಮನುಜೇಷು ಚ ।**
**ಯೋಗ್ಯತಾಕ್ರಮತೋ ವಿಷ್ಣುರಿಚ್ಛಯೇತ್ಥಮಚೀಕ್ಲೃಪತ್ ॥ ೩೪ ॥**

ಪದಚ್ಛೇದ :- ಧರ್ಮಂ, ಚ, ಸಂಕ್ರಾಮಯಿತುಂ, ಕೃಷ್ಣಾಯಾಂ, ಅನುಜೇಷು, ಚ. ಯೋಗ್ಯತಾಕ್ರಮತಃ, ವಿಷ್ಣುಃ, ಇಚ್ಛಯಾ, ಇತ್ಥಂ, ಅಚೀಕ್ಲೃಪತ್ ।

**ಅರ್ಥ** :- **ಅನುಜೇಷು** = ಧರ್ಮರಾಜನ ತಮ್ಮಂದಿರಾದ ಭೀಮಾದಿಗಳಲ್ಲಿ, **ಚ** = ಮತ್ತು, **ಕೃಷ್ಣಾಯಾಂ** = ದ್ರೌಪದಿಯಲ್ಲಿಯೂ **ಯೋಗ್ಯತಾಕ್ರಮತಃ** = ಅವರವರ ಯೋಗ್ಯತೆಗೆ ಅನುಗುಣವಾಗಿ **ಧರ್ಮಂ** = ಪುಣ್ಯವನ್ನು **ಸಂಕ್ರಾಮಯಿತುಂ** = ಹರಿದುಬರುವಂತೆ ಮಾಡಲು **ಇಚ್ಛಯಾ**

= ಇಚ್ಛೆಯಿಂದ ಇತ್ಥಂ = ಈ ರೀತಿಯಾಗಿ (ಜೂಜಿನಲ್ಲಿ ತಮ್ಮನ್ನು ಪಣಕ್ಕಿಟ್ಟರೂ ಭೀಮಾದಿಗಳು ಧರ್ಮರಾಜನ ಅನುವರ್ತಿಗಳಾಗಿರುವಂತೆ ಮಾಡಿ) **ಅಚೀಕ್ಲೃಪತ್** = ವ್ಯವಸ್ಥೆ ಮಾಡಿದನು.

**ತಾತ್ಪರ್ಯ** :- ಶ್ರೀಕೃಷ್ಣನು ಜೂಜಾಡುವ ಸಂದರ್ಭದಲ್ಲಿ ಪಾಂಡವರ ಜೊತೆ ಇರದೆ ಇರಲು ಕಾರಣವನ್ನು ಹೇಳುತ್ತಾರೆ ಆಚಾರ್ಯರು. ಧರ್ಮರಾಜನು ರಾಜಸೂಯ ಯಾಗವನ್ನು ತಾನೇ ನಿಂತು ನಡೆಸುವುದರ ಫಲವಾಗಿ ತನ್ನ ಯೋಗ್ಯತೆಗೆ ಮೀರಿ ಪುಣ್ಯವಿಶೇಷವನ್ನು ಪಡೆದಿದ್ದ. ಆ ಪುಣ್ಯವನ್ನು ತಮ್ಮಂದಿರಲ್ಲಿ ಹಾಗೂ ಕೃಷ್ಣೆಯಲ್ಲಿ ಹರಿಸಲು ಸಂಕಲ್ಪಿಸಿದ ಶ್ರೀಹರಿ ಅವರನ್ನು ಧರ್ಮರಾಜನು ಜೂಜಿನಲ್ಲಿ ಪಣಕ್ಕಿಟ್ಟಾಗಲೂ ಅನುವರ್ತಿಗಳಾಗಿರುವಂತೆ ಪ್ರೇರೇಪಿಸಿ ಧರ್ಮರಾಜನ ಪುಣ್ಯವು ವ್ಯರ್ಥವಾಗಿ ಸೋರಿಹೋಗದಂತೆ ಮಾಡಿ ಅವನ ತಮ್ಮಂದಿರಲ್ಲಿ ಹಾಗೂ ದ್ರೌಪದಿಯಲ್ಲಿ ಹರಿದು ಹೋಗುವಂತೆ ವ್ಯವಸ್ಥೆ ಮಾಡಿದ.

**ಏಧಮಾನದ್ವಿಳಿತ್ಯೇವ ವಿಷ್ಣೋರ್ನಾಮ ಹಿ ವೈದಿಕಮ್ ॥ ೩೫ ॥**

**ಪದಚ್ಛೇದ :- ಏಧಮಾನದ್ವಿಟ್, ಇತಿ, ಏವ, ವಿಷ್ಣೋರ್ನಾಮ, ಹಿ, ವೈದಿಕಮ್ ॥**

**ಅರ್ಥ** :- **ಏಧಮಾನದ್ವಿಟ್** = ತನ್ನ ಯೋಗ್ಯತೆಯನ್ನು ಮೀರಿ ಬೆಳೆಯುತ್ತಿರುವವರನ್ನು, **ದ್ವಿಟ್** = ದ್ವೇಷ ಮಾಡುವವನು ಇತ್ಯೇವ = ಹೀಗೆಯೇ, **ವಿಷ್ಣೋಃ** = ನಾರಾಯಣನ **ವೈದಿಕಂ** = ವೈದಿಕವಾದ **ನಾಮ** = ಹೆಸರು, **ಹಿ** = ಪ್ರಸಿದ್ಧವಾಗಿದೆಯಷ್ಟೇ.

**ತಾತ್ಪರ್ಯ** :- ಭಗವಂತನು ಸಜ್ಜನರನ್ನು ರಕ್ಷಿಸುವ ಸಲುವಾಗಿ ಏಧಮಾನದ್ವಿಟ್ ಎಂಬ ಸಾರ್ಥಕ ನಾಮವನ್ನು ಧರಿಸಿದ್ದಾನೆ. ಇದರ ಅಭಿಪ್ರಾಯ. ಯಾವುದೇ ಜೀವರು ತಮ್ಮ ಯೋಗ್ಯತೆಗೆ ಮೀರಿ ಪುಣ್ಯವನ್ನು ಸಂಪಾದಿಸಿದ್ದೇ ಆದರಲ್ಲಿ ಭಗವಂತನು ಅದನ್ನು ಸಹಿಸದೆ ಅವರನ್ನು ನಿಗ್ರಹಿಸುತ್ತಾನೆ ಎಂದು. ಉದಾ.: ಶೇಷನು ಲಕ್ಷ್ಮಣನಾಗಿ ಹೆಚ್ಚಿನ ಪುಣ್ಯವನ್ನು ಗಳಿಸಿದರೆ ಅವನನ್ನು ಬಲರಾಮನನ್ನಾಗಿ ಹುಟ್ಟಿಸಿ ಪುಣ್ಯದ ಹ್ರಾಸವನ್ನು ಮಾಡಿಸಿದ. ಹೀಗೆ ಗೌತಮರ ದೇವೇಂದ್ರನ ಸೂರ್ಯಚಂದ್ರರ ಪ್ರಸಂಗದಲ್ಲಿ ಕಾಣಬಹುದು. ಅಂತೆಯೇ ಪ್ರಕೃತ ಧರ್ಮರಾಜನಲ್ಲಿಯೂ.

ಸ್ವಯೋಗ್ಯತಾಯಾ ಅಧಿಕಧರ್ಮಜ್ಞಾನಾದಿಜಂ ಫಲಮ್ ।
ಭೀಷ್ಮದ್ರೋಣಾಂಬಿಕೇಯಾದೇಃ ಪಾರ್ಥೇಷ್ವೇವ ನಿಧಾಪಿತುಮ್ ॥ ೩೬ ॥

ಪದಚ್ಛೇದ :- ಸ್ವಯೋಗ್ಯತಾಯಾಅಧಿಕಧರ್ಮಜ್ಞಾನಾದಿಜಂ, ಫಲಂ, ಭೀಷ್ಮದ್ರೋಣಾಂಭಿಕೇಯಾದೇ, ಪಾರ್ಥೇಷು, ಏವ, ನಿಧಾವಿತುಮ್॥

ಅರ್ಥ :- ಭೀಷ್ಮದ್ರೋಣಾಂಬಿಕೇಯಾದೇಃ = ಭೀಷ್ಮಾಚಾರ್ಯರು ದ್ರೋಣರು, ಧೃತರಾಷ್ಟ್ರನು ಇವರುಗಳೇ ಮುಂತಾದವರುಗಳ, ಸ್ವಯೋಗ್ಯತಾಯಾಃ = ತಮ್ಮ ಯೋಗ್ಯತೆಗಿಂತಲೂ ಅಧಿಕಂ = ಹೆಚ್ಚಾದ ಧರ್ಮಜ್ಞಾನಾದಿಜಂ = ಧರ್ಮಾಚರಣೆ ಮತ್ತು ಜ್ಞಾನ ಭಕ್ತ್ಯಾದಿಗಳಿಂದ ಉಂಟಾದ ಫಲಂ = ಪುಣ್ಯರೂಪವಾದ ಫಲವನ್ನು ಪಾರ್ಥೇಷ್ವೇವ = ಪಾಂಡವರಲ್ಲಿಯೇ ನಿಧಾಪಯಿತುಂ = ಸಂಗ್ರಹಿಸಲು (ಶ್ರೀಕೃಷ್ಣನು ಧರ್ಮರಾಜನಿಂದ ಜೂಜಾಡಿಸಿದ).

ತಾತ್ಪರ್ಯ :- ಈ ಶ್ಲೋಕದ ಅಭಿಪ್ರಾಯ ಹೀಗಿದೆ. ಭೀಷ್ಮ ದ್ರೋಣ ಧೃತರಾಷ್ಟ್ರ ಇವರುಗಳೇ ಮೊದಲಾದ ಕೌರವರು ಧರ್ಮಾಚರಣೆ ಮತ್ತು ಭಗವಂತನ ಜ್ಞಾನ ಭಕ್ತ್ಯಾದಿ ಗುಣಗಳಿಂದ ಹೆಚ್ಚಿನ ಪುಣ್ಯವನ್ನು ಸಂಪಾದಿಸಿದ್ದರಷ್ಟೇ. ಆದರೆ ಶ್ರೀಕೃಷ್ಣನು ಧರ್ಮರಾಜನಿಂದ ಜೂಜಾಡಿಸಿ ದ್ಯೂತ ಸಭಾಂಗಣದಲ್ಲಿ ದ್ರೌಪದಿಯಿಂದ ಈ ಜೂಜು ಅಧರ್ಮ ಎಂದು ಹೇಳಿಸಿದರೂ ಎಚ್ಚೆತ್ತುಕೊಳ್ಳುವ ಭೀಷ್ಮಾದಿಗಳ ಪುಣ್ಯವನ್ನು ಕಸಿದು ಪಾಂಡವರಿಗೆ ಕೊಡಲೋಸುಗವಾಗಿಯೇ ಭೀಷ್ಮಾದಿಗಳು ತಡೆಯದಂತೆ ಮಾಡಿದ.

ಪುನಶ್ಚ ಪಾಪವೃದ್ಧ್ಯರ್ಥಮಜೋ ದುರ್ಯೋಧನಾದಿಷು ।
ವ್ಯಾಸೋಽಂಬಿಕಾಸುತಂ ಪ್ರಾಹ ಪಾರ್ಥಾ ಮೇಽಭ್ಯಧಿಕಂ ಪ್ರಿಯಾಃ ॥೩೭॥

ಪದಚ್ಛೇದ :- ಪುನಃ, ಚ, ಪಾಪವೃದ್ಧ್ಯರ್ಥಂ, ಅಜಃ, ದುರ್ಯೋಧನಾದಿಷು, ವ್ಯಾಸಃ, ಅಂಬಿಕಾಸುತಂ, ಪ್ರಾಹ, ಪಾರ್ಥಾಃ, ಮೇ, ಅಭ್ಯಧಿಕಂ, ಪ್ರಿಯಾಃ ॥

ಅರ್ಥ :- ಅಜಃ = ನಿತ್ಯನಾದ ನಾರಾಯಣನು ದುರ್ಯೋಧನಾದಿಷು = ದುರ್ಯೋಧನಾದಿಗಳಲ್ಲಿ ಪುನಃ = ಮತ್ತಷ್ಟು ಪಾಪವೃದ್ಧ್ಯರ್ಥಂ = ಪಾಪದ ಹೆಚ್ಚುವಿಕೆಗಾಗಿ ವ್ಯಾಸಃ = ವ್ಯಾಸರೂಪನಾದ ನಾರಾಯಣನು ಪಾರ್ಥಾಃ =

ಪಾಂಡವರು **ಮೇ** = ನನಗೆ **ಅಭ್ಯಧಿಕಂ** = ಅತಿಹೆಚ್ಚಾಗಿ **ಪ್ರಿಯಾಃ** = ಪ್ರಿಯರಾದವರು, **ಇತಿ** = ಹೀಗೆಂದು **ಅಂಬಿಕಾಸುತಂ** = ಧೃತರಾಷ್ಟ್ರನನ್ನು ಕುರಿತು, **ಪ್ರಾಹ** = ಹೇಳಿದರು.

**ತಾತ್ಪರ್ಯ** :- ಜನನ ಮರಣಾದಿಗಳಿಂದ ರಹಿತನಾದ ಶ್ರೀಕೃಷ್ಣನು ದುರ್ಯೋಧನಾದಿಗಳಲ್ಲಿ ಮತ್ತಷ್ಟು ಪಾಪದ ಸಂಗ್ರಹವನ್ನು ಹೆಚ್ಚಿಸುವ ಉದ್ದೇಶದಿಂದ ಧೃತರಾಷ್ಟ್ರನ ಮುಂದೆ ವ್ಯಾಸರೂಪಿಯಾಗಿ ತನಗೆ ಪಾಂಡವರೇ ಅತ್ಯಂತ ಪ್ರಿಯರೆಂದನು ಈ ಮಾತಿನ ಆಂತರ್ಯ ಹೀಗಿತ್ತು. ತಾನು ಪಾಂಡವರ ಜೊತೆ ಸಂಧಿ ಮಾಡಿಕೋ ಸ್ನೇಹದಿಂದ ವರ್ತಿಸು ಎಂದಾಜ್ಞೆ ಮಾಡಿದರೂ ಅದನ್ನು ಅವ ಮೀರಲು ಆ ಮೂಲಕ ದುರ್ಯೋಧನನಲ್ಲಿ ಪಾಪದ ಸಂಗ್ರಹ ಹೆಚ್ಚಾಗಲಿ ಎಂಬುದೇ ಕೃಷ್ಣನ ಆಶಯವಾಗಿದೆ.

**ತೇಷಾಂ ಪ್ರವಾಸನಂ ಚೈವ ಪ್ರಿಯಂ ನ ಮಮ ಸರ್ವಥಾ ।**
**ಇತಿ ದುರ್ಯೋಧನಾದೀನಾಂ ಪಾಪವೃದ್ಧ್ಯರ್ಥಮೇವ ಸಃ ।**
**ಪ್ರಿಯಾ ಇತ್ಯೇವ ಕಥನಾತ್ ಪಾಂಡವಾನಾಂ ಶುಭೋನ್ನತೇಃ ॥ ೩೮ ॥**

**ಪದಚ್ಛೇದ :- ತೇಷಾಂ ಪ್ರವಾಸನಂ ಚ ಏವ ಪ್ರಿಯಂ ನ ಮಮ ಸರ್ವಥಾ ಇತಿ ದುರ್ಯೋಧನಾದೀನಾಂ ಪಾಪವೃದ್ಧ್ಯರ್ಥಂ ಏವ ಸಃ ಪ್ರಿಯಾಃ ಇತಿ ಏವ ಕಥನಾತ್ ಪಾಂಡವಾನಾಂ ಶುಭೋನ್ನತೇಃ ॥**

**ಅರ್ಥ** :- **ತೇಷಾಂ** = ಆ ಪಾಂಡವರ **ಪ್ರವಾಸನಂ** = ವನವಾಸವು **ಮಮ** = ನನಗೆ **ಸರ್ವಥಾ** = ಸರ್ವ ವಿಧದಿಂದಲೂ **ನ ಪ್ರಿಯಂ** = ಪ್ರಿಯವಲ್ಲವಷ್ಟೇ, **ಇತಿ** = ಹೀಗೆ, **ಸಃ** = ಆ ವೇದವ್ಯಾಸರು **ಪಾಂಡವಾನಾಂ** = ಪಾಂಡವರ **ಶುಭೋನ್ನತೇಃ** = ಪುಣ್ಯೋತ್ಕರ್ಷಕ್ಕಾಗಿ **ಪ್ರಿಯಾಃ** = ನನಗೆ ಪ್ರೀತಿಪಾತ್ರರು **ಇತಿ** = ಎಂದು **ಕಥನಾತ್** = ಹೇಳುವುದರಿಂದ **ದುರ್ಯೋಧನಾದೀನಾಂ** = ದುರ್ಯೋಧನಾದಿಗಳ **ಪಾಪವೃದ್ಧ್ಯರ್ಥಂ ಏವ** = ಹೆಚ್ಚಿನ ಪಾಪಸಂಗ್ರಹಕ್ಕಾಗಿಯೇ ಆಗಿದೆ.

**ತಾತ್ಪರ್ಯ** :- ವೇದವ್ಯಾಸರು ಪಾಂಡವರಿಗೆ ಹೆಚ್ಚಿನ ಪುಣ್ಯ ಸಂಗ್ರಹಿಸಿ ಕೊಡುವ ಉದ್ದೇಶದಿಂದ ಧೃತರಾಷ್ಟ್ರನಿಗೆ ಹೀಗೆಂದರು. ಹೇ ಧೃತರಾಷ್ಟ್ರ ನನಗೆ ಅತ್ಯಂತ ಪ್ರೀತಿಪಾತ್ರರಾದ ಪಾಂಡವರನ್ನು ಕಾಡಿಗೆ ಕಳುಹಿಸಿದ್ದು ನನಗೆ ಸರ್ವ

ವಿಧದಿಂದಲೂ ಸಮ್ಮತವಲ್ಲವೆಂದು ಪಾಂಡವರಲ್ಲಿ ಪ್ರೀತಿಯನ್ನು ತೋರಿಸುತ್ತಾ ದುರ್ಯೋಧನಾದಿಗಳಲ್ಲಿ ಅಸೂಯೆಯನ್ನು ಹುಟ್ಟುಹಾಕುತ್ತಾ ಆ ಮೂಲಕ ದುರ್ಯೋಧನಾದಿಗಳ ಪಾಪವನ್ನು ಹೆಚ್ಚಿಸಿದರು.

**ಗುರುತ್ವಾದ್ ಭೀಮಸೇನಸ್ಯ ಕ್ಷಮಾ ದ್ಯೂತೇಽರ್ಜುನಾದಿನಾಮ್ ।**
**ನಾತಿಧರ್ಮಸ್ವರೂಪೋಽತ್ರ ಧರ್ಮೋ ಭೀಮೇ ನಿರೌಪಧಃ ॥ ೩೯ ॥**

ಪದಚ್ಛೇದ :- ಗುರುತ್ವಾತ್, ಭೀಮಸೇನಸ್ಯ, ಕ್ಷಮಾ, ದ್ಯೂತೇ, ಅರ್ಜುನಾದಿನಾಂ, ನ, ಅತಿಧರ್ಮಸ್ವರೂಪಃ, ಅತ್ರ, ಧರ್ಮಃ, ಭೀಮೇ, ನಿರೌಪಧಃ ॥

**ಅರ್ಥ** :- **ಭೀಮಸೇನಸ್ಯ** = ಭೀಮಸೇನನ **ಗುರುತ್ತಾ ್ವತ್** = ಹಿರಿಯನಾದ್ದರಿಂದ **ದ್ಯೂತೇ** = ದ್ಯೂತಕ್ರೀಡೆಯಲ್ಲಿ **ಅರ್ಜುನಾದಿನಾಂ** = ಅರ್ಜುನನಕುಲಸಹದೇವರ **ಕ್ಷಮಾ** = ಕ್ಷಮಾಗುಣವು **ನ ಅತಿಧರ್ಮ** = ಹೆಚ್ಚಿನ ಪುಣ್ಯಕರವಾಗಿರಲಿಲ್ಲ. **ಅತ್ರ ಭೀಮೇ** = ಭೀಮನಲ್ಲಿಯಾದರೂ **ಧರ್ಮಃ** = ಪುಣ್ಯವು **ನಿರೌಪಧಃ** = ಆಧಿಕ್ಯತೆಯಿಂದ ಕೂಡಿತ್ತು.

**ತಾತ್ಪರ್ಯ** :- ಈ ಶ್ಲೋಕದಲ್ಲಿ ಧರ್ಮರಾಜನ ಪುಣ್ಯವು ತಾರತಮ್ಯದ ರೀತಿಯಲ್ಲಿ ಭೀಮಾದಿಗಳನ್ನು ಸೇರಲು ಕಾರಣವನ್ನು ತಿಳಿಸುತ್ತಿದ್ದಾರೆ. ಭೀಮನು ಅರ್ಜುನಾದಿಗಳಿಗೆ ಹಿರಿಯನಾದ್ದರಿಂದ ದ್ಯೂತ ಕ್ರೀಡೆಯಲ್ಲಿನ ಅರ್ಜುನಾದಿಗಳ ಕ್ಷಮಾಗುಣವು ಹೆಚ್ಚಿನ ಪುಣ್ಯವನ್ನು ಗಳಿಸಿಕೊಡಲಿಲ್ಲ. ಏಕೆಂದರೆ ಅವರು ಭೀಮನ ಜೊತೆಗೆ ಅಧರ್ಮವನ್ನು ಪ್ರತಿಭಟಿಸಬೇಕಿತ್ತು. ಹೀಗೇ ಭೀಮನು ಜೂಜನ್ನು ಪ್ರತಿಭಟಿಸಯೂ ಧರ್ಮರಾಜನ ಇಚ್ಛೆಗೆ ಅನುಗುಣವಾಗಿ ವಿಧೇಯನಾಗಿ ನಡೆದುಕೊಂಡನೋ ಹಾಗೆಯೇ ಅರ್ಜುನಾದಿಗಳು ತನ್ನ ಹಿರಿಯನಾದ ಭೀಮನಲ್ಲಿ ಈ ತರಹದ ನಡತೆಯನ್ನು ತೋರಬೇಕಿತ್ತು. ಅಧರ್ಮವನ್ನು ಪ್ರತಿಭಟಿಸಬೇಕಿತ್ತು. ಹಾಗಿಲ್ಲದ ಕಾರಣ ಅವರಿಗೆ ಪುಣ್ಯವು ಹೆಚ್ಚಿನ ರೀತಿಯಲ್ಲಿ ಸೇರಲು ಅವಕಾಶವಾಗಲಿಲ್ಲ.

**ದ್ರೌಪದ್ಯಾ ಅಪ್ಯತಿಕ್ಲೇಶಾತ್ ಕ್ಷಮಾ ಧರ್ಮೋ ಮಹಾನಭೂತ್ ।**
**ಸಾ ಹಿ ಭೀಮಮನೋ ವೇದ ನ ಕಾರ್ಯಃ ಶಾಪ ಇತ್ಯಲಮ್ ॥ ೪೦ ॥**

ಪದಚ್ಛೇದ :- ದ್ರೌಪದ್ಯಾ, ಅಪಿ, ಅತಿಕ್ಲೇಶಾತ್, ಕ್ಷಮಾಧರ್ಮಃ, ಮಹಾನ್, ಅಭೂತ್, ಸಾ, ಹಿ, ಭೀಮಮನಃ, ವೇದ, ನ, ಕಾರ್ಯಃ, ಶಾಪ, ಇತಿ, ಅಲಮ್ ।

**ಅರ್ಥ** :- **ದ್ರೌಪದ್ಯಾ ಅಪಿ** = ದ್ರೌಪದೀ ದೇವಿಯಿಂದಲೂ **ಅತಿಕ್ಲೇಶಾತ್** = ಬಹುವಾದ ಕಷ್ಟದಿಂದ **ಕ್ಷಮಾ** = ಸಹಿಸುವಿಕೆಯು **ಮಹಾನ್** = ಬಹಳವಾದ **ಧರ್ಮಃ** = ಪುಣ್ಯಕರವು **ಅಭೂತ್** = ಆಯಿತು. **ಸಾಹಿ** = ಆ ದ್ರೌಪದಿಯಾದರೂ **ಶಾಪಃ** = ಶಾಪವು **ನ ಕಾರ್ಯ** = ಕೂಡಬಾರದು **ಇತಿ** = ಹೀಗೆಂದು **ಅಲಂ** = ಅರ್ಜುನಾದಿಗಳಿಗಿಂತಲೂ **ಭೀಮಮನಃ** = ಭೀಮಸೇನನ ಮನಸ್ಸನ್ನು, **ವೇದ** = ತಿಳಿದಿದ್ದಳು.

**ತಾತ್ಪರ್ಯ** :- ದ್ರೌಪದಿಯಾದರೂ ಆ ಜೂಜಾಟದ ಸಂದರ್ಭದಲ್ಲಿ ಬಹಳವಾದ ಕಷ್ಟದಿಂದ ತನ್ನನ್ನು ತಾನು ನಿಗ್ರಹಿಸಿಕೊಂಡಿದ್ದಳು. ಅಂತಹ ಅವಳ ನಿಗ್ರಹವೇ ಅವಳ ಹೆಚ್ಚಿನ ಪುಣ್ಯ ಸಂಪತ್ತಾಯಿತು. ಅದಕ್ಕೆ ಕಾರಣ ಅವಳು ಅರ್ಜುನಾದಿಗಳಿಗಿಂತಲೂ ಭೀಮಸೇನನ ಮನಸ್ಸನ್ನು ಅರಿತಿದ್ದುದೇ, ಹಾಗಾಗಿಯೇ ದುರ್ಯೋಧನಾದಿಗಳಿಗೆ ಶಾಪವನ್ನು ಕೊಡಬಾರದು ಎಂದೇ ಭೀಮನ ಆಂತರ್ಯವನ್ನು ತಿಳಿದೇ ದುರ್ಯೋಧನಾದಿಗಳಿಗೆ ಶಾಪವನ್ನು ನೀಡಲಿಲ್ಲ.

**ತಸ್ಮಾದ್ ಯಥಾಯೋಗ್ಯತಯಾ ಹರಿಣಾ ಧರ್ಮವರ್ಧನಮ್ ।**
**ಕೃತಂ ತತ್ರಾಸನ್ನಿಧಾನಕಾರಣಂ ಕೇಶವೋಽಬ್ರವೀತ್ ॥ ೪೧ ॥**

**ಪದಚ್ಛೇದ :- ತಸ್ಮಾತ್, ಯಥಾಯೋಗ್ಯತೆಯಾ, ಹರಿಣಾ ಧರ್ಮವರ್ಧನಮ್, ಕೃತಂ ತತ್ರ, ಅಸನ್ನಿಧಾನಕಾರಣಂ, ಕೇಶವಃ, ಅಬ್ರವೀತ್ ॥**

**ಅರ್ಥ** :- **ತಸ್ಮಾತ್** = ಈ ಯಾವ ಕಾರಣದಿಂದ **ಹರಿಣಾ** = ಭಗವಂತನಿಂದ **ಯಥಾಯೋಗ್ಯತಯಾ** = ಅವರವರ ಯೋಗ್ಯತೆಗೆ ಅನುಗುಣವಾಗಿ **ಧರ್ಮವರ್ಧನಂ** = ಪುಣ್ಯದ ವೃದ್ಧಿಯು **ಕೃತಂ** = ಮಾಡಲ್ಪಟ್ಟಿತು. (ಏವಂ = ಹೀಗೆ) **ತತ್ರ** = ಆ ಪಾಂಡವರ ಬಳಿಯಲ್ಲಿನ **ಅಸನ್ನಿಧಾನ ಕಾರಣಂ** = ತಾನಿಲ್ಲದಿರುವಿಕೆಯ ಕುರಿತಾಗಿರುವ ಕಾರಣವನ್ನು **ಕೇಶವಃ** = ಶ್ರೀ ಕೃಷ್ಣನು **ಅಬ್ರವೀತ್** (ಮುಂದೆ ಹೇಳುವ ಹಾಗೆ ಹೇಳಿದನು.

**ತಾತ್ಪರ್ಯ** :- ಹೀಗೆ ಭಗವಂತನಾದ ಶ್ರೀಕೃಷ್ಣನು ಹಲವು ನಾಟಕಗಳ ಮೂಲಕ ಪಾಂಡವರಲ್ಲಿ ಅವರವರ ಯೋಗ್ಯತೆಗೆ ಅನುಗುಣವಾಗಿ ಪುಣ್ಯವೃದ್ಧಿಯನ್ನು ಮಾಡಿದನು. ಹೀಗೆ ಧರ್ಮರಾಜನು ಜೂಜಾಡುವ

ಕಾಲದಲ್ಲಿ ತಾನಿಲ್ಲದೇ ಇರುವಿಕೆಗೆ ಕಾರಣವನ್ನು ಮುಂದೆ ಹೇಳುವ ಹಾಗೆ ಹೇಳಿದನು.

**ಸಾಲ್ವಂ ಶ್ರುತ್ವಾ ಸಮಾಯಾತಂ ರೌಗ್ಮಿಣೇಯಾದಯೋ ಮಯಾ ।**
**ಪ್ರಸ್ಥಾಪಿತಾ ಹಿ ಭವತಾಂ ಸಕಾಶಾತ್ ತೇ ಯಯುಃ ಪುರೀಮ್ ।**
**ತದಾ ಸಾಲ್ವೋऽಪಿ ಸೌಭೇನ ದ್ವಾರಕಾಮರ್ದಯದ್ ಭೃಶಮ್ ॥ ೪೨ ॥**

ಪದಚ್ಛೇದ :- ಸಾಲ್ವಂ, ಶ್ರುತ್ವಾ, ಸಮಾಯಾಂತಂ, ರೌಕ್ಮಿಣೇಯಾದಯಃ, ಮಯಾ, ಪ್ರಸ್ಥಾಪಿತಾ, ಹಿ, ಭವತಾಂ, ಸಕಾಶೇ, ತೇ, ಯಯುಃ, ಪುರೀಮ್ । ತದಾ, ಸಾಲ್ವಃ, ಅಪಿ, ಸೌಭೇನ, ದ್ವಾರಕಾಂ, ಅರ್ದಯತ್, ಭೃಶಮ್ ॥

**ಅರ್ಥ** :- **ಭವತಾಂ** = ನಿಮ್ಮ **ಸಕಾಶೇ** = ಹತ್ತಿರದಲ್ಲಿರುವಾಗಲೇ **ಸಮಾಯಾಂತಂ** = ದ್ವಾರಕೆಯ ಮೇಲೆ ದಂಡೆತ್ತಿ ಬರುತ್ತಿರುವ **ಸಾಲ್ವಂ** = ಸಾಲ್ವನನ್ನು **ಶೃತ್ವಾ** = ಕೇಳಿ **ಮಯಾ** = ನನ್ನಿಂದ **ರೌಕ್ಮಿಣೇಯಾದಯಃ** = ಪ್ರದ್ಯುಮ್ನ ಮೊದಲಾದವರನ್ನು **ಪ್ರಸ್ಥಾಪಿತಾಹಿ** = ಕಳುಹಿಸಲ್ಪಟ್ಟಿತ್ತಷ್ಟೇ **ತೇ** = ಅವರುಗಳು **ಪುರೀಂ** = ದ್ವಾರಕೆಯನ್ನು ಕುರಿತು **ಯಯು** = ಬಂದರು. **ತದಾ** = ಆ ಸಂದರ್ಭದಲ್ಲಿ **ಸಾಲ್ವಃ ಅಪಿ** = ಸಾಲ್ವನಾದರೂ **ಸೌಭೇನ** = ಕಾಮಗಾಮಿಯಾದ (ಸಾಲ್ವನ ಇಚ್ಛೆಗೆ ಅನುಗುಣವಾಗಿ ಪ್ರಯಾಣಿಸುವ) ವಿಶೇಷವಾದ ವಿಮಾನದಿಂದ **ಭೃಶಂ** = ಬಹಳವಾಗಿ **ದ್ವಾರಕಾಂ** = ದ್ವಾರಕೆಯನ್ನು **ಅರ್ದಯತ್** = ಪೀಡಿಸಿದನು.

**ತಾತ್ಪರ್ಯ** :- ಕೃಷ್ಣನು ಪಾಂಡವರಿಗೆ ಹೇಳಿದ, ಹೇ ಪಾಂಡವರೇ ನಾನು ಬಳಿ ಇರುವಾಗಲೇ ಸಾಲ್ವ ದ್ವಾರಕೆಯ ಮೇಲೆ ದಂಡೆತ್ತಿ ಬರುತ್ತಿರುವ ಸುದ್ಧಿಯನ್ನು ಕೇಳಿದೆ. ಆ ಕೂಡಲೇ ನಾನು ಪ್ರದ್ಯುಮ್ನ ಮೊದಲಾದ ಯಾದವರನ್ನು ಸಾಲ್ವನನ್ನು ಎದುರಿಸುವ ಸಲುವಾಗಿ ಕಳುಹಿಸಿದೆ. ಪ್ರದ್ಯುಮ್ನಾದಿಗಳೂ ಹೋದರು. ಆದರೆ ಆ ಸಾಲ್ವನು ತನ್ನ ಇಚ್ಛಾನುಸಾರಿಯಾಗಿ ವರ್ತಿಸುವ ಬಂಗಾರದ ವಿಮಾನದಿಂದ ದ್ವಾರಕೆಯನ್ನು ಬಹಳವಾಗಿ ಪೀಡಿಸಿದ.

**ಪ್ರದ್ಯುಮ್ನ ಆತು ನಿರಗಾದಥ ಸರ್ವಸೈನ್ಯೈ-**
**ರನ್ಯೈಶ್ಚ ಯಾದವಗಣೈಃ ಸಹಿತೋऽನುಜೈಶ್ಚ ।**

**ಸಾಲ್ವೋऽವಗಮ್ಯ ತನಯಂ ಮಮ ತದ್ವಿಮಾನಾತ್**
**ಪಾಪೋऽವರುಹ್ಯ ರಥಮಾರುಹದತ್ರ ಯೋದ್ಧುಮ್ ॥ ೪೩ ॥**

**ಪದಚ್ಛೇದ :- ಪ್ರದ್ಯುಮ್ನಃ, ನಿರಗಾತ್, ಅಥ, ಸರ್ವ, ಸೈನ್ಯೈಃ, ಅನ್ಯೈಃ, ಚ, ಯಾದವಗಣ್ಯೈಃ, ಸಹಿತಃ, ಅನುಜೈಃ, ಚ, ಸಾಲ್ವಃ, ಅವಗಮ್ಯ, ತನಯಂ, ಮಮ, ತತ್, ವಿಮಾನಾತ್, ಪಾಪಃ, ಅವರುಹ್ಯ, ರಥಂ, ಆರುಹತ್, ಅತ್ರ, ಯೋದ್ಧುಮ್ ।**

**ಅರ್ಥ** :- **ಅಥ** = ಅನಂತರ, **ಸರ್ವಸೈನ್ಯೈಃ** = ಸಮಸ್ತ ಯಾದವ ಸೇನೆಯಿಂದಲೂ **ಚ** = ಮತ್ತು, **ಅನ್ಯೈಃ** = ಬೇರೆ **ಯಾದವಗಣ್ಯೈಃ** = ಯಾದವರ ಸಮೂಹದೊಂದಿಗೂ **ಚ** = ಮತ್ತು **ಅನುಜೈಃ** = ತನ್ನ ತಮ್ಮಂದಿರಿಂದ **ಸಹಿತಃ** = ಕೂಡಿದ **ಪ್ರದ್ಯುಮ್ನಃ** = ಪ್ರದ್ಯುಮ್ನನು **ಆಶು** = ಕೂಡಲೇ **ನಿರಗಾತ್** = (ದ್ವಾರಕೆಯ ರಕ್ಷಣೆಗೆ) ಹೋದನು. **ಪಾಪಃ** = ಪಾಪಿಷ್ಠನಾದ **ಸಾಲ್ವಃ** = ಸಾಲ್ವನು **ಮಮ** = ನನ್ನ **ತನಯಂ** = ಮಗನನ್ನು **ಅವಗಮ್ಯ** = ತಿಳಿದು **ತದ್ವಿಮಾನಾತ್** = ಆ ಯಾವ ತನ್ನ ವಿಮಾನದಿಂದ **ಅವರುಹ್ಯ** = ಇಳಿದು **ಅತ್ರ** = ಈ ಪ್ರದ್ಯುಮ್ನನೊಡನೆ **ಯೋದ್ಧುಂ** = ಯುದ್ಧ ಮಾಡಲು **ರಥಂ** = ರಥವನ್ನು **ಆರುಹತ್** = ಏರಿದನು.

**ತಾತ್ಪರ್ಯ** :- ಸಾಲ್ವನು ದ್ವಾರಕೆಯನ್ನು ಪೀಡಿಸ ಹೊರಟಾಗ ಆ ಕೂಡಲೇ ಪ್ರದ್ಯುಮ್ನನು ತನ್ನ ಸಮಸ್ತ ಸೈನ್ಯದೊಂದಿಗೆ ಹಾಗೂ ತನ್ನ ಯಾದವರ ಸಮೂಹದೊಂದಿಗೆ ಮತ್ತು ತನ್ನ ತಮ್ಮಂದಿರ ಒಡಗೂಡಿ ಸಾಲ್ವನನ್ನು ಎದುರಿಸಲು ನಿಂತ. ದುಷ್ಟನಾದ ಸಾಲ್ವನಾದರೂ ಪ್ರದ್ಯುಮ್ನನನ್ನು ನನ್ನ ಮಗನೆಂದು ತಿಳಿದು ವಿಮಾನದಿಂದ ಕೆಳಗಿಳಿದು ರಥವನ್ನೇರಿ ಯುದ್ಧ ಮಾಡಲು ಪ್ರಾರಂಭಿಸಿದ.

**ಕೃತ್ವಾ ಸುಯುದ್ಧಮಮುನಾ ಮಮ ಪುತ್ರಕೋऽಸಾ-**
**ವಸ್ತ್ರಾಣಿ ತಸ್ಯ ವಿನಿವಾರ್ಯ ಮಹಾಸ್ತ್ರಜಾಲೈಃ ।**
**ದತ್ತಂ ಮಯಾ ಶರಮಮೋಘಮಥಾऽದದೇ ತಂ**
**ಹಂತುಂ ನೃಪಂ ಕೃತಮತಿಸ್ತ್ವಶೃಣೋದ್ ವಚಃ ಖೇ ॥ ೪೪ ॥**

ಪದಚ್ಛೇದ :- ಕೃತ್ವಾ, ಸುಯುದ್ಧಂ, ಅಮುನಾ, ಮಮ, ಪುತ್ರಕಃ, ಅಸೌ, ಅಸ್ತ್ರಾಣಿ, ತಸ್ಯ, ವಿನಿವಾರ್ಯ, ಮಹಾಸ್ತ್ರಜಾಲೈಃ । ದತ್ತಂ, ಮಯಾ, ಶರಂ, ಅಮೋಘಂ, ಅಥ, ಆದದೇ, ತಂ, ಹಂತುಂ, ನೃಪಂ, ಕೃತಮತಿಃ, ತು, ಅಶೃಣೋತ್, ವಚಃ, ಖೇ ।

**ಅರ್ಥ** :- **ಅಸೌ** = ಈ ಯಾವ **ಮಮ** = ನನ್ನ **ಪುತ್ರಕಃ** = ಮಗನಾದ ಪ್ರದ್ಯುಮ್ನನು **ಅಮುನಾ** = ಈ ಸಾಲ್ವನೊಡನೆ **ಸುಯುದ್ಧಂ** = ಬಹಳ ಕಾಲದ ಯುದ್ಧವನ್ನು **ಕೃತ್ವಾ** = ಮಾಡಿ **ತಸ್ಯ** = ಆ ಸಾಲ್ವನ **ಅಸ್ತ್ರಾಣಿ** = ಅಸ್ತ್ರಗಳನ್ನು, **ಮಹಾಸ್ತ್ರಜಾಲೈಃ** = ತನ್ನ ಅಮೋಘವಾದ ಅಸ್ತ್ರಸಮುದಾಯದಿಂದ, **ವಿನಿವಾರ್ಯ** = ನಿವಾರಿಸಿ **ತಂ ನೃಪಂ** = ಆ ಯಾವ ಸಾಲ್ವನನ್ನು **ಹಂತುಂ** = ಕೊಲ್ಲಲು **ಕೃತಮತಿಃ** = ಮನಸು ಮಾಡಿದವನಾಗಿ **ಮಯಾ** = ನನ್ನಿಂದ **ದತ್ತಂ** = ಕೊಡಲ್ಪಟ್ಟ **ಅಮೋಘಂ** = ಅಮೋಘವಾದ (ಸಹಿಸಲಸಾಧ್ಯವಾದ) **ಶರಂ** = ಬಾಣವನ್ನು **ಆದದೇ** = ತೆಗೆದುಕೊಂಡನು. **ಅಥ** = ಆ ಸಂದರ್ಭದಲ್ಲಿಯೇ **ಖೇ** = ಆಕಾಶದಲ್ಲಿ **ವಚಃ** = ಮಾತನ್ನು (ಆಕಾಶವಾಣಿಯನ್ನು) **ಅಶೃಣೋತ್** = ಕೇಳಿದನು.

**ತಾತ್ಪರ್ಯ** :- ಕೃಷ್ಣನಿಂದ ಕಳುಹಿಸಲ್ಪಟ್ಟ ಆ ಪ್ರದ್ಯುಮ್ನನು ಸಾಲ್ವನೊಡನೆ ಬಹಳ ಕಾಲ ಘೋರವಾದ ಯುದ್ಧವನ್ನು ಮಾಡಿದನು. ಆನಂತರ ಪ್ರದ್ಯುಮ್ನನು ಸಾಲ್ವನ ಅಮೋಘವಾದ ಅಸ್ತ್ರಗಳನ್ನು ತನ್ನ ಮಹಾಸ್ತ್ರ ಸಮುದಾಯದಿಂದ ಕತ್ತರಿಸಿ ಸಾಲ್ವನನ್ನು ಕೊಲ್ಲಲು ಮನಸ್ಸು ಮಾಡಿದ. ಆ ಸಂದರ್ಭದಲ್ಲಿ ಶ್ರೀಕೃಷ್ಣನು ನೀಡಿದ ಅಮೋಘವಾದ ಅಸ್ತ್ರವನ್ನು ಹಿಡಿದು ಕೊಲ್ಲಲು ಹೊರಟ. ಆ ಸಂದರ್ಭದಲ್ಲಿ ಆಕಾಶವಾಣಿಯೊಂದು ಕೇಳಿಸಿತು.

**ನಾರಾಯಣೇನ ಹಿ ಪುರಾ ಮನಸಾऽಭಿಕ್ಲೃಪ್ತಂ**
**ಕೃಷ್ಣಾವತಾರಮುಪಗಮ್ಯ ನಿಹನ್ಮಿ ಸಾಲ್ವಮ್ ।**
**ಇತ್ಯೇವ ತೇನ ಹರಿಣಾऽಪಿ ಸ ಭಾರ್ಗವೇಣ**
**ವಿದ್ರಾವಿತೋ ನ ನಿಹತಃ ಸ್ವಮನೋನುಸಾರಾತ್ ॥ ೪೫ ॥**

ಪದಚ್ಛೇದ :- ನಾರಾಯಣೇನ, ಹಿ, ಪುರಾ, ಮನಸಾ, ಅಭಿಕ್ಲೃಪ್ತಂ, ಕೃಷ್ಣಾವತಾರಂ, ಉಪಗಮ್ಯ, ನಿಹನ್ಮಿ, ಸಾಲ್ವಂ । ಇತಿ, ಏವ, ತೇನ, ಹರಿಣಾ, ಅಪಿ, ಸಃ, ಭಾರ್ಗವೇಣ, ವಿದ್ರಾವಿತಃ, ನ, ನಿಹತಃ, ಸ್ವಮನೋನುಸಾರಾತ್ ॥

**ಅರ್ಥ** :- **ನಾರಾಯಣೇನ** = ಭಗವಂತನಿಂದ **ಕೃಷ್ಣಾವತಾರಂ** = ಕೃಷ್ಣಾವತಾರವನ್ನು **ಉಪಗಮ್ಯ** = ಹೊಂದಿ **ಸಾಲ್ವಂ** = ಸಾಲ್ವನನ್ನು **ನಿಹನ್ಮಿ** = ಕೊಲ್ಲುತ್ತೇನೆ, **ಇತಿ** = ಹೀಗೆಂದು **ಪುರಾಃ** = ಈ ಹಿಂದೆಯೇ **ಮನಸಾ** =

ಮನಸ್ಸಿನಿಂದ **ಅಭಿಕ್ಲ್ಯಪ್ತಂ ಹಿ** = ನಿಶ್ಚಯಿಸಿದೆಯಷ್ಟೇ, **ಇತ್ಯೇವ** = ಈ ಕಾರಣದಿಂದಲೇ **ಸ್ವ ಮನೋನುಸಾರಾತ್** = ತನ್ನ ಸಂಕಲ್ಪಕ್ಕೆ ಅನುಗುಣವಾಗಿ **ಹರಿಣಾ** = ಹರಿಯ ಅವತಾರ ರೂಪನಾದ **ಭಾರ್ಗವೇಣ** = ಪರಶುರಾಮನಿಂದ **ಸಃ** = ಆ ಸಾಲ್ವನು **ವಿದ್ರಾವಿತಃ** = ಓಡಿಸಲ್ಪಟ್ಟನು, **ನ ನಿಹತಃ** = ಕೊಲ್ಲಲ್ಪಡಲಿಲ್ಲ.

**ತಾತ್ಪರ್ಯ** :- ಭಗವಂತನು ಸಾಲ್ವನನ್ನು ಕೃಷ್ಣಾವತಾರ ಮಾಡಿದ ಸಂದರ್ಭದಲ್ಲಿ ಕೊಲ್ಲುವೆನು ಎಂದು ನಿಶ್ಚಯ ಮಾಡಿದ್ದಾನೆ. ಆ ಕಾರಣದಿಂದಲೇ ಪರಶುರಾಮನಾಗಿ ಅವತಾರ ಮಾಡಿದ ಸಂದರ್ಭದಲ್ಲಿ ಸಾಲ್ವನನ್ನು ಕೊಲ್ಲುವ ಅವಕಾಶ ಬಂದಾಗಲೂ ಅವನನ್ನು ಕೊಲ್ಲದೇ ಓಡಿಸಿರುವನಷ್ಟೇ. ಆದ್ದರಿಂದ ಭಗವಂತನ ಸಂಕಲ್ಪವನ್ನು ತಿಳಿದುಕೋ. ಎಂದು ಅಶರೀರ ವಾಣಿಯು ಪ್ರದ್ಯುಮ್ನನನ್ನು ಎಚ್ಚರಿಸಿತು.

**ವಧ್ಯಸ್ತ್ವಯಾ ನಹಿ ತತೋಽಯಮಯಂ ಚ ಬಾಣ-**
**ಶ್ಚಕ್ರಾಯುಧಸ್ಯ ದಯಿತೋ ನಿತರಾಮಮೋಘಃ ।**
**ಮಾ ಮುಂಚ ತೇನ ತಮಿಮಂ ವಿನಿವರ್ತಯೇಽಹಂ**
**ಸಾಲ್ವಂ ಹೃದಿ ಸ್ಥಿತ ಇತೀರಿತಮೀರಣೇನ ॥ ೪೬ ॥**

**ಪದಚ್ಛೇದ** :- ವಧ್ಯಃ, ತ್ವಯಾ, ನ, ಹಿ, ತತಃ, ಅಯಂ, ಅಯಂ, ಚ, ಬಾಣಃ, ಚಕ್ರಾಯುಧಸ್ಯ, ದಯಿತಃ, ನಿತರಾಂ, ಅಮೋಘಃ । ಮಾ, ಮುಂಚ, ತೇನ, ತಮ್, ಇಮಂ, ವಿನಿವರ್ತಯೇ, ಅಹಂ, ಸಾಲ್ವಂ, ಹೃದಿ, ಸ್ಥಿತಃ, ಇತಿ, ಈರಿತಂ, ಈರಣೇನ ।

**ಅರ್ಥ** :- **ತತಃ** = ಆದ್ದರಿಂದ, **ಅಯಂ** = ಈ ಸಾಲ್ವನು **ತ್ವಯಾ** = ನಿನ್ನಿಂದ, **ನ ಹಿ ವಧ್ಯಃ** = ಕೊಲ್ಲಲು ಯೋಗ್ಯನಾದವನಲ್ಲ, **ಚ** = ಮತ್ತು **ಚಕ್ರಾಯುಧಸ್ಯ** = ಸುದರ್ಶನ ಚಕ್ರದ **ದಯಿತಃ** = ಸಹೋದರನಾದ **ನಿತರಾಂ** = ಬಹಳವಾಗಿ **ಅಮೋಘಃ** = ಪರಾಕ್ರಮಶಾಲಿಯಾದ **ಅಯಂ ಚ ಬಾಣಃ** = ಈ ಬಾಣವಾದರೂ **ಮಾ ಮುಂಚ** = ಪ್ರಯೋಗಿಸಬೇಡ **ತೇನ** = ಈ ಎಲ್ಲಾ ಕಾರಣಗಳಿಂದಲೂ **ಅಹಂ** = ನಾನು **ತಮಿಮಂ** = ಈ ಯಾವ **ಸಾಲ್ವಂ** = ಸಾಲ್ವನನ್ನು, **ಹೃದಿ ಸ್ಥಿತಃ** = ಮನಸಿನಲ್ಲಿ ಪ್ರೇರೇಪಿಸುವವನಾಗಿ **ವಿನಿವರ್ತಯೇ** = ಹಿಂದೆ ಕಳುಹಿಸುವೆನು **ಇತಿ** = ಹೀಗೆಂದು **ಈರಣೇನ** = ವಾಯುವಿನಿಂದ **ಈರಿತಂ** = ಹೇಳಲ್ಪಟ್ಟಿತ್ತು.

**ತಾತ್ಪರ್ಯ** :- ಸಾಲ್ವನ ಜೊತೆ ಕಾದಾಡುತ್ತಿರುವ ಪ್ರದ್ಯುಮ್ನನಿಗೆ ಆಕಾಶವಾಣಿ ಎಚ್ಚರಿಸಿತು. ಹೇ ಪ್ರದ್ಯುಮ್ನ ಈ ಸಾಲ್ವನು ಕೃಷ್ಣನಿಂದ ಹತನಾಗಬೇಕಾದವನು. ಹೊರತು ನಿನ್ನಿಂದಲ್ಲ. ಆದ್ದರಿಂದ ಸುದರ್ಶನ ಚಕ್ರಕ್ಕೆ ಸಮಾನವಾದ ಅಮೋಘವಾದ ಈ ಬಾಣವನ್ನು ಅವನ ಮೇಲೆ ಪ್ರಯೋಗಿಸಬೇಡ. ನಾನೇ ಅವನ ಹೃದಯದಲ್ಲಿ ನಿಂತು ಅವನು ಹಿಂದಿರುಗುವಂತೆ ಪ್ರೇರೇಪಿಸುವೆನು ಎಂದು.

**ಶ್ರುತ್ವಾ ವಚಃ ಸ ಪವನಸ್ಯ ಶರಂ ತ್ವಮೋಘಂ**
**ಸಂಜಹ್ರೇ ಆಶು ಸ ಚ ಸಾಲ್ವಪತಿಃ ಸ್ವಸೌಭಮ್ ।**
**ಆರುಹ್ಯ ಬಾಲಕಲಹೇನ ಕಿಮತ್ರ ಕಾರ್ಯಂ**
**ಕೃಷ್ಣೇನ ಸಂಗರ ಇತಿ ಪ್ರಯಯೌ ಸ್ವದೇಶಮ್ ॥ ೪೭ ॥**

**ಪದಚ್ಛೇದ** :- ಶುತ್ವಾ ವಚಃ ಸಃ ಪವನಸ್ಯ ಶರಂ ತು ಅಮೋಘಂ ಸುಜಹ್ರೇ ಆಶು ಸಃ ಚ ಸಾಲ್ವಪತಿಃ ಸ್ವಸೌಭಂ । ಆರುಹ್ಯ ಬಾಲಕಲಹೇನ ಕಿಮ್ ಅತ್ರ ಕಾರ್ಯಂ ಕೃಷ್ಣೇನ ಸಂಗರಃ ಇತಿ ಪ್ರಯಯೌ ಸ್ವದೇಶಮ್ ॥

**ಅರ್ಥ** :- **ಸಃ** = ಆ ಪ್ರದ್ಯುಮ್ನನಾದರೂ **ಪವನಸ್ಯ** = ವಾಯುದೇವರ **ವಚಃ** = ಮಾತನ್ನು **ಶೃತ್ವಾ** = ಕೇಳಿ **ಅಮೋಘಂ** = ಎದುರಿನಲ್ಲಿದ್ದ **ಶರಂ** = ಕೃಷ್ಣ ನೀಡಿದ ಬಾಣವನ್ನು **ಆಶು** = ಕೂಡಲೇ **ಸಂಜಹ್ರೇ** = ಬತ್ತಳಿಕೆಯಲ್ಲಿರಿಸಿದನು, (ನಿವಾರಿಸಿದನು) **ಸ ಚ ಸಾಲ್ವಪತಿಸ್ತು** = ಆ ಸಾಲ್ವನಾದರೂ **ಬಾಲಕಲಹೇನ** = ಈ ಬಾಲಕನೊಡನೆ ಯುದ್ಧ ಮಾಡುವುದ ರಿಂದ **ಕಿಮತ್ರ ಕಾರ್ಯಂ** = ಮಾಡಬೇಕಾದ್ದೇನಿದೆ (ಏನು ಪ್ರಯೋಜನ) **ಕೃಷ್ಣೇನ** = ಕೃಷ್ಣನೊಡನೆ **ಸಂಗರೇ** = ಯುದ್ಧ ಮಾಡುವೆ **ಇತಿ** = ಹೀಗೆಂದು **ಸ್ವ ಸೌಭಂ** = ತನ್ನ ವಿಮಾನವನ್ನು **ಆರುಹ್ಯ** = ಏರಿ **ಸ್ವದೇಶಂ** = ತನ್ನ ದೇಶವನ್ನು ಕುರಿತು **ಪ್ರಯಯೌ** = ಹೊರಟನು.

**ತಾತ್ಪರ್ಯ** :- ಆಕಾಶವಾಣಿಯಲ್ಲಿನ ಮಾತನ್ನು ಕೇಳಿದ ಪ್ರದ್ಯುಮ್ನನು ಅಮೋಘವಾದ ಆ ಬಾಣವನ್ನು ಕೂಡಲೇ ನಿವಾರಿಸಿಕೊಂಡ. ಆ ಸಾಲ್ವನಾದರೂ ವಾಯುವಿನಿಂದ ಪ್ರೇರಿತನಾಗಿ ಈ ಬಾಲಕನೊಡನೆ ಯುದ್ಧ ನನಗೇನು? ನಾನು ಕೃಷ್ಣನೊಡನೆಯೇ ಹೋರಾಡುವೆ ಎಂದು ಚಿಂತಿಸಿ ಕೂಡಲೇ ತನ್ನ ವಿಮಾನವನ್ನು ಏರಿ ತನ್ನ ದೇಶಕ್ಕೆ ಹಿಂತಿರುಗಿದ.

ಪ್ರದ್ಯುಮ್ನಸಾಂಬಗದಸಾರಣಚಾರುದೇಷ್ಣಾಃ
ಸೇನಾಂ ನಿಹತ್ಯ ಸಹ ಮಂತ್ರಿಗಣೈಸ್ತದೀಯಾಮ್ ।
ಆಹ್ಲಾದಿನಃ ಸ್ವಪುರಮಾಯಯುರಪ್ಯಹಂ ಚ
ತತ್ರಾಗಮಂ ಸಪದಿ ತೈಃ ಶ್ರುತವಾನಶೇಷಮ್ ॥ ೪೮ ॥

ಪದಚ್ಛೇದ :- ಪ್ರದ್ಯುಮ್ನ ಸಾಂಬ ಗದ ಸಾರಣಚಾರುದೇಷ್ಣಾಃ ಸೇನಾಂ ನಿಹತ್ಯ ಸಹ ಮಂತ್ರಿಗಣೈಃ ತದೀಯಾಂ ಆಹ್ಲಾದಿನಃ ಸ್ವಪುರಂ ಆಯಯುಃ ಅಪಿ ಅಹಂ ಚ ತತ್ರ ಅಗಮಂ ಸಪದಿ ತೈಃ ಶ್ರುತವಾನ್ ಅಶೇಷಮ್ ॥

ಅರ್ಥ :- ಪ್ರದ್ಯುಮ್ನಸಾಂಬಗಧಸಾರಣಚಾರುದೇಷ್ಣಾಃ = ಪ್ರದ್ಯುಮ್ನನು ಸಾಂಬ ಗದ ಸಾರಣ ಚಾರುದೇಷ್ಣರು ಇವರುಗಳು ಮಂತ್ರಿಗಣೈ ಸಹ = ಮಂತ್ರಿಗಳ ಸಮೂಹದೊಂದಿಗೆ ತದೀಯಾಂ = ಆ ಸಾಲ್ವನ ಸೇನಾಂ = ಸೈನ್ಯವನ್ನು ನಿಹತ್ಯ = ಕೊಂದು ಆಹ್ಲಾದಿನಃ = ಸಂತೋಷ ಪಡುವವರಾಗಿ ಸ್ವಪುರಂ = ತಮ್ಮ ಪಟ್ಟಣವಾದ ದ್ವಾರಕೆಯನ್ನು ಕುರಿತು ಆಯಯುಃ = ಬಂದರು ಅಹಂ ಚ = ನಾನಾದರೂ ಸಪದಿ = ಆ ಕೂಡಲೇ ತತ್ರ = ದ್ವಾರಕೆಗೆ ಅಗಮಂ = ಬಂದೆನು ತ್ವಂ = ಆ ವೀರರುಗಳಿಂದ ಆಶೇಷಂ = ಎಲ್ಲಾ ಸಮಾಚಾರವನ್ನು ಶ್ರುತವಾನ್ = ಕೇಳಿದೆನು.

ತಾತ್ಪರ್ಯ :- ಪ್ರದ್ಯುಮ್ನ ಮೊದಲಾದ ವೀರರುಗಳು ತಮ್ಮ ಮಂತ್ರಿಗಳ ಸಮೂಹದೊಂದಿಗೆ ಆ ಸಾಲ್ವನ ಸೈನ್ಯವನ್ನು ನಾಶ ಮಾಡಿದ ಬಹಳ ಸಂತುಷ್ಟರಾಗಿ ದ್ವಾರಕೆಗೆ ಬಂದರು. ಅದೇ ಹೊತ್ತಿಗೆ ನಾನು ದ್ವಾರಕೆಗೆ ಬಂದೆ. ಬಂದ ನಂತರ ಪ್ರದ್ಯುಮ್ನ ಮೊದಲಾದ ಎಲ್ಲ ವೀರರು ನಡೆದ ಸಂಗತಿಯನ್ನೆಲ್ಲಾ ವಿವರವಾಗಿ ತಿಳಿಸಿದರು.

ಯಸ್ಮಿನ್ ಶರೇ ಕರಗತೇ ವಿಜಯೋ ಧ್ರುವಃ ಸ್ಯಾ-
ನ್ಮತ್ತೇಜಸಾ ತದನು ಸಂಗ್ರಹಣಾತ್ ಸುತಾನ್ಮೇ ।
ಯಾತಂ ನಿಶಮ್ಯ ರಿಪುಮಾತ್ಮಪುರೀಂ ಚ ಭಗ್ನಾಂ
ದೃಷ್ಟ್ವೈವ ತೇನ ತದನುವ್ರಜನಂ ಕೃತಂ ಮೇ ॥ ೪೯ ॥

ಪದಚ್ಛೇದ :- ಯಸ್ಮಿನ್, ಶರೇ, ಕರಗತೇ, ವಿಜಯಃ, ಧ್ರುವಃ, ಸ್ಯಾತ್, ಮತ್ತೇಜಸಾ, ತದನು, ಸಂಗ್ರಹಣಾತ್, ಸುತಾತ್, ಮೇ, ಯಾತಂ, ನಿಶಮ್ಯ, ರಿಪುಂ, ಆತ್ಮಪುರೀಂ, ಚ, ಭಗ್ನಾಂ, ದೃಷ್ಟ್ವಾ , ಏವ, ತೇನ, ತದನುವ್ರಜನಂ, ಕೃತಂ, ಮೇ ॥

**ಅರ್ಥ** :- **ಯಸ್ಮಿನ್** = ಯಾವ **ಶರೇ** = ಬಾಣವು **ಕರಗತೇ** = ಕೈಯಲ್ಲಿ ಹಿಡಿದ ಹಾಗೆ **ವಿಜಯಃ** = ಜಯವು **ಧ್ರುವಃ** = ನಿಶ್ಚಯವಾಗಿಯೂ, **ಸ್ಯಾತ್** = ಆಗುವುದೋ ಅಂತಹ **ಮತ್ತೇಜಸಾ** = ನನ್ನ ತೇಜಸ್ಸಿನಿಂದ ಕೂಡಿದ ತದನು **ಸಂಗ್ರಹಣಾತ್** = ಆ ಯಾವ ಬಾಣವನ್ನು ಹಿಡಿದಿರುವ, **ಮೇ** = ನನ್ನ, **ಸುತಾತ್** = ಮಗನಾದ ಪ್ರದ್ಯುಮ್ನನಿಂದ, **ಯಾತಂ** = ತಪ್ಪಿಸಿಕೊಂಡು ಹೊರಟ, **ರಿಪುಂ** = ಶತ್ರುವಾದ ಸಾಲ್ವನನ್ನು (ವಾರ್ತೆಯನ್ನು) **ನಿಶಮ್ಯ** = ಕೇಳಿ, **ಚ** = ಮತ್ತು **ಭಗ್ನಾಂ** = ನಾಶಗೊಳಿಸಲ್ಪಟ್ಟ **ಆತ್ಮಪುರೀಂ** = ತನ್ನ ಪಟ್ಟಣವಾದ ದ್ವಾರಕೆಯನ್ನು **ದೃಷ್ಟ್ವೈವ** = ನೋಡಿಯೇ, **ತೇನ** = ಆ ಸಾಲ್ವನೊಡನೆ, **ಮೇ** = ನನ್ನಿಂದ, ತದನು **ವ್ರಜನಂ** = ಅವನ ಅನುಸರಿಸುವಿಕೆಯು, **ಕೃತಂ** = ಮಾಡಲ್ಪಟ್ಟಿತು.

**ತಾತ್ಪರ್ಯ** :- ಯಾವ ಬಾಣವನ್ನು ಕೈಯಲ್ಲಿ ಹಿಡಿದರೆ ಜಯವು ನಿಶ್ಚಿತವೋ ಅಂತಹ ನನ್ನ ತೇಜಸ್ಸಿನಿಂದ ವೃಷ್ಟಿಸಿಕೊಂಡ ಪರಾಕ್ರಮವುಳ್ಳ ಆ ಯಾವ ಬಾಣವನ್ನು ಕೈಯಲ್ಲಿ ಹಿಡಿದ ಪ್ರದ್ಯುಮ್ನನನ್ನು ಕಂಡು ದ್ವಾರಕೆಯನ್ನು ನಾಶ ಮಾಡಿ ಓಡಿ ಹೋದ ಸಾಲ್ವನನ್ನು ಬಗ್ಗುಬಡಿಯಲೆಂದು ನಾನು ಅವನ ಬೆನ್ನು ಹತ್ತಿ ಹೋದೆ.

**ತಂ ಸಾಗರೋಪರಿಗಸೌಭಗತಂ ನಿಶಾಮ್ಯ**
**ಮುಕ್ತೇ ಚ ತೇನ ಮಯಿ ಶಸ್ತ್ರಮಹಾಸ್ತ್ರವರ್ಷೇ ।**
**ತಂ ಸನ್ನಿವಾರ್ಯ ತು ಮಯಾ ಶರಪೂಗವಿದ್ಧೋ**
**ಮಾಯಾ ಯುಯೋಜ ಮಯಿ ಪಾಪತಮಃ ಸ ಸಾಲ್ವಃ ॥ ೫೦ ॥**

**ಪದಚ್ಛೇದ** :– ತಂ, ಸಾಗರೋಪರಿಗಃ, ಸೌಭಗತಂ, ನಿಶಾಮ್ಯ, ಮುಕ್ತೇ, ಚ, ತೇನ, ಮಯಿ, ಶಸ್ತ್ರಮಹಾಸ್ತ್ರವರ್ಷೇ । ತಂ, ಸನ್ನಿವಾರ್ಯ, ಚ, ಮಯಾ. ಶರಪೂಗವಿದ್ಧಃ, ಮಾಯಾ, ಯುಯೋಜ, ಮಯಿ, ಪಾಪತಮಃ, ಸಃ, ಸಾಲ್ವಃ ।।

**ಅರ್ಥ** :- **ಸಾಗರೋಪರಿಗಃ** = ಸಮುದ್ರ ಮೇಲೆ, **ಸೌಭಗತಂ** = ವಿಮಾನದಲ್ಲಿ ಇರುವವನಾದ, **ತಂ** = ಆ ಸಾಲ್ವನನ್ನು **ನಿಶಮ್ಯ** = ಕೇಳಿ (ಅವನನ್ನು ಹಿಂಬಾಲಿಸಿದೆ) **ತೇನ** = ಅವನಿಂದ **ಮಯಿ** = ನನ್ನಲ್ಲಿ **ಮುಕ್ತೇ** = ಬಿಡಲ್ಪಟ್ಟ **ಶಸ್ತ್ರಮಹಾಸ್ತ್ರವರ್ಷೇ** = ಅಸ್ತ್ರಶಸ್ತ್ರಗಳ ಮಳೆಗರೆದ **ತಂ** =

ಅವನನ್ನು, ಸನ್ನಿವಾರ್ಯ = ತಡೆದು (ನಿವಾರಿಸಿ) **ಮಯಾ** = ನನ್ನಿಂದ ಶರಪೂಗವಿದ್ಧ ಬಾಣಗಳ ಮಳೆಗೆರೆಯುವಿಕೆಯಿಂದ ತಡೆಯಲ್ಪಟ್ಟವನಾಗಿ, **ಪಾಪತಮಃ** = ಅತ್ಯಂತ ಪಾಪಿಷ್ಟನಾದ **ಸಸಾಲ್ವಃ** = ಆ ಸಾಲ್ವನು **ಮಯಿ** = ನನ್ನಲ್ಲಿ **ಮಾಯಾ** = ಮಾಯಾವಿದ್ಯೆಯನ್ನು **ಯುಯೋಜ** = ಪ್ರಯೋಗಿಸಿದನು.

**ತಾತ್ಪರ್ಯ** :- ದ್ವಾರಕೆಯ ಸಮುದ್ರ ಮೇಲೆ ತನ್ನ ವಿಮಾನದ ಮೂಲಕ ಸಂಚಾರ ಮಾಡುತ್ತಿರುವ ಆ ಸಾಲ್ವನ ಬಗ್ಗೆ ತಿಳಿದು ಅವನನ್ನು ನಾನು ಎದುರಿಸಲು ಹೊರಟೆ. ಆದರೆ ಅವನು ಬಹಳಷ್ಟು ಪ್ರತಿರೋಧ ತೋರಿದ ಅವನ ಪ್ರತಿರೋಧವನ್ನು ಲೆಕ್ಕಿಸದೆ ಅವನ ಅಸ್ತ್ರಶಸ್ತ್ರಗಳನ್ನು ಪುಡಿಗಟ್ಟಿ ಅವನನ್ನು ನನ್ನ ಬಾಣಗಳಿಂದ ದಿಙ್ಮೂಢನನ್ನಾಗಿ ಮಾಡಿದೆ. ಆದರೆ ಪಾಪಿಯಾದ ಅವನು ನನ್ನಲ್ಲಿ ಮಾಯಾ ವಿದ್ಯೆಯನ್ನು ಪ್ರದರ್ಶಿಸಿ ಆ ಮೂಲಕ ಯುದ್ಧ ಮಾಡಲು ಬಯಸಿದ.

**ತಾಃ ಕ್ರೀಡಯಾ ಕ್ಷಣಮಹಂ ಸಮರೇ ನಿಶಾಮ್ಯ**
**ಜ್ಞಾನಾಸ್ತ್ರತಃ ಪ್ರತಿವಿಧೂಯ ಬಹೂಂಶ್ಚ ದೈತ್ಯಾನ್ ।**
**ಹತ್ವಾऽऽಶು ತಂ ಚ ಗಿರಿವರ್ಷಿಣಮಾಶು ಸೌಭಂ**
**ವಾರ್ಧೌ ನ್ಯಪಾತಯಮರೀಂದ್ರವಿಭಿನ್ನಬಂಧಮ್ ॥ ೫೧ ॥**

ಪದಚ್ಛೇದ :- ತಾಃ, ಕ್ರೀಡಯಾ, ಕ್ಷಣಂ, ಅಹಂ, ಸಮರೇ, ನಿಶಾಮ್ಯ, ಜ್ಞಾನಾಸ್ತ್ರತಃ, ಪ್ರತಿವಿಧೂಯ, ಬಹೂನ್, ಚ ದೈತ್ಯಾನ್ । ಹತ್ವಾ, ಆಶು, ತಂ, ಚ, ಗಿರಿವರ್ಷಿಣಂ, ಆಶು, ಸೌಭಂ, ವಾರ್ಧೌ, ನ್ಯಪಾತಯಂ, ಅರೀಂದ್ರ, ವಿಭಿನ್ನ, ಬಂಧಮ್ ॥

**ಅರ್ಥ** :- **ಅಹಂ ಚ** = ನಾನಾದರೂ **ಸಮರೇ** = ಆ ಮಾಯಾ ಯುದ್ಧದಲ್ಲಿ **ಕ್ಷಣಂ** = ಸ್ವಲ್ಪ ಕಾಲ **ಕ್ರೀಡಯಾ** = ಲೀಲೆಯಿಂದ, **ನಿಶಾಮ್ಯ** = ಪ್ರತಿರೋಧಿಸದೇ ಇರುವವನಾಗಿ **ತಾಃ** = ಮಾಯಾಸ್ತ್ರಗಳನ್ನು **ಜ್ಞಾನಾಸ್ತ್ರತಃ** = ವಿಜ್ಞಾನಾಸ್ತ್ರದಿಂದ **ಪ್ರತಿವಿಧೂಯ** = ನಾಶ ಮಾಡಿ **ಬಹೂನ್** = ಬಹಳ **ದೈತ್ಯಾನ್** = ದೈತ್ಯರುಗಳನ್ನು **ಆಶು** = ಕೂಡಲೇ **ಹತ್ವಾ** = ನಾಶಮಾಡಿ **ಚ** = ಮತ್ತು **ಆಶು** = ಕೂಡಲೇ **ಅರೀಂದ್ರ ವಿಭಿನ್ನಬಂಧಂ** = ಚಕ್ರದಿಂದ ತುಂಡಾದ **ಸೌಭಂ** = ಆ ವಿಮಾನವನ್ನು **ಚ** = ಮತ್ತು **ಗಿರಿವರ್ಷಿಣಂ** = ಬೆಟ್ಟಗಳ

ಮಳೆಗೆರೆಯುತ್ತಿರುವ **ತಂ** = ಆ ಯಾವ ಸಾಲ್ವನನ್ನು **ವಾರ್ಧೌ** = ಆ ಸಮುದ್ರದಲ್ಲಿ **ನ್ಯಪಾತಯಂ** = ಬೀಳಿಸಿದೆನು.

**ತಾತ್ಪರ್ಯ** :- ಆ ಸಾಲ್ವನು ಮಾಯಾ ವಿದ್ಯೆಯಿಂದ ನನ್ನನ್ನು ಮೋಹಗೊಳಿಸ ಹೊರಟ. ಆ ಸಂದರ್ಭದಲ್ಲಿ ನಾನು ಮಾನವ ಸಹಜ ಸ್ವಭಾವಕ್ಕೆ ಅನುಗುಣವಾಗಿ ಸ್ವಲ್ಪ ಕಾಲ ಯಾವ ಪ್ರತಿರೋಧವನ್ನು ಒಡ್ಡದೇ ಮೋಹವನ್ನು ತೋರ್ಪಡಿಸಿದೆ. ಆನಂತರ ವಿಜ್ಞಾನಾಸ್ತ್ರದಿಂದ ಅವನ ಮಾಯೆಯನ್ನೆಲ್ಲಾ ಪರಿಹರಿಸಿ ಅವನ ಜೊತೆಗಿನ ದೈತ್ಯರುಗಳನ್ನು ಕೊಂದೆ. ತತ್‌ಕ್ಷಣವೇ ನನ್ನ ಸುದರ್ಶನ ಚಕ್ರದಿಂದ ಅವನ ವಿಮಾನವನ್ನು ಎರಡನ್ನಾಗಿ ತರಿದು ಅವನ ಸಮೇತ ಸಮುದ್ರದಲ್ಲಿ ಬಿಸಾಡಿದೆ.

**ತಂ ಸ್ಯಂದನಸ್ಥಿತಮಥೋ ವಿಭುಜಂ ವಿಧಾಯ**
**ಬಾಣೇನ ತದ್ರಥವರಂ ಗದಯಾ ವಿಭಿದ್ಯ ।**
**ಚಕ್ರೇಣ ತಸ್ಯ ಚ ಶಿರೋ ವಿನಿಕೃತ್ಯ ಧಾತೃ-**
**ಶರ್ವಾದಿಭಿಃ ಪ್ರತಿನುತಃ ಸ್ವಪುರೀಮಗಾಂ ಚ ॥ ೫೨ ॥**

**ಪದಚ್ಛೇದ** :– ತಂ, ಸ್ಯಂದನಸ್ಥಿತಂ, ಅಥೋ, ವಿಭುಜಂ, ವಿಧಾಯ, ಬಾಣೇನ, ತತ್, ರಥವರಂ, ಗದಯಾ, ವಿಭಿದ್ಯ । ಚಕ್ರೇಣ, ತಸ್ಯ, ಚ, ಶಿರಃ, ವಿನಿಕೃತ್ಯ, ಧಾತೃಶರ್ವಾವಿಭಿಃ, ಪ್ರತಿನುತಃ, ಸ್ವಪುರೀಂ, ಅಗಾಂ, ಚ ॥

**ಅರ್ಥ** :- **ಅಥ** = ಅನಂತರ **ಸ್ಯಂದನೇ ಸ್ಥಿತಂ** = ರಥವೇರಿರುವ **ತಂ** = ಆ ಸಾಲ್ವನನ್ನು **ಬಾಣೇನ** = ಬಾಣದಿಂದ **ವಿಭುಜಂ** = ಭುಜರಹಿತನನ್ನಾಗಿ **ವಿದಾಯ** = ಮಾಡಿ **ತದ್ರಥವರಂ** = ಅಭೇದ್ಯವಾದ ಶ್ರೇಷ್ಠರಥವನ್ನು **ಗದಯಾ** = ಗದೆಯಿಂದ **ವಿಭಿಧ್ಯ** = ಮುರಿದು **ಚ** = ಮತ್ತು **ತಸ್ಯ** = ಆ ಯಾವ ಸಾಲ್ವನ **ಶಿರಃ** = ಶಿರವನ್ನು **ಚಕ್ರೇಣ** = ಚಕ್ರದಿಂದ **ವಿನಿಕೃತ್ಯ** = ತುಂಡರಿಸಿ, **ಧಾತೃಶರ್ವಾದಿಭಿಃ** = ಬ್ರಹ್ಮರುದ್ರಾದಿ ದೇವತೆಗಳಿಂದ **ಪ್ರತಿಸುತಃ** = ಸ್ತೋತ್ರವನ್ನು ಮಾಡಿಸಿಕೊಳ್ಳುವವನಾಗಿ **ಸ್ವಪುರೀಂ** = ನನ್ನ ಪಟ್ಟಣವನ್ನು **ಅಗಾಂ** = ಹೊಂದಿದೆನು.

**ತಾತ್ಪರ್ಯ** :- ವಿಮಾನದಿಂದ ಕೆಳಕೆಳಗೆ ಬಿದ್ದ ಆ ಸಾಲ್ವನು ಅಭೇದ್ಯವಾದ ರಥವನ್ನೇರಿ ಬಂದ. ನಾನು ಬಾಣಗಳಿಂದ ಅವನ

ಭುಜವನ್ನೆರಡನ್ನು ಕತ್ತರಿಸಿದೆ. ಅಂತೆಯೇ ಅವನ ರಥವನ್ನು ನನ್ನ ಗದೆಯಿಂದಲೂ ಪುಡಿಮಾಡಿ ನನ್ನ ಚಕ್ರದಿಂದ ಅವನ ತಲೆಯನ್ನು ತರಿದೆ. ಹೀಗೆ ಅವನನ್ನು ಸಂಹಾರ ಮಾಡಿ ಬ್ರಹ್ಮರುದ್ರಾದಿ ದೇವತೆಗಳಿಂದ ಹೊಗಳಿಸಿ ಕೊಳ್ಳುವವನಾಗಿ ನನ್ನ ಪಟ್ಟಣಕ್ಕೆ ನಾನು ಹಿಂದಿರುಗಿದೆ.

**ತಸ್ಮಾದಿದಂ ವ್ಯಸನಮಾಸ ಹಿ ವಿಪ್ರಕರ್ಷಾ-**
**ನ್ಮೇ ಕಾರ್ಯತಸ್ತ್ವಿತಿ ನಿಗದ್ಯ ಪುನಶ್ಚ ಪಾರ್ಥಾನ್ ।**
**ಕೃಷ್ಣಾಂ ಚ ಸಾಂತ್ವಯಿತುಮತ್ರ ದಿನಾನ್ಯುವಾಸ**
**ಸತ್ಯಾ ಚ ಸೋಮಕಸುತಾಮನುಸಾಂತ್ವಯಂತೀ ॥ ೫೩ ॥**

ಪದಚ್ಛೇದ :- **ತಸ್ಮಾತ್, ಇದಂ, ವ್ಯಸನಂ, ಆಸ, ಹಿ, ವಿಪ್ರಕರ್ಷಾತ್, ಮೇ, ಕಾರ್ಯತಃ, ತು, ಇತಿ, ನಿಗದ್ಯ, ಪುನಃ, ಚ, ಪಾರ್ಥಾನ್ । ಕೃಷ್ಣಾಂ, ಚ, ಸಾಂತ್ವಯಿತುಂ, ಅತ್ರ, ದಿನಾನಿ, ಉವಾಸ, ಸತ್ಯಾಂ, ಚ, ಸೋಮಕಸುತಾಂ, ಅನುಸಾಂತ್ವಯಂತೀ ॥**

**ಅರ್ಥ** :- **ತಸ್ಮಾತ್** = ಈ ಎಲ್ಲಾ **ಕಾರ್ಯತಃ** = ಕಾರ್ಯಗಳಿಂದಾಗಿ **ಮೇ** = ನನ್ನ **ವಿಪ್ರಕರ್ಷಾತ್** = ಅಸಾನ್ನಿಧ್ಯದಿಂದ **ಇದಂ** = ಈ ಯಾವ **ವ್ಯಸನಂ** = ದುಃಖವು (ವನವಾಸ ರೂಪವಾದ) **ಆಸ ಹಿ** = ಬಂದೊದಗಿತಷ್ಟೇ, **ಇತಿ** = ಹೀಗೆಂದು **ಪುನಃ** = ಮತ್ತೊಮ್ಮೆ **ಪಾರ್ಥಾನ್** = ಪಾಂಡವರನ್ನು **ನಿಗದ್ಯ** = ಸಮಾಧಾನ ಮಾಡಿ **ಕೃಷ್ಣಾಂ ಚ** = ದ್ರೌಪದಿಯನ್ನಾದರೂ **ಸಾಂತ್ವಯಿತುಂ** = ಸಮಾಧಾನ ಮಾಡಲು **ಅತ್ರ** = ಈ ಕಾಡಿನಲ್ಲಿ **ದಿನಾನಿ** = ಕೆಲವು ದಿನಗಳ ಕಾಲ **ಉವಾಸ** = ವಾಸ ಮಾಡಿದನು. **ಸತ್ಯಾ ಚ** = ಸತ್ಯಭಾಮೆಯಾದರೂ **ಸೋಮಕಸುತಾಂ** = ದ್ರೌಪದಿಯನ್ನು **ಅನುಸಾಂತ್ವಯಂತೀ** = ಸಮಾಧಾನ ಮಾಡುವವಳಾಗಿ (ಕೃಷ್ಣನೊಂದಿಗೆ ವಾಸ ಮಾಡಿದಳು).

**ತಾತ್ಪರ್ಯ** :- ಹೀಗೆ ಶ್ರೀಕೃಷ್ಣನು ತನ್ನ ಕಾರ್ಯಭಾರವನ್ನೆಲ್ಲಾ ತಿಳಿಸಿ ಪಾಂಡವರನ್ನು ಸಮಾಧಾನ ಪಡಿಸಿದ. ಹೇ ಪಾಂಡವರೇ ಈ ಸಾಲ್ವನ ನಿಮಿತ್ತ ನಾನು ಬೇರೊಂದು ಕಾರ್ಯದಲ್ಲಿ ಮಗ್ನನಾಗಬೇಕಾಯಿತು. ನನ್ನ ಅನುಪಸ್ಥಿತಿಯಲ್ಲ ಇಷ್ಟೆಲ್ಲಾ ಆಗಿಹೋಯಿತು. ಎಂದು ಮತ್ತೆ ಮತ್ತೆ ಸಮಾಧಾನಪಡಿಸಿ ದ್ರೌಪದಿಯನ್ನು ಸಮಾಧಾನ ಮಾಡಲಿಕ್ಕಾಗಿ ಪಾಂಡವರ

ಜೊತೆಯಲ್ಲಿಯೇ ಕೆಲವು ದಿನಗಳ ಕಾಲ ಕಾಡಿನಲ್ಲಿ ವಾಸ ಮಾಡಿದ. ಈ ಸಂದರ್ಭದಲ್ಲಿ ಕೃಷ್ಣನೊಡನೆ ಇದ್ದ ಸತ್ಯಭಾಮೆಯೂ ದ್ರೌಪದಿಗೆ ಸಮಾಧಾನದ ಮಾತುಗಳನ್ನು ಆಡುತ್ತಾ ಅಲ್ಲಿಯೇ ಕೆಲವು ದಿನಗಳ ಕಾಲ ಕಳೆದಳು. ಈ ಶ್ಲೋಕದಲ್ಲಿ ತು ಶಬ್ದದಿಂದ ಪ್ರಯೋಗ ಮಾಡಿರುವುದರಿಂದ ಕೃಷ್ಣನ ಸಂಕಲ್ಪಕ್ಕೆ ಅನುಗುಣವಾಗಿಯೇ ನಡೆದಿದೆ. ಯಾವುದು ಆಕಸ್ಮಿಕವಲ್ಲ ಎಂದು ಆಚಾರ್ಯರು ತಿಳಿಸಿದ್ದಾರೆ.

**ಪಾಂಡವಾನಾಂ ಚ ಯಾ ಭಾರ್ಯಾಃ ಪುತ್ರಾ ಅಪಿ ಹಿ ಸರ್ವಶಃ ।**
**ಅನ್ವೇವ ಪಾಂಡವಾನ್ ಯಾತಾ ವನಮತ್ರೈವ ಚ ಸ್ಥಿತಾಃ ॥ ೫೪ ॥**

**ಪದಚ್ಛೇದ :–** ಪಾಂಡವಾನಾಂ, ಚ, ಯಾ, ಭಾರ್ಯಾಃ, ಪುತ್ರಾಃ, ಅಪಿ, ಚ, ಸರ್ವಶಃ, । ಅನು, ಏವ, ಪಾಂಡವಾನ್, ಯಾತಾ, ವನಂ, ಅತ್ರ, ಏವ, ಸಂಸ್ಥಿತಾಃ ॥

**ಅರ್ಥ :- ಪಾಂಡವಾನಾಂ** = ಪಾಂಡವರ, **ಯಾ** = ಯಾವ, **ಭಾರ್ಯಾಃ** = ಎಲ್ಲ ಹೆಂಡಂದಿರು, **ಅಪಿ ಚ** = ಮತ್ತು, **ಸರ್ವಶಃ** = ಎಲ್ಲಾ, **ಪುತ್ರಾಃ** = ಮಕ್ಕಳುಗಳು, **ಪಾಂಡವಾನ್** = ಪಾಂಡವರನ್ನು, **ಅನ್ವೇನ** = ಅನುಸರಿಸಿದವರಾಗಿಯೇ, **ವನಂ** = ಕಾಡನ್ನು ಕುರಿತು, **ಯಾತಾಃ** = ಬಂದವರಾಗಿ, **ಅತ್ರೈವ** = ಈ ಕಾಡಿನಲ್ಲಿಯೇ, **ಸಂಸ್ಥಿತಾಃ** = ಇದ್ದರು.

**ತಾತ್ಪರ್ಯ :-** ಪಾಂಡವರು ವನವಾಸಕ್ಕೆ ತೆರಳುವಾಗ ಅವರ ಜೊತೆಗೆ ಅವರ ಎಲ್ಲಾ ಹೆಂಡಂದಿರೂ ಮತ್ತು ಮಕ್ಕಳುಗಳೂ ಜೊತೆಗೆ ಬಂದರು. ಒಂದು ಈ ಕಾಡಿನಲ್ಲಿಯೇ ಎಲ್ಲರೂ ಒಟ್ಟಿಗೆ ವಾಸ ಮಾಡಿದರು. ಈ ಶ್ಲೋಕದಲ್ಲಿ ಪಾಂಡವರ ಎಲ್ಲಾ ಹೆಂಡಂದಿರು ವನವಾಸಕ್ಕೆ ಬಂದರು ಎಂದು ತಿಳಿಸಿರುತ್ತಾರೆ. ಆದರೆ ಬರದೇ ಇರುವವರು ಹಲವರು ಹಿಡಿಂಬಾದಿಗಳು ಮತ್ತು ನಕುಲ ಸಹದೇವರ ಹೆಂಡಂದಿರಾದ ಪಾರ್ವತಿ ಮಾಗದೀ ಮೊದಲಾದವರು ಹಾಗಾಗಿ ಇಲ್ಲಿ ಎಲ್ಲ ಹೆಂಡಂದಿರು ಎಂದರೆ ಯಾರು ಯಾರು ಅರಮನೆಯಲ್ಲಿ ಪಾಂಡವರ ಜೊತೆ ವಾಸವಾಗಿದ್ದರು ಅವರುಗಳು ಎಂದರ್ಥ ಹೊರತು ಎಲ್ಲ ಹೆಂಡಂದಿರು ಎಂದು ತಿಳಿಯಬಾರದು.

**ಧೃಷ್ಟದ್ಯುಮ್ನಸ್ತತಃ ಕೃಷ್ಣಾಂ ಸಾಂತ್ವಯಿತ್ವೈವ ಕೇಶವಮ್ ।**
**ಪ್ರಣಮ್ಯ ಸಮನುಜ್ಞಾತೋ ಭಾಗಿನೇಯೈಃ ಪುರಂ ಯಯೌ ॥ ೫೫ ॥**

ಪದಚ್ಛೇದ :- ಧೃಷ್ಟದ್ಯುಮ್ನಃ, ತತಃ, ಕೃಷ್ಣಾಂ, ಸಾಂತ್ವಯಿತ್ವಾ, ಏವ, ಕೇಶವಂ । ಪ್ರಣಮ್ಯ, ಸಮನುಜ್ಞಾತಃ, ಭಾಗಿನೇಯೈಃ, ಪುರಂ, ಯಯೌ ॥

**ಅರ್ಥ** :- **ತತಃ** = ಅನಂತರ **ಧೃಷ್ಟದ್ಯುಮ್ನಃ** = ದೃಷ್ಟದ್ಯುಮ್ನನು **ಕೃಷ್ಣಾಂ** = ದ್ರೌಪದಿಯನ್ನು **ಸಾಂತ್ವಯಿತ್ವಾ** = ಸಮಾಧಾನ ಪಡಿಸಿ **ಕೇಶವಂ** = ಶ್ರೀಕೃಷ್ಣನನ್ನು **ಪ್ರಣಮ್ಯ** = ನಮಸ್ಕರಿಸಿ **ಭಾಗಿನೇಯೈಃ** = ದ್ರೌಪದಿಯ ಮಕ್ಕಳುಗಳೊಂದಿಗೆ **ಪುರಂ** = ತನ್ನ ಪಟ್ಟಣಕ್ಕೆ **ಯಯೌ** = ಹೋದರು.

**ತಾತ್ಪರ್ಯ** :- ಅನಂತರ ದ್ರೌಪದಿಯ ತಮ್ಮನಾದ ದೃಷ್ಟದ್ಯುಮ್ನನು ದ್ರೌಪದಿಯನ್ನು ಸಮಾಧಾನ ಪಡಿಸಿ ಶ್ರೀ ಕೃಷ್ಣನಿಗೆ ನಮಸ್ಕಾರ ಮಾಡಿ ಅವನ ಅನುಜ್ಞೆಯನ್ನು ಪಡೆದು ತನ್ನ ಆ ದ್ರೌಪದಿಯ ಮಕ್ಕಳೊಂದಿಗೆ ತನ್ನ ಪಟ್ಟಣಕ್ಕೆ ಹೊರಟುಹೋದನು.

**ಧೃಷ್ಟಕೇತುಶ್ಚ ಭಗಿನೀಂ ಕಾಶಿರಾಜಃ ಸುತಾಮಪಿ ।**
**ಪುರಂ ಯಯತುರಾದಾಯ ಕುಂತ್ಯೈವಾನ್ಯಾಃ ಸಹ ಸ್ಥಿತಾಃ ॥ ೫೬ ॥**

ಪದಚ್ಛೇದ :- ಧೃಷ್ಟಕೇತುಃ, ಚ, ಭಗಿನೀಂ, ಕಾಶಿರಾಜಃ, ಸುತಾಂ, ಅಪಿ । ಪುರಂ, ಯಯತುಃ, ಆದಾಯ, ಕುಂತ್ಯಾ, ಏವ, ಅನ್ಯಾಃ, ಸಹ, ಸ್ಥಿತಾಃ ॥

**ಅರ್ಥ** :- **ಧೃಷ್ಟಕೇತುಃ** = ಧೃಷ್ಟಕೇತುವು **ಭಗಿನೀಂ** = ತಂಗಿಯಾದ ಧರ್ಮರಾಜನ ಹೆಂಡತಿಯಾದ ದೇವಕಿಯನ್ನು **ಚ** = ಮತ್ತು **ಕಾಶಿರಾಜಃ** = ಕಾಶಿರಾಜನು **ಸುತಾಂ** = ತನ್ನ ಮಗಳಾದ ಭೀಮನ ಹೆಂಡತಿಯಾದ ಕಾಳೀದೇವಿಯನ್ನು **ಆದಾಯ** = ಕರೆದುಕೊಂಡು **ಪುರಂ** = ತಮ್ಮ ಪಟ್ಟಣವನ್ನು ಕುರಿತು **ಯಯತುಃ** = ಹೊರಟರು.

**ತಾತ್ಪರ್ಯ** :- ಶಿಶುಪಾಲನ ಮಗನಾದ ಧೃಷ್ಟಕೇತುವು ತನ್ನ ತಂಗಿಯಾದ ಧರ್ಮರಾಜನ ಹೆಂಡತಿಯಾದ ದೇವಕಿಯನ್ನು ಮತ್ತು ಕಾಶಿರಾಜನ ಮಗಳಾದ ಭೀಮನ ಹೆಂಡತಿಯಾದ ಕಾಳೀದೇವಿಯನ್ನು ಕಾಶಿರಾಜನೂ ಅವರವರ ಪಟ್ಟಣಗಳಿಗೆ ಕರೆದುಕೊಂಡು ಹೋದರು. ಆದರೆ ಪಾಂಡವರ ಬೇರೆ ಹೆಂಡತಿಯರು ಕುಂತಿಯ ಜೊತೆಗೆ ಇದ್ದರು.

**ಪಾರ್ವತೀ ನಕುಲಸ್ಯಾS ಸೀದ್ ಭಾರ್ಯಾ ಪೂರ್ವಂ ತಿಲೋತ್ತಮಾ ।**
**ಪೂರ್ವೋಕ್ತೇ ಚೈವ ಯಮಯೋರ್ಭಾರ್ಯೇ ಕುಂತ್ಯಾ ಹಿ ವಾರಿತಾಃ ॥ ೫೭ ॥**

ಪದಚ್ಛೇದ :- ಪಾರ್ವತೀ, ನಕುಲಸ್ಯ, ಆಸೀತ್, ಭಾರ್ಯಾ, ಪೂರ್ವಂ, ತಿಲೋತ್ತಮಾ । ಪೂರ್ವೋಕ್ತೇ, ಚ, ಏವ, ಯಮಯೋಃ, ಭಾರ್ಯೇ, ಕುಂತ್ಯಾ, ಹಿ, ವಾರಿತಾಃ ॥

**ಅರ್ಥ** :- **ಪೂರ್ವಂ** = ಈ ಹಿಂದೆ **ತಿಲೋತ್ತಮಾ** = ತಿಲೋತ್ತಮಾ ಎಂಬ ಅಪ್ಸರೆಯಾಗಿದ್ದವಳು **ನಕುಲಸ್ಯ** = ನಕುಲನ **ಭಾರ್ಯಾ** = ಹೆಂಡತಿಯು **ಪಾರ್ವತೀ** = ಪಾರ್ವತೀ ಎಂಬುವಳು **ಆಸೀತ್** = ಇದ್ದಳು **ಚ** = ಮತ್ತು **ಪೂರ್ವೋಕ್ತೇ** = ಈ ಹಿಂದೆ ಹೇಳಿದ **ಯಮಯೋಃ** = ನಕುಲ ಸಹದೇವರ **ಭಾರ್ಯೇ** = ಹೆಂಡತಿಯರಾದ ಮಾದ್ರೀ ಮತ್ತು ನಾಗಧಿಯರು **ಕುಂತ್ಯಾ ಏವ** = ಕುಂತಿಯಿಂದಲೇ **ನಿವಾರಿತಾಃ** = ತಡೆಯಲ್ಪಟ್ಟಿದ್ದರು.

**ತಾತ್ಪರ್ಯ** :- ಪಾಂಡವರ ವನವಾಸದ ಸಂದರ್ಭದಲ್ಲಿ ಕೆಲವರನ್ನು ಕುಂತಿ ಕಾಡಿಗೆ ಹೋಗದಂತೆ ತಡೆದಿದ್ದಳು. ಅದರಲ್ಲಿ ಈ ಹಿಂದೆ ಅಪ್ಸರೆಯಾಗಿದ್ದ ತಿಲೋತ್ತಮೆ ಎಂಬುವಳು ನಕುಲನ ಪತ್ನಿಯಾಗಿ ಪಾರ್ವತಿಯ ಹೆಸರಿನಲ್ಲಿ ಪತ್ನಿಯಾಗಿದ್ದಳು. ಅವರಂತೆಯೇ ನಕುಲ ಸಹದೇವರ ಪತ್ನಿಯರಾದ ಶಲ್ಯ ಜರಾಸಂಧನ ಮಕ್ಕಳುಗಳಾದ ಮಾದ್ರೀ ಮತ್ತು ಮಾಗಧೀ. ಈ ಮೂವರುಗಳನ್ನು ಕುಂತಿ ವನವಾಸದ ಸಂದರ್ಭದಲ್ಲಿಯೇ ತಡೆದು ತನ್ನಲ್ಲಿಯೇ ಉಳಿಸಿಕೊಂಡಿದ್ದಳು.

**ಸುಭದ್ರಾಮಭಿಮನ್ಯುಂ ಚ ರಥಮಾರೋಪ್ಯ ಕೇಶವಃ ।**
**ಪಾಂಡವಾನಭ್ಯನುಜ್ಞಾಯ ಸಭಾರ್ಯಃ ಸ್ವಪುರೀಂ ಯಯೌ ॥ ೫೮ ॥**

ಪದಚ್ಛೇದ :- ಸುಭದ್ರಾಂ ಅನಿಮನ್ಯುಂ ಚ ರಥಂ ಆರೋಪ್ಯ ಕೇಶವ । ಪಾಂಡವಾನ್ ಅಭ್ಯನುಜ್ಞಾಯ ಸಭಾರ್ಯಃ ಸ್ವಪುರಂ ಯಯೌ ॥

**ಅರ್ಥ** :- **ಕೇಶವಃ** = ಶ್ರೀಕೃಷ್ಣನು **ಸುಭದ್ರಾಂ** = ಸುಭದ್ರೆಯನ್ನು **ಚ** = ಮತ್ತು **ಅಭಿಮನ್ಯುಂ** = ಅಭಿಮನ್ಯುವನ್ನು **ರಥಂ** = ರಥವನ್ನು **ಆರೋಪ್ಯ** ಕುಳ್ಳರಿಸಿ **ಪಾಂಡವಾನ್** = ಪಾಂಡವರನ್ನು **ಅಭ್ಯನುಜ್ಞಾಯ** = ಅಭಿಮಾನದಿಂದ

ಮತ್ತೆ ರಾಜ್ಯಲಾಭವನ್ನು ಅಭಿಲಷಿಸಿ ಸಭಾರ್ಯ = ಹೆಂಡತಿಯಿಂದ ಒಡಗೂಡಿ ಸ್ವಪುರಂ = ತನ್ನ ಪಟ್ಟಣಕ್ಕೆ (ದ್ವಾರಕೆಗೆ) ಯಯೌ = ಹೋದನು.

ತಾತ್ಪರ್ಯ :- ಶ್ರೀಕೃಷ್ಣನು ತನ್ನ ತಂಗಿಯಾದ ಸುಭದ್ರೆಯನ್ನು ಮತ್ತು ಅಭಿಮನ್ಯುವನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಪಾಂಡವರಿಗೆ ಶುಭಕಾಮನೆಗಳನ್ನು ತಿಳಿಸಿ ತನ್ನ ಹೆಂಡತಿಯಾದ ಸತ್ಯಭಾಮೆಯ ಒಡಗೂಡಿ ದ್ವಾರಕೆಗೆ ಹೊರಟನು.

**ಕಂಚಿತ್ ಕಾಲಂ ದ್ರೌಪದೇಯಾ ಉಷ್ಯ ಪಾಂಚಾಲಕೇ ಪುರೇ ।**
**ಯಯುರ್ದ್ವಾರವತೀಮೇವ ತತ್ರೋಷುಃ ಕೃಷ್ಣಲಾಳಿತಾಃ ॥ ೫೯ ॥**

**ಪದಚ್ಛೇದ :- ಕಂಚಿತ್, ಕಾಲಂ, ಪ್ರೌಪದೇಯಾಃ, ಉಷ್ಯ, ಪಾಂಚಾಲಕೇ, ಪುರೇ । ಯಯುಃ, ದ್ವಾರವತೀಂ, ಏವ, ತತ್ರ, ಊಷುಃ, ಕೃಷ್ಣಲಾಲಿತಾಃ ॥**

ಅರ್ಥ :- ದ್ರೌಪದೇಯಾಃ = ದ್ರೌಪದಿಯ ಮಕ್ಕಳುಗಳು ಕಂಚಿತ್ ಕಾಲಂ = ಕೆಲವು ಕಾಲ ಪಾಂಚಾಲಕೇ = ಪಾಂಚಾಲನಗರದಲ್ಲಿ ಪುರೇ = ಪಟ್ಟಣದಲ್ಲಿ ಉಷ್ಯ = ವಾಸಮಾಡಿ ದ್ವಾರವತೀಂ = ದ್ವಾರಕೆಯನ್ನು ಯಯುಃ = ಹೋದರು ಕೃಷ್ಣಲಾಲಿತಾಃ = ಶ್ರೀಕೃಷ್ಣನಿಂದ ಪಾಲನೆಗೆ ಒಳಗಾದವರಿಗಾಗಿ ತತ್ರ = ಅಲ್ಲಿ ಊಷುಃ = ವಾಸ ಮಾಡಿದರು.

ತಾತ್ಪರ್ಯ :- ದ್ರೌಪದಿಯ ಮಕ್ಕಳುಗಳು ಕೆಲವು ಕಾಲ ಪಾಂಚಾಲ ನಗರದಲ್ಲಿ ವಾಸ ಮಾಡಿದರು. ಅನಂತರ ದ್ವಾರಕೆಗೆ ಹೋಗಿ ಶ್ರೀಕೃಷ್ಣನ ಪಾಲನೆಯಲ್ಲಿ ಸುಖವಾಗಿ ವಾಸ ಮಾಡಿದರು.

**ತತಃ ಪರಂ ಧರ್ಮರಾಜೋ ನಿರ್ವಿಣ್ಣಃ ಸ್ವಕೃತೇನ ಹ ।**
**ಭ್ರಾತೃಭಾರ್ಯಾಪದೇ ಕೃಷ್ಣಾಂ ಸ್ಥಾಪಯಾಮಾಸ ಸರ್ವದಾ ॥ ೬೦ ॥**

ಪದಚ್ಛೇದ :- ತತಃ, ಪರಂ, ಧರ್ಮರಾಜಃ, ನಿರ್ವಿಣ್ಣಃ, ಸ್ವಕೃತೇನ, ಹ । ಭಾತೃಭಾರ್ಯಾಪದೇ, ಕೃಷ್ಣಾಂ, ಸ್ಥಾಪಯಾಮಾಸ, ಸರ್ವದಾ ॥

ಅರ್ಥ :- ತತಃ ಪರಂ = ಅನಂತರ ಧರ್ಮರಾಜಃ = ಧರ್ಮರಾಜನು ಸ್ವಕೃತೇನ = ತನ್ನ ಈ ಹಿಂದಿನ ಕೃತ್ಯದಿಂದ ನಿರ್ವಿಣ್ಣಃ = ಬೇಸತ್ತವನಾಗಿ ಕೃಷ್ಣಾಂ

= ದ್ರೌಪದಿಯನ್ನು ಸರ್ವದಾ = ಯಾವಾಗಲೂ ಭ್ರಾತೃ ಭಾರ್ಯಾ ಪದೇ = ತಮ್ಮನ ಹೆಂಡತಿಯ ಸ್ಥಾನದಲ್ಲಿಯೇ ಸ್ಥಾಪಯಾಮಾಸ = ಇರಿಸಿದನು.

ತಾತ್ಪರ್ಯ :- ಆನಂತರ ಧರ್ಮರಾಜನು ತನ್ನ ಜೂಜಾಡುವಿಕೆಯ ತಪ್ಪಿನಿಂದ ಹೀಗಾಯಿತೆಂದು ಬೇಸತ್ತವನಾಗಿ ದ್ರೌಪದಿಯನ್ನು ಸದಾ ಸೋದರನಾದ ಭೀಮನ ಪತ್ನಿಯ ಸ್ಥಾನದಲ್ಲಿಯೇ ಇರಿಸಿದ.

**ಊಷುರ್ವನೇ ಚ ತೇ ಪಾರ್ಥಾ ಮುನಿಶೇಷಾನ್ನಭೋಜಿನಃ ।**
**ಭುಕ್ತವತ್ಸ್ವೇವಾನುಜೇಷು ಭುಂಕ್ತೇ ರಾಜಾ ಯುಧಿಷ್ಠಿರಃ ॥ ೬೧ ॥**

ಪದಚ್ಛೇದ :- ಊಷುಃ, ವನೇ, ಚ, ತೇ, ಪಾರ್ಥಾಃ, ಮುನಿಶೇಷಾನ್ನ, ಭೋಜನಃ, । ಭುಕ್ತವತ್ಸು, ಏವ, ಅನುಜೇಷು, ಭುಂಕ್ತೇ, ರಾಜಾ, ಯುಧಿಷ್ಠಿರಃ ॥

ಅರ್ಥ :- ಪಾರ್ಥಾಃ = ಆ ಪಾಂಡವರು ಮುನಿಶೇಷಾನ್ನ ಭೋಜಿನಃ = ಮುನಿಗಳ ಭೋಜನಾನಂತರದ ಅನ್ನವನ್ನು ಊಟ ಮಾಡುವವರಾಗಿ ವನೇ = ಕಾಡಿನಲ್ಲಿ ಊಷುಃ = ವಾಸ ಮಾಡಿದರು ರಾಜಾ = ರಾಜನಾದ ಯುಧಿಷ್ಠಿರಃ = ಯುಧಿಷ್ಠಿರನು ಅನುಜೇಷು = ತಮ್ಮಂದಿರು ಭುಕ್ತವತ್ಸು = ಊಟ ಮಾಡಿದ ನಂತರವಷ್ಟೇ ಭುಂಕ್ತೇ = ಊಟಮಾಡುತ್ತಾನೆ.

ತಾತ್ಪರ್ಯ :- ಕಾಡಿನಲ್ಲಿ ವಾಸ ಮಾಡುತ್ತಿದ್ದ ಆ ಪಾಂಡವರು ಎಲ್ಲಾ ಮುನಿಗಳ ಊಟದ ನಂತರವೇ ಅವರು ಊಟ ಮಾಡುತ್ತಿದ್ದರು. ರಾಜನಾದ ಯುಧಿಷ್ಠಿರನಾದರೂ ತನ್ನ ತಮ್ಮಂದಿರು ಊಟ ಮಾಡಿದ ನಂತರವಷ್ಟೇ ಊಟ ಮಾಡುತ್ತಿದ್ದ.

**ಅಲಂಘ್ಯತ್ವಾತ್ ತದಾಜ್ಞಾಯಾ ಅನುಜಾಃ ಪೂರ್ವಭೋಜಿನಃ ।**
**ತಸ್ಯಾನಂತರಮೇವೈಕಾ ಭುಂಕ್ತೇ ಸಾ ಪಾರ್ಷತಾತ್ಮಜಾ ॥ ೬೨ ॥**

ಪದಚ್ಛೇದ :- ಅಲಂಘ್ಯತ್ವಾತ್ ತದಾಜ್ಞಾಯಾಃ ಅನುಜಾಃ ಪೂರ್ವಭೋಜನಃ । ತಸ್ಯ ಅನಂತರಂ ಏವ ಏಕಾ ಭುಂಕ್ತೇ ಸಾ ಪಾರ್ಷತಾತ್ಮಜಾ ॥

ಅರ್ಥ :- ಅನುಜಾಃ = ತಮ್ಮಂದಿರಾದ ಭೀಮಾದಿಗಳಾದರೂ ತದಾಜ್ಞಾಯಾ = ಆ ಯುಧಿಷ್ಠಿರನ ಆಜ್ಞೆಯು ಅಲಂಘ್ಯತ್ವಾತ್ =

ಉಲ್ಲಂಘಿಸಬಾರದಾದ್ದರಿಂದ **ಪೂರ್ವಭೋಜಿನಃ** = ಅಣ್ಣನಿಗಿಂತ ಮೊದಲೇ ಊಟ ಮಾಡುವವರಾಗಿದ್ದರು. **ತಸ್ಯ** = ಆ ಧರ್ಮರಾಜನ **ಅನಂತರಂ** = ನಂತರದಲ್ಲಿ **ಸಾ** = ಆ ಯಾವ **ಪಾರ್ಷತಾತ್ಮಜಾ** = ದ್ರೌಪದಿಯು **ಏಕಾ ಏವ** = ಒಬ್ಬಳೇ **ಭುಂಕ್ತೇ** = ಊಟ ಮಾಡುತ್ತಾಳೆ.

**ತಾತ್ಪರ್ಯ :-** ಭೀಮಾದಿಗಳು ವನವಾಸದಲ್ಲಿ ಅಣ್ಣನಾದ ಧರ್ಮರಾಜನ ಅನುಲ್ಲಂಘನೀಯವಾದ ಆಜ್ಞೆಯಿಂದ ಅನಿವಾರ್ಯವಾಗಿ ಅಣ್ಣನಿಗಿಂತ ಮೊದಲೇ ಊಟ ಮಾಡುತ್ತಿದ್ದರು, ಭೀಮಾದಿಗಳ ನಂತರದಲ್ಲಿ ಧರ್ಮರಾಜ ಊಟ ಮಾಡುತ್ತಿದ್ದನು. ಆನಂತರ ದ್ರೌಪದೀ ಕೊನೆಗೆ ಒಬ್ಬಳೇ ಊಟ ಮಾಡುತ್ತಿದ್ದಳು.

**ಏವಂ ಸದಾ ವಿಷ್ಣುಪರಾಯಣಾನಾಂ**
**ತತ್ಪ್ರಾಪಣಾನ್ನೈಕಭುಜಾಂ ಪ್ರಯಾತಃ ।**
**ಸಂವತ್ಸರಸ್ತತ್ರ ಜಗಾದ ಕೃಷ್ಣಾ**
**ಭೀಮಾಜ್ಞಯಾ ಧರ್ಮರಾಜಂ ಸುವೇತ್ತ್ರೀ ॥ ೬೩ ॥**

**ಪದಚ್ಛೇದ :-** ಏವಂ, ಸದಾ, ವಿಷ್ಣುಪರಾಯಣಾನಾಂ, ತತ್ಪ್ರಾಪಣಾನ್ನೈಕಭುಜಾಂ, ಪ್ರಯಾತಃ । ಸಂವತ್ಸರಃ, ತತ್ರ, ಜಗಾದ, ಕೃಷ್ಣಾ ಭೀಮಾಜ್ಞಯಾ, ಧರ್ಮರಾಜಂ, ಸುವೇತ್ತ್ರೀ ॥

**ಅರ್ಥ :- ಏವಂ** = ಈ ರೀತಿಯಾಗಿ **ಸದಾ** = ಯಾವಾಗಲೂ **ವಿಷ್ಣುಪರಾಯಣಾನಾಂ** = ಭಗವತ್ ಸೇವಾಸಕ್ತರಾದ **ತತ್ಪ್ರಾಪಣಾನ್ನೈಕಭುಜಾಂ** = ಭಗವಂತನಿಗೆ ನಿವೇದಿಸಿದ ಅನ್ನವನ್ನು ಮಾತ್ರ ಊಟ ಮಾಡುವ ಆ ಯಾವ ಪಾಂಡವರ **ಸಂವತ್ಸರಃ** = ಒಂದು ಸಂವತ್ಸರವು **ಪ್ರಯಾತಃ** = ಕಳೆಯಿತು, **ತತ್ರ** = ಆ ಸಂದರ್ಭದಲ್ಲಿಯೇ **ಸುವೇತ್ತ್ರೀ** = ಸಮಸ್ತ ರಾಜನೀತಿಯನ್ನು ಬಲ್ಲ **ಕೃಷ್ಣಾ** = ದ್ರೌಪದಿಯು **ಭೀಮಾಜ್ಞಯಾ** = ಭೀಮಸೇನನ ಆಜ್ಞೆಯಿಂದ (ಪ್ರೇರಣೆಯಂತೆ) **ಧರ್ಮರಾಜಂ** = ಧರ್ಮರಾಜನನ್ನು ಕುರಿತು **ಜಗಾದ** = ಹೇಳಿದಳು.

**ತಾತ್ಪರ್ಯ :-** ಹೀಗೆ ಸದಾ ವಿಷ್ಣು ಭಕ್ತಿ ಪರಾಯಣರಾದ ಭಗವಂತನ ನೈವೇದ್ಯ ಶೇಷವನ್ನೇ ಸ್ವೀಕಾರ ಮಾಡುವ ಆ ಯಾವ ಪಾಂಡವರ ವನವಾಸದ

ಅವಧಿ ಒಂದು ವರ್ಷ ಕಳೆಯಿತು, ಅದೇ ಸಂದರ್ಭದಲ್ಲಿ ಒಮ್ಮೆ ರಾಜನೀತಿಯನ್ನು ಚೆನ್ನಾಗಿ ಬಲ್ಲ ಆ ದ್ರೌಪದಿಯು ಭೀಮನ ಪ್ರೇರಣೆಯಂತೆ ಧರ್ಮರಾಜನಿಗೆ ಕೆಲವು ಹಿತವಾದ ರಾಜನೀತಿಗೆ ಸಂಬಂಧಿಸಿದ ಮಾತುಗಳನ್ನು ಹೇಳಿದಳು.

**ಅತಿಮಾರ್ದವಯುಕ್ತತ್ವಾದ್ ಧರ್ಮರಾಜಶ್ಚತುರ್ದಶೇ ।**
**ಅಪಿ ವರ್ಷೇ ಗುರುಭಯಾದ್ ರಾಜ್ಯಂ ನೇಚ್ಛೇದಿತಿ ಪ್ರಭುಃ ।**
**ಮಾರುತಿಃ ಪ್ರೇಷಯಾಮಾಸ ಕೃಷ್ಣಾಂ ಪ್ರಸ್ತಾವಹೇತವೇ ॥ ೬೪ ॥**

**ಪದಚ್ಛೇದ :– ಅತಿ ಮಾರ್ದವಯುಕ್ತತ್ವಾತ್ ಧರ್ಮರಾಜಃ ಚತುರ್ದಶೇ ಅಪಿ ವರ್ಷೇ ಗುರುಭಯಾತ್ ರಾಜ್ಯಂ ನ ಇಚ್ಛೇತ್ ಇತಿ ಪ್ರಭುಃ । ಮಾರುತಿಃ ಪ್ರೇಷಯಾಮಾಸ ಕೃಷ್ಣಾಂ ಪ್ರಸ್ತಾವಹೇತವೇ ॥**

**ಅರ್ಥ :-** **ಧರ್ಮರಾಜಃ** = ಧರ್ಮರಾಜನು **ಅತಿಮಾರ್ದವ ಯುಕ್ತತ್ವಾತ್** = ಪರರ ದುಃಖವನ್ನು ಸಹಿಸದ ಮನಸ್ಸುಳ್ಳವನಾದ್ದರಿಂದ, **ಚ** = ಮತ್ತು, **ಗುರುಭಯಾತ್** = ಹಿರಿಯರಾದ ಭೀಷ್ಮಾದಿಗಳ ಕೊಲ್ಲುವುದರಿಂದ ಉಂಟಾಗುವ ಪಾಪದ ಭಯದಿಂದಲೂ **ಚತುರ್ದಶೇ ಅಪಿ ವರ್ಷೇ** = ಹದಿನಾಲ್ಕನೆಯ ವರ್ಷದಲ್ಲಿಯೂ, **ರಾಜ್ಯಂ** = ರಾಜ್ಯವನ್ನು, **ನ ಇಚ್ಛೇತ್** = ಬಯಸಲಾರನು, **ತಿ** = ಹೀಗೆ, **ಪ್ರಭುಃ** = ಸಮರ್ಥನಾದ, **ಮಾರುತಿಃ** = ಭೀಮನು (ವಿಚಾರ ಮಾಡಿ) **ಪ್ರಸ್ತಾವ ಹೇತವೇ** = ರಾಜ್ಯಪ್ರಾಪ್ತಿಯ ಕುರಿತಾದ ವಿಷಯವನ್ನು ಮಂಡಿಸಲು, **ಕೃಷ್ಣಾಂ** = ದ್ರೌಪದಿಯನ್ನು, **ಪ್ರೇಷಯಾಮಾಸ** = ಕಳುಹಿಸಿದನು.

**ತಾತ್ಪರ್ಯ :-** ಪಾಂಡವರು ಒಪ್ಪಂದದಂತೆ ಹದಿಮೂರು ವರ್ಷ ವನವಾಸ ಮಾಡಿ ಒಂದು ವರ್ಷ ಅಜ್ಞಾತವಾಸ ಮಾಡಿ ರಾಜ್ಯವನ್ನು ಪಡೆಯಬೇಕು. ಆದರೆ ಈ ಸಂದರ್ಭದಲ್ಲಿ ಪರರ ದುಃಖವನ್ನು ಸಹಿಸದ ಅತ್ಯಂತ ಮೃದು ಸ್ವಭಾವದವನಾದ ಧರ್ಮರಾಜನು ಯುದ್ಧದ ಬಯಕೆಯನ್ನು ಮುಂದಿಡಲಾರನು. ಪಾಪದ ಭೀತಿಯಿಂದ. ಹಾಗಾಗಿ ಈಗಿನಿಂದಲೇ ಅವನನ್ನು ರಾಜ್ಯವನ್ನು ಪಡೆಯುವ ವಿಷಯದಲ್ಲಿ ಸನ್ನದ್ಧಗೊಳಿಸಬೇಕೆಂದು ಭೀಮನು ವಿಚಾರ ಮಾಡಿ. ಸ್ವಯಂ ತಾನೇ

ಉಲ್ಲಂಘಿಸಬಾರದಾದ್ದರಿಂದ **ಪೂರ್ವಭೋಜಿನಃ** = ಅಣ್ಣನಿಗಿಂತ ಮೊದಲೇ ಊಟ ಮಾಡುವವರಾಗಿದ್ದರು. **ತಸ್ಯ** = ಆ ಧರ್ಮರಾಜನ **ಅನಂತರಂ** = ನಂತರದಲ್ಲಿ **ಸಾ** = ಆ ಯಾವ **ಪಾರ್ಷತಾತ್ಮಜಾ** = ದ್ರೌಪದಿಯು **ಏಕಾ ಏವ** = ಒಬ್ಬಳೇ **ಭುಂಕ್ತೇ** = ಊಟ ಮಾಡುತ್ತಾಳೆ.

**ತಾತ್ಪರ್ಯ :-** ಭೀಮಾದಿಗಳು ವನವಾಸದಲ್ಲಿ ಅಣ್ಣನಾದ ಧರ್ಮರಾಜನ ಅನುಲ್ಲಂಘನೀಯವಾದ ಆಜ್ಞೆಯಿಂದ ಅನಿವಾರ್ಯವಾಗಿ ಅಣ್ಣನಿಗಿಂತ ಮೊದಲೇ ಊಟ ಮಾಡುತ್ತಿದ್ದರು, ಭೀಮಾದಿಗಳ ನಂತರದಲ್ಲಿ ಧರ್ಮರಾಜ ಊಟ ಮಾಡುತ್ತಿದ್ದನು. ಆನಂತರ ದ್ರೌಪದೀ ಕೊನೆಗೆ ಒಬ್ಬಳೇ ಊಟ ಮಾಡುತ್ತಿದ್ದಳು.

**ಏವಂ ಸದಾ ವಿಷ್ಣುಪರಾಯಣಾನಾಂ**
**ತತ್ಪ್ರಾಪಣಾನ್ನೈಕಭುಜಾಂ ಪ್ರಯಾತಃ ।**
**ಸಂವತ್ಸರಸ್ತತ್ರ ಜಗಾದ ಕೃಷ್ಣಾ**
**ಭೀಮಾಜ್ಞಯಾ ಧರ್ಮರಾಜಂ ಸುವೇತ್ರೀ ॥ ೬೩ ॥**

**ಪದಚ್ಛೇದ :-** ಏವಂ, ಸದಾ, ವಿಷ್ಣುಪರಾಯಣಾನಾಂ, ತತ್ಪ್ರಾಪಣಾನ್ನೈಕಭುಜಾಂ, ಪ್ರಯಾತಃ । ಸಂವತ್ಸರಃ, ತತ್ರ, ಜಗಾದ, ಕೃಷ್ಣಾ, ಭೀಮಾಜ್ಞಯಾ, ಧರ್ಮರಾಜಂ, ಸುವೇತ್ರೀ ॥

**ಅರ್ಥ :-** **ಏವಂ** = ಈ ರೀತಿಯಾಗಿ **ಸದಾ** = ಯಾವಾಗಲೂ **ವಿಷ್ಣುಪರಾಯಣಾನಾಂ** = ಭಗವತ್ ಸೇವಾಸಕ್ತರಾದ **ತತ್ಪ್ರಾಪಣಾನ್ನೈಕಭುಜಾಂ** = ಭಗವಂತನಿಗೆ ನಿವೇದಿಸಿದ ಅನ್ನವನ್ನು ಮಾತ್ರ ಊಟ ಮಾಡುವ ಆ ಯಾವ ಪಾಂಡವರ **ಸಂವತ್ಸರಃ** = ಒಂದು ಸಂವತ್ಸರವು **ಪ್ರಯಾತಃ** = ಕಳೆಯಿತು, **ತತ್ರ** = ಆ ಸಂದರ್ಭದಲ್ಲಿಯೇ **ಸುವೇತ್ರೀ** = ಸಮಸ್ತ ರಾಜನೀತಿಯನ್ನು ಬಲ್ಲ **ಕೃಷ್ಣಾ** = ದ್ರೌಪದಿಯು **ಭೀಮಾಜ್ಞಯಾ** = ಭೀಮಸೇನನ ಆಜ್ಞೆಯಿಂದ (ಪ್ರೇರಣೆಯಂತೆ) **ಧರ್ಮರಾಜಂ** = ಧರ್ಮರಾಜನನ್ನು ಕುರಿತು **ಜಗಾದ** = ಹೇಳಿದಳು.

**ತಾತ್ಪರ್ಯ :-** ಹೀಗೆ ಸದಾ ವಿಷ್ಣು ಭಕ್ತಿ ಪರಾಯಣರಾದ ಭಗವಂತನ ನೈವೇದ್ಯ ಶೇಷವನ್ನೇ ಸ್ವೀಕಾರ ಮಾಡುವ ಆ ಯಾವ ಪಾಂಡವರ ವನವಾಸದ

ಅವಧಿ ಒಂದು ವರ್ಷ ಕಳೆಯಿತು, ಅದೇ ಸಂದರ್ಭದಲ್ಲಿ ಒಮ್ಮೆ ರಾಜನೀತಿಯನ್ನು ಚೆನ್ನಾಗಿ ಬಲ್ಲ ಆ ದ್ರೌಪದಿಯು ಭೀಮನ ಪ್ರೇರಣೆಯಂತೆ ಧರ್ಮರಾಜನಿಗೆ ಕೆಲವು ಹಿತವಾದ ರಾಜನೀತಿಗೆ ಸಂಬಂಧಿಸಿದ ಮಾತುಗಳನ್ನು ಹೇಳಿದಳು.

**ಅತಿಮಾರ್ದವಯುಕ್ತತ್ವಾದ್ ಧರ್ಮರಾಜಶ್ಚತುರ್ದಶೇ ।**
**ಅಪಿ ವರ್ಷೇ ಗುರುಭಯಾದ್ ರಾಜ್ಯಂ ನೇಚ್ಛೇದಿತಿ ಪ್ರಭುಃ ।**
**ಮಾರುತಿಃ ಪ್ರೇಷಯಾಮಾಸ ಕೃಷ್ಣಾಂ ಪ್ರಸ್ತಾವಹೇತವೇ ॥ ೬೪ ॥**

**ಪದಚ್ಛೇದ :-** ಅತಿ ಮಾರ್ದವಯುಕ್ತತ್ವಾತ್ ಧರ್ಮರಾಜಃ ಚತುರ್ದಶೇ ಅಪಿ ವರ್ಷೇ ಗುರುಭಯಾತ್ ರಾಜ್ಯಂ ನ ಇಚ್ಛೇತ್ ಇತಿ ಪ್ರಭುಃ । ಮಾರುತಿಃ ಪ್ರೇಷಯಾಮಾಸ ಕೃಷ್ಣಾಂ ಪ್ರಸ್ತಾವಹೇತವೇ ॥

**ಅರ್ಥ :-** **ಧರ್ಮರಾಜಃ** = ಧರ್ಮರಾಜನು **ಅತಿಮಾರ್ದವ ಯುಕ್ತತ್ವಾತ್** = ಪರರ ದುಃಖವನ್ನು ಸಹಿಸದ ಮನಸ್ಸುಳ್ಳವನಾದ್ದರಿಂದ, **ಚ** = ಮತ್ತು, **ಗುರುಭಯಾತ್** = ಹಿರಿಯರಾದ ಭೀಷ್ಮಾದಿಗಳ ಕೊಲ್ಲುವುದರಿಂದ ಉಂಟಾಗುವ ಪಾಪದ ಭಯದಿಂದಲೂ **ಚತುರ್ದಶೇ ಅಪಿ ವರ್ಷೇ** = ಹದಿನಾಲ್ಕನೆಯ ವರ್ಷದಲ್ಲಿಯೂ, **ರಾಜ್ಯಂ** = ರಾಜ್ಯವನ್ನು, **ನ ಇಚ್ಛೇತ್** = ಬಯಸಲಾರನು, **ತಿ** = ಹೀಗೆ, **ಪ್ರಭುಃ** = ಸಮರ್ಥನಾದ, **ಮಾರುತಿಃ** = ಭೀಮನು (ವಿಚಾರ ಮಾಡಿ) **ಪ್ರಸ್ತಾವ ಹೇತವೇ** = ರಾಜ್ಯಪ್ರಾಪ್ತಿಯ ಕುರಿತಾದ ವಿಷಯವನ್ನು ಮಂಡಿಸಲು, **ಕೃಷ್ಣಾಂ** = ದ್ರೌಪದಿಯನ್ನು, **ಪ್ರೇಷಯಾಮಾಸ** = ಕಳುಹಿಸಿದನು.

**ತಾತ್ಪರ್ಯ :-** ಪಾಂಡವರು ಒಪ್ಪಂದದಂತೆ ಹದಿಮೂರು ವರ್ಷ ವನವಾಸ ಮಾಡಿ ಒಂದು ವರ್ಷ ಅಜ್ಞಾತವಾಸ ಮಾಡಿ ರಾಜ್ಯವನ್ನು ಪಡೆಯಬೇಕು. ಆದರೆ ಈ ಸಂದರ್ಭದಲ್ಲಿ ಪರರ ದುಃಖವನ್ನು ಸಹಿಸದ ಅತ್ಯಂತ ಮೃದು ಸ್ವಭಾವದವನಾದ ಧರ್ಮರಾಜನು ಯುದ್ಧದ ಬಯಕೆಯನ್ನು ಮುಂದಿಡಲಾರನು. ಪಾಪದ ಭೀತಿಯಿಂದ. ಹಾಗಾಗಿ ಈಗಿನಿಂದಲೇ ಅವನನ್ನು ರಾಜ್ಯವನ್ನು ಪಡೆಯುವ ವಿಷಯದಲ್ಲಿ ಸನ್ನದ್ಧಗೊಳಿಸಬೇಕೆಂದು ಭೀಮನು ವಿಚಾರ ಮಾಡಿ. ಸ್ವಯಂ ತಾನೇ

ಧರ್ಮರಾಜನನ್ನು ಅಣಿಗೊಳಿಸಲು ಸಮರ್ಥನಾದರೂ ದ್ರೌಪದಿಯನ್ನು ಧರ್ಮರಾಜನ ಬಳಿಗೆ ಕಳುಹಿಸಿಕೊಟ್ಟನು.

**ಕ್ಷಮಾ ಸರ್ವತ್ರ ಧರ್ಮೋ ನ ಪಾಪಹೇತುಶ್ಚ ದುರ್ಜನೇ ।**
**ರಾಜ್ಞಾಂ ಸಾಮರ್ಥ್ಯಯುಕ್ತಾನಾಮಿತಿ ಸಂಸ್ಥಾಪ್ಯ ಶಾಸ್ತ್ರತಃ ॥ ೬೫ ॥**

**ಪದಚ್ಛೇದ :– ಕ್ಷಮಾ ಸರ್ವತ್ರ ಧರ್ಮಃ ನ ಪಾಪಹೇತುಃ ಚ ದುರ್ಜನೇ । ರಾಜ್ಞಾಂ ಸಾಮರ್ಥ್ಯಯುಕ್ತಾನಾಂ ಇತಿ ಸಂಸ್ಥಾಪ್ಯ ಶಾಸ್ತ್ರತಃ ॥**

**ಅರ್ಥ :-** **ಸಾಮರ್ಥ್ಯಯುಕ್ತಾನಾಂ** = ಪರಾಕ್ರಮಶಾಲಿಗಳಾದ, **ರಾಜ್ಞಾಂ** = ರಾಜರುಗಳಿಗೆ, **ಕ್ಷಮಾ** = ಕ್ಷಮಾಗುಣವು, **ಸರ್ವತ್ರ** = ಎಲ್ಲರ ವಿಷಯದಲ್ಲಿಯೂ, **ನ ಧರ್ಮಃ** = ಧರ್ಮ ಸಾಧನವಲ್ಲ, **ಚ** = ಮತ್ತು, **ದುರ್ಜನೇ** = ದುರ್ಜನರ ವಿಷಯದಲ್ಲಿ, **ಪಾಪಹೇತುಃ** = ಪಾಪಸಾಧನವು, **ಇತಿ** = ಹೀಗೆಂದು, **ಶಾಸ್ತ್ರತಃ** = ಶಾಸ್ತ್ರಾನುಸಾರವಾಗಿ, ಯುಕ್ತಿಸಂಗತವಾಗಿ **ಸಂಸ್ಥಾಪ್ಯ** = ಮನಗಾಣಿಸಿ (ದಳು).

**ತಾತ್ಪರ್ಯ :-** ದ್ರೌಪದಿಯು ಧರ್ಮರಾಜನಿಗೆ ಹೇಳಿದಳು - ಎಲೈ ಧರ್ಮರಾಜನೆ ಬಹುಪರಾಕ್ರಮಶಾಲಿಗಳಾದ ರಾಜರುಗಳಿಗೆ ಎಲ್ಲರಲ್ಲಿಯೂ ಕ್ಷಮಾಗುಣದ ಪ್ರದರ್ಶನವು ತರವಲ್ಲ. ದುರ್ಜನರ ವಿಷಯದಲ್ಲಿಯಾದರೂ ಖಂಡಿತ ಸಾಧುವಲ್ಲ. ಈ ದುರ್ಜನರ ವಿಷಯದಲ್ಲಿ ತೋರಿಸುವ ಕ್ಷಮಾಗುಣವು ಪುಣ್ಯಹೇತುವಲ್ಲ ಹೊರತಾಗಿ ಪಾಪಕ್ಕೇ ಕಾರಣವಾಗುತ್ತದೆ.

**ಹತ್ವಾ ಚತುರ್ದಶೇ ವರ್ಷೇ ಧಾರ್ತರಾಷ್ಟ್ರಾನರಾಜ್ಯದಾನ್ ।**
**ಕರ್ತುಂ ರಾಜ್ಯಂ ಪುರೋ ಗಂತಾ ಭವಾನೀತ್ಯಗ್ರಜೇನ ಹ ॥ ೬೬ ॥**

**ಪದಚ್ಛೇದ :– ಹತ್ವಾ , ಚತುರ್ದಶೇ, ವರ್ಷೇ, ಧಾರ್ತರಾಷ್ಟ್ರಾನ್, ಅರಾಜ್ಯದಾನ್ । ಕರ್ತುಂ, ರಾಜ್ಯಂ, ಪುರಃ, ಗಂತಾ, ಭವಾನಿ, ಇತಿ, ಅಗ್ರಜೇನ, ಹ ॥**

**ಅರ್ಥ :-** **ಚತುರ್ದಶೇ ವರ್ಷೇ** = ಹದಿನಾಲ್ಕನೆಯ ವರ್ಷದಲ್ಲಿ, **ಅರಾಜ್ಯದಾನ್** = ರಾಜ್ಯವನ್ನು ನೀಡದಿರುವ, **ಧಾರ್ತರಾಷ್ಟ್ರಾನ್** = ದುರ್ಯೋಧನಾದಿಗಳನ್ನು, **ಹತ್ವಾ** = ಕೊಂದು, **ರಾಜ್ಯಂ** = ರಾಜ್ಯವನ್ನು, **ಪುರಃ ಗಂತಾ ಭವಾನಿ** = ಪಡೆಯಲು ಮುಂದಾಗುವೆನು, **ಇತಿ** = ಹೀಗೆಂದು

**ಅಗ್ರಸೇನ** = ಅಣ್ಣನಾದ ಯುಧಿಷ್ಠಿರನಿಂದ, **ಕರ್ತುಂ ಹ** = ಪ್ರತಿಜ್ಞೆಯನ್ನು ಮಾಡಿಸಲು (ದ್ರೌಪದಿಯನ್ನು ಮುಂದು ಮಾಡಿದನಷ್ಟೇ).

ತಾತ್ಪರ್ಯ :- ಭೀಮಸೇನನು ಧರ್ಮರಾಜನನ್ನು ರೊಚ್ಚಿಗೆಬ್ಬಿಸಲು ದ್ರೌಪದಿಯನ್ನು ಮುಂದೆ ಮಾಡುತ್ತಾನೆ. ಇಲ್ಲಿ ಭೀಮಸೇನನ ಉದ್ದೇಶ ಬಹಳ ಸ್ಪಷ್ಟ. ಅದೇನೆಂದರೆ ಧರ್ಮರಾಜನ ಈ ಹದಿನಾಲ್ಕು ವರ್ಷಗಳ ಬಳಿಕ ಒಂದು ವೇಳೆ ಸಂಕೋಚಕ್ಕೆ ಒಳಗಾಗಬಹುದು. ಆದ್ದರಿಂದ ಈಗಲೇ ಅಣ್ಣನ ಕೈಯಲ್ಲಿ ಹದಿನಾಲ್ಕು ವರ್ಷದ ನಂತರ ನಾನು ರಾಜ್ಯವನ್ನು ಯುದ್ಧ ಮಾಡಿಯಾದರೂ ಪಡೆದೇ ತೀರುವೆನು ಹೀಗೆಂದು ಪ್ರತಿಜ್ಞೆಯನ್ನು ಮಾಡಿಸುವ ಸಲುವಾಗಿ ದ್ರೌಪದಿಯನ್ನು ಮುಂದುಮಾಡಿದ.

**ಕಾರಯನ್ ಸತ್ಯಶಪಥಂ ವಿವಾದಸ್ಯ ಕ್ರಮೇಚ್ಛಯಾ ।**
**ಆದಿಶತ್ ಪ್ರಥಮಂ ಕೃಷ್ಣಾಂ ಭೀಮಃ ಸಾ ನೃಪಮಬ್ರವೀತ್ ॥ ೬೭ ॥**

**ಪದಚ್ಛೇದ :– ಕಾರಯನ್, ಸತ್ಯಶಪಥಂ, ವಿವಾದಸ್ಯ, ಕ್ರಮೇಚ್ಛಯಾ । ಆದಿಶತ್, ಪ್ರಥಮಂ, ಕೃಷ್ಣಾಂ, ಭೀಮಃ, ಸಾ, ನೃಪಂ, ಅಬ್ರವೀತ್ ॥**

**ಅರ್ಥ** :- **ಸತ್ಯಶಪಥಂ** = ಸತ್ಯವಾದ ಪ್ರತಿಜ್ಞೆಯನ್ನು **ಕಾರಯನ್** = ಮಾಡಿಸುವವನಾಗಿ, **ವಿವಾದಸ್ಯ** = ಸಂಧಾನದ ವಿಷಯದ ಕುರಿತಾದ ವಿವಾದವನ್ನು ತನ್ನೆಡೆಗೆ ತಿರುಗಿಸುವ ಉದ್ದೇಶದಿಂದ, **ಕ್ರಮೇಚ್ಛಯಾ** = ತನ್ನ ಯೋಗ್ಯತೆಗಿಂತ ಕೆಳಗಿನವಳಾದ ದ್ರೌಪದಿಯಿಂದ ಹೇಳಿಸುವ ಇಚ್ಛೆಯುಳ್ಳವರಾಗಿ, **ಭೀಮಃ** = ಭೀಮಸೇನನು **ಪ್ರಥಮಂ** = ಮೊದಲಿಗೆ **ಕೃಷ್ಣಾಂ** = ದ್ರೌಪದಿಯನ್ನು ಕುರಿತು, **ಆದಿಶತ್** = ಆಜ್ಞೆ ಮಾಡಿದನು. **ಸಾ** = ಅವಳಾದರೂ, **ನೃಪಂ** = ರಾಜನಾದ ಧರ್ಮರಾಜನನ್ನು ಕುರಿತು, **ಅಬ್ರವೀತ್** = ಹೇಳಿದಳು.

ತಾತ್ಪರ್ಯ :- ಭೀಮಸೇನನು ಧರ್ಮರಾಜನ ಕೈಯಲ್ಲಿ ರಾಜ್ಯವನ್ನು ಪಡೆಯುವ ಬಗ್ಗೆ ಸತ್ಯವಾದ ಪ್ರತಿಜ್ಞೆಯನ್ನು ಮಾಡಿಸುವವನಾಗಿ ಅಂತೆಯೇ ತನ್ನ ಹಾಗೂ ಧರ್ಮರಾಜನ ನಡುವಿನ ವಿವಾದವನ್ನು ತನ್ನೆಡೆಗೆ ತಿರುಗಿಸುವ ಉದ್ದೇಶದಿಂದ ತನಗಿಂತ ಯೋಗ್ಯತೆಯಲ್ಲಿ ಕೆಳಗಿನವಳಾದ ದ್ರೌಪದಿಯನ್ನು ಧರ್ಮರಾಜನಿಗೆ ಉಪದೇಶ ನೀಡು ಎಂದು ಆಜ್ಞೆ ಮಾಡಿದ. ಅವಳಾದರೂ ಧರ್ಮರಾಜನಿಗೆ ಉಪದೇಶವನ್ನು ಪ್ರಾರಂಭಿಸಿದಳು.

ನೈವ ಕ್ಷಮಾ ಕುಜನತಾಸು ನೃಪಸ್ಯ ಧರ್ಮ-
ಸ್ತಾಂ ತ್ವಂ ವೃಥೈವ ಧೃತವಾನಸಿ ಸರ್ವಕಾಲಮ್ ।
ಇತ್ಯುಕ್ತ ಆಹ ನೃಪತಿಃ ಪರಮಾ ಕ್ಷಮೈವ
ಸರ್ವತ್ರ ತದ್ವಿಧೃತಮೇವ ಜಗತ್ ಸಮಸ್ತಮ್ ॥ ೬೮ ॥

ಪದಚ್ಛೇದ :- ನೈವ, ಕ್ಷಮಾ, ಕುಜನತಾಸು, ನೃಪಸ್ಯ, ಧರ್ಮಃ, ತಾಂ, ತ್ವಂ, ವೃಥಾ, ಏವ, ಧೃತವಾನ್, ಅಸಿ, ಸರ್ವಕಾಲಮ್ । ಇತಿ, ಉಕ್ತಃ, ಆಹ, ನೃಪತಿಃ, ಪರಮಾ, ಕ್ಷಮಾ, ಏವ, ಸರ್ವತ್ರ, ತತ್, ವಿಧೃತಂ, ಏವ, ಜಗತ್, ಸಮಸ್ತಮ್ ॥

ಅರ್ಥ :- ಕುಜನತಾಸು = ಕೆಟ್ಟಜನರಲ್ಲಿ, ಕ್ಷಮಾ = ಕ್ಷಮಾಗುಣವು, ನೃಪಸ್ಯ = ರಾಜನಿಗೆ, ನೈವ ಧರ್ಮಃ = ಧರ್ಮವಲ್ಲವಷ್ಟೇ, ತಾಂ = ಅಂತಹ ಧರ್ಮವನ್ನು, ತ್ವಂ = ನೀನು, ಸರ್ವಕಾಲಂ = ಎಲ್ಲ ಕಾಲದಲ್ಲಿ ವೃಥೈವ = ವ್ಯರ್ಥವಾಗಿಯೇ ಧೃತವಾನಸಿ = ಧರಿಸಿದವನಾಗಿದ್ದಿ, ಇತ್ಯುಕ್ತಃ = ಹೀಗೆ ಹೇಳಲ್ಪಟ್ಟ, ನೃಪತಿಃ = ರಾಜನಾದ ಯುಧಿಷ್ಠಿರನು, ಆಹ = ಹೇಳಿದನು, ಸಮಸ್ತಂ ಜಗತ್ = ಈ ಎಲ್ಲಾ ಜಗತ್, ಸರ್ವತ್ರ = ಸರ್ವಕಾಲದಲ್ಲಿಯೂ, ತತ್ = ಆ ಯಾವ ಕ್ಷಮಾಗುಣದಿಂದಲೇ ವಿಧೃತಮೇವ = ಧರಿಸಲ್ಪಟ್ಟಿದೆಯಷ್ಟೇ.

ತಾತ್ಪರ್ಯ :- ದ್ರೌಪದಿಯು ಧರ್ಮರಾಜನಿಗೆ ಹೇಳಿದಳು. ಹೇ ರಾಜನೇ ನೀನು ಈ ದುರ್ಜನರಲ್ಲಿ ತೋರುವ ಕ್ಷಮಾಗುಣವು ಸರ್ವಥಾ ಸರಿಯಲ್ಲ. ಅಂತಹ ಧರ್ಮವನ್ನು ನೀನು ಇಷ್ಟು ಕಾಲ ವ್ಯರ್ಥವಾಗಿ ಧರಿಸಿದ್ದೆ. ಇದು ನಿನಗೆ ತಕ್ಕುದಲ್ಲವೆಂದು ಹೇಳಿದಾಗ ಧರ್ಮರಾಜ ಹೇಳಿದ. ಹೇ ದ್ರೌಪದಿಯೇ ಈ ಪ್ರಪಂಚ ಎಲ್ಲ ಕಾಲದಲ್ಲೂ ಕ್ಷಮಾಗುಣದಿಂದಲೇ ಧೃತವಾಗಿದೆ. ಅಂತಹ ಧರ್ಮವೇ ಇಲ್ಲದಿದ್ದಲ್ಲಿ ಈ ಜಗತ್ತು ಇಂತಹ ಸ್ಥಿತಿಯಲ್ಲಿ ಇರಲಾರದು. ಆದ್ದರಿಂದ ಎಲ್ಲರಲ್ಲೂ ಸಮಾನವಾಗಿ ಕ್ಷಮಾ ಗುಣವನ್ನು ತೋರುವುದು ರಾಜನ ಪವಿತ್ರ ಕರ್ತವ್ಯವಾಗಿದೆ. ಆದ್ದರಿಂದ ನಾನು ಮಾಡುವುದು ರಾಜನ ಪವಿತ್ರ ಕರ್ತವ್ಯವೇ ಆಗಿದೆ ಎಂದು ಧರ್ಮರಾಜನು ದ್ರೌಪದಿಗೆ ಹೇಳಿದನು.

ಕರ್ತಾ ಚ ಸರ್ವಜಗತಃ ಸುಖದುಃಖಯೋರ್ಹಿ
ನಾರಾಯಣಸ್ತದನುದತ್ತಮಿಹಾಸ್ಯ ಸರ್ವಮ್ ।

**ತಸ್ಮಾನ್ನ ಕೋಪವಿಷಯೋऽಸ್ತಿ ಕುತಶ್ಚ ಕಶ್ಚಿತ್**
**ತಸ್ಮಾತ್ ಕ್ಷಮೈವ ಸಕಲೇಷು ಪರೋऽಸ್ಯ ಧರ್ಮಃ ॥ ೧೯ ॥**

**ಪದಚ್ಛೇದ :-** ಕರ್ತಾ, ಚ, ಸರ್ವಜಗತಃ, ಸುಖದುಃಖಯೋಃ, ಹಿ, ನಾರಾಯಣ, ತದನುದತ್ತಂ, ಇಹ, ಅಸ್ಯ, ಸರ್ವಮ್ । ತಸ್ಮಾತ್, ನ, ಕೋಪವಿಷಯಃ, ಅಸ್ತಿ, ಕುತಃ, ಚ, ಕಶ್ಚಿತ್, ತಸ್ಮಾತ್, ಕ್ಷಮಾ, ಏವ, ಸಕಲೇಷು, ಪರ, ಅಸ್ಯ, ಧರ್ಮಃ ॥

**ಅರ್ಥ :-** **ಸರ್ವಜಗತಃ** = ಸಮಸ್ತಪ್ರಪಂಚದ **ಸುಖದುಃಖಯೋಃ** = ಸುಖದುಃಖಗಳಿಗೆ, **ನಾರಾಯಣಃ** = ನಾರಾಯಣನು, **ಕರ್ತಾ ಹಿ** = ಕರ್ತೃವಾಗಿದ್ದಾನಷ್ಟೇ, **ಇಹ** = ಈ ಜಗತ್ತಿನಲ್ಲಿ, **ಅಸ್ಯ** = ಈ ಯಾವ ವ್ಯಕ್ತಿಯ, **ಸರ್ವಂ** = ಎಲ್ಲವೂ, **ತದನುದತ್ತಂ** = ಅವರವರ ಕರ್ಮಾನುಸಾರವಾಗಿ ಭಗವಂತನಿಂದ ಕೊಡಲ್ಪಟ್ಟಿದ್ದು, **ತಸ್ಮಾತ್** = ಆದ್ದರಿಂದ, **ಕುತಃ** = ಯಾವುದರಿಂದಲೂ, **ಚ** = ಮತ್ತು, **ಕಶ್ಚಿತ್** = ಯಾವುದೂ, **ಕೋಪವಿಷಯಃ** = ಕೋಪಕ್ಕೆ ವಿಷಯವು **ನ ಅಸ್ತಿ** = ಇರುವುದಿಲ್ಲ, **ತಸ್ಮಾತ್** = ಆದ್ದರಿಂದ **ಸಕಲೇಷು** = ಸಮಸ್ತ ಪ್ರಪಂಚದಲ್ಲಿ (ಸಜ್ಜನ ದುರ್ಜನರಲ್ಲಿ) **ಅಸ್ಯ** = ಈ ರಾಜನಿಗೆ, **ಕ್ಷಮೈವ** = ಕ್ಷಮಾಗುಣವೇ, **ಪರಃ** = ಶ್ರೇಷ್ಠವಾದ, **ಧರ್ಮಃ** = ಧರ್ಮವು.

**ತಾತ್ಪರ್ಯ :-** ಸಮಸ್ತ ಪ್ರಪಂಚಕ್ಕೆ ಸುಖದುಃಖಗಳನ್ನು ನೀಡುವವನು ಶ್ರೀ ಹರಿಯೇ ಅವನೇ ನಮ್ಮ ನಮ್ಮ ಕರ್ಮಗಳಿಗೆ ಅನುಸಾರವಾಗಿ ನಮಗೆ ಸುಖದುಃಖಗಳನ್ನು ನೀಡುತ್ತಾನೆ. ಆದ್ದರಿಂದ ನಮ್ಮ ಕೋಪಕ್ಕೆ ವಿಷಯವಾದ ಯಾವ ವಸ್ತುವೂ ಇಲ್ಲ. ಮತ್ತು ಯಾವುದರಿಂದಲೂ ಕೋಪಗೊಳ್ಳುವ ಪ್ರಮೇಯವೇ ಇಲ್ಲ. ಆದ್ದರಿಂದ ಯಾರಲ್ಲಿಯೂ ಕೋಪ ಮಾಡುವುದು ಯುಕ್ತವಲ್ಲ ಹೊರತಾಗಿ ಎಲ್ಲರಲ್ಲಿಯೂ ಕ್ಷಮೆಯನ್ನು ತೋರುವುದೇ ಪರಮ ಧರ್ಮ ಎಂದು ದ್ರೌಪದಿಯನ್ನು ಕುರಿತು ಧರ್ಮರಾಜ ಹೇಳಿದ.

**ಇತ್ಯುಕ್ತವಂತಂ ನೃಪಮಾಹ ಪಾರ್ಷತೀ**
**ಯದಿ ಕ್ಷಮಾ ಸರ್ವನರೇಷು ಧರ್ಮಃ ।**
**ರಾಜ್ಞಾ ನ ಕೃತ್ಯಂ ನ ಚ ಲೋಕಯಾತ್ರಾ**
**ಭವೇಜ್ಜಗತ್ ಕಾಪುರುಷೈರ್ವಿನಶ್ಯೇತ್ ॥ ೨೦ ॥**

**ಪದಚ್ಛೇದ :- ಇತಿ ಉಕ್ತವಂತಂ ನೃಪಂ ಆಹ ಪಾರ್ಷತೀ ಯದಿ ಕ್ಷಮಾ ಸರ್ವನರೇಷು ಧರ್ಮಃ । ರಾಜ್ಞಾ ನ ಕೃತ್ಯಂ ನ ಚ ಲೋಕಯಾತ್ರಾ ಭವೇತ್ ಜಗತ್ ಕಾಪುರುಷೈಃ ವಿನಶ್ಯೇತ್ ॥**

**ಅರ್ಥ :-** ಇತಿ = ಹೀಗೆಂದು (ಹಿಂದೆ ಹೇಳಿದ ಹಾಗೆ) **ಉಕ್ತವಂತಂ** = ಹೇಳಿದವನಾದ, **ನೃಪಂ** = ರಾಜನಾದ ಧರ್ಮರಾಜನನ್ನು ಕುರಿತು, **ಪಾರ್ಷತೀ** = ದ್ರೌಪದಿಯ, **ಆಹ** = ಹೇಳಿದಳು, **ಯದಿ** = ಒಂದು ವೇಳೆ, **ಸರ್ವ ನರೇಷು** = ಎಲ್ಲಾ ಜನರಲ್ಲಿ, **ಕ್ಷಮಾ** = ಕ್ಷಮೆಯು, **ಧರ್ಮಃ** = ಧರ್ಮವೆಂದಾದರೆ, **ರಾಜ್ಞಾ** = ರಾಜನಿಗೆ, **ನ ಕೃತ್ಯಂ** = (ಸಾರ್ಥಕತೆ) ಕರ್ತವ್ಯ ಇಲ್ಲವಷ್ಟೇ, **ಚ** = ಮತ್ತು, **ಲೋಕಯಾತ್ರಾ** = ಲೋಕದ ಸಾಗುವಿಕೆಯು, **ನ ಭವೇತ್** = ಆಗದಷ್ಟೇ, **ಚ** = ಮತ್ತು, **ಜಗತ್** = ಈ ಜಗತ್ತು, **ಕಾಪುರುಷಃ** = ದುರ್ಜನರಿಂದ, **ವಿನಶ್ಯೇತ್** = ನಾಶ ಹೊಂದೀತು.

**ತಾತ್ಪರ್ಯ :-** ಈ ಹಿಂದೆ ಹೇಳಿದ ರೀತಿಯಲ್ಲಿ ಧರ್ಮರಾಜನು ತನ್ನನ್ನು ಸಮರ್ಥಿಸಿಕೊಂಡಾಗ ದ್ರೌಪದಿಯು ಹೇಳಿದಳು - ಹೇ ರಾಜಾ ಒಂದು ವೇಳೆ ಎಲ್ಲರಲ್ಲಿಯೂ ಯೋರುವ ಕ್ಷಮಾಗುಣವು ಪರಮ ಧರ್ಮವೆಂದಾದರೆ ಲೋಕದಲ್ಲಿ ರಾಜನಿದ್ದೇನು ಸಾರ್ಥಕ. ಲೋಕದ ರೀತಿನೀತಿಗಳನ್ನು ಉಲ್ಲಂಘಿಸಿದಾಗ ಅವನನ್ನು ವಿಚಾರಿಸಿ ದಂಡಿಸುವುದು ರಾಜನ ಕರ್ತವ್ಯ. ಅದೇ ಇಲ್ಲವಾದರೆ ರಾಜನಿಗೆ ಯಾವ ವಿಧದ ಸಾರ್ಥಕತೆಯೂ ಇಲ್ಲವಷ್ಟೇ. ಅಷ್ಟೇ ಅಲ್ಲದೆ ರಾಜನು ಎಲ್ಲರನ್ನು ಕ್ಷಮಿಸುತ್ತಾ ಸಾಗಿದರೆ ಲೋಕದಲ್ಲಿ ಹಿಂಸಾಚಾರ ಎಗ್ಗಿಲ್ಲದೇ ಸಾಗಿ ಪ್ರತಿಯೊಬ್ಬರ ಜೀವನ ದುರ್ಭರವಾದೀತು. ಅಷ್ಟೇ ಅಲ್ಲ, ದುರ್ಜನರ ಲಂಗುಲಗಾಮಿಲ್ಲದ ನಡುವಳಿಕೆ ಜಗತ್ತಿನ ನಾಶಕ್ಕೆ ದಾರಿ ತೋರಿಸೀತು.

**ಸತ್ಯಂ ಚ ವಿಷ್ಣುಃ ಸಕಲಪ್ರವರ್ತಕೋ ರಮಾವಿರಿಂಚೇಶಪುರಸ್ಸರಾಶ್ಚ ।**
**ಕಾಷ್ಠಾದಿವತ್ ತದ್ವಶಗಾಃ ಸಮಸ್ತಾಸ್ತಥಾಽಪಿ ನ ವ್ಯರ್ಥತಾ ಪೌರುಷಸ್ಯ ॥ ೭೦ ॥**

**ಪದಚ್ಛೇದ :- ಸತ್ಯಂ, ಚ, ವಿಷ್ಣುಃ, ಸಕಲ, ಪ್ರವರ್ತಕಃ, ರಮಾವಿರಿಂಚೇಶಪುರಸ್ಸರಾಃ, ಚ, ಕಾಷ್ಠಾದಿವತ್, ತದ್ವಶಗಾಃ, ಸಮಸ್ತಾಃ, ನ, ವ್ಯರ್ಥತಾ, ಪೌರುಷಸ್ಯ ॥**

**ಅರ್ಥ** :- **ವಿಷ್ಣುಃ** = ನಾರಾಯಣನು, **ಸಕಲಪ್ರವರ್ತಕಃ** = ಸಕಲ ಲೋಕ ಪ್ರವರ್ತಕನು ಎನ್ನುವುದು, **ಸತ್ಯಂ** = ಸತ್ಯವು, **ಚ** = ಮತ್ತು, **ರಮಾವಿರಿಂಚೇಶಪುರಸ್ಸರಾಃ** = ಲಕ್ಷ್ಮಿಯಿಂದ ಮೊದಲ್ಗೊಂಡು ಬ್ರಹ್ಮಾದಿ ದೇವತೆಗಳೆಲ್ಲರೂ, **ಕಾಷ್ಠಾದಿವತ್** = ಮರದ ಗೊಂಬೆಗಳೆಂಬಂತೆ, **ತದ್ವಶಗಾಃ** = ಅವನ ಅಧೀನದಲ್ಲಿರುವವರು, **ತಥಾಪಿ** = ಹಾಗಿದ್ದರೂ, **ಪೌರುಷಸ್ಯ** = ಪುರುಷ ಪ್ರಯತ್ನಕ್ಕೆ, **ನ ವ್ಯರ್ಥತಾ** = ವ್ಯರ್ಥವಿಲ್ಲವಷ್ಟೇ.

**ತಾತ್ಪರ್ಯ** :- ದ್ರೌಪದಿಯು ಹೇಳಿದಳು ರಾಜನೇ ನಾರಾಯಣನೇ ಸಕಲ ಚರಾಚರ ಪ್ರಪಂಚವನ್ನು ಮುನ್ನಡೆಸುವವನು ಎನ್ನುವುದು ದಿಟ. ಅವನ ಶಕ್ತಿ ಅಪಾರ. ಅವನ ಮುಂದೆ ರಮಾ ಬ್ರಹ್ಮಾದಿ ದೇವತೆಗಳೆಲ್ಲರೂ ಮರದ ಗೊಂಬೆಗಳಂತೆ, ಆದರೂ ಪುರುಷ ಪ್ರಯತ್ನ ಎಂದಿಗೂ ವ್ಯರ್ಥವಲ್ಲವಷ್ಟೇ. ಅದು ನಮ್ಮನ್ನು ರಕ್ಷಿಸಿಯೇ ರಕ್ಷಿಸುತ್ತದೆ.

**ತದಾಜ್ಞಯಾ ಪುರುಷಶ್ಚೇಷ್ಟಮಾನಃ**
**ಚೇಷ್ಟಾನುಸಾರೇಣ ಶುಭಾಶುಭಸ್ಯ ।**
**ಭೋಕ್ತಾ ನ ತಚ್ಚೇಷ್ಟಿತಮನ್ಯಥಾ ಭವೇತ್**
**ಕರ್ತಾ ತಸ್ಮಾತ್ ಪುರುಷೋಽಪ್ಯಸ್ಯ ವಶ್ಯಃ ॥ ೭೨ ॥**

ಪದಚ್ಛೇದ :- ತದಾಜ್ಞಯಾ, ಪುರುಷಃ, ಚೇಷ್ಟಮಾನಃ, ಚೇಷ್ಟಾನುಸಾರೇಣ, ಶುಭಾಶುಭಸ್ಯ । ಭೋಕ್ತಾ, ನ, ತಚ್ಚೇಷ್ಟಿತಂ, ಅನ್ಯಥಾ, ಭವೇತ್, ಕರ್ತಾ, ತಸ್ಮಾತ್, ಪುರುಷಃ, ಅಪಿ, ಅಸ್ಯ, ವಶ್ಯಃ ॥

**ಅರ್ಥ** :- **ಪುರುಷಃ** = ಈ ಪುರುಷನು (ಜೀವನು) **ತದಾಜ್ಞಯಾ** = ಶ್ರೀ ಹರಿಯ ಆಜ್ಞೆಯಿಂದ, **ಚೇಷ್ಟಮಾನಃ** = ಕರ್ಮಗಳನ್ನು ಮಾಡುವವನಾಗಿ, **ಚೇಷ್ಟಾನುಸಾರೇಣ** = ಅವನ ಕರ್ಮಗಳಿಗೆ ಅನುಸಾರವಾಗಿ, **ಶುಭಾಶುಭಸ್ಯ** = ಸುಖದುಃಖಾದಿ ರೂಪವಾದ ಫಲಗಳನ್ನು, **ಭೋಕ್ತಾ** = ಅನುಭವಿಸುವವನಾಗುತ್ತಾನೆ, **ತಚ್ಚೇಷ್ಟಿತಂ** = ಈ ಜೀವನು ಮಾಡುವ ಕರ್ಮವು, **ಅನ್ಯಥಾ** = ವ್ಯರ್ಥವಾದ ಫಲವುಳ್ಳದ್ದು, **ನ ಭವೇತ್** = ಆಗುವುದಿಲ್ಲವಷ್ಟೇ, **ತಸ್ಮಾತ್** = ಆದ್ದರಿಂದ **ಪುರುಷಃ** = ಈ ಜೀವನು, **ಅಸ್ಯ** = ಶ್ರೀಹರಿಯ, **ವಶ್ಯಃ** = ವಶದಲ್ಲಿರುವವನಾದ, **ಕರ್ತಾ** = ಕರ್ತೃವು (ಎಂದೆನಿಸುತ್ತಾನೆ).

ತಾತ್ಪರ್ಯ :- ಜೀವನು ಭಗವಂತನ ಪ್ರೇರಣೆಯಂತೆಯೇ ಕರ್ಮ ಮಾಡಿದರೂ ಜೀವವೇ ತನ್ನ ಕರ್ಮ ಫಲವನ್ನು ಭೋಗಿಸುವುದರಿಂದ ಕರ್ತೃ ಎಂದೆನಿಸುತ್ತಾನೆ. ಇಂತಹ ಕರ್ತೃತ್ವವಾದರೂ ಮೂರು ರೀತಿಯಾದದ್ದು. ಕ್ರಿಯಾಶ್ರಯತ್ವವಾದದ್ದು. ಇಚ್ಛಾಪೂರ್ವಕ ಕ್ರಿಯಾಶ್ರಯತ್ವ ರೂಪವಾದದ್ದು. ಸ್ವತಂತ್ರೇಚ್ಛಾರೂಪವಾದದ್ದು. ಮೊದಲನೆಯದು ಜಡದಲ್ಲಿ ಕಾಣುತ್ತದೆ. ಎರಡನೆಯದು ಜೀವನದಲ್ಲಿ, ಮೂರನೆಯದು ಭಗವಂತನಲ್ಲಿ. ಇಂತಹ ಭಗವಂತನಿಗಾದರೂ ಪುಣ್ಯಪಾಪಗಳ ಲೇಪವಿಲ್ಲ. ಅವನು ಸ್ವತಂತ್ರನಾದ್ದರಿಂದ ಹೀಗೆ ಅವನು ಇಚ್ಛೆ ಪಡದಿದ್ದರೂ ಕೆಲವೊಮ್ಮೆ ಪರಾಧೀನನಾಗಿ (ಶ್ರೀಹರಿಯ ಆಧೀನನಾಗಿ) ಕರ್ಮಗಳನ್ನು ಮಾಡಲೇ ಬೇಕಾಗುತ್ತದೆ. ಆದ್ದರಿಂದಲೇ ಇವನನ್ನು ಕರ್ತಾ ಎಂದು ಕರೆಯುತ್ತಾರೆ.

**ವೃಥಾ ಯದಿ ಸ್ಯಾತ್ ಪೌರುಷಂ ಕಸ್ಯ ಹೇತೋಃ**
**ವಿಧಿರ್ನಿಷೇಧಶ್ಚ ಸಮಸ್ತವೇದಗಃ ।**
**ವಿಧೇರ್ನಿಷೇಧಸ್ಯ ಚ ನೈವ ಗೋಚರಃ**
**ಪುಮಾನ್ ಯದಿ ಸ್ಯಾದ್ ಭವತೋ ಹಿ ತೌ ಹರೇಃ ॥ ೭೩ ॥**

ಪದಚ್ಛೇದ :- ವೃಥಾ, ಯದಿ, ಸ್ಯಾತ್, ಪೌರುಷಂ, ಕಸ್ಯ, ಹೇತೋಃ, ವಿಧಿ, ನಿಷೇಧಃ, ಚ, ಸಮಸ್ತವೇದಗಃ । ವಿಧೇಃ, ನಿಷೇಧಸ್ಯ, ಚ, ನ, ಏವ, ಗೋಚರಃ, ಪ್ರಮಾನ್, ಯದಿ, ಸ್ಯಾತ್, ಭವತಃ, ಹಿ, ತೌ, ಹರೇಃ ॥

ಅರ್ಥ :- **ಪೌರುಷಂ** = ಪುರುಷ ಪ್ರಯತ್ನವು, **ಯದಿ** = ಒಂದು ವೇಳೆ, **ವೃಥಾಸ್ಯಾತ್** = ವ್ಯರ್ಥವಾದುದಾದರೇ, **ಸಮಸ್ತವೇದಗಃ** = ಸಮಗ್ರ ವೇದಗಳಲ್ಲಿ ಹೇಳಿದ, **ವಿಧಿನಿಷೇಧಃ** = ಧರ್ಮಾಧರ್ಮಗಳ ವಿಧಿನಿಷೇಧಗಳು, **ಕಸ್ಯ ಹೇತೋಃ** = ಯಾರಿಗಾಗಿ ವಿಧಿಸಲ್ಪಟ್ಟಿವೆ, **ಚ** = ಮತ್ತು, **ಯದಿ** = ಒಂದು ವೇಳೆ, **ವಿಧೇಃ ನಿಷೇಧಸ್ಯ** = ವಿಧಿ ನಿಷೇಧಗಳಿಗೆ, **ಪುಮಾನ್** = ಈ ಜೀವನು, **ನೈವಗೋಚರಸ್ಯಾತ್** = ಬದ್ಧನಲ್ಲವೆಂದರೆ (ವಿಷಯನಲ್ಲವೆಂದರೆ), **ತೌ** = ಆ ಯಾವ ವಿಧಿನಷೇಧಗಳು, **ಹರೇಃ** = ಹರಿ ವಿಷಯಕವಾಗಿ, **ಸ್ಯಾತ್ ಹಿ** = ಆದೀತಷ್ಟೇ.

ತಾತ್ಪರ್ಯ :- ಪುರುಷ ಪ್ರಯತ್ನವು ವ್ಯರ್ಥವೆಂದಾದಲ್ಲಿ ಆಗ ಸಮಗ್ರ ವೇದಗಳಲ್ಲಿ ಹೇಳಿದ ಧರ್ಮಾಧರ್ಮಗಳ ವಿಧಿನಿಷೇಧಗಳು ಯಾರಿಗೆ ಎಂಬ ಪ್ರಶ್ನೆ ಬರುತ್ತದೆ. ಏಕೆಂದರೆ ಪುರುಷ ಪ್ರಯತ್ನವು ವ್ಯರ್ಥವಾದ್ದರಿಂದ ಪುರುಷನಿಗೆ ವಿಧಿನಿಷೇಧಗಳನ್ನು ಹೇಳಲು ಬರುವುದಿಲ್ಲ. ಇನ್ನು ಜಡಕ್ಕೆಂದು ಹೇಳಿದರೆ ಅವುಗಳಿಗೆ ಕರ್ತೃತ್ವವಿಲ್ಲ, ಇನ್ನು ಪರಿಶೇಷಿತಃ ಪರಿಶೋಧಿತಃ ಶ್ರೀಹರಿಗೆ ಹೇಳಬೇಕು. ಹೀಗೆ ಹೇಳಿದರೆ ಯಾವ ಶ್ರೀ ಹರಿಯು ಸಂಸಾರದಿಂದ ನಮ್ಮನ್ನು ಬಿಡುಗಡೆಗೊಳಿಸುವನೋ ಅವನೇ ವಿಧಿನಿಷೇಧ ಬದ್ಧನೆಂದಾದ. ಆದರೆ ಸರ್ವೋತ್ತಮನಾದ ಸ್ವತಂತ್ರನಾದ ಶ್ರೀಹರಿಗೆ ಯಾವ ಕರ್ಮದ ಲೇಪವೂ ಇಲ್ಲ ಅವನು ಸ್ವತಂತ್ರನಾದ್ದರಿಂದ ಆದ್ದರಿಂದ ಜೀವನೇ ಕರ್ತೃವೆಂದು ಹೇಳಲೇಬೇಕು. ಅವನಿಗೆ ಈ ವಿಧಿನಿಷೇಧಗಳು ವಿಧಿಸಲ್ಪಟ್ಟಿವೆ. ಆದ್ದರಿಂದ ಅವನ ಪೌರುಷಕ್ಕೊಂದು ಬೆಲೆಯಿದೆ ಎಂದು ಸಿದ್ಧವಾಗುವುದು.

**ತೇನೈವ ಲೇಪಶ್ಚ ಭವೇದಮುಷ್ಯ**
**ಪುಣ್ಯೇನ ಪಾಪೇನ ಚ ನೈವ ಚಾಸೌ ।**
**ಲಿಪ್ಯೇತ ತಾಭ್ಯಾಂ ಪರಮಸ್ವತಂತ್ರಃ ಕರ್ತಾ**
**ತತಃ ಪುರುಷೋಽಪ್ಯಸ್ಯ ವಶ್ಯಃ ॥ ೭೪ ॥**

**ಪದಚ್ಛೇದ :– ತೇನ, ಏವ, ಲೇಪಃ, ಚ, ಭವೇತ್, ಅಮುಷ್ಯ, ಪುಣ್ಯೇನ, ಪಾಪೇನ, ಚ, ನ, ಏವ, ಚ, ಅಸೌ, ಲಿಪ್ಯೇತ, ತಾಭ್ಯಾಂ, ಪರಮಸ್ವತಂತ್ರಃ, ಕರ್ತಾ, ತತಃ, ಪುರುಷಃ, ಅಪಿ, ಅಸ್ಯ, ವಶ್ಯಃ ॥**

**ಅರ್ಥ** :- **ತೇನೈವ** = ಈ ಪರಿಶೇಷ ಪ್ರಮಾಣದಿಂದಲೇ, **ಅಮುಷ್ಯ** = ಈ ಭಗವಂತನಲ್ಲಿ, **ಲೇಪಃ** = ಪುಣ್ಯಪಾಪಗಳ ಲೇಪವು, **ಭವೇತ್** = ಹೇಳಬೇಕಾದೀತು, **ಅಸೌ** = ಈ ಯಾವ ಭಗವಂತನು **ಪುಣ್ಯೇನ** = ಪುಣ್ಯದಿಂದಾಗಲೀ, **ಚ** = ಮತ್ತು, **ಪಾಪೇನ** = ಪಾಪದಿಂದಲಾಗಲೀ, **ಪರಮ ಸ್ವತಂತ್ರಃ** = ಪರಮ ಸ್ವತಂತ್ರನಾದ ಭಗವಂತನು, **ನೈವಲಿಪ್ಯೇತ** = ಲೇಪವುಳ್ಳವನಾಗಲಾರನು, **ತಾಭ್ಯಾಂ** = ಈ ಪುಣ್ಯಪಾಪಗಳಿಂದ, **ತತಃ** = ವ್ಯಾಪ್ತನಾದ, **ಪುರುಷಃ ಅಪಿ** = ಪುರುಷನಾದರೂ (ಈ ಜೀವನಾದರೂ) **ಅಸ್ಯ** = ಈ ಭಗವಂತನ, **ವಶ್ಯಃ** = ವಶದಲ್ಲಿರುವ, **ಕರ್ತಾ** = ಕರ್ತನು (ಅಸ್ವತಂತ್ರ ಕರ್ತನು).

ತಾತ್ಪರ್ಯ :- ಕರ್ತೃತ್ವವು ಜೀವನಲ್ಲಿಯಾಗಲಿ ಜಡದಲ್ಲಿಯಾಗಲೀ ಹೇಳಲು ಬರುವುದಿಲ್ಲವಾದ ಕಾರಣ ಪರಿಶೇಷ ಪ್ರಮಾಣದಿಂದ ಭಗವಂತನಿಗೆ ಹೇಳಬೇಕು. ಆದರೆ ಭಗವಂತನು ಸ್ವತಂತ್ರ ಕರ್ತೃವಾದ ಕಾರಣ ಅವನಿಗೆ ಯಾವ ಪುಣ್ಯ ಪಾಪಗಳ ಲೇಪವೂ ಇರುವುದಿಲ್ಲ. ಆದರೆ ಪುರುಷನು ಮಾತ್ರ ಅಸ್ವಂತ್ರನಾದರೂ ಭಗವಂತನ ಅಧೀನಕವಾದ ಕರ್ತಾ ಎಂದೆನಿಸುತ್ತಾನೆ.

**ಇತೀರಿತೋ ಧರ್ಮಜಃ ಕೃಷ್ಣಯೈವ ನಿರುತ್ತರತ್ವಂ ಗಮಿತಸ್ತ್ವಭರ್ತ್ಸಯತ್ ।**
**ಕುತರ್ಕಮಾಶ್ರಿತ್ಯ ಹರೇರಪಿ ತ್ವಮಸ್ವಾತಂತ್ರ್ಯಂ ಸಾಧಯಸೀತಿ ಚೋಕ್ತ್ವಾ ॥ ೭೫ ॥**

**ಪದಚ್ಛೇದ :– ಇತಿ, ಈರಿತಃ, ಧರ್ಮಜಃ, ಕೃಷ್ಣಯಾ, ಏವ, ನಿರುತ್ತರತ್ವಂ, ಗಮಿತಃ, ತು, ಅಭರ್ತ್ಸಯಿತ್ । ಕುತರ್ಕಂ, ಆಶ್ರಿತ್ಯ, ಹರೇಃ, ಅಪಿ, ತ್ವಂ, ಅಸ್ವಾತಂತ್ರ್ಯಂ, ಸಾಧಯಾಸಿ, ಇತಿ, ಚ, ಉಕ್ತ್ವಾ ॥**

ಅರ್ಥ :- ಇತಿ = ಹೀಗೆ ಕೃಷ್ಣಯಾ ಏವ = ದ್ರೌಪದಿಯಿಂದಲೇ, **ಈರಿತಃ** = ಹೇಳಲ್ಪಟ್ಟ, **ಧರ್ಮಜಃ** = ಧರ್ಮರಾಜನು, **ನಿರುತ್ತರತ್ವಂ** = ನಿರುತ್ತರತೆಯನ್ನು, **ಗಮಿತಃ ತು** = ಹೊಂದಿದವನಾಗಿ **ಅಭರ್ತ್ಸಯತ್** = ಗದರಿಸಿದನು, **ಚ** = ಮತ್ತು, **ತ್ವಂ** = ನೀನು, **ಕುತರ್ಕಂ** = ಶ್ರುತಿಗೆ ಅಪಾರ್ಥಕರಣರೂಪವಾದ ಕುಯುಕ್ತಿಯನ್ನು, **ಆಶ್ರಿತ್ಯ** = ಆಶ್ರಯಿಸಿ, **ಹರೇರಪಿ** = ಶ್ರೀ ಹರಿಗೂ ಕೂಡ, **ಅಸ್ವಾತಂತ್ರ್ಯಂ** = ಅಸ್ವಾತಂತ್ರ್ಯವನ್ನು, **ಸಾಧಯಸಿ** = ಪ್ರತಿಪಾದಿಸುವಿ, **ಇತಿ** = ಎಂದು, **ಉಕ್ತ್ವಾ** = ಹೇಳಿ.

ತಾತ್ಪರ್ಯ :- ಹೀಗೆ ದ್ರೌಪದಿಯಿಂದಲೇ ನಿರುತ್ತರನಾದ ಧರ್ಮರಾಜನು ಸಿಟ್ಟುಗೊಂಡವನಾಗಿ ದ್ರೌಪದಿಯನ್ನು ಗದರಿಸಿದ. ಅಷ್ಟೇ ಅಲ್ಲದೇ ನಿನ್ನ ಬುದ್ಧಿ ಕೌಶಲದಿಂದ ಶ್ರುತಿಗೆ ಅಪಾರ್ಥ ಮಾಡಿ ಆ ಶ್ರುತಿರೂಪವಾದ ಯುಕ್ತಿಯಿಂದ ಶ್ರೀ ಹರಿಗೂ ಅಸ್ವಾತಂತ್ರವನ್ನೇ ಪ್ರತಿಪಾದಿಸುವಿ ಎಂದು ಹೇಳಿ ದ್ರೌಪದಿಯನ್ನು ಗದರಿಸಿದ.

**ಛಲೇನ ತೇನ ಪ್ರತಿಭರ್ತ್ಸಿತಾ ಸಾ**
**ಕ್ಷಮಾಪಯಾಮಾಸ ನೃಪಂ ಯತಃ ಸ್ತ್ರೀ ।**
**ವಾಚಾಳತಾ ನಾತಿತರಾಂ ಹಿ ಶೋಭತೇ**
**ಸ್ತ್ರೀಣಾಂ ತತಃ ಪ್ರಾಹ ವೃಕೋದರಸ್ತಮ್ ॥ ೭೬ ॥**

ಪದಚ್ಛೇದ :– ಛಲೇನ, ತೇನ, ಪ್ರತಿಭರ್ತ್ಸಿತಾ, ಸಾ, ಕ್ಷಮಾಪಯಾಮಾಸ, ನೃಪಂ, ಯತಃ, ಸ್ತ್ರೀ । ವಾಚಾಲತಾ, ನ, ಅತಿತರಾಂ, ಹಿ, ಶೋಭತೇ, ಸ್ತ್ರೀಣಾಂ, ತತಃ, ಪ್ರಾಹ, ವೃಕೋದರಃ, ತಂ ॥

**ಅರ್ಥ** :- ತೇನ = ಆ ಯಾವ ಧರ್ಮರಾಜನಿಂದ, **ಛಲೇನ** = ದುರಾಗ್ರಹದಿಂದ, **ಪ್ರತಿಭರ್ತ್ಸಿತಾ** = ಗದರಿಸಿಕೊಳ್ಳಲ್ಪಟ್ಟ, ಸಾ = ಆ ಯಾವ, ಸ್ತ್ರೀ = ದ್ರೌಪದಿಯು, **ನೃಪಂ** = ರಾಜನಾದ ಧರ್ಮರಾಜನನ್ನು, **ಕ್ಷಮಾಪಯಾಮಾಸ** = ಕ್ಷಮೆಯನ್ನು ಪ್ರಾರ್ಥಿಸಿದಳು, **ಯತಃ** = ಯಾವ ಕಾರಣದಿಂದ, **ಸ್ತ್ರೀಣಾಂ** = ಸ್ತ್ರೀಯರಿಗೆ, **ವಾಚಾಲತಾ** = ಅತಿಯಾದ ಮಾತನಾಡುವಿಕೆಯು, **ಅತಿತರಾಂ** = ಬಹಳವಾಗಿ, **ನಹಿ ಶೋಭತೇ** = ಶೋಭಿಸುವುದಿಲ್ಲವಷ್ಟೇ, ತತಃ = ಅನಂತರ, **ತಂ** = ಆಧರ್ಮಜನನ್ನು ಕುರಿತು, **ವೃಕೋದರಃ** = ಭೀಮಸೇನನು, **ಪ್ರಾಹ** = ಹೇಳಿದನು.

**ತಾತ್ಪರ್ಯ** :- ದುರಾಗ್ರಹ ಪೂರ್ವಕವಾದ ಬುದ್ಧಿಯಿಂದ ಕೂಡಿದ ಧರ್ಮನಿಂದ ಗದರಿಸಿಕೊಂಡ ಆ ದ್ರೌಪದಿಯು ಧರ್ಮಜನ ಸತಿಯಾದ್ದರಿಂದಲೂ ಸ್ತ್ರೀಯಾದ್ದರಿಂದಲೂ ಕ್ಷಮೆಯನ್ನು ಕೇಳಿ ಸುಮ್ಮನಾದಳು. ಅದು ಯುಕ್ತವೂ ಹೌದು, ಏಕೆಂದರೆ ಸ್ತ್ರೀಯರಿಗೆ ಅತಿಯಾದ ಮಾತನಾಡುವಿಕೆಯು ಶೋಭಿಸದು. ಆನಂತರ ಧರ್ಮಜನನ್ನು ಭೀಮಸೇನನು ಮುಂದೆ ಹೇಳುವ ಮಾತುಗಳಿಂದ ದ್ರೌಪದಿಯ ವಾದವನ್ನು ಮುಂದಿಡುತ್ತಾನೆ.

**ರಾಜನ್ ವಿಷ್ಣುಃ ಸರ್ವಕರ್ತಾ ನಚಾನ್ಯ-**
**ಸ್ತತ್ತಂತ್ರಮೇವಾನ್ಯದಸೌ ಸ್ವತಂತ್ರಃ ।**
**ತಥಾಽಪಿ ಪುಂಸಾ ವಿಹಿತಂ ಸ್ವಕರ್ಮ**
**ಕಾರ್ಯಂ ತ್ಯಾಜ್ಯಂ ಚಾನ್ಯದತ್ಯಂತಯತ್ನಾತ್ ॥ ೭೭ ॥**

ಪದಚ್ಛೇದ :– ರಾಜನ್, ವಿಷ್ಣುಃ, ಸರ್ವಕರ್ತಾ, ನ, ಚ, ಅನ್ಯಃ, ತತ್, ತಂತ್ರಂ, ಏವ, ಅನ್ಯತ್, ಅಸೌ, ಸ್ವತಂತ್ರಃ । ತಥಾ, ಅಪಿ, ಪುಂಸಾ, ವಿಹಿತಂ, ಸ್ವಕರ್ಮ, ಕಾರ್ಯಂ, ತ್ಯಾಜ್ಯಂ, ಚ, ಅನ್ಯತ್, ಅತ್ಯಂತ, ಯತ್ನಾತ್ ॥

**ಅರ್ಥ** :- **ರಾಜನ್** = ರಾಜನೇ, **ವಿಷ್ಣು ಏವ** = ಶ್ರೀಹರಿಯೊಬ್ಬನೆ, **ಸರ್ವಕರ್ತಾ** = ಸರ್ವಕರ್ತೃವು, **ಅನ್ಯ** = ಅವನಿಗಿಂತ ಹೊರತಾದ ವ್ಯಕ್ತಿಗಳು, **ನ ಚ** = ಇಲ್ಲವಷ್ಟೇ, **ಅಸೌ** = ಈ ಯಾವ ಭಗವಂತನು **ಸ್ವತಂತ್ರಃ** = ಸ್ವತಂತ್ರನು **ಅನ್ಯತ್** = ಇತರವು **ತತ್ತಂತ್ರಂ** = ಅವನ ಅಧೀನವಷ್ಟೇ, **ತಥಾಪಿ** = ಹಾಗಿದ್ದರೂ, **ಪುಂಸಾ** = ಈ ಜೀವನಿಂದ, **ವಿಹಿತಂ** = ವಿಹಿತವಾದ **ಸ್ವಕರ್ಮ** = ತನ್ನ ವರ್ಣಾಶ್ರಮೋಚಿತವಾದ ಕರ್ತವ್ಯವು, **ಕಾರ್ಯಂ** = ಮಾಡಲ್ಪಡಬೇಕು, **ಅನ್ಯತ್** = ಬೇರೆಲ್ಲವೂ ಅತ್ಯಂತ, **ಯತ್ನಾತ್** = ಬಹಳಷ್ಟು ಪ್ರಯತ್ನದಿಂದ, **ತ್ಯಾಜ್ಯಂ** = ಬಿಡಲ್ಪಡಬೇಕು.

**ತಾತ್ಪರ್ಯ** :- ಎಲೈ ರಾಜನೇ ಭಗವಂತನು ಸರ್ವಕರ್ತನಾಗಿದ್ದಾನೆ. ಅವನ ಹೊರತಾದ ಸ್ವತಂತ್ರನಾದ ವ್ಯಕ್ತಿಗಳು ಯಾರೂ ಇಲ್ಲ. ಆದರೂ ಪ್ರತಿಯೊಬ್ಬ ಜೀವಿಯೂ ತನ್ನ ವರ್ಣಾಶ್ರಮೋಚಿತವಾದ ಕರ್ತವ್ಯವನ್ನು ಮಾಡಲೇಬೇಕು. ಅಷ್ಟೇ ಅಲ್ಲ ತನಗೆ ನಿಷಿದ್ಧವಾದ ಕರ್ಮವನ್ನು ಪ್ರಯತ್ನ ಪೂರ್ವಕವಾಗಿ ತ್ಯಜಿಸಲೇಬೇಕು.

**ಪ್ರತ್ಯಕ್ಷಮೇತತ್ ಪುರುಷಸ್ಯ ಕರ್ಮ**
**ತೇನಾನುಮೇಯಾ ಪ್ರೇರಣಾ ಕೇಶವಸ್ಯ ।**
**ಸ್ವಕರ್ಮ ಕೃತ್ವಾ ವಿಹಿತಂ ಹಿ ವಿಷ್ಣುನಾ**
**ತತ್ಪ್ರೇರಣೇತ್ಯೇವ ಬುಧೋಽನುಮನ್ಯತೇ ॥ ೭೮ ॥**

ಪದಚ್ಛೇದ :- ಪ್ರತ್ಯಕ್ಷಂ, ಏತತ್, ಪುರುಷಸ್ಯ, ಕರ್ಮ, ತೇನ, ಅನುಮೇಯಾ, ಪ್ರೇರಣಾ, ಕೇಶವಸ್ಯ । ಸ್ವಕರ್ಮ, ಕೃತ್ವಾ , ವಿಹಿತಂ, ಹಿ, ವಿಷ್ಣುನಾ, ತತ್, ಪ್ರೇರಣಾ, ಇತಿ, ಏವ, ಬುಧಃ, ಅನುಮನ್ಯತೇ ॥

**ಅರ್ಥ** :- **ಏತತ್** = ಈ ಯಾವ (ಪ್ರತ್ಯಕ್ಷಗೋಚರವಾದ) **ಪುರುಷಸ್ಯ** = ಪುರುಷನ, **ಕರ್ಮ** = ಅಸ್ವಾತಂತ್ರ್ಯರೂಪವಾದ ಕರ್ಮಾಚರಣೆಯು, **ಪ್ರತ್ಯಕ್ಷಂ** = ಪ್ರತ್ಯಕ್ಷ ಪ್ರಮಾಣ ಸಿದ್ಧವು, **ತೇನ** = ಈ ಯಾವ ಅಸ್ವಾತಂತ್ರ್ಯದ ಅನುಭವದಿಂದ, **ಕೇಶವಸ್ಯ** = ಭಗವಂತನ **ಪ್ರೇರಣಾ** = ಪ್ರೇರಣೆಯು, **ಅನುಮೇಯಾ** = ಅನುಮೇಯವಾಗಿದೆ, **ಬುಧಃ** = ಜ್ಞಾನಿಯು, **ವಿಷ್ಣುನಾ** = ಭಗವಂತನಿಂದ, **ವಿಹಿತಂ** = ಶಾಸ್ತ್ರಾದಿಗಳ ಮೂಲಕ ವಿಧಾನ ಮಾಡಿದ,

**ಸ್ವಕರ್ಮ** = ತನ್ನ ವರ್ಣಾಶ್ರಮೋಚಿತವಾದ ಕರ್ತವ್ಯವನ್ನು, **ಕೃತ್ವಾ** = ಮಾಡಿ, **ತತ್ ಪ್ರೇರಣಾ ಇತ್ಯೇವ** = ಶ್ರೀಹರಿಯ ಪ್ರೇರಣೆ ಎಂದೆ, **ಅನುಮನ್ಯತೇ** = ತಿಳಿಯುತ್ತಾನೆ.

**ತಾತ್ಪರ್ಯ** :- ಅಸ್ವತಂತ್ರನಾದ ಪುರುಷನ ಕರ್ಮಾಚರಣೆಯು ಸಹಜವಾಗಿಯೇ ಪರರಿಂದ ಪ್ರೇರಿತವಾಗಿದೆ. ಏಕೆಂದರೆ ಕೆಲವೊಂದು ಕರ್ಮಗಳು ತನಗೆ ಅನಿಷ್ಟಪ್ರಾಪಕ ಎಂದು ತಿಳಿದಿದ್ದರೂ ನರಕಾದಿಗಳಿಗೆ ಕಾರಣವಾಗುವ ಕರ್ಮಾಚರಣೆಯಲ್ಲಿ ಪ್ರವೃತ್ತಿ ಮಾಡುವುದು ಕಂಡಿದೆ. ಆದ್ದರಿಂದ ಸ್ವತಂತ್ರನಾದ ಭಗವಂತನ ಪ್ರೇರಣೆಯನ್ನು ತಿಳಿಯಲೇ ಬೇಕಾಗುವುದು. ಹೀಗಾಗಿಯೇ ಜ್ಞಾನಿಯು ಶಾಸ್ತ್ರಾದಿಗಳಿಂದ ಪ್ರತಿಪಾದಿತ ವಾದ ತನ್ನ ಕರ್ತವ್ಯಗಳನ್ನು ತಾನು ಮಾಡಿ ಈ ಕರ್ಮಾಚರಣೆ ಎಲ್ಲವೂ ಭಗವಂತನ ಪ್ರೇರಣೆ ಎಂದೇ ಭಾವಿಸುವನು.

**ತೇನೈತಿ ಸಮ್ಯಗ್ಗತಿಮಸ್ಯ ವಿಷ್ಣೋ-**
**ರ್ಜನೋಽಶುಭೋ ದೈವಮಿತ್ಯೇವ ಮತ್ವಾ ।**
**ಹಿತ್ವಾ ಸ್ವಕಂ ಕರ್ಮ ಗತಿಂ ಚ ತಾಮಸೀಂ**
**ಪ್ರಯಾತಿ ತಸ್ಮಾತ್ ಕಾರ್ಯಮೇವ ಸ್ವಕರ್ಮ ॥ ೭೯ ॥**

ಪದಚ್ಛೇದ :- ತೇನ, ಏತಿ, ಸಮ್ಯಗ್, ಗತಿಂ, ಅಸ್ಯ, ವಿಷ್ಣೋಃ, ಜನಃ, ಅಶುಭಃ, ದೈವಂ, ಇತಿ, ಏವ, ಮತ್ವಾ । ಹಿತ್ವಾ , ಸ್ವಕಂ, ಕರ್ಮ, ಗತಿಂ, ಚ, ತಾಮಸೀಂ, ಪ್ರಯಾತಿ, ತಸ್ಮಾತ್, ಕಾರ್ಯಂ, ಏವ, ಸ್ವಕರ್ಮ ।

**ಅರ್ಥ** :- **ಜನಃ** = ಜ್ಞಾನಿಯು, **ವಿಷ್ಣೋಃ** = ಭಗವಂತನ ಪ್ರೇರಣೆ ಎಂದು, **ತೇನ** = ಅನುಸಂಧಾನ ಮಾಡುವುದರಿಂದ, **ಸಮ್ಯಗ್ ಗತಿಂ** = ಉತ್ತಮವಾದ ಲೋಕವನ್ನು, **ಏತಿ** = ಹೊಂದುತ್ತಾನೆ, **ಅಶುಭಃ** = ದುರ್ಜನನಾದರೂ, **ದೈವಮಿತ್ಯೇವ** = ದೈವವೇ ಎಲ್ಲವನ್ನು ಮಾಡುವುದೆಂದು, **ಮತ್ವಾ** = ತಿಳಿದು, **ಸ್ವಕಂ** = ತನ್ನದಾದ, **ಕರ್ಮ** = ಕರ್ತವ್ಯಗಳನ್ನು, **ಹಿತ್ವಾ** = ಬಿಟ್ಟು, **ತಾಮಸೀಂ** = ತಾಮಸವಾದ, **ಗತಿಂ ಚ** = ಲೋಕವನ್ನಾದರೂ, **ಪ್ರಯಾತಿ** = ಹೊಂದುತ್ತಾನೆ, **ತಸ್ಮಾತ್** = ಆದ್ದರಿಂದ **ಸ್ವಕರ್ಮ** = ತನ್ನ ಕರ್ತವ್ಯವನ್ನು **ಕಾರ್ಯಮೇವ** = ಮಾಡಲೇಬೇಕಷ್ಟೇ.

**ತಾತ್ಪರ್ಯ** :- ಜ್ಞಾನಿಯು ಪ್ರತಿಯೊಂದು ಕರ್ಮವನ್ನೂ ಭಗವಂತನ ಪ್ರೇರಣೆ ಎಂದೇ ಭಾವಿಸುವುದರಿಂದ ಉತ್ತಮವಾದ ಲೋಕವನ್ನು ಹೊಂದುತ್ತಾನೆ. ಈ ದುರ್ಜನನಾದರೂ ಪ್ರತಿಯೊಂದು ದೈವವೇ ಬಗೆಯುವುದೆಂದು ತಿಳಿದು ಸ್ವಕರ್ಮವನ್ನು ತ್ಯಾಗಮಾಡಿ ತಾಮಸವಾದ ಲೋಕವನ್ನು ಹೊಂದುತ್ತಾನೆ.

**ಜ್ಞಾತವ್ಯಂ ಚೈವಾಸ್ಯ ವಿಷ್ಣೋರ್ವಶತ್ವಂ**
**ಕರ್ತವ್ಯಂ ಚೈವಾऽತ್ಮನಃ ಕಾರ್ಯಕರ್ಮ ।**
**ಪ್ರತ್ಯಕ್ಷೈಷಾ ಕರ್ತೃತಾ ಜೀವಸಂಸ್ಥಾ**
**ತಥಾऽऽಗಮಾದನುಮಾನಾಚ್ಚ ಸರ್ವಮ್ ॥ ೮೦ ॥**

**ಪದಚ್ಛೇದ** :- **ಜ್ಞಾತವ್ಯಂ, ಚ, ಏವ, ಅಸ್ಯ, ವಿಷ್ಣೋಃ, ವಶತ್ವಂ, ಕರ್ತವ್ಯಂ, ಚ, ಏವ, ಆತ್ಮನಃ, ಕಾರ್ಯಕರ್ಮ । ಪ್ರತ್ಯಕ್ಷ, ಏಷಾ, ಕರ್ತೃತಾ, ಜೀವಸಂಸ್ಥಾ, ತಥಾ, ಆಗಮಾತ್, ಅನುಮಾನಾತ್, ಚ, ಸರ್ವಮ್** ॥

**ಅರ್ಥ** :- **ಅಸ್ಯ** = ಈ ಜೀವನ, **ವಿಷ್ಣೋರ್ವಶತ್ವಂ** = ಭಗವಂತ ಅಧೀನತೆಯನ್ನು, **ಜ್ಞಾತವ್ಯಮೇವ** = ತಿಳಿಯಲೇಬೇಕು, **ಚ** = ಮತ್ತು **ಆತ್ಮನಃ** = ಜೀವಾತ್ಮನ **ಕಾರ್ಯಕರ್ಮ** = ತನ್ನ ವರ್ಣಾಶ್ರಮೋಚಿತವಾದ ಕರ್ತವ್ಯವೂ, **ಕರ್ತವ್ಯಮೇವ** = ಮಾಡಲೇಬೇಕು, **ಏಷಾ** = ಈ ಯಾವ, **ಜೀವಸಂಸ್ಥಾ** = ಜೀವನಲ್ಲಿರುವ, **ಕರ್ತೃತಾ** = ಕರ್ತೃತ್ವವು **ಪ್ರತ್ಯಕ್ಷಃ** = ಪ್ರತ್ಯಕ್ಷ ಪ್ರಮಾಣಸಿದ್ಧವೂ, **ತಥಾ** = ಹಾಗೆಯೇ, **ಸರ್ವಂ** = (ಜೀವನಲ್ಲಿರುವ ಕರ್ತೃತ್ವವಾಗಲೀ ಭಗವಂತನಲ್ಲಿರುವ ಸ್ವತಂತ್ರತೆಯಾಗಲೀ ಜೀವನ ಅಸ್ವಾತಂತ್ರ್ಯವಾಗಲೀ) ಎಲ್ಲವೂ **ಅನುಮಾನಾತ್** = ಅನುಮಾನ ಪ್ರಮಾಣದಿಂದ, **ಚ** = ಮತ್ತು, **ಆಗಮಾತ್** = ಆಗಮದಿಂದಲೂ (ತಿಳಿಯಬೇಕು).

**ತಾತ್ಪರ್ಯ** :- ಈ ಜೀವನು ಕರ್ತೃ ಎಂದು ತಿಳಿಯಬೇಕು. ಎಲ್ಲವೂ ಭಗವಂತನೇ ಮಾಡಿಸಿದರೂ ಈ ಜೀವನಲ್ಲಿ ಕರ್ತೃತ್ವವಿದೆ. ಅಂತೆಯೇ ಪರಮಾತ್ಮನೇ ಸರ್ವನಿಯಾಮಕನಾಗಿದ್ದಾನೆ. ಸ್ವತಂತ್ರನಾಗಿದ್ದಾನೆ ಎಂದು ಈ ಎರಡೂ ಜ್ಞಾನ ಆವಶ್ಯಕ, ಈ ಎರಡು ವಿಷಯಗಳನ್ನು ಪ್ರತ್ಯಕ್ಷ ಪ್ರಮಾಣ-

ದಿಂದಲೇ ತಿಳಿಯಬಹುದು. ಏಕೆಂದರೆ ನಾನು ಕರ್ಮ ಮಾಡುತ್ತಿದ್ದೇನೆ ಎಂದು ಸಾಕ್ಷಿ ಪ್ರತ್ಯಕ್ಷ ಪ್ರಮಾಣವಿದೆ. ಇನ್ನು ತಾನು ಭೋಗಿಸುತ್ತಿರುವುದರಿಂದ ತಾನು ಕರ್ಮಫಲವನ್ನೇ ಅನುಭವಿಸುತ್ತಿದ್ದೇನೆ ಎಂದೂ ಅನುಮಾನ ಪ್ರಮಾಣವೂ ಇದೆ. ಈ ವಿಷಯವನ್ನೇ ಶೃತಿಸ್ಮೃತಿಗಳು ಹೇಳುತ್ತವೆ. ಆದ್ದರಿಂದ ಭಗವಂತನ ಸ್ವತಂತ್ರತೆಯಾಗಲೀ ಜೀವನ ಅಧೀನತೆಯಾಗಲೀ ಇವೆಲ್ಲವನ್ನು ಈ ಮೇಲಿನ ಮೂರು ಪ್ರಮಾಣಗಳಿಂದ ತಿಳಿದುಕೊಳ್ಳಬೇಕು.

**ವಿಷ್ಣೋರ್ವಶೇ ತನ್ನ ಹೇಯಂ ದ್ವಯಂ ಚ**
**ಜಾನನ್ ವಿದ್ವಾನ್ ಕುರುತೇ ಕಾರ್ಯಕರ್ಮ ।**
**ತತ್ಪ್ರೇರಕಂ ವಿಷ್ಣುಮೇವಾಭಿಜಾನನ್**
**ಭವೇತ್ ಪ್ರಮಾಣತ್ರಿತಯಾನುಗಾಮೀ ।। ೮೧ ।।**

ಪದಚ್ಛೇದ :- **ವಿಷ್ಣೋಃ, ವಶೇ, ತತ್, ನ, ಹೇಯಂ, ದ್ವಯಂ, ಚ, ಜಾನನ್, ವಿದ್ವಾನ್, ಕುರುತೇ, ಕಾರ್ಯಕರ್ಮ । ತತ್, ಪ್ರೇರಕಂ, ವಿಷ್ಣುಂ, ಏವ, ಅಭಿಜಾನನ್, ಭವೇತ್, ಪ್ರಮಾಣತ್ರಿತಯಾನುಗಾಮೀ ।।**

**ಅರ್ಥ** :- **ವಿದ್ವಾನ್** = ವಿದ್ವಾಂಸನು, **ಸರ್ವಂ** = ಎಲ್ಲವನ್ನು, **ವಿಷ್ಣೋ** = ಭಗವಂತನ, **ವಶೇ** = ವಶದಲ್ಲಿರುವುದನ್ನಾಗಿ, **ಚ** = ಮತ್ತು, **ತತ್ದ್ವಯಂ** = ಹರಿಯ ಅಧೀನತೆಯನ್ನು ಮತ್ತು ಕರ್ತೃತ್ವವನ್ನು, **ನ ಹೇಯಂ** = ತ್ಯಾಗಮಾಡಬಾರದೆಂದು, **ಜಾನನ್** = ತಿಳಿದವನಾಗಿ, **ಕಾರ್ಯಕರ್ಮ** = ತನ್ನ ಸಹಜ ಸ್ವಭಾವವಾದ ಮತ್ತು ತನ್ನ ವರ್ಣಾಶ್ರಮೋಚಿತವಾದ ಕರ್ಮವನ್ನು, **ಕುರುತೇ** = ಮಾಡುತ್ತಾನೆ. **ತತ್ ಪ್ರೇರಕಂ** = ಈ ಎಲ್ಲದರ ಪ್ರೇರಕನನ್ನಾಗಿ, **ವಿಷ್ಣುಮೇವ** = ನಾರಾಯಣನನ್ನೇ **ಅಭಿಜಾನನ್** = ಎಲ್ಲೆಡೆಯಲ್ಲಿಯೂ ಚಿಂತಿಸುವವನಾಗಿ **ಪ್ರಮಾಣತ್ರಿತಯಾನುಗಾಮೀ** = ಪ್ರತ್ಯಕ್ಷಾದಿ ಮೂರು ಪ್ರಮಾಣಾನುಸಾರಿಯಾದವನಾಗಿ **ಭವೇತ್** = ಸಿದ್ಧವಾಗುವನಷ್ಟೇ.

**ಪೂರ್ಣಂ ಪ್ರಮಾಣಂ ತತ್ತ್ರಯಂ ಚಾವಿರೋಧೇ-**
**ನೈಕತ್ರಸ್ಥಂ ತತ್ತ್ರಯಂ ಚಾವಿರೋಧಿ ।**
**ಪೃಥಙ್ ಮಧ್ಯಂ ಚಾಪ್ರಮಾಣಂ ವಿರೋಧಿ**
**ಸ್ಯಾತ್ ತತ್ ತಸ್ಮಾತ್ ತ್ರಯಮೇಕತ್ರ ಕಾರ್ಯಮ್ ।। ೮೨ ।।**

ಪದಚ್ಛೇದ :- ಪೂರ್ಣಂ, ಪ್ರಮಾಣಂ, ತತ್, ತ್ರಯಂ, ಚ, ಅವಿರೋಧೇನ, ಏಕತ್ರಸ್ಥಂ, ತತ್, ತ್ರಯಂ, ಚ, ಅವಿರೋಧಿ, ಪೃಥಕ್, ಮಧ್ಯಂ, ಚ, ಅಪ್ರಮಾಣಂ, ವಿರೋಧಿ, ಸ್ಯಾತ್, ತತ್, ತಸ್ಮಾತ್, ತ್ರಯಂ, ಏಕತ್ರ, ಕಾರ್ಯಮ್ ॥

ಅರ್ಥ :- ತತ್ ತ್ರಯಂ = ಪ್ರತ್ಯಕ್ಷಾದಿ ಮೂರು ಪ್ರಮಾಣಗಳು ಅವಿರೋಧೇನ = ಪರಸ್ಪರ ಪೂರಕಗಳಾಗಿ ಏಕತ್ರಸ್ಥಂ = (ಒಂದೇ ವಿಷಯವನ್ನು ಸಮರ್ಥಿಸುವುದಾದರೆ, ಪೂರ್ಣಂ ಪ್ರಮಾಣಂ = ಪೂರ್ಣವಾದ ಪ್ರಮಾಣವಾಗುತ್ತದೆ, ತ್ರಯಂ = ಪ್ರತ್ಯಕ್ಷಾದಿ ಆ ಮೂರು ಪ್ರಮಾಣಗಳು ನ ವಿರೋಧಿ = ಪರಸ್ಪರ ವಿರೋಧಿಗಳಾಗದೇ (ಹಾಗೂ ಪೂರಕಗಳೂ ಆಗದೇ) ಪೃಥಕ್ = ವಿಭಿನ್ನ ವಿಷಯಕಗಳಾಗಿದ್ದರೆ, ತತ್ = ಆ ಮೂರು ಪ್ರಮಾಣಗಳು, ಮಧ್ಯಂ = ಮಧ್ಯಮ ಪ್ರಮಾಣವು, ವಿರೋಧಿ ಸ್ಯಾತ್ = ಆ ಮೂರು ಪ್ರಮಾಣಗಳು ವಿರೋಧಿಗಳೇ ಆಗಿದ್ದಲ್ಲಿ, ಅಪ್ರಮಾಣಂ = ಅಪ್ರಮಾಣವು, ತಸ್ಮಾತ್ = ಆದ್ದರಿಂದ, ತತ್ತ್ರಯಂ = ಆ ಮೂರು ಪ್ರಮಾಣಗಳನ್ನು, ಏಕತ್ರ = ಒಂದೇ ವಿಷಯದಲ್ಲಿ, ಕಾರ್ಯಂ = ಕೂಡಿಸಬೇಕಷ್ಟೇ.

ಅಜ್ಞಃ ಪ್ರತ್ಯಕ್ಷಂ ತ್ವಪಹಾಯೈವ ದೈವಂ
ಮತ್ವಾ ಕರ್ತೃ ಸ್ವಾತ್ಮಕರ್ಮ ಪ್ರಜಹ್ಯಾತ್ ।
ವಿದ್ವಾನ್ ಜೀವಂ ವಿಷ್ಣುವಶಂ ವಿದಿತ್ವಾ
ಕರೋತಿ ಕರ್ತವ್ಯಮಜಸ್ರಮೇವ ॥ ೮೩ ॥

ಪದಚ್ಛೇದ :- ಅಜ್ಞಃ, ಪ್ರತ್ಯಕ್ಷಂ, ತು, ಅಪಹಾಯ, ಏವ, ದೈವಂ, ಮತ್ವಾ, ಕರ್ತೃಃ, ಸ್ವಾತ್ಮಕರ್ಮ, ಪ್ರಜಹ್ಯಾತ್ । ವಿದ್ವಾನ್, ಜೀವಂ, ವಿಷ್ಣುವಶೇ, ವಿದಿತ್ವಾ, ಕರೋತಿ, ಕರ್ತವ್ಯಂ, ಅಜಸ್ರಂ, ಏವ ॥

ಅರ್ಥ :- ಅಜ್ಞಃ = ಅಜ್ಞಾನಿಯು, ಪ್ರತ್ಯಕ್ಷಂ = ಪ್ರತ್ಯಕ್ಷಸಿದ್ಧವಾದ ಜೀವಕರ್ತೃತ್ವವನ್ನು, ಅಪಹಾಯ = ಬಿಟ್ಟು (ತಿಳಿಯದೇ), ದೈವಂ = ದೈವವನ್ನೇ, ಕರ್ತೃ = ಕರ್ತೃವೆಂದು, ಮತ್ವಾ = ತಿಳಿದು, ಸ್ವಾತ್ಮಕರ್ಮ = ತನ್ನದಾದ ಕರ್ತವ್ಯವನ್ನು, ಪ್ರಜಹ್ಯಾತ್ = ಬಿಡುವನಷ್ಟೇ, ವಿದ್ವಾನ್ = ವಿದ್ವಾಂಸನಾದರೂ, ಜೀವಂ = ಈ ಜೀವನನ್ನು, ವಿಷ್ಣುವಶೇ = ಭಗವಂತನ

ಅಧೀನದಲ್ಲಿರುವವನಾಗಿ ವಿದಿತ್ವಾ = ತಿಳಿದು, ಕರ್ತವ್ಯಂ = ತನ್ನ ಕರ್ತವ್ಯವನ್ನು ಅಜಸ್ರಮೇವ = ನಿರಂತರವಾಗಿ, ಕರೋತಿ = ಮಾಡುತ್ತಾನೆ.

ಸ್ವಭಾವಾಖ್ಯಾ ಯೋಗ್ಯತಾ ಯಾ ಹಠಾಖ್ಯಾ
ಯಾಽನಾದಿಸಿದ್ಧಾ ಸರ್ವಜೀವೇಷು ನಿತ್ಯಾ ।
ಸಾ ಕಾರಣಂ ತತ್ ಪ್ರಥಮಂ ತು ದ್ವಿತೀಯ-
ಮನಾದಿ ಕರ್ಮೈವ ತಥಾ ತೃತೀಯಃ ॥ ೮೪ ॥

ಪದಚ್ಛೇದ :- ಸ್ವಭಾವಾಖ್ಯಾ, ಯೋಗ್ಯತಾ, ಯಾ, ಹಠಾಖ್ಯ, ಯಾ, ಅನಾದಿಸಿದ್ಧಾ ಸರ್ವಜೀವೇಷು, ನಿತ್ಯಾ । ಸಾ, ಕಾರಣಂ, ಪ್ರಥಮಂ, ತು, ದ್ವಿತೀಯಂ, ಅನಾದಿಕರ್ಮ, ಏವ, ತಥಾ, ತೃತೀಯಃ ॥

ಅರ್ಥ :- ಸರ್ವಜೀವೇಷು = ಎಲ್ಲಾ ಜೀವರುಗಳಲ್ಲಿ, ಅನಾದಿಸಿದ್ಧಾ = ಅನಾದಿಸಿದ್ಧವಾದ, ನಿತ್ಯಾ = ನಿತ್ಯವಾದ, ಸ್ವಭಾವಾಖ್ಯಾ = ಸ್ವಭಾವವೆಂದು ಕರೆಯಲ್ಪಡುವ, ಯಾಃ = ಯಾವ ಹಠಾಭ್ಯಾ = ಹಠವೆಂದೇ ಪ್ರಸಿದ್ಧವಾದ, ಯೋಗ್ಯತಾ = ಜೀವನ ಯೋಗ್ಯತೆಯೇ, ಪ್ರಥಮಂ = ಮೊದಲನೆಯ ಕಾರಣಂ = ಕಾರಣವು ದ್ವಿತೀಯಂ ತು = ಎರಡನೆಯ ಕಾರಣನಾದರೂ, ಅನಾದಿಕರ್ಮೈವ = ಅನಾದಿಕರ್ಮವೇ ಆಗಿದೆ. ತಥಾ = ಹಾಗೆಯೇ ತೃತೀಯ = ಮೂರನೆಯ ಕಾರಣವಾದರೂ.

ಜೀವಪ್ರಯತ್ನಃ ಪೌರುಷಾಖ್ಯಸ್ತದೇತತ್
ತ್ರಯಂ ವಿಷ್ಣೋರ್ವಶಗಂ ಸರ್ವದೈವ ।
ಸ ಕಸ್ಯಚಿನ್ನ ವಶೇ ವಾಸುದೇವಃ
ಪರಾತ್ ಪರಃ ಪರಮೋಽಸೌ ಸ್ವತಂತ್ರಃ ॥ ೮೫ ॥

ಪದಚ್ಛೇದ :- ಜೀವ ಪ್ರಯತ್ನಃ ಪೌರುಷಾಖ್ಯಃ ತದೇತತ್ ತ್ರಯಂ ವಿಷ್ಣೋಃ ವಶಗಂ ಸರ್ವದಾ ಏವ । ಸ ಕಸ್ಯಚಿತ್ ನ ವಶೇ ವಾಸುದೇವ ಪರಾತ್ ಪರಃ ಪರಮ ಅಸೌ ಸ್ವತಂತ್ರಃ ॥

ಅರ್ಥ :- ಪೌರುಷಾಖ್ಯಃ = ಪೌರುಷ ಎಂಮ ಕರೆಯಲ್ಪಡುವ, ಜೀವ ಪ್ರಯತ್ನಃ = ಜೀವ ಪ್ರಯತ್ನವು, ತದೇತತ್‌ತ್ರಯಾಂ = ಈ ಮೂರು

ಕಾರಣವಾದರೂ, ಸರ್ವದೈವ = ಯಾವಾಗಲೂ, ವಿಷ್ಣೋಃ = ನಾರಾಯಣನ, ವಶಗಂ = ವಶದಲ್ಲಿರುವುಗಳೇ ಆಗಿವೆ, ಸಃ ವಾಸುದೇವಃ = ನಾರಾಯಣನಾದರೂ ತಸ್ಯಚಿತ್ = ಯಾರೊಬ್ಬರ, ನ ವಶೇ = ವಶದಲ್ಲಿರುವವನಲ್ಲ, ಅಸೌ = ಈ ನಾರಾಯಣನು, ಪರಾತ್ಪರಃ = ಲಕ್ಷ್ಮೀದೇವಿಗಿಂತಲೂ ಉತ್ಕೃಷ್ಟನಾದವನು, ಪರಮಃ = ಸರ್ವೋತ್ತಮನು, ಸ್ವತಂತ್ರಃ = ಸ್ವತಂತ್ರನು.

ಹಠಶ್ಚಾಸೌ ತಾರತಮ್ಯಸ್ಥಿತೋ ಹಿ
ಬ್ರಹ್ಮಾಣಮಾರಭ್ಯ ಕಲಿಶ್ಚ ಯಾವತ್ ।
ಹಠಾಚ್ಚ ಕರ್ಮಾಣಿ ಭವಂತಿ ಕರ್ಮಜೋ
ಯತ್ನೋ ಯತ್ನೋ ಹಠಕರ್ಮಪ್ರಯೋಕ್ತಾ ॥ ೮೬ ॥

ಪದಚ್ಛೇದ :- ಹಠಃ ಚ ಅಸೌ ತಾರತಮ್ಯಸ್ಥಿತಃ ಹಿ ಬ್ರಹ್ಮಾಣಂ ಆರಭ್ಯ ಕಲಿಃ ಚ ಯಾವತ್ । ಹಠಾತ್ ಚ ಕರ್ಮಾಣಿ ಭವಂತಿ ಕರ್ಮಜಃ ಯತ್ನಃ ಯತ್ನಃ ಹಠ ಕರ್ಮ ಪ್ರಯೋಕ್ತಾ ॥

ಅರ್ಥ :- ಅಸೌ = ಈ ಯಾವ ಜೀವನ, ಹಠಶ್ಚ = ಯೋಗ್ಯತೆ ಯಾದರೂ, ಬ್ರಹ್ಮಾಣಮಾರಭ್ಯ = ಬ್ರಹ್ಮನಿಂದಾರಂಭಿಸಿ, ಕಲಿಶ್ಚ ಯಾವತ್ = ಕಲಿಯ ಪರ್ಯಂತವೂ ತಾರತಮ್ಯಸ್ಥಿತ ಹಿ = ತಾರತಮ್ಯದಿಂದ ಕೂಡಿರುತ್ತದೆಯಷ್ಟೇ, ಹಠಾಚ್ಚ = ಆ ತಾರತಮ್ಯದಿಂದ ಕೂಡಿದ ಯೋಗ್ಯತೆಯಿಂದಲಾದರೂ, ಕರ್ಮಾಣಿ = ಕರ್ಮಗಳು, ಭವಂತಿ = ತಾರತಮ್ಯ ಯುಕ್ತವಾಗಿಯೇ ಉಂಟಾಗುತ್ತವೆ. ಕರ್ಮಜೋ ಯತ್ನಃ = ಕರ್ಮದಿಂದ ಉಂಟಾಗುವ ಪ್ರಯತ್ನಗಳೂ (ತಾರತಮ್ಯಯುಕ್ತವಾಗಿಯೇ ಇರುತ್ತವೆ) ಯತ್ನಃ = ಪೂರ್ವ ಕರ್ಮದಿಂದ ಉಂಟಾದ ಪುರುಷ ಪ್ರಯತ್ನವು ಹಠ ಕರ್ಮ ಪ್ರಯೋಕ್ತಾ = ಪುರುಷ ಕರ್ಮ ಫಲಾಧಾಯಕವು.

ವಿನಾ ಯತ್ನಂ ನ ಹಠೋ ನಾಪಿ ಕರ್ಮ
ಫಲಪ್ರದೌ ವಾಸುದೇವೋಽಖಿಲಸ್ಯ ।
ಸ್ವಾತಂತ್ರ್ಯಶಕ್ತೇರ್ವಿನಿಯಾಮಕೋ ಹಿ
ತಥಾಽಪ್ಯೇತಾನ್ ಸೋಽಪ್ಯಪೇಕ್ಷ್ಯೈವ ಯುಂಜೇತ್ ॥ ೮೭ ॥

ಪದಚ್ಛೇದ :- ವಿನಾ, ಯತ್ನಂ, ನ, ಹಠಃ, ನಾಪಿ, ಕರ್ಮ, ಫಲಪ್ರದೌ, ವಾಸುದೇವಃ, ಅಖಿಲಸ್ಯ, ಸ್ವಾತಂತ್ರ್ಯ, ಶಕ್ತೇಃ, ವಿನಿಯಾಮಕಃ, ಹಿ, ತಥಾಪಿ, ಏತಾನ್, ಸಃ, ಅಪಿ, ಅಪೇಕ್ಷ್ಯ, ಏವ, ಯುಂಜೀತ್ ॥

ಅರ್ಥ :- ಯತ್ನಂ ವಿನಾ = ಪುರುಷ ಪ್ರಯತ್ನವಿಲ್ಲದ ಹೊರತು, ಹಠಃ = ಯೋಗ್ಯತೆಯು, ನ = ಫಲ ಕೊಡುವುದಿಲ್ಲ, ನಾಪಿಕರ್ಮ = ಪೂರ್ವ ಕರ್ಮವೂ (ಫಲ ನೀಡುವುದಿಲ್ಲ), ಅಖಿಲಸ್ಯ = ಎಲ್ಲದರ, ಫಲಪ್ರದ = ಫಲವನ್ನು ಕೊಡುವವನಾದ, ವಾಸುದೇವಃ = ನಾರಾಯಣನು, ಸ್ವಾತಂತ್ರ್ಯ ಶಕ್ತೇಃ = ಸ್ವಾತಂತ್ರಶಕ್ತಿಗೆ, ನಿಯಾಮಕಃ ಹಿ = ನಿಯಾಮಕನಷ್ಟೇ, ತಥಾಪಿ = ಹಾಗಿದ್ದರೂ, ಸೋಽಪಿ = ಅವನಾದರೂ, ಏತಾನ್ = ಯೋಗ್ಯತೆ ಪೂರ್ವಕರ್ಮ ಪ್ರಯತ್ನ ಈ ಮೂರನ್ನು, ಅಪೇಕ್ಷ್ಯೈವ = ಅಪೇಕ್ಷಿಸಿಯೇ, ಯುಂಜೀತ್ = ಜೀವನನ್ನು ನಿಯಮಿಸುತ್ತಾನೆ.

ಏತಾನಪೇಕ್ಷ್ಯೈವ ಫಲಂ ದದಾನೀ-
ತ್ಯಸ್ಯೈವ ಸಂಕಲ್ಪ ಇತಿ ಸ್ವತಂತ್ರತಾ ।
ನಾಸ್ಯಾಪಗಚ್ಛೇತ್ ಸ ಹಿ ಸರ್ವಶಕ್ತಿ-
ರ್ನಾಶಕ್ತತಾ ಕ್ವಚಿದಸ್ಯ ಪ್ರಭುತ್ವಾತ್ ॥ ೮೮ ॥

ಪದಚ್ಛೇದ :- ಏತಾನ್, ಅಪೇಕ್ಷ್ಯ, ಏವ, ಫಲಂ, ದದಾನೀತಿ, ಅಸ್ಯ, ಏವ, ಸಂಕಲ್ಪ ಇತಿ, ಸ್ವತಂತ್ರತಾ, ನ, ಅಸ್ಯ, ಅಪಗಚ್ಛೇತ್, ಸ, ಹಿ, ಸರ್ವಶಕ್ತಿಃ, ನ, ಅಶಕ್ತತಾ, ಕ್ವಚಿತ್, ಅಸ್ಯ, ಪ್ರಭುತ್ವಾತ್ ॥

ಅರ್ಥ :- ಏತಾನ್ = ಯೋಗ್ಯತೆ ಕರ್ಮ ಪ್ರಯತ್ನ ಈ ಮೂರನ್ನು, ಅಪೇಕ್ಷ್ಯೈವ = ಅನುಸರಿಸಿಯೇ, ಫಲಂ = ಫಲವನ್ನು, ದದಾನೀತಿ = ಕೊಡುವನೆಂದು, ತಸ್ಯ = ಶ್ರೀಹರಿಯದ್ದೇ ಸಂಕಲ್ಪಃ = ಸಂಕಲ್ಪವು, ಇತಿ = ಆದ್ದರಿಂದ ಸ್ವತಂತ್ರತಾ ಏವ = (ಸ್ವತಂತ್ರನೇ) ಸ್ವಾತಂತ್ರ್ಯವೇ, ನ ಅಪಗಚ್ಛೇತ್ = ಹೋಗುವುದಿಲ್ಲವಷ್ಟೇ, ಸ ಹಿ = ಆ ಹರಿಯಾದರೂ, ಸರ್ವಶಕ್ತಿಃ = ಸರ್ವಶಕ್ತನು ಪ್ರಭುತ್ವಾತ್ = ಅತ್ಯಂತ ಸಮರ್ಥನೂ ಆದ್ದರಿಂದ ಅಸ್ಯ = ಈ ಭಗವಂತನಿಗೆ ಕ್ವಚಿತ್ = ಸ್ವಲ್ಪವಾದರೂ ನ ಅಶಕ್ತತಾ = ಅಸ್ವಾತಂತ್ರವಿಲ್ಲವಷ್ಟೇ (ಆ ಶಕ್ತಿ ಇಲ್ಲವಷ್ಟೇ)

**ತಸ್ಮಾತ್ ಕಾರ್ಯಂ ತೇನ ಕ್ಲೃಪ್ತಂ ಸ್ವಕರ್ಮ**
**ತತ್ಪೂಜಾರ್ಥಂ ತೇನ ತತ್ಪ್ರಾಪ್ತಿರೇವ ।**
**ಅತೋಽನ್ಯಥಾ ನಿರಯಃ ಸರ್ವಥಾ ಸ್ಯಾತ್**
**ಸ್ವಕರ್ಮ ವಿಪ್ರಸ್ಯ ಜಪೋಪದೇಶೌ ॥ ೮೯ ॥**

ಪದಚ್ಛೇದ :- ತಸ್ಮಾತ್, ಕಾರ್ಯಂ, ತೇನ, ಕ್ಲೃಪ್ತಂ, ಸ್ವಕರ್ಮ, ತತ್, ಪೂಜಾರ್ಥಂ, ತೇನ, ತತ್ಪ್ರಾಪ್ತಿ, ಏವ, ಅತಃ, ಅನ್ಯಥಾ, ನಿರಯ, ಸರ್ವಥಾ, ಸ್ಯಾತ್, ಸ್ವಕರ್ಮ, ವಿಪ್ರಸ್ಯ, ಜಪೋಪದೇಶೌ ॥

**ಅರ್ಥ** :- **ತಸ್ಮಾತ್** = ಆದ್ದರಿಂದ, **ತೇನ** = ಜೀವನಿಂದ **ಕ್ಲೃಪ್ತಂ** = ಪ್ರಸಿದ್ಧವಾದ (ಶಾಸ್ತ್ರಬದ್ಧವಾದ) **ಸ್ವಕರ್ಮ** = ತನ್ನ ವರ್ಣಾಶ್ರಮೋಚಿತವಾದ ಕರ್ತವ್ಯವನ್ನು **ತತ್ಪೂಜಾರ್ಥಂ** = ಭಗವಂತನ ಪ್ರೀತಿಗಾಗಿ, **ಕಾರ್ಯಂ** = ಮಾಡಬೇಕು, **ತೇನ** = ಕರ್ತವ್ಯವನ್ನು ಮಾಡುವುದರಿಂದ, **ತತ್ಪ್ರಾಪ್ತಿರೇವ** = ಭಗವತ್ ಪ್ರಾಪ್ತಿಯೇ ಆಗಿದೆ, **ಅನ್ಯಥಾ** = ಕರ್ತವ್ಯವನ್ನು ಮಾಡದೇ ಇದ್ದಲ್ಲಿ **ಸರ್ವತಾ** = ಸರ್ವ ಪ್ರಕಾರಗಳಿಂದಲೂ **ನಿರಯಃ** = ನರಕವು **ಸ್ಯಾತ್** = ಆದೀತು, **ಅತಃ** = ಆದ್ದರಿಂದ **ವಿಪ್ರಸ್ಯ** = ಬ್ರಾಹ್ಮಣನಿಗೆ ಉಪದೇಶೌ = ಜಪ ಮತ್ತು ಉಪದೇಶವು ಸ್ವಕರ್ಮವೆನಿಸಿದೆ.

**ವಿಷ್ಣೋರ್ಮುಖಾದ್ ವಿಪ್ರಜಾತಿಃ ಪ್ರವೃತ್ತಾ**
**ಮುಖೋತ್ಥಿತಂ ಕರ್ಮ ತೇನಾಸ್ಯ ಸೋಽದಾತ್ ।**
**ಬಾಹ್ವೋರ್ಜಾತಃ ಕ್ಷತ್ರಿಯಸ್ತೇನ ಬಾಹ್ವೋಃ**
**ಕರ್ಮಾಸ್ಯ ಪಾಪಪ್ರತಿವಾರಣಂ ಹಿ ॥ ೯೦ ॥**

ಪದಚ್ಛೇದ :- ವಿಷ್ಣೋಃ, ಮುಖಾತ್, ವಿಪ್ರಜಾತಿಃ, ಪ್ರವೃತ್ತಾ, ಮುಖೋತ್ಥಿತಂ, ಕರ್ಮ, ತೇನ, ಅಸ್ಯ, ಸಃ, ಅದಾತ್, ಬಾಹ್ವೋಃ, ಜಾತಃ, ಕ್ಷತ್ರಿಯ, ತೇನ, ಬಾಹ್ವೋಃ, ಕರ್ಮ, ಅಸ್ಯ, ಪಾಪಪ್ರತಿವಾರಣಂ, ಹಿ ।

**ಅರ್ಥ** :- **ವಿಪ್ರಜಾತಿಃ** = ಬ್ರಾಹ್ಮಣ ಜಾತಿಯು, **ವಿಷ್ಣೋಃ** = ನಾರಾಯಣನ **ಮುಖಾತ್** = ಮುಖದಿಂದ **ಪ್ರವೃತ್ತಾ** = ಪ್ರವೃತ್ತವಾಯಿತು **ತೇನ** = ಅದರಿಂದ **ಅಸ್ಯ** = ಈ ಬ್ರಾಹ್ಮಣನಿಗೆ **ಮುಖೋತ್ಥಿತಂ** = ಮುಖಕ್ಕೆ ಸಂಬಂಧಿಸಿದ ಕರ್ಮವನ್ನು **ಅದಾತ್** = ನೀಡಿದನು **ಕ್ಷತ್ರಿಯಃ** =

ಕ್ಷತ್ರಿಯನಾದರೂ ಬಾಹ್ವೋರ್ಜಾತಃ = ಬಾಹುವಿನಿಂದ ಹುಟ್ಟಿದವ ಅತಃ = ಆದ್ದರಿಂದ ಅಸ್ಯ = ಈ ಕ್ಷತ್ರಿಯನಿಗೆ ಪಾಪಪ್ರತಿವಾರಣಂ = ದುರ್ಜನರ ನಿಗ್ರಹದ ಜೊತೆಗೆ ಸಜ್ಜನರ ರಕ್ಷಣೆಯ ರೂಪವಾದ ಬಾಹ್ವೋಃ = ಬಾಹುವಿಗೆ ಸಂಬಂಧಿಸಿದ ಕರ್ಮ = ಕರ್ತವ್ಯವು (ವಿಹಿತವಾಗಿವೆ).

ಪ್ರವರ್ತ್ತನಂ ಸಾಧುಧರ್ಮಸ್ಯ ಚೈವ
ಮುಖಸ್ಯ ಬಾಹ್ವೋಶ್ಚಾತಿಸಾಮೀಪ್ಯತೋಽಸ್ಯ ।
ಜಪೋಪದೇಶೌ ಕ್ಷತ್ರಿಯಸ್ಯಾಪಿ ವಿಷ್ಣು-
ಶ್ಚಕ್ರೇ ಧರ್ಮೌ ಯಜ್ಞಕರ್ಮಾಪಿ ವಿಪ್ರೇ ॥ ೯೦ ॥

ಪದಚ್ಛೇದ :- ಪ್ರವರ್ತನಂ ಸಾಧುಧರ್ಮಸ್ಯ ಚ ಏವ ಮುಖಸ್ಯ ಬಾಹ್ವೋಃ ಚ ಅತಿಸಾಮೀಪ್ಯತಃ ಅಸ್ಯ । ಜಪೋಪದೇಶೌ ಕ್ಷತ್ರಿಯಸ್ಯ ಅಪಿ ವಿಷ್ಣುಃ ಚಕ್ರೇ ಧರ್ಮೌ ಯಜ್ಞಕರ್ಮ ಅಪಿ ವಿಪ್ರೇ ॥

ಅರ್ಥ :- ಅಸ್ಯ = ಈ ಕ್ಷತ್ರಿಯನಿಗೆ ಸಾಧು ಧರ್ಮಸ್ಯ = ವೈಷ್ಣವ ಧರ್ಮದ ಪ್ರವರ್ತಕಂ = ಮುನ್ನಡೆಸುವುದು ಚ = ಮತ್ತು ಬಾಹ್ವೋಃ = ಎರಡು ತೋಳುಗಳಿಗೆ ಮುಖಸ್ಯ = ಮುಖದ ಜೊತೆಗೆ ಅತಿ ಸಾಮೀಪ್ಯತಃ = ಬಹಳ ಸಾಮೀಪ್ಯವಿರುವುದರಿಂದ ವಿಷ್ಣುಃ = ನಾರಾಯಣನು ಕ್ಷತ್ರಿಯಸ್ಯಾಪಿ = ಕ್ಷತ್ರಿಯನಿಗೂ ಕೂಡ ಜಪೋಪದೇಶೌ = ಜಪ ಮತ್ತು ಉಪದೇಶಗಳನ್ನು ಧರ್ಮಾ = ಸ್ವಧರ್ಮಗಳನ್ನಾಗಿ ವಿಪ್ರೇಪಿ = ಬ್ರಾಹ್ಮಣ ನಿಗಾದರೂ ಯಜ್ಞಕರ್ಮಾ = ಯಜ್ಞದ ಯಾಜನವನ್ನು ಚಕ್ರೇ = ಸ್ವಧರ್ಮವನ್ನಾಗಿ ಮಾಡಿದನು.

ವೈಶ್ಯೋ ಯಸ್ಮಾದೂರುಜಸ್ತೇನ ತಸ್ಯ
ಪ್ರಜಾವೃದ್ಧಿಸ್ತಜ್ಜಕರ್ಮೈವ ಧರ್ಮಃ ।
ತತ್ಸಾದೃಶ್ಯಾತ್ ಸ್ಥಾವರಾಣಾಂ ಚ ವೃದ್ಧಿಂ
ಕರೋದೂರ್ವೋಃ ಸನ್ನಿಕೃಷ್ಟತ್ವಹೇತೋಃ ॥ ೯೨ ॥

ಪದಚ್ಛೇದ :- ವೈಶ್ಯಃ ಯಸ್ಮಾತ್ ಊರುಜಃ ತೇನ ತಸ್ಯ ಪ್ರಜಾವೃದ್ಧಿಃ ತಜ್ಜಕರ್ಮೈವ ಏವ ಧರ್ಮಃ । ತತ್ ಸಾದೃಶ್ಯಾತ್ ಸ್ಥಾವರಾಣಾಂ ಚ ವೃದ್ಧಿಂ ಕರೋರುವೋ ಸನ್ನಿಕೃಚ್ಚತ್ವ ಹೇತೋಃ ॥

ಅರ್ಥ :- ವೈಶ್ಯಃ = ವೈಶ್ಯನು, ಯಸ್ಮಾತ್ = ಯಾವ ಕಾರಣದಿಂದ, ಊರುಜಃ = ತೊಡೆಯಿಂದ ಹುಟ್ಟಿರುವನೋ, ತೇನ = ಆ ಕಾರಣದಿಂದ, ತಸ್ಯ = ಆ ವೈಶ್ಯನಿಗೆ ತಜ್ಜಕರ್ಮೈವ = ಆ ಊರುವಿಗೆ ಸಂಬಂಧಿಸಿದ, ಪ್ರಜಾವೃದ್ಧಿಃ = ಸಂತಾನೋತ್ಪತ್ತಿಯೇ, ಧರ್ಮಃ = ಧರ್ಮವು, ತತ್ಸಾದೃಶ್ಯಾತ್ = ಸಂತಾನೋತ್ಪತ್ತಿಗೆ ಸದೃಶವಾದ, ಸ್ಥಾವರಾಣಾಂ = ಕೃಷಿಯೇ ಮೊದಲಾದವುಗಳ ವೃದ್ಧಿಃ = ಬೆಳವಣಿಗೆಯು (ಧರ್ಮಃ = ಧರ್ಮವು), ಚ = ಹಾಗೆಯೇ, ಕರೋಃ = ಕೈಗಳಿಗೆ ಊರೋಃ = ತೊಡೆಗಳಿಗೆ ಸನ್ನಿಕರ್ಷಾತ್ = ಸಂಬಂಧವಿರುವುದರಿಂದ.

ವಾರ್ತಾತ್ಮಕಂ ಕರ್ಮ ಧರ್ಮಂ ಚಕಾರ
ವಿಷ್ಣುಸ್ತಸ್ಯೈವಾಂಘ್ರಿಜಃ ಶೂದ್ರ ಉಕ್ತಃ ।
ಗತಿಪ್ರಧಾನಂ ಕರ್ಮ ಶುಶ್ರೂಷಣಾಖ್ಯಂ
ಸಾದೃಶ್ಯತೋ ಹಸ್ತಪದೋಸ್ತಥೈವ ॥ ೯೩ ॥

ಪದಚ್ಛೇದ :– ವಾರ್ತಾತ್ಮಕಂ ಕರ್ಮ ಧರ್ಮಂ ಚಕಾರ ವಿಷ್ಣು ತಸ್ಯ ಏವ ಅಂಘ್ರಿಜಃ ಶೂದ್ರಃ ಉಕ್ತಃ ಗತಿಪ್ರದಾನಂ ಕರ್ಮ ಶುಶ್ರೂಷಣಾಖ್ಯಂ ಸಾದೃಶ್ಯತಃ ಹಸ್ತ ಪದೋಃ ತಥಾ ಏವ ।

ಅರ್ಥ :- ವಿಷ್ಣುಃ = ನಾರಾಯಣನು, ತಸ್ಯೈವ = ಆ ವೈಶ್ಯನಿಗೆ, ವಾರ್ತಾತ್ಮಕಂ = ವಾರ್ತಾ ರೂಪವಾದ ಗೋರಕ್ಷಣೆ, ಬಡ್ಡಿ ಮೊದಲಾದ, ಕರ್ಮ = ಕರ್ಮವನ್ನು, ಧರ್ಮಂ = ಧರ್ಮವನ್ನಾಗಿ, ಚಕಾರ = ಮಾಡಿದನು. ಅಂಘ್ರಿಜಃ = ಕಾಲುಗಳಿಂದ ಹುಟ್ಟಿದ, ಶೂದ್ರ ಉಕ್ತಃ = ಶೂದ್ರನೆಂದು ಹೇಳಲ್ಪಟ್ಟವನಿಗೆ, ಗತಿಪ್ರದಾನಂ = ಪಾದಪ್ರಧಾನವಾದ, ಶುಶ್ರೂಷಣಾಖ್ಯಂ = ಚರಣಸೇವೆಯೇ ಮೊದಲಾದ (ಮನೆಯಿಂದ ಮನೆಗೆ ಹೋಗಿ ಸೇವೆ ಮಾಡುವವರಾಗಿ) ಕರ್ಮ = ಕರ್ತವ್ಯವನ್ನು ತಥೈವ = ಹಾಗೆಯೇ, ಹಸ್ತಪದೋಃ = ಕೈ ಕಾಲುಗಳಿಗೆ ಸಾದೃಶ್ಯಾತ್ = (ಸಾಮ್ಯವಿರುವುದರಿಂದ) ಸಾಮೀಪ್ಯವಿರುವುದರಿಂದ.

ಹಸ್ತೋದ್ಭವಂ ಕರ್ಮ ತಸ್ಯಾಪಿ ಧರ್ಮಃ
ಸಂತಾನವೃದ್ಧಿಶ್ಚ ಸಮೀಪಗತ್ವಾತ್ ।

ಭುಜಾವುರೋ ಹೃದಯಂ ಯದ್ ಬಲಸ್ಯ
ಜ್ಞಾನಸ್ಯ ಚ ಸ್ಥಾನಮತೋ ನೃಪಾಣಾಮ್ ॥ ೯೪ ॥

ಪದಚ್ಛೇದ :- ಹಸ್ತೋದ್ಭವಂ ಕರ್ಮ ತಸ್ಯಾಪಿ ಧರ್ಮಃ ಸಂತಾನವೃದ್ಧಿಃ ಚ ಸಮೀಪಗತ್ವಾತ್ । ಭುಜೌ ಉರಃ ಹೃದಯಂ ಯತ್ ಬಲಸ್ಯ ಜ್ಞಾನಸ್ಯ ಚ ಸ್ಥಾನಂ ಅತಃ ನೃಪಾಣಾಮ್ ॥

ಅರ್ಥ :- ತಸ್ಯಾಪಿ = ಆ ಶೂದ್ರನಿಗೂ, ಹಸ್ತೋದ್ಭವಂ = ಕೈಗಳಿಂದಾಗುವ, ಕರ್ಮ = ಯುದ್ಧ ಕೃಷಿ ವಾಣಿಜ್ಯಾದಿಗಳೂ, ಧರ್ಮಃ = ಧರ್ಮವು, ಸಮೀಪಗತ್ವಾತ್ = ತೊಡೆ ಮತ್ತು ಕಾಲುಗಳಿಗೆ ಸಾಮೀಪ್ಯವಿರುವುದರಿಂದಲೇ, ಸಂತಾನವೃದ್ಧಿಶ್ಚ = ಸಂತಾನಾಭಿವೃದ್ಧಿಯೂ, ಧರ್ಮಃ = ಧರ್ಮವು, ಅತಃ = ಆದ್ದರಿಂದ, ಭುಜೌ = ಎರಡು ಭುಜಗಳು, ಉರಃ = ಎದೆಯು, ನೃಪಾಣಾಮ್ = ರಾಜರುಗಳಿಗೆ ಬಲಸ್ಯ = ಪರಾಕ್ರಮದ ಸ್ಥಾನಂ = ಸ್ಥಾನವು, ಹೃದಯಂ ಯತ್ = ಯಾವ ಹೃದಯವಾದರೂ, ಜ್ಞಾನಸ್ಯ = ಜ್ಞಾನದ ಸ್ಥಾನಂ = ಸ್ಥಾನವು.

ಬಲಂ ಜ್ಞಾನಂ ಚೋಭಯಂ ಧರ್ಮ ಉಕ್ತಃ
ಪಾಣೌ ಕೃತೀನಾಂ ಕೌಶಲಂ ಕೇವಲಂ ಹಿ ।
ತಸ್ಮಾತ್ ಪಾಣ್ಯೋರೂರುಪದೋರುಪಸ್ಥಿತೇಃ
ವಿಟ್‌ಛೂದ್ರಕೌ ಕರ್ಮಣಾಂ ಕೌಶಲೇತೌ ॥ ೯೫ ॥

ಪದಚ್ಛೇದ :- ಬಲಂ ಜ್ಞಾನಂ ಚ ಉಭಯಂ ಧರ್ಮ ಉಕ್ತಃ ಪಾಣೌ ಕೃತೀನಾಂ ಕೌಶಲಂ ಕೇವಲಂ ಹಿ. ತಸ್ಮಾತ್ ಪಾಣ್ಯೋಃ ಊರುಪದೋಃ ಉಪಸ್ಥಿತೇಃ ವಿಟ್‌ಶೂದ್ರಕೌ ಕರ್ಮಣಾಂ ಕೌಶಲೇತೌ ॥

ಅರ್ಥ :- ತಸ್ಮಾತ್ = ಆದ್ದರಿಂದ ಕ್ಷತ್ರಿಯರಿಗೆ ಬಲಂ = ಬಲಕಾರ್ಯವು, ಚ = ಮತ್ತು, ಜ್ಞಾನಂ = ಜ್ಞಾನಕಾರ್ಯವು, ಉಭಯಂ = ಈ ಎರಡೂ, ಧರ್ಮಃ = ಧರ್ಮವೆಂದು, ಉಕ್ತಃ = ಹೇಳಲ್ಪಟ್ಟಿದೆ. ಪಾಣೌ = ಎರಡು ಕೈಗಳು, ಕೇವಲಂ = ಕೇವಲ, ಕೃತೀನಾಂ = ಕರ್ಮಗಳ, ಕೌಶಲಂ = ಕೌಶಲವುಳ್ಳದ್ದಾಗಿದೆ. ಪಾಣ್ಯೋರೂರುಪದೋಃ = ಕೈಗಳು ತೊಡೆಗಳು ಮತ್ತು ಕಾಲುಗಳಿಗೆ, ಉಪಸ್ಥಿತೇಃ = ಪರಸ್ಪರ ಸಾಮೀಪ್ಯವಿರುವುದರಿಂದ,

**ವಿಟ್ ಶೂದ್ರಕೌ** = ವೈಶ್ಯ ಮತ್ತು ಶೂದ್ರರು, **ಕರ್ಮಣಾಂ** = ವ್ಯವಹಾರ, ಸೇವೆ ಕೃಷಿ ಮೊದಲಾದ ಕರ್ಮಗಳಲ್ಲಿ **ಕೌಶಲೇತೌ** = ಚಾತುರ್ಯವುಳ್ಳವರಾಗಿದ್ದಾರೆ.

**ಪ್ರಾಧಾನ್ಯತೋ ಧರ್ಮವಿಶೇಷ ಏಷ**
**ಸಾಮಾನ್ಯತಃ ಸರ್ವಮೇವಾಖಿಲಾನಾಮ್ ।**
**ವಯಂ ಹಿ ದೇವಾಸ್ತೇನ ಸರ್ವಂ ಹಿ ಕರ್ಮ**
**ಪ್ರಾಯೇಣ ನೋ ಧರ್ಮತಾಮೇತಿ ಶಶ್ವತ್ ॥ ೯೬ ॥**

ಪದಚ್ಛೇದ :- ಪ್ರಾಧಾನ್ಯತಃ ಧರ್ಮ ವಿಶೇಷಃ ಏಷಃ ಸಾಮಾನ್ಯತಃ ಸರ್ವಂ ಏವ ಅಖಿಲಾನಾಮ್ । ವಯಂ ಹಿ ದೇವಾ ತೇನ ಸರ್ವಂ ಹಿ ಕರ್ಮ ಪ್ರಾಯೇಣ ನಃ ಧರ್ಮತಾಂ ಏತಿ ಶಶ್ವತ ॥

**ಅರ್ಥ** :- **ಏಷಃ** = ಈ ಹಿಂದೆ ಹೇಳಿದ ವರ್ಣಾಶ್ರಮೋಚಿತವಾದ ಧರ್ಮವು **ಪ್ರಾಧಾನ್ಯತಃ** = ವಿಶೇಷವಾಗಿ (ಪ್ರಧಾನವಾಗಿ), **ಧರ್ಮವಿಶೇಷಃ** = ಆಯಾಯಾ ವರ್ಣದವರಿಗೆ ವಿಶೇಷ ಕರ್ತವ್ಯವಾಗಿದೆ, **ಸಾಮಾನ್ಯತಃ** = ಲೋಕದ ದೃಷ್ಟಿಯಿಂದ ಹೇಳುವುದಾದರೆ, **ಅಖಿಲಾನಾಂ** = ಎಲ್ಲಾ ವರ್ಣದವರ, **ಸರ್ವಂ** = ಎಲ್ಲ ಕರ್ತವ್ಯಗಳೂ ಧರ್ಮವೇ ಆಗಿದೆ. **ವಯಂ ಹಿ** = ನಾವಾದರೂ **ದೇವಾಃ** = ದೇವತೆಗಳು, **ತೇನ** = ಆದ್ದರಿಂದ, **ಸರ್ವಂ** = ಎಲ್ಲವೂ, **ಕರ್ಮ ಹಿ** = ಕರ್ಮವು, **ಪ್ರಾಯೇಣ** = ಪ್ರಾಯಃ, **ಶಶ್ವತ್** = ಯಾವಾಗಲೂ, **ನಃ** = ನಮಗೆ, **ಧರ್ಮತಾಂ** = ಕರ್ತವ್ಯವೆಂದೇ, **ಏತಿ** = ಎನಿಸುತ್ತದೆ.

**ಏತೈರ್ಧರ್ಮೈರ್ವಿಷ್ಣುನಾ ಪೂರ್ವಕ್ಲೃಪ್ತೈಃ**
**ಸರ್ವೈರ್ವರ್ಣೈರ್ವಿಷ್ಣುರೇವಾಭಿಪೂಜ್ಯಃ ।**
**ತದ್ಭಕ್ತಿರೇವಾಖಿಲಾನಾಂ ಚ ಧರ್ಮೋ**
**ಯಥಾಯೋಗ್ಯಂ ಜ್ಞಾನಮಸ್ಯಾಪಿ ಪೂಜಾ ॥ ೯೭ ॥**

ಪದಚ್ಛೇದ :- ಏತೈಃ ಧರ್ಮೈಃ ವಿಷ್ಣುನಾ ಪೂರ್ವಕ್ಲೃಪ್ತೈಃ ಸರ್ವೈಃ ವರ್ಣೈಃ ವಿಷ್ಣುಃ ಏವ ಅಭಿಪೂಜ್ಯಃ, ತತ್ ಭಕ್ತಿಃ ಏವ ಅಖಿಲಾನಾಂ ಚ ಧರ್ಮಃ ಯಥಾಯೋಗ್ಯಂ ಜ್ಞಾನಂ ಅಸ್ಯ ಅಪಿ ಪೂಜಾ ॥

**ಅರ್ಥ** :- **ವಿಷ್ಣುನಾ** = ಭಗವಂತನಿಂದ, **ಪೂರ್ವಕ್ಲೃಪ್ತ್ಯಃ** = ಸೃಷ್ಟಿಯ ಆರಂಭದಲ್ಲಿಯೇ ಭಗವಂತನಿಂದ ಕ್ಲೃಪ್ತವಾದ (ಪ್ರಸಿದ್ಧವಾದ) ಏತೈಃ = ಈ ಹಿಂದೆ ಹೇಳಿದ, **ಧರ್ಮೈಃ** = ವರ್ಣಾಶ್ರಮ ಧರ್ಮಗಳಿಂದ, **ಸರ್ವೈಃ** = ಎಲ್ಲಾ, **ವರ್ಣೈಃ** = ವರ್ಣದವರಿಂದ, **ವಿಷ್ಣುರೇವ** = ನಾರಾಯಣನೇ, **ಅಭಿಪೂಜ್ಯಃ** = ಪೂಜನೀಯನಾದವನು, **ತದ್ಭಕ್ತಿರೇವ** = ಶ್ರೀಮನ್ನಾರಾಯಣ ನಲ್ಲಿಯ ಭಕ್ತಿಯೇ **ಅಖಿಲಾನಾಂ** = ಎಲ್ಲಾ ವರ್ಣದವರಿಗೆ **ಧರ್ಮಃ** = ಧರ್ಮವು, **ಚ** = ಮತ್ತು, **ಯಥಾಯೋಗ್ಯಂ** = ಯೋಗ್ಯತೆಗೆ ಅನುಗುಣವಾಗಿ, **ಜ್ಞಾನಂ** = ಜ್ಞಾನವನ್ನು ಸಂಪಾದಿಸುವುದು, **ಅಸ್ಯ** = ಶ್ರೀಮನ್ನಾರಾಯಣನ **ಪೂಜಾಪಿ** = ಪೂಜಾಕೈಂಕರ್ಯವೂ ಕೂಡ.

**ಪಿತಾ ಗುರುಃ ಪರಮಂ ದೈವತಂ ಚ**
**ವಿಷ್ಣುಃ ಸರ್ವೇಷಾಂ ತೇನ ಪೂಜ್ಯಃ ಸ ಏವ ।**
**ತದ್ಭಕ್ತತ್ವಾದ್ ದೇವತಾಶ್ಚಾಭಿಪೂಜ್ಯಾ**
**ವಿಶೇಷತಸ್ತೇಷು ಯೇಽತ್ಯಂತಭಕ್ತಾಃ ॥ ೯೮ ॥**

**ಪದಚ್ಛೇದ** :– ಪಿತಾ ಗುರುಃ ಪರಮಂ ದೈವತಂ ಚ ವಿಷ್ಣುಃ ಸರ್ವೇಷಾಂ ತೇನ ಪೂಜ್ಯಃ ಸಃ ಏವ । ತತ್‌ಭಕ್ತತ್ವಾತ್ ದೇವತಾಃ ಚ ಅಭಿಪೂಜ್ಯಾಃ ವಿಶೇಷತಃ ತೇಷು ಯೇ ಅತ್ಯಂತಭಕ್ತಾಃ ॥

**ಅರ್ಥ** :- **ವಿಷ್ಣುಃ** = ನಾರಾಯಣನು, **ಸರ್ವೇಷಾಂ** = ಎಲ್ಲರಿಗೂ, **ಪಿತಾ** = ತಂದೆಯು, **ಗುರುಃ** = ಗುರುವು, **ಚ** = ಮತ್ತು, **ಪರಮಂ** = ಉತ್ಕೃಷ್ಟವಾದ **ದೈವತಂ** = ದೇವತೆಯು, **ಸ ಏನ** = ಅವನೇ, **ಪೂಜ್ಯಃ** = ಪೂಜ್ಯನು **ತದ್ಭಕ್ತತ್ವಾತ್** = ಆ ವಿಷ್ಣುವಿನ ಭಕ್ತರಾದ್ದರಿಂದಲೇ, **ದೇವತಾಶ್ಚ** = ಇತರೆ ಪರಿವಾರ ದೇವತೆಗಳಾದರೂ, **ಅಭಿಪೂಜ್ಯಾಃ** = ಪೂಜನೀಯ ರಾಗಿರುತ್ತಾರೆ. **ತೇಷು** = ಅವರುಗಳಲ್ಲಿಯೂ, **ಯೇ** = ಯಾರು, **ಅತ್ಯಂತ ಭಕ್ತಾಃ** = ಅತ್ಯಂತ ಶ್ರೇಷ್ಠರಾದ ಭಕ್ತರುಗಳೋ (ಅವರುಗಳು) **ವಿಶೇಷತಃ** = ಬಹಳವಾಗಿ (**ಪೂಜನೀಯಾಃ** = ಪೂಜನೀಯರಾಗಿದ್ದಾರೆ (ಅಭಿಮಾನ ಪೂರ್ವಕವಾಗಿ)

ಸಂಪೂಜಿತೋ ವಾಸುದೇವಃ ಸ ಮುಕ್ತಿಂ
ದದ್ಯಾದೇವಾಪೂಜಿತೋ ದುಃಖಮೇವ ।
ಸ್ವತಂತ್ರತ್ವಾತ್ ಸುಖದುಃಖಪ್ರದೋಽಸೌ
ನಾನ್ಯಃ ಸ್ವತಸ್ತದ್ವಶಾ ಯತ್ ಸಮಸ್ತಾಃ ॥ ೯೯ ॥

ಪದಚ್ಛೇದ :- ಸಂಪೂಜಿತಃ ವಾಸುದೇವಃ ಸಃ ಮುಕ್ತಿಂ ದದ್ಯಾತ್ ಏವ ಅಪೂಜಿತಃ ದುಃಖಂ ಏವ । ಸ್ವತಂತ್ರತ್ವಾತ್ ಸುಖದುಃಖಪ್ರದಃ ಅಸೌ ನ ಅನ್ಯಃಸ್ವತಃ ತತ್ ವಶಾಃ ಯತ್ ಸಮಸ್ತಾಃ ॥

ಅರ್ಥ :- ಸಂಪೂಜಿತಃ = ಚೆನ್ನಾಗಿ ಪೂಜಿಸಲ್ಪಟ್ಟ, ಸಃ ವಾಸುದೇವಃ = ಆ ನಾರಾಯಣನು, ಮುಕ್ತಿಂ = ಮೋಕ್ಷವನ್ನು, ದದ್ಯಾದೇವ = ಕೊಟ್ಟೇ ಕೊಡುವನಷ್ಟೇ, ಅಪೂಜಿತಃ = ಆರಾದಿಸಲ್ಪಡದವನಾಗಿ, ದುಃಖಮೇವ = ದುಃಖವನ್ನಷ್ಟೇ, ದದ್ಯಾತ್ = ಕೊಡುವನು, ಅಸೌ = ಈ ನಾರಾಯಣನು, ಸ್ವತಂತ್ರತ್ವಾತ್ = ಸ್ವತಂತ್ರನಾದುದರಿಂದಲೇ, ಸುಖದುಃಖಪ್ರದಃ = ಸುಖದುಃಖಪ್ರದನು, ಸ್ವತಃ = ಸ್ವತಂತ್ರನಾದವನು, ನಾನ್ಯಃ = ಬೇರೊಬ್ಬನಿಲ್ಲವಷ್ಟೇ, ಯತ್ ಸಮಸ್ತಾಃ = ಈ ಯಾವ ಸಮಸ್ತವೂ, ತದ್ವಶಾಃ = ಸ್ವತಂತ್ರನಾಗಿ ಸುಖದುಃಖಾದಿಪ್ರದನು, ಅವನ ಅಧೀನವೇ ಆಗಿದೆ.

ಸ್ವತಂತ್ರತ್ವಾತ್ ಸುಖಸಜ್ಜ್ಞಾನಶಕ್ತಿ-
ಪೂರ್ವೈರ್ಗುಣೈಃ ಪೂರ್ಣ ಏಷೋಽಖಿಲೈಶ್ಚ ।
ಸ್ವತಂತ್ರತ್ವಾತ್ ಸರ್ವದೋಷೋಜ್ಝಿತಶ್ಚ
ನಿಸ್ಸೀಮಶಕ್ತಿರ್ಹಿ ಯತಃ ಸ್ವತಂತ್ರಃ ॥ ೧೦೦ ॥

ಪದಚ್ಛೇದ :- ಸ್ವತಂತ್ರತ್ವಾತ್ ಸುಖಸಜ್ಞಾನಶಕ್ತಿಪೂರ್ವೈಃ ಗುಣೈಃ ಪೂರ್ಣಃ ಏಷಃ ಅಖಿಲೈಃ ಚ ಸ್ವತಂತ್ರತ್ವಾತ್ ಸರ್ವದೋಷೋಜ್ಝಿತಃ ಚ ನಿಸ್ಸೀಮಶಕ್ತಿಃ ಹಿ ಯತಃ ಸ್ವತಂತ್ರಃ ॥

ಅರ್ಥ :- ಏಷಃ = ಈ ನಾರಾಯಣನು, ಸ್ವತಂತ್ರತ್ವಾತ್ = ಸ್ವತಂತ್ರನಾದುದರಿಂದಲೇ, ಸುಖಸಜ್ಞಾನಶಕ್ತಿಪೂರ್ವೈಃ = ಆನಂದ ಜ್ಞಾನ ಬಲ ಇವೇ ಮೊದಲಾದ, ಅಖಿಲೈಃ = ಎಲ್ಲಾ ಗುಣೈಃ = ಗುಣಗಳಿಂದ, ಪೂರ್ಣಃ = ಪೂರ್ಣನಾಗಿದ್ದಾನೆ. ಸ್ವತಂತ್ರತ್ವಾತ್ = ಸ್ವತಂತ್ರನಾದ್ದರಿಂದಲೇ, ಸರ್ವ

ದೋಷೋಜ್ಝಿತಃ = ಸಕಲದೋಷದೂರನಾಗಿದ್ದಾನೆ, ಯತಃ = ಯಾವ ಕಾರಣದಿಂದ ನಿಸ್ಸೀಮಶಕ್ತಿಃ = ಅಪರಿಮಿತವಾದ ಶಕ್ತಿಯುಳ್ಳವನು, ಸ್ವತಂತ್ರಃ ಹಿ = ಸ್ವತಂತ್ರನಾದವನಷ್ಟೇ.

**ದೋಷಾಸ್ಪೃಷ್ಟಿ ಗುಣಪೂರ್ತೌ ಚ ಶಕ್ತಿ-**
**ರ್ನಿಸ್ಸೀಮತ್ವಾದ್ ವಿದ್ಯತೇ ತಸ್ಯ ಯಸ್ಮಾತ್ ।**
**ಏವಂ ಗುಣೈರಖಿಲೈಶ್ಚಾಪಿ ಪೂರ್ಣೋ**
**ನಾರಾಯಣಃ ಪೂಜ್ಯತಮಃ ಸ್ವಧರ್ಮೈಃ ॥ ೧೦೧ ॥**

ಪದಚ್ಛೇದ :- ದೋಷಾಸ್ಪೃಷ್ಟಿ ಗುಣಪೂರ್ತೌ ಚ ಶಕ್ತಿಃ ನಿಸ್ಸೀಮತ್ವಾತ್ ವಿದ್ಯತೇ ತಸ್ಯ ಯಸ್ಮಾತ್ ಏವಂ ಗುಣೈಃ ಅಖಿಲೈಃ ಚ ಅಪಿ ಪೂರ್ಣಃ ನಾರಾಯಣಃ ಪೂಜ್ಯತಮಃ ಸ್ವಧರ್ಮೈಃ ॥

**ಅರ್ಥ** :- **ತಸ್ಯ** = ಆ ನಾರಾಯಣನಿಗೆ, **ದೋಷಾಸ್ಪೃಷ್ಟಿ** = ದೋಷರಾಹಿತ್ಯವೂ, **ಚ** = ಮತ್ತು, **ಗುಣಪೂರ್ತೌ** = ಗುಣಪೂರ್ಣತೆಯೂ, **ಶಕ್ತಿನಿಸ್ಸೀಮತ್ವಾತ್** = ಅಪರಿಮಿತವಾದ ಶಕ್ತಿಯೂ, **ಯಸ್ಮಾತ್** = ಯಾವ ಕಾರಣದಿಂದ, **ವಿದ್ಯತೇ** = ಇದೆಯೋ (ಆ ಕಾರಣದಿಂದ) **ಗುಣೈಃ** = ಜ್ಞಾನ ಬಲಾದಿ ಎಲ್ಲಾ ಗುಣಗಳಿಂದ **ಪೂರ್ಣಃ** = ಪೂರ್ಣನಾದ, **ಅಖಿಲೈಃ** = ಎಲ್ಲರಿಂದಲೂ, **ಸ್ವಧರ್ಮೈಃ** = ತಮ್ಮ ತಮ್ಮ ಕರ್ತವ್ಯಗಳಿಂದ, **ಪೂಜ್ಯತಮಃ** = ಅತ್ಯಂತ ಪೂಜನೀಯನಾಗಿರುತ್ತಾನೆ.

**ಅಸ್ಮಾಕಂ ಯತ್ ತೇನ ನಾತಿಕ್ಷಮೈವ**
**ಧರ್ಮೋ ದುಷ್ಟಾನಾಂ ವಾರಣಂ ಹ್ಯೇವ ಕಾರ್ಯಮ್ ।**
**ಹನ್ಯಾದ್ ದುಷ್ಟಾನ್ ಯಃ ಕ್ಷತ್ರಿಯಃ ಕ್ಷತ್ರಿಯಾಂಶ್ಚ**
**ವಿಶೇಷತೋ ಯುದ್ಧಗತಾನ್ ಸ್ಮರನ್ ಹರಿಮ್ ॥ ೧೦೨ ॥**

ಪದಚ್ಛೇದ :- ಅಸ್ಮಾಕಂ ಯತ್ ತೇನ ನ ಅತಿಕ್ಷಮಾ ಏವ ಧರ್ಮಃ ದುಷ್ಟಾನಾಂ ವಾರಣಂ ಹಿ ಏವ ಕಾರ್ಯಮ್ । ಹನ್ಯಾತ್ ದುಷ್ಟಾನ್ ಯಃ ಕ್ಷತ್ರಿಯಃ ಕ್ಷತ್ರಿಯಾನ್ ಚ ವಿಶೇಷತಃ ಯುದ್ಧಗತಾನ್ ಸ್ಮರನ್ ಹರಿಮ್ ॥

**ಅರ್ಥ** :- **ಯತ್** = ಯಾವ ಕಾರಣದಿಂದ (ದುಷ್ಟ ನಿಗ್ರಹವು ಸ್ವಧರ್ಮವೋ), **ತೇನ** = ಆ ಕಾರಣದಿಂದ, **ಅಸ್ಮಾಕಂ** = ಕ್ಷತ್ರಿಯರಾದ,

ನಮಗೆ, **ಅತಿಕ್ಷಮಾ** = ಅತಿಯಾದ ಕ್ಷಮಾಗುಣವು ಯೋಗ್ಯವಾದುದಲ್ಲ, **ದುಷ್ಟಾನಾಂ** = ದುರ್ಜನರ **ವಾರಣಂ ಏವ** = ನಿಗ್ರಹವೇ, **ಕಾರ್ಯಮ್** = ಕರ್ತವ್ಯವಾಗಿದೆ, **ಯಃ ಕ್ಷತ್ರಿಯ** = ಕ್ಷತ್ರಿಯನು, **ದುಷ್ಟಾನ್** = ದುರ್ಜನರಾದ, **ಕ್ಷತ್ರಿಯಾನ್** = ಕ್ಷತ್ರಿಯರನ್ನು, **ಚ** = ಮತ್ತು **ವಿಶೇಷತಃ** = ವಿಶೇಷವಾಗಿ **ಯುದ್ಧಗತಾನ್** = ಯುದ್ಧಕ್ಕಾಗಿ ಬಂದ ಕ್ಷತ್ರಿಯರನ್ನು, **ಹರಿಂ** = ಶ್ರೀಹರಿಯನ್ನು, **ಸ್ಮರನ್** = ಸ್ಮರಿಸುವವನಾಗಿ, **ಹನ್ಯಾತ್** = ಸಂಹರಿಸಬೇಕು.

**ಸ್ವಬಾಹುವೀರ್ಯೇಣ ಚ ತಸ್ಯ ಬಾಹೂ**
**ಚೈತನ್ಯಮಾತ್ರೌ ಭವತಃ ಸದೇಹೌ ।**
**ಪಾಪಾಧಿಕಾಂಶ್ಚೈವ ಬಲಾಧಿಕಾಂಶ್ಚ**
**ಹತ್ವಾ ಮುಕ್ತಾವಧಿಕಾನಂದವೃದ್ಧಿಃ ॥ ೧೦೩ ॥**

ಪದಚ್ಛೇದ :- **ಸ್ವಬಾಹುವೀರ್ಯೇಣ ಚ ತಸ್ಯ ಬಾಹೂ ಚೈತನ್ಯಮಾತ್ರೌ ಭವತಃ ಸದೇಹೌ । ಪಾಪಾಧಿಕಾನ್ ಚ ಏವ ಬಲಾಧಿಕಾನ್ ಚ ಹತ್ವಾ ಮುಕ್ತೌ ಅಧಿಕಾನಂದವೃದ್ಧಿಃ ॥**

**ಅರ್ಥ** :- **ಸ್ವಬಾಹುವೀರ್ಯೇಣ** = ತನ್ನ ಬಾಹುಬಲದಿಂದ ಶತ್ರುಗಳನ್ನು ನಿಗ್ರಹಿಸುವ, **ತಸ್ಯ** = ಆ ಯಾವ ಕ್ಷತ್ರಿಯನ, **ಸದೇಹೌ** = ಸಮಗ್ರ ದೇಹದಿಂದ ಕೂಡಿದ, **ಬಾಹೂ** = ಅವನೆರಡು ಬಾಹುಗಳು **ಚೈತನ್ಯಮಾತ್ರೌ** = ಚಿದಾನಂದಮಯವಾಗಿರುವುದಾಗಿ, **ಭವತಃ** = ಆಗಿರುತ್ತವೆ. **ಪಾಪಾಧಿಕಾನ್** = ಅಧಿಕವಾದ ಪಾಪ ಮಾಡಿದವನನ್ನು, **ಚ** = ಮತ್ತು, **ಬಲಾಧಿಕಾನ್** = ಬಹಳ ಬಲಿಷ್ಠರಾದ ಕ್ಷತ್ರಿಯರನ್ನು, **ಹತ್ವಾ** = ಕೊಂದು, **ಮುಕ್ತೌ** = ಮೋಕ್ಷದಲ್ಲಿ, **ಅಧಿಕಾ** = ಬಹಳವಾದ **ಆನಂದವೃದ್ಧಿಃ** = ಆನಂದ ವೃದ್ಧಿಯಾಗುವುದು.

**ಪ್ರೀತಿಶ್ಚ ವಿಷ್ಣೋಃ ಪರಮೈವ ತತ್ರ**
**ತಸ್ಮಾದ್ಧಂತವ್ಯಾಃ ಪಾಪಿನಃ ಸರ್ವಥೈವ ।**
**ಯೇ ತ್ವಕ್ಷಧೂರ್ತಾ ಗ್ರಹಣಂ ಗತಾ ವಾ**
**ಪಾಪಾಸ್ತೇಽನ್ಯೈರ್ಘಾತನೀಯಾಃ ಸ್ವದೋರ್ಭ್ಯಾಮ್ ॥ ೧೦೪ ॥**

ಪದಚ್ಛೇದ :- ಪ್ರೀತಿಃ ಚ ವಿಷ್ಣೋಃ ಪರಂ ಏವ ತತ್ರ ತಸ್ಮಾತ್ ಹಂತವ್ಯಾಃ ಪಾಪಿನಃ ಸರ್ವಥಾ ಏವ ಯೇ ತು ಅಕ್ಷಧೂರ್ತಾ ಗ್ರಹಣಂ ಗತಾ ವಾ ಪಾಪಾಃ ತೇ ಅನ್ಯೈಃ ಘಾತನೀಯಾಃ ಸ್ವದೋರ್ಭ್ಯಾಮ್ ।

**ಅರ್ಥ** :- **ವಿಷ್ಣೋಃ** = ನಾರಾಯಣನಿಗೆ, **ತತ್ರ** = ಅತಿಯಾಗಿ ಪಾಪಿಗಳಾದ ವರನಿಗ್ರಹದ ವಿಷಯದಲ್ಲಿ, **ಪರಂ** = ಬಹಳವಾದ, **ಪ್ರೀತಿಃ** = ಪ್ರೀತಿಯು, **ತಸ್ಮಾತ್** = ಆ ಕಾರಣದಿಂದ **ಪಾಪಿನಃ** = ಪಾಪಿಗಳನ್ನು, **ಸರ್ವಥಾ** = ಸರ್ವಪ್ರಕಾರವಾಗಿಯೂ **ಹಂತವ್ಯಾ ಏವ** = ಕೊಲ್ಲಲ್ಪಡ ಬೇಕಾದವರೇ, **ಯೇ ಅಕ್ಷಧೂರ್ತಾಃ** = ಕಪಟದಿಂದ ಜೂಜಾಡುವ (ಶಕುನಿ ಮೊದಲಾದವರನ್ನು) **ವಾ** = ಅಥವಾ, **ಗ್ರಹಣಂ ಗತಾಃ** = ಬ್ರಹ್ಮಹತ್ಯಾದಿ ದೋಷಗಳಿಂದ ಗೃಹೀತರಾದ, **ಪಾಪಾಃ** = ಪಾಪಿಗಳನ್ನು, **ಅನ್ಯಃ** = ಬೇರೆಯವರ ಮುಖಾಂತರ, **ವಾ** = ಅಥವಾ ಯುದ್ಧದಲ್ಲಿ ಎದುರಾದ ಪಾಪಿಗಳನ್ನು, **ಸ್ವದೋರ್ಭ್ಯಾಂ** = ತನ್ನ ಕೈಗಳಿಂದಲೇ **ಘಾತನೀಯಾಃ ಏವ** = ಕೊಲ್ಲಲ್ಪಡಬೇಕಾದವರೇ.

**ರಾಜಾನಂ ವಾ ರಾಜಪುತ್ರಂ ತಥೈವ**
**ರಾಜಾನುಜಂ ವಾಽಭಿಯಾತಂ ನಿಹನ್ಯಾತ್ ।**
**ರಾಜ್ಞಃ ಪುತ್ರೋಽಪ್ಯಕೃತೋದ್ವಾಹಕೋ ಯಃ**
**ಸ ಘಾತನೀಯೋ ನ ಸ್ವಯಂ ವಧ್ಯ ಏವ ॥ ೧೦೫ ॥**

ಪದಚ್ಛೇದ :- ರಾಜಾನಂ ವಾ ರಾಜಪುತ್ರಂ ತಥಾ ಏವ ರಾಜಾನುಜಂ ವಾ ಅಭಿಯಾತಂ ನಿಹನ್ಯಾತ್ । ರಾಜ್ಞಃ ಪುತ್ರಃ ಅಪಿ ಅಕೃತೋದ್ವಾಹಕಃ ಯಃ ಸಃ ಘಾತನೀಯಃ ನ ಸ್ವಯಂ ದಧ್ಯ ಏವ ॥

**ಅರ್ಥ** :- **ಅಭಿಯಾತಂ** = ಯುದ್ಧದಲ್ಲಿ ಎದುರಾಗಿ ಬರುತ್ತಿರುವ, **ರಾಜಾನಂ** = ರಾಜನನ್ನಾದರೂ, **ವಾ** = ಅಥವಾ, **ರಾಜಪುತ್ರಂ** = ರಾಜಕುಮಾರನನ್ನಾದರೂ, **ವಾ** = ಅಥವಾ, **ರಾಜಾನುಜಂ** = ರಾಜನ ತಮ್ಮನನ್ನಾದರೂ, **ನಿಹನ್ಯಾತ್** = ಸಂಹರಿಸಬೇಕು, **ತಥೈವ** = ಹಾಗೆಯೇ, **ಅಕೃತೋದ್ವಾಹಕಃ** = ಮದುವೆಯಾಗದಿರುವ (ಚಿಕ್ಕವನಾದ), **ರಾಜ್ಞಃ ಪುತ್ರಃ ಅಪಿ** = ರಾಜಕುಮಾರನಾದರೂ, **ಸಃ ಘಾತನೀಯ ಏವ** =

ನಮಗೆ, **ಅತಿಕ್ಷಮಾ** = ಅತಿಯಾದ ಕ್ಷಮಾಗುಣವು ಯೋಗ್ಯವಾದುದಲ್ಲ, **ದುಷ್ಟಾನಾಂ** = ದುರ್ಜನರ **ವಾರಣಂ ಏವ** = ನಿಗ್ರಹವೇ, **ಕಾರ್ಯಮ್** = ಕರ್ತವ್ಯವಾಗಿದೆ, **ಯಃ ಕ್ಷತ್ರಿಯ** = ಕ್ಷತ್ರಿಯನು, **ದುಷ್ಟಾನ್** = ದುರ್ಜನರಾದ, **ಕ್ಷತ್ರಿಯಾನ್** = ಕ್ಷತ್ರಿಯರನ್ನು, **ಚ** = ಮತ್ತು **ವಿಶೇಷತಃ** = ವಿಶೇಷವಾಗಿ **ಯುದ್ಧಗತಾನ್** = ಯುದ್ಧಕ್ಕಾಗಿ ಬಂದ ಕ್ಷತ್ರಿಯರನ್ನು, **ಹರಿಂ** = ಶ್ರೀಹರಿಯನ್ನು, **ಸ್ಮರನ್** = ಸ್ಮರಿಸುವವನಾಗಿ, **ಹನ್ಯಾತ್** = ಸಂಹರಿಸಬೇಕು.

**ಸ್ವಬಾಹುವೀರ್ಯೇಣ ಚ ತಸ್ಯ ಬಾಹೂ**
**ಚೈತನ್ಯಮಾತ್ರೌ ಭವತಃ ಸದೇಹೌ ।**
**ಪಾಪಾಧಿಕಾಂಶ್ಚೈವ ಬಲಾಧಿಕಾಂಶ್ಚ**
**ಹತ್ವಾ ಮುಕ್ತಾವಧಿಕಾನಂದವೃದ್ಧಿಃ ॥ ೧೦೩ ॥**

ಪದಚ್ಛೇದ :- **ಸ್ವಬಾಹುವೀರ್ಯೇಣ ಚ ತಸ್ಯ ಬಾಹೂ ಚೈತನ್ಯಮಾತ್ರೌ ಭವತಃ ಸದೇಹೌ । ಪಾಪಾಧಿಕಾನ್ ಚ ಏವ ಬಲಾಧಿಕಾನ್ ಚ ಹತ್ವಾ ಮುಕ್ತೌ ಅಧಿಕಾನಂದವೃದ್ಧಿಃ ॥**

ಅರ್ಥ :- **ಸ್ವಬಾಹುವೀರ್ಯೇಣ** = ತನ್ನ ಬಾಹುಬಲದಿಂದ ಶತ್ರುಗಳನ್ನು ನಿಗ್ರಹಿಸುವ, **ತಸ್ಯ** = ಆ ಯಾವ ಕ್ಷತ್ರಿಯನ, **ಸದೇಹೌ** = ಸಮಗ್ರ ದೇಹದಿಂದ ಕೂಡಿದ, **ಬಾಹೂ** = ಅವನೆರಡು ಬಾಹುಗಳು **ಚೈತನ್ಯಮಾತ್ರೌ** = ಚಿದಾನಂದಮಯವಾಗಿರುವುದಾಗಿ, **ಭವತಃ** = ಆಗಿರುತ್ತವೆ. **ಪಾಪಾಧಿಕಾನ್** = ಅಧಿಕವಾದ ಪಾಪ ಮಾಡಿದವನನ್ನು, **ಚ** = ಮತ್ತು, **ಬಲಾಧಿಕಾನ್** = ಬಹಳ ಬಲಿಷ್ಠರಾದ ಕ್ಷತ್ರಿಯರನ್ನು, **ಹತ್ವಾ** = ಕೊಂದು, **ಮುಕ್ತೌ** = ಮೋಕ್ಷದಲ್ಲಿ, **ಅಧಿಕಾ** = ಬಹಳವಾದ **ಆನಂದವೃದ್ಧಿಃ** = ಆನಂದ ವೃದ್ಧಿಯಾಗುವುದು.

**ಪ್ರೀತಿಶ್ಚ ವಿಷ್ಣೋಃ ಪರಮೈವ ತತ್ರ**
**ತಸ್ಮಾದ್ಧಂತವ್ಯಾಃ ಪಾಪಿನಃ ಸರ್ವಥೈವ ।**
**ಯೇ ತ್ವಕ್ಷಧೂರ್ತಾ ಗ್ರಹಣಂ ಗತಾ ವಾ**
**ಪಾಪಾಸ್ತೇಽನ್ಯೈರ್ಘಾತನೀಯಾಃ ಸ್ವದೋರ್ಭ್ಯಾಮ್ ॥ ೧೦೪ ॥**

ಪದಚ್ಛೇದ :- ಪ್ರೀತಿಃ ಚ ವಿಷ್ಣೋಃ ಪರಂ ಏವ ತತ್ರ ತಸ್ಮಾತ್ ಹಂತವ್ಯಾಃ ಪಾಪಿನಃ ಸರ್ವಥಾ ಏವ ಯೇ ತು ಅಕ್ಷದೂರ್ತಾ ಗ್ರಹಣಂ ಗತಾ ವಾ ಪಾಪಾಃ ತೇ ಅನ್ಯೈಃ ಘಾತನೀಯಾಃ ಸ್ವದೋಭ್ರ್ಯಾಮ್ ।

**ಅರ್ಥ** :- **ವಿಷ್ಣೋಃ** = ನಾರಾಯಣನಿಗೆ, **ತತ್ರ** = ಅತಿಯಾಗಿ ಪಾಪಿಗಳಾದ ವರನಿಗ್ರಹದ ವಿಷಯದಲ್ಲಿ, **ಪರಂ** = ಬಹಳವಾದ, **ಪ್ರೀತಿಃ** = ಪ್ರೀತಿಯು, **ತಸ್ಮಾತ್** = ಆ ಕಾರಣದಿಂದ **ಪಾಪಿನಃ** = ಪಾಪಿಗಳನ್ನು, **ಸರ್ವಥಾ** = ಸರ್ವಪ್ರಕಾರವಾಗಿಯೂ **ಹಂತವ್ಯಾ ಏವ** = ಕೊಲ್ಲಲ್ಪಡಬೇಕಾದವರೇ, **ಯೇ ಅಕ್ಷಧೂರ್ತಾಃ** = ಕಪಟದಿಂದ ಜೂಜಾಡುವ (ಶಕುನಿ ಮೊದಲಾದವರನ್ನು) **ವಾ** = ಅಥವಾ, **ಗ್ರಹಣಂ ಗತಾಃ** = ಬ್ರಹ್ಮಹತ್ಯಾದಿ ದೋಷಗಳಿಂದ ಗೃಹೀತರಾದ, **ಪಾಪಾಃ** = ಪಾಪಿಗಳನ್ನು, **ಅನ್ಯಃ** = ಬೇರೆಯವರ ಮುಖಾಂತರ, **ವಾ** = ಅಥವಾ ಯುದ್ಧದಲ್ಲಿ ಎದುರಾದ ಪಾಪಿಗಳನ್ನು, **ಸ್ವದೋಭ್ರ್ಯಾಂ** = ತನ್ನ ಕೈಗಳಿಂದಲೇ **ಘಾತನೀಯಾಃ ಏವ** = ಕೊಲ್ಲಲ್ಪಡಬೇಕಾದವರೇ.

**ರಾಜಾನಂ ವಾ ರಾಜಪುತ್ರಂ ತಥೈವ**
**ರಾಜಾನುಜಂ ವಾಽಭಿಯಾತಂ ನಿಹನ್ಯಾತ್ ।**
**ರಾಜ್ಞಃ ಪುತ್ರೋಽಪ್ಯಕೃತೋದ್ವಾಹಕೋ ಯಃ**
**ಸ ಘಾತನೀಯೋ ನ ಸ್ವಯಂ ವಧ್ಯ ಏವ ॥ ೧೦೫ ॥**

ಪದಚ್ಛೇದ :- ರಾಜಾನಂ ವಾ ರಾಜಪುತ್ರಂ ತಥಾ ಏವ ರಾಜಾನುಜಂ ವಾ ಅಭಿಯಾತಂ ನಿಹನ್ಯಾತ್ । ರಾಜ್ಞಃ ಪುತ್ರಃ ಅಪಿ ಅಕೃತೋದ್ವಾಹಕಃ ಯಃ ಸಃ ಘಾತನೀಯಃ ನ ಸ್ವಯಂ ದಧ್ಯ ಏವ ॥

**ಅರ್ಥ** :- **ಅಭಿಯಾತಂ** = ಯುದ್ಧದಲ್ಲಿ ಎದುರಾಗಿ ಬರುತ್ತಿರುವ, **ರಾಜಾನಂ** = ರಾಜನನ್ನಾದರೂ, **ವಾ** = ಅಥವಾ, **ರಾಜಪುತ್ರಂ** = ರಾಜಕುಮಾರನನ್ನಾದರೂ, **ವಾ** = ಅಥವಾ, **ರಾಜಾನುಜಂ** = ರಾಜನ ತಮ್ಮನನ್ನಾದರೂ, **ನಿಹನ್ಯಾತ್** = ಸಂಹರಿಸಬೇಕು, **ತಥೈವ** = ಹಾಗೆಯೇ, **ಅಕೃತೋದ್ವಾಹಕಃ** = ಮದುವೆಯಾಗದಿರುವ (ಚಿಕ್ಕವನಾದ), **ರಾಜ್ಞಃ ಪುತ್ರಃ ಅಪಿ** = ರಾಜಕುಮಾರನಾದರೂ, **ಸಃ ಘಾತನೀಯ ಏವ** =

ಸಂಹರಿಸಲೇಬೇಕಷ್ಟೇ. ಸ್ವಯಂ = ತಾನು, ನ ವಧ್ಯ ಏವ = ಕೊಲ್ಲಬಾರದು (ಬೇರೆಯವರಿಂದ ಕೊಲ್ಲಿಸಬೇಕು).

**ಕ್ರೂರಂ ಚಾನ್ಯದ್ ಧರ್ಮಯುಕ್ತಂ ಪರೈಸ್ತತ್**
**ಪ್ರಸಾಧನೀಯಂ ಕ್ಷತ್ರಿಯೈರ್ನ ಸ್ವಕಾರ್ಯಮ್ ।**
**ಏವಂ ಧರ್ಮೋ ವಿಹಿತೋ ವೇದ ಏವ**
**ವಾಕ್ಯಂ ವಿಷ್ಣೋಃ ಪಂಚರಾತ್ರೇಷು ತಾದೃಕ್ ॥ ೧೦೬ ॥**

ಪದಚ್ಛೇದ :- ಕ್ರೂರಂ ಚ ಅನ್ಯತ್ ಧರ್ಮಯುಕ್ತಂ ಪರೈಃ ತತ್ ಪ್ರಸಾಧನೀಯಂ ಕ್ಷತ್ರಿಯೈಃ ನ ಸ್ವಕಾರ್ಯಮ್ । ಏವಂ ಧರ್ಮಃ ವಿಹಿತಃ ವೇದ ಏವ ವಾಕ್ಯಂ ವಿಷ್ಣೋಃ ಪಂಚರಾತ್ರೇಷು ತಾದೃಕ್ ॥

ಅರ್ಥ :- ಧರ್ಮಯುಕ್ತಂ = ಧರ್ಮ ಸಮ್ಮತವಾದ, ಚ = ಮತ್ತು, ಕ್ರೂರಂ = ಕ್ರೂರವಾದ, ಅನ್ಯತ್ = (ಕುತ್ತಿಗೆ ಹಿಡಿದು ಸಾಯಿಸುವ ಇವೇ ಮೊದಲಾದ) ಕ್ರೂರ ಕರ್ಮಗಳು, ಪರೈಃ = ಬೇರೆಯವರ (ಭಟರ) ಮೂಲಕ ಪ್ರಸಾಧನೀಯಂ = ಮಾಡಿಸಲ್ಪಡಬೇಕು, ತತ್ = ಅಂತಹ ಕ್ರೂರ ಕರ್ಮಗಳನ್ನು, ಕ್ಷತ್ರಿಯೈಃ = ಕ್ಷತ್ರಿಯರಾದವರಿಂದ ನ ಸ್ವಕಾರ್ಯಮ್ = ಸ್ವತಃ ಮಾಡಬಾರದಷ್ಟೇ, ಏವಂ = ಹೀಗೆ, ವೇದ ಏವ = ವೇದದಲ್ಲಿಯೇ, ಧರ್ಮಃ = ಧರ್ಮವು (ಕರ್ತವ್ಯವು) ವಿಹಿತಃ = ವಿಧಿಸಲ್ಪಟ್ಟಿದೆ, ತಾದೃಕ್ = ಈ ಹಿಂದೆ ಹೇಳಿದ ಕರ್ತವ್ಯಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಪಂಚರಾತ್ರೇಷು = ಪಂಚರಾತ್ರದಲ್ಲಿ, ವಿಷ್ಣೋಃ = ನಾರಾಯಣ, ವಾಕ್ಯಂ = ವಾಕ್ಯವು (ಹೇಳಲ್ಪಟ್ಟಿದೆ).

**ಅಕ್ಷದ್ಯೂತಂ ನಿಕೃತಿಃ ಪಾಪಮೇವ**
**ಕೃತಂ ತ್ವಯಾ ಗರ್ಹಿತಂ ಸೌಬಲೇನ ।**
**ನ ಕುತ್ರಚಿದ್ ವಿಧಿರಸ್ಯಾಸ್ತಿ ತೇನ**
**ನ ತದ್ ದತ್ತಂ ದ್ಯೂತಹೃತಂ ವದಂತಿ ॥ ೧೦೭ ॥**

ಪದಚ್ಛೇದ :- ಅಕ್ಷದ್ಯೂತಂ ನಿಕೃತಿಃ ಪಾಪಂ ಏವ ಕೃತಂ ತ್ವಯಾ ಗರ್ಹಿತಂ ಸೌಬಲೇನ । ನ ಕುತ್ರಚಿತ್ ವಿಧಿಃ ಅಸ್ಯ ಅಸ್ತಿ ತೇನ ನ ತತ್ ದತ್ತಂ ದ್ಯೂತಹೃತಂ ವದಂತಿ ॥

**ಅರ್ಥ** :- **ನಿಕೃತಿಃ** = ಅತ್ಯಂತ ಹೀನವಾದ, **ಗರ್ಹಿತಂ** = ಸಜ್ಜನರಿಂದ ತಿರಸ್ಕೃತವಾದ, **ಪಾಪಂ** = ಪಾಪಕರವಾದ, **ಅಕ್ಷದ್ಯೂತಂ** = ಅಕ್ಷ ಕ್ರೀಡೆಯು, **ತ್ವಯಾ** = ನಿನ್ನಿಂದ, **ಸೌಬಲೇನ** = ಶಕುನಿಯಿಂದ ಕೂಡಿ, **ಕೃತಂ** = ಮಾಡಲ್ಪಟ್ಟಿತು, **ಅಸ್ಯ** = ಈ ಜೂಜಿನ ಕುರಿತಾಗಿ **ಕೃತ್ರಚಿತ್** = ಎಲ್ಲಿಯೂ, **ವಿಧಿಃ** = ಶಾಸ್ತ್ರ ವಿಧಿಯು, **ನ ಅಸ್ತಿ** = ಇರುವುದಿಲ್ಲ, **ತೇನ** = ಆ ಕಾರಣದಿಂದ **ತತ್** = ಆ ರಾಜ್ಯ ಸಂಪತ್ತು, **ನ ದತ್ತಂ** = ಕೊಡಲ್ಪಟ್ಟಿದ್ದಲ್ಲ, **ದ್ಯೂತಹೃತಂ** = ಮೋಸದಿಂದ ಜೂಜಾಡಿ, **ಹೃತಂ** = ಅಪಹರಿಸಲ್ಪಟ್ಟಿದ್ದು, **ಇತಿ** = ಹೀಗೆಂದು, **ವದಂತಿ** = ಹೇಳುತ್ತಾರೆ.

**ಭೀತೇನ ದತ್ತಂ ದ್ಯೂತದತ್ತಂ ತಥೈವ**
**ದತ್ತಂ ಕಾಮಿನ್ಯೈ ಪುನರಾಹರ್ಯಮೇವ ।**
**ಏವಂ ಧರ್ಮಃ ಶಾಶ್ವತೋ ವೈದಿಕೋ ಹಿ**
**ದ್ಯೂತೇ ಸ್ತ್ರಿಯಾಂ ನಾಲ್ಪಮಾಹಾರ್ಯಮಾಹುಃ ॥ ೧೦೮ ॥**

**ಪದಚ್ಛೇದ** :- ಭೀತೇನ ದತ್ತಂ ದ್ಯೂತದತ್ತಂ ತಥಾ ಏವ ದತ್ತಂ ಕಾಮಿನ್ಯೈ ಪುನಃ ಆಹಾರ್ಯಂ ಏವ । ಏವಂ ಧರ್ಮಃ ಶಾಶ್ವತಃ ವೈದಿಕಃ ಹಿ ದ್ಯೂತೇ ಸ್ತ್ರಿಯಾಂ ನ ಅಲ್ಪಂ ಆಹಾರ್ಯಂ ಆಹುಃ ॥

**ಅರ್ಥ** :- **ಭೀತೇನ** = ಭಯದಿಂದ, **ದತ್ತಂ** = ಕೂಡಲ್ಪಟ್ಟ **ದ್ಯೂತದತ್ತಂ** = ಜೂಜಿನಲ್ಲಿ ಕೊಡಲ್ಪಟ್ಟ, **ತಥೈವ** = ಹಾಗೆಯೇ, **ಕಾಮಿನ್ಯಃ** = ವೇಶ್ಯಾಸ್ತ್ರೀಗೆ, **ದತ್ತಂ** = ಕೂಡಲ್ಪಟ್ಟ ವಸ್ತುವು, **ಪುನಃ** = ಮತ್ತೆ, **ಆಹಾರ್ಯಮೇವ** = ಹಿಂದೆ ತೆಗೆದುಕೊಳ್ಳಲು ಯೋಗ್ಯವೇ ಆಗಿರುತ್ತದೆ, **ದ್ಯೂತೇ** = ದ್ಯೂತದಲ್ಲಿ, **ಸ್ತ್ರಿಯಾಂ** = ವೇಶ್ಯೆಗೆ ಕೊಡಲ್ಪಟ್ಟದ್ದು, **ಅಲ್ಪಂ** = ಅತ್ಯಲ್ಪವಾಗಿದ್ದರೆ, **ನ ಆಹಾರ್ಯಂ** = ಹಿಂದೆಗೆದುಕೊಳ್ಳಲು ಯೋಗ್ಯವಲ್ಲ, **ಏವಂ** = ಹೀಗೆ, **ವೈದಿಕಃ** = ಸನಾತನವಾದ, **ಶಾಶ್ವತಃ** = ಅನಾದಿಕಾಲದ, **ಧರ್ಮಃ** = ಧರ್ಮವು, (ಧರ್ಮವನ್ನು) **ಆಹುಃ** = ಹೇಳುವರು.

**ಯದ್ಯೇಷಾಂ ವೈ ಭೋಗ್ಯಮಲ್ಪಂ ತದೀಯಂ**
**ಭೋಗೇನ ತದ್ಬಂಧುಭಿಸ್ತಚ್ಚ ಹಾರ್ಯಮ್ ।**
**ನಿವಾರಣೇ ಪುರುಷಸ್ಯ ತ್ವಶಕ್ತೇ-**
**ಸ್ತದ್ರಾಜ್ಯಂ ನಃ ಪುನರಾಹಾರ್ಯಮೇವ ॥ ೧೦೯ ॥**

**ಪದಚ್ಛೇದ :- ಯದಿ ಏಷಾಂ ವೈ ಭೋಗ್ಯಂ ಅಲ್ಪಂ ತದೀಯಂ ಭೋಗೇನ ತತ್ ಬಂಧುಭಿಃ ತತ್ ಚ ಹಾರ್ಯಮ್ । ನಿವಾರಣೇ ಪುರುಷಸ್ಯ ತು ಅಶಕ್ತ್ಯೈಃ ತತ್ ರಾಜ್ಯಂ ನಃ ಪುನಃ ಆಹಾರ್ಯಂ ಏವ ॥**

**ಅರ್ಥ** :- **ಏಷಾಂ** = ಯಾವ ದ್ರೋಹಿಗಳ, **ತದೀಯಂ** = ವಾರಸುದರನಿಗೆ ಸಂಬಂಧಿಸಿದ, **ಭೋಗ್ಯಂ** = ಭೋಗಿಸಲು ಯೋಗ್ಯವಾದ ವಸ್ತುವು, **ಯದಿ ಅಲ್ಪಂ** = ಅತ್ಯಲ್ಪವಾಗಿದ್ದರೂ, **ತಚ್ಚ** = ಆ ಆಸ್ತಿಯನ್ನಾದರೂ, **ಭೋಗೇನ** = ಬಲಾತ್ಕಾರದಿಂದ, **ಹಾರ್ಯಂ** = ಹಿಂದೆ ಪಡೆಯಬಹುದು, **ಪುರುಷಸ್ಯ** = ಬಲವಂತನ, **ನಿವಾರಣೇ** = ತಡೆಯುವುದರಲ್ಲಿ, **ಅಶಕ್ತೌ** = ಸಾಧ್ಯವಾಗದೇ ಇದ್ದಲ್ಲಿ, **ಬಂಧುಭಿಃ** = ಬಂಧುಗಳಿಂದ, **ತತ್ ರಾಜ್ಯಂ** = ಆ ರಾಜ್ಯವನ್ನು, **ಪುನಃ** = ಮತ್ತೆ (ಸಮಯ ಬಂದಾಗ) **ಪುನಃ ಆಹಾರ್ಯಂ ಏವ** = ಹಿಂದೆ ಪಡೆಯಲೇಬೇಕಷ್ಟೇ.

**ತ್ವಂ ಧರ್ಮನಿತ್ಯಶ್ಚಾಗ್ರಜಶ್ಚೇತಿ ರಾಜನ್**
**ಋತೇಽನುಜ್ಞಾಂ ನ ಮಯಾ ತತ್ ಕೃತಂ ಚ ।**
**ದಾತಾಸ್ಯನುಜ್ಞಾಂ ಯದಿ ತಾನ್ ನಿಹತ್ಯ**
**ತ್ವಯ್ಯೇವ ರಾಜ್ಯಂ ಸ್ಥಾಪಯಾಮ್ಯದ್ಯ ಸಮ್ಯಕ್ ॥ ೧೧೦ ॥**

**ಪದಚ್ಛೇದ :- ತ್ವಂ ಧರ್ಮನಿಷ್ಠಃ ಚ ಅಗ್ರಜಃ ಚ ಇತಿ ರಾಜನ್ ಋತೇ ಅನುಜ್ಞಾಂ ನ ಮಯಾ ತತ್ ಕೃತಂ ಚ ದಾತಾ ಅಸ್ಯ ಅನುಜ್ಞಾಂ ಯದಿ ತಾನ್ ನಿಹತ್ಯ ತ್ವಯಿ ಏವ ರಾಜ್ಯಂ ಸ್ಥಾಪಯಾಮಿ ಅದ್ಯ ಸಮ್ಯಕ್ ॥**

**ಅರ್ಥ** :- **ರಾಜನ್** = ರಾಜನೇ, **ತ್ವಂ** = ನೀನು, **ಧರ್ಮನಿಷ್ಠಃ** = ಧರ್ಮನಿಷ್ಠನೆಂದು, **ಚ** = ಮತ್ತು, **ಅಗ್ರಜಃ** = ಅಣ್ಣನೆಂದು, **ಅನುಜ್ಞಾಂ ಋತೇ** = ನಿನ್ನಪ್ಪಣೆ ಇಲ್ಲವೆಂದು, **ಮಯಾ** = ನನ್ನಿಂದ, **ನ ತತ್ ಕೃತಂ** = ರಾಜ್ಯವನ್ನು ಹಿಂದೆ ಪಡೆದಿಲ್ಲ, **ಯದಿ** = ಒಂದು ವೇಳೆ **ಅಸ್ಯ** = ಈ ವಿಷಯದಲ್ಲಿ, **ಅನುಜ್ಞಾಂ** = ಅನುಜ್ಞೆಯನ್ನು ನೀಡುವಿಯಾದರೆ, **ತಾನ್** = ಆ ಕೌರವರನ್ನು, **ನಿಹತ್ಯ** = ಕೊಂದು, **ಅದ್ಯ ಏವ** = ಇಂದೇ, **ಸಮ್ಯಕ್** = ವಿಧಿಬದ್ಧವಾಗಿ, **ರಾಜ್ಯಂ** = ರಾಜ್ಯವನ್ನು **ಸ್ಥಾಪಯಾಮಿ** = ತಂದಿರುಸುತ್ತೇನೆ.

ಸತ್ಯಂ ಪಾಪೇಷ್ವಪಿ ಕರ್ತುಂ ಯದೀಚ್ಛಾ
ತಥಾऽಪಿ ಮಾಸಾ ದ್ವಾದಶ ನಃ ಪ್ರಯಾತಾಃ ।
ವೇದಪ್ರಾಮಾಣ್ಯಾದ್ ವತ್ಸರಾಸ್ತೇ ಹಿ ಮಾಸ್ಯೈಃ
ಸಹಸ್ರಾಬ್ದಂ ಸತ್ರಮುಕ್ತಂ ನರಾಣಾಮ್ ।
ಅಜ್ಞಾತಮೇಕಂ ಮಾಸಮುಷ್ಯಾऽಥ ಶತ್ರೂನ್
ನಿಹತ್ಯ ರಾಜ್ಯಂ ಪ್ರತಿಪಾಲಯಾಮಃ ॥ ೧೧೧ ॥

ಪದಚ್ಛೇದ :- ಸತ್ಯಂ ಪಾಪೇಷು ಅಪಿ ಕರ್ತುಂ ಯದಿ ಇಚ್ಛಾ ತಥಾಪಿ ಮಾಸಾಃ ದ್ವಾದಶ ನ ಪ್ರಯಾತಾಃ । ವೇದಪ್ರಾಮಾಣ್ಯಾತ್ ವತ್ಸರಾಃ ತೇ ಹಿ ಮಾಸ್ಯೈಃ ಸಹಸ್ರಾಬ್ದಂ ಸತ್ರಂ ಉಕ್ತಂ ನರಾಣಾಂ ಅಜ್ಞಾತಂ ಏಕಂ ಮಾಸಂ ಉಷ್ಯ ಅಥ ಶತ್ರೂನ್ ನಿಹತ್ಯ ರಾಜ್ಯಂ ಪ್ರತಿಪಾಲಯಾಮಃ ॥

ಅರ್ಥ :- ಪಾಪೇಷ್ವಪಿ = ಪಾಪಿ ಜನರಲ್ಲಿಯೂ ಸತ್ಯಂ ಕರ್ತುಂ = ಕೊಟ್ಟ ಮಾತನ್ನು ಸತ್ಯವನ್ನಾಗಿ ಮಾಡಲು ಯದಿ = ಒಂದು ವೇಳೆ, ಇಚ್ಛಾ = ಅಪೇಕ್ಷಿಸುವಿಯಾದಲ್ಲಿ, ಯಥಾಪಿ = ಹಾಗಿದ್ದರೂ, ನಃ = ನಮ್ಮ ದ್ವಾದಶಮಾಸಾಃ = ಹನ್ನೆರಡು ತಿಂಗಳುಗಳು ಪ್ರಯಾತಾಃ = ಕಳೆದು ಹೋಗಿವೆ, ತೇ = ಆ ಹನ್ನೆರಡು ತಿಂಗಳುಗಳಾದರೂ, ವೇದಪ್ರಾಮಾಣ್ಯಾತ್ = ವೇದಪ್ರಾಮಾಣ್ಯದಿಂದ, ವತ್ಸರಾಃ = ಸಂವತ್ಸರಗಳು, ಹಿ = ಅದು ಪ್ರಸಿದ್ಧವು, ನರಾಣಾಂ = ಮನುಷ್ಯರಿಗೆ, ಸಹಸ್ರಾಬ್ದಂ = ಸಾವಿರ ವರ್ಷದ, ಸತ್ರಂ = ಯಾಗವು, ಉಕ್ತಂ = ಹೇಳಲ್ಪಟ್ಟಿದೆಯಷ್ಟೇ, ಅಥ = ಆದ ಕಾರಣ, ಅಜ್ಞಾತಂ = ಅಜ್ಞಾತವಾಸದ, ಏಕಂ = ಒಂದು, ಮಾಸಂ = ಮಾಸವನ್ನು, ಉಷ್ಯ = ಕಳೆದು, ಶತ್ರೂನ್ = ಶತ್ರುಗಳನ್ನು, ನಿಹತ್ಯ = ಕೊಂದು, ರಾಜ್ಯಂ = ರಾಜ್ಯವನ್ನು ಪ್ರತಿಫಾಲಯಾಮ = ಪಾಲಿಸೋಣ.

ಮಾ ಮಿತ್ರಾಣಾಂ ತಾಪಕಸ್ತ್ವಂ ಭವೇಥಾಃ
ತಥಾऽಮಿತ್ರಾಣಾಂ ನಂದಕಶ್ಚೈವ ರಾಜನ್ ।
ಜ್ವಲಸ್ವಾರೀಣಾಂ ಮೂರ್ಧ್ನಿ ಮಿತ್ರಾಣೆ ನಿತ್ಯ-
ಮಾಹ್ಲಾದಯನ್ ವಾಸುದೇವಂ ಭಜಸ್ವ ॥ ೧೧೨ ॥

ಪದಚ್ಛೇದ :- ಮಾ ಮಿತ್ರಾಣಾಂ ತಾಪಕಃ ತ್ವಂ ಭವೇಥಾಃ ತಥಾ ಅಮಿತ್ರಾಣಾಂ ನಂದಕಃ ಚ ಏವ ರಾಜನ್ । ಜ್ವಲಸ್ವ ಅರೀಣಾಂ ಮೂರ್ಧ್ನಿ ಮಿತ್ರಾಣಿ ನಿತ್ಯಂ ಆಹ್ಲಾದಯನ್ ವಾಸುದೇವಂ ಭಜಸ್ವ ॥

**ಅರ್ಥ** :- **ರಾಜನ್** = ರಾಜನೇ, **ತ್ವಂ** = ನೀನು, **ಮಿತ್ರಾಣಾಂ** = ಮಿತ್ರರಾಜರಿಗೆ, **ತಾಪಕಃ** = ದುಃಖದಾಯಕನು, **ತಥಾ** = ಹಾಗೆಯೇ, **ಅಮಿತ್ರಾಣಾಂ** = ಶತ್ರುರಾಜರಿಗೆ, **ನಂದಕಃ** = ಸಂತೋಷಪಡಿಸುವವನು, **ಮಾ ಭವೇಥಾ** = ಆಗಬೇಡ, **ಅರೀಣಾಂ** = ಶತ್ರುಗಳ **ಮೂರ್ಧ್ನಿ** = ತಲೆಯಲ್ಲಿ (**ಮಿತ್ರಾಣಿ** = ಸ್ನೇಹಿತರನ್ನು ಸ್ಥಾಪಿಸಿ) ಕಾಲನ್ನಿಟ್ಟು, **ಜ್ವಲಸ್ವ** = ಪ್ರಜ್ವಲಿಸು, **ಮಿತ್ರಾಣಿ** = ಸ್ನೇಹಿತರನ್ನು, **ನಿತ್ಯಂ** = ಯಾವಾಗಲೂ **ಆಹ್ಲಾದಯನ್** = ಸಂತೋಷಪಡಿಸುತ್ತಾ, **ವಾಸುದೇವಂ** = ಶ್ರೀಹರಿಯನ್ನು, **ಭಜಸ್ವ** = ಆರಾಧಿಸು.

**ಸ್ವತಂತ್ರತ್ವಂ ವಾಸುದೇವಸ್ಯ ಸಮ್ಯಕ್**
**ಪ್ರತ್ಯಕ್ಷತೋ ದೃಶ್ಯತೇ ಹ್ಯದ್ಯ ರಾಜನ್ ।**
**ಯಸ್ಮಾತ್ ಕೃಷ್ಣೋ ವ್ಯಜಯಚ್ಛಂಕರಾದೀನ್**
**ಜರಾಸುತಾದೀನ್ ಕಾದಿವರ್ಯೈರಜೇಯಾನ್ ॥ ೧೧೩ ॥**

ಪದಚ್ಛೇದ :- ಸ್ವತಂತ್ರತ್ವಂ ವಾಸುದೇವಸ್ಯ ಸಮ್ಯಕ್ ಪ್ರತ್ಯಕ್ಷತಃ ದೃಶ್ಯತೇ ಹಿ ಅದ್ಯ ರಾಜನ್ । ಯಸ್ಮಾತ್ ಕೃಷ್ಣಃ ವ್ಯಂಜಯತ್ ಶಂಕರಾದೀನ್ ಜರಾಸುತಾದೀನ್ ಕಾವಿವರ್ಯೈಃ ಅಜೇಯಾನ್ ॥

**ಅರ್ಥ** :- **ರಾಜನ್** = ರಾಜನೇ, **ವಾಸುದೇವಸ್ಯ** = ಶ್ರೀಹರಿಯ, **ಸ್ವತಂತ್ರತ್ವಂ** = ಸ್ವತಂತ್ರತೆಯು, **ಅದ್ಯ** = ಇಂದು, **ಪ್ರತ್ಯಕ್ಷತಃ** = ಪ್ರತ್ಯಕ್ಷವಾಗಿಯೇ, **ಸಮ್ಯಕ್** = ಬಹಳ ಚೆನ್ನಾಗಿ, **ದೃಶ್ಯತೇ** = ಕಾಣಲ್ಪಡುತ್ತದೆ, **ಯಸ್ಮಾತ್** = ಯಾವ ಕಾರಣದಿಂದ, **ಕೃಷ್ಣಃ** = ಶ್ರೀಕೃಷ್ಣನು, **ಶಂಕರಾದೀನ್** = ರುದ್ರದೇವರು ಪಾರ್ವತೀ ಮೊದಲಾದವರನ್ನು (ಪಾರಿಜಾತಾಪಹರಣ ಕಾಲದಲ್ಲಿಯೂ) **ಕಾವಿವರ್ಯೈಃ** = ಬ್ರಹ್ಮದೇವರೇ ಮೊದಲಾದ ದೇವ ಪ್ರಮುಖರುಗಳ ವರದಿಂದ, **ಅಜೇಯಾನ್** = ಅಜೇಯನೆನಿಸಿದ, **ಜರಾಸುತಾಧೀನ್** = ಜರಾಸಂಧನೇ, ಮೊದಲಾದ ರಾಕ್ಷಸರುಗಳನ್ನು, **ವ್ಯಂಜಯತ್** = (ಸೋಲಿಸಿದನು). ಗೆದ್ದಿದ್ದಾನೆ.

ಬ್ರಹ್ಮಾದೀನಾಂ ಪ್ರಕೃತೇಸ್ತದ್ವಶತ್ವಂ
ದೃಷ್ಟಂ ಹಿ ನೋ ಬಹುಶೋ ವ್ಯಾಸದೇಹೇ ।
ಪಾರಾಶರ್ಯೋ ದಿವ್ಯದೃಷ್ಟಿಂ ಪ್ರದಾಯ
ಸ್ವಾತಂತ್ರ್ಯಂ ನೋಽದರ್ಶಯತ್ ಸರ್ವಲೋಕೇ ॥ ೧೧೪ ॥

ಪದಚ್ಛೇದ :- ಬ್ರಹ್ಮಾದೀನಾಂ ಪ್ರಕೃತೇಃ ತದ್ವಶತ್ವಂ ದೃಷ್ಟಂ ಹಿ ನಃ ಬಹುಶಃ ವ್ಯಾಸದೇಹೇ ಪಾರಾಶರ್ಯಃ, ದಿವ್ಯದೃಷ್ಟಿಂ, ಪ್ರದಾಯ, ಸ್ವಾತಂತ್ರ್ಯಂ, ನಃ, ಅದರ್ಶಯತ್, ಸರ್ವಲೋಕೇ ।

ಅರ್ಥ :- ಬ್ರಹ್ಮಾದೀನಾಂ = ಬ್ರಹ್ಮಾದಿಗಳಿಗೆ, ಪ್ರಕೃತೇಃ = ಶ್ರೀ ತತ್ವಾಭಿಮಾನಿಯಾದ ಮಹಾಲಕ್ಷ್ಮೀಗೆ, ತತ್‌ವಶತ್ವಂ = ಭಗವಂತನ ಅಧೀನತೆಯಿಂದ, ಬಹುಶಃ = ಸ್ವಚ್ಛವಾಗಿ, ವ್ಯಾಸದೇಹೇ = ವೇದವ್ಯಾಸರಲ್ಲಿ, ನಃ = ನಮಗೆ (ನಮ್ಮ ವಿವಾಹ ಕಾಲದಲ್ಲಿ) ದಿವ್ಯದೃಷ್ಟಿಂ = ದಿವ್ಯದೃಷ್ಟಿಯನ್ನು, (ದ್ರುಪದನಿಗೆ ದಿವ್ಯದೃಷ್ಟಿಯನ್ನು ನೀಡಿ) ದೃಷ್ಟಂ = ನೋಡಲ್ಪಟ್ಟಿದೆ ಪ್ರದಾಯ = ಕೊಟ್ಟು, ಸರ್ವಲೋಕೇ = ಚರಾಚರ ವಸ್ತುಗಳಲ್ಲಿಯ ತಮ್ಮ ಸ್ವಾತಂತ್ರ್ಯವನ್ನು, ಅದರ್ಶಯತ್ = ತೋರಿಸಿದರಷ್ಟೇ.

ತಸ್ಮಾದ್ ರಾಜನ್ನಭಿನಿರ್ಯಾಹಿ ಶತ್ರೂನ್
ಹಂತುಂ ಸರ್ವಾನ್ ಭೋಕ್ತುಮೇವಾಧಿರಾಜ್ಯಮ್ ।
ಏವಂ ಚ ತೇ ಕೀರ್ತಿಧರ್ಮೌ ಮಹಾಂತೌ
ಪ್ರಾಪ್ಯೌ ರಾಜನ್ ವಾಸುದೇವಪ್ರಸಾದಾತ್ ॥ ೧೧೫ ॥

ಪದಚ್ಛೇದ :- ತಸ್ಮಾತ್ ರಾಜನ್ ಅಭಿನಿರ್ಯಾಹಿ ಶತ್ರೂನ್ ಹಂತುಂ ಸರ್ವಾನ್ ಭೋಕ್ತುಂ ಏವ ಅಧಿರಾಜ್ಯಂ । ಏವಂ ಚ ತೇ ಕೀರ್ತಿಧರ್ಮೌ ಮಹಾಂತೌ ಪ್ರಾಪ್ಯೌ ರಾಜನ್ ವಾಸುದೇವ ಪ್ರಸಾದಾತ್ ॥

ಅರ್ಥ :- ರಾಜನ್ = ರಾಜನೇ, ತಸ್ಮಾತ್ = ಈ ಹಿಂದೆ ಹೇಳಿದ ಎಲ್ಲಾ ಕಾರಣಗಳಿಂದಲೂ, ಸರ್ವಾನ್ = ಎಲ್ಲಾ, ಶತ್ರೂನ್ = ಶತ್ರುಗಳನ್ನು, ಹಂತುಂ = ಕೊಲ್ಲಲು, ಅಧಿರಾಜ್ಯಂ = ಸಮಗ್ರ ರಾಜ್ಯವನ್ನು, ಭೋಕ್ತುಂ = ಅನುಭವಿಸಲು ಅಭಿನಿರ್ಯಾಹಿ = ಶತ್ರುಗಳ ಅಭಿಮುಖನಾಗು, ರಾಜನ್ = ರಾಜನೇ, ಏವಂ = ಹೀಗಾದಲ್ಲಿ, ತೇ = ನಿನಗೆ ಮಹಾಂತೌ =

ಮಹತ್ತರಗಳಾದ, ಕೀರ್ತಿಧರ್ಮೌ = ಅಪಾರವಾದ ಯಶಸ್ಸು ಮತ್ತು ಪುಣ್ಯವು, **ವಾಸುದೇವ ಪ್ರಸಾದಾತ್** = ಶ್ರೀ ಹರಿಯ ಅನುಗ್ರಹದಿಂದ **ಪ್ರಾಪ್ಯೌ** = ಲಭಿಸಲ್ಪಡುವವುಗಳಾಗಿವೆ.

**ಏವಮುಕ್ತೋSಬ್ರವೀದ್ ಭೀಮಂ ಧರ್ಮಪುತ್ರೋ ಯುಧಿಷ್ಠಿರಃ ।**
**ತ್ರಯೋದಶಾಬ್ದಸ್ಯಾಂತೇSಹಂ ಕುರ್ಯಾಮೇವ ತ್ವದೀರಿತಮ್ ॥ ೧೧೬ ॥**

ಪದಚ್ಛೇದ :- **ಏವಂ ಉಕ್ತಃ ಅಬ್ರವೀತ್ ಭೀಮಂ ಧರ್ಮಪುತ್ರಃ ಯುಧಿಷ್ಠಿರಃ ।**
**ತ್ರಯೋದಶಾಬ್ದಸ್ಯ ಅಂತೇ ಅಹಂ ಕುರ್ಯಾಂ ಏವ ತ್ವದೀರಿತಮ್ ॥**

**ಅರ್ಥ** :- **ಏವಂ** = ಈ ಹಿಂದೆ ಹೇಳಿದ ರೀತಿಯಲ್ಲಿ, **ಉಕ್ತಃ** = ಹೇಳಿದ, **ಭೀಮಂ** = ಭೀಮನನ್ನು ಕುರಿತು, **ಧರ್ಮಪುತ್ರಃ** = ಯಮಧರ್ಮನ ಮಗನಾದ **ಯುಧಿಷ್ಠಿರಃ** = ಯುಧಿಷ್ಠಿರನು, **ಅಬ್ರವೀತ್** = ಹೇಳಿದನು, **ತ್ವದೀರಿತಂ** = ನೀನು ಹೇಳಿದ್ದನ್ನು, **ಅಹಂ** = ನಾನು **ತ್ರಯೋದಶಾಬ್ದಸ್ಯ** = ಹದಿಮೂರು ವರ್ಷಗಳ **ಅಂತೇ** = ಕೊನೆಯಲ್ಲಿ, **ಕುರ್ಯಾಮೇವ** = ಮಾಡಿಯೇ ಮಾಡುತ್ತೇನಷ್ಟೇ.

**ಸತ್ಯಮೇತನ್ನ ಸಂದೇಹಃ ಸತ್ಯೇನಾSತ್ಮಾನಮಾಲಭೇ ।**
**ಲೋಕಾಪವಾದಭೀರುಂ ಮಾಂ ನಾತೋSನ್ಯದ್ ವಕ್ತುಮರ್ಹಸಿ ॥೧೧೭॥**

ಪದಚ್ಛೇದ :- **ಸತ್ಯಂ ಏತತ್ ನ ಸಂದೇಹಃ ಸತ್ಯೇನ ಆತ್ಮಾನಂ ಆಲಭೇ ।**
**ಲೋಕಾಪವಾದಭೀರುಂ ಮಾಂ ನ ಅತಃ ಅನ್ಯತ್ ವಕ್ತುಂ ಅರ್ಹಸಿ ॥**

**ಅರ್ಥ** :- **ಏತತ್** = ಈ ಯಾವ ನನ್ನ ಮಾತು, **ಸತ್ಯಂ** = ಸತ್ಯವು, **ನ ಸಂದೇಹಃ** = ಸಂದೇಹವಿಲ್ಲ, **ಸತ್ಯೇನ** = ಈ ಸತ್ಯದ ಮಾತಿನಿಂದ, **ಆತ್ಮಾನಂ** = ನನ್ನನ್ನೇ, **ಆಲಭೇ** = ಸಾಕ್ಷೀಕರಿಸಿಕೊಳ್ಳುತ್ತೇನೆ (ನನ್ನಾಣೆ ಇದು ಸತ್ಯ) **ಅತಃ** = ಆದ್ದರಿಂದ, **ಲೋಕಾಪವಾದ ಭೀರುಂ** = ಲೋಕಾಪವಾದಕ್ಕೆ ಹೆದರುವ ಸ್ವಭಾವವಿರುವ, **ಮಾಂ** = ನನ್ನನ್ನು (ನನಗೆ) **ಅನ್ಯತ್** = ಬೇರೆ ಯಾವ ಮಾತೂ, **ವಕ್ತುಂ** = ಹೇಳಲು, **ನ ಅರ್ಹಸಿ** = ಯೋಗ್ಯವಲ್ಲ (ತರವಲ್ಲ).

**ತುದಸೇ ಜಾತಿವಾಚಾ ಮಾಂ ಯದ್ಯೇವಂ ಭೀಮ ಮಾಂ ವದೇಃ ।**
**ತದೈವ ಮೇSತ್ಯಯಃ ಕಾರ್ಯೋ ಹಂತವ್ಯಾಶ್ಚೈವ ಶತ್ರವಃ ॥ ೧೧೮ ॥**

ಪದಚ್ಛೇದ :– ತುದಸೇ ಚ ಅತಿ ವಾಚಾ ಮಾಂ ಯದಿ ಏವಂ ಭೀಮಂ ಮಾ ವದೇಃ ।
ತದಾ ಏವ ಮೇ ಅತ್ಯಯಃ ಕಾರ್ಯಃ ಹಂತವ್ಯಾಃ ಚ ಏವ ಶತ್ರವಃ ॥

ಅರ್ಥ :- ಭೀಮ = ಭೀಮನೇ, ಯದ್ಯೇವಂ = ಹೀಗಾದರೂ, ಮಾಂ = ನನ್ನನ್ನುದ್ದೇಶಿಸಿ, ವದೇಃ = ಹೇಳಿವಿಯಾದಲ್ಲಿ, ಅತಿವಾಚಾ = ಬಹಳ ಕಠಿಣವಾದ ಮಾತುಗಳಿಂದ ತುದಸೇ = ವ್ಯಥೆ ಪಡುಸುವಿ, ತದೈವ = ಹದಿಮೂರು ವರ್ಷಗಳ ಕೊನೆಯಲ್ಲಿಯೇ ಮೇ = ನನ್ನ (ಈ ಮಾತುಗಳು = ವಿರುದ್ಧವಾದ) (ನಾನು ಮೃದುವಾದಲ್ಲಿ) ಅತ್ಯಯಃ = ನನ್ನ ಮಾತನ್ನು ಮೀರುವ, ಕಾರ್ಯಃ = ಕಾರ್ಯವು, ಚ = ಮತ್ತು, ಶತ್ರವಃ = ಶತ್ರುಗಳು, ಹಂತವ್ಯಾಃ = ಕೊಲ್ಲಲ್ಪಡಬೇಕು.

ನೈತಾದೃಶೈರಿದಾನೀಂ ತು ವಾಕ್ಯೈರ್ಬಾಧಿತುಮರ್ಹಸಿ ।
ಭೀಷ್ಮದ್ರೋಣಾದಯೋಽಸ್ತ್ರಜ್ಞಾ ನಿವಾರ್ಯಾಶ್ಚ ಕಥಂ ಯುಧಿ ॥ ೧೯ ॥

ಪದಚ್ಛೇದ :– ನ ಏತಾದೃಶೈಃ ಇದಾನೀಂ ತು ವಾಕ್ಯೈಃ ಬಾಧಿತುಂ ಅರ್ಹಸಿ ।
ಭೀಷ್ಮದ್ರೋಣಾದಯಃ ಅಸ್ತ್ರಜ್ಞಾಃ ನಿವಾರ್ಯಾಃ ಚ ಕಥಂ ಯುಧಿ ॥

ಅರ್ಥ :- ಇದಾನೀಂ ತು = ಈ ಸಂದರ್ಭದಲ್ಲಿಯಾದರೂ, ಏತಾದೃಶೈಃ = ಈ ರೀತಿ ಕಠಿಣವಾದ, ವಾಕ್ಯೈಃ = ಮಾತುಗಳಿಂದ, ಬಾಧಿತುಂ = ಬೇಸರಪಡಿಸಲು, ನ ಅರ್ಹಸಿ = ಯೋಗ್ಯನಾಗಿಲ್ಲ, ಚ = ಮತ್ತು, ಯುಧಿ = ಯುದ್ಧದಲ್ಲಿ, ಅಸ್ತ್ರಜ್ಞಾಃ = ಅಸ್ತ್ರ ವಿಶಾರದರಾದ, ಭೀಷ್ಮದ್ರೋಣಾದಯಃ = ಭೀಷ್ಮದ್ರೋಣಾದಿಗಳು, ಕಥಂ = ಹೇಗೆ ನಿವಾರ್ಯಾಃ = ನಿವಾರಿಸಲು ಯೋಗ್ಯರಾಗಿರುವರು.

ಪೂಜ್ಯಾಸ್ತೇ ಬಾಹುಯುದ್ಧೇನ ನ ನಿವಾರ್ಯಾಃ ಕಥಂಚನ ।
ಅಸ್ತ್ರಾಣಿ ಜಾನನ್ನಪಿ ಹಿ ನ ಪ್ರಯೋಜಯಸಿ ಕ್ವಚಿತ್ ॥ ೨೦ ॥

ಪದಚ್ಛೇದ :– ಪೂಜ್ಯಾಃ ತೇ ಬಾಹುಯುದ್ಧೇನ ನ ನಿವಾರ್ಯಾಃ ಕಥಂಚನ ।
ಅಸ್ತ್ರಾಣಿ ಜಾನನ್ ಅಪಿ ಹಿ ಪ್ರಯೋಜಯಸಿ ನ ಕ್ವಚಿತ್ ॥

ಅರ್ಥ :- ತೇ = ಆ ಯಾವ, ಪೂಜ್ಯಾಃ = ಪೂಜನೀಯರುಗಳಾದ ಭೀಷ್ಮದ್ರೋಣಾದಿಗಳು, ಕಥಂಚನ = ಹೇಗೋ, ಬಾಹುಯುದ್ಧೇನ =

ಬಾಹುಯುದ್ಧದಿಂದ, ನ ನಿವಾರ್ಯೌ = ನಿವಾರಿಸತಕ್ಕವರಲ್ಲ, (ತ್ವಂ = ನೀನು) ಅಸ್ತ್ರಾಣಿ = ಅಸ್ತ್ರಗಳನ್ನು, ಜಾನನ್ ಅಪಿ = ತಿಳಿದವನಾದರೂ, ಕ್ವಚಿತ್ = ಎಲ್ಲಿಯೂ, ನ ಪ್ರಯೋಜನಂ = ಪ್ರಯೋಗ ಮಾಡುವುದಿಲ್ಲವಷ್ಟೇ.

**ತಸ್ಮಾದ್ ತದೈವ ಗಂತವ್ಯಂ ವಿಜ್ಞಾತಾಸ್ತ್ರೇ ಧನಂಜಯೇ ।**
**ಇತ್ಯುಕ್ತೋ ಭೀಮಸೇನಸ್ತು ಸ್ನೇಹಭಂಗಭಯಾತ್ ತತಃ ॥ ೧೨೧ ॥**

ಪದಚ್ಛೇದ :- ತಸ್ಮಾತ್ ತದಾ ಏವ ಗಂತವ್ಯಂ ವಿಜ್ಞಾತಾಸ್ತ್ರೇಕೇ ಧನಂಜಯೇ । ಇತಿ ಉಕ್ತಃ ಭೀಮಸೇನಃ ತು ಸ್ನೇಹಭಾಗಭಯಾತ್ ತತ್ಃ ॥

ಅರ್ಥ :- **ತಸ್ಮಾತ್** = ಆದ ಕಾರಣ, **ಧನಂಜಯೇ** = ಅರ್ಜುನನು, **ವಿಜ್ಞಾತಾಸ್ತ್ರೇ** = ಅಸ್ತ್ರಜ್ಞಾನವನ್ನು ಪಡೆದವನಾದಾಗಲೇ, **ತದಾ ಏವ** = ಈ ಹದಿಮೂರು ವರ್ಷಗಳ ನಂತರವೇ **ಗಂತವ್ಯಂ** = ಯುದ್ಧಕ್ಕೆ ಹೊರಡಬೇಕು, **ಇತಿ** = ಹೀಗೆಂದು **ಉಕ್ತಃ** = ಹೇಳಿದ ಯುಧಿಷ್ಠಿರನನ್ನು, **ಭೀಮಸೇನಃ** = ಭೀಮನಾದರೂ **ಸ್ನೇಹಭಂಗಭಯಾತ್** = ಸ್ನೇಹಭಂಗವಾಗುವ ಭಯದಿಂದ, **ತತಃ** = ಆನಂತರ

**ನೋವಾಚ ಕಿಂಚಿದ್ ವಚನಂ ಸ್ವಾಭಿಪ್ರೇತಮವಾಪ್ಯ ಚ ।**
**ಅಭಿಪ್ರಾಯೋ ಹಿ ಭೀಮಸ್ಯ ನಿಶ್ಚಯೇನ ತ್ರಯೋದಶೇ ॥ ೧೨೨ ॥**

ಪದಚ್ಛೇದ :- ನ ಉವಾಚ ಕಿಂಚಿತ್ ಸ್ವಾಭಿಪ್ರೇತಂ ಅವಾಪ್ಯ ಚ । ಅಭಿಪ್ರಾಯಃ ಹಿ ಭೀಮಸ್ಯ ನಿಶ್ಚಯೇನ ತ್ರಯೋದಶೇ ॥

ಅರ್ಥ :- **ಸ್ವಾಭಿಪ್ರೇತಂ** = ತನ್ನ ಇಚ್ಛೆಗೆ ಅನುಗುಣವಾದ ಅಭಿಪ್ರಾಯವನ್ನು, **ಅವಾಪ್ಯ** = ಹೊಂದಿ, **ಕಿಂಚಿತ್ವಚನಂ** = ಬೇರೆ ಯಾವ ಮಾತನ್ನೂ, **ನೋವಾಚ** = ಹೇಳಲಿಲ್ಲ, **ಭೀಮಸ್ಯ** = ಭೀಮನಿಗಾದರೂ, **ನಿಶ್ಚಯೇನ** = ನಿಶ್ಚಯವಾಗಿ, **ತ್ರಯೋದಶೇ** = ಹದಿಮೂರನೆ ವರ್ಷದ ಕೊನೆಯಲ್ಲಿ, ಯುದ್ಧ ಮಾಡಲೇ ಬೇಕೆಂಬುದು, **ಅಭಿಪ್ರಾಯಃ ಹಿ** = ಅಭಿಪ್ರಾಯವಾಗಿತ್ತಷ್ಟೇ.

**ಯುಧಿಷ್ಠಿರಸ್ಯ ರಾಜ್ಯಾರ್ಥಂ ಗಮನಾರ್ಥೇ ಪ್ರತಿಶ್ರವಃ ।**
**ಅನ್ಯಥಾऽತಿಮೃದುತ್ವಾತ್ ಸ ನ ಗಚ್ಛೇದ್ ಭಿನ್ನಧೀಃ ಪರೈಃ ॥ ೧೨೩ ॥**

ಪದಚ್ಛೇದ :- ಯುಧಿಷ್ಠಿರಸ್ಯ ರಾಜ್ಯಾರ್ಥಂ ಗಮನಾರ್ಥೆ ಪ್ರತಿಶ್ರವಃ ಅನ್ಯಥಾ ಅತಿಮೃದುತ್ವಾತ್ ಸಃ ನ ಗಚ್ಛೇತ್ ಭಿನ್ನಧೀಃ ಪರೈಃ ॥

ಅರ್ಥ :- ಯುಧಿಷ್ಠಿರಸ್ಯ = ಯುಧಿಷ್ಠಿರನು, ರಾಜ್ಯಾರ್ಥೇ = ರಾಜ್ಯ ಪ್ರಾಪ್ತಿಗಾಗಿ, ಗಮನಾರ್ಥೇ = ಯುದ್ಧ ಮಾಡುವ ವಿಷಯದಲ್ಲಿ, ಪ್ರತಿಶ್ರವಃ = ಪ್ರತಿಜ್ಞೆ ಮಾಡಬೇಕೆಂಬುದು (ಭೀಮನ ಅಪೇಕ್ಷೆಯಾಗಿದ್ದಿತು) ಅನ್ಯಥಾ = ಪ್ರತಿಜ್ಞೆ ಮಾಡಿಸಲಿಲ್ಲವಾದಲ್ಲಿ ಸಃ = ಆ ಯುಧಿಷ್ಠಿರನು ಅತಿಮೃದುತ್ವಾತ್ = ಬಹಳವಾದ ಮಾರ್ತನತೆಯಿಂದ ಪರೈಃ = ಶತ್ರುಗಳಿಂದ, ಭಿನ್ನಧೀಃ = ಯುದ್ಧ ಮಾಡದೇ ಇರುವ ಬುದ್ಧಿಯನ್ನು ನ ಗಚ್ಛೇತ್ = ಹೊಂದಬಾರದಷ್ಟೇ.

ಕೃತಕೃತ್ಯೇ ತಥಾ ಭೀಮೇ ಸ್ಥಿತೇ ಧರ್ಮಾತ್ಮಜೋ ಹಿ ಸಃ ।
ಭೀಷ್ಮದ್ರೋಣಾದಿವಿಜಯಃ ಕಥಂ ಸ್ಯಾದಿತ್ಯಚಿಂತಯತ್ ॥ ೧೨೪ ॥

ಪದಚ್ಛೇದ :- ಕೃತಕೃತ್ಯೇ ತದಾ ಭೀಮ ಸ್ಥಿತೇ ಧರ್ಮಾತ್ಮಜಃ ಹಿ ಸಃ । ಭೀಷ್ಮದ್ರೋಣಾದಿ ವಿಜಯಃ ಕಥಂ ಸ್ಯಾತ್ ಇತಿ ಅಚಿಂತಯತ್ ॥

ಅರ್ಥ :- ಕೃತಕೃತ್ಯೇ = ಕೃತಾರ್ಥನಾದ (ಸಾರ್ಥಕವಾದ ಅಭಿಪ್ರಾಯವುಳ್ಳ) ಭೀಮೇ = ಭೀಮನು, ಸ್ಥಿತೇ = ಇರಲಾಗಿ, ತದಾ = ಆ ಸಂದರ್ಭದಲ್ಲಿ, ಸಹಿ ಧರ್ಮಾತ್ಮಜಃ = ಧರ್ಮರಾಜನಾದ, ಭೀಷ್ಮ ದ್ರೋಣಾದಿವಿಜಯಃ = ಭೀಷ್ಮದ್ರೋಣಾದಿಗಳ ಜೊತೆಗೆ ವಿಜಯವು, ಕಥಂ = ಹೇಗೆ ಸ್ಯಾತ್ = ಆದೀತು, ಇತಿ = ಹೀಗೆ ಅಚಿಂತಯತ್ = ಚಿಂತಿಸಿದನು.

ನಿವಾರಣಂ ಗುರೂಣಾಂ ಹಿ ಭೀಮ ಇಚ್ಛತಿ ನ ಕ್ವಚಿತ್ ।
ತಸ್ಮಾತ್ ತೇ ಹ್ಯರ್ಜುನೇನೈವ ನಿವಾರ್ಯಾ ಇತ್ಯಚಿಂತಯತ್ ॥ ೧೨೫ ॥

ಪದಚ್ಛೇದ :- ನಿವಾರಣಂ ಗುರೂಣಾಂ ಹಿ ಭೀಮಃ ಇಚ್ಛತಿ ನ ಕ್ವಚಿತ್ । ತಸ್ಮಾತ್ ತೇ ಹಿ ಅರ್ಜುನೇನ ಏವ ನಿವಾರ್ಯ ಇತಿ ಅಚಿಂತಯತ್ ॥

ಅರ್ಥ :- ಭೀಮಃ = ಭೀಮನು, ಗುರೂಣಾಂ = ಭೀಷ್ಮದ್ರೋಣಾದಿ ಗುರುಹಿರಿಯರ, ನಿವಾರಣಂ = ನಿವಾರಣೆಯನ್ನು, ಕ್ವಚಿತ್ = ಯಾವ ಸಂದರ್ಭದಲ್ಲಿಯೂ, ನ ಇಚ್ಛತಿ = ಬಯಸುವುದಿಲ್ಲ. ತಸ್ಮಾತ್ = ಆದ್ದರಿಂದ, ತೇ ಹಿ = ಗುರುಹಿರಿಯರಾದರೂ, ಅರ್ಜುನೇನ ಏವ = ಅರ್ಜುನನಿಂದಲೇ

ನಿವಾರ್ಯ = ನಿವಾರಿಸಲ್ಪಡಬೇಕು, ಇತಿ = ಹೀಗೆಂದು, ಅಚಿಂತಯತ್ = ಚಿಂತಿಸಿದನು.

**ಆಪದ್ಯೇವ ಹಿ ಭೀಮಸ್ತಾನ್ ನಿವಾರಯತಿ ನಾನ್ಯಥಾ ।**
**ಏವಂ ಚಿಂತಾಸಮಾವಿಷ್ಟಂ ವಿಜ್ಞಾಯ್ಯೆವ ಯುಧಿಷ್ಠಿರಮ್ ॥ ೧೨೬ ॥**

ಪದಚ್ಛೇದ :- ಆಪದಿ ಏವ ಹಿ ಭೀಮಃ ತತ್ ನಿವಾರಯತಿ ನ ಅನ್ಯಥಾ । ಏವಂ ಚಿಂತಾಸಮಾವಿಷ್ಟಿಂ ವಿಜ್ಞಾಯ ಏವ ಯುಧಿಷ್ಠಿರಮ್ ॥

ಅರ್ಥ :- ಭೀಮಃ = ಭೀಮಸೇನನು, ಆಪದಿ ಏವ = ಆಪತ್ಕಾಲದಲ್ಲಿ ಮಾತ್ರ, ತನ್ನಿವಾರಯತಿ = ಗುರುಹಿರಿಯರನ್ನು ನಿವಾರಿಸುತ್ತಾನೆ, ನಾನ್ಯಥಾ = ಬೇರೆ ಸಂದರ್ಭದಲ್ಲಿ ಅಲ್ಲ, ಏವಂ = ಈ ರೀತಿಯಾಗಿ, ಚಿಂತಾಸಮಾವಿಷ್ಟಂ = ಚಿಂತೆಯಿಂದ ಕೂಡಿದವನಾದ, ಯುಧಿಷ್ಠಿರಂ = ಯುಧಿಷ್ಟಿರನನ್ನು, ವಿಜ್ಞಾಯ್ಯೆವ = ತಿಳಿದವರಾಗಿಯೇ.

**ಸರ್ವಜ್ಞಃ ಸರ್ವಶಕ್ತಿಶ್ಚ ಕೃಷ್ಣದ್ವೈಪಾಯನೋಽಗಮತ್ ।**
**ನೃಪತಿಂ ಬೋಧಯಾಮಾಸ ಚಿಂತಾವ್ಯಾಕುಲಮಾನಸಮ್ ॥ ೧೨೭ ॥**

ಪದಚ್ಛೇದ :- ಸರ್ವಜ್ಞಃ ಸರ್ವಶಕ್ತಿಃ ಚ ಕೃಷ್ಣದ್ವೈಪಾಯನಃ ಅಗಮತ್ । ನೃಪತಿಂ ಬೋಧಯಾಮಾಸ ಚಿಂತಾವ್ಯಾಕುಲಮಾನಸಮ್ ॥

ಅರ್ಥ :- ಸರ್ವಜ್ಞಃ = ಸರ್ವಜ್ಞರಾದ, ಸರ್ವಶಕ್ತಿಃ = ಸರ್ವ ಶಕ್ತನಾದ, ಕೃಷ್ಣದ್ವೈಪಾಯನಃ = ವೇದವ್ಯಾಸರು, ಅಗಮತ್ = ಬಂದರು, ಚಿಂತಾವ್ಯಾಕುಲಮಾನಸಂ = ಚಿಂತೆಯಿಂದ ಕ್ಷೋಭೆಗೊಂಡ ಮನಸ್ಸುಳ್ಳ ನೃಪತಿಂ = ರಾಜನಾದ ಯುಧಿಷ್ಠಿರನನ್ನು ಭೇದಯಾಮಾಸ = ಭೋದಿಸಿದರು.

**ಇಮಂ ಮಂತ್ರಂ ವದಿಷ್ಯಾಮಿ ಯೇನ ಜೇಷ್ಯತಿ ಫಲ್ಗುನಃ ।**
**ಭೀಷ್ಮದ್ರೋಣಾದಿಕಾನ್ ಸರ್ವಾನ್ ತಂ ತ್ವಂ ವದ ಧನಂಜಯೇ ॥ ೧೨೮ ॥**

ಪದಚ್ಛೇದ :- ಇಮಂ ಮಂತ್ರಂ ವದಿಷ್ಯಾಮಿ ಯೇನ ಜೇಷ್ಯತಿ ಫಲ್ಗುನಃ । ಭೀಷ್ಮದ್ರೋಣಾದಿಕಾನ್ ಸರ್ವಾನ್ ತಂ ತ್ವಂ ವದ ಧನಂಜಯೇ ॥

ಅರ್ಥ :- ಇಮಂ ಮಾತ್ರಂ = ಮಂತ್ರವೊಂದನ್ನು ವದಿಷ್ಯಾಮಿ = ಹೇಳುತ್ತೇನೆ, ತಂ = ಆಮಂತ್ರವನ್ನು, ತ್ವಂ = ನೀನು ಧನಂಜಯೇ = ಧನಂಜಯನಲ್ಲಿ, ವದ = ಹೇಳು, ಯೇನ = ಯಾವ ಮಂತ್ರದ ಪ್ರಭಾವದಿಂದ, ಫಲ್ಗುನಃ = ಅರ್ಜುನನು, ಭೀಷ್ಮದ್ರೋಣಾದಿಕಾನ್ = ಭೀಷ್ಮದ್ರೋಣಾದಿಗಳನ್ನು, ಸರ್ವಾನ್ = ಇತರೆ ಎಲ್ಲರನ್ನೂ, ಜೇಷ್ಯತಿ = ಗೆಲ್ಲುತ್ತಾನೆ.

ಇತ್ಯುಕ್ತ್ವೈವಾವದನ್ಮಂತ್ರಂ ಸರ್ವದೈವತದೃಷ್ಟಿದಮ್ ।
ನ ಸ್ವಯಂ ಹ್ಯವದತ್ ಪಾರ್ಥೇ ಫಲಾಧಿಕ್ಯಂ ಯತೋ ಭವೇತ್ ॥೧೨೯॥

**ಇತಿ ಉಕ್ತ್ವಾ ಏವ ಅವದನ್ ಮಂತ್ರಂ ಸರ್ವದೈವತದೃಷ್ಟಿದಮ್ । ನ ಸ್ವಯಂ ಹಿ ಅವದತ್ ಪಾರ್ಥೇ ಫಲಾಧಿಕ್ಯಂ ಯತಃ ಭವೇತ್ ॥**

ಅರ್ಥ :- ಇತಿ = ಹೀಗೆ ಉಕ್ತ್ವಾ = ಹೇಳಿ, ಸರ್ವದೈವತ ದೃಷ್ಟಿದಂ = ಎಲ್ಲ ದೇವತೆಗಳ ಸ್ಮರಣೆ ಮಾತ್ರದಿಂದಲೇ ಪ್ರತ್ಯಕ್ಷವನ್ನು ನೀಡಬಲ್ಲ, ಮಂತ್ರಂ = ಮಂತ್ರವನ್ನು, ಅವದನ್ = ಹೇಳಿದರು, ಸ್ವಯಂ = ತಾವೇ, ಪಾರ್ಥೇ = ಅರ್ಜುನನಲ್ಲಿ, ನ ಹಿ ಅವದತ್ = ಉಪದೇಶಿಸಲಿಲ್ಲವಷ್ಟೇ, ಯತಃ = ಯಾವ ಕಾರಣದಿಂದ ಫಲಾಧಿಕ್ಯಂ = ಅತ್ಯಧಿಕ ಫಲವು ಭವೇತ್ = ಉಂಟಾದೀತು.

ಭೀಷ್ಮದ್ರೋಣಾದಿವಿಜಯ ಏತಾವದ್ ವೀರ್ಯಮೇವ ಹಿ ।
ಅಲಂ ನಾತೋಽಧಿಕಂ ಕಾರ್ಯಮೇತಾವದ್ ಯೋಗ್ಯಮಸ್ಯ ಚ ॥೧೩೦॥

**ಪದಚ್ಛೇದ :- ಭೀಷ್ಮ ದ್ರೋಣಾದಿ ವಿಜಯೇ ಏತಾವತ್ ವೀರ್ಯಂ ಏವ ಹಿ । ಅಲಂ ನ ಅತಃ ಅಧಿಕಂ ಕಾರ್ಯಂ ಏತಾವತ್ ಯೋಗ್ಯಂ ಅಸ್ಯ ಚ ॥**

ಅರ್ಥ :- ಭೀಷ್ಮದ್ರೋಣಾದಿ ವಿಜಯೇ = ಭೀಷ್ಮದ್ರೋಣಾದಿಗಳನ್ನು ಗೆಲ್ಲಲು, ಏತಾವದೇವ = ಇಷ್ಟು ಮಾತ್ರ, ವೀರ್ಯಂ = ಸಾಮರ್ಥ್ಯವು, ಅಲಂ = ಪರ್ಯಾಪ್ತವಾಗಿದೆ, ಅತಃ = ಇದಕ್ಕಿಂತಲೂ, ಅಧಿಕಂ = ಅಧಿಕ ವಾದ ಕಾರ್ಯವು, ನ ಕಾರ್ಯಂ = ಮಾಡಬೇಕಾದ್ದಿಲ್ಲ, ಚ = ಮತ್ತು, ಏತಾವತ್ = ಇಷ್ಟು ಮಾತ್ರ, ಅಸ್ಯ = ಅರ್ಜುನನಿಗೆ ಯೋಗ್ಯಂ = ಯೋಗ್ಯವಾಗಿದೆ.

ಫಲ್ಗುನಸ್ಯೇತಿ ಭಗವಾನ್ ನ ಸ್ವಯಂ ಹ್ಯವದನ್ಮನುಮ್ ।
ಗತೇ ವ್ಯಾಸೇ ಭಗವತಿ ಸರ್ವಜ್ಞೇ ಸರ್ವಕರ್ತರಿ ॥ ೧೩೧ ॥

ಪದಚ್ಛೇದ :- ಫಲ್ಗುನಸ್ಯ ಇತಿ ಭಗವಾನ್ ನ ಸ್ವಯಂ ಹಿ ಅವದತ್ ಮನುಂ । ಗತೇ ವ್ಯಾಸೇ ಭಗವತಿ ಸರ್ವಜ್ಞೇ ಸರ್ವಕರ್ತರಿ ॥

ಅರ್ಥ :- ಇತಿ = ಹೀಗೆಂದು, ಭಗವಾನ್ = ವ್ಯಾಸರು, ಫಲ್ಗುನಸ್ಯ = ಅರ್ಜುನನಿಗೆ, ಮನುಂ = ಮಂತ್ರವನ್ನು, ಸ್ವಯಂ = ತಾವು, ನ ಹಿ ಅವದತ್ = ಉಪದೇಶಿಸಲಿಲ್ಲ, ಸರ್ವಕರ್ತರಿ = ಸರ್ವಕರ್ತೃವಾದ, ಸರ್ವಜ್ಞೇ = ಸರ್ವಜ್ಞರಾದ, ಭಗವತಿ = ಪೂಜ್ಯರಾದ, ವ್ಯಾಸೇ = ವೇದವ್ಯಾಸರು, ಗತೇ = ಹೋಗುತ್ತಿರಲಾಗಿ.

ಧರ್ಮರಾಜೋಽದಿಶನ್ಮಂತ್ರಂ ಫಲ್ಗುನಾಯ ರಹಸ್ಯಮುಮ್ ।
ತಮಾಪ್ಯ ಫಲ್ಗುನೋ ಮಂತ್ರಂ ಯಯೌ ಜ್ಯೇಷ್ಠೌ ಪ್ರಣಮ್ಯ ಚ ॥೧೩೨॥

ಪದಚ್ಛೇದ :- ಧರ್ಮರಾಜಃ ಅವದತ್ ಮಂತ್ರಂ ಫಲ್ಗುನಾಯ ರಹಸ್ಯಂ ಅಮುಂ ತಮ್ । ಆಪ್ಯ ಫಲ್ಗುನಃ ಮಂತ್ರಂ ಯಯೌ ಜ್ಯೇಷ್ಠೌ ಪ್ರಣಮ್ಯ ಚ ॥

ಅರ್ಥ :- ಧರ್ಮರಾಜಃ = ಧರ್ಮರಾಜನು, ಅಮುಂ = ಈ ಯಾವ, ರಹಸ್ಯಂ = ಗುಪ್ತವಾದ, ಮಂತ್ರಂ = ಮಂತ್ರವನ್ನು, ಫಲ್ಗುನಾಯ = ಅರ್ಜುನನಿಗೆ, ಅವದತ್ = ಹೇಳಿದನು, ಫಲ್ಗುನಃ = ಅರ್ಜುನನಾದರೂ, ತಮ್ = ಆ ಯಾವ, ಮಂತ್ರಂ = ಮಂತ್ರವನ್ನು, ಆಪ್ಯ = ಹೊಂದಿ, ಜ್ಯೇಷ್ಠೌ = ಅಣ್ಣಂದಿರನ್ನು ಪ್ರಣಮ್ಯ = ನಮಿಸಿ, ಯಯೌ = ಹೊರಟನು.

ಯಮಜೌ ಚ ಸಮಾಶ್ಲಿಷ್ಯ ಗಿರಿಮೇವೇಂದ್ರಕೀಲಕಮ್ ।
ತಪಶ್ಚಚಾರ ತತ್ರಸ್ಥಃ ಶಂಕರಸ್ಥಂ ಹರಿಂ ಸ್ಮರನ್ ॥ ೧೩೩ ॥

ಪದಚ್ಛೇದ :- ಯಮಜೌ ಚ ಸಮಾಶ್ಲಿಷ್ಯ ಗಿರಿಂ ಏವ ಇಂದ್ರಕೀಲಂ ಕಮ್ । ತಪಃ ಚಚಾರ ತತ್ರಸ್ಥಃ ಶಂಕರಸ್ಥಂ ಹರಿಂ ಸ್ಮರನ್ ॥

ಅರ್ಥ :- ಯಮಜೌ = ನಕುಲ ಸಹದೇವರನ್ನು, ಸಮಾಶ್ಲಿಷ್ಯ = ಆಲಂಗಿಸಿ ಇಂದ್ರಕೀಲಕಂ = ಇಂದ್ರನಿಗೆ ಪ್ರಿಯವಾದ ಗಿರಿಂ = ಪರ್ವತವನ್ನು

ಹೊಂದಿ, ತತ್ರಸ್ಥಃ = ಅಲ್ಲಿರುವವನಾಗಿ, ಶಂಕರಸ್ಥಂ = ರುದ್ರದೇವರ ಅಂತರ್ಯಾಮಿಯಾದ, ಹರಿಂ = ನಾರಾಯಣನನ್ನು, ಸ್ಮರನ್ = ಸ್ಮರಿಸುವವನಾಗಿ ತಪಃ = ತಪಸ್ಸನ್ನು ಚಚಾರ = ಆಚರಿಸಿದನು.

**ಷಣ್ಮಾಸೇಽತಿಗತೇಽಪಶ್ಯನ್ಮೂಕಂ ನಾಮಾಸುರಂ ಗಿರೌ ।**
**ವರಾಹರೂಪಮಾಯಾತಂ ವಧಾರ್ಥಂ ಫಲ್ಗುನಸ್ಯ ಚ ॥ ೧೩೪ ॥**

ಪದಚ್ಛೇದ :– ಷಣ್ಮಾಸೇ ಅತಿಗತೇ ಅಪಶ್ಯತ್ ಮೂಕಂ ನಾಮ ಅಸುರಂ ಗಿರೌ । ವರಾಹರೂಪಂ ಆಯಾತಂ ವಧಾರ್ಥಂ ಫಲ್ಗುನಸ್ಯ ಚ ॥

**ಅರ್ಥ** :- **ಷಣ್ಮಾಸೇ** = ಆರು ತಿಂಗಳು **ಅತಿಗತೇ** = ಕಳೆಯುತ್ತಿರಲಾಗಿ, **ಗಿರೌ** = ಪರ್ವತದಲ್ಲಿ, **ಫಲ್ಗುನಸ್ಯ** = ಅರ್ಜುನನ **ವಧಾರ್ಥಂ** = ಸಂಹಾರಕ್ಕೋಸ್ಕರ, **ವರಾಹ ರೂಪಂ** = ಹಂದಿಯ ರೂಪವನ್ನು ಧರಿಸಿ, **ಆಯಾತಂ** = ಬರುತ್ತಿರುವ, **ಮೂಕಂ ನಾಮ** = ಮೂಕ ಎಂದು ಹೆಸರಿನ **ಅಸುರಂ** = ಅಸುರನನ್ನು **ಅಪಶ್ಯತ್** = ಕಂಡನು.

**ತಂ ಜ್ಞಾತ್ವಾ ಫಲ್ಗುನೋ ವೀರಃ ಸಜ್ಯಂ ಕೃತ್ವಾ ತು ಗಾಂಡಿವಮ್ ।**
**ಚಿಕ್ಷೇಪ ವಜ್ರಸಮಿತಾಂಸ್ತತ್ಕಾಯೇ ಸಾಯಕಾನ್ ಬಹೂನ್ ॥ ೧೩೫ ॥**

ಪದಚ್ಛೇದ :– ತಂ ಜ್ಞಾತ್ವಾ ಫಲ್ಗುನಃ ವೀರಃ ಸಜ್ಯಂ ಕೃತ್ವಾ ಚ ಗಾಂಡಿವಮ್ । ಚಿಕ್ಷೇಪ ವಜ್ರಸಮಿತಾನ್ ತತ್ ಕಾಯೇ ಸಾಯಕಾನ್ ಬಹೂನ್ ॥

**ಅರ್ಥ** :- **ವೀರಃ** = ಪರಾಕ್ರಮಿಯಾದ, **ಫಲ್ಗುನಃ** = ಅರ್ಜುನನು, **ತಂ** = ಬರುತ್ತಿರುವ ಆ ರಾಕ್ಷಸನನ್ನು, **ಜ್ಞಾತ್ವಾ** = ತಿಳಿದು, **ಚ** = ಮತ್ತು, **ಗಾಂಡಿವಂ** = ಗಾಂಡೀವನನ್ನು, **ಸಜ್ಯಂ** = ಸಿದ್ಧವನ್ನಾಗಿ, **ಕೃತ್ವಾ** = ಮಾಡಿ **ತತ್ಕಾಯೇ** = ಅವನ ಶರೀರದಲ್ಲಿ, **ವಜ್ರಸಮಿತಾನ್** = ವಜ್ರಸಮಾನವಾದ, **ಬಹೂನ್** = ಬಹಳವಾದ, **ಸಾಯಕಾನ್** = ಬಾಣಗಳನ್ನು, **ಚಿಕ್ಷೇಪ** = ಎಸೆದನು.

**ಕಿರಾತರೂಪಸ್ತಮನು ಸಭಾರ್ಯಶ್ಚ ತ್ರಿಯಂಬಕಃ ।**
**ಸ ಮಮಾರ ಹತಸ್ತಾಭ್ಯಾಂ ದಾನವಃ ಪಾಪಚೇತನಃ ॥ ೧೩೬ ॥**

**ಪದಚ್ಛೇದ :– ಕಿರಾತರೂಪಃ ತಮನು ಸಭಾರ್ಯಃ ಚ ತ್ರಯಂಬಕಃ । ಸಃ ಮಮಾರ ಹತಃ ತಾಭ್ಯಾಂ ದಾನವಃ ಪಾಪಚೇತನಃ ॥**

**ಅರ್ಥ** :- **ತಮನು** = ಅಷ್ಟರಲ್ಲಿಯೇ, **ಸಭಾರ್ಯಃ** = ಹೆಂಡತಿಯಿಂದ ಕೂಡಿದ, **ತ್ರಯಂಬಕಃ** = ಶಂಕರನು, **ಕಿರಾತರೂಪಃ** = ಬೇಡನ ವೇಷವನ್ನು ಧರಿಸಿದವನಾಗಿ, (ಬೆನ್ನಟ್ಟಿದನು), **ಸಃ ಪಾಪಚೇತನಃ** = ಪಾಪಿಷ್ಠನಾದ, **ದಾನವಃ** = ರಾಕ್ಷಸನು, **ತಾಭ್ಯಾಂ** = ಅವರಿಬ್ಬರ ಬಾಣಗಳಿಂದ, **ಮಮಾರ** = ಸಾಯಿಸಲ್ಪಟನು.

**ತೇನೋಕ್ತೋಽಸೌ ಮಯ್ಯೈವಾಯಂ ವರಾಹೋಽನುಗತೋಽದ್ಯ ಹಿ ।**
**ತಮವಿಧ್ಯೋ ಯತಸ್ತ್ವಂ ಹಿ ತದ್ ಯುಧ್ಯಸ್ವ ಮಯಾ ಸಹ ॥ ೧೩೭ ॥**

**ಪದಚ್ಛೇದ :– ತೇನ ಉಕ್ತಃ ಅಸೌ ಮಯಾ ಏವ ಅಯಂ ವರಾಹಃ ಅನುಗತಃ ಅದ್ಯ ಹಿ । ತಮ್ ಅವಿದ್ಯಃ ಯತಃ ತ್ವಂ ಹಿ ತತ್ ಯುಧ್ಯಸ್ವ ಮಯಾ ಸಹ ॥**

**ಅರ್ಥ** :- **ಅದ್ಯ** = ಇಂದು, **ಅಯಂ** = ಈ ಯಾವ, **ವರಾಹಃ** = ಹಂದಿಯು, **ಮಯ್ಯೈವ** = ನನ್ನಿಂದಲೇ, **ಅನುಗತಃ** = ಅನುಸರಿಸಲ್ಪಟ್ಟಿದೆಯಷ್ಟೆ, (**ಇತಿ** = ಹೀಗೆಂದು) **ಯತಃ** = ಯಾವ ಕಾರಣದಿಂದ **ತಮವಿದ್ಯಃ** = ನನ್ನಿಂದ ಹೊಡೆಯಲ್ಪಟ್ಟಿದೆಯೋ, **ತೇನ** = ಆ ಕಾರಣದಿಂದ, **ಮಯಾ ಸಹ** = ನನ್ನೊಂದಿಗೆ, **ತ್ವಂ** = ನೀನು, **ಯುಧ್ಯಸ್ವ** = ಯುದ್ಧ ಮಾಡು (**ಇತಿ**) ಹೀಗೆ, **ಅಸೌ** = ಈ ಅರ್ಜುನನು, **ಉಕ್ತಃ** = ಹೇಳಲ್ಪಟ್ಟನು.

**ಇತ್ಯುಕ್ತಃ ಫಲ್ಗುನಃ ಪ್ರಾಹ ತಿಷ್ಠ ತಿಷ್ಠ ನ ಮೋಕ್ಷ್ಯಸೇ ।**
**ಇತ್ಯುಕ್ತ್ವಾ ತಾವುಭೌ ಯುದ್ಧಂ ಚಕ್ರತುಃ ಪುರುಷರ್ಷಭೌ ॥ ೧೩೮ ॥**

**ಪದಚ್ಛೇದ :– ಇತಿ ಉಕ್ತಃ ಫಲ್ಗುನಃ ಪ್ರಾಹ ತಿಷ್ಠ ತಿಷ್ಠ ನ ಮೋಕ್ಷ್ಯಸೇ । ಇತಿ ಉಕ್ತ್ವಾ ತೌ ಉಭೌ ಯುದ್ಧಂ ಚಕ್ರತುಃ ಪುರುಷರ್ಷಭೌ ॥**

**ಅರ್ಥ** :- **ಇತಿ** = ಹೀಗೆ **ಉಕ್ತ** = ಹೇಳಲ್ಪಟ್ಟ, **ಫಲ್ಗುನಃ** = ಅರ್ಜುನನು, **ಪ್ರಾಹ ತಿಷ್ಠ ತಿಷ್ಠ** = ನಿಲ್ಲು ನಿಲ್ಲು , **ನ ಮೋಕ್ಷ್ಯಸೇ** = ನಿನ್ನನ್ನು ಬಿಡುವುದಿಲ್ಲ **ಇತಿ** = ಹೀಗೆಂದು, **ಪ್ರಾಹಃ** = ಹೇಳಿದನು, **ತಾವುಭೌ** = ಆ ಯಾವ

ಪುರುಷರ್ಷಭೌ = ಪುರುಷಶ್ರೇಷ್ಠರುಗಳು, ಉಕ್ತ್ವಾ = ಹಿಂದೆ ಹೇಳಿದ ಹಾಗೆ ಹೇಳಿ, ಯುದ್ಧಂ = ಯುದ್ಧವನ್ನು, ಚಕ್ರತುಃ = ಮಾಡಿದರು.

ತತ್ರಾಖಿಲಾನಿ ಚಾಸ್ತ್ರಾಣಿ ಫಲ್ಗುನಸ್ಯಾಗ್ರಸಚ್ಛಿವಃ ।
ತತೋಽರ್ಜುನಸ್ತು ಗಾಂಡೀವಂ ಸಮಾದಾಯಾಭ್ಯತಾಡಯತ್ ॥ ೧೩೯ ॥

ಪದಚ್ಛೇದ :– ತತ್ರ ಅಖಿಲಾದಿ ಶಸ್ತ್ರಾಣಿ ಫಲ್ಗುನಸ್ಯ ಅಗ್ರಸತ್ ಶಿವಃ । ತತಃ ಅರ್ಜುನಃ ತು ಗಾಂಡೀವಂ ಸಮಾದಾಯ ಅಭ್ಯತಾಡಯತ್ ॥

ಅರ್ಥ :- ತತ್ರ = ಆ ಯುದ್ಧದಲ್ಲಿ, ಫಲ್ಗುನಸ್ಯ = ಅರ್ಜುನನ, ಅಖಿಲಾನಿ = ಎಲ್ಲಾ ಶಾಸ್ತ್ರಾಣಿ = ಶಸ್ತ್ರಗಳನ್ನು ಶಿವಃ = ರುದ್ರನು, ಅಗ್ರಸತ್ = ನುಂಗಿದನು, ತತಃ = ಆನಂತರ, ಅರ್ಜುನಸ್ತು = ಅರ್ಜುನನಾದರೂ, ಗಾಂಡೀವಂ = ಗಾಂಡೀವ ಧನುಸ್ಸನ್ನು, ಸಮುದಾಯ = ತೆಗೆದುಕೊಂಡು, ಅಭ್ಯತಾಡಯತ್ = ಹೊಡೆದನು.

ತದಪ್ಯಗ್ರಸದೇವಾಸೌ ಪ್ರಹಸನ್ ಗಿರಿಶಸ್ತದಾ ।
ಬಾಹುಯುದ್ಧಂ ತತಸ್ತ್ವಾಸೀತ್ ತಯೋಃ ಪುರುಷಸಿಂಹಯೋಃ ॥ ೧೪೦ ॥

ಪದಚ್ಛೇದ :– ತದಪಿ ಅಗ್ರಸತ್ ಏವ ಅಸೌ ಪ್ರಹಸನ್ ಗಿರೀಶಃ ತದಾ । ಬಾಹುಯುದ್ಧಂ ತತಸ್ತು ಆಸೀತ್ ತಯೋ ಪುರುಷಸಿಂಹಯೋಃ ॥

ಅರ್ಥ :- ಅಸೌ = ಈ ಯಾವ, ಗಿರೀಶಃ = ಶಿವನು, ತದಾ = ಆಗ, ತದಪಿ = ಆ ಗಾಂಡೀವವನ್ನೂ, ಪ್ರಹಸನಂ = ನಸುನಗುವವನಾಗಿ, ಅತ್ರಸತ್ = ನುಂಗಿದನು, ತತಸ್ತು = ಆನಂತರವಾದರೂ, ತಯೋ = ಆ ಯಾವ, ಪುರುಷಸಿಂಹಯೋಃ = ಪುರುಷಶ್ರೇಷ್ಠರುಗಳಲ್ಲಿ, ಬಾಹುಯುದ್ಧಂ = ಬಾಹುಯುದ್ಧವು, ಆಸೀತ್ = (ಆಯಿತು) ನಡೆಯಿತು.

ಪಿಂಡೀಕೃತ್ಯ ತತೋ ರುದ್ರಶ್ಚಿಕ್ಷೇಪಾಥ ಧನಂಜಯಮ್ ।
ಮೂರ್ಛಾಮವಾಪ ಮಹತೀಂ ಫಲ್ಗುನೋ ರುದ್ರಪೀಡಿತಃ ॥ ೧೪೧ ॥

ಪದಚ್ಛೇದ :– ಪಿಂಡೀಕೃತ್ಯ ತತಃ ರುದ್ರಃ ಚಿಕ್ಷೇಪ ಚ ಧನಂಜಯಮ್ । ಮೂರ್ಛಾಮ್ ಅವಾಪ ಮಹತೀಂ ಫಲ್ಗುನಃ ರುದ್ರಪೀಡಿತಃ ॥

**ಅರ್ಥ** :- **ತತಃ** = ಅನಂತರ, **ರುದ್ರಃ** = ಶಿವನು, **ಧನಂಜಯಂ** = ಅರ್ಜುನನನ್ನು, **ಪಿಂಡೀಕೃತ್ಯ** = ಮುದ್ದೆ ಮಾಡಿ, **ಚಿಕ್ಷೇಪ** = ಎಸೆದನು, **ರುದ್ರಪೀಡಿತ** = ಶಿವನಿಂದ ಪೀಡೆಗೊಳಗಾದ ಅರ್ಜುನನು **ಮಹತೀಂ** = ಗಾಢವಾದ, **ಮೂರ್ಛಾಮ್** = ಮೂರ್ಚಾವಸ್ಥೆಯನ್ನು, **ಅವಾಪ** = ಪಡೆದನು.

**ಪೂರ್ವಂ ಸಂಪ್ರಾರ್ಥಯಾಮಾಸ ಶಂಕರೋ ಗರುಡಧ್ವಜಮ್ ।**
**ಅವರಾಣಾಂ ವರಂ ಮತ್ತೋ ಯೇಷಾಂ ತ್ವಂ ಸಂಪ್ರಯಚ್ಛಸಿ ॥ ೧೪೨ ॥**

**ಪದಚ್ಛೇದ** :- **ಪೂರ್ವಂ ಸಂಪ್ರಾರ್ಥಯಾಮಾಸ ಶಂಕರಃ ಗರುಡಧ್ವಜಮ್ । ಅವರಾಣಾಂ ವರಂ ಮತ್ತಃ ಯೇಷಾಂ ತ್ವಂ ಸಂಪ್ರಯಚ್ಛಸಿ ॥**

**ಅರ್ಥ** :- **ಪೂರ್ವಂ** = ಈ ಹಿಂದೆ, **ಶಂಕರಃ** = ರುದ್ರನು, **ಗರುಡಧ್ವಜಂ** = ಶ್ರೀಹರಿಯನ್ನು, **ಸಂಪ್ರಾರ್ಥಯಾಮಾಸ** = ಪ್ರಾರ್ಥಿಸಿದನು, **ಮತ್ತಃ** = ನನಗಿಂತ, **ಅವರಾಣಾಂ** = ಯೋಗ್ಯತೆಯಲ್ಲಿ ಕೆಳಗಿರುವ, **ಯೇಷಾಂ** = ಯಾರಿಗಾಗಲಿ, **ತ್ವಂ** = ನೀನು, **ಸಂಪ್ರಯಚ್ಛಸಿ** = ಅಜೇಯತ್ವ ವರವನ್ನು ಕೊಡುವೆಯೋ.

**ಅಜೇಯತ್ವಂ ಪ್ರಸಾದಾತ್ ತೇ ವಿಜೇಯಾಃ ಸ್ಯುರ್ಮಯಾಽಪಿ ತೇ ।**
**ಇತ್ಯುಕ್ತಃ ಪ್ರದದೌ ವಿಷ್ಣುರುಮಾಧೀಶಾಯ ತಂ ವರಮ್ ॥ ೧೪೩ ॥**

**ಪದಚ್ಛೇದ** :- **ಅಜೇಯತ್ವಂ ಪ್ರಸಾದಾತ್ ತೇ ವಿಜೇಯಾಃ ಸ್ಯುಃ ಮಯಾ ಅಪಿ ತೇ । ಇತಿ ಉಕ್ತಃ ಪ್ರದದೌ ವಿಷ್ಣುಃ ಉಮಾಧೀಶಾಯ ತಂ ವರಮ್ ॥**

**ಅರ್ಥ** :- **ತೇ** = ನಿನ್ನ **ಪ್ರಸಾದಾತ್** = ಅನುಗ್ರಹದಿಂದ, **ಅಜೇಯತ್ವಂ** = ಅಜೇಯತ್ವವು, (ಯಾರಿಗಿರುವುದೋ) **ತೇ** = ಅವರುಗಳು, **ಮಯಾ ಅಪಿ** = ನನ್ನಿಂದಲೂ, **ವಿಜೇಯಾಃ ಸ್ಯುಃ** = ಸೋಲುವವರಾಗಬೇಕು, **ಇತಿ** = ಹೀಗೆಂದು, **ಉಕ್ತಃ** = ಹೇಳಲ್ಪಟ್ಟ **ವಿಷ್ಣುಃ**, **ಉಮಾಧೀಶಾಯ** = ಪಾರ್ವತಿಯ ಗಂಡನಾದ ರುದ್ರನಿಗೆ, **ತಂ ವರಂ** = ಆ ಯಾವ ವರವನ್ನು, **ಪ್ರದದೌ** = ನೀಡಿದನು.

ತೇನಾಜಯಚ್ಛ್ವೇತವಾಹಂ ಗಿರಿಶೋ ರಣಮಧ್ಯಗಮ್ ।
ಕೇವಲಾನ್ ವೈಷ್ಣವಾನ್ ಮಂತ್ರಾನ್ ವ್ಯಾಸಃ ಪಾರ್ಥಾಯ ನೋ ದದೌ ॥೧೪೪॥

ಪದಚ್ಛೇದ :– ತೇನ ಅಜಯತ್ ಶ್ವೇತವಾಹಂ ಗಿರೀಶಃ ರಣಮಧ್ಯಗಮ್ । ಕೇವಲಾನ್ ವೃಷ್ಣಿವಾನ್ ಮಂತ್ರಾನ್ ವ್ಯಾಸಃ ಪಾರ್ಥಾಯ ನ ದದೌ ॥

ಅರ್ಥ :- ತೇನ = ಆದ ಕಾರಣ, ಗಿರೀಶಃ = ರುದ್ರನು ರಣ ಮಧ್ಯಗಂ = ಯುದ್ಧ ಭೂಮಿಯ ಮಧ್ಯದಲ್ಲಿರುವ ಶ್ವೇತವಾಹಂ = ಅರ್ಜುನನ್ನು, ಅಜಯತ್ = ಗೆದ್ದನು, ವ್ಯಾಸಃ = ವ್ಯಾಸರಾದರೂ, ಕೇವಲಾನ್ = ಕೇವಲ ವೈಷ್ಣವಾನ್ = ವಿಷ್ಣುದೇವತಾಕವಾದ (ವಿಷ್ಣುವೇ ಋಷಿಯಾಗಿಯುಳ್ಳ) ಮಂತ್ರಾನ್ = ಮಂತ್ರಗಳನ್ನು, ಪಾರ್ಥಾಯ = ಅರ್ಜುನನಿಗೆ, ನ ದದೌ = ಕೊಡಲಿಲ್ಲ, (ಕೇವಲ ಶಿವದೃಷ್ಟವಾದ ವೈಷ್ಣವ ಮಂತ್ರಗಳನ್ನು ನೀಡಿದ್ದರು).

ಏತಾವತಾಽಲಂ ಭೀಷ್ಮಾದೇರ್ಜಯಾರ್ಥಮಿತಿ ಚಿದ್ಘನಃ ।
ಕೇವಲೈರ್ವೈಷ್ಣವೈರ್ಮಂತ್ರೈಃ ಸ್ವದತ್ತೈರ್ವಿಜಯಾವಹೈಃ ॥ ೧೪೫ ॥

ಪದಚ್ಛೇದ :– ಏತಾವತಾ ಅಲಂ ಭೀಷ್ಮಾದೇಃ ಜಯಾರ್ಥಂ ಇತಿ ಚಿದ್ಘನಃ । ಕೇವಲೈಃ ವೈಷ್ಣವೈಃ ಮಂತ್ರೈಃ ಸ್ವದತ್ತೈಃ ವಿಜಯಾವಹೈಃ ॥

ಅರ್ಥ :- ಚಿದ್ಘನಃ = ಚಿನ್ಮಯರಾದ ವೇದವ್ಯಾಸರು, ಭೀಷ್ಮಾದೇಃ = ಭೀಷ್ಮಾದಿಗಳ ಜಯಾರ್ಥಂ = ಜಯಕ್ಕೋಸ್ಕರ, ಸ್ವದತ್ತೈಃ = ತನ್ನಿಂದ ನೀಡಲ್ಪಟ್ಟ, ವಿಜಯಾವಹೈಃ = ವಿಜಯವನ್ನು ನೀಡುವ, ಕೇವಲೈಃ = (ಇತರರಿಂದ ದೃಷ್ಟವಾದ) ವೈಷ್ಣವೈಃ = ವಿಷ್ಣು ದೇವತಾಕವಾದ, ಮಂತ್ರೈಃ = ಮಂತ್ರಗಳಿಂದ ಏತಾವತಾ = ಇಷ್ಟರಿಂದಲೇ, ಅಲಂ = ಸಾಕು (ಹೀಗೆ ಚಿಂತಿಸಿದರು).

ಅತಿವೃದ್ಧಸ್ಯ ಪಾರ್ಥಸ್ಯ ದರ್ಪಃ ಸ್ಯಾದಿತ್ಯಚಿಂತಯತ್ ।
ಪಾರ್ಥಃ ಸಂಜ್ಞಾಮವಾಪ್ಯಾಥ ಜಯಾರ್ಥ್ಯಾರಾಧಯಚ್ಛಿವಮ್ ॥ ೧೪೬ ॥

ಪದಚ್ಛೇದ :– ಅತಿವೃದ್ಧಸ್ಯ ಪಾರ್ಥಸ್ಯ ದರ್ಪಃ ಸ್ಯಾತ್ ಇತಿ ಚಿಂತಯನ್ । ಪಾರ್ಥಃ ಸಂಜ್ಞಾನಂ ಅವಾಪ್ಯ ಅಥ ಜಯಾರ್ಥೀ ಆರಾವಯತ್ ಶಿವಮ್ ॥

**ಅರ್ಥ** :- **ಅತಿ ವೃದ್ಧಸ್ಯ** = ಬಹಳ ಬಲಿಷ್ಠನಾದ, **ಪಾರ್ಥಸ್ಯ** = ಅರ್ಜುನನಿಗೆ **ದರ್ಪಃ** = ಅಹಂಕಾರವು, **ಸ್ಯಾತ್** = ಬಂದೀತು, **ಇತಿ** = ಹೀಗೆಂದು **ಚಿಂತಯನ್** = ಚಿಂತಿಸುವವರಾಗಿ (ಚಿಂತಿಸಿದರು), **ಅಥ** = ಅನಂತರ, **ಪಾರ್ಥಃ** = ಅರ್ಜುನನು, **ಸಂಜ್ಞಾನಂ** = ಪ್ರಜ್ಞೆಯನ್ನು, **ಅವಾಪ್ಯ** = ಹೊಂದಿ, **ಜಯಾರ್ಥೀ** = ಜಯವನ್ನು ಅಪೇಕ್ಷಿಸುವವನಾಗಿ, **ಶಿವಂ** = ರುದ್ರದೇವರನ್ನು **ಆರಾಧಯತ್** = ಆರಾಧಿಸಿದನು.

**ವ್ಯಾಸೋದಿತೇನ ಮಂತ್ರೇಣ ತಾನಿ ಪುಷ್ಪಾಣಿ ತಚ್ಛಿರಃ ।**
**ಆರುಹನ್ ಸ ತು ತಂ ಜ್ಞಾತ್ವಾ ರುದ್ರ ಇತ್ಯೇವ ಫಲ್ಗುನಃ ॥ ೧೪೭ ॥**

**ಪದಚ್ಛೇದ** :- ವ್ಯಾಸೋದಿತೇನ ಮಂತ್ರೇಣ ತಾನಿ ಪುಷ್ಪಾಣಿ ತತ್ ಶಿರಃ । ಆರುಹನ್ ಸ ತು ತಂ ಜ್ಞಾತ್ವಾ ರುದ್ರ ಇತಿ ಏವ ಫಲ್ಗುನಃ ॥

**ಅರ್ಥ** :- **ಫಲ್ಗುನಃ** = ಅರ್ಜುನನು **ವ್ಯಾಸೋದಿತಾನಿ** = ವೇದವ್ಯಾಸರು ಹೇಳಿಕೊಟ್ಟ **ಮಂತ್ರೇಣ** = ಮಂತ್ರದಿಂದ, **ಪುಷ್ಪಾಣಿ** = ಹೂವುಗಳನ್ನು, **ಆರುಹನ್** = ಅಂಶದ ಮೇಲಿರಿಸಿದ **ತಾನಿ** = ಆ ಹೂವುಗಳಾದರೂ, **ತತ್ ಶಿರಃ** = ಕಿರಾತಕನ ತಲೆ ಏರಿದವು, **ಸತು** = ಆ ಅರ್ಜುನನಾದರೂ, **ತಂ** = ಆ ಕಿರಾತಕನನ್ನು ರುದ್ರ **ಏವ** = ರುದ್ರನೆಂದೇ, **ಜ್ಞಾತ್ವಾ** = ತಿಳಿದು.

**ನಮಶ್ಚಕ್ರೇ ತತಃ ಪ್ರಾದಾದಸ್ತ್ರಂ ಪಾಶುಪತಂ ಶಿವಃ ।**
**ಅಸ್ತ್ರಂ ತದ್ ವಿಷ್ಣುದೈವತ್ಯಂ ಸಾಧಿತಂ ಶಂಕರೇಣ ಯತ್ ॥ ೧೪೮ ॥**

**ಪದಚ್ಛೇದ** :- ನಮಃ ಚಕ್ರೇ ತತಃ ಪ್ರಾದಾತ್ ಅಸ್ತ್ರಂ ಪಾಶುಪತಂ ಶಿವಃ । ಅಸ್ತ್ರಂ ತತ್ ವಿಷ್ಣುದೈವತ್ಯಂ ಸಾಧಿತಂ ಶಂಕರೇಣ ಯತ್ ॥

**ಅರ್ಥ** :- **ನಮಃ** = ನಮಸ್ಕಾರವನ್ನು, **ಚಕ್ರೇ** = ಮಾಡಿದನು, **ತತಃ** = ಅನಂತರ **ಶಿವಃ** = ಶಿವನು, **ಪಾಶುಪತಂ** = ಪಾಶುಪತ ಎಂದು ಹೆಸರಿನ **ಅಸ್ತ್ರಂ** = ವೈಷ್ಣವಾಸ್ತ್ರವನ್ನು, **ಪ್ರಾದಾತ್** = ನೀಡಿದನು. **ವಿಷ್ಣುದೈವತ್ಯಂ** = ವಿಷ್ಣುದೇವತಾಕವಾದ, **ತತ್** = ಆ ಅಸ್ತ್ರವು, **ಶಂಕರೇಣ** = ರುದ್ರದೇವರಿಂದ, **ಸಾಧಿತಂ ಯತ್** = ಈ ಹಿಂದೆ ಸಾಧಿತವಾಗಿತ್ತಷ್ಟೇ.

**ತಸ್ಮಾತ್ ಪಾಶುಪತಂ ನಾಮ ಸ್ವಾನ್ಯಸ್ತ್ರಾಣ್ಯಪರೇ ಸುರಾಃ ।**
**ದದುಸ್ತದೈವ ಪಾರ್ಥಾಯ ಸರ್ವೇ ಪ್ರತ್ಯಕ್ಷಗೋಚರಾಃ ॥ ೧೪೯ ॥**

ಪದಚ್ಛೇದ :– ತಸ್ಮಾತ್ ಪಾಶುಪತಂ ನಾಮ ಸ್ವಾನಿ ಅಸ್ತ್ರಾಣಿ ಅಪರೇ ಸುರಾಃ । ದದುಃ ತದೈವ ಪಾರ್ಥಾಯ ಸರ್ವೇ ಪ್ರತ್ಯಕ್ಷಗೋಚರಾಃ ॥

ಅರ್ಥ :- ತಸ್ಮಾತ್ = ಆ ಕಾರಣದಿಂದ ಪಾಶುಪತಂ ನಾಮ = (ಆ ಬ್ರಹ್ಮರ್ಷಿ ಎಂಬ ನಾರಾಯಣಾಸ್ತ್ರಕ್ಕೆ) ಪಾಶುಪತ ಎಂದು ಹೆಸರು. ತದೈವ = ಆಗಲೇ ಅಪರೇ ಬೇರೆ ಸರ್ವೇ ಸುರಾಃ = ಎಲ್ಲ ದೇವತೆಗಳು ಪ್ರತ್ಯಕ್ಷಗೋಚರಾಃ = ಪ್ರತ್ಯಕ್ಷರಾದವರಾಗಿ, ಸ್ವಾನಿ = ತಮ್ಮಿಂದ ಅಭಿಮನ್ಯವಾದ ಅಸ್ತ್ರಾಣಿ = ಅಸ್ತ್ರಗಳನ್ನು, ದದುಃ = ನೀಡಿದರು.

ಇಂದ್ರೋಽರ್ಜುನಂ ಸಮಾಗಮ್ಯ ಪ್ರಾಹ ಪ್ರೀತೋಽಸ್ಮಿ ತೇಽನಘ ।
ರುದ್ರದೇಹಸ್ಥಿತಂ ಬ್ರಹ್ಮ ವಿಷ್ಣ್ವಾಖ್ಯಂ ತೋಷಿತಂ ತ್ವಯಾ ॥ ೧೫೦ ॥

ಇಂದ್ರಃ ಅರ್ಜುನಂ ಸಮಾಗಮ್ಯ ಪ್ರಾಹ ಪ್ರೀತಃ ಅಸ್ಮಿ ತೇ ಅನಘ । ರುದ್ರದೇಹಸ್ಥಿತಂ ಬ್ರಹ್ಮ ವಿಷ್ಣ್ವಾಖ್ಯಂ ತೋಷಿತಂ ತ್ವಯಾ ॥

ಅರ್ಥ :- ಇಂದ್ರಃ = ದೇವೇಂದ್ರನು, ಅರ್ಜುನಂ = ಅರ್ಜುನನನ್ನು ಸಮಾಗಮ್ಯ = ಬಂದು ಪ್ರಾಹ = ಹೇಳಿದನು, ಅನಘ = ದೋಷರಹಿತನೇ, ತೇ = ನಿನ್ನ ವಿಷಯದಲ್ಲಿ ಪ್ರೀತಃ = ಸಂತುಷ್ಟನು, ಅಸ್ಮಿ = ಆಗಿದ್ದೇನೆ, ತ್ವಯಾ = ನಿನ್ನಿಂದ ರುದ್ರದೇಹಸ್ಥಿತಂ = ರುದ್ರನ ದೇಹದಲ್ಲಿರುವ ವಿಷ್ಣ್ವಾಖ್ಯಂ = ನಾರಾಯಣನೆಂದು ಪ್ರಸಿದ್ಧನಾದ ಬ್ರಹ್ಮ = ಗುಣಪೂರ್ಣವಾದ ಶ್ರೀಹರಿಯನ್ನು, ತೋಷಿತಂ = ಸಂತೋಷಗೊಳಿಸಲ್ಪಟ್ಟಿತು.

ತೇನ ಲೋಕಂ ಮಮಾಽಗಚ್ಛ ಪ್ರೇಷಯಾಮಿ ರಥಂ ತವ ।
ಇತ್ಯುಕ್ತ್ವಾ ಪ್ರಯಯಾವಿಂದ್ರಸ್ತದ್ರಥೇನ ಚ ಮಾತಲಿಃ ॥ ೧೫೧ ॥

ಪದಚ್ಛೇದ :– ತೇನ ಲೋಕಂ ಮಮ ಆಗಚ್ಛ ಪ್ರೇಷಯಾಮಿ ರಥಂ ತವ । ಇತ್ಯುಕ್ತ್ವಾ ಪ್ರಯಯೌ ಇಂದ್ರಃ ತತ್ ರಥೇವ ಚ ಮಾತಲಿಃ ॥

ಅರ್ಥ :- ತೇನ = ಆದ ಕಾರಣ, ಮಮ = ನನ್ನ ಲೋಕಂ = ಲೋಕವಾದ ಸ್ವರ್ಗಕ್ಕೆ ಆಗಚ್ಛ = ಬಾ, ತವ = ನಿನಗೆ, ರಥಂ = ರಥವನ್ನು, ಪ್ರೇಷಯಾಮಿ = ಕಳುಹಿಸಿ ಕೊಡುವೆನು ಇತಿ = ಹೀಗೆಂದು, ಉಕ್ತ್ವಾ = ಹೇಳಿ ಇಂದ್ರಃ = ದೇವೇಂದ್ರನು, ಪ್ರಯಯೌ = ಹೊರಟನು, ತತ್‌ರಥೇನ

ಚ = ಮತ್ತದೇ ರಥದಿಂದಲೇ, ಮಾತಲಿ = ಇಂದ್ರನ ಸಾರಥಿಯಾದ ಮಾತಲಿಃ = ಮಾತಲಿಯು (ಬಂದನು).

ಇತಿ ವಾಕ್ಯಮೃತಂ ಕರ್ತುಮಭಿಪ್ರಾಯಂ ವಿಜಜ್ಞುಷೀ ।
ಪ್ರೀತ್ಯರ್ಥಂ ವಾಸುದೇವಸ್ಯ ರುಕ್ಮಿಣೀ ವಾಕ್ಯಮಬ್ರವೀತ್ ।
ಜಾತೇಪಿ ಪುತ್ರೇ ಪುತ್ರಾರ್ಥಂ ಸಾ ಹಿ ವೇದ ಮನೋಗತಮ್ ॥ ೧೫೧ ॥

ಪದಚ್ಛೇದ :- ಇತಿ, ವಾಕ್ಯಮ್, ಋತಂ, ಕರ್ತುಮ್, ಅಭಿಪ್ರಾಯಂ, ವಿಜಜ್ಞುಷೀ, ಪ್ರೀತ್ಯರ್ಥಂ, ವಾಸುದೇವಸ್ಯ, ರುಕ್ಮಿಣೀ, ವಾಕ್ಯಮ್, ಅಬ್ರವೀತ್. ಜಾತೇ, ಅಪಿ, ಪುತ್ರೇ, ಪುತ್ರಾರ್ಥಂ, ಸಾ, ಹಿ, ವೇದ, ಮನೋಗತಮ್.

ಅರ್ಥ :- ಇತಿ = ಈ ರೀತಿಯಾದ; ವಾಕ್ಯಮ್ = ವಾಕ್ಯವನ್ನು; ಋತಂ = ಸತ್ಯವನ್ನಾಗಿ; ಕರ್ತುಂ = ಮಾಡಲು; ವಾಸುದೇವಸ್ಯ = ಶ್ರೀಕೃಷ್ಣನ್ನ; ಅಭಿಪ್ರಾಯಂ = ಅಭಿಪ್ರಾಯವನ್ನು; ವಿಜಜ್ಞುಷೀ = ತಿಳಿದ; ರುಕ್ಮಿಣೀ = ರುಕ್ಮಿಣಿಯು; ವಾಸುದೇವಸ್ಯ = ಶ್ರೀಕೃಷ್ಣನ; ಪ್ರೀತ್ಯರ್ಥಂ = ಪ್ರೀತಿಗಾಗಿ; ವಾಕ್ಯಮ್ = ಮಾತನ್ನು; ಅಬ್ರವೀತ್ = ಆಡಿದಳು. ಪುತ್ರೇ = ಮಗನು; ಜಾತೇ ಅಪಿ = ಹುಟ್ಟಿದ್ದರೂ ಕೂಡ; ಪುತ್ರಾರ್ಥಂ = ಮಗನಿಗಾಗಿ; ಮನೋಗತಂ = ಶ್ರೀಕೃಷ್ಣನ ಮನಸ್ಸಿನಲ್ಲಿರುವುದನ್ನು; ಸಾ = ಆ ರುಕ್ಮಿಣಿಯು; ವೇದ ಹಿ = ತಿಳಿದಿದ್ದಾಳಷ್ಟೆ.

ತಾತ್ಪರ್ಯ :- ಶ್ರೀಕೃಷ್ಣನು ಹಿಂದೆ ಶಿವನಿಗೆ ಹೇಳಿದ್ದ ಪುತ್ರನಿಗಾಗಿ ನಿನ್ನ ತಪಸ್ಸನ್ನು ನಾನು ಮಾಡಿದಂತೆ ತೋರಿಸಿಕೊಳ್ಳುತ್ತೇನೆ ಎಂದು. ಆ ಮಾತನ್ನು ಸತ್ಯವನ್ನಾಗಿಸಲು ರುಕ್ಮಿಣಿಯು ಶ್ರೀಕೃಷ್ಣನಿಗೆ ಹೇಳುತ್ತಾಳೆ. ಅವಳಿಗೆ ಈಗಾಗಲೇ ಪ್ರದ್ಯುಮ್ನನು ಹುಟ್ಟಿದ್ದರೂ ಇನ್ನೊಮ್ಮೆ ಅವನು ಹುಟ್ಟಬೇಕೆಂದು ಶ್ರೀಕೃಷ್ಣನ ಸಂಕಲ್ಪವಿದೆ ಎಂದು. ಆದ್ದರಿಂದ ಹೇಳುತ್ತಾಳೆ.

ಪುತ್ರೋ ಮೇ ಬಲವಾನ್ ದೇವ ಸ್ಯಾತ್ ಸರ್ವಾಸ್ತ್ರವಿದುತ್ತಮಃ ।
ಇತ್ಯುಕ್ತೋ ಭಗವಾನ್ ದೇವ್ಯಾ ಸಮ್ಮೋಹಾಯ ಸುರದ್ವಿಷಾಮ್ ।
ಯಯೌ ಸುಪರ್ಣಮಾರುಹ್ಯ ಸ್ವೀಯಂ ಬದರಿಕಾಶ್ರಮಮ್ ॥ ೧೫೨ ॥

ಪದಚ್ಛೇದ :- ಪುತ್ರಃ, ಮೇ, ಬಲವಾನ್, ದೇವ, ಸ್ಯಾತ್, ಸರ್ವಾಸ್ತ್ರವಿತ್, ಉತ್ತಮಃ, ಇತಿ, ಉಕ್ತಃ, ಭಗವಾನ್, ದೇವ್ಯಾ, ಸಮ್ಮೋಹಾಯ, ಸುರದ್ವಿಷಾಮ್, ಯಯೌ, ಸುಪರ್ಣಮ್, ಆರುಹ್ಯ, ಸ್ವೀಯಂ, ಬದರಿಕಾಶ್ರಮಮ್.

**ಅರ್ಥ** :- **ಮೇ** = ನನಗೆ; **ಬಲವಾನ್** = ಬಲಶಾಲಿಯಾದ; **ಸರ್ವಾಸ್ತ್ರವಿತ್** = ಎಲ್ಲ ಅಸ್ತ್ರಗಳನ್ನು ತಿಳಿದವನಾದ, **ಉತ್ತಮಃ** = (ಗುಣಗಳಿಂದ) ಉತ್ತಮನಾದ; **ಪುತ್ರಃ** = ಮಗನು; **ಸ್ಯಾತ್** = ಹುಟ್ಟಲಿ; **ಇತಿ** = ಹೀಗೆ; **ದೇವ್ಯಾ** = ರುಕ್ಮಿಣೀದೇವಿಯಿಂದ; **ಉಕ್ತಃ** = ಹೇಳಲ್ಪಟ್ಟ; **ಭಗವಾನ್** = ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಕೃಷ್ಣನು; **ಸುರದ್ವಿಷಾವ್** = ದೇವತೆಗಳನ್ನು ದ್ವೇಷಿಸುವ ದೈತ್ಯರ; **ಸವ್ಮೋಹಾಯ** = ದೃಢವಾದ ಮೋಹಕ್ಕಾಗಿ; **ಸುಪರ್ಣಂ** = ಗರುಡನನ್ನು; **ಆರುಹ್ಯ** = ಏರಿ; **ಸ್ವೀಯಂ** = ತನ್ನದೇ ಆದ; **ಬದಿರಿಕಾಶ್ರಮಂ (ಪ್ರತಿ)** = ಬದರಿಕಾಶ್ರಾವನ್ನು ಕುರಿತು; **ಯಯೌ** = ಹೊರಟನು.

**ತಾತ್ಪರ್ಯ** :- ಎಲ್ಲ ಅಸ್ತ್ರಗಳನ್ನು ತಿಳಿದ ಬಲವಂತನಾದ ಮಗನೊಬ್ಬನು ನನಗೆ ಹುಟ್ಟಬೇಕು ಎಂದು ರುಕ್ಮಿಣಿಯು ಕೇಳುತ್ತಾಳೆ. ಆಗ ಶ್ರೀಕೃಷ್ಣನು ಅಸುರಜನ ಮೋಹನಕ್ಕಾಗಿ ಗರುಡನನ್ನೇರಿ ಬದರಿಕಾಶ್ರಮಕ್ಕೆ ಹೊರಡುತ್ತಾನೆ.

**ವಿಶೇಷವಿಚಾರ** :- ವೇದವ್ಯಾಸರ ಬದರಿಕಾಶ್ರಮವನ್ನು (ಸ್ವೀಯಂ) ತನ್ನದೆಂದು ಕೃಷ್ಣನಿಗೆ ಹೇಳುವುದರಿಂದ ವೇದವ್ಯಾಸರೇ ಶ್ರೀಕೃಷ್ಣನೆಂದು ಸೂಚಿಸುತ್ತಿದ್ದಾರೆ ಜನಾರ್ದನೀಯ.

**ಏಷ ಮೋಹಂ ಸೃಜಾಮ್ಯಾಶು ಯೋ ಜನಾನ್ ಮೋಹಯಿಷ್ಯತಿ ।**
**ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ ॥ ೧೫೩ ॥**

ಪದಚ್ಛೇದ :- ಏಷಃ, ಮೋಹಂ, ಸೃಜಾಮಿ, ಆಶು, ಯಃ, ಜನಾನ್, ಮೋಹಯಿಷ್ಯತಿ, ತ್ವಂ, ಚ, ರುದ್ರ, ಮಹಾಬಾಹೋ, ಮೋಹಶಾಸ್ತ್ರಾಣಿ, ಕಾರಯ.

**ಅರ್ಥ** :- **ಏಷಃ ಅಹಂ** = ಅಂತಹ ನಾನು; **ಯಃ** = ಯಾವುದು; **ಜನಾನ್** = (ಅಸುರ)ಜನರನ್ನು; **ಮೋಹಯಿಷ್ಯತಿ** = ಭ್ರಮೆಗೊಳಿಸುತ್ತದೋ; **(ತಂ)** = ಅಂತಹ; **ಮೋಹಂ** = ಮೋಹಕಶಾಸ್ತ್ರವನ್ನು; **ಸೃಜಾಮಿ** =

ಸೃಷ್ಟಿಮಾಡುತ್ತೇನೆ. **ಮಹಾಬಾಹೋ** = ಮಹಾಬಾಹುವಾದ; (ಹೇ) ರುದ್ರ = ಎಲೈ! ರುದ್ರನೇ; **ತ್ವಂ ಚ** = ನೀನಾದರೂ; **ಮೋಹಶಾಸ್ತ್ರಾಣಿ** = ಮೋಹಕಶಾಸ್ತ್ರಗಳನ್ನು; **ಕಾರಯ** = (ಇತರರಿಂದ) ಮಾಡಿಸು.

**ತಾತ್ಪರ್ಯ** :- ವರಾಹಪುರಾಣವಾಕ್ಯದ ಪ್ರಮಾಣವನ್ನು ಆಚಾರ್ಯರು ಕೊಡುತ್ತಿದ್ದಾರೆ. ವಿಷ್ಣುವು ಶಿವನಿಗೆ ಹೇಳುತ್ತಿದ್ದಾನೆ - ಮಹಾಬಹುವಾದ ಶಿವನೇ ನಾನು ದುಷ್ಟರಿಗೆ ಭ್ರಮೆಯನ್ನುಂಟುಮಾಡುವ ಶಾಸ್ತ್ರವನ್ನು ರಚಿಸುತ್ತೇನೆ. ನೀನೂ ಕೂಡ ಅಂತಹ ಮೋಹಕಶಾಸ್ತ್ರಗಳನ್ನು ದಧೀಚಿ ಮೊದಲಾದವರಿಂದ ರಚನೆ ಮಾಡಿಸು.

**ಅತಥ್ಯಾನಿ ವಿತಥ್ಯಾನಿ ದರ್ಶಯಸ್ವ ಮಹಾಭುಜ ।**
**ಪ್ರಕಾಶಂ ಕುರು ಚಾತ್ಮಾನಮಪ್ರಕಾಶಂ ಚ ಮಾಂ ಕುರು ॥ ೧೫೪ ॥**

ಪದಚ್ಛೇದ :- **ಅತಥ್ಯಾನಿ, ವಿತಥ್ಯಾನಿ, ದರ್ಶಯಸ್ವ, ಮಹಾಭುಜ, ಪ್ರಕಾಶಂ, ಕುರು, ಚ, ಆತ್ಮಾನಮ್, ಅಪ್ರಕಾಶಂ, ಚ, ಮಾಂ, ಕುರು.**

**ಅರ್ಥ** :- **ಮಹಾಭುಜ** = ಮಹಾಭುಜನಾದ ರುದ್ರನೇ!; **ಅತಥ್ಯಾನಿ** = ನಿಷ್ಫಲವಾದವುಗಳನ್ನು; **ವಿತಥ್ಯಾನಿ** = ವಿರುದ್ಧವಾದ ಸತ್ಯಗಳನ್ನು; **ದರ್ಶಯಸ್ವ** = ತೋರಿಸು; **ಚ** = ಮತ್ತು; **ಆತ್ಮಾನಂ** = ತನ್ನನ್ನು; **ಪ್ರಕಾಶಂ** = ಪ್ರಸಿದ್ಧನನ್ನಾಗಿ; **ಕುರು** = ಮಾಡು; **ಮಾಂ ಚ** = ನನ್ನನ್ನಾದರೂ; **ಅಪ್ರಕಾಶಂ** = ಅಪ್ರಸಿದ್ಧನನ್ನಾಗಿ; **ಕುರು** = ಮಾಡು.

**ತಾತ್ಪರ್ಯ** :- ಮಹಾಭುಜನೇ! ಫಲವೇ ಇಲ್ಲದ ರುದ್ರಾಕ್ಷ-ಭಸ್ಮಧಾರಣೆಗಳನ್ನು, ನನ್ನಲ್ಲಿ ಇರುವ ನಿನ್ನಲ್ಲಿಲ್ಲದ ಸ್ವಾತಂತ್ರ್ಯಾದಿಗಳನ್ನು ಜಗತ್ತಿಗೆ ತಿಳಿಸು. ನೀನೇ ಪ್ರಸಿದ್ಧನಾಗುವಂತೆ ಮಾಡು. ನಾನು ಅಪ್ರಸಿದ್ಧನಾಗುವಂತೆ ಮಾಡು.

**ಅಹಂ ತ್ವಾಂ ಪೂಜಯಿಷ್ಯಾಮಿ ಲೋಕಸಮ್ಮೋಹನೋತ್ಸುಕಃ ।**
**ತಮೋಸುರಾ ನಾನ್ಯಥಾ ಹಿ ಯಾಂತೀತ್ಯೇತನ್ಮತಂ ಮಮ ॥ ೧೫೫ ॥**

ಪದಚ್ಛೇದ :- **ಅಹಂ, ತ್ವಾಂ, ಪೂಜಯಿಷ್ಯಾಮಿ, ಲೋಕಸಮ್ಮೋಹನೋತ್ಸುಕಃ, ತಮಃ, ಅಸುರಾಃ, ನ, ಅನ್ಯಥಾ, ಹಿ, ಯಾಂತಿ, ಇತಿ, ಏತತ್, ಮತಂ, ಮಮ.**

**ಅರ್ಥ :- ಲೋಕಸಮ್ಮೋಹನೋತ್ಸುಕಃ** = (ಅಸುರ)ಜನರಿಗೆ ಮೋಹವುಂಟುಮಾಡುವುದರಲ್ಲಿ ಉತ್ಕಂಠಿತನಾದ; **ಅಹಂ** = ನಾನು; **ತ್ವಾಂ** = ನಿನ್ನನ್ನು; **ಪೂಜಯಿಷ್ಯಾಮಿ** = ಪೂಜಿಸುತ್ತೇನೆ. **ಅನ್ಯಥಾ** = ಹಾಗೆಮಾಡದಿದ್ದಲ್ಲಿ; **ಅಸುರಾಃ** = ಅಸುರರು; **ತಮಃ** = ತಮಸ್ಸನ್ನು; **ನ ಯಾಮ್ತಿ** = ಹೊಂದುವುದಿಲ್ಲ; **ಏತತ್** = ಇದು; **ಮಮ** = ನನಗೆ; **ಮತಂ ಹಿ** = ಅಭಿಮತವಾದದ್ದಷ್ಟೆ.

**ತಾತ್ಪರ್ಯ :-** ಅಸುರಜನರನ್ನು ಭ್ರಾಂತಿಗೊಳಿಸುವ ಸಲುವಾಗಿ ನಾನು ನಿನ್ನನು ಪೂಜಿಸುವಂತೆ ಮಾಡುತ್ತೇನೆ. ಇಲ್ಲದಿದ್ದರೆ ಅಸುರರಿಗೆ ತಮಸ್ಸು ಆಗಲಾರದು.

**ಇತ್ಯುಕ್ತವಚನಂ ಪೂರ್ವಂ ಕೇಶವೇನ ಶಿವಾಯ ಯತ್ ।**
**ತತ್ ಸತ್ಯಂ ಕರ್ತುಮಾಯಾಂತಂ ಕೃಷ್ಣಂ ಬದರಿಕಾಶ್ರಮಮ್ ।**
**ಸರ್ವಜ್ಞಾ ಮುನಯಃ ಸರ್ವೇ ಪೂಜಯಾಂಚಕ್ರಿರೇ ಪ್ರಭುಮ್ ॥ ೧೫೬ ॥**

**ಪದಚ್ಛೇದ :– ಇತು, ಉಕ್ತವಚನಂ, ಪೂರ್ವಂ, ಕೇಶವೇನ, ಶಿವಾಯ, ಯತ್, ತತ್, ಸತ್ಯಂ, ಕರ್ತುಮ್, ಆಯಾಂತಂ, ಕೃಷ್ಣಂ, ಬದರಿಕಾಶ್ರಮಂ, ಸರ್ವಜ್ಞಾಃ, ಮುನಯಃ, ಸರ್ವೇ, ಪೂಜಯಾಂಚಕ್ರಿರೇ, ಪ್ರಭುಮ್.**

**ಅರ್ಥ :- ಇತಿ** = ಹೀಗೆ; **ಪೂರ್ವಂ** = ಹಿಂದೆ; **ಶಿವಾಯ** = ಶಿವನಿಗೆ; **ಕೇಶವೇನ** = ಭಗವಂತನಿಂದ; **ಯತ್** = ಯಾವುದು; **ಉಕ್ತವಚನಂ** = ಹೇಳಲ್ಪಟ್ಟ ಮಾತಿತ್ತೋ; **ತತ್** = ಅದನ್ನು; **ಸತ್ಯಂ** = ಸತ್ಯವನ್ನಾಗಿ; **ಕರ್ತುಂ** = ಮಾಡಲು; **ಬದರಿಕಾಶ್ರಮಂ (ಪ್ರತಿ)** = ಬದರಿಕಾಶ್ರಮವನ್ನು ಕುರಿತು; **ಆಯಾಂತಂ** = ಬರುತ್ತಿರುವ; **ಪ್ರಭುಂ** = ಸರ್ವಸಮರ್ಥನಾದ; **ಕೃಷ್ಣಂ** = ಶ್ರೀಕೃಷ್ಣನನ್ನು; **ಸರ್ವಜ್ಞಾಃ** = ಎಲ್ಲವನ್ನು ತಿಳಿದ; **ಸರ್ವೇ** = ಎಲ್ಲಾ; **ಮುನಯಃ** = ಋಷಿಗಳು; **ಪೂಜಯಾಂಚಕ್ರಿರೇ** = ಪೂಜಿಸಿದರು.

**ತಾತ್ಪರ್ಯ :-** ಹೀಗೆ ಭಗವಂತನು ತಾನೆ ಶಿವನಿಗೆ ಹಿಂದೆ ಹೇಳಿದ ಮಾತನ್ನು ಸತ್ಯವನ್ನಾಗಿಸಲು ಬದರಿಕಾಶ್ರಮಕ್ಕೆ ಶ್ರೀಕೃಷ್ಣನು ಬರುತ್ತಿದ್ದಾನೆ. ಇದನ್ನು ತಿಳಿದ ಸರ್ವಜ್ಞರಾದ ಮುನಿಗಳಿ ಕೃಷ್ಣನನ್ನು ಪೂಜಿಸಿದರು.

**ರಾತ್ರೌ ಕೃಷ್ಣೇ ಮುನಿಮಧ್ಯೇ ಪ್ರವಿಷ್ಟೇ**
**ಘಂಟಾಕರ್ಣಃ ಕರ್ಣನಾಮಾ ಪಿಶಾಚೌ ।**
**ಸಮಾಯಾತಾಂ ಗಿರಿಶೇನ ಪ್ರದಿಷ್ಟೌ**
**ಕೃಷ್ಣಂ ದ್ರಷ್ಟುಂ ದ್ವಾರಕಾಂ ಗಂತುಕಾಮೌ ॥ ೧೫೭ ॥**

ಪದಚ್ಛೇದ :- ರಾತ್ರೌ, ಕೃಷ್ಣೇ, ಮುನಿಮಧ್ಯೇ, ಪ್ರವಿಷ್ಟೇ, ಘಂಟಾಕರ್ಣಃ, ಕರ್ಣನಾಮಾ, ಪಿಶಾಚೌ, ಸಮಾಯಾತಾಂ, ಗಿರಿಶೇನ, ಪ್ರದಿಷ್ಟೌ, ಕೃಷ್ಣಂ, ದ್ರಷ್ಟುಂ, ದ್ವಾರಕಾಂ, ಗಂತುಕಾಮೌ.

**ಅರ್ಥ** :- **ರಾತ್ರೌ** = ರಾತ್ರಿಯಲ್ಲಿ; **ಮುನಿಮಧ್ಯೇ** = ಮುನಿಗಳ ಮಧ್ಯದಲ್ಲಿ; **ಕೃಷ್ಣೇ** = ಶ್ರೀಕೃಷ್ಣನು; **ಪ್ರವಿಷ್ಟೇ (ಸತಿ)** = ಕುಳಿತಿರಲು; **ಘಂಟಾಕರ್ಣಃ** = ಘಂಟಾಕರ್ಣ ಎಂಬ; **ಕರ್ಣನಾಮಾ** = ಕರ್ಣನೆಂಬ ಹೆಸರುಳ್ಳ; **ಗಿರಿಶೇನ** = ಶಿವನಿಂದ; **ಪ್ರದಿಷ್ಟೌ** = ಕಳುಹಿಸಲ್ಪಟ್ಟ; **ಪಿಶಾಚೌ** = ಪಿಶಾಚಿಗಳು; **ಕೃಷ್ಣಂ** = ಶ್ರೀಕೃಷ್ಣನನ್ನು; **ದ್ರಷ್ಟುಂ** = ನೋಡಲು; **ದ್ವಾರಕಾಂ (ಪ್ರತಿ)** = ದ್ವಾರಕೆಯನ್ನು ಕುರಿತು; **ಗಂತುಕಾಮೌ (ಸಂತೌ)** = ಹೋಗಲು ಇಚ್ಛೆಯುಳ್ಳದ್ದಾಗಿ; **(ಬದರಿಕಾಶ್ರಮಂ)** = ಬದರಿಕಾಶ್ರಮವನ್ನು ಕುರಿತು; **ಸಮಾಯಾತಾಮ್** = ಬಂದವು.

**ತಾತ್ಪರ್ಯ** :- ರಾತ್ರಿಯಸಮಯದಲ್ಲಿ ಋಷಿಗಳ ಮಧ್ಯದಲ್ಲಿ ಶ್ರೀಕೃಷ್ಣನು ಕುಳಿತಿರಲು ಘಂಟಾಕರ್ಣ ಮತ್ತು ಕರ್ಣ ಎಂಬ ಪಿಶಾಚಿಗಳು ಅಲ್ಲಿಗೆ ಬಂದವು. ಶಿವನು ಅವರಿಬ್ಬರನ್ನು ಶ್ರೀಕೃಷ್ಣನನ್ನು ದರ್ಶಿಸಲು ಶಿವನು ದ್ವಾರಕೆಗೆ ತೆರಳಲು ಹೇಳಿದ್ದನು. ದ್ವಾರಕೆಗೆ ಹೊರಟಿದ್ದ ಅವರು ದಾರಿಯಲ್ಲಿ ಬದರಿಕಾಶ್ರಮಕ್ಕೆ ಬಂದರು.

**ತೌ ದೃಷ್ಟ್ವಾ ಮುನಿಮಧ್ಯಸ್ಥಂ ಕೇಶವಂ ತದಬೋಧತಃ ।**
**ಕೃತ್ವಾ ಸ್ವಜಾತಿಚೇಷ್ಟಾಶ್ಚ ಧ್ಯಾನೇನೈನಮಪಶ್ಯತಾಮ್ ॥ ೧೫೮ ॥**

ಪದಚ್ಛೇದ :- ತೌ, ದೃಷ್ಟ್ವಾ, ಮುನಿಮಧ್ಯಸ್ಥಂ, ಕೇಶವಂ, ತದಬೋಧತಃ, ಕೃತ್ವಾ, ಸ್ವಜಾತಿಚೇಷ್ಟಾಃ, ಚ, ಧ್ಯಾನೇನ, ಏನಮ್, ಅಪಶ್ಯತಾಮ್.

**ಅರ್ಥ** :- **ತೌ** = ಆ ಪಿಶಾಚಿಗಳು; **ಮುನಿಮಧ್ಯಸ್ಥಂ** = ಮುನಿಗಳ ಮಧ್ಯದಲ್ಲಿರುವ; **ಕೇಶವಂ** = ಶ್ರೀಕೃಷ್ಣನನ್ನು; **ದೃಷ್ಟ್ವಾ** = ನೋಡಿ;

ತದಬೋಧತಃ = ಆ ಕೃಷ್ಣನನ್ನು ತಿಳಿಯದೇ; ಸ್ವಜಾತಿಚೇಷ್ಟಾಃ ಚ = ತನ್ನ ಪಿಶಾಚಜಾತಿಗೆ ಯೋಗ್ಯವಾದ ಚೇಷ್ಟೆಗಳನ್ನಾದರೂ; ಕೃತ್ವಾ = ಮಾಡಿ; ಧ್ಯಾನೇನ = (ಕೃಷ್ಣನ) ಧ್ಯಾನದಿಂದ; ಏನಮ್ = ಈ (ಹೃದಯದಲ್ಲಿರುವ) ಕೃಷ್ಣನನ್ನು; ಅಪಶ್ಯತಾಮ್ = ನೋಡಿದವು.

ತಾತ್ಪರ್ಯ :- ಆ ಪಿಶಾಚಿಗಳು ಮುನಿಗಳಮಧ್ಯದಲ್ಲಿರುವ ಶ್ರೀಕೃಷ್ಣನನ್ನು ನೋಡಿ ಅವನು ಯಾರೆಂದು ತಿಳಿಯದೇ ತಮ್ಮ ಜಾತಿಗನು ಗುಣವಾದ ಚೇಷ್ಟೆಗಳನ್ನು ಮಾಡಿದವು. ನಂತರ ಕೃಷ್ಣನ ಪ್ರೇರಣೆಯಂತೆ ಧ್ಯಾನ ಮಾಡಿ ಅವನನ್ನು ತಿಳಿದರು.

ದೃಷ್ಟ್ವಾ ಹೃದಿ ಸ್ಥಿತಂ ತಂ ತು ಕೌತೂಹಲಸಮನ್ವಿತೌ ।
ಸ್ತುತ್ವಾ ಭಕ್ತ್ಯಾ ಪ್ರಣಾಮಂ ಚ ಬಹುಶಶ್ಚಕ್ರತುಃ ಶುಭೌ ॥ ೧೫೯ ॥

ಪದಚ್ಛೇದ :- ದೃಷ್ಟ್ವಾ, ಹೃದಿ, ಸ್ಥಿತಂ, ತಂ, ತು, ಕುತೂಹಲಸಮನ್ವಿತೌ, ಸ್ತುತ್ವಾ, ಭಕ್ತ್ಯಾ, ಪ್ರಣಾಮಂ, ಚ, ಬಹುಶಃ, ಚಕ್ರತುಃ, ಶುಭೌ.

ಅರ್ಥ :- ಶುಭೌ = ಸಾತ್ವಿಕವಾದ ಆ ಪಿಶಾಚಿಗಳು; ಹೃದಿ = ಹೃದಯದಲ್ಲಿ; ಸ್ಥಿತಂ = ಇರುವ; ತಂ ತು = ಆ ಕೃಷ್ಣನನ್ನಾದರೂ; ದೃಷ್ಟ್ವಾ = ನೋಡಿ; ಕುತೂಹಲಸಮನ್ವಿತೌ (ಸಂತೌ) = ಕುತೂಹಲದಿಂದ ಕೂಡಿದವುಗಳಾಗಿ; ಭಕ್ತ್ಯಾ = ಭಕ್ತಿಯಿಂದ; ಸ್ತುತ್ವಾ = ಸ್ತೋತ್ರಮಾಡಿ; ಚ = ಮತ್ತು; ಪ್ರಣಾಮಂ = ನಮಸ್ಕಾರವನ್ನು; ಬಹುಶಃ = ಅನೇಕಬಾರಿ; ಚಕ್ರತುಃ = ಮಾಡಿದವು.

ತಾತ್ಪರ್ಯ :- ಧ್ಯಾನದಲ್ಲಿ ಹೃದಯದಲ್ಲಿ ಶ್ರೀಕೃಷ್ಣನನ್ನು ಕಂಡ ಅವರು ಕುತೂಹಲಗೊಂಡು ಭಕ್ತಿಯಿಂದ ಕೃಷ್ಣನ ಸ್ತೋತ್ರಮಾಡಿ ಅನೇಕಬಾರಿ ನಮಸ್ಕರಿಸಿದರು.

ತಯೋಃ ಪ್ರಸನ್ನೋ ಭಗವಾನ್ ಸ್ಪೃಷ್ಟ್ವಾ ಗಂಧರ್ವಸತ್ತಮೌ ।
ಚಕಾರ ಕ್ಷಣಮಾತ್ರೇಣ ದಿವ್ಯರೂಪಸ್ವರಾನ್ವಿತೌ ॥ ೧೬೦ ॥

ಪದಚ್ಛೇದ :- ತಯೋಃ, ಪ್ರಸನ್ನಃ, ಭಗವಾನ್, ಸ್ಪೃಷ್ಟ್ವಾ, ಗಂಧರ್ವಸತ್ತಮೌ, ಚಕಾರ, ಕ್ಷಣಮಾತ್ರೇಣ, ದಿವ್ಯರೂಪಸ್ವರಾನ್ವಿತೌ.

**ಅರ್ಥ** :- **ತಯೋಃ** = ಆ ಪಿಶಾಚಿಗಳ ವಿಷಯದಲ್ಲಿ; **ಪ್ರಸನ್ನಃ** = ಪ್ರಸನ್ನನಾದ; **ಭಗವಾನ್** = ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಕೃಷ್ಣನು; **(ತೌ)** = ಆ ಪಿಶಾಚಗಳನ್ನು; **ಸ್ಪೃಷ್ಟ್ವಾ** = ಸ್ಪರ್ಶಿಸಿ; **ಕ್ಷಣಮಾತ್ರೇಣ** = ಕೇವಲ ಕ್ಷಣದಲ್ಲಿಯೇ; **ದಿವ್ಯರೂಪಸ್ವರಾನ್ವಿತೌ** = ದೈವಿಕವಾದ ರೂಪ ಮತ್ತು ಸ್ವರವುಳ್ಳವುಗಳ್ಳ; **ಗಂಧರ್ವಸತ್ತಮೌ** = ಗಂಧರ್ವಶ್ರೇಷ್ಠರನ್ನಾಗಿ; **ಚಕಾರ** = ಮಾಡಿದನು.

**ತಾತ್ಪರ್ಯ** :- ಆ ಪಿಶಚಿಗಳಲ್ಲಿ ಪ್ರಸನ್ನನಾದ ಕೃಷ್ಣನು ಅವರನ್ನು ಸ್ಪರ್ಶಿಸುತ್ತಾನೆ. ಮತ್ತು ಕ್ಷಣಮಾತ್ರದಲ್ಲಿ ದೈವೀ ರೂಪಸ್ವರಯುಕ್ತರಾದ ಗಂಧರ್ವರನ್ನಾಗಿ ಮಾಡುತ್ತಾನೆ.

**ತಾಭ್ಯಾಂ ಪುನರ್ನೃತ್ತಗೀತಸಂಸ್ತವೈಃ ಪೂಜಿತಃ ಪ್ರಭುಃ ।**
**ಯಯೌ ಕೈಲಾಸಮದ್ರೀಶಂ ಚಕಾರೇವ ತಪೋಽತ್ರ ಚ ॥ ೧೬೧ ॥**

**ಪದಚ್ಛೇದ** :– ತಾಭ್ಯಾಂ, ಪುನಃ, ನೃತ್ತಗೀತಸಂಸ್ತವೈಃ, ಪೂಜಿತಃ, ಪ್ರಭುಃ, ಯಯೌ, ಕೈಲಾಸಮ್, ಅದ್ರೀಶಂ, ಚಕಾರ, ಇವ, ತಪಃ, ಅತ್ರ, ಚ.

**ಅರ್ಥ**:- **ತಾಭ್ಯಾಂ** = ಆ ಗಂಧರ್ವರಿಂದ; **ಪುನಃ** = ಮತ್ತೊಮ್ಮೆ; **ನೃತ್ತಗೀತಸಂಸ್ತವೈಃ** = ನೃತ್ಯ-ಗೀತೆ-ಸ್ತೋತ್ರಗಳಿಂದ; **ಪೂಜಿತಃ** = ಅರ್ಚಿಸಲ್ಪಟ್ಟ; **ಪ್ರಭುಃ** = ಸಮರ್ಥನಾದ ಶ್ರೀಕೃಷ್ಣನು; **ಅದ್ರೀಶಂ** = ಪರ್ವತಶ್ರೇಷ್ಠವಾದ; **ಕೈಲಾಸಂ (ಪ್ರತಿ)** = ಕೈಲಾಸವನ್ನು ಕುರಿತು; **ಯಯೌ** = ಹೊರಟನು. **ಚ** = ಮತ್ತು, **ಅತ್ರ** = ಈ ಕೈಲಾಸದಲ್ಲಿ; **ತಪಃ** = ತಪಸ್ಸನ್ನು; **ಚಕಾರ ಇವ** = ಮಾಡಿದವನಮ್ತೆ; **(ಅದರ್ಶಯತ್)** = ತೋರಿಸಿಕೊಂಡನು.

**ತಾತ್ಪರ್ಯ** :- ಪಿಶಾಚತ್ವದಿಂದ ಮುಕ್ತಿಪಡೆದ ಆ ಇಬ್ಬರು ಗಂಧರ್ವರು ಮತ್ತೊಮ್ಮೆ ಶ್ರೀಕೃಷ್ಣನ ಸ್ತೋತ್ರ-ಗಾನ-ನೃತ್ಯಗಳೆಲ್ಲವನ್ನೂ ಮಾಡುತ್ತಾ ಪೂಜಿಸುತ್ತಾರೆ. ನಂತರ ಪರ್ವತಶ್ರೇಷ್ಠವಾದ ಕೈಲಾಸಕ್ಕೆ ಹೋದ ಪರಮಾತ್ಮನು ಶಿವನನ್ನು ಕುರಿತು ತಪಸ್ಸು ಮಾಡಿದವನಂತೆ ತೋರಿಸಿಕೊಂಡನು.

**ಸ್ವೀಯಾನೇವ ಗುಣಾನ್ ವಿಷ್ಣುರ್ಭುಂಜನ್ ನಿತ್ಯೇನ ಶೋಚಿಷಾ ।**
**ಶಾರ್ವಂ ತಪಃ ಕರೋತೀವ ಮೋಹಯಾಮಾಸ ದುರ್ಜನಾನ್ ॥ ೧೬೨ ॥**

ಪದಚ್ಛೇದ :- ಸ್ವೀಯಾನ್, ಏವ, ಗುಣಾನ್, ವಿಷ್ಣುಃ, ಭುಂಜನ್, ನಿತ್ಯೇನ, ಶೋಚಿಷಾ, ಶಾರ್ವಂ, ತಪಃ, ಕರೋತಿ, ಇವ, ಮೋಹಯಾಮಾಸ, ದುರ್ಜನಾನ್.

**ಅರ್ಥ** :- **ವಿಷ್ಣುಃ** = ವಿಷ್ಣುವು; **ನಿತ್ಯೇನ** = ನಿತ್ಯವಾದ; **ಶೋಚಿಷಾ** = ಜ್ಞಾನದಿಂದ; **ಸ್ವೀಯಾನ್ ಏವ** = ತನ್ನ ಸ್ವರೂಪಭೂತವೇ ಆದ; **ಗುಣಾನ್** = (ಆನಂದಾದಿ)ಗುಣಗಳನ್ನು; **ಭುಂಜನ್** = ಅನುಭವಿಸುತ್ತಾ; **ಶಾರ್ವಂ** = ಶಿವನಿಗೆ ಸಂಬಂಧಿಸಿದ; **ತಪಃ** = ತಪಸ್ಸನ್ನು; **ಕರೋತಿ ಇವ** = ಮಾಡುತ್ತಿರುವವನಂತೆ (ತೋರಿಸಿ); **ದುರ್ಜನಾನ್** = ದುರ್ಜನರನ್ನು; **ಮೋಹಯಾಮಾಸ** = ಭ್ರಮೆಗೊಳಿಸಿದನು.

**ತಾತ್ಪರ್ಯ** :- ಶ್ರೀಕೃಷ್ಣನು ತನ್ನದೇ ಗುಣಗಳನ್ನು ನಿತ್ಯವಾದ ಜ್ಞಾನದಿಂದ ಭೋಗಿಸುತ್ತಾ ಶಿವನ ತಪಸ್ಸನ್ನು ಮಾಡುತ್ತಿರುವವನಂತೆ ನಟಿಸಿ ಅಸುರಜನರನ್ನು ಭ್ರಮೆಗೊಳಿಸಿದನು.

**ಪೂರ್ವಂ ತೇನೋದಿತಂ ಯತ್ತಲ್ಲೋಕಾನ್ ಮೋಹಯತಾಂಜಸಾ ।**
**ಶರ್ವಂ ಪ್ರತಿ ತವಾಹಂ ತು ಕುರ್ಯಾಂ ದ್ವಾದಶವತ್ಸರಮ್ ॥ ೧೬೩ ॥**

**ತಪೋಸುರಾಣಾಂ ಮೋಹಾಯ ಸುರಾಃ ಸಂತು ಗತಜ್ವರಾಃ ।**
**ಇತಿ ತಸ್ಮಾತ್ ತದಾ ಕೃಷ್ಣ ಏಕಾಹೇನ ಬೃಹಸ್ಪತಿಮ್ ॥ ೧೬೪ ॥**

**ಆಜ್ಞಯಾ ಚಾರಯಾಮಾಸ ಕ್ಷಿಪ್ರಂ ದ್ವಾದಶರಾಶಿಷು ।**
**ದ್ವಾದಶಾಬ್ದಮಭೂತ್ತೇನ ತದಹಃ ಕೇಶವಾಜ್ಞಯಾ ॥ ೧೬೫ ॥**

ಪದಚ್ಛೇದ :- ಪೂರ್ವಂ, ತೇನ, ಉದಿತಂ, ಯತ್, ತತ್, ಲೋಕಾನ್, ಮೋಹಯತಾ, ಅಂಜಸಾ, ಶರ್ವಂ, ಪ್ರತಿ, ತವ, ಅಹಂ, ತು, ಕುರ್ಯಾಂ, ದ್ವಾದಶವತ್ಸರಮ್. ತಪಃ, ಅಸುರಾಣಾಂ, ಮೋಹಾಯ, ಸುರಾಃ, ಸಂತು, ಗತಜ್ವರಾಃ, ಇತಿ, ತಸ್ಮಾತ್, ತದಾ, ಕೃಷ್ಣಃ, ಏಕಾಹೇನ, ಬೃಹಸ್ಪತಿಮ್. ಆಜ್ಞಯಾ, ಚಾರಯಾಮಾಸ, ಕ್ಷಿಪ್ರಂ, ದ್ವಾದಶರಾಶಿಷು, ದ್ವಾದಶಾಬ್ದಂ, ಅಭೂತ್, ತೇನ, ತತ್, ಅಹಃ, ಕೇಶವಾಜ್ಞಯಾ.

**ಅರ್ಥ** :- ಅಂಜಸಾ = ಚೆನ್ನಾಗಿ(ಯೋಗ್ಯತಾನುಸಾರವಾಗಿ); **ಲೋಕಾನ್** = ದುಷ್ಟಜನರನ್ನು; **ಮೋಹಯತಾ** = ಭ್ರಮೆಗೊಳಿಸುವ; **ತೇನ** = ಆ

ಭಗವಂತನಿಂದ; **ಶರ್ವಂ ಪ್ರತಿ** = ಶಿವನನ್ನು ಕುರಿತು; **ಅಹಂ ತು** = ನಾನಾದರೂ; **ತವ** = ನಿನಗೆ ಸಂಬಂಧಿಸಿದ; **ದ್ವಾದಶವತ್ಸರಂ** = ಹನ್ನೆರಡು ವರ್ಷಗಳ ಕಾಲದ; **ತತ್** = ಅಂತಹ; **ತಪಃ** = ತಪಸ್ಸನ್ನು; **ಅಸುರಾಣಾಂ** = ಅಸುರರ; **ಮೋಹಾಯ** = ಮೋಹಕ್ಕೋಸ್ಕರ; **ಕುರ್ಯಾಂ** = ಮಾಡುತ್ತೇನೆ; **ಸುರಾಃ** = ದೇವತೆಗಳು; **ಗತಜ್ವರಾಃ** = ಜ್ವರರಹಿತರು; **ಸಂತು** = ಆಗಲಿ; **ಇತಿ** = ಎಂದು; **ಯತ್** = ಯಾವುದು; **ಪೂರ್ವಂ** = ಹಿಂದೆ; **ಉದಿತಂ** = ಹೇಳಲ್ಪಟ್ಟಿತ್ತೋ; **ತಸ್ಮಾತ್** = ಆ ಕಾರಣದಿಂದ; **ಕೃಷ್ಣಃ** = ಶ್ರೀಕೃಷ್ಣನು; **ತದಾ** = ತಪಶ್ಚರಣದ ಆ ಕಾಲದಲ್ಲಿ; **ಏಕಾಹೇನ** = ಒಂದು ದಿವಸದಿಂದ; (**ದ್ವಾದಶ ವತ್ಸರಾನ್ ಕರ್ತುಂ** = ಹನ್ನೆರಡುವರ್ಷಗಳನ್ನು ಮಾಡಲು); **ಬೃಹಸ್ಪತಿಂ** = ಬೃಹಸ್ಪತಿಯನ್ನು; **ಆಜ್ಞಯಾ** = (ತನ್ನ) ಅಪ್ಪಣೆಯಿಂದ; **ಕ್ಷಿಪ್ರಂ** = ಶೀಘ್ರವಾಗಿ; **ದ್ವಾದಶರಾಶಿಷು** = ಹನ್ನೆರಡು ರಾಶಿಗಳಲ್ಲಿ; **ಚಾರಯಾಮಾಸ** = ಸಂಚರಿಸುವಂತೆ ಮಾಡಿದನು; **ತೇನ** = ದ್ವಾದಶರಾಶಿಯಲ್ಲಿ ಬೃಹಸ್ಪತಿಯ ಸಂಚಾರದಿಂದ; **ತತ್** = ಆ; **ಅಹಃ** = ದಿನವು; **ಕೇಶವಾಜ್ಞಯಯಾ** = ಪರಮಾತ್ಮನ ಅಪ್ಪಣೆಯಿಂದ; **ದ್ವಾದಶಾಬ್ದಂ** = ಹನ್ನೆರಡುವರ್ಷವು; **ಅಭೂತ್** = ಆಯಿತು.

**ತಾತ್ಪರ್ಯ** :- ಶ್ರೀಕೃಷ್ಣನು ಹಿಂದೆಯೇ ಶಿವನಿಗೆ ಹೇಳಿದ್ದನು ಅಸುರರನ್ನು ಭ್ರಮೆಗೊಳಿಸಲೆಂದು ನಿನ್ನನ್ನು ಕುರಿತು ಹನ್ನೆರಡು ವರ್ಷ ತಪಸ್ಸುಮಾಡುವವನಂತೆ ತೋರಿಸ್ಕೊಳ್ಳುತ್ತೇನೆ ಎಂದು. ಆ ಹನ್ನೆರಡು ವರ್ಷಗಳನ್ನು ಒಂದೇ ದಿವಸದಲ್ಲಿ ಪೂರೈಸಲು ಸಂಕಲ್ಪಿಸಿದ ಶ್ರೀಕೃಷ್ಣನು ಬೃಹಸ್ಪತಿಗೆ ಒಂದೇ ದಿನದಲ್ಲಿ ಹನ್ನೆರದೂ ರಾಶಿಗಳಲ್ಲಿ ಸಂಚರಿಸುವಂತೆ ಆಜ್ಞಾಪಿಸಿದನು. ಬೃಹಸ್ಪತಿಯು ಸಂಚರಿಸಲು ಒಂದೇ ದಿನದಲ್ಲಿ ಹನ್ನೆರಡು ವರ್ಷಗಳಾದವು.

**ಏಕಸ್ಮಿನ್ನಹ್ನಿ ಭಗವಾನ್ ರಾಶಿಂ ರಾಶಿಂ ಚ ವತ್ಸರಮ್ ।**
**ಕಲ್ಪಯಿತ್ವೋಪವಾಸಾದೀನ್ ಮನಸಾ ನಿಯಮಾನಪಿ ॥ ೧೬೬ ॥**

ಪದಚ್ಛೇದ :- ಏಕಸ್ಮಿನ್, ಅಹ್ನಿ, ಭಗವಾನ್, ರಾಶಿಂ, ರಾಶಿಂ, ಚ , ವತ್ಸರಂ, ಕಲ್ಪಯಿತ್ವಾ, ಉಪವಾಸಾದೀನ್, ಮನಸಾ, ನಿಯಮಾನ್, ಅಪಿ.

**ಅರ್ಥ** :- **ಭಗವಾನ್** = ಭಗವಂತನಾದ ಶ್ರೀಕೃಷ್ಣನು; **ಏಕಸ್ಮಿನ್** = ಒಂದು; **ಅಹ್ನಿ** = ದಿನದಲ್ಲಿ; **ರಾಶಿಂ ರಾಶಿಂ** = ಒಂದೊಂದು ರಾಶಿಯನ್ನು; **ವತ್ಸರಂ** = ವರ್ಷವನ್ನಾಗಿ; **ಕಲ್ಪಯಿತ್ವಾ** = ಸಂಕಲ್ಪಿಸಿ; **ಮನಸಾ** = ಮನಸ್ಸಿನಿಂದಲೇ; **ಉಪವಾಸಾದೀನ್** = ಉಪವಾಸಮೊದಲಾದ; **ನಿಯಮಾನ್ ಅಪಿ** = ನಿಯಮಗಳನ್ನೂ ಕೂಡ (ಆಚರಿಸಿದನು);

**ತಾತ್ಪರ್ಯ** :- ಶ್ರೀಕೃಷ್ಣನು ಒಂದೊಂದು ರಾಶಿಯನ್ನು ಒಂದೊಂದು ವರ್ಷವನ್ನಾಗಿ ಸಂಕಲ್ಪಿಸಿದ. ಮತ್ತು ಮನಸ್ಸಿನಿಂದಲೇ ಉಪವಾಸಾದಿ ಎಲ್ಲ ವ್ರತಗಳನ್ನೂ ಆಚರಿಸಿದ.

**ಮಾಸವ್ರತಂ ಸಾರ್ದ್ಧಶತಶ್ವಾಸಕಾಲೈರಕಲ್ಪಯತ್ ।**
**ಮನಸ್ಯೆವ ಸ್ವಭಕ್ತಾನಾಂ ದ್ವಾದಶಾಬ್ದವ್ರತಾಪ್ತಯೇ ॥ ೧೬೭ ॥**

**ಪದಚ್ಛೇದ** :- ಮಾಸವ್ರತಂ, ಸಾರ್ದ್ಧಶತಶ್ವಾಸಕಾಲೈಃ, ಅಕಲ್ಪಯತ್, ಮನಸಾ, ಏವ, ಸ್ವಭಕ್ತಾನಾಂ, ದ್ವಾದಶಾಬ್ದವ್ರತಾಪ್ತಯೇ.

**ಅರ್ಥ** :- **ಮಾಸವ್ರತಂ** = ತಿಂಗಳವ್ರತವನ್ನು; **ಸಾರ್ಧಶತಶ್ವಾಸಕಾಲೈಃ** = ನೂರೈವತ್ತು ಶ್ವಾಸಗಳ ಕಾಲಗಳಿಂದಲೇ; **ಮನಸಾ ಏವ** = ಮನಸ್ಸಿನಿಂದಲೇ; **ಸ್ವಭಕ್ತಾನಾಂ** = ತನ್ನ ಭಕ್ತರಿಗೆ; **ದ್ವಾದಶಾಬ್ದವ್ರತಾಪ್ತಯೇ** = ಹನ್ನೆರಡು ವರ್ಷಗಳಫಲಪ್ರಾತಿಗಾಗಿ; **ಅಕಲ್ಪಯತ್** = ಸಂಕಲ್ಪಿಸಿದನು.

**ತಾತ್ಪರ್ಯ** :- ಒಂದು ದಿವಸದಲ್ಲಿ ೨೧,೬೦೦ ಶ್ವಾಸಗಳಿರುತ್ತವೆ. ಅದನ್ನು ೧೨ ಭಾಗಗಳನ್ನಾಗಿಸಿ ೧೫೦ ಶ್ವಾಸಗಳ ಕಾಲವನ್ನೇ ಒಂದು ತಿಂಗಳನ್ನಾಗಿ ಸಂಕಲ್ಪಿಸಿ ಒಂದುದಿನದಲ್ಲೇ ಶ್ರೀಕೃಷ್ಣನು ಮಾಸವ್ರತಾದಿಗಳನ್ನು ಪೂರೈಸಿದನು. ಅಂದು ವ್ರತವನ್ನು ಮಾಡಿದ ಭಗವದ್ಭಕ್ತರೆಲ್ಲರೂ ಹನ್ನೆರಡುವರ್ಷಗಳ ಫಲವನ್ನು ಪಡೆದರು.

**ತತ್ರಾಸ್ಯ ಗರುಡಾದ್ಯಾಶ್ಚ ಪರಿಚರ್ಯಾಂ ಸ್ವಪಾರ್ಷದಾಃ ।**
**ಚಕ್ರುರ್ಹೋಮಾದಿಕಾಶ್ಚೈವ ಕ್ರಿಯಾಶ್ಚಕ್ರೇ ಜನಾರ್ದನಃ ।**
**ಸ್ವಾತ್ಮಾನಂ ಪ್ರತಿ ಪಾಪಾನಾಂ ಶಿವಾಯೇತಿ ಪ್ರಕಾಶಯನ್ ॥ ೧೬೮ ॥**

ಪದಚ್ಛೇದ :- ತತ್ರ, ಅಸ್ಯ, ಗರುಡಾದ್ಯಾಃ, ಚ, ಪರಿಚರ್ಯಾಂ, ಸ್ವಪಾರ್ಷದಾಃ, ಚಕ್ರುಃ, ಹೋಮಾದಿಕಾಃ, ಚ, ಏವ, ಕ್ರಿಯಾಃ, ಚಕ್ರೇ, ಜನಾರ್ದನಃ, ಸ್ವಾತ್ಮಾನಂ, ಪ್ರತಿ, ಪಾಪಾನಾಂ, ಶಿವಾಯ, ಇತಿ, ಪ್ರಕಾಶಯನ್.

ಅರ್ಥ :- ತತ್ರ = ಆ ಕಾಲದಲ್ಲಿ; ಗರುಡಾದ್ಯಾಃ = ಗರುಡ ಮೊದಲಾದ; ಸ್ವಪಾರ್ಷದಾಃ = ತನ್ನ(ಹರಿಯ) ಸೇವಕರು; ಪರಿಚರ್ಯಾಂ = ಸೇವೆಯನ್ನು; ಚಕ್ರುಃ = ಮಾಡಿದರು. ಜನಾರ್ದನಃ = ಜನಾರ್ದನನು; ಹೋಮಾದಿಕಾಃ = ಹೋಮ ಮೊದಲಾದ; ಕ್ರಿಯಾಃ ಚ ಏವ = ಕ್ರಿಯೆಗಳನ್ನೂ; ಶಿವಾಯ = ಶಿವನನ್ನುದ್ದೇಶಿಸಿ; ಇತಿ = ಎಂದು; ಪ್ರಕಾಶಯನ್ = ತೋರಿಸುತ್ತಾ; ಸ್ವಾತ್ಮಾನಂ ಪ್ರತಿ = ತನ್ನನ್ನು ಕುರಿತು; ಚಕ್ರೇ = ಮಾಡಿದನು.

ತಾತ್ಪರ್ಯ :- ಶ್ರೀಕೃಷ್ಣನು ತಪಸ್ಸುಮಾಡಲು ಗರುಡ ಮೊದಲಾದ ಹರಿಪಾರ್ಷದರು ಪರಮಾತ್ಮನ ಸೇವೆಯನ್ನು ಮಾಡಿದರು. ಮತ್ತು ಕೃಷ್ಣನು ಹೋಮಾದಿ ಕ್ರಿಯೆಗಳನ್ನೂ ಮಾಡಿದನು. ಆ ಹೋಮಾದಿಗಳು ಮೇಲ್ನೋಟಕ್ಕೆ ಶಿವನನ್ನುದ್ದೇಶಿಸಿ ಎಂಬಂತೆ ತೋರ್ಪಡಿಸಿ ತನ್ನನ್ನು ಕುರಿತೇ ಮಾಡಿದನು.

ಏವಂ ಸ್ಥಿತಂ ತಮರವಿಂದದಲಾಯತಾಕ್ಷಂ
ಬ್ರಹ್ಮೇಂದ್ರಪೂರ್ವಸುರಯೋಗಿವರಪ್ರಜೇಶಾಃ ।
ಅಭ್ಯಾಯಯುಃ ಪಿತೃಮುನೀಂದ್ರಗಣೈಃ ಸಮೇತಾ
ಗಂಧರ್ವಸಿದ್ಧವರಯಕ್ಷವಿಹಂಗಮಾದ್ಯಾಃ ॥ ೧೬೯ ॥

ಪದಚ್ಛೇದ :- ಏವಂ, ಸ್ಥಿತಂ, ತಮ್, ಅರವಿಂದದಲಾಯತಾಕ್ಷಂ, ಬ್ರಹ್ಮೇಂದ್ರಪೂರ್ವಸುರಯೋಗಿವರಪ್ರಜೇಶಾಃ, ಅಭ್ಯಾಯಯುಃ, ಪಿತೃಮುನೀಂದ್ರ ಗಣೈಃ, ಸಮೇತಾಃ, ಗಂಧರ್ವಸಿದ್ಧವರಯಕ್ಷವಿಹಂಗಮಾದ್ಯಾಃ.

ಅರ್ಥ :- ಏವಂ = ಈ ರೀತಿಯಾಗಿ; ಸ್ಥಿತಂ = (ತಪಸ್ಸಿನಲ್ಲಿ) ಇರುವ; ಅರವಿಂದದಲಾಯತಾಕ್ಷಂ = ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳ; ತಂ (ಪ್ರತಿ) = ಆ ಕೃಷ್ಣನನ್ನು ಕುರಿತು; ಬ್ರಹ್ಮೇಂದ್ರಪೂರ್ವಸುರಯೋಗಿ ವರಪ್ರಜೇಶಾಃ = ಬ್ರಹ್ಮ ಇಂದ್ರ ಮೊದಲಾದ ದೇವತೆಗಳು, ಯೋಗಿಶ್ರೇಷ್ಠರಾದ ಸನಕಾದಿಗಳು, ದಕ್ಷಮೊದಲಾದ ಪ್ರಜಾಪತಿಗಳು; ಪಿತೃಮುನೀಂದ್ರಗಣೈಃ = ಅಗ್ನಿಷ್ವಾತ್ತ ಮೊದಲಾದ ಪಿತೃಗಳು, ಮುನಿಶ್ರೇಷ್ಠರು

ಇವರುಗಳಿಂದ; **ಸಮೇತಾಃ** = ಸಹಿತರಾದ; **ಗಂಧರ್ವಸಿದ್ಧವರಯಕ್ಷ ವಿಹಂಗಮಾದ್ಯಾಃ** = ಗಂಧರ್ವರು ಸಿದ್ಧರು ಯಕ್ಷರು ಹಂಸಮೊದಲಾದ ಪಕ್ಷಿಗಳು; **ಅಭ್ಯಾಯಯುಃ** = ಬಂದರು.

**ತಾತ್ಪರ್ಯ** :- ಹೀಗೆ ಕಮಲದಂತೆ ವಿಸ್ತೃತನಯನವುಳ್ಳ ಕೃಷ್ಣನು ತಪಸ್ಸನ್ನಾಚರಿಸುತ್ತಿರಲು ಬ್ರಹ್ಮ ಇಂದ್ರ ಮೊದಲಾದ ದೇವತೆಗಳು, ಸನಕಾದಿ ಯೋಗಿಶ್ರೇಷ್ಠರು, ದಕ್ಷಾದಿ ಪ್ರಜಾಪತಿಗಳು, ಅಗ್ನಿಷ್ವಾತ್ತ ಮೊದಲಾದ ಪಿತೃಗಳು, ಮುನಿಶ್ರೇಷ್ಠರು, ಗಂಧರ್ವರು, ಸಿದ್ಧರು, ಯಕ್ಷರು, ಬ್ರಹ್ಮವಾಹನವಾದ ಹಂಸ ಮೊದಲಾದ ಪಕ್ಷಿಗಳು ಮತ್ತು ಕಿನ್ನರ, ಪನ್ನಗ ಮೊದಲಾದ ಎಲ್ಲರೂ ಅಲ್ಲಿಗೆ ಬಂದರು.

**ಶರ್ವೋऽಪಿ ಸರ್ವಸುರದೈವತಮಾತ್ಮದೈವ-**
**ಮಾಯಾತಮಾತ್ಮಗೃಹಸನ್ನಿಧಿಮಾಶ್ವವೇತ್ಯ ।**
**ಅಭ್ಯಾಯಯೌ ನಿಜಗಣೈಃ ಸಹಿತಃ ಸಭಾರ್ಯೋ**
**ಭಕ್ತ್ಯಾತಿಸಂಭ್ರಮಗೃಹೀತಸಮರ್ಹಣಾಗ್ರ್ಯಃ ॥ ೧೭೦ ॥**

**ಪದಚ್ಛೇದ** :- **ಶರ್ವಃ, ಅಪಿ, ಸರ್ವಸುರದೈವತಮ್, ಆತ್ಮದೈವಮ್, ಆಯಾತಮ್, ಆತ್ಮಗೃಹಸನ್ನಿಧಿಮ್, ಆಶು, ಅವೇತ್ಯ, ಅಭ್ಯಾಯಯೌ, ನಿಜಗಣೈಃ, ಸಹಿತಃ, ಸಭಾರ್ಯಃ, ಭಕ್ತ್ಯಾ, ಅತಿಸಂಭ್ರಮಗೃಹೀತಸಮರ್ಹಣಾಗ್ರ್ಯಃ.**

**ಅರ್ಥ** :- **ಶರ್ವಃ ಅಪಿ** = ಶಿವನೂ ಕೂಡ; **ಸರ್ವಸುರದೈವತಂ** = ಎಲ್ಲ ದೇವತೆಗಳಿಗೂ ದೇವನಾದ; **ಆತ್ಮದೈವಂ** = ತನಗೂ ದೈವನಾದ; **ಆತ್ಮಗೃಹಸನ್ನಿಧಿಂ** = ತನ್ನ ಮನೆಯಾದ ಕೈಲಾಸದ ಸಮೀಪಕ್ಕೆ; **ಆಯಾತಂ** = ಬಂದಿರುವ ಕೃಷ್ಣನನ್ನು; **ಆಶು** = ಶೀಘ್ರವಾಗಿ; **ಅವೇತ್ಯ** = ತಿಳಿದು; **ನಿಜಗಣೈಃ** = ತನ್ನ ತನ್ನ ಪ್ರಮಥಗಣಗಳೊಂದಿಗೆ; **ಸಹಿತಃ (ಸನ್)** = ಕೂಡಿದವನಾಗಿ; **ಸಭಾರ್ಯಃ (ಸನ್)** = ಹೆಂದತಿಯಾದ ಪಾರ್ವತೀದೇವಿಯೊಂದಿಗ ಸಹಿತನಾಗಿ; **ಭಕ್ತ್ಯಾ** = ಭಕ್ತಿಯಿಂದ; **ಅತಿಸಂಭ್ರಮಗೃಹೀತಸಮರ್ಹಣಾಗ್ರ್ಯಃ (ಸನ್)** = ಅತ್ಯಂತ ಸಂಭ್ರಮದಿಂದ ಸ್ವೀಕರಿಸಲ್ಪಟ್ಟ ಶ್ರೇಷ್ಠಪೂಜಾ ಸಾಮಗ್ರಿಯುಳ್ಳವನಾಗಿ; **ಅಭ್ಯಾಯಯೌ** = ಬಂದನು.

ತಾತ್ಪರ್ಯ :- ಶಿವನೂ ಕೂಡ ಎಲ್ಲ ದೇವತೆಗಳಿಗೂ ತನಗೂ ಸ್ವಾಮಿಯಾದ ಶ್ರೀಕೃಷ್ಣನು ತನ್ನ ಮನೆಯ ಸಮೀಪಕ್ಕೆ ಬಂದಿರುವುದನ್ನು ತಿಳಿದು ತನ್ನ ಪ್ರಮಥಗಣ ಮತ್ತು ಪತ್ನಿಯೊಂದಿಗೆ ಸಹಿತನಾಗಿ ಕೈಯಲ್ಲಿ ಶ್ರೇಷ್ಠಪೂಜಾಸಾಮಗ್ರಿಗಳನ್ನು ಹಿಡಿದು ಭಕ್ತಿಯಿಂದ ಬಂದನು.

**ಅಭ್ಯೇತ್ಯ ಪಾದಯುಗಲಂ ಜಗದೇಕಭರ್ತುಃ**
**ಕೃಷ್ಣಸ್ಯ ಭಕ್ತಿಭರಿತಃ ಶಿರಸಾ ನನಾಮ ।**
**ಚಕ್ರೇ ಸ್ತುತಿಂ ಚ ಪರಮಾಂ ಪರಮಸ್ಯ ಪೂರ್ಣಷಾಡ್-**
**ಗುಣ್ಯವಿಗ್ರಹವಿದೋಷಮಹಾವಿಭೂತೇಃ ॥ ೧೭೧ ॥**

ಪದಚ್ಛೇದ :– **ಅಭ್ಯೇತ್ಯ, ಪಾದಯುಗಲಂ, ಜಗದೇಕಭರ್ತುಃ, ಕೃಷ್ಣಸ್ಯ, ಭಕ್ತಿಭರಿತಃ, ಶಿರಸಾ, ನನಾಮ, ಚಕ್ರೇ, ಸ್ತುತಿಂ, ಚ, ಪರಮಾಂ, ಪರಮಸ್ಯ, ಪೂರ್ಣಷಾಡ್ಗುಣ್ಯ ವಿಗ್ರಹವಿದೋಷಮಹಾವಿಭೂತೇಃ.**

ಅರ್ಥ :- **ಜಗದೇಕಭರ್ತುಃ** = ಜಗತ್ತಿಗೆ ಮುಖ್ಯಸ್ವಾಮಿಯಾದ; **ಕೃಷ್ಣಸ್ಯ** = ಶ್ರೀಕೃಷ್ಣನ; **ಪಾದಯುಗಲಂ** = ಪಾದದ್ವಯಗಳನ್ನು; **ಅಭ್ಯೇತ್ಯ** = ಹೊಂದಿ; **ಭಕ್ತಿಭರಿತಃ (ಸನ್)** = ಭಕ್ತಿಯಿಂದ ತುಂಬಿದವನಾಗಿ; **ಶಿರಸಾ** = ಶಿರಸ್ಸಿನಿಂದ; **ನನಾಮ** = ನಮಸ್ಕರಿಸಿದನು; **ಚ** = ಮತ್ತು; **ಪೂರ್ಣಷಾಡ್‌ಗುಣ್ಯ ವಿಗ್ರಹಮಹಾವಿಭೂತೇಃ** = ಪೂರ್ಣವಾದ ಷಡ್ಗುಣಗಳ ದೇಹವುಳ್ಳ ಮತ್ತು ಮಹೈಶ್ವರ್ಯವುಳ್ಳ; **ಪರಮಸ್ಯ** = ಸರ್ವೋತ್ತಮನಾದ ಶ್ರೀಕೃಷ್ಣನ; **ಪರಮಾಂ** = ಶ್ರೇಷ್ಠವಾದ; **ಸ್ತುತಿಂ** = ಸ್ತೋತ್ರವನ್ನು; **ಚಕ್ರೇ** = ಮಾಡಿದನು.

ತಾತ್ಪರ್ಯ :- ಜಗದೇಕಸ್ವಾಮಿಯಾದ ಕೃಷ್ಣನ ಪಾದಸಮೀಪಕ್ಕೆ ಬಂದ ಶಿವನು ಭಕ್ತಿಯಿಂದ ಶಿರಸಾ ವಂದಿಸಿದನು ಹಾಗು ಪೂರ್ಣವಾದ ಷಡ್ಗುಣಗಳೇ ಶರೀರವಾದ ಮಹಾ ಐಶ್ವರ್ಯವುಳ್ಳ ಪರಮಾತ್ಮನ ಶ್ರೇಷ್ಠವಾದ ಸ್ತೋತ್ರವನ್ನು ಮಾಡಿದನು.

**ಕೃಷ್ಣೋಽಪ್ಯಯೋಗ್ಯಜನಮೋಹನಮೇವ ವಾಂಛನ್**
**ತುಷ್ಟಾವ ರುದ್ರಹೃದಿಗಂ ನಿಜಮೇವ ರೂಪಮ್ ।**
**ರುದ್ರೋ ನಿಶಮ್ಯ ತದುವಾಚ ಸುರಾನ್ ಸಮಸ್ತಾನ್**
**ಸತ್ಯಂ ವದಾಮಿ ಶೃಣುತಾದ್ಯ ವಚೋ ಮದೀಯಮ್ ॥ ೧೭೨ ॥**

ಪದಚ್ಛೇದ :- ಕೃಷ್ಣಃ, ಅಪಿ, ಅಯೋಗ್ಯಜನಮೋಹನಮ್, ಏವ, ವಾಂಛನ್, ತುಷ್ಟಾವ, ರುದ್ರಹೃದಿಗಂ, ನಿಜಮ್, ಏವ, ರೂಪಮ್, ರುದ್ರೋ, ನಿಶಮ್ಯ, ತತ್, ಉವಾಚ, ಸುರಾನ್, ಸಮಸ್ತಾನ್, ಸತ್ಯಂ, ವದಾಮಿ, ಶೃಣುತ, ಅದ್ಯ, ವಚಃ, ಮದೀಯಮ್.

ಅರ್ಥ :- ಕೃಷ್ಣಃ ಅಪಿ = ಶ್ರೀಕೃಷ್ಣನೂ ಕೂಡ; ಅಯೋಗ್ಯಜನ ಮೋಹನಮ್ ಏವ = ಮೋಕ್ಷಕ್ಕೆ ಅಯೋಗ್ಯರಾದ ಜನರ ಭ್ರಮೆಯನ್ನೇ; ವಾಂಛನ್ (ಸನ್) = ಬಯಸುವವನಾಗಿ; ರುದ್ರಹೃದಿಗಂ = ಶಿವನ ಮನಸ್ಸಿನಲ್ಲಿರುವ; ನಿಜಮ್ ಏವ = ತನ್ನದೇ ಆದ; ರೂಪಂ = ರೂಪವನ್ನು; ತುಷ್ಟಾವ = ಸ್ತೋತ್ರಮಾಡಿದನು. ತತ್ = ಆ ಸ್ತೋತ್ರವನ್ನು; ನಿಶಮ್ಯ = ಕೇಳಿ; ರುದ್ರಃ = ಶಿವನು; ಸಮಸ್ತಾನ್ = ಎಲ್ಲ; ಸುರಾನ್ (ಪ್ರತಿ) = ದೇವತೆಗಳನ್ನು ಕುರಿತು; ಉವಾಚ = ಮಾತನಾಡಿದನು. (ಅಹಂ) = ನಾನು; ಸತ್ಯಂ = ಸತ್ಯವನ್ನು; ವದಾಮಿ = ಹೇಳಿತ್ತೇನೆ; ಅದ್ಯ = ಇಂದು; ಮದೀಯಮ್ = ನನ್ನ; ವಚಃ = ಮಾತನ್ನು; ಶೃಣುತ = ಕೇಳಿರಿ.

ತಾತ್ಪರ್ಯ :- ಕೃಷ್ಣನೂ ಕೂಡ ದುಷ್ಟಜನರ ಮೋಹನಕ್ಕಾಗಿ ರುದ್ರಾಂತರ್ಗತವಾದ ರುದ್ರನಾಮಕವಾದ ತನ್ನದೇ ರೂಪವನ್ನು ಸ್ತೋತ್ರ ಮಾಡಿದನು. ಆ ಸ್ತೋತ್ರವನ್ನು ಕೇಳಿದ ಶಿವನು ಎಲ್ಲ ದೇವತೆಗಳನ್ನಿ ಕುರಿತು ಮಾತನಾಡುತ್ತಾನೆ. ಹೇ ದೇವತೆಗಳೆ ನಾನು ಸತ್ಯವನ್ನು ಹೇಳುತ್ತೇನೆ. ಇಂದು ನನ್ನ ಮಾತುಗಳನ್ನು ಕೇಳಿರಿ.

ವಿಷ್ಣುಃ ಸಮಸ್ತಸುಜನೈಃ ಪರಮೋಭ್ಯುಪೇಯಃ
ತತ್ಪ್ರಾಪ್ತಯೇಹಮನಿಲೋಥ ರಮಾಭ್ಯುಪಾಯಾಃ ।
ಏಷ ಹ್ಯಶೇಷನಿಗಮಾರ್ಥವಿನಿರ್ಣಯೋರ್ಥೋ ಯದ್
ವಿಷ್ಣುರೇವ ಪರಮೋ ಮಮ ಚಾಬ್ಜಯೋನೇಃ ॥ ೧೭೩ ॥

ಪದಚ್ಛೇದ :- ವಿಷ್ಣುಃ, ಸಮಸ್ತಸುಜನೈಃ, ಪರಮಃ, ಅಭ್ಯುಪೇಯಃ, ತತ್ಪ್ರಾಪ್ತಯೇ, ಅಹಮ್, ಅನಿಲಃ, ಅಥ, ರಮಾ, ಅಭ್ಯುಪಾಯಾಃ, ಏಷಃ, ಹಿ, ಅಶೇಷ ನಿಗಮಾರ್ಥವಿನಿರ್ಣಯಃ, ಅರ್ಥಃ, ಯದ್, ವಿಷ್ಣುಃ, ಏವ, ಪರಮಃ, ಮಮ, ಚ, ಅಬ್ಜಯೋನೇಃ.

**ಅರ್ಥ** :- **ವಿಷ್ಣುಃ** = ವಿಷ್ಣುವು; **ಸಮಸ್ತಸುಜನೈಃ** = ಎಲ್ಲ ಸಜ್ಜನರಿಂದ; **ಪರಮಃ** = ಸರ್ವೋತ್ತಮನಾಗಿ; **ಅಭ್ಯುಪೇಯಃ** = ಅಂಗೀಕರಿಸಲ್ಪಡಬೇಕು(ತಿಳಿಯಲ್ಪಡಬೇಕು). **ತತ್ಪ್ರಾಪ್ತಯೇ** = ಆ ವಿಷ್ಣುವಿನ ಅಪರೋಕ್ಷ ಪ್ರಾಪ್ತಿಗಾಗಿ; **ಅಹಮ್** = ನಾನು; **ಅನಿಲಃ** = ಮುಖ್ಯಪ್ರಾಣನು; **ಅಥ** = ಹಾಗು; **ರಮಾ** = ಲಕ್ಷ್ಮೀದೇವಿಯು; **ಅಭ್ಯುಪಾಯಾಃ** = ಸಮೀಚೀನವಾದ ಉಪಾಯರಾಗಿದ್ದೇವೆ. **ಏಷಃ** = ಇದು; **ಅಶೇಷನಿಗಮಾರ್ಥವಿನಿರ್ಣಯಃ** = ಸಕಲವೇದಾರ್ಥಗಳಿಂದ ನಿರ್ಣಯಿಸಲ್ಪಟ್ಟ; **ಅರ್ಥಃ** = ಅರ್ಥವು; **ಯತ್** = ಯಾವುದು; **ವಿಷ್ಣುಃ ಏವ** = ವಿಷ್ಣುವೇ; **ಮಮ (ಸಕಾಶಾತ್)** = ನನಗಿಂತಲೂ; **ಚ** = ಮತ್ತು; **ಅಬ್ಜಯೋನೇಃ** = ಕಮಲೋದ್ಭವನಾದ ಬ್ರಹ್ಮನಿಗಿಂತಲೂ ಕೂಡ; **ಪರಮಃ** = ಶ್ರೇಷ್ಠನು.

**ತಾತ್ಪರ್ಯ** :- ಶಿವನು ದೇವತೆಗಳಿಗೆ ಹೇಳುತ್ತಿದ್ದಾನೆ ವಿಷ್ಣುವೇ ಸರ್ವೋತ್ತಮನೆಂದು ಎಲ್ಲ ಸುಜನರು ತಿಳಿಯಬೇಕು. ಪರಮಾತ್ಮನ ಅಪರೋಕ್ಷ ಜ್ಞಾನಕ್ಕಾಗಿ ನಾನು, ಮುಖ್ಯಪ್ರಾಣ, ಲಕ್ಷ್ಮೀದೇವೀ ದ್ವಾರವಾಗಿದ್ದೇವೆ. ಅಂದರೆ ಅವನ ಅಪರೋಕ್ಷಜ್ಞಾನಕ್ಕಾಗಿ ನಮ್ಮ ಉಪಾಸನೆಯನ್ನು ಮಾಡಬೇಕು. ವಿಷ್ಣುವೇ ನನಗಿಂತಲೂ ಚತುರ್ಮುಖಬ್ರಹ್ಮನಿಗಿಂತಲೂ ಉತ್ತಮನೆಂಬುದೇ ಸಕಲವೇದಾರ್ಥಗಳಿಂದ ನಿರ್ಣಯಿಸಲ್ಪಟ್ಟ ಅರ್ಥವು.

**ಅವ್ಯಕ್ತತಃ ಸಕಲಜೀವಗಣಾಚ್ಚ ನಿತ್ಯಮಿತ್ಯೇವ**
**ನಿಶ್ಚಯ ಉತೈತದನುಸ್ಮರಧ್ವಮ್ ।**
**ಇತ್ಯುಕ್ತವತ್ಯಖಿಲದೇವಗಣಾ ಗಿರೀಶೇ**
**ಕೃಷ್ಣಂ ಪ್ರಣೇಮುರತಿವೃದ್ಧರಮೇಶಭಕ್ತ್ಯಾ ॥ ೧೭೪ ॥**

ಪದಚ್ಛೇದ :– ಅವ್ಯಕ್ತತಃ, ಸಕಲಜೀವಗಣಾತ್, ಚ, ನಿತ್ಯಮ್, ಇತಿ, ಏವ, ನಿಶ್ಚಯಃ, ಉತ, ಏತತ್, ಅನುಸ್ಮರಧ್ವಮ್, ಇತಿ, ಉಕ್ತವತಿ, ಅಖಿಲದೇವಗಣಾಃ, ಗಿರೀಶೇ, ಕೃಷ್ಣಂ, ಪ್ರಣೇಮುಃ, ಅತಿವೃದ್ಧರಮೇಶಭಕ್ತ್ಯಾ.

**ಅರ್ಥ** :- **ಅವ್ಯಕ್ತತಃ** = ಅವ್ಯಕ್ತತತ್ತ್ವಾಭಿಮಾನಿನಿಯಾದ ಲಕ್ಷ್ಮೀದೇವಿಗಿಂತಲೂ; **ಚ** = ಮತ್ತು; **ಸಕಲಜೀವಗಣಾತ್** = ಎಲ್ಲ ಜೀವರ ಸಮೂಹಕಿಂತಲೂ; **ನಿತ್ಯಂ** = ಯಾವಾಗಲೂ (ಸಂಸಾರದಲ್ಲೂ ಮತ್ತು

ಮೋಕ್ಷದಲ್ಲೂ); (ವಿಷ್ಣುವೇ ಎಲ್ಲರಿಗಿಂತಲೂ ಉತ್ತಮನಾದ್ದರಿಂದ ಸಜ್ಜನರು ಪರಮಾತ್ಮನನ್ನು ಸರ್ವೋತ್ತಮನೆಂದು ಅಂಗೀಕರಿಸಬೇಕು ಹೀಗೆ ಪೂರ್ವವಾಕ್ಯದೊಂದಿಗೆ ಅನ್ವಯ). **ಇತಿ ಏವ** = ಈ ಪ್ರಕಾರವಾಗಿಯೇ; **ನಿಶ್ಚಯಃ** = ನಿರ್ಣಯವು; **ಏತತ್ ಉತ** = ವಿಷ್ಣುವಿನ ಈ ಸರ್ವೋತ್ತಮತ್ವವೇ; **ಅನುಸ್ಮರಧ್ವಂ** = ನಿರಂತರವಾಗಿ ಸ್ಮರಿಸಿ. **ಗಿರೀಶೇ** = ಶಿವನು; **ಇತಿ** = ಹೀಗೆ; **ಉಕ್ತವತಿ (ಸತಿ)** = ಹೇಳುತ್ತಿರಲು; **ಅಖಿಲದೇವಗಣಾಃ** = ಎಲ್ಲದೇವತೆಗಳ ಸಮೂಹಗಳು; **ಅತಿವೃದ್ಧರಮೇಶಭಕ್ತ್ಯಾ** = ಅತ್ಯಂತವಾಗಿ ವೃದ್ಧಿಹೊಂದಿದ ಪರಮಾತ್ಮನ ಭಕ್ತಿಯುಳ್ಳವರಾಗಿ; **ಕೃಷ್ಣಂ** = ಶ್ರೀಕೃಷ್ಣನನ್ನು; **ಪ್ರಣೇಮುಃ** = ನಮಸ್ಕರಿಸಿದರು.

**ತಾತ್ಪರ್ಯ** :- ಶಿವನು ಹೇಳುತ್ತಿದ್ದಾನೆ- ಪರಮಾತ್ಮನು ಅವ್ಯಕ್ತತತ್ತ್ವಾಭಿಮಾನಿನಿಯಾದ ಲಕ್ಷ್ಮೀದೇವಿಗಿಂತಲೂ, ಸಕಲ ಜೀವರಾಶಿಗಿಂತಲೂ ಉತ್ತಮನಾದ್ದರಿಂದ ಸಜ್ಜನರು ವಿಷ್ಣುವೇ ಸರ್ವೋತ್ತಮನೆಂದು ತಿಳಿಯಬೇಕು. ಇದೇ ನಿರ್ಣಯವು. ಆದ್ದರಿಂದ ಪರಮಾತ್ಮನನ್ನು ಸರ್ವೋತ್ತಮನೆಂದು ನಿರಂತರವಾಗಿ ಸ್ಮರಿಸಿ. ಹೀಗೆ ಶಿವನು ಹೇಳಲು ಪರಮಾತ್ಮನಲ್ಲಿ ದೇವತೆಗಳಿಗಿದ್ದ ಭಕ್ತಿಯು ಬಹಳವಾಗಿ ಕೃಷ್ಣನನ್ನು ನಮಸ್ಕರಿಸಿದರು.

**ಉಕ್ತೈರನ್ಯೈಶ್ಚ ಗಿರಿಶವಾಕ್ಯೈಸ್ತತ್ತ್ವವಿನಿರ್ಣಯೈಃ ।**
**ಕೃಷ್ಣಸ್ಯೈವ ಗುಣಾಖ್ಯಾನೈಃ ಪುನರಿಂದ್ರಾದಿದೇವತಾಃ ।**
**ಜ್ಞಾನಾಭಿವೃದ್ಧಿಮಗಮನ್ ಪುರಾಪಿ ಜ್ಞಾನಿನೋಽಧಿಕಮ್ ॥ ೧೭೫ ॥**

**ಪದಚ್ಛೇದ** :- ಉಕ್ತೈಃ, ಅನ್ಯೈಃ, ಚ, ಗಿರಿಶವಾಕ್ಯೈಃ, ತತ್ತ್ವವಿನಿರ್ಣಯೈಃ, ಕೃಷ್ಣಸ್ಯ, ಏವ, ಗುಣಾಖ್ಯಾನೈಃ, ಪುನಃ, ಇಂದ್ರಾದಿದೇವತಾಃ, ಜ್ಞಾನಾಭಿವೃದ್ಧಿಮ್, ಅಗಮನ್, ಪುರಾ, ಅಪಿ, ಜ್ಞಾನಿನಃ, ಅಧಿಕಮ್.

**ಅರ್ಥ** :- **ಇಂದ್ರಾದಿದೇವತಾಃ** = ಇಂದ್ರಮೊದಲಾದ ದೇವತೆಗಳು; **ತತ್ತ್ವವಿನಿರ್ಣಯೈಃ** = ತತ್ತ್ವನಿರ್ಣಯಿಸುವ; **ಕೃಷ್ಣಸ್ಯ ಏವ** = ಶ್ರೀಕೃಷ್ಣನದ್ದೇ; **ಗುಣಾಖ್ಯಾನೈಃ** = ಗುಣಗಳನ್ನು ತಿಳಿಸುವ; **ಉಕ್ತೈಃ** = ಹೇಳಲ್ಪಟ್ಟ; **ಅನ್ಯೈಃ ಚ** = ಬೇರೆಯದ್ದಾದ; **ಗಿರಿಶವಾಕ್ಯೈಃ** = ಶಿವನಮಾತುಗಳಿಂದ; **ಪುರಾ** = (ಶಿವನ ಈ ಉಪದೇಶಕ್ಕಿಂತ) ಹಿಂದೆ; **ಜ್ಞಾನಿನಃ ಅಪಿ** = ಜ್ಞಾನಿಗಳಾಗಿದ್ದರೂ ಕೂಡ;

**ಪುನಃ** = ಮತ್ತೊಮ್ಮೆ; **ಅಧಿಕಂ** = ಬಹಳವಾಗಿ; **ಜ್ಞಾನಾಭಿವೃದ್ಧಿಂ** = ಜ್ಞಾನದ ಅಭಿವೃದ್ಧಿಯನ್ನು; **ಅಗಮನ್** = ಪಡೆದರು.

**ತಾತ್ಪರ್ಯ :-** ಶಿವನ ಈ ಉಪದೇಶಕ್ಕಿಂತ ಮೊದಲೇ ಇಂದ್ರಾದಿ ದೇವತೆಗಳು ತತ್ತ್ವಜ್ಞಾನಿಗಳಾಗಿದ್ದರು. ಆದರೂ ತತ್ತ್ವವನ್ನು ನಿರ್ಣಯಿಸುವ ಕೃಷ್ಣನ ಗುಣಗಳನ್ನೇ ಪ್ರತಿಪಾದಿಸುವ ಶಿವನ ಮತ್ತಷ್ಟು ವಾಕ್ಯಗಳಿಂದ ಅಧಿಕವಾಗಿ ಜ್ಞಾನವನ್ನು ಬೆಳೆಸಿಕೊಂಡರು.

**ಸರ್ವದೇವೋತ್ತಮಂ ತಂ ಹಿ ಜಾನಂತ್ಯೇವ ಸುರಾಃ ಸದಾ ।**
**ತಥಾಪಿ ತತ್ಪ್ರಮಾಣಾನಾಂ ಬಹುತ್ವಾತ್ ಯೋತ್ರ ಸಂಶಯಾಃ ।**
**ಯುಕ್ತಿಮಾತ್ರೇ ತೇಪಿ ರುದ್ರವಾಕ್ಯಾದಪಗತಾಸ್ತದಾ ॥ ೧೭೬ ॥**

**ಪದಚ್ಛೇದ :- ಸರ್ವದೇವೋತ್ತಮಂ, ತಂ, ಹಿ, ಜಾನಂತಿ, ಏವ, ಸುರಾಃ, ಸದಾ, ತಥಾ, ಅಪಿ, ತತ್ಪ್ರಮಾಣಾನಾಂ, ಬಹುತ್ವಾತ್, ಯಃ, ಅತ್ರ, ಸಂಶಯಾಃ, ಯುಕ್ತಿಮಾತ್ರೇ, ತೇ, ಅಪಿ, ರುದ್ರವಾಕ್ಯಾತ್, ಅಪಗತಾಃ, ತದಾ.**

**ಅರ್ಥ :- ಸುರಾಃ** = ದೇವತೆಗಳು; **ಸದಾ** = ಯಾವಾಗಲೂ; **ತಂ** = ಆ ವಿಷ್ಣುವನ್ನು; **ಸರ್ವದೇವೋತ್ತಮಂ** = ಎಲ್ಲ ದೇವತೆಗಳಿಗಿಂತ ಉತ್ತಮನನ್ನಾಗಿ; **ಜಾನಂತಿ ಏವ** = ತಿಳಿದೇ ಇದ್ದಾರೆ; **ಹಿ** = ನಿಶ್ಚಯವು. **ತಥಾ ಅಪಿ** = ಆದರೂ ಕೂಡ; **ತತ್ಪ್ರಮಾಣಾನಾಂ** = ವಿಷ್ಣುಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಪ್ರಮಾಣಗಳಿಗೆ; **ಬಹುತ್ವಾತ್** = ಬಹುತ್ವವಿರುವುದರಿಂದ; **ಅತ್ರ** = ಈ ಪ್ರಮಾಣಗಳ ವಿಷಯದಲ್ಲಿ; **ಯುಕ್ತಿಮಾತ್ರೇ** = ಕೇವಲ ಯುಕ್ತಿಯಲ್ಲಿ; **ಯೇ** = ಯಾವ; **ಸಂಶಯಾಃ** = ಸಂಶಯಗಳು; **(ಆಸನ್)** = ಇದ್ದವೋ; **ತೇ ಅಪಿ** = ಆ ಸಂಶಯಗಳೂ ಕೂಡ; **ರುದ್ರವಾಕ್ಯಾತ್** = ಶಿವನ ಮಾತಿನಿಂದ; **ತದಾ** = ಆಗ; **ಅಪಗತಾಃ** = ನಾಶವಾದವು.

**ತಾತ್ಪರ್ಯ :-** ದೇವತೆಗಳು ಎಂದಿಗೂ ಪರಮಾತ್ಮನನ್ನು ಸರ್ವೋತ್ತಮನೆಂದೇ ತಿಳಿದಿರುತ್ತಾರೆ. ಆದರೂ ಪರಮಾತ್ಮನ ಸರ್ವೋತ್ತಮತ್ವವನ್ನು ತಿಳಿಸುವ ಪ್ರಮಾಣಗಳು ಅನೇಕವಿರುವುದರಿಂದ ಕೆಲವು ಶುಷ್ಕಯುಕ್ತಿವಿಷದಲ್ಲಿ ಸಂಶಗಳಿದ್ದವು. ಆ ಸಂಶಯಗಳೂ ಕೂಡ ಈಗ ಶಿವನ ಉಪದೇಶದಿಂದ ನಾಶವನ್ನು ಹೊಂದಿದವು.

**ವಿಶೇಷವಿಚಾರ** :- ಪರಮಾತ್ಮನನ್ನು ಪ್ರತಿಪಾದಿಸುವ ಪ್ರಮಾಣಗಳು ಅನೇಕವಿದ್ದು ಮೇಲ್ನೋಟಕ್ಕೆ ಪ್ರಮಾಣಗಳು ಪರಮಾತ್ಮನಲ್ಲಿ ಅಣುತ್ವ ಮಹತ್ವ ಮೊದಲಾದ ವಿರುದ್ಧಧರ್ಮಗಳನ್ನು ಪ್ರತಿಪಾದಿಸುತ್ತಿವೆ ಎಂದು ತೋರುತ್ತದೆ. ಆಗ ಪರಮಾತ್ಮನು ಮಹತ್ ಆದ್ದರಿಂದ ಅಣುವಾಗಲು ಸಾಧ್ಯವಿಲ್ಲ ಮುಂತಾದ ಶುಷ್ಕತರ್ಕಗಳ ವಿಷಯದಲ್ಲಿ ಸಂಶಯ ಬರುತ್ತದೆ. ಆ ಸಂಶಯವೂ ಈಗ ಪರಿಹಾರವಾಯಿತು. (ಜನಾರ್ದನೀಯ).

**ತತಃ ಕೃಷ್ಣಃ ಸುತವರಂ ತ್ವತ್ತ ಆದಾಸ್ಯ ಇತ್ಯಜಃ ।**
**ಯದುಕ್ತವಾಂಛಿವಂ ಪೂರ್ವಂ ಸತ್ಯಂ ಕರ್ತುಂ ತದಬ್ರವೀತ್ ॥ ೧೭೭ ॥**

ಪದಚ್ಛೇದ :- **ತತಃ, ಕೃಷ್ಣಃ, ಸುತವರಂ, ತ್ವತ್ತಃ, ಆದಾಸ್ಯೇ, ಇತಿ, ಅಜಃ, ಯತ್, ಉಕ್ತವಾನ್, ಶಿವಂ, ಪೂರ್ವಂ, ಸತ್ಯ, ಕರ್ತುಂ, ತತ್, ಅಬ್ರವೀತ್.**

**ಅರ್ಥ** :- **ತತಃ** = ಶಿವನು ಬಂದ ನಂತರ; **ಅಜಃ** = ಜನನರಹಿತನಾದ; **ಕೃಷ್ಣಃ** = ಶ್ರೀಕೃಷ್ಣನು; **(ಅಹಂ)** = ನಾನು; **ತ್ವತ್ತಃ** = ನಿನ್ನಿಂದ; **ಸುತವರಂ** = ಶ್ರೇಷ್ಠ ಮಗನನ್ನು; **ಆದಾಸ್ಯೇ** = ಸ್ವೀಕರಿಸುತ್ತೇನೆ; **ಇತಿ** = ಎಂದು; **ಪೂರ್ವಂ** = ಹಿಂದೆ; **ಶಿವಂ (ಪ್ರತಿ)** = ಶಿವನನ್ನು ಕುರಿತು **ಯತ್** = ಯಾವ; ಮಾತನ್ನು; **ಉಕ್ತವಾನ್** = ಆಡಿದ್ದನೋ; **ತತ್** = ಅದನ್ನು; **ಸತ್ಯಂ** = ಸತ್ಯವನ್ನಾಗಿ; **ಕರ್ತುಂ** = ಮಾಡಲು; **ಅಬ್ರವೀತ್** = ಮಾತನಾಡಿದನು.

**ತಾತ್ಪರ್ಯ** :- ಜನನರಹಿತನಾದ ಕೃಷ್ಣನು ಹಿಂದೆ ಶಿವನಿಗೆ ನಿನ್ನಿಂದ ಪುತ್ರಶ್ರೇಷ್ಠನನ್ನು ಸ್ವೀಕರಿಸುತ್ತೇನೆ ಎಂದು ಹೇಳಿದ್ದ ಮಾತನ್ನು ಸತ್ಯವನ್ನಾಗಿಸಲು ಶಿವನನ್ನು ಕುರಿತು ಮಾತನಾಡಿದನು.

**ಪುತ್ರಂ ದೇಹೀತಿ ಸೋಪ್ಯಾಹ ಪೂರ್ವಮೇವ ಸುತಸ್ತವ ।**
**ಜಾತಃ ಪ್ರದ್ಯುಮ್ನನಾಮಾ ಯಃ ಸ ಮದ್ದತ್ತಃ ಪ್ರವಾದತಃ ॥ ೧೭೮ ॥**

ಪದಚ್ಛೇದ :- **ಪುತ್ರಂ, ದೇಹಿ, ಇತಿ, ಸಃ, ಅಪಿ, ಆಹ, ಪೂರ್ವಮ್, ಏವ, ಸುತಃ, ತವ, ಜಾತಃ, ಪ್ರದ್ಯುಮ್ನನಾಮಾ, ಯಃ, ಸಃ, ಮದ್ದತಃ, ಪ್ರವಾದತಃ.**

**ಅರ್ಥ** :- **ಪುತ್ರಂ** = ಮಗನನ್ನು; **ದೇಹಿ** = ಕೊಡು; **ಇತಿ** = ಎಂದು; **(ಅಬ್ರವೀತ್)** = ಹೇಳಿದನು. **ಸಃ ಅಪಿ** = ಆ ಶಿವನೂ ಕೂಡ; **ಆಹ** =

ಹೇಳಿದನು. **ಪೂರ್ವಮ್ ಏವ** = ಈ ಹಿಂದೆಯೇ; **ಪ್ರದ್ಯುಮ್ನನಾಮಾ** = ಪ್ರದ್ಯುಮ್ನನೆಂಬ ಹೆಸರಿನ; **ಯಃ** = ಯಾವ; **ಪುತ್ರಃ** = ಮಗನು; **ಜಾತಃ** = ಹುಟ್ಟಿದ್ದನೋ; **ಸಃ** = ಆ ಪ್ರದ್ಯುಮ್ನನು; **ಪ್ರವಾದತಃ** = ಲೋಕದ ವ್ಯವಹಾರಕ್ಕಾಗಿ; **ಮದ್ದತ್ತಃ** = ನನ್ನಿಂದ ಕೊಡಲ್ಪಟ್ಟವನಾಗಿ; **(ಸ್ಯಾತ್)** = ಆಗಲಿ.

**ತಾತ್ಪರ್ಯ** :- ಶ್ರೀಕೃಷ್ಣನು ಮಗನನ್ನು ಕೊಡು ಎಂದು ಶಿವನನ್ನು ಕೇಳಿದಾಗ ಶಿವನು ಹೇಳುತ್ತಾನೆ ಈ ಹಿಂದೆಯೇ ಏಕಲವ್ಯನನ್ನು ಎದುರಿಸುವ ಸಲುವಾಗಿ ಪ್ರದ್ಯುಮ್ನನೆಂಬ ಮಗನು ನಿನ್ನಿಂದ ಹುಟ್ಟಿದ್ದಾನೆ. ಆದರೂ ಲೋಕದ ದೃಷ್ಟಿಯಿಂದ ನಾನು ಕೊಟ್ಟಂತೆ ಮಾಡುತ್ತೇನೆ. (ವಾಸ್ತವವಾಗಿ ನಾನು ಕೊಟ್ಟವನಲ್ಲ)

**ಪುರಾ ದಗ್ಧೋ ಮಯಾ ಕಾಮಸ್ತದಾಯಾಚತ ಮಾಂ ರತಿಃ ।**
**ದೇಹಿ ಕಾಂತಂ ಮಮೇತ್ಯೇವ ತದಾ ತಾಮಹಮಬ್ರವಮ್ ॥ ೧೭೯ ॥**

**ಪದಚ್ಛೇದ :– ಪುರಾ, ದಗ್ಧಃ, ಮಯಾ, ಕಾಮಃ, ತದಾ, ಅಯಾಚತ, ಮಾಂ, ರತಿಃ, ದೇಹಿ, ಕಾಂತಂ, ಮಮ, ಇತಿ, ಏವ, ತದಾ, ತಾಮ್, ಅಹಮ್, ಅಬ್ರವಮ್.**

**ಅರ್ಥ** :- **ಪುರಾ** = ಹಿಂದೆ; **ಮಯಾ** = ನನ್ನಿಂದ; **(ಯದಾ)** = ಯಾವಾಗ; **ಕಾಮಃ** = ಮನ್ಮಥನು; **ದಗ್ಧಃ** = ಸುಡಲ್ಪಟ್ಟನೋ; **ತದಾ** = ಆಗ; **ರತಿಃ** = ರತಿದೇವಿಯು; **ಮಮ** = ನನ್ನ; **ಕಾಂತಂ** = ಪತಿಯನ್ನು; **ದೇಹಿ** = ಕೊಡು; **ಇತಿ** = ಎಂದು; **ಮಾಮ್ ಏವ** = ನನ್ನನ್ನೇ; **ಅಯಾಚತ** = ಬೇಡಿದಳು; **ತದಾ** = ಆಗ; **ಅಹಂ** = ನಾನು; **ತಾಂ (ಪ್ರತಿ)** = ಆ ರತಿಯನ್ನು ಕುರಿತು; **ಅಬ್ರವಮ್** = ಹೇಳಿದೆನು.

**ತಾತ್ಪರ್ಯ** :- ಶಿವನು ಶ್ರೀಕೃಷ್ಣನಿಗೆ ಹೇಳುತ್ತಿದ್ದಾನೆ ಹಿಂದೊಮ್ಮೆ ನಾನು ಕಾಮನನ್ನು ಸುಟ್ಟಾಗ ಅವನ ಸತಿಯಾದ ರತಿದೇವಿಯು ನನ್ನನ್ನೇ ಪತಿಯನ್ನು ಕೊಡು ಎಂದು ಯಾಸಿದಳು. ಆಗ ನಾನು ಅವಳಿಗೆ ಹೇಳಿದೆ...

**ಉತ್ಪತ್ಸ್ಯತೇ ವಾಸುದೇವಾದ್ ಯದಾ ತಂ ಪತಿಮಾಪ್ಸ್ಯಸಿ ।**
**ಇತ್ಯತೋಽಸೌ ಮಯಾ ದತ್ತ ಇವ ದೇವ ತ್ವದಾಜ್ಞಯಾ ॥ ೧೮೦ ॥**

**ಪದಚ್ಛೇದ :-** ಉತ್ಪತ್ಸ್ಯತೇ, ವಾಸುದೇವಾತ್, ಯದಾ, ತಂ, ಪತಿಮ್, ಆಪ್ಸ್ಯಸಿ, ಇತಿ, ಅತಃ, ಅಸೌ, ಮಯಾ, ದತ್ತಃ, ಇವ, ದೇವ, ತ್ವದಾಜ್ಞಯಾ.

**ಅರ್ಥ :-** **ಯದಾ** = ಯಾವಾಗ; **(ಕಾಮಃ)** = ಕಾಮನು; **ವಾಸುದೇವಾತ್** = ಶ್ರೀಕೃಷ್ಣನಿಂದ; **ಉತ್ಪತ್ಸ್ಯತೇ** = ಹುಟ್ಟುತ್ತಾನೋ; **(ತದಾ)** = ಆಗ; **ತಂ** = ಆ; **ಪತಿಂ** = ಗಂಡನಾದ ಕಾಮನನ್ನು; **ಆಪ್ಸ್ಯಸಿ** = ಹೊಂದುವಿ; **ಇತಿ** = ಎಂದು (ನಾನು ರತಿದೇವಿಗೆ ಹೇಳಿದೆನು). **ಅತಃ** = ಆದ್ದರಿಂದ; **ದೇವ** = ಹೇ ದೇವನೆ!; **ತ್ವದಾಜ್ಞಯಾ** = ನಿನ್ನ ಅಪ್ಪಣೆಯಿಂದ; **ಅಸೌ** = ಈ ಪ್ರದ್ಯುಮ್ನನು; **ಮಯಾ** = ನನ್ನಿಂದ; **ದತ್ತಃ ಇವ** = ಕೊಡಲ್ಪಟ್ಟವನಂತೆ; **(ಸ್ಯಾತ್)** = ಆಗಲಿ.

**ತಾತ್ಪರ್ಯ :-** ಶಿವನು ಹೇಳುತ್ತಿದಾನೆ ಹೀಗೆ ಪತಿಯನ್ನು ಪ್ರಾರ್ಥಿಸಿದ ರತಿಗೆ ನಾನು ಹೇಳಿದೆ - ಮುಂದೆ ಶ್ರೀಕೃಷ್ಣನ ಮಗನಾಗಿ ನಿನ್ನ ಪತಿಯು ಹುಟ್ಟಲಿದ್ದಾನೆ. ಆಗ ನಿನ್ನ ಪತಿಯು ನಿನಗೆ ಸಿಗಲಿದ್ದಾನೆ ಎಂದು. ಆದ್ದರಿಂದ ಹೇ ದೇವನೇ! ಆ ಕಾಮನೇ ನಿನಗೆ ಮಗನನ್ನಾಗಿ ನಿನ್ನ ಅಪ್ಪಣೆಯಂತೆ ನಿನಗೆ ಕೊಟ್ಟಂತೆ ಮಾಡಿದ್ದೇನೆ.

**ದಾಸೋಸ್ಮಿ ತವ ದೇವೇಶ ಪಾಹಿ ಮಾಂ ಶರಣಾಗತಮ್ ।**
**ಇತ್ಯುಕ್ತ್ವಾಭಿಪ್ರಣಮ್ಯೈನಂ ಪುನರಾಹ ಸುರಾನ್ ಹರಃ ।। ೧೮೧ ।।**

**ಪದಚ್ಛೇದ :-** ದಾಸಃ, ಅಸ್ಮಿ, ತವ, ದೇವೇಶ, ಪಾಹಿ, ಮಾಂ,, ಶರಣಾಗತಮ್, ಇತಿ, ಉಕ್ತ್ವಾ, ಅಭಿಪ್ರಣಮ್ಯ, ಏನಂ, ಪುನಃ, ಆಹ, ಸುರಾನ್, ಹರಃ.

**ಅರ್ಥ :-** **ದೇವೇಶ** = ಹೇ ದೇವತೆಗಳ ಸ್ವಾಮಿಯೇ!; **(ಅಹಂ)** = ನಾನು; **ತವ** = ನಿನ್ನ; **ದಾಸಃ** = ಸೇವಕನು; **ಅಸ್ಮಿ** = ಆಗಿದ್ದೇನೆ. **ಶರಣಾಗತಂ** = ಶರಣುಬಂದ; **ಮಾಂ** = ನನ್ನನ್ನು; **ಪಾಹಿ** = ರಕ್ಷಿಸು; **ಇತಿ** = ಎಂದು; **ಹರಃ** = ಶಿವನು; **ಉಕ್ತ್ವಾ** = ಹೇಳಿ; **ಏನಂ** = ಈ ಕೃಷ್ಣನನ್ನು; **ಅಭಿಪ್ರಣಮ್ಯ** = ಭಕ್ತಿಯಿಂದ ನಮಸ್ಕರಿಸಿ; **ಸುರಾನ್ (ಪ್ರತಿ)** = ದೇವತೆಗಳನ್ನು ಕುರಿತು; **ಪುನಃ** = ಮತ್ತೊಮ್ಮೆ; **ಆಹ** = ಹೇಳಿದನು.

ತಾತ್ಪರ್ಯ :- ಹೇ ಪರಮಾತ್ಮ! ನಾನು ನಿನ್ನ ಸೇವಕನಾಗಿದ್ದೇನೆ, ಮೊರೆಹೊಂದಿರುವ ನನ್ನನ್ನು ನೀನು ರಕ್ಷಿಸು ಎಂದು ಪರಮಾತ್ಮನಿಗೆ ಭಕ್ತಿಪೂರ್ವಕ ನಮಸ್ಕರಿಸಿ ಶಿವನು ಪುನಃ ದೇವತೆಗಳಿಗೆ ಹೇಳುತ್ತಾನೆ.

**ಯದರ್ಥಮೇಷ ಆಯಾತಃ ಕೇಶವಃ ಶೃಣುತಾಮರಾಃ ।**
**ಯೋಸುರೋ ವಕ್ರನಾಮಾಸೀದವಧ್ಯೋ ಬ್ರಹ್ಮಣೋ ವರಾತ್ ।**
**ತದಾ ಜಾತಾದ್ ವಾಸುದೇವಪುತ್ರಾತ್ ಕಾಮಾದೃತೇ ಕ್ವಚಿತ್ ॥ ೧೮೨ ॥**

**ತಂ ಹಂತುಮೇವ ಪುತ್ರಂ ಸ್ವಂ ಪ್ರದ್ಯುಮ್ನಮುದರೇರ್ಪ್ಯ ಚ ।**
**ಆಯಾತ ಇಹ ತಂ ಚಾಪಿ ದದಾಹ ಸ್ವೋದರಾತ್ ಸುತಮ್ ।**
**ನಿಸ್ಸಾರಯಿತ್ವಾ ಕಕ್ಷಂ ಚ ದಗ್ಧಂ ಪಶ್ಯತ ದೇವತಾಃ ॥ ೧೮೩ ॥**

**ಪದಚ್ಛೇದ :- ಯದರ್ಥಮ್, ಏಷಃ, ಆಯಾತಃ, ಕೇಶವಃ, ಶ್ರುಣುತ, ಅಮರಾಃ, ಯಃ, ಅಸುರಃ, ವಕ್ರನಾಮಾ, ಆಸೀತ್, ಅವಧ್ಯಃ, ಬ್ರಹ್ಮಣಃ, ವರಾತ್. ತಂ, ಹಂತುಮ್, ಏವ, ಪುತ್ರಂ, ಸ್ವಂ, ಪ್ರದ್ಯುಮ್ನಮ್, ಉದರೇ, ಅರ್ಪ್ಯ, ಚ, ಆಯಾತಃ, ಇಹ, ತಂ, ಚ, ಅಪಿ, ದದಾಹ, ಸ್ವೋದರಾತ್, ಸುತಂ, ನಿಸ್ಸಾರಯಿತ್ವಾ, ಕಕ್ಷಂ, ಚ, ದಗ್ಧಂ, ಪಶ್ಯತ, ದೇವತಾಃ.**

**ಅರ್ಥ :-** **ಅಮರಾಃ** = ಹೇ ದೇವತೆಗಳೇ!; **ಏಷಃ** = ಈ; **ಕೇಶವಃ** = ಶ್ರೀಕೃಷ್ಣನು; **ಯದರ್ಥಮ್** = ಯಾವ ಪ್ರಯೋಜನಕ್ಕಾಗಿ; **ಆಯಾತಃ** = ಬಂದನೋ; **(ತತ್)** = ಅದನ್ನು; **ಶ್ರುಣುತ** = ಕೇಳಿರಿ. **ಬ್ರಹ್ಮಣಃ** = ಚತುರ್ಮುಖಬ್ರಹ್ಮದೇವರ; **ವರಾತ್** = ವರದಿಂದ; **ತದಾ** = ತತ್ಕ್ಷಣದಲ್ಲಿಯೇ; **ಜಾತಾತ್** = ಹುಟ್ಟಿದ; **ವಾಸುದೇವಪುತ್ರಾತ್** = ಶ್ರೀಕೃಷ್ಣನ ಮಗನಾದ; **ಕಾಮಾತ್** = ಕಾಮನ ಅವತಾರನಾದ ಪ್ರದ್ಯುಮ್ನನಿಂದ; **ವಿನಾ** = ಬಿಟ್ಟು; **ಕ್ವಚಿತ್** = ಯಾವ ರೀತಿಯಿಂದಲೂ; **ಅವಧ್ಯಃ** = ಅವಧ್ಯನಾದ; **ಯಃ** = ಯಾವ; **ವೃಕನಾಮಾ** = ವೃಕನೆಂಬ ಹೆಸರುಳ್ಳ; **ಅಸುರಃ** = ಅಸುರನು; **ಆಸೀತ್** = ಇದ್ದನೋ; **ತಂ** = ಆ ಅಸುರನನ್ನು; **ಹಂತುಮ್ ಏವ** = ಸಂಹರಿಸಲೆಂದೇ; **ಸ್ವಂ** = ತನ್ನ; **ಪುತ್ರಂ** = ಮಗನಾದ; **ಪ್ರದ್ಯುಮ್ನಂ** = ಪ್ರದ್ಯುಮ್ನನನ್ನು; **ಉದರೇ** = ಹೃದಯದಲ್ಲಿ; **ಅರ್ಪ್ಯ** = ಇಟ್ಟು; **ಚ** = ಮತ್ತು; **ಇಹ** = ಇಲ್ಲಿಗೆ; **ಆಯಾತಃ (ಸನ್)** = ಬಂದವನಾಗಿ; **ಸ್ವೋದರಾತ್** = ತನ್ನ

ಹೃದಯದಿಂದ; **ಸುತಂ** = ಮಗನನ್ನು; **ನಿಸ್ಸಾರಯಿತ್ವಾ** = ಹೊರಹಾಕಿ; **ಕಕ್ಷಂ ಚ** = (ಕಾಣುತ್ತಿರುವ ಈ) ವನವನ್ನು; **ತಂ ಚ ಅಪಿ** = ಆ ವಕ್ರನಾಮಕ ಅಸುರನನ್ನೂ ಕೂಡ; **ದದಾಹ** = ಸುಟ್ಟನು. **ದೇವತಾಃ** = ಹೇ ದೇವತೆಗಳೆ!; **ದಗ್ಧಂ** = ಸುಡಲ್ಪಟ್ಟ; **ಕಕ್ಷಂ** = (ಈ) ವನವನ್ನು; **ಪಶ್ಯತ** = ನೋಡಿ.

**ತಾತ್ಪರ್ಯ** :- ಶಿವನು ಹೇಳುತ್ತಿದ್ದಾನೆ- ಹೇ ದೇವತೆಗಳೆ! ಶ್ರೀಕೃಷ್ಣನು ಇಲ್ಲಿಗೆ ಏತಕ್ಕಾಗಿ ಬಮ್ದನೆಂದು ಹೇಳುತ್ತೇನೆ ಕೇಳಿ. ಹಿಂದೆ ವೃಕ ಎಂಬ ಅಸುರನಿದ್ದ. ಅವನಿಗೆ ಪರಮಾತ್ಮನಿಂದ ತತ್ಕ್ಷಣದಲ್ಲಿಯೇ ಹುಟ್ಟೀದ ಮಗನನ್ನು ಬಿಟ್ಟು ಬೇರೆರೀತಿಯಿಂದ ಮರಣ ಬರಬಾರದೆಂದು ಬ್ರಹ್ಮದೇವರಿಂದ ಅವಧ್ಯತ್ವ ವರವಿತ್ತು. ಆದ್ದರಿಂದಲೇ ಶ್ರೀಕೃಷ್ಣನು ತನ್ನ ಮಗನಾದ ಈ ಮೊದಲೇ ಕಾಮನ ಅವತಾರನಾದ ಪ್ರದ್ಯುಮ್ನನನ್ನು ತನ್ನ ಹೃದಯದೊಳಗೆ ಇಟ್ಟು ಕೊಂಡು ಇಲ್ಲಿಗೆ ಬಂದನು. ನಂತರ ತತ್ಕ್ಷಣದಲ್ಲಿಯೇ ಆ ಪ್ರದ್ಯುಮ್ನನನ್ನು ಹೊರಹಾಕಿ ಇಲ್ಲಿ ಇರುವ ಕಾಡನ್ನು ಮತ್ತು ಆ ವೃಕನೆಂಬ ಸುರನನ್ನು ಕೊಂದನು. ಈ ಕಾಡು ಸುಟ್ಟಿರುವುದನ್ನು ನೀವೇ ನೋಡಿ.

**ಜ್ವಾಲಾಮಾಲಾಕರಾಲೇನ ಸ್ವತೇಜೋವರ್ಧಿತೇನ ಚ ।**
**ಪ್ರದ್ಯುಮ್ನೇನೈವ ತಂ ದೈತ್ಯಂ ದಗ್ಧ್ವಾ ವನಸಮನ್ವಿತಮ್ ।**
**ಪುನಶ್ಚಸ್ವೋದರೇ ಪುತ್ರಂ ಸ್ಥಾಪಯಾಮಾಸ ಕೇಶವಃ ॥ ೧೮೪ ॥**

ಪದಚ್ಛೇದ :- ಜ್ವಾಲಮಾಲಾಕರಾಲೇನ, ಸ್ವತೇಜೋವರ್ಧಿತೇನ, ಚ, ಪ್ರದ್ಯುಮ್ನೇನ, ಏವ, ತಂ, ದೈತ್ಯಂ, ದಗ್ಧ್ವಾ, ವನಸಮನ್ವಿತಮ್, ಪುನಃ, ಚ, ಸ್ವೋದರೇ, ಪುತ್ರಂ, ಸ್ಥಾಪಯಾಮಾಸ, ಕೇಶವಃ.

**ಅರ್ಥ** :- **ಕೇಶವಃ** = ಶ್ರೀಕೃಷ್ಣನು; **ಜ್ವಾಲಾಮಾಲಾಕರಾಲೇನ** = ಪ್ರದ್ಯುಮ್ನನ ಸ್ವಾಭವಿಕತೇಜಸ್ಸಿನ ಸಮೂಹದಿಂದ ಕ್ರೂರವಾದ; **ಚ** = ಮತ್ತು; **ಸ್ವತೇಜೋವರ್ಧಿತೇನ ಚ** = ತನ್ನ(ಶ್ರೀಕೃಷ್ಣನ) ತೇಜಸ್ಸಿನಿಂದಲೂ ಪೂರಿತವಾದ; **ಪ್ರದ್ಯುಮ್ನೇನ ಏವ** = ಪ್ರದ್ಯುಮ್ನನಿಂದಲೇ; **ವನಸಮನ್ವಿತಂ** = ವನದಿಂದ ಸಹಿತವಾದ; **ತಂ** = ಆ; **ದೈತ್ಯಂ** = ದೈತ್ಯನಾದ ವೃಕನನ್ನು; **ದಗ್ಧ್ವಾ** = ಸುಟ್ಟು; **ಪುನಃ ಚ** = ಮತ್ತೆ; **ಪುತ್ರಂ** = ಮಗನನ್ನು; **ಸ್ವೋದರೇ** = ತನ್ನ ಹೃದಯದಲ್ಲಿಯೇ; **ಸ್ಥಾಪಯಾಮಾಸ** = ಇಟ್ಟನು.

ತಾತ್ಪರ್ಯ :- ಹೇ ಪರಮಾತ್ಮ! ನಾನು ನಿನ್ನ ಸೇವಕನಾಗಿದ್ದೇನೆ, ಮೊರೆಹೊಂದಿರುವ ನನ್ನನ್ನು ನೀನು ರಕ್ಷಿಸು ಎಂದು ಪರಮಾತ್ಮನಿಗೆ ಭಕ್ತಿಪೂರ್ವಕ ನಮಸ್ಕರಿಸಿ ಶಿವನು ಪುನಃ ದೇವತೆಗಳಿಗೆ ಹೇಳುತ್ತಾನೆ.

**ಯದರ್ಥಮೇಷ ಆಯಾತಃ ಕೇಶವಃ ಶೃಣುತಾಮರಾಃ ।**
**ಯೋಸುರೋ ವಕ್ರನಾಮಾಸೀದವಧ್ಯೋ ಬ್ರಹ್ಮಣೋ ವರಾತ್ ।**
**ತದಾ ಜಾತಾದ್ ವಾಸುದೇವಪುತ್ರಾತ್ ಕಾಮಾದೃತೇ ಕ್ವಚಿತ್ ॥ ೧೮೨ ॥**

**ತಂ ಹಂತುಮೇವ ಪುತ್ರಂ ಸ್ವಂ ಪ್ರದ್ಯುಮ್ನಮುದರೇರ್ಪ್ಯ ಚ ।**
**ಆಯಾತ ಇಹ ತಂ ಚಾಪಿ ದದಾಹ ಸ್ವೋದರಾತ್ ಸುತಮ್ ।**
**ನಿಸ್ಸಾರಯಿತ್ವಾ ಕಕ್ಷಂ ಚ ದಗ್ಧಂ ಪಶ್ಯತ ದೇವತಾಃ ॥ ೧೮೩ ॥**

**ಪದಚ್ಛೇದ :-** ಯದರ್ಥಮ್, ಏಷಃ, ಆಯಾತಃ, ಕೇಶವಃ, ಶೃಣುತ, ಅಮರಾಃ, ಯಃ, ಅಸುರಃ, ವಕ್ರನಾಮಾ, ಆಸೀತ್, ಅವಧ್ಯಃ, ಬ್ರಹ್ಮಣಃ, ವರಾತ್. ತಂ, ಹಂತುಮ್, ಏವ, ಪುತ್ರಂ, ಸ್ವಂ, ಪ್ರದ್ಯುಮ್ನಮ್, ಉದರೇ, ಅರ್ಪ್ಯ, ಚ, ಆಯಾತಃ, ಇಹ, ತಂ, ಚ, ಅಪಿ, ದದಾಹ, ಸ್ವೋದರಾತ್, ಸುತಂ, ನಿಸ್ಸಾರಯಿತ್ವಾ, ಕಕ್ಷಂ, ಚ, ದಗ್ಧಂ, ಪಶ್ಯತ, ದೇವತಾಃ.

**ಅರ್ಥ :-** **ಅಮರಾಃ** = ಹೇ ದೇವತೆಗಳೇ!; **ಏಷಃ** = ಈ; **ಕೇಶವಃ** = ಶ್ರೀಕೃಷ್ಣನು; **ಯದರ್ಥಮ್** = ಯಾವ ಪ್ರಯೋಜನಕ್ಕಾಗಿ; **ಆಯಾತಃ** = ಬಂದನೋ; **(ತತ್)** = ಅದನ್ನು; **ಶೃಣುತ** = ಕೇಳಿರಿ. **ಬ್ರಹ್ಮಣಃ** = ಚತುರ್ಮುಖಬ್ರಹ್ಮದೇವರ; **ವರಾತ್** = ವರದಿಂದ; **ತದಾ** = ತತ್ಕ್ಷಣದಲ್ಲಿಯೇ; **ಜಾತಾತ್** = ಹುಟ್ಟಿದ; **ವಾಸುದೇವಪುತ್ರಾತ್** = ಶ್ರೀಕೃಷ್ಣನ ಮಗನಾದ; **ಕಾಮಾತ್** = ಕಾಮನ ಅವತಾರನಾದ ಪ್ರದ್ಯುಮ್ನನಿಂದ; **ವಿನಾ** = ಬಿಟ್ಟು; **ಕ್ವಚಿತ್** = ಯಾವ ರೀತಿಯಿಂದಲೂ; **ಅವಧ್ಯಃ** = ಅವಧ್ಯನಾದ; **ಯಃ** = ಯಾವ; **ವೃಕನಾಮಾ** = ವೃಕನೆಂಬ ಹೆಸರುಳ್ಳ; **ಅಸುರಃ** = ಅಸುರನು; **ಆಸೀತ್** = ಇದ್ದನೋ; **ತಂ** = ಆ ಅಸುರನನ್ನು; **ಹಂತುಮ್ ಏವ** = ಸಂಹರಿಸಲೆಂದೇ; **ಸ್ವಂ** = ತನ್ನ; **ಪುತ್ರಂ** = ಮಗನಾದ; **ಪ್ರದ್ಯುಮ್ನಂ** = ಪ್ರದ್ಯುಮ್ನನನ್ನು; **ಉದರೇ** = ಹೃದಯದಲ್ಲಿ; **ಅರ್ಪ್ಯ** = ಇಟ್ಟು; **ಚ** = ಮತ್ತು; **ಇಹ** = ಇಲ್ಲಿಗೆ; **ಆಯಾತಃ (ಸನ್)** = ಬಂದವನಾಗಿ; **ಸ್ವೋದರಾತ್** = ತನ್ನ

ಹೃದಯದಿಂದ; ಸುತಂ = ಮಗನನ್ನು; ನಿಸ್ಸಾರಯಿತ್ವಾ = ಹೊರಹಾಕಿ; ಕಕ್ಷಂ ಚ = (ಕಾಣುತ್ತಿರುವ ಈ) ವನವನ್ನು; ತಂ ಚ ಅಪಿ = ಆ ವಕ್ರನಾಮಕ ಅಸುರನನ್ನೂ ಕೂಡ; ದದಾಹ = ಸುಟ್ಟನು. ದೇವತಾಃ = ಹೇ ದೇವತೆಗಳೆ!; ದಗ್ಧಂ = ಸುಡಲ್ಪಟ್ಟ; ಕಕ್ಷಂ = (ಈ) ವನವನ್ನು; ಪಶ್ಯತ = ನೋಡಿ.

ತಾತ್ಪರ್ಯ :- ಶಿವನು ಹೇಳುತ್ತಿದ್ದಾನೆ- ಹೇ ದೇವತೆಗಳೆ! ಶ್ರೀಕೃಷ್ಣನು ಇಲ್ಲಿಗೆ ಏತಕ್ಕಾಗಿ ಬಮ್ದನೆಂದು ಹೇಳುತ್ತೇನೆ ಕೇಳಿ. ಹಿಂದೆ ವೃಕ ಎಂಬ ಅಸುರನಿದ್ದ. ಅವನಿಗೆ ಪರಮಾತ್ಮನಿಂದ ತತ್ಕ್ಷಣದಲ್ಲಿಯೇ ಹುಟ್ಟೀದ ಮಗನನ್ನು ಬಿಟ್ಟು ಬೇರೆರೀತಿಯಿಂದ ಮರಣ ಬರಬಾರದೆಂದು ಬ್ರಹ್ಮದೇವರಿಂದ ಅವಧ್ಯತ್ವ ವರವಿತ್ತು. ಆದ್ದರಿಂದಲೇ ಶ್ರೀಕೃಷ್ಣನು ತನ್ನ ಮಗನಾದ ಈ ಮೊದಲೇ ಕಾಮನ ಅವತಾರನಾದ ಪ್ರದ್ಯುಮ್ನನನ್ನು ತನ್ನ ಹೃದಯದೊಳಗೆ ಇಟ್ಟು ಕೊಂಡು ಇಲ್ಲಿಗೆ ಬಂದನು. ನಂತರ ತತ್ಕ್ಷಣದಲ್ಲಿಯೇ ಆ ಪ್ರದ್ಯುಮ್ನನನ್ನು ಹೊರಹಾಕಿ ಇಲ್ಲಿ ಇರುವ ಕಾಡನ್ನು ಮತ್ತು ಆ ವೃಕನೆಂಬ ಸುರನನ್ನು ಕೊಂದನು. ಈ ಕಾಡು ಸುಟ್ಟಿರುವುದನ್ನು ನೀವೇ ನೋಡಿ.

**ಜ್ವಾಲಾಮಾಲಾಕರಾಲೇನ ಸ್ವತೇಜೋವರ್ಧಿತೇನ ಚ ।**
**ಪ್ರದ್ಯುಮ್ನೇನೈವ ತಂ ದೈತ್ಯಂ ದಗ್ಧ್ವಾ ವನಸಮನ್ವಿತಮ್ ।**
**ಪುನಶ್ಚಸ್ವೋದರೇ ಪುತ್ರಂ ಸ್ಥಾಪಯಾಮಾಸ ಕೇಶವಃ ॥ ೧೮೪ ॥**

ಪದಚ್ಛೇದ :- ಜ್ವಾಲಮಾಲಾಕರಾಲೇನ, ಸ್ವತೇಜೋವರ್ಧಿತೇನ, ಚ, ಪ್ರದ್ಯುಮ್ನೇನ, ಏವ, ತಂ, ದೈತ್ಯಂ, ದಗ್ಧ್ವಾ, ವನಸಮನ್ವಿತಮ್, ಪುನಃ, ಚ, ಸ್ವೋದರೇ, ಪುತ್ರಂ, ಸ್ಥಾಪಯಾಮಾಸ, ಕೇಶವಃ.

ಅರ್ಥ :- ಕೇಶವಃ = ಶ್ರೀಕೃಷ್ಣನು; ಜ್ವಾಲಾಮಾಲಾಕರಾಲೇನ = ಪ್ರದ್ಯುಮ್ನನ ಸ್ವಾಭವಿಕತೇಜಸ್ಸಿನ ಸಮೂಹದಿಂದ ಕ್ರೂರವಾದ; ಚ = ಮತ್ತು; ಸ್ವತೇಜೋವರ್ಧಿತೇನ ಚ = ತನ್ನ(ಶ್ರೀಕೃಷ್ಣನ) ತೇಜಸ್ಸಿನಿಂದಲೂ ಪೂರಿತವಾದ; ಪ್ರದ್ಯುಮ್ನೇನ ಏವ = ಪ್ರದ್ಯುಮ್ನನಿಂದಲೇ; ವನಸಮನ್ವಿತಂ = ವನದಿಂದ ಸಹಿತವಾದ; ತಂ = ಆ; ದೈತ್ಯಂ = ದೈತ್ಯನಾದ ವೃಕನನ್ನು; ದಗ್ಧ್ವಾ = ಸುಟ್ಟು; ಪುನಃ ಚ = ಮತ್ತೆ; ಪುತ್ರಂ = ಮಗನನ್ನು; ಸ್ವೋದರೇ = ತನ್ನ ಹೃದಯದಲ್ಲಿಯೇ; ಸ್ಥಾಪಯಾಮಾಸ = ಇಟ್ಟನು.

ತಾತ್ಪರ್ಯ :- ಈ ಅಸುರನ ಸಂಹಾರವನ್ನು ಪರಮಾತ್ಮನೇ ಮಾಡಿಸಿದ್ದಾನೆ. ಪ್ರದ್ಯುಮ್ನನ ಕ್ರೂರತೇಜಸ್ಸಿನ ಸಮೂಹವನ್ನು ತನ್ನ ತೇಜಸ್ಸಿನಿಂದ ಸಮರ್ಥವನ್ನಾಗಿಸಿ ಈ ಕಾಡಿನೊಂದಿಗೆ ಆ ವೃಕಾಸುರನನ್ನು ಸಂಹರಿಸಿದನು(ಪರಮಾತ್ಮನೇ ಅವನನ್ನು ಸಂಹರಿಸಿದನು. ಪ್ರದ್ಯುಮ್ನನು ಸಂಹರಿಸಲು ಸಾಧನನಷ್ಟೆ). ಮತ್ತೆ ಪ್ರದ್ಯುಮ್ನನನ್ನು ತನ್ನ ಹೃದಯದೊಳಗೆ ಇಟ್ಟುಕೊಂಡನು.

**ಸದ್ಯೋಗರ್ಭಂ ಪುನಸ್ತಂ ಚ ರುಕ್ಮಿಣ್ಯಾಂ ಜನಯಿಷ್ಯತಿ ।**
**ಪೂರ್ವವತ್ ಕ್ಷಣಮಾತ್ರೇಣ ಯುವಾ ಚ ಸ ಭವಿಷ್ಯತಿ ॥ ೧೮೫ ॥**

ಪದಚ್ಛೇದ :- ಸದ್ಯೋಗರ್ಭಂ, ಪುನಃ, ತಂ, ಚ, ರುಕ್ಮಿಣ್ಯಾಂ, ಜನಯಿಷ್ಯತಿ, ಪೂರ್ವವತ್, ಕ್ಷಣಮಾತ್ರೇಣ, ಯುವಾ, ಚ, ಸಃ, ಭವಿಷ್ಯತಿ.

ಅರ್ಥ :- **ಸದ್ಯೋಗರ್ಭಂ** = ಆ ಕ್ಷಣದಲ್ಲಿಯೇ ಗರ್ಭವನ್ನು ಸೇರಿದ; **ತಂ** = ಆ ಪ್ರದ್ಯುಮ್ನನನ್ನು; **ಪುನಃ** = ಮತ್ತೊಮ್ಮೆ; **ರುಕ್ಮಿಣ್ಯಾಂ ಚ** = ರುಕ್ಮಿಣೀದೇವಿಯಲ್ಲೂ; **ಜನಯಿಷ್ಯತಿ** = ಹುಟ್ಟಿಸುತ್ತಾನೆ. **ಸಃ** = ಆ ಪ್ರದ್ಯುಮ್ನನು; **ಪೂರ್ವವತ್** = ಹಿಂದಿನವತ್ತೆ; **ಕ್ಷಣಮಾತ್ರೇಣ** = ಕ್ಷಣದಲ್ಲಿಯೇ; **ಯುವಾ ಚ** = ಯುವಕನೂ ಕೂಡ; **ಭವಿಷ್ಯತಿ** = ಆಗುತ್ತಾನೆ.

ತಾತ್ಪರ್ಯ :- ವೃಕನ ಸಂಹಾರದ ನಂತರ ತತ್ಕ್ಷಣವೇ ಶ್ರೀಕೃಷ್ಣನ ಗರ್ಭವನ್ನು ಸೇರಿದ ಆ ಪ್ರದ್ಯುಮ್ನನನ್ನು ಪರಮಾತ್ಮ ಮತ್ತೊಮ್ಮೆ ರುಕ್ಮಿಣೀದೇವಿಯಲ್ಲೂ ಮಗನಾಗಿ ಮುಂದೆ ಹುಟ್ಟಿಸುತ್ತಾನೆ. ಹಾಗೆ ಹುಟ್ಟಿದ ಪ್ರದ್ಯುಮ್ನನು ಹಿಂದಿನಂತೆ ಕೂಡಲೇ ಯುವಕನಾಗುತ್ತಾನೆ.

**ದೃಷ್ಟಮೇತನ್ನಾರದಾದ್ಯೈರ್ಮುನಿಭಿಃ ಸರ್ವಮೇವ ಚ ।**
**ಏವಂ ಕ್ರೀಡತ್ಯಯಂ ದೇವಃ ಪೂರ್ಣೈಶ್ವರ್ಯೇಣ ಕೇವಲಮ್ ।**
**ಇತ್ಯುಕ್ತೇ ಕೇಶವಂ ನೇಮುರ್ದೇವಾಃ ಶಕ್ರಪುರೋಗಮಾಃ ॥ ೧೮೬ ॥**

ಪದಚ್ಛೇದ :- ದೃಷ್ಟಮ್, ಏತತ್, ನಾರದಾದ್ಯೈಃ, ಮುನಿಭಿಃ, ಸರ್ವಮ್, ಏವ, ಚ, ಏವಂ, ಕ್ರೀಡತಿ, ಅಯಂ, ದೇವಃ, ಪೂರ್ಣೈಶ್ವರ್ಯೇಣ, ಕೇವಲಮ್, ಇತಿ, ಉಕ್ತೇ, ಕೇಶವಂ, ನೇಮುಃ, ದೇವಾಃ, ಶಕ್ರಪುರೋಗಮಾಃ.

**ಅರ್ಥ** :- **ಏತತ್** = ಈ; **ಸರ್ವಮ್ ಏವ** = ಎಲ್ಲವೂ ಕೂಡ; **ನಾರದಾದ್ಯೈಃ** = ನಾರದ್ರೇ ಮೊದಲಾದ; **ಮುನಿಭಿಃ** = ಋಷಿಗಳಿಂದ; **ದೃಷ್ಟಂ ಚ** = ನೋಡಲ್ಪಟ್ಟಿದೆ ಕೂಡ. **ಏವಂ** = ಹೀಗೆ; **ಅಯಂ** = ಈ; **ದೇವಃ** = ಕ್ರೀಡಾದಿಗುಣವಿಶಿಷ್ಟನಾದ ಪರಮಾತ್ಮನು; **ಕೇವಲಂ** = ಸ್ವರೂಪಭೂತವಾದ; **ಪೂರ್ಣೈಶ್ವರ್ಯೇಣ** = ಪೂರ್ಣವಾದ ಚಿದಾನಂದಾದಿ ಐಶ್ವರ್ಯದೊಂದಿಗೆ; **ಕ್ರೀಡತಿ** = ಆಟವಾಡುತ್ತಾನೆ; **ಇತಿ** = ಎಂದು; **(ಶಿವೇನ)** = ಶಿವನಿಂದ; **ಉಕ್ತೇ (ಸತಿ)** = ಹೇಳಲ್ಪಡುತ್ತಿರಲು; **ಶಕ್ರಪುರೋಗಮಾಃ** = ಇಂದ್ರಮೊದಲಾದ; **ದೇವಾಃ** = ದೇವತೆಗಳು; **ಕೇಶವಂ** = ಶ್ರೀಕೃಷ್ಣನನ್ನು; **ನೇಮುಃ** = ನಮಸ್ಕರಿಸಿದರು.

**ತಾತ್ಪರ್ಯ** :- ಇವೆಲ್ಲವನ್ನೂ ನಾರದಾದಿ ಮುನಿಗಳು ಕಣ್ಣಾರೆ ಕಂಡಿದ್ದಾರೆ. ಹೀಗೆ ಪರಮಾತ್ಮನು ತನ್ನ ಸ್ವರೂಪಭೂತವಾದ ಪೂರ್ಣವಾದ ಜ್ಞಾನಾನಂದಾದಿ ಗುಣಗಳೊಂದಿಗೆ ಕ್ರೀಡಿಸುತ್ತಾನೆ. ಹೀಗೆ ಶಿವನು ಹೇಳಲು ಇಂದ್ರಾದಿ ದೇವತೆಗಳು ಶ್ರೀಕೃಷ್ಣನನ್ನು ನಮಸ್ಕರಿಸಿದರು.

**ವಿಶೇಷವಿಚಾರ** :- ರುದ್ರದೇವರು ಹಿಂದೆ ಕೃಷ್ಣನು ವೃಕಾಸುರನನ್ನು ಕೊಂದದ್ದಕ್ಕೆ ಸುಟ್ಟಿರುವ ಕಾಡನ್ನು ತೋರಿಸಿ ಅನುಮಾನ ಪ್ರಮಾಣವನ್ನು ಹೇಳಿದರು. ಈಗ ನಾರದಾದಿಗಳ ಪ್ರತ್ಯಕ್ಷವನ್ನೂ ಪ್ರಮಾಣವಾಗಿ ಹೇಳುತ್ತಿದ್ದಾರೆ. (ಜನಾರ್ದನೀಯ).

**ತತೋ ಹರಿರ್ಬ್ರಹ್ಮಸುರೇಂದ್ರಮುಖ್ಯೈಃ**
**ಸುರೈಃ ಸ್ತುತೋ ಗರುಡಸ್ಕಂಧಸಂಸ್ಥಃ ।**
**ಪುನಃಪುನಃ ಪ್ರಣತಃ ಶಂಕರೇಣ ಸ್ತುತಸ್ತೃತೀಯೇಹ್ನಿ**
**ನಿಜಾಂ ಪುರೀಮಗಾತ್ ॥ ೧೮೭ ॥**

ಪದಚ್ಛೇದ :- ತತಃ, ಹರಿಃ, ಬ್ರಹ್ಮಸುರೇಂದ್ರಮುಖ್ಯೈಃ, ಸುರೈಃ, ಸ್ತುತಃ, ಗರುಡಸ್ಕಂಧಸಂಸ್ಥಃ, ಪುನಃಪುನಃ, ಪ್ರಣತಃ, ಶಂಕರೇಣ, ಸ್ತುತಃ, ತೃತೀಯೇ, ಅಹ್ನಿ, ನಿಜಾಂ, ಪುರೀಮ್, ಅಗಾತ್.

**ಅರ್ಥ** :- **ತತಃ** = ಆ ನಂತರ; **ಬ್ರಹ್ಮಸುರೇಂದ್ರಮುಖ್ಯೈಃ** = ಬ್ರಹ್ಮ-ದೇವೇಂದ್ರಮೊದಲಾದ; **ಸುರೈಃ** = ದೇವತೆಗಳಿಂದ; **ಸ್ತುತಃ** =

ಸ್ತುತಿಸಲ್ಪಟ್ಟ; ಪುನಃಪುನಃ = ಮತ್ತೆಮತ್ತೆ; ಶಂಕರೇಣ = ಶಿವನಿಂದ; ಪ್ರಣತಃ = ನಮಸ್ಕರಿಸಲ್ಪಟ್ಟ; ಸ್ತುತಃ = ಸ್ತುತಿಸಲ್ಪಟ್ಟ; ಹರಿಃ = ಶ್ರೀಕೃಷ್ಣನು; ತೃತೀಯೇ = ಮೂರನೆಯ; ಅಹ್ನಿ = ದಿವಸದಂದು; ಗರುಡಸ್ಕಂಧಸಂಸ್ಥಃ (ಸನ್) = ಗರುಡನ ಹೆಗಲ ಮೇಲೆ ಕುಳಿತವನಾಗಿ; ನಿಜಾಂ = ತನ್ನ; ಪುರೀಂ (ಪ್ರತಿ) = ಪಟ್ಟಣವಾದ ದ್ವಾರಕೆಯನ್ನು ಕುರಿತಿ; ಅಗಾತ್ = ಹೊರಟನು.

ತಾತ್ಪರ್ಯ :- ಆ ನಂತರ ಬ್ರಹ್ಮ-ಇಂದ್ರಾದಿ ದೇವತೆಗಳು ಪರಮಾತ್ಮನ ಸ್ತೋತ್ರವನ್ನು ಮಾಡುತ್ತಾರೆ. ಶಿವನೂ ಪುನಃಪುನಃ ನಮಸ್ಕರಿಸುತ್ತಾನೆ ಹಗೌ ಸ್ತೋತ್ರಮಾಡುತ್ತಾನೆ. ಮೂರು ದಿನದ ನಂತರ ಪರಮಾತ್ಮನು ಗರುಡನ ಹೆಗಲೇರಿ ದ್ವಾರಕೆಗೆ ಹೊರಡುತ್ತಾನೆ.

**ಕೃಷ್ಣೇ ಪ್ರಯಾತೇ ನಿಲಯಂ ಪುರದ್ವಿಷೋ ರಾತ್ರೌ**
**ಪೌಂಡ್ರೋ ವಾಸುದೇವಃ ಸಮಾಗಾತ್ ।**
**ಸಹೈಕಲವ್ಯೇನ ನಿಜೇನ ಮಾತುಃ ಪಿತ್ರಾ**
**ತಥಾಕ್ಷೌಹಿಣೀಕತ್ರಯೇಣ ॥ ೧೮೮ ॥**

ಪದಚ್ಛೇದ :- ಕೃಷ್ಣೇ, ಪ್ರಯಾತೇ, ನಿಲಯಂ, ಪುರದ್ವಿಷಃ, ರಾತ್ರೌ, ಪೌಂಡ್ರೋ, ವಾಸುದೇವಃ, ಸಮಾಗಾತ್, ಸಹ, ಏಕಲವ್ಯೇನ, ನಿಜೇನ, ಮಾತುಃ, ಪಿತ್ರಾ, ತಥಾ, ಅಕ್ಷೌಹಿಣೀಕತ್ರಯೇಣ.

ಅರ್ಥ :- **ಪುರದ್ವಿಷಃ** = ತ್ರಿಪುರಾಸುರರ ದ್ವೇಷಿಯಾದ ಶಿವನ; **ನಿಲಯಂ (ಪ್ರತಿ)** = ವಾಸಸ್ಥಾನವಾದ ಕೈಲಾಸವನ್ನು ಕುರಿತು; **ಕೃಷ್ಣೇ** = ಶ್ರೀಕೃಷ್ಣನು; **ಪ್ರಯಾತೇ (ಸತಿ)** = ಹೊರಡಲು; **ರಾತ್ರೌ** = (ಎರಡನೆಯ ದಿನದ) ರಾತ್ರಿಯಲ್ಲಿ; **ಪೌಂಡ್ರಃ ವಾಸುದೇವಃ** = ಪೌಂಡ್ರಕವಾಸುದೇವನು; **ಏಕಲವ್ಯೇನ** = ಏಕಲವ್ಯನೊಂದಿಗೆ; **ನಿಜೇನ** = ತನ್ನವನಾದ; **ಮಾತುಃ** = ತಾಯಿಯ; **ಪಿತ್ರಾ** = ತಂದೆಯಾದ ಕಾಶಿರಾಜನಿಂದ; **ತಥಾ** = ಹಾಗೆಯೇ; **ಅಕ್ಷೌಹಿಣೀಕತ್ರಯೇಣ** = ಮೂರು ಅಕ್ಷೌಹಿಣೀಸೇನೆಯಿಂದ; **ಸಹ** = ಕೂಡಿಕೊಂಡು; **(ದ್ವಾರಕಾಂ ಪ್ರತಿ)** = ದ್ವಾರಕೆಯನ್ನು ಕುರಿತು; **ಸಮಾಗಾತ್** = ಬಂದನು.

ತಾತ್ಪರ್ಯ :- ಶ್ರೀಕೃಷ್ಣನು ತಪಸ್ಸಿನ ನೆಪದಿಂದ ಕೈಲಾಸಕ್ಕೆ ಹೋದ ನಂತರ ಎರಡನೆಯದಿನ ರಾತ್ರಿಯಂದು ಪೌಂಡ್ರಕವಾಸುದೇವನು ಏಕಲವ್ಯ, ತನ್ನ ಮಾತಾಮಹನಾದ ಕಾಶಿರಾಜ ಮತ್ತು ಮೂರು ಅಕ್ಷೌಹಿಣೀ ಸೇನೆಯೊಂದಿಗೆ ದ್ವಾರಕೆಗೆ ಹೊರಟನು.

ಪುರೀಂ ಪ್ರಭಂಜಂತಮಮುಂ ವಿದಿತ್ವಾ
ಸರಾಮಶೈನೇಯಯದುಪ್ರವೀರಾಃ ।
ಸಂಯೋಧಯಮಾಸುರಥಾಭ್ಯವರ್ಷ-
ಚ್ಛರೈರ್ನಿಷಾದಾಧಿಪ ಏಕಲವ್ಯಃ ॥ ೧೮೯ ॥

ಪದಚ್ಛೇದ :- ಪುರೀಂ, ಪ್ರಭಂಜಂತಮ್ , ಅಮುಂ, ವಿದಿತ್ವಾ, ಸರಾಮಶೈನೇಯ ಯದುಪ್ರವೀರಾಃ, ಸಂಯೋಧಯಾಮಾಸುಃ, ಅಥ, ಅಭ್ಯವರ್ಷತ್, ಶರೈಃ, ನಿಷಾದಾಧಿಪಃ, ಏಕಲವ್ಯಃ.

ಅರ್ಥ :- ಪುರೀಂ = ದ್ವಾರಕಾ ಪಟ್ಟವನ್ನು; ಪ್ರಭಂಜಂತಂ = ನಾಶಮಾಡುತ್ತಿರುವ; ಅಮುಂ = ಈ ಪೌಂಡ್ರಕವಾಸುದೇವನನ್ನು; ಸರಾಮಶೈನೇಯಯದುಪ್ರವೀರಾಃ = ಬಲರಾಮು-ಸಾತ್ಯಕಿಗಳೊಂದಿಗೆ ಸಹಿತರಾದ ಯದುಶ್ರೇಷ್ಠರು; ವಿದಿತ್ವಾ = ತಿಳಿದು; ಸಂಯೋಧಯಾಮಾಸುಃ = ಚೆನ್ನಾಗಿ ಯುದ್ಧಮಾಡಿದರು. ಅಥ = ಆ ನಂತರ; ನಿಷಾದಾಧಿಪಃ = ಬೇಡರ ಅಧಿಪತಿಯಾದ; ಏಕಲವ್ಯಃ = ಏಕಲವ್ಯನು; ಶರೈಃ = ಬಾಣಗಳಿಂದ; ಅಭ್ಯವರ್ಷತ್ = ಸುತ್ತಲೂ ಮಳೆಗರೆದನು.

ತಾತ್ಪರ್ಯ :- ಪೌಂಡ್ರಕ ವಾಸುದೇವನು ದ್ವಾರಕಾಪಟ್ಟವನ್ನು ನಾಶಮಾಡುತ್ತಿರುವುದನ್ನು ತಿಳಿದ ಯಾದವ ಶ್ರೇಷ್ಠರು ಬಲರಾಮು-ಸಾತ್ಯಕಿಗಳೊಂದಿಗೆ ಬಂದು ಯುದ್ಧವನ್ನು ಮಾಡಿದರು. ಆಗ ಏಕಲವ್ಯನು ಸುತ್ತಲೂ ಬಾಣಗಳ ಮಳೆಯನ್ನು ಸುರಿಸಲು ಆರಂಭಿಸಿದನು.

ತದಸ್ತ್ರಸ್ತ್ರೈಃ ಸಹಸಾ ವಿಷಣ್ಣಾ
ಯದುಪ್ರವೀರಾ ವಿಗತಪ್ರದೀಪಾಃ ।
ಸಹೈವ ರಾಮೇಣ ಶಿನೇಶ್ಚ ನಪ್ತ್ರಾ
ಸಮಾವಿಶನ್ ಸ್ವಾಂ ಪುರಮೇವ ಸರ್ವೇ ॥ ೧೯೦ ॥

ಸ್ತುತಿಸಲ್ಪಟ್ಟ; **ಪುನಃಪುನಃ** = ಮತ್ತೆಮತ್ತೆ; **ಶಂಕರೇಣ** = ಶಿವನಿಂದ; **ಪ್ರಣತಃ** = ನಮಸ್ಕರಿಸಲ್ಪಟ್ಟ; **ಸ್ತುತಃ** = ಸ್ತುತಿಸಲ್ಪಟ್ಟ; **ಹರಿಃ** = ಶ್ರೀಕೃಷ್ಣನು; **ತೃತೀಯೇ** = ಮೂರನೆಯ; **ಅಹ್ನಿ** = ದಿವಸದಂದು; **ಗರುಡಸ್ಕಂಧಸಂಸ್ಥಃ (ಸನ್)** = ಗರುಡನ ಹೆಗಲ ಮೇಲೆ ಕುಳಿತವನಾಗಿ; **ನಿಜಾಂ** = ತನ್ನ; **ಪುರೀಂ (ಪ್ರತಿ)** = ಪಟ್ಟಣವಾದ ದ್ವಾರಕೆಯನ್ನು ಕುರಿತಿ; **ಅಗಾತ್** = ಹೊರಟನು.

**ತಾತ್ಪರ್ಯ** :- ಆ ನಂತರ ಬ್ರಹ್ಮ-ಇಂದ್ರಾದಿ ದೇವತೆಗಳು ಪರಮಾತ್ಮನ ಸ್ತೋತ್ರವನ್ನು ಮಾಡುತ್ತಾರೆ. ಶಿವನೂ ಪುನಃಪುನಃ ನಮಸ್ಕರಿಸುತ್ತಾನೆ ಹಗೌ ಸ್ತೋತ್ರಮಾಡುತ್ತಾನೆ. ಮೂರು ದಿನದ ನಂತರ ಪರಮಾತ್ಮನು ಗರುಡನ ಹೆಗಲೇರಿ ದ್ವಾರಕೆಗೆ ಹೊರಡುತ್ತಾನೆ.

**ಕೃಷ್ಣೇ ಪ್ರಯಾತೇ ನಿಲಯಂ ಪುರದ್ವಿಷೋ ರಾತ್ರೌ**
**ಪೌಂಡ್ರೋ ವಾಸುದೇವಃ ಸಮಾಗಾತ್ ।**
**ಸಹೈಕಲವ್ಯೇನ ನಿಜೇನ ಮಾತುಃ ಪಿತ್ರಾ**
**ತಥಾಕ್ಷೌಹಿಣೀಕತ್ರಯೇಣ ॥ ೧೮೮ ॥**

**ಪದಚ್ಛೇದ** :– ಕೃಷ್ಣೇ, ಪ್ರಯಾತೇ, ನಿಲಯಂ, ಪುರದ್ವಿಷಃ, ರಾತ್ರೌ, ಪೌಂಡ್ರೋ, ವಾಸುದೇವಃ, ಸಮಾಗಾತ್, ಸಹ, ಏಕಲವ್ಯೇನ, ನಿಜೇನ, ಮಾತುಃ, ಪಿತ್ರಾ, ತಥಾ, ಅಕ್ಷೌಹಿಣೀಕತ್ರಯೇಣ.

**ಅರ್ಥ** :- **ಪುರದ್ವಿಷಃ** = ತ್ರಿಪುರಾಸುರರ ದ್ವೇಷಿಯಾದ ಶಿವನ; **ನಿಲಯಂ (ಪ್ರತಿ)** = ವಾಸಸ್ಥಾನವಾದ ಕೈಲಾಸವನ್ನು ಕುರಿತು; **ಕೃಷ್ಣೇ** = ಶ್ರೀಕೃಷ್ಣನು; **ಪ್ರಯಾತೇ (ಸತಿ)** = ಹೊರಡಲು; **ರಾತ್ರೌ** = (ಎರಡನೆಯ ದಿನದ) ರಾತ್ರಿಯಲ್ಲಿ; **ಪೌಂಡ್ರಃ ವಾಸುದೇವಃ** = ಪೌಂಡ್ರಕವಾಸುದೇವನು; **ಏಕಲವ್ಯೇನ** = ಏಕಲವ್ಯನೊಂದಿಗೆ; **ನಿಜೇನ** = ತನ್ನವನಾದ; **ಮಾತುಃ** = ತಾಯಿಯ; **ಪಿತ್ರಾ** = ತಂದೆಯಾದ ಕಾಶಿರಾಜನಿಂದ; **ತಥಾ** = ಹಾಗೆಯೇ; **ಅಕ್ಷೌಹಿಣೀಕತ್ರಯೇಣ** = ಮೂರು ಅಕ್ಷೌಹಿಣೀಸೇನೆಯಿಂದ; **ಸಹ** = ಕೂಡಿಕೊಂಡು; **(ದ್ವಾರಕಾಂ ಪ್ರತಿ)** = ದ್ವಾರಕೆಯನ್ನು ಕುರಿತು; **ಸಮಾಗಾತ್** = ಬಂದನು.

ತಾತ್ಪರ್ಯ :- ಶ್ರೀಕೃಷ್ಣನು ತಪಸ್ಸಿನ ನೆಪದಿಂದ ಕೈಲಾಸಕ್ಕೆ ಹೋದ ನಂತರ ಎರಡನೆಯದಿನ ರಾತ್ರಿಯಂದು ಪೌಂಡ್ರಕವಾಸುದೇವನು ಏಕಲವ್ಯ, ತನ್ನ ಮಾತಾಮಹನಾದ ಕಾಶಿರಾಜ ಮತ್ತು ಮೂರು ಅಕ್ಷೌಹಿಣೀ ಸೇನೆಯೊಂದಿಗೆ ದ್ವಾರಕೆಗೆ ಹೊರಟನು.

ಪುರೀಂ ಪ್ರಭಂಜಂತಮಮುಂ ವಿದಿತ್ವಾ
ಸರಾಮಶೈನೇಯಯದುಪ್ರವೀರಾಃ ।
ಸಂಯೋಧಯಮಾಸುರಥಾಭ್ಯವರ್ಷ-
ಚ್ಛರೈರ್ನಿಷಾದಾಧಿಪ ಏಕಲವ್ಯಃ ॥ ೧೮೯ ॥

ಪದಚ್ಛೇದ :- ಪುರೀಂ, ಪ್ರಭಂಜಂತಮ್ , ಅಮುಂ, ವಿದಿತ್ವಾ, ಸರಾಮಶೈನೇಯ ಯದುಪ್ರವೀರಾಃ, ಸಂಯೋಧಯಾಮಾಸುಃ, ಅಥ, ಅಭ್ಯವರ್ಷತ್, ಶರೈಃ, ನಿಷಾದಾಧಿಪಃ, ಏಕಲವ್ಯಃ.

ಅರ್ಥ :- ಪುರೀಂ = ದ್ವಾರಕಾ ಪಟ್ಟವನ್ನು; ಪ್ರಭಂಜಂತಂ = ನಾಶಮಾಡುತ್ತಿರುವ; ಅಮುಂ = ಈ ಪೌಂಡ್ರಕವಾಸುದೇವನನ್ನು; ಸರಾಮಶೈನೇಯಯದುಪ್ರವೀರಾಃ = ಬಲರಾಮ-ಸಾತ್ಯಕಿಗಳೊಂದಿಗೆ ಸಹಿತರಾದ ಯದುಶ್ರೇಷ್ಠರು; ವಿದಿತ್ವಾ = ತಿಳಿದು; ಸಂಯೋಧಯಾಮಾಸುಃ = ಚೆನ್ನಾಗಿ ಯುದ್ಧಮಾಡಿದರು. ಅಥ = ಆ ನಂತರ; ನಿಷಾದಾಧಿಪಃ = ಬೇಡರ ಅಧಿಪತಿಯಾದ; ಏಕಲವ್ಯಃ = ಏಕಲವ್ಯನು; ಶರೈಃ = ಬಾಣಗಳಿಂದ; ಅಭ್ಯವರ್ಷತ್ = ಸುತ್ತಲೂ ಮಳೆಗರೆದನು.

ತಾತ್ಪರ್ಯ :- ಪೌಂಡ್ರಕ ವಾಸುದೇವನು ದ್ವಾರಕಾಪಟ್ಟವನ್ನು ನಾಶಮಾಡುತ್ತಿರುವುದನ್ನು ತಿಳಿದ ಯಾದವ ಶ್ರೇಷ್ಠರು ಬಲರಾಮ-ಸಾತ್ಯಕಿಗಳೊಂದಿಗೆ ಬಂದು ಯುದ್ಧವನ್ನು ಮಾಡಿದರು. ಆಗ ಏಕಲವ್ಯನು ಸುತ್ತಲೂ ಬಾಣಗಳ ಮಳೆಯನ್ನು ಸುರಿಸಲು ಆರಂಭಿಸಿದನು.

ತದಸ್ತ್ರತ್ರಸ್ತ್ರೈಃ ಸಹಸಾ ವಿಷಣ್ಣಾ
ಯದುಪ್ರವೀರಾ ವಿಗತಪ್ರದೀಪಾಃ ।
ಸಹೈವ ರಾಮೇಣ ಶಿನೇಶ್ಚ ನಪ್ತ್ರಾ
ಸಮಾವಿಶನ್ ಸ್ವಾಂ ಪುರಮೇವ ಸರ್ವೇ ॥ ೧೯೦ ॥

ಪದಚ್ಛೇದ :- ತದಸ್ತ್ರಶಸ್ತ್ರೈಃ, ಸಹಸಾ, ವಿಷಣ್ಣಾಃ, ಯದುಪ್ರವೀರಾಃ, ವಿಗತಪ್ರದೀಪಾಃ, ಸಹ, ಏವ, ರಾಮೇಣ, ಶಿನೇಃ, ಚ, ನಪ್ತ್ರಾ ಸಮಾವಿಶನ್, ಸ್ವಾಂ, ಪುರಮ್, ಏವ, ಸರ್ವೇ.

ಅರ್ಥ :- ತದಸ್ತ್ರಶಸ್ತ್ರೈಃ = ಆ ಏಕಲವ್ಯನ ಅಸ್ತ್ರ-ಶಸ್ತ್ರಗಳಿಂದ; ವಿಗತಪ್ರದೀಪಾಃ = ನಾಶಮಾಡಲ್ಪಟ್ಟ ದೀಪವುಳ್ಳ; ಸಹಸಾ = ಒಮ್ಮೆಗೇ; ವಿಷಣ್ಣಾಃ = ವಿಷಾದಗೊಂಡ; ಸರ್ವೇ = ಎಲ್ಲ; ಯದುಪ್ರವೀರಾಃ = ಯಾದವಶ್ರೇಷ್ಠರು; ರಾಮೇಣ = ಬಲರಾಮನಿಂದ; ಶಿನೇಃ = ಶಿನಿಯ; ನಪ್ತ್ರಾ ಚ = ಮೊಮ್ಮಗನಾದ ಸಾತ್ಯಕಿಯಿಂದಲೂ; ಸಹ ಏವ = ಕೂಡಿಕೊಂಡೇ; ಸ್ವಾಂ = ತಮ್ಮ; ಪುರವ್ ಏವ = ಪಟ್ಟಣವನ್ನೇ; ಸಮಾವಿಶನ್ = ಪ್ರವೇಶಿಸಿದರು.

ತಾತ್ಪರ್ಯ :- ಏಕಲವ್ಯನು ಶಸ್ತ್ರಾಸ್ತ್ರಗಳ ಮಳೆಗರೆದು ದೀಪಗಳನ್ನು ನಾಶಮಾಡುತ್ತಾನೆ. (ಬೆಳಕಿದ್ದಲ್ಲಿ ನಮ್ಮನ್ನು ನೋಡಿ ಯಾದವರು ಶರಗಳಿಂದ ಹಿಂಸಿಸಿಯಾರು ಎಂಬ ಭಯದಿಂದ ಏಕಲವ್ಯನು ದೀಪಗಳನ್ನು ನಾಶಮಾಡುತ್ತಾನೆ-ವಾದಿರಾಜೀಯ) ಯಾದವರು ವಿಷಣ್ಣರಾಗಿ ಬಲರಾಮ ಸಾತ್ಯಕಿಗಳೊಂದಿಗೆ ಒಮ್ಮೆಲೇ ದ್ವಾರಕಾಪಟ್ಟವನ್ನು ಪ್ರವೇಶಮಾಡಿದರು.

ಪುನಃ ಸಮಾದಾಯ ತಥೋರುದೀಪಿಕಾ ಅಗ್ರೇ
ಸಮಾಧಾಯ ಚ ರೌಹಿಣೇಯಮ್ ।
ವಿನಿಸ್ಸೃತಾ ಆತ್ತಶಸ್ತ್ರಾಃ ಸ್ವಪುರ್ಯಾಃ ಸಿಂಹಾ
ಯಥಾ ಧರ್ಷಿತಾಃ ಸದ್ಗುಹಾಯಾಃ ॥ ೧೯೧ ॥

ಪದಚ್ಛೇದ :- ಪುನಃ, ಸಮಾದಾಯ, ತಥಾ, ಉರುದೀಪಿಕಾಃ, ಅಗ್ರೇ, ಸಮಾಧಾಯ, ಚ, ರೌಹಿಣೇಯಂ, ವಿನಿಸ್ಸೃತಾಃ, ಆತ್ತಶಸ್ತ್ರಾಃ, ಸ್ವಪುರ್ಯಾಃ, ಸಿಂಹಾಃ, ಯಥಾ, ಧರ್ಷಿತಾಃ, ಸದ್ಗುಹಾಃ.

ಅರ್ಥ :- ಪುನಃ = ಮತ್ತೆ; ಉರುದೀಪಿಕಾಃ = ಉತ್ಕೃಷ್ಟವಾದ ದೀವಟಿಗೆಗಳನ್ನು; ಸಮಾದಾಯ = ತೆಗೆದುಕೊಂಡೂ; ತಥಾ = ಹಾಗೆಯೇ; ರೌಹಿಣೇಯಂ ಚ = ರೋಹಿಣೀಸುತನಾದ ಬಲರಾಮನನ್ನಾದರೂ; ಅಗ್ರೇ = ಮುಂದೆ; ಸಮಾಧಾಯ = ಮಾಡಿಕೊಂಡು; ಆತ್ತಶಸ್ತ್ರಾಃ =

ಹಿಡಿದುಕೊಳ್ಳಲ್ಪಟ್ಟ ಶಸ್ತ್ರವುಳ್ಳವರಾಗಿ; **ಯಥಾ** = ಹೇಗೆ; **ಧರ್ಷಿತಾಃ** = ಕೆರಳಿಸಲ್ಪಟ್ಟ; **ಸಿಂಹಾಃ** = ಸಿಂಹಗಳು; **ಸದ್ಗುಹಾಯಾಃ** = ಶ್ರೇಷ್ಠಗುಹೆಯಿಂದ; **(ನಿರ್ಯಾಂತಿ)** = ಹೊರಬರುತ್ತವೋ; **(ತಥಾ)** = ಹಾಗೆ; **ಸ್ವಪುರ್ಯಾಃ** = ತಮ್ಮ ಪಟ್ಟಣದಿಂದ; **ನಿಸ್ಸೃತಾಃ** = ಹೊರಬಂದರು.

**ತಾತ್ಪರ್ಯ** :- ಮತ್ತೆ ಎಲ್ಲ ಯದುಪ್ರವೀರರೂ ಉತ್ಕೃಷ್ಟದೀವಟಿಗೆಗಳನ್ನಿ ಹಿಡಿದು ಬಲರಾಮನನ್ನು ಮುಂದೆಮಾಡಿಕೊಂಡು ಕೆರಳಿದ ಸಿಂಹಗಳು ಗುಹೆಯಿಂದೆಂಬಂತೆ ತಮ್ಮ ಪಟ್ಟಣದಿಂದ ಹೊರಬಂದರು.

**ಅಥಾಸಸಾದೈಕಲವ್ಯಂ ರಥೇನ ರಾಮಃ**
**ಶೈನೇಯಃ ಪೌಂಡ್ರಕಂ ವಾಸುದೇವಮ್ ।**
**ಅಯುದ್ಧ್ಯತಾಂ ತೌ ಸಾತ್ಯಕಿಃ ಪೌಂಡ್ರಕಶ್ಚ**
**ತಥಾನ್ಯೋನ್ಯಂ ವಿರಥಂ ಚಕ್ರತುಶ್ಚ ॥ ೧೯೨ ॥**

**ಪದಚ್ಛೇದ** :- **ಅಥ, ಆಸಸಾದ, ಏಕಲವ್ಯಂ, ರಥೇನ, ರಾಮಃ, ಶೈನೇಯಃ, ಪೌಂಡ್ರಕಂ, ವಾಸುದೇವಮ್, ಅಯುದ್ಧ್ಯತಾಂ, ತೌ, ಸಾತ್ಯಕಿಃ, ಪೌಂಡ್ರಕಃ, ಚ, ತಥಾ, ಅನ್ಯೋನ್ಯಂ, ವಿರಥಂ, ಚಕ್ರತುಃ, ಚ.**

**ಅರ್ಥ** :- **ಅಥ** = ಆ ನಂತರ; **ರಾಮಃ** = ಬಲರಾಮನು; **ರಥೇನ** = ರಥದಿಂದ; **ಏಕಲವ್ಯಂ** = ಏಕಲವ್ಯನನ್ನು; **ಆಸಸಾದ** = ಸಮೀಪಿಸಿದನು. **ಶೈನೇಯಃ** = ಸಾತ್ಯಕಿಯು; **ಪೌಂಡ್ರಕಂ ವಾಸುದೇವಂ** = ಪೌಂಡ್ರಕವಾಸು ದೇವನನ್ನು; **ಆಸಸಾದ** = ಸಮೀಪಿಸಿದನು. **ತೌ** = ಆ; **ಸಾತ್ಯಕಿಃ** = ಸಾತ್ಯಕಿಯು; **ಚ** = ಮತ್ತು; **ಪೌಂಡ್ರಕಃ** = ಪೌಂಡ್ರಕವಾಸುದೇವನು; **ಅಯುಧ್ಯತಾಂ** = ಯುಧಮಾಡಿದರು; **ತಥಾ** = ಹಾಗೆಯೇ; **ಅನ್ಯೋನ್ಯಂ** = ಪರಸ್ಪರವಾಗಿ; **ವಿರಥಂ ಚ** = ರಥರಹಿತನನ್ನಾಗಿಯೂ; **ಚಕ್ರತುಃ** = ಮಾಡಿದರು.

**ತಾತ್ಪರ್ಯ** :- ಆ ನಂತರ ಬಲರಾಮನು ಏಕಲವ್ಯನ ಸಮೀಪಕ್ಕೆ ಮತ್ತು ಸಾತ್ಯಕಿಯು ಪೌಂಡ್ರಕವಾಸುದೇವನ ಸಮೀಪಕ್ಕೆ ಹೋದರು. ಸಾತ್ಯಕಿ ಮತ್ತು ಪೌಂಡ್ರಕವಾಸುದೇವ ಇಬ್ಬರೂ ಯುದ್ಧವನ್ನು ಮಾಡಿದರು. ಹಾಗೆಯೇ ಪರಸ್ಪರ ರಥಗಳನ್ನು ನಾಶಮಾಡಿದರು.

**ತತೋ ಗದಾಯುದ್ಧಮಭೂತ್ ತಯೋರ್ದ್ವ-**
**ಯೋಸ್ತಥಾ ರಾಮಶ್ಚೈಕಲವ್ಯಶ್ಚ ವೀರೌ ।**
**ಕೃತ್ವಾನ್ಯೋನ್ಯಂ ವಿರಥಂ ಗದಾಭ್ಯಾಮ-**
**ಯುದ್ಧ್ಯತಾಂ ಜಾತದರ್ಪೌ ಬಲಾಗ್ರ್ಯೌ ॥ ೧೯೩ ॥**

ಪದಚ್ಛೇದ :- ತತಃ, ಗದಾಯುದ್ಧಮ್, ಅಭೂತ್, ತಯೋಃ, ದ್ವಯೋಃ, ತಥಾ, ರಾಮಃ, ಚ, ಏಕಲವ್ಯಃ, ಚ, ವೀರೌ, ಕೃತ್ವಾ, ಅನ್ಯೋನ್ಯಂ, ವಿರಥಂ, ಗದಾಭ್ಯಾಮ್, ಅಯುದ್ಧ್ಯತಾಂ, ಜಾತದರ್ಪೌ, ಬಲಾಗ್ರ್ಯೌ.

**ಅರ್ಥ** :- **ತತಃ** = ಆ ನಂತರ; **ತಯೋಃ** = ಆ; **ದ್ವಯೋಃ** = ಸಾತ್ಯಕಿ ಮತ್ತು ಪೌಂಡ್ರಕವಾಸುದೇವ ಇವರಿಬ್ಬರಿಗೆ; **ಗದಾಯುದ್ಧಮ್** = ಗದಾಯುದ್ಧವು; **ಅಭೂತ್** = ಆಯಿತು. **ತಥಾ** = ಹಾಗೆಯೇ; **ವೀರೌ** = ಪರಾಕ್ರಮಿಗಳಾದ; **ರಾಮಃ ಚ** = ರಾಮನೂ; **ಏಕಲವ್ಯಃ ಚ** = ಏಕಲವ್ಯನೂ; **ಅನ್ಯೋನ್ಯಂ** = ಪರಸ್ಪರ; **ವಿರಥಂ** = ವಿರಥನನ್ನಾಗಿ; **ಕೃತ್ವಾ** = ಮಾಡಿ; **ಬಲಾಗ್ರ್ಯೌ** = ಶ್ರೇಷ್ಠಬಲವುಳ್ಳ ಅವರಿಬ್ಬರು; **ಜಾತದರ್ಪೌ (ಸಂತೌ)** = ಹುಟ್ಟಲ್ಪಟ್ಟ ದರ್ಪವುಳ್ಳವರಾಗಿ; **ಗದಾಭ್ಯಾಂ** = ಗದೆಗಳಿಂದ; **ಅಯುದ್ಧ್ಯತಾಮ್** = ಯುದ್ಧಮಾಡಿದರು.

**ತಾತ್ಪರ್ಯ** :- ಸಾತ್ಯಕಿ-ಪೌಂಡ್ರಕರ ರಥವು ನಾಶವಾದ ನಂತರ ಇಬ್ಬರೂ ಗದಾಯುದ್ಧವನ್ನು ಮಾಡಿದರು. ಹಾಗೆಯೇ ಮಹಾಪರಾಕ್ರಮಿಗಳಾದ ಬಲರಾಮ ಮತ್ತು ಏಕಲವ್ಯರು ಪರಸ್ಪರ ರಥವನ್ನು ನಾಶಮಾಡಿ ನಾನೇ ಬಲವಂತ ನಾನೇ ಬಲವಂತ ಎಂದು ದರ್ಪಗೊಂಡವರಾಗಿ ಗದೆಯಳಿಂದ ಯುದ್ಧಮಾಡಿದರು.

**ತಸ್ಮಿನ್ ಕಾಲೇ ಕೇಶವೋ ವೈನತೇಯಮಾರುಹ್ಯಾ-**
**ಯಾದ್ ಯತ್ರ ತೇ ಯುದ್ಧಸಂಸ್ಥಾಃ ।**
**ದೃಷ್ಟ್ವಾ ಕೃಷ್ಣಂ ಹರ್ಷಸಂಪೂರಿತಾತ್ಮಾ ರಾಮೋ**
**ಹಂತುಂ ಚೈಕಲವ್ಯಂ ಸಮೈಚ್ಛತ್ ॥ ೧೯೪ ॥**

ಪದಚ್ಛೇದ :- ತಸ್ಮಿನ್, ಕಾಲೇ, ಕೇಶವೋ, ವೈನತೇಯಮ್, ಆರುಹ್ಯ, ಆಯಾತ್, ಯತ್ರ, ತೇ, ಯುದ್ಧಸಂಸ್ಥಾಃ, ದೃಷ್ಟ್ವಾ, ಕೃಷ್ಣಂ, ಹರ್ಷಸಂಪೂರಿತಾತ್ಮಾ, ರಾಮಃ, ಹಂತುಂ, ಚ, ಏಕಲವ್ಯಂ, ಸಮೈಚ್ಛತ್.

**ಅರ್ಥ** :- **ತಸ್ಮಿನ್** = ಯುದ್ಧಮಾಡುತ್ತಿರುವ ಅದೇ; **ಕಾಲೇ** = ಸಮಯದಲ್ಲಿ; **ಕೇಶವಃ** = ಶ್ರೀಕೃಷ್ಣನು; **ವೈನತೇಯಂ** = ಗರುಡನನ್ನು; **ಆರುಹ್ಯ** = ಏರಿ; **ಯತ್ರ** = ಯಾವ ಸ್ಥಳದಲ್ಲಿ; **ತೇ** = ಅವರೆಲ್ಲರೂ; **ಯುದ್ಧಸಂಸ್ಥಾಃ** = ಯುದ್ಧಮಾಡುತ್ತಿದ್ದರೋ; **(ತತ್ರ)** = ಅಲ್ಲಿಗೆ; **ಆಯಾತ್** = ಬಂದರು. **ರಾಮಃ ಚ** = ಬಲರಾಮನಾದರೂ; **ಕೃಷ್ಣಂ** = ಶ್ರೀಕೃಷ್ಣನನ್ನು; **ದೃಷ್ಟ್ವಾ** = ನೋಡಿ; **ಹರ್ಷಸಂಪೂರಿತಾತ್ಮಾ (ಸನ್)** = ಸಂತೋಷದಿಂದ ತುಂಬಿದ ಮನಸ್ಸುಳ್ಳವನಾಗಿ; **ಏಕಲವ್ಯಂ** = ಏಕಲವ್ಯನನ್ನು; **ಹಂತುಂ** = ಸಂಹರಿಸಲು; **ಸಮೈಚ್ಛತ್** = ಬಯಸಿದನು.

**ತಾತ್ಪರ್ಯ** :- ಹೀಗೆ ಯುದ್ಧನಡೆಯುತ್ತಿರುವ ಸಮಯದಲ್ಲೇ ಶ್ರೀಕೃಷ್ಣನು ಗರುಡಾರೂಢನಾಗಿ ಅಲ್ಲಿಗೆ ಬಂದನು. ಅವನನ್ನು ನೋಡಿ ಬಲರಾಮನ ಮನಸ್ಸು ಸಂತೋಷದಿಂದ ತುಂಬಿತು. ಬಲರಾಮನು ಏಕಲವ್ಯನನ್ನು ಸಂಹರಿಸಲು ಬಯಸಿದನು.

**ಉದ್ಯಮ್ಯ ದೋರ್ಭ್ಯಾಂ ಸ ಗದಾಂ ಜವೇನ**
**ಯದಾಪತದ್ ರೌಹಿಣೇಯೋ ನಿಷಾದಮ್ ।**
**ಬಲಂ ಕೋಪಂ ಚಾಸ್ಯ ದೃಷ್ಟ್ವೈಕಲವ್ಯಃ**
**ಪರಾದ್ರವಜ್ಜೀವಿತೇಚ್ಛುಃ ಸುದೂರಮ್ ॥ ೯೫ ॥**

ಪದಚ್ಛೇದ :- ಉದ್ಯಮ್ಯ, ದೋರ್ಭ್ಯಾಂ, ಸಃ, ಗದಾಂ, ಜವೇನ, ಯದಾ, ಅಪತತ್, ರೌಹಿಣೇಯಃ, ನಿಷಾದಂ, ಬಲಂ, ಕೋಪಂ, ಚ, ಅಸ್ಯ, ದೃಷ್ಟ್ವಾ, ಏಕಲವ್ಯಃ, ಪರಾದ್ರವತ್, ಜೀವಿತೇಚ್ಛುಃ, ಸುದೂರಮ್.

**ಅರ್ಥಃ** :- **ರೌಹಿಣೇಯಃ** = ರೋಹಿಣೀಸುತನಾದ; **ಸಃ** = ಆ ಬಲರಾಮನು; **ದೋರ್ಭ್ಯಾಂ** = ಕೈಗಳಿಂದ; **ಗದಾಂ** = ಗದೆಯನ್ನು; **ಉದ್ಯಮ್ಯ** = ಮೇಲೆತ್ತಿ; **ಯದಾ** = ಯಾವಾಗ; **ಜವೇನ** = ವೇಗವಾಗಿ; **ನಿಷಾದಂ (ಪ್ರತಿ)** = ಬೇಡನಾದ ಏಕಲವ್ಯನನ್ನು ಕುರಿತು; **ಅಪತತ್** = ಹೊರಟನೋ; **(ತದಾ)** = ಆಗ; **ಏಕಲವ್ಯಃ** = ಏಕಲವ್ಯನು; **ಅಸ್ಯ** = ಈ ಬಲರಾಮನ; **ಬಲಂ** = ಪರಾಕ್ರಮವನ್ನು; **ಚ** = ಮತ್ತು; **ಕೋಪಂ** = ಸಿಟ್ಟನ್ನು; **ದೃಷ್ಟ್ವಾ** = ನೋಡಿ; **ಜೀವಿತೇಚ್ಛುಃ (ಸನ್)** = ಜೀವಿತವನ್ನು

ಬಯಸಿದವನಾಗಿ; **ಸುದೂರಂ** = ಬಹಳದೂರ; **ಪರಾದ್ರವತ್** = ಓಡಿಹೋದನು.

**ತಾತ್ಪರ್ಯ :-** ಕೃಷ್ಣ ಬಂದ ಸಂತೋಷದಿಂದ ಏಕಲವ್ಯನನ್ನು ಸಂಹರಿಸಲು ಗದೆಯನ್ನು ಮೇಲೆತ್ತಿ ಬಲರಾಮನು ವೇಗವಾಗಿ ಏಕಲವ್ಯನ ಬಳಿಗೆ ಹೋದನು. ಬಲರಾಮನ ಬಲ, ಸಿಟ್ಟನ್ನು ನೋಡಿ ಹೆದರಿದ ಏಕಲವ್ಯನು ಬದುಕಬಯಸಿ ಬಹಳದೂರದ ತನಕ ಓಡಿಹೋದನು.

**ವಿದ್ರಾವಯನ್ ರೌಹಿಣೇಯೋಽನ್ವಯಾತ್**
**ತಂ ಭೀತೋಽಪತಚ್ಚೈಕಲವ್ಯೋಽಂಬುಧೌ ಸಃ ।**
**ವೇಲಾಂತಂ ತಂ ದ್ರಾವಯಿತ್ವಾತ್ರ ತಸ್ಥೌ**
**ರಾಮೋ ಗದಾಪಾಣಿರದೀನಸತ್ತ್ವಃ ॥ ೧೯೬ ॥**

**ಪದಚ್ಛೇದ :–** ವಿದ್ರಾವಯನ್, ರೌಹಿಣೇಯಃ, ಅನ್ವಯಾತ್, ತಂ, ಭೀತಃ, ಅಪತತ್, ಚ, ಏಕಲವ್ಯಃ, ಅಂಬುಧೌ, ಸಃ, ವೇಲಾಂತಂ, ತಂ, ದ್ರಾವಯಿತ್ವಾ, ಅತ್ರ, ತಸ್ಥೌ ರಾಮಃ, ಗದಾಪಾಣಿಃ, ಅದೀನಸತ್ತ್ವಃ.

**ಅರ್ಥ :- ರೌಹಿಣೇಯಃ** = ರೋಹಿಣೀಸುತನಾದ ಬಲರಾಮನು; **ತಂ** = ಆ ಏಕಲವ್ಯನನ್ನು; **ವಿದ್ರಾವಯನ್ (ಸನ್)** = ಓಡಿಸುತ್ತಾ; **ಅನ್ವಯಾತ್** = ಅನುಸರಿಸಿದನು. **ಸಃ** = ಆ; **ಏಕಲವ್ಯಃ** = ಏಕಲವ್ಯನು; **ಭೀತಃ** = ಹೆದರಿದನು; **ಚ** = ಮತ್ತು; **ಅಂಬುಧೌ** = ಸಮುದ್ರದಲ್ಲಿ; **ಅಪತತ್** = ಬಿದ್ದನು. **ಗದಾಪಾಣಿಃ** = ಗದೆಯನ್ನು ಕೈಯಲ್ಲಿ ಹಿಡಿದ; **ಅದೀನಸತ್ತ್ವಃ** = ಅಪ್ರತಿಹತವಾದ ಜ್ಞಾನಬಲಗಳುಳ್ಳ; **ರಾಮಃ** = ಸ್ಬಲರಾಮನು; **ವೇಲಾಂತಂ** = ಸಮುದ್ರತೀರದವರೆಗೆ; **ತಂ** = ಆ ಏಕಲವ್ಯನನ್ನು; **ದ್ರಾವಯಿತ್ವಾ** = ಓಡಿಸಿ; **ಅತ್ರ** = ಅಲ್ಲಿಯೇ; **ತಸ್ಥೌ** = ನಿಂತನು.

**ತಾತ್ಪರ್ಯ :-** ಹೀಗೆ ಓಡಿಹೋಗುತ್ತಿರುವ ಏಕಲವ್ಯನನ್ನು ಕೈಯಲ್ಲಿ ಗದೆಯನ್ನು ಹಿಡಿದು ಅವನನ್ನು ಓಡಿಸುತ್ತಾ ಅವನ ಹಿಂದೆಯೇ ಬಲರಾಮನೂ ಹೊರಟನು. ಹೆದರಿದ ಏಕಲವ್ಯನು ಸಮುದ್ರದೊಳಗೆ ಬೀಳುತ್ತಾನೆ. ಸಮುದ್ರತೀರದ ವರೆಗೆ ಅವನನ್ನು ಓಡಿಸಿಕೊಂಡು ಹೋದ ಎದುರಿಲ್ಲದ ಜ್ಞಾನ-ಬಲಗಳುಳ್ಳ ಬಲರಾಮನು ಅಲ್ಲಿಯೇ ನಿಲ್ಲುತ್ತಾನೆ.

ವಿಶೇಷವಿಚಾರ :- ಸತ್ವ ಎಂದರೆ ಜ್ಞಾನದಿಂದ ಸಹಿತವಾದ ಬಲ.

**ಸುಪಾಪೋಸಾವೇಕಲವ್ಯಃ ಸುಭೀತೋ**
**ರಾಮಂ ಮತ್ವೈವಾನುಯಾಂತಂ ಪುನಶ್ಚ ।**
**ಸಮುದ್ರೇಶೀತಿಂ ಯೋಜನಾನಾಮತೀತ್ಯ**
**ಪಶ್ಚಾದೈಕ್ಷದ್ ದ್ವೀಪಮೇವಾಧಿರುಹ್ಯ ॥ ೧೯೭ ॥**

ಪದಚ್ಛೇದ :- ಸುಪಾಪಃ, ಅಸೌ, ಏಕಲವ್ಯಃ, ಸುಭೀತಃ, ರಾಮಂ, ಮತ್ವಾ, ಏವ, ಅನುಯಾಮ್ತಂ, ಪುನಃ, ಚ, ಸಮುದ್ರೇ, ಅಶೀತಿಂ, ಯೋಜನಾನಾಮ್, ಅತೀತ್ಯ, ಪಶ್ಚಾತ್, ಐಕ್ಷತ್, ದ್ವೀಪಮ್, ಏವ, ಅಧಿರುಹ್ಯ.

**ಅರ್ಥ** :- **ಸುಪಾಪಃ** = ಅತ್ಯಂತ ಪಾಪಿಯಾದ; **ಅಸೌ** = ಈ; **ಏಕಲವ್ಯಃ** = ಏಕಲವ್ಯನು; **ರಾಮಂ** = ಬಲರಾಮನನ್ನು; **ಅನುಯಾಂತಂ** = ಅನುಸರಿಸಿ ಬರುತ್ತಿರುವವನನ್ನಾಗಿ; **ಮತ್ವಾ** = ತಿಳಿದು; **ಸುಭೀತಃ (ಸನ್)** = ಬಹಳ ಹೆದರಿದವನಾಗಿ; **ಪುನಃ ಚ** = ಮತ್ತೆ; **ಸಮುದ್ರೇ** = ಸಮುದ್ರದಲ್ಲಿ; **ಯೋಜನಾನಾಮ್** = ಯೋಜನಗಳ; **ಅಶೀತಿಂ** = ಎಂಭತ್ತನ್ನು; **ಅತೀತ್ಯ** = ದಾಟಿ; **ದ್ವೀಪಮ್** = ದ್ವೀಪವನ್ನು; **ಅಧಿರುಹ್ಯ** = ಹತ್ತಿ; **ಪಶ್ಚಾತ್ ಏವ** = ನಂತರವಷ್ಟೇ; **ಐಕ್ಷತ್** = ನೋಡಿದನು.

**ತಾತ್ಪರ್ಯ** :- ಅತ್ಯಂತ ಪಾಪಿಯಾದ ಏಕಲವ್ಯನು ಸಮುದ್ರಕ್ಕೆ ಬಿದ್ದ ನಂತರವೂ ಬಲರಾಮನು ಅನುಸರಿಸಿ ಬರುತ್ತಿರುವನೆಂದೇ ತಿಳಿದು ಬಹಳ ಹೆದರಿ ಎಂಭತ್ತು ಯೋಜನಗಳಷ್ಟು ದೂರವನ್ನು ಈಜಿ ಸಮುದ್ರದ ಮಧ್ಯದಲ್ಲಿದ್ದ ಯಾವುದೋ ದ್ವೀಪವೊಂದನ್ನು ತಲುಪಿ ಆ ನಂತರವಷ್ಟೇ ಬಲರಾಮನು ಬರುತ್ತಿದ್ದಾನೆಯೇ ಎಂದು ಹಿಂದೆ ತಿರುಗಿ ನೋಡಿದನು.

**ರಾಮೋ ವಿಜಿತ್ಯಾತಿಬಲಂ ರಣೇ ರಿಪುಂ**
**ಮುದೈವ ದಾಮೋದರಮಾಸಸಾದ ।**
**ಪೌಂಡ್ರಸ್ತ್ವವಜ್ಞಾಯ ಶಿನಿಪ್ರವೀರಂ ನಿವಾರ್ಯ-**
**ಮಾಣೋಪಿ ಯಯೌ ಜನಾರ್ದನಮ್ ॥ ೧೯೮ ॥**

ಪದಚ್ಛೇದ :- ರಾಮಃ, ವಿಜಿತ್ಯ, ಅತಿಬಲಂ, ರಣೇ, ರಿಪುಂ, ಮುದಾ, ಏವ, ದಾಮೋದರಮ್, ಆಸಸಾದ, ಪೌಂಡ್ರಃ, ತು, ಅವಜ್ಞಾಯ, ಶಿನಿಪ್ರವೀರಂ, ನಿವಾರ್ಯಮಾಣಃ, ಅಪಿ, ಯಯೌ, ಜನಾರ್ದನಮ್.

**ಅರ್ಥ** :- **ರಾಮಃ** = ಬಲರಾಮನು; **ಅತಿಬಲಂ** = ಅತ್ಯಂತ ಪರಾಕ್ರಮಿಯಾದ; **ರಿಪುಂ** = ಶತ್ರುವಾದ ಏಕಲವ್ಯನನ್ನು; **ರಣೇ** = ಯುದ್ಧದಲ್ಲಿ; **ವಿಜಿತ್ಯ** = ಗೆದ್ದು; **ದಾಮೋದರಂ** = ಶ್ರೀಕೃಷ್ಣನನ್ನು; **ಮುದಾ ಏವ** = ಸಂತೋಷದಿಂದಲೇ; **ಆಸಸಾದ** = ಸಮೀಪಿಸಿದನು. **ಪೌಂಡ್ರಃ ತು** = ಪೌಂಡ್ರಕನಾದರೂ; **ಶಿನಿಪ್ರವೀರಂ** = ಶಿನಿಗಳಲ್ಲಿ ಶ್ರೇಷ್ಠನಾದ ಸಾತ್ಯಕಿಯನ್ನು; **ಅವಜ್ಞಾಯ** = ತಿರಸ್ಕರಿಸಿ; **ನಿವಾರ್ಯಮಾಣಃ ಅಪಿ** = ನಿವಾರಿಸಲ್ಪಡುತ್ತಿದ್ದರೂ ಕೂಡ; **ಜನಾರ್ದನಂ (ಪ್ರತಿ)** = ಶ್ರೀಕೃಷ್ಣನನ್ನು ಕುರಿತು; **ಯಯೌ** = ಹೋದನು.

**ತಾತ್ಪರ್ಯ** :- ಬಲರಾಮನು ಅತಿಬಲಿಷ್ಠನಾದ ಏಕಲವ್ಯನನ್ನು ಗೆದ್ದು ಸಂತೋಷದಿಂದ ಶ್ರೀಕೃಷ್ಣನ ಸಮೀಪಕ್ಕೆ ಹೋದನು. ಇತ್ತ ಪೌಂಡ್ರಕವಾಸುದೇವನು ದುರ್ಬಲನೊಂದಿಗೆ ಯುದ್ಧವೇನು ಎಂದು ಸಾತ್ಯಕಿಯನ್ನು ತಿರಸ್ಕರಿಸಿ ಬೇಡವೆನ್ನುತ್ತಿದ್ದರೂ ಶ್ರೀಕೃಷ್ಣನ ಬಳಿಗೆ ಹೋಗುತ್ತಾನೆ.

**ತಂ ಕೇಶವೋ ವಿರಥಂ ವ್ಯಾಯುಧಂ ಚ**
**ಕ್ಷಣೇನ ಚಕ್ರೇ ಸ ಯಯೌ ನಿಜಾಂ ಪುರೀಮ್ ।**
**ಪ್ರಸ್ಥಾಪಯಾಮಾಸ ಪುನಶ್ಚ ದೂತಂ**
**ಕೃಷ್ಣಾಯೈಕೋ ವಾಸುದೇವೋಹಮಸ್ಮಿ ॥ ೧೯ ॥**

**ಮದೀಯಲಿಂಗಾನಿ ವಿಸೃಜ್ಯ ಚಾಶು**
**ಸಮಾಗಚ್ಛೇಥಾಃ ಶರಣಂ ಮಾಮನಂತಮ್ ।**
**ತದ್ದೂತೋಕ್ತಂ ವಾಕ್ಯಮೇತನ್ನಿಶಮ್ಯ**
**ಯದುಪ್ರವೀರಾ ಉಚ್ಚಕೈಃ ಪ್ರಾಹಸನ್ ಸ್ಮ ॥ ೨೦೦ ॥**

ಪದಚ್ಛೇದ :- ತಂ, ಕೇಶವಃ, ವಿರಥಂ, ವ್ಯಾಯುಧಂ ಚ, ಕ್ಷಣೇನ, ಚಕ್ರೇ, ಸಃ, ಯಯೌ, ನಿಜಾಂ, ಪುರೀಂ, ಪ್ರಸ್ಥಾಪಯಾಮಾಸ, ಪುನಃ, ಚ, ದೂತಂ, ಕೃಷ್ಣಾಯ, ಏಕಃ, ವಾಸುದೇವಃ, ಅಹಮ್, ಅಸ್ಮಿ. ಮದೀಯಲಿಂಗಾನಿ, ವಿಸೃಜ್ಯ, ಚ, ಆಶು,

ಸಮಾಗಚ್ಛೇಥಾಃ, ಶರಣಂ, ಮಾಮ್, ಅನಂತಂ, ತತ್, ದೂತೋಕ್ತಂ, ವಾಕ್ಯಮ್, ಏತತ್, ನಿಶಮ್ಯ, ಯದುಪ್ರವೀರಾಃ, ಉಚ್ಚಕೈಃ, ಪ್ರಾಹಸನ್, ಸ್ಮ.

**ಅರ್ಥ** :- **ಕೇಶವಃ** = ಶ್ರೀಕೃಷ್ಣನು; **ತಂ** = ಆ ಪೌಂಡ್ರಕನನ್ನು; **ವಿರಥಂ** = ರಥರಹಿತನನ್ನಾಗಿ; **ಚ** = ಮತ್ತು; **ವ್ಯಾಯುಧಂ** = ಆಯುಧರಹಿತನನ್ನಾಗಿ; **ಕ್ಷಣೇನ** = ಕ್ಷಣದಲ್ಲಿ; **ಚಕ್ರೇ** = ಮಾಡಿದನು. **ಸಃ** = ಆ ಪೌಂಡ್ರಕನು; **ನಿಜಾಂ** = ತನ್ನ; **ಪುರೀಂ (ಪ್ರತಿ)** = ಪಟ್ಟಣವನ್ನು ಕುರಿತು; **ಯಯೌ** = ಹೋದನು. **ಪುನಃ ಚ** = ಮತ್ತೊಮ್ಮೆ; **ಕೃಷ್ಣಾಯ** = ಕೃಷ್ಣನಿಗೆ; **ದೂತಂ** = ದೂತನನ್ನು; **ಪ್ರೇಷಯಾಮಾಸ** = ಕಳುಹಿಸಿದನು. **ಅಹಂ** = ನಾನು; **ಏಕಃ** = ಒಬ್ಬನೇ; **ವಾಸುದೇವಃ** = ವಾಸುದೇವನು; **ಅಸ್ಮಿ** = ಆಗಿದ್ದೇನೆ; **ಚ** = ಮತ್ತು; **ಮದೀಯಲಿಂಗಾನಿ** = ಶ್ರೀವತ್ಸಮೊದಲಾದ ನನ್ನ ಚಿಹ್ನೆಗಳನ್ನು; **ವಿಸೃಜ್ಯ** = ಬಿಟ್ಟು; **ಆಶು** = ಶೀಘ್ರವಾಗಿ; **ಅನಂತಂ** = ನಾಶರಹಿತನಾದ; **ಮಾಂ** = ನನ್ನನ್ನು; **ಶರಣಂ** = ಮೊರೆಯನ್ನು; **ಸಮಾಗಚ್ಛೇಥಾಃ** = ಹೊಂದಿರಿ; **(ಇತಿ)** = ಎಂದು; **ತದ್ದೂತೋಕ್ತಂ** = ಪೌಂಡ್ರಕನದೂತನಿಂದ ಹೇಳಲ್ಪಟ್ಟ; **ಏತತ್** = ಈ; **ವಾಕ್ಯಂ** = ಮಾತನ್ನು; **ನಿಶಮ್ಯ** = ಕೇಳಿ; **ಯದುಪ್ರವೀರಾಃ** = ಪರಾಕ್ರಮಿಗಳಾದ ಯಾದವರು; **ಉಚ್ಚಕೈಃ** = ಜೋರಾಗಿ; **ಪ್ರಾಹಸನ್ ಸ್ಮ** = ನಕ್ಕರು.

**ತಾತ್ಪರ್ಯ** :- ಬಳಿಗೆ ಬಂದ ಪೌಂಡ್ರಕನ ರಥವನ್ನು ಮತ್ತು ಆಯುಧಗಳನ್ನು ಶ್ರೀಕೃಷ್ಣನು ಕ್ಷಣದಲ್ಲಿ ನಾಶಮಾಡಿದನು. ಆ ಪೌಂಡ್ರಕನು ತನ್ನ ಪಟ್ಟಣವಾದ ವಾರಾಣಸಿಗೆ ಹೋಗಿ ಪುನಃ ದೂತನನ್ನು ಕಳಿಸಿದನು. ಕೃಷ್ಣ ವಾಸುದೇವನೆಂಬ ಪರಬ್ರಹ್ಮನು ನಾನೇ ಮತ್ತೊಬ್ಬನಿಲ್ಲ. ನನ್ನ ಚಿಹ್ನೆಗಳಾದ ಶ್ರೀವತ್ಸ-ವನಮಾಲೆ, ಹಾಗು ಶಙ್ಖಚಕ್ರಾದಿ ಆಯುಧಗಳನ್ನು ಬಿಟ್ಟು ನಾಶರಹಿತನಾದ ನನ್ನನ್ನು ಮೊರೆ ಹೊಂದಿರಿ ಎಂದು. ದೂತನ ಈ ಮಾತುಗಳನ್ನು ಕೇಳಿದ ಯಾದವರು ಜೋರಾಗಿ ನಗುತ್ತಾರೆ.

**ಕೃಷ್ಣಃ ಪ್ರಹಸ್ಯಾಹ ತವಾಯುಧಾನಿ ದಾಸ್ಯಾ-**
**ಮ್ಯಹಂ ಲಿಂಗಭೂತಾನಿ ಚಾಜೌ ।**
**ಇತ್ಯುಕ್ತೋಽಸೌ ದೂತ ಏತ್ಯಾಹ ತಸ್ಮೈ ಸ**
**ಚಾಭ್ಯಾಗಾದ್ ಯೋದ್ಧುಕಾಮೋ ಹರಿಶ್ಚ ॥ ೨೦೧ ॥**

ಪದಚ್ಛೇದ :- ಕೃಷ್ಣಃ, ಪ್ರಹಸ್ಯ, ಆಹ, ತವ, ಆಯುಧಾನಿ, ದಾಸ್ಯಾಮಿ, ಅಹಂ, ಲಿಂಗಭೂತಾನಿ, ಚ, ಆಜೌ, ಇತಿ, ಉಕ್ತಃ, ಅಸೌ, ದೂತಃ, ಏತ್ಯ, ಆಹ, ತಸ್ಮೈ, ಸಃ, ಚ, ಅಭ್ಯಾಗಾತ್, ಯೋದ್ಧುಕಾಮಃ, ಹರಿಃ, ಚ.

**ಅರ್ಥ** :- **ಕೃಷ್ಣಃ** = ಶ್ರೀಕೃಷ್ಣನು; **ಪ್ರಸಹ್ಯ** = ನಕ್ಕು; **ಆಹ** = ಹೇಳಿದನು; **ಅಹಂ** = ನಾನು; **ತವ** = ನಿನ್ನ; **ಲಿಂಗಭೂತಾನಿ** = ಚಿಹ್ನೆಯಾಗಿರುವವುಗಳನ್ನು; **ಚ** = ಮತ್ತು; **ಆಯುಧಾನಿ** = ಆಯುಧಗಳನ್ನು; **ಆಜೌ** = ಯುದ್ಧದಲ್ಲಿ; **ದಾಸ್ಯಾಮಿ** = ಕೊಡುತ್ತೇನೆ; **(ಇತಿ)** = ಎಂದು. **ಇತಿ** = ಹೀಗೆ; **ಉಕ್ತಃ** = ಹೇಳಲ್ಪಟ್ಟ; **ಅಸೌ** = ಈ; **ದೂತಃ** = ದೂತನು; **ಏತ್ಯ** = ಹೋಗಿ; **ತಸ್ಮೈ** = ಆ ಪೌಂಡ್ರಕನಿಗೆ; **ಆಹ** = ಹೇಳಿದನು. **ಸಃ ಚ** = ಆ ಪೌಂಡ್ರಕನಾದರೂ; **ಯೋದ್ಧುಕಾಮಃ (ಸನ್)** = ಯುದ್ಧವನ್ನು ಬಯಸಿದವನಾಗಿ; **ಅಭ್ಯಾಗಾತ್** = ಹೊರಟನು. **ಹರಿಃ ಚ** = ಶ್ರೀಕೃಷ್ಣನೂ ಕೂಡ; **ಅಭ್ಯಾಗಾತ್** = ಹೊರಟನು.

**ತಾತ್ಪರ್ಯ** :- ದೂತನಿಂದ ಪೌಂಡ್ರಕನ ಮಾತನ್ನು ಕೇಳಿದ ಶ್ರೀಕೃಷ್ಣನು ನಕ್ಕು ಹೇಳುತ್ತಾನೆ- ನಿನ್ನ ಚಿಹ್ನೆಗಳನ್ನು ಮತ್ತು ಆಯುಧಗಳನ್ನು ಯುದ್ಧದಲ್ಲಿ ಕೊಡುತ್ತೇನೆ ಎಂದು. ದೂತನು ಹೋಗಿ ತಿಳಿಸಿದಾಗ ಪೌಂಡ್ರಕನು ಯುದ್ಧಮಾಡುವ ಇಚ್ಛೆಯಿಂದ ಹೊರಡುತ್ತಾನೆ. ಶ್ರೀಕೃಷ್ಣನೂ ಹೊರಡುತ್ತಾನೆ.

**ತಂ ಶಾತಕೌಂಭೇ ಗರುಡೇ ರಥಸ್ಥೇ ಸ್ಥಿತಂ**
**ಚಕ್ರಾದೀನ್ ಕೃತ್ರಿಮಾನ್ ಸಂದಧಾನಮ್ ।**
**ಶ್ರೀವತ್ಸಾರ್ಥೇ ದಗ್ಧವಕ್ಷಸ್ಥಲಂ ಚ ದೃಷ್ಟ್ವಾ**
**ಕೃಷ್ಣಃ ಪ್ರಾಹಸನ್ ಪಾಪಬುದ್ಧಿಮ್ ॥ ೨೦೨ ॥**

ಪದಚ್ಛೇದ :- ತಂ, ಶಾತಕೌಂಭೇ, ಗರುಡೇ, ರಥಸ್ಥೇ, ಸ್ಥಿತಂ, ಚಕ್ರಾದೀನ್, ಕೃತ್ರಿಮಾನ್, ಸಂದಧಾನಂ, ಶ್ರೀವತ್ಸಾರ್ಥೇ, ದಗ್ಧವಕ್ಷಸ್ಥಲಂ, ಚ, ದೃಷ್ಟ್ವಾ, ಕೃಷ್ಣಃ, ಪ್ರಾಹಸನ್, ಪಾಪಬುದ್ಧಿಮ್.

**ಅರ್ಥ** :- **ಕೃಷ್ಣಃ** = ಶ್ರೀಕೃಷ್ಣನು; **ರಥಸ್ಥೇ** = ರಥದಲ್ಲಿರುವ; **ಶಾತಕೌಂಭೇ** = ಬಂಗಾರದಿಂದ ನಿರ್ಮಿಸಿದ; **ಗರುಡೇ** = ಗರುಡನ ಮೇಲೆ; **ಸ್ಥಿತಂ** = ಇರುವ; **ಕೃತ್ರಿಮಾನ್** = ಕೃತಕವಾದ; **ಚಕ್ರಾದೀನ್** = ಚಕ್ರಾದಿ

ಆಯುಧಗಳನ್ನು; ಸಂದಧಾನಂ = ಧರಿಸಿರುವ; ಚ = ಮತ್ತು; ಶ್ರೀವತ್ಸಾರ್ಥೇ = ಶ್ರೀವತ್ಸಚಿಹ್ನೆಗಾಗಿ; ದಗ್ಧವಕ್ಷಸ್ಥಲಂ = ಸುಡಲ್ಪಟ್ಟ ಎದೆಯ ಭಾಗವುಳ್ಳ; ಪಾಪಬುದ್ಧಿಂ = ಪಾಪಕರ ಬುದ್ಧಿಯುಳ್ಳ; ತಂ = ಆ ಪೌಂಡ್ರಕವಾಸುದೇವನನ್ನು; ದೃಷ್ಟ್ವಾ = ನೋಡಿ; ಪ್ರಾಹಸನ್ = ನಕ್ಕನು.

ತಾತ್ಪರ್ಯ :- ಪೌಂಡ್ರಕವಾಸುದೇವನು ತಾನು ಗರುಡವಾಹನೆಂದು ತೋರಿಸಲು ರಥದಲ್ಲಿರುವ ಚಿನ್ನದಗರುಡನ ಮೇಲೆ ಕುಳಿತು, ಕೃತ್ರಿಮವಾದ ಶಂಖ-ಚಕ್ರಾದಿ ಆಯುಧಗಳನ್ನು ಧರಿಸಿರುತ್ತಾನೆ. ಮತ್ತು ಶ್ರೀವತ್ಸಚಿಹ್ನೆಗಾಗಿ ಎದೆಯ ಭಾಗವನ್ನು ಸುಟ್ಟುಕೊಂಡಿರುತ್ತಾನೆ. ಇಂತಹ ಪೌಂಡ್ರಕನನ್ನು ನೋಡಿ ಕೃಷ್ಣನು ನಗುತ್ತಾನೆ.

**ತತೋಽಸ್ತ್ರಶಸ್ತ್ರಾಣ್ಯಭಿವರ್ಷಮಾಣಂ**
**ವಿಜಿತ್ಯ ತಂ ವಾಸುದೇವೋಽರಿಣೈವ ।**
**ಚಕರ್ತ ತತ್ಕಂಧರಂ ತಸ್ಯ ಚಾನು**
**ಮಾತಾಮಹಸ್ಯಾಚ್ಛಿನತ್ ಸಾಯಕೇನ ॥ ೨೦೩ ॥**

ಪದಚ್ಛೇದ :- ತತಃ, ಅಸ್ತ್ರಶಸ್ತ್ರಾಣಿ, ಅಭಿವರ್ಷಮಾಣಂ, ವಿಜಿತ್ಯ, ತಂ, ವಾಸುದೇವಃ, ಅರಿಣಾ, ಏವ, ಚಕರ್ತ, ತತ್ಕಂಧರಂ, ತಸ್ಯ, ಚ, ಅನು, ಮಾತಾಮಹಸ್ಯ, ಅಚ್ಛಿನತ್, ಸಾಯಕೇನ.

ಅರ್ಥ :- ತತಃ = ಆ ನಂತರ; ವಾಸುದೇವಃ = ಶ್ರೀಕೃಷ್ಣನು; ಅಸ್ತ್ರಶಸ್ತ್ರಾಣಿ = ಅಸ್ತ್ರಶಸ್ತ್ರಗಳನ್ನು; ಅಭಿವರ್ಷಮಾಣಂ = ಸುರಿಸುತ್ತಿರುವ; ತಂ = ಆ ಪೌಂಡ್ರಕನನ್ನು; ವಿಜಿತ್ಯ = ಗೆದ್ದು; ಅರಿಣಾ ಏವ = ಚಕ್ರದಿಂದಲೇ; ತತ್ಕಂಧರಂ = ಅವನ ತಲೆಯನ್ನು; ಚಕರ್ತ = ಕಡಿದನು; ಚ = ಮತ್ತು; ತಸ್ಯ = ಆ ಪೌಂಡ್ರಕನ; ಅನು = ನಂತರ; ಮಾತಾಮಹಸ್ಯ = ತಾಯಿಯತಂದೆಯಾದ ಕಾಶಿರಾಜನ; (ಕಂಧರಂ) = ತಲೆಯನ್ನು; ಸಾಯಕೇನ = ಬಾಣದಿಂದ; ಅಚ್ಛಿನತ್ = ಕಡಿದನು.

ತಾತ್ಪರ್ಯ :- ಶ್ರೀಕೃಷ್ಣನು ಯುದ್ಧದಲ್ಲಿ ಪೌಂಡ್ರಕನನ್ನು ಗೆದ್ದು ಚಕ್ರದಿಂದಲೇ ಅವನ ತಲೆಅಯನ್ನು ಕಡೆದನು. ನಂತರ ವನ ಮಾತಾಮಹನಾದ ಕಾಶಿರಾಜನ ತಲೆಯನ್ನು ಬಾಣದಿಂದ ಕಡೆದನು.

**ಅಪಾತಯಚ್ಚಾಶು ಶಿರಃ ಸ ತೇನ ಕಾಶೀಶ್ವ-**
**ರಸ್ಯೇಶ್ವರೋ ವಾರಣಸ್ಯಾಮ್ ।**
**ಸ ಚ ಬ್ರಹ್ಮಾಹಂ ವಾಸುದೇವೋಸ್ಮಿ ನಿತ್ಯಮಿತಿ**
**ಜ್ಞಾನಾದಗಮತ್ ತತ್ ತಮೋಂಧಮ್ ॥ ೨೦೪ ॥**

**ಪದಚ್ಛೇದ :–** ಅಪಾತಯತ್, ಚ, ಆಶು, ಶಿರಃ, ಸಃ, ತೇನ, ಕಾಶೀಶ್ವರಸ್ಯ, ಈಶ್ವರಃ, ವಾರಣಸ್ಯಾಂ, ಸಃ, ಚ, ಬ್ರಹ್ಮಾ, ಅಹಂ, ವಾಸುದೇವಃ, ಅಸ್ಮಿ, ನಿತ್ಯಮ್, ಇತ್, ಜ್ಞಾನಾತ್, ಅಗಮತ್, ತತ್, ತಮಃ, ಅಂಧಮ್.

**ಅರ್ಥ :-** **ಈಶ್ವರಃ** = ಸ್ವಾಮಿಯಾದ; **ಸಃ** = ಆ ಶ್ರೀಕೃಷ್ಣನು; **ಆಶು** = ಶೀಘ್ರವಾಗಿ; **ತೇನ** = ಆ ಬಾಣದಿಂದ; **ಕಾಶೀಶ್ವರಸ್ಯ** = ಕಾಶಿರಾಜನ; **ಶಿರಃ** = ತಲೆಯನ್ನು; **ವಾರಣಸ್ಯಾಂ** = ವಾರಣಸಿಯಲ್ಲಿ; **ಅಪಾತಯತ್ ಚ** = ಬೀಳಿಸಿದನೂ ಕೂಡ. **ಸಃ ಚ** = ಆ ಪೌಂಡ್ರಕನಾದರೂ; **ಅಹಂ** = ನಾನೇ; **ನಿತ್ಯಂ** = ಯಾವಾಗಲೂ; **ಬ್ರಹ್ಮ** = ಪರಬ್ರಹ್ಮನಾದ; **ವಾಸುದೇವಃ** = ವಾಸುದೇವನು; **ಅಸ್ಮಿ** = ಆಗಿದ್ದೇನೆ; **ಇತಿ** = ಈರೀತಿಯಾದ; **ಜ್ಞಾನಾತ್** = ಜ್ಞಾನದಿಂದ; **ತತ್** = ಪ್ರಸಿದ್ಧವಾದ; **ಅಂಧಂತಮಃ** = ಅಂಧಂತಮಸ್ಸನ್ನು; **ಅಗಮತ್** = ಸೇರಿದನು.

**ತಾತ್ಪರ್ಯ :-** ಶ್ರೀಕೃಷ್ಣನು ಪೌಂಡ್ರಕನ ತಲೆಯನ್ನು ಕಡೆದ ನಂತರ ಬಾಣದಿಂದ ಆ ತಲೆಯನ್ನು ಕಾಶಿಯಲ್ಲಿ ಬೀಳಿಸಿದನು. ಪೌಂಡ್ರಕನಾದರೂ ಪರಬ್ರಹ್ಮನಾದ ವಾಸುದೇವ ನಾನೇ ಎಂಬ ಜ್ಞಾನದಿಂದಾಗಿ ತಮಸ್ಸನ್ನು ಹೊಂದಿದನು.

**ಸಾಹಾಯ್ಯಕೃಚ್ಚಾಸ್ಯ ಚ ಕಾಶಿರಾಜೋ**
**ಯಥೈವ ಕಿರ್ಮೀರಹಿಡಿಂಬಸಾಲ್ವಾಃ ।**
**ಅನ್ಯೇ ಚ ದೈತ್ಯಾ ಅಪತಂಸ್ತಮೋಂಧಂ**
**ತಥೈವ ಸೋಪ್ಯಪತತ್ ಪಾಪಬುದ್ಧಿಃ ॥ ೨೦೫ ॥**

**ಪದಚ್ಛೇದ :–** ಸಾಹಾಯಕೃತ್, ಚ, ಅಸ್ಯ, ಚ, ಕಾಶಿರಾಜಃ, ಯಥಾ, ಏವ, ಕಿರ್ಮೀರಹಿಡಿಂಬಸಾಲ್ವಾಃ, ಅನ್ಯೇ, ಚ, ದೈತ್ಯಾಃ, ಅಪತನ್, ತಮಃ, ಅಂಧಂ, ತಥಾ, ಏವ, ಸಃ, ಅಪಿ, ಅಪತತ್, ಪಾಪಬುದ್ಧಿಃ.

**ಅರ್ಥ** :- **ಅಸ್ಯ** = ಈ ಪೌಂಡ್ರಕನಿಗೆ; **ಸಾಹಾಯ್ಯಕೃತ್** = ಸಹಾಯಮಾಡಿದ; **ಪಾಪಬುದ್ಧಿಃ** = ಪಾಪಕರಬುದ್ಧಿಯುಳ್ಳ; **ಕಾಶಿರಾಜಃ ಚ** = ಕಾಶಿರಾಜನೂ ಕೂಡ; **ಯಥಾ ಏವ** = ಹೇಗೆ ತಾನೆ; **ಕಿರ್ಮೀರ ಹಿಡಿಂಬಸಾಲ್ವಾಃ** = ಕಿರ್ಮೀರಹಿಡಿಂದಸಾಲ್ವರು; **ಚ** = ಮತ್ತು; **ಅನ್ಯೇ** = ಬೇರೆಯವರಾದ; **ದೈತ್ಯಾಃ ಚ** = ದೈತ್ಯರೂ ಕೂಡ; **ಅಂಧಂ ತಮಃ** = ಅಂಧಂತಮಸ್ಸಿಗೆ; **ಅಪತನ್** = ಬಿದ್ದರೋ; **ತಥಾ ಏವ** = ಹಾಗೆಯೇ; **ಸಃ ಅಪಿ** = ಅವನೂ ಕೂಡ; **ಅಪತತ್** = ಬಿದ್ದನು.

**ತಾತ್ಪರ್ಯ** :- ಪೌಂಡ್ರಕನಷ್ಟೇ ಅಲ್ಲದೆ ಅವನಿಗೆ ಸಹಾಯ ಮಾಡಿದ ಪಾಪಕಾರ್ಯದಲ್ಲಿ ಬುದ್ಧಿಯುಳ್ಳ ಕಾಶಿರಾಜನೂ ಕೂಡ ಕಿರ್ಮೀರ-ಹಿಡಿಂಬ-ಸಾಲ್ವ ಮತ್ತು ಇತರೆ ದೈತ್ಯರಂತೆ ತಮಸ್ಸಗೆ ಬಿದ್ದನು.

**ವಿಶೇಷವಿಚಾರ** :- ಜರಾಸಂಧನು ತಮಸ್ಸಿಗೆ ಹೋದರೂ ಅವ್ನಿಗೆ ಸಹಾಯ ಮಾಡಿದ ಶಲ್ಯ-ಬಾಹ್ಲೀಕಾದಿ ಕೆಲವರು ತಮಸ್ಸಿಗೆ ಹೋಗಲಿಲ್ಲ. ಏಕೆಂದರೆ ಅವರು ಪಾಪಬುದ್ಧಿಗಳಾಗಿರಲಿಲ್ಲ. ಆದರೆ ಕಾಶಿರಾಜನು ಪಾಪಬುದ್ಧಿಯವನಾಗಿದ್ದನು. ಈ ವಿಶೇಷವನ್ನು ತಿಳಿಸಲೆಂದೇ ಆಚಾರ್ಯರು ಪಾಪಬುದ್ಧಿಃ ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ - ಜನಾರ್ದನೀಯ.

**ನಿಹತ್ಯ ತೌ ಕೇಶವೋ ರೌಕ್ಮಿಣೇಯಂ**
**ಪುನರ್ವೈದರ್ಭ್ಯಾಂ ಜನಯಾಮಾಸ ಸದ್ಯಃ ।**
**ಸ ಚೈಕಲವ್ಯೋ ರಾಮಜಿತಃ ಶಿವಾಯ**
**ಚಕ್ರೇ ತಪೋಜೇಯತಾಂ ಚಾಪ ತಸ್ಮಾತ್ ।। ೨೦೬ ।।**

**ಪದಚ್ಛೇದ** :- **ನಿಹತ್ಯ, ತೌ, ಕೇಶವಃ, ರೌಕ್ಮಿಣೇಯಂ, ಪುನಃ, ವೈದರ್ಭ್ಯಾಂ, ಜನಯಾಮಾಸ, ಸದ್ಯಃ, ಸಃ, ಚ, ಏಕಲವ್ಯಃ, ರಾಮಜಿತಃ, ಶಿವಾಯ, ಚಕ್ರೇ, ತಪಃ, ಅಜೇಯತಾಂ, ಚ, ಆಪ, ತಸ್ಮಾತ್.**

**ಅರ್ಥ** :- **ಕೇಶವಃ** = ಶ್ರೀಕೃಷ್ಣನು; **ತೌ** = ಆ ಪೌಂಡ್ರಕ ಮತ್ತು ಕಾಶಿರಾಜರನ್ನು; **ನಿಹತ್ಯ** = ಕೊಂದು; **ಪುನಃ** = ಮತ್ತೊಮ್ಮೆ; **ವೈದರ್ಭ್ಯಾಂ** = ವಿದರ್ಭದೇಶದ ರಾಜನ ಮಗಳಾದ ರುಕ್ಮಿಣಿಯಲ್ಲಿ; **ರೌಕ್ಮಿಣೇಯಂ** = ಪ್ರದ್ಯುಮ್ನನನ್ನು; **ಸದ್ಯಃ** = ತತ್ಕ್ಷಣದಲ್ಲಿಯೇ; **ಜನಯಾಮಾಸ** =

ಹುಟ್ಟಿಸಿದನು. **ರಾಮಜಿತಃ** = ಬಲರಾಮನಿಂದ ಸೋತ; **ಸಃ** = ಆ; **ಏಕಲವ್ಯಃ ಚ** = ಏಕಲವ್ಯನಾದರೂ; **ಶಿವಾಯ** = ಶಿವನನ್ನುದ್ದೇಶಿಸಿ; **ತಪಹ್** = ತಪಸ್ಸನ್ನು; **ಚಕ್ರೇ** = ಮಾಡಿದನು; **ಚ** = ಮತ್ತು; **ತಸ್ಮಾತ್** = ಆ ಶಿವನಿಂದ; **ಅಜೇಯತಾಂ** = ಅಜೇಯತ್ವವನ್ನು; **ಆಪ** = ಪಡೆದನು.

**ತಾತ್ಪರ್ಯ** :- ಅವರಿಬ್ಬರನ್ನು ಸಂಹರಿಸದ ನಂತರ ಶ್ರೀಕೃಷ್ಣನು ರುಕ್ಮಿಣೀದೇವಿಯಲ್ಲಿ ತತ್ಕ್ಷಣದಲ್ಲಿಯೇ ಪ್ರದ್ಯುಮ್ನನನ್ನು ಹುಟ್ಟಿಸಿದನು. ಹಿಂದೆ ಬಲರಾಮನಿಂದ ಸೋತ ಏಕಲವ್ಯನು ಶಿವನನ್ನು ಕುರಿತು ತಪಸ್ಸು ಮಾಡಿ ಅವಧ್ಯತ್ವ ವರವನ್ನು ಪಡೆದನು.

**ಸ ಶರ್ವದತ್ತೇನ ವರೇಣ ದೃಪ್ತಃ**
**ಪುನರ್ಯೋದ್ಧುಂ ಕೃಷ್ಣಮೇವಾಸಸಾದ ।**
**ತಸ್ಯಾಸ್ತ್ರಶಸ್ತ್ರಾಣಿ ನಿವಾರ್ಯ ಕೇಶವ-**
**ಶ್ಚಕ್ರೇಣ ಚಕ್ರೇ ತಮಪಾಸ್ತಕಂಧರಮ್ ।**
**ಸ ಚಾಪ ಪಾಪಸ್ತಮ ಏವ ಘೋರಂ**
**ಕೃಷ್ಣದ್ವೇಷಾನ್ನಿತ್ಯದುಃಖಾತ್ಮಕಂ ತತ್ ॥ ೨೦೭ ॥**

**ಪದಚ್ಛೇದ :- ಸಃ, ಶರ್ವದತ್ತೇನ, ವರೇಣ, ದೃಪ್ತಃ, ಪುನಃ, ಯೋದ್ಧುಂ, ಕೃಷ್ಣಮ್, ಏವ, ಆಸಸಾದ, ತಸ್ಯ, ಅಸ್ತ್ರಶಸ್ತ್ರಾಣಿ, ನಿವಾರ್ಯ, ಕೇಶವಃ, ಚಕ್ರೇಣ, ಚಕ್ರೇ, ತಮ್, ಅಪಾಸ್ತಕಂಧರಂ, ಸಃ, ಚ, ಆಪ, ಪಾಪಃ, ತಮಃ, ಏವ, ಘೋರಂ, ಕೃಷ್ಣದ್ವೇಷಾತ್. ನಿತ್ಯದುಃಖಾತ್ಮಕಂ, ತತ್.**

**ಅರ್ಥ** :- **ಶರ್ವದತ್ತೇನ** = ಶಿವನಿಂದ ಕೊಡಲ್ಪಟ್ಟ; **ವರೇಣ** = ವರದಿಂದ; **ದೃಪ್ತಃ** = ಮತ್ತನಾಗಿದ್ದ; **ಸಃ** = ಆ ಏಕಲವ್ಯನು; **ಪುನಃ** = ಮತ್ತೊಮ್ಮೆ; **ಯೋದ್ಧುಂ** = ಯುದ್ಧಮಾಡಲಿ; **ಕೃಷ್ಣಮ್ ಏವ** = ಶ್ರೀಕೃಷ್ಣನನ್ನೇ; **ಆಸಸಾದ** = ಸಮೀಪಿಸಿದನು. **ಕೇಶವಃ** = ಶ್ರೀಕೃಷ್ಣನು; **ತಸ್ಯ** = ಅವನ; **ಅಸ್ತ್ರಶಸ್ತ್ರಾಣಿ** = ಅಸ್ತ್ರಶಸ್ತ್ರಗಳನ್ನು; **ನಿವಾರ್ಯ** = ಪರಿಹರಿಸಿ; **ಚಕ್ರೇಣ** = ಚಕ್ರದಿಂದ; **ತಮ್** = ಅವನನ್ನು; **ಅಪಾಸ್ತಕಂಧರಂ** = ಕುತ್ತಿಗೆ ಇಲ್ಲದವನನ್ನಾಗಿ; **ಚಕ್ರೇ** = ಮಾಡಿದನು. **ಪಾಪಃ** = ಪಾಪಸ್ವರೂಪನಾದ; **ಸಃ ಚ** = ಆ ಏಕಲವ್ಯನಾದರೂ; **ಕೃಷ್ಣದ್ವೇಷಾತ್** = ಶ್ರೀಕೃಷ್ಣನಲ್ಲಿ

ದ್ವೇಷಮಾಡಿದ್ದರಿಂದ; **ಘೋರಂ** = ಕ್ರೂರವಾದ; **ನಿತ್ಯದುಃಖಾತ್ಮಕಂ** = ಯಾವಾಗಲೂ ದುಃಖವೇ ಇರುವ; **ತತ್** = ಪ್ರಸಿದ್ಧವಾದ; **ತಮಃ ಏವ** = ತಮಸ್ಸನ್ನೇ; **ಆಪ** = ಹೊಂದಿದನು.

ತಾತ್ಪರ್ಯ :- ಶಿವನು ಕೊಟ್ಟ ವರದಿಂದ ಅಹಂಕಾರಿಯಾದ ಏಕಲವ್ಯನು ಪುನಃ ಕೃಷ್ಣನ ಮೇಲೆ ಯುದ್ಧಕ್ಕೆ ಬರುತ್ತಾನೆ. ಈ ಬಾರಿ ಶ್ರೀಕೃಷ್ಣನು ಅವನು ಪ್ರಯೋಗಿಸಿದ ಶಸ್ತ್ರಾಸ್ತ್ರಗಳನ್ನು ನಾಶಮಾಡಿ ಚಕ್ರದಿಂದ ಅವನ ತಲೆಯನ್ನು ಕಡಿಯುತ್ತಾನೆ. ಭಗವಂತನಲ್ಲಿ ದ್ವೇಷಮಾಡಿದ್ದರಿಂದ ಅವನೂ ನಿತ್ಯದುಃಖಮಯವಾದ ತಮಸ್ಸನ್ನು ಹೊಂದುತ್ತಾನೆ.

**ಏವಂ ಯದೂನಾಮೃಷಭೇಣ ಸೂದಿತೇ**
**ಪೌಂಡ್ರೇ ತಥಾ ಕಾಶಿನೃಪೇ ಚ ಪಾಪೇ ।**
**ಕಾಶೀಶಪುತ್ರಸ್ತು ಸುದಕ್ಷಿಣಾಖ್ಯಸ್ತಪೋ-**
**ಚರಚ್ಛಂಕರಾಯೋರುಭಕ್ತ್ಯಾ ॥ ೨೦೮ ॥**

ಪದಚ್ಛೇದ :- **ಏವಂ, ಯದೂನಾಮ್, ಋಷಭೇಣ, ಸೂದಿತೇ, ಪೌಂಡ್ರೇ, ತಥಾ, ಕಾಶಿನೃಪೇ, ಚ, ಪಾಪೇ, ಕಾಶೀಶಪುತ್ರಃ, ತು, ಸುದಕ್ಷಿಣಾಖ್ಯಃ, ತಪಃ, ಅಚರತ್, ಶಂಕರಾಯ, ಉರುಭಕ್ತ್ಯಾ.**

ಅರ್ಥ :- **ಏವಂ** = ಹೀಗೆ; **ಯದೂನಾಮ್** = ಯಾದವರಲ್ಲಿ; **ಋಷಭೇಣ** = ಶ್ರೇಷ್ಠನಾದ ಶ್ರೀಕೃಷ್ಣನಿಂದ; **ಪೌಂಡ್ರೇ** = ಪೌಂಡ್ರಕವಾಸುದೇವನು; **ತಥಾ** = ಹಾಗೆಯೇ; **ಪಾಪೇ** = ಪಾಪಿಯಾದ; **ಕಾಶಿನೃಪೇ ಚ** = ಕಾಶಿರಾಜನೂ ಕೂಡ; **ಸೂದಿತೇ (ಸತಿ)** = ನಾಶಮಾಡಲ್ಪಡಲು; **ಸುದಕ್ಷಿಣಾಖ್ಯಃ** = ಸುದಕ್ಷಿಣನೆಂಬ ಹೆಸರಿನ; **ಕಾಶೀಶಪುತ್ರಃ** = ಕಾಶಿರಾಜನ ಮಗನು; **ಉರುಭಕ್ತ್ಯಾ** = ಉತ್ಕೃಷ್ಟವಾದ ಭಕ್ತಿಯಿಂದ; **ಶಂಕರಾಯ** = ಶಿವನನ್ನು ಕುರಿತು; **ತಪಃ** = ತಪಸ್ಸನ್ನು; **ಅಚರತ್** = ಮಾಡಿದನು.

ತಾತ್ಪರ್ಯ :- ಯದುಶ್ರೇಷ್ಠನಾದ ಶ್ರೀಕೃಷ್ಣನು ಹೀಗೆ ಪೌಂಡ್ರಕನನ್ನು ಮತ್ತು ಕಾಷಿರಾಜನನ್ನು ಸಂಹರಿಸಲು ಕಾಶಿರಾಜನ ಮಗನಾವ ಸುದಕ್ಷಿಣನು ಉತ್ಕೃಷ್ಟ ಭಕ್ತಿಯಿಂದ ಶಿವನನ್ನುದ್ದೇಶಿಸಿ ತಪಸ್ಸನ್ನು ಮಾಡಿದನು.

**ಪ್ರತ್ಯಕ್ಷಗಂ ತಂ ಶಿವಂ ಪಾಪಬುದ್ಧಿಃ**
**ಕೃಷ್ಣಾಭಾವಂ ಯಾಚತೇ ದುಷ್ಟಚೇತಾಃ ।**
**ಕೃತ್ಯಾಮಸೌ ದಕ್ಷಿಣಾಗ್ನೌ ಶಿವೋಽಪಿ**
**ದೈತ್ಯಾವೇಶಾದದದಾದಾವೃತಾತ್ಮಾ ।। ೨೦೯ ।।**

ಪದಚ್ಛೇದ :- ಪ್ರತ್ಯಕ್ಷಗಂ, ತಂ, ಶಿವಂ, ಪಾಪಬುದ್ಧಿಃ, ಕೃಷ್ಣಾಭಾವಂ, ಯಾಚತೇ, ದುಷ್ಟಚೇತಾಃ, ಕೃತ್ಯಾಮ್, ಅಸೌ, ದಕ್ಷಿಣಾಗ್ನೌ, ಶಿವಃ, ಅಪಿ, ದೈತ್ಯಾವೇಶಾತ್, ಅದದಾತ್, ಆವೃತಾತ್ಮಾ.

**ಅರ್ಥ** :- **ದುಷ್ಟಚೇತಾಃ** = ದುಷ್ಟಾತ್ಮನಾದ; **ಪಾಪಬುದ್ಧಿಃ** = ಪಾಪಕಾರ್ಯದಲ್ಲೇ ಬುದ್ಧಿಯುಳ್ಳ ಸುದಕ್ಷಿಣನು; **ಪ್ರತ್ಯಕ್ಷಗಂ** = ಪ್ರತ್ಯಕ್ಷಗೋಚರನಾದ; **ತಂ** = ಆ; **ಶಿವಂ (ಪ್ರತಿ)** = ಶಿವನನ್ನು ಕುರಿತು; **ಕೃಷ್ಣಾಭಾವಂ** = ಕೃಷ್ಣನ ಅಭಾವವನ್ನು; **ಯಾಚತೇ** = ಪ್ರಾರ್ಥಿಸಿದನು. **ದೈತ್ಯಾವೇಶಾತ್** = ದೈತ್ಯನ ಆವೇಶದಿಂದ; **ಆವೃತಾತ್ಮಾ** = ಮುಚ್ಚಲ್ಪಟ್ಟ ಮನಸ್ಸುಳ್ಳ; **ಅಸೌ** = ಈ; **ಶಿವಃ ಅಪಿ** = ಶಿವನೂ ಕೂಡ; **ದಕ್ಷಿಣಾಗ್ನೌ** = ದಕ್ಷಿಣಾಗ್ನಿಯಲ್ಲಿ; **ಕೃತ್ಯಾಮ್** = ಕೃತ್ಯವೆಂಬ ಭೂತವಿಶೇಷವನ್ನು; **(ಉತ್ಪಾದ್ಯ)** = ಹುಟ್ಟಿಸಿ; **ಅದದಾತ್** = ಕೊಟ್ಟನು.

ತಾತ್ಪರ್ಯ :- ದುಷ್ಟಾತ್ಮನಾದ ಸುದಕ್ಷಿಣನು ಶಿವನು ಪ್ರತ್ಯಕ್ಷನಾಗಲು ಕೃಷ್ಣನಿಲ್ಲದಿರುವಂತಾಗಲಿ ಎಂದು ವರವನ್ನು ಪ್ರಾರ್ಥಿಸುತ್ತಾನೆ. ದೈತ್ಯನ ಆವೇಶದಿಂದ ಆವೃತವಾದ ಮನಸ್ಸುಳ್ಳ ಶಿವನೂ ಕೂಡ ದಕ್ಷಿನಾಗ್ನಿಯಲ್ಲಿ ಕೃತ್ಯ(ಭೂತವಿಶೇಷ)ವೊಂದನ್ನು ಸೃಷ್ಟಿಮಾಡಿ ಅವನಿಗೆ ಕೊಡುತ್ತಾನೆ.

**ಸ ದಕ್ಷಿಣಾಗ್ನಿಶ್ಚಾಸುರಾವೇಶಯುಕ್ತಃ**
**ಸಂಪೂಜಿತಃ ಕಾಶಿರಾಜಾತ್ಮಜೇನ ।**
**ವರಾದುಮೇಶಸ್ಯ ವಿವೃದ್ಧಶಕ್ತಿರ್ಯಯೌ**
**ಕೃಷ್ಣೋ ಯತ್ರ ಸಂಪೂರ್ಣಶಕ್ತಿಃ ।। ೨೧೦ ।।**

ಪದಚ್ಛೇದ :- ಸಃ, ದಕ್ಷಿಣಾಗ್ನಿಃ, ಚ, ಅಸುರಾವೇಶಯುಕ್ತಃ, ಸಂಪೂಜಿತಃ, ಕಾಶಿರಾಜಾತ್ಮಜೇನ, ವರಾದುಮೇಶಸ್ಯ, ವಿವೃದ್ಧಶಕ್ತಿಃ, ಯಯೌ, ಕೃಷ್ಣಃ, ಯತ್ರ, ಸಂಪೂರ್ಣಶಕ್ತಿಃ.

ಅರ್ಥ :- ಕಾಶಿರಾಜಾತ್ಮಜೇನ = ಕಾಶಿರಾಜನ ಮಗನಿಂದ; ಸಂಪೂಜಿತಃ = ಚೆನ್ನಾಗಿ ಪೂಜಿಸಲ್ಪಟ್ಟ; ಅಸುರಾವೇಶಯುಕ್ತಃ = ಅಸುರನ ಆವೇಶದಿಂದ ಕೂಡಿದ; ಸಃ = ಆ; ದಕ್ಷಿಣಾಗ್ನಿಃ = ದಕ್ಷಿನಾಗ್ನಿಸ್ವರೂಪವಾದ ಕೃತ್ಯವೆಂಬ ಭೂತವು; ಉಮೇಶಸ್ಯ = ಉಮಾಪತಿಯಾದ ಶಿವನ; ವರಾತ್ = ವರದಿಂದ; ವಿವೃದ್ಧಶಕ್ತಿಃ (ಸನ್) = ವೃದ್ಧಿಯಾದ ಶಕ್ತಿಯುಳ್ಳದ್ದಾಗಿ; ಯತ್ರ = ಎಲ್ಲಿ; ಸಂಪೂರ್ಣಶಕ್ತಿಃ = ಪರಿಪೂರ್ಣಶಕ್ತಿಯುಳ್ಳ; ಕೃಷ್ಣಃ = ಕೃಷ್ಣನಿದ್ದನೋ; (ತತ್ರ) = ಅಲ್ಲಿಗೆ; ಯಯೌ = ಹೋಯಿತು.

ತಾತ್ಪರ್ಯ :- ದಕ್ಷಿಣಾಗ್ನಿಸ್ವರೂಪವಾದ ಆ ಕೃತ್ಯವನ್ನಾದರೂ ಸುದಕ್ಷಿಣನು ಚೆನ್ನಾಗಿ ಪೂಜಿಸಿದನು. ಅಸುರಾವೇಶದಿಂದ ಕೂಡಿದ ಮತ್ತು ಶಿವನ ಬಲದಿಂದ ಬಲಗೊಂಡ ಆ ಕೃತ್ಯವು ಪರಿಪೂರ್ಣಶಕ್ತಿಯುಳ್ಳ ಕೃಷ್ಣನಿದ್ದಲ್ಲಿಗೆ ಹೋಯಿತು.

ಕೃಷ್ಣಸ್ತಸ್ಯ ಪ್ರತಿಘಾತಾರ್ಥಮುಗ್ರಂ
ಸಮಾದಿಶಚ್ಚಕ್ರಮನಂತವೀರ್ಯಃ ।
ಜಾಜ್ವಲ್ಯಮಾನಂ ತದಮೋಘವೀರ್ಯಂ
ವ್ಯದ್ರಾವಯದ್ವಹ್ನಿಮಿಮಂ ಸುದೂರಮ್ ॥ ೨೧೧ ॥

ಪದಚ್ಛೇದ :– ಕೃಷ್ಣಃ, ತಸ್ಯ, ಪ್ರತಿಘಾತಾರ್ಥಮ್, ಉಗ್ರಂ, ಸಮಾದಿಶತ್, ಚಕ್ರಮ್, ಅನಂತವೀರ್ಯಃ, ಜಾಜ್ವಲ್ಯಮಾನಂ, ತತ್, ಅಮೋಘವೀರ್ಯಂ, ವ್ಯದ್ರಾವಯತ್, ವಹ್ನಿಮ್, ಇಮಂ, ಸುದೂರಮ್.

ಅರ್ಥ :- ಅನಂತವೀರ್ಯಃ = ಅಪರಿಮಿತ ಪರಾಕ್ರಮವುಳ್ಳ; ಕೃಷ್ಣಃ = ಶ್ರೀಕೃಷ್ಣನು; ತಸ್ಯ = ಆ ಕೃತ್ಯದ; ಪ್ರತಿಘಾತಾರ್ಥಂ = ನಾಶಕ್ಕಾಗಿ; ಉಗ್ರಂ = ಕ್ರೂರವಾದ; ಚಕ್ರಂ = ಚಕ್ರವನ್ನು; ಸಮಾದಿಶತ್ = ಆದೇಶಿಸಿದನು. ಜಾಜ್ವಲ್ಯಮಾನಂ = ಚೆನ್ನಾಗಿ ಉರಿಯುತ್ತಿರುವ; ಅಮೋಘವೀರ್ಯಂ = ವ್ಯರ್ಥವಾಗದ ಶಕ್ತಿಯುಳ್ಳ; ತತ್ = ಆ ಚಕ್ರವು; ಇಮಂ = ಈ; ವಹ್ನಿಂ = ಅಗ್ನಿಸ್ವರೂಪವಾದ ಕೃತ್ಯವನ್ನು; ಸುದೂರಂ = ಬಹಳದೂರ; ವ್ಯದ್ರಾವಯತ್ = ಓಡಿಸಿತು.

ತಾತ್ಪರ್ಯ :- ಆ ಕೃತ್ಯವು ಬಂದಾಗ ಶ್ರೀಕೃಷ್ಣನು ಅದರ ನಾಶಕ್ಕಾಗಿ ಸುದರ್ಶನಚಕ್ರವನ್ನು ಆದೇಶಿಸುತ್ತಾನೆ. ವ್ಯರ್ಥವಾಗದ ಶಕ್ತಿಯುಳ್ಳ

ಉರಿಯುತ್ತಿರುವ ಆ ಸುದರ್ಶನವು ವಹ್ನಿಸ್ವರೂಪವಾದ ಆ ಕೃತ್ಯವನ್ನು ಬಹಳ ದೂರ ಓಡಿಸುತ್ತದೆ.

**ಕೃತ್ಯಾತ್ಮಕೋ ವಹ್ನಿರಸೌ ಪ್ರಧಾನ-**
**ವಹ್ನೇಃ ಪುತ್ರಶ್ಚಕ್ರವಿದ್ರಾವಿತೋಽಥ ।**
**ಸಹಾನುಬಂಧಂ ಚ ಸುದಕ್ಷಿಣಂ ತಂ**
**ಭಸ್ಮೀಚಕಾರಾಶು ಸಪುತ್ರಭಾರ್ಯಮ್ ॥ ೨೧೨ ॥**

ಪದಚ್ಛೇದ :- ಕೃತ್ಯಾತ್ಮಕಃ, ವಹ್ನಿಃ, ಅಸೌ, ಪ್ರಧಾನವಹ್ನೇಃ, ಪುತ್ರಃ, ಚಕ್ರವಿದ್ರಾವಿತಃ, ಅಥ, ಸಹಾನುಬಂಧಂ, ಚ, ಸುದಕ್ಷಿಣಂ, ತಂ, ಭಸ್ಮೀಅಚಕಾರ, ಆಶು, ಸಪುತ್ರಭಾರ್ಯಮ್.

**ಅರ್ಥ :-** **ಕೃತ್ಯಾತ್ಮಕಃ** = ಕೃತ್ಯಸ್ವರೂಪವಾದ; **ಅಸೌ** = ಈ; **ವಹ್ನಿಃ** = ವಹ್ನಿಯು; **ಪ್ರಧಾನವಹ್ನೇಃ** = ಪ್ರಧಾನವಹ್ನಿಯ; **ಪುತ್ರಃ** = ಮಗನು; **ಚಕ್ರವಿದ್ರಾವಿತಃ (ಸನ್)** = ಚಕ್ರದಿಂದ ಓಡಿಸಲ್ಪಟ್ಟವನಾಗಿ; **ಸಪುತ್ರಭಾರ್ಯಂ** = ಹೆಂಡತಿಮಕ್ಕಳಿಂದ ಸಹಿತನಾದ; **ಚ** = ಮತ್ತು; **ಸಹಾನುಬಂಧಂ** = ಬಾಂಧವರಿಂದ ಸಹಿತನಾದ; **ತಂ** = ಆ; **ಸುದಕ್ಷಿಣಂ** = ಸುದಕ್ಷಿಣನನ್ನು; **ಆಶು** = ಶೀಘ್ರವಾಗಿ; **ಭಸ್ಮೀಚಕಾರ** = ಭಸ್ಮಮಾಡಿದನು.

ತಾತ್ಪರ್ಯ :- ಕೃತ್ಯಸ್ವರೂಪವಾದ ಈ ವಹ್ನಿಯು ಪ್ರಧಾನ ವಹ್ನಿಯ ಮಗ. ಸುದರ್ಶನದಿಂದ ಓಡಿಸಲ್ಪಟ್ಟ ಆ ಕೃತ್ಯವು ಹೆಂಡತಿ ಮಕ್ಕಳು ಬಂಧುಗಳ ಸಹಿತವಾಗಿ ಸುದಕ್ಷಿಣನನ್ನು ಸುಟ್ಟು ಭಸ್ಮಮಾಡಿತು.

ವಿಶೇಷವಿಚಾರ :- ಸುದರ್ಶನವೇ ಕೃತ್ಯವನ್ನು ಓಡಿಸಿ ನಂತರ ಸುದಕ್ಷಿಣನನ್ನು ಬಂಧುಗಳ ಸಹಿತವಾಗಿ ಸುಟ್ಟಿತು ಎಂಬ ವ್ಯಾಖ್ಯಾನವು ಭಾಗವತ-ಬ್ರಹ್ಮಪುರಾಣಗಳಿಗೆ. ವಿರುದ್ಧ ಏಕೆಂದರೆ ಅಲ್ಲಿ

ಕೃತ್ಯಾನಲಃ ಪ್ರತಿಹತಃ ಸ ರಥಾಂಗಪಾಣೇ-
ರಸ್ತ್ರೌಜಸಾ ನೃಪ ವಿಭಗ್ನಮುಖೋ ನಿವೃತ್ತಃ ।
ವಾರಾಣಸೀಂ ಪ್ರತಿಸಮೇತ್ಯ ಸುದಕ್ಷಿಣಂ ತಂ
ಸನ್ನಿರ್ಜಿತಂ ಸಮದಹತ್ ಸ್ವಕೃತೋಽಭಿಚಾರಃ ॥

ಎಂದು ಸ್ಪಷ್ಟವಾಗಿ ಕೃತ್ಯವೇ ಸುದಕ್ಷಿಣನನ್ನು ಕೊಂದಿತೆಂದು ಹೇಳಿದೆ ಜನಾರ್ದನೀಯ.

**ದಗ್ಧ್ವಾ ಪುರೀಂ ವಾರಣಾಸೀಂ ಸುದರ್ಶನಃ**
**ಪುನಃ ಪಾರ್ಶ್ವಂ ವಾಸುದೇವಸ್ಯ ಚಾಗಾತ್ ।**
**ಸುದಕ್ಷಿಣೋಸೌ ತಮ ಏವ ಜಗ್ಮಿವಾನ್**
**ಕೃಷ್ಣದ್ವೇಷಾತ್ ಸಾನುಬಂಧಃ ಸುಪಾಪಃ ॥ ೨೧೩ ॥**

ಪದಚ್ಛೇದ :- ದಗ್ಧ್ವಾ, ಪುರೀಂ, ವಾರಣಾಸೀಂ, ಸುದರ್ಶನಃ, ಪುನಃ, ಪಾರ್ಶ್ವಂ, ವಾಸುದೇವಸ್ಯ, ಚ, ಅಗಾತ್, ಸುದಕ್ಷಿಣಃ, ಅಸೌ, ತಮಃ, ಏವ, ಜಗ್ಮಿವಾನ್, ಕೃಷ್ಣದ್ವೇಷಾತ್, ಸಾನುಬಂಧಃ, ಸುಪಾಪಃ.

**ಅರ್ಥ** :- **ಸುದರ್ಶನಃ** = ಸುದರ್ಶನವು; **ವಾರಣಾಸೀಂ ಪುರೀಂ ಚ** = ವಾರಣಾಸೀ ಪಟ್ಟಣವನ್ನೂ ಕೂಡ; **ದಗ್ಧ್ವಾ** = ಸುಟ್ಟು; **ಪುನಃ** = ಮತ್ತೆ; **ವಾಸುದೇವಸ್ಯ** = ಶ್ರೀಕೃಷ್ಣನ; **ಪಾರ್ಶ್ವಂ** = ಸಮೀಪ; **ಅಗಾತ್** = ಹೋಯಿತು. **ಸುಪಾಪಃ** = ಬಹಳ ಪಾಪಿಯಾದ; **ಅಸೌ** = ಈ; **ಸುದಕ್ಷಿಣಃ** = ಸುದಕ್ಷಿಣನು; **ಕೃಷ್ಣದ್ವೇಷಾತ್** = ಕೃಷ್ಣನಲ್ಲಿ ಮಾಡಿದದ್ವೇಷದಿಂದ; **ಸಾನುಬಂಧಃ (ಸನ್)** = ಬಂಧುಗಳಿಂದ ಸಹಿತನಾಗಿ; **ತಮಃ ಏವ** = ತಮಸ್ಸನ್ನೇ; **ಜಗ್ಮಿವಾನ್** = ಹೊಂದಿದನು.

**ತಾತ್ಪರ್ಯ** :- ನಂತರ ಸುದರ್ಶನವು ವಾರಾಣಸೀಪಟ್ಟವನ್ನೂ ಸುಟ್ಟು ಪುನಃ ಶ್ರೀಕೃಷ್ಣನ ಸಮೀಪಕ್ಕೆ ಹೋಯಿತು. ಶ್ರೀಕೃಷ್ಣನ ದ್ವೇಷಮಾಡಿದ್ದರಿಂದ ಪಾಪಿಯಾದ ಸುದಕ್ಷಿಣನು ಬಂಧುಗಳೊಂದಿಗೆ ತಮಸ್ಸಿಗೇ ಹೋದನು.

**ಕೃಷ್ಣಃ ಕ್ರೀಡನ್ ದ್ವಾರವತ್ಯಾಂ ಸುಪೂರ್ಣ-**
**ನಿತ್ಯಾನಂದಃ ಕ್ವಚಿದಾಹಸ್ಮ ಭೈಷ್ಮೀಮ್ ।**
**ವಿಡಂಬಯನ್ ಗೃಹಿಣಾಮೇವ ಚೇಷ್ಟಾ**
**ನಿತ್ಯಾವಿರೋಧೋಪಿ ತಯಾ ವಿದೋಷಯಾ ॥ ೨೧೪ ॥**

ಪದಚ್ಛೇದ :- ಕೃಷ್ಣಃ, ಕ್ರೀಡನ್, ದ್ವಾರವತ್ಯಾಂ, ಸುಪೂರ್ಣನಿತ್ಯಾನಂದಃ, ಕ್ವಚಿತ್, ಆಹ, ಸ್ಮ, ಭೈಷ್ಮೀಮ್, ವಿಡಂಬಯನ್, ಗೃಹಿಣಾಮ್, ಏವ, ಚೇಷ್ಟಾ, ನಿತ್ಯಾವಿರೋಧಃ, ಅಪಿ, ತಯಾ, ವಿದೋಷಯಾ.

ಅರ್ಥ :- ಸುಪೂರ್ಣನಿತ್ಯಾನಂದಃ = ಪರಿಪೂರ್ಣವಾದ ನಿತ್ಯವಾದ ಆನಂದವುಳ್ಳ; ಕೃಷ್ಣಃ = ಶ್ರೀಕೃಷ್ಣನು; ದ್ವಾರವತ್ಯಾಂ = ದ್ವಾರಕೆಯಲ್ಲಿ; ಕ್ರೀಡನ್ (ಸನ್) = ವಿಹರಿಸುತ್ತಾ; ವಿದೋಷಯಾ = ದೋಷರಹಿತಳಾ; ತಯಾ = ಆ ರುಕ್ಮಿಣಿಯೊಂದಿಗೆ; ನಿತ್ಯಾವಿರೋಧಃ ಅಪಿ = ಎಂದಿಗೂ ವಿರೋಧವಿಲ್ಲದಿದ್ದರೂ ಕೂಡ; ಗೃಹಿಣಾಂ = ಗೃಹಸ್ಥರ; ಚೇಷ್ಟಾಃ ಏವ = ವ್ಯಾಪಾರಗಳನ್ನೇ; ವಿಡಂಬಯನ್ (ಸನ್) = ವಿಡಂಬನೆಮಾಡುತ್ತಾ; ಕ್ವಚಿತ್ = ಒಮ್ಮೆ; ಭೈಷ್ಮೀಂ (ಪ್ರತಿ) = ರುಕ್ಮಿಣೀಯನ್ನು ಕುರಿತು; ಆಹ ಸ್ಮ = ಹೇಳಿದನು.

ತಾತ್ಪರ್ಯ :- ಹೀಗೆ ಪರಿಪೂರ್ಣವಾದ ನಿತ್ಯವಾದ ಆನಂದಸ್ವರೂಪನಾದ ಶ್ರೀಕೃಷ್ಣನು ದ್ವಾರಕೆಯಲ್ಲಿ ಕ್ರೀಡಿಸುತ್ತಿದ್ದನು. ಅವನಿಗೆ ರುಕ್ಮಿಣಿಯೊಂದಿಗೆ ಎಂದಿಗೂ ವಿರೋಧವಿಲ್ಲ. ರುಕ್ಮಿಣಿಯೂ ದೋಷರಹಿತಳು; ಆದರೂ ಗೃಹಸ್ಥರು ಮಾಡುವ ಪತ್ನಿ ಪರಿಹಾಸವನ್ನು ಅನುಕರಿಸುತ್ತಾ ಒಮ್ಮೆ ರುಕ್ಮಿಣಿಗೆ ಹೀಗೆ ಹೇಳಿದನು.

ತ್ವಯಾ ನ ಕಾರ್ಯಂ ಮಮ ಕಿಂಚ ಭದ್ರೇ
ಮಯಾರೀಣಾಂ ಮಾನಭಂಗಾರ್ಥಮೇವ ।
ಸಮಾಹೃತಾಸೀತಿ ಸಾ ಚಾವಿಯೋಗಂ ಸದಾ
ಕೃಷ್ಣೇನಾತ್ಮನೋಪ್ಯೇವ ವೇತ್ರೀ ॥ ೨೧೫ ॥

ಸ್ತ್ರಿಯಾ ಭೇತ್ತವ್ಯಂ ಭರ್ತುರಿತ್ಯೇವ ಧರ್ಮಂ
ವಿಜ್ಞಾಪಯಂತೀ ದುಃಖಿತೇವಾಸ ದೇವೀ ।
ತಾಂ ಸಾಂತ್ವಯಾಮಾಸ ಗೃಹಸ್ಥಧರ್ಮಂ
ವಿಜ್ಞಾಪಯನ್ ದೇವದೇವೋಪ್ಯದುಃಖಾಮ್ ॥ ೨೧೬ ॥

ಪದಚ್ಛೇದ :- ತ್ವಯಾ, ನ, ಕಾರ್ಯಂ, ಮಮ, ಕಿಂಚ, ಭದ್ರೇ, ಮಯಾ, ಅರೀಣಾಂ, ಮಾನಭಂಗಾರ್ಥಮ್, ಏವ, ಸಮಾಹೃತಾ, ಅಸಿ, ಇತಿ, ಸಾ, ಚ, ಅವಿಯೋಗಂ, ಸದಾ, ಕೃಷ್ಣೇನ, ಆತ್ಮನಃ, ಅಪಿ, ಏವ, ವೇತ್ರೀ, ಸ್ತ್ರಿಯಾ, ಭೇತ್ತವ್ಯಂ, ಭರ್ತುಃ, ಇತಿ, ಏವ, ಧರ್ಮಂ, ವಿಜ್ಞಾಪಯಂತೀ, ದುಃಖಿತಾ, ಇವ, ಆಸ, ದೇವೀ, ತಾಂ, ಸ್ವಾಂತ್ವಯಾಮಾಸ, ಗೃಹಸ್ಥಧರ್ಮಂ, ವಿಜ್ಞಾಪಯನ್, ದೇವದೇವಃ, ಅಪಿ, ಅದುಃಖಾಮ್.

**ಅರ್ಥ** :- **ಭದ್ರೇ** = ಹೇ ಮಂಗಳಕರಳೇ!; **ಮಮ** = ನನಗೆ; **ತ್ವಯಾ** = ನಿನ್ನಿಂದ; **ಕಾರ್ಯಂ** = ಸಾಧಿಸಬೇಕಾದದ್ದು; **ಕಿಂಚ** = ಯಾವುದೂ; **ನ (ಅಸ್ತಿ)** = ಇಲ್ಲ. **ಅರೀಣಾಂ** = ಶತ್ರುಗಳಾದ ಶಿಶಿಪಾಲಾದಿಗಳ; **ಮಾನಾಭಂಗಾರ್ಥಮ್ ಏವ** = ಅಹಂಕಾರದ ನಾಶಕ್ಕಾಗಿಯಷ್ಟೇ; **ಮಯಾ** = ನನ್ನಿಂದ; **ಸಮಾಹೃತಾ ಅಸಿ** = ಕರೆತರಲ್ಪಟ್ಟಿದ್ದೀಯ; **ಇತಿ** = ಎಂದು (ಹೇಳಿದನು); **ಸಾ ಚ** = ಆ ರುಕ್ಮಿಣಿಯಾದರೂ; **ಆತ್ಮನಃ** = ತನಗೆ; **ಕೃಷ್ಣೇನ** = ಶ್ರೀಕೃಷ್ಣನಿಂದ; **ಸದಾ ಏವ** = ಯಾವಾಗಲೂ; **ಅವಿಯೋಗಂ** = ವಿಯೋಗರಾಹಿತ್ಯವನ್ನು; **ವೇತ್ರೀ ಅಪಿ** = ತಿಳಿದವಳಾದರೂ ಕೂಡ; **ದೇವೀ** = ಕ್ರೀಡಾದಿಗುಣವಿಶಿಷ್ಟಳಾದ ರುಕ್ಮಿಣಿಯು; **ಸ್ತ್ರಿಯಾ** = ಹೆಂಡತಿ ಯಾದವಳಿಂದ; **ಭರ್ತುಃ** = ಗಂಡನಿಗೆ; **ಭೇತ್ತವ್ಯಂ** = ಹೆದರಲ್ಪಡಬೇಕು; **ಇತಿ** = ಎಂಬ; **ಧರ್ಮಂ** = ಧರ್ಮವನ್ನು; **ವಿಜ್ಞಾಪಯಂತೀ ಏವ** = ತಿಳಿಸುವವಳಾಗಿಯಷ್ಟೇ; **ದುಃಖಿತಾ ಇವ** = ದುಃಖಗೊಂಡವಳಂತೆ; **ಆಸ** = ಇದ್ದಳು. **ದೇವದೇವಃ ಅಪಿ** = ದೇವತೆಗಳಿಗೂ ಸ್ವಾಮಿಯಾದ ಶ್ರೀಕೃಷ್ಣನೂ ಕೂಡ; **ಗೃಹಸ್ಥಧರ್ಮಂ** = ಗೃಹಸ್ಥರಧರ್ಮವನ್ನು; **ವಿಜ್ಞಾಪಯನ್ (ಸನ್)** = ತಿಳಿಸುತ್ತಾ; **ಅದುಃಖಾಂ** = ದುಃಖರಹಿತಳಾದ; **ತಾಂ** = ಆ ರುಕ್ಮಿಣಿಯನ್ನು; **ಸಾಂತ್ವಯಾಮಾಸ** = ಸಮಾಧಾನಗೊಳಿಸಿದನು.

**ತಾತ್ಪರ್ಯ** :- ಶ್ರೀಕೃಷ್ಣನು ರುಕ್ಮಿಣಿಗೆ ಹೇಳುತ್ತಾನೆ- ಹೇ ಮಂಗಳಕರಳೆ ನಿನ್ನಿಂದ ನನಗೆ ಆಗಬೇಕಾದದ್ದು ಏನೂ ಇಲ್ಲ. ನನ್ನ ಶತ್ರುಗಳಾದ ಶಿಶುಪಾಲಾದಿಗಳ ಅಹಂಕಾರ ನಾಶಮಾಡುವುದಕ್ಕಷ್ಟೇ ನಿನ್ನನ್ನು ಕರೆತಂದೆ ಎಂದು. ಆಗ ತನಗೆ ಶ್ರೀಕೃಷ್ಣನಿಂದ ಎಂದಿಗೂ ವಿಯೋಗವಿಲ್ಲವೆಂದು ತಿಳಿದಿದ್ದರೂ ರುಕ್ಮಿಣಿಯು ಸ್ತ್ರೀಯರು ಗಂಡನಿಗೆ ಹೆದರಬೇಕು ಎಂಬ ಧರ್ಮವನ್ನು ತಿಳಿಸುವ ಸಲುವಾಗಿ ದುಃಖಗೊಂಡವಳಂತೆ ಸುಮ್ಮನಿದ್ದಳು. ಶ್ರೀಕೃಷ್ಣನೂ ಗೃಹಸ್ಥರ ಧರ್ಮವನ್ನು ತಿಳಿಸುತ್ತ ದುಃಖವೇ ಇಲ್ಲದ ರುಕ್ಮಿಣಿಯನ್ನು ಸ್ಮಾಧಾನಪಡಿಸಿದನು.

**ಏವಂ ಕ್ರೀಡತ್ಯಬ್ಜನಾಭೇ ರಮಾಯಾಂ**
**ಕೃಷ್ಣಾದಿಷ್ಟೋ ಗೋಕುಲಂ ರೌಹಿಣೇಯಃ ।**
**ಪ್ರಾಯಾದ್ ದೃಷ್ಟ್ವಾ ತತ್ರ ನಂದಂ ಯಶೋದಾಂ**
**ತತ್ಪೂಜಿತಃ ಕೃಷ್ಣವಾರ್ತಾಂ ಚ ಪೃಷ್ಟಃ ॥ ೨೧೭ ॥**

ಪದಚ್ಛೇದ :- ಏವಂ, ಕ್ರೀಡತಿ, ಅಬ್ಜನಾಭೇ, ರಮಾಯಾಂ, ಕೃಷ್ಣಾದಿಷ್ಟಃ, ಗೋಕುಲಂ, ರೌಹಿಣೇಯಃ, ಪ್ರಾಯಾತ್, ದೃಷ್ಟ್ವಾ, ತತ್ರ, ನಂದಂ, ಯಶೋದಾಂ, ತತ್ಪೂಜಿತಃ, ಕೃಷ್ಣವಾರ್ತಾಂ, ಚ, ಪೃಷ್ಟಃ.

ಅರ್ಥ :- **ಅಬ್ಜನಾಭೇ** = ಪದ್ಮನಭನಾದ ಭಗವಂತನು; **ಏವಂ** = ಈ ರೀತಿಯಾಗಿ; **ರಮಾಯಾಂ** = ರಮಾದೇಯಾದ ರುಕ್ಮಿಣಿಯಲ್ಲಿ; **ಕ್ರೀಡತಿ (ಸತಿ)** = ಕ್ರೀಡಿಸುತ್ತಿರಲು; **ಕೃಷ್ಣಾದಿಷ್ಟಃ** = ಕೃಷ್ಣನಿಂದ ಆಜ್ಞಾಪಿಸಲ್ಪಟ್ಟ; **ರೌಹಿಣೇಯಃ** = ಬಲರಾಮನು; **ಗೋಕುಲಂ (ಪ್ರತಿ)** = ನಂದಗೋಕುಲವನ್ನು ಕುರಿತು; **ಪ್ರಾಯಾತ್** = ಹೋದನು. **ತತ್ರ** = ಅಲ್ಲಿ; **ನಂದಂ** = ನಂದಗೋಪನನ್ನು; **ಯಶೋದಾಂ** = ಯಶೋದಾದೇವಿಯನ್ನು; **ದೃಷ್ಟ್ವಾ** = ನೋಡಿ; **ತತ್ಪೂಜಿತಃ (ಸನ್)** = ಅವರಿಂದ ಪೂಜಿತನಾಗಿ; **ಚ** = ಮತ್ತು; **(ತಾಭ್ಯಾಂ)** = ಅವರಿಬ್ಬರಿಂದ; **ಕೃಷ್ಣವಾರ್ತಾಂ** = ಕೃಷ್ಣನ ವಿಚಾರವನ್ನು; **ಪೃಷ್ಟಃ** = ಕೇಳಲ್ಪಟ್ಟವನಾದನು.

ತಾತ್ಪರ್ಯ :- ಹೀಗೆ ಶ್ರೀಕೃಷ್ಣನು ರಮಾವತಾರಲಾದ ರುಕ್ಮಿಣಿಯೊಂದಿಗೆ ವಿಹಾರಮಾಡಿತ್ತಿರಲು ಒಮ್ಮೆ ಶ್ರೀಕೃಷ್ಣನಿಂದಲೇ ಆಜ್ಞಪ್ತನಾದ ಬಲರಾಮನು ಗೋಕುಲಕ್ಕೆ ಹೋದನು. ಅಲ್ಲಿ ನಂದಗೋಪ ಮತ್ತು ಯಶೋದೆಯರನ್ನು ಕಂಡ ಅವರಿಂದ ಪೂಜೆಯನ್ನು ಸ್ವೀಕರಿಸಿದನು. ಅವರಿಬ್ಬರು ಕೃಷ್ಣನ ಬಗ್ಗೆ ಬಲರಾಮನನ್ನು ಪ್ರಶ್ನಿಸಿದರು.

**ಮಾಸೌ ತತ್ರ ನ್ಯವಸದ್ ಗೋಪಿಕಾಭೀ**
**ರೇಮೇ ಕ್ಷೀಬೋ ಯಮುನಾಮಾಹ್ವಯಚ್ಚ ।**
**ಮತ್ತೋಯಮಿತ್ಯೇವ ನದೀಮನಾಗತಾಂ ಚಕರ್ಷ**
**ರಾಮೋ ಲಾಂಗಲೇನಾಗ್ರ್ಯವೀರ್ಯಃ ॥ ೨೧೮ ॥**

ಪದಚ್ಛೇದ :- ಮಾಸೌ, ತತ್ರ, ನ್ಯವಸತ್, ಗೋಪಿಕಾಭಿಃ, ರೇಮೇ, ಕ್ಷೀಬಃ, ಯಮುನಾಮ್, ಆಹ್ವಯತ್, ಚ, ಮತ್ತಃ, ಅಯಮ್, ಇತಿ, ಏವ, ನದೀಮ್, ಅನಾಗತಾಂ, ಚಕರ್ಷ, ರಾಮಃ, ಲಾಂಗಲೇನ, ಅಗ್ರ್ಯವೀರ್ಯಃ.

ಅರ್ಥ :- **(ಸಃ)** = ಆ ಬಲರಾಮನು; **ತತ್ರ** = ಆ ಗೋಕುಲದಲ್ಲಿ; **ಮಾಸೌ** = ಎರಡು ತಿಂಗಳು; **ನ್ಯವಸತ್** = ವಾಸಮಾಡಿದನು. **ಗೋಪಿಕಾಭಿಃ**

= ಗೋಪಿಕೆಯರೊಂದಿಗೆ; **ಕ್ಷೀಬಃ (ಸನ್)** = ಮತ್ತನಾಗಿ; **ರೇಮೇ** = ಕ್ರೀಡಿಸಿದನು. **ಚ** = ಮತ್ತು; **ಯಮುನಾಂ** = ಯಮುನೆಯನ್ನು; **ಆಹ್ವಯತ್** = ಕರೆದನು. **ಅಯಂ** = ಇವನು; **ಮತ್ತಃ** = ಮತ್ತನಾಗಿದ್ದಾನೆ; **ಇತಿ ಏವ** = ಎಂದೇ; **ಅನಾಗತಾಂ** = ಬರದಿರುವ; **ನದೀಂ** = ಯಮುನಾನದಿಯನ್ನು; **ಅಗ್ರ್ಯವೀರ್ಯಃ** = ಶ್ರೇಷ್ಠಪರಾಕ್ರಮವುಳ್ಳ; **ರಾಮಃ** = ಬಲರಾಮನು; **ಲಾಂಗಲೇನ**; ನೇಗಿಲಿನಿಂದ; **ಚಕರ್ಷ** = ಎಳೆದನು.

**ತಾತ್ಪರ್ಯ :-** ಗೋಕುಲಕ್ಕೆ ಹೋದ ಬಲರಾಮನು ಅಲ್ಲಿಯೇ ಗೋಪಿಕೆಯರೊಂದಿಗೆ ಮತ್ತನಾಗಿ ಎರಡು ತಿಂಗಳುಗಳ ಕಾಲ ವಿಹರಿಸಿದನು. ಮತ್ತು ಯಮುನೆಯನ್ನೂ ವಿಹಾರಕ್ಕಾಗಿ ಕರೆದನು. ಇವನು ಮತ್ತನಾಗಿದ್ದನೆ ಎಂಬ ಕಾರಣಕ್ಕೇ ಯಮುನೆಯು ಬರುವುದಿಲ್ಲ. ಆಗ ಪರಾಕ್ರಮಿಯಾದ ಬಲರಾಮನು ತನ್ನ ನೇಗಿಲಿನಿಂದ ನದಿಯನ್ನು ಎಳೆದನು.

**ಪುನಸ್ತಯಾ ಪ್ರಣತಃ ಸಂಸ್ತುತಶ್ಚ**
**ವ್ಯಸರ್ಜಯತ್ ತಾಮಥ ನಂದಗೋಪಮ್ ।**
**ಆಪೃಚ್ಛ್ಯ ಚಾಗಾದ್ ದ್ವಾರಕಾಂ ಕೇಶವಾಯ**
**ನ್ಯವೇದಯನ್ನಂದಗೋಪಾದಿಭಕ್ತಿಮ್ ॥ ೨೮ ॥**

**ಪದಚ್ಛೇದ :-** ಪುನಃ, ತಯಾ, ಪ್ರಣತಃ, ಸಂಸ್ತುತಃ, ಚ, ವ್ಯಸರ್ಜಯತ್, ತಾಮ್, ಅಥ, ನಂದಗೋಪಮ್, ಆಪೃಚ್ಛ್ಯ, ಚ, ಅಗಾತ್, ದ್ವಾರಕಾಂ, ಕೇಶವಾಯ, ನ್ಯವೇದಯತ್, ನಂದಗೋಫಾದಿಭಕ್ತಿಮ್.

**ಅರ್ಥ :-** **ಪುನಃ** = ಮತ್ತೆ; **ತಯಾ** = ಆ ಯಮುನೆಯಿಂದ; **ಪ್ರಣತಃ (ಸನ್)** = ನಮಸ್ಕರಿಸಲ್ಪಟ್ಟವನಾಗಿ; **ಚ** = ಮತ್ತು; **ಸಂಸ್ತುತಃ (ಸನ್)** = ಚೆನ್ನಾಗಿ ಸ್ತುತಿಸಲ್ಪಟ್ಟವನಾಗಿ; **ತಾಂ** = ಆ ಯಮುನೆಯನ್ನು; **ವ್ಯಸರ್ಜಯತ್** = ಬಿಟ್ಟನು. **ಅಥ** = ಆ ನಂತರ; **ನಂದಗೋಪಂ** = ನಂದಗೋಪನನ್ನು; **ಆಪೃಚ್ಛ್ಯ** = ಕೇಳಿ; **ದ್ವಾರಕಾಂ (ಪ್ರತಿ)** = ದ್ವಾರಕೆಯನ್ನು ಕುರಿತು; **ಅಗಾತ್** = ಹೋದನು; **ಚ** = ಮತ್ತು; **ಕೇಶವಾಯ** = ಶ್ರೀಕೃಷ್ಣನಿಗೆ; **ನಂದಗೋಪಾದಿಭಕ್ತಿಂ** = ನಂದಗೋಪ ಮೊದಲಾದವರ ಭಕ್ತಿಯನ್ನು; **ನ್ಯವೇದಯತ್** = ಹೇಳಿದನು.

ತಾತ್ಪರ್ಯ :- ಮತ್ತೆ ಯಮುನೆಯು ಬಲರಾಮನನ್ನು ನಮಸ್ಕರಿಸಿ ಸ್ತೋತ್ರಮಾಡಿದಳು. ಆಗ ಬಲರಾಮನು ಯಮುನೆಯನ್ನು ಬಿಟ್ಟನು. ನಂದಗೋಪನನ್ನು ಕೃಷ್ಣನಿಗೆ ಹೇಳಬೇಕಾದುದನ್ನು ಕೇಳಿ ದ್ವಾರಕೆಗೆ ಹೋಗುತ್ತಾನೆ. ಮತ್ತು ಅಲ್ಲಿ ಶ್ರೀಕೃಷ್ಣನಿಗೆ ನಂದಗೋಪ, ಗೋಪಿಕೆಯರ ಭಕ್ತಿಯನ್ನು ತಿಳಿಸುತ್ತಾನೆ.

**ತದ್ಯೆವ ಮೈಂದೋ ವಿವಿದಶ್ಚ ಭೌಮೇ ಹತೇ**
**ಸಖಾಯೇ ದಾನವಾವೇಶಯುಕ್ತೌ ।**
**ಆನರ್ತರಾಷ್ಟ್ರಂ ವಾಸುದೇವಪ್ರತೀಪೌ ವ್ಯನಾಶ-**
**ಯೇತಾಂ ವಾಸುದೇವೋಥ ಚೋಚೇ ॥ ೨೨೦ ॥**

**ಪದಚ್ಛೇದ :-** ತದಾ, ಏವ, ಮೈಂದಃ, ವಿವಿದಃ, ಚ, ಭೌಮೇ, ಹತೇ, ಸಖಾಯೇ, ದಾನವಾವೇಶಯುಕ್ತೌ, ಆನರ್ತರಾಷ್ಟ್ರಂ, ವಾಸುದೇವಪ್ರತೀಪೌ, ವ್ಯನಾಶಯೇತಾಂ, ವಾಸುದೇವಃ, ಅಥ, ಚ, ಊಚೇ.

**ಅರ್ಥ :-** ತದಾ ಏವ = ಬಲರಾಮನು ಗೋಕುಲಕ್ಕೇ ಹೋದಾಗಲೇ; **ದಾನವಾವೇಶಯುಕ್ತೌ** = ದಾನವರ ಆವೇಶದಿಂದಕೂಡಿದ; **ಮೈಂದಃ** = ಮೈಂದನು; **ಚ** = ಮತ್ತು; **ವಿವಿದಃ** = ವಿವಿದನು; **ಸಖಾಯೇ** = ಸ್ನೇಹಿತನಾದ; **ಭೌಮೇ** = ಭೂಮಿಸುತನಾದ ನರಕಾಸುರನು; **ಹತೇ (ಸತಿ)** = ಸಾಯಲು; **ವಾಸುದೇವಪ್ರತೀಪೌ (ಸಂತೌ)** = ಶ್ರೀಕೃಷ್ಣನಿಗೆ ವಿರೋಧಮಾಡುವವರಾಗಿ; **ಆನರ್ತರಾಷ್ಟ್ರಂ** = ಆನರ್ತರಾಷ್ಟ್ರವನ್ನು; **ವ್ಯನಾಶಯೇತಾಂ** = ನಾಶಮಾಡಿದರು. **ಅಥ** = ಆ ನಂತರ; **ವಾಸುದೇವಃ ಚ** = ಶ್ರೀಕೃಷ್ಣನಾದರೂ; **ಊಚೇ** = ಹೇಳಿದನು.

ತಾತ್ಪರ್ಯ :- ಬಲರಾಮನು ಗೋಕುಲಕ್ಕೆ ಹೋಗಿದ್ದಾಗ ಅಸುರಾವೇಶ ದಿಂದ ಕೂಡಿದ ಮೈಂದ ವಿವಿದರು ತಮ್ಮ ಸ್ನೇಹಿತನಾದ ನರಕಾಸುರನನ್ನು ಕೊಂದದ್ದಕ್ಕೆ ಪ್ರತೀಕಾರವಾಗಿ ರೈವತ ಪ್ರದೇಶದಲ್ಲಿದ್ದ ಆನರ್ತರಾಷ್ಟ್ರವನ್ನು ನಾಶಮಾಡಿದರು.

**ರಾಮಾಯ ಸೋದಾದ್ ವರಮಬ್ಜನಾಭೋ**
**ವಧ್ಯಾವೇತೌ ಭವತಾಂ ತೇಪ್ಯವಧ್ಯೌ ।**

**ವರಾದ್ ವಿರಿಂಚಸ್ಯ ತಥಾಮೃತಾಶನಾದುಭೌ ಚ**
**ಮೈಂದೋ ವಿವಿದೋ ವ್ರಜೇತಿ ॥ ೨೨೧ ॥**

**ಪದಚ್ಛೇದ :-** ರಾಮಾಯ, ಸಃ, ಅದಾತ್, ವರಮ್, ಅಬ್ಜನಾಭಃ, ವಧ್ಯೌ, ಏತೌ, ಭವತಾಂ, ತೇ, ಅಪಿ, ಅವಧ್ಯೌ, ವರಾತ್, ವಿರಿಂಚಸ್ಯ, ತಥಾ, ಅಮೃತಾಶನಾತ್, ಉಭೌ, ಚ, ಮೈಂದಃ, ವಿವಿದಃ, ವ್ರಜ, ಇತಿ.

**ಅರ್ಥ :-** **ಅಬ್ಜನಾಭಃ** = ಕಮಲನಾಭನಾದ; **ಸಃ** = ಆ ಶ್ರೀಕೃಷ್ಣನು; **ವಿರಿಂಚಸ್ಯ** = ಚತುರ್ಮುಖಬ್ರಹ್ಮನ; **ವರಾತ್** = ವರದಿಂದ; **ತಥಾ** = ಹಾಗೆಯೇ; **ಅಮೃತಾಶನಾತ್** = ಅಮೃತಪಾನದಿಂದ; **ಅವಧ್ಯೌ ಅಪಿ** = ಅವಧ್ಯರಾದರೂ ಕೂಡ; **ಏತೌ** = ಈ; **ಮೈಂದಃ** = ಮೈಂದನು; **ವಿವಿದಃ** = ವಿವಿದನು; **ತೇ** = ನಿನ್ನಿಂದ; **ವಧ್ಯೌ** = ವಧ್ಯರು; **ಭವತಾಂ** = ಆಗಲಿ; **ಇತಿ** = ಎಂದು; **ರಾಮಾಯ** = ಬಲರಾಮನಿಗೆ; **ವರಮ್** = ವರವನ್ನು; **ಅದಾತ್** = ಕೊಟ್ಟನು. **ಚ** = ಮತ್ತು; **ವ್ರಜ** = ಹೋಗು; **(ಇತಿ ಊಚೇ)** = ಎಂದು ಹೇಳಿದನು.

**ತಾತ್ಪರ್ಯ :-** ಬಲರಾಮನು ಬಂದಕೂಡಲೇ ಶ್ರೀಕೃಷ್ಣನು ಹೇಳುತ್ತಾನೆ- ಈ ಮೈಂದ-ವಿವಿದರು ಚತುರ್ಮುಖಬ್ರಹ್ಮನ ವರದಿಂದ ಹಾಗು ಅಮೃತಪಾನ ಮಾಡಿದ್ದರಿಂದ ಅವಧ್ಯರಾಗಿದ್ದಾರೆ. ಆದರೂ ನಿನ್ನಿಂದ ವಧ್ಯರಾಗಲಿ ಎಂದು. ಹೀಗೆ ವರವನ್ನು ಕೊಟ್ಟು ಹೋಗು ಎಂದು ಹೇಳುತ್ತಾನೆ.

**ಗತ್ವಾ ಸ ಮೈಂದಂ ಪ್ರಥಮಂ ಜಘಾನ**
**ಕ್ರೋಧಾದ್ಯುದ್ಧಾಯಾಗತಂ ರೈವತಾಗ್ರೇ ।**
**ದಿನೇ ಪರಸ್ಮಿನ್ ವಿವಿದಂ ಜಘಾನ**
**ಶಿಲಾ ವರ್ಷಂತಂ ಮುಸಲೇನಾಗ್ರ್ಯಕರ್ಮಾ ।**
**ತಯೋರಾವಿಷ್ಟೌ ತಾವಸುರೌ ತಮೋಂಧಂ**
**ಪ್ರಾಪ್ತೌ ಚ ತಾವಶ್ವಿನೌ ಸ್ವಂ ಚ ಲೋಕಮ್ ॥ ೨೨೨ ॥**

**ಪದಚ್ಛೇದ :-** ಗತ್ವಾ, ಸಃ, ಮೈಂದಂ, ಪ್ರಥಮಂ, ಜಘಾನ, ಕ್ರೋಧಾತ್, ಯುದ್ಧಾಯ, ಆಗತಂ, ರೈವತಾಗ್ರೇ, ದಿನೇ, ಪರಸ್ಮಿನ್, ವಿವಿದಂ, ಜಘಾನ, ಶಿಲಾಃ,

**ವರ್ಷಂತಂ, ಮುಸಲೇನ, ಅಗ್ರ್ಯಕರ್ಮಾ, ತಯೋಃ, ಆವಿಷ್ಟೌ, ತೌ, ಅಸುರೌ, ತಮಃ, ಅಂಧಂ, ಪ್ರಾಪ್ತೌ, ಚ, ತೌ, ಅಶ್ವಿನೌ, ಸ್ವಂ, ಚ, ಲೋಕಮ್.**

**ಅರ್ಥ :-** **ಸಃ** = ಆ ಬಲರಾಮನು; **ಗತ್ವಾ** = (ರೈವತಕ್ಕೆ) ಹೋಗಿ; **ಪ್ರಥಮಂ** = ಮೊದಲು; **ಕ್ರೋಧಾತ್** = ಸಿಟ್ಟಿನಿಂದ; **ಯುದ್ಧಾಯ** = ಯುದ್ಧಕ್ಕೆ; **ಆಗತಂ** = ಬಂದ; **ಮೈಂದಂ** = ಮೈಂದನನ್ನು; **ರೈವತಾಗ್ರೇ** = ರೈವತಪರ್ವತದ ಮೇಲೆ; **ಜಘಾನ** = ಕೊಂದನು. **ಅಗ್ರ್ಯಕರ್ಮಾ** = ಪೂಜ್ಯಕರ್ಮವುಳ್ಳ ಬಲರಾಮನು; **ಪರಸ್ಮಿನ್** = ಮಾರನೆಯ; **ದಿನೇ** = ದಿವಸದಲ್ಲಿ; **ಶಿಲಾಃ** = ಕಲ್ಲುಗಳನ್ನು; **ವರ್ಷಂತಂ** = ಸುರಿಸುತ್ತಿರುವ; **ವಿವಿದಂ** = ವಿವಿದನನ್ನು; **ಮುಸಲೇನ** = ಒನಕೆಯಿಂದ; **ಜಘಾನ** = ಕೊಂದನು. **ತಯೋಃ** = ಆ ಮೈಂದವಿವಿದರಲ್ಲಿ; **ಆವಿಷ್ಟೌ** = ಆವಿಷ್ಟರಾಗಿದ್ದ; **ತೌ** = ಆ; **ಅಸುರೌ** = ಅಸುರರು; **ಅಂಧಂ ತಮಃ** = ಅಂಧಂತಮಸ್ಸನ್ನು; **ಪ್ರಪ್ತೌ** = ಹೊಂದಿದರು; **ಚ** = ಮತ್ತು; **ಅಶ್ವಿನೌ** = ಅಶ್ವಿನಿದೇವತೆಗಳು; **ಸ್ವಂ** = ತಮ್ಮ; **ಲೋಕಂ ಚ** = ಲೋಕವನ್ನು; **ಪ್ರಾಪ್ತೌ** = ಹೊಂದಿದರು.

**ತಾತ್ಪರ್ಯ :-** ಶ್ರೀಕೃಷ್ಣನ ಮಾತಿನಂತೆ ರೈವತಪರ್ವತಕ್ಕೆ ಬಲರಾಮನು ಹೋದನು. ಬಲರಾಮನನ್ನು ನೋಡಿ ಸಿಟ್ಟಿನಿಂದ ಯುದ್ಧಕ್ಕೆ ಬಂದ ಮೈಂದನನ್ನು ಬಲರಾಮನು ರೈವತಪರ್ವತದ ಮೇಲೆ ಕೊಂದನು. ಮಾರನೆಯ ದಿನ ತನ್ನ ಮೇಲೆ ಕಲ್ಲುಗಳ ಮಳೆಗರೆಯುತ್ತಿರುವ ವಿವಿದನನ್ನು ಮುಸಲಾಯುಧದಿಂದ ಕೊಂದನು. ಮೈಂದ-ವಿವಿದರು ಅಶ್ವಿನಿದೇವತೆಗಳು. ಅವರಲ್ಲಿ ಅಸುರಾವೇಷವಿದ್ದ ಕಾರಣ ಕೃಷ್ಣನ ವಿರೋಧಮಾಡುತ್ತಾರೆ. ಸತ್ತ ನಂತರ ಅವರಲ್ಲಿ ಆವಿಷ್ಟರಾಗಿದ್ದ ಅಸುರರು ತಮಸ್ಸಿಗೆ ಹೋಗುತ್ತಾರೆ. ಮತ್ತು ಅಶ್ವಿನಿದೇವತೆಗಳು ತಮ್ಮ ಲೋಕಕ್ಕೆ ಹೋಗುತ್ತಾರೆ.

**ದುರ್ಯೋಧನಸ್ಯಾಸ ಪುತ್ರೀ ರತಿರ್ಯಾ**
**ಪೂರ್ವಂ ನಾಮ್ನಾ ಲಕ್ಷಣಾ ಕಾಂತರೂಪಾ ।**
**ಸ್ವಯಂರಸ್ಥಾಂ ತಾಂ ಬಲಾದೇವ ಸಾಂಬೋ**
**ಜಗ್ರಾಹ ಸಾ ಚೈನಮಾಸಾನುರಕ್ತಾ ॥ ೨೨೩ ॥**

ಪದಚ್ಛೇದ :- **ದುರ್ಯೋಧನಸ್ಯ, ಆಸ, ಪುತ್ರೀ, ರತಿಃ, ಯಾ, ಪೂರ್ವಂ, ನಾಮ್ನಾ, ಲಕ್ಷಣಾ, ಕಾಂತರೂಪಾ, ಸ್ವಯಂವರಸ್ಥಾಂ, ತಾಂ, ಬಲಾತ್, ಏವ, ಸಾಂಬಃ, ಜಗ್ರಾಹ, ಸಾ, ಚ, ಏನಮ್, ಆಸ, ಅನುರಕ್ತಾ.**

**ಅರ್ಥ** :- **ಪೂರ್ವಂ** = ಹಿಂದೆ; **ಯಾ** = ಯಾವಳು; **ರತಿಃ** = ರತಿಯಾಗಿದ್ದಳೋ; **ಸಾ** = ಅವಳು; **ಕಾಂತರೂಪಾ** = ಮನೋಹರರೂಪವುಳ್ಳ; **ನಮ್ನಾ** = ಹೆಸರಿನಿಂದ; **ಲಕ್ಷಣಾ** = ಲಕ್ಷಣಾ ಎಂಬುವವಳು; **ದುರ್ಯೋಧನಸ್ಯ** = ದುರ್ಯೋಧನನ; **ಪುತ್ರೀ** = ಮಗಳು; **ಆಸ** = ಆಗಿದ್ದಳು. **ಸಾಂಬಃ** = ಸಾಂಬನು; **ಸ್ವಯಂವರಸ್ಥಾಂ** = ಸ್ವಯಂವರದಲ್ಲಿದ್ದ; **ತಾಂ** = ಆ ಲಕ್ಷಣೆಯನ್ನು; **ಬಲಾತ್ ಏವ** = ಬಲದಿಂದಲೇ; **ಜಗ್ರಾಹ** = ಕರೆದುಕೊಂಡು ಹೋದನು. **ಸಾ ಚ** = ಆ ಲಕ್ಷಣೆಯಾದರೂ; **ಏನಮ್** = ಈ ಸಾಂಬನಲ್ಲಿ; **ಅನುರಕ್ತಾ** = ಪ್ರೀತಿಯುಳ್ಳವಳು; **ಆಸ** = ಆಗಿದ್ದಳು.

**ತಾತ್ಪರ್ಯ** :- ಬಲರಾಮನ ಮಾಹಾತ್ಮ್ಯವನ್ನು ಮತ್ತಷ್ಟು ತಿಳಿಸಲು ಅದಕ್ಕೆ ಬೇಕಾದ ಕಥೆಯನ್ನು ಹೇಳುತ್ತಿದ್ದಾರೆ:- ದುರ್ಯೋಧನನಿಗೆ ಲಕ್ಷಣಾ ಎಂಬ ಮನೋಹರರೂಪಳಾದ ಮಗಳಿದ್ದಳು. ಅವಳು ಮೂಲರೂಪದಲ್ಲಿ ರತಿದೇವಿ. ಅವಳು ಸ್ವಯಂವರದಲ್ಲಿದ್ದಾಗ ಸಾಂಬನು ಬಲಾತ್ಕಾರದಿಂದಲೇ ಅವಳನ್ನು ಕರೆದುಕೊಂಡು ಹೋದನು. ಅವಳಿಗೂ ಸಾಂಬನಲ್ಲಿ ಪ್ರೀತಿಯಿದ್ದಿತು.

**ಬಲಾದ್ ಗೃಹೀತಾಂ ವೀಕ್ಷ್ಯ ತಾಂ ಕರ್ಣಮುಖ್ಯಾ**
**ದುರ್ಯೋಧನಾದ್ಯಾ ಯುಯುಧುಃ ಕ್ರೋಧದೀಪ್ತಾಃ ।**
**ಕೃಛ್ರೇಣ ತಂ ವಿರಥೀಕೃತ್ಯ ಚೈಕಂ ಸರ್ವೇ**
**ಸಮೇತಾ ಜಗೃಹುರ್ಧಾರ್ತರಾಷ್ಟ್ರಾಃ ।**
**ಕರ್ಣೇನ ಭೂರಿಶ್ರವಸಾ ಚ ಸಾರ್ಧಂ**
**ಬಾಹ್ವೋರ್ಬಲಾದೇವ ದುರ್ಯೋಧನಸ್ಯ ॥ ೨೨೪ ॥**

ಪದಚ್ಛೇದ :- ಬಲಾತ್, ಗೃಹೀತಾಂ, ವೀಕ್ಷ್ಯ, ತಾಂ, ಕರ್ಣಮುಖ್ಯಾಃ, ದುರ್ಯೋಧನಾದ್ಯಾಃ, ಯುಯುಧುಃ, ಕ್ರೋಧದೀಪ್ತಾಃ, ಕೃಛ್ರೇಣ, ತಂ, ವಿರಥೀಕೃತ್ಯ, ಚ, ಏಕಂ, ಸರ್ವೇ, ಸಮೇತಾಃ, ಜಗೃಹುಃ, ಧಾರ್ತರಾಷ್ಟ್ರಾಃ, ಕರ್ಣೇನ, ಭೂರಿಶ್ರವಸಾ, ಚ, ಸಾರ್ಧಂ, ಬಾಹ್ವೋಃ, ಬಲಾತ್, ಏವ, ದುರ್ಯೋಧನಸ್ಯ.

**ಅರ್ಥ** :- **ಬಲಾತ್** = ಬಲಾತ್ಕಾರದಿಂದ; **ಗೃಹೀತಾಂ** = ಕರೆದುಕೊಂಡು ಹೋಗಲ್ಪಟ್ಟ; **ತಾಂ** = ಆ ಲಕ್ಷಣೆಯನ್ನು; **ವೀಕ್ಷ್ಯ** = ನೋಡಿ; **ಕ್ರೋಧದೀಪ್ತಾಃ**

= ಸಿಟ್ಟಿನಿಂದ ಉರಿದ; **ಕರ್ಣಮುಖ್ಯಾಃ** = ಕರ್ಣನೇ ಪ್ರಮುಖರಾದ; **ದುರ್ಯೋಧನಾದ್ಯಾಃ** = ದುರ್ಯೋಧನನೇ ಮೊದಲಾದ; **ಧಾರ್ತರಾಷ್ಟ್ರಾಃ** = ಧೃತರಾಷ್ಟ್ರನ ಮಕ್ಕಳು; **ಯುಯುಧುಃ** = ಯುದ್ಧಮಾಡಿದರು; **ಚ** = ಮತ್ತು; **ಕರ್ಣೇನ** = ಕರ್ಣನಿಂದ; **ಚ** = ಮತ್ತು; **ಭೂರಿಶ್ರವಸಾ** = ಭೂರಿಶ್ರವಸ್ ನಿಂದ; **ಸಾರ್ಧಂ** = ಕೂಡಿಕೊಂಡು; **ದುರ್ಯೋಧನಸ್ಯ** = ದುರ್ಯೋಧನನ; **ಬಾಹ್ವೋಃ** = ಬಾಹುಗಳ; **ಬಲಾತ್ ಏವ** = ಬಲದಿಂದಲೇ; **ಸರ್ವೇ** = ಎಲ್ಲರೂ; **ಸಮೇತಾಃ (ಸಂತಃ)** = ಒಟ್ಟಾಗಿ; **ಏಕಂ** = ಒಬ್ಬನೇ ಆದ; **ತಂ** = ಆ ಸಾಂಬನನ್ನು; **ಕೃಚ್ಛ್ರೇಣ** = ಕಷ್ಟದಿಂದ; **ವಿರಥೀಕೃತ್ಯ** = ರಥರಹಿತನನ್ನಾಗಿ ಮಾಡಿ; **ಜಗೃಹುಃ** = ಹಿಡಿದರು.

**ತಾತ್ಪರ್ಯ** :- ಹೀಗೆ ಲಕ್ಷಣೆಯನ್ನು ಕರೆದುಕೊಂಡು ಹೋಗುತ್ತಿರುವ ಸಾಂಬನನ್ನು ನೋಡಿ ದುರ್ಯೋಧನಾದಿ ಧೃತರಾಷ್ಟ್ರನ ಮಕ್ಕಳು ಸಿಟ್ಟಿನಿಂದ ಉರಿದುಹೋಗುತ್ತಾರೆ. ಕರ್ಣನನ್ನು ಮುಂದೆ ಮಾಡಿಕೊಂಡು ಯುದ್ಧ ಮಾಡುತ್ತಾರೆ. ಕರ್ಣನ ಮತ್ತು ಭೂರಿಶ್ರವಸ್‌ನ ಸಹಾಯದಿಂದ ದುರ್ಯೋಧನನ ಬಾಹುಬಲದಿಂದಲೂ ಎಲ್ಲರೂ ಸೇರಿ ಒಬ್ಬನೇ ಯುದ್ಧಮಾಡುತ್ತಿದ್ದ ಸಾಂಬನನ್ನು ಅತ್ಯಂತ ಪ್ರಯಾಸದಿಂದ ರಥವನ್ನು ನಾಶಮಾಡಿ ಹಿಡಿದರು.

**ಶ್ರುತ್ವೈವ ತದ್ ವೃಷ್ಣಯಃ ಸರ್ವ ಏವ**
**ಸಮುದ್ಯಮಂ ಚಕ್ರಿರೇ ಕೌರವೇಷು ।**
**ನಿವಾರ್ಯ ತಾನ್ ಬಲಭದ್ರಃ ಸ್ವಯಂ ಯಯೌ**
**ಸಹೋದ್ಧವಃ ಕೌರವೇಯಾಂಛಮಾರ್ಥೀ ॥ ೨೨೫ ॥**

ಪದಚ್ಛೇದ :- ಶ್ರುತ್ವಾ, ಏವ, ತತ್, ವೃಷ್ಣಯಃ, ಸರ್ವೇ, ಏವ, ಸಮುದ್ಯಮಂ, ಚಕ್ರಿರೇ, ಕೌರವೇಷು, ನಿವಾರ್ಯ, ತಾನ್, ಬಲಭದ್ರಃ, ಸ್ವಯಂ, ಯಯೌ, ಸಹೋದ್ಧವಃ, ಕೌರವೇಯಾನ್, ಶಮಾರ್ಥೀ.

**ಅರ್ಥ** :- **ಸರ್ವೇ ಏವ** = ಎಲ್ಲ; **ವೃಷ್ಣಯಃ** = ವೃಷ್ಣಿಗಳಿ; **ತತ್** = ಸಾಂಬನನ್ನು ಬಂಧಿಸಿರುವ ವಿಷಯವನ್ನು; **ಶ್ರುತ್ವಾ ಏವ** = ಕೇಳಿಯೇ; **ಕೌರವೇಷು** = ಕೌರವರಲ್ಲಿ; **ಸಮುದ್ಯಮಂ** = (ಯುದ್ಧಕ್ಕೆ) ಪ್ರವೃತ್ತಿಯನ್ನು; **ಚಕ್ರಿರೇ** = ಮಾಡಿದರು. **ಬಲಭದ್ರಃ** = ಬಲರಾಮನು; **ತಾನ್** = ಆ

ವೃಷ್ಣಿಗಳನ್ನು; **ನಿವಾರ್ಯ** = ನಿವಾರಿಸಿ; **ಸಹೋದ್ಧವಃ** = ಉದ್ಧವನಿಂದ ಸಹಿತನಾದ; **ಸ್ವಯಂ** = ತಾನೇ; **ಶಮಾರ್ಥೀ (ಸನ್)** = ಸಂಧಾನವನ್ನು ಬಯಸಿದವನಾಗಿ; **ಕೌರವೇಯಾನ್ (ಪ್ರತಿ)** = ಕೌರವರನ್ನು ಕುರಿತು; **ಯಯೌ** = ಹೋದನು.

ತಾತ್ಪರ್ಯ :- ದುರ್ಯೋಧನಾದಿಗಳು ಸಾಂಬನನ್ನು ಬಂಧಿಸಿರುವ ವಿಷಯವನ್ನು ನಾರದರಿಂದ ಕೇಳಿದ ಕೂಡಲೇ ವೃಷ್ಣಿಗಳೆಲ್ಲರೂ ಯುದ್ಧಕ್ಕೆ ಹೊರಡಲು ತಯಾರಾದರು. ಆಗ ಬಲರಾಮನು ಅವರನ್ನು ತಡೆದು ಉದ್ಧವನೊಂದಿಗೆ ತಾನೇ ಸಂಧಾನಕ್ಕಾಗಿ ಕೌರವರ ಬಳಿ ಹೊರಡುತ್ತಾನೆ.

**ಪುರಸ್ಯ ಬಾಹ್ಯೋಪವನೇ ಸ್ಥಿತಃ ಸ**
**ಪ್ರಸ್ಥಾಪಯಚ್ಚೋದ್ಧವಂ ಕೌರವಾರ್ಥೇ ।**
**ಆಗತ್ಯ ಸರ್ವೇ ಕುರವೋಸ್ಯ ಪೂಜಾಂ ಚಕ್ರುಃ**
**ಸ ಚಾಹೋಗ್ರಸೇನಸ್ಯ ಚಾಜ್ಞಾಮ್ ॥ ೨೨೬ ॥**

**ಪದಚ್ಛೇದ :- ಪುರಸ್ಯ, ಬಾಹ್ಯೋಪವನೇ, ಸ್ಥಿತಃ, ಸಃ, ಪ್ರಸ್ಥಾಪಯತ್, ಚ, ಉದ್ಧವಂ, ಕೌರವಾರ್ಥೇ, ಆಗತ್ಯ, ಸರ್ವೇ, ಕುರವಃ, ಅಸ್ಯ, ಪೂಜಾಂ, ಚಕ್ರುಃ, ಸಃ, ಚ, ಆಹ, ಉಗ್ರಸೇನಸ್ಯ, ಚ, ಆಜ್ಞಾಮ್.**

ಅರ್ಥ :- **ಪುರಸ್ಯ** = ಹಸ್ತಿನಾವತಿಯ; **ಬಾಹ್ಯೋಪವನೇ** = ಹೊರಗಿದ್ದ ಉಪವನದಲ್ಲಿ; **ಸಃ** = ಬಲರಾಮನು; **ಸ್ಥಿತಃ (ಅಭೂತ್)** = ಇದ್ದನು; **ಚ** = ಮತ್ತು; **ಕೌರವಾರ್ಥೇ** = ದುರ್ಯೋಧನನನ್ನು (ನೋಡಲು); **ಉದ್ಧವಂ** = ಉದ್ಧವನನ್ನು; **ಪ್ರಸ್ಥಾಪಯತ್** = ಕಳುಹಿಸಿದನು. **ಸರ್ವೇ** = ಎಲ್ಲಾ; **ಕುರವಃ** = ಕೌರವರು; **ಆಗತ್ಯ** = ಬಂದು; **ಅಸ್ಯ** = ಈ ಬಲರಾಮನಿಗೆ; **ಪೂಜಾಂ** = ಪೂಜೆಯನ್ನು; **ಚಕ್ರುಃ** = ಮಾಡಿದರು. **ಸಃ ಚ** = ಆ ಬಲರಾಮನಾದರೂ; **ಉಗ್ರಸೇನಸ್ಯ** = ಉಗ್ರಸೇನನ; **ಆಜ್ಞಾಮ್** = ಅಪ್ಪಣೆಯನ್ನು; **ಆಹ** = ಹೇಳಿದನು.

ತಾತ್ಪರ್ಯ :- ಹಸ್ತಿನಾವತಿಗೆ ಬಂದ ಬಲರಾಮನು ತಾನು ಊರಿನ ಹೊರಗಿದ್ದ ಉಪವನದಲ್ಲೇ ಇದ್ದ ದುರ್ಯೋಧನನನ್ನು ಭೇಟಿಯಾಗಲು

ಉದ್ಧವನನ್ನು ಕಳುಹಿಸಿದನು. ವಿಷಯು ತಿಳಿದ ಕೌರವರೆಲ್ಲರೂ ಬಲರಾಮನ ಬಳಿ ಬಂದು ಅವನನ್ನು ಪೂಜಿಸಿದರು. ನಂತರ ಬಲರಾಮನು ಕೌರವರಿಗೆ ಉಗ್ರಸೇನನ ಅಪ್ಪಣೆಯನ್ನು ತಿಳಿಸಿದನು.

**ಆಜ್ಞಾಪಯದ್ವೋ ನೃಪತಿಃ ಸ್ಮ ಯನ್ನಃ**
**ಕುಮಾರಕಃ ಪ್ರಗೃಹೀತೋ ಭವದ್ಭಿಃ ।**
**ಏಕಃ ಸಮೇತ್ಯೈರ್ಬಹುಭಿರ್ಬಾಂಧವಾರ್ಥಂ**
**ಕ್ಷಾಂತಂ ತನ್ನೋ ಮುಂಚತಾಶ್ವೇವ ಸಾಂಬಮ್ ॥ ೨೨೭ ॥**

ಪದಚ್ಛೇದ :- **ಆಜ್ಞಾಪಯತ್, ವಃ, ನೃಪತಿಃ, ಸ್ಮ, ಯತ್, ನಃ, ಕುಮಾರಕಃ, ಪ್ರಗೃಹೀತಃ, ಭವದ್ಭಿಃ, ಏಕಃ, ಸಮೇತ್ಯೈಃ, ಬಹುಭಿಃ, ಬಾಂಧವಾರ್ಥಂ, ಕ್ಷಾಂತಂ, ತತ್, ನಃ, ಮುಂಚತಾಮ್, ಆಶು, ಏವ, ಸಾಂಬಮ್.**

**ಅರ್ಥ** :- **ನಃ** = ನಮ್ಮ; **ನೃಪತಿಃ** = ರಾಜನಾದ ಉಗ್ರಸೇನನು; **ವಃ** = ನಿಮಗೆ; **ಆಜ್ಞಾಪಯತ್ ಸ್ಮ** = ಆಜ್ಞಾಪಿಸಿದನು; **ಯತ್** = ಯಾವ ಕಾರಣದಿಂದ; **ನಃ** = ನಮ್ಮ; **ಕುಮಾರಕಃ** = ಕುಮಾರನು; **ಸಮೇತ್ಯೈಃ** = ಒಟ್ಟಾದ; **ಬಹುಭಿಃ** = ಅನೇಕರಾದ; **ಭವದ್ಭಿಃ** = ನಿಮ್ಮಿಂದ; **ಏಕಃ** = ಒಬ್ಬನೇ; **ಪ್ರಗೃಹೀತಃ** = ಬಂಧಿಸಲ್ಪಟ್ಟಿದ್ದಾನೆ; **ತತ್** = ಅದು; **ಬಾಂಧವಾರ್ಥಂ** = ಬಾಂಧವ್ಯದ ಕಾರಣದಿಂದ; **ಕ್ಷಾಂತಂ** = ಸಹಿಸಲ್ಪಟ್ಟಿದೆ; **ಆಶು ಏವ** = ಅತಿ ಶಿಘ್ರವಾಗಿ; **ಸಾಂಬಂ** = ಸಾಂಬನನ್ನು; **ಮುಂಚತ** = ಬಿಡುಗಡೆಮಾಡಿ; **(ಇತಿ)** = ಎಂದು.

**ತಾತ್ಪರ್ಯ** :- ಬಲರಾಮನು ಕೌರವರಿಗೆ ಉಗ್ರಸೇನನ ಆಜ್ಞೆಯನ್ನು ತಿಳಿಸುತ್ತಾನೆ- ನಮ್ಮ ರಾಜನಾದ ಉಗ್ರಸೇನನು ಅಪ್ಪಣೆಮಾಡಿದ್ದಾನೆ. ಬಹುಮಂದಿಯಾದ ನೀವು ಎಲ್ಲರೂ ಸೇರಿ ಒಬ್ಬನೇ ಇದ್ದ ನಮ್ಮ ಕುಮಾರನನ್ನು ಸೆರೆಹಿಡಿದಿದ್ದೀರಿ. ಆದರೂ ಈ ಅಪರಾಧವನ್ನು ಬಾಂಧವ್ಯಕ್ಕಾಗಿ ನಾವು ಸಹಿಸಿಕೊಂಡಿದ್ದೇವೆ. ಆದಷ್ಟು ಶೀಘ್ರವಾಗಿ ಅವನನ್ನು ಬಿಡುಗಡೆಗಳಿಸಿ ಎಂದು.

**ಆಜ್ಞಾಪಯಾಮಾಸ ವ ಉಗ್ರಸೇನ ಇತ್ಯುಕ್ತ-**
**ಮೇವ ತು ನಿಶಮ್ಯ ಕುರುಪ್ರವೀರಾಃ ।**

**ಸಂಶ್ರಾವ್ಯ ದುಷ್ಟವಚನಾನಿ ಬಲಂ ಪುರಂ ಸ್ವಂ**
**ಕ್ರೋಧಾತ್ ಸಮಾವಿವಿಶುರತ್ರ ಚುಕೋಪ ರಾಮಃ ॥ ೨೨೮ ॥**

ಪದಚ್ಛೇದ :- ಆಜ್ಞಾಪಯಾಮಾಸ, ವಃ, ಉಗ್ರಸೇನಃ, ಇತಿ, ಉಕ್ತಮ್, ಏವ, ತು, ನಿಶಮ್ಯ, ಕುರುಪ್ರವೀರಾಃ, ಸಂಶ್ರಾವ್ಯ, ದುಷ್ಟವಚನಾನಿ, ಬಲಂ, ಪುರಂ, ಸ್ವಂ, ಕ್ರೋಧಾತ್, ಸಮಾವಿವಿಶುಃ, ಅತ್ರ, ಚುಕೋಪ, ರಾಮಃ.

ಅರ್ಥ :- **ಉಗ್ರಸೇನಃ** = ಉಗ್ರಸೇನನು; **ವಃ** = ನಿಮ್ಮನ್ನು; **ಆಜ್ಞಾಪಯಾಮಾಸ** = ಆಜ್ಞಾಪಿಸಿದನು; **ಇತಿ** = ಎಂದು; **ಉಕ್ತಂ ತು** = ಹೇಳಿದ್ದನ್ನಾದರೂ; **ನಿಶಮ್ಯ ಏವ** = ಕೇಳಿಯೇ; **ಕುರುಪ್ರವೀರಾಃ** = ಕೌರವಶ್ರೇಷ್ಠರು; **ಬಲಂ** = ಬಲರಾಮನಿಗೆ; **ದುಷ್ಟವಚನಾನಿ** = ದುಷ್ಟಮಾತುಗಳನ್ನಿ; **ಸಂಶ್ರಾವ್ಯ** = ಆಡಿ; **ಕ್ರೋಧಾತ್** = ಸಿಟ್ಟಿನಿಂದ; **ಸ್ವಂ** = ತಮ್ಮ; **ಪುರಂ** = ಪಟ್ಟಣವನ್ನು; **ಸಮಾವಿವಿಶುಃ** = ಪ್ರವೇಶಿಸಿದರು. **ಅತ್ರ** = ಪಟ್ಟಣಪ್ರವೇಶಿಸುವ ಈ ಸಮಯದಲ್ಲಿ; **ರಾಮಃ** = ಬಲರಾಮನು; **ಚುಕೋಪ** = ಸಿಟ್ಟಾದನು.

ತಾತ್ಪರ್ಯ :- ಉಗ್ರಸೇನನು ನಿಮಗೆ ಅಪ್ಪಣೆಮಾಡಿದನು ಎಂಬ ಮಾತನ್ನು ಕೇಳಿಯೇ ಕೌರವರು ಬಲರಾಮನಿಗೆ ದುಷ್ಟಮಾತುಗಳನ್ನಾಡಿ ನಗರವನ್ನು ಪ್ರವೇಶಿಸಿದರು. ಆಗ ಬಲರಾಮನು ಸಿಟ್ಟಾದನು.

**ಸ ಲಾಂಗಲೇನ ತತ್ಪುರಂ ವಿಕೃಷ್ಯ ಜಾಹ್ನವೀಜಲೇ ।**
**ನಿಪಾತಯನ್ನಿವಾರಿತಃ ಪ್ರಣಮ್ಯ ಸರ್ವಕೌರವ್ಯೈಃ ॥ ೨೨೯ ॥**

ಪದಚ್ಛೇದ :- ಸಃ, ಲಾಂಗಲೇನ, ತತ್ಪುರಂ, ವಿಕೃಷ್ಯ, ಜಾಹ್ನವೀಜಲೇ, ನಿಪಾತಯತ್, ನಿವಾರಿತಃ, ಪ್ರಣಮ್ಯ, ಸರ್ವಕೌರವ್ಯೈಃ.

ಅರ್ಥ :- **ಲಾಂಗಲೇನ** = ನೇಗಿಲಿನಿಂದ; **ತತ್ಪುರಂ** = ಕೌರವರ ಹಸ್ತಿನಾವತಿಯನ್ನು; **ವಿಕೃಷ್ಯ** = ಸೆಳೆದು; **ಜಾಹ್ನವೀಜಲೇ** = ಗಂಗೆಯ ನೀರಿನಲ್ಲಿ; **ನಿಪಾತಯನ್** = ಬೀಳಿಸುತ್ತಿರುವ; **ಸಃ** = ಆ ಬಲರಾಮನು; **ಸರ್ವಕೌರವ್ಯೈಃ** = ಎಲ್ಲ ಕೌರವರಿಂದ; **ಪ್ರಣಮ್ಯ** = ನಮಸ್ಕರಿಸಲ್ಪಟ್ಟು; **ನಿವಾರಿತಃ (ಅಭೂತ್)** = ನಿವಾರಿಸಲ್ಪಟ್ಟನು.

ತಾತ್ಪರ್ಯ :- ಸಿಟ್ಟಾದ ಬಲರಾಮನು ತನ್ನ ನೇಗಿಲಿನಿಂದ ಹಸ್ತಿನಾವತಿಯನ್ನೇ ಸೆಳೆದು ಗಂಗೆಯೊಳಗೆ ಮುಳುಗಿಸಲು ಹೊರಟ. ಆಗ ಕೌರವರೆಲ್ಲರೂ ಬಂದು ಅವನಿಗೆ ನಮಿಸಲು ಅವನು ಬಿಟ್ಟನು.

**ಸಭಾರ್ಯಮಾಶು ಪುತ್ರಕಂ ಸುಯೋಧನಾಭಿಪೂಜಿತಮ್ ।**
**ಸಪಾರಿಬರ್ಹಮಾಪ್ಯ ಚ ಪ್ರಜಗ್ಮಿವಾನ್ ಸ್ವಕಂ ಪುರಮ್ ॥ ೨೩೦ ॥**

ಪದಚ್ಛೇದ :- **ಸಭಾರ್ಯಮ್, ಆಶು, ಪುತ್ರಕಂ, ಸುಯೋಧನಾಭಿಪೂಜಿತಂ, ಸಪಾರಿಬರ್ಹಮ್, ಆಪ್ಯ, ಚ, ಪ್ರಜಗ್ಮಿವಾನ್, ಸ್ವಕಂ, ಪುರಮ್.**

ಅರ್ಥ :- **(ಸಃ)** = ಆ ಬಲರಾಮನು; **ಸುಯೋಧನಾಭಿಪೂಜಿತಂ** = ದುರ್ಯೋಧನನಿಂದ ಗೌರವಿಸಲ್ಪಟ್ಟ; **ಸಭಾರ್ಯಂ** = ಹೆಂಡತಿಯಾದ ಲಕ್ಷಣೆಯಿಂದ ಸಹಿತನಾದ; **ಸಪಾರಿಬರ್ಹಂ** = ಉಡುಗೊರೆಗಳಿಂದ ಸಹಿತನಾದ; **ಪುತ್ರಕಂ** = ಮಗನಾದ ಸಾಂಬನನ್ನು; **ಆಪ್ಯ** = ಹೊಂದಿ; **ಸ್ವಕಂ** = ತನ್ನ; **ಪುರಂ** = ಪಟ್ಟವನ್ನು ಕುರಿತು; **ಪ್ರಜಗ್ಮಿವಾನ್** = ಹೊರಟನು.

ತಾತ್ಪರ್ಯ :- ನಂತರ ದುರ್ಯೋಧನನು ಮಗಳೊಂದಿಗೆ ಸಾಂಬನನ್ನು ಉಡುಗೊರೆಗಳೊಂದಿಗೆ ಗೌರವಿಸಿ ಕಳುಹಿಸುತ್ತಾನೆ. ಲಕ್ಷಣೆಯಿಂದ ಸಹಿತನಾದ ಸಾಂಬನನ್ನು ಕರೆದುಕೊಂಡು ಬಲರಾಮನು ತನ್ನ ಊರಿಗೆ ಹೊರಡುತ್ತಾನೆ.

**ಇತ್ಯಾದಿಕರ್ಮಾಣಿ ಮಹಾಂತಿ ರಾಮಸ್ಯಾ-**
**ಸಂಛೇಷಸ್ಯಾಚ್ಯುತಾವೇಶಿನೋಲಮ್ ।**
**ಯಸ್ಯಾಚ್ಯುತಾವೇಶವಿಶೇಷಕಾಲಂ ಜ್ಞಾತ್ವಾ**
**ಭೀಮೋಪ್ಯಸ್ಯ ನೋದೇತಿ ಯುದ್ಧೇ ॥ ೨೩೧ ॥**

ಪದಚ್ಛೇದ :- **ಇತ್ಯಾದಿಕರ್ಮಾಣಿ, ಮಹಾಂತಿ ರಾಮಸ್ಯ, ಆಸನ್, ಶೇಷಸ್ಯ, ಅಚ್ಯುತಾವೇಶಿನಃ, ಅಲಂ, ಯಸ್ಯ, ಅಚ್ಯುತಾವೇಶವಿಶೇಷಕಾಲಂ, ಜ್ಞಾತ್ವಾ, ಭೀಮಃ, ಅಪಿ, ಅಸ್ಯ, ನ, ಉದೇತಿ, ಯುದ್ಧೇ.**

ಅರ್ಥ :- **ಅಚ್ಯುತಾವೇಶಿನಃ** = ಪರಮಾತ್ಮನ ಆವೇಶವುಳ್ಳ; **ಶೇಷಸ್ಯ** = ಶೇಷಾವತಾರನಾದ; **ರಾಮಸ್ಯ** = ಬಲರಾಮನ; **ಇತ್ಯಾದಿ** = ಇದೇ

ಮೊದಲಾದ; **ಅಲಮ್** = ಬಹಳವಾದ; **ಮಹಾಂತಿ** = ದೊಡ್ಡ; **ಕರ್ಮಾಣಿ** = ಕರ್ಮಗಳು; **ಆಸನ್** = ಇದ್ದವು. **ಭೀಮಃ ಅಪಿ** = ಭೀಮಸೇನನೂ ಕೂಡ; **ಯಸ್ಯ** = ಯಾವ ಬಲರಾಮನ; **ಅಚ್ಯುತಾವೇಶವಿಶೇಷಕಾಲಂ** = ಪರಮಾತ್ಮನ ಆವೇಶದ ಅಭಿವ್ಯಕ್ತಿಯ ವಿಶೇಷಕಾಲದಲ್ಲಿ; **ಜ್ಞಾತ್ವಾ** = ತಿಳಿದು; **ಅಸ್ಯ** = ಈ ಬಲರಾಮನ; **ಯುದ್ಧೇ** = ಕ್ರೀಡಾಯುದ್ಧದಲ್ಲಿ; **ನ ಉದೇತಿ** = ಪ್ರವೃತ್ತಿಮಾಡುತ್ತಿರಲಿಲ್ಲ.

**ತಾತ್ಪರ್ಯ** :- ಪರಮಾತ್ಮನ ಶುಕ್ಲಕೇಶರೂಪದ ಆವೇಶವುಳ್ಳ ಶೇಷಾವತಾರನಾದ ಬಲರಾಮನು ಇದೇ ಮೊದಲಾದ ಮಹತ್ತಾದ ಅನೇಕ ಕರ್ಮಗಳನ್ನು ಮಾಡಿತ್ತಿದ್ದನು. ಭೀಮಸೇನನೂ ಕೂಡ ಬಲರಾಮನಲ್ಲಿ ಪರಮಾತ್ಮನ ರೂಪದ ಅಭಿವ್ಯಕ್ತಿಯಾಗಿರುವ ಸಮಯವನ್ನು ತಿಳಿದು ಬಲರಾಮನ ಕ್ರೀಡಾಯುದ್ಧದಲ್ಲಿ ತಾನು ಪ್ರವೃತ್ತಿ ಮಾಡುತ್ತಿರಲಿಲ್ಲ.

**ಕ್ರೀಡಾಯುದ್ಧೇ ಬಹುಶೋ ರೌಹಿಣೇಯೇ**
**ವ್ಯಕ್ತಿಂ ವಿಷ್ಣೋರ್ಭೀಮಸೇನೋ ವಿದಿತ್ವಾ ।**
**ತಾತ್ಕಾಲಿಕೀಂ ಪೀಡ್ಯಮಾನೋಪಿ ತೇನ**
**ನೈವೋದ್ಯಮಂ ಕುರುತೇ ವಿಷ್ಣುಭಕ್ತ್ಯಾ ॥ ೨೩೨ ॥**

**ಪದಚ್ಛೇದ** :- ಕ್ರೀಡಾಯುದ್ಧೇ, ಬಹುಶಃ, ರೌಹಿಣೇಯಃ, ವ್ಯಕ್ತಿಂ, ವಿಷ್ಣೋಃ, ಭೀಮಸೇನಃ, ವಿದಿತ್ವಾ, ತಾತ್ಕಾಲಿಕೀಂ, ಪೀಡ್ಯಮಾನಃ, ಅಪಿ, ತೇನ, ನ, ಏವ, ಉದ್ಯಮಂ, ಕುರುತೇ, ವಿಷ್ಣುಭಕ್ತ್ಯಾ.

**ಅರ್ಥ** :- **ಭೀಮಸೇನಃ** = ಭೀಮಸೇನನು; **ಕ್ರೀಡಾಯುದ್ಧೇ** = ಕ್ರೀಡಾಯುದ್ಧದ ಸಮಯದಲ್ಲಿ; **ರೌಹಿಣೇಯೇ** = ಬಲರಾಮನಲ್ಲಿ; **ಬಹುಶಃ** = ಬಹಳವಾಗಿ; **ವಿಷ್ಣೋಃ** = ಪರಮಾತ್ಮನ; **ತಾತ್ಕಾಲಿಕೀಂ** = ಆ ಕಾಲದಲ್ಲಿ ಉಂಟಾಗಿತ್ತಿದ್ದ; **ವ್ಯಕ್ತಿಂ** = ಅಭಿವ್ಯಕ್ತಿಯನ್ನು; **ವಿದಿತ್ವಾ** = ತಿಳಿದು; **ತೇನ** = ಆ ಬಲರಾಮನಿಂದ; **ಪೀಡ್ಯಮಾನಃ ಅಪಿ** = ಪೀಡಿಸಲ್ಪಡುತ್ತಿದ್ದರೂ; **ವಿಷ್ಣುಭಕ್ತ್ಯಾ** = ಪರಮಾತ್ಮನಲ್ಲಿದ್ದ ಭಕ್ತಿಯಿಂದ; **(ಪೀಡನೇ)** = ಬಲರಾಮನನ್ನು ಪೀಡಿಸುವುದರಲ್ಲಿ; **ಉದ್ಯಮಂ** = ಪ್ರವೃತ್ತಿಯನ್ನು; **ನ ಏವ ಕುರುತೇ** = ಮಾಡುತ್ತಿರಲಿಲ್ಲ.

**ತಾತ್ಪರ್ಯ** :- ಕ್ರೀಡಾಯುದ್ಧದ ಸಮಯದಲ್ಲಿ ಬಹಳವಾಗಿ ಬಲರಾಮನಲ್ಲಿ ಪರಮಾತ್ಮನ ಶುಕ್ಲಕೇಶರೂಪವು ತತ್ಕಾಲದಲ್ಲಿ ಅಭಿವ್ಯಕ್ತ ವಾಗುತ್ತಿತ್ತು. ಅದನ್ನು ತಿಳಿದು ಭೀಮಸೇನನು ವಿಷ್ಣುಭಕ್ತಿಯಿಂದ ಬಲರಾಮನು ಭೀಮಸೇನನನ್ನು ಪೀಡಿಸುತ್ತಿದ್ದರೂ ತಾನು ಪೀಡಿಸುತ್ತಿರಲಿಲ್ಲ.

**ತದಾ ಜಯೀ ಪ್ರಭವತ್ಯೇಷ ರಾಮೋ ನಾತಿವ್ಯಕ್ತಸ್ತತ್ರ ಯದಾ ಜನಾರ್ದನಃ । ತದಾ ಭೀಮೋ ವಿಜಯೀ ಸ್ಯಾತ್ ಸದೈವ ವಿಷ್ಣೋಃ ಕೇಶಾವೇಶವಾನ್ ಯತ್ ಸ ರಾಮಃ ॥ ೨೩೩ ॥**

**ಪದಚ್ಛೇದ** :- ತದಾ, ಜಯೀ, ಪ್ರಭವತಿ, ಏಷಃ, ರಾಮಃ, ನ, ಅತಿವ್ಯಕ್ತಃ, ತತ್ರ, ಯದಾ, ಜನಾರ್ದನಃ, ತದಾ, ಭೀಮಃ, ವಿಜಯೀ, ಸ್ಯಾತ್, ಸದಾ, ಏವ, ವಿಷ್ಣೋಃ, ಕೇಶಾವೇಶವಾನ್, ಯತ್, ಸಃ, ರಾಮಃ.

**ಅರ್ಥ** :- **ತದಾ** = ಪರಮಾತ್ಮನ ವಿಶೇಷ ಅಭಿವ್ಯಕ್ತಿಯ ಸಮಯದಲ್ಲಿ; **ಏಷಃ** = ಈ; **ರಾಮಃ** = ಬಲರಾಮನು; **ಜಯೀ** = ಜಯವುಳ್ಳವನು; **ಪ್ರಭವತಿ** = ಆಗುತ್ತಿದ್ದನು. **ಯತ್** = ಯಾವ ಕಾರಣದಿಂದ; **ಸಃ** = ಆ; **ರಾಮಃ** = ಬಲರಾಮನು; **ಸದಾ ಏವ** = ಎಲ್ಲ ಸಮಯದಲ್ಲೂ; **ವಿಷ್ಣೋಃ** = ಪರಮಾತ್ಮನ; **ಕೇಶಾವೇಶವಾನ್** = ಶುಕ್ಲಕೇಶರೂಪದ ಆವೇಶವುಳ್ಳವನಾಗಿದ್ದನೋ; **(ತತ್)** = ಆ ಕಾರಣದಿಂದ; **ಯದಾ** = ಯಾವಾ ಸಮಯದಲ್ಲಿ; **ಜನಾರ್ದನಃ** = ಪರಮಾತ್ಮನು; **ತತ್ರ** = ಆ ಬಲರಾಮನಲ್ಲಿ; **ನ ಅತಿವ್ಯಕ್ತಃ** = ಅತ್ಯಂತವಾಗಿ ಅಭಿವ್ಯಕ್ತನಾಗುತ್ತಿರಲಿಲ್ಲವೋ; **ತದಾ** = ಆಗ; **ಭೀಮಃ** = ಭೀಮಸೇನನು; **ವಿಜಯೀ** = ಜಯವುಳ್ಳವನು; **ಸ್ಯಾತ್** = ಆಗುತ್ತಿದ್ದನು.

**ತಾತ್ಪರ್ಯ** :- ಬಲರಾಮನಲ್ಲಿ ಎಲ್ಲ ಸಮಯದಲ್ಲೂ ಪರಮಾತ್ಮನ ಶುಕ್ಲಕೇಶರೂಪದ ಆವೇಶವಿರುತ್ತಿತ್ತು. ಯಾವಾಗ ವಿಶೇಷವಾಗಿ ಪರಮಾತ್ಮನು ಅಭಿವ್ಯಕ್ತನಾಗುತ್ತಿದ್ದನೋ ಆಗ ಬಲರಾಮ ಗೆಲ್ಲುತ್ತಿದ್ದನು. ಯಾವಾಗ ಅವನಲ್ಲಿ ಪರಮಾತ್ಮನ ಅತ್ಯಂತ ಅಭಿವ್ಯಕ್ತಿ ಇರುತ್ತಿರಲಿಲವೋ ಆಗ ಭೀಮನೇ ಗೆಲ್ಲುತ್ತಿದ್ದನು.

ಏತಾದೃಶೇನೈವ ರಾಮೇಣ ಯುಕ್ತೇ ಕೃಷ್ಣೇ
ದ್ವಾರ್ವತ್ಯಾಂ ನಿವಸತ್ಯಬ್ಜನಾಭೇ ।
ಸ್ವಪ್ನೇನಿರುದ್ಧೇನ ರತಾ ಕದಾಚಿದ್ ಬಾಣಾತ್ಮ-
ಜೋಷಾ ಚಿತ್ರಲೇಖಾಮುವಾಚ ॥ ೨೩೪ ॥

ತಮಾನಯೇತ್ಯಥ ಸಾ ಚಿತ್ರವಸ್ತ್ರೇ ಪ್ರದರ್ಶ್ಯ
ಲೋಕಾನ್ ಸಮದರ್ಶಯತ್ ತಮ್ ।
ಪೌತ್ರಂ ವಿದಿತ್ವಾ ವಚನಾಚ್ಚ ತಸ್ಯಾಃ ಕೃಷ್ಣಸ್ಯ
ತಂ ಚಾನಯತ್ ತತ್ರ ರಾತ್ರೌ ॥ ೨೩೫ ॥

ಪದಚ್ಛೇದ :- ಏತಾದೃಶೇನ, ಏವ, ರಾಮೇಣ, ಯುಕ್ತೇ, ಕೃಷ್ಣೇ, ದ್ವಾರ್ವತ್ಯಾಂ, ನಿವಸತಿ, ಅಬ್ಜನಾಭೇ, ಸ್ವಪ್ನೇ, ಅನಿರುದ್ಧೇನ, ರತಾ, ಕದಾಚಿತ್, ಬಾಣಾತ್ಮಜಾ, ಉಷಾ, ಚಿತ್ರಲೇಖಾಮ್, ಉವಾಚ, ತಮ್, ಆನಯ, ಇತಿ, ಅಥ, ಸಾ, ಚಿತ್ರವಸ್ತ್ರೇ, ಪ್ರದರ್ಶ್ಯ, ಲೋಕಾನ್, ಸಮದರ್ಶಯತ್, ತಮ್, ಪೌತ್ರಂ, ವಿದಿತ್ವಾ, ವಚನಾತ್, ಚ, ತಸ್ಯಾಃ, ಕೃಷ್ಣಸ್ಯ, ತಂ, ಚ, ಅನಯತ್, ತತ್ರ, ರಾತ್ರೌ.

ಅರ್ಥ :- ಏತಾದೃಶೇನ = ಈ ರೀತಿಯಾದ ಮಹಿಮೆಯಿಂದ ಕೂಡಿದ; ರಾಮೇಣ = ಬಲರಾಮನಿಂದ; ಯುಕ್ತೇ = ಕೂಡಿದ; ಅಬ್ಜನಾಭೇ = ಪದ್ಮನಾಭನಾದ; ಕೃಷ್ಣೇ = ಶ್ರೀಕೃಷ್ಣನು; ದ್ವಾರ್ವತ್ಯಾಂ = ದ್ವಾರವತಿಯಲ್ಲಿ; ನಿವಸತಿ (ಸತಿ) = ವಾಸಮಾಡುತ್ತಿರಲು; ಕದಾಚಿತ್ = ಒಮ್ಮೆ; ಬಾಣಾತ್ಮಜಾ = ಬಾಣಾಸುರನ ಮಗಳಾದ; ಉಷಾ = ಉಷೆಯು; ಸ್ವಪ್ನೇ = ಕನಸಿನಲ್ಲಿ; ಅನಿರುದ್ಧೇನ = ಅನಿರುದ್ಧನಿಂದ; ರತಾ (ಸತೀ) = ರತಿಯನ್ನು ಹೊಂದಿದವಳಾಗಿ; ಚಿತ್ರಲೇಖಾಂ (ಪ್ರತಿ) = ಚಿತ್ರಲೇಖೆಯನ್ನು ಕುರಿತು; ತಮ್ = ಅವನನ್ನು; ಆನಯ = ಕರೆದುಕೊಂಡು ಬಾ; ಇತಿ = ಎಂದು; ಉವಾಚ = ಹೇಳಿದಳು. ಅಥ = ಆ ನಂತರ; ಸಾ = ಆ ಚಿತ್ರಲೇಖೆಯು; ಚಿತ್ರವಸ್ತ್ರೇ = ಚಿತ್ರವಸ್ತ್ರದಲ್ಲಿ; ಲೋಕಾನ್ = ಲೋಕದಲ್ಲಿರುವ ಪುರುಷರನ್ನು; ಪ್ರದರ್ಶ್ಯ = ತೋರಿಸಿ; ತಂ = ಆ ಅನಿರುದ್ಧನನ್ನು; ಸಮದರ್ಶಯತ್ = ತೋರಿಸಿದಳು; ಚ = ಮತ್ತು; ತಸ್ಯಾಃ = ಆ ಉಷೆಯ; ವಚನಾತ್ = ಮಾತಿನಿಂದ; ತಂ = ಆ ಅನಿರುದ್ಧನನ್ನು; ಕೃಷ್ಣಸ್ಯ = ಶ್ರೀಕೃಷ್ಣನ; ಪೌತ್ರಂ =

ಮೊಮ್ಮಗನೆಂದು; (ಸ್ವಯಮ್) = ತಾನು; ವಿದಿತ್ವಾ = ತಿಳಿದು; ರಾತ್ರೌ = ರಾತ್ರಿಯ ಸಮಯದಲ್ಲಿ; ತತ್ರ ಚ = ಉಷೆಯಿದ್ದ ಜಾಗಕ್ಕೆ; ಅನಯತ್ = ಕರೆತಂದಳು.

ತಾತ್ಪರ್ಯ :- ಇಂತಹ ಮಹಿಮನಾದ ಬಲರಾಮನೊಂದಿಗೆ ಶ್ರೀಕೃಷ್ಣನು ದ್ವಾರಕೆಯಲ್ಲಿ ವಾಸಮಾಡುತ್ತಿದ್ದನು. ಹೀಗಿರಲು ಒಮ್ಮೆ ಬಾಣಾಸುರನ ಮಗಳಾದ ಉಷಾದೇವಿಗೆ ಅನಿರುದ್ಧನೊಂದಿಗೆ ರತಿಯಲ್ಲಿ ತೊಡಗಿದಂತೆ ಕನಸು ಬೀಳುತ್ತದೆ. ಆಗ ಉಷೆಯು ತನ್ನ ಆಪ್ತಸಖಿಯಾದ ಚಿತ್ರಲೇಖೆಗೆ ಹೇಳುತ್ತಾಳೆ. ಕನಸಿನಲ್ಲಿ ನನ್ನೊಂದಿಗೆ ರಮಿಸಿದ ವ್ಯಕ್ತಿಯನ್ನು ಕರೆದು ತಾ ಎಂದು. ಚಿತ್ರಲೇಖೆಯು ಲೋಕದ ಪ್ರಸಿದ್ಧಪುರುಷರ ಚಿತ್ರಪಟಗಳನ್ನು ತೋರಿಸಲು ಅನಿರುದ್ಧನ ಚಿತ್ರವನ್ನು ಉಷೆಯು ಗುರುತಿಸುತ್ತಾಳೆ. ಕೃಷ್ಣನ ಮೊಮ್ಮಗನೇ ಇವನೆಂದು ತಿಳಿದ ಚಿತ್ರಲೇಖೆಯು ಅಂದು ರಾತ್ರಿ ತನ್ನ ಮಾಯಾ ಶಕ್ತಿಯಿಂದ ಅನಿರುದ್ಧನನ್ನು ಅಲ್ಲಿಗೆ ಕರೆತರುತ್ತಾಳೆ.

**ಅನಿರುದ್ಧಂ ಗುಣೋದಾರಮಾನೀತಂ ಚಿತ್ರಲೇಖಯಾ ।**
**ಪ್ರಾಪ್ಯ ರೇಮೇ ಬಾಣಸುತಾ ದಿವಸಾನ್ ಸುಬಹೂನಪಿ ॥ ೨೩೬ ॥**

**ಪದಚ್ಛೇದ :- ಅನಿರುದ್ಧಂ, ಗುಣೋದಾರನ್, ಆನೀತಂ, ಚಿತ್ರಲೇಖಯಾ, ಪ್ರಾಪ್ಯ, ರೇಮೇ, ಬಾಣಸುತಾ, ದಿವಸಾನ್, ಸುಬಹೂನ್, ಅಪಿ.**

**ಅರ್ಥ** :- **ಬಾಣಸುತಾ** = ಬಾಣಾಸುರನ ಮಗಳಾದ ಉಷೆಯು; **ಚಿತ್ರಲೇಖಯಾ** = ಚಿತ್ರಲೇಖೆಯಿಂದ; **ಆನೀತಂ** = ಕರೆತರಲ್ಪಟ್ಟ; **ಗುಣೋದಾರಂ** = ಗುಣಗಳಿಂದ ಉತ್ಕೃಷ್ಟನಾದ; **ಅನಿರುದ್ಧಂ** = ಅನಿರುದ್ಧನನ್ನು; **ಪ್ರಾಪ್ಯ** = ಹೊಂದಿ; **ಸುಬಹೂನ್** = ಬಹಳವಾದ; **ದಿವಸಾನ್ ಅಪಿ** = ದಿವಸಗಳಕಾಲ; **ರೇಮೇ** = ಕ್ರೀಡಿಸಿದಳು.

ತಾತ್ಪರ್ಯ :- ಹೀಗೆ ಚಿತ್ರಲೇಖೆಕರೆತಂದ ಅನಿರುದ್ಧನೊಂದಿಗೆ ಉಷೆಯು ಅನೇಕ ದಿವಸಗಳ ಕಾಲ ವಿಹರಿಸಿದಳು.

**ಗೂಢಂ ಕನ್ಯಾಗೃಹೇ ತಂ ತು ಜ್ಞಾತ್ವಾ ಕನ್ಯಾಭಿರಕ್ಷಿಣಃ ।**
**ಊಚುರ್ಬಾಣಾಯಾದಿಶಚ್ಚ ಕಿಂಕರಾನ್ ಗ್ರಹಣೇಸ್ಯ ಸಃ ॥ ೨೩೭ ॥**

ಪದಚ್ಛೇದ :- ಗೂಢಂ, ಕನ್ಯಾಗೃಹೇ, ತಂ, ತು, ಜ್ಞಾತ್ವಾ, ಕನ್ಯಾಭಿರಕ್ಷಿಣಃ, ಊಚುಃ, ಬಾಣಾಯ, ಆದಿಶತ್, ಚ, ಕಿಂಕರಾನ್, ಗ್ರಹಣೇ, ಅಸ್ಯ, ಸಃ.

**ಅರ್ಥ** :- **ಕನ್ಯಾಭಿರಕ್ಷಿಣಃ** = ಕನ್ಯೆಯನ್ನು ರಕ್ಷಿಸುತ್ತಿದ್ದವರು; **ಕನ್ಯಾಗೃಹೇ** = ಉಷೆಯಮನೆಯಲ್ಲು; **ಗೂಢಂ** = ಬಚ್ಚಿಟ್ಟುಕೊಂಡಿರುವ; **ತಂ ತು** = ಆ ಅನಿರುದ್ಧನನ್ನಾದರೂ; **ಜ್ಞಾತ್ವಾ** = ತಿಳಿದು; **ಬಾಣಾಯ** = ಬಾಣಾಸುರನಿಗೆ; **ಊಚುಃ** = ಹೇಳಿದರು. **ಸಃ ಚ** = ಆ ಬಾಣಾಸುರನಾದರೂ; **ಅಸ್ಯ** = ಈ ಅನಿರುದ್ಧನ; **ಗ್ರಹಣೇ** = ಹಿಡಿಯುವುದಕ್ಕಾಗಿ; **ಕಿಂಕರಾನ್** = ಸೇವಕರನ್ನು; **ಆದಿಶತ್** = ಆಜ್ಞಾಪಿಸಿದನು.

**ತಾತ್ಪರ್ಯ** :- ಉಷೆಯನ್ನು ರಕ್ಷಿಸಲೆಂದು ನಿಯೋಜಿಸಿದ್ದವರು ಉಷೆಯ ಮನೆಯಲ್ಲಿ ಅಡಗಿರುವ ಅನಿರುದ್ಧನನ್ನು ತಿಳಿಯುತ್ತಾರೆ. ಮತ್ತು ಬಾಣಾಸುರನಿಗೆ ತಿಳಿಸುತ್ತಾರೆ. ಬಾಣಾಸುರನು ಸೇವಕರಿಗೆ ಅವನನ್ನು ಹಿಡಿಯಲು ಆಜ್ಞಾಪಿಸುತ್ತಾನೆ.

**ಆಗತಾನನಿರುದ್ಧಸ್ತಾನ್ ಪರಿಘೇಣ ಮಹಾಬಲಃ ।**
**ನಿಹತ್ಯ ದ್ರಾವಯಾಮಾಸ ಸ್ವಯಮಾಯಾತ್ ತತೋಸುರಃ ।**
**ಸ ತು ಯುದ್ಧ್ವಾತಿಕೃಚ್ಛ್ರೇಣ ನಾಗಾಸ್ತ್ರೇಣ ಬಬಂಧ ತಮ್ ॥ ೨೩೮ ॥**

ಪದಚ್ಛೇದ :- ಆಗತಾನ್, ಅನಿರುದ್ಧಃ, ತಾನ್, ಪರಿಘೇಣ, ಮಹಾಬಲಃ, ನಿಹತ್ಯ, ದ್ರಾವಯಾಮಾಸ, ಸ್ವಯಮ್, ಆಯಾತ್, ತತಃ, ಅಸುರಃ, ಸಃ, ತು, ಯುದ್ಧ್ವಾ, ಅತಿಕೃಛ್ರೇಣ, ನಾಗಾಸ್ತ್ರೇಣ, ಬಬಂಧ, ತಮ್.

**ಅರ್ಥ** :- **ಅನಿರುದ್ಧಃ** = ಅನಿರುದ್ಧನು; **ಆಗತಾನ್** = ಬಂದವರನ್ನು; **ಪರಿಘೇಣ** = ಪರಿಘಾಯುಧದಿಂದ; **ನಿಹತ್ಯ** = ಹೊಡೆದು; **ದ್ರಾವಯಾಮಾಸ** = ಓಡಿಸಿದನು. **ತತಃ** = ಆ ನಂತರಃ; **ಅಸುರಃ** = ಬಾಣಾಸುರನು; **ಸ್ವಯಮ್** = ತಾನೇ; **ಆಯಾತ್** = ಬಂದನು. **ಸಃ ತು** = ಬಂದ ಆ ಬಾಣಾಸುರನಾದರೂ; **ಅತಿಕೃಚ್ಛ್ರೇಣ** = ಅತ್ಯಂತ ಕಷ್ಟದಿಂದ; **ಯುದ್ಧ್ವಾ** = ಯುದ್ಧಮಾಡಿ; **ನಾಗಾಸ್ತ್ರೇಣ** = ನಾಗಾಸ್ತ್ರದಿಂದ; **ತಂ** = ಆ ಅನಿರುದ್ಧನನ್ನು; **ಬಬಂಧ** = ಬಂಧಿಸಿದನು.

**ತಾತ್ಪರ್ಯ :-** ಅನಿರುದ್ಧನು ತನ್ನನ್ನು ಹಿಡಿಯಲು ಬಂದ ಎಲ್ಲರನ್ನೂ ಪರಿಘಾಯುಧದಿಂದ ಹೊಡೆದು ಓಡಿಸಿದನು. ಕೊನೆಗೆ ಬಾಣಾಸುರನು ತಾನೇ ಯುದ್ಧಕ್ಕೆ ಬಂದನು. ಅತಿಕಷ್ಟದಿಂದ ಅವನೊಂದಿಗೆ ಹೋರಾಡಿ ನಾಗಾಸ್ತ್ರದಿಂದ ಅನಿರುದ್ಧನನ್ನು ಬಂಧಿಸಿದನು.

**ಅಥ ಕೃಷ್ಣಃ ಸಮಾರುಹ್ಯ ಗರುಡಂ ರಾಮಸಂಯುತಃ ।**
**ಪ್ರದ್ಯುಮ್ನೇನ ಚ ತತ್ರಾಗಾತ್ ಪ್ರಥಮಂ ತತ್ರ ವಹ್ನಿಭಿಃ ॥ ೨೩೯ ॥**

**ಯುದ್ಧ್ವಾಂಗಿರಸಾ ಚೈವ ಕ್ಷಣಾದ್ ವಿದ್ರಾವ್ಯ ತಾನ್ ಹರಿಃ ।**
**ವಿದ್ರಾವ್ಯ ಸರ್ವಪ್ರಮಥಾನಾಸಸಾದ ಜ್ವರಂ ತತಃ ॥ ೨೪೦ ॥**

**ಪದಚ್ಛೇದ :-** ಅಥ, ಕೃಷ್ಣಃ, ಸಮಾರುಹ್ಯ, ಗರುಡಂ, ರಾಮಸಂಯುತಃ, ಪ್ರದ್ಯುಮ್ನೇನ, ಚ, ತತ್ರ, ಆಗಾತ್, ಪ್ರಥಮಂ, ತತ್ರ, ವಹ್ನಿಭಿಃ, ಯುದ್ಧ್ವಾ, ಏವ, ಅಂಗಿರಸಾ, ಚ, ಏವ, ಕ್ಷಣಾತ್, ವಿದ್ರಾವ್ಯ, ತಾನ್, ಹರಿಃ, ವಿದ್ರಾವ್ಯ, ಸರ್ವಪ್ರಮಥಾನ್, ಆಸಸಾದ, ಜ್ವರಂ, ತತಃ.

**ಅರ್ಥ :-** **ಅಥ** = ಆ ನಂತರ; **ಕೃಷ್ಣಃ** = ಶ್ರೀಕೃಷ್ಣನು; **ಗರುಡಂ** = ಗರುಡನನ್ನು; **ಸಮಾರುಹ್ಯ** = ಏರಿ; **ರಾಮಸಂಯುತಃ (ಸನ್)** = ಬಲರಾಮನೊಂದಿಗೆ ಕೂಡಿದವನಾಗಿ; **ಚ** = ಮತ್ತು; **ಪ್ರದ್ಯುಮ್ನೇನ (ಸಹ)** = ಪ್ರದ್ಯುಮ್ನನೊಂದಿಗೆ; **ತತ್ರ** = ಬಾಣಾಸುರನ ನಗರಕ್ಕೆ; **ಆಗಾತ್** = ಬಂದನು. **ಹರಿಃ** = ಶ್ರೀಕೃಷ್ಣನು; **ತತ್ರ** = ಅಲ್ಲಿ; **ಪ್ರಥಮಂ** = ಮೊದಲಿಗೆ; **ವಹ್ನಿಭಿಃ** = ಅಗ್ನಿಗಳೊಂದಿಗೆ; **ಯುದ್ಧ್ವಾ** = ಯುದ್ಧಮಾಡಿ; **ಅಂಗಿರಸಾ ಚ ಏವ** = ಆಂಗಿರಸ ಎಂಬ ಅಗ್ನಿಶೇಷದೊಂದಿಗೆ; **ಯುದ್ಧ್ವಾ** = ಯುದ್ಧಮಾಡಿ; **ತಾನ್** = ಆ ಅಗ್ನಿಗಳನ್ನು; **ಸರ್ವಪ್ರಮಥಾನ್** = ಎಲ್ಲ ರುದ್ರಗಣದವರನ್ನು; **ಕ್ಷಣಾತ್ ಏವ** = ಕ್ಷಣದಲ್ಲಿಯೇ; **ವಿದ್ರಾವ್ಯ** = ಓಡಿಸಿ; **ತತಃ** = ನಂತರ; **ಜ್ವರಂ** = ಜ್ವರಾಭಿಮಾನಿಯನ್ನು; **ಆಸಸಾದ** = ಸಮೀಪಿಸಿದನು.

**ತಾತ್ಪರ್ಯ :-** ವಿಷಯ ತಿಳಿದ ಶ್ರೀಕೃಷ್ಣನು ಗರುದನನ್ನೇರಿ ಅಬಲರಾಮ ಮತ್ತು ಪ್ರದ್ಯುಮ್ನರೊಂದಿಗೆ ಬಾಣಾಸುರನ ನಗರಕ್ಕೆ ಬರುತ್ತಾನೆ. ಅಲ್ಲಿ ಮೊದಲಿಗೇ ಅಗ್ನಿಗಳನ್ನು, ಆಂಗಿರಸವೆಂಬ ಹೆಸರಿನ ಅಗ್ನಿವಿಶೇಷವನ್ನು

ಎದುರಿಸಿ ಕ್ಷಣದಲ್ಲಿಯೇ ಓಡಿಸಿದನು. ಶಿವನ ಪ್ರಮಥಗಣವನ್ನೂ ಓಡಿಸಿದನು. ನಂತರ ಶ್ರೀಕೃಷ್ಣನಿಗೆ ಶೈವಜ್ವರಾಭಿನಿದೇವತೆಯು ಎದುರಾದನು.

**ತೇನ ಭಸ್ಮಪ್ರಹಾರೇಣ ಜ್ವರಿತಂ ರೋಹಿಣೇಸುತಮ್ ।**
**ಆಶ್ಲಿಷ್ಯ ವಿಜ್ವರಂ ಚಕ್ರೇ ವಾಸುದೇವೋ ಜಗತ್ಪ್ರಭುಃ ॥ ೨೪೧ ॥**

ಪದಚ್ಛೇದ :- ತೇನ, ಭಸ್ಮಪ್ರಹಾರೇಣ, ಜ್ವರಿತಂ, ರೋಹಿಣೇಸುತಮ್, ಆಶ್ಲಿಷ್ಯ, ವಿಜ್ವರಂ, ಚಕ್ರೇ, ವಾಸುದೇವಃ, ಜಗತ್ಪ್ರಭುಃ.

**ಅರ್ಥ** :- **ಜಗತ್ಪ್ರಭುಃ** = ಜಗತ್ತಿಗೆ ಸ್ವಾಮಿಯಾದ; **ವಾಸುದೇವಃ** = ಶ್ರೀಕೃಷ್ಣನು; **ಭಸ್ಮಪ್ರಹಾರೇಣ** = ಭಸ್ಮವೇ ಆಯುಧವಾಗಿ ಉಳ್ಳ; **ತೇನ** = ಆ ಜ್ವರಾಭಿಮಾನಿ ದೇವತೆಯಿಂದ; **ಜ್ವರಿತಂ** = ಜ್ವರಗೊಂದ; **ರೋಹಿಣೇಸುತಂ** = ಬಲರಾಮನನ್ನು; **ಆಶ್ಲಿಷ್ಯ** = ಆಲಿಂಗಿಸಿ; **ವಿಜ್ವರಂ** = ಜ್ವರರಹಿತನನ್ನಾಗಿ; **ಚಕ್ರೇ** = ಮಾಡಿದನು.

**ತಾತ್ಪರ್ಯ** :- ಜ್ವರಾಭಿಮಾನಿ ದೇವತೆಯು ತನ್ನ ಭಸ್ಮಾಯುಧದಿಂದ ಬಲರಾಮನಿಗೆ ಪ್ರಹರಿಸಲು ಬಲರಾಮನು ಜ್ವರಪೀಡಿತನಾದ. ಆಗ ಶ್ರೀಕೃಷ್ಣನು ಬಲರಾಮನನ್ನು ಆಲಿಂಗಿಸಿ ಅವನ ಜ್ವರವನ್ನು ಪರಿಹರಿಸಿದನು.

**ಸ್ವಯಂ ವಿಕ್ರೀಡ್ಯ ತೇನಾಥ ಕಂಚಿತ್ ಕಾಲಂ ಜನಾರ್ದನಃ ।**
**ನಿಷ್ಪಿಷ್ಯ ಮುಷ್ಟಿಭಿಶ್ಚಾನ್ಯಂ ಸಸರ್ಜ ಜ್ವರಮಚ್ಯುತಃ ॥ ೨೪೨ ॥**

ಪದಚ್ಛೇದ :- ಸ್ವಯಂ, ವಿಕ್ರೀಡ್ಯ, ತೇನ, ಅಥ, ಕಂಚಿತ್, ಕಾಲಂ, ಜನಾರ್ದನಃ, ನಿಷ್ಪಿಷ್ಯ, ಮುಷ್ಟಿಭಿಃ, ಚ, ಅನ್ಯಂ, ಸಸರ್ಜ, ಜ್ವರಮ್, ಅಚ್ಯುತಃ.

**ಅರ್ಥ** :- **ಅಥ** = ಆ ನಂತರ; **ಅಚ್ಯುತಃ** = ಚ್ಯುತಿರಹಿತನಾದ; **ಜನಾರ್ದನಃ** = ಶ್ರೀಕೃಷ್ಣನು; **ತೇನ** = ಜ್ವರಾಭಿಮಾನಿಯೊಂದಿಗೆ; **ಕಂಚಿತ್ ಕಾಲಂ** = ಸ್ವಲ್ಪಕಾಲ; **ಸ್ವಯಂ** = ತಾನಾಗಿಯೇ; **ವಿಕ್ರೀಡ್ಯ** = ಕ್ರೀಡಿಸಿ; **ಮುಷ್ಟಿಭಿಃ** = ಮುಷ್ಟಿಗಳಿಂದ; **ನಿಷ್ಪಿಷ್ಯ** = ಪುಡಿಮಾಡಿ; **ಅನ್ಯಂ** = ಮತ್ತೊಬ್ಬ; **ಜ್ವರಂ** = ಜ್ವರವನ್ನು; **ಸಸರ್ಜ** = ಸೃಷ್ಟಿಮಾಡಿದನು.

ತಾತ್ಪರ್ಯ :- ಶ್ರೀಕೃಷ್ಣನು ತನಗೆ ಸಾಮರ್ಥ್ಯವಿದ್ದರೂ ಸ್ವಲ್ಪಕಾಲ ಶೈವಜ್ವರದೊಂದಿಗೆ ಆಟವಾಡಿ ಕೊನೆ ಮುಷ್ಟಿಗಳಿಂದ ಪುಡಿಮಾಡಿದನು. ಮತ್ತು ಪ್ರತಿಯಾಗಿ ವೈಷ್ಣವಜ್ವರವನ್ನು ಸೃಷ್ಟಿ ಮಾಡಿದನು.

**ಸ್ವಯಂ ಜಿತ್ವಾಪಿ ಗಿರಿಶಭೃತ್ಯಂ ನಾಲಮಿತಿ ಪ್ರಭುಃ ।**
**ಸ್ವಭೃತ್ಯೇನೈವ ಜೇತವ್ಯ ಇತ್ಯನ್ಯಂ ಸಸೃಜೇ ತದಾ ॥ ೨೪೩ ॥**

**ಪದಚ್ಛೇದ :- ಸ್ವಯಂ, ಜಿತ್ವಾ, ಅಪಿ, ಗಿರಿಶಭೃತ್ಯಂ, ನ, ಅಲಮ್, ಇತಿ, ಪ್ರಭುಃ, ಸ್ವಭೃತ್ಯೇನ, ಏವ, ಜೇತವ್ಯಃ, ಇತಿ, ಅನ್ಯಂ, ಸಸೃಜೇ, ತದಾ.**

ಅರ್ಥ :- **ಪ್ರಭುಃ** = ಸಮರ್ಥನಾದ ಶ್ರೀಕೃಷ್ಣನು; **ಸ್ವಯಮ್** = ತಾನು; **ಗಿರಿಶಭೃತ್ಯಂ** = ಶಿವನ ಸೇವಕನಾದ ಜ್ವರನನ್ನು; **ಜಿತ್ವಾ ಅಪಿ** = ಗೆದ್ದೂ ಕೂಡ; **ಅಲಂ ನ (ಭವತಿ)** = ಸಾಕಾಗುವುದಿಲ್ಲ; **ಇತಿ** = ಎಂದು; **ಸ್ವಭೃತ್ಯೇನ ಏವ** = ತನ್ನ ಸೇವಕನಿಂದಲೇ; **ಜೇತವ್ಯಃ** = ಗೆಲ್ಲಲ್ಪಡಬೇಕು; **ಇತಿ** = ಎಂಬಕಾರಣದಿಂದ; **ಅನ್ಯಂ** = ಮತ್ತೊಬ್ಬ ಸೇವಕನನ್ನು; **ತದಾ** = ಆಗ; **ಸಸೃಜೇ** = ಸೃಷ್ಟಿಮಾಡಿದನು.

ತಾತ್ಪರ್ಯ :- ಶ್ರೀಕೃಷ್ಣನಿಗೆ ಶೈವಜ್ವರವನ್ನು ಗೆಲ್ಲುವ ಸಾಮರ್ಥ್ಯವಿದ್ದಿತು. ಅದನ್ನು ತೋರಿಸುವ ಸಲುವಾಗಿಯೇ ಮೊದಲಿಗೆ ತಾನು ಅವನನ್ನು ಗೆದ್ದನು. ನಂತರ ತಾನು ಗೆದ್ದರೆ ಸಾಲದು ಎಂದು ತನ್ನ ಸೇವಕನನ್ನು ಆಗ ಸೃಷ್ಟಿಮಾಡಿದನು.

**ಜ್ವರೇಣ ವೈಷ್ಣವೇನಾಸೌ ಸುಭೃಶಂ ಪೀಡಿತಸ್ತದಾ ।**
**ಗ್ರಾಸಾರ್ಥಮುಪನೀತಶ್ಚ ಜಗಾಮ ಶರಣಂ ಹರಿಮ್ ।**
**ತೇನ ಸ್ತುತಃ ಸ ಭಗವಾನ್ ಮೋಚಯಾಮಾಸ ತಂ ವಿಭುಃ ॥ ೨೪೪ ॥**

**ಪದಚ್ಛೇದ :- ಜ್ವರೇಣ, ವೈಷ್ಣವೇನ, ಅಸೌ, ಸುಭೃಶಂ, ಪೀಡಿತಃ, ತದಾ, ಗ್ರಾಸಾರ್ಥಮ್, ಉಪನೀತಃ, ಚ, ಜಗಾಮ, ಶರಣಂ, ಹರಿಂ, ತೇನ, ಸ್ತುತಃ, ಸಃ, ಭಗವಾನ್, ಮೋಚಯಾಮಾಸ, ತಂ, ವಿಭುಃ.**

ಅರ್ಥ :- **ವೈಷ್ಣವೇನ** = ವಿಷ್ಣುಭಕ್ತನಾದ; **ಜ್ವರೇಣ** = ಜ್ವರಾಭಿಮಾನಿಯಿಂದ; **ಸುಭೃಶಂ** = ಬಹಳವಾಗಿ; **ಪೀಡಿತಃ** = ಪೀಡಿತನಾದ;

**ಚ** = ಮತ್ತು; **ಗ್ರಾಸಾರ್ಥಂ** = ತಿನ್ನಲು; **ಉಪನೀತಃ** = ಸಮೀಪಿಸಲ್ಪಟ್ಟನು. **ತದಾ** = ಆಗ; **ಅಸೌ** = ಈ ಶೈವಜ್ವರನು; **ಹರಿಂ** = ಶ್ರೀಕೃಷ್ಣನನ್ನು; **ಶರಣಂ** = ಮೊರೆಯನ್ನು; **ಜಗಾಮ** = ಹೊಂದಿದನು. **ತೇನ** = ಆ ಜ್ವರನಿಂದ; **ಸ್ತುತಃ** = ಸ್ತುತನಾದ; **ವಿಭುಃ** = ವ್ಯಾಪ್ತನಾದ; **ಸಃ** = ಆ; **ಭಗವಾನ್** = ಶ್ರೀಕೃಷ್ಣನು; **ತಂ** = ಆ ಶೈವಜ್ವರವನ್ನು; **ಮೋಚಯಾಮಾಸ** = ಬಿಡಿಸಿದನು.

ತಾತ್ಪರ್ಯ :- ವೈಷ್ಣವಜ್ವರವು ಶೈವಜ್ವರನನ್ನು ಬಹಳವಾಗಿ ಪೀಡಿಸಿತು. ಕೊನೆಗೆ ನುಂಗಲೇ ಬಂದಿತು. ಆಗ ಹೆದರಿದ ಶೈವಜ್ವರನು ಶ್ರೀಕೃಷ್ಣನನ್ನು ಮೊರೆಹೊಂದಿ ಸ್ತೋತ್ರಮಾಡಿದನು. ಶ್ರೀಕೃಷ್ಣನು ಅವನನ್ನು ಬಿಡುಗಡೆಗೊಳಿಸಿದನು.

**ಕ್ರೀಡಾರ್ಥಮತ್ಯಲ್ಪಜನೇಷ್ವಪಿ ಪ್ರಭುಃ**
**ಕಥಂಚಿದೇವ ವ್ಯಜಯದ್ ವ್ಯಥಾಂ ವಿನಾ ।**
**ಇತ್ಯಾದಿ ಮೋಹಾಯ ಸ ದರ್ಶಯತ್ಯಜೋ**
**ನಿತ್ಯಸ್ವತಂತ್ರಸ್ಯ ಕುತೋ ವ್ಯಥಾದಯಃ ।। ೨೪೫ ।।**

ಪದಚ್ಛೇದ :- **ಕ್ರೀಡಾರ್ಥಮ್, ಅತ್ಯಲ್ಪಜನೇಷು, ಅಪಿ, ಪ್ರಭುಃ, ಕಥಂಚಿತ್, ಏವ, ವ್ಯಜಯತ್, ವ್ಯಥಾಂ, ವಿನಾ, ಇತ್ಯಾದಿ, ಮೋಹಾಯ, ಸಃ, ದರ್ಶಯತಿ, ಅಜಃ, ನಿತ್ಯಸ್ವತಂತ್ರಸ್ಯ, ಕುತಃ, ವ್ಯಥಾದಯಃ.**

ಅರ್ಥ :- **ಅಜಃ** = ಜನನರಹಿತನಾದ; **ಪ್ರಭುಃ** = ಸಮರ್ಥನಾದ; **ಸಃ** = ಶ್ರೀಕೃಷ್ಣನು; **ಕ್ರೀಡಾರ್ಥಮ್** = ಕ್ರೀಡೆಗಾಗಿಯಷ್ಟೆ; **ಅತ್ಯಲ್ಪಜನೇಷು ಅಪಿ** = ತನಗಿಂತ ಅತ್ಯಂತ ಅಲ್ಪರಾದ ಜೀವರಲ್ಲೂ ಕೂಡ; **ಕಥಂಚಿತ್ ಏವ** = ಯಾವುದೋ ಒಂದುರೀತಿಯಿಂದ(ಜ್ವರವನ್ನು ಸೃಷ್ಟಿಸಿ); **ವ್ಯಥಾಂ ವಿನಾ** = ಕಷ್ಟವಿಲ್ಲದೆ; **ವ್ಯಜಯತ್** = ಗೆದ್ದನು; **ಇತ್ಯಾದಿ** = ಇದೇ ಮೊದಲಾದವನ್ನು; **ಮೋಹಾಯ** = ದೈತ್ಯಜನರ ಭ್ರಮೆಗಾಗಿ; **ದರ್ಶಯತಿ** = ತೋರಿಸುತ್ತಾನೆ. **ನಿತ್ಯಸ್ವತಂತ್ರಸ್ಯ** = ಎಂದಿಗೂ ಸ್ವತಂತ್ರನೇ ಆದ ಕೃಷ್ಣನಿಗೆ; **ಕುತಃ** = ಹೇಗೆ ತಾನೆ; **ವ್ಯಥಾದಯಃ** = ದುಃಖಮೊದಲಾದವುಗಳು; **(ಸ್ಯಾತ್)** = ಆದೀತು.

ತಾತ್ಪರ್ಯ :- ಶ್ರೀಕೃಷ್ಣನು ತನ್ನ ಸಾಮರ್ಥ್ಯದಿಂದ ಶೈವಜ್ವರವನ್ನು ಎದುರಿಸಿದ್ದಲ್ಲ. ವೈಷ್ಣವಜ್ವರವನ್ನು ಸೃಷ್ಟಿಸಿ ಗೆಲುವನ್ನು ಸಂಪಾದಿಸಿದ.

ಆದ್ದರಿಂದ ಸ್ವಯಂ ಜಿತ್ವಾ ಎಂದು ಶ್ರೀಕೃಷ್ಣನು ತಾನೇ ಗೆದ್ದ ಎನ್ನುವುದ ಯುಕ್ತವಾಗುವುದಿಲ್ಲ ಎಂಬ ಪ್ರಶ್ನೆಗೆ ಇಲ್ಲಿ ಆಚಾರ್ಯರು ಉತ್ತರಿಸಿತ್ತಿದ್ದರೆ- ಶ್ರೀಕೃಷ್ಣನು ತಾನೇ ಗೆಲ್ಲಲು ಸಮರ್ಥನಾಗಿದ್ದರೂ ಕ್ರೀಡೆಗಾಗಿ ಮತ್ತು ದೈತ್ಯಜನರ ಭ್ರಮೆಗಾಗಿ ವೈಷ್ಣವಜ್ವರಾದಿಗಳನ್ನು ಸೃಷ್ಟಿಮಾಡಿ ತಾನು ದುಃಖವಿಲ್ಲದವನಾದನು ಎಂಬಂತೆ ತೋರಿಸಿಕೊಳ್ಳುತ್ತಾನೆ.

**ಯದಾ ಜ್ವರಾದ್ಯಾ ಅಖಿಲಾಃ ಪ್ರವಿದ್ರುತಾಸ್ತದಾ**
**ಸ್ವಯಂ ಪ್ರಾಪ ಹರಿಂ ಗಿರೀಶಃ ।**
**ತಯೋರಭೂದ್ ಯುದ್ಧಮಥೈನಮಚ್ಯುತೋ**
**ವಿಜೃಂಭಯಾಮಾಸ ವಿಜೃಂಭಣಾಸ್ತ್ರತಃ ॥ ೨೪೬ ॥**

**ಪದಚ್ಛೇದ :- ಯದಾ, ಜ್ವರಾದ್ಯಾಃ, ಅಖಿಲಾಃ, ಪ್ರವಿದ್ರುತಾಃ, ತದಾ, ಸ್ವಯಂ, ಪ್ರಾಪ, ಹರಿಂ, ಗಿರೀಶಃ, ತಯೋಃ, ಅಭವತ್, ಯುದ್ಧಮ್, ಅಥ, ಏನಮ್, ಅಚ್ಯುತಃ, ವಿಜೃಂಭಯಾಮಾಸ, ವಿಜೃಂಭಣಾಸ್ತ್ರತಃ.**

**ಅರ್ಥ :- ಯದಾ** = ಯಾವಾಗ; **ಅಖಿಲಾಃ** = ಎಲ್ಲ; **ಜ್ವರಾದ್ಯಾಃ** = ಜ್ವರಮೊದಲಾದ ಶಿವನ ದೂತರು; **ಪ್ರವಿದ್ರುತಾಃ** = ಓಡಿಹೋದರೋ; **ತದಾ** = ಆಗ; **ಗಿರೀಶಃ** = ಶಿವನು; **ಸ್ವಯಂ** = ತಾನೇ; **ಹರಿಂ** = ಶ್ರೀಕೃಷ್ಣನನ್ನು; **ಪ್ರಾಪ** = ಸೇರಿದನು. **ತಯೋಃ** = ಅವರಿಬ್ಬರಿಗೆ; **ಯುದ್ಧಮ್** = ಯ್ಯುದ್ಧವು; **ಅಭೂತ್** = ಆಯಿತು. **ಅಥ** = ಆನಂತರ; **ಅಚ್ಯುತಃ** = ಶ್ರೀಕೃಷ್ಣನು; **ವಿಜೃಂಭಣಾಸ್ತ್ರತಃ** = ಸ್ತಂಭಕಾಸ್ತ್ರದಿಂದ; **ವಿಜೃಂಭಯಾಮಾಸ** = ಸ್ತಂಭನಗೊಳಿಸಿದನು.

**ತಾತ್ಪರ್ಯ :-** ಯಾವಾಗ ಶಿವನ ಎಲ್ಲ ದೂತರೂ ಓಡಿಹೋದರೋ ಆಗ ಬಾಣಾಸುರನ ರಕ್ಷಣೆಗೆ ಸ್ವತಃ ಶಿವನೇ ಯುದ್ಧಕ್ಕೆ ಬಂದನು. ಹರಿ-ಹರರಿಬ್ಬರೂ ಯುದ್ಧವನ್ನು ಮಾಡಿದರು. ಆಗ ಶ್ರೀಹರಿಯು ವಿಜೃಂಭಣಾಸ್ತ್ರವನ್ನು ಶಿವನ ಮೇಲೆ ಪ್ರಯೋಗಿಸಿ ಶಿವನನ್ನು ನಿಷ್ಕ್ರಿಯಗೊಳಿಸಿದನು.

**ವಿಜೃಂಭಿತೇ ಶಂಕರೇ ನಿಷ್ಪ್ರಯತ್ನೇ**
**ಸ್ಥಾಣೂಪಮೇ ಸಂಸ್ಥಿತೇ ಕಂಜಜಾತಃ ।**

**ದೈತ್ಯಾವೇಶಾದ್ ವಾಸುದೇವಾನಭಿಜ್ಞಂ**
**ಸಂಬೋಧಯಾಮಾಸ ಸದುಕ್ತಿಭಿಃ ಪ್ರಭುಃ ।। ೨೪೭ ।।**

ಪದಚ್ಛೇದ :- ವಿಜೃಂಭಿತೇ, ಶಂಕರೇ, ನಿಷ್ಪ್ರಯತ್ನೇ, ಸ್ಥಾಣೂಪಮೇ, ಸಂಸ್ಥಿತೇ, ಕಂಜಜಾತಃ, ದೈತ್ಯಾವೇಶಾತ್, ವಾಸುದೇವಾನಭಿಜ್ಞಂ, ಸಂಬೋಧಯಾಮಾಸ, ಸದುಕ್ತಿಭಿಃ, ಪ್ರಭುಃ.

**ಅರ್ಥ :- ಶಂಕರೇ** = ಶಿವನು; **ವಿಜೃಂಭಿತೇ** = ಸ್ತಂಭಿತನಾಗಿ; **ನಿಷ್ಪ್ರಯತ್ನೇ** = ಪ್ರಯತ್ನರಹಿತನಾಗಿ; **ಸ್ಥಾಣೂಪಮೇ** = ಮರದ ದಿಮ್ಮಿಯಂತೆ; **ಸಂಸ್ಥಿತೇ (ಸತಿ)** = ಇರಲು; **ಪ್ರಭುಃ** = ಸಮರ್ಥನಾದ; **ಕಂಜಜಾತಃ** = ಕಮಲೋದ್ಭವನಾದ ಚತುರ್ಮುಖಬ್ರಹ್ಮನು; **ದೈತ್ಯಾವೇಶಾತ್** = ಅಸುರಾವೇಶದಿಂದ; **ವಾಸುದೇವಾನಭಿಜ್ಞಂ** = ಶ್ರೀಕೃಷ್ಣನನ್ನು ತಿಳಿಯದ ಶಿವನನ್ನು; **ಸದುಕ್ತಿಭಿಃ** = ಒಳ್ಳೆಯಮಾತುಗಳಿಂದ; **ಸಂಬೋಧಯಾಮಾಸ** = ಎಚ್ಚರಗೊಳಿಸಿದನು.

**ತಾತ್ಪರ್ಯ :-** ಹೀಗೆ ನಿಷ್ಕ್ರಿಯನಾಗಿ ಪ್ರಯತ್ನಶೂನ್ಯನಾಗಿ ಶಿವನು ಮರದಂತೆ ನಿಂತಿರಲು ಚತುರ್ಮುಖಬ್ರಹ್ಮನು ಬಂದು ಅಸುರಾವೇಶದಿಂದ ಶ್ರೀಕೃಷ್ಣನನ್ನು ಪರಮಾತ್ಮನೆಂದು ಮರೆತ ಶಿವನನ್ನು ಒಳ್ಳೆಯ ಮಾತುಗಳಿಂದ ಎಚ್ಚರಗೊಳಿಸಿದನು.

**ಪ್ರಗೃಹ್ಯ ಶರ್ವಂ ಚ ವಿವೇಶ ವಿಷ್ಣೋಃ**
**ಸ ತೂದರಂ ದರ್ಶಯಾಮಾಸ ತತ್ರ ।**
**ಶಿವಸ್ವರೂಪಂ ಸ್ತಂಭಿತಂ ಬಿಲ್ವನಾಮ್ನಿ ವನೇ**
**ಗಿರೀಶೇನ ಚ ಯತ್ ತಪಃ ಕೃತಮ್ ।**
**ಶೈವಂ ಪದಂ ಪ್ರಾಪ್ತುಮೇವಾಚ್ಯುತಾಚ್ಚ**
**ತಚ್ಚಾವದತ್ ಕಂಜಜಃ ಶಂಕರಸ್ಯ ।। ೨೪೮ ।।**

ಪದಚ್ಛೇದ :- ಪ್ರಗೃಹ್ಯ, ಶರ್ವಂ, ಚ, ವಿವೇಶ, ವಿಷ್ಣೋಃ, ಸಃ, ತು, ಉದರಂ, ದರ್ಶಯಾಮಾಸ, ತತ್ರ, ಶಿವಸ್ವರೂಪಂ, ಸ್ತಂಭಿತಂ, ಬಿಲ್ವನಾಮ್ನಿ, ವನೇ, ಗಿರೀಶೇನ, ಚ, ಯತ್, ತಪಃ, ಕೃತಂ, ಶೈವಂ, ಪದಂ, ಪ್ರಾಪ್ತುಮ್, ಏವ, ಅಚ್ಯುತಾತ್, ಚ, ತತ್, ಚ, ಅವದತ್, ಕಂಜಜಃ, ಶಂಕರಸ್ಯ.

**ಅರ್ಥ** :- **ಸಃ ಚ** = ಆ ಬ್ರಹ್ಮನಾದರೂ; **ಶರ್ವಂ** = ಶಿವನನ್ನು; **ಪ್ರಗೃಹ್ಯ** = ಕರೆದುಕೊಂಡು; **ವಿಷ್ಣೋಃ** = ಶ್ರೀಕೃಷ್ಣನ; **ಉದರಂ ತು** = ಹೊಟ್ಟೆಯನ್ನಾದರೂ; **ಪ್ರವಿಶ್ಯ** = ಪ್ರವೇಶಿಸಿ; **ತತ್ರ** = ಅಲ್ಲಿ; **ಬಿಲ್ವನಾಮ್ನಿ** = ಬಿಲ್ವ ಎಂಬ ಹೆಸರಿನ; **ವನೇ** = ಕಾಡಿನಲ್ಲಿ; **ಗಿರಿಶೇನ ಏವ** = ಶಿವನಿಂದಲೇ; **ಅಚ್ಯುತಾತ್** = ಪರಮಾತ್ಮನಿಂದ; **ಶೈವಂ ಪದಂ** = ಶಿವನ ಪದವಿಯನ್ನು; **ಪ್ರಾಪ್ತುಂ** = ಹೊಂದಲು; **ಯತ್** = ಯಾವ; **ತಪಃ** = ತಪಸ್ಸು; **ಕೃತಂ** = ಮಾಡಲ್ಪಟ್ಟಿತ್ತೋ; **ತತ್ ಚ್** = ಅದೇ; **ಶಿವಸ್ವರೂಪಂ** = ಶಿವನಸ್ವರೂಪವನ್ನು; **ಸ್ತಂಭಿತಂ** = ಸ್ತಂಭನಗೊಳಿಸಲ್ಪಟ್ಟದ್ದನ್ನಾಗಿ; **ದರ್ಶಯಾಮಾಸ** = ತೋರಿಸಿದನು; **ಚ** = ಮತ್ತು; **ತತ್** = ಅವೆಲ್ಲವನ್ನೂ; **ಕಂಜಜಃ** = ಬ್ರಹ್ಮನು; **ಶಂಕರಸ್ಯ** = ಶಿವನಿಗೆ; **ಅವದತ್** = ಹೇಳಿದನು.

**ತಾತ್ಪರ್ಯ** :- ಬ್ರಹ್ಮನು ಶಿವನನ್ನು ಕರೆದುಕೊಂಡು ಶ್ರೀಕೃಷ್ಣನ ಉದರವನ್ನು ಪ್ರವೇಶಿಸಿದನು. ಅಲ್ಲಿ ಬಿಲ್ವ ಎಂಬಹೆಸರಿನ ಕಾಡಿನಲ್ಲಿ ಹಿಂದೆ ಶಿವನು ಪರಮಾತ್ಮನಿಂದ ಶಿವಪದವಿಯನ್ನು ಪಡೆಯಲು ತಪಸ್ಸುಮಾಡುತ್ತಿದ್ದ ಮೂಲರೂಪವನ್ನು ತೋರಿಸಿದರು. ಆ ರೂಪವೂ ಸ್ತಂಭಿತವಾಗಿದ್ದಿತು. ಬ್ರಹ್ಮನು ಶ್ರೀಕೃಷ್ಣನಿಂದಲೇ ಈ ರೂಪವೂ ಸ್ಥಭಿತವಾಗಿದೆ ಎಂದು ತಿಳಿಸಿದರು.

**ಅಪೇತಮೋಹೋಥ ವೃಷಧ್ವಜೋ ಹರಿಂ**
**ತುಷ್ಟಾವ ಬಾಣೋಭಿಸಸಾರ ಕೇಶವಮ್ ।**
**ತಸ್ಯಾಚ್ಯುತೋ ಬಾಹುಸಹಸ್ರಮಚ್ಛಿನತ್**
**ಪುನಶ್ಚಾರಿಂ ಜಗೃಹೇ ತಚ್ಛಿರೋರ್ಥೇ ॥ ೨೪೯ ॥**

ಪದಚ್ಛೇದ :- **ಅಪೇತಮೋಹಃ, ಅಥ, ವೃಷಧ್ವಜಃ, ಹರಿಂ, ತುಷ್ಟಾವ, ಬಾಣಃ, ಅಭಿಸಸಾರ, ಕೇಶವಂ, ತಸ್ಯ, ಅಚ್ಯುತಃ, ಬಾಹುಸಹಸ್ರಮ್, ಅಚ್ಛಿನತ್, ಪುನಃ, ಚ, ಅರಿಂ, ಜಗೃಹೇ, ತಚ್ಛಿರೋರ್ಥೇ.**

**ಅರ್ಥ** :- **ಅಥ** = ಆ ನಂತರ; **ಅಪೇತಮೋಹಃ** = ಪರಿಹೃತವಾದ ಭ್ರಮೆಯುಳ್ಳ; **ವೃಷಧ್ವಜಃ** = ವೃಷಭವನ್ನು ತನ್ನ ಧ್ವದಲ್ಲಿ ಉಳ್ಳ ಶಿವನು; **ಹರಿಂ** = ಶ್ರೀಕೃಷ್ಣನನ್ನು; **ತುಷ್ಟಾವ** = ಸ್ತೋತ್ರಮಾಡಿದನು. **ಬಾಣಃ** = ಬಾಣಾಸುರನು; **ಕೇಶವಂ** = ಶ್ರೀಕೃಷ್ಣನ ಬಳಿಗೆ; **ಅಭಿಸಸಾರ** = ಬಂದನು.

ಅಚ್ಯುತಃ = ಶ್ರೀಕೃಷ್ಣನು; ತಸ್ಯ = ಆ ಬಾಣಾಸುರನ; ಬಾಹುಸಹಸ್ರಮ್ = ಸಾವಿರಕೈಗಳನ್ನು; ಅಚ್ಛಿನತ್ = ಕತ್ತರಿಸಿದನು. ಚ = ಮತ್ತು; ತಚ್ಛಿರೋರ್ಥೇ = ಅವನ ತಲೆಯನ್ನು ಕತ್ತರಿಸಲು; ಅರಿಂ = ಚಕ್ರವನ್ನು; ಜಗೃಹೇ = ಸ್ವೀಕರಿಸಿದನು.

ತಾತ್ಪರ್ಯ :- ಬ್ರಹ್ಮದೇವರಿಂದ ಅಜ್ಞಾನವನ್ನು ಕಳೆದುಕೊಂಡ ಶಿವನು ಶ್ರೀಕೃಷ್ಣನನ್ನು ಸ್ತೋತ್ರಮಾಡುತ್ತಾನೆ. ನಂತರ ಬಾಣಾಸುರನು ಶ್ರೀಕೃಷ್ಣನ ಮೇಲೆ ಯುದ್ಧಕ್ಕೆ ಬರಲು ಅವನ ತಲೆಯನ್ನು ಕತ್ತರಿಸಲು ಶ್ರೀಕೃಷ್ಣನು ಚಕ್ರವನ್ನು ಹಿಡಿಯುತ್ತಾನೆ.

**ತದಾ ಶಿವೇನ ಪ್ರಣತೋ ಬಾಣರಕ್ಷಣಕಾಮ್ಯಯಾ ।**
**ಕೃತ್ವಾ ಸ್ವಭಕ್ತಂ ಬಾಣಂ ತಂ ರರಕ್ಷ ದ್ವಿಭುಜೀಕೃತಮ್ ।**
**ಮೋಚಯಿತ್ವಾನಿರುದ್ಧಂ ಚ ಯಯೌ ಬಾಣೇನ ಪೂಜಿತಃ ॥ ೨೫೦ ॥**

**ಪದಚ್ಛೇದ :- ತದಾ, ಶಿವೇನ, ಪ್ರಣತಃ, ಬಾಣರಕ್ಷನಕಾಮ್ಯಯಾ, ಕೃತ್ವಾ, ಸ್ವಭಕ್ತಂ, ಬಾಣಂ, ತು, ತಂ, ರರಕ್ಷ, ದ್ವಿಭುಜೀಕೃತಂ, ಮೋಚಯಿತ್ವಾ, ಅನುರುದ್ಧಂ, ಚ, ಯಯೌ, ಬಾಣೇನ, ಪೂಜಿತಃ.**

**ಅರ್ಥ** :- **ತದಾ** = ಆಗ; **ಬಾಣರಕ್ಷಣಕಾಮ್ಯಯಾ** = ಬಾಣನನ್ನು ರಕ್ಷಿಸುವ ಬಯಕೆಯಿಂದ; **ಶಿವೇನ** = ಶಿವನಿಂದ; **ಪ್ರಣತಃ** = ನಮಸ್ಕರಿಸಲ್ಪಟ್ಟ; **(ಸಃ)** = ಆ ಕೃಷ್ಣನು; **ದ್ವಿಭುಜೀಕೃತಂ** = ಎರಡುಕೈಗಳುಳ್ಳವನನ್ನಾಗಿ ಮಾಡಲ್ಪಟ್ಟ; **ತಂ** = ಆ ಬಾಣಾಸುರನನ್ನು; **ಸ್ವಭಕ್ತಂ** = ತನ್ನ ಭಕ್ತನನ್ನಾಗಿ; **ಕೃತ್ವಾ** = ಮಾಡಿ; **ರರಕ್ಷ** = ರಕ್ಷಿಸಿದನು. **ಚ** = ಮತ್ತು; **ಅನಿರುದ್ಧಂ** = ಅನಿರುದ್ಧನನ್ನು; **ಮೋಚಯಿತ್ವಾ** = ಬಿಡುಗಡೆಗೊಳಿಸಿ; **ಬಾಣೇನ** = ಬಾಣನಿಂದ; **ಪೂಜಿತಹ್ (ಸನ್)** = ಪೂಜಿತನಾಗಿ; **ಯಯೌ** = ಹೋದನು.

ತಾತ್ಪರ್ಯ :- ಬಾಣಾಸುರನನ್ನು ಕೊಲ್ಲಲು ಶ್ರೀಕೃಷ್ಣನು ಚಕ್ರವನ್ನೆತ್ತಲು ಅವನನ್ನು ರಕ್ಷಿಸುವ ಬಯಕೆಯಿಂದ ಶಿವನು ಶ್ರೀಕೃಷ್ಣನನ್ನು ನಮಸ್ಕರಿಸಲು ಅವನ ಸಾವಿರಕೈಗಳನ್ನು ಕತ್ತರಿಸಿ ಎರಡು ಕೈಗಳನ್ನು ಉಳಿಸಿದ್ದ ಶ್ರೀಕೃಷ್ಣನು ಅವನನ್ನು ತನ್ನ ಭಕ್ತನನ್ನಾಗಿ ಮಾಡಿ ರಕ್ಷಿಸಿದನು. ನಂತರ ಅನಿರುದ್ಧನನ್ನು ಬಿಡುಗಡೆಗೊಳಿಸಿ ಬಾಣನಿಂದ ಪೂಜಿತನಾಗಿ ಹೊರಟನು.

**ಏವಮಗ್ನೀನಂಗಿರಸಂ ಜ್ವರಂ ಸ್ಕಂದಮುಮಾಪತಿಮ್ ।**
**ಬಾಣಂ ಚಾಯತ್ನತೋ ಜಿತ್ವಾ ಪ್ರಾಯಾದ್ ದ್ವಾರಾವತೀಂ ಪುನಃ ॥ ೨೫೧ ॥**

**ಪದಚ್ಛೇದ :-** ಏವಮ್, ಅಗ್ನೀನ್, ಅಂಗಿರಸಂ, ಜ್ವರಂ, ಸ್ಕಂದಮ್, ಉಮಾಪತಿಂ, ಬಾಣಂ, ಚ, ಅಯತ್ನತಃ, ಜಿತ್ವಾ, ಪ್ರಾಯಾತ್, ದ್ವಾರಾವತೀಂ, ಪುನಃ.

**ಅರ್ಥ :-** ಏವಂ = ಹೀಗೆ; **ಅಗ್ನೀನ್** = ಅಗ್ನಿಗಳನ್ನು; **ಅಂಗಿರಸಂ** = ಆಂಗೀರಸನೆಂಬ ಅಗ್ನಿವಿಶೇಷನನ್ನು; **ಜ್ವರಂ** = ಜ್ವರಾಭಿಮಾನಿಯನ್ನು; **ಸ್ಕಂದಂ** = ಸ್ಕಂದನನ್ನು; **ಉಮಾಪತಿಂ** = ಪಾರ್ವತೀಪತಿಯಾದ ಶಿವನನ್ನು; **ಚ** = ಮತ್ತು; **ಬಾಣಂ** = ಬಾಣಾಸುರನನ್ನು; **ಅಯತ್ನತಃ** = ಪ್ರಯತ್ನವಿಲ್ಲದೇ; **ಜಿತ್ವಾ** = ಗೆದ್ದು; **ಪುನಃ** = ಮತ್ತೆ; **ದ್ವಾರವತೀಂ (ಪ್ರತಿ)** = ದ್ವಾರಕೆಯನ್ನು ಕುರಿತು; **ಪ್ರಾಯತ** = ಹೊರಟನು.

**ತಾತ್ಪರ್ಯ :-** ಹೀಗೆ ಶ್ರೀಕೃಷ್ಣನು ಅಗ್ನಿಗಳನ್ನು, ಆಂಗೀರಸನನ್ನು, ಜ್ವರನನ್ನು, ಸ್ಕಂದನನ್ನು, ಶಿವನನ್ನು ಮತ್ತು ಬಾಣಾಸುರನನ್ನು ಪ್ರಯತ್ನವೇ ಇಲ್ಲದೆ ಗೆದ್ದು ದ್ವಾರಕೆಗೆ ಹೊರಟನು.

**ವಿಶೇಷವಿಚಾರ :-** ಸ್ಕಂದನನ್ನು ಗೆಲ್ಲುವ ವಿವರ ಇಲ್ಲಿ ಇಲ್ಲದಿದ್ದರೂ ಹರಿವಂಶದಲ್ಲಿ ಶಸ್ತ್ರಾಯುಧಗಳನ್ನು ಪ್ರಯೋಗಿಸುವ ಸ್ಕಂದನನ್ನು ಶಿವ ಗೆಲ್ಲುವ ವಿವರ ಬಂದಿದೆ.

**ಯೇನಾಯತ್ನೇನ ವಿಜಿತಃ ಸರ್ವಲೋಕಹರೋ ಹರಃ ।**
**ಕಿಂ ಜ್ವರಾದಿಜಯೋ ವಿಷ್ಣೋಸ್ತಸ್ಯಾನಂತಸ್ಯ ಕಥ್ಯತೇ ॥ ೨೫೨ ॥**

**ಪದಚ್ಛೇದ :-** ಯೇನ, ಅಯತ್ನೇನ, ವಿಜಿತಃ, ಸರ್ವಲೋಕಹರಃ, ಹರಃ, ಕಿಂ, ಜ್ವರಾದಿಜಯಃ, ವಿಷ್ಣೋಃ, ತಸ್ಯ, ಅನಂತಸ್ಯ, ಕಥ್ಯತೇ.

**ಅರ್ಥ :-** **ಯೇನ** = ಯಾವ ಪರಮಾತ್ಮನಿಂದ; **ಸರ್ವಲೋಕಹರಃ** = ಸಮಸ್ತಜಗತ್ತನ್ನು ಸಂಹರಿಸುವ; **ಹರಃ** = ಶಿವನು; **ಅಯತ್ನೇನ** = ಯತ್ನವೇ ಇಲ್ಲದೆ; **ವಿಜಿತಃ** = ಸೋಲಿಸಲ್ಪಟ್ಟನೋ; **ಅನಂತಸ್ಯ** = ಅನಂತನಾದ; **ತಸ್ಯ** = ಆ; **ವಿಷ್ಣೋಃ** = ಶ್ರೀಕೃಷ್ಣನಿಗೆ; **ಜ್ವರಾದಿಜಯಃ** = ಜ್ವರಮೊದಲಾದವರನ್ನು ಗೆಲ್ಲುವುದು; **ಕಿಂ ಕಥ್ಯತೇ** = ಹೇಳಲ್ಪಡಬೇಕೇನು?.

ತಾತ್ಪರ್ಯ :- ಸಮಸ್ತಜಗತ್ತನ್ನೊ ಸಂಹರಿಸುವ ಶಿವನನ್ನೇ ಪ್ರಯತ್ನವೇ ಇಲ್ಲದೆ ಗೆದ್ದ ಶ್ರೀಕೃಷ್ಣನು ಜ್ವರಾದಿಗಳನ್ನೂ ಗೆದ್ದನೆಂದು ಪ್ರತ್ಯೇಕ ಹೇಳಬೇಕೇನು?

**ಈದೃಶಾನಂತಸಂಖ್ಯಾನಾಂ ಶಿವಾನಾಂ ಬ್ರಹ್ಮಣಾಮಪಿ ।**
**ರಮಾಯಾ ಅಪಿ ಯದ್ವೀಕ್ಷಾಂ ವಿನಾ ನ ಚಲಿತುಂ ಬಲಮ್ ॥ ೨೫೩ ॥**

**ನ ಚ ಜ್ಞಾನಾದಯೋ ಭಾವಾ ನ ಚಾಸ್ತಿತ್ವಮಪಿ ಕ್ವಚಿತ್ ।**
**ಅನಂತಶಕ್ತೇಃ ಕೃಷ್ಣಸ್ಯ ನ ಚಿತ್ರಃ ಶೂಲಿನೋ ಜಯಃ ॥ ೨೫೪ ॥**

ಪದಚ್ಛೇದ :- ಈದೃಶಾನಂತಸಂಖ್ಯಾನಾಂ, ಶಿವಾನಾಂ, ಬ್ರಹ್ಮಣಾಮ್, ಅಪಿ, ರಮಾಯಾಃ, ಅಪಿ, ಯದ್ವೀಕ್ಷಾಂ, ವಿನಾ, ನ, ಚಲಿತುಂ, ಬಲಂ, ನ, ಚ, ಜ್ಞಾನಾದಯಃ, ಭಾವಾಃ, ನ, ಚ, ಅಸ್ತಿತ್ವಮ್, ಅಪಿ, ಕ್ವಚಿತ್, ಅನಂತಶಕ್ತೇಃ, ಕೃಷ್ಣಸ್ಯ, ನ, ಚಿತ್ರಃ, ಶೂಲಿನಃ, ಜಯಃ.

ಅರ್ಥ :- **ಈದೃಶಾನಾಂ** = ಇಂತಹ; **ಅನಂತಸಂಖ್ಯಾನಾಂ** = ಅನಂತಸಂಖ್ಯೆಯಲ್ಲಿರುವ; **ಶಿವಾನಾಂ** = ರುದ್ರರಿಗೆ; **ಬ್ರಹ್ಮಣಾಮ್ ಅಪಿ** = ಬ್ರಹ್ಮರಿಗೂ ಕೂಡ; **ರಮಾಯಾಃ** = ರಮಾದೇವಿಗೆ; **ಯದ್ವೀಕ್ಷಾಂ ವಿನಾ** = ಯಾವ ಪರಮಾತ್ಮನ ಕಟಾಕ್ಷವಿಲ್ಲದೆ; **ಚಲಿತುಮ್ ಅಪಿ** = ಚಲಿಸಲೂ ಕೂಡ; **ಬಲಂ ನ** = ಶಕ್ತಿಯಿರುವುದಿಲ್ಲವೋ; **ಜ್ಞಾನಾದಯಃ** = ಜ್ಞಾನಮೊದಲಾದ; **ಭಾವಾಃ ಚ** = ಧರ್ಮಗಳಾಗಲೀ; **ನ (ಸಂತಿ)** = ಇರುವುದಿಲ್ಲ. **ಅಸ್ತಿತ್ವಮ್ ಅಪಿ ಚ** = ಅಸ್ತಿತ್ವವೂಕೂಡ; **ಕ್ವಚಿತ್** = ಎಂದಿಗೂಕೂಡ; **ನ (ಭವತಿ)** = ಇರುವುದಿಲ್ಲವೋ; **ಅನಂತಶಕ್ತೇಃ** = ಅಪರಿಮಿತಶಕ್ತಿಯುಳ್ಳ; **ಕೃಷ್ಣಸ್ಯ** = ಶ್ರೀಕೃಷ್ಣನಿಗೆ; **ಶೂಲಿನಃ** = ಶಿವನ (ಮೇಲೆ); **ಜಯಃ** = ಗೆಲುವು; **ನ ಚಿತ್ರಃ** = ಆಶ್ಚರ್ಯಕರವೇನಲ್ಲ.

ತಾತ್ಪರ್ಯ :- ಈ ಬ್ರಹ್ಮಕಲ್ಪದಲ್ಲಿರುವವರಿಗೆ ಸದೃಶರಾದ ಅನಂತ ಶಿವ ಮತ್ತು ಬ್ರಹ್ಮರು, ಲಕ್ಷ್ಮೀದೇವಿ ಇವರೆಲ್ಲರಿಗೂ ಯಾವ ಪರಮಾತ್ಮನ ಅನುಗ್ರಹವಿಲ್ಲದಿದ್ದರೆ ಚಲಿಸಲೂ ಸಾಮರ್ಥ್ಯವಿರುವುದಿಲ್ಲವೋ, ಜ್ಞಾನಾದಿಧರ್ಮಗಳು ಇರುವಿದು ಸಾಧ್ಯವಿಲ್ಲವೋ ಅಷ್ಟೇಕೆ ಅವರ ಇರುವಿಕೆಯೋ ಸಾಧ್ಯವಿಲ್ಲವೋ ಅಂತಾಹ್ ಶ್ರೀಕೃಷ್ಣನು ಶಿವನನ್ನು ಗೆದ್ದನೆನ್ನುವುದು ಆಶ್ಚರ್ಯವೇನಲ್ಲ.

ಚಿತ್ರಲೇಖಾಸಮೇತೋಷಾನ್ವಿತಪೌತ್ರಸಮನ್ವಿತಃ ।
ಸರಾಮಃ ಸಸುತೋ ವೀಂದ್ರಮಾರುಹ್ಯ ದ್ವಾರಕಾಂ ಗತಃ ।
ರೇಮೇ ತತ್ರ ಚಿರಂ ಕೃಷ್ಣೋ ನಿತ್ಯಾನಂದೋ ನಿಜೇಚ್ಛಯಾ ॥ ೨೫೫ ॥

ಪದಚ್ಛೇದ :- ಚಿತ್ರಲೇಖಾಸಮೇತೋಷಾನ್ವಿತಪೌತ್ರಸಮನ್ವಿತಃ, ಸರಾಮಃ, ಸಸುತಃ, ವೀಂದ್ರಮ್, ಆರುಹ್ಯ, ದ್ವಾರಕಾಂ, ಗತಃ, ರೇಮೇ, ತತ್ರ, ಚಿರಂ, ಕೃಷ್ಣಃ, ನಿತ್ಯಾನಂದಃ, ನಿಜೇಚ್ಛಯಾ.

ಅರ್ಥ :- ಚಿತ್ರಲೇಖಾಸಮೇತೋಷಾನ್ವಿತಪೌತ್ರಸಮನ್ವಿತಃ = ಚಿತ್ರಲೇಖೆಯಿಂದ ಸಹಿತಳಾದ ಉಷೆಯೊಂದಿಗಿರುವ ಮೊಮ್ಮಗನಾದ ಅನಿರುದ್ಧನಿಂದ ಕೂಡಿದ; ಸರಾಮಃ = ಬಲರಾಮನಿಂದ ಸಹಿತನಾದ; ಸಸುತಹ್ = ಮಗನಾದ ಪ್ರದ್ಯುಮ್ನನಿಂದ ಸಹಿತನಾದ; ನಿತ್ಯಾನಂದಹ್ = ನಿತ್ಯವೂ ಆನಂದಸ್ವರೂಪನಾದ; ಕೃಷ್ಣಃ = ಶ್ರೀಕೃಷ್ಣನು; ವೀಂದ್ರಂ = ಪಕ್ಷಿಶ್ರೇಷ್ಠನಾದ ಗರುಡನನ್ನು; ಆರುಹ್ಯ = ಏರಿ; ದ್ವಾರಕಾಂ (ಪ್ರತಿ) = ದ್ವಾರಕೆಯನ್ನು ಕುರಿತು; ಗತಃ (ಸನ್) = ಹೋದವನಾಗಿ; ತತ್ರ = ಅಲ್ಲಿ; ಚಿರಮ್ = ಬಹುಕಾಲ; ನಿಜೇಚ್ಛಯಾ = ಸ್ವೇಚ್ಛೆಯಿಂದ; ರೇಮೇ = ಕ್ರೀಡಿಸಿದನು.

ತಾತ್ಪರ್ಯ :- ನಂತರ ಚಿತ್ರಲೇಖೆಯಿಂದ ಕೂಡಿದ ಉಷೆಯೊಂದಿಗಿರುವ ಮೊಮ್ಮಗನಾದ ಅನಿರುದ್ಧನ ಜೊತೆಗೂಡಿ ಮತ್ತು ಬಲರಾಮ, ಪ್ರದ್ಯುಮ್ನರನ್ನೂ ಕರೆದುಕೊಂಡು ಗರುಡಾರೂಢನಾಗಿ ದ್ವಾರಕೆಗೆ ಹೋದ ಶ್ರೀಕೃಷ್ಣನು ಅಲ್ಲಿ ತನ್ನ ಇಚ್ಛೆಯಂತೆಯೇ ಬಹುಕಾಲ ಕ್ರೀಡಿಸಿದನು.

ಏವಂ ವಿಧಾನ್ಯಗಣಿತಾನಿ ಯದೂತ್ತಮಸ್ಯ
ಕರ್ಮಾಣ್ಯಗಣ್ಯಮಹಿಮಸ್ಯ ಮಹೋತ್ಸವಸ್ಯ ।
ನಿತ್ಯಂ ರಮಾಕಮಲಜನ್ಮಗಿರೀಶಶಕ್ರಸೂರ್ಯಾದಿಭಿಃ
ಪರಿಣುತಾನಿ ವಿಮುಕ್ತಿದಾನಿ ॥ ೨೫೬ ॥

ಪದಚ್ಛೇದ :- ಏವಂ, ವಿಧಾನಿ, ಅಗಣಿತಾನಿ, ಯದೂತ್ತಮಸ್ಯ, ಕರ್ಮಾಣಿ, ಅಗಣ್ಯಮಹಿಮಸ್ಯ, ಮಹೋತ್ಸವಸ್ಯ, ನಿತ್ಯಂ, ರಮಾಕಮಲಜನ್ಮಗಿರೀಶ ಶಕ್ರಸೂರ್ಯಾದಿಭಿಃ, ಪರಿಣುತಾನಿ, ವಿಮುಕ್ತಿದಾನಿ.

ಅರ್ಥ :- ಯದೂತ್ತಮಸ್ಯ = ಯದುಶ್ರೇಷ್ಠನಾದ; ಅಗಣ್ಯಮಹಿಮಸ್ಯ = ಅಗನಿತವಾದ ಮಹಿಮೆಯುಳ್ಳ; ಮಹೋತ್ಸವಸ್ಯ = ಮಹೋತ್ಸವವುಳ್ಳ ಶ್ರೀಕೃಷ್ಣನ; ಏವಂವಿಧಾನಿ = ಈ ರೀತಿಯಾದ; ಅಗಣಿತಾನಿ = ಎಣಿಸಲು ಶಕ್ಯವಾಗದ; ಕರ್ಮಾಣಿ = ಕರ್ಮಗಳು; ನಿತ್ಯಂ = ಯಾವಾಗಲೂ; ರಮಾಕಮಲಜನ್ಮಗಿರೀಶಶಕ್ರಸೂತ್ಯಾದಿಭಿಃ = ರಮಾ ಬ್ರಹ್ಮ ರುದ್ರ ಇಂದ್ರ ಸೂರ್ಯ ಮೊದಲಾದ ದೇವತೆಗಳಿಂದ; ಪರಿಣುತಾನಿ = ಸ್ತುತವಾದವುಗಳು; ವಿಮುಕ್ತಿದಾನು = ಮೋಕ್ಷದಾಯಕಗಳು; (ಆಸನ್) = ಆಗಿದ್ದವು.

ತಾತ್ಪರ್ಯ :- ಅಗಣಿತಮಹಿಮನಾದ ಮಹಾ ವೈಭವವುಳ್ಳ ಯದುವಂಶ ಶ್ರೇಷ್ಠನಾದ ಶ್ರೀಕೃಷ್ಣನ ಇದೇ ಮೊದಲಾದ ಅಗಣಿತಮಹಿಮೆಗಳು ಇವೆ. ಅವಿಗಳೆಲ್ಲವೂ ರಮಾಬ್ರಹ್ಮಶಿವೈಂದ್ರಸೂರ್ಯಾದಿ ದೇವತೆಗಳಿಂದ ನಿತ್ಯವೂ ಸ್ತುತವಾಗಿವೆ ಮತ್ತು ಮೋಕ್ಷದಾಯಕವಾಗಿವೆ.

ಏವಂ ವಸತ್ಯಮಿತಪೌರುಷವೀರ್ಯಸಾರೇ
ನಾರಾಯಣೇ ಸ್ವಪುರಿ ಶಕ್ರಧನಂಜಯೋಕ್ತಃ ।
ಸಂಪ್ರಾಪ್ಯ ಲೋಮಶಮುನಿಃ ಸಕಲಾನಿ ತೀರ್ಥಾ-
ನ್ಯಾಪ್ತುಂ ಸ ಪಾಂಡುತನಯೇಷು ಸಹಾಯ ಆಸೀತ್ ॥ ೨೫೭ ॥

ಪದಚ್ಛೇದ :- ಏವಂ, ವಸತಿ, ಅಮಿತಪೌರುಷವೀರ್ಯಸಾರೇ, ನಾರಾಯಣೇ, ಸ್ವಪುರಿ, ಶಕ್ರಧನಂಜಯೋಕ್ತಃ, ಸಂಪ್ರಾಪ್ಯ, ಲೋಮಶಮುನಿಃ, ಸಕಲಾನಿ, ತೀರ್ಥಾನಿ, ಆಪ್ತುಂ, ಸಃ, ಪಾಂಡುತನಯೇಷು, ಸಹಾಯಃ, ಆಸೀತ್.

ಅರ್ಥ :- ಏವಂ = ಹೀಗೆ; ಅಮಿತಪೌರುಷವೀರ್ಯಸಾರೇ = ಅಪರಿಮಿತಪೌರುಷ ಬಲಗಳೇ ಸಾರವಾಗಿ ಉಳ್ಳ; ನಾರಾಯಣೇ = ನಾರಾಯಣನಾದ ಶ್ರೀಕೃಷ್ಣನು; ಸ್ವಪುರಿ = ತನ್ನ ದ್ವಾರಕಾನಗರದಲ್ಲಿ; ವಸತಿ (ಸತಿ) = ವಾಸಮಾಡುತ್ತಿರಲು; ಶಕ್ರಧನಂಜಯೋಕ್ತಃ = ಇಂದ್ರಾರ್ಜುನರಿಂದ ಕಳುಹಿಸಲ್ಪಟ್ಟ; ಲೋಮಶಮುನಿಃ = ಲೋಮಶಋಷಿಗಳು; (ಪಾಂಡವಾನ್) = ಪಾಂಡವರ ಬಳಿಗೆ; ಸಂಪ್ರಾಪ್ಯ = ಬಂದು; ಸಕಲಾನಿ = ಎಲ್ಲ; ತೀರ್ಥನ್ಯೆ = ತೀರ್ಥಗಳನ್ನು; ಆಪ್ತುಂ = ಹೊಂದಲು; ಸಃ = ಆ ಮುನಿಯು; ಸಹಾಯಃ = ಸಹಾಯಕನು; ಆಸೀತ್ = ಆಗಿದ್ದನು.

ತಾತ್ಪರ್ಯ :- ಹೀಗೆ ದ್ವಾರಕೆಯಲ್ಲಿ ಅಮಿತಬಲವೀರ್ಯಗಳೆ ಸಾರವಾದ ನಾರಾಯಣಾವತಾರನಾದ ಶ್ರೀಕೃಷ್ಣನು ವಾಸಮಾಡುತ್ತಿದ್ದನು. ಅದೇ ಸಮಯದಲ್ಲಿ ಪಾಂಡವರ ಬಳಿಗೆ ಇಂದ್ರ ಮತ್ತು ಅವನೊಂದಿಗೆ ಸ್ವರ್ಗದಲ್ಲಿದ್ದ ಅರ್ಜುನನಿಂದ ಪ್ರೇರಿತನಾದ ಲೋಮಶಮುನಿಯು ಪಾಂಡವರ ಬಳಿಗೆ ಬಂದನು. ಮತ್ತು ಪಾಂಡವರ ತೀರ್ಥಯಾತ್ರೆಗೆ ಸಹಾಯಕನಾದನು.

ಪೃಥ್ವೀಂ ಪ್ರದಕ್ಷಿಣತ ಏತ್ಯ ಸಮಸ್ತತೀರ್ಥಸ್ನಾನಂ
ಯಥಾಕ್ರಮತ ಏವ ವಿಧಾಯ ಪಾರ್ಥಾಃ ।
ಸಂಪೂಜ್ಯ ತೇಷು ನಿಖಿಲೇಷು ಹರಿಂ ಸುಭಕ್ತ್ಯಾ
ಕೃಷ್ಣೇ ಸಮರ್ಪಯಿತುಮಾಪುರಥ ಪ್ರಭಾಸಮ್ ।
ಸಂಭಾವನಾಯ ಸಕಲೈರ್ಯದುಭಿಃ ಸಮೇತಃ
ತೇಷಾಂ ಚ ರಾಮಸಹಿತೋ ಹರಿರಾಜಗಾಮ ॥ ೨೫೮ ॥

ಪದಚ್ಛೇದ :- ಪೃಥ್ವೀಂ, ಪ್ರದಕ್ಷಿಣತಃ, ಏತ್ಯ, ಸಮಸ್ತತೀರ್ಥಸ್ನಾನಂ, ಯಥಾಕ್ರಮತಃ, ಏವ, ವಿಧಾಯ, ಪಾರ್ಥಾಃ, ಸಂಪೂಜ್ಯ, ತೇಷು, ನಿಖಿಲೇಷು, ಹರಿಂ, ಸುಭಕ್ತ್ಯಾ, ಕೃಷ್ಣೇ, ಸಮರ್ಪಯಿತುಮ್, ಆಪುಃ, ಅಥ, ಪ್ರಭಾಸಂ, ಸಂಭಾವನಾಯ, ಸಕಲೈಃ, ಯದುಭಿಃ, ಸಮೇತಃ, ತೇಷಾಂ, ಚ, ರಾಮಸಹಿತಃ, ಹರಿಃ, ಆಜಗಾಮ.

ಅರ್ಥ :- ಪಾರ್ಥಾಃ = ಪಾಂಡವರು; ಪೃಥ್ವೀಂ = ಭೂಮಿಯನ್ನು; ಪ್ರದಕ್ಷಿಣತಃ = ಪ್ರದಕ್ಷಿಣಾಕಾರವಾಗಿ; ಏತ್ಯ = ಬಂದು; ಸಮಸ್ತತೀರ್ಥಸ್ನಾನಂ = ಎಲ್ಲ ತೀರ್ಥಗಳಲ್ಲಿ ಸ್ನಾನವನ್ನು; ಯಥಾಕ್ರಮತಃ ಏವ = ಕ್ರಮಕ್ಕನುಗುಣವಾಗಿಯೇ; ವಿಧಾಯ = ಮಾಡಿ; ತೇಷು = ಆ; ನಿಖಿಲೇಷು = ಎಲ್ಲ ತೀರ್ಥಗಳಲ್ಲಿ; ಹರಿಂ = ಪರಮಾತ್ಮನನ್ನು; ಸುಭಕ್ತ್ಯಾ = ಒಳ್ಳೆಯಭಕ್ತಿಯಿಂದ; ಸಂಪೂಜ್ಯ = ಪೂಜಿಸಿ; ಕೃಷ್ಣೇ = ಶ್ರೀಕೃಷ್ಣನಲ್ಲಿ; ಸಮರ್ಪಯಿತುಂ = ಸಮರ್ಪಿಸಲು; ಪ್ರಭಾಸಮ್ = ಪ್ರಭಾಸಕ್ಕೆ; ಆಪುಃ = ಬಂದರು. ಅಥ = ಆ ನಂತರ; ಸಕಲೈಃ = ಎಲ್ಲ; ಯದುಭಿಃ = ಯಾದವರಿಂದ; ಸಮೇತಃ = ಸಹಿತನಾದ; ರಾಮಸಹಿತಃ = ಬಲರಾಮನಿಂದ ಸಹಿತನಾದ; ಹರಿಃ = ಶ್ರೀಕೃಷ್ಣನು; ತೇಷಾಂ ಚ = ಆ ಪಾಂಡವರ; ಸಂಭಾವನಾಯ = ಆದರಮಾಡುವುದಕ್ಕಾಗಿ; ಆಜಗಾಮ = ಬಂದನು.

ತಾತ್ಪರ್ಯ :- ಲೋಮಶಮುನಿಗಳೊಂದಿಗೆ ಹೊರಟ ಪಾಂಡವರು ಪ್ರದಕ್ಷಿಣಾಕಾರವಾಗಿ ಭೂಮಿಯನ್ನು ಸುತ್ತಿ ಸಕಲ ತೀರ್ಥಗಳಲ್ಲಿ ಸ್ನಾನಮಾಡಿ ಅಲ್ಲಿರುವ ಪರಮಾತ್ಮನ ಪೂಜೆಯನ್ನು ಮಾಡಿದರು. ಕೊನೆ ಶ್ರೀಕೃಷ್ಣನಿಗೆ ಸಮರ್ಪಿಸಲೆಂದು ಪ್ರಭಾಸಕ್ಕೆ ಬಂದರು. ಅಲ್ಲಿಗೆ ಸಕಲ ಯಾದವರಿಂದ ಮತ್ತು ಬಲರಾಮನಿಂದ ಸಹಿತನಾಗಿ ಶ್ರೀಕೃಷ್ಣನು ಪಾಂಡವರ ಆದರಕ್ಕಾಗಿ ಬಂದನು.

ಪಾರ್ಥೈಃ ಸಂಪೂಜಿತಸ್ತತ್ರ ಕೃಷ್ಣೋ ಯದುಗಣೈಃ ಸಹ ।
ಪಾರ್ಥಾನ್ ಸಂಪೂಜಯಾಮಸುರ್ವೃಷ್ಣಯಶ್ಚಾಜ್ಞಯಾ ಹರೇಃ ॥ ೨೫೯ ॥

ಪದಚ್ಛೇದ :- ಪಾರ್ಥೈಃ, ಸಂಪೂಜಿತಃ, ತತ್ರ, ಕೃಷ್ಣಃ, ಯದುಗಣೈಃ, ಸಹ, ಪಾರ್ಥಾನ್, ಸಂಪೂಜಯಾಮಾಸುಃ, ವೃಷ್ಣಯಃ, ಚ, ಆಜ್ಞಯಾ, ಹರೇಃ.

ಅರ್ಥ :- ಯದುಗಣೈಃ = ಯಾದವರ ಸಮೂಹದಿಂದ; ಸಹ = ಸಹಿತವಾಗಿ; ಕೃಷ್ಣಃ = ಶ್ರೀಕೃಷ್ಣನು; ಪಾರ್ಥೈಃ = ಪಾಂಡವರಿಂದ; ತತ್ರ = ಆ ಪ್ರಭಾಸದಲ್ಲಿ; ಸಂಪೂಜಿತಃ (ಅಭೂತ್) = ಚೆನ್ನಾಗಿ ಪೂಜಿತನಾದನು. ಚ = ಮತ್ತು; ಹರೇಃ = ಶ್ರೀಕೃಷ್ಣನ; ಆಜ್ಞಯಾ = ಅಪ್ಪಣೆಯಿಂದ; ವೃಷ್ಣಯಃ = ಯಾದವರು; ಪಾರ್ಥಾನ್ = ಪಾಂಡವರನ್ನು; ಸಂಪೂಜಯಾಮಾಸುಃ = ಆದರಿಸಿದರು.

ತಾತ್ಪರ್ಯ :- ಪ್ರಭಾಸಕ್ಕೆ ಯಾದವರೊಂದಿಗೆ ಬಮ್ದ ಶ್ರೀಕೃಷ್ಣನನ್ನು ಪಾಂದವರು ಪೂಜಿಸಿದರು. ಯಾದವರೂ ಕೂಡ ಶ್ರೀಕೃಷ್ಣನ ಅಪ್ಪಣೆಯಂತೆ ಪಾಂದವರನ್ನು ಸತ್ಕರಿಸಿದರು.

ತತ್ರ ಭೀಮಂ ತಪೋವೇಷಂ ದೃಷ್ಟ್ವಾತಿಸ್ನೇಹಕಾರಣಾತ್ ।
ದುರ್ಯೋಧನಂ ನಿಂದಯತಿ ರಾಮೇ ಸಾತ್ಯಕಿರಬ್ರವೀತ್ ॥ ೨೬೦ ॥

ಪದಚ್ಛೇದ :- ತತ್ರ, ಭೀಮಂ, ತಪೋವೇಷಂ, ದೃಷ್ಟ್ವಾ, ಅತಿಸ್ನೇಹಕಾರಣಾತ್, ದುರ್ಯೋಧನಂ, ನಿಂದಯತಿ, ರಾಮೇ, ಸಾತ್ಯಕಿಃ, ಅಬ್ರವೀತ್.

ಅರ್ಥ :- ತತ್ರ = ಅಲ್ಲಿ; ತಪೋವೇಷಂ = ತಪಸ್ವಿಯ ವೇಷದಲ್ಲಿರುವ; ಭೀಮಂ = ಭೀಮಸೇನನನ್ನು; ದೃಷ್ಟ್ವಾ = ನೋಡಿ; ರಾಮೇ = ಬಲರಾಮನು; ಅತಿಸ್ನೇಹಕಾರಣಾತ್ = ಅತ್ಯಂತವಾದ ಪ್ರೀತಿಯ ಕಾರಣದಿಂದ;

ದುರ್ಯೋಧನಂ = ದುರ್ಯೋಧನನನ್ನು; ನಿಂದಯತಿ (ಸತಿ) = ನಿಂದಿಸುತ್ತಿರಲು; ಸಾತ್ಯಕಿಃ = ಸಾತ್ಯಕಿಯು; ಅಬ್ರವೀತ್ = ಹೇಳಿದನು.

ತಾತ್ಪರ್ಯ :- ಅಲ್ಲಿದ್ದವರಲ್ಲಿ ತಪಸ್ವಿಯ ವೇಷದಲ್ಲಿದ್ದ ಭೀಮನನ್ನು ನೋಡಿ ಸಿಟ್ಟಾದ ಬಲರಾಮನು ದುರ್ಯೋಧನನನ್ನು ನಿಂದಿಸತೊಡಗಿದನು. ಆಗ ಸಾತ್ಯಕಿಯು ಹೇಳುತ್ತಾನೆ.

**ಸರ್ವೇ ವಯಂ ನಿಹತ್ಯಾದ್ಯ ಸಕರ್ಣಾನ್ ಧೃತರಾಷ್ಟ್ರಜಾನ್ ।**
**ಅಭಿಮನ್ಯುಂ ಸ್ಥಾಪಯಾಮೋ ರಾಜ್ಯೇ ಯಾವತ್ ತ್ರಯೋದಶಮ್ ॥ ೨೬೧ ॥**

**ಸಂವತ್ಸರಂ ಸಮಾಪ್ಯೈವ ಪುರಂ ಯಾಸ್ಯಂತಿ ಪಾಂಡವಾಃ ।**
**ತತೋ ಯುಧಿಷ್ಠಿರೋ ರಾಜಾ ರಾಜ್ಯಂ ಶಾಸತು ಪೂರ್ವವತ್ ॥ ೨೬೨ ॥**

ಪದಚ್ಛೇದ :- **ಸರ್ವೇ, ವಯಂ, ನಿಹತ್ಯ, ಅದ್ಯ, ಸಕರ್ಣಾನ್, ಧೃತರಾಷ್ಟ್ರಜಾನ್, ಅಭಿಮನ್ಯುಂ, ಸ್ಥಾಪಯಾಮಃ, ರಾಜ್ಯೇ, ಯಾವತ್, ತ್ರಯೋದಶಂ, ಸಂವತ್ಸರಂ, ಸಮಾಪ್ಯ, ಏವ, ಪುರಂ, ಯಾಸ್ಯಂತಿ, ಪಾಂಡವಾಃ, ತತಃ, ಯುಧಿಷ್ಠಿರಃ, ರಾಜಾ, ರಾಜ್ಯಂ, ಶಾಸತು, ಪೂರ್ವವತ್.**

ಅರ್ಥ :- **ವಯಂ** = ನಾವು; **ಸರ್ವೇ** = ಎಲ್ಲರೂ; **ಅದ್ಯ** = ಇಂದೇ; **ಸಕರ್ಣಾನ್** = ಕರ್ಣನಿಂದಸಹಿತರಾದ; **ಧೃತರಾಷ್ಟ್ರಜಾನ್** = ಧೃತರಾಷ್ಟ್ರನಮಕ್ಕಳಾದ ದುರ್ಯೋಧನಾದಿಗಳನ್ನು; **ನಿಹತ್ಯ** = ಕೊಂದು; **ರಾಜ್ಯೇ** = ರಾಜ್ಯದಲ್ಲಿ; **ಅಭಿಮನ್ಯುಂ** = ಅಭಿಮನ್ಯುವನ್ನೇ; **ಸ್ಥಾಪಯಾಮಃ** = ಪಟ್ಟಾಭಿಷೇಕಮಾಡಿ ಕೂಡಿಸೋಣ; **ಯಾವತ್** = ಯಾವಾಗ; **ತ್ರಯೋದಶಂ** = ಹದಿಮೂರು; **ಸಂವತ್ಸರಂ** = ವರ್ಷಗಳನ್ನು; **ಸಮಾಪ್ಯ ಏವ** = ಮುಗಿಸಿಯೇ; **ಪಾಂಡವಾಃ** = ಪಾಂದವರು; **ಪುರಂ (ಪ್ರತಿ)** = ಹಸ್ತಿನಾವತಿಯನ್ನು ಕುರಿತು; **ಯಾಸ್ಯಂತಿ** = ಬರುತ್ತಾರೋ; **ತತಃ** = ಆ ನಂತರ; **ರಾಜಾ** = ರಾಜನಾದ; **ಯುಧಿಷ್ಠಿರಃ** = ಯುಧಿಷ್ಠಿರನು; **ಪೂರ್ವವತ್** = ಮೊದಲಿನಂತೆ; **ರಾಜ್ಯಂ** = ರಾಜ್ಯವನ್ನು; **ಶಾಸತು** = ಆಳಲಿ.

ತಾತ್ಪರ್ಯ :- ಸಾತ್ಯಕಿಯು ಹೇಳುತ್ತಾನೆ- ನಾವೆಲ್ಲರೂ ಸೇರಿ ಇಂದೇ ಯುದ್ಧವನ್ನು ಮಾಡಿ ಕರ್ಣನನ್ನೂ ದುರ್ಯೋಧನಾದಿಗಳನ್ನಿ ಸಂಹರಿಸಿ

ಅಭಿಮನ್ಯುವಿಗೆ ಪಟ್ಟಕಟ್ಟೋಣ. ಉಳಿದ ಹದಿಮೂರುವರ್ಷಗಳನ್ನು ಪೂರೈಸಿ ನಗರಕ್ಕೆಕ್ ಬಂದಮೇಲೆ ಮುಂಚಿನಂತೆಯೇ ಯುಧಿಷ್ಠಿರನೇ ರಾಜ್ಯವಾಳಲಿ.

ಏವಂ ವದತ್ಯೇವ ಶಿನಿಪ್ರವೀರೇ
ಜನಾರ್ದನಃ ಪಾರ್ಥಮುಖಾನ್ಯುದೀಕ್ಷ್ಯ ।
ಉವಾಚ ಶೈನೇಯ ನ ಪಾಂಡುಪುತ್ರಾಃ
ಪರೇಣ ಸಂಸಾಧಿತರಾಜ್ಯಕಾಮಾಃ ॥ ೨೬೩ ॥

ಪದಚ್ಛೇದ :- ಏವಂ, ವದತಿ, ಏವ, ಶಿನಿಪ್ರವೀರೇ, ಜನಾರ್ದನಃ, ಪಾರ್ಥಮುಖಾನಿ, ಉದೀಕ್ಷ್ಯ, ಉವಾಚ, ಶೈನೇಯ, ನ, ಪಾಂಡುಪುತ್ರಾಃ, ಪರೇಣ, ಸಂಸಾಧಿತರಾಜ್ಯಕಾಮಾಃ.

ಅರ್ಥ :- ಶಿನಿಪ್ರವೀರೇ = ಶಿನಿಗಳಲ್ಲಿ ವೀರನಾದ ಸಾತ್ಯಕಿಯು; ಏವಂ = ಹೀಗೆ; ವದತಿ (ಸತಿ) ಏವ = ಹೇಳುತ್ತಿರಲು; ಜನಾರ್ದನಃ = ಶ್ರೀಕೃಷ್ಣನು; ಪಾರ್ಥಮುಖಾನ್ = ಪಾಂಡವರ ಮುಖವನ್ನು; ಉದೀಕ್ಷ್ಯ = ನೋಡಿ; ಉವಾಚ = ಹೇಳಿದನು. ಶೈನೇಯ = ಹೇ ಸಾತ್ಯಕಿಯೇ!; ಪಾಂಡುಪುತ್ರಾಃ = ಪಾಂಡುವಿನ ಮಕ್ಕಳು; ಪರೇಣ = ಮತ್ತೊಬ್ಬನಿಂದ; ಸಂಸಾಧಿತರಾಜ್ಯಕಾಮಾಃ ನ = ಸಾಧಿಸಲ್ಪಟ್ಟ ರಾಜ್ಯವನ್ನು ಬಯಸುವವರಲ್ಲ.

ತಾತ್ಪರ್ಯ :- ಸಾತ್ಯಕಿಯು ಹೀಗೆ ಹೇಳಲು ಶ್ರೀಕೃಷ್ಣನು ಪಾಂದವರ ಮುಖವನ್ನು ನೋಡಿ ಅವರ ಇಂಗಿತದಂತೆ ಹೇಳುತ್ತಾನೆ- ಹೇ ಸಾತ್ಯಕಿಯೆ! ಪಾಂಡವರು ಮತ್ತೊಬ್ಬರು ಸಾಧಿಸಿಕೊಟ್ಟ ರಾಜ್ಯವನ್ನು ಸ್ವೀಕರಿಸಲು ಬಯಸುವುದಿಲ್ಲ.

ಸ್ವಬಾಹುವೀರ್ಯೇಣ ನಿಹತ್ಯ ಶತ್ರೂ-
ನಾಪ್ಸ್ಯಂತಿ ರಾಜ್ಯಂ ತ ಇತೀರಿತೇಮುನಾ ।
ತಥೇತಿ ಪಾರ್ಥಾ ಅವದಂಸ್ತತಸ್ತೇ ಕೃಷ್ಣಂ
ಪುರಸ್ಕೃತ್ಯ ಯಯುರ್ದಶಾರ್ಹಾಃ ॥ ೨೬೪ ॥

ಪದಚ್ಛೇದ :- ಸ್ವಬಾಹುವೀರ್ಯೇಣ, ನಿಹತ್ಯ, ಶತ್ರೂನ್, ಆಪ್ಸ್ಯಂತಿ, ರಾಜ್ಯಂ, ತೇ, ಇತಿ, ಈರಿತೇ, ಅಮುನಾ, ತಥಾ, ಇತಿ, ಪಾರ್ಥಾಃ, ಅವದನ್, ತತಃ, ತೇ, ಕೃಷ್ಣಂ, ಪುರಸ್ಕೃತ್ಯ, ಯಯುಃ, ದಶಾರ್ಹಾಃ.

**ಅರ್ಥ** :- **ತೇ** = ಆ ಪಾಂಡವರು; **ಸ್ವಬಾಹುವೀರ್ಯೇಣ** = ತಮ್ಮ ಬಾಹುಬಲದಿಂದ; **ಶತ್ರೂನ್** = ಶತ್ರುಗಳನ್ನು; **ನಿಹತ್ಯ** = ಕೊಂದು; **ರಾಜ್ಯಂ** = ರಾಜ್ಯವನ್ನು; **ಆಪ್ಸ್ಯಂತಿ** = ಹೊಂದುತ್ತಾರೆ; **ಇತಿ** = ಎಂದು; **ಅಮುನಾ** = ಈ ಶ್ರೀಕೃಷ್ಣನಿಂದ; **ಈರಿತೇ (ಸತಿ)** = ಹೇಳಲ್ಪಡುತ್ತಿರಲು; **ಪಾರ್ಥಾಃ** = ಪಾಂಡವರು; **ತಥಾ** = ಹೌದು; **ಇತಿ** = ಎಂದು; **ಅವದನ್** = ಹೇಳಿದರು. **ತತಃ** = ಆ ನಂತರ; **ತೇ** = ಆ; **ದಶಾರ್ಹಾಃ** = ಯಾದವರು; **ಕೃಷ್ಣಂ** = ಶ್ರೀಕೃಷ್ಣನನ್ನು; **ಪುರಸ್ಕೃತ್ಯ** = ಮುಂದೆಮಾಡಿಕೊಂಡು; **ಯಯುಃ** = ಹೋದರು.

**ತಾತ್ಪರ್ಯ** :- ತಮ್ಮ ಬಾಹುಬಲದಿಂದಲೇ ಪಾಂಡವರು ರಾಜ್ಯವನ್ನು ಪಡೆಯುತ್ತಾರೆ ಎಂದು ಶ್ರೀಕೃಷ್ಣನು ಹೇಳಿದಾಗ ಪಾಂಡವರು ಹೌದೆಂದರು. ನಂತರ ಯಾದವರು ಶ್ರೀಕೃಷ್ಣನನ್ನನುಸರಿಸಿ ಹೊರಟರು.

**ಕ್ರಮೇಣ ಪಾರ್ಥಾ ಅಪಿ ಶೈಶಿರಂ ಗಿರಿಂ**
**ಸಮಾಸದಂಸ್ತತ್ರ ಕೃಷ್ಣಾಂ ಸುದುರ್ಗೇ ।**
**ವಿಷಜ್ಜಂತೀಮೀಕ್ಷ್ಯ ತೈಃ ಸಂಸ್ಮೃತೋಥ ಹೈಡಿಂಬ**
**ಆಯಾತ್ ಸಹಿತೋ ನಿಶಾಚರೈಃ ॥ ೨೬೫ ॥**

ಪದಚ್ಛೇದ :- ಕ್ರಮೇಣ, ಪಾರ್ಥಾಃ, ಅಪಿ, ಶೈಶಿರಂ, ಗಿರಿಂ, ಸಮಾಸದನ್, ತತ್ರ, ಕೃಷ್ಣಾಂ, ಸುದುರ್ಗೇ, ವಿಷಜ್ಜಂತೀಮ್, ಈಕ್ಷ್ಯ, ತೈಃ, ಸಂಸ್ಮೃತಃ, ಅಥ, ಹೈಡಿಂಬಃ, ಆಯಾತ್, ಸಹಿತಃ, ನಿಶಾಚರೈಃ.

**ಅರ್ಥ** :- **ಪಾರ್ಥಾಃ ಅಪಿ** = ಪಾಂಡವರೂ ಕೂಡ; **ಕ್ರಮೇಣ** = ಕ್ರಮವಾಗಿ; **ಶೈಶಿರಂ** = ಹಿಮಾಲಯದ; **ಗಿರಿಂ** = ಪರ್ವತವನ್ನು; **ಸಮಾಸದನ್** = ಸೇರಿದರು. **ಅಥ** = ಆ ನಂತರ; **ತತ್ರ** = ಅಲ್ಲಿ; **ಸುದುರ್ಗೇ** = ಅತ್ಯಂತಕಷ್ಟಕರವಾದ ಹಾದಿಯಲ್ಲಿ; **ವಿಷಜ್ಜಂತೀಂ** = ಆಯಾಸಗೊಂಡಿರುವ; **ಕೃಷ್ಣಾಂ** = ದ್ರೌಪದಿಯನ್ನು; **ಈಕ್ಷ್ಯ** = ನೋಡಿ; **ತೈಃ** = ಆ ಪಾಂಡವರಿಂದ; **ಸಂಸ್ಮೃತಃ** = ಚೆನ್ನಾಗಿ ಸ್ಮರಿಸಲ್ಪಟ್ಟ; **ಹೈಡಿಂಬಃ** = ಹಿಡಿಂಬೆಯ ಮಗನಾದ ಘಟೋತ್ಕಚನು; **ನಿಶಾಚರೈಃ** = ಇತರ ರಾಕ್ಷಸರಿಂದ; **ಸಹ** = ಕೂಡಿಕೊಂಡು; **ಆಯತ** = ಬಂದನು.

ತಾತ್ಪರ್ಯ :- ಪಾಂಡವರೂ ಕ್ರಮವಾಗಿ ಸಂಚರಿಸಿ ಹಿಮಾಲಯಕ್ಕೆ ಬಂದರು. ದುರ್ಗಮವಾದ ದಾರಿಯಲ್ಲಿ ಆಯಾಸಗೊಂಡ ದ್ರೌಪದಿಯನ್ನು ನೋಡಿ ಪಾಂಡವರು ಘಟೋತ್ಕಚನ ಸ್ಮರಣೆ ಮಾಡಿದರು. ಆಗ ರಾಕ್ಷಸರೊಂದಿಗೆ ಘಟೋತ್ಕಚನು ಅಲ್ಲಿಗೆ ಬಂದನು.

ವಿಶೇಷವಿಚಾರ :- ದ್ರೌಪದಿಯುಅ ಭಾರತೀದೇವಿಯಾದ್ದರಿಂದ ಅವಳಿಗೆ ಆಯಾಸವಿರುವುದಿಲ್ಲ. ಅವಳ ದೇಹದಲ್ಲಿರುವ ಇತರೆ ಜೀವರ ವಿವಕ್ಷಯಾ ಹೀಗೆ ಹೇಳಿದ್ದೆಂದು ತಿಳಿಯಬೇಕು.

**ಉವಾಹ ಕೃಷ್ಣಾಂ ಸ ತು ತಸ್ಯ ಭೃತ್ಯಾ**
**ಊಹುಃ ಪಾರ್ಥಾಂಸ್ತೇ ಬದರ್ಯಾಶ್ರಮಂ ಚ ।**
**ಪ್ರಾಪ್ಯಾತ್ರ ನಾರಾಯಣಪೂಜಯಾ**
**ಕೃತಸ್ವಕೀಯಕಾರ್ಯಾ ಯಯುರುತ್ತರಾಂ ದಿಶಮ್ ॥ ೨೬೬ ॥**

**ಪದಚ್ಛೇದ** :- ಉವಾಹ, ಕೃಷ್ಣಾಂ, ಸಃ, ತು, ತಸ್ಯ, ಭೃತ್ಯಾಃ, ಊಹುಃ, ಪಾರ್ಥಾನ್, ತೇ, ಬದರ್ಯಾಶ್ರಮಂ, ಚ, ಪ್ರಾಪ್ಯ, ಅತ್ರ, ನಾರಾಯಣಪೂಜಯಾ, ಕೃತಸ್ವಕೀಯಕಾರ್ಯಾಃ, ಯಯುಃ, ಉತ್ತರಾಂ, ದಿಶಮ್.

**ಅರ್ಥ** :- **ಸಃ ತು** = ಆ ಘಟೋತ್ಕಚನಾದರೂ; **ಕೃಷ್ಣಾಂ** = ದ್ರೌಪದಿಯನ್ನು; **ಉವಾಹ** = ಹೊತ್ತನು; **ತಸ್ಯ** = ಅವನ; **ಭೃತ್ಯಾಃ** = ಸೇವಕರು; **ಪಾರ್ಥಾನ್** = ಪಾಂಡವರನ್ನು; **ಊಹುಃ** = ಹೊತ್ತರು. **ಚ** = ಮತ್ತು; **ಬದರ್ಯಾಶ್ರಮಂ** = ಬದರೀ ಆಶ್ರಮವನ್ನು; **ಪ್ರಾಪ್ಯ** = ಸೇರಿ; **ಅತ್ರ** = ಬದರಿ ಆಶ್ರಮದಲ್ಲಿ; **ನಾರಾಯಣಪೂಜಯಾ** = ನಾರಾಯಣನ ಪೂಜೆಯಿಂದ; **ಕೃತಸ್ವಕೀಯಕಾರ್ಯಾಃ (ಸಂತಃ)** = ಪೂರ್ಣವಾದ ತಮ್ಮ ಕೆಲಸವುಳ್ಳವರಾಗಿ; **ಉತ್ತರಾಮ್** = ಉತ್ತರದ; **ದಿಶಂ (ಪ್ರತಿ)** = ದಿಕ್ಕನ್ನು ಕುರುತು; **ಯಯುಃ** = ಹೊರಟರು.

ತಾತ್ಪರ್ಯ :- ಆ ಘಟೋತ್ಕಚನು ದ್ರೌಪದಿಯನ್ನು ಮತ್ತು ಇತರ ರಾಕ್ಷಸರು ಪಾಂಡವರನ್ನು ಹೊತ್ತು ಬದರಿಗೆ ಬಂದರು. ಅಲ್ಲಿ ನಾರಯಣನ ಪೂಜೆಮಾದಿ ಕೃತಾರ್ಥರಾಗಿ ಉತ್ತರದಿಕ್ಕಿಗೆ ಹೋದರು.

**ಅತೀತ್ಯ ಶರ್ವಶ್ವಶುರಂ ಗಿರಿಂ ತೇ**
**ಸುವರ್ಣಕೂಟಂ ನಿಷಧಂ ಗಿರಿಂ ಚ ।**
**ಮೇರೋಃ ಪ್ರಾಚ್ಯಾಂ ಗಂಧಮಾದೇ ಗಿರೌ ಚ**
**ಪ್ರಾಪುರ್ಬದರ್ಯಾಶ್ರಮಮುತ್ತಮಂ ಭುವಿ ॥ ೨೬೭ ॥**

ಪದಚ್ಛೇದ :- ಅತೀತ್ಯ, ಶರ್ವಶ್ವಶುರಂ, ಗಿರಿಂ, ತೇ, ಸುವರ್ಣಕೂಟಂ, ನಿಷಧಂ, ಗಿರಿಂ, ಚ, ಮೇರೋಃ, ಪ್ರಾಚ್ಯಾಂ, ಗಂಧಮಾದೇ, ಗಿರೌ, ಚ, ಪ್ರಾಪುಃ, ಬದರ್ಯಾಶ್ರಮಮ್, ಉತ್ತಮಂ, ಭುವಿ.

**ಅರ್ಥ** :- **ತೇ** = ಆ ಪಾಂಡವರು; **ಶರ್ವಶ್ವಶುರಂ ಗಿರಿಂ** = ಶಿವನ ಮಾವನಾದ ಹಿಮಾಲಯವನ್ನು; **ಸುವರ್ಣಕೂಟಂ** = ಹೇಮಕೂಟವನ್ನು; **ಚ** = ಮತ್ತು; **ನಿಷಧಂ ಗಿರಿಂ** = ನಿಷಧಪರ್ವತವನ್ನು; **ಅತೀತ್ಯ** = ದಾಟಿ; **ಮೇರೋಃ** = ಮೇರುಪರ್ವತದ; **ಪ್ರಾಚ್ಯಾಂ** = ಪೂರ್ವದಲ್ಲಿರುವ; **ಗಂಧಮಾದೇ ಗಿರೌ ಚ** = ಗಂಧಮಾದನಪರ್ವತದಲ್ಲಿರುವ; **ಭುವಿ** = ಭೂಮಿಯಲ್ಲಿ; **ಉತ್ತಮಂ** = ಶ್ರೇಷ್ಠವಾದ; **ಬದರ್ಯಾಶ್ರಮಂ** = ಬದರೀಕಾಶ್ರಮವನ್ನು; **ಪ್ರಾಪುಃ** = ಸೇರಿದರು.

ತಾತ್ಪರ್ಯ :- ಪಾಂಡವರು ಹಿಮಾಲಯವನ್ನು, ಹೇಮಕೂಟ ಪರ್ವತವನ್ನು ಮತ್ತು ನಿಷಧಪರ್ವತವನ್ನೂ ದಾಟಿದರು. ಮೇರುಪರ್ವತದ ಪೂರ್ವಭಾಗದಲ್ಲಿರುವ ಗಂಧಮಾದನಪರ್ವದಲ್ಲಿರುವ ಭೂಮಿಯಲ್ಲಿ ಶ್ರೇಷ್ಠವಾದ ಬದರಿಕಾಶ್ರಮಕ್ಕೆ ಬಂದರು.

ವಿಶೇಷವಿಚಾರ :- ಒಟ್ಟು ಮೂರು ಬದರಿಕಾಶ್ರಮಗಳಿವೆ. ಅದರಲ್ಲಿ ಗಂಧಮಾದನದಲ್ಲಿರುವುದು ಮೂರನೆಯ ಬದರಿಕಾಶ್ರಮ.

**ತಸ್ಮಿನ್ ಮುನೀಂದ್ರೈರಭಿಪೂಜ್ಯಮಾನಾ**
**ನಾರಾಯಣಂ ಪೂಜಯಂತಃ ಸದೈವ ।**
**ಚಕ್ರುಸ್ತಪೋ ಜ್ಞಾನಸಮಾಧಿಯುಕ್ತಂ ಸುತತ್ತ್ವ-**
**ವಿದ್ಯಾಂ ಪ್ರತಿಪಾದಯಂತಃ ॥ ೨೬೮ ॥**

ಪದಚ್ಛೇದ :- ತಸ್ಮಿನ್, ಮುನೀಂದ್ರೈಃ, ಅಭಿಪೂಜ್ಯಮಾನಾಃ, ನಾರಾಯಣಂ, ಪೂಜಯಂತಃ, ಸದಾ, ಏವ, ಚಕ್ರುಃ, ತಪಃ, ಜ್ಞಾನಸಮಾಧಿಯುಕ್ತಂ, ಸುತತ್ತ್ವವಿದ್ಯಾಂ, ಪ್ರತಿಪಾದಯಂತಃ.

ಅರ್ಥ :- ತಸ್ಮಿನ್ = ಆ ಬದರಿಕಾಶ್ರಮದಲ್ಲಿ; ಮುನೀಂದ್ರೈಃ = ಋಷಿಶ್ರೇಷ್ಠರಿಂದ; ಅಭಿಪೂಜ್ಯಮಾನಾಃ = ಭಕ್ತಿಯಿಂದ ಪೂಜಿತರಾದ; ನಾರಾಯಣಂ = ನಾರಾಯಣನನ್ನು; ಸದಾ ಏವ = ಯಾವಾಗಲೂ; ಪೂಜಯಂತಃ (ಸಂತಃ) = ಪೂಜಿಸುತ್ತಾ; ಸುತತ್ವವಿದ್ಯಾಂ = ಶ್ರೇಷ್ಠತತ್ವಗಳನ್ನು ಪ್ರತಿಪಾದಿಸುವ ವಿದ್ಯೆಗಳನ್ನು; ಪ್ರತಿಪಾದಯಂತಃ (ಸಂತಹ್) = ಉಪದೇಶಿಸುತ್ತಾ; ತೇ = ಆ ಪಾಂಡವರು; ಜ್ಞಾನಸಮಾಧಿಯುಕ್ತಂ = ಜ್ಞಾನದಿಂದ ಸಹಿತವಾದ ಧ್ಯಾನದಿಂದ ಕೂದಿದ; ತಪಃ = ತಪಸ್ಸನ್ನು; ಚಕ್ರುಃ = ಮಾಡಿದರು.

ತಾತ್ಪರ್ಯ :- ಬದರಿಕಾಶ್ರಮದಲ್ಲಿ ಋಷಿಶ್ರೇಷ್ಠರು ಇವರನ್ನು ಪೂಜಿಸುತ್ತಿದ್ದರು. ಪಾಂಡವರು ನಾರಾಯಣನನ್ನು ಪೂಜಿಸುತ್ತಿದ್ದರು. ಅಲ್ಲಿದ್ದವರಿಗೆ ಶ್ರೇಷ್ಠತತ್ವಪ್ರತಿಪಾದಕಶಾಸ್ತ್ರಗಳನ್ನು ಉಪದೇಶಿಸುತ್ತಾ ಜ್ಞಾನಧ್ಯಾನಗಳಿಂದ ಕೂಡಿದ ತಪಸ್ಸನ್ನು ಮಾಡಿದರು.

**ಏವಂ ಬದರ್ಯಾಂ ವಿಹರತ್ಸು ತೇಷು**
**ಕ್ವಚಿದ್ ರಹಃ ಕೃಷ್ಣಯಾ ವಾಯುಸೂನೌ ।**
**ಸ್ಥಿತೇ ಗರುತ್ಮಾನುರಗಂ ಜಹಾರ ಮಹಾ-**
**ಹ್ರದಾತ್ ವಾಸುದೇವಾಸನಾಗ್ರ್ಯಃ ॥ ೨೬ ॥**

ಪದಚ್ಛೇದ :- ಏವಂ, ಬದರ್ಯಾಂ, ವಿಹರತ್ಸು, ತೇಷು, ಕ್ವಚಿತ್, ರಹಃ, ಕೃಷ್ಣಯಾ, ವಾಯುಸೂನೌ, ಸ್ಥಿತೇ, ಗರುತ್ಮಾನ್, ಉರಗಂ, ಜಹಾರ, ಮಹಾಹ್ರದಾತ್, ವಾಸುದೇವಾಸನಾಗ್ರ್ಯಃ.

ಅರ್ಥ :- ಏವಂ = ಹೀಗೆ; ಬದರ್ಯಾಂ = ಬದರಿಯಲ್ಲಿ; ತೇಷು = ಆ ಪಾಂಡವರು; ವಿಹರತ್ಸು (ಸತ್ಸು) = ವಿಹಾರಮಾಡುತ್ತಿರಲು; ಕ್ವಚಿತ್ = ಒಮ್ಮೆ; ವಾಯುಸೂನೌ = ವಾಯುಪುತ್ರನಾದ ಭೀಮಸೇನನು; ರಹಃ = ಏಕಾಂತದಲ್ಲಿ; ಕೃಷ್ಣಯಾ = ದ್ರೌಪದಿಯೊಂದಿಗೆ; ಸ್ಥಿತೇ (ಸತಿ) = ಇರಲು;

**ವಾಸುದೇವಾಸನಾಗ್ರ್ಯಃ** = ಪರಮಾತ್ಮನ ಶ್ರೇಷ್ಠ ಆಸನನಾದ; **ಗರುತ್ಮಾನ್** = ಗರುಡನು; **ಮಹಾಹ್ರದಾತ್** = ದೊಡ್ಡ ಆಸರೋವರದಿಂದ; **ಉರಗಂ** = ಹಾವನ್ನು; **ಜಗ್ರಾಹ** = ಸೆಳೆದನು.

ತಾತ್ಪರ್ಯ :- ಹೀಗೆ ತಪಸ್ಸು ಮಾಡುತ್ತಾ ಪಾಂದವರು ಬದರಿಯಲ್ಲಿದ್ದರು. ಒಮ್ಮೆ ದ್ರೌಪದಿಯೊಂದಿಗೆ ಭೀಮಸೇನನು ಏಕಾಂತ ದಲ್ಲಿದ್ದಾಗ ಭಗವಂತನ ಆಸನನಾದ ಗರುಡನು ದೊಡ್ಡಸರೋವರ ಒಂದರಿಂದ ಹಾವನ್ನು ಎಳೆದನು.

**ತತ್ಪಕ್ಷವಾತೇನ ವಿಚಾಲಿತೇ ತು ತಸ್ಮಿನ್**
**ಗಿರೌ ಕಮಲಂ ಹೈಮಮಗ್ರ್ಯಮ್ ।**
**ಪಪಾತ ಕೃಷ್ಣಾಭೀಮಯೋಃ ಸನ್ನಿಧಾನೇ**
**ಉದ್ಯದ್ಭಾನೋರ್ಮಂಡಲಾಭಂ ಸುಗಂಧಮ್ ।। ೨೭೦ ।।**

**ಪದಚ್ಛೇದ :– ತತ್ಪಕ್ಷಪಾತೇನ, ವಿಚಾಲಿತೇ, ತು, ತಸ್ಮಿನ್, ಗಿರೌ, ಕಮಲಂ, ಹೈಮಮ್, ಅಗ್ರ್ಯಂ, ಪಪಾತ, ಕೃಷ್ಣಾಭೀಮಯೋಃ, ಸನ್ನಿಧಾನೇ, ಉದ್ಯದ್ಭಾನೋಃ, ಮಂದಲಾಭಂ, ಸುಗಂಧಮ್.**

**ಅರ್ಥ** :- **ತಸ್ಮಿನ್** = ಆ; **ಗಿರೌ ತು** = ಪರ್ವತವಾದರೂ; **ತತ್ಪಕ್ಷವಾತೇನ** = ಆ ಗರುಡನ ರೆಕ್ಕೆಯ ಗಾಳಿಯಿಂದ; **ವಿಚಾಲಿತೇ (ಸತಿ)** = ಕಂಪಿಸಲು; **ಅಗ್ರ್ಯಂ** = ಶ್ರೇಷ್ಠವಾದ; **ಹೈಮಂ** = ಬಂಗಾರದ; **ಸುಗಂಧಂ** = ಪರಿಮಳಯುಕ್ತವಾದ; **ಉದ್ಯದ್‌ಭಾನೋಃ ಮಂಡಲಾಭಂ** = ಉದಯಿಸುತ್ತಿರುವ ಸೂರ್ಯಮಂಡಲದಂತೆ ಕಾಂತಿಯುಳ್ಳ; **ಕಮಲಂ** = ಕಮಲಪುಷ್ಪವು; **ಕೃಷ್ಣಾಭೀಮಯೋಃ** = ದ್ರೌಪದೀ ಮತ್ತು ಭೀಮನ; **ಸನ್ನಿಧಾನೇ** = ಸಮೀಪದಲ್ಲಿ; **ಪಪಾತ** = ಬಿದ್ದಿತು.

ತಾತ್ಪರ್ಯ :- ಗರುಡನು ರೆಕ್ಕೆಯನ್ನು ಬೀಸಲು ಅವನ ರೆಕ್ಕೆಯ ಗಾಳಿಯಿಂದ ಪರ್ವತವು ಕಂಪಿಸಿತು. ಆಗ ಉದಯಿಸಿವ ಸೂರ್ಯ ಮಂದಲದಂತಿರುವ ಪರಿಮಳಯುಕ್ತವಾದ ಬಂಗಾರದ ಕಮಲವೊಂದು ದ್ರೌಪದೀ ಭೀಮರ ಹತ್ತಿರ ಬಿದ್ದಿತು.

ದೃಷ್ಟ್ವಾತಿಗಂಧಂ ವರಹೇಮಕಂಜಂ
ಕುತೂಹಲಾದ್ ದ್ರೌಪದೀ ಭೀಮಸೇನಮ್ ।
ಬಹೂನ್ಯಯಾಚತ್ ತಾದೃಶಾನ್ಯಾನು-
ಭಾವಮವಿಷಹ್ಯಂ ಜಾನತೀ ದೇವದೈತ್ಯೈಃ ॥ ೨೭೧ ॥

ಪದಚ್ಛೇದ :- ದೃಷ್ಟ್ವಾ, ಅತಿಗಂಧಂ, ವರಹೇಮಕಂಜಂ, ಕುತೂಹಲಾತ್, ದ್ರೌಪದೀ, ಭೀಮಸೇನಂ, ಬಹೂನಿ, ಅಯಾಚತ್, ತಾದೃಶಾನಿ, ಅನುಭಾವಮ್, ಅವಿಷಹ್ಯಂ, ಜಾನತೀ, ದೇವದೈತ್ಯೈಃ.

**ಅರ್ಥ** :- **ದ್ರೌಪದೀ** = ದ್ರೌಪದೀ ದೇವಿಯು; **ಅತಿಗಂಧಂ** = ಅತ್ಯಂತಪರಿಮಳವುಳ್ಳ; **ವರಹೇಮಕಂಜಂ** = ಶ್ರೇಷ್ಠವಾದ ಬಂಗಾರದ ಕಮಲವನ್ನು; **ದೃಷ್ಟ್ವಾ** = ನೋಡಿ; **ಕುತೂಹಲಾತ್** = ಕುತೂಹಲದಿಂದ; **ದೇವದೈತ್ಯೈಃ** = ದೇವತೆಗಳು ಮತ್ತು ದೈತ್ಯರಿಂದ; **ಅವಿಷಹ್ಯಂ** = ಸಹಿಸಲು ಅಶಕ್ಯವಾದ; **ಅನುಭಾವಂ ಸಾಮರ್ಥ್ಯಂ** = ಸಾಮರ್ಥ್ಯವನ್ನು; **ಜಾನತೀ (ಸತೀ)** = ತಿಳಿದವಳಾಗಿಯೇ; **ಭೀಮಸೇನಂ** = ಭೀಮಸೇನನನ್ನು; **ತಾದೃಶಾನಿ** = ಅದೇರೀತಿಯಾದ; **ಬಹೂನಿ** = ಹೆಚ್ಚು ಪುಷ್ಪಗಳನ್ನು; **ಅಯಾಚತ** = ಕೇಳಿದಳು.

ತಾತ್ಪರ್ಯ :- ಅತ್ಯಂತಗಂಧವುಳ್ಳ ಶ್ರೇಷ್ಠವಾದ ಬಂಗಾರದ ಕಮಲವನ್ನು ನೋಡಿದ ದ್ರೌಪದಿಯು ಕುತೂಹಲದಿಂದ ಅದೇರೀತಿಯ ಮತ್ತಷ್ಟು ಪುಷ್ಪಗಳನ್ನು ಭೀಮಸೇನನಲ್ಲಿ ಯಾಚಿಸಿದಳು. ಅವಳಿಗೆ ಭೀಮನ ದೇವದೈತ್ಯರಿಗೂ ಸಹಿಸಲಾಗದ ಸಾಮರ್ಥ್ಯ ತಿಳಿದೇ ಇತ್ತು.

ತಯಾರ್ಥಿತಃ ಸಗದಸ್ತುಂಗಮೇನಂ ಗಿರಿಂ
ವೇಗಾದಾರುಹತ್ ವಾಯುಸೂನುಃ ।
ಪ್ರಶಸ್ಯಮಾನಃ ಸುರಸಿದ್ಧಸಂಘೈಃ ಮೃತ್ನನ್
ದೈತ್ಯಾನ್ ಸಿಂಹಶಾರ್ದೂಲರೂಪಾನ್ ॥ ೨೭೨ ॥

ಪದಚ್ಛೇದ :- ತಯಾ, ಅರ್ಥಿತಃ, ಸಗದಃ, ತುಂಗಮ್, ಏನಂ, ಗಿರಿಂ, ವೇಗಾತ್, ಆರುಹತ್, ವಾಯುಸೂನುಃ, ಪ್ರಶಸ್ಯಮಾನಃ, ಸುರಸಿದ್ಧಸಂಘೈಃ, ಮೃತ್ನನ್, ದೈತ್ಯಾನ್, ಸಿಂಹಶಾರ್ದೂಲರೂಪಾನ್.

**ಅರ್ಥ** :- **ತಯಾ** = ಆ ದ್ರೌಪದಿಯಿಂದ; **ಅರ್ಥಿತಃ** = ಪ್ರಾರ್ಥಿಸಲ್ಪಟ್ಟ; **ವಾಯುಸೂನುಃ** = ವಾಯುಸುತನಾದ ಭೀಮನು; **ಸಗದಃ (ಸನ್)** = ಗದೆಯಿಂದಸಹಿತನಾಗಿ; **ಸುರಸಿದ್ಧಸಂಘೈಃ** = ದೇವತೆಗಳು ಸಿದ್ಧರುಗಳ ಸಮೂಹದಿಂದ; **ಪ್ರಶಸ್ಯಮಾನಃ** = ಸ್ತುತನಾಗಿ; **ಸಿಂಹ ಶಾರ್ದೂಲರೂಪಾನ್** = ಸಿಂಹ ಹುಲಿ ಮೊದಲಾದ ರೂಪದಿಂದಿರುವ; **ದೈತ್ಯಾನ್** = ದೈತ್ಯರನ್ನು; **ಮೃತ್ನನ್** = ಸಂಹರಿಸುತ್ತಾ; **ವೇಗಾತ್** = ವೇಗದಿಂದ; **ತುಂಗಂ** = ಎತ್ತರವಾದ; **ಏನಂ** = ಈ; **ಗಿರಿಂ** = ಗಂಧಮಾದನ ಪರ್ವತವನ್ನು; **ಆರುಹತ್** = ಏರಿದನು.

ತಾತ್ಪರ್ಯ :- ಹೀಗೆ ದ್ರೌಪದಿಯುಲಿ ಪ್ರಾರ್ಥಿಸಲು ಗದೆಯನ್ನು ಹಿಡಿದ ಭೀಮನು ವೇಗವಾಗಿ ಎತ್ತರದ ಗಂಧಮಾದನ ಪರ್ವತವನ್ನು ಏರಿದನು. ದಾರಿಯಲ್ಲಿ ಸಿಂಹ ಹುಲಿ ಮೊದಲಾದ ಕ್ರೂರಪ್ರಾಣೀಗಳ ರೂಪದಿಂದ ಬರುತ್ತಿದ ದೈತ್ಯರನ್ನು ಸಂಹರಿಸುತ್ತಾ ಮುಂದೆ ಸಾಗುತ್ತಿದ್ದನು.

**ಆಸೇದಿವಾಂಸ್ತತ್ರ ಹನೂಮದಾಖ್ಯಂ ನಿಜಂ**
**ರೂಪಂ ಪ್ರೋದ್ಯದಾದಿತ್ಯಭಾಸಮ್ ।**
**ಜಾನನ್ನಪ್ಯೇನಂ ಸ್ವೀಯರೂಪಂ ಸ ಭೀಮಶ್ಚಿಕ್ರೀಡ**
**ಏತೇನ ಯಥಾ ಪರೇಣ ॥ ೨೭೩ ॥**

ಪದಚ್ಛೇದ :- **ಆಸೇದಿವಾನ್, ತತ್ರ, ಹನೂಮದಾಖ್ಯಂ, ನಿಜಂ, ರೂಪಂ, ಪ್ರೋದ್ಯದಾದಿತ್ಯಭಾಸಂ, ಜಾನನ್, ಅಪಿ, ಏನಂ, ಸ್ವೀಯರೂಪಂ, ಸಃ, ಭೀಮಃ, ಚಿಕ್ರೀಡೇ, ಏತೇನ, ಯಥಾ, ಪರೇಣ.**

**ಅರ್ಥ** :- **ತತ್ರ** = ಆ ಪರ್ವತದಲ್ಲಿ; **ಪ್ರೋದ್ಯದಾದಿತ್ಯಭಾಸಂ** = ಉದಯಿಸುವ ಸೂರ್ಯನಂತೆ ಕಾಂತಿಯುಳ್ಳ; **ಹನೂಮದಾಖ್ಯಂ** = ಹನೂಮಂತನೆಂಬ; **ನಿಜಂ** = ತನ್ನದೇ; **ರೂಪಂ** = ರೂಪವನ್ನು; **ಆಸೇದಿವಾನ್** = ಸಮೀಪಿಸಿದನು. **ಸಃ** = ಆ; **ಭೀಮಃ** = ಭೀಮನು; **ಏನಂ** = ಈ ಹನುಮಂತನನ್ನು; **ಸ್ವೀಯರೂಪಂ** = ತನ್ನದೇ ಮತ್ತೊಂದು ರೂಪದವನನ್ನಾಗಿ; **ಜಾನನ್ ಅಪಿ** = ತಿಳಿದರೂ ಕೂಡ; **ಯಥಾ** = ಹೇಗೆ; **ಪರೇಣ** = ಮತ್ತೊಬ್ಬನಿಂದಲೋ; **(ತಥಾ)** = ಹಾಗೆ; **ಏತೇನ** = ಈ ಹನುಮಂತನೊಂದಿಗೆ; **ಚಿಕ್ರೀಡ** = ಕ್ರೀಡಿಸಿದನು.

ತಾತ್ಪರ್ಯ :- ಆ ಪರ್ವತದಲ್ಲಿ ದಾರಿಯಲ್ಲಿದ್ದ ಉದಯಿಸುವ ಸೂರ್ಯನಂತಿರುವ ಹನುಮಂತನಿಗೆ ಇದಿರಾದನು. ಹನುಮಂತನು ತಾನೇ, ತನ್ನದೇ ಮತ್ತೊಂದುರೂಪ ಎಂದು ಭೀಮನಿಗೆ ತಿಳಿದಿದ್ದರೂ ಬೇರೊಬ್ಬ ಪುರುಷನೊಂದಿಗೆ ವ್ಯವಹರಿಸುವಂತೆ ಹನುಮಂತನೊಂದಿಗೆ ವ್ಯವಹರಿಸಿ ಕ್ರೀಡಿಸಿದನು.

ಧರ್ಮೋ ದೇವಾನಾಂ ಪರಮೋ
ಮಾನುಷತ್ವೇ ರೂಪೇಪ್ಯನ್ಯವದೇವ ವೃತ್ತಿಃ ।
ಅನಾದಾನಂ ದಿವ್ಯಶಕ್ತೇರ್ವಿಶೇಷಾನ್ನ-
ರಸ್ವಭಾವೇ ಸರ್ವದಾ ಚೈವ ವೃತ್ತಿಃ ।
ತಸ್ಮಾದ್ ಭೀಮೋ ಹನುಮಾಂಶ್ಚೈಕ ಏವ
ಜ್ಯಾಯಃಕನೀಯೋವೃತ್ತಿಮಾತ್ರಾಭಿಪೇದೇ ॥ ೨೭೪ ॥

ಪದಚ್ಛೇದ :- ಧರ್ಮಃ, ದೇವಾನಾಂ, ಪರಮಃ, ಮಾನುಷತ್ವೇ, ರೂಪೇ, ಅಪಿ, ಅನ್ಯವತ್, ಏವ, ವೃತ್ತಿಃ, ಅನಾದಾನಂ, ದಿವ್ಯಶಕ್ತೇಃ, ವಿಶೇಷಾತ್, ನರಸ್ವಭಾವೇ, ಸರ್ವದಾ, ಚ, ಏವ, ವೃತ್ತಿಃ, ತಸ್ಮಾತ್, ಭೀಮಃ, ಹನುಮಾನ್, ಚ, ಏಕಃ, ಏವ, ಜ್ಯಾಯಃಕನೀಯಾವೃತ್ತಿಮ್, ಅತ್ರ, ಅಭಿಪೇದೇ.

ಅರ್ಥ :- ಮಾನುಷತ್ವೇ = ಮನುಷ್ಯಜನ್ಮವು; (ಪ್ರಾಪ್ತೇ ಸತಿ) = ಪ್ರಾಪ್ತವಾಗಲು; ಸ್ವೀಯೇ = ತನ್ನದೇ ಆದ; ರೂಪೇ ಅಪಿ = ರೂಪದ ವಿಷದಲ್ಲಿ; ಅನ್ಯವತ್ ಏವ = ಮತ್ತೊಬ್ಬರಂತೆಯೇ; ವೃತ್ತಿಃ = ನಡೆಯುವುದು; ದೇವಾನಾಂ = ದೇವತೆಗಳ; ಪರಮಃ = ಶ್ರೇಷ್ಠವಾದ; ಧರ್ಮಃ = ಧರ್ಮವು; ನರಸ್ವಭಾವೇ = ಮನುಷ್ಯಸ್ವಭಾವದಲ್ಲಿದ್ದಾಗ; ವಿಶೇಷಾತ್ = ಮೂಲರೂಪದಿಂದ; ದಿವ್ಯಶಕ್ತೇಃ = ಮೂಲಶಕ್ತಿಯ; ಅನಾದಾನಂ ಚ = ಸ್ವೀಕಾರ ಮಾಡದಿರುವುದು ಕೂಡ; ಚ = ಮತ್ತು; ಸರ್ವದಾ ಏವ = ಎಲ್ಲಸಮಯದಲ್ಲೂ; ವೃತ್ತಿಃ = (ಮನುಷ್ಯರಂತೆಯೇ) ನಡೆದುಕೊಳ್ಳುವುದು; (ಪರಮಃ ಧರ್ಮಃ) = ಶ್ರೇಷ್ಠಧರ್ಮವಾಗಿದೆ. ತಸ್ಮಾತ್ = ಆದ್ದರಿಂದ; ಭೀಮಃ = ಭೆಮನು; ಚ = ಮತ್ತು; ಹನುಮಾನ್ = ಹನುಮಂತನು; ಏಕಃ ಏವ = ಒಬ್ಬರೇ ಆದರೂ; ಅತ್ರ = ಇಲ್ಲಿ; ಜ್ಯಾಯಃಕನೀಯೋವೃತ್ತಿಮ್ = ಅಣ್ಣ-ತಮ್ಮ ಎಂಬ ನಡುವಳಿಕೆಯನ್ನು; ಅಭಿಪೇದೇ = ಹೊಂದಿದರು.

ತಾತ್ಪರ್ಯ :- ದೇವತೆಗಳು ಮನುಷ್ಯರಾಗಿ ಅವತರಿಸಿದಾಗ ತಮ್ಮದೇ ಮತ್ತೊಂದು ರೂಪದೊಂದಿಗೆ ಬೇರೆಯವರಂತೆ ವರ್ತಿಸಬೇಕು. ತಮ್ಮ ಮೂಲರೂಪದ ಶಕ್ತಿಯನ್ನು ವಿಶೇಷಕಾರಣವಿಲ್ಲದೆ ಸ್ವೀಕರಿಸಬಾರದು. ಎಂತಹ ಸಮಯದಲ್ಲೊ ಮನುಷ್ಯರಂತೆಯೇ ವರ್ತಿಸಬೇಕು. ಇದು ದೇವತೆಗಳ ಪರಮಧರ್ಮ. ಆದ್ದರಿಂದಲೇ ಭೀಮ ಮತ್ತು ಹನುಮಂತರು ಒಬ್ಬರೇ ಆಗಿದ್ದರೂ ಅಣ್ಣ-ತಮ್ಮಮ್ದಿರಂತೆ ನಡೆದುಕೊಂಡರು.

ವಿಶೇಷವಿಚಾರ :- ಎಲ್ಲಸಮಯದಲ್ಲಿ ಎಂದರೆ ಆಪತ್ತು ಹಾಗು ಅನಾಪತ್ತಿನ ಸಮಯದಲ್ಲಿ ಎಂದು ಅರ್ಥ ಜನಾರ್ದನೀಯ.

**ಸರ್ವೇ ಗುಣಾ ಆವೃತಾ ಮಾನುಷತ್ವೇ**
**ಯುಗಾನುಸಾರಾನ್ಮೂಲರೂಪಾನುಸಾರಾತ್ ।**
**ಕ್ರಮಾತ್ ಸುರಾಣಾಂ ಭಾಗತೋವ್ಯಕ್ತರೂಪಾ ಆದಾನತೋ**
**ವ್ಯಕ್ತಿಮಾಯಾನ್ತ್ಯುರೂಣಾಮ್ ॥ ೨೭೫ ॥**

ಪದಚ್ಛೇದ :- **ಸರ್ವೇ, ಗುಣಾಃ, ಆವೃತಾಃ, ಮಾನುಷತ್ವೇ, ಯುಗಾನುಸಾರಾತ್, ಮೂಲರೂಪಾನುಸಾರಾತ್, ಕ್ರಮಾತ್, ಸುರಾಣಾಂ, ಭಾಗತಃ, ಅವ್ಯಕ್ತರೂಪಾಃ, ಆದಾನತಃ, ವ್ಯಕ್ತಿಮ್, ಆಯಾಂತಿ, ಉರೂಣಾಮ್.**

ಅರ್ಥ :- **ಸುರಾಣಾಂ** = ದೇವತೆಗಳಿಗೆ; **ಮಾನುಷತ್ವೇ** = ಮನುಷ್ಯಾವತಾರದಲ್ಲಿ; **ಯುಗಾನುಸಾರಾತ್** = ಯುಗಕ್ಕೆ ಅನುಗುಣವಾಗಿ; **ಮೂಲರೂಪಾನುಸಾರಾತ್** = ತಮ್ಮ ಮೂಲರೂಪಕ್ಕೆ ಅನುಗುಣವಾಗಿ; **ಕ್ರಮಾತ್** = ತಾರತಮ್ಯಕ್ರಮಕ್ಕ ತಕ್ಕಂತೆ; **ಸರ್ವೇ** = ಎಲ್ಲ; **ಗುಣಾಃ** = ಗುಣಗಳು; **ಭಾಗತಃ** = ಭಾಗಸ್ವಾಗಿ; **ಆವೃತಾಃ** = ಆವರಿಸಲ್ಪಟ್ಟಿರುತ್ತವೆ. **ಉರೂಣಾಂ** = ಶ್ರೇಷ್ಠರಾದ; **(ಸುರಾಣಾಂ)** = ದೇವತೆಗಳಿಗೆ; **(ಭಾಗತಃ)** = ಭಾಗದಿಂದ; **ಅವ್ಯಕ್ತರೂಪಾಃ** = ಅವ್ಯಕ್ತವಾಗಿದ್ದ ಗುಣಗಳು; **ಆದಾನತಃ** = ಸ್ವೀಕಾರದಿಂದ; **ವ್ಯಕ್ತಿಮ್** = ಅಭಿವ್ಯಕ್ತಿಯನ್ನು; **ಆಯಾಂತಿ** = ಹೊಂದುತ್ತಾರೆ.

ತಾತ್ಪರ್ಯ :- ದೇವತೆಗಳು ಮನುಷ್ಯರಾಗಿ ಅವತರಿಸಿದಾಗ ಮೂಲರೂಪ ಜ್ಞಾನಬಲಾದಿಗುಣಗಳು ಪರಿಪೂರ್ಣವಾಗಿ ವ್ಯಕ್ತವಾಗಿ ರುವುದಿಲ್ಲ. ಯುಗಕ್ಕೆ ಮತ್ತು ಸ್ವರೂಪದ ತಾರತಮ್ಯಕ್ಕೆ ತಕ್ಕಂತೆ ಸ್ವಲ್ಪಭಾಗವು

ಆವೃತವಾಗಿ ಸ್ವಲ್ಪಭಾಗವು ವ್ಯಕ್ತವಾಗಿರುತ್ತವೆ. ಕೃತಯುಗಕ್ಕಿಂತ ತ್ರೇತಾಯುಗದಲ್ಲಿ, ತ್ರೇತಾಯುಗಕ್ಕಿಂತ ದ್ವಾಪರಯುಗದಲ್ಲಿ; ದ್ವಾಪರಕ್ಕಿಂತ ಕಲಿಯುಗದಲ್ಲಿ ಹೆಚ್ಚು ಗುಣಗಳು ಆವೃತವಾಗಿರುತ್ತವೆ. ಆದರೆ ಉತ್ತಮದೇವತೆಗಳಲ್ಲಿ ವಿಶೇಷವಿದೆ. ಅವರಿಗೆ ಸ್ವೀಕಾರ ಮಾಡಿದರೆ ಮೂಲರೂಪದ ಗುಣಗಳು ಅಭಿವ್ಯಕ್ತವಾಗುತ್ತವೆ.

ವಿಶೇಷವಿಚಾರ :- ಉತ್ತಮದೇವತೆಗಳೆಂದರೆ ವಾಯುಶೇಷ ಮೊದಲಾದವರು. ಆದ್ದರಿಂದಲೇ ಲಕ್ಷ್ಮಣನನ್ನು ರಾವಣನು ಎತ್ತಿಕೊಂಡು ಹೋಗಲು ಯತ್ನಿಸಿದಾಗ ಮೂಲರೂಪದ ಸ್ಮರಣೆಯಿಂದ ಮೂಲರೂಪದ ಬಲವು ಅಭಿವ್ಯಕ್ತವಾಗುತ್ತದೆ- ವಾದಿರಾಜೀಯ.

**ನೈವಾವ್ಯಕ್ತಿಃ ಕಾಚಿದಸ್ತೀಹ ವಿಷ್ಣೋಃ**
**ಪ್ರಾದುರ್ಭಾವೇಷ್ವತಿಸುವ್ಯಕ್ತಶಕ್ತೇಃ ।**
**ಇಚ್ಛಾವ್ಯಕ್ತಿಃ ಪ್ರಾಯಶಃ ಮಾರುತಸ್ಯ**
**ತದನ್ಯೇಷಾಂ ವ್ಯಕ್ತತಾ ಕಾರಣೇನ ॥ ೨೭೬ ॥**

**ಪದಚ್ಛೇದ :– ನ, ಏವ, ಅವ್ಯಕ್ತಿಃ, ಕಾಚಿತ್, ಅಸ್ತಿ, ಇಹ, ವಿಷ್ಣೋಃ, ಪ್ರಾದುರ್ಭಾವೇಷು ಅತಿಸುವ್ಯಕ್ತಶಕ್ತೇಃ, ಇಚ್ಛಾವ್ಯಕ್ತಿಃ, ಪ್ರಾಯಶಃ, ಮಾರುತಸ್ಯ, ತದನ್ಯೇಷಾಂ, ವ್ಯಕ್ತತಾ, ಕಾರಣೇನ.**

**ಅರ್ಥ :- ಅತಿಸುವ್ಯಕ್ತಶಕ್ತೇಃ** = ಅತ್ಯಂತಸ್ಪಷ್ಟವಾಗು ಪೂರ್ಣವಾಗಿ ವ್ಯಕ್ತವಾದ ಶಕ್ತಿಯುಳ್ಳ; **ವಿಷ್ಣೋಃ** = ಭಗವಂತನಿಗೆ; **ಪ್ರಾದುರ್ಭಾವೇಷು** = ಅವತಾರಗಳಲ್ಲಿ; **ಇಹ** = ಬಲಜ್ಞಾನಾದಿಗುಣಗಳಲ್ಲಿ; **ಕಾಚಿತ್** = ಯಾವುದೇ ವಿಧವಾದ; **ಅವ್ಯಕ್ತಿಃ** = ಅನಭಿವ್ಯಕ್ತಿಯು; **ನ ಅಸ್ತಿ ಏವ** = ಇರುವುದೇ ಇಲ್ಲ. **ಮಾರುತಸ್ಯ** = ಪ್ರಾಣದೇವರಿಗೆ; **ಪ್ರಾಯಶಃ** = ಹೆಚ್ಚಾಗಿ; **ಇಚ್ಛಾವ್ಯಕ್ತಿಃ** = ತನ್ನ ಇಚ್ಛೆಯಂತೆ ಮೂಲರೂಪದ ಗುನಗಳ ಅಭಿವ್ಯಕ್ತಿಯಿರುತ್ತದೆ. **ತದನ್ಯೇಷಾಂ** = ಅವನ್ನು ಬಿಟ್ಟು ಮಿಕ್ಕ ದೇವತೆಗಳಿಗೆ; **ಕಾರಣೇನ** = ವಿಶೇಷಕಾರಣವಿದ್ದರೆ ಮಾತ್ರ; **ವ್ಯಕ್ತತಾ (ಭವತಿ)** = ಅಭಿವ್ಯಕ್ತಿಯು ಇರುತ್ತದೆ.

**ತಾತ್ಪರ್ಯ** :- ಈ ನಿಯಮವು ಪರಮಾತ್ಮನಿಗೆ ಅನ್ವಯಿಸುವುದಿಲ್ಲ. ಪರಮಾತ್ಮನು ಎಲ್ಲ ಕಾಲದಲ್ಲೂ ಎಲ್ಲ ರೂಪಗಳಲ್ಲೂ ಪರಿಪೂರ್ಣವಾಗಿ

ಗುಣಗಳ ಅಭಿವ್ಯಕ್ತಿಯುಳ್ಳವನು. ವಾಯುದೇವರು ತಮ್ಮ ಇಚ್ಛೆಯಿಂದ ಮೂಲರೂಪದ ಗುಣಗಳ ಅಭಿವ್ಯಕ್ತಿಯನ್ನು ಮಾಡಿಕೊಳ್ಳುತ್ತಾರೆ. ಇತರ ದೇವತೆಗಳಿಗೆ ವಿಶೇಷಕಾರಣವಿದ್ದಾಗ ಮಾತ್ರ ಅಭಿವ್ಯಕ್ತಿಯಿರುತ್ತದೆ.

**ತಸ್ಮಾದ್ ಭೀಮೋ ಧರ್ಮವೃದ್ಧ್ಯರ್ಥಮೇವ**
**ಸ್ವೀಯೇ ರೂಪೇಪ್ಯನ್ಯವದ್ ವೃತ್ತಿಮೇವ ।**
**ಪ್ರದರ್ಶಯಾಮಾಸ ತಥಾಸುರಾಣಾಂ**
**ಮೋಹಾಯೈವಾಶಕ್ತವಚ್ಛಕ್ತಿರೂಪಃ ॥ ೨೭೭ ॥**

ಪದಚ್ಛೇದ :- ತಸ್ಮಾತ್, ಭೀಮಃ, ಧರ್ಮವೃದ್ಧ್ಯರ್ಥಮ್, ಏವ, ಸ್ವೀಯೇ, ರೂಪೇ, ಅಪಿ, ಅನ್ಯವತ್, ವೃತ್ತಿಮ್, ಏವ, ಪ್ರದರ್ಶಯಾಮಾಸ, ತಥಾ, ಅಸುರಾಣಾಂ, ಮೋಹಾಯ, ಏವ, ಅಶಕ್ತವತ್, ಶಕ್ತಿರೂಪಃ.

ಅರ್ಥ :- **ತಸ್ಮಾತ್** = ಹೀಗೆ ದೇವತೆಗಳ ನಿಯಮವಿದ್ದದ್ದರಿಂದ; **ಶಕ್ತಿರೂಪಃ** = ಶಕ್ತಿಸ್ವರೂಪನಾದ; **ಭೀಮಃ** = ಭೀಮನು; **ಧರ್ಮವೃದ್ಧ್ಯರ್ಥಮ್ ಏವ** = ಪರಮಾತ್ಮನ ಪ್ರೀತಿಯೆಂಬ ತನ್ನ ಧರ್ಮದ ಅಭಿವೃದ್ಧಿಗಾಗಿ; **ತಥಾ** = ಹಾಗೆಯೇ; **ಅಸುರಾಣಾಂ** = ದುರ್ಜನರ; **ಮೋಹಾಯ ಏವ** = ಮೋಹನಕ್ಕಾಗಿಯೇ; **ಸ್ವೀಯೇ** = ತನ್ನದೇ ಆದ; **ರೂಪೇ ಅಪಿ** = ಮತ್ತೊಂದು ರೂಪದಲ್ಲೂ; **ಅನ್ಯವತ್ ಏವ** = ಬೇರೆಯವನಂತೆಯೇ; **ಅಶಕ್ತವತ್** = ಬಾಲವನ್ನೆತ್ತಲಾಗದೇ ಅಶಕ್ತನಂತೆ; **ವೃತ್ತಿಂ** = ನಡುವಳಿಕೆಯನ್ನು; **ಪ್ರದರ್ಶಯಾಮಾಸ** = ತೋರಿಸಿದನು.

ತಾತ್ಪರ್ಯ :- ದೇವತೆಗಳ ಈ ಧರ್ಮದಿಂದ ಭಗವಂತನ ಪ್ರೀತಿಯಾಗಲೆಂದು ತಾವೇ ಹನುಮಂತನಾಗಿದ್ದರೂ ಬೇರೆಯವನಂತೆ ವರ್ತಿಸಿದರು. ಮತ್ತು ತಾವು ಶಕ್ತಿಸ್ವರೂಪರಾಗಿದ್ದರೂ ಹನುಮಂತನ ಬಾಲವನ್ನು ಎತ್ತಲಾಗದವನಂತೆ ಅಸುರಜನಮೋಹನಕ್ಕಾಗಿ ತೋರಿಸಿಕೊಂಡರು.

**ತದ್ರೂಪವೃದ್ಧಿಂ ಭೀಮಸೇನೋಥ ದೃಷ್ಟ್ವಾ**
**ಶ್ರುತ್ವಾ ಹನೂಮನ್ಮುಖತಃ ಕಥಾಶ್ಚ ।**
**ರಾಮಸ್ಯ ತಚ್ಚಾತುರಾತ್ಮ್ಯಂ ಚ ದಿವ್ಯಂ**
**ಚಾತುರ್ಯುಗಂ ಧರ್ಮಮಪ್ಯಗ್ರ್ಯಮೇವ ॥ ೨೭೮ ॥**

ಪದಚ್ಛೇದ :- ತದ್ರೂಪವೃದ್ಧಿಂ, ಭೀಮಸೇನಃ, ಅಥ, ದೃಷ್ಟ್ವಾ, ಶ್ರುತ್ವಾಮ್ ಹನೂಮನ್ಮುಖತಃ, ಕಥಾಃ, ಚ, ರಾಮಸ್ಯ, ತತ್, ಚಾತುರಾತ್ಮ್ಯಂ, ಚ, ದಿವ್ಯಂ, ಚಾತುರ್ಯುಗಂ, ಧರ್ಮಮ್, ಅಪಿ, ಅಗ್ರ್ಯಮ್, ಏವ.

ಅರ್ಥ :- ಅಥ = ಆ ನಂತರ; ಭೀಮಸೇನಃ = ಭೀಮಸೇನನು; ತದ್ರೂಪವೃದ್ಧಿಂ = ಹನುಮಂತನ ರೂಪವು ಬೆಳೆದುದನ್ನು; ದೃಷ್ಟ್ವಾ = ನೋಡಿ; ಚ = ಮತ್ತು; ಹನೂಮನ್ಮುಖತಃ = ಹನುಮಂತನ ಬಾಯಿಂದ; ಕಥಾಃ = ರಾಮನ ಕಥೆಗಳನ್ನು; ಶ್ರುತ್ವಾ = ಕೇಳಿ; ಚ = ಮತ್ತು; ರಾಮಸ್ಯ = ಶ್ರೀರಾಮನ; ತತ್ = ವೇದದಲ್ಲಿ ಪ್ರಸಿದ್ಧವಾದ; ದಿವ್ಯಂ = ಅಲೌಕಿಕವಾದ; ಚಾತುರಾತ್ಮ್ಯಂ = ವಾಸುದೇವಾದಿ ನಾಲ್ಕುರೂಪಗಳನ್ನು; (ಶ್ರುತ್ವಾ) = ಕೇಳಿ; ಚಾತುರ್ಯುಗಂ = ನಾಲ್ಕುಯುಗಗಳಿಗೆ ಸಂಬಂಧಿಸಿದ; ಅಗ್ರ್ಯಂ = ಶ್ರೇಷ್ಠವಾದ; ಧರ್ಮಮ್ ಅಪಿ = ಧರ್ಮವನ್ನೂ ಕೂಡ; (ಶುಶ್ರಾವ) = ಕೇಳಿದನು.

ತಾತ್ಪರ್ಯ :- ನಂತರ ಹನುಮಂತನು ದೊಡ್ಡದಾಗಿ ಬೆಳೆದ ರೂಪವನ್ನು ಭೀಮನು ಕಂಡನು. ಹನುಮಂತನಿಂದ ರಾಮನ ಕಥೆಯನ್ನು ಕೇಳಿದನು. ವಾಸುದೇವರೂಪಿಯೇ ರಾಮನಾಗಿ ಅವತರಿಸಿ ಸಂಕರ್ಷಣಾದಿ ಮೂರುರೂಪದಿಂದ ಲಕ್ಷ್ಮಣಾದಿಗಳಲ್ಲಿದ್ದ ರಾಮನ ನಾಲ್ಕುರೂಪದ ಮಹಿಮೆಯನ್ನು ಕೇಳಿ ನಾಲ್ಕು ಯುಗದ ಧರ್ಮಗಳನ್ನೂ ಕೇಳಿದನು.

ಧ್ವಜಾದ್ ಬೀಭತ್ಸೋರ್ಗರ್ಜನೇನೈವ
ಶತ್ರುಪರಾಭವೇ ತೇನ ದತ್ತೇಽರ್ಜುನಸ್ಯ ।
ಯಯೌ ಪ್ರಣಮ್ಯೈನಮಾಶ್ವೇವ ಭೀಮಃ
ಸೌಗಂಧಿಕಂ ವನಮತ್ಯಗ್ರ್ಯರೂಪಮ್ ॥ ೨೭ ॥

ಪದಚ್ಛೇದ :- ಧ್ವಜಾತ್, ಬೀಭತ್ಸೋಃ, ಗರ್ಜನೇನ, ಏವ, ಶತ್ರುಪರಾಭವೇ, ತೇನ, ದತ್ತೇ, ಅರ್ಜುನಸ್ಯ, ಯಯೌ, ಪ್ರಣಮ್ಯ, ಏನಮ್, ಆಶು, ಏವ, ಭೀಮಃ, ಸೌಗಂಧಿ ಕಂ, ವನಮ್, ಅತ್ಯಗ್ರ್ಯರೂಪಮ್.

ಅರ್ಥ :- ತೇನ = ಆ ಹನುಮಂತನಿಂದ; ಬೀಭತ್ಸೋಃ ಅರ್ಜುನಸ್ಯ = ಶತ್ರುಭಯಂಕರನಾದ ಅರ್ಜುನನ; ಧ್ವಜಾತ್ = ಧ್ವಜದಿಂದ; ಗರ್ಜನೇನ ಏವ

= ಗರ್ಜನೆಯಿಂದಲೇ; **ಶತ್ರುಪರಾಭವೇ** = ಶತ್ರುಗಳಸೋಲು (ಎಂಬ ವರವು); **ದತ್ತೇ (ಸತಿ)** = ಕೊಡಲ್ಪಡಲು; **ಭೀಮಃ** = ಭೀಮನು; **ಅತ್ಯಗ್ರ್ಯರೂಪಂ** = ಶ್ರೇಷ್ಠರೂಪವುಳ್ಳ; **ಏನಮ್** = ಈ ಹನುಮಂತನನ್ನು; **ಪ್ರಣಮ್ಯ** = ನಮಸ್ಕರಿಸಿ; **ಆಶು ಏವ** = ಶೀಘ್ರವಾಗಿಯೇ; **ಸೌಗಂಧಿಕಂ ವನಂ (ಪ್ರತಿ)** = ಸೌಗಂಧಿಕಪುಷ್ಪವಿದ್ದ ವನವನ್ನು ಕುರಿತಿ; **ಯಯೌ** = ಹೊರಟನು.

ತಾತ್ಪರ್ಯ :- ನಂತರ ಹನುಮಂತನು ತಾನು ಮುಂದೆ ನಡೆಯಲಿರುವ ಯುದ್ಧದಲ್ಲಿ ಅರ್ಜುನನ ಧ್ವಜದಲ್ಲಿದ್ದು ಗರ್ಜ್ಜಿಸಿ ಶತ್ರುಗಳಿಗೆ ಸೋಲುಂಟು ಮಾಡುತ್ತೇನೆಂದು ವರವನ್ನು ಕೊಟ್ಟನು. ಅವನನ್ನು ವಂದಿಸಿದ ಭೀಮನು ಶೀಘ್ರವಾಗಿ ಸೌಗಂಧಿಕವನಕ್ಕೆ ಹೊರಟನು.

**ನರಾಗಮ್ಯಾಂ ನಲಿನೀಮೇತ್ಯ ತತ್ರ**
**ದೃಷ್ಟ್ವಾ ಪದ್ಮಾನ್ಯದ್ಭುತಾಕಾರವಂತಿ ।**
**ಹೈಮಾನಿ ದಿವ್ಯಾನ್ಯತಿಗಂಧವಂತಿ ಸಮಾಸದದ್**
**ವಾರ್ಯಮಾಣೋ ನರಾಶೈಃ ॥ ೨೮೦ ॥**

**ಪದಚ್ಛೇದ :- ನರಾಗಮ್ಯಾಂ, ನಲಿನೀಮ್, ಏತ್ಯ, ತತ್ರ, ದೃಷ್ಟ್ವಾ, ಪದ್ಮಾನಿ, ಅದ್ಭುತಾಕಾರವಂತಿ, ಹೈಮಾನಿ, ದಿವ್ಯಾನಿ, ಅತಿಗಂಧವಂತಿ, ಸಮಾಸದತ್, ವಾರ್ಯಮಾಣಃ, ನರಾಶೈಃ.**

**ಅರ್ಥ :- ನರಾಗಮ್ಯಾಂ** = ಮನುಷ್ಯರಿಂದ ಹೋಗಲು ಅಶಕ್ಯವಾದ; **ನಲಿನೀಂ** = ಸರೋವರವನ್ನು; **ಏತ್ಯ** = ಹೊಂದಿ; **ತತ್ರ** = ಅಲ್ಲಿ; **ಅದ್ಭುತಾಕಾರವಂತಿ** = ಅದ್ಭುತವಾದ ಆಕಾರವುಳ್ಳ; **ಹೈಮಾನಿ** = ಬಂಗಾರದ; **ದಿವ್ಯಾನಿ** = ದೇವಲೋಕಕ್ಕೆ ಸಂಬಂಧಿಸಿದ; **ಅತಿಗಂಧವಂತಿ** = ಅತ್ಯಂತಪರಿಮಳವುಳ್ಳ; **ಪದ್ಮಾನಿ** = ಕಮಲಗಳನ್ನು; **ದೃಷ್ಟ್ವಾ** = ನೋಡಿ; **ನರಾಶೈಃ** = ನರಭಕ್ಷರಿಂದ; **ವಾರ್ಯಮಾಣಃ ಅಪಿ** = ನಿವಾರಿಸಲ್ಪಡುವವನಾದರೂ ಕೂಡ; **ಸಮಾಸದದ್** = ಹೋದನು.

ತಾತ್ಪರ್ಯ :- ನರರಿಂದ ಅಗಮ್ಯವಾಗಿದ್ದ ಸರೋವರನ್ನು ಸೇರಿದ ಭೀಮನು ಅಲ್ಲಿ ದಿವ್ಯವಾದ ಪರಿಮಳಯುಕ್ತವಾದ ಬಂಗಾರದ ಅದ್ಭುತವಾದ

ಕಮಲಗಳನ್ನು ನೋಡಿದನು. ನರಭಕ್ಷಕರಾದ ರಾಕ್ಷಸರು ಹೋಮಬೇಡ ಎಂದು ನಿವಾರಿಸುತ್ತಿದರೂ ಹೋದನು.

**ತೇ ಭೀಮಮಾತ್ತಯುಧಮುಗ್ರರೂಪಂ**
**ಮಹಾಬಲಂ ರೂಪನವಾವತಾರಮ್ ।**
**ನ್ಯವಾರಯನ್ ಕ್ರೋಧವಶಾಃ ಸಮೇತಾಃ**
**ಶತಂ ಸಹಸ್ರಾಣ್ಯಯುತಾನಿ ಸಂಖ್ಯೇ ॥ ೨೮೧ ॥**

ಪದಚ್ಛೇದ :- ತೇ, ಭೀಮಮ್, ಆತ್ತಾಯುಧಂ, ಉಗ್ರರೂಪಂ, ಮಹಾಬಲಂ, ರೂಪನವಾವತಾರಂ, ನ್ಯವಾರಯನ್, ಕ್ರೋಧವಶಾಃ, ಸಮೇತಾಃ, ಶತಂ, ಸಹಸ್ರಾಣಿ, ಅಯುತಾನಿ, ಸಂಖ್ಯೇ.

**ಅರ್ಥ** :- **ಆತ್ತಯುಧಂ** = ಎತ್ತಲ್ಪಟ್ಟ ಆಯುಧವುಳ್ಳ; **ಉಗ್ರರೂಪಂ** = ಉಗ್ರವಾದ ರೂಪವುಳ್ಳ; **ಮಹಾಬಲಮ್** = ಮಹಾಬಲಿಷ್ಠನಾದ; **ರೂಪನವಾವತಾರಂ** = ರೂಪದಿಂದ ನೂತನ ಅವತಾರವುಳ್ಳ; **ಭೀಮಂ** = ಭೀಮನನ್ನು; **ಶತಂ ಸಹಸ್ರಾಣಿ ಅಯುತಾನಿ** = ಶತಕೋಟಿ ಸಂಖ್ಯೆಯ; **ಕ್ರೋಧವಶಾಃ** = ಕ್ರೋಧವಶರು; **ಸಮೇತಾಃ (ಸಂತಃ)** = ಒಟ್ಟಿಗೇ ಸೇರಿ; **ಸಂಖ್ಯೇ** = ಯುದ್ಧದಲ್ಲಿ; **ನ್ಯವಾರಯತ್** = ತಡೆದರು.

**ತಾತ್ಪರ್ಯ** :- ಆಯುಧವನ್ನು ಹಿಡಿದು ಉಗ್ರರೂಪನಾಗಿ ಬರುತ್ತಿರುವ ಸುಂದರರೂಪವುಳ್ಳ ಭೀಮನನ್ನು ನೋಡಿದ ಶತಕೋಟಿ ಸಂಖ್ಯೆಯಯಲ್ಲಿರುವ ಕ್ರೋಧವಶರಾಕ್ಷಸರು ಯುದ್ಧದಲ್ಲಿ ಭೀಮನನ್ನು ಎದುರಿಸಿದರು.

**ವರಾಚ್ಛಿವಸ್ಯೈವ ಪರ್ಯೈರಜೇಯಾಃ ಶಸ್ತ್ರಾಸ್ತ್ರ-**
**ವೃಷ್ಟಿಂ ಮುಮುಚುಃ ಸುಭೀಮಾಮ್ ।**
**ಭೀಮೇಖಿಲಜ್ಞೇ ತಪಸಾಂ ನಿಧಾನೇ**
**ಬಲೋದಧೌ ಶೈವಶಾಸ್ತ್ರಂ ವದಂತಃ ॥ ೨೮೨ ॥**

ಪದಚ್ಛೇದ :- ವರಾತ್, ಶಿವಸ್ಯ, ಏವ, ಪರ್ಯೈಃ, ಅಜೇಯಾಃ, ಶಸ್ತ್ರಾಸ್ತ್ರವೃಷ್ಟಿಂ, ಮುಮುಚುಃ, ಸುಭೀಮಾಂ, ಭೀಮೇ, ಅಖಿಲಜ್ಞೇ, ತಪಸಾಂ, ನಿಧಾನೇ, ಬಲೋದಧೌ, ಶೈವಶಾಸ್ತ್ರಂ, ವದಂತಃ.

**ಅರ್ಥ** :- **ಶೈವಶಾಸ್ತ್ರಂ** = ಶಿವಸರ್ವೋತ್ತಮತ್ವಪ್ರತಿಪಾದಕ ಶಾಸ್ತ್ರವನ್ನು; **ವದಂತಃ** = ಹೇಳುವ; **ಶಿವಸ್ಯ** = ಶಿವನ; **ವರಾತ್ ಏವ** = ವರದಿಂದಲೇ; **ಪರೈಃ** = ಮತ್ತೊಬ್ಬರಿಂದ; **ಅಜೇಯಾಃ** = ಗೆಲ್ಲಲು ಅಸಾಧ್ಯರಾಗಿದ್ದ ಕ್ರೋಧವಶರು; **ಅಖಿಲಜ್ಞೇ** = ಸರ್ವಜ್ಞನಾದ; **ತಪಸಾಂ** = ತಪಸ್ಸುಗಳಿಗೆ; **ನಿಧಾನೇ** = ಆಕರನಾದ; **ಬಲೋದಧೌ** = ಬಲದಲ್ಲಿ ಸಮುದ್ರದಂತಿರುವ; **ಭೀಮೇ** = ಭೀಮನ ಮೇಲೆ; **ಸುಭೀಮಾಂ** = ಅತ್ಯಂತಭಯಂಕರವಾದ; **ಶಸ್ತ್ರಾಸ್ತ್ರವೃಷ್ಟಿಂ** = ಅಸ್ತ್ರ ಶಸ್ತ್ರಗಳ ಮಳೆಯನ್ನೇ; **ಮುಮುಚುಃ** = ಸುರಿಸಿದರು.

**ತಾತ್ಪರ್ಯ** :- ಶಿವಸರ್ವೋತ್ತಮತ್ವವನ್ನು ಶಾಸ್ತ್ರಗಳಿಂದ ಪ್ರತಿಪಾದಿಸುವ ಆ ಕ್ರೋಧವಶರು ಶಿವನಿಂದ ಅವಧ್ಯತ್ವವರವನ್ನು ಪಡೆದಿದ್ದರು. ಅವರು ಸರ್ವಜ್ಞನಾದ, ತಪಸ್ಸಿಗೆ ಆಕರನಾದ, ಬಲದ ಸಮುದ್ರದಂತಿರುವ ಭೀಮನ ಮೇಲೇ ಶಸ್ತ್ರಾಸ್ತ್ರಗಳ ಮಳೆಯನ್ನು ಸುರಿಸಿದರು.

**ತಾನ್ ವೈಷ್ಣವೈರೇವ ಶಾಸ್ತ್ರೈಃ ಸ ಭೀಮೋ**
**ವಿಜಿತ್ಯ ಪೂರ್ವಂ ವಾಙ್ಮಯೇ ಸಂಗರೇ ತು ।**
**ಶಸ್ತ್ರಾಸ್ತ್ರವರ್ಷಸ್ಯ ಕುರ್ವನ್ ಪ್ರತೀಪಂ**
**ಜಘ್ನೇಽಖಿಲಾನ್ ಗದಯಾ ತೇಷು ವೀರಾನ್ ॥ ೨೮೩ ॥**

ಪದಚ್ಛೇದ :– ತಾನ್, ವೈಷ್ಣವೈಃ, ಏವ, ಶಾಸ್ತ್ರೈಃ, ಸಃ, ಭೀಮಃ, ವಿಜಿತ್ಯ, ಪೂರ್ವಂ, ವಾಙ್ಮಯೇ, ಸಂಗರೇ, ತು, ಶಸ್ತ್ರಾಸ್ತ್ರವರ್ಷಸ್ಯ, ಕುರ್ವನ್, ಪ್ರತೀಪಂ, ಜಘ್ನೇ, ಅಖಿಲಾನ್, ಗದಯಾ, ತೇಷು, ವೀರಾನ್.

**ಅರ್ಥ** :- **ಸಃ** = ಆ; **ಭೀಮಃ** = ಭೀಮನು; **ತಾನ್** = ಆ ಕ್ರೋಧವಶರನ್ನು; **ವೈಷ್ಣವೈಃ** = ವಿಷ್ಣುಸರ್ವೋತ್ತಮತ್ವ ಪ್ರತಿಪಾದಕ; **ಶಾಸ್ತ್ರೈಃ ಏವ** = ಶಾಸ್ತ್ರಗಳಿಂದಲೇ; **ಪೂರ್ವಂ** = ಮೊದಲಿಗೆ; **ವಾಙ್ಮಯೇ** = ವಾಕ್ಚತುರವಾದ; **ಸಂಗರೇ ತು** = ಯುದ್ಧದಲ್ಲಾದರೂ; **ವಿಜಿತ್ಯ** = ಗೆದ್ದು; **ಶಸ್ತ್ರಾಸ್ತ್ರವರ್ಷಸ್ಯ** = ಶಸ್ತ್ರಾಸ್ತ್ರಗಳ ಮಳೆಗೆ; **ಪ್ರತೀಪಂ** = ಪ್ರತೀಕಾರವನ್ನು; **ಕುರ್ವನ್ (ಸನ್)** = ಮಾಡುತ್ತಾ; **ತೇಷು** = ಆ ಕ್ರೋಧವಶರಲ್ಲಿ; **ಅಖಿಲಾನ್** = ಎಲ್ಲ; **ವೀರಾನ್** = ಪರಾಕ್ರಮಿಗಳನ್ನು; **ಗದಯಾ** = ಗದೆಯಿಂದ; **ಜಘ್ನೇ** = ಕೊಂದನು.

ತಾತ್ಪರ್ಯ :- ಆ ಭೀಮನು ಮೊದಲಿಗೆ ಕ್ರೋಧವಶರೊಂದಿಗೆ ವಾಗ್ಯುದ್ಧವನ್ನು ಮಾಡಿ ವೈಷ್ಣವಾಗಮಗಳಿಂದ ಅವರನ್ನು ಗೆದ್ದನು. ನಂತರ ಅವರಲ್ಲಿ ಪ್ರಮುಖರನ್ನು ಗದೆಯಿಂದ ಕೊಂದನು.

**ವಾತೇನ ಕುಂತ್ಯಾಂ ಬಲವಾನ್ ಸ ಜಾತಃ**
**ಶೂರಸ್ತಪಸ್ವೀ ದ್ವಿಷತಾಂ ನಿಹಂತಾ ।**
**ಸತ್ಯೇ ಚ ಧರ್ಮೇ ಚ ರತಃ ಸದೈವ**
**ಪರಾಕ್ರಮೇ ಶತ್ರುಭಿರಪ್ರಧೃಷ್ಯಃ ॥ ೨೮೪ ॥**

**ಪದಚ್ಛೇದ :-** ವಾತೇನ, ಕುಂತ್ಯಾಂ, ಬಲವಾನ್, ಸಃ, ಜಾತಃ, ಶೂರಃ, ತಪಸ್ವೀ, ದ್ವಿಷತಾಂ, ನಿಹಂತಾ, ಸತ್ಯೇ, ಚ, ಧರ್ಮೇ, ಚ, ರತಃ, ಸದಾ, ಏವ, ಪರಾಕ್ರಮೇ, ಶತ್ರುಭಿರಪ್ರಧೃಷ್ಯಃ.

**ಅರ್ಥ :-** **ವಾತೇನ** = ಮುಖ್ಯಪ್ರಾಣನಿಂದ; **ಕುಂತ್ಯಾಂ** = ಕುಂತೀದೇವಿಯಲ್ಲಿ; **ಜಾತಃ** = ಹುಟ್ಟಿದ; **ಸಃ** = ಆ ಭೀಮನು; **ಬಲವಾನ್** = ಬಲವಂತನು; **ಶೂರಃ** = ಪರಾಕ್ರಮಿಯೂ; **ತಪಸ್ವೀ** = ತಪಸ್ವಿಯೂ; **ದ್ವಿಷತಾಂ** = ಶತ್ರುಗಳ; **ನಿಹಂತಾ** = ಸಂಹಾರಕನೂ; **ಸತ್ಯೇ ಚ** = ಸತ್ಯದಲ್ಲೂ; **ಧರ್ಮೇ ಚ** = ಧರ್ಮದಲ್ಲೂ; **ಸದಾ ಏವ** = ಎಂದಿಗೂ; **ರತಹ್** = ಆಸಕ್ತನಾದ; **ಪರಾಕ್ರಮೇ** = ಪರಾಕ್ರಮದಲ್ಲಿ; **ಶತ್ರುಭಿಃ** = ಶತ್ರುಗಳಿಂದ; **ಅಪ್ರಧೃಷ್ಯಃ** = ಎದುರಿಸಲಶಕ್ಯನು; **(ಅಸೀತ್)** = ಆಗಿದ್ದನು.

ತಾತ್ಪರ್ಯ :- ಮುಖ್ಯಪ್ರಾಣನಿಂದ ಕುಂತಿಯಲ್ಲಿ ಹುಟ್ಟಿದ ಭೀಮನು ಶೂರನು ಬಲವಂತನೂ ತಪಸ್ವಿಯೂ ಸತ್ಯಧರ್ಮಗಳಲ್ಲಿ ಆಸಕ್ತನೂ, ಶತ್ರುಗಳಿಂದ ಪರಾಕ್ರಮದಲ್ಲಿ ಎದುರಿಸಲಶ್ಯಕ್ಯನೂ ಆಗಿದ್ದನು.

**ತತ್ರಾಪರಾಂಶ್ಚೈವ ಬಹೂನಸತ್ಯಂ**
**ನಿರೀಶ್ವರಂ ಚಾಪ್ರತಿಷ್ಠಂ ಚ ಲೋಕಮ್ ।**
**ಸಿದ್ಧೋಹಮೀಶೋಹಮಿತಿ ಬ್ರುವಾಣಾನ್ ಗುಣಾನ್**
**ವಿಷ್ಣೋಃ ಖ್ಯಾಪಯನ್ ವಾದತೋಜೈತ್ ॥ ೨೮೫ ॥**

**ಪದಚ್ಛೇದ** :- ತತ್ರ, ಅಪರಾನ್, ಚ, ಏವ, ಬಹೂನ್, ಅಸತ್ಯಂ, ನಿರೀಶ್ವರಂ, ಚ, ಅಪ್ರತಿಷ್ಠಂ, ಚ, ಲೋಕಂ, ಸಿದ್ಧಃ, ಅಹಮ್, ಈಶಃ, ಅಹಮ್, ಇತಿ, ಬ್ರುವಾಣಾನ್, ಗುಣಾನ್, ವಿಷ್ಣೋಃ, ಖ್ಯಾಪಯನ್, ವಾದತಃ, ಅಜೈತ್.

**ಅರ್ಥ** :- **ತತ್ರ** = ಅಲ್ಲಿ; **ಲೋಕಂ** = ಲೋಕವನ್ನು; **ಅಸತ್ಯಂ** = ಅಸತ್ಯವನ್ನಾಗಿ; **ಚ** = ಮತ್ತು; **ನಿರೀಶ್ವರಂ** = ಈಶ್ವರಹಿತವನ್ನಾಗಿ; **ಚ** = ಮತ್ತು; **ಅಪ್ರತಿಷ್ಠಂ** = ಆಶ್ರಯರಹಿತವನ್ನಾಗಿ; **ಅಹಂ** = ನಾನು; **ಸಿದ್ಧಃ** = ಸಿದ್ಧನು; **ಅಹಂ** = ನಾನು; **ಈಶಃ** = ದೇವರು; **ಇತಿ** = ಎಂದು; **ಬ್ರುವಾಣಾನ್** = ಹೇಳುವ; **ಬಹೂನ್** = ಬಹಳರಾದ; **ಅಪರಾನ್ ಚ** = ಇತರ ರಾಕ್ಷಸರನ್ನೂ ಕೂಡ; **ವಿಷ್ಣೋಃ** = ವಿಷ್ಣುವಿನ; **ಗುಣಾನ್** = ಗುಣಗಳನ್ನು; **ಖ್ಯಾಪಾಯನ್** = ಪ್ರತಿಪಾದಿಸುತ್ತಾ; **ವಾದತಃ** = ವಾದದಿಂದ; **ಅಜಿತ್** = ಗೆದ್ದನು.

**ತಾತ್ಪರ್ಯ** :- ಭೀಮನು ಕ್ರೋಧವಶರನ್ನು ಮಾತ್ರವಲ್ಲದೆ ಇತರ ರಾಕ್ಷಸರನ್ನೂ ವಾದದಲ್ಲಿ ಗೆದ್ದನು. ಅಲ್ಲಿ ಜಗತ್ತು ಸುಳ್ಳು, ಅದಕ್ಕೆ ಸ್ವಾಮಿಯಾದವನು ಇಲ್ಲ, ಜಗತ್ತಿಗೆ ಆಶ್ರಯವಿಲ್ಲ, ನಾನು ಸಿದ್ಧ, ನಾನು ದೇವರು ಇತ್ಯಾದಿಯಾಗಿ ಹೇಳುವ ಬಹುಮಂದಿ ರಾಕ್ಷಸರನ್ನು ವಿಷ್ಣುವಿನ ಗುಣಗಳನ್ನು ಪ್ರತಿಪಾದಿಸುತ್ತಾ ವಾದದಲ್ಲಿ ಗೆದ್ದನು.

**ಭಿನ್ನಂ ವಿಷ್ಣುಮಧಿಕಂ ಸರ್ವತಶ್ಚ ಬ್ರುವನ್**
**ಪ್ರವೀರಾನ್ ಲಕ್ಷಮೇಷಾಂ ನಿಜಘ್ನೇ ।**
**ತೇ ತಸ್ಯ ವೀರ್ಯಂ ಚ ಬಲಂ ಚ ದೃಷ್ಟ್ವಾ**
**ವಿದ್ಯಾಬಲಂ ಬಾಹುಬಲಂ ತಥೈವ ।**
**ಅಶುಕ್ನುವಂತಃ ಸಹಿತಾಃ ಸಮಸ್ತಾ ಹತ-**
**ಪ್ರವೀರಾಃ ಸಹಸಾ ನಿವೃತ್ತಾಃ ॥ ೨೮೬ ॥**

**ಪದಚ್ಛೇದ** :- ಭಿನ್ನಂ, ವಿಷ್ಣುಮ್, ಅಧಿಕಂ, ಸರ್ವತಃ, ಚ, ಬ್ರುವನ್, ಪ್ರವೀರಾನ್, ಲಕ್ಷಮೇಷಾಂ, ನಿಜಘ್ನೇ, ತೇ, ತಸ್ಯ, ವೀರ್ಯಂ, ಚ, ಬಲಂ, ಚ, ದೃಷ್ಟ್ವಾ, ವಿದ್ಯಾಬಲಂ, ಬಾಹುಬಲಂ, ತಥಾ, ಏವ, ಅಶಕ್ನುವಂತಃ, ಸಹಿತಾಃ, ಸಮಸ್ತಾಃ, ಹತಪ್ರವೀರಾಃ, ಸಹಸಾ, ನಿವೃತ್ತಾಃ.

**ಅರ್ಥ** :- **ವಿಷ್ಣುಂ** = ವಿಷ್ಣುವನ್ನು; **ಸರ್ವತಃ ಚ** = ಎಲ್ಲಕ್ಕಿಂತಲೂ; **ಭಿನ್ನಂ** = ಭಿನ್ನನನ್ನಾಗಿ; **ಅಧಿಕಂ** = ಅಧಿಕನನ್ನಾಗಿ; **ಬ್ರುವನ್ (ಸನ್)** = ಹೇಳುತ್ತಾ; **ಏಷಾಂ** = ಈ ರಾಕ್ಷಸರ; **ಲಕ್ಷಂ** = ಲಕ್ಷದಷ್ಟು; **ಪ್ರವೀರಾನ್** = ಪರಾಕ್ರಮಿಗಳನ್ನು; **ನಿಜಘ್ನೇ** = ಕೊಂದನು. **ತೇ** = ಆ ರಾಕ್ಷಸರಾದರೂ; **ತಸ್ಯ** = ಆ ಭೀಮನ; **ವೀರ್ಯಂ ಚ** = ಪರಾಕ್ರಮವನ್ನೂ; **ಬಲಂ ಚ** = ಬಲವನ್ನೂ; **ವಿದ್ಯಾಬಲಂ** = ವಿದ್ಯೆಯಬಲವನ್ನೂ; **ತಥಾ ಏವ** = ಹಾಗೆಯೇ; **ಬಾಹುಬಲಂ** = ಬಾಹುಬಲವನ್ನೂ; **ದೃಷ್ಟ್ವಾ** = ನೋಡಿ; **ಸಹಿತಾಃ** = ಒಟ್ಟಾದ; **ಸಮಸ್ತಾಃ** = ಎಲ್ಲ ರಾಕ್ಷಸರೂ; **(ಯೋದ್ಧುಂ)** = ಯುದ್ಧಮಾಡಲು; **ಅಶಕ್ನುವಂತಃ** = ಶಕ್ತರಾಗದೇ; **ಹತಪ್ರವೀರಾಃ (ಸಂತಃ)** = ನಾಶವಾದ ಪರಾಕ್ರಮವುಳ್ಳವರಾಗಿ; **ಸಹಸಾ** = ಒಮ್ಮೆಲೇ; **ನಿವೃತ್ತಾಃ** = ಓಡಿಹೋದರು.

**ತಾತ್ಪರ್ಯ** :- ಭೀಮನು ವಿಷ್ಣುವು ಸಮಸ್ತಜಗತ್ತಿಗಿಂತಭಿನ್ನನು, ಅವನಿಗಿಂತ ಧಿಕರು ಯಾರೂ ಇಲ್ಲ ಇಂದು ಸಮರ್ಥಿಸಿ ಅವರಲ್ಲಿ ಒಂದುಲಕ್ಷ ಪರಾಕ್ರಿಮಗಳನ್ನು ಕೊಂದನು. ಉಳಿದವರೆಲ್ಲರೂ ಭೀಮನ ಬಾಹುಬಲ ಮತ್ತು ವಿದ್ಯಾಬಲಗಳನ್ನು ನೋಡಿ ಯುದ್ಧಮಾಡಲಾಗದೇ ಹೆದರಿ ಓಡಿಹೋದರು.

**ವಿಕ್ರಮ್ಯ ತಾನ್ ಗದಯಾಸೌ ನಿಹತ್ಯ**
**ವಿದ್ರಾವ್ಯ ಸರ್ವಾನ್ ನಲಿನೀಂ ಪ್ರವಿಶ್ಯ ।**
**ಪೀತ್ವಾಮೃತಾಂಭಶ್ಚ ತತೋಂಬುಜಾನಿ**
**ದಿವ್ಯಾನಿ ಜಗ್ರಾಹ ಕುರುಪ್ರವೀರಃ ॥ ೨೮೭ ॥**

ಪದಚ್ಛೇದ :– ವಿಕ್ರಮ್ಯ, ತಾನ್, ಗದಯಾ, ಅಸೌ, ನಿಹತ್ಯ, ವಿದ್ರಾವ್ಯ, ಸರ್ವಾನ್, ನಲಿನೀಂ, ಪ್ರವಿಶ್ಯ, ಪೀತ್ವಾ, ಅಮೃತಾಂಭಃ, ಚ, ತತಹ್, ಅಂಬುಜಾನಿ, ದಿವ್ಯಾನಿ, ಜಗ್ರಾಹ, ಕುರುಪ್ರವೀರಃ.

**ಅರ್ಥ** :- **ಕುರುಪ್ರವೀರಃ** = ಕುರುಗಳಲ್ಲಿ ಶ್ರೇಷ್ಠನಾದ; **ಅಸೌ** = ಈ ಭೀಮನು; **ತಾನ್** = ಆ ರಾಕ್ಷಸರನ್ನು; **ವಿಕ್ರಮ್ಯ** = ಹಿಂದಿನಿಂದ ಆಕ್ರಮಿಸಿ; **ಗದಯಾ** = ಗದೆಯಿಂದ; **ನಿಹತ್ಯ** = ಹೊಡೆದು; **ಸರ್ವಾನ್** = ಎಲ್ಲರನ್ನೂ; **ವಿದ್ರಾವ್ಯ** = ಓಡಿಸಿ; **ನಲಿನೀಂ** = ಸರೋವರವನ್ನು; **ಪ್ರವಿಶ್ಯ** = ಪ್ರವೇಶಿಸಿ; **ಅಮೃತಾಂಭಃ ಚ** = ಅಮೃತಸಮಾನವಾದ ನೀರನ್ನಾದರೂ; **ಪೀತ್ವಾ** = ಕುಡಿದು; **ತತಃ** = ಆ ನಂತರ; **ದಿವ್ಯಾನಿ** = ದೇವತಾಸಂಬಂಧಿಯಾದ; **ಅಂಬುಜಾನಿ** = ಕಮಲಗಳನ್ನು; **ಜಗ್ರಾಹ** = ತೆಗೆದುಕೊಂಡನು.

ತಾತ್ಪರ್ಯ :- ಓಡುತ್ತಿದ್ದ ರಾಕ್ಷಸರನ್ನು ಅಟ್ಟಿಸಿಕೊಂಡು ಹೋದ ಭೀಮನು ಅವರನ್ನು ಗದೆಯಿಂದ ಹೊಡೆದು ಮತ್ತೇ ಓಡಿಸಿದನು. ನಂತರ ಸರೋವರಕ್ಕೆ ಬಂದು ಅಮೃತತುಲ್ಯವಾದ ನೀರನ್ನು ಕುಡಿದು ದೈವಿಕವಾದ ಕಮಲಗಳನ್ನು ತೆಗೆದುಕೊಂಡು ಹೊರಟನು.

**ಅಥೋ ಕಲಹಶಂಸೀನಿ ನಿಮಿತ್ತಾನಿ ಯುಧಿಷ್ಠಿರಃ ।**
**ದೃಷ್ಟ್ವಾ ಕೃಷ್ಣಾಮಪೃಚ್ಛಚ್ಚ ಕ್ವ ಭೀಮ ಇತಿ ದೀನಧೀಃ ॥ ೨೮೮ ॥**

ಪದಚ್ಛೇದ :- ಅಥೋ, ಕಲಹಶಂಸೀನಿ, ನಿಮಿತ್ತಾನಿ, ಯುಧಿಷ್ಠಿರಃ, ದೃಷ್ಟ್ವಾ, ಕೃಷ್ಣಾಮ್, ಅಪೃಚ್ಛತ್, ಚ, ಕ್ವ, ಭೀಮಃ, ಇತಿ, ದೀನಧೀಃ.

ಅರ್ಥ :- **ಅಥೋ** = ಆ ನಂತರ; **ಯುಧಿಷ್ಠಿರಃ** = ಯುಧಿಷ್ಠಿರನು; **ಕಲಹಶಂಸೀನಿ** = ಯುದ್ಧಸೂಚಕವಾದ; **ನಿಮಿತ್ತಾನಿ** = ಶಕುನಗಳನ್ನು; **ದೃಷ್ಟ್ವಾ** = ನೋಡಿ; **ದೀನಧೀಃ (ಸನ್)** = ವ್ಯಥೆಗೊಂಡಮನಸ್ಸುಳ್ಳವನಾಗಿ; **ಕೃಷ್ಣಾಂ** = ದ್ರೌಪದಿಯನ್ನು; **ಭೀಮಃ** = ಭೀಮನು; **ಕ್ವ** = ಎಲ್ಲಿ; **ಇತಿ** = ಎಂದು; **ಅಪೃಚ್ಛತ್ ಚ** = ಪ್ರಶ್ನಿಸಿದನಷ್ಟೆ.

ತಾತ್ಪರ್ಯ :- ಆ ನಂತರ ಯುಧಿಷ್ಠಿನಿ ಯುದ್ಧಸೂಚಕಗಳಾದ ಕೆಲವು ಶಕುನಗಳು ಕಾಣುತ್ತವೆ. ಅದರಿಂದ ವ್ಯಥೆಗೊಂಡ ಯುಧಿಷ್ಠಿರನು ದ್ರೌಪದಿಯನ್ನು ಭೀಮನೆಲ್ಲಿ ಎಂದು ಪ್ರಶ್ನಿಸುತ್ತಾನೆ.

**ಸೌಗಂಧಿಕಾರ್ಥಂ ಯಾತಂ ತಂ ಶ್ರುತ್ವಾ ಕೃಷ್ಣಾಮುಖಾನ್ನೃಪಃ ।**
**ಆರುಹ್ಯ ರಾಕ್ಷಸಶ್ರೇಷ್ಠಾನ್ ಕೃಷ್ಣಯಾ ಭ್ರಾತೃಭಿಃ ಸಹ ॥ ೨೮೯ ॥**

**ಯಯೌ ವೃಕೋದರೇ ಯತ್ರ ದೃಷ್ಟ್ವಾ ಚೈನಮವಸ್ಥಿತಮ್ ।**
**ಉವಾಚ ಮೈವಮಿತ್ಯೇನಂ ಭೀತೋ ಗಿರಿಶಕೋಪತಃ ॥ ೨೯೦ ॥**

ಪದಚ್ಛೇದ :- ಸೌಗಂಧಿಕಾರ್ಥಂ, ಯಾತಂ, ತಂ, ಶ್ರುತ್ವಾ, ಕೃಷ್ಣಾನ್ನೃಪಾತ್, ನೃಪಃ, ಆರುಹ್ಯ, ರಾಕ್ಷಾಸಶ್ರೇಷ್ಠಾನ್, ಕೃಷ್ಣಯಾ, ಭ್ರಾತೃಭಿಃ, ಸಹ, ಯಯೌ, ವೃಕೋದರೇ, ಯತ್ರ, ದೃಷ್ಟ್ವಾ, ಚ, ಏನಮ್, ಅವಸ್ಥಿತಮ್, ಉವಾಚ, ಮಾ, ಏವಮ್, ಇತಿ, ಏನಂ, ಭೀತಃ, ಗಿರಿಶಕೋಪತಃ.

**ಅರ್ಥ** :- **ನೃಪಃ** = ರಾಜನಾದ ಯುಧಿಷ್ಠಿರನು; **ಕೃಷ್ಣಾಮುಖಾತ್** = ದ್ರೌಪದಿಯಬಾಯಿಂದ; **ತಂ** = ಆ ಭೀಮನನ್ನು; **ಸೌಗಂಧಿಕಾರ್ಥಂ** = ಸೌಗಂಧಿಕಾಪುಷ್ಪಕ್ಕಾಗಿ; **ಯಾತಂ** = ಹೋದವನನ್ನಾಗಿ; **ಶ್ರುತ್ವಾ** = ಕೇಳಿ; **ಕೃಷ್ಣಯಾ** = ದ್ರೌಪದಿಯಿಂದ; **ಭ್ರಾತೃಭಿಃ** = ತಮ್ಮಂದಿರಿಂದ; **ಸಹ** = ಕೂಡಿಕೊಂಡು; **ರಾಕ್ಷಶ್ರೇಷ್ಠಾನ್** = ರಾಕ್ಷಸಶ್ರೇಷ್ಠರನ್ನು; **ಆರುಹ್ಯ** = ಏರಿ; **ಯತ್ರ** = ಎಲ್ಲಿ; **ವೃಕೋದರಃ (ಆಸೀತ್)** = ಭೀಮನು ಇದ್ದನೋ; **(ತತ್ರ)** = ಅಲ್ಲಿಗೆ; **ಯಯೌ** = ಹೋದನು. **ಚ** = ಮತ್ತು; **ಅವಸ್ಥಿತಂ** = ಅಲ್ಲಿದ್ದ; **ಏನಂ** = ಈ ಭೀಮನನ್ನು; **ದೃಷ್ಟ್ವಾ** = ನೋಡಿ; **ಗಿರಿಶಕೋಪತಃ** = ಶಿವನಕೋಪದ ಭಯದಿಂದ; **ಭೀತಃ (ಸನ್)** = ಭಯಗೊಂದವನಾಗಿ; **ಏವಂ** **ಮಾ** = ಹೀಗೆ ಮಾಡಬೇಡ; **ಇತಿ** = ಎಂದು; **ಉವಾಚ** = ಹೇಳಿದನು.

**ತಾತ್ಪರ್ಯ** :- ಭೀಮನು ಸೌಗಂಧಿಕಾಪುಷ್ಪವನ್ನು ತರಲು ಹೋಗಿದ್ದಾನೆ ಎಂಬ ದ್ರೌಪದಿಯ ಮಾತನ್ನು ಕೇಳಿ ದ್ರೌಪದಿ ಮತ್ತು ತಮ್ಮಂದಿರನ್ನು ಕರೆದುಕೊಂಡು ರಾಕ್ಷಸಶ್ರೇಷ್ಠರನ್ನೇರಿ ಭೀಮನಿದ್ದಲ್ಲಿಗೆ ಹೊದನು. ಅಲ್ಲಿ ಭೀಮನನ್ನು ನೋಡಿ ಶಿವನು ಕೋಪಗೊಂಡಾನೆಂಬ ಭಯದಿಂದ ಹೀಗೆ ಮಾಡಬೇಡ ಎಂದು ಹೇಳಿದ.

**ವಿಶೇಷವಿಚಾರ** :- ಶ್ಲೋಕದಲ್ಲಿ ಭ್ರಾತೃಭಿಃ ಸಹ ತಮ್ಮಂದಿರೊಂದಿಗೆ ಎಂದು ಬಹುವಚನ ಪ್ರಯೋಗವಿದೆ. ಆದರೆ ಭೀಮನು ಸೌಗಂಧಿಕವನದಲ್ಲಿದ್ದ. ಅರ್ಜುನನು ಸ್ವರ್ಗದಲ್ಲಿದ್ದ. ಆದ್ದರಿಂದ ಬಹುವಚನ ಪ್ರಯೋಗವು ಅಯುಕ್ತವೆಂದು ಶಂಕೆಬರಬಹುದು. ಆದರೆ ಯುಧಿಷ್ಠಿರನೊಂದಿಗೆ ಆಶ್ರಮದಲ್ಲಿದ್ದ ಮುನಿಗಳೂ ಹೊರಡುತ್ತಾರೆ. ಅವರಲ್ಲಿ ಭ್ರಾತೃವಾತ್ಸಲ್ಯವು ಯುಧಿಷ್ಠಿರನಿಗಿದ್ದಕಾರಣ ಭ್ರಾತೃಭಿಃ ಎಂದು ಆಚಾರ್ಯರು ಬಹುವಚನ ಪ್ರಯೋಗಮಾಡಿದ್ದಾರೆ.

**ದೇವೇಭ್ಯೋ ಮರಣಾದ್ ಭೀತಾ ರಾಕ್ಷಸಾ ವಿತ್ತಪಾಜ್ಞಯಾ ।**
**ತದೀಯಂ ನಲಿನೀಂ ತೇ ಹಿ ರಕ್ಷಂತ್ಯಸ್ಯಾಶ್ರಯೋ ಹರಃ ।**
**ಜಾನನ್ ವಿತ್ತೇಶ್ವರೋ ಭೀಮಮಾಹಾತ್ಮ್ಯಂ ನ ಚುಕೋಪ ಹ ॥ ೨೯೧ ॥**

ಪದಚ್ಛೇದ :- **ದೇವೇಭ್ಯಃ, ಮರಣಾತ್, ಭೀತಾಃ, ರಾಕ್ಷಸಾಃ, ವಿತ್ತಪಾಜ್ಞಯಾ, ತದೀಯಂ, ನಲಿನೀಂ, ತೇ, ಹಿ, ರಕ್ಷಂತಿ, ಅಸ್ಯ, ಆಶ್ರಯಃ, ಹರಃ, ಜಾನನ್, ವಿತ್ತೇಶ್ವರಃ, ಭೀಮಮಾಹಾತ್ಮ್ಯಂ, ನ, ಚುಕೋಪ, ಹ.**

**ಅರ್ಥ** :- **ದೇವೇಭ್ಯಃ** = ದೇವತೆಗಳಿಂದ; **ಮರಣಾತ್** = ಸಾವಿನಿಂದ; **ಭೀತಾಃ** = ಹೆದರಿದ; **ತೇ** = ಆ; **ರಾಕ್ಷಸಾಃ** = ರಾಕ್ಷಸರು; **ವಿತ್ತಪಾಜ್ಞಯಾ** = ಕುಬೇರನ ಅಪ್ಪಣೆಯಿಂದ; **ತದೀಯಂ** = ಅವನಿಗೆ ಸಂಬಂಧಿಸಿದ; **ನಲಿನೀಂ** = ಸರೋವರವನ್ನು; **ರಕ್ಷಂತಿ ಹಿ** = ರಕ್ಷಿಸುತ್ತಿದ್ದರಷ್ಟೆ. **ಅಸ್ಯ** = ಈ ಕುಬೇರನಿಗೆ; **ಆಶ್ರಯಃ** = ಆಶ್ರಯನಾದವನು; **ಹರಃ** = ಶಿವನು. **ಭೀಮಮಾಹಾತ್ಮ್ಯಂ** = ಭೀಮನ ಮಹಿಮೆಯನ್ನು; **ಜಾನನ್** = ತಿಳಿದ; **ವಿತ್ತೇಶ್ವರಃ** = ಕುಬೇರನು; **ನ ಚುಕೋಪ ಹ** = ಸಿಟ್ಟಗಲಿಲ್ಲವಷ್ಟೆ.

**ತಾತ್ಪರ್ಯ** :- ದೇವತೆಗಳು ಸಂಹರಿಸುತ್ತಾರೆಂಬ ಭಯವಿದ್ದ ರಾಕ್ಷಸರು ಕುಬೇರನನ್ನು ಆಶ್ರಯಿಸಿ ಅವನ ಸರೋವರವನ್ನು ಕಾಯುತ್ತ ಇಲ್ಲಿದ್ದರು. ಆ ಕುಬೇರನಿಗೆ ರಕ್ಷಕನಾದವನು ಶಿವನು. ಆದರೆ ಭೀಮನ ಮಹಿಮೆಯನ್ನರಿತ ಕುಬೇರನು ಸಿಟ್ಟಾಗಲಿಲ್ಲ.

ವಿಶೇಷವಿಚಾರ :- ರಾಕ್ಷಸರಿಗೆ ದೇವತೆಗಳ ಭಯವಿದ್ದರೂ ಕುಬೇರನ ಸೇವಕರಾದ್ದರಿಂದ ಇಲ್ಲಿ ಅವರಿಗೆ ಭಯವಿರಲಿಲ್ಲ- ವಾದಿರಾಜೀಯ. ಈ ಸರೋವರಕ್ಕೆ ಒಡೆಯನಾದ ಕುಬೇರನಿಗೆ ಶಿವನು ರಕ್ಷಕನಾದ್ದರಿಂದ ಶಿವನು ಸಿಟ್ಟಾದಾನು ಎಂದು ಯುಧಿಷ್ಠಿರನು ಹೆದರಿದ್ದನು.

**ವಸತ್ಸು ತತ್ರ ಪಾರ್ಥೇಷು ಪುನಃ ಕತಿಪಯೈರ್ದಿನೈಃ ।**
**ಉವಾಚ ಭೀಮಸೇನಸ್ಯ ಯಶೋಧರ್ಮಾಭಿವೃದ್ಧಯೇ ॥ ೨೯೨ ॥**

**ಪಂಚವರ್ಣಾನಿ ಪುಷ್ಪಾಣಿ ಕೃಷ್ಣಾ ವೀಕ್ಷ್ಯಾಹೃತಾನಿ ತು ।**
**ಮಾರುತೇನ ಕುಬೇರಸ್ಯ ಗೃಹಾನ್ನಭಿರಗಮ್ಯತಃ ॥ ೨೯೩ ॥**

ಪದಚ್ಛೇದ :- ವಸತ್ಸು, ತತ್ರ, ಪಾರ್ಥೇಷು, ಪುನಃ, ಕತಿಪಯೈಃ, ದಿನೈಃ, ಉವಾಚ, ಭೀಮಸೇನಸ್ಯ, ಯಶೋಧರ್ಮಾಭಿವೃದ್ಧಯೇ, ಪಂಚವರ್ಣಾನಿ, ಪುಷ್ಪಾಣಿ, ಕೃಷ್ಣಾ ವೀಕ್ಷ್ಯ, ಹೃತಾನಿ, ತು, ಮಾರುತೇನ, ಕುಬೇರಸ್ಯ, ಗೃಹಾತ್, ನೃಭಿಃ, ಅಗಮ್ಯತಃ.

**ಅರ್ಥ** :- **ತತ್ರ** = ಆ ಗಂಧಮಾದನ ಪರ್ವತದಲ್ಲಿ; **ಪಾರ್ಥೇಷು** = ಪಾಂಡವರು; **ವಸತ್ಸು (ಸತ್ಸು)** = ವಾಸಮಾಡುತ್ತಿರಲು; **ಪುನಃ** = ಮತ್ತೆ; **ಕತಿಪಯೈಃ** = ಕೆಲವು; **ದಿನೈಃ** = ದಿನಗಳಲ್ಲಿ; **ಕೃಷ್ಣಾ** = ದ್ರೌಪದಿಯು; **ನೃಭಿಃ** = ಮನುಷ್ಯರಿಂದ; **ಅಗಮ್ಯತಃ** = ಹೋಗಲು ಶಕ್ಯವಾಗದ; **ಕುಬೇರಸ್ಯ** = ಕುಬೇರನ; **ಗೃಹಾತ್** = ಮನೆಯಿಂದ; **ಮಾರುತೇನ** = ಗಾಳಿಯಿಂದ; **ಆಹೃತಾನಿ** = ತರಲ್ಪಟ್ಟ; **ಪಂಚವರ್ಣಾನಿ** = ಐದುಬಣ್ಣಗಳುಳ್ಳ; **ಪುಷ್ಪಾಣಿ ತು** = ಹೂವುಗಳನ್ನಾದರೂ; **ವೀಕ್ಷ್ಯ** = ನೋಡಿ; **ಭೀಮಸೇನಸ್ಯ** = ಭೀಮನಿಗೆ; **ಯಶೋಧರ್ಮಾಭಿವೃದ್ಧಯೇ** = ಕೀರ್ತಿ ಮತ್ತು ಪುಣ್ಯ ಹೆಚ್ಚಿಸುವುದಕ್ಕಾಗಿ; **ಉವಾಚ** = ಹೇಳಿದಳು.

**ತಾತ್ಪರ್ಯ** :- ಹೀಗೆ ಗಂಧಮಾಧನ ಪರ್ವತದಲ್ಲಿ ಪಾಂಡವರು ವಾಸಮಾಡುತ್ತಿರಲು ಒಮ್ಮೆ ಗಾಳಿಯಿಂದ ಐದುಬಣ್ಣವುಳ್ಳ ಹೂವುಗಳು ಹಾರಿಕೊಂಡು ದ್ರೌಪದಿಯಿದ್ದಲ್ಲಿಗೆ ಬಂದಿತು. ಮನುಷ್ಯರಿಗೆ ಅಗಮ್ಯವಾದ ಕುಬೇರನ ಮನೆಯಿಂದ ಹಾರಿಬಂದ ಅದನ್ನು ನೋಡಿ ದ್ರೌಪದಿಯು ಭೀಮನ ಯಶಸ್ಸು ಮತ್ತು ಪುಣ್ಯವನ್ನು ಮತ್ತಷ್ಟು ಅಭಿವೃದ್ಧಿಗೊಳಿಸಲು ಹೀಗೆ ಹೇಳಿದಳು.

**ವಿಶೇಷವಿಚಾರ** :- ಹಿಂದೆ ಹೇಳಿದ್ದ ಸ್ಥಳವು ಗಂಧಮಾದನ ಪರ್ವತದಲ್ಲಿಯೇ ಸರೋವರದಲ್ಲಿಇದ್ದಿತು. ಅದಕ್ಕೆ ಒಂದೇ ವರ್ಣ. ಈಗ ಹೇಳುತ್ತಿರುವುದು ಐದುಬಣ್ಣವುಳ್ಳ ಪುಷ್ಪವು ಮೇರುಪರ್ವತದ ಮೇಲಿದ್ದ ಸರೋವರದಿಂದ ಹಾರಿಬಂದದ್ದು- ವಾದಿರಾಜೀಯ.

**ಅಗಮ್ಯೋಽಯಂ ಗಿರಿಃ ಸರ್ವೈಃ ಕುಬೇರೇಣಾಭಿಪಾಲಿತಃ ।**
**ಅದ್ಯ ತ್ವಯೈವ ಗಂತವ್ಯೋ ವಿಧೂಯಾಖಿಲರಾಕ್ಷಸಾನ್ ॥ ೨೯೪ ॥**

ಪದಚ್ಛೇದ :- ಅಗಮ್ಯಹ್, ಅಯಮ್, ಗಿರಿಃ, ಸರ್ವೈಃ, ಕುಬೇರೇಣ, ಅಭಿಪಾಲಿತಃ, ಅದ್ಯ, ತ್ವಯಾ, ಏವ, ಗಮ್ತವ್ಯಃ, ವಿಧೂಯ, ಅಖಿಲರಾಕ್ಷಸಾನ್.

**ಅರ್ಥ** :- **ಕುಬೇರೇಣ** = ಕುಬೇರನಿಂದ; **ಅಭಿಪಾಲಿತಃ** = ಸುತ್ತಲೂ ರಕ್ಷಿಸಲ್ಪಟ್ಟ; **ಅಯಂಅವ್** = ಈ; **ಗಿರಿಃ** = ಪರ್ವತವು; **ಸರ್ವೈಃ** = ಎಲ್ಲರಿಂದಲೂ; **ಅಗಮ್ಯಃ** = ಅಗಮ್ಯವು. **ಅದ್ಯ** = ಇಂದು; **ಅಖಿಲರಾಕ್ಷಸಾನ್** = ಎಲ್ಲರಾಕ್ಷಸರನ್ನೂ; **ವಿಧೂಯ** = ನಾಶಮಾಡಿ; **ತ್ವಯಾ ಏವ** = ನಿನ್ನಿಂದಲೇ; **ಗಂತವ್ಯಮ್** = ಹೋಗಲ್ಪಡಬೇಕು.

ತಾತ್ಪರ್ಯ :- ದ್ರೌಪದಿಯು ಭೀಮನಿಗೆ ಹೇಳುತ್ತಾಳೆ- ಈ ಪುಷ್ಪಗಳಿರುವ ಪರ್ವತವು ಕುಬೇರನಿಂದ ರಕ್ಷಿತವಾಗಿದೆ. ಎಲ್ಲರಿಗೂ ಈ ಪರ್ವತವು ಅಗಮ್ಯವಾಗಿದೆ. ಇಂದೇ ನೀನು ಅಲ್ಲಿಗೆ ಹೋಗಿ ಎಲ್ಲ ರಾಕ್ಷಸರನ್ನು ಸಂಹರಿಸಬೇಕು ಎಂದು.

**ಇತ್ಯುಕ್ತ ಆಶು ಸಗದಃ ಸಧನುಃ ಸಬಾಣೋ**
**ಭೀಮೋ ಗಿರೀಂದ್ರಮಜಿತೋರುಬಲೋ ವಿಗಾಹೇ ।**
**ಪ್ರಾಪ್ತಂ ನಿಶಮ್ಯ ಬಲದೈವತಸೂನುಮತ್ರ**
**ಪದ್ಮತ್ರಯಂ ನ್ಯರುಣದುದ್ಧತರಾಕ್ಷಸಾನಾಮ್ ॥ ೨೯೫ ॥**

**ಪದಚ್ಛೇದ :- ಇತಿ, ಉಕ್ತಃ, ಸಧನುಃ, ಸಬಾಣಃ, ಭೀಮಃ. ಗಿರೀಂದ್ರಮ್, ಅಜಿತೋರುಬಲಃ, ವಿಗಾಹೇ, ಪ್ರಾಪ್ತಂ, ನಿಶಮ್ಯ, ಬಲದೈವತಸೂನುಮ್, ಅತ್ರ, ಪದ್ಮತ್ರಯಂ, ನ್ಯರುಣತ್, ಉದ್ಧತರಾಕ್ಷಸಾನಾಮ್.**

**ಅರ್ಥ** :- **ಇತಿ** = ಹೀಗೆ; **ಉಕ್ತಃ** = (ದ್ರೌಪದಿಯಿಂದ) ಹೇಳಲ್ಪಟ್ಟ; **ಅಜಿತೋರುಬಲಃ** = ಮತ್ತೊಬ್ಬರಿಂದ ಗೆಲ್ಲಲಾಗದ ಉತ್ಕೃಷ್ಟಬಲವುಳ್ಳ; **ಭೀಮಃ** = ಭೀಮನು; **ಸಗದಃ (ಸನ್)** = ಗದೆಯಿಂದ ಸಹಿತನಾಗಿ; **ಸಧನುಃ** = ಬಿಲ್ಲಿನಿಂದ ಸಹಿತನಾಗಿ; **ಸಬಾಣಃ** = ಬಾಣದಿಂದ ಸಹಿತನಾಗಿ; **ಗಿರೀಂದ್ರಂ** = ಪರ್ವತಶ್ರೇಷ್ಠವನ್ನು; **ಆಶು** = ಶೀಘ್ರವಾಗಿ; **ವಿಗಾಹೇ** = ಏರಿದನು. **ಅತ್ರ** = ಈ ಪರ್ವತಕ್ಕೆ; **ಪ್ರಾಪ್ತಂ** = ಬಂದಂತಹ; **ಬಲದೈವತಸೂನುಂ** = ಬಲದೇವತೆಯ ಮಗನಾದ ಭೀಮನನ್ನು; **ನಿಶಮ್ಯ** = ನೋಡಿ; **ರಾಕ್ಷಸಾನಾಂ** = ರಾಕ್ಷಸರ; **ಪದ್ಮತ್ರಯಂ** = ಪದ್ಮವೆಂಬ ಸಂಖ್ಯೆಯ ಮೂರರಷ್ಟು; **ನ್ಯರುಣತ್** = ತಡೆದರು.

ತಾತ್ಪರ್ಯ :- ಹೀಗೆ ದ್ರೌಪದಿಯು ಹೇಳಲು ಗದೆ ಧನಸ್ಸು, ಬಾಣಗಳನ್ನು ಹಿಡಿದ ಭೀಮನು ಪರ್ವತನ್ನು ಹತ್ತಿದನು. ಬಲದೇವತೆಯಾದ ವಾಯುದೇವರ ಮಗನಾದ ಭೀಮನು ಬರುತ್ತಿರುವುದನ್ನು ಕಂದ ಮೂರು ಪದ್ಮಸಂಖ್ಯೆಯಷ್ಟು ಇರುವ ರಾಕ್ಷಸರು ಭೀಮನನ್ನು ತಡೆದರು.

ವಿಶೇಷವಿಚಾರ :- ಒಂದು ಸಂಖ್ಯೆಯಮುಂದೆ ಹದಿಮೂರು ಸೊನ್ನೆಯನ್ನು ಬರೆದರೆ ಸಿಗುವ ಸಂಖ್ಯೆಯೇ ಒಂದುಪದ್ಮ. ಅಂತಹ ಮೂರರಷ್ಟು ಸಂಖ್ಯೆಯ ರಾಕ್ಷಸರು ಭೀಮನ ಮೇಲೆ ಎರಗುತ್ತಾರೆ.

ಅಗ್ರೇ ನಿಧಾಯ ಮಣಿಮಂತಮಜೇಯಮುಗ್ರಂ
ಶಂಭೋರ್ವರಾದ್ ವಿವಿಧಶಸ್ತ್ರಮಹಾಭಿವೃಷ್ಟ್ಯಾ ।
ತಾನ್ ಸರ್ವರಾಕ್ಷಸಗಣಾನ್ ಮಣಿಮತ್ಸಮೇತಾನ್
ಭೀಮೋ ಜಘಾನ ಸಪದಿ ಪ್ರವರೈಃ ಶರೌಘೈಃ ॥ ೨೯೬ ॥

ಪದಚ್ಛೇದ :- ಅಗ್ರೇ, ನಿಧಾಯ, ಮಣಿಮಂತಮ್, ಅಜೇಯಮ್, ಉಗ್ರಂ, ಶಂಭೋಃ, ವರಾತ್, ವಿವಿಧಶಸ್ತ್ರಮಹಾಭಿವೃಷ್ಟ್ಯಾ, ತಾನ್, ಸರ್ವರಾಕ್ಷಸಗಣಾನ್, ಮಣಿಮತ್ಸಮೇತಾನ್, ಭೀಮಃ, ಜಘಾನ, ಸಪದಿ, ಪ್ರವರೈಃ, ಶರೌಘೈಃ.

**ಅರ್ಥ** :- **ಶಂಭೋಃ** = ಶಿವನ; **ವರಾತ್** = ವರದಿಂದ; **ಅಜೇಯಂ** = ಅಜೇಯನಾಗಿದ್ದ; **ಉಗ್ರಂ** = ಕ್ರೂರೊಯಾಗಿದ್ದ; **ಮಣಿಮಂತಂ** = ಮಣಿಮಂತನನ್ನು; **ಅಗ್ರೇ** = ಮುಂದೆ; **ನಿಧಾಯ** = ಇಟ್ಟುಕೊಂಡು; **ವಿವಿಧಶಸ್ತ್ರಮಹಾಭಿವೃಷ್ಟ್ಯಾ** = ನಾನಾವಿಧವಾದ ಶಸ್ತ್ರಗಳ ದೊಡ್ಡ ಮಳೆಯಿಂದ (ಭೀಮನನ್ನು ತಡೆದರು); **ಭೀಮಃ** = ಭೀಮನು; **ಮಣಿಮತ್ಸಮೇತಾನ್** = ಮಣೀಮಂತನಿಂದ ಸಹಿತರಾದ; **ತಾನ್** = ಆ; **ಸರ್ವರಾಕ್ಷಸಗಣಾನ್** = ಎಲ್ಲ ರಾಕ್ಷಸರ ಸಮೂಹಗಳನ್ನು; **ಪ್ರವರೈಃ** = ಶ್ರೇಷ್ಠವಾದ; **ಶರೌಘೈಃ** = ಬಾಣಗಳ ಸಮೂಹಗಳಿಂದ; **ಸಪದಿ** = ತತ್ಕ್ಷಣವೇ; **ಜಘಾನ** = ಕೊಂದನು.

**ತಾತ್ಪರ್ಯ** :- ಆ ರಾಕ್ಷಸರು ಶಿವನವರದಿಂದ ಅವಧ್ಯನಾಗಿದ್ದ ಮಣಿಮಂತನನ್ನು ಮುಂದೆಮಾಡಿಕೊಂಡು ನಾನಾವಿಧಶಸ್ತ್ರಗಳ ಮಹಾ ಮಳೆಯನ್ನೇ ಭೀಮನ ಮೇಲೆ ಸುರಿಸಿ ಅವನನ್ನು ತಡೆದರು. ಭೀಮನು ಮಣಿಂತನಿಂದ ಸಹಿತರಾದ ಎಲ್ಲ ರಾಕ್ಷಸರನ್ನೂ ಬಾಣಗಳನ್ನು ಪ್ರಯೋಗಿಸಿ ಒಮ್ಮೆಲೇ ಕೊಂದರು.

ಅವಧ್ಯಾಂಸ್ತಾನ್ ಕ್ಷಣೇನೈವ ಹತ್ವಾ ಭೀಮೋ ಮಹಾಬಲಃ ।
ರಣೇ ಕ್ರೋಧವಶಾನ್ ಸರ್ವಾನತಿಷ್ಠದ್ ಗಿರಿಮೂರ್ಧನಿ ॥ ೨೯೭ ॥

ಪದಚ್ಛೇದ :- ಅವಧ್ಯಾನ್, ತಾನ, ಕ್ಷಣೇನ, ಏವ, ಹತ್ವಾ, ಭೀಮಃ, ಮಹಾಬಲಃ, ರಣೇ, ಕ್ರೋಧವಶಾನ್, ಸರ್ವಾನ್, ಅತಿಷ್ಠತ್, ಗಿರಿಮೂರ್ಧನಿ.

ಅರ್ಥ :- ಮಹಾಬಲಃ = ಮಹಾಬಲವುಳ್ಳ; ಭೀಮಃ = ಭೀಮಸೇನನು; ರಣೇ = ಯುದ್ಧದಲ್ಲಿ; ಅವಧ್ಯಾನ್ = ಅವಧ್ಯರಾಗಿದ್ದ; ಸರ್ವಾನ್ = ಎಲ್ಲ; ಕ್ರೋಧವಶಾನ್ = ಕ್ರೋಧವಶರನ್ನು; ಕ್ಷಣೇನ ಏವ = ಕ್ಷಣದಲ್ಲಿಯೇ; ಹತ್ವಾ = ಕೊಂದು; ಗಿರಿಮೂರ್ಧನಿ = ಪರ್ವತದ ಮೇಲೆ; ಅತಿಷ್ಠತ್ = ನಿಂತನು.

ತಾತ್ಪರ್ಯ :- ಮಹಾಬಲನಾದ ಭೀಮನು ಅವಧ್ಯರಾಗಿದ್ದ ಆ ಎಲ್ಲಾ ಕ್ರೋಧವಶರನ್ನು ಕ್ಷಣದಲ್ಲಿಯೇ ಕೊಂದು ಪರ್ವತದ ತುದಿಯಲ್ಲಿ ನಿಂತನು.

**ತೇ ಹತಾ ಭೀಮಸೇನೇನ ಪ್ರಾಪುರಂಧಂತಮೋಽಖಿಲಾಃ ।**
**ಹತಃ ಸೌಗಂಧಿಕವನೇ ಮಣಿಮಾಂಶ್ಚ ಪುನಃ ಕಲೌ ।**
**ಜಾತೋ ಮಿಥ್ಯಾಮತಿಂ ಸಮ್ಯಗಾಸ್ತೀರ್ಯಾಪ ತಮೋಽಧಿಕಮ್ ॥ ೨೯೮ ॥**

ಪದಚ್ಛೇದ :- ತೇ, ಹತಾಃ, ಭೀಮಸೇನೇನ, ಪ್ರಾಪುಃ, ಅಂಧಂತಮಃ, ಅಖಿಲಾಃ, ಹತಃ, ಸೌಗಂಧಿಕವನೇ, ಮಣಿಮಾನ್, ಚ, ಪುನಃ, ಕಲೌ, ಜಾತಃ, ಮಿಥ್ಯಾಮತಿಂ, ಸಮ್ಯಕ್, ಆಸ್ತೀರ್ಯ, ಆಪ, ತಮಃ, ಅಧಿಕಮ್.

ಅರ್ಥ :- ಭೀಮಸೇನೇನ = ಭೀಮಸೇನನಿಂದ; ಹತಾಃ = ಕೊಲ್ಲಲ್ಪಟ್ಟ; ತೇ = ಆ; ಅಖಿಲಾಃ = ಎಲ್ಲ ರಾಕ್ಷಸರು; ಅಂಧಂತಮಃ = ಅಂಧಂತಮಸ್ಸನ್ನು; ಪ್ರಾಪುಃ = ಸೇರಿದರು. ಸೌಗಂಧಿಕವನೇ = ಸೌಗಂಧಿವನದಲ್ಲಿ; ಹತಃ = ಸತ್ತ; ಮಣಿಮಾನ್ = ಮಣಿಮಂತನು; ಪುನಃ ಚ = ಮತ್ತೊಮ್ಮೆ; ಕಲೌ = ಕಲಿಯುಗದಲ್ಲಿ; ಜಾತಃ (ಸನ್) = ಹುಟ್ಟಿದವನಾಗಿ; ಮಿಥ್ಯಾಮತಿಂ = ಮಿಥ್ಯಾಜ್ಞಾನವನ್ನು; ಸಮ್ಯಕ್ = ಚೆನ್ನಾಗಿ; ಆಸ್ತೀರ್ಯ = ಪ್ರಚಾರಮಾಡಿ; ಅಧಿಕಂ = ದೊಡ್ಡದಾದ; ತಮಃ = ತಮಸ್ಸನ್ನು; ಆಪ = ಹೊಂದಿದನು.

ತಾತ್ಪರ್ಯ :- ಹೀಗೆ ಭೀಮನಿಂದ ಹತರಾದ ಎಲ್ಲ ರಾಕ್ಷಸರೂ ತಮಸ್ಸಿಗೆ ಹೋದರು. ಮಣಿಮಂತನು ಪುನಃ ಕಲಿಯುಗದಲ್ಲಿ ಹುಟ್ಟಿ ಮಿಥ್ಯಾಜ್ಞಾನವನ್ನು ಪ್ರಚಾರ ಮಾಡಿ ಹೆಚ್ಚಿನ ತಮಸ್ಸನ್ನೇ ಪಡೆದನು.

**ತತೋ ವೈಶ್ರವಣೋ ರಾಜಾ ಮಹಾಪದ್ಮತ್ರಯೇ ಹತೇ ।**
**ರಾಕ್ಷಸಾನಾಮವಧ್ಯಾನಾಂ ಸಖಾಯೇ ಮಣಿಮತ್ಯಪಿ ।**
**ಆರುರೋಹ ರಥಂ ದಿವ್ಯಂ ಯೋದ್ಧುಕಾಮೋ ವೃಕೋದರಮ್ ॥ ೨೯೯ ॥**

ಪದಚ್ಛೇದ :- ತತಃ, ವೈಶ್ರವಣಃ, ರಾಜಾ, ಮಹಾಪದ್ಮತ್ರಯೇ, ಹತೇ, ರಾಕ್ಷಸಾನಾಮ್, ಅಚಧ್ಯಾನಾಂ, ಸಖಾಯೇ, ಮಣಿಮತಿ, ಅಪಿ, ಆರುರೋಹ, ರಥಂ, ದಿವ್ಯಂ, ಯೋದ್ಧುಕಾಮಹ್, ವೃಕೋದರಮ್.

**ಅರ್ಥ** :- **ತತಃ** = ಆ ನಂತರ; **ರಾಜಾ** = ರಾಜನಾದ; **ವೈಶ್ರವಣಃ** = ಕುಬೇರನು; **ಅವಧ್ಯಾನಾಂ** = ಅವಧ್ಯರಾದ; **ರಾಕ್ಷಸಾನಾಂ** = ರಾಕ್ಷಸರ; **ಮಹಾಪದ್ಮತ್ರಯೇ** = ದೊಡ್ಡದಾದ ಮೂರುಪದ್ಮದ ಸಂಖ್ಯೆಯವರು; **ಹತೇ (ಸತಿ)** = ಹತರಾಗಲು; **ಸಖಾಯೇ** = ಸ್ನೇಹಿತನಾದ; **ಮಣಿಮತಿ ಅಪಿ** = ಮಣಿಮಂತನೂ ಕೂಡ; **ಹತೇ (ಸತಿ)** = ಹತನಾಗಲು; **ವೃಕೋದರಂಮ್** = ಭೀಮನೊಂದಿಗೆ; **ಯೋದ್ಧುಕಾಮಃ (ಸನ್)** = ಯುದ್ಧಮಾಡುವ ಇಚ್ಛೆಯುಳ್ಳವನಾಗಿ; **ದಿವ್ಯಂ** = ದೇವತಾಸಂಬಂಧಿಯಾದ; **ರಥಂ** = ರಥವನ್ನು; **ಆರುರೋಹ** = ಏರಿದನು.

**ತಾತ್ಪರ್ಯ** :- ದೊಡ್ಡದಾದ ಪದ್ರತ್ರಯಸಂಖ್ಯೆಯಲ್ಲಿದ್ದ ರಾಕ್ಷಸ್ರ ಸಮೂಹವು ಭೀಮನಿಂದ ಹತರಾಗಲು ಮತ್ತು ಸ್ನೇಹಿತನಾದ ಮಣಿಮಂತನೂ ಹತನಾಗಲೂ ಕುಬೇರನು ಭೀಮನೊಂದಿಗೆ ಯುದ್ಧಮಾಡಲೆಂದು ದಿವ್ಯವವಾದ ರಥವನ್ನೇರಿದ.

**ಅಸುರಾವೇಶತಸ್ತಸ್ಯ ಭೀಮೇ ಕ್ರೋಧೋ ಮಹಾನಭೂತ್ ।**
**ಸ ಆಜಗಾಮ ಭೀಮೇನ ಯೋದ್ಧುಂ ವಿತ್ತಪತಿಃ ಸ್ವಯಮ್ ॥ ೩೦೦ ॥**

ಪದಚ್ಛೇದ :– ಅಸುರಾವೇಶತಃ, ತಸ್ಯ, ಭೀಮೇ, ಕ್ರೋಧಃ, ಮಹಾನ್, ಅಭೂತ್, ಸಹ್, ಆಜಗಾಮ, ಭೀಮೇನ, ಯೋದ್ಧುಂ, ವಿತ್ತಪತಿಃ, ಸ್ವಯಮ್.

**ಅರ್ಥ** :- **ತಸ್ಯ** = ಆ ಕುಬೇರನಿಗೆ; **ಅಸುರಾವೇಶತಃ** = ಅಸುರಾವೇಶದಿಂದ; **ಭೀಮೇ** = ಭೀಮನ ವಿಷದಲ್ಲಿ; **ಮಹಾನ್** = ದೊಡ್ಡದಾದ; **ಕ್ರೋಧಃ** = ಸಿಟ್ಟು; **ಅಭೂತ್** = ಉಂಟಾಯಿತು. **ಸಃ** = ಆ; **ವಿತ್ತಪತಿಃ** = ಕುಬೇರನು; **ಸ್ವಯಂ** = ತಾನೇ; **ಭೀಮೇನ (ಸಹ)** = ಭೀಮನೊಂದಿಗೆ; **ಯೋದ್ಧುಂ** = ಯುದ್ಧಮಾಡಲು; **ಆಜಗಾಮ** = ಬಂದನು.

**ತಾತ್ಪರ್ಯ** :- ಕುಬೇರನಿಗೆ ಅಸುರಾವೇಶದಿಂದ ಭೀಮನ ಮೇಲೆ ಬಹಳ ಸಿಟ್ಟು ಬಂದಿತು. ಭೀಮನೊಂದಿಗೆ ಯುದ್ಧಮಾಡಲು ಅವನು ಹೊರಟನು.

**ತಸ್ಮಿನ್ ಕಾಲೇ ಭೀಮಸೇನಸ್ಯ ಘೋಷಂ**
**ಶ್ರುತ್ವಾ ರಾಜಾಽಪೃಚ್ಛದಾಶು ಸ್ಮ ಕೃಷ್ಣಾಮ್ ।**
**ಕ್ವ ಭೀಮ ಇತ್ಯೇವ ತಯೋದಿತಂ ಚ**
**ಶ್ರುತ್ವಾ ಜಗಾಮಾಽಽಶು ರಕ್ಷೋಂಽಸಸಂಸ್ಥಃ ॥ ೨೯೯ ॥**

ಪದಚ್ಛೇದ :- ತಸ್ಮಿನ್, ಕಾಲೇ, ಭೀಮಸೇನಸ್ಯ, ಘೋಷಂ, ಶ್ರುತ್ವಾ, ರಾಜಾ, ಅಪೃಚ್ಛದ್, ಆಶು, ಸ್ಮ, ಕೃಷ್ಣಾಂ, ಕ್ವ, ಭೀಮಃ, ಇತಿ, ಏವ, ತಯಾ, ಉದಿತಂ, ಚ, ಶ್ರುತ್ವಾ, ಜಗಾಮ, ಆಶು, ರಕ್ಷೋಽಂಸಸಂಸ್ಥಃ ।

**ಅರ್ಥ** :- **ತಸ್ಮಿನ್ ಕಾಲೇ** = ಅದೇ ಸಂದರ್ಭದಲ್ಲೇ, **ಭೀಮಸೇನಸ್ಯ** = ಭೀಮಸೇನನ, **ಘೋಷಂ** = ವೀರಾವೇಶದ ಧ್ವನಿಯನ್ನು, **ಶ್ರುತ್ವಾ** = ಕೇಳಿ, **ರಾಜಾ** = ರಾಜನಾದ ಯುಧಿಷ್ಠಿರನು, **ಆಶು** = ಕೂಡಲೇ, **ಭೀಮಃ** = ಭೀಮನು, **ಕ್ವ** = ಎಲ್ಲಿ, **ಇತ್ಯೇವ** = ಎಂದಿಷ್ಟೇ, **ಕೃಷ್ಣಾಂ** = ಕೃಷ್ಣೆಯನ್ನು, **ಅಪೃಚ್ಛತ್ ಸ್ಮ** = ಕೇಳಿದನು, **ತಯಾ** = ಆ ದ್ರೌಪದಿಯಿಂದ, **ಉದಿತಂ** = ಹೇಳಲ್ಪಟ್ಟದ್ದನ್ನು, **ಶ್ರುತ್ವಾ** = ಕೇಳಿ, **ಆಶು** = ಕೂಡಲೇ, **ರಕ್ಷೋಽಂಸಸಂಸ್ಥಃ** = ಘಟೋತ್ಕಚನ ಹೆಗಲನ್ನು ಏರಿ, **ಜಗಾಮ ಚ** = ಭೀಮನಿದ್ದ ಕಡೆಗೆ ಹೋದನೂ ಕೂಡ.

ತಾತ್ಪರ್ಯ :- ಅದೇ ಸಮಯದಲ್ಲಿ ಭೀಮಸೇನನ ಸಿಂಹನಾದವನ್ನು ಕೇಳಿ ಧರ್ಮರಾಜ ದ್ರೌಪದಿಯನ್ನು ಕೇಳಿದ 'ಭೀಮನೆಲ್ಲಿ?' ಎಂದು ಅವಳು ಹೇಳಿದಳು. ಅದನ್ನು ಕೇಳಿ ಧರ್ಮರಾಜನು ಕೂಡಲೇ ಘಟೋತ್ಕಚನ ಹೆಗಲನ್ನೇರಿ ಭೀಮನ ಬಳಿಗೆ ಹೋದ.

**ಸಭ್ರಾತೃಕೇ ಮುನಿಭಿಃ ಕೃಷ್ಣಯಾ ಚ**
**ಗತೇ ರಾಜನ್ಯತ್ರ ಭೀಮಂ ಕುಬೇರಃ ।**
**ದೃಷ್ಟ್ವಾಽಸುರಾವೇಶತೋ ಧರ್ಮಜಂ ಚ**
**ಕಿಂಚಿನ್ಮುಕ್ತಃ ಸ್ನೇಹಯುಕ್ತಸ್ತಥಾಽಽಸ ॥ ೩೦೦ ॥**

ಪದಚ್ಛೇದ :- ಸಭ್ರಾತೃಕೇ, ಮುನಿಭಿಃ, ಕೃಷ್ಣಯಾ, ಚ, ಗತೇ, ರಾಜನಿ, ಅತ್ರ, ಭೀಮಂ, ಕುಬೇರಃ, ದೃಷ್ಟ್ವಾ, ಅಸುರಾವೇಶತಃ, ಧರ್ಮಜಂ, ಚ, ಕಿಂಚಿತ್, ಮುಕ್ತಃ, ಸ್ನೇಹಯುಕ್ತಃ, ತಥಾ, ಆಸ ।

**ಅರ್ಥ** :- **ಸಭ್ರಾತೃಕೇ** = ತಮ್ಮಂದಿರೊಡನೆ, **ಮುನಿಭಿಃ** = ಮುನಿಗಳೊಂದಿಗೆ, **ಕೃಷ್ಣಯಾ ಚ** = ದ್ರೌಪದಿಯೊಂದಿಗೂ ಕೂಡಿಕೊಂಡು, **ರಾಜನಿ** = ಯುಧಿಷ್ಠಿರನು, **ಗತೇ** = ಭೀಮನಿದ್ದಲ್ಲಿಗೆ ಹೋದಾಗ, **ಅತ್ರ** = ರಣಭೂಮಿಯಲ್ಲಿ, **ಕುಬೇರಃ** = ಕುಬೇರನು, **ಭೀಮಂ** = ಭೀಮನನ್ನು, **ಚ** = ಮತ್ತು, **ಧರ್ಮಜಂ** = ಧರ್ಮರಾಜನನ್ನು, **ದೃಷ್ಟ್ವಾ** = ನೋಡಿ, (**ಯಥಾ** = ಹೇಗೆ ಹೇಗೆ), **ಕಿಂಚಿತ್** = ಸ್ವಲ್ಪ ಸ್ವಲ್ಪವಾಗಿ, **ಅಸುರಾವೇಶತಃ** = ಅಸುರಾವೇಶದಿಂದ, **ಮುಕ್ತಃ** = ಬಿಡುಗಡೆ ಹೊಂದಿದನೋ, **ತಥಾ** = ಹಾಗೆ ಹಾಗೆ, (**ಕಿಂಚಿತ್** = ಸ್ವಲ್ಪ), **ಸ್ನೇಹಯುಕ್ತಃ** = ಸ್ನೇಹದಿಂದ ಕೂಡಿದವನು, **ಆಸ** = ಆದನು.

**ತಾತ್ಪರ್ಯ** :- ತಮ್ಮಂದಿರೊಡನೆ ಮುನಿಗಳೊಡನೆ ಕೂಡಿ ದ್ರೌಪದೀ ಸಮೇತನಾಗಿ ಧರ್ಮರಾಜ ಕುಬೇರನ ಭವನಕ್ಕೆ ಹೋದಾಗ ಕುಬೇರ ಭೀಮನನ್ನೂ ಧರ್ಮರಾಜನನ್ನೂ ಹೇಗೆ ಹೇಗೆ ನೋಡತೊಡಗಿದನೋ ಹಾಗೆ ಹಾಗೆ ಹಂತ ಹಂತವಾಗಿ ಅಸುರಾವೇಶದಿಂದ ಮುಕ್ತನಾಗುತ್ತಾ ಸ್ವಲ್ಪವಾಗಿ ಸ್ನೇಹಯುಕ್ತನಾಗತೊಡಗಿದ.

**ಧೃತಾಯುಧಂ ಭೀಮಮೀಕ್ಷ್ಯಾಪಿ ಕಿಂಚಿದ್**
**ದೈತ್ಯಾವೇಶಾದ್ ಬಹು ಮೇನೇ ನ ಭೀಮಮ್ ।**
**ಅಗಸ್ತ್ಯಶಾಪಂ ಚಾವದತ್ ಸ್ವಸ್ಯ ಪೂರ್ವಂ**
**ಸಖಾಯನಾಶೇ ಕಾರಣಂ ರಾಜರಾಜಃ ॥ ೩೦೧ ॥**

**ಪದಚ್ಛೇದ** :- ಧೃತಾಯುಧಂ, ಭೀಮಂ, ಈಕ್ಷ್ಯ, ಅಪಿ, ಕಿಂಚಿದ್, ದೈತ್ಯಾವೇಶಾದ್, ಬಹು, ಮೇನೇ, ನ, ಭೀಮಂ, ಅಗಸ್ತ್ಯಶಾಪಂ, ಚ, ಅವದತ್, ಸ್ವಸ್ಯ, ಪೂರ್ವಂ, ಸಖಾಯನಾಶೇ, ಕಾರಣಂ, ರಾಜರಾಜಃ ।

**ಅರ್ಥ** :- **ರಾಜರಾಜಃ** = ಯಕ್ಷರ ರಾಜನಾದ ಕುಬೇರನು, **ಧೃತಾಯುಧಂ** = ಗದಾ, ಬಿಲ್ಲು, ಬಾಣ ಮೊದಲಾದ ಆಯುಧಗಳನ್ನು ಧರಿಸಿದ, **ಭೀಮಂ** = ಭೀಮನನ್ನು, **ಈಕ್ಷ್ಯ ಅಪಿ** = ಕಂಡರೂ, **ಕಿಂಚಿದ್** = ಸ್ವಲ್ಪ ಉಳಿದ, **ದೈತ್ಯಾವೇಶಾದ್** = ದೈತ್ಯಾವೇಶದಿಂದ, **ಭೀಮಂ** = ಭೀಮನ ಸಾಮರ್ಥ್ಯವನ್ನು, **ನ ಬಹುಮೇನೇ** = ಪುರಸ್ಕರಿಸಲಿಲ್ಲ (ಹೊಗಳಲಿಲ್ಲ), **ಚ**

= ಮತ್ತು, **ಪೂರ್ವಂ** = ಈ ಹಿಂದೆ, **ಸ್ವಸ್ಯ** = ತನ್ನ, **ಸಖಾಯನಾಶೇ** = ಗೆಳೆಯನಾದ ಮಣಿಮಂತ ಮೊದಲಾದ ಪದ್ಮತ್ರಯದ ನಾಶದ ವಿಷಯದಲ್ಲಿ, **ಅಗಸ್ತ್ಯಶಾಪಂ** = ಅಗಸ್ತ್ಯರ ಶಾಪವನ್ನು, **ಕಾರಣಂ** = ಕಾರಣ ಎಂಬುದಾಗಿ, **ಅವದತ್** = ಹೇಳಿದನು.

**ತಾತ್ಪರ್ಯ** :- ಸ್ವಲ್ಪ ಅಸುರಾವೇಶವಿದ್ದ ಪ್ರಯುಕ್ತ ಆಯುಧ ಪಾಣಿಯಾದ ಭೀಮನನ್ನು ನೋಡಿಯೂ ಅವನಲ್ಲಿ ಮಹತ್ತ್ವವನ್ನು ಕಾಣಲಿಲ್ಲ ಕುಬೇರ ತನ್ನ ಮಿತ್ರನ ಮರಣಕ್ಕೆ ಅಗಸ್ತ್ಯರ ಶಾಪ ಕಾರಣ ಎಂದ.

**ವಿಶೇಷಾಂಶ** :- ವಿಂಧ್ಯಪರ್ವತದ ಕುಶಾವತೀನಗರದಲ್ಲಿ ದೇವತೆಗಳ ಸಭೆಗೆ ರಾಕ್ಷಸಸೈನ್ಯ ಸಮೇತನಾದ ಮಣಿಮಂತನೊಡನೆ ಕುಬೇರ ಆಕಾಶ ಮಾರ್ಗದಲ್ಲಿ ಹೊರಟಿದ್ದ. ದಾರಿಯಲ್ಲಿ ಕೆಳಗೆ ಯಮುನಾತೀರದಲ್ಲಿ ಅಗಸ್ತ್ಯರು ತಪಸ್ಸು ಮಾಡುತ್ತಿದ್ದರು. ಮಣಿಮಂತ ಅವರ ತಲೆಯ ಮೇಲೆ ಉಗುಳಿದ. ಮುನಿ ಸಿಟ್ಟಾಗಿ ಮಣಿಮಂತನನ್ನೂ ಅವನ ಸೈನ್ಯವನ್ನೂ ಒಬ್ಬ ಮಾನವ ನಾಶ ಮಾಡುವನೆಂದೂ, ಕುಬೇರನಿಗೆ ಅದರಿಂದ ಉಂಟಾಗುವ ಸಂತಾಪವೂ ಆ ಮಾನವ ದರ್ಶನದಿಂದಲೇ ಕಳೆಯುವುದು ಎಂದು ಶಪಿಸಿದ್ದ.

**ದೈತ್ಯಾವೇಶಾದುಜ್ಝಿತಃ ಶಾಂತಭಾವೋ**
**ದದೌ ನಿಜಂ ಸ್ಥಾನಮೇಷಾಂ ಸುತುಷ್ಟಃ ।**
**ಆವಾಸಾರ್ಥಂ ತೇಽವಸಂಸ್ತತ್ರ ಪಾರ್ಥಾ-**
**ಸ್ತಥಾಽನ್ಯೇಷಾಂ ದೈವತಾನಾಂ ಗೃಹೇಷು ॥ ೩೦೨ ॥**

ಪದಚ್ಛೇದ :- **ದೈತ್ಯಾವೇಶಾದ್, ಉಜ್ಝಿತಃ, ಶಾಂತಭಾವಃ, ದದೌ, ನಿಜಂ, ಸ್ಥಾನಂ, ಏಷಾಂ, ಸುತುಷ್ಟಃ, ಆವಾಸಾರ್ಥಂ, ತೇ, ಅವಸನ್, ತತ್ರ, ಪಾರ್ಥಾಃ, ತಥಾ, ಅನ್ಯೇಷಾಂ, ದೈವತಾನಾಂ, ಗೃಹೇಷು ।**

**ಅರ್ಥ** :- **ದೈತ್ಯಾವೇಶಾದ್** = ದೈತ್ಯಾವೇಶದಿಂದ, **ಉಜ್ಝಿತಃ** = ಕ್ರಮೇಣ ಪೂರ್ಣವಾಗಿ ಬಿಡುಗಡೆ ಹೊಂದಿದ ಕುಬೇರನು, **ಶಾಂತಭಾವಃ** = ಶುದ್ಧಸ್ವಭಾವವುಳ್ಳವನಾಗಿ, **ಸುತುಷ್ಟಃ** = ಭೀಮನ ಸಾಮರ್ಥ್ಯವನ್ನು ಅರಿತು ಸಂತುಷ್ಟನಾಗಿ, **ಏಷಾಂ** = ಈ ಪಾಂಡವರ, **ಆವಾಸಾರ್ಥಂ** = ವಸತಿಗಾಗಿ, **ನಿಜಂ** = ತನ್ನ, **ಸ್ಥಾನಂ** = ಭವನವನ್ನು, **ದದೌ** = ಕೊಟ್ಟನು, **ತೇ ಪಾರ್ಥಾಃ**

= ಆ ಪ್ರಸಿದ್ಧರಾದ ಪಾಂಡವರು, **ತತ್ರ** = ಆ ಕುಬೇರನ ಮನೆಯಲ್ಲಿ, **ತಥಾ** = ಹಾಗೆಯೇ, **ಅನ್ಯೇಷಾಂ** = ಬೇರೆ, **ದೈವತಾನಾಂ** = ದೇವತೆಗಳ, **ಗೃಹೇಷು** = ಮನೆಗಳಲ್ಲಿ, **ಅವಸನ್** = ವಾಸಿಸಿದರು.

**ತಾತ್ಪರ್ಯ** :- ಕುಬೇರ ದೈತ್ಯಾವೇಶದಿಂದ ಮುಕ್ತನಾಗಿ ಶಾಂತಭಾವದಿಂದ ಕೂಡಿ ಸಂತುಷ್ಟನಾಗಿ ಪಾಂಡವರಿಗೆ ಆವಾಸ ಮಾಡಲು ತನ್ನ ಮನೆಯನ್ನೇ ಕೊಟ್ಟ ಪಾಂಡವರು ಅಲ್ಲಿಯೂ ಬೇರೆ ಬೇರೆ ದೇವತೆಗಳ ಮನೆಗಳಲ್ಲಿಯೂ ವಾಸ ಮಾಡಿದರು.

**ತತ್ರೈವ ತೇಷಾಂ ವಸತಾಂ ಮಹಾತ್ಮನಾ-**
**ಮಾನಂದಿನಾಮಬ್ದಚತುಷ್ಟಯೇ ಗತೇ ।**
**ಪಂಚಾಬ್ದಮಧ್ಯಾಪ್ಯ ಮಹಾಂತಿ ಚಾಸ್ತ್ರಾ-**
**ಣೀಂದ್ರೋ ಗುರ್ವರ್ಥಂ ಫಲ್ಗುನೇನಾರ್ಥಿತೋಽಭೂತ್ ॥ ೩೦೩ ॥**

**ಪದಚ್ಛೇದ :- ತತ್ರ, ಏವ, ತೇಷಾಂ, ವಸತಾಂ, ಮಹಾತ್ಮನಾಂ, ಆನಂದಿನಾಂ, ಅಬ್ದಚತುಷ್ಟಯೇ, ಗತೇ, ಪಂಚಾಬ್ದಂ, ಅಧ್ಯಾಪ್ಯ, ಮಹಾಂತಿ, ಚ, ಅಸ್ತ್ರಾಣಿ, ಇಂದ್ರಃ, ಗುರ್ವರ್ಥಂ, ಫಲ್ಗುನೇನ, ಅರ್ಥಿತಃ, ಅಭೂತ್ ।**

**ಅರ್ಥ** :- **ತತ್ರ** = ಆ ಕುಬೇರಭವನ ಮೊದಲಾದ ಸ್ಥಳಗಳಲ್ಲಿ, **ವಸತಾಂ ಏವ** = ವಾಸಿಸುತ್ತಿರುವಾಗಲೇ, **ಆನಂದಿನಾಂ** = ಆನಂದಭರಿತರಾದ, **ಮಹಾತ್ಮನಾಂ** = ಉತ್ತಮ ಮನಸ್ಸಿನವರಾದ, **ತೇಷಾಂ** = ಆ ಪಾಂಡವರ, **ಅಬ್ದಚತುಷ್ಟಯೇ** = ವನವಾಸದ ನಾಲ್ಕು ವರ್ಷಗಳು, **ಗತೇ** = ಕಳೆಯಲು, **ಮಹಾಂತಿ** = ಹಿರಿದಾದ, **ಅಸ್ತ್ರಾಣಿ** = ಅಸ್ತ್ರವಿದ್ಯೆಗಳನ್ನು, **ಇಂದ್ರಃ** = ಇಂದ್ರನು, **ಪಂಚಾಬ್ದಂ** = ಐದು ವರ್ಷಗಳ ಕಾಲ, **ಅಧ್ಯಾಪ್ಯ** = ಪಾರ್ಥನಿಗೆ ಕಲಿಸಿ, **ಗುರ್ವರ್ಥಂ** = ಗುರುದಕ್ಷಿಣೆಯನ್ನು ಸ್ವೀಕರಿಸು ಎಂದು, **ಫಲ್ಗುನೇನ** = ಅರ್ಜುನನಿಂದ, **ಅರ್ಥಿತಃ** = ಪ್ರಾರ್ಥಿಸಲ್ಪಟ್ಟವನು, **ಅಭೂತ್ ಚ** = ಆದನೂ ಕೂಡ.

**ತಾತ್ಪರ್ಯ** :- ಗಂಧಮಾದನದಲ್ಲಿರುವ ಕುಬೇರ ಮೊದಲಾದ ದೇವತೆಗಳ ಮನೆಗಳಲ್ಲಿ ಪಾಂಡವರು ಆನಂದದರಿಂದ ಶಾಸ್ತ್ರಶ್ರವಣಾದಿಗಳ ಮೂಲಕ ಕಾಲ ಕಳೆಯುತ್ತಿರಲು, ನಾಲ್ಕು ವರ್ಷಗಳು ಸಂದವು, ಅದೇ

ಸಂದರ್ಭದಲ್ಲಿ ಅಸ್ತ್ರಾಭ್ಯಾಸಕ್ಕಾಗಿ ಎಲ್ಲವನ್ನೂ ತೊರೆದು ಹೊರಟ ಅರ್ಜುನನ ಅಸ್ತ್ರಾಭ್ಯಾಸವೂ ಇಂದ್ರನ ಮೂಲಕ ಐದು ವರ್ಷಗಳಲ್ಲಿ ಮುಗಿದಿತ್ತು. ಆದ್ದರಿಂದಲೇ ಅರ್ಜುನ ಗುರುಗಳಾದ ಇಂದ್ರದೇವರಿಗೆ ಪ್ರಿಯವಾದದ್ದನ್ನು ಮಾಡಬೇಕೆಂದು ಮುಂದಾದನು.

**ವಧಂ ವವ್ರೇ ಸ್ವಶತ್ರೂಣಾಮಿಂದ್ರಃ ಪಾರ್ಥಾತ್ ಸ್ವರೂಪತಃ ।**
**ನಿವಾತಕವಚಾಖ್ಯಾನಾಂ ಯೇಷಾಂ ಬ್ರಹ್ಮಾ ದದೌ ವರಮ್ ।**
**ಅವಧ್ಯತ್ವಂ ಸುರೈರ್ದೈತ್ಯೈರ್ಗಂಧರ್ವೈಃ ಪಕ್ಷಿರಾಕ್ಷಸೈಃ ॥ ೩೦೪ ॥**

**ಪದಚ್ಛೇದ :- ವಧಂ, ವವ್ರೇ, ಸ್ವಶತ್ರೂಣಾಂ, ಇಂದ್ರಃ, ಪಾರ್ಥಾತ್, ಸ್ವರೂಪತಃ, ನಿವಾತಕವಚಾಖ್ಯಾನಾಂ, ಯೇಷಾಂ, ಬ್ರಹ್ಮಾ, ದದೌ, ವರಂ, ಅವಧ್ಯತಾಂ, ಸುರೈಃ, ದೈತ್ಯೈಃ, ಗಂಧರ್ವೈಃ, ಪಕ್ಷಿರಾಕ್ಷಸೈಃ ।**

**ಅರ್ಥ :- ಯೇಷಾಂ** = ಯಾವ, **ನಿವಾತಕವಚಾಖ್ಯಾನಾಂ** = ನಿವಾತಕವಚರು ಎಂದು ಪ್ರಸಿದ್ಧರಾದ ಅಸುರರಿಗೆ, **ಬ್ರಹ್ಮಾ** = ಬ್ರಹ್ಮದೇವರು, **ಸುರೈಃ** = ದೇವತೆಗಳಿಂದ, **ದೈತ್ಯೈಃ** = ದೈತ್ಯರಿಂದ, **ಗಂಧರ್ವೈಃ** = ಗಂಧರ್ವರಿಂದ, **ಪಕ್ಷಿರಾಕ್ಷಸೈಃ** = ಪಕ್ಷಿಗಳಿಂದ ಮತ್ತು ರಾಕ್ಷಸರಿಂದ, **ಅವಧ್ಯತಾಂ** = ಸಾವಿಲ್ಲದಿರುವಿಕೆ ಎಂಬ, **ವರಂ** = ವರವನ್ನು, **ದದೌ** = ಕೊಟ್ಟಿರುವನೋ, **ಸ್ವಶತ್ರೂಣಾಂ** = (ಅಂತಹ) ತನ್ನ ಶತ್ರುಗಳಾದ ನಿವಾತಕವಚರ, **ವಧಂ** = ಸಂಹಾರವನ್ನು, **ಸ್ವರೂಪತಃ** = ತನ್ನದ್ದೇ ಅವತಾರನಾದ, **ಪಾರ್ಥಾತ್** = ಪಾರ್ಥನ ಮೂಲಕ (ನಡೆಯಬೇಕೆಂದು), **ಇಂದ್ರಃ** = ದೇವೇಂದ್ರನು, **ವವ್ರೇ** = (ಗುರುದಕ್ಷಿಣೆಯನ್ನಾಗಿ) ಬಯಸಿದನು.

**ತಾತ್ಪರ್ಯ :-** ಯಾರ ಕವಚದಲ್ಲಿ ಗಾಳಿಯೂ ತೂರಲಾರದೋ ಅವರೇ ನಿವಾತಕವಚರು, ಅವರಿಗೆ ಮನುಷ್ಯರನ್ನು ಹೊರತುಪಡಿಸಿ ಪ್ರಾಯಶಃ ಯಾರಿಂದಲೂ ಸಾವಿಲ್ಲದಿರುವಿಕೆ ಎಂಬುದು ಬ್ರಹ್ಮದೇವರ ವರದಿಂದ ಸಿದ್ಧವಾಗಿತ್ತು. ಆ ದುಷ್ಟರ ಸಾವನ್ನೇ ನನಗೆ ಗುರುದಕ್ಷಿಣೆಯನ್ನಾಗಿ ನೀಡು ಎಂದು ಇಂದ್ರನು ಅರ್ಜುನನಿಗೆ ತಿಳಿಸಿದನು.

**ವಿಶೇಷಾಂಶ :-** ನಿವಾತಕವಚರು ದೇವತೆಗಳ ಆವಾಸ ಸ್ಥಾನವಾಗಿದ್ದ ಸಮುದ್ರ ಮಧ್ಯದಲ್ಲಿರುವ ಪಟ್ಟಣವನ್ನು ಆಕ್ರಮಿಸಿ ಅಲ್ಲಿ ವಾಸಮಾಡುತ್ತಿದ್ದರು.

**ಪುನರಿಂದ್ರೇಣಾರ್ಥಿತೋಽದಾಜ್ಜಹೀಮಾನ್ ನರದೇಹವಾನ್ ।**
**ಇತಿ ತೇನಾರ್ಜುನಂ ಶಕ್ರಃ ಸ್ವಾತ್ಮಾನಂ ನರದೇಹಗಮ್ ।**
**ಜಗಾದ ತಾನ್ ಜಹೀತ್ಯೇವ ಕಿರೀಟಂ ಸ್ವಂ ನಿಬಧ್ಯ ಚ ॥ ೩೦೫ ॥**

ಪದಚ್ಛೇದ :- ಪುನಃ, ಇಂದ್ರೇಣ, ಅರ್ಥಿತಃ, ಅದಾತ್, ಜಹಿ, ಇಮಾನ್, ನರದೇಹವಾನ್, ಇತಿ, ತೇನ, ಅರ್ಜುನಂ, ಶಕ್ರಃ, ಸ್ವಾತ್ಮಾನಂ, ನರದೇಹಗಂ, ಜಗಾದ, ತಾನ್, ಜಹಿ, ಇತಿ, ಏವ, ಕಿರೀಟಂ, ಸ್ವಂ, ನಿಬಧ್ಯ, ಚ ।

**ಅರ್ಥ** :- **ಪುನಃ** = ಮತ್ತೇ, **ಇಂದ್ರೇಣ** = ಇಂದ್ರನಿಂದ, **ಅರ್ಥಿತಃ** = ಪ್ರಾರ್ಥಿತರಾಗಿದ್ದ ಬ್ರಹ್ಮದೇವರು, **ಇಮಾನ್** = ಈ ನಿವಾತಕವಚರನ್ನು, **ನರದೇಹವಾನ್** = ಮನುಷ್ಯದೇಹವನ್ನು ಹೊಂದಿ, **ಜಹಿ** = ಕೊಲ್ಲು, **ಇತಿ** = ಎಂದು, **ಅದಾತ್** = (ವರ) ಕೊಟ್ಟರು, **ಶಕ್ರಃ** = ಇಂದ್ರನು, **ತೇನ ಚ** = ಆ ಕಾರಣದಿಂದಲೂ, **ನರದೇಹಗಂ** = ಮನುಷ್ಯಶರೀರದಲ್ಲಿರುವ, **ಸ್ವಾತ್ಮಾನಂ** = ತಾನೇ ಆದ, **ಅರ್ಜುನಂ** = ಅರ್ಜುನನನ್ನು ಕುರಿತು, **ಸ್ವಂ** = ತನ್ನ, **ಕಿರೀಟಂ** = ಕಿರೀಟವನ್ನು, **ನಿಬಧ್ಯ** = ತೊಡಿಸಿ, **ತಾನ್** = ಆ ನಿವಾತಕವಚರನ್ನು, **ಜಹಿ** = ಕೊಲ್ಲು, **ಇತಿ ಏವ** = ಎಂದಿಷ್ಟೇ, **ಜಗಾದ** = ಹೇಳಿದನು.

**ತಾತ್ಪರ್ಯ** :- ಇಂದ್ರನು ಬ್ರಹ್ಮದೇವರು ತನಗೆ ತಿಳಿಸಿದಂತೆ ಮನುಷ್ಯ ದೇಹದಲ್ಲಿರುವ ತನ್ನ ಅವತಾರನೇ ಆದ ಅರ್ಜುನನಿಗೆ ತನ್ನ ಕಿರೀಟವನ್ನು ತೊಡಿಸಿ ನಿವಾತಕವಚರನ್ನು ಕೊಲ್ಲು ಎಂದ.

**ವಿಶೇಷಾಂಶ** :- ಇಲ್ಲಿಂದ ಮುಂದೆ ಅರ್ಜುನ 'ಕಿರೀಟೀ' ಎಂದು ಪ್ರಸಿದ್ಧನಾದ.

**ಐಂದ್ರಂ ಸ್ಯಂದನಮಾರುಹ್ಯ ಪಾರ್ಥೋ ಮಾತಲಿಸಂಯುತಃ ।**
**ಗಾಂಡೀವಂ ಧನುರಾದಾಯ ಯಯೌ ಹಂತುಂ ಮಹಾಸುರಾನ್ ॥೩೦೬॥**

ಪದಚ್ಛೇದ :- ಐಂದ್ರಂ, ಸ್ಯಂದನಂ, ಆರುಹ್ಯ, ಪಾರ್ಥಃ, ಮಾತಲಿಸಂಯುತಃ, ಗಾಂಡೀವಂ, ಧನುಃ, ಆದಾಯ, ಯಯೌ, ಹಂತುಂ, ಮಹಾಸುರಾನ್ ।

**ಅರ್ಥ** :- **ಐಂದ್ರಂ** = ಇಂದ್ರನದ್ದಾದ, **ಸ್ಯಂದನಂ** = ರಥವನ್ನು, **ಆರುಹ್ಯ** = ಏರಿ, **ಪಾರ್ಥಃ** = ಅರ್ಜುನನು, **ಮಾತಲಿಸಂಯುತಃ** = ಇಂದ್ರ

ಸಾರಥಿಯಾದ ಮಾತಲಿಯೊಂದಿಗೆ ಕೂಡಿಕೊಂಡು, **ಗಾಂಡೀವಂ ಧನುಃ** = ಗಾಂಡೀವ ಧನುಸ್ಸನ್ನು, **ಆದಾಯ** = ಧರಿಸಿ, **ಮಹಾಸುರಾನ್** = ನಿವಾತಕವಚರನ್ನು, **ಹಂತುಂ** = ನಾಶ ಮಾಡಲು, **ಯಯೌ** = ಹೋದನು.

**ತಾತ್ಪರ್ಯ** :- ಅರ್ಜುನ ಮಾತಲಿ ಸಹಿತನಾಗಿ ಇಂದ್ರನ ರಥವನ್ನೇರಿ ಗಾಂಡೀವಿಯಾಗಿ ಮಹಾಸುರರನ್ನು ಸದೆ ಬಡಿಯಲು ಹೊರಟ.

**ಶಂಖಂ ದದುಸ್ತಸ್ಯ ದೇವಾ ದೇವದತ್ತಃ ಸ ಶಂಖರಾಟ್ ।**
**ನಾದಯನ್ ಶಂಖಘೋಷೇಣ ಧನುರ್ವಿಷ್ಫಾರಯನ್ ಮಹತ್ ॥ ೩೦೭ ॥**

**ದಧಾನಃ ಕುಂಡಲೇ ದಿವ್ಯೇ ಶಕ್ರದತ್ತೇ ಸುಭಾಸ್ವರೇ ।**
**ಆಸಸಾದ ಪುರಂ ದಿವ್ಯಂ ದೈತ್ಯಾನಾಮಿಂದ್ರನಂದನಃ ॥ ೩೦೮ ॥**

**ಪದಚ್ಛೇದ :- ಶಂಖಂ, ದದುಃ, ತಸ್ಯ, ದೇವಾಃ, ದೇವದತ್ತಃ, ಸಃ, ಶಂಖರಾಟ್, ನಾದಯನ್, ಶಂಖಘೋಷೇಣ, ಧನುಃ, ವಿಸ್ಫಾರಯನ್, ಮಹತ್, ದಧಾನಃ, ಕುಂಡಲೇ, ದಿವ್ಯೇ, ಶಕ್ರದತ್ತೇ, ಸುಭಾಸ್ವರೇ, ಆಸಸಾದ, ಪುರಂ, ದಿವ್ಯಂ, ದೈತ್ಯಾನಾಂ, ಇಂದ್ರನಂದನಃ ।**

**ಅರ್ಥ** :- **ತಸ್ಯ** = ಆ ಅರ್ಜುನನಿಗೆ, **ದೇವಾಃ** = ದೇವತೆಗಳು, **ಶಂಖಂ** = ಶಂಖವನ್ನು, **ದದುಃ** = ಕೊಟ್ಟರು, **ಸಃ** = ಆ, **ಶಂಖರಾಟ್** = ಉತ್ತಮವಾದ ಶಂಖವು, **ದೇವದತ್ತಃ** = 'ದೇವದತ್ತ' ಎಂದು ಪ್ರಸಿದ್ಧವಾಯಿತು, **ಇಂದ್ರನಂದನಃ** = ಇಂದ್ರನನ್ನು ಸಂತೋಷಪಡಿಸುವ ಮಗನಾದ ಅರ್ಜುನನು, **ಶಂಖಘೋಷೇಣ** = ಶಂಖನಾದದಿಂದ, **ನಾದಯನ್** = (ದಿಕ್ಕುಗಳನ್ನು) ಪ್ರತಿಧ್ವನಿಸುತ್ತಾ, **ಮಹತ್** = ಹಿರಿದಾದ, **ಧನುಃ** = ಗಾಂಡೀವ ಧನುಸ್ಸನ್ನು, **ವಿಸ್ಫಾರಯನ್** = ಟಂಕರಿಸುವಂತೆ ಮಾಡುತ್ತಾ, **ಸುಭಾಸ್ವರೇ** = ಚೆನ್ನಾಗಿ ಹೊಳೆಯುವ, **ಶಕ್ರದತ್ತೇ** = ಇಂದ್ರದತ್ತವಾದ, **ದಿವ್ಯೇ** = ದಿವ್ಯವಾದ, **ಕುಂಡಲೇ** = ಕುಂಡಲಗಳನ್ನು, **ದಧಾನಃ** = ಧರಿಸಿಕೊಂಡು, **ದಿವ್ಯಂ** = ಹಿಂದೆ ದೇವತೆಗಳಿಗೆ ಸಂಬಂಧಿಸಿದ್ದ (ಬೆಳಗುವ), **ದೈತ್ಯಾನಾಂ ಪುರಂ** = ದೈತ್ಯರ ಪಟ್ಟಣವನ್ನು, **ಆಸಸಾದ** = ಹೊಂದಿದನು.

ತಾತ್ಪರ್ಯ :- ಅರ್ಜುನನಿಗೆ ದೇವತೆಗಳು ಒಂದು ಶಂಖವನ್ನು ಕೊಟ್ಟರು. ಅದು 'ದೇವದತ್ತ' ಎಂಬ ಶ್ರೇಷ್ಠವಾದ ಶಂಖ. ಇಂದ್ರದತ್ತವಾದ ಹೊಳೆಯುವ ಕುಂಡಲಗಳನ್ನು ಧರಿಸಿ ಶಂಖನಾದದಿಂದ ಎಲ್ಲ ದಿಕ್ಕುಗಳನ್ನೂ ಪ್ರತಿಧ್ವನಿಗೊಳಿಸುತ್ತಾ ಗಾಂಡೀವವನ್ನೂ ಠೇಂಕರಿಸುತ್ತ ದಾನವರ ದಿವ್ಯನಗರವನ್ನು ಸೇರಿದ ಅರ್ಜುನ.

**ತಸ್ಯ ಶಂಖಧ್ವನಿಂ ಶ್ರುತ್ವಾ ಗಾಂಡೀವಸ್ಯ ಚ ನಿಸ್ಸ್ವನಮ್ ।**
**ಅಭಿಸಸ್ರುರ್ಮಹಾವೀರ್ಯಾ ನಿವಾತಕವಚಾಸುರಾಃ ॥ ೩೦೯ ॥**

ಪದಚ್ಛೇದ :- ತಸ್ಯ, ಶಂಖಧ್ವನಿಂ, ಶ್ರುತ್ವಾ, ಗಾಂಡೀವಸ್ಯ, ಚ, ನಿಃಸ್ವನಂ, ಅಭಿಸಸ್ರುಃ, ಮಹಾವೀರ್ಯಾಃ, ನಿವಾತಕವಚಾಸುರಾಃ ।

ಅರ್ಥ :- **ತಸ್ಯ** = ಆ ಅರ್ಜುನನ, **ಶಂಖಧ್ವನಿಂ** = ಶಂಖನಾದವನ್ನು, **ಚ** = ಮತ್ತು, **ಗಾಂಡೀವಸ್ಯ** = ಗಾಂಡೀವದ, **ನಿಃಸ್ವನಂ** = ಠೇಂಕಾರವನ್ನು, **ಶ್ರುತ್ವಾ** = ಕೇಳಿ, **ಮಹಾವೀರ್ಯಾಃ** = ಮಹಾವೀರರಾದ, **ನಿವಾತಕವಚಾಸುರಾಃ** = ನಿವಾತಕವಚರೆಂಬ ಅಸುರರು (ಗಣವು), **ಅಭಿಸಸ್ರುಃ** = ಬಂದೆರಗಿದರು.

ತಾತ್ಪರ್ಯ :- ಅರ್ಜುನನ ಶಂಖಧ್ವನಿಯನ್ನು ಗಾಂಡೀವದ ಧ್ವನಿಯನ್ನೂ ಕೇಳಿ ಮಹಾಬಲಿಷ್ಠರಾದ ನಿವಾತಕವಚಾಸುರರು ಇದಿರಿಗೆ ಬಂದರು.

**ತಿಸ್ರಃ ಕೋಟ್ಯೋ ದಾನವಾನಾಂ ಸ್ವಯಂಭುವರಗರ್ವಿತಾಃ ।**
**ನಾನಾಯುಧೈ ರಣೇ ಪಾರ್ಥಮಭ್ಯವರ್ಷನ್ ಸುಸಂಹತಾಃ ॥ ೩೧೦ ॥**

ಪದಚ್ಛೇದ :- ತಿಸ್ರಃ, ಕೋಟ್ಯಃ,ದಾನವಾನಾಂ, ಸ್ವಯಂಭುವರಗರ್ವಿತಾಃ, ನಾನಾಯುಧೈಃ, ರಣೇ, ಪಾರ್ಥಂ, ಅಭ್ಯವರ್ಷನ್, ಸುಸಂಹತಾಃ ।

ಅರ್ಥ :- **ಸ್ವಯಂಭುವರಗರ್ವಿತಾಃ** = ಬ್ರಹ್ಮದೇವರ (ಅಜೇಯತ್ವ) ವರದಿಂದ ಕೊಬ್ಬಿದ, **ದಾನವಾನಾಂ** = ದಾನವರ, **ತಿಸ್ರಃ ಕೋಟ್ಯಃ** = ಮೂರು ಕೋಟಿ ಸಂಖ್ಯೆಯು, **ಸುಸಂಹತಾಃ** = ಒಂದೇ ಅಭಿಪ್ರಾಯವುಳ್ಳವರಾಗಿ ಸುದೃಢರಾಗಿ, **ರಣೇ** = ಯುದ್ಧದಲ್ಲಿ, **ನಾನಾಯುಧೈಃ** = ಅನೇಕ ವಿಧವಾದ ಆಯುಧಗಳಿಂದ, **ಪಾರ್ಥಂ** = ಪಾರ್ಥನನ್ನು, **ಅಭ್ಯವರ್ಷನ್** = ತೋಯಿಸಿದರು.

ತಾತ್ಪರ್ಯ :- ಬ್ರಹ್ಮವರದಿಂದ ದೃಪ್ತರಾದ ಮೂರು ಕೋಟಿ ದಾನವರು ಚೆನ್ನಾಗಿ ಸಂಘಟಿತರಾಗಿ ಯುದ್ಧದಲ್ಲಿ ಅರ್ಜುನನ ಮೇಲೆ ನಾನಾ ಆಯುಧಗಳ ಮಳೆಗರೆದರು.

**ತೇಷಾಂ ಸ ಶಸ್ತ್ರಾಣಿ ಕಿರೀಟಮಾಲೀ**
**ನಿವಾರ್ಯ ಗಾಂಡೀವಧನುಃಪ್ರಮುಕ್ತೈಃ ।**
**ಶರೈಃ ಶಿರಾಂಸಿ ಪ್ರಚಕರ್ತ ವೀರೋ**
**ಮಹಾಸ್ತ್ರಶಿಕ್ಷಾಬಲಸಂಪ್ರಯುಕ್ತೈಃ ॥ ೩೧೧ ॥**

**ಪದಚ್ಛೇದ :- ತೇಷಾಂ, ಸಃ, ಶಸ್ತ್ರಾಣಿ, ಕಿರೀಟಮಾಲೀ, ನಿವಾರ್ಯ, ಗಾಂಡೀವಧನುಃಪ್ರಮುಕ್ತೈಃ, ಶರೈಃ, ಶಿರಾಂಸಿ, ಪ್ರಚಕರ್ತ, ವೀರಃ, ಮಹಾಸ್ತ್ರಶಿಕ್ಷಾಬಲಸಂಪ್ರಯುಕ್ತೈಃ ।**

**ಅರ್ಥ :- ಕಿರೀಟಮಾಲೀ** = (ದೇವೇಂದ್ರ ಕೊಟ್ಟ) 'ಕಿರೀಟ' ಮತ್ತು ವಿಜಯಮಾಲೆಯನ್ನು ಧರಿಸಿದ್ದ, **ಸಃ** = ಅರ್ಜುನನು, **ತೇಷಾಂ** = ನಿವಾತಕವಚರ, **ಶಸ್ತ್ರಾಣಿ** = ಶಸ್ತ್ರಗಳನ್ನು, **ಗಾಂಡೀವಧನುಃಪ್ರಮುಕ್ತೈಃ** = ಗಾಂಡೀವ ಧನುಸ್ಸಿನಿಂದ ಹೊರಬಂದ, **ಶರೈಃ** = ಬಾಣಗಳಿಂದ, **ನಿವಾರ್ಯ** = ತಡೆದು, **ಮಹಾಸ್ತ್ರಶಿಕ್ಷಾಬಲಸಂಪ್ರಯುಕ್ತೈಃ** = ಮಹಾಸ್ತ್ರವಿದ್ಯೆಯಿಂದ ಕೂಡಿದ ಬಲದಿಂದ ಬಿಡಲ್ಪಟ್ಟ ಬಾಣಗಳಿಂದ, **ಶಿರಾಂಸಿ** = ತಲೆಗಳನ್ನು, **ಪ್ರಚಕರ್ತ** = ಕತ್ತರಿಸಿದನು.

ತಾತ್ಪರ್ಯ :- ಕಿರೀಟ ಹಾರಗಳನ್ನು ಧರಿಸಿದ ವೀರ ಅರ್ಜುನ ನಿವಾತಕವಚರ ಶಸ್ತ್ರಗಳನ್ನು ತಡೆದು ಗಾಂಡೀವ ಧನುಸ್ಸಿನಿಂದ ಮಹಾಅಸ್ತ್ರಗಳ ಅಭ್ಯಾಸ ಬಲದಿಂದ ಚೆನ್ನಾಗಿ ಬಾಣಪ್ರಯೋಗ ಮಾಡಿ ಅವರ ತಲೆಗಳನ್ನು ಕತ್ತರಿಸಿದ.

ವಿಶೇಷಾಂಶ :- ಇಲ್ಲಿ ಅರ್ಜುನನನ್ನು 'ಕಿರೀಟಮಾಲೀ' ಎಂದು ಹೇಳಿದ್ದರಿಂದ ಈ ಹಿಂದೆ ದೇವೇಂದ್ರನು ಅರ್ಜುನನಿಗೆ ಕಿರೀಟದೊಂದಿಗೆ ವಿಜಯಮಾಲೆಯನ್ನೂ ತೊಡಿಸಿದ್ದ ಎಂದು ತಿಳಿಯುತ್ತದೆ.

ಸರ್ವೇ ಹತಾಸ್ತೇನ ಮಹಾರಥೇನ
ತೇ ದಾನವಾಃ ಸೋऽಪಿ ಯಯೌ ತಥಾऽನ್ಯಾನ್ ।
ಪೌಲೋಮಕಾಲೇಯಗಣಾಭಿಧಾನಾನ್
ಷಷ್ಟಿಂ ಸಹಸ್ರಾಣಿ ಮಹಾರಥಾನಾಮ್ ॥ ೩೧೨ ॥

ಪದಚ್ಛೇದ :– ಸರ್ವೇ, ಹತಾಃ, ತೇನ, ಮಹಾರಥೇನ, ತೇ, ದಾನವಾಃ, ಸಃ, ಅಪಿ, ಯಯೌ, ತಥಾ, ಅನ್ಯಾನ್, ಪೌಲೋಮಕಾಲೇಯಗಣಾಭಿಧಾನಾನ್, ಷಷ್ಟಿಂ, ಸಹಸ್ರಾಣಿ, ಮಹಾರಥಾನಾಂ ।

**ಅರ್ಥ** :- **ಮಹಾರಥೇನ** = ಮಹಾರಥಿಯಾದ, **ತೇನ** = ಅರ್ಜುನನಿಂದ, **ಸರ್ವೇ** = ಎಲ್ಲಾ, **ತೇ ದಾನವಾಃ** = ನಿವಾತಕವಚರು, **ಹತಾಃ** = ಸಾವನ್ನಪ್ಪಿದರು, **ಸಃ ಅಪಿ** = ಅರ್ಜುನನಾದರೂ, **ತಥಾ** = ಹಿಂದಿನಂತೆಯೇ, **ಅನ್ಯಾನ್** = ನಿವಾತಕವಚರಿಗಿಂತ ಬೇರೆಯವರಾದ, **ಪೌಲೋಮಕಾಲೇಯಗಣಾಭಿಧಾನಾನ್** = ಮಹಾರಥಿಕರ, **ಸಹಸ್ರಾಣಿ** = ಸಾವಿರದ, **ಷಷ್ಟಿಂ** = ಅರವತ್ತನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ** :- ಮಹಾರಥನಾದ ಅರ್ಜುನ ಆ ಎಲ್ಲ ದಾನವರನ್ನೂ ಸಂಹರಿಸಿದ. ಹಾಗೆ ಮಹಾರಥರಾದ ಅರವತ್ತು ಸಾವಿರ ಪೌಲೋಮ ಕಾಲೇಯಗಣಗಳೆಂಬ ಹೆಸರಿನ ಬೇರೆ ದಾನವರನ್ನೂ ಆಕ್ರಮಿಸಿದ.

**ವಿಶೇಷಾಂಶ** :- ಪುಲೋಮೆಯ ಮಕ್ಕಳು ಪೌಲೋಮರು, ಕಾಲಕೆಯ ಮಕ್ಕಳು ಕಾಲೇಯರು, ಇವರಿಬ್ಬರ ತಾಯಂದಿರು ಸಾವಿರ ವರ್ಷ ತಪಸ್ಸು ಮಾಡಿ ಬ್ರಹ್ಮದೇವರಿಂದ ವರವನ್ನು ಪಡೆದಿದ್ದರು, ತಮ್ಮ ಮಕ್ಕಳಿಗೆ ದುಃಖ ಕಡಿಮೆ ಇರಲಿ, ದೇವತೆಗಳೇ ಮೊದಲಾದವರಿಂದ ಸಾವು ಬೇಡ ಎಂದು. ಮನುಷ್ಯರಿಂದ ಅವಧ್ಯತ್ವ ಕೇಳಿರಲಿಲ್ಲ. ಇವರ ನಗರ ಹಿರಣ್ಯಪುರ ಇದು ಭೂಗರ್ಭದಲ್ಲಿ ನೀರಿನಲ್ಲಿ ಆಕಾಶದಲ್ಲೂ ಸಂಚರಿಸುತ್ತಿತ್ತು.

ತಾನಸ್ತ್ರಶಸ್ತ್ರಾಣ್ಯಭಿವರ್ಷಮಾಣಾನ್
ಧನಂಜಯಃ ಪಾಶುಪತಾಸ್ತ್ರತೋ ದ್ರಾಕ್ ।
ದಗ್ಧ್ವಾ ಯಯೌ ಪುನರೇವೇಂದ್ರಸದ್ಮ
ತಂ ಸಸ್ವಜೇ ಪ್ರೀತಿಯುತಶ್ಚ ಶಕ್ರಃ ॥ ೩೧೩ ॥

ಪದಚ್ಛೇದ :- ತಾನ್, ಅಸ್ತ್ರಶಸ್ತ್ರಾಣಿ, ಅಭಿವರ್ಷಮಾಣಾನ್, ಧನಂಜಯಃ, ಪಾಶುಪತಾಸ್ತ್ರತಃ, ದ್ರಾಕ್, ದಗ್ಧ್ವಾ, ಯಯೌ, ಪುನಃ, ಏವ, ಇಂದ್ರಸದ್ಮ, ತಂ, ಸಸ್ವಜೇ, ಪ್ರೀತಿಯುತಃ, ಚ, ಶಕ್ರಃ ।

ಅರ್ಥ :- ಧನಂಜಯಃ = ಧನಂಜಯನು, ಅಸ್ತ್ರಶಸ್ತ್ರಾಣಿ = ಅಸ್ತ್ರಶಸ್ತ್ರಗಳನ್ನು, ಅಭಿವರ್ಷಮಾಣಾನ್ = ಸುರಿಸುತ್ತಿರುವ, ತಾನ್ = ಪೌಲೋಮ ಕಾಲೇಯರನ್ನು, ದ್ರಾಕ್ = ಕೂಡಲೇ, ಪಾಶುಪತಾಸ್ತ್ರತಃ = ಪಾಶುಪತಾಸ್ತ್ರದಿಂದ, ದಗ್ಧ್ವಾ = ಸುಟ್ಟು, ಪುನಃ ಏವ = ಮತ್ತೇ, ಇಂದ್ರಸದ್ಮ = ಇಂದ್ರ ಭವನವನ್ನು ಕುರಿತು, ಯಯೌ = ಹೋದನು, ಶಕ್ರಃ ಚ = ಇಂದ್ರನಾದರೂ, ಪ್ರೀತಿಯುತಃ = ಪ್ರೀತಿಯಿಂದ ಕೂಡಿದವನಾಗಿ, ತಂ = ಅರ್ಜುನನನ್ನು, ಸಸ್ವಜೇ = ಆಲಿಂಗಿಸಿದನು.

ತಾತ್ಪರ್ಯ :- ಪೌಲೋಮ ಕಾಲಕೇಯರು ಅಸ್ತ್ರಶಸ್ತ್ರಗಳ ಮಳೆ ಸುರಿಸುತ್ತಿದ್ದಂತೆಯೇ ಅರ್ಜುನ ಅವರನ್ನು ಬೇಗನೆ ಪಾಶುಪತಾಸ್ತ್ರದಿಂದ ಸುಟ್ಟು ಪುನಃ ಸ್ವರ್ಗಲೋಕಕ್ಕೆ ಹೋದ. ಇಂದ್ರ ಸಂತುಷ್ಟನಾಗಿ ಅವನನ್ನು ಆಲಿಂಗಿಸಿದ.

ವಿಶೇಷಾಂಶ :- ಪಾಶುಪತಾಸ್ತ್ರ ಪಶುಪತಿ ದೃಷ್ಟವಾದದ್ದು ಅಷ್ಟೇ, ಇದರ ದೇವತೆ ನಾರಾಯಣನೇ -

**ಯಯುರಂಧಂ ತಮಸ್ತೇऽಪಿ ಸರ್ವದೇವದ್ವಿಷೋऽಸುರಾಃ ।**
**ಅಥಾನುಜ್ಞಾಪ್ಯ ಪಿತರಂ ರಥೇನೈಂದ್ರೇಣ ಭಾಸ್ವತಾ ।**
**ಸೋದರ್ಯಾಣಾಂ ಸಕಾಶಂ ಸ ಯಯೌ ವಜ್ರಧರಾತ್ಮಜಃ ॥ ೩೧೪ ॥**

ಪದಚ್ಛೇದ :- ಯಯುಃ, ಅಂಧಂತಮಃ, ತೇ, ಅಪಿ, ಸರ್ವೇ, ದೇವದ್ವಿಷಃ, ಅಸುರಾಃ, ಅಥ, ಅನುಜ್ಞಾಪ್ಯ, ಪಿತರಂ, ರಥೇನ, ಐಂದ್ರೇಣ, ಭಾಸ್ವತಾ, ಸೋದರ್ಯಾಣಾಂ, ಸಕಾಶಂ, ಸಃ, ಯಯೌ, ವಜ್ರಧರಾತ್ಮಜಃ ।

ಅರ್ಥ :- ದೇವದ್ವಿಷಃ = ದೇವದ್ವೇಷಿಗಳಾದ, ತೇ = ಆ, ಸರ್ವೇ = ಎಲ್ಲಾ, ಅಸುರಾಃ ಅಪಿ = ಅಸುರರೂ, ಅಂಧಂತಮಃ = ಅಂಧಂತಮಸ್ಸನ್ನು ಕುರಿತು, ಯಯುಃ = ಹೋದರು, ಅಥ = ಅನಂತರ, ಸಃ = ಆ, ವಜ್ರಧರಾತ್ಮಜಃ = ಇಂದ್ರನ ಮಗನಾದ ಅರ್ಜುನನು, ಪಿತರಂ = ಇಂದ್ರನನ್ನು,

**ಅನುಜ್ಞಾಪ್ಯ** = ಕೇಳಿ, **ಭಾಸ್ವತಾ** = ಹೊಳೆಯುವ, **ಐಂದ್ರೇಣ ರಥೇನ** = ಇಂದ್ರರಥದಿಂದ, **ಸೋದರ್ಯಾಣಾಂ** = ಸೋದರರ, **ಸಕಾಶಂ** = ಸಮೀಪಕ್ಕೆ, **ಯಯೌ** = ಹೋದನು.

**ತಾತ್ಪರ್ಯ** :- ದೇವಶತ್ರುಗಳಾದ ಆ ಅಸುರರೆಲ್ಲರೂ ಅಂಧಂತಮಸ್ಸಿಗೆ ಹೋದರು. ಅರ್ಜುನ ಇಂದ್ರನ ಅನುಮತಿ ಪಡೆದು ಹೊಳೆಯುವ ಇಂದ್ರ ರಥದಿಂದ ಸೋದರರ ಬಳಿಗೆ ಬಂದ.

**ಆಯಾಂತಮೀಕ್ಷ್ಯ ಬೀಭತ್ಸುಂ ಮುಮುದುರ್ಭ್ರಾತರೋऽಧಿಕಮ್ ।**
**ಊಷುಶ್ಚ ಚತುರೋऽಬ್ದಾಂಸ್ತೇ ಪುನರ್ಮೇರೌ ಪ್ರಮೋದಿನಃ ॥ ೩೧೫ ॥**

**ಪದಚ್ಛೇದ** :- ಆಯಾಂತಂ, ಈಕ್ಷ್ಯ, ಬೀಭತ್ಸುಂ, ಮುಮುದುಃ, ಭ್ರಾತರಃ, ಅಧಿಕಂ, ಊಷುಃ, ಚ, ಚತುರಃ, ಅಬ್ದಾನ್, ತೇ, ಪುನಃ, ಮೇರೌ, ಪ್ರಮೋದಿನಃ ।

**ಅರ್ಥ** :- **ಆಯಾಂತಂ** = ಬರುತ್ತಿರುವ, **ಬೀಭತ್ಸುಂ** = ಅರ್ಜುನನನ್ನು, **ಈಕ್ಷ್ಯ** = ಕಂಡು, **ಭ್ರಾತರಃ** = ಸೋದರರು, **ಅಧಿಕಂ** = ಅತಿಯಾಗಿ, **ಮುಮುದುಃ** = ಸಂತೋಷಗೊಂಡರು, **ತೇ** = ಪಾಂಡವರು, **ಪುನಃ** = ಮತ್ತೆ, **ಮೇರೌ** = ಮೇರುಪರ್ವತದಲ್ಲಿ, **ಪ್ರಮೋದಿನಃ** = ಆನಂದ ಭರಿತರಾಗಿ, **ಚತುರಃ ಅಬ್ದಾನ್ ಚ** = ನಾಲ್ಕು ವರ್ಷಗಳನ್ನು, **ಊಷುಃ** = ವಾಸ ಮಾಡಿದರು.

**ತಾತ್ಪರ್ಯ** :- ಅರ್ಜುನ ಬಂದುದನ್ನು ನೋಡಿ ಸೋದರರು ಬಹಳ ಸಂತೋಷಪಟ್ಟರು, ಬಳಿಕ ಪುನಃ ಮೇರುವಿನಲ್ಲಿ ನಾಲ್ಕು ವರ್ಷ ಆನಂದದಿಂದ ವಾಸ ಮಾಡಿದರು.

**ವಿಶೇಷಾಂಶ** :- ಇಲ್ಲಿ 'ಪುನಃ ಮೇರುವಿನಲ್ಲಿ ನಾಲ್ಕು ವರ್ಷ' ಎಂದುದರಿಂದ ಹಿಂದೆ ಭೀಮ ಕಮಲಗಳನ್ನು ಮೇರುವಿನಲ್ಲಿಯೇ ಸಂಪಾದಿಸಿದನೆಂಬ ವಾದಿರಾಜರ ಅಭಿಪ್ರಾಯ ಸರಿ ಎನ್ನಿಸುತ್ತದೆ. ಆದರೆ ಕೆಲವು ವಿದ್ವಾಂಸರು ಈ 'ಮೇರು' ಪರ್ವತವು ಹಿಮಾಲಯದ್ದೇ ಒಂದು ಶಿಖರ ಗಂಧಮಾದನದಂತೆ ಎಂದು ಅಭಿಪ್ರಾಯ ಪಡುತ್ತಾರೆ. ಆದ್ದರಿಂದ ಭೀಮ ಕಮಲಗಳನ್ನು ಸಂಪಾದಿಸಿದ್ದು ಗಂಧಮಾದನದಲ್ಲಿಯೇ ಎಂಬ ಬೇರೆ

ವ್ಯಾಖ್ಯಾನಗಳು ಕೂಡುತ್ತವೆ ಎನ್ನುತ್ತಾರೆ. ಹಾಗಿದ್ದರೂ ಪಾಂಡವರು ಗಂಧಮಾದನದಿಂದ ಮೇರುವಿಗೆ ಯಾವಾಗ ಹೋದರು ಎಂದು ಗೊತ್ತಾಗುವುದಿಲ್ಲ. ಆದ್ದರಿಂದ ವಾದಿರಾಜರ ಪಕ್ಷವೇ ಸರಿ ಇದ್ದಂತೆ ಕಾಣುತ್ತದೆ. ಇನ್ನೂ ವಿಮರ್ಶೆಯಾಗಬೇಕು.

**ಕಥಾಭಿರ್ವಾಸುದೇವಸ್ಯ ಧ್ಯಾನೇನಾಭ್ಯರ್ಚನೇನ ಚ ।**
**ಯಯೌ ಕಾಲಃ ಸುಖೇನೈವ ತೇಷಾಂ ವಿಷ್ಣುರತಾತ್ಮನಾಮ್ ॥ ೩೧೬ ॥**

**ಪದಚ್ಛೇದ :- ಕಥಾಭಿಃ, ವಾಸುದೇವಸ್ಯ, ಧ್ಯಾನೇನ, ಅಭ್ಯರ್ಚನೇನ, ಚ, ಯಯೌ, ಕಾಲಃ, ಸುಖೇನ, ಏವ, ತೇಷಾಂ, ವಿಷ್ಣುರತಾತ್ಮನಾಂ ।**

**ಅರ್ಥ** :- **ವಾಸುದೇವಸ್ಯ** = ವಾಸುದೇವನ, **ಕಥಾಭಿಃ** = ಲೀಲೆಗಳಿಂದ, **ಧ್ಯಾನೇನ** = ಧ್ಯಾನದಿಂದ, **ಅಭ್ಯರ್ಚನೇನ ಚ** = ಬಗೆ ಬಗೆಯಾದ ಅರ್ಚನೆಗಳಿಂದಲೂ, **ವಿಷ್ಣುರತಾತ್ಮನಾಂ** = ವಿಷ್ಣುವಿನಲ್ಲೇ, ಆಸಕ್ತವಾದ ಮನಸ್ಸುಳ್ಳವರಾದ, **ತೇಷಾಂ** = ಪಾಂಡವರ, **ಕಾಲಃ** = ವನವಾಸಕಾಲವು, **ಸುಖೇನ ಏವ** = ಅನಾಯಾಸವಾಗಿಯೇ, **ಯಯೌ** = ಕಳೆಯಿತು.

**ತಾತ್ಪರ್ಯ** :- ಹರಿಯಲ್ಲಿಯೇ ನೆಟ್ಟ ಮನಸ್ಸುಳ್ಳ ಪಾಂಡವರಿಗೆ ಹರಿಕಥೆಗಳಿಂದಲೂ ಧ್ಯಾನ ಪೂಜೆಗಳಿಂದಲೂ ಸುಖವಾಗಿಯೇ ಕಾಲ ಕಳೆಯಿತು.

**ವಿಶೇಷಾಂಶ** :- ಈ ಅವಧಿಯಲ್ಲಿಯೇ ಸುಮಾರು ವನವಾಸದ ಹನ್ನೊಂದು ವರ್ಷಗಳು ಕಳೆದವು.

**ನೈವ ಶತ್ರೂನನುತ್ಸಾದ್ಯ ನಾನಾದಾಯ ಮಹದ್ ಯಶಃ ।**
**ನಾಕೃತ್ವಾ ವಾಸುದೇವಾಜ್ಞಾಂ ರಾಜ್ಞಾಂ ಮುಖ್ಯಗತಿರ್ಭವೇತ್ ॥ ೩೧೭ ॥**

**ಪದಚ್ಛೇದ** :- ನ, ಏವ, ಶತ್ರೂನ್, ಅನುತ್ಸಾದ್ಯ, ನ, ಅನಾದಾಯ, ಮಹದ್, ಯಶಃ, ನ, ಅಕೃತ್ವಾ, ವಾಸುದೇವಾಜ್ಞಾಂ, ರಾಜ್ಞಾಂ, ಮುಖ್ಯಗತಿಃ, ಭವೇತ್ ।

**ಅರ್ಥ** :- **ರಾಜ್ಞಾಂ** = ಕ್ಷತ್ರಿಯರಿಗೆ, **ಶತ್ರೂನ್** = ಹರಿದ್ವೇಷಯುತರಾದ ಶತ್ರುಗಳನ್ನು ಮತ್ತು ಅಂತಃಶತ್ರುಗಳನ್ನು, **ಅನುತ್ಸಾದ್ಯ** = ನಾಶಮಾಡದೇ,

**ಮಹದ್** = ಹಿರಿದಾದ, **ಯಶಃ** = ಯಶಸ್ಸನ್ನು, **ಅನಾದಾಯ** = ಸ್ವೀಕರಿಸದೇ, **ವಾಸುದೇವಾಜ್ಞಾಂ** = ವಾಸುದೇವನ ಆಣತಿಯನ್ನು, **ಅಕೃತ್ವಾ** = ಪಾಲಿಸದೆ, **ಮುಖ್ಯಗತಿಃ** = ವಿಷ್ಣುಲೋಕಪ್ರಾಪ್ತಿಯು, **ನ ನ ನೈವ ಭವೇತ್** = ಎಂದೆಂದಿಗೂ ಆಗಲಾರದು.

**ತಾತ್ಪರ್ಯ :-** ಶತ್ರುಗಳನ್ನು ನಾಶಮಾಡದೆ ಮಹಾಯಶಸ್ಸನ್ನು ಸಂಪಾದಿಸದೆ ಹರಿಯಾಜ್ಞೆಯನ್ನು ನಡೆಸದೆ ರಾಜರಿಗೆ ಮುಖ್ಯವಾದ ಸದ್ಗತಿ ದೊರೆಯಲಾರದು.

**ವಿಶೇಷಾಂಶ :-** ೧. 'ಹದಿನಾಲ್ಕನೇ ವರ್ಷದಲ್ಲಿ ನಾನು ಶತ್ರುಸಂಹಾರಕ್ಕೆ ಸಿದ್ಧ' ಎಂಬ ಯುಧಿಷ್ಠಿರನ ಪ್ರತಿಜ್ಞೆಯನ್ನು, ಯುಧಿಷ್ಠಿರನು ಈಗಿನ ಸುಖದಲ್ಲಿ ಮರೆಯದಿರಲಿ ಎಂದು ಭೀಮನು ಎಚ್ಚರಿಸುತ್ತಿದ್ದಾನೆ.

೨. ವರಾದಿಗಳಿಂದ ಅಜೇಯರಾದ ಶತ್ರುಗಳನ್ನು ಗೆಲ್ಲುವುದು ಮಹಾಯಶಸ್ಸು.

**ತದನ್ಯೇಷಾಂ ತು ವರ್ಣಾನಾಂ ಕ್ಷಮಾ ಬಾಹ್ಯೇಷು ಶತ್ರುಷು ।**
**ಪ್ರಾಯೋ ಧರ್ಮ ಇತಿ ಪ್ರೋಕ್ತೋ ಹರೇರಾಜ್ಞಾಽಖಿಲಸ್ಯ ಚ ॥ ೩೧೮ ॥**

**ಪದಚ್ಛೇದ :-** ತದನ್ಯೇಷಾಂ, ತು, ವರ್ಣಾನಾಂ, ಕ್ಷಮಾ, ಬಾಹ್ಯೇಷು, ಶತ್ರುಷು, ಪ್ರಾಯಃ, ಧರ್ಮಃ, ಇತಿ, ಪ್ರೋಕ್ತಃ, ಹರೇಃ, ಆಜ್ಞಾ, ಅಖಿಲಸ್ಯ, ಚ ।

**ಅರ್ಥ :- ತದನ್ಯೇಷಾಂ** = ಕ್ಷತ್ರಿಯವರ್ಣೇತರವಾದ, **ವರ್ಣಾನಾಂ** = ಬ್ರಾಹ್ಮಣಾದಿವರ್ಣಗಳಿಗೆ, **ಬಾಹ್ಯೇಷು** = ಹೊರಗಿನ, **ಶತ್ರುಷು** = ಶತ್ರುಗಳಲ್ಲಿ, **ಕ್ಷಮಾ** = ಕ್ಷಮೆಯು, **ಪ್ರಾಯಃ** = ಪ್ರಾಯಶಃ, **ಧರ್ಮಃ** = ಧರ್ಮವು, **ತು** = ಆದರೆ, **ಹರೇಃ ಆಜ್ಞಾ** = ಹರಿಯ ಆಜ್ಞೆಯು, **ಅಖಿಲಸ್ಯ ಚ** = ಎಲ್ಲರಿಗೂ (ಧರ್ಮವು), **ಇತಿ** = ಎಂದು, **ಪ್ರೋಕ್ತಃ** = ಹೇಳಲ್ಪಟ್ಟಿದೆ.

**ತಾತ್ಪರ್ಯ :-** ಬೇರೆ ವರ್ಣದವರಿಗೆ ಬಾಹ್ಯ ಶತ್ರುಗಳಲ್ಲಿ ಪ್ರಾಯಃ ಕ್ಷಮೆಯೆ ಧರ್ಮವೆಂದು ಹೇಳಲ್ಪಟ್ಟಿದೆ. ನಾಲ್ಕು ವರ್ಣದವರಿಗೂ

ಆಶ್ರಮದವರಿಗೂ (ಎಲ್ಲರಿಗೂ) ಶ್ರುತಿಸ್ಮೃತಿ ರೂಪವಾದ ಹರಿಯಾಜ್ಞೆಯನ್ನು ಅನುಸರಿಸುವುದೇ ಧರ್ಮವೆನಿಸುತ್ತದೆ.

ವಿಶೇಷಾಂಶ :- ೧. ಅಂತಃಶತ್ರುಗಳಾದ ಕಾಮಕ್ರೋಧಾದಿಗಳಲ್ಲಿ ಕ್ಷಮೆಯು ಯಾರಿಗೂ ಧರ್ಮವಲ್ಲ ಎಂದು ಸೂಚಿಸಲು 'ಬಾಹ್ಯೇಷು' ಎಂದಿದ್ದಾರೆ.

೨. ಬ್ರಾಹ್ಮಣಾದಿಗಳಿಗೂ ಕೂಡ ವೈದಿಕ ಕರ್ಮವನ್ನು ನಿಷೇಧಿಸುವ 'ವೇನ' ಮೊದಲಾದ ಬಾಹ್ಯ ಶತ್ರುಗಳಲ್ಲಿ ಕ್ಷಮೆ ಧರ್ಮವಲ್ಲ ಎಂದು ತಿಳಿಸಲು 'ಪ್ರಾಯಃ' ಎನ್ನಲಾಗಿದೆ.

**ಇತಿ ಭೀಮವಚಃ ಶ್ರುತ್ವಾ ಸಸೋದರ್ಯೋ ಯುಧಿಷ್ಠಿರಃ ।**
**ರಾಕ್ಷಸಸ್ಕಂಧಮಾರೂಢಃ ಕೃಷ್ಣಯಾ ಚಾಽಯಯೌ ಪುನಃ ॥ ೩೧೯ ॥**

**ಪದಚ್ಛೇದ** :- ಇತಿ, ಭೀಮವಚಃ, ಶ್ರುತ್ವಾ, ಸಸೋದರ್ಯಃ, ಯುಧಿಷ್ಠಿರಃ, ರಾಕ್ಷಸಸ್ಕಂಧಂ, ಆರೂಢಃ, ಕೃಷ್ಣಯಾ, ಚ, ಆಯಯೌ, ಪುನಃ ।

**ಅರ್ಥ** :- ಇತಿ = ಹೀಗೆಂದು, ಭೀಮವಚಃ = ಭೀಮನ ಮಾತನ್ನು, ಶ್ರುತ್ವಾ = ಕೇಳಿ, ಯುಧಿಷ್ಠಿರಃ = ಧರ್ಮರಾಜನು, ಸಸೋದರ್ಯಃ = ತಮ್ಮಂದಿರೊಡನೆ, ಕೃಷ್ಣಯಾ ಚ = ದ್ರೌಪದಿಯೊಂದಿಗೂ ಕೂಡಿ, ರಾಕ್ಷಸಸ್ಕಂಧಂ = ಘಟೋತ್ಕಚನ ಹೆಗಲನ್ನು, ಆರೂಢಃ = ಏರಿ, ಪುನಃ = ಮತ್ತೆ, ಆಯಯೌ = ಹಿಮಾಲಯದ ಕೆಳಭಾಗಕ್ಕೆ ಬಂದನು.

**ತಾತ್ಪರ್ಯ** :- ಹೀಗೆ ಭೀಮನ ಮಾತನ್ನು ಕೇಳಿ ಯುಧಿಷ್ಠಿರ ದ್ರೌಪದೀ ಸಮೇತನಾಗಿ ಸೋದರರೊಂದಿಗೆ ಘಟೋತ್ಕಚ ಮುಂತಾದ ರಾಕ್ಷಸರ ಹೆಗಲನ್ನೇರಿ ಪುನಃ ಹಿಮಾಲಯದ ಕೆಳಭಾಗಕ್ಕೆ ಬಂದನು.

**ಪಾದೇಷು ತೇಷು ನಿವಸತ್ಸು ಹಿಮಾಚಲಸ್ಯ**
**ಯಾಮ್ಯಾಶ್ರಿತೇಷು ಪವಮಾನಸುತಃ ಕದಾಚಿತ್ ।**
**ಧನ್ವೀ ಮೃಗಾನನುಚರನ್ ಸಹಸಾಽಽಸಸಾದ**
**ಹಾಽಯೋಃ ಸುತಂ ನಹುಷಮಾಜಗರೋರುರೂಪಮ್ ॥ ೩೨೦ ॥**

ಪದಚ್ಛೇದ :- ಪಾದೇಷು, ತೇಷು, ನಿವಸತ್ಸು, ಹಿಮಾಲಯಸ್ಯ, ಯಾಮ್ಯಾಶ್ರಿತೇಷು, ಪವಮಾನಸುತಃ, ಕದಾಚಿತ್, ಧನ್ವೀ, ಮೃಗಾನ್, ಅನುಚರನ್, ಸಹಸಾ, ಆಸಸಾದ, ಹ, ಆಯೋಃ, ಸುತಂ, ನಹುಷಂ, ಆಜಗರೋರುರೂಪಂ ।

**ಅರ್ಥ** :- **ಹಿಮಾಲಯಸ್ಯ** = ಹಿಮಾಲಯಪರ್ವತದ, **ಯಾಮ್ಯಾಶ್ರಿತೇಷು** = ದಕ್ಷಿಣಭಾಗವನ್ನು ಆಶ್ರಯಿಸಿರುವ, **ಪಾದೇಷು** = ಉಪಪರ್ವತಗಳಲ್ಲಿ, **ತೇಷು** = ಪಾಂಡವರು, **ನಿವಸತ್ಸು** = ವಾಸಮಾಡುತ್ತಿರಲು, **ಕದಾಚಿತ್** = ಒಮ್ಮೆ, **ಪವಮಾನಸುತಃ** = ಭೀಮನು, **ಧನ್ವೀ** = ಧನುಸ್ಸನ್ನು ಧರಿಸಿ, **ಮೃಗಾನ್** = ಕ್ರೂರಮೃಗಗಳನ್ನು, **ಅನುಚರನ್** = ಬೇಟೆಯಾಡುತ್ತ, **ಸಹಸಾ** = ದೈವೇಚ್ಛೆಯಿಂದ, **ಆಜಗರೋರುರೂಪಂ** = ಅತಿ ದೊಡ್ಡ ಹೆಬ್ಬಾವಿನ ರೂಪದಲ್ಲಿರುವ, **ನಹುಷಂ** = ನಹುಷನನ್ನು, **ಆಯೋಃ ಸುತಂ** = 'ಆಯು' ನಾಮಕ ರಾಜನ ಮಗನಾಗಿದ್ದವನನ್ನು, **ಆಸಸಾದ** = ಹೊಂದಿದನು, **ಹ** = ಸಂತೋಷ.

**ತಾತ್ಪರ್ಯ** :- ಹಿಮಾಲಯದ ದಕ್ಷಿಣದ ಉಪಪರ್ವತಗಳಲ್ಲಿ ಪಾಂಡವರು ವಾಸ ಮಾಡುತ್ತಿದ್ದಾಗ ಒಂದು ದಿನ ಭೀಮ ಬಿಲ್ಲು ಹಿಡಿದು ಕ್ರೂರ ಮೃಗಗಳನ್ನು ಬೇಟೆಯಾಡುತ್ತ ಹೆಬ್ಬಾವಿನ ರೂಪದಲ್ಲಿದ್ದ ನಹುಷನ ಬಳಿಗೆ ಬಂದ.

**ಪೂರ್ವಂ ಹಿ ವೃತ್ರವಧತೋಽಂಬುಜನಾಳತಂತು-**
**ಸಂಸ್ಥೇ ಶಚೀಪ್ರಣಯಿನಿ ಪ್ರವಿಚಿಂತ್ಯ ದೇವಾಃ ।**
**ಚಕ್ರುಸ್ತ್ರಿಲೋಕಪತಿಮಾಯುಸುತಂ ವರಂ ಚ**
**ದತ್ವಾಽಕ್ಷಿಗೋಚರತಪೋಽಸ್ಯ ಬಲಂ ಚ ಸರ್ವಮ್ ॥ ೩೨೧ ॥**

ಪದಚ್ಛೇದ :- ಪೂರ್ವಂ, ಹಿ, ವೃತ್ರವಧತಃ, ಅಂಬುಜನಾಲತಂತುಸಂಸ್ಥೇ, ಶಚೀಪ್ರಣಯಿನಿ, ಪ್ರವಿಚಿಂತ್ಯ, ದೇವಾಃ, ಚಕ್ರುಃ, ತ್ರಿಲೋಕಪತಿಂ, ಆಯುಸುತಂ, ವರಂ,ಚ, ದತ್ವಾ, ಅಕ್ಷಿಗೋಚರತಪಃ, ಅಸ್ಯ, ಬಲಂ, ಚ, ಸರ್ವಂ ।

**ಅರ್ಥ** :- **ಪೂರ್ವಂ** = ಹಿಂದೆ, **ವೃತ್ರವಧತಃ** = ವೃತ್ರಾಸುರ ವಧೆಯಿಂದ (ಬ್ರಹ್ಮಹತ್ಯೆಯಿಂದ), **ಶಚೀಪ್ರಣಯಿನಿ** = ಇಂದ್ರನು, **ಅಂಬುಜನಾಲತಂತುಸಂಸ್ಥೇ** = ಕಮಲದ ದಂಟಿನ ಎಸಳಿನಲ್ಲಿ

(ಸೂಕ್ಷ್ಮರೂಪದಿಂದ) ಇರುತ್ತಿರಲು, **ದೇವಾಃ** = ದೇವತೆಗಳು, **ಪ್ರವಿಚಿಂತ್ಯ** = ಮಂತ್ರಾಲೋಚನೆ ನಡೆಸಿ, **ಆಯುಸುತಂ** = ನಹುಷನನ್ನು, **ತ್ರಿಲೋಕಪತಿಂ** = ತ್ರಿಲೋಕಪತಿಯನ್ನಾಗಿ, **ಚಕ್ರುಃ** = ಮಾಡಿದರು, **ಅಸ್ಯ** = ಈ ನಹುಷನಿಗೆ, **ಸರ್ವಂ** = ಎಲ್ಲ, **ಅಕ್ಷಿಗೋಚರತಪಃ** = ಕಣ್ಣಿಗೆ ಬಿದ್ದವರ ತಪಸ್ಸನ್ನು, **ಚ** = ಮತ್ತು, **ಬಲಂ** = ಬಲವನ್ನು, **ವರಂ ಚ** = ವರವನ್ನಾಗಿಯೂ, **ದತ್ವಾ** = ಕೊಟ್ಟು.

**ತಾತ್ಪರ್ಯ** :- ಹಿಂದೆ ವೃತ್ರವಧೆಯ ನಿಮಿತ್ತದಿಂದ ಇಂದ್ರ ಕಮಲನಾಳದ ಎಸಳಿನಲ್ಲಿರುವಾಗ ದೇವತೆಗಳು ವಿಚಾರ ಮಾಡಿ ನಹುಷನನ್ನು ಅವನ ಕಣ್ಣಿಗೆ ಬಿದ್ದವರ ಎಲ್ಲ ತಪಸ್ಸೂ ಬಲವೂ ಅವನಿಗೆ ಬರುವಂತೆ ವರ ನೀಡಿ ಇಂದ್ರ ಪದವಿಯನ್ನೇರಿಸಿದರು.

**ವಿಶೇಷಾಂಶ** :- ೧. ವೃತ್ರವಧೆಯು ಇಂದ್ರನಿಗೆ ಪ್ರಾರಬ್ಧ ಕರ್ಮ ಸೂಚಕವಷ್ಟೇ ಪಾಪವಲ್ಲ.
೨. ದೇವತೆಗಳು ಮತ್ತೊಬ್ಬ ದೇವತೆಯ ಪದವಿಯನ್ನು ಎರುವುದಿಲ್ಲ.
೩. ನಹುಷನಿಗೆ 'ಇಂದ್ರ'ನಾಗುವ ಪ್ರಾರಬ್ಧವಿತ್ತು.

**ಸ ಸರ್ವಸುರವಿಪ್ರೇಂದ್ರತಪಶ್ಚ ಬಲಮಕ್ಷಯಮ್ ।**
**ಅವಾಪ್ಯ ವವೃಧೇ ನಿತ್ಯಂ ದರ್ಪಾದೈಚ್ಛಚ್ಛಚೀಮಪಿ ॥ ೩೨ ॥**

ಪದಚ್ಛೇದ :- ಸಃ, ಸರ್ವಸುರವಿಪ್ರೇಂದ್ರತಪಃ, ಚ, ಬಲಂ, ಅಕ್ಷಯಂ, ಅವಾಪ್ಯ, ವವೃಧೇ, ನಿತ್ಯಂ, ದರ್ಪಾದ್, ಐಚ್ಛತ್, ಶಚೀಂ, ಅಪಿ ।

**ಅರ್ಥ** :- **ಸಃ** = ನಹುಷನು, **ಸರ್ವಸುರವಿಪೇಂದ್ರತಪಃ** = ಎಲ್ಲಾ ಸುರರ ಹಾಗೂ ವಿಪ್ರೋತ್ತಮರ ತಪಸ್ಸನ್ನು, **ಚ** = ಮತ್ತು, **ಅಕ್ಷಯಂ** = ನಾಶವಿಲ್ಲದ, **ಬಲಂ** = ಬಲವನ್ನು, **ಅವಾಪ್ಯ** = ಹೊಂದಿ, **ನಿತ್ಯಂ** = ನಿರಂತರವಾಗಿ, **ವವೃಧೇ** = ಬೆಳೆದನು, **ದರ್ಪಾತ್** = (ನಾನೇ ಇಂದ್ರ ಎಂಬ) ಅಹಂಕಾರದಿಂದ, **ಶಚೀಂ ಅಪಿ** = ಇಂದ್ರಾಣೀಯನ್ನೂ, **ಐಚ್ಛತ್** = ಪತ್ನಿಯನ್ನಾಗಿ ಬಯಸಿದನು.

**ತಾತ್ಪರ್ಯ** :- ನಹುಷ ಎಲ್ಲ ದೇವ ಋಷಿಗಳ ಅಕ್ಷಯವಾದ ತಪಸ್ಸನ್ನು ಬಲವನ್ನೂ ಹೊಂದಿ ಮೆರೆಯುತ್ತ ದರ್ಪದಿಂದ ಬೀಗಿ ಶಚೀಯನ್ನೂ ಬಯಸಿದ.

ಸ ಇಂದ್ರವಚನಾಚ್ಛಚ್ಯಾ ಮಹರ್ಷಿಗಣವಾಹನೇ ।
ನಿಯುಕ್ತೋ ವಂಚನಾಯೈವ ವಾಹಯಾಮಾಸ ತಾನೃಷೀನ್ ॥ ೩೨೩ ॥

ಪದಚ್ಛೇದ :- ಸಃ, ಇಂದ್ರವಚನಾತ್, ಶಚ್ಯಾ, ಮಹರ್ಷಿಗಣವಾಹನೇ, ನಿಯುಕ್ತಃ, ವಂಚನಾಯ, ಏವ, ವಾಹಯಾಮಾಸ, ತಾನ್, ಋಷೀನ್ ।

ಅರ್ಥ :- ಇಂದ್ರವಚನಾತ್ = ಇಂದ್ರನ ಮಾತಿನಂತೆ, ಶಚ್ಯಾ = ಶಚೀದೇವಿಯಿಂದ, ವಂಚನಾಯ ಏವ = ವಂಚಿಸಲೆಂದೇ, ಮಹರ್ಷಿಗಣವಾಹನೇ = ಮಹರ್ಷಿಗಳ ಗಣದಿಂದ (ತನ್ನ) ಶಿಬಿಕೆಯನ್ನು ಹೊರಿಸುವುದರಲ್ಲಿ, ನಿಯುಕ್ತಃ = ಪ್ರೇರಿತನಾದ, ಸಃ = ನಹುಷನು, ತಾನ್ ಋಷೀನ್ = ಆ ಋಷಿಗಳಿಂದ, ವಾಹಯಾಮಾಸ = ಹೊರಿಸಿದನು.

ತಾತ್ಪರ್ಯ :- ಶಚೀದೇವಿಯು ಇಂದ್ರನ ಮಾತಿನಂತೆ ನಹುಷನನ್ನು ವಂಚಿಸುವುದಕ್ಕಾಗಿ ಮಹರ್ಷಿ ಸಮೂಹದಿಂದ ವಾಹನ ಹೊರಿಸಲು ಹೇಳಿದಳು, ನಹುಷ ಆ ಋಷಿಗಳಿಂದ ತನ್ನ ವಾಹನವನ್ನು ಹೊರಿಸಿದ.

ವಿಶೇಷಾಂಶ :- ನಹುಷನನ್ನು ವಂಚಿಸುವುದಕ್ಕಾಗಿ ಇಂದ್ರನ ಮಾತಿನಂತೆ 'ನೀನು ಮಹರ್ಷಿಗಳು ಹೊತ್ತ ಶಿಬಿಕೆಯಲ್ಲಿ ನಾನಿದ್ದಲ್ಲಿಗೆ ಬಂದರೆ ನಿನಗೆ ಒಲಿಯುವೆ' ಎಂದು ನಹುಷನಿಗೆ ಶಚೀದೇವಿ ಹೇಳಿದ್ದಳು.

ಸ ಶಚೀಪ್ರತಿಷೇಧಾರ್ಥಮಗಸ್ತ್ಯೇನ ಮಹಾತ್ಮನಾ ।
ವೇದಪ್ರಾಮಾಣ್ಯವಿಷಯೇ ಪೃಷ್ಟೋ ನೇತ್ಯಾಹ ಮೂಢಧೀಃ ।
ಪ್ರಮಾಣಮಿತಿ ತೇನೋಕ್ತಃ ಶಿರಸ್ಯೇನಂ ಪದಾಽಹನತ್ ॥ ೩೨೪ ॥

ಪದಚ್ಛೇದ :- ಸಃ, ಶಚೀಪ್ರತಿಷೇಧಾರ್ಥಂ, ಅಗಸ್ತ್ಯೇನ, ಮಹಾತ್ಮನಾ, ವೇದಪ್ರಾಮಾಣ್ಯವಿಷಯೇ, ಪೃಷ್ಟಃ, ನ, ಇತಿ, ಆಹ, ಮೂಢಧೀಃ, ಪ್ರಮಾಣಂ, ಇತಿ, ತೇನ, ಉಕ್ತಃ, ಶಿರಸಿ, ಏನಂ, ಪದಾ, ಅಹನತ್ ।

ಅರ್ಥ :- ಮಹಾತ್ಮನಾ = ಮಹಾತ್ಮನಾದ, ಅಗಸ್ತ್ಯೇನ = ಅಗಸ್ತ್ಯಮುನಿಯಿಂದ, ವೇದಪ್ರಾಮಾಣ್ಯವಿಷಯೇ = ವೇದಪ್ರಾಮಾಣ್ಯದ ವಿಷಯದಲ್ಲಿ, ಶಚೀಪ್ರತಿಷೇಧಾರ್ಥಂ = ಶಚೀ ರಮಣ ನಿಷೇಧಕ್ಕಾಗಿ, ಪೃಷ್ಟಃ = ಕೇಳಲ್ಪಟ್ಟ, ಮೂಢಧೀಃ = ಮೋಹಗೊಂಡ ಬುದ್ಧಿಯುಳ್ಳ, ಸಃ =

ನಹುಷನು, ನ = (ವೇದವು ಪ್ರಮಾಣ) ಅಲ್ಲ, ಇತಿ = ಎಂದು, ಆಹ = ಹೇಳಿದನು, ತೇನ = ಅಗಸ್ತ್ಯರಿಂದ (ಪ್ರತಿಯಾಗಿ), ಪ್ರಮಾಣಂ = ಪ್ರಮಾಣವೇ, ಇತಿ = ಎಂದು, ಉಕ್ತಃ = ಹೇಳಲ್ಪಟ್ಟವನಾಗಿ, ಏನಂ = ಅಗಸ್ತ್ಯರನ್ನು, ಶಿರಸಿ = ತಲೆಯಲ್ಲಿ, ಪದಾ = ಕಾಲಿನಿಂದ, ಅಹನತ್ = ಒದ್ದನು.

**ತಾತ್ಪರ್ಯ** :- ನಹುಷನಿಗೆ ಶಚೀಸಂಗವಾಗದಂತೆ ಮಾಡುವುದಕ್ಕಾಗಿ ಮಹಾತ್ಮ ಅಗಸ್ತ್ಯ ವೇದ ಪ್ರಾಮಾಣ್ಯವಿಷಯದಲ್ಲಿ ಪ್ರಶ್ನೆ ಮಾಡಿದ. ಮೂಢಬುದ್ಧಿಯ ನಹುಷ ಪ್ರಮಾಣವಲ್ಲ ಎಂದ. ಪ್ರಮಾಣವೇ ಎಂದು ಅಗಸ್ತ್ಯ ವಾದಿಸಿದಾಗ ಅವರ ತಲೆಯನ್ನು ಕಾಲಿಂದ ತುಳಿದ.

**ವಿಶೇಷಾಂಶ** :- ನಹುಷ ವೇದವನ್ನು ಪ್ರಮಾಣವೆಂದು ಒಪ್ಪಿದರೆ ಪರಸ್ತ್ರೀಗಮನವನ್ನು ವೇದ ನಿಷೇಧಿಸಿರುವಾಗ ನೀನು ಹೇಗೆ ಮಾಡುವಿ, ಎಂದು ಆಕ್ಷೇಪಿಸಿ ಶಚೀಸಂಗವನ್ನು ನಿವಾರಿಸುತ್ತೇನೆ, ಅಪ್ರಮಾಣವೆಂದರೆ ಪ್ರಮಾಣವೆಂದು ವಾದಿಸಿ, ಕೋಪಗೊಳಿಸಿ, ಅಪರಾಧ ಮಾಡಿಸಿ, ಶಾಪವನ್ನು ಕೊಡಿಸಿಯಾದರೂ ತಡೆಯುತ್ತೇನೆ ಎಂಬುದು ಅಗಸ್ತ್ಯರ ಭಾವ.

**ತದಾ ಭೃಗುಂ ತಸ್ಯ ಜಟಾಸು ಲೀನಂ**
**ಕದಾಽಪಿ ತಸ್ಯಾಕ್ಷಿಪಥಂ ನ ಯಾತಮ್ ।**
**ಆವಿಶ್ಯ ಕಂಜಪ್ರಭವಃ ಶಶಾಪ**
**ವ್ರಜಾಽಶು ಪಾಪಾಜಗರತ್ವಮೇವ ॥ ೩೨೫ ॥**

**ಪದಚ್ಛೇದ** :- ತದಾ, ಭೃಗುಂ, ತಸ್ಯ, ಜಟಾಸು, ಲೀನಂ, ಕದಾ, ಅಪಿ, ತಸ್ಯ, ಅಕ್ಷಿಪಥಂ, ನ, ಯಾತಂ, ಆವಿಶ್ಯ, ಕಂಜಪ್ರಭವಃ, ಶಶಾಪ, ವ್ರಜ, ಆಶು, ಪಾಪ, ಅಜಗರತ್ವಂ, ಏವ ।

**ಅರ್ಥ** :- ತದಾ = ಆವಾಗ, ತಸ್ಯ = ಅಗಸ್ತ್ಯರ, ಜಟಾಸು = ಜಟೆಯಲ್ಲಿ, ಲೀನಂ = ಅಡಗಿರುವ, ಕದಾಽಪಿ = ಎಂದಿಗೂ, ತಸ್ಯ = ನಹುಷನ, ಅಕ್ಷಿಪಥಂ = ಕಣ್ಣಿನ ದಾರಿಯನ್ನು, ನ ಯಾತಂ = ಹೊಂದದ, ಭೃಗುಂ = ಭೃಗುಮುನಿಯನ್ನು, ಆವಿಶ್ಯ = ಪ್ರವೇಶಿಸಿ, ಕಂಜಪ್ರಭವಃ = ಚತುರ್ಮುಖನು, ಪಾಪ = ಪಾಪಿಷ್ಠನೇ, ಆಶು = ಕೂಡಲೇ, ಅಜಗರತ್ವಂ

ಏವ = ಹೆಬ್ಬಾವಿನ ಶರೀರವನ್ನೇ, ವ್ರಜ = ಹೊಂದು (ಎಂದು), ಶಶಾಪ = ಶಪಿಸಿದನು.

ತಾತ್ಪರ್ಯ :- ಆಗ ನಹುಷನಿಗೆ ಎಂದಿಗೂ ದೃಷ್ಟಿಗೋಚರನಾಗದೆ ಅಗಸ್ತ್ಯನ ಜಟೆಯಲ್ಲಿ ಅಡಗಿ ಸೂಕ್ಷ್ಮರೂಪದಿಂದ ಕುಳಿತಿದ್ದ ಭೃಗುಮುನಿಯಲ್ಲಿ ಆವೇಶಗೊಂಡು ಚತುರ್ಮುಖನು ಪಾಪಿಯೇ ನೀನು ಕೂಡಲೇ ಹೆಬ್ಬಾವಾಗೆಂದು ಶಪಿಸಿದ.

ವಿಶೇಷಾಂಶ :- ೧. ಋಷಿಗಳಿಗೆ ದ್ರೋಹವೆಸಗಿದವನಿಗೆ ಋಷಿಗಳ ಮೂಲಕ ಶಪಿಸಲು ಬ್ರಹ್ಮದೇವರು ಭೃಗುವನ್ನು ಪ್ರವೇಶಿಸಿದರು.
೨. ಅಗಸ್ತ್ಯರು ನಹುಷನ ಕಣ್ಣಿಗೆ ಬಿದ್ದಿದ್ದರಿಂದ ಶಪಿಸಲು ನಿಮಿತ್ತರಾಗಲೂ ಸಾಧ್ಯವಿರಲಿಲ್ಲ.
೩. ಬ್ರಹ್ಮದೇವರೂ ನಹುಷನಿಗೆ ವರಕೊಟ್ಟಿದ್ದರಿಂದ ಅವರೂ ಅದೃಶ್ಯರಾಗಿಯೇ ಶಪಿಸಿದರು. 'ಅದೃಷ್ಟೇನ ತತೋಽ-ಸ್ಮ್ಯಕ್ತೋ' (ವನಪರ್ವ. ೧೮೩-೩೭)

ಷಷ್ಠೇ ಕಾಲೇ ಯಸ್ತ್ವಯಾಽಽಸಾದಿತಃ ಸ್ಯಾತ್
ಸ ತೇ ವಶಂ ಯಾತು ಬಲಾಧಿಕೋಽಪಿ ।
ಯದಾ ಗೃಹೀತಂ ಪುರುಷಂ ನಿಹಂತುಂ
ನ ಶಕ್ಷ್ಯಸೇ ಯದಿ ಸ ತ್ವದ್ಗೃಹೀತಃ ।
ಶಕ್ತೋಽಪಿ ನಾಽತ್ಮಾನಮಭಿಪ್ರಮೋಚಯೇತ್
ತದಾಽಸ್ಯ ಸ್ಯಾತ್ ತ್ವತ್ತಪೋಽಗ್ರ್ಯಂ ಬಲಂ ಚ ॥ ೩೨ ॥

ಪದಚ್ಛೇದ :- ಷಷ್ಠೇ, ಕಾಲೇ, ಯಃ, ತ್ವಯಾ, ಆಸಾದಿತಃ, ಸ್ಯಾತ್, ಸಃ, ತೇ, ವಶಂ, ಯಾತು, ಬಲಾಧಿಕಃ, ಅಪಿ, ಯದಾ, ಗೃಹೀತಂ, ಪುರುಷಂ, ನಿಹಂತುಂ, ನ, ಶಕ್ಷ್ಯಸೇ, ಯದಿ, ಸಃ, ತ್ವದ್‌ಗೃಹೀತಃ, ಶಕ್ತಃ, ಅಪಿ, ನ, ಆತ್ಮಾನಂ, ಅಭಿಪ್ರಮೋಚಯೇತ್, ತದಾ, ಅಸ್ಯ, ಸ್ಯಾತ್, ತ್ವತ್ತಪಃ, ಅಗ್ರ್ಯಂ, ಬಲಂ, ಚ ।

ಅರ್ಥ :- ಷಷ್ಠೇ ಕಾಲೇ = ಮೂರನೇ ದಿನದ ರಾತ್ರಿಕಾಲದಲ್ಲಿ (ಆಜಗರ ವ್ರತಪಾರಣೆಯ ಕಾಲದಲ್ಲಿ), ಯಃ = ಯಾವನು, ತ್ವಯಾ = ನಿನ್ನಿಂದ, ಆಸಾದಿತಃ ಸ್ಯಾತ್ = ಹೊಂದಲ್ಪಡುವನೋ, ಸಃ = ಅವನು, ಬಲಾಧಿಕಃ ಅಪಿ

= ಬಲಿಷ್ಠನಾದರೂ, **ತೇ** = ನಿನಗೆ, **ವಶಂ ಯಾತು** = ವಶನಾಗಲಿ, **ಯದಾ** = ಯಾವಾಗ, **ಗೃಹೀತಂ** = ಹಿಡಿಯಲ್ಪಟ್ಟ, **ಪುರುಷಂ** = ಪುರುಷನನ್ನು, **ನಿಹಂತುಂ** = ಕೊಲ್ಲಲು, **ನ ಶಕ್ಷ್ಯಸೇ** = ಸಮರ್ಥನಾಗುವುದಿಲ್ಲವೋ, **ಯದಿ** = ಒಂದುವೇಳೆ, **ಸಃ** = ಆ ಯಾವ, **ತ್ವದ್ಗೃಹೀತಃ** = ನಿನ್ನಿಂದ ಹಿಡಿಯಲ್ಪಟ್ಟವನು, **ಶಕ್ತಃ ಅಪಿ** = ಸಮರ್ಥನಾಗಿದ್ದರೂ, **ಆತ್ಮಾನಂ** = ತನ್ನನ್ನು, **ನ ಅಭಿಪ್ರಮೋಚಯೇತ್** = ಬಿಡಿಸಿಕೊಳ್ಳುವುದಿಲ್ಲವೋ, **ತದಾ** = ಆವಾಗ, **ಅಸ್ಯ** = ಇವನಿಗೆ, **ತ್ವತ್ತಪಃ** = ನಿನ್ನ ತಪಸ್ಸು, **ಅಗ್ರ್ಯಂ** = ಉತ್ತಮವಾದ, **ಬಲಂ ಚ** = ಬಲವೂ, **ಸ್ಯಾತ್** = ಸಿಗಲಿ.

**ತಾತ್ಪರ್ಯ** :- ಷಷ್ಠಕಾಲದಲ್ಲಿ ಯಾರು ನಿನಗೆ ಸಿಗುವನೋ ಅವನು ಮಹಾಬಲಿಷ್ಠನಾದರೂ ನಿನ್ನ ವಶಕ್ಕೆ ಬರಲಿ. ನೀನು ಹಿಡಿದ ವ್ಯಕ್ತಿಯನ್ನು ನಿನಗೆ ಕೊಲ್ಲಲು ಆಗದಿದ್ದಾಗ ಆ ವ್ಯಕ್ತಿ ಶಕ್ತನಾಗಿದ್ದರೂ ತನ್ನನ್ನು ಬಿಡಿಸಿಕೊಳ್ಳದಿದ್ದಾಗ ನಿನ್ನ ಉತ್ತಮವಾದ ತಪಸ್ಸು ಬಲವೆಲ್ಲವೂ ಅವನಲ್ಲಿಯೇ ಹೋಗಿ ಸೇರುತ್ತದೆ.

**ಸರ್ವದೇವಮುನೀನಾಂ ಯತ್ ತಪಸ್ತ್ವಾಂ ಸಮುಪಾಶ್ರಿತಮ್ ।**
**ತಚ್ಚ ಸರ್ವಂ ತಮೇವೈತಿ ನಾತ್ರ ಕಾರ್ಯಾ ವಿಚಾರಣಾ ॥ ೩.೨೭ ॥**

**ಪದಚ್ಛೇದ** :– ಸರ್ವದೇವಮುನೀಂದ್ರಾಣಾಂ, ಯತ್, ತಪಃ, ತ್ವಾಂ, ಉಪಾಶ್ರಿತಂ, ತತ್, ಚ, ಸರ್ವಂ, ತಂ, ಏವ, ಎತಿ, ನ, ಅತ್ರ, ಕಾರ್ಯಾ, ವಿಚಾರಣಾ ।

**ಅರ್ಥ** :- **ಸರ್ವದೇವಮುನೀಂದ್ರಾಣಾಂ** = ಎಲ್ಲ ದೇವತೆಗಳ ಮುನಿಶ್ರೇಷ್ಠರ, **ಯತ್ ತಪಃ** = ಯಾವ ತಪಸ್ಸು, **ತ್ವಾಂ** = ನಿನ್ನನ್ನು, **ಉಪಾಶ್ರಿತಂ** = ಆಶ್ರಯಿಸಿದೆಯೋ, **ತತ್ಸರ್ವಂ ಚ** = ಅದೆಲ್ಲವೂ, **ತಂ ಏವ** = ಅವನನ್ನೇ, **ಎತಿ** = ಹೊಂದುತ್ತದೆ, **ಅತ್ರ** = ಈ ವಿಷಯದಲ್ಲಿ, **ವಿಚಾರಣಾ** = ಸಂಶಯ, **ನ ಕಾರ್ಯಾ** = ಮಾಡಬಾರದು.

**ತಾತ್ಪರ್ಯ** :- ಎಲ್ಲ ದೇವತೆಗಳ ಮುನಿಗಳ ಯಾವ ತಪಸ್ಸು, ಬಲ, ನಿನ್ನಲ್ಲಿ ಬಂದು ಸೇರಿರುವುದೋ ಅದೆಲ್ಲವೂ ಅವನನ್ನೇ ಸೇರುತ್ತದೆ. ಇದರಲ್ಲಿ ವಿಚಾರ ಮಾಡುವುದೇ ಬೇಡ.

**ಯದಾ ಪ್ರಶ್ನಾಂಸ್ತ್ವದೀಯಾಂಶ್ಚ ಕಶ್ಚಿತ್ ಪರಿಹರಿಷ್ಯತಿ ।
ತದಾ ಗಂತಾಽಸಿ ಚ ದಿವಂ ವಿಸೃಜ್ಯಾಽಜಗರಂ ತನುಮ್ ।
ಸ್ಮೃತಿಶ್ಚ ಮತ್ಪ್ರಸಾದೇನ ಸರ್ವದಾ ತೇ ಭವಿಷ್ಯತಿ ।। ೩೨೮ ।।**

ಪದಚ್ಛೇದ :- ಯದಾ, ಪ್ರಶ್ನಾನ್, ತ್ವದೀಯಾನ್, ಚ, ಕಶ್ಚಿತ್, ಪರಿಹರಿಷ್ಯತಿ, ತದಾ, ಗಂತಾ, ಅಸಿ, ಚ, ದಿವಂ, ವಿಸೃಜ್ಯ, ಆಜಗರಂ, ತನುಂ, ಸ್ಮೃತಿಃ, ಚ, ಮತ್ಪ್ರಸಾದೇನ, ಸರ್ವದಾ, ತೇ, ಭವಿಷ್ಯತಿ ।

**ಅರ್ಥ** :- **ಯದಾ** = ಯಾವಾಗ, **ತ್ವದೀಯಾನ್** = ನಿನ್ನ, **ಪ್ರಶ್ನಾನ್ ಚ** = ಪ್ರಶ್ನೆಗಳನ್ನೂ, **ಕಶ್ಚಿತ್** = ಯಾವನೋ ಒಬ್ಬ, **ಪರಿಹರಿಷ್ಯತಿ** = ಪರಿಹರಿಸುವನೋ, **ತದಾ** = ಆವಾಗ, **ಆಜಗರಂ** = ಹೆಬ್ಬಾವಿನ, **ತನುಂ** = ದೇಹವನ್ನು, **ವಿಸೃಜ್ಯ** = ಬಿಟ್ಟು, **ದಿವಂ ಚ** = ಸ್ವರ್ಗವನ್ನೂ, **ಗಂತಾ ಅಸಿ** = ಹೋಗುವವನಾಗುವಿ, **ಮತ್ಪ್ರಸಾದೇನ** = ನನ್ನ ಅನುಗ್ರಹದಿಂದ, **ತೇ** = ನಿನಗೆ, **ಸರ್ವದಾ** = ಯಾವಾಗಲೂ, **ಸ್ಮೃತಿಃ ಚ** = ಸ್ಮರಣೆಯೂ, **ಭವಿಷ್ಯತಿ** = ಇರುತ್ತದೆ.

**ತಾತ್ಪರ್ಯ** :- ಯಾವಾಗ ನಿನ್ನ ಪ್ರಶ್ನೆಗಳನ್ನು ಒಬ್ಬನು ಪರಿಹರಿಸಿಸುವನೋ ಆಗ ನೀನು ಹಾವಿನ ಶರೀರವನ್ನು ಬಿಟ್ಟು ಸ್ವರ್ಗಕ್ಕೆ ಹೋಗುವಿ. ನನ್ನ ಅನುಗ್ರಹದಿಂದ ನಿನಗೆ ಪೂರ್ವಜನ್ಮದ ಸ್ಮರಣೆ ಸದಾ ಇರುತ್ತದೆ.

**ಭೃಗುದೇಹಗತೇನೈವಂ ಶಪ್ತಃ ಕಮಲಯೋನಿನಾ ।
ಪಪಾತಾಜಗರೋ ಭೂತ್ವಾ ನಹುಷಃ ಕ್ಷಣಮಾತ್ರತಃ ।। ೩೨೯ ।।**

ಪದಚ್ಛೇದ :- ಭೃಗುದೇಹಗತೇನ, ಏವಂ, ಶಪ್ತಃ, ಕಮಲಯೋನಿನಾ, ಪಪಾತ, ಅಜಗರಃ, ಭೂತ್ವಾ, ನಹುಷಃ, ಕ್ಷಣಮಾತ್ರತಃ ।

**ಅರ್ಥ** :- **ಏವಂ** = ಹೀಗೆ, **ಭೃಗುದೇಹಗತೇನ** = ಭೃಗುದೇಹದಲ್ಲಿ ಆವಿಷ್ಟನಾದ, **ಕಮಲಯೋನಿನಾ** = ಚತುರ್ಮುಖನಿಂದ, **ಶಪ್ತಃ** = ಶಪಿಸಲ್ಪಟ್ಟ, **ನಹುಷಃ** = ನಹುಷನು, **ಕ್ಷಣಮಾತ್ರತಃ** = ಕ್ಷಣಮಾತ್ರದಲ್ಲಿಯೇ, **ಅಜಗರಃ ಭೂತ್ವಾ** = ಹೆಬ್ಬಾವಾಗಿ, **ಪಪಾತ** = (ಭೂಮಿಯಲ್ಲಿ) ಬಿದ್ದನು.

ತಾತ್ಪರ್ಯ :- ಭೃಗು ಮುನಿಯ ಶರೀರದಲ್ಲಿದ್ದ ಬ್ರಹ್ಮನಿಂದ ಹೀಗೆ ಶಾಪ ಹೊಂದಿದ ನಹುಷ ಕ್ಷಣಮಾತ್ರದಲ್ಲಿ ಹೆಬ್ಬಾವಾಗಿ ಭೂಮಿಯಲ್ಲಿ ಬಿದ್ದ.

ವಿಶೇಷಾಂಶ :- ಪರಸ್ತ್ರೀಕಾಮುನಾ ನಿಮಿತ್ತದಿಂದ ಸಂಭೋಗಕ್ಕೆ ಯೋಗ್ಯವೇ ಅಲ್ಲದ ದೊಡ್ಡದಾದ ಹೆಬ್ಬಾವಿನ ದೇಹ ಪಡೆದ ಎಂದರ್ಥ.

**ಇಂದ್ರೋಽಪ್ಯವಾಪ ಸ್ವಂ ಸ್ಥಾನಮಿಷ್ಟ್ವಾ ವಿಷ್ಣುಂ ವಿಪಾಪಕಃ ।**
**ಧರ್ಮವೃದ್ಧ್ಯರ್ಥಮೇವೈತತ್ ಪಾಪಮಾಸೀಚ್ಛಚೀಪತೇಃ ॥ ೩೩೦ ॥**

**ಪದಚ್ಛೇದ :- ಇಂದ್ರಃ, ಅಪಿ, ಅವಾಪ, ಸ್ವಂ, ಸ್ಥಾನಂ, ಇಷ್ಟ್ವಾ, ವಿಷ್ಣುಂ, ವಿಪಾಪಕಃ, ಧರ್ಮವೃದ್ಧ್ಯರ್ಥಂ, ಏವ, ಏತತ್, ಪಾಪಂ, ಆಸೀತ್, ಶಚೀಪತೇಃ ।**

**ಅರ್ಥ :- ವಿಪಾಪಕಃ ಅಪಿ** = ಯಜ್ಞವನ್ನು ಮಾಡದೆಯೂ ಪಾಪಲೇಪ ಇಲ್ಲದವನೇ ಆಗಿದ್ದರೂ, **ಇಂದ್ರಃ** = ಇಂದ್ರನು, **ವಿಷ್ಣುಂ** = ವಿಷ್ಣುವನ್ನು, **ಇಷ್ಟ್ವಾ** = ಮಹಾವ್ರತಯಾಗದಿಂದ (ವಿಶ್ವಾಮಿತ್ರ ಋಷಿಗಳನ್ನು ಹೋತೃಗಳನ್ನಾಗಿ ಮಾಡಿಕೊಂಡು ಬೃಹತೀಸಹಸ್ರದಿಂದ) ಆರಾಧಿಸಿ (ಸಾವಿರ ವರ್ಷಕಾಲ ನರಸಿಂಹ ಮಂತ್ರಜಪದಿಂದ ಆರಾಧಿಸಿ), **ಸ್ವಂ** = ತನ್ನದ್ದಾದ, **ಸ್ಥಾನಂ** = ಇಂದ್ರಪದವಿಯನ್ನು, **ಅವಾಪ** = ಹೊಂದಿದನು, **ಏತತ್** = ಈ ವೃತ್ರವಧೆಯು (ಬ್ರಹ್ಮಹತ್ಯೆಯು), **ಪಾಪಂ (ಅಪಿ)** = ಮತ್ತೊಬ್ಬರಿಗೆ ಪಾಪವಾದರೂ, **ಶಚೀಪತೇಃ** = ಇಂದ್ರನಿಗೆ, **ಧರ್ಮವೃದ್ಧ್ಯರ್ಥಂ ಏವ** = ಪುಣ್ಯವೃದ್ಧಿಗೆ ಕಾರಣವೇ, **ಆಸೀತ್** = ಆಯಿತು.

ತಾತ್ಪರ್ಯ :- ಇಂದ್ರ ಪಾಪರಹಿತನಾಗಿದ್ದರೂ ವಿಷ್ಣುವನ್ನು ಯಾಗದಿಂದ ಆರಾಧಿಸಿ ತನ್ನ ಸ್ಥಾನವನ್ನು ಹೊಂದಿದ. ಮತ್ತೊಬ್ಬರಿಗೆ ಪಾಪವೆನಿಸುವ ವೃತ್ರಹತ್ಯೆಯು ಇಂದ್ರನಿಗೆ ಹೀಗೆ ಪುಣ್ಯವೃದ್ಧಿಗೆ ಕಾರಣವಾಯಿತು.

**ನಹಿ ಲೋಕಾವನಂ ಪಾಪಂ ತ್ರೈಲೋಕ್ಯೇಶಸ್ಯ ವಜ್ರಿಣಃ ।**
**ವೃತ್ರಂ ಹತ್ವಾ ಮಹಾನಾಸೇತ್ಯಾದಿ ವೇದಪದಂ ಚ ಯತ್ ॥ ೩೩೧ ॥**

**ಪದಚ್ಛೇದ :- ನ, ಹಿ, ಲೋಕಾವನಂ, ಪಾಪಂ, ತ್ರೈಲೋಕ್ಯೇಶಸ್ಯ, ವಜ್ರಿಣಃ, ವೃತಂ, ಹತ್ವಾ, ಮಹಾನ್, ಆಸ, ಇತ್ಯಾದಿ, ವೇದಪದಂ, ಚ, ಯತ್ ।**

**ಅರ್ಥ** :- **ತ್ರೈಲೋಕ್ಯೇಶಸ್ಯ** = ಮೂರು ಲೋಕದ ಅಧಿಪತಿಯಾದ, **ವಜ್ರಿಣಃ** = ಇಂದ್ರನಿಗೆ, **ಲೋಕಾವನಂ** = ಲೋಕ ರಕ್ಷಣೆಗಾಗಿ ಮಾಡುವ ಕರ್ಮವು, **ಪಾಪಂ** = ಪಾಪವು, **ನ ಹಿ** = ಅಲ್ಲವಷ್ಟೇ, **ಚ** = ಮತ್ತು, **ಯತ್** = ಯಾವ ಕಾರಣದಿಂದ, **ವೃತ್ರಂ** = ವೃತ್ರನನ್ನು, **ಹತ್ವಾ** = ಕೊಂದು, **ಮಹಾನ್** = (ಇಂದ್ರ) ಮಹಾತ್ಮನು, **ಆಸ** = ಆದ, **ಇತ್ಯಾದಿ** = ಇವೇ ಮೊದಲಾದ, **ವೇದಪದಂ** = 'ಇಂದ್ರೋ ವೈ ವೃತ್ರಂ ಹತ್ವಾ ಮಹಾನಭವತ್' ಎಂದ ವೇದ ವಾಕ್ಯಗಳು ಇವೆಯೋ (ಆದ್ದರಿಂದಲೂ ವೃತ್ರವಧೆಯು ಇಂದ್ರನ ಧರ್ಮವೃದ್ಧಿಗೆ ಕಾರಣವಾಯಿತು ಎಂದು ತಿಳಿಯುತ್ತದೆ.).

**ತಾತ್ಪರ್ಯ** :- ಮೂಲೋಕದೊಡೆಯನಾದ ದೇವೇಂದ್ರ ಲೋಕರಕ್ಷಣೆಗಾಗಿ ಮಾಡಿದ ವೃತ್ರಹತ್ಯೆ ಪಾಪಹೇತುವಾಗದು ತಾನೆ? ಇಂದ್ರ ವೃತ್ರನನ್ನು ಕೊಂದು ಪುಣ್ಯಗಳಿಸಿದನೆಂದು ವೇದವಚನವಿದೆ.

**ವಿಶೇಷಾಂಶ** :- ಭಾಗವತದಲ್ಲಿ ಬ್ರಹ್ಮಹತ್ಯೆ ಅಟ್ಟಿಸಿಕೊಂಡು ಬಂದಿತೆಂದು ಹೇಳಿದೆ ಹೊರತು ಇಂದ್ರನನ್ನು ಹಿಡಿಯಲಿಲ್ಲ.

**ಕ್ವಚಿತ್ ಪಾಪಂ ಚ ಪುಣ್ಯಾನಾಂ ವೃದ್ಧಯೇ ಭವತಿ ಸ್ಫುಟಮ್ ।**
**'ವೃತ್ರಹತ್ಯಾ ಯಥೇಂದ್ರಸ್ಯ ಜಾತಾ ಧರ್ಮಸ್ಯ ವೃದ್ಧಯೇ ॥ ೩೩ ॥**

ಪದಚ್ಛೇದ :- ಕ್ವಚಿತ್, ಪಾಪಂ, ಚ, ಪುಣ್ಯಾನಾಂ, ವೃದ್ಧಯೇ, ಭವತಿ, ಸ್ಫುಟಂ, ವೃತ್ರಹತ್ಯಾ, ಯಥಾ, ಇಂದ್ರಸ್ಯ, ಜಾತಾ, ಧರ್ಮಸ್ಯ, ವೃದ್ಧಯೇ ।

**ಅರ್ಥ** :- **ಕ್ವಚಿತ್** = ಕೆಲವರಲ್ಲಿ, **ಪಾಪಂ ಚ** = ವೇದನಿಷಿದ್ಧವಾದದ್ದೂ, **ಸ್ಫುಟಂ** = ಚೆನ್ನಾಗಿ, **ಧರ್ಮವೃದ್ಧಯೇ** = ಧರ್ಮವೃದ್ಧಿಗೆ ಕಾರಣ, **ಭವತಿ** = ಆಗುತ್ತದೆ, **ಯಥಾ** = ಹೇಗೆ, **ವೃತ್ರಹತ್ಯಾ** = ವೃತ್ರಹತ್ಯೆಯು, **ಇಂದ್ರಸ್ಯ** = ಇಂದ್ರನ, **ಧರ್ಮಸ್ಯ** = ಪುಣ್ಯದ, **ವೃದ್ಧಯೇ** = ವೃದ್ಧಿಗೆ, **ಜಾತಾ** = ಕಾರಣವಾಯಿತು (ಹಾಗೆ).

**ತಾತ್ಪರ್ಯ** :- ಕೆಲವೆಡೆ ಪಾಪಕರ್ಮವೂ ಪುಣ್ಯದ ಬೆಳವಣಿಗೆಗೆ ಕಾರಣವಾಗುವುದು ಸ್ಪಷ್ಟವಿದೆ ಏಕೆಂದರೆ ಇಂದ್ರನಿಗೆ 'ವೃತ್ರಹತ್ಯಾ' ಎಂಬ ಪಾಪಕರ್ಮ ಪುಣ್ಯವೃದ್ಧಿಗೆ ಕಾರಣವಾಯಿತು.

**ತಾತ್ಪರ್ಯ :-** ಭೃಗು ಮುನಿಯ ಶರೀರದಲ್ಲಿದ್ದ ಬ್ರಹ್ಮನಿಂದ ಹೀಗೆ ಶಾಪ ಹೊಂದಿದ ನಹುಷ ಕ್ಷಣಮಾತ್ರದಲ್ಲಿ ಹೆಬ್ಬಾವಾಗಿ ಭೂಮಿಯಲ್ಲಿ ಬಿದ್ದ.

**ವಿಶೇಷಾಂಶ :-** ಪರಸ್ತ್ರೀಕಾಮುನಾ ನಿಮಿತ್ತದಿಂದ ಸಂಭೋಗಕ್ಕೆ ಯೋಗ್ಯವೇ ಅಲ್ಲದ ದೊಡ್ಡದಾದ ಹೆಬ್ಬಾವಿನ ದೇಹ ಪಡೆದ ಎಂದರ್ಥ.

**ಇಂದ್ರೋಽಪ್ಯವಾಪ ಸ್ವಂ ಸ್ಥಾನಮಿಷ್ಟ್ವಾ ವಿಷ್ಣುಂ ವಿಪಾಪಕಃ ।**
**ಧರ್ಮವೃದ್ಧ್ಯರ್ಥಮೇವೈತತ್ ಪಾಪಮಾಸೀಚ್ಛಚೀಪತೇಃ ॥ ೩೩೦ ॥**

**ಪದಚ್ಛೇದ :-** ಇಂದ್ರಃ, ಅಪಿ, ಅವಾಪ, ಸ್ವಂ, ಸ್ಥಾನಂ, ಇಷ್ಟ್ವಾ, ವಿಷ್ಣುಂ, ವಿಪಾಪಕಃ, ಧರ್ಮವೃದ್ಧ್ಯರ್ಥಂ, ಏವ, ಏತತ್, ಪಾಪಂ, ಆಸೀತ್, ಶಚೀಪತೇಃ ।

**ಅರ್ಥ :- ವಿಪಾಪಕಃ ಅಪಿ** = ಯಜ್ಞವನ್ನು ಮಾಡದೆಯೂ ಪಾಪಲೇಪ ಇಲ್ಲದವನೇ ಆಗಿದ್ದರೂ, **ಇಂದ್ರಃ** = ಇಂದ್ರನು, **ವಿಷ್ಣುಂ** = ವಿಷ್ಣುವನ್ನು, **ಇಷ್ಟ್ವಾ** = ಮಹಾವ್ರತಯಾಗದಿಂದ (ವಿಶ್ವಾಮಿತ್ರ ಋಷಿಗಳನ್ನು ಹೋತೃಗಳನ್ನಾಗಿ ಮಾಡಿಕೊಂಡು ಬೃಹತೀಸಹಸ್ರದಿಂದ) ಆರಾಧಿಸಿ (ಸಾವಿರ ವರ್ಷಕಾಲ ನರಸಿಂಹ ಮಂತ್ರಜಪದಿಂದ ಆರಾಧಿಸಿ), **ಸ್ವಂ** = ತನ್ನದ್ದಾದ, **ಸ್ಥಾನಂ** = ಇಂದ್ರಪದವಿಯನ್ನು, **ಅವಾಪ** = ಹೊಂದಿದನು, **ಏತತ್** = ಈ ವೃತ್ರವಧೆಯು (ಬ್ರಹ್ಮಹತ್ಯೆಯು), **ಪಾಪಂ (ಅಪಿ)** = ಮತ್ತೊಬ್ಬರಿಗೆ ಪಾಪವಾದರೂ, **ಶಚೀಪತೇಃ** = ಇಂದ್ರನಿಗೆ, **ಧರ್ಮವೃದ್ಧ್ಯರ್ಥಂ ಏವ** = ಪುಣ್ಯವೃದ್ಧಿಗೆ ಕಾರಣವೇ, **ಆಸೀತ್** = ಆಯಿತು.

**ತಾತ್ಪರ್ಯ :-** ಇಂದ್ರ ಪಾಪರಹಿತನಾಗಿದ್ದರೂ ವಿಷ್ಣುವನ್ನು ಯಾಗದಿಂದ ಆರಾಧಿಸಿ ತನ್ನ ಸ್ಥಾನವನ್ನು ಹೊಂದಿದ. ಮತ್ತೊಬ್ಬರಿಗೆ ಪಾಪವೆನಿಸುವ ವೃತ್ರಹತ್ಯೆಯು ಇಂದ್ರನಿಗೆ ಹೀಗೆ ಪುಣ್ಯವೃದ್ಧಿಗೆ ಕಾರಣವಾಯಿತು.

**ನಹಿ ಲೋಕಾವನಂ ಪಾಪಂ ತ್ರೈಲೋಕ್ಯೇಶಸ್ಯ ವಜ್ರಿಣಃ ।**
**ವೃತ್ರಂ ಹತ್ವಾ ಮಹಾನಾಸೇತ್ಯಾದಿ ವೇದಪದಂ ಚ ಯತ್ ॥ ೩೩೧ ॥**

**ಪದಚ್ಛೇದ :-** ನ, ಹಿ, ಲೋಕಾವನಂ, ಪಾಪಂ, ತ್ರೈಲೋಕ್ಯೇಶಸ್ಯ, ವಜ್ರಿಣಃ, ವೃತಂ, ಹತ್ವಾ, ಮಹಾನ್, ಆಸ, ಇತ್ಯಾದಿ, ವೇದಪದಂ, ಚ, ಯತ್ ।

**ಅರ್ಥ** :- **ತ್ರೈಲೋಕ್ಯೇಶಸ್ಯ** = ಮೂರು ಲೋಕದ ಅಧಿಪತಿಯಾದ, **ವಜ್ರಿಣಃ** = ಇಂದ್ರನಿಗೆ, **ಲೋಕಾವನಂ** = ಲೋಕ ರಕ್ಷಣೆಗಾಗಿ ಮಾಡುವ ಕರ್ಮವು, **ಪಾಪಂ** = ಪಾಪವು, **ನ ಹಿ** = ಅಲ್ಲವಷ್ಟೇ, **ಚ** = ಮತ್ತು, **ಯತ್** = ಯಾವ ಕಾರಣದಿಂದ, **ವೃತ್ರಂ** = ವೃತ್ರನನ್ನು, **ಹತ್ವಾ** = ಕೊಂದು, **ಮಹಾನ್** = (ಇಂದ್ರ) ಮಹಾತ್ಮನು, **ಆಸ** = ಆದ, **ಇತ್ಯಾದಿ** = ಇವೇ ಮೊದಲಾದ, **ವೇದಪದಂ** = 'ಇಂದ್ರೋ ವೈ ವೃತ್ರಂ ಹತ್ವಾ ಮಹಾನಭವತ್' ಎಂದ ವೇದ ವಾಕ್ಯಗಳು ಇವೆಯೋ (ಆದ್ದರಿಂದಲೂ ವೃತ್ರವಧೆಯು ಇಂದ್ರನ ಧರ್ಮವೃದ್ಧಿಗೆ ಕಾರಣವಾಯಿತು ಎಂದು ತಿಳಿಯುತ್ತದೆ.).

**ತಾತ್ಪರ್ಯ** :- ಮೂಲೋಕದೊಡೆಯನಾದ ದೇವೇಂದ್ರ ಲೋಕರಕ್ಷಣೆಗಾಗಿ ಮಾಡಿದ ವೃತ್ರಹತ್ಯೆ ಪಾಪಹೇತುವಾಗದು ತಾನೆ? ಇಂದ್ರ ವೃತ್ರನನ್ನು ಕೊಂದು ಪುಣ್ಯಗಳಿಸಿದನೆಂದು ವೇದವಚನವಿದೆ.

**ವಿಶೇಷಾಂಶ** :- ಭಾಗವತದಲ್ಲಿ ಬ್ರಹ್ಮಹತ್ಯೆ ಅಟ್ಟಿಸಿಕೊಂಡು ಬಂದಿತೆಂದು ಹೇಳಿದೆ ಹೊರತು ಇಂದ್ರನನ್ನು ಹಿಡಿಯಲಿಲ್ಲ.

**ಕ್ವಚಿತ್ ಪಾಪಂ ಚ ಪುಣ್ಯಾನಾಂ ವೃದ್ಧಯೇ ಭವತಿ ಸ್ಫುಟಮ್ ।**
**'ವೃತ್ರಹತ್ಯಾ ಯಥೇಂದ್ರಸ್ಯ ಜಾತಾ ಧರ್ಮಸ್ಯ ವೃದ್ಧಯೇ ॥ ೩೩ ॥**

ಪದಚ್ಛೇದ :- ಕ್ವಚಿತ್, ಪಾಪಂ, ಚ, ಪುಣ್ಯಾನಾಂ, ವೃದ್ಧಯೇ, ಭವತಿ, ಸ್ಫುಟಂ, ವೃತ್ರಹತ್ಯಾ, ಯಥಾ, ಇಂದ್ರಸ್ಯ, ಜಾತಾ, ಧರ್ಮಸ್ಯ, ವೃದ್ಧಯೇ ।

**ಅರ್ಥ** :- **ಕ್ವಚಿತ್** = ಕೆಲವರಲ್ಲಿ, **ಪಾಪಂ ಚ** = ವೇದನಿಷಿದ್ಧವಾದದ್ದೂ, **ಸ್ಫುಟಂ** = ಚೆನ್ನಾಗಿ, **ಧರ್ಮವೃದ್ಧಯೇ** = ಧರ್ಮವೃದ್ಧಿಗೆ ಕಾರಣ, **ಭವತಿ** = ಆಗುತ್ತದೆ, **ಯಥಾ** = ಹೇಗೆ, **ವೃತ್ರಹತ್ಯಾ** = ವೃತ್ರಹತ್ಯೆಯು, **ಇಂದ್ರಸ್ಯ** = ಇಂದ್ರನ, **ಧರ್ಮಸ್ಯ** = ಪುಣ್ಯದ, **ವೃದ್ಧಯೇ** = ವೃದ್ಧಿಗೆ, **ಜಾತಾ** = ಕಾರಣವಾಯಿತು (ಹಾಗೆ).

**ತಾತ್ಪರ್ಯ** :- ಕೆಲವೆಡೆ ಪಾಪಕರ್ಮವೂ ಪುಣ್ಯದ ಬೆಳವಣಿಗೆಗೆ ಕಾರಣವಾಗುವುದು ಸ್ಪಷ್ಟವಿದೆ ಏಕೆಂದರೆ ಇಂದ್ರನಿಗೆ 'ವೃತ್ರಹತ್ಯಾ' ಎಂಬ ಪಾಪಕರ್ಮ ಪುಣ್ಯವೃದ್ಧಿಗೆ ಕಾರಣವಾಯಿತು.

ವಿಶೇಷಾಂಶ :- ಈ ಶ್ಲೋಕವು 'ಸ್ಕಾಂದಸ್ಮೃತಿ'ಯಿಂದ ಉದ್ಧೃತವಾಗಿದೆ.

**ದೇವಾನಾಂ ವಾ ಮುನೀನಾಂ ವಾ ಭವೇದೇವಂ ನವ್ಯೆ ನೃಣಾಮ್ ।**
**'ಪಾಪಂ ಯತ್ ಪುಣ್ಯಮೇವೈತದಸುರಾಣಾಂ ವಿಲೋಮತಃ' ।**
**ಏವಂ ಸ್ಕಾಂದೇ ಹಿ ವಚನಂ ನ ಪಾಪಂ ತಚ್ಛಚೀಪತೇಃ ।। ೩೩೩ ।।**

**ಪದಚ್ಛೇದ :-** ದೇವಾನಾಂ, ವಾ, ಮುನೀನಾಂ, ವಾ, ಭವೇದ್, ಏವಂ, ನ, ವೈ, ನೃಣಾಂ, ಪಾಪಂ, ಯತ್, ಪುಣ್ಯಂ, ಏವ, ಎತದ್, ಅಸುರಾಣಾಂ, ವಿಲೋಮತಃ, ಏವಂ, ಸ್ಕಾಂದೇ, ಹಿ, ವಚನಂ, ನ, ಪಾಪಂ, ತತ್, ಶಚೀಪತೇಃ ।

**ಅರ್ಥ :- ಯತ್** = ಯಾವುದು, **ಪಾಪಂ** = ಪಾಪವೋ, (**ತತ್** = ಅದು), **ಪುಣ್ಯಂ ಏವ** = ಪುಣ್ಯವೇ, **ಏವಂ** = ಹೀಗೆ, **ದೇವಾನಾಂ** = ದೇವತೆಗಳಿಗೆ, **ವಾ** = ಅಥವಾ, **ಮುನೀನಾಂ** = ಋಷಿಗಳಿಗೆ, **ಭವೇದ್** = ಕೂಡುತ್ತದೆ, **ನೃಣಾಂ** = ಮನುಷ್ಯರಿಗೆ, **ನ ವೈ** = ಕೂಡುವುದೇ ಇಲ್ಲ (ಮನುಷ್ಯರಿಗೆ ಪಾಪವು ಪಾಪವೇ, ಪುಣ್ಯವು ಪುಣ್ಯವೇ ಎಂದರ್ಥ), **ಏತದ್** = ಪಾಪವು ಪುಣ್ಯವಾಗುವಿಕೆ, **ಅಸುರಾಣಾಂ** = ಅಸುರರಿಗೆ, **ವಿಲೋಮತಃ** = ವಿಪರೀತವಾಗುತ್ತದೆ (ಅಂದರೆ ಪುಣ್ಯವೂ ಪಾಪವಾಗುತ್ತದೆ), **ಏವಂ** = ಹೀಗೆ, **ಸ್ಕಾಂದೇ** = ಸ್ಕಾಂದಪುರಾಣದಲ್ಲಿ, **ವಚನಂ** = ಮಾತು, **ಹಿ** = ಪ್ರಸಿದ್ಧವಾಗಿದೆಯಷ್ಟೆ, **ತತ್ ವಾ** = ಅದರಿಂದಲೂ, **ಶಚೀಪತೇಃ** = ಇಂದ್ರನಿಗೆ, **ಪಾಪಂ** = ಪಾಪವು, **ನ** = ಇಲ್ಲ.

**ತಾತ್ಪರ್ಯ** :- ದೇವತೆಗಳ ಮತ್ತು ಮುನಿಗಳ ವಿಷಯದಲ್ಲಿ ಮಾತ್ರ ಇದು ಹೀಗೆ. ಮನುಷ್ಯರ ವಿಷಯದಲ್ಲಿ ಅಲ್ಲ. ಅಸುರರಿಗೆ ಇದಕ್ಕೆ ವ್ಯತಿರಿಕ್ತವಾಗಿ ಪುಣ್ಯಕರ್ಮವು ಪಾಪವೃದ್ಧಿಗೆ ಕಾರಣವಾಗುತ್ತದೆ ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ. ಅದರಿಂದ ವೃತ್ರಹತ್ಯೆ ಇಂದ್ರನಿಗೆ ಪಾಪಕರವಾಗಲಿಲ್ಲ.

ವಿಶೇಷಾಂಶ :- ಹರಿ ಆಜ್ಞೆ ಎಂದು ಭಕ್ತಿಯಿಂದ ಮಾಡುವ ಪಾಪವೂ ಪುಣ್ಯವಾಗುತ್ತದೆ. ದೇವತೆಗಳಿಗೆ. ಕಾಮನೆಯಿಂದ ಕರ್ಮ ಮಾಡುವ ನರರಿಗೆ ಪುಣ್ಯವು ಪುಣ್ಯವೇ, ಪಾಪವು ಪಾಪವೇ. ದ್ವೇಷದಿಂದ ಅಸುರರು ಮಾಡುವ ಪುಣ್ಯವೂ ಪಾಪವೇ.

ನಾನ್ಯಸ್ಯ ಪದಮಾಪ್ಸ್ಯಂತಿ ತದ್ ದೇವಾನಾಂ ವ್ರತಂ ಪರಮ್ ।
ತಸ್ಮಾತ್ ತೇ ನಹುಷಂ ಶಕ್ರಪದೇ ನಿದಧುರೀಶ್ವರಾಃ ॥ ೩೩೪ ॥

ಪದಚ್ಛೇದ :- ನ, ಅನ್ಯಸ್ಯ, ಪದಂ, ಆಪ್ಸ್ಯಂತಿ, ತದ್, ದೇವಾನಾಂ, ವ್ರತಂ, ಪರಂ, ತಸ್ಮಾತ್, ತೇ, ನಹುಷಂ, ಶಕ್ರಪದೇ ನಿದಧುಃ, ಈಶ್ವರಾಃ ।

ಅರ್ಥ :- ಅನ್ಯಸ್ಯ = ಮತ್ತೊಬ್ಬ ದೇವತೆಯ, ಪದಂ = ಪದವಿಯನ್ನು, ನ ಆಪ್ಸ್ಯಂತಿ = ಹೊಂದಲು ಬಯಸುವುದಿಲ್ಲ, ತದ್ = ಅದು, ದೇವಾನಾಂ = ದೇವತೆಗಳ, ಪರಂ = ಮುಖ್ಯವಾದ, ವ್ರತಂ = ವ್ರತವು, ತಸ್ಮಾತ್ = ಆದ್ದರಿಂದ, ಈಶ್ವರಾಃ = ಸ್ವರ್ಗವನ್ನು ಆಳಲು ಸಮರ್ಥರಾಗಿದ್ದರೂ, ತೇ = ದೇವತೆಗಳು, ನಹುಷಂ = ನಹುಷನನ್ನು, ಶಕ್ರಪದೇ = ಇಂದ್ರಪದವಿಯಲ್ಲಿ, ನಿದಧುಃ = ಇಟ್ಟರು.

ತಾತ್ಪರ್ಯ :- ಇನ್ನೊಬ್ಬರ ಪದವಿಯನ್ನು ಎರದಿರುವುದು ದೇವತೆಗಳ ಮಹಾವ್ರತ ಅದರಿಂದ ಇಂದ್ರ ಪದವಿಯಲ್ಲಿರಲು ಸಮರ್ಥರಾಗಿದ್ದರೂ ದೇವತೆಗಳು ನಹುಷನನ್ನು ಆ ಪದವಿಯಲ್ಲಿ ಕುಳ್ಳಿರಿಸಿದರು.

ತಸ್ಮಿನ್ನೇವಂ ನಿಪತಿತೇ ಬ್ರಹ್ಮಣಃ ಶಾಪಕಾರಣಾತ್ ।
ಅಷ್ಟಾವಿಂಶತಿಮೇ ಪ್ರಾಪ ಯುಗೇ ಭೀಮಸ್ತಮುಲ್ಬಣಮ್ ।
ಜಾನನ್ನೇವ ತದೀಯಂ ತತ್ ತಪ ಆದಾತುಮೀಪ್ಸಯಾ ॥ ೩೩೫ ॥

ಪದಚ್ಛೇದ :- ತಸ್ಮಿನ್, ಏವಂ, ನಿಪತಿತೇ, ಬ್ರಹ್ಮಣಃ, ಶಾಪಕಾರಣಾತ್, ಅಷ್ಟಾವಿಂಶತಿಮೇ, ಪ್ರಾಪ, ಯುಗೇ, ಭೀಮಃ, ತಂ, ಉಲ್ಬಣಂ, ಜಾನನ್, ಏವ, ತದೀಯಂ, ತತ್, ತಪಃ, ಆದಾತುಂ, ಈಪ್ಸಯಾ ।

ಅರ್ಥ :- ಬ್ರಹ್ಮಣಃ = ಬ್ರಹ್ಮದೇವರ, ಶಾಪಕಾರಣಾತ್ = ಶಾಪನಿಮಿತ್ತವಾಗಿ, ತಸ್ಮಿನ್ = ನಹುಷನು, ಏವಂ = ಹೀಗೆ, ನಿಪತಿತೇ = ಭೂಮಿಯಲ್ಲಿ ಬೀಳಲು, ಅಷ್ಟಾವಿಂಶತಿಮೇ = ಇಪ್ಪತ್ತೆಂಟನೆಯ, ಯುಗೇ = ದ್ವಾಪರಯುಗದಲ್ಲಿ, ಭೀಮಃ = ಭೀಮನು, ತದೀಯಂ = ನಹುಷನ, ತತ್ = ಪ್ರಸಿದ್ಧವಾದ, ತಪಃ = ತಪಸ್ಸನ್ನು, ಆದಾತುಂ = ಸಂಪಾದಿಸುವ, ಈಪ್ಸಯಾ = ಬಯಕೆಯಿಂದ, ಜಾನನ್ ಏವ = (ಈ ಹೆಬ್ಬಾವು ನನ್ನನ್ನು

ಹಿಡಿಯುತ್ತದೆ ಎಂದು) ತಿಳಿದೆ, ಉಲ್ಬಣಂ = ಕ್ರೂರ ರೂಪದಲ್ಲಿರುವ, ತಂ = ನಹುಷನನ್ನು, ಪ್ರಾಪ = ಸಮೀಪಿಸಿದನು.

ತಾತ್ಪರ್ಯ :- ನಹುಷ ಬ್ರಹ್ಮನ ಶಾಪಪ್ರಯುಕ್ತ ಪತಿತನಾದಾಗ ಇಪ್ಪತ್ತೆಂಟನೇ ದ್ವಾಪರದಲ್ಲಿ ಭೀಮ ಆತನನ್ನು ಕ್ರೂರವಾದ ಹೆಬ್ಬಾವೆಂದು ತಿಳಿದಿದ್ದೂ ಅವನ ತಪಸ್ಸನ್ನು ಸೆಳೆದುಕೊಳ್ಳುವ ಇಚ್ಛೆಯಿಂದ ಬಳಿಗೆ ಬಂದ.

**ಯತ್ತತ್ ಸುರಾಣಾಂ ಸರ್ವೇಷಾಂ ಮುನೀನಾಂ ಚ ತಪಃ ಸ್ಥಿತಮ್ ।**
**ತದ್ ಗೃಹೀತುಂ ವಶಗವದಿಚ್ಛಯೈವಾಽಸ ಮಾರುತಿಃ ॥ ೩೩೬ ॥**

**ಪದಚ್ಛೇದ :– ಯತ್, ತತ್, ಸುರಾಣಾಂ, ಸರ್ವೇಷಾಂ, ಮುನೀನಾಂ, ಚ, ತಪಃ, ಸ್ಥಿತಂ, ತತ್, ಗೃಹೀತುಂ, ವಶಗವತ್, ಇಚ್ಛಯಾ, ಏವ, ಆಸ, ಮಾರುತಿಃ ।**

**ಅರ್ಥ** :- **ಯತ್** = ಯಾವ ಕಾರಣದಿಂದ, **ಸರ್ವೇಷಾಂ** = ಎಲ್ಲ, **ಸುರಾಣಾಂ** = ದೇವತೆಗಳ, **ಚ** = ಮತ್ತು, **ಮುನೀನಾಂ** = ಋಷಿಗಳ, **ತಪಃ** = ತಪಸ್ಸು, **ಸ್ಥಿತಂ (ಅಸ್ತಿ)** = ನಹುಷನಲ್ಲಿದೆಯೋ, **ತತ್** = ಆ ಕಾರಣದಿಂದ, **ತತ್** = ಆ ತಪಸ್ಸನ್ನು, **ಗೃಹೀತುಂ** = ಸಂಪಾದಿಸಲು, **ಮಾರುತಿಃ** = ಭೀಮನು, **ವಶಗವತ್** = (ಹೆಬ್ಬಾವಿಗೆ) ಮಣಿದವನಂತೆ, **ಇಚ್ಛಯಾ ಏವ** = ಸ್ವೇಚ್ಛೆಯಿಂದಲೇ, **ಆಸ** = ಇದ್ದನು.

ತಾತ್ಪರ್ಯ :- ನಹುಷನಿಗಿಂತ ಶಕ್ತಿಶಾಲಿಯಾಗಿದ್ದರೂ ಭೀಮನು, ಆ ನಹುಷನಲ್ಲಿದ್ದ ಎಲ್ಲ ದೇವತೆಗಳ ಋಷಿಗಳ ತಪಸ್ಸನ್ನು ಪಡೆಯಲೆಂದೇ ಅಧೀನನಾದವನಂತೆ ತೋರಿಸಿಕೊಂಡ.

ವಿಶೇಷಾಂಶ :- ವ್ಯಾಕರಣದ ಕ್ರಮದಲ್ಲಿ 'ಗ್ರಹೀತುಂ' ಎಂದು ಪ್ರಯೋಗಿಸಬೇಕಾಗಿದ್ದರೂ, ಇಲ್ಲಿ ಆಚಾರ್ಯರು 'ಗೃಹೀತುಂ' ಎಂದು ವೈದಿಕ ಪ್ರಯೋಗವನ್ನನುಸರಿಸಿದ್ದಾರೆ.

**ದೇವಾನಾಂ ಹಿ ನೃಜಾತಾನಾಮಲ್ಪಂ ವ್ಯಕ್ತಂ ಭವೇದ್ ಬಲಮ್ ।**
**ಇಚ್ಛಯಾ ವ್ಯಕ್ತತಾಂ ಯಾತಿ ವಾಯೋರನ್ಯೇಷು ತಚ್ಚ ನ ॥ ೩೩೭ ॥**

ಪದಚ್ಛೇದ :- ದೇವಾನಾಂ, ಹಿ, ನೃಜಾತಾನಾಂ, ಅಲ್ಪಂ, ವ್ಯಕ್ತಂ, ಭವೇತ್, ಬಲಂ, ಇಚ್ಛಯಾ, ವ್ಯಕ್ತತಾಂ, ಯಾತಿ, ವಾಯೋಃ, ಅನ್ಯೇಷು, ತತ್, ಚ, ನ ।

**ಅರ್ಥ** :- **ನೃಜಾತಾನಾಂ** = ಮನುಷ್ಯರಲ್ಲಿ ಹುಟ್ಟಿದ, **ದೇವಾನಾಂ** = ದೇವತೆಗಳ, **ಬಲಂ** = ಬಲವು, **ಅಲ್ಪಂ** = (ಮೂಲರೂಪಕ್ಕಿಂತಲೂ) ಕಡಿಮೆಯು, **ಭವೇತ್** = ಇರುತ್ತದೆ, **ವ್ಯಕ್ತಂ ಹಿ** = ಇದು ಸ್ಪಷ್ಟವಷ್ಟೇ, **ವಾಯೋಃ** = ಮುಖ್ಯಪ್ರಾಣನಿಗೆ, **ಇಚ್ಛಯಾ** = ಇಚ್ಛೆಯಿಂದ, **ವ್ಯಕ್ತತಾಂ ಯಾತಿ** = (ಮೂಲರೂಪದ ಬಲವು) ಪ್ರಕಟವಾಗುತ್ತದೆ, **ಅನ್ಯೇಷು** = (ವಾಯುದೇವರಿಗಿಂತ) ಇತರ ದೇವತೆಗಳಲ್ಲಿ, **ತತ್ ಚ** = ಆ ಇಚ್ಛಾವ್ಯಕ್ತಿಯೂ, **ನ** = ಇಲ್ಲ.

**ತಾತ್ಪರ್ಯ** :- ಭೀಮನಿಗೆ ಅಶಕ್ತಿ ಇರಲಿಲ್ಲ ಎಂದು ತಿಳಿಸುತ್ತಿದ್ದಾರೆ. ಶಾಸ್ತ್ರದ ನಿರ್ಣಯ ಹೀಗಿದೆ, ವಾಯುದೇವರು ಅವತರಿಸಿದಾಗ ಅವರು ಬಯಸಿದರೆ ಮೂಲರೂಪದ ಬಲವೂ ಒದಗುತ್ತದೆ. ಆದರೆ ಇತರೆ ದೇವತೆ- ಗಳಿಗೆ ಅವತಾರದಲ್ಲಿ ಮೂಲರೂಪಕ್ಕಿಂತ ಕಡಿಮೆಯಾದ ಬಲವೇ ಇರುತ್ತದೆ ಅವರು ಬಯಸಿದರೂ ಅವರಿಗೆ ಮೂಲರೂಪದ ಬಲವು ದೊರೆಯುವುದಿಲ್ಲ.

**ನಿತ್ಯವ್ಯಕ್ತಾ ಗುಣಾ ವಿಷ್ಣೋರಿತಿ ಶಾಸ್ತ್ರಸ್ಯ ನಿರ್ಣಯಃ ।**
**ಏವಮನ್ಯೇऽಪಿ ಹಿ ಗುಣಾ ಮಾನುಷಾದಿಷು ಜನ್ಮಸು ॥ ೩೩೮ ॥**

ಪದಚ್ಛೇದ :- ನಿತ್ಯಂ, ವ್ಯಕ್ತಾಃ, ಗುಣಾಃ, ವಿಷ್ಣೋಃ, ಇತಿ, ಶಾಸ್ತ್ರಸ್ಯ, ನಿರ್ಣಯಃ, ಏವಂ, ಅನ್ಯೇ, ಅಪಿ, ಹಿ, ಗುಣಾಃ, ಮಾನುಷಾದಿಷು, ಜನ್ಮಸು ।

**ಅರ್ಥ** :- **ವಿಷ್ಣೋಃ** = ಪರಮಾತ್ಮನ, **ಗುಣಾಃ** = ಗುಣಗಳು, **ನಿತ್ಯಂ** = ಎಲ್ಲ ದೇಶ ಕಾಲ ಮತ್ತು ಅವತಾರಗಳಲ್ಲಿ, **ವ್ಯಕ್ತಾಃ** = ಮೂಲರೂಪದಂತೆಯೇ ಇರುತ್ತವೆ, (**ದೇವಾನಾಂ** = ದೇವತೆಗಳಿಗೆ), **ಮಾನುಷಾದಿಷು** = ಮನುಷ್ಯ, ತಿರ್ಯಕ್, ಸ್ಥಾವರ ಮೊದಲಾದ, **ಜನ್ಮಸು** = ಜನ್ಮಗಳಲ್ಲಿ, **ಅನ್ಯೇ** = ಬಲಕ್ಕಿಂತ ಬೇರೆಯಾದ, **ಗುಣಾಃ ಅಪಿ** = ಜ್ಞಾನಾದಿಗುಣಗಳೂ ಕೂಡ, **ಏವಂ ಹಿ** = ಬಲದಂತೆಯೇ, **ಇತಿ** = ಹೀಗೆಂದು, **ಶಾಸ್ತ್ರಸ್ಯ** = ವೇದಾದಿಗಳ, **ನಿರ್ಣಯಃ** = ನಿರ್ಧಾರ.

ತಾತ್ಪರ್ಯ :- ಶ್ರೀಹರಿಗೆ ಗುಣಗಳು ಸದಾ ಮೂಲರೂಪದಲ್ಲಿ ರುವಂತೆಯೇ ಇರುತ್ತವೆ, ದೇವತೆಗಳಿಗೆ ಮನುಷ್ಯಾದಿ ಜನ್ಮಗಳಲ್ಲಿ ಬೇರೆ ಜ್ಞಾನಾ- ನಂದಾದಿ ಗುಣಗಳೂ ಸ್ವಲ್ಪ ವ್ಯಕ್ತವಾಗುತ್ತವೆಯಷ್ಟೆ ಇದು ಶಾಸ್ತ್ರನಿರ್ಣಯ.

**ದೇವಾನಾಂ ಮಾನುಷಾದೌ ತು ಶಕ್ಯೇಽಪ್ಯವ್ಯಕ್ತತಾಕೃತೇಃ ।**
**ಧರ್ಮವೃದ್ಧಿರ್ಭವೇತ್ ತೇಷಾಂ ಪ್ರೀತೋ ಭವತಿ ಕೇಶವಃ ॥ ೩೩೯ ॥**

**ಪದಚ್ಛೇದ :- ದೇವಾನಾಂ, ಮಾನುಷಾದೌ, ತು, ಶಕ್ಯೇ, ಅಪಿ, ಅವ್ಯಕ್ತತಾಕೃತೇಃ, ಧರ್ಮವೃದ್ಧಿಃ, ಭವೇತ್, ತೇಷಾಂ, ಪ್ರೀತಃ, ಭವತಿ, ಕೇಶವಃ ।**

**ಅರ್ಥ :- ದೇವಾನಾಂ** = ದೇವತೆಗಳಿಗೆ, **ಮಾನುಷಾದೌ** = ಮನುಷ್ಯ ಮೊದಲಾದ ಜನ್ಮಗಳಲ್ಲಿ, **ಶಕ್ಯೇ ಅಪಿ** = ಮೂಲರೂಪದ ಗುಣಗಳನ್ನು ಸ್ವೀಕರಿಸಿ ವ್ಯಕ್ತಗೊಳಿಸಲು ಸಾಧ್ಯವಿದ್ದರೂ, **ಅವ್ಯಕ್ತತಾಕೃತೇಃ** = ವ್ಯಕ್ತಗೊಳಿಸದೇ ಇರುವುದರಿಂದ, **ತೇಷಾಂ** = ಆ ದೇವತೆಗಳ, **ಧರ್ಮವೃದ್ಧಿಃ** = ಪುಣ್ಯವೃದ್ಧಿಯು, **ತು** = ವಿಶೇಷವಾಗಿ, **ಭವೇತ್** = ಆಗುತ್ತದೆ, **ಕೇಶವಃ** = ನಾರಾಯಣನು, **ಪ್ರೀತಃ** = (ಅವರ ವಿಷಯದಲ್ಲಿ) ಪ್ರಸನ್ನನು, **ಭವತಿ** = ಆಗುತ್ತಾನೆ.

ತಾತ್ಪರ್ಯ :- ದೇವತೆಗಳು ಮನುಷ್ಯಾದಿ ಜನ್ಮಗಳಲ್ಲಿ ತಮ್ಮ ದಿವ್ಯಗುಣಗಳನ್ನು ವ್ಯಕ್ತಮಾಡಿಕೊಳ್ಳಲು ಶಕ್ತರಾಗಿದ್ದರೂ ವ್ಯಕ್ತಮಾಡಿಕೊಳ್ಳ ದಿರುವುದರಿಂದ ಅವರಿಗೆ ಪುಣ್ಯವೃದ್ಧಿಯಾಗುತ್ತದೆ ವಿಷ್ಣು ಸುಪ್ರೀತನಾಗುತ್ತಾನೆ.

**ತನ್ಮಾನುಷೇ ಬಲೇ ತಸ್ಯ ವರಾದ್ ವಾರಿತವತ್ ಸ್ಥಿತೇ ।**
**ದೈವಂ ಬಲಂ ಸುಶಕ್ತೋಽಪಿ ವ್ಯಕ್ತಂ ಚಕ್ರೇ ನ ಮಾರುತಿಃ ॥ ೩೪೦ ॥**

**ಪದಚ್ಛೇದ :- ತತ್, ಮಾನುಷೇ, ಬಲೇ, ತಸ್ಯ, ವರಾದ್, ವಾರಿತವತ್, ಸ್ಥಿತೇ, ದೈವಂ, ಬಲಂ, ಸುಶಕ್ತಃ, ಅಪಿ, ವ್ಯಕ್ತಂ, ಚಕ್ರೇ, ನ, ಮಾರುತಿಃ ।**

**ಅರ್ಥ :- ತಸ್ಯ** = ಆ ಭೀಮನ, **ಮಾನುಷೇ** = ಮಾನವ ದೇಹಸಂಬಂಧಿ ಯಾದ, **ಬಲೇ** = ಬಲವು, **ವರಾದ್** = ('ಕಣ್ಣಿಗೆ ಬಿದ್ದವರ ತಪಸ್ಸು ಬಲವು ನಿನಗೆ ಸೇರಲಿ' ಎಂಬ) ಬ್ರಹ್ಮದೇವರ ವರದಿಂದ, **ವಾರಿತವತ್** =

ಪ್ರತಿಬದ್ಧವ್ಯಾದಂತೆ, ಸ್ಥಿತೇ = ಇರಲು, ಮಾರುತಿಃ = ಭೀಮನು, ಸುಶಕ್ತಃ ಅಪಿ = ಶಕ್ತನಾಗಿದ್ದರೂ, ದೈವಂ ಬಲಂ = ತನ್ನ ದಿವ್ಯಬಲವನ್ನು, ವ್ಯಕ್ತಂ = ಪ್ರಕಟವನ್ನಾಗಿ, ನ ಚಕ್ರೇ = ಮಾಡಲಿಲ್ಲ, ತತ್ = ಹೀಗೆ ನಡೆಯುವುದು ಪುಣ್ಯವೃದ್ಧಿ ಮತ್ತು ಭಗವದನುಗ್ರಹಕ್ಕೆ ಕಾರಣವಾಗುವುದರಿಂದ.

ತಾತ್ಪರ್ಯ :- ಅದರಿಂದ ಭೀಮ ತನ್ನ ಮಾನುಷಬಲ ಬ್ರಹ್ಮನ ವರದಿಂದ ತಡೆಯಲ್ಪಟ್ಟಂತಿರಲು ದೈವಬಲವನ್ನು ವ್ಯಕ್ತಮಾಡಿಕೊಳ್ಳಲು ಸುಶಕ್ತನಾದರೂ ವ್ಯಕ್ತಮಾಡಿಕೊಳ್ಳಲಿಲ್ಲ.

**ಆತ್ಮಮೋಕ್ಷಾಯ ನ ಪ್ರಶ್ನಾನ್ ವ್ಯಾಜಹಾರ ಸ ಚಾಭಿಭೂಃ ।**
**ವಿದ್ಯೋಪಜೀವನಂ ಧರ್ಮೋ ವಿಪ್ರಾಣಾಮಪಿ ನೋ ಯತಃ ॥ ೩೪೧ ॥**

**ಕಿಮುತ ಕ್ಷತ್ರಿಯಸ್ಯೇತಿ ಜಾನನ್ನಪಿ ವೃಕೋದರಃ ।**
**ತತ್ಪ್ರಶ್ನಪರಿಹಾರೇಣ ನಾಽತ್ಮಮೋಕ್ಷಂ ಸಮೈಚ್ಛತ ॥ ೩೪೨ ॥**

**ಪದಚ್ಛೇದ :- ಆತ್ಮಮೋಕ್ಷಾಯ, ನ, ಪ್ರಶ್ನಾನ್, ವ್ಯಾಜಹಾರ, ಸಃ, ಚ, ಅಭಿಭೂಃ, ವಿದ್ಯೋಪಜೀವನಂ, ಧರ್ಮಃ, ವಿಪ್ರಾಣಾಂ, ಅಪಿ, ನೋ, ಯತಃ, ಕಿಂ, ಉತ, ಕ್ಷತ್ರಿಯಸ್ಯ, ಇತಿ, ಜಾನನ್, ಅಪಿ, ವೃಕೋದರಃ, ತತ್, ಪ್ರಶ್ನಪರಿಹಾರೇಣ, ನ, ಆತ್ಮಮೋಕ್ಷಂ, ಸಮೈಚ್ಛತ।**

ಅರ್ಥ :- ಸಃ = ಭೀಮನು, ಅಭಿಭೂಃ ಚ = ಸಮರ್ಥನಾಗಿದ್ದರೂ, ಪ್ರಶ್ನಾನ್ = ನಹುಷ ಕೇಳಿದ ಪ್ರಶ್ನೆಗಳನ್ನು, ಆತ್ಮಮೋಕ್ಷಾಯ = ತನ್ನ ಬಿಡುಗಡೆಗಾಗಿ, ನ ವ್ಯಾಜಹಾರ = ಉತ್ತರಿಸಲಿಲ್ಲ, ಯತಃ = ಯಾವ ಕಾರಣದಿಂದ, ವಿದ್ಯೋಪಜೀವನಂ = ಬದುಕಿಗಾಗಿ ವಿದ್ಯೆಯನ್ನು ಅವಲಂಬಿಸುವುದು, ವಿಪ್ರಾಣಾಂ ಅಪಿ = ಬ್ರಾಹ್ಮಣರಿಗೂ, ಧರ್ಮಃ = ಧರ್ಮವು (ವಿಹಿತವು), ನೋ = ಅಲ್ಲ, ತತ್ = ಆದ್ದರಿಂದ, ಕ್ಷತ್ರಿಯಸ್ಯ = ಕ್ಷತ್ರಿಯನಿಗೆ, ಕಿಂ ಉತ = ಇನ್ನೇನು (ಧರ್ಮ ಅಲ್ಲವೇ ಅಲ್ಲ ಎಂದರ್ಥ), ಇತಿ = ಎಂದು, ವೃಕೋದರಃ = ಭೀಮನು, ಜಾನನ್ ಅಪಿ = ಉತ್ತರ ತಿಳಿದಿದ್ದರೂ, ಪ್ರಶ್ನಪರಿಹಾರೇಣ = ಉತ್ತರಿಸುವುದರ ಮೂಲಕ, ಆತ್ಮಮೋಕ್ಷಂ = ತನ್ನ ಬಿಡುಗಡೆಯನ್ನು, ನ ಸಮೈಚ್ಛತ = ಬಯಸಲಿಲ್ಲ.

ತಾತ್ಪರ್ಯ :- ನಹುಷನ ಪ್ರಶ್ನೆಗಳಿಗೆ ಪರಿಹಾರ ನೀಡಲು ಸಮರ್ಥನಾಗಿದ್ದರೂ ಭೀಮ ಉತ್ತರಿಸಲಿಲ್ಲ. ಏಕೆಂದರೆ ವಿದ್ಯೆಯನ್ನು ಜೀವನಕ್ಕಾಗಿ ಅವಲಂಬಿಸುವುದು ಬ್ರಾಹ್ಮಣರಿಗೂ ಧರ್ಮವಲ್ಲ, ಹೀಗಿರುವಾಗ ಕ್ಷತ್ರಿಯನಿಗಿನ್ನೇನು? ಎಂದು ಭೀಮನು, ಉತ್ತರ ತಿಳಿದವನಾಗಿದ್ದರೂ ನಹುಷನ ಪ್ರಶ್ನೆಗಳಿಗೆ ಪರಿಹಾರ ನೀಡುವ ಮೂಲಕ ತನ್ನ ಬಿಡುಗಡೆ ಮಾಡಿಕೊಳ್ಳಲು ಬಯಸಲಿಲ್ಲ.

**ಅಯತಂತಮಪಿ ಹ್ಯೇನಂ ಚಾಲನಾಯಾಪಿ ನಾಶಕತ್ ।**
**ಪೂರ್ಣೋऽಪಿ ಸರ್ವಲೋಕಾನಾಂ ಬಲೇನ ನಹುಷಸ್ತದಾ ।**
**ವೇಷ್ಟಯಿತ್ವೈವ ತಂ ಭೀಮಂ ಸ್ಥಿತೋऽಸೌ ನಾಶಕತ್ ಪರಮ್ ॥ ೩೪೩ ॥**

**ಪದಚ್ಛೇದ :– ಅಯತಂತಂ, ಅಪಿ, ಹಿ, ಏನಂ, ಚಾಲನಾಯ, ಅಪಿ, ನ, ಅಶಕತ್, ಪೂರ್ಣಃ, ಅಪಿ, ಸರ್ವಲೋಕಾನಾಂ, ಬಲೇನ, ನಹುಷಃ, ತದಾ, ವೇಷ್ಟಯಿತ್ವಾ, ಏವ, ತಂ, ಭೀಮಂ, ಸ್ಥಿತಃ, ಅಸೌ,ನ, ಅಶಕತ್, ಪರಂ ।**

**ಅರ್ಥ :- ಸರ್ವಲೋಕಾನಾಂ** = ಕಣ್ಣಿಗೆ ಬಿದ್ದ ಎಲ್ಲರ, **ಬಲೇನ** = ಬಲದಿಂದ, **ಪೂರ್ಣಃ ಅಪಿ** = ಪೂರ್ಣನಾಗಿದ್ದರೂ, **ನಹುಷಃ** = ನಹುಷನು, **ಅಯತಂತಂ ಅಪಿ** = ತನ್ನನ್ನು ಬಿಡಿಸಿಕೊಳ್ಳಲು ಪ್ರಯತ್ನಿಸದೆ ಇರುವಾಗಲೂ, **ಏನಂ** = ಈ ಭೀಮನನ್ನು, **ಚಾಲನಾಯ ಅಪಿ** = ಅಲ್ಲಾಡಿಸಲೂ, **ನ ಅಶಕತ್** = ಸಮರ್ಥನಾಗಲಿಲ್ಲ, **ಹಿ** = ಇದು ಪ್ರಸಿದ್ಧ, **ತದಾ** = ಆವಾಗ, **ಅಸೌ** = ನಹುಷನು, **ತಂ** = ಅಂತಹ, **ಭೀಮಂ** = ಭೀಮನನ್ನು, **ವೇಷ್ಟಯಿತ್ವಾ ಏವ** = ಸುತ್ತಿಕೊಂಡೇ, **ಸ್ಥಿತಃ** = ಇದ್ದನು, **ಪರಂ** = ಇದಕ್ಕಿಂತ ಮಿಗಿಲಾದದ್ದನ್ನು (ಕಚ್ಚುವಿಕೆ ಮೊದಲಾದುದನ್ನು) ಮಾಡಲು, **ನ ಅಶಕತ್** = ಸಮರ್ಥನಾಗಲಿಲ್ಲ.

ತಾತ್ಪರ್ಯ :- ಕಣ್ಣಿಗೆ ಬಿದ್ದ ಎಲ್ಲರ ಬಲದಿಂದಲೂ ತುಂಬಿದ್ದ ನಹುಷ, ಭೀಮನನ್ನು ಅವನು ಏನೂ ಪ್ರಯತ್ನ ಮಾಡದಿದ್ದಾಗಲೂ, ಅಲ್ಲಾಡಿಸಲು ಶಕ್ತನಾಗಲಿಲ್ಲ. ಆಗ ಭೀಮನನ್ನು ಸುತ್ತಿಕೊಂಡಿದ್ದ ಹೊರತು ಇನ್ನೇನನ್ನೂ ಮಾಡಲು ಶಕ್ತನಾಗಲಿಲ್ಲ.

ಭ್ರಾತೃಮಾತ್ರಾದಿಷು ಸ್ನೇಹಾತ್ ಕ್ಷಿಪ್ರಮಾತ್ಮವಿಮೋಕ್ಷಣಮ್ ।
ಇಚ್ಛನ್ನಪಿ ನ ಮೋಕ್ಷಾಯ ಯತ್ನಂ ಚಕ್ರೇ ವೃಕೋದರಃ ।
ಸರ್ವದೇವಮುನೀಂದ್ರಾಣಾಂ ತಪ ಆದಾತುಮತ್ರಗಮ್ ॥ ೩೪೪ ॥

ಪದಚ್ಛೇದ :- ಭ್ರಾತೃಮಾತ್ರಾದಿಷು, ಸ್ನೇಹಾತ್, ಕ್ಷಿಪ್ರಂ, ಆತ್ಮವಿಮೋಕ್ಷಣಂ, ಇಚ್ಛನ್, ಅಪಿ, ನ, ಮೋಕ್ಷಾಯ, ಯತ್ನಂ, ಚಕ್ರೇ, ವೃಕೋದರಃ, ಸರ್ವದೇವ ಮುನೀಂದ್ರಾಣಾಂ, ತಪಃ, ಆದಾತುಂ, ಅತ್ರಗಂ ।

ಅರ್ಥ :- ವೃಕೋದರಃ = ಭೀಮನು, ಭ್ರಾತೃಮಾತ್ರಾದಿಷು = ಸೋದರ ತಾಯಿ ಮೊದಲಾದವರಲ್ಲಿ, ಸ್ನೇಹಾತ್ = ಪ್ರೀತಿಯ ಪ್ರಯುಕ್ತ, ಕ್ಷಿಪ್ರಂ = ಕೂಡಲೇ, ಆತ್ಮವಿಮೋಕ್ಷಣಂ = ತನ್ನ ಬಿಡುಗಡೆಯನ್ನು, ಇಚ್ಛನ್ ಅಪಿ = ಬಯಸುವವನಾದರೂ, ಮೋಕ್ಷಾಯ = ತನ್ನ ಬಿಡುಗಡೆಯನ್ನು, ಇಚ್ಛನ್ ಅಪಿ = ಬಯಸುವವನಾದರೂ, ಮೋಕ್ಷಾಯ = ತನ್ನ ಬಿಡುಗಡೆಗಾಗಿ, ಯತ್ನಂ = ಪ್ರಯತ್ನವನ್ನು, ನ ಚಕ್ರೇ = ಮಾಡಲಿಲ್ಲ, ಅತ್ರಗಂ = ಈ ನಹುಷನಲ್ಲಿರುವ, ಸರ್ವದೇವಮುನೀಂದ್ರಾಣಾಂ = ಎಲ್ಲ ದೇವ ಋಷಿ ಶ್ರೇಷ್ಠರ, ತಪಃ = ತಪಸ್ಸನ್ನು, ಆದಾತುಂ = ಸಂಪಾದಿಸಲು (ಎಂದರ್ಥ)

ತಾತ್ಪರ್ಯ :- ಈ ನಹುಷನಲ್ಲಿರುವ ದೇವಮುನೀಂದ್ರರ ತಪಸ್ಸನ್ನು ಸ್ವೀಕರಿಸಲು, ಭೀಮನು ಸೋದರರಲ್ಲಿ ಮತ್ತು ತಾಯಿ ಮೊದಲಾದವ-ರಲ್ಲಿರುವ ಪ್ರೀತಿಯಿಂದ ಬೇಗನೆ ತನ್ನ ಬಿಡುಗಡೆಯಾಗಬೇಕೆಂದು ಬಯಸಿ-ದರೂ ಬಿಡುಗಡೆಗಾಗಿ ಯತ್ನ ಮಾಡಲಿಲ್ಲ.

ಭ್ರಾತ್ರಾದಿಷು ಸ್ನೇಹವಶಾನ್ನ ಸ್ಥಾತವ್ಯಮಿಹೇತ್ಯಪಿ ।
ಮನ್ವಾನಃ ಕಾಲತೋ ಭಂಗಂ ಸ್ವಯಮೇವೈಷ ಯಾಸ್ಯತಿ ।
ಆಜ್ಞಯಾ ವಾಸುದೇವಸ್ಯ ದಾರ್ಢ್ಯಾದ್ ದೇಹಸ್ಯ ಮೇ ತಥಾ ॥ ೩೪೫ ॥

ಪ್ರಸ್ತಾಂಗೇ ಪತಿತೇ ಸರ್ಪೇ ಯಾಸ್ಯಾಮೀತಿ ವಿಚಿಂತಯನ್ ।
ತಸ್ಥೌ ಭೀಮೋ ಹರಿಂ ಧ್ಯಾಯನ್ ಸ್ವಭಾವಾನ್ನ ತದಿಚ್ಛಯಾ ॥ ೩೪೬ ॥

ಪದಚ್ಛೇದ :- ಭ್ರಾತ್ರಾದಿಷು, ಸ್ನೇಹವಶಾತ್, ನ, ಸ್ಥಾತವ್ಯಂ, ಇಹ, ಇತಿ, ಅಪಿ, ಮನ್ವಾನಃ, ಕಾಲತಃ, ಭಂಗಂ, ಸ್ವಯಂ, ಏವ, ಏಷಃ, ಯಾಸ್ಯತಿ, ಆಜ್ಞಯಾ,

**ವಾಸುದೇವಸ್ಯ, ದಾರ್ಢ್ಯಾದ್, ದೇಹಸ್ಯ, ಮೇ, ತಥಾ, ಸ್ರಸ್ತಾಂಗೇ, ಪತಿತೇ, ಸರ್ಪೇ, ಯಾಸ್ಯಾಮಿ, ಇತಿ, ವಿಚಿಂತಯನ್, ತಸ್ಥೌ, ಭೀಮಃ, ಹರಿಂ, ಧ್ಯಾಯನ್, ಸ್ವಭಾವಾತ್, ನ, ತದಿಚ್ಛಯಾ ।**

**ಅರ್ಥ** :- **ಭ್ರಾತ್ರಾದಿಷು** = ಸೋದರ ಮೊದಲಾದವರಲ್ಲಿ, **ಸ್ನೇಹವಶಾತ್** = ಪ್ರೀತಿಗೆ ಅಧೀನನಾಗಿ, **ಭೀಮಃ** = ಭೀಮನು, **ಇಹ** = ಈ ಹಾವಿನ ತೆಕ್ಕೆಯಲ್ಲಿ, **ನ ಸ್ಥಾತವ್ಯಂ** = ಬಹುಕಾಲ ಇರಬಾರದು, **ಇತಿ** = ಎಂದು, **ಮನ್ವಾನಃ ಅಪಿ** = ಯೋಚಿಸುತ್ತಿದ್ದರೂ, **ವಾಸುದೇವಸ್ಯ** = ಪರಮಾತ್ಮನ, **ಆಜ್ಞಯಾ** = ನಹುಷನು ನಷ್ಟಬಲನಾಗಲಿ ಎಂಬ ಆಜ್ಞೆಯಿಂದ, **ಮೇ** = ನನ್ನ, **ದೇಹಸ್ಯ** = ದೇಹದ, **ದಾರ್ಢ್ಯಾತ್** = ದೃಢತೆಯ ಪ್ರಯುಕ್ತ, **ಕಾಲತಃ** = ಸ್ವಲ್ಪಕಾಲದ ನಂತರ, **ಏಷಃ** = ನಹುಷನು, **ಸ್ವಯಂ ಏವ** = ತಾನಾಗಿಯೇ, **ಭಂಗಂ** = ಮೂರ್ಛೆಯನ್ನು, **ಯಾಸ್ಯತಿ** = ಹೊಂದುತ್ತಾನೆ, **ತಥಾ** = ಹಾಗೆ, **ಸರ್ಪೇ** = ಹೆಬ್ಬಾವಿನ ರೂಪದಲ್ಲಿರುವ ನಹುಷನು, **ಸ್ರಸ್ತಾಂಗೇ** = ಶಿಥಿಲ-ಗೊಂಡ ಅವಯವವುಳ್ಳವನಾಗಿ, **ಪತಿತೇ** = ಬೀಳಲು, **ಯಾಸ್ಯಾಮಿ** = ಹೋಗುವೆನು, **ಇತಿ** = ಹೀಗೆಂದು, **ವಿಚಿಂತಯನ್** = ಯೋಚಿಸುತ್ತಾ, **ಹರಿಂ** = ಶ್ರೀಹರಿಯನ್ನು, **ಸ್ವಭಾವಾತ್** = ನಿರಂತರ ಹರಿಯನ್ನು ಚಿಂತಿಸುವ ತನ್ನ ಸ್ವಭಾವಕ್ಕನುಗುಣವಾಗಿಯೇ, **ಧ್ಯಾಯನ್** = ಚಿಂತಿಸುತ್ತಾ, **ತಸ್ಥೌ** = ನಿಂತನು, **ತದಿಚ್ಛಯಾ** = ಬಿಡುಗಡೆ ಹೊಂದಬೇಕು ಎಂಬ ಬಯಕೆಯಿಂದ, **ನ** = ಅಲ್ಲ.

**ತಾತ್ಪರ್ಯ** :- ಭೀಮಸೋದರರು ಮುಂತಾದವರಲ್ಲಿನ ಸ್ನೇಹದಿಂದ ತಾನು ಹೆಚ್ಚು ಕಾಲ ಹಾವಿನ ತೆಕ್ಕೆಯಲ್ಲಿ ಇರಕೂಡದೆಂದು ತಿಳಿದವನಾಗಿದ್ದರೂ ಸ್ವಲ್ಪ ಹೊತ್ತಿನಲ್ಲಿ ಹಾವು ತಾನೇ ಶಕ್ತಿಗುಂದುತ್ತದೆ. ಹರಿಯ ಇಚ್ಛೆಯಿಂದ ನನ್ನ ಶರೀರದ ದಾರ್ಢ್ಯದಿಂದ ಹಾಗೆ ಅದರ ಅವಯವ ಸಡಿಲಗೊಂಡು ಕೆಳಗೆ ಬೀಳುವಾಗ ನಾನು ಹೊರಟು ಹೋಗುವೆನೆಂದು ಆಲೋಚಿಸಿ ಸ್ವಾಭಾವಿಕ-ವಾಗಿ ಹರಿಯನ್ನು ಧ್ಯಾನಿಸುತ್ತ ನಿಂತ ಹೊರತು ಬಿಡುಗಡೆಗೆ ಬಯಸಿ ಹರಿಧ್ಯಾನವನ್ನು ಮಾಡಲಿಲ್ಲ.

ತದೈವ ಬ್ರಹ್ಮವಚನಾತ್ ಪೂರ್ವೋಕ್ತಾತ್ ಕೇಶವಾಜ್ಞಯಾ ।
ಬಲಂ ತಪಶ್ಚ ಸರ್ಪಸ್ಯ ತತ್‌ಸ್ಥಮಾಯಾದ್ ವೃಕೋದರಮ್ ॥ ೩೪೭ ॥

ಪದಚ್ಛೇದ :- ತದಾ, ಏವ, ಬ್ರಹ್ಮವಚನಾತ್, ಪೂರ್ವೋಕ್ತಾತ್, ಕೇಶವಾಜ್ಞಯಾ, ಬಲಂ, ತಪಃ, ಚ, ಸರ್ವಸ್ಯ, ತತ್‌ಸ್ಥಂ, ಆಯಾತ್, ವೃಕೋದರಂ ।

**ಅರ್ಥ** :- ತದಾ = ಆವಾಗ, **ಪೂರ್ವೋಕ್ತಾತ್** = ಹಿಂದೆ ಹೇಳಿದ, ಬ್ರಹ್ಮವಚನಾತ್ = ಬ್ರಹ್ಮದೇವರ ಮಾತಿನಿಂದ, ಏವ = ಮತ್ತು, ಕೇಶವಾಜ್ಞಯಾ = ಹರಿ ಆಜ್ಞೆಯಿಂದ, ತತ್‌ಸ್ಥಂ = ನಹುಷನಲ್ಲಿರುವ, ಸರ್ವಸ್ಯ = ಎಲ್ಲರ, ಬಲಂ = ಬಲವು, ಚ = ಮತ್ತು, ತಪಃ = ತಪಸ್ಸು, ವೃಕೋದರಂ = ಭೀಮನನ್ನು, ಆಯಾತ್ = ಸೇರಿತು.

**ತಾತ್ಪರ್ಯ** :- ಆಗಲೇ ಹರಿಯಾಜ್ಞೆಯಿಂದ, ಹಿಂದೆ ಹೇಳಿದ ಬ್ರಹ್ಮದೇವರ ಮಾತಿನಿಂದ ನಹುಷನಲ್ಲಿದ್ದ ಎಲ್ಲ ದೇವ ಮುನಿಗಳ ತಪಸ್ಸೂ ಬಲವೂ ಭೀಮನಲ್ಲಿ ಬಂದು ಸೇರಿತು.

ಪೂರಿತೇ ನಹುಷಸ್ಥೇನ ತಪಸಾ ಚ ಬಲೇನ ಚ ।
ಭೀಮೇ ಸ ನಹುಷೋಽಥಾಽಸೀತ್ ಸ್ರಸ್ತಭೋಗಃ ಶನೈಃಶನೈಃ ॥ ೩೪೮ ॥

ಪದಚ್ಛೇದ :- ಪೂರಿತೇ, ನಹುಷಸ್ಥೇನ, ತಪಸಾ, ಚ, ಬಲೇನ, ಚ, ಭೀಮೇ, ಸಃ, ನಹುಷಃ, ಅಥ, ಆಸೀತ್, ಸ್ರಸ್ತಭೋಗಃ, ಶನೈಃ, ಶನೈಃ ।

**ಅರ್ಥ** :- ನಹುಷಸ್ಥೇನ = ನಹುಷನಲ್ಲಿರುವ, ತಪಸಾ = ತಪಸ್ಸಿನಿಂದ, ಚ = ಮತ್ತು, ಬಲೇನ ಚ = ಬಲದಿಂದಲೂ, ಭೀಮೇ = ಭೀಮನು, ಪೂರಿತೇ = ತುಂಬಲ್ಪಡಲು, ಅಥ = ಶಾಪ ಮೋಕ್ಷವು ಸನ್ನಿಹಿತವಾದುದರಿಂದ, ಸಃ = ಹೆಬ್ಬಾವಾದ, ನಹುಷಃ = ನಹುಷನು, ಶನೈಃ ಶನೈಃ = ಬಲಹ್ರಾಸಕ್ಕನು-ಗುಣವಾಗಿ ಮೆಲ್ಲ ಮೆಲ್ಲನೆ, ಸ್ರಸ್ತಭೋಗಃ = ಸಡಿಲಗೊಂಡ ಮೈಯುಳ್ಳವನು, ಆಸೀತ್ = ಆದನು.

**ತಾತ್ಪರ್ಯ** :- ನಹುಷನಲ್ಲಿದ್ದ ತಪಸ್ಸಿನಿಂದಲೂ ಬಲದಿಂದಲೂ ಭೀಮ ತುಂಬಿಕೊಂಡಾಗ ನಹುಷ ನಿಧಾನವಾಗಿ ಶರೀರದ ಸಡಿಲಿಕೆಯನ್ನು ಹೊಂದಿದ.

ಗತೇ ಭೀಮೇ ನಿಮಿತ್ತಾನಿ ದೃಷ್ಟ್ವಾ ರಾಜಾ ಯುಧಿಷ್ಠಿರಃ ।
ಪಪ್ರಚ್ಛ ಕ್ವ ಗತೋ ಭೀಮ ಇತಿ ಕೃಷ್ಣಾಂ ಚಲನ್ಮನಾಃ ॥ ೩೪೯ ॥

**ಪದಚ್ಛೇದ :- ಗತೇ, ಭೀಮೇ, ನಿಮಿತ್ತಾನಿ, ದೃಷ್ಟ್ವಾ, ರಾಜಾ, ಯುಧಿಷ್ಠಿರಃ, ಪಪ್ರಚ್ಛ, ಕ್ವ, ಗತಃ, ಭೀಮಃ, ಇತಿ, ಕೃಷ್ಣಾಂ, ಚಲನ್ಮನಾಃ ।**

**ಅರ್ಥ** :- **ಭೀಮೇ** = ಭೀಮನು, **ಗತೇ** = ಹೋಗಿರಲು, **ನಿಮಿತ್ತಾನಿ** = ಶಕುನಗಳನ್ನು, **ದೃಷ್ಟ್ವಾ** = ಕಂಡು, **ಚಲನ್ಮನಾಃ** = ವಿಚಲಿತವಾದ ಮನಸ್ಸುಳ್ಳ, **ರಾಜಾ** = ರಾಜನಾದ, **ಯುಧಿಷ್ಠಿರಃ** = ಧರ್ಮರಾಜನು, **ಭೀಮಃ** = ಭೀಮನು, **ಕ್ವಗತಃ** = ಎಲ್ಲಿ ಹೋಗಿದ್ದಾನೆ, **ಇತಿ** = ಎಂದು, **ಕೃಷ್ಣಾಂ** = ದ್ರೌಪದಿಯನ್ನು, **ಪಪ್ರಚ್ಛ** = ಕೇಳಿದನು.

**ತಾತ್ಪರ್ಯ** :- ಭೀಮ ಹೊರಟು ಹೋದಾಗ ರಾಜಾ ಯುಧಿಷ್ಠಿರ ಉತ್ಪಾತಗಳನ್ನು ಕಂಡು ಶಂಕಾಗ್ರಸ್ತನಾಗಿ 'ಭೀಮನೆಲ್ಲಿಗೆ ಹೋದ'ನೆಂದು ದ್ರೌಪದಿಯನ್ನು ಕೇಳಿದ.

**ಯಾತಂ ಮೃಗಾರ್ಥಂ ಸ ನಿಶಮ್ಯ ತಸ್ಯಾ-**
**ಸ್ತದೂರುವೇಗಾತ್ ಪತಿತಾನ್ ನಗೇಂದ್ರಾನ್ ।**
**ದೃಷ್ಟ್ವಾ ಪಥಾ ತೇನ ಯಯೌ ಸ ತತ್ರ**
**ದೃಷ್ಟ್ವಾ ಚ ಸರ್ಪಾವೃತಮನ್ವಪೃಚ್ಛತ್ ॥ ೩೫೦ ॥**

**ಪದಚ್ಛೇದ :- ಯಾತಂ, ಮೃಗಾರ್ಥಂ, ಸಃ, ನಿಶಮ್ಯ, ತಸ್ಯಾಃ, ತದೂರುವೇಗಾತ್, ಪತಿತಾನ್, ನಗೇಂದ್ರಾನ್, ದೃಷ್ಟ್ವಾ, ಪಥಾ, ತೇನ, ಯಯೌ, ಸಃ, ತತ್ರ, ದೃಷ್ಟ್ವಾ, ಚ, ಸರ್ಪಾವೃತಂ, ಅನ್ವಪೃಚ್ಛತ್ ।**

**ಅರ್ಥ** :- **ಸಃ** = ಯುಧಿಷ್ಠಿರನು, **ಮೃಗಾರ್ಥಂ** = (ಭೀಮನನ್ನು) ಬೇಟೆಗಾಗಿ, **ಯಾತಂ** = ಹೋದವನನ್ನಾಗಿ, **ತಸ್ಯಾಃ** = ದ್ರೌಪದಿಯ ದೆಸೆಯಿಂದ, **ನಿಶಮ್ಯ** = ಕೇಳಿ ತಿಳಿದು, **ತದೂರುವೇಗಾತ್** = ಭೀಮನ ತೊಡೆಗಳ ಸ್ಪರ್ಶವೇಗದಿಂದ, **ಪತಿತಾನ್** = ಉರುಳಿದ, **ನಗೇಂದ್ರಾನ್** = ದೊಡ್ಡ ಮರಗಳನ್ನು, **ದೃಷ್ಟ್ವಾ** = ಕಂಡು, **ತೇನ** = ಉರುಳಿದ ಮರಗಳು ಸೂಚಿಸಿದ, **ಪಥಾ** = ದಾರಿಯಿಂದ, **ಸಃ** = ಯುಧಿಷ್ಠಿರನು, **ಯಯೌ** = ಹೋದನು, **ಚ** = ಮತ್ತು, **ತತ್ರ** = ಆ ದಾರಿಯಲ್ಲಿ, **ಸರ್ಪಾವೃತಂ** = ಹೆಬ್ಬಾವಿನಿಂದ ಸುತ್ತಲ್ಪಟ್ಟ ಭೀಮನನ್ನು, **ದೃಷ್ಟ್ವಾ** = ಕಂಡು, **ಅನ್ವಪೃಚ್ಛತ್** = ಭೀಮನನ್ನು ಸಮೀಪಿಸಿ ನಹುಷನನ್ನು ಕೇಳಿದನು.

ತಾತ್ಪರ್ಯ :- ಭೀಮ ಬೇಟೆಗೆ ಹೋಗಿದ್ದಾನೆ ಎಂದು ಕೇಳಿ ಧರ್ಮರಾಜ ಭೀಮನ ನಡಿಗೆಯ ರಭಸಕ್ಕೆ ತೊಡೆಗಳ ಸ್ಪರ್ಶದಿಂದ ಬಿದ್ದ ದೊಡ್ಡ ಮರಗಳನ್ನು ನೋಡಿ ಆ ಮಾರ್ಗದಿಂದ ನಡೆದ ಅಲ್ಲಿ ಭೀಮ ಹೆಬ್ಬಾವಿನಿಂದ ಸುತ್ತಲ್ಪಟ್ಟಿದ್ದನು ಕಂಡು ಕಾರಣವನ್ನು ಕೇಳಿದ.

**ಸ ಕಾರಣಂ ನಹುಷಾತ್ ಸರ್ವಮೇವ**
**ಶುಶ್ರಾವ ತತ್ಪ್ರಶ್ನಮಶೇಷತಶ್ಚ ।**
**ಭ್ರಾತೃಸ್ನೇಹಾದ್ ವ್ಯಾಕರೋದ್ ಧರ್ಮಸೂನು-**
**ಸ್ತದೈವ ಸೋऽಪ್ಯಾರುಹತ್ ಸ್ವರ್ಗಲೋಕಮ್ ॥ ೩೫೨ ॥**

ಪದಚ್ಛೇದ :– ಸಃ, ಕಾರಣಂ, ನಹುಷಾತ್, ಸರ್ವಂ, ಏವ, ಶುಶ್ರಾವ, ತತ್ಪ್ರಶ್ನಂ, ಅಶೇಷತಃ, ಚ, ಭ್ರಾತೃಸ್ನೇಹಾದ್, ವ್ಯಾಕರೋತ್, ಧರ್ಮಸೂನುಃ, ತದಾ, ಏವ, ಸಃ, ಅಪಿ, ಆರುಹತ್, ಸ್ವರ್ಗಲೋಕಂ।

ಅರ್ಥ :- ಸಃ = ಯುಧಿಷ್ಠಿರನು, ನಹುಷಾತ್ = ನಹುಷನ ದೆಸೆಯಿಂದ, ಕಾರಣಂ = ಶಾಪದ ಕಾರಣವನ್ನು ಶಾಪಮೋಕ್ಷದ ನಿಮಿತ್ತವನ್ನೂ, ಸರ್ವಂ ಏವ = ಪೂರ್ಣವಾಗಿಯೇ, ಶುಶ್ರಾವ = ಕೇಳಿ ತಿಳಿದನು, ಚ = ಮತ್ತು, ಧರ್ಮಸೂನುಃ = ಧರ್ಮ(ಜ್ಞ)ತನಯನಾದ ಯುಧಿಷ್ಠಿರನು, ಭ್ರಾತೃಸ್ನೇಹಾದ್ = ಭೀಮನ ಮೇಲಿನ ಸ್ನೇಹದಿಂದ, ತತ್ಪ್ರಶ್ನಂ = ನಹುಷನ ಪ್ರಶ್ನೆಯನ್ನು, ಅಶೇಷತಃ = ಪೂರ್ಣವಾಗಿ, ವ್ಯಾಕರೋತ್ = ಉತ್ತರಿಸಿದನು, ತದಾ ಏವ = ಪ್ರಶ್ನಪರಿಹಾರ ಕಾಲದಲ್ಲಿಯೇ, ಸಃ = ನಹುಷನು, ಸ್ವರ್ಗಲೋಕಂ ಅಪಿ = ಸ್ವರ್ಗಲೋಕವನ್ನು, ಆರುಹತ್ = ಏರಿದನು.

ತಾತ್ಪರ್ಯ :- ಧರ್ಮರಾಜ ನಹುಷನಿಂದ ಎಲ್ಲ ಕಾರಣವನ್ನೂ ಕೇಳಿ ತಿಳಿದುಕೊಂಡ ಭೀಮನ ಮೇಲಿನ ಪ್ರೇಮದಿಂದ ನಹುಷನ ಎಲ್ಲ ಪ್ರಶ್ನೆಗಳನ್ನೂ ಉತ್ತರಿಸಿದ ಕೂಡಲೆ ನಹುಷ ಸ್ವರ್ಗಕ್ಕೆ ತೆರಳಿದ.

ವಿಶೇಷಾಂಶ :- ನಹುಷ ಕೇಳಿದ ಪ್ರಶ್ನೆಗಳು - ಬ್ರಾಹ್ಮಣನೆಂದರೆ ಯಾರು ? ಮುಮುಕ್ಷು ತಿಳಿಯಬೇಕಾದ ಪರತತ್ತ್ವ ಯಾವುದು? ಯಾವ ಕರ್ಮದಿಂದ ಸದ್ಗತಿ ? ಇತ್ಯಾದಿ.

**ಪದಚ್ಛೇದ :- ದಿವ್ಯಾಂಬರೇ, ಕುಂಡಲಿನಿ, ಸ್ವಪೂರ್ವೇ, ಗತೇ, ವಿಮಾನೇನ, ಸಃ, ಧರ್ಮರಾಜಃ, ಭೀಮಃ, ಚ, ಆಯಾತ್, ಸ್ವಾಶ್ರಮಾಯ, ಏವ, ಸರ್ವಂ, ಯುಧಿಷ್ಠಿರಃ, ಕಥಯಾಮಾಸ, ತತ್ರ ।**

**ಅರ್ಥ :- ಸ್ವಪೂರ್ವೇ** = ತಮ್ಮ ಕುಲದ ಹಿರಿಯನಾದ ನಹುಷನು, **ದಿವ್ಯಾಂಬರೇ** = ದಿವ್ಯವಾದ ಬಟ್ಟೆಯುಳ್ಳವನಾಗಿ, **ಕುಂಡಲಿನಿ** = ಕರ್ಣಕುಂಡಲಗಳುಳ್ಳವನಾಗಿ, **ವಿಮಾನೇನ** = ವಿಮಾನದ ಮೂಲಕ, **ಗತೇ** = ಸ್ವರ್ಗಕ್ಕೆ ಹೋಗಲು, **ಸಃ** = ಪ್ರಶ್ನಪರಿಹಾರದ ಮೂಲಕ ಪ್ರಸಿದ್ಧನಾದ, **ಧರ್ಮರಾಜಃ** = ಯುಧಿಷ್ಠಿರನು, **ಚ** = ಮತ್ತು, **ಭೀಮಃ** = ಭೀಮನು, **ಸ್ವಾಶ್ರಮಾಯೈವ** = (ಹಿಮಾಲಯದ ದಕ್ಷಿಣ ದಿಕ್ಕಿನ ಉಪಪರ್ವತದಲ್ಲಿರುವ) ತಮ್ಮ ಆಶ್ರಮಕ್ಕೆ, **ಆಯಾತ್** = ಬಂದರು, **ತತ್ರ** = ಆ ಆಶ್ರಮದಲ್ಲಿ, **ಯುಧಿಷ್ಠಿರಃ** = ಧರ್ಮರಾಜನು, **ಸರ್ವಂ** = ನಡೆದ ಎಲ್ಲ ಪ್ರಸಂಗವನ್ನು, **ಕಥಯಾಮಾಸ** = (ಅಲ್ಲಿದ್ದ ಎಲ್ಲರಿಗೂ) ಹೇಳಿದನು.

**ತಾತ್ಪರ್ಯ :-** ದಿವ್ಯ ವಸ್ತ್ರಗಳನ್ನೂ ಕುಂಡಲಗಳನ್ನೂ ಧರಿಸಿದ ತಮ್ಮ ವಂಶದ ಪೂರ್ವಜನಾದ ನಹುಷ ವಿಮಾನದಿಂದ ಸ್ವರ್ಗಕ್ಕೆ ಹೋದಾಗ ಧರ್ಮರಾಜನೂ ಭೀಮನೂ ತಮ್ಮ ಆಶ್ರಮಕ್ಕೆ ಬಂದರು. ಅಲ್ಲಿ ಎಲ್ಲ ವೃತ್ತಾಂತವನ್ನೂ ಧರ್ಮರಾಜ ಎಲ್ಲರಿಗೂ ಹೇಳಿದ.

**ಶ್ರುತ್ವಾ ಕೃಷ್ಣಾ ಭ್ರಾತರಶ್ಚಾಸ್ಯ ಸರ್ವೇ**
**ಸರ್ವೇ ಮುನೀಂದ್ರಾ ಭೀಮಸೇನೇಽತಿಭಕ್ತಾಃ ।**
**ವ್ರೀಳಾಂ ಯಯುರ್ಭೀಮಸೇನಗ್ರಹೇಣ**
**ತಥಾಽಬ್ರುವನ್ ಸ್ನೇಹತೋ ಭೀಮಸೇನಮ್ ॥ ೩೫೩ ॥**

**ಪದಚ್ಛೇದ :- ಶ್ರುತ್ವಾ, ಕೃಷ್ಣಾ, ಭ್ರಾತರಃ, ಚ, ಅಸ್ಯ, ಸರ್ವೇ, ಸರ್ವೇ, ಮುನೀಂದ್ರಾಃ, ಭೀಮಸೇನೇ, ಅತಿಭಕ್ತಾಃ, ವ್ರೀಡಾಂ, ಯಯುಃ, ಭೀಮಸೇನಗ್ರಹೇಣ, ತಥಾ, ಅಬ್ರುವನ್, ಸ್ನೇಹತಃ, ಭೀಮಸೇನಂ ।**

**ಅರ್ಥ :- ಭೀಮಸೇನೇ** = ಭೀಮಸೇನನಲ್ಲಿ, **ಅತಿಭಕ್ತಾಃ** = ಅತ್ಯಂತ ಭಕ್ತಿಯುಳ್ಳ, **ಕೃಷ್ಣಾ** = ದ್ರೌಪದಿಯು, **ಅಸ್ಯ** = ಈ ಭೀಮನ, **ಸರ್ವೇ** = ಎಲ್ಲ, **ಭ್ರಾತರಃ** = ಸೋದರರು, **ಚ** = ಮತ್ತು, **ಸರ್ವೇ** = ಎಲ್ಲ, **ಮುನೀಂದ್ರಾಃ**

= ಋಷಿಶ್ರೇಷ್ಠರು, **ಶ್ರುತ್ವಾ** = ಧರ್ಮರಾಜ ಹೇಳಿದ್ದನ್ನು ಕೇಳಿ, **ಭೀಮಸೇನಗ್ರಹೇಣ** = ಭೀಮಸೇನ ಬಂಧನ ಸ್ವೀಕರಿಸಿದ್ದರಿಂದ, **ವ್ರೀಡಾಂ** = ನಾಚಿಕೆಯನ್ನು, **ಯಯುಃ** = ಹೊಂದಿದರು, **ತಥಾ** = ಹಾಗೆಯೇ, **ಸ್ನೇಹತಃ** = ಭೀಮನ ಮೇಲಿನ ಪ್ರೀತಿಯಿಂದ, **ಭೀಮಸೇನಂ** = ಭೀಮನನ್ನು ಕುರಿತು, **ಅಬ್ರುವನ್** = ಹೇಳಿದರು.

**ತಾತ್ಪರ್ಯ** :- ಭೀಮನಲ್ಲಿ ಅತ್ಯಂತ ಭಕ್ತಿಯುಕ್ತರಾದ ದ್ರೌಪದಿಯೂ ಎಲ್ಲ ಸೋದರರೂ ಎಲ್ಲ ಮುನಿಗಳೂ ಭೀಮ ಹಾವಿನ ತೆಕ್ಕೆಯಲ್ಲಿದ್ದ ಬಗ್ಗೆ ನಾಚಿದರು ಮತ್ತು ಸ್ನೇಹದಿಂದ ಹೇಳಿದರು.

**ವಿಶೇಷಾಂಶ** :- ಭೀಮ ಅತ್ಯಂತ ಶಕ್ತಿಯುಳ್ಳವನು ಎಂದು ದ್ರೌಪದಿ ಮುಂತಾದವರಿಗೆ ಗೊತ್ತಿದೆ, ಆದರೆ ದುರ್ಬಲನಾದ ನಹುಷನೂ ಅವನನ್ನು ಬಂಧಿಸಿದನೆಂದು ಎಲ್ಲೆಡೆ ಪ್ರಸಿದ್ಧಿಯಾಗುವುದೆಂದು ನಾಚಿಕೆ ವಸ್ತುತಃ ಭೀಮನಿಗೆ ಇದು ಇಷ್ಟವೇ ತನ್ನನ್ನು ಅಜ್ಞರು ಅಶಕ್ತರೆಂದು ತಿಳಿಯಲಿ ಹರಿಪ್ರೀತಿಯಾಗಲಿ ಎಂದು ಅವನಿಚ್ಛೆ.

**ನೈತಾದೃಶಂ ಸಾಹಸಂ ತೇಽನುರೂಪಂ**
**ಶಕ್ತೋಽಪಿ ಯತ್ ಸ್ವಾತ್ಮನೋ ಮೋಕ್ಷಣಾಯ ।**
**ನೈವಾಽಚರೋ ಯತ್ನಮತೋ ನಿಜಾನಾಂ**
**ಮಹದ್ ದುಃಖಂ ಹೃದಯೇ ಪ್ರಾರ್ಪಯಸ್ತ್ವಮ್ ॥ ೩೫೪ ॥**

ಪದಚ್ಛೇದ :– ನ, ಏತಾದೃಶಂ, ಸಾಹಸಂ, ತೇ, ಅನುರೂಪಂ, ಶಕ್ತಃ, ಅಪಿ, ಯತ್, ಸ್ವಾತ್ಮನಃ, ಮೋಕ್ಷಣಾಯ, ನ, ಏವ, ಅಕರೋಃ, ಯತ್ನಂ, ಅತಃ, ನಿಜಾನಾಂ, ಮಹದ್, ದುಃಖಂ, ಹೃದಯೇ, ಪ್ರಾರ್ಪಯಃ, ತ್ವಂ ।

**ಅರ್ಥ** :- **ಏತಾದೃಶಂ** = ಇಂತಹ, **ಸಾಹಸಂ** = ಸಾಮರ್ಥ್ಯ ಅಪ್ರಕಟನೆಯು (ಅನಾವಿಷ್ಕಾರವು), **ತೇ** = ನಿನಗೆ, **ಅನುರೂಪಂ** = ಯೋಗ್ಯವಾದುದು, **ನ** = ಅಲ್ಲ, **ಯತ್** = ಯಾವ ಕಾರಣದಿಂದ, **ಸ್ವಾತ್ಮನಃ** = ನಿನ್ನ, **ಮೋಕ್ಷಣಾಯ** = ಬಿಡುಗಡೆಗಾಗಿ, **ಶಕ್ತಃ ಅಪಿ** = ಸಮರ್ಥನಾಗಿದ್ದರೂ, **ಯತ್ನಂ** = ಯತ್ನವನ್ನು, **ನ ಏವ ಅಕರೋಃ** = ಮಾಡಲೇ ಇಲ್ಲವೋ, **ಅತಃ** = ಅದರಿಂದ, **ನಿಜಾನಾಂ** = ನಿನ್ನವರ, **ಹೃದಯೇ**

= ಹೃದಯದಲ್ಲಿ, **ಮಹದ್** = ಹಿರಿದಾದ, **ದುಃಖಂ** = ದುಃಖವನ್ನು, **ತ್ವಂ** = ನೀನು, **ಪ್ರಾರ್ಪಯಃ** = ಕೊಟ್ಟವನಾದಿ.

**ತಾತ್ಪರ್ಯ :-** ಭೀಮ ಇಂತಹ ಸಹನೆ ನಿನಗೆ ತಕ್ಕುದಲ್ಲ. ನೀನು ನಿನ್ನ ಬಿಡುಗಡೆಗೆ ಶಕ್ತನಾಗಿದ್ದು ಅದಕ್ಕೆ ಯತ್ನ ಮಾಡಲಿಲ್ಲ. ಆ ಮೂಲಕ ನೀನು ನಿನ್ನವರ ಹೃದಯದಲ್ಲಿ ಮಹಾ ಕಳವಳ ಉಂಟು ಮಾಡಿರುವಿ.

**ಮೈವಂ ಪುನಃ ಕಾರ್ಯಮಿತಿ ಬ್ರುವಂತಃ**
**ಸಮಾಶ್ಲಿಷನ್ ಸರ್ವ ಏವೈತ್ಯ ಭೀಮಮ್ ।**
**ತತೋಽಹೋಭಿಃ ಕೈಶ್ಚಿದಾಪುಃ ಕುರೂಣಾಂ**
**ರಾಷ್ಟ್ರಂ ಪಾರ್ಥಾ ಮುನಿಮುಖ್ಯೈಃ ಸಮೇತಾಃ ॥ ೩೫೫ ॥**

**ಪದಚ್ಛೇದ :- ಮಾ, ಏವಂ, ಪುನಃ, ಕಾರ್ಯಂ, ಇತಿ, ಬ್ರುವಂತಃ, ಸಮಾಶ್ಲಿಷನ್, ಸರ್ವೇ, ಏವ, ಏತ್ಯ, ಭೀಮಂ, ತತಃ, ಅಹೋಭಿಃ, ಕೈಶ್ಚಿದ್, ಆಪುಃ, ಕುರೂಣಾಂ, ರಾಷ್ಟ್ರಂ, ಪಾರ್ಥಾಃ, ಮುನಿಮುಖ್ಯೈಃ, ಸಮೇತಾಃ ।**

**ಅರ್ಥ :- ಪುನಃ** = ಮತ್ತೆ, **ಏವಂ** = ಈ ರೀತಿಯಾಗಿ, **ಮಾ ಕಾರ್ಯಂ** = ಮಾಡಬಾರದು, **ಇತಿ** = ಎಂದು, **ಬ್ರುವಂತಃ** = ಹೇಳುತ್ತಾ, **ಸರ್ವೇ ಏವ** = ಎಲ್ಲರೂ, **ಭೀಮಂ** = ಭೀಮನನ್ನು, **ಏತ್ಯ** = ಸಮೀಪಿಸಿ, **ಸಮಾಶ್ಲಿಷನ್** = ತಬ್ಬಿಕೊಂಡರು, **ತತಃ** = ಅನಂತರ, **ಮುನಿಮುಖ್ಯೈಃ** = ಮುನಿಶ್ರೇಷ್ಠರಿಂದ, **ಸಮೇತಾಃ** = ಕೂಡಿದ, **ಪಾರ್ಥಾಃ** = ಪಾಂಡವರು, **ಕೈಶ್ಚಿದ್** = ಕೆಲವು, **ಅಹೋಭಿಃ** = ದಿನಗಳಿಂದ (ದಿನಗಳ ಪ್ರಯಾಣದಿಂದ), **ಕುರೂಣಾಂ ರಾಷ್ಟ್ರಂ** = ಕುರುಗಳ ರಾಷ್ಟ್ರವನ್ನು (ಕುರುರಾಷ್ಟ್ರದಲ್ಲಿರುವ ಕಾಮ್ಯಕವನವನ್ನು), **ಆಪುಃ** = ಸೇರಿದರು.

**ತಾತ್ಪರ್ಯ :-** 'ಹೀಗೆ ಮತ್ತೆ ನೀನು ಮಾಡಕೂಡದು' ಎಂದು ಹೇಳುತ್ತ ಎಲ್ಲರೂ ಬಂದು ಭೀಮನನ್ನು ತಬ್ಬಿಕೊಂಡರು. ಬಳಿಕ ಕೆಲವು ದಿನಗಳಲ್ಲಿ ಪಾಂಡವರು ಮುನೀಂದ್ರರಿಂದ ಸಮೇತರಾಗಿ ಕುರುರಾಜ್ಯದಲ್ಲಿರುವ ಕಾಮ್ಯಕವನಕ್ಕೆ ಬಂದರು.

ತತೋऽಮಿತೌಜಾ ಭಗವಾನುಪಾಗಮ-
ನ್ನಾರಾಯಣಃ ಸತ್ಯಭಾಮಾಸಹಾಯಃ ।
ಸಂಪೂಜಿತಃ ಪಾಂಡವೈಸ್ತೈಃ ಸಮೇತ-
ಶ್ಚಕ್ರೇऽಥ ಸೌಹಾರ್ದನಿಮಿತ್ತಸತ್ಕಥಾಃ ॥ ೩೫೬ ॥

ಪದಚ್ಛೇದ :- ತತಃ, ಅಮಿತೌಜಾಃ, ಭಗವಾನ್, ಉಪಾಗಮತ್, ನಾರಾಯಣಃ, ಸತ್ಯಭಾಮಾಸಹಾಯಃ, ಸಂಪೂಜಿತಃ, ಪಾಂಡವೈಃ, ತೈಃ, ಸಮೇತಃ, ಚಕ್ರೇ, ಅಥ, ಸೌಹಾರ್ದನಿಮಿತ್ತಸತ್ಕಥಾಃ ।

ಅರ್ಥ :- ತತಃ = ಕಾಮ್ಯಕವನಕ್ಕೆ ಬಂದ ನಂತರ, ಅಮಿತೌಜಾಃ = ಸಾಟಿಯಿಲ್ಲದ ಸಾಮರ್ಥ್ಯವುಳ್ಳ, ಭಗವಾನ್ = ಷಡ್ಗುಣೈಶ್ವರ್ಯಸಂಪನ್ನನಾದ, ನಾರಾಯಣಃ = ಕೃಷ್ಣನು, ಸತ್ಯಭಾಮಾಸಹಾಯಃ = ಸತ್ಯಭಾಮಾಸಹಿತನಾಗಿ, ಉಪಾಗಮತ್ = ಪಾಂಡವರಲ್ಲಿಗೆ ಬಂದನು, ಪಾಂಡವೈಃ = ಪಾಂಡವರಿಂದ, ಸಂಪೂಜಿತಃ = ವಿಶೇಷವಾಗಿ ಪೂಜಿಸಲ್ಪಟ್ಟ ಕೃಷ್ಣನು, ಅಥ = ಅನಂತರ, ತೈಃ = ಪಾಂಡವರಿಂದ, ಸಮೇತಃ = ಕೂಡಿಕೊಂಡು, ಸೌಹಾರ್ದನಿಮಿತ್ತಸತ್ಕಥಾಃ = ವಿಶೇಷವಾದ ಸ್ನೇಹಕ್ಕೆ ಕಾರಣವಾಗುವ ಒಳ್ಳೆಯ ಮಾತುಕತೆಗಳನ್ನು, ಚಕ್ರೇ = ಆಡಿದನು.

ತಾತ್ಪರ್ಯ :- ಬಳಿಕ ಸರ್ವಶಕ್ತನಾದ ಭಗವಾನ್ ಶ್ರೀಕೃಷ್ಣ ಸತ್ಯಭಾಮಾ ಸಮೇತನಾಗಿ ಅಲ್ಲಿಗೆ ಬಂದು ಪಾಂಡವರಿಂದ ಪೂಜಿತನಾಗಿ ಅವರೊಂದಿಗೆ ಸೌಹಾರ್ದಕ್ಕೆ ಕಾರಣವಾಗುವ ಮಾತುಕತೆಗಳನ್ನಾಡಿದ.

ಕೃಷ್ಣಾ ಚ ಸತ್ಯಾ ಚ ಪರಸ್ಪರಂ ಮುದಾ
ಸಂಭಾಷಣಂ ಚಕ್ರತುರ್ಯೋಷಿದಗ್ರ್ಯೇ ।
ಪರೀಕ್ಷಂತ್ಯಾ ಸತ್ಯಯಾ ಸರ್ವವೇತ್ತ್ರ್ಯಾ
ನಿರ್ದೋಷಯಾ ಚೋದಿತಾ ಪ್ರಾಹ ಕೃಷ್ಣಾ ॥ ೩೫೭ ॥

ಪದಚ್ಛೇದ :- ಕೃಷ್ಣಾ, ಚ, ಸತ್ಯಾ, ಚ, ಪರಸ್ಪರಂ, ಮುದಾ, ಸಂಭಾಷಣಂ, ಚಕ್ರತುಃ, ಯೋಷಿದಗ್ರ್ಯೇ, ಪರೀಕ್ಷಂತ್ಯಾ, ಸತ್ಯಯಾ, ಸರ್ವವೇತ್ತ್ರ್ಯಾ, ನಿರ್ದೋಷಯಾ, ಚೋದಿತಾ, ಪ್ರಾಹ, ಕೃಷ್ಣಾ।

**ಅರ್ಥ** :- **ಯೋಷಿದಗ್ರ್ಯೇ** = ನಾರೀಮಣಿಯರಾದ, **ಸತ್ಯಾ** = ಸತ್ಯಭಾಮೆಯು, **ಚ** = ಮತ್ತು, **ಕೃಷ್ಣಾ** = ದ್ರೌಪದಿಯು, **ಪರಸ್ಪರಂ** = ಪರಸ್ಪರವಾಗಿ, **ಸಂಭಾಷಣಂ** = ಸಂಭಾಷಣೆಯನ್ನು, **ಚಕ್ರತುಃ** = ನಡೆಸಿದರು, **ಮುದಾ ಚ** = ವಿನೋದದಿಂದಲೇ, **ಪರೀಕ್ಷಯಂತ್ಯಾ** = ಪರೀಕ್ಷಿಸುತ್ತಿರುವ, **ನಿರ್ದೋಷಯಾ** = ನಿರ್ದುಷ್ಟಳಾದ, **ಸರ್ವವೇತ್ರ್ಯಾ** = ಸರ್ವಜ್ಞಳಾದ, **ಸತ್ಯಯಾ** = ಸತ್ಯಭಾಮೆಯಿಂದ, **ಚೋದಿತಾ** = ಪ್ರೇರಿಸಲ್ಪಟ್ಟ, **ಕೃಷ್ಣಾ** = ದ್ರೌಪದಿಯು, **ಪ್ರಾಹ** = ಸ್ತ್ರೀಧರ್ಮವನ್ನು ಹೇಳಿದಳು.

**ತಾತ್ಪರ್ಯ** :- ಸ್ತ್ರೀಯರಲ್ಲಿ ಉತ್ತಮರಾದ ದ್ರೌಪದಿಯೂ ಸತ್ಯಭಾಮೆಯೂ ಪರಸ್ಪರ ಸಂಭಾಷಣೆಗೈದರು. ಸರ್ವಜ್ಞಳಾದ ನಿರ್ದೋಷಳಾದ ಸತ್ಯಭಾಮೆ ದ್ರೌಪದಿಯ ಧರ್ಮಕೌಶಲವನ್ನು ವಿನೋದಕ್ಕಾಗಿ ಪರೀಕ್ಷಿಸುತ್ತ ಪ್ರಶ್ನಿಸಿದಾಗ ದ್ರೌಪದೀ ಎಲ್ಲ ಸ್ತ್ರೀಧರ್ಮಗಳನ್ನು ಹೇಳಿದಳು.

**ಸ್ತ್ರೀಧರ್ಮಾನಖಿಲಾಂಸ್ತತ್ರ ಸತ್ಯಾಂ ನಿರ್ದೋಷಸಂವಿದಮ್ ।**
**ಜ್ಞಾತ್ವಾಽಪಿ ಕೃಷ್ಣಾ ಪ್ರೋವಾಚ ಲೋಕಶಿಕ್ಷಾರ್ಥಮೇವ ತು ॥ ೩೫೮ ॥**

**ಪದಚ್ಛೇದ :- ಸ್ತ್ರೀಧರ್ಮಾನ್, ಅಖಿಲಾನ್, ತತ್ರ, ಸತ್ಯಾಂ, ನಿರ್ದೋಷಸಂವಿದಂ, ಜ್ಞಾತ್ವಾ, ಅಪಿ, ಕೃಷ್ಣಾ, ಪ್ರೋವಾಚ, ಲೋಕಶಿಕ್ಷಾರ್ಥಂ, ಏವ, ತು ।**

**ಅರ್ಥ** :- **ತತ್ರ** = ಸ್ತ್ರೀಧರ್ಮದ ವಿಷಯದಲ್ಲಿ, **ಸತ್ಯಾಂ** = ಸತ್ಯಭಾಮೆಯನ್ನು, **ನಿರ್ದೋಷಸಂವಿದಂ** = ನಿರ್ದುಷ್ಟವಾದ ಜ್ಞಾನವುಳ್ಳವಳನ್ನಾಗಿ, **ಜ್ಞಾತ್ವಾ ಅಪಿ** = ತಿಳಿದೂ, **ತು** = ಕೃಷ್ಣನ ಮತ್ತು ಸತ್ಯಭಾಮೆಯ ಭಾವವನ್ನು ತಿಳಿದಿದ್ದರಿಂದ ವಿಶಿಷ್ಟಳಾದ, **ಕೃಷ್ಣಾ** = ದ್ರೌಪದಿಯು, **ಅಖಿಲಾನ್** = ಎಲ್ಲ, **ಸ್ತ್ರೀಧರ್ಮಾನ್** = ಸ್ತ್ರೀಧರ್ಮಗಳನ್ನು, **ಲೋಕಶಿಕ್ಷಾರ್ಥಂ ಏವ** = ಲೋಕಶಿಕ್ಷಣಕ್ಕಾಗಿಯೇ, **ಪ್ರೋವಾಚ** = ಹೇಳಿದಳು.

**ತಾತ್ಪರ್ಯ** :- ಸತ್ಯಭಾಮೆ ಸ್ತ್ರೀಧರ್ಮವಿಷಯದಲ್ಲಿ ನಿರ್ದುಷ್ಟ ಜ್ಞಾನವುಳ್ಳವಳೆಂದು ತಿಳಿದೂ ಕೂಡ ದ್ರೌಪದೀ ಲೋಕಶಿಕ್ಷಾರ್ಥವಾಗಿಯೇ ಸತ್ಯಭಾಮೆಗೆ ಎಲ್ಲ ಸ್ತ್ರೀಧರ್ಮಗಳನ್ನು ಒಪ್ಪಿಸಿದಳು.

**ಕ್ರೀಡಾರ್ಥಮೇವ ವಚನಂ ಜ್ಞಾತ್ವಾ ಸತ್ಯಾಸಮೀರಿತಮ್ ।**
**ತಸ್ಯಾನುಸಾರವಾಕ್ಯಾನಿ ತತ್ಪ್ರೀತ್ಯಾ ಏವ ಸಾಽಬ್ರವೀತ್ ॥ ೩೯ ॥**

ಪದಚ್ಛೇದ :- ಕ್ರೀಡಾರ್ಥಂ, ಏವ, ವಚನಂ, ಜ್ಞಾತ್ವಾ, ಸತ್ಯಾಸಮೀರಿತಂ, ತಸ್ಯ, ಅನುಸಾರಿವಾಕ್ಯಾನಿ, ತತ್ಪ್ರೀತ್ಯೈ, ಏವ, ಸಾ, ಅಬ್ರವೀತ್ ।

ಅರ್ಥ :- ಸಾ = ದ್ರೌಪದಿಯು, ಕ್ರೀಡಾರ್ಥಂ ಏವ = ನಗೆಚಾಟಿಗೆಗಾಗಿಯೇ, ಸತ್ಯಾಸಮೀರಿತಂ = ಸತ್ಯಭಾಮೆಯಿಂದ ಹೇಳಲ್ಪಟ್ಟ, ವಚನಂ = ಕುಶಲಪ್ರಶ್ನೆ ಮೊದಲಾದ ಮಾತುಗಳನ್ನು, ಜ್ಞಾತ್ವಾ = ತಿಳಿದು, ತಸ್ಯ = ಸತ್ಯಭಾಮೆಯ ಮಾತಿಗೆ, ಅನುಸಾರಿವಾಕ್ಯಾನಿ = ಅನುಕೂಲವಾದ ಮಾತುಗಳನ್ನು, ತತ್ಪ್ರೀತ್ಯೈ ಏವ = ಸತ್ಯೆಯ ಪ್ರೀತಿಗಾಗಿಯೇ, ಅಬ್ರವೀತ್ = ಹೇಳಿದಳು.

ತಾತ್ಪರ್ಯ :- ಸತ್ಯಭಾಮೆ ಹೇಳಿದ ಮಾತು ವಿನೋದಕ್ಕಾಗಿಯೇ ಹೇಳಿದ್ದೆಂದು ತಿಳಿದು ಅದಕ್ಕೆ ಅನುಸಾರವಾದ ಮಾತುಗಳನ್ನು ಅವಳಿಗೆ ಪ್ರೀತಿಯಾಗಲೆಂದೇ ದ್ರೌಪದಿ ಆಡಿದಳು.

**ತತಃ ಕತಿಪಯಾಹಾನಿ ನಿರುಷ್ಯಾತ್ರ ಜನಾರ್ದನಃ ।**
**ಯಯೌ ಸಭಾರ್ಯಃ ಸ್ವಪುರೀಂ ಪಾಂಡವಾನನುಮಾನ್ಯ ಚ ॥ ೩೮೦ ॥**

ಪದಚ್ಛೇದ :- ತತಃ, ಕತಿಪಯಾಹಾನಿ, ನಿರುಷ್ಯ, ಅತ್ರ ಜನಾರ್ದನಃ । ಯಯೌ, ಸಭಾರ್ಯಃ, ಸ್ವಪುರೀಂ, ಪಾಂಡವಾನ್, ಅನುಮಾನ್ಯ, ಚ ॥

ಅರ್ಥ :- ತತಃ = ಧರ್ಮವನ್ನು ಹೇಳಿದ ನಂತರ, ಕತಿಪಯಾಹಾನಿ = ಕೆಲವು ದಿನಗಳನ್ನು, ಅತ್ರ = ಈ ಕಾಮ್ಯಕ ವನದಲ್ಲಿ, ನಿರುಷ್ಯ = ಇದ್ದು, (ಕಳೆದು), ಚ = ಮತ್ತು, ಪಾಂಡವಾನ್ = ಪಾಂಡವರನ್ನು, ಅನುಮಾನ್ಯ = (ಒತ್ತಾಯದಿಂದ) ಸಮ್ಮಾನಿಸಿ, ಜನಾರ್ದನಃ = ಕೃಷ್ಣನು, ಸಭಾರ್ಯಃ = ಸತ್ಯಭಾಮೆಯೊಡನೆ, ಸ್ವಪುರೀಂ = ತನ್ನ ಪಟ್ಟಣವನ್ನು (ದ್ವಾರಕೆಯನ್ನು) ಕುರಿತು, ಯಯೌ = ಹೋದನು.

ತಾತ್ಪರ್ಯ :- ಬಳಿಕ ಶ್ರೀಕೃಷ್ಣ ಕೆಲವು ದಿನ ಪಾಂಡವರ ಜೊತೆಗೆ ಇದ್ದು ಅವರನ್ನು ಸಮ್ಮಾನಿಸಿ ಸತ್ಯಭಾಮೆಯೊಡನೆ ತನ್ನ ಪಟ್ಟಣಕ್ಕೆ ತೆರಳಿದ.

ತತಃ ಕದಾಚಿನ್ಮೃಗಯಾಂ ಗತೇಷು
ಪಾರ್ಥೇಷು ರಾಜಾ ಸೈಂಧವ ಆಸಸಾದ ।
ಸಕೋಟಿಕಾಶ್ಯಃ ಸಬಲಶ್ಚ ತೇಷಾಂ
ವರಾಶ್ರಮಂ ಸೋಽತ್ರ ದದರ್ಶ ಕೃಷ್ಣಾಮ್ ॥ ೩೬೧ ॥

ಪದಚ್ಛೇದ :- ತತಃ, ಕದಾಚಿತ್, ಮೃಗಯಾಂ, ಗತೇಷು, ಪಾರ್ಥೇಷು, ರಾಜಾ, ಸೈಂಧವಃ, ಆಸಸಾದ । ಸಕೋಟಿಕಾಶ್ಯಃ, ಸಬಲಃ, ಚ, ತೇಷಾಂ, ವರಾಶ್ರಮಂ, ಸಃ,ಅತ್ರ, ದದರ್ಶ, ಕೃಷ್ಣಾಮ್ ॥

**ಅರ್ಥ** :- **ತತಃ** = ಅನಂತರ, **ಕದಾಚಿತ್** =. ಒಮ್ಮೆ, **ಪಾರ್ಥೇಷು** = ಪಾಂಡವರು, **ಮೃಗಯಾಂ** = ಬೇಟೆಗೆ, **ಗತೇಷು** = ಹೋಗಿರಲು, **ಸೈಂಧವಃ ರಾಜಾ** = ಸಿಂಧುದೇಶದ ರಾಜನಾದ ಜಯದ್ರಥನು, **ಸಕೋಟಿಕಾಶ್ಯಃ** = ಕಾಶಿದೇಶದ ರಾಜನಾದ 'ಕೋಟಿ'ಯೊಡನೆ, **ಚ** = ಮತ್ತು, **ಸಬಲಃ** = ಸೈನ್ಯದೊಡನೆ, **ತೇಷಾಂ** = ಆ ಪಾಂಡವರ, **ವರಾಶ್ರಮಂ** = ಉತ್ತಮವಾದ ಆಶ್ರಮವನ್ನು, **ಆಸಸಾದ** = ಹೊಂದಿದನು. **ಅತ್ರ** = ಆಶ್ರಮದಲ್ಲಿ, **ಕೃಷ್ಣಾಮ್** = ದ್ರೌಪದಿಯನ್ನು, **ದದರ್ಶ** = ಕಂಡನು.

ತಾತ್ಪರ್ಯ :- ಬಳಿಕ ಒಮ್ಮೆ ಪಾಂಡವರು ಬೇಟೆಗೆ ಹೋಗಿದ್ದಾಗ ಅವರ ಆಶ್ರಮಕ್ಕೆ ಜಯದ್ರಥನು 'ಕೋಟಿ'ಯೊಂದಿಗೆ ಸೈನ್ಯ ಸಮೇತನಾಗಿ ಬಂದ ಅಲ್ಲಿ ದ್ರೌಪದಿಯನ್ನು ಕಂಡ.

ವಿಶೇಷಾಂಶ - 'ಕೋಟಿ' ಎಂಬುವವನು 'ಶಿಬಿ' ವಂಶದಲ್ಲಿ ಹುಟ್ಟಿದ 'ಸುರಥ'ನ ಮಗ, ಕಾಶಿದೇಶದ ರಾಜ, ಜಯದ್ರಥನ ಗೆಳೆಯ. (ವನ.೨೬೫-೬)

ವ್ರಜನ್ ವಿವಾಹಾರ್ಥಮಸೌ ನಿಶಾಮ್ಯ
ಕೃಷ್ಣಾಂ ಕೋಟಿಂ ಪ್ರೇಷಯಿತ್ವೈವ ಕಾಶ್ಯಮ್ ।
ಆಯಾಹಿ ಮಾಮಿತ್ಯವದತ್ ಸುಪಾಪ-
ಸ್ತಯಾ ನಿರಸ್ತೋ ಜಗೃಹೇ ಕರೇ ಚ ॥ ೩೬೨ ॥

ಪದಚ್ಛೇದ :- ವ್ರಜನ್, ವಿವಾಹಾರ್ಥಮ್, ಅಸೌ, ನಿಶಾಮ್ಯ, ಕೃಷ್ಣಾಂ, ಕೋಟಿಂ ಪ್ರೇಷಯಿತ್ವಾ, ಏವ, ಕಾಶ್ಯಮ್ । ಆಯಾಹಿ, ಮಾಮ್, ಇತಿ, ಅವದತ್, ಸುಪಾಪಃ, ತಯಾ, ನಿರಸ್ತಃ, ಜಗೃಹೇ, ಕರೇ, ಚ ॥

**ಅರ್ಥ** :- **ವಿವಾಹಾರ್ಥಂ** = (ತನ್ನ ಮದುವೆಗಾಗಿ, **ವ್ರಜನ್** = ('ಸಾಲ್ವ' ದೇಶಕ್ಕೆ) ಹೋಗುತ್ತಾ, **ಅಸೌ** = ಜಯದ್ರಥನು, **ಕಾಶ್ಯಂ** = ಕಾಶಿದೇಶದ ರಾಜನಾದ, **ಕೋಟಿಂ** = ಕೋಟಿಯನ್ನು, **ಪ್ರೇಷಯಿತ್ವಾ** = (ಎಲೈ ಕಾಶ್ಯನೇ ಸುಂದರಿಯಾದ ಹೆಣ್ಣು ಮುಳ್ಳಿನಿಂದ ಕೂಡಿದ ಅರಣ್ಯದಲ್ಲಿ ಒಂಟಿಯಾಗಿ ನಿಂತಿದ್ದಾಳೆ, ಇವಳು ಯಾರೆಂದು ವಿಚಾರಿಸು, ಇವಳು ಸಿಕ್ಕರೆ 'ಸಾಲ್ವ'ಕ್ಕೆ ಹೋಗಬೇಕಾಗಿಲ್ಲ, ಎಂದು ಹೇಳಿ) ಕಳುಹಿಸಿ, **ಕೃಷ್ಣಾಂ ನಿಶಾಮ್ಯ** = ದ್ರೌಪದಿ ಎಂದು ತಿಳಿದು, **ಮಾಂ** = ನನ್ನನ್ನು ಕುರಿತು, **ಆಯಾಹಿ ಏವ** = ಬಂದೇ ಬಿಡು, **ಇತಿ** = ಎಂದು, **ಸುಪಾಪಃ** = ಪಾಪಿಷ್ಠನಾದ ಜಯದ್ರಥನು, **ಅವದತ್** = (ದ್ರೌಪದಿಯನ್ನು ಕುರಿತು) ಹೇಳಿದನು, **ತಯಾ** = ಆ ದ್ರೌಪದಿಯಿಂದ, **ನಿರಸ್ತಃ** = ತಿರಸ್ಕರಿಸಲ್ಪಟ್ಟವನಾಗಿ, **ಕರೇ ಚ** = ಮೊದಲು ಉತ್ತರವಸ್ತ್ರದ ಭಾಗದಲ್ಲಿ ನಂತರ ಕೈಭಾಗದಲ್ಲೂ, **ಜಗೃಹೇ** = ಹಿಡಿದನು.

**ತಾತ್ಪರ್ಯ** :- ವಿವಾಹಕ್ಕೆ ಹೋಗುತ್ತಿದ್ದ ಆ ಮಹಾಪಾಪಿ ಜಯದ್ರಥ ದ್ರೌಪದಿಯನ್ನು ಕಂಡು ಕೋಟಿಕಾಶ್ಯನನ್ನು ಕಳಿಸಿಕೊಟ್ಟು ತಿಳಿದು 'ನನ್ನ ಬಳಿಗೆ ಬಾ' ಎಂದ. ಅವಳು ನಿರಾಕರಿಸಿದಾಗ ಕೈಭಾಗದಲ್ಲೂ ಹಿಡಿದ.

**ವಿಶೇಷಾಂಶ** - ಆಶ್ರಮದ ದ್ವಾರದಲ್ಲಿ ಪಾಂಡವರನ್ನು ಕಾಯುತ್ತ ದ್ರೌಪದಿ ನಿಂತಿದ್ದಳು. ಆವಾಗ 'ಕೋಟಿ'ಯು ದ್ರೌಪದಿಯ ಬಳಿಗೆ ಹೋಗಿ, 'ನೀನಾರು? ನಿಮ್ಮ ಆಶ್ರಮಕ್ಕೆ ಜಯದ್ರಥ ಇತರ ರಾಜರೊಡನೆ ಬಂದಿದ್ದಾನೆ' ಎಂದ. ದ್ರೌಪದಿ ತಾನು ಯಾರೆಂಬುದನ್ನು ಹೇಳಿ ಬಂದ ರಾಜರಿಗೆ ಅತಿಥಿ ಸತ್ಕಾರ ಮಾಡುವ ಉದ್ದೇಶದಿಂದ ಆಶ್ರಮದೊಳಗೆ ನಡೆದಳು. ಆಗ ಈ ಘಟನೆ ನಡೆಯಿತು.

**ತಯಾ ಧೂತೋ ನಿಪಪಾತಾಽಶು ಭೂಮೌ**
**ಪುನಶ್ಚ ಸಜ್ಜೋಽಭ್ಯಪತದ್ ವಿಲಜ್ಜಃ ।**
**ತತೋಽಸಹಾಯತ್ವತ ಏವ ಕೃಷ್ಣಾ**
**ಧೌಮ್ಯಾಯೋಕ್ತ್ವಾ ಸಾಗ್ನಿರನ್ವೇಹಿ ಮೇತಿ ।**
**ಸಮಾರುಹತ್ ಸೈಂಧವಸ್ಯೈವ ಯಾನಂ**
**ಸುಖಂ ನ ಯಾಸೀತಿ ತಮೀರಯಿತ್ವಾ ॥ ೩೬೩ ॥**

**ಪದಚ್ಛೇದ :- ತಯಾ, ಧೂತಃ, ನಿಪಪಾತ, ಆಶು, ಭೂಮೌ, ಪುನಃ, ಸಸಂಜ್ಞಃ, ಅಭ್ಯಗಮದ್, ವಿಲಜ್ಜಃ । ತತಃ, ಅಸಹಾಯತ್ವತಃ, ಏವ, ಕೃಷ್ಣಾ, ಧೌಮ್ಯಾಯ, ಉಕ್ತ್ವಾ, ಸಾಗ್ನಿಃ, ಅನ್ವೇಹಿ, ಮಾ, ಇತಿ । ಸಮಾರುಹತ್, ಸೈಂಧವಸ್ಯ, ಏವ, ಯಾನಂ, ಸುಖಂ, ನ, ಯಾಸಿ, ಇತಿ, ತಮ್, ಈರಯಿತ್ವಾ ॥**

**ಅರ್ಥ** :- **ತಯಾ** = ದ್ರೌಪದಿಯಿಂದ, **ಧೂತಃ** = ತನ್ನ ಕೈಯನ್ನು ಎಳೆದುಕೊಳ್ಳುವ ಮೂಲಕ ಕಂಪಿಸಲ್ಪಟ್ಟವನಾಗಿ, **ಆಶು** = ಕೂಡಲೆ, **ಭೂಮೌ** = ನೆಲದಲ್ಲಿ, **ನಿಪಪಾತ** = ಮೂರ್ಛೆ ಹೊಂದಿ ಬಿದ್ದ. **ಪುನಃ** = ಮತ್ತೆ, **ಸಸಂಜ್ಞಃ** = ಎಚ್ಚರಗೊಂಡು, **ವಿಲಜ್ಜಃ** = ನಾಚಿಕೆಗೆಟ್ಟವನಾಗಿ, **ಅಭ್ಯಗಮತ್** = ದ್ರೌಪದಿಯ ಎದುರು ಬಂದನು. **ತತಃ** = ಅನಂತರ, **ಕೃಷ್ಣಾ** = ದ್ರೌಪದಿಯು, **ಅಸಹಾಯತ್ವತ ಏವ** = ಸಹಾಯರಹಿತಳಾಗಿದ್ದರಿಂದಲೇ, **ಸಾಗ್ನಿಃ** = ಕುಂಡದಲ್ಲಿರುವ ಅಗ್ನಿಯೊಂದಿಗೆ, **ಮಾ** = ನನ್ನನ್ನು, **ಅನ್ವೇಹಿ** = ಹಿಂಬಾಲಿಸಿರಿ, **ಇತಿ** = ಎಂದು, **ಧೌಮ್ಯಾಯ** = ಧೌಮ್ಯರಿಗೆ, **ಉಕ್ತ್ವಾ** = ಹೇಳಿ, **ಸೈಂಧವಸ್ಯ** = ಜಯದ್ರಥನ, **ಯಾನಂ** = ರಥವನ್ನು, **ಸಮಾರುಹತ್** = ಹತ್ತಿದಳು, **ಸುಖಂ** = ಸುಖವಾಗಿ, **ನ ಯಾಸಿ** = ಹೋಗುವುದಿಲ್ಲ (ಊರು ಸೇರುವುದಿಲ್ಲ) (ಅಥವಾ, ಇದರಿಂದ ಸುಖವನ್ನು ಹೊಂದುವುದಿಲ್ಲ ಎಂದರ್ಥ), **ಇತಿ** = ಎಂದು, **ತಂ** = ಜಯದ್ರಥನನ್ನು ಕುರಿತು, **ಈರಯಿತ್ವಾ ಏವ** = ಹೇಳಿಯೇ.

**ತಾತ್ಪರ್ಯ** :- ದ್ರೌಪದಿ ಕೈ ಕೊಡವಿಕೊಂಡಾಗ ಜಯದ್ರಥ ತಕ್ಷಣ ನೆಲದಲ್ಲಿ ಬಿದ್ದು ಮೂರ್ಛೆ ಹೋದ. ಪುನಃ ಎದ್ದು ಬಂದ, ನಾಚಿಕೆಯಿಲ್ಲದವನಾಗಿ ದ್ರೌಪದಿ ತಾನೀಗ ಅಸಹಾಯಕಳಾಗಿದ್ದೇನೆ ಎಂದು, 'ಧೌಮ್ಯರಿಗೆ ಅಗ್ನಿ ಸಹಿತರಾಗಿ ನನ್ನನ್ನು ಹಿಂಬಾಲಿಸಿ ಬನ್ನಿರೆಂದು ಹೇಳಿ, ಸೈಂಧವನಿಗೆ, 'ನೀನು ಸುಖವಾಗಿ ಹೋಗುವುದಿಲ್ಲ' ಎನ್ನುತ್ತ ಅವನ ರಥವನ್ನೇರಿದಳು.

**ವಿಶೇಷಾಂಶ** - ಆಶ್ರಮದಲ್ಲಿ ಪತಿಪತ್ನಿಯರಿಬ್ಬರೂ ಇಲ್ಲದಿದ್ದರೆ ಅವರ ಔಪಾಸನಾಗ್ನಿ ನಾಶವಾಗುವುದು. ಅದರಿಂದ ದ್ರೌಪದಿ, ಧೌಮ್ಯರು ಅಗ್ನಿ ಸಹಿತರಾಗಿ ತನ್ನನ್ನು ಹಿಂಬಾಲಿಸಿ ಬರಲಿ ಎನ್ನುತ್ತಾಳೆ ಎಂದು ವರದರಾಜೀಯದಲ್ಲಿ ತಿಳಿಸಲಾಗಿದೆ.

ತದಾ ನಿಮಿತ್ತಾನಿ ನಿಶಾಮ್ಯ ಪಾರ್ಥಾ
ಸಮಾಯಯುಸ್ತ್ವರಯೈವಾಽಽಶ್ರಮಾಯ ।
ಶ್ರುತ್ವಾ ದಾಸೀವಚನಾತ್ ಸರ್ವಮೇವ
ಚಕ್ರುಃ ಕ್ಷಿಪ್ರಂ ಸೈಂಧವಸ್ಯಾನುಯಾನಮ್ ॥ ೩೬೪ ॥

ಪದಚ್ಛೇದ :- ತದಾ, ನಿಮಿತ್ತಾನಿ, ನಿಶಾಮ್ಯ, ಪಾರ್ಥಾಃ, ಸಮಾಯಯುಃ, ತ್ವರಯಾ, ಏವ, ಆಶ್ರಮಾಯ । ಶ್ರುತ್ವಾ , ದಾಸೀವಚನಾತ್, ಸರ್ವಮ್, ಏವ, ಚಕ್ರುಃ, ಕ್ಷಿಪ್ರಂ, ಸೈಂಧವಸ್ಯ, ಅನುಯಾನಮ್ ॥

ಅರ್ಥ :- ತದಾ = ಆಗ, ಪಾರ್ಥಾಃ = ಪಾಂಡವರು, ನಿಮಿತ್ತಾನಿ (ಸೂರ್ಯನ ಕಡೆಗೆ ತಿರುಗಿ ಪ್ರಾಣಿಗಳು ಮತ್ತು ಪಕ್ಷಿಗಳು ಕೆಟ್ಟದಾಗಿ ಕೂಗುವಿಕೆ ಮೊದಲಾದ) ಶುಭ ಸೂಚಕ ಶಕುನಗಳನ್ನು, ನಿಶಾಮ್ಯ = ಕಂಡು, ತ್ವರಯಾ ಏವ = ವೇಗವಾಗಿಯೇ, ಆಶ್ರಮಾಯ = ಆಶ್ರಮಕ್ಕೆ, ಸಮಾಯಯುಃ = ಒಟ್ಟಿಗೆ ಬಂದರು, ದಾಸೀವಚನಾತ್ = ದಾಸಿಯ ಮಾತಿನಿಂದ, ಸರ್ವಮ್ = ಎಲ್ಲವನ್ನು, ಶ್ರುತ್ವಾ = ಕೇಳಿ ತಿಳಿದು, ಕ್ಷಿಪ್ರಮ್ ಏವ = ಅತಿ ಬೇಗನೆ, ಸೈಂಧವಸ್ಯ = ಜಯದ್ರಥನ, ಅನುಯಾನಮ್ = ಬೆನ್ನಟ್ಟುವಿಕೆಯನ್ನು, ಚಕ್ರುಃ = ಮಾಡಿದರು.

ತಾತ್ಪರ್ಯ :- ಆಗ ಉತ್ಪಾತಗಳನ್ನು ಕಂಡು ಪಾಂಡವರು ವೇಗದಿಂದ ಆಶ್ರಮಕ್ಕೆ ಬಂದರು. ದಾಸಿಯ ಮಾತಿನಿಂದ ಎಲ್ಲವನ್ನೂ ಕೇಳಿ ತಿಳಿದು ಕೂಡಲೆ ಸೈಂಧವನನ್ನು ಬೆನ್ನಟ್ಟಿ ಹೋದರು.

ಆಕ್ರೋಶಮಾನಂ ಭೀಮಸೇನೇತಿ ಧೌಮ್ಯಂ
ದೃಷ್ಟ್ವಾ ತಸ್ಯಾಗ್ರೇ ಸೈಂಧವಂ ಚಾತಿಪಾಪಮ್ ।
ಚಕ್ರುರ್ನಾದಾನ್ ಸಿಂಹವತ್ ಪಾಂಡುಪುತ್ರಾ
ದೃಷ್ಟ್ವಾ ಕೃಷ್ಣಾ ಚಾವತರದ್ ರಥಾತ್ ತದಾ ।
ಧೌಮ್ಯೇನ ಸಾರ್ಧಂ ಸಾ ಯಯೌ ಚಾಽಽಶ್ರಮಾಯ
ಸೈನ್ಯಂ ಪಾರ್ಥಾಸ್ತತ್ರ ನಿಜಘ್ನುರೋಜಸಾ ॥ ೩೬೫ ॥

ಪದಚ್ಛೇದ :- ಆಕ್ರೋಶಮಾನಂ ಭೀಮಸೇನಃ, ಇತಿ, ಧೌಮ್ಯಂ, ದೃಷ್ಟ್ವಾ , ತಸ್ಯ ಅಗ್ರೇ, ಸೈಂಧವಂ, ಚ, ಅತಿಪಾಪಮ್ । ಚಕ್ರುಃ, ನಾದಾನ್, ಸಿಂಹವತ್,

**ಪಾಂಡುಪುತ್ರಾಃ , ದೃಷ್ಟ್ವಾ, ಕೃಷ್ಣಾ ಚ, ಅವತರದ್, ರಥಾತ್, ತದಾ । ಧೌಮ್ಯೇನ, ಸಾರ್ಧಂ, ಸಾ, ಯಯೌ, ಚ , ಆಶ್ರಮಾಯ, ಸೈನ್ಯಂ, ಪಾರ್ಥಾಃ, ತತ್ರ, ನಿಜಘ್ನುಃ, ಓಜಸಾ ॥**

**ಅರ್ಥ** :- **ಭೀಮಸೇನ** = ಹೇ ಭೀಮಸೇನಾ, **ಇತಿ** = ಎಂದು, **ಆಕ್ರೋಶಮಾನಂ** = ಕರೆಯುತ್ತಿರುವ (ರಕ್ಷಣೆಗಾಗಿ ಚೀರುತ್ತಿರುವ), **ಧೌಮ್ಯಂ** = ಧೌಮ್ಯರನ್ನು, **ತಸ್ಯ** = ಧೌಮ್ಯರ, **ಅಗ್ರೇ** = ಮುಂಭಾಗದಲ್ಲಿ, **ಅತಿಪಾಪಮ್** = ಮಹಾಪಾಪಿಯಾದ, **ಸೈಂಧವಂ** = ಜಯದ್ರಥನನ್ನು, **ಚ** = ಕೂಡ, **ದೃಷ್ಟ್ವಾ** = ನೋಡಿ, **ಪಾಂಡುಪುತ್ರಾಃ** = ಪಾಂಡವರು, **ಸಿಂಹವತ್** = ಸಿಂಹದಂತೆ, **ನಾದಾನ್** = ಗರ್ಜನೆಗಳನ್ನು, **ಚಕ್ರುಃ** = ಮಾಡಿದರು, **ತದಾ** = ಆಗ, **ಕೃಷ್ಣಾ ಚ** = ದ್ರೌಪದಿಯಾದರೂ, **ದೃಷ್ಟ್ವಾ** = (ಸಂದರ್ಭವನ್ನು) ಕಂಡು, **ರಥಾತ್** = ರಥದಿಂದ, **ಅವತರದ್** = ಅನಾಯಾಸವಾಗಿ ಇಳಿದಳು, **ಚ** = ಮತ್ತು, **ಸಾ** = ದ್ರೌಪದಿಯು, **ಧೌಮ್ಯೇನ ಸಾರ್ಧಂ** = ಧೌಮ್ಯರ ಒಟ್ಟಿಗೆ, **ಆಶ್ರಮಾಯ** = ಆಶ್ರಮಕ್ಕೆ, **ಯಯೌ** = ಹೋದಳು, **ತತ್ರ** = ಆ ಸಂದರ್ಭದಲ್ಲಿ, **ಪಾರ್ಥಾಃ** = ಪಾಂಡವರು, **ಸೈನ್ಯಂ** = ಜಯದ್ರಥನ ಸೈನ್ಯವನ್ನು, **ಓಜಸಾ** = ಬಲದಿಂದ, **ನಿಜಘ್ನುಃ** = ಅತಿಶಯವಾಗಿ ಸಂಹರಿಸಿದರು.

**ತಾತ್ಪರ್ಯ** :- ಭೀಮಸೇನಾ! ಎಂದು ಧೌಮ್ಯರು ಕೂಗುತ್ತಿದ್ದುದನ್ನೂ ಅವರ ಮುಂಭಾಗದಲ್ಲಿ ಮಹಾಪಾಪಿ ಸೈಂಧವ ಹೋಗುತ್ತಿದ್ದುದನ್ನೂ ಕಂಡು ಪಾಂಡವರು ಸಿಂಹನಾದ ಮಾಡಿದರು, ದ್ರೌಪದಿ ಅವರನ್ನು ಕಂಡು ರಥದಿಂದಿಳಿದು ಧೌಮ್ಯರೊಂದಿಗೆ ಆಶ್ರಮದ ಕಡೆಗೆ ನಡೆದಳು. ಪಾಂಡವರು ಅಲ್ಲಿ ಸೈಂಧವನ ಸೈನ್ಯವನ್ನು ಪರಾಕ್ರಮದಿಂದ ಸಂಹರಿಸಿದರು.

**ವಿಶೇಷಾಂಶ** - ಜಯದ್ರಥ ತಮ್ಮ ತಂಗಿಯಾದ ದುಃಶಲೆಯ ಗಂಡ, ಧೃತರಾಷ್ಟ್ರನ ಅಳಿಯ. ಅದರಿಂದ ಅವನನ್ನು ಕೊಲ್ಲಬೇಡಿರೆಂದ ಧರ್ಮರಾಜ. ಅವನನ್ನು ಬಿಡಬೇಡಿ ಕೊಂದು ಬಿಡಿ ಎಂದಳು ದ್ರೌಪದಿ. ಬಳಿಕ ಧರ್ಮರಾಜ ನಕುಲ ಸಹದೇವರು ದ್ರೌಪದಿಯನ್ನು ಧೌಮ್ಯರನ್ನೂ ಕರೆದುಕೊಂಡು ಆಶ್ರಮಕ್ಕೆ ತೆರಳಿದರು. ಈ ವಿಷಯ '೩೬೭'ನೇ ಶ್ಲೋಕದಲ್ಲೂ ಸೂಚಿತವಾಗಿದೆ.

ಅಗ್ರೇ ಕೃಷ್ಣಾಂ ಯೋಽವದತ್ ಸಿಂಧುರಾಜಂ
ಯಾಹೀತಿ ತಂ ಕೋಟಿಕಾಶ್ಯಂ ಸುಪಾಪಮ್ ।
ಛಿತ್ವಾ ಶಿರೋ ಮೃತ್ಯವೇ ಭೀಮಸೇನೋ
ನಿವೇದಯಾಮಾಸ ತಮಃ ಸ ಚಾಗಾತ್ ॥ ೩೬೬ ॥

ಪದಚ್ಛೇದ :- ಅಗ್ರೇ, ಕೃಷ್ಣಾಂ, ಯಃ, ಅವದತ್, ಸಿಂಧುರಾಜಂ, ಯಾಹಿ, ಇತಿ, ತಂ ಕೋಟಿಕಾಶ್ಯಂ, ಸುಪಾಪಮ್ । ಛಿತ್ವಾ, ಶಿರಃ, ಮೃತ್ಯವೇ, ಭೀಮಸೇನಃ, ನಿವೇದಯಾಮಾಸ, ತಮಃ, ಸಃ, ಚ, ಅಗಾತ್ ॥

ಅರ್ಥ :- ಅಗ್ರೇ = ಮೊದಲಿಗೆ, ಕೃಷ್ಣಾಂ = ದ್ರೌಪದಿಯನ್ನು ಕುರಿತು, ಯಾಹಿ = (ಅಪಹರಿಸಲು) ಹೋಗು, ಇತಿ = ಎಂದು, ಯಃ = ಯಾರು, ಸಿಂಧುರಾಜಂ = ಜಯದ್ರಥನನ್ನು ಕುರಿತು, ಅವದತ್ = ಹೇಳಿದನೋ, ತಂ = ಅಂತಹ, ಸುಪಾಪಮ್ = ಮಹಾಪಾಪಿಷ್ಠನಾದ, ಕೋಟಿಕಾಶ್ಯಮ್ = ಕಾಶಿರಾಜನಾದ ಕೋಟಿಯನ್ನು, ಭೀಮಸೇನಃ = ಭೀಮಸೇನನು, ಶಿರಃ = ತಲೆಯನ್ನು, ಛಿತ್ವಾ = ಕತ್ತರಿಸಿ, ಮೃತ್ಯವೇ = ನರಸಿಂಹನಿಗೆ (ಯಮನಿಗೆ) ನಿವೇದಯಾಮಾಸ = ಕೊಟ್ಟನು, ಸಃ = ಆ ಪಾಪಿಯಾದ, ಕೋಟಿಯು, ತಮಃ ಚ = ತಮಸ್ಸನ್ನೂ, ಅಗಾತ್ = ಹೊಂದಿದನು.

ತಾತ್ಪರ್ಯ :- ಮೊದಲಿಗೆ, ದ್ರೌದಿಯನ್ನು ಅಪಹರಿಸೆಂದು ಸೈಂಧವನಿಗೆ ಹೇಳಿದ ಮಹಾಪಾಪಿ ಕೋಟಿಕಾಶ್ಯನನ್ನು ಭೀಮನು ಶಿರಚ್ಛೇದ ಮಾಡಿ ಮೃತ್ಯುವಿಗೆ ನೀಡಿದ. ಆ ಕೋಟಿಕಾಶ್ಯ ತಮಸ್ಸಿಗೆ ಹೋದ.

ಹತ್ವಾ ಸೇನಾಮಖಿಲಾಂ ಸೈಂಧವಸ್ಯ
ಭೀಮಾರ್ಜುನೌ ಸಯಮಂ ಧರ್ಮರಾಜಮ್ ।
ವಿಸೃಜ್ಯ ಧಾವಂತಮಥಾನುಜಗ್ಮತು-
ರ್ಜಯದ್ರಥಂ ವಿರಥಂ ಫಲ್ಗುನೋಽಕಃ ॥ ೩೬೭ ॥

ಪದಚ್ಛೇದ :- ಹತ್ವಾ, ಸೇನಾಂ, ಅಖಿಲಾಂ, ಸೈಂಧವಸ್ಯ, ಭೀಮಾರ್ಜುನೌ, ಸಯಮಂ, ಧರ್ಮರಾಜಂ, ವಿಸೃಜ್ಯ, ಧಾವಂತಂ, ಅಥ, ಅನುಜಗ್ಮತುಃ, ಜಯದ್ರಥಂ, ವಿರಥಂ, ಫಲ್ಗುನಃ, ಅಕಃ ।

**ಅರ್ಥ** :- **ಭೀಮಾರ್ಜುನೌ** = ಭೀಮಾರ್ಜುನರು, **ಸೈಂಧವಸ್ಯ** = ಜಯದ್ರಥನ, **ಅಖಿಲಾಂ** = ಎಲ್ಲ, **ಸೇನಾಂ** = ಸೇನೆಯನ್ನು, **ಹತ್ವಾ** = ಕೊಂದು, **ಸಯಮಂ** = ನಕುಲ ಸಹದೇವರಿಂದ ಕೂಡಿದ, **ಧರ್ಮರಾಜಂ** = ಧರ್ಮರಾಜನನ್ನು, **ವಿಸೃಜ್ಯ** = (ಆಶ್ರಮಕ್ಕೆ ಹೋಗಲು) ಬಿಟ್ಟು, **ಧಾವಂತಂ** = ಒಡುತ್ತಿರುವ ಸೈಂಧವನನ್ನು, **ಅನುಜಗ್ಮತುಃ** = ಹಿಂಬಾಲಿಸಿದರು, **ಅಥ** = ಅನಂತರ, **ಫಲ್ಗುನಃ** = ಅರ್ಜುನನು, **ಜಯದ್ರಥಂ** = ಜಯದ್ರಥನನ್ನು, **ವಿರಥಂ** = ರಥಶೂನ್ಯನನ್ನಾಗಿ, **ಅಕಃ** = ಮಾಡಿದನು.

**ತಾತ್ಪರ್ಯ** :- ಭೀಮಾರ್ಜುನರು ಸೈಂಧವನ ಎಲ್ಲ ಸೈನ್ಯವನ್ನೂ ಕೊಂದು ಧರ್ಮರಾಜ ನಕುಲ ಸಹದೇವರನ್ನು ಹಿಂದೆ ಕಳಿಸಿ, ತಾವು ಮುಂದೆ ಒಡುತ್ತಿದ್ದ ಸೈಂಧವನನ್ನು ಬೆನ್ನಟ್ಟಿದರು, ಅರ್ಜುನ ಜಯದ್ರಥನ ಕುದುರೆಗಳನ್ನು ಕೊಂದು ರಥದಿಂದ ಬೀಳಿಸಿದ.

**ಪದ್ಭ್ಯಾಂ ಧಾವಂತಂ ಭೀಮಸೇನೋ ನಿಗೃಹ್ಯ**
**ದತ್ವಾ ಪ್ರಹಾರಾಂಶ್ಚ ಭೃಶಂ ತಮಾರ್ತಮ್ ।**
**ಆದಾಯಾಥಾದ್ ದ್ರೌಪದೀಪಾದಯೋಶ್ಚ**
**ತಂ ಮೋಚಯಾಮಾಸ ಚ ಧರ್ಮಸೂನುಃ ॥ ೩೬೮ ॥**

ಪದಚ್ಛೇದ :– ಪದ್ಭ್ಯಾಂ, ಧಾವಂತಂ, ಭೀಮಸೇನಃ, ನಿಗೃಹ್ಯ, ದತ್ವಾ, ಪ್ರಹಾರಾನ್, ಚ, ಭೃಶಂ, ತಂ, ಆರ್ತ, ಆದಾಯ, ಅಥಾದ್, ದ್ರೌಪದೀಪಾದಯೋಃ, ಚ, ತಂ, ಮೋಚಯಾಮಾಸ, ಚ, ಧರ್ಮಸೂನುಃ ।

**ಅರ್ಥ** :- **ಪದ್ಭ್ಯಾಂ** = ಕಾಲುಗಳಿಂದ (ಕಾಲ್ನಡೆಯಿಂದ), **ಧಾವಂತಂ** = ಪಲಾಯನ ಮಾಡುತ್ತಿರುವ (ಒಡುತ್ತಿರುವ) ಜಯದ್ರಥನನ್ನು, **ಭೀಮಸೇನಃ** = ಭೀಮಸೇನನು, **ನಿಗೃಹ್ಯ** = ಹಿಡಿದು, **ಪ್ರಹಾರಾನ್ ಚ** = ಕಾಲ್ತುಳಿತಗಳನ್ನೂ, **ದತ್ವಾ** = ಕೊಟ್ಟು, **ಭೃಶಂ** = ಅತ್ಯಂತವಾಗಿ, **ಆರ್ತಂ** = ಪೀಡಿತನಾದ, **ತಂ** = ಜಯದ್ರಥನನ್ನು, **ಆದಾಯ** = ತೆಗೆದುಕೊಂಡು, **ದ್ರೌಪದೀಪಾದಯೋಃ** = ದ್ರೌಪದಿಯ ಪಾದಗಳಲ್ಲಿ, **ಅಥಾತ್ ಚ** = ಕೆಡಹಿದನೂ ಕೂಡ, **ತಂ ಚ** = ಆ ಜಯದ್ರಥನನ್ನಾದರೂ, **ಧರ್ಮರಾಜಃ** = ಯುಧಿಷ್ಠಿರನು, **ಮೋಚಯಾಮಾಸ** = ಬಿಡಿಸಿದ.

ತಾತ್ಪರ್ಯ :- ಕಾಲ್ನಡೆಯಿಂದ ಧಾವಿಸುತ್ತಿದ್ದ ಜಯದ್ರಥನನ್ನು ಭೀಮಸೇನ ಹಿಡಿದು ಚೆನ್ನಾಗಿ ಒದೆಗಳನ್ನು ಕೊಟ್ಟು ಆರ್ತನಾದ ಆತನನ್ನು ದ್ರೌಪದಿಯ ಕಾಲುಗಳ ಕೆಳಗೆ ಬೀಳಿಸಿದ. ಅವನನ್ನು ಧರ್ಮರಾಜ ಬಿಡಿಸಿದ.

ವಿಶೇಷಾಂಶ :- ದುಃಶಲೆಯ ಗಂಡನೆಂದು ಜಯದ್ರಥನನ್ನು ಉಳಿಸಲು ಧರ್ಮರಾಜ ಹೇಳಿದ್ದ. ಆದರೆ ದ್ರೌಪದಿ ಕೊಲ್ಲಲು ಕೇಳಿದ್ದಳು. ಅದರಿಂದ ಭೀಮ ಅರ್ಧಚಂದ್ರ ಬಾಣದಿಂದ ಅವನ ಕೂದಲುಗಳನ್ನು ಕತ್ತರಿಸಿ ಐದು ಜುಟ್ಟುಗಳನ್ನಿಟ್ಟ ವಧೆಗಿಂತ ಮಿಗಿಲಾದ ಅವಮಾನ ಮಾಡಿದ. ನಿನಗೆ ಬದುಕುವ ಆಸೆ ಇದ್ದರೆ ತುಂಬಿದ ಸಭೆಯಲ್ಲಿ 'ದ್ರೌಪದಿಗೆ ನಾನು ದಾಸ' ಎನ್ನಬೇಕು ಎಂದ ಜಯದ್ರಥ ಒಪ್ಪಿದ.

**ದಾಸೋ ದ್ರೌಪದ್ಯಾ ಅಹಮಿತ್ಯೇವ ವಾಕ್ಯೇ**
**ತೇನೈವೋಕ್ತೇ ಭೀಮಸೇನೋಽಪ್ಯಮುಂಚತ್ ।**
**ಸ ಬ್ರೀಳಿತೋಽವಾಗ್ವದನೋ ಯಯೌ ವನಂ**
**ಪಾರ್ಥಾಶ್ಚ ತತ್ರೋಷುರತಿಪ್ರಮೋದಿನಃ ॥ ೩೬ ॥**

**ಪದಚ್ಛೇದ :– ದಾಸಃ, ದ್ರೌಪದ್ಯಾಃ, ಅಹಂ, ಇತಿ, ಏವ, ವಾಕ್ಯೇ, ತೇನ, ಏವ, ಉಕ್ತೇ, ಭೀಮಸೇನಃ, ಅಪಿ, ಅಮುಂಚತ್, ಸಃ, ವ್ರೀಡಿತಃ, ಅವಾಗ್ವದನಃ, ಯಯೌ, ವನಂ, ಪಾರ್ಥಾಃ, ಚ, ತತ್ರ, ಊಷುಃ, ಅತಿಪ್ರಮೋದಿನಃ ।**

**ಅರ್ಥ** :- **ಅಹಂ** = ನಾನು, **ದ್ರೌಪದ್ಯಾಃ** = ದ್ರೌಪದಿ ದೇವಿಯ, **ದಾಸ ಏವ** = ದಾಸನೇ, **ಇತಿ** = ಎಂಬ, **ವಾಕ್ಯೇ** = ಮಾತು, **ತೇನ ಏವ** = ಜಯದ್ರಥನಿಂದಲೇ, **ಉಕ್ತೇ** = ಹೇಳಲ್ಪಟ್ಟಾಗ, **ಭೀಮಸೇನಃ ಅಪಿ** = ಭೀಮಸೇನನೂ ಕೂಡ, **ಅಮುಂಚತ್** = (ಜಯದ್ರಥನನ್ನು) ಬಿಟ್ಟನು, **ಸಃ** = ಜಯದ್ರಥನು, **ವ್ರೀಡಿತಃ** = ಲಜ್ಜೆಗೊಂಡವನಾಗಿ, **ಅವಾಗ್ವದನಃ** = ತಲೆತಗ್ಗಿಸಿಕೊಂಡು, **ವನಂ** = ಕಾಡನ್ನು, **ಯಯೌ** = ಹೋದನು, **ಪಾರ್ಥಾಃ ಚ** = ಪಾಂಡವರಾದರೂ, **ತತ್ರ** = ಆಶ್ರಮದಲ್ಲಿ, **ಅತಿಪ್ರಮೋದಿನಃ** = ಹರಿಕಥಾಶ್ರವಣಾದಿಗಳಿಂದ ಅತ್ಯಂತ ಸಂತೋಷವುಳ್ಳವರಾಗಿ, **ಊಷುಃ** = ವಾಸ ಮಾಡಿದರು.

ತಾತ್ಪರ್ಯ :- 'ನಾನು ತಾಯಿ ದ್ರೌಪದಿಯ ದಾಸನೇ' ಎಂದು ಹೇಳಿದಾಗಲೇ ಭೀಮಸೇನನೂ ಜಯದ್ರಥನನ್ನು ಬಿಟ್ಟ. ಜಯದ್ರಥನು ಮುಖ ತಗ್ಗಿಸಿ ಕಾಡಿಗೆ ಹೊರಟು ಹೋದ. ಪಾಂಡವರು ಹಿಮಾಲಯದ ಉಪಪರ್ವತದಲ್ಲಿರುವ ಆಶ್ರಮದಲ್ಲಿ ಸಂತುಷ್ಟರಾಗಿ ವಾಸಮಾಡಿದರು.

**ಮಾರ್ಕಂಡೇಯಸ್ತದಾಽಽಗತ್ಯ ತೇಷಾಮಕಥಯತ್ ಕಥಾಃ ।**
**ಬಹ್ವೀಶ್ಚೈವ ವಿಚಿತ್ರಾಶ್ಚ ಭಾಷಾತ್ರಯಸಮನ್ವಿತಾಃ ॥ ೩೭೦ ॥**

ಪದಚ್ಛೇದ :- **ಮಾರ್ಕಂಡೇಯಃ, ತದಾ, ಆಗತ್ಯ, ತೇಷಾಂ, ಅಕಥಯತ್, ಕಥಾಃ, ಬಹ್ವ್ಯಃ, ಚ, ಏವ, ವಿಚಿತ್ರಾಃ, ಚ, ಭಾಷಾತ್ರಯಸಮನ್ವಿತಾಃ ।**

ಅರ್ಥ :- **ತದಾ** = ಆಗ, **ಮಾರ್ಕಂಡೇಯಃ** = ಮಾರ್ಕಂಡೇಯ ಮುನಿಗಳು, **ಆಗತ್ಯ** = ಬಂದು, **ತೇಷಾಂ** = ಪಾಂಡವರಿಗೆ, **ಬಹ್ವ್ಯಃ** = ಬಹುವಿಧವಾದ, **ಚ** = ಅದರಲ್ಲಿಯೂ, **ವಿಚಿತ್ರಾಃ ಏವ** = ಚಿತ್ರವಿಚಿತ್ರಗಳೇ ಆದ, **ಚ** = ಮತ್ತು, **ಭಾಷಾತ್ರಯಸಮನ್ವಿತಾಃ** = ಸಮಾಧಿಭಾಷೆ, ದರ್ಶನಭಾಷೆ, ಗುಹ್ಯಭಾಷೆ ಎಂಬ ಮೂರು ಭಾಷೆಗಳಿಂದ ಕೂಡಿದ, **ಕಥಾಃ** = ರಾಮ, ಅಗ್ನಿಪುತ್ರರ, ಷಣ್ಮುಖನ ಕಥೆಗಳನ್ನು, **ಅಕಥಯತ್** = ಹೇಳಿದರು.

ತಾತ್ಪರ್ಯ :- (ಸದಾ ಇಪ್ಪತ್ತೈದರ ಹರೆಯದವರಾದ) ಮಾರ್ಕಂಡೇಯ ಮುನಿಗಳು ಬಂದು ಪಾಂಡವರಿಗೆ ಭಾಷಾತ್ರಯಗಳಿಂದ ಕೂಡಿದ ಬಹುವಿಧವಾದ ಆಶ್ಚರ್ಯಜನಕಗಳಾದ ಕಥೆಗಳನ್ನು ಹೇಳಿದರು.

ವಿಶೇಷಾಂಶ :- ಮೂರು ವಿಧವಾದ ಭಾಷೆಗಳ ವಿವರಣೆ '೨'ನೇ ಅಧ್ಯಾಯದ 'ಭಾಷಾತ್ರಯಂ ನ ಜಾನಾತಿ' ಎಂಬಲ್ಲಿದೆ.

**ಲೋಕದರ್ಶನಮಾಶ್ರಿತ್ಯ ದೇವಾಶ್ಚ ಮುನಯಸ್ತಥಾ ।**
**ಬ್ರೂಯುಃ ಕಥಾಸ್ತತ್ರ ಶಿಕ್ಷಾ ಗ್ರಾಹ್ಯಾ ನಾರ್ಥಾಃ ಕಥಂಚನ ॥ ೩೭೧ ॥**

ಪದಚ್ಛೇದ :- **ಲೋಕದರ್ಶನಂ, ಆಶ್ರಿತ್ಯ, ದೇವಾಃ, ಚ, ಮುನಯಃ, ತಥಾ, ಬ್ರೂಯುಃ, ಕಥಾಃ, ತತ್ರ, ಶಿಕ್ಷಾ, ಗ್ರಾಹ್ಯಾ, ನ, ಅರ್ಥಃ, ಕಥಂಚನ ।**

ಅರ್ಥ :- **ಲೋಕದರ್ಶನಂ** = ಲೋಕದ ದರ್ಶನವನ್ನು, **ಆಶ್ರಿತ್ಯ** = ಅವಲಂಬಿಸಿ, **ದೇವಾಃ** = ದೇವತೆಗಳು, **ತಥಾ** = ಹಾಗೆಯೇ, **ಮುನಯಃ ಚ**

= ಮುನಿಗಳೂ ಕೂಡ, **ಕಥಾಃ** = ಕಥೆಗಳನ್ನು, **ಬ್ರೂಯುಃ** = ಹೇಳುವರು, **ತತ್ರ** = ಆ ಕಥೆಗಳಲ್ಲಿ, **ಶಿಕ್ಷಾ** = ನೀತಿಯು, **ಗ್ರಾಹ್ಯಾ** = ಗ್ರಹಿಸಲ್ಪಡಬೇಕು, **ಕಥಂಚನ** = ಯಾವ ರೀತಿಯಿಂದಲೂ, **ಅರ್ಥಃ** = ಪ್ರಮೇಯವು, **ನ** = ಗ್ರಹಿಸಲ್ಪಡತಕ್ಕದಲ್ಲ.

**ತಾತ್ಪರ್ಯ :-** ಲೋಕರೀತಿಯನ್ನು ಅನುಸರಿಸಿ ದೇವತೆಗಳೂ ಮುನಿಗಳೂ ಕಥೆಗಳನ್ನು ಹೇಳಬಹುದು. ಆಗ ಅದರಲ್ಲಿ ನೀತಿಯನ್ನು ಮಾತ್ರ ಸ್ವೀಕರಿಸಬೇಕು ಕಥಾ ವಸ್ತುವನ್ನಲ್ಲ.

**ವಿಶೇಷಾಂಶ :-** 'ಕೃಷ್ಣೋ ವವಂದೇ ಪಿತರಂ ಭಕ್ತ್ಯಾ ಪೂಜ್ಯತಮಂ ಹ್ಯಜಃ' ಎಂಬಲ್ಲಿ ಕೃಷ್ಣನು ತಂದೆಗೆ ವಂದಿಸಿದನು ಎಂದು ಹೇಳಿದೆ. ಇಂತಹ ಸಂದರ್ಭಗಳಲ್ಲಿ 'ಮಕ್ಕಳು ತಂದೆ ತಾಯಿಯನ್ನು ಗೌರವಿಸಬೇಕು' ಎಂಬ ನೀತಿಯನ್ನು ಮಾತ್ರ ಸ್ವೀಕರಿಸಬೇಕು ಹೊರತು ಕೃಷ್ಣನಿಗೆ ತಂದೆ ಇದ್ದಾನೆ ಎಂಬುದಾಗಿ ಅಲ್ಲ.

**ಅರ್ಥಃ ಸಮಾಧಿಭಾಷಾಸು ಗ್ರಾಹ್ಯಃ ಸರ್ವೋಽಪ್ಯಸಂಶಯಮ್ ।**
**ಪರದರ್ಶನಭಾಷಾಸು ಜ್ಞೇಯಂ ತದ್ದರ್ಶನಂ ತಥಾ ॥ ೩೭ ॥**

**ಪದಚ್ಛೇದ :– ಅರ್ಥಃ, ಸಮಾಧಿಭಾಷಾಸು, ಗ್ರಾಹ್ಯಃ, ಸರ್ವಃ, ಅಪಿ, ಅಸಂಶಯಂ, ಪರದರ್ಶನಭಾಷಾಸು, ಜ್ಞೇಯಂ, ತದ್ದರ್ಶನಂ, ತಥಾ ।**

**ಅರ್ಥ :- ಸಮಾಧಿಭಾಷಾಸು** = ಸಮಾಧಿಭಾಷೆಯನ್ನೇ ಹೊಂದಿರುವ, ವಿಷ್ಣುಮಹಿಮಾ ಪ್ರತಿಪಾದಕಗಳಾದ ಕಥೆಗಳಲ್ಲಿ (ಹೇಳಲ್ಪಟ್ಟ), **ಸರ್ವಃ ಅಪಿ** = ಎಲ್ಲ ವಿಧವಾದ, **ಅರ್ಥಃ** = ಪ್ರಮೇಯವು, **ಅಸಂಶಯಂ** = ಕಿಂಚಿತ್ತು ಸಂಶಯವಿಲ್ಲದೆ, **ಗ್ರಾಹ್ಯಃ** = ಸ್ವೀಕರಿಸಲ್ಪಡಬೇಕು, **ಪರದರ್ಶನಭಾಷಾಸು** = ಶಿವನೇ ಮೊದಲಾದವರಲ್ಲಿ ಸರ್ವೋತ್ತಮತ್ವವನ್ನು ಹೇಳಲು ಹೊರಟಿರುವ ಕಥೆಗಳು ಪುರಾಣಗಳಲ್ಲಿ ಕಂಡಾಗ, **ತದ್ದರ್ಶನಂ** = ಶೈವಾದಿ ದರ್ಶನಗಳು (ಶೈವಾದಿಸಂಪ್ರದಾಯಗಳು), **ತಥಾ** = ಹಾಗೆ (ಎಂದಿಷ್ಟೇ ಪುರಾಣದ ಅಭಿಪ್ರಾಯ ಹೊರತು ಶಿವಾದಿ ಸರ್ವೋತ್ತಮತ್ವವಲ್ಲ ಎಂದು), **ಜ್ಞೇಯಂ** = ತಿಳಿಯಬೇಕು.

**ತಾತ್ಪರ್ಯ** :- ಸಮಾಧಿಭಾಷೆಗಳಲ್ಲಿ ಹೇಳಿದ ವಿಷಯವೆಲ್ಲವೂ ನಿಃಸಂಶಯವಾಗಿ ಗ್ರಾಹ್ಯ. ಪರದರ್ಶನಭಾಷೆಯಲ್ಲಿ ಹೇಳಿದಾಗ ಪರರ ದರ್ಶನ ಹಾಗೆ ಇದೆ ಎಂದು ಮಾತ್ರ ತಿಳಿಯಬೇಕು. ಹೇಳಿದ ವಿಷಯ ಗ್ರಹಿಸಬಾರದು.

**ಗ್ರಾಹ್ಯೋ ನಾರ್ಥೋ ವೈದಿಕಂ ತು ದರ್ಶನಂ ಗ್ರಾಹ್ಯಮೇವ ಚ ।**
**ಅನ್ಯಾರ್ಥೋ ಗುಹ್ಯಭಾಷಾಸು ಗ್ರಾಹ್ಯ ಏವಂ ವಿನಿರ್ಣಯಃ ॥ ೩೭೩ ॥**

**ಪದಚ್ಛೇದ** :- **ಗ್ರಾಹ್ಯಃ, ನ, ಅರ್ಥಃ, ವೈದಿಕಂ, ತು, ದರ್ಶನಂ, ಗ್ರಾಹ್ಯಂ, ಏವ, ಹಿ, ಅನ್ಯಾರ್ಥಃ, ಗುಹ್ಯಭಾಷಾಸು, ಗ್ರಾಹ್ಯಃ, ಏವಂ, ವಿನಿರ್ಣಯಃ ।**

**ಅರ್ಥ** :- **ಅರ್ಥಃ** = ಶಿವಾದಿ ಸರ್ವೋತ್ತಮತ್ವ ಪ್ರತಿಪಾದಕವಾದ ವಿಷಯವು, **ನ ಗ್ರಾಹ್ಯಃ** = ಸ್ವೀಕರಿಸಲ್ಪಡಬಾರದು (ಶೈವಾದಿ ದರ್ಶನಗಳಿಗೆ ವೇದವು ಮೂಲವಲ್ಲವಾದುದರಿಂದ ಎಂದರ್ಥ), **ತು** = ಆದರೆ, **ವೈದಿಕಂ** = 'ಹರಿಯೇ ಸರ್ವೋತ್ತಮ' ಇತ್ಯಾದಿ ವೇದಾರ್ಥ ಪ್ರತಿಪಾದಕಗಳಾದ, **ದರ್ಶನಂ** = ದರ್ಶನ ಭಾಷೆಯಿಂದ ಹೇಳಲ್ಪಟ್ಟ ಪ್ರಮೇಯವೂ, **ಗ್ರಾಹ್ಯಂ ಏವ** = ಸ್ವೀಕರಿಸಲ್ಪಡಲೇಬೇಕು, **ಹಿ** = ಇದು ಶ್ರುತ್ಯಾದಿಪ್ರಸಿದ್ಧ, **ಗುಹ್ಯಭಾಷಾಸು** = ಗುಹ್ಯಭಾಷೆಯಿಂದ ಹೊರಟ ಕಥೆಗಳಲ್ಲಿ, **ಅನ್ಯಾರ್ಥಃ** = ತೋರುವ ಅರ್ಥಕ್ಕಿಂತ ಬೇರೆಯದ್ದೇ ಆದ ಅರ್ಥವು, **ಗ್ರಾಹ್ಯಃ** = ಸ್ವೀಕರಿಸಲ್ಪಡಬೇಕು, **ಏವಂ** = ಹೀಗೆ, **ವಿನಿರ್ಣಯಃ** = ಶಾಸ್ತ್ರನಿರ್ಣಯವಿದೆ.

**ತಾತ್ಪರ್ಯ** :- ವೈದಿಕ ಪರದರ್ಶನವು (ವೈಷ್ಣವದರ್ಶನವು) ಮಾತ್ರ ಗ್ರಾಹ್ಯವೇ ಗುಹ್ಯಭಾಷೆಗಳಲ್ಲಿ ಬೇರೆಯೇ ಅರ್ಥ ಗ್ರಾಹ್ಯ. ಹೀಗೆ ಶಾಸ್ತ್ರಗಳಲ್ಲಿ ಭಾಷಾನಿರ್ಣಯವಿದೆ.

**ಜಯದ್ರಥಸ್ತು ಭೀಮೇನ ತದಾ ಪಂಚಶಿಖೀಕೃತಃ ।**
**ತಪಸಾ ಶಿವಮಾರಾಧ್ಯ ವವ್ರೇ ಪಾಂಡವರೋಧನಮ್ ।**
**ಋತೇಽರ್ಜುನಾದರ್ಜುನಸ್ಯ ತುಷ್ಟೋ ಹಿ ತಪಸಾ ಶಿವಃ ॥ ೩೭೪ ॥**

**ಪದಚ್ಛೇದ** :- **ಜಯದ್ರಥಃ, ತು, ಭೀಮೇನ, ತದಾ, ಪಂಚಶಿಖೀಕೃತಃ, ತಪಸಾ, ಶಿವಂ, ಆರಾಧ್ಯ, ವವ್ರೇ, ಪಾಂಡವರೋಧನಂ, ಋತೇ, ಅರ್ಜುನಾದ್, ಅರ್ಜುನಸ್ಯ, ತುಷ್ಟಃ, ಹಿ, ತಪಸಾ, ಶಿವಃ ।**

**ಅರ್ಥ** :- **ಭೀಮೇನ** = ಭೀಮನಿಂದ, **ಪಂಚಶಿಖೀಕೃತಃ** = ಐದು ಶಿಖೆಯುಳ್ಳವನಾಗಿ ಮಾಡಲ್ಪಟ್ಟ, **ಜಯದ್ರಥಃ** = ಜಯದ್ರಥನು, **ತದಾ** = ಆಗ, **ಶಿವಂ** = ಶಿವನನ್ನು, **ತಪಸಾ** = ತಪಸ್ಸಿನಿಂದ, **ಆರಾಧ್ಯ** = ಆರಾಧಿಸಿ (ಒಲಿಸಿ), **ಪಾಂಡವರೋಧನಂ** = ಪಾಂಡವರನ್ನು ತಡೆಯಬಲ್ಲ ಸಾಮರ್ಥ್ಯವನ್ನು, **ವವ್ರೇ** = ವರವಾಗಿ ಪಡೆದನು, **ತು** = ಆದರೆ, **ಅರ್ಜುನಾದ್ ಋತೇ** = ಅರ್ಜುನನನ್ನು ಹೊರತುಪಡಿಸಿ, **ಹಿ** = ಏಕೆಂದರೆ, **ಅರ್ಜುನಸ್ಯ** = ಅರ್ಜುನನಿಗೆ, **ಶಿವಃ** = ಶಿವನು, **ತಪಸಾ** = ತಪಸ್ಸಿನಿಂದ, **ತುಷ್ಟಃ** = ಒಲಿದಿದ್ದನು.

**ತಾತ್ಪರ್ಯ** :- ಜಯದ್ರಥ ಭೀಮನಿಂದ ತಲೆಯಲ್ಲಿ ಐದು ಜುಟ್ಟು ಇಡಿಸಿಕೊಂಡಾಗ ಅವನು ತಪಸ್ಸಿನಿಂದ ಶಿವನನ್ನು ಆರಾಧಿಸಿ ಸಮಸ್ತ ಪಾಂಡವರನ್ನು ಎದುರಿಸಿ ತಡೆಯುವ ಶಕ್ತಿಯನ್ನು ಪಡೆದುಕೊಂಡ ಅರ್ಜುನನನ್ನು ಹೊರತು ಏಕೆಂದರೆ ಶಿವ ಅರ್ಜುನನಿಗೆ ತಪಸ್ಸಿನಿಂದ ಮೊದಲೇ ಒಲಿದಿದ್ದ.

**ವಿಶೇಷಾಂಶ** :- ಪಂಚ ಪಾಂಡವರನ್ನೂ ತಡೆಯಲಾಗಬೇಕು ಎಂದೇ ಜಯದ್ರಥ ವರ ಬೇಡಿದ ಆದರೆ ಶಿವನು ಮಾತ್ರ ಅರ್ಜುನನನ್ನು ಹೊರತು ಪಡಿಸಿ ಅದೂ ಒಂದು ದಿನ ಮಾತ್ರ ಪಾಂಡವರನ್ನು ತಡೆಯುವಿ, ಎಂದು ವರ ಕೊಟ್ಟನು.

**ವನೇ ವಸತ್ಸ್ವೇವ ಚ ಪಾಂಡವೇಷು**
**ಚಕ್ರೇ ಯಜ್ಞಂ ಪೌಂಡರೀಕಾಖ್ಯಮೇವ ।**
**ಸಂಸ್ಪರ್ಧಯಾ ರಾಜಸೂಯಸ್ಯ ರಾಜಾ**
**ದುರ್ಯೋಧನೋ ನಾಪ್ಯಸೌ ತತ್ಕಲಾರ್ಹಃ ॥ ೩೭೫ ॥**

ಪದಚ್ಛೇದ :- ವನೇ, ವಸತ್ಸು, ಏವ, ಚ, ಪಾಂಡವೇಷು, ಚಕ್ರೇ, ಯಜ್ಞಂ, ಪೌಂಡರೀಕಾಖ್ಯಂ, ಏವ, ಸಂಸ್ಪರ್ಧಯಾ, ರಾಜಸೂಯಸ್ಯ, ರಾಜಾ, ದುರ್ಯೋಧನಃ, ನ, ಅಪಿ, ಅಸೌ, ತತ್ಕಲಾರ್ಹಃ।

**ಅರ್ಥ** :- **ಪಾಂಡವೇಷು** = ಪಾಂಡವರು, **ವನೇ** = ದ್ವೈತವನದಲ್ಲಿ, **ವಸತ್ಸು ಏವ** = ವಾಸ ಮಾಡುತ್ತಿರುವಾಗಲೇ, **ರಾಜಾ ದುರ್ಯೋಧನಃ** =

ರಾಜಾ ದುರ್ಯೋಧನನು, **ರಾಜಸೂಯಸ್ಯ** = ಪಾಂಡವರು ಮಾಡಿದ ರಾಜಸೂಯಯಾಗದ, **ಸಂಸ್ಪರ್ಧಯಾ ಏವ** = ಎಲ್ಲ ಅನ್ನದಾನಾದಿಗಳ ಸ್ಪರ್ಧೆಯಿಂದಲೇ, **ಪೌಂಡರೀಕಾಖ್ಯಂ** = ಪೌಂಡರೀಕ ಎಂಬ, **ಯಜ್ಞಂ ಚ** = ವೈಷ್ಣವಯಜ್ಞವನ್ನೂ, **ಚಕ್ರೇ** = ಮಾಡಿದನು, **ಅಪಿ** = ಹಾಗಿದ್ದರೂ, **ಅಸೌ** = ದುರ್ಯೋಧನ ಮಾತ್ಸರ್ಯಾದಿಗಳಿಂದ ಮಾಡಿದ ಪೌಂಡರೀಕಯಾಗವು, **ತತ್ಕಲಾರ್ಹಃ ನ** = ಪಾಂಡವರು ಭಕ್ತಿಯಿಂದ ಮಾಡಿದ ರಾಜಸೂಯಯಾಗದ ಹದಿನಾರನೇ ಒಂದು ಅಂಶಕ್ಕೂ ತಕ್ಕದಲ್ಲ.

**ತಾತ್ಪರ್ಯ** :- ಪಾಂಡವರು ವನವಾಸದಲ್ಲಿರುವಾಗಲೇ ಅವರ ರಾಜಸೂಯಕ್ಕೆ ಪ್ರತಿಯಾಗಿ ಸ್ಪರ್ಧೆಯಿಂದಲೇ ಪೌಂಡರೀಕವೆಂಬ ಯಾಗವನ್ನೂ ರಾಜಾದುರ್ಯೋಧನ ಮಾಡಿದ. ಆದರೆ ದುರ್ಯೋಧನ ಮಾಡಿದ ಪೌಂಡರೀಕಯಾಗ ಪಾಂಡವರ ರಾಜಸೂಯದ ಹದಿನಾರನೇ ಒಂದಂಶಕ್ಕೂ ಸಮವಾಗಲಿಲ್ಲ.

**ವಿಶೇಷಾಂಶ** :- ೧. ಪೌಂಡರೀಕಯಾಗವು ರಾಜಸೂಯಯಾಗಕ್ಕೆ ಸಮ. ಹಾಗಾಗಿ ನೀನು ರಾಜಸೂಯದ ಬದಲು ಪೌಂಡರೀಕಯಾಗವನ್ನು ಮಾಡು. ಏಕೆಂದರೆ ರಾಜಸೂಯ ಮಾಡಿದ ಪಾಂಡವರನ್ನು ಯುದ್ಧದಲ್ಲಿ ಗೆಲ್ಲದೆ ನೀನು ರಾಜಸೂಯ ಮಾಡುವಂತಿಲ್ಲ, ಎಂಬುದಾಗಿ ಪುರೋಹಿತರು ಹೇಳಿದ್ದರೂ ದುರ್ಯೋಧನನು ಸ್ಪರ್ಧೆಯಿಂದಲೇ ಯಾಗವನ್ನು ಮಾಡಿದ್ದರಿಂದ ರಾಜಸೂಯಕ್ಕೆ ಎಳ್ಳಷ್ಟೂ ಇದು ಸಮವಾಗಲಿಲ್ಲ.

೨. 'ಪುಂಡರೀ' ಎಂದರೆ ಪುಂಡರೀಕ(ಕಮಲ)ವನ್ನು ನಾಭಿಯಲ್ಲಿ ಧರಿಸಿದ ನಾರಾಯಣ, ಅವನಿಗೆ ಸಂಬಂಧಿಸಿದ ಯಾಗ ಪೌಂಡರೀಕಯಾಗ.

**ದುರ್ಯೋಧನಸ್ಯಾऽಜ್ಞಯಾ ಪಾಂಡವಾನಾಂ**
**ದುಃಶಾಸನಃ ಪ್ರೇಷಯಾಮಾಸ ತತ್ರ ।**
**ಆಗಚ್ಛತೇತ್ಯವಮಾನಾಯ ತಂ ತು**
**ಭೀಮೋऽವಾದೀದ್ ರಣಯಜ್ಞಂ ಸ್ವಗಮ್ಯಮ್ ॥ ೩೭೬ ॥**

ಪದಚ್ಛೇದ :- ದುರ್ಯೋಧನಸ್ಯ, ಆಜ್ಞಯಾ, ಪಾಂಡವಾನಾಂ, ದುಃಶಾಸನಃ, ಪ್ರೇಷಯಾಮಾಸ, ತತ್ರ, ಆಗಚ್ಛತ, ಇತಿ, ಅವಮಾನಾಯ, ತಂ, ತು, ಭೀಮಃ, ಅವಾದೀತ್, ರಣಯಜ್ಞಂ, ಸ್ವಗಮ್ಯಂ ।

**ಅರ್ಥ** :- **ದುರ್ಯೋಧನಸ್ಯ** = ದುರ್ಯೋಧನನ, **ಆಜ್ಞಯಾ** = ಆಜ್ಞೆಯಂತೆ, **ದುಃಶಾಸನಃ** = ದುಃಶಾಸನನು, **ಪಾಂಡವಾನಾಂ** = ಪಾಂಡವರಿಗೆ, **ಅವಮಾನಾಯ** = (ವೈಭವ ಪ್ರದರ್ಶನದ ಮೂಲಕ) ಅವಮಾನಿಸುವುದಕ್ಕೋಸ್ಕರ, **ತತ್ರ** = ಯಜ್ಞವನ್ನು ಕುರಿತು, **ಆಗಚ್ಛತ** = ಬನ್ನಿರಿ, **ಇತಿ** = ಎಂದು, **ಪ್ರೇಷಯಾಮಾಸ** = (ಪಾಂಡವರನ್ನು ಕುರಿತು ದೂತನನ್ನು) ಕಳುಹಿಸಿದನು, **ತು** = ಆದರೆ, **ತಂ** = ಆ ದೂತನನ್ನು ಕುರಿತು, **ಭೀಮಃ** = ಭೀಮನು, **ಸ್ವಗಮ್ಯಂ** = ತಾನು ಬರಬೇಕಾದದ್ದು, **ರಣಯಜ್ಞಂ** = ಯುದ್ಧ ಎಂಬ ಯಜ್ಞವನ್ನು ಕುರಿತು, **ಇತಿ** = ಎಂದು, **ಅವಾದೀದ್** = ಹೇಳಿದನು.

**ತಾತ್ಪರ್ಯ** :- ದುರ್ಯೋಧನನ ಆಜ್ಞೆಯಂತೆ ದುಃಶಾಸನ ಪಾಂಡವರನ್ನು ಅವಮಾನಿಸುವುದಕ್ಕೋಸ್ಕರ, 'ನಾವು ಯಾಗಮಾಡುತ್ತೇವೆ ಬನ್ನಿರೆಂದು' ದೂತನನ್ನು ಅವರ ಬಳಿಗೆ ಕಳುಹಿಸಿದ. ಆದರೆ, ಭೀಮನೆಂದ 'ನಾವು ರಣಯಜ್ಞಕ್ಕೆ ಬರುವೆವು' ಎಂದು.

**ತತೋ ದಿನೈಃ ಕೈಶ್ಚನ ಧಾರ್ತರಾಷ್ಟ್ರಾಃ**
**ಸಕರ್ಣಗಾಂಧಾರನೃಪಾಃ ಕುಮಂತ್ರತಃ ।**
**ಸಭಾರ್ಯಕಾಃ ಪಾಂಡವಾನ್ ದ್ರೌಪದೀಂ ಚ**
**ಮಹೈಶ್ವರ್ಯಂ ದರ್ಶಯಿತ್ವಾऽವಮಂತುಮ್ ॥ ೩೭೭ ॥**

**ತೇ ಸ್ಯಂದನೈಃ ಕಾಂಚನರತ್ನಚಿತ್ರೈಃ**
**ಮಹಾಗಜೈಸ್ತುರಗೈಃ ಪತ್ತಿಭಿಶ್ಚ ।**
**ಸ್ವಲಂಕೃತಾಶ್ಚಿತ್ರಮಾಲ್ಯಾಂಬರಾಶ್ಚ**
**ವಿನಿರ್ಯಯುರ್ದ್ವೈತವನಾಯ ಶೀಘ್ರಮ್ ॥ ೩೭೮ ॥**

ಪದಚ್ಛೇದ :- ತತಃ, ದಿನೈಃ, ಕೈಶ್ಚನ, ಧಾರ್ತರಾಷ್ಟ್ರಾಃ, ಸಕರ್ಣಗಾಂಧಾರನೃಪಾಃ, ಕುಮಂತ್ರತಃ, ಸಭಾರ್ಯಕಾಃ, ಪಾಂಡವಾನ್, ದ್ರೌಪದೀಂ, ಚ, ಮಹೈಶ್ವರ್ಯಂ, ದರ್ಶಯಿತ್ವಾ, ಅವಮಂತುಂ, ತೇ, ಸ್ಯಂದನೈಃ, ಕಾಂಚನರತ್ನಚಿತ್ರೈಃ, ಮಹಾಗಜೈಃ, ತುರಗೈಃ, ಪತ್ತಿಭಿಃ, ಚ, ಸ್ವಲಂಕೃತಾಃ, ಚಿತ್ರಮಾಲ್ಯಾಂಬರಾಃ, ಚ, ವಿನಿರ್ಯಯುಃ, ದ್ವೈತವನಾಯ, ಶೀಘ್ರಂ ।

**ಅರ್ಥ** :- **ತತಃ** = ಪೌಂಡರೀಕಯಾಗದ ನಂತರ, **ಕೈಶ್ಚನ ದಿನೈಃ** = ಕೆಲವು ದಿನಗಳು ಕಳೆದಾಗ, **ಸಕರ್ಣಗಾಂಧಾರನೃಪಾಃ** = ಕರ್ಣ, ಶಕುನಿಯೊಂದಿಗೆ, **ಧಾರ್ತರಾಷ್ಟ್ರಾಃ** = ದುರ್ಯೋಧನ ಮೊದಲಾದ ಧೃತರಾಷ್ಟ್ರನ ಮಕ್ಕಳು, **ಕುಮಂತ್ರತಃ** = ಕೆಟ್ಟ ವಿಚಾರದಿಂದ, **ಮಹೈಶ್ವರ್ಯಂ** = ಪೌಂಡರೀಕ-ಯಾಗದಿಂದ ಬಂದ ಅಪಾರ ಸಂಪತ್ತನ್ನು, **ದರ್ಶಯಿತ್ವಾ** = ತೋರಿಸಿ, **ಪಾಂಡವಾನ್** = ಪಾಂಡವರನ್ನು, **ದ್ರೌಪದೀಂ ಚ** = ದ್ರೌಪದಿಯನ್ನೂ, **ಅವಮಂತುಂ** = ಅವಮಾನಿಸಲು, **ತೇ** = ಕರ್ಣ ದುರ್ಯೋಧನ ಮೊದಲಾ-ದವರು, **ಸಭಾರ್ಯಕಾಃ** = ಹೆಂಡಂದಿರೊಟ್ಟಿಗೆ, **ಕಾಂಚನರತ್ನಚಿತ್ರೈಃ** = ಬಂಗಾರ ಹಾಗೂ ರತ್ನಗಳಿಂದ ಮಾಡಲ್ಪಟ್ಟದ್ದರಿಂದ ವಿಚಿತ್ರಗಳಾದ, **ಸ್ಯಂದನೈಃ** = ರಥಗಳಿಂದ, **ಕಾಂಚನರತ್ನಚಿತ್ರೈಃ** = ಬಂಗಾರರತ್ನಗಳಿಂದ ಅಲಂಕೃತಗಳಾದ, **ಮಹಾಗಜೈಃ** = ಭಾರೀ ಆನೆಗಳಿಂದ, **ತುರಗೈಃ** = ಕುದುರೆಗಳಿಂದ, **ಪತ್ತಿಭಿಃ ಚ** = ಕಾಲಾಳುಗಳಿಂದಲೂ (ಕೂಡಿಕೊಂಡು), **ಚಿತ್ರಮಾಲ್ಯಾಂಬರಾಃ** = ವಿಚಿತ್ರ- ವಾದ ಮಾಲೆಗಳು ಬಟ್ಟೆಗಳು ಧರಿಸಿದವರಾಗಿ, **ಚ** = ಮತ್ತೂ, **ಸ್ವಲಂಕೃತಾಃ** = ಚೆನ್ನಾಗಿ ಅಲಂಕಾರಗೊಂಡವರಾಗಿ, **ಶೀಘ್ರಂ** = ಕೂಡಲೇ, **ದ್ವೈತವನಾಯ** = (ಪಾಂಡವರಿದ್ದ) ದ್ವೈತವನವನ್ನು ಕುರಿತು, **ವಿನಿರ್ಯಯುಃ** = ತೆರಳಿದರು.

**ತಾತ್ಪರ್ಯ** :- ಪೌಂಡರೀಕಯಾಗದ ನಂತರ ಕೆಲವು ದಿನಗಳು ಕಳೆದಾಗ ಕೌರವರು ಕರ್ಣಶಕುನಿಗಳೊಂದಿಗೆ ಕೆಟ್ಟ ಮಂತ್ರಾಲೋಚನೆ ನಡೆಸಿ, ತಮ್ಮ ಪೌಂಡರೀಕ ಯಾಗದ ಮಹಾ ಐಶ್ವರ್ಯಗಳನ್ನು ತೋರಿಸುವ ಮೂಲಕ ಪಾಂಡವರನ್ನೂ ದ್ರೌಪದಿಯನ್ನೂ ಅವಮಾನಿಸುವ ಉದ್ದೇಶದಿಂದ ಒಳ್ಳೆಯ ಅಲಂಕಾರ ಮಾಡಿಕೊಂಡು ಸುಂದರ ಮಾಲೆ ವಸ್ತ್ರಗಳನ್ನು ಧರಿಸಿ, ಬಂಗಾರ ರತ್ನಮಯ ಸುಂದರ ರಥಗಳು ಮಹಾಗಜಗಳು ಕುದುರೆಗಳು ಪದಾತಿಗಳೊಂದಿಗೆ ಪತ್ನೀ ಸಮೇತರಾಗಿ ಅಲಂಕಾರ ಕುಂದುವುದರೊಳಗೆ ಸೇರಬೇಕೆಂದು ವೇಗವಾಗಿ ದ್ವೈತವನಕ್ಕೆ ಹೊರಟರು.

**ಗವಾಂ ದೃಷ್ಟಿಚ್ಛದ್ಮನಾ ನಿರ್ಗತಾಂಸ್ತಾನ್**
**ಜ್ಞಾತ್ವಾ ಶಕ್ರಸ್ತೇಜಸೋ ಭಂಗಕಾಮಃ ।**
**ತತ್ಸಾಮರ್ಥ್ಯಂ ವರಮಸ್ಮೈ ಪ್ರದಾಯ**
**ತದ್ವಂಚನಾಯಾದಿಶಚ್ಚಿತ್ರಸೇನಮ್ ॥ ೩೭ ॥**

ಪದಚ್ಛೇದ :- ಗವಾಂ, ದೃಷ್ಟಿಚ್ಛದ್ಮನಾ, ನಿರ್ಗತಾನ್, ತಾನ್, ಜ್ಞಾತ್ವಾ, ಶಕ್ರಃ, ತೇಜಸಃ, ಭಂಗಕಾಮಃ, ತತ್ಸಾಮರ್ಥ್ಯಂ, ವರಂ, ಅಸ್ಮೈ, ಪ್ರದಾಯ, ತದ್ಬಂಧನಾಯ, ಆದಿಶತ್, ಚಿತ್ರಸೇನಂ ।

**ಅರ್ಥ** :- **ಗವಾಂ** = (ತಮ್ಮ ಹಟ್ಟಿಯಲ್ಲಿರುವ) ಗೊವುಗಳ, **ದೃಷ್ಟಿಚ್ಛದ್ಮನಾ** = ದರ್ಶನದ ನೆಪದಿಂದ, **ನಿರ್ಗತಾನ್** = (ಪಾಂಡವರನ್ನು ಅಪಮಾನಿಸಲು) ಹೊರಟಿರುವ, **ತಾನ್** = ಕರ್ಣಾದಿ ಸಹಿತ ಕೌರವರನ್ನು, **ಶಕ್ರಃ** = ಇಂದ್ರನು, **ಜ್ಞಾತ್ವಾ** = ತಿಳಿದು, **ತೇಜಸಃ** = ದುರ್ಯೋಧನಾದಿಗಳ ತೇಜಸ್ಸಿನ, **ಭಂಗಕಾಮಃ** = ಭಂಗವನ್ನು ಬಯಸುವವನಾಗಿ, **ತತ್ಸಾಮರ್ಥ್ಯಂ** = ಅವರ ತೇಜೋಭಂಗ ಸಾಮರ್ಥ್ಯರೂಪವಾದ, **ವರಂ** = ವರವನ್ನು, **ಅಸ್ಮೈ** = ಈ ಚಿತ್ರಸೇನ ಎಂಬ ಗಂಧರ್ವನಿಗೆ, **ಪ್ರದಾಯ** = ಕೊಟ್ಟು, **ತದ್ಬಂಧನಾಯ** = ದುರ್ಯೋಧನಾದಿಗಳ ಬಂಧನಕ್ಕಾಗಿ, **ಚಿತ್ರಸೇನಂ** = ಚಿತ್ರಸೇನನನ್ನು, **ಆದಿಶತ್** = ಆದೇಶಿಸಿದನು.

**ತಾತ್ಪರ್ಯ** :- ತಮ್ಮ ಗೋವುಗಳನ್ನು ನೋಡುವ ನೆಪದಿಂದ ಹೊರಟಿದ್ದ ಕೌರವರ ದುರುದ್ದೇಶವನ್ನು ತಿಳಿದು ದೇವೇಂದ್ರ ಅವರ ತೇಜೋಭಂಗ ಮಾಡಲು ಬಯಸಿದ. ಚಿತ್ರಸೇನ ಗಂಧರ್ವನಿಗೆ ಈ ಕಾರ್ಯದಲ್ಲಿ ಸಾಮರ್ಥ್ಯ ಉಂಟಾಗಲಿ ಎಂದು ವರ ನೀಡಿ ಕೌರವರನ್ನು ಸೆರೆ ಹಿಡಿಯಲು ಆದೇಶಿಸಿದ.

**ಸ ಷಷ್ಟಿಸಾಹಸ್ರಕಕೋಟಿಯೂಥಪೈಃ**
**ಗಂಧರ್ವಮುಖ್ಯೈಃ ಸಂವೃತೋಽಗಾತ್ ಸರಸ್ತತ್ ।**
**ಯಸ್ಮಿನ್ ಸ್ನಾತುಂ ವಾಂಛತಿ ಧಾರ್ತರಾಷ್ಟ್ರ-**
**ಸ್ತದಾಜ್ಞಯಾ ಪುರುಷಾಸ್ತಾನಥೋಚುಃ ॥ ೩೮೦ ॥**

ಪದಚ್ಛೇದ :- ಸಃ, ಷಷ್ಟಿಸಾಹಸ್ರಕೋಟಿಯೂಥಪೈಃ, ಗಂಧರ್ವಮುಖ್ಯೈಃ, ಸಂವೃತಃ, ಅಗಾತ್, ಸರಃ, ತತ್, ಯಸ್ಮಿನ್, ಸ್ನಾತುಂ, ವಾಂಛತಿ, ಧಾರ್ತರಾಷ್ಟ್ರಃ, ತದಾಜ್ಞಯಾ, ಪುರುಷಾಃ, ತಾನ್, ಅಥ, ಊಚುಃ ।

**ಅರ್ಥ** :- **ಷಷ್ಟಿಸಾಹಸ್ರಕೋಟಿಯೂಥಪೈಃ** = ಅರವತ್ತು ಸಾವಿರ ಕೋಟಿ ಸೇನಾಪತಿಗಳಿಂದ ಕೂಡಿದ, **ಗಂಧರ್ವಮುಖ್ಯೈಃ** = ಗಂಧರ್ವಶ್ರೇಷ್ಠರಿಂದ,

**ಸಂವೃತಃ** = ಪರಿವೃತನಾಗಿ, **ಸಃ** = ಚಿತ್ರಸೇನನು, **ಯಸ್ಮಿನ್** = ಯಾವ ದ್ವೈತಸರೋವರದಲ್ಲಿ, **ಧಾರ್ತರಾಷ್ಟ್ರಃ** = ದುರ್ಯೋಧನನು, **ಸ್ನಾತುಂ** = ಸ್ನಾನ ಮಾಡಲು, **ವಾಂಛತಿ** = ಬಯಸುತ್ತಾನೋ, **ತತ್** = ಆ, **ಸರಃ** = ದ್ವೈತಸರೋವರವನ್ನು ಕುರಿತು, **ಅಗಾತ್** = ಹೋದನು, **ಅಥ** = ಅನಂತರ, **ತಾನ್** = ಚಿತ್ರಸೇನ ಮತ್ತು ಅವನೊಂದಿಗಿದ್ದ ಗಂಧರ್ವರನ್ನು ಕುರಿತು, **ಪುರುಷಾಃ** = ದುರ್ಯೋಧನನ ದೂತರು, **ತದಾಜ್ಞಯಾ** = ದುರ್ಯೋಧನನ ಆಜ್ಞೆಯಂತೆ, **ಊಚುಃ** = ಹೇಳಿದರು.

**ತಾತ್ಪರ್ಯ** :- ಅರವತ್ತು ಸಾವಿರ ಕೋಟಿ ಸೇನಾಧಿಪತಿಗಳಿಂದ ಕೂಡಿದ ಗಂಧರ್ವಶ್ರೇಷ್ಠರಿಂದ ಪರಿವೃತನಾಗಿ ಚಿತ್ರಸೇನ ಗಂಧರ್ವ ದ್ವೈತವನದ ಸರೋವರಕ್ಕೆ ಹೋದ. ಆ ಸರೋವರವು ದುರ್ಯೋಧನನಿಗೆ ಅತಿ ಪ್ರಿಯವಾಗಿತ್ತು. ಅವನಾಜ್ಞೆಯಿಂದ ಭಟರು ಗಂಧರ್ವರಿಗೆ ಹೇಳಿದರು.

**ಸ್ನಾತುಂ ಸಮಾಯಾಸ್ಯತಿ ಧಾರ್ತರಾಷ್ಟ್ರೋ**
**ರಾಜೇಶ್ವರೋ ನಿಸ್ಸರಧ್ವಂ ತದಸ್ಮಾತ್ ।**
**ತೀರ್ಥಾದಾಜ್ಞಾಂ ಧಾರಯಂತಶ್ಚ ತಸ್ಯೇ-**
**ತ್ಯುಕ್ತಾ ಗಂಧರ್ವಾ ಜಹಸುಸ್ತಾನಥೋಚ್ಚೈಃ ॥ ೩೮೧ ॥**

ಪದಚ್ಛೇದ :- ಸ್ನಾತುಂ, ಸಮಾಯಾಸ್ಯತಿ, ಧಾರ್ತರಾಷ್ಟ್ರಃ, ರಾಜೇಶ್ವರ, ನಿಸ್ಸರಧ್ವಂ, ತದ್, ಅಸ್ಮಾತ್, ತೀರ್ಥಾದ್, ಆಜ್ಞಾಂ, ಧಾರಯಂತಃ, ಚ, ತಸ್ಯ, ಇತಿ, ಉಕ್ತಾಃ, ಗಂಧರ್ವಾಃ, ಜಹಸುಃ, ತಾನ್, ಅಥ, ಉಚ್ಚೈಃ ।

**ಅರ್ಥ** :- **ರಾಜೇಶ್ವರಃ** = ರಾಜರಿಗೂ ರಾಜನಾದ, **ಧಾರ್ತರಾಷ್ಟ್ರಃ** = ದುರ್ಯೋಧನನು, **ಸ್ನಾತುಂ** = ಸ್ನಾನ ಮಾಡಲು, **ಸಮಾಯಾಸ್ಯತಿ** = ಪರಿವಾರದೊಡನೆ ಬರುತ್ತಾರೆ, **ತದ್** = ಆ ಕಾರಣದಿಂದ, **ತಸ್ಯ** = ಆ ದುರ್ಯೋಧನನ, **ಆಜ್ಞಾಂ** = ಆದೇಶವನ್ನು, **ಧಾರಯಂತಃ** = ತಲೆಯಲ್ಲಿ ಹೊತ್ತವರಾಗಿ, **ಅಸ್ಮಾತ್** = ಈ, **ತೀರ್ಥಾದ್** = ದ್ವೈತಸರೋವರದಿಂದ, **ನಿಸ್ಸರಧ್ವಂ** = ತೊಲಗಿರಿ, **ಇತಿ** = ಎಂದು, **ಉಕ್ತಾಃ** = ಹೇಳಲ್ಪಟ್ಟ, **ಗಂಧರ್ವಾಃ** = ಗಂಧರ್ವರು, **ಅಥ** = ನಂತರ, **ತಾನ್** = ದುರ್ಯೋಧನಭಟರನ್ನು (ಉದ್ದೇಶಿಸಿ), **ಉಚ್ಚೈಃ** = ಎತ್ತರವಾದ ಧ್ವನಿಯಲ್ಲಿ, **ಜಹಸುಃ** = ನಕ್ಕರು, **ಚ** = ಕೂಡ.

ತಾತ್ಪರ್ಯ :- ರಾಜಾಧಿರಾಜನಾಗಿರುವ ದುರ್ಯೋಧನನು ಇಲ್ಲಿಗೆ ಸ್ನಾನ ಮಾಡಲು ಹೆಂಡಂದಿರು ಗೆಳತಿಯರೊಡನೆ ಬರುತ್ತಿದ್ದಾನೆ. ಅವನ ಆಜ್ಞೆಯನ್ನು ತಲೆಯಲ್ಲಿ ಹೊತ್ತು ಈ ತೀರ್ಥದಿಂದ ತೊಲಗಿರಿ ಇದು ನಿಮಗೆ ಕ್ಷೇಮ. ಹೀಗೆ ಹೇಳಿದಾಗ ಗಂಧರ್ವರು ದುರ್ಯೋಧನ ಭಟರನ್ನು ಗಟ್ಟಿಯಾಗಿ ಪರಿಹಾಸಗೈಯ್ಯುತ್ತಾ ನಕ್ಕರು. ಇತರ ಚೇಷ್ಟೆಗಳನ್ನೂ ಮಾಡಿದರು.

**ಊಚುರ್ವಯಂ ಮಾನಯಾಮಸ್ತದಾಜ್ಞಾಂ**
**ತ್ರಿಲೋಕಾನಾಂ ಯಃ ಪತಿಃ ಶಕ್ರದೇವಃ ।**
**ನ ಮಾನುಷಾಣಾಮಪಿ ಚಕ್ರವರ್ತಿನಾಂ**
**ಕಿಮ್ವಲ್ಪಸಾರಸ್ಯ ಸುಯೋಧನಸ್ಯ ॥ ೩೮೨ ॥**

ಪದಚ್ಛೇದ :- **ಊಚುಃ, ವಯಂ, ಮಾನಯಾಮಃ, ತದಾಜ್ಞಾಂ, ತ್ರಿಲೋಕಾನಾಂ, ಯಃ, ಪತಿಃ, ಶಕ್ರದೇವಃ, ನ, ಮಾನುಷಾಣಾಂ, ಅಪಿ, ಚಕ್ರವರ್ತಿನಾಂ, ಕಿಮು, ಅಲ್ಪಸಾರಸ್ಯ, ಸುಯೋಧನಸ್ಯ ।**

ಅರ್ಥ :- (**ಚ** = ಮತ್ತು), **ಊಚುಃ** = ಹೇಳಿದರು, **ವಯಂ** = ನಾವು, **ಯಃ** = ಯಾವ, **ತ್ರಿಲೋಕಾನಾಂ ಪತಿಃ** = ಮೂರು ಲೋಕದ ಒಡೆಯನಾದ, **ಶಕ್ರದೇವಃ** = ಇಂದ್ರನಿದ್ದಾನೋ, **ತದಾಜ್ಞಾಂ** = ಅವನ ಅಪ್ಪಣೆಯನ್ನು, **ಮಾನಯಾಮಃ** = ಮನ್ನಿಸುತ್ತೇವೆ, **ಮಾನುಷಾಣಾಂ** = ಮನುಷ್ಯರಲ್ಲಿ, **ಚಕ್ರವರ್ತಿನಾಂ** = ಚಕ್ರವರ್ತಿಗಳಾದ ಭರತಾದಿಗಳ, (**ಆಜ್ಞಾಂ**) **ಅಪಿ** (**ನ ಮಾನಯಾಮಃ**) = ಆಜ್ಞೆಯನ್ನೂ ಮನ್ನಿಸುವುದಿಲ್ಲ (ಹೀಗಿರುವಾಗ), **ಅಲ್ಪಸಾರಸ್ಯ** = ದುರ್ಬಲನಾದ, **ಸುಯೋಧನಸ್ಯ** = ದುರ್ಯೋಧನನ (ಆಜ್ಞೆ), **ಕಿಮು** = ಎಷ್ಟು.

ತಾತ್ಪರ್ಯ :- ನಾವು ತ್ರಿಲೋಕಾಧಿಪತಿಯಾದ ದೇವೇಂದ್ರನ ಆಜ್ಞೆಯನ್ನು ಮನ್ನಿಸುವವರು, ಮನುಷ್ಯಚಕ್ರವರ್ತಿಗಳ ಅಪ್ಪಣೆಯನ್ನೂ ಮನ್ನಿಸುವುದಿಲ್ಲ ಎಂದ ಮೇಲೆ ನಮಗಿಂತ ಅತ್ಯಂತ ದುರ್ಬಲನಾದ ದುರ್ಯೋಧನನ ಆಜ್ಞೆ ನಮಗೆ ಯಾವ ಲೆಕ್ಕ.

**ಇತೀರಿತೇ ಕುಪಿತೋ ಧಾರ್ತರಾಷ್ಟ್ರೋ**
**ಜಘಾನ ಗಂಧರ್ವವರಾನ್ ಶರೌಘೈಃ ।**

ಜಘ್ನುಃ ಸಕರ್ಣಾ ಅಪಿ ತಸ್ಯ ಸೋದರಾ
ಜಘ್ನುಶ್ಚತೇ ಧಾರ್ತರಾಷ್ಟ್ರಸ್ಯ ಸೇನಾಮ್ ॥ ೩೮೩ ॥

ಪದಚ್ಛೇದ :- ಇತಿ, ಈರಿತೇ, ಕುಪಿತಃ, ಧಾರ್ತರಾಷ್ಟ್ರಃ, ಜಘಾನ, ಗ್ರಂಧರ್ವವರಾನ್, ಶರೌಘೈಃ, ಜಘ್ನುಃ, ಸಕರ್ಣಾಃ, ಅಪಿ, ತಸ್ಯ, ಸೋದರಾಃ, ಜಘ್ನುಃ, ಚ, ತೇ, ಧಾರ್ತರಾಷ್ಟ್ರಸ್ಯ, ಸೇನಾಂ।

ಅರ್ಥ :- ಇತಿ = ಹೀಗೆ, ಈರಿತೇ = ಹೇಳಲ್ಪಟ್ಟಾಗ, ಕುಪಿತಃ = ಕೋಪಗೊಂಡ, ಧಾರ್ತರಾಷ್ಟ್ರಃ = ದುರ್ಯೋಧನನು, ಗಂಧರ್ವವರಾನ್ = ಗಂಧರ್ವಶ್ರೇಷ್ಠರನ್ನು, ಶರೌಘೈಃ = ಬಾಣ ಪ್ರವಾಹಗಳಿಂದ, ಜಘಾನ = ಹಿಂಸಿಸಿದನು, ತಸ್ಯ = ದುರ್ಯೋಧನನ, ಸೋದರಾಃ ಅಪಿ = ದುಃಶಾಸನ ಮೊದಲಾದ ತೊಂಬತ್ತೊಂಬತ್ತು ತಮ್ಮಂದಿರೂ ಕೂಡ, ಸಕರ್ಣಾಃ = ಕರ್ಣನೊಡಗೂಡಿ, ಜಘ್ನುಃ = ಹಿಂಸಿಸಿದರು, ತೇ ಚ = ಆ ಗಂಧರ್ವಶ್ರೇಷ್ಠರೂ ಕೂಡ, ಧಾರ್ತರಾಷ್ಟ್ರಸ್ಯ = ದುರ್ಯೋಧನನ, ಸೇನಾಂ = ಸೇನೆಯನ್ನು, ಜಘ್ನುಃ = ಸಂಹರಿಸಿದರು.

ತಾತ್ಪರ್ಯ :- ಹೀಗೆ ಹೇಳಿದಾಗ ಕುಪಿತನಾದ ದುರ್ಯೋಧನ ಗಂಧರ್ವ ಪ್ರಮುಖರನ್ನು ಬಾಣಪ್ರವಾಹದಿಂದ ಹೊಡೆದ. ಅವನ ಸೋದರರೂ ಕರ್ಣನೂ ಅವರನ್ನು ಹೊಡೆದನು. ಅದಕ್ಕೆ ಪ್ರತಿಯಾಗಿ ಗಂಧರ್ವರೂ ದುರ್ಯೋಧನನ ಸೇನೆಯನ್ನು ಹೊಡೆದರು.

ಮುಹೂರ್ತಮಾಸೀತ್ ಸಮಮೇವ ಯುದ್ಧಂ
ತೇಷಾಂ ತದಾ ಧಾರ್ತರಾಷ್ಟ್ರಸ್ಯ ಚೈವ ।
ಪುರಾಂಭಿಂದೋರ್ವರತೋ ಮಾಯಯಾ ಚ
ಗಂಧರ್ವವೀರಾ ವವೃಧುಸ್ತತಃ ಸ್ಮ ॥ ೩೮೪ ॥

ಪದಚ್ಛೇದ :- ಮುಹೂರ್ತಂ, ಆಸೀತ್, ಸಮಂ, ಏವ, ಯುದ್ಧಂ, ತೇಷಾಂ, ತದಾ, ಧಾರ್ತರಾಷ್ಟ್ರಸ್ಯ, ಚ, ಏವ, ಪುರಾಂಭಿಂದೋಃ, ವರತಃ, ಮಾಯಯಾ, ಚ, ಗಂಧರ್ವವೀರಾಃ, ವವೃಧುಃ, ತತಃ, ಸ್ಮ।

ಅರ್ಥ :- ತದಾ = ಆವಾಗ, ಧಾರ್ತರಾಷ್ಟ್ರಸ್ಯ = ದುರ್ಯೋಧನನ ಕಡೆಯವರ, ಚ = ಮತ್ತು, ತೇಷಾಂ = ಗಂಧರ್ವರ, ಯುದ್ಧಂ = ಯುದ್ಧವು,

**ಮುಹೂರ್ತಂ ಏವ** = ಸ್ವಲ್ಪಕಾಲವಷ್ಟೇ, **ಸಮಂ ಏವ** = ಸಮವೆಂಬಂತೆ, **ಆಸೀತ್** = ಇದ್ದಿತು, **ತತಃ** = ಅನಂತರ, **ಗಂಧರ್ವವೀರಾಃ** = ಗಂಧರ್ವವೀರರು, **ಪುರಾಂಭಿಂದೋಃ** = ಇಂದ್ರನ, **ವರತಃ** = ವರಬಲದಿಂದ, **ಚ** = ಮತ್ತು, **ಮಾಯಯಾ** = ತಮ್ಮ ಮಾಯೆಯಿಂದ, **ವವೃಧುಃ ಸ್ಮ** = (ಪಾಂಡವರ ಪ್ರೀತಿಗಾಗಿ) ಬೆಳೆದರು.

ತಾತ್ಪರ್ಯ :- ಸ್ವಲ್ಪಕಾಲದವರೆಗೂ ಗಂಧರ್ವರಿಗೂ ದುರ್ಯೋಧನನಿಗೂ ಯುದ್ಧ ಸಮವೆಂಬಂತೆ (ಸ್ವಲ್ಪ ಮಟ್ಟಿಗೆ ಸಮಾನವು) ಆಯಿತು. ಬಳಿಕ ದೇವೇಂದ್ರನ ವರದಿಂದಲೂ ಮಾಯೆಯಿಂದಲೂ ಗಂಧರ್ವವೀರರ ಕೈ ಮೇಲಾಯಿತು.

ವಿಶೇಷಾಂಶ :- 'ಏವ' ಶಬ್ದಕ್ಕೆ 'ಎಂಬಂತೆ' ಹಾಗೂ 'ಸ್ವಲ್ಪ' ಎಂಬ ಅರ್ಥಗಳೂ ಇವೆ. ''ಏವೌಪಮ್ಯೇ ಪರಿಭವೇ ಈಷದರ್ಥೇऽವಧಾರಣೇ'' ಎಂದು 'ಅಭಿಧಾನ' (೨) 'ಪುರಾಂಭಿಂದು' ಎಂದರೆ 'ಶಂಬರ ಪುರಗಳನ್ನು ಭೇದಿಸಿದವ' ಎಂದರ್ಥ.

**ತೇಜೋಭಂಗಂ ತತ್ರ ಸುಯೋಧನಸ್ಯ**
**ಪಾರ್ಥಾರ್ಥಮತ್ರ ಪ್ರವಿಧಾತುಮೇವ ಚ ।**
**ಬಲಂ ದದಾವಬ್ಜಜಃ ಕೇಶವಶ್ಚ**
**ಗಂಧರ್ವಾಣಾಂ ತೇऽಭ್ಯಯುರ್ಧಾರ್ತರಾಷ್ಟ್ರಾನ್ ॥ ೩೮೫ ॥**

ಪದಚ್ಛೇದ :- **ತೇಜೋಭಂಗಂ, ತತ್ರ, ಸುಯೋಧನಸ್ಯ, ಪಾರ್ಥಾರ್ಥಂ, ಅತ್ರ, ಪ್ರವಿಧಾತುಂ, ಏವ, ಬಲಂ, ದದೌ, ಅಬ್ಜಜಃ, ಕೇಶವಃ, ಚ, ಗಂಧರ್ವಾಣಾಂ, ತೇ, ಅಭ್ಯಯುಃ, ಧಾರ್ತರಾಷ್ಟ್ರಾನ್ ।**

ಅರ್ಥ :- **ತತ್ರ** = ಆ ದ್ವೈತವನದಲ್ಲಿ, **ಪಾರ್ಥಾರ್ಥಂ** = ಪಾಂಡವರ ಯಶೋವೃದ್ಧಿ ಮೊದಲಾದವುಗಳಿಗೋಸ್ಕರ, **ಅತ್ರ** = ಈ ಯುದ್ಧದಲ್ಲಿ, **ಸುಯೋಧನಸ್ಯ** = ದುರ್ಯೋಧನನ, **ತೇಜೋಭಂಗಂ** = ತೇಜೋವಧೆಯನ್ನು, **ಪ್ರವಿಧಾತುಂ ಏವ** = ಪಾಂಡವರ ಎದುರಿನಲ್ಲಿ ಮಾಡುವುದಕ್ಕಾಗಿಯೇ, **ಅಬ್ಜಜಃ** = ಚತುರ್ಮುಖನು, **ಚ** = ಮತ್ತು, **ಕೇಶವಃ** = ಕೃಷ್ಣನೂ, **ಗಂಧರ್ವಾಣಾಂ** = ಗಂಧರ್ವರಿಗೆ, **ಬಲಂ** = ಬಲವನ್ನು, **ದದೌ**

= ಕೊಟ್ಟನು, ತೇ = ಅಂತಹ ಬಲಿಷ್ಠರಾದ ಗಂಧರ್ವರು, ಧಾರ್ತರಾಷ್ಟ್ರಾನ್ = ಕೌರವರನ್ನು, ಅಭ್ಯಯುಃ = ಆಕ್ರಮಿಸಿದರು.

**ತಾತ್ಪರ್ಯ** :- ಪಾಂಡವರ ಧರ್ಮವೃದ್ಧಿ ಯಶೋವೃದ್ಧಿಗಾಗಿ ದುರ್ಯೋಧನನ ತೇಜೋವಧೆ ಮಾಡುವುದಕ್ಕಾಗಿಯೇ ಶ್ರೀಹರಿಯೂ ಬ್ರಹ್ಮನೂ ಗಂಧರ್ವರಿಗೆ ಈ ಯುದ್ಧದಲ್ಲಿ ಮಾತ್ರ ವಿಶೇಷ ಶಕ್ತಿ ನೀಡಿದರು. ಅಂತಹ ಗಂಧರ್ವರು ಕೌರವರನ್ನು ಆಕ್ರಮಿಸಿದರು.

**ಸ ಚಿತ್ರಸೇನಃ ಪ್ರಥಮಂ ಕರ್ಣಮೇವ**
**ಯುಯೋಧ ಪಾರ್ಥಸ್ಪರ್ಧಯಾ ತೇನ ಯುದ್ಧ್ಯನ್ ।**
**ಕರ್ಣೋ ನಾಶಕ್ನೋದ್ ವಚನಾದ್ ಭಾರ್ಗವಸ್ಯ**
**ರಾಮಸ್ಯ ನಿತ್ಯಾಮಿತಷಡ್‌ಗುಣಸ್ಯ ॥ ೩೮೬ ॥**

**ಪದಚ್ಛೇದ** :- ಸಃ, ಚಿತ್ರಸೇನಃ, ಪ್ರಥಮಂ, ಕರ್ಣಂ, ಏವ, ಯುಯೋಧ, ಪಾರ್ಥಸ್ಪರ್ಧಯಾ, ತೇನ, ಯುದ್ಧ್ಯನ್, ಕರ್ಣಃ, ನ, ಅಶಕ್ನೋದ್, ವಚನಾದ್, ಭಾರ್ಗವಸ್ಯ, ರಾಮಸ್ಯ, ನಿತ್ಯಾಮಿತಷಡ್ಗುಣಸ್ಯ ।

**ಅರ್ಥ** :- **ಸಃ ಚಿತ್ರಸೇನಃ** = ಆ ಚಿತ್ರಸೇನನು, **ಪ್ರಥಮಂ** = ಮೊದಲು, **ಕರ್ಣಂ ಏವ** = ಕರ್ಣನೊಂದಿಗೆ, **ಯುಯೋಧ** = ಯುದ್ಧ ಮಾಡಿದನು, **ಪಾರ್ಥಸ್ಪರ್ಧಯಾ** = ಪಾಂಡವರಿಗೆ ತಮ್ಮ ಐಶ್ವರ್ಯವನ್ನು ತೋರಿಸಬೇಕೆಂಬ ಇಚ್ಛೆ ರೂಪವಾದ ಸ್ಪರ್ಧೆಯಿಂದ, **ತೇನ** = ಚಿತ್ರರಥನೊಂದಿಗೆ, **ಯುದ್ಧ್ಯನ್** = ಯುದ್ಧ ಮಾಡುತ್ತಾ, **ಕರ್ಣಃ** = ಕರ್ಣನು, **ನಿತ್ಯಾಮಿತಷಡ್ಗುಣಸ್ಯ** = ನಿತ್ಯವಾದ ಅನಂತವಾದ ಜ್ಞಾನಾನಂದಾದಿ ಷಡ್ಗುಣಸಂಪನ್ನನಾದ, **ಭಾರ್ಗವಸ್ಯ ರಾಮಸ್ಯ** = ಪರಶುರಾಮನ, **ವಚನಾದ್** = 'ಸ್ಪರ್ಧೆಯಿಂದ ಯುದ್ಧ ಮಾಡುವ ನೀನು ಸೋಲನ್ನನುಭವಿಸುವಿ' ಎಂಬ ಮಾತಿನಿಂದ, **ನ ಅಶಕ್ನೋದ್** = (ಯುದ್ಧ ಮಾಡಲು) ಶಕ್ತನಾಗಲಿಲ್ಲ.

**ತಾತ್ಪರ್ಯ** :- ಚಿತ್ರಸೇನ ಪ್ರಥಮವಾಗಿ ಕರ್ಣನೊಡನೆ ಹೋರಾಡಿದ ಆಗ ಕರ್ಣ ಪಾಂಡವರಿಗೆ ತಮ್ಮ ಐಶ್ವರ್ಯವನ್ನು ತೋರಿಸಬೇಕೆಂಬ ಸ್ಪರ್ಧಾಮನೋಭಾವದಿಂದಲೇ ಯುದ್ಧ ಮಾಡುತ್ತಿದ್ದುದರಿಂದ ನಿತ್ಯ ಅಪರಿಮಿತ ಜ್ಞಾನ, ಶಕ್ತಿ ಮೊದಲಾದ ಷಡ್ಗುಣ ಸಂಪನ್ನನಾದ ಪರಶುರಾಮನ ಶಾಪದಿಂದ ಚಿತ್ರಸೇನನನ್ನು ಗೆಲ್ಲಲು ಸಮರ್ಥನಾಗಲಿಲ್ಲ.

ಸ ಭಗ್ನಯಾನಶ್ಚ ವಿಕರ್ಣಯಾನ-
ಮಾಸ್ಥಾಯ ತಸ್ಯೈವ ನಿಯಮ್ಯ ವಾಜಿನಃ ।
ಪರಾದ್ರವತ್ ತೇನ ಸಹೈವ ಶೀಘ್ರಂ
ದುರ್ಯೋಧನಶ್ಚಿತ್ರಸೇನಂ ಯುಯೋಧ ॥ ೩೮೭ ॥

ಪದಚ್ಛೇದ :– ಸಃ, ಭಗ್ನಯಾನಃ, ಚ, ವಿಕರ್ಣಯಾನಂ, ಆಸ್ಥಾಯ, ತಸ್ಯ, ಏವ, ನಿಯಮ್ಯ, ವಾಜಿನಃ, ಪರಾದ್ರವತ್, ತೇನ, ಸಹ, ಏವ, ಶೀಘ್ರಂ, ದುರ್ಯೋಧನಃ, ಚಿತ್ರಸೇನಂ, ಯುಯೋಧ ।

ಅರ್ಥ :- ಭಗ್ನಯಾನಃ = ನಷ್ಟವಾದ ರಥವುಳ್ಳ, ಸಃ ಚ = ಕರ್ಣನಾದರೂ, ವಿಕರ್ಣಯಾನಂ = (ಧೃತರಾಷ್ಟ್ರನ ಮಗನಾದ) ವಿಕರ್ಣನ ರಥವನ್ನು, ಆಸ್ಥಾಯ = ಏರಿ, ತಸ್ಯ = ವಿಕರ್ಣರಥದ, ವಾಜಿನಃ ಏವ = ಕುದುರೆಗಳನ್ನೇ, ನಿಯಮ್ಯ = (ಚಾಟಿ ಎಟು ಮೊದಲಾದವುಗಳಿಂದ) ಪ್ರೇರಿಸಿ, ತೇನ ಸಹ ಏವ = ಆ ವಿಕರ್ಣನೊಂದಿಗೇನೇ, ಪರಾದ್ರವತ್ = ಪಲಾಯನ ಮಾಡಿದನು, ಶೀಘ್ರಂ = ಕೂಡಲೇ, ದುರ್ಯೋಧನಃ = ದುರ್ಯೋಧನನು, ಚಿತ್ರಸೇನಂ = ಚಿತ್ರಸೇನನೊಂದಿಗೆ, ಯುಯೋಧ = ಯುದ್ಧಮಾಡಿದನು.

ತಾತ್ಪರ್ಯ :- ಕರ್ಣ ತನ್ನ ರಥ ನಾಶವಾದಾಗ ವಿಕರ್ಣನ ರಥವನ್ನೇರಿ ವಿಕರ್ಣನ ರಥದ ಕುದುರೆಗಳನ್ನು ತಾನೇ ಸಾರಥಿಯಂತೆ ನಿಯಮಿಸುತ್ತಾ ವಿಕರ್ಣನೊಂದಿಗೆ ಬೇಗನೆ ಪಲಾಯನ ಮಾಡಿದ. ಆಗ ದುರ್ಯೋಧನ ಚಿತ್ರಸೇನನೊಂದಿಗೆ ಯುದ್ಧ ಮಾಡಿದ.

ಮುಹೂರ್ತಮೇನೇನ ಸಮಂ ಸ ಯುಧ್ಯ-
ನ್ನನ್ಯೈರ್ಗಂಧರ್ವೈರ್ಬಹುಭಿರ್ಮಾಯಯೈವ ।
ಭಗ್ನೇ ರಥೇ ಭೂಮಿತಳೇ ಸ್ಥಿತಃ ಸನ್
ಗೃಹೀತ ಆಸೀಚ್ಚಿತ್ರಸೇನೇನ ಸಂಖೇ ॥ ೩೮೮ ॥

ಪದಚ್ಛೇದ :– ಮುಹೂರ್ತಂ, ಏತೇನ, ಸಮಂ, ಸಃ, ಯುದ್ಧ್ಯನ್, ಅನ್ಯೈಃ, ಗಂಧರ್ವೈಃ, ಬಹುಭಿಃ, ಮಾಯಯಾ, ಏವ, ಭಗ್ನೇ, ರಥೇ, ಭೂಮಿತಲೇ, ಸ್ಥಿತಃ, ಸನ್, ಗೃಹೀತಃ, ಆಸೀತ್, ಚಿತ್ರಸೇನೇನ, ಸಂಖ್ಯೇ ।

**ಅರ್ಥ** :- **ಏತೇನ ಸಮಂ** = ಈ ಚಿತ್ರಸೇನನೊಂದಿಗೆ, **ಸಃ** = ಆ ದುರ್ಯೋಧನನು, **ಮುಹೂರ್ತಂ** = ಸ್ವಲ್ಪಕಾಲ, **ಯುದ್ಧ್ಯನ್** = ಯುದ್ಧ ಮಾಡುತ್ತಾ, **ಬಹುಭಿಃ ಅನ್ಯೈಃ ಗಂಧರ್ವೈಃ** = ಬಹುಸಂಖ್ಯೆಯ ಬೇರೆ ಗಂಧರ್ವರಿಂದ, **ಮಾಯಯಾ ಏವ** = ಮಾಯೆಯಿಂದಲೇ, **ರಥೇ** = ರಥವು, **ಭಗ್ನೇ** = ನಾಶಗೊಳಿಸಲ್ಪಟ್ಟಾಗ, **ಭೂಮಿತಲೇ** = ಭೂಮಿಯಲ್ಲಿ, **ಸ್ಥಿತಃ ಸನ್** = ಇರುವವನಾಗಿ, **ಚಿತ್ರಸೇನೇನ** = ಚಿತ್ರಸೇನನಿಂದ, **ಸಂಖ್ಯೆ** = ಯುದ್ಧದಲ್ಲಿ, **ಗೃಹೀತಃ** = ಹಿಡಿಯಲ್ಪಟ್ಟವನು, **ಆಸೀತ್** = ಆದನು.

**ತಾತ್ಪರ್ಯ** :- ಸ್ವಲ್ಪಕಾಲದವರೆಗೆ ದುರ್ಯೋಧನ ಚಿತ್ರಸೇನನೊಡನೆ ಸಮನಾಗಿಯೇ ಯುದ್ಧ ಮಾಡಿದ. ಆದರೆ ಬಹುಸಂಖ್ಯೆಯಲ್ಲಿದ್ದ ಬೇರೆ ಗಂಧರ್ವರಿಂದ ಮಾಯೆಯಿಂದಲೇ ಅವನ ರಥ ಮುರಿಯಲ್ಪಟ್ಟಿತು. ಆಗ ಅವನು ನೆಲದಲ್ಲಿ ನಿಂತವನಾಗಿ ಚಿತ್ರಸೇನನಿಂದ ಯುದ್ಧದಲ್ಲಿ ಸೆರೆ ಹಿಡಿಯಲ್ಪಟ್ಟ.

**ಮಹಾಬಲೋ ಧಾರ್ತರಾಷ್ಟ್ರೋಽಪಿ ಶಕ್ರ-**
**ವರಾದ್ ವಿಷ್ಣೋರಾಜ್ಞಯಾ ಚಾಭಿವೃದ್ಧೇ ।**
**ಸ ಚಿತ್ರಸೇನೇನ ಧೃತಸ್ತದಾಽಽಸೀದ್**
**ಬದ್ಧಃ ಪಾಶೈರ್ವೈದ್ಯುತೈರಿಂದ್ರದತ್ತೈಃ ॥ ೩೮ ॥**

**ಪದಚ್ಛೇದ** :- **ಮಹಾಬಲಃ, ಧಾರ್ತರಾಷ್ಟ್ರಃ, ಅಪಿ, ಶಕ್ರವರಾದ್, ವಿಷ್ಣೋಃ, ಆಜ್ಞಯಾ, ಚ, ಅಭಿವೃದ್ಧೇ, ಸಃ, ಚಿತ್ರಸೇನೇನ, ಧೃತಃ, ತದಾ, ಆಸೀದ್, ಬದ್ಧಃ, ಪಾಶೈಃ, ವೈದ್ಯುತೈಃ, ಇಂದ್ರದತ್ತೈಃ ।**

**ಅರ್ಥ** :- **ಶಕ್ರವರಾದ್** = ಇಂದ್ರನ ವರದಿಂದ, **ಚ** = ಮತ್ತು, **ವಿಷ್ಣೋಃ ಆಜ್ಞಯಾ** = ಪರಮಾತ್ಮನ ಆಜ್ಞೆಯಿಂದ, **ಅಭಿವೃದ್ಧೇ** = (ಚಿತ್ರಸೇನನ ಬಲವು) ಬೆಳೆದಿರಲು, **ಸಃ ಧಾರ್ತರಾಷ್ಟ್ರಃ** = ಆ ದುರ್ಯೋಧನನು, **ಮಹಾಬಲಃ ಅಪಿ** = ಮಹಾಬಲಿಷ್ಠನಾದರೂ, (**ಯದಾ** = ಯಾವಾಗ), **ಚಿತ್ರಸೇನೇನ** = ಚಿತ್ರಸೇನನಿಂದ, **ಧೃತಃ** = ಹಿಡಿಯಲ್ಪಟ್ಟನೋ, **ತದಾ** = ಆವಾಗ, **ಇಂದ್ರದತ್ತೈಃ** = ಇಂದ್ರನಿಂದ ಕೊಡಲ್ಪಟ್ಟ, **ವೈದ್ಯುತೈಃ** = ವಿದ್ಯುದ್ದೇವತೆಯಿಂದ ಅಭಿಮನ್ಯಮಾನವಾದ, **ಪಾಶೈಃ** = ಪಾಶಗಳಿಂದ, **ಬದ್ಧಃ** = ಕಟ್ಟಲ್ಪಟ್ಟವನು, **ಆಸೀತ್** = ಆದನು.

ತಾತ್ಪರ್ಯ :- ಇಂದ್ರನ ವರದಿಂದಲೂ ಹರೀಚ್ಛೆಯಿಂದಲೂ ಬಲಪೂರ್ಣನಾಗಿದ್ದ ಚಿತ್ರಸೇನ. ಅವನಿಂದ ಮಹಾಬಲನಾದ ದುರ್ಯೋಧನನೂ ಇಂದ್ರದತ್ತವಾದ ವಿದ್ಯುತ್‌ಪಾಶಗಳಲ್ಲಿ ಸೆರೆ ಹಿಡಿಯಲ್ಪಟ್ಟ.

ವಿಶೇಷಾಂಶ :- ಈ ವಿದ್ಯುತ್ ಪಾಶಗಳು ಸ್ಪರ್ಶಮಾತ್ರದಿಂದಲೂ ಸಂತಾಪಕಗಳಾಗಿದ್ದವು.

**ತಸ್ಯಾನುಜಾಃ ಶಕುನೀ ರಾಜಭಾರ್ಯಾಃ**
**ಸರ್ವೇ ಬದ್ಧಾಃ ಶಕ್ರಭೃತ್ಯೈಃ ಪ್ರಣೀತಾಃ ।**
**ಆದಾಯ ತಾನಂಬರಂ ಸಂಪ್ರಯಾತೇ-**
**ಷ್ವರೂರುವನ್ ಪಾಂಡವಾನ್ ಮಂತ್ರಿಣೋಽಸ್ಯ ॥ ೩೯೦ ॥**

**ಪದಚ್ಛೇದ :- ತಸ್ಯ, ಅನುಜಾಃ, ಶಕುನಿಃ, ರಾಜಭಾರ್ಯಾಃ, ಸರ್ವೇ, ಬದ್ಧಾಃ, ಶಕ್ರದೂತೈಃ, ಪ್ರಣೀತಾಃ, ಆದಾಯ, ತಾನ್, ಅಂಬರೇ, ಸಂಪ್ರಯಾತೇಷು, ಅರೂರುವನ್, ಪಾಂಡವಾನ್, ಮಂತ್ರಿಣಃ, ಅಸ್ಯ ।**

**ಅರ್ಥ** :- **ತಸ್ಯ** = ಆ ದುರ್ಯೋಧನನ, **ಸರ್ವೇ ಅನುಜಾಃ** = ಎಲ್ಲ ತಮ್ಮಂದಿರು, **ಶಕುನಿಃ** = ಶಕುನಿಯು, **ರಾಜಭಾರ್ಯಾಃ** = ದುರ್ಯೋಧನ ಮೊದಲಾದವರ ಹೆಂಡಂದಿರು, **ಬದ್ಧಾಃ** = ಕಟ್ಟಲ್ಪಟ್ಟವರಾಗಿ, **ಶಕ್ರದೂತೈಃ** = ಗಂಧರ್ವರುಗಳಿಂದ, **ಪ್ರಣೀತಾಃ** = (ತಮ್ಮ ಲೋಕವನ್ನು ಕುರಿತು) ಎಳೆದೊಯ್ಯಲ್ಪಟ್ಟರು, **ತಾನ್** = ದುರ್ಯೋಧನ ಮೊದಲಾದವರನ್ನು, **ಆದಾಯ** = ಹಿಡಿದು, **ಅಂಬರೇ** = ಆಕಾಶದಲ್ಲಿ, (**ಗಂಧರ್ವೇಷು** = ಗಂಧರ್ವರು), **ಸಂಪ್ರಯಾತೇಷು** = ಹೋಗಲು, **ಅಸ್ಯ** = ದುರ್ಯೋಧನನ, **ಮಂತ್ರಿಣಃ** = ಮಂತ್ರಿಗಳು, **ಪಾಂಡವಾನ್** = ಪಾಂಡವರನ್ನು ಕುರಿತು, **ಅರೂರುವನ್** = ಬೇಡಿಕೊಂಡರು.

ತಾತ್ಪರ್ಯ :- ದುರ್ಯೋಧನನ ತಮ್ಮಂದಿರನ್ನೂ ಶಕುನಿಯನ್ನೂ ರಾಣಿಯರನ್ನೂ ಎಲ್ಲರನ್ನೂ ಇಂದ್ರನ ಭೃತ್ಯರು ಕಟ್ಟಿ ಸೆಳೆದೊಯ್ದರು. ಅವರು ಎಲ್ಲರನ್ನೂ ಹಿಡಿದುಕೊಂಡು ಆಕಾಶದಲ್ಲಿ ವಿಜಯಸಂತಸದಿಂದ ಹೋಗುತ್ತಿದ್ದಾಗ ದುರ್ಯೋಧನನ ಮಂತ್ರಿಗಳು ಪಾಂಡವರಿದ್ದಲ್ಲಿಗೆ ಬಂದು ಗೋಳಾಡಿದರು.

**ಅರ್ಥ** :- **ಏತೇನ ಸಮಂ** = ಈ ಚಿತ್ರಸೇನನೊಂದಿಗೆ, **ಸಃ** = ಆ ದುರ್ಯೋಧನನು, **ಮುಹೂರ್ತಂ** = ಸ್ವಲ್ಪಕಾಲ, **ಯುಧ್ಯನ್** = ಯುದ್ಧ ಮಾಡುತ್ತಾ, **ಬಹುಭಿಃ ಅನ್ಯೈಃ ಗಂಧರ್ವೈಃ** = ಬಹುಸಂಖ್ಯೆಯ ಬೇರೆ ಗಂಧರ್ವರಿಂದ, **ಮಾಯಯಾ ಏವ** = ಮಾಯೆಯಿಂದಲೇ, **ರಥೇ** = ರಥವು, **ಭಗ್ನೇ** = ನಾಶಗೊಳಿಸಲ್ಪಟ್ಟಾಗ, **ಭೂಮಿತಲೇ** = ಭೂಮಿಯಲ್ಲಿ, **ಸ್ಥಿತಃ ಸನ್** = ಇರುವವನಾಗಿ, **ಚಿತ್ರಸೇನೇನ** = ಚಿತ್ರಸೇನನಿಂದ, **ಸಂಖ್ಯೇ** = ಯುದ್ಧದಲ್ಲಿ, **ಗೃಹೀತಃ** = ಹಿಡಿಯಲ್ಪಟ್ಟವನು, **ಆಸೀತ್** = ಆದನು.

**ತಾತ್ಪರ್ಯ** :- ಸ್ವಲ್ಪಕಾಲದವರೆಗೆ ದುರ್ಯೋಧನ ಚಿತ್ರಸೇನನೊಡನೆ ಸಮನಾಗಿಯೇ ಯುದ್ಧ ಮಾಡಿದ. ಆದರೆ ಬಹುಸಂಖ್ಯೆಯಲ್ಲಿದ್ದ ಬೇರೆ ಗಂಧರ್ವರಿಂದ ಮಾಯೆಯಿಂದಲೇ ಅವನ ರಥ ಮುರಿಯಲ್ಪಟ್ಟಿತು. ಆಗ ಅವನು ನೆಲದಲ್ಲಿ ನಿಂತವನಾಗಿ ಚಿತ್ರಸೇನನಿಂದ ಯುದ್ಧದಲ್ಲಿ ಸೆರೆ ಹಿಡಿಯಲ್ಪಟ್ಟ.

**ಮಹಾಬಲೋ ಧಾರ್ತರಾಷ್ಟ್ರೋಽಪಿ ಶಕ್ರ-**
**ವರಾದ್ ವಿಷ್ಣೋರಾಜ್ಞಯಾ ಚಾಭಿವೃದ್ಧೇ ।**
**ಸ ಚಿತ್ರಸೇನೇನ ಧೃತಸ್ತದಾಽಽಸೀದ್**
**ಬದ್ಧಃ ಪಾಶೈರ್ವೈದ್ಯುತೈರಿಂದ್ರದತ್ತೈಃ ॥ ೩೮ ॥**

**ಪದಚ್ಛೇದ** :- **ಮಹಾಬಲಃ, ಧಾರ್ತರಾಷ್ಟ್ರಃ, ಅಪಿ, ಶಕ್ರವರಾದ್, ವಿಷ್ಣೋಃ, ಆಜ್ಞಯಾ, ಚ, ಅಭಿವೃದ್ಧೇ, ಸಃ, ಚಿತ್ರಸೇನೇನ, ಧೃತಃ, ತದಾ, ಆಸೀದ್, ಬದ್ಧಃ, ಪಾಶೈಃ, ವೈದ್ಯುತೈಃ, ಇಂದ್ರದತ್ತೈಃ ।**

**ಅರ್ಥ** :- **ಶಕ್ರವರಾದ್** = ಇಂದ್ರನ ವರದಿಂದ, **ಚ** = ಮತ್ತು, **ವಿಷ್ಣೋಃ ಆಜ್ಞಯಾ** = ಪರಮಾತ್ಮನ ಆಜ್ಞೆಯಿಂದ, **ಅಭಿವೃದ್ಧೇ** = (ಚಿತ್ರಸೇನನ ಬಲವು) ಬೆಳೆದಿರಲು, **ಸಃ ಧಾರ್ತರಾಷ್ಟ್ರಃ** = ಆ ದುರ್ಯೋಧನನು, **ಮಹಾಬಲಃ ಅಪಿ** = ಮಹಾಬಲಿಷ್ಠನಾದರೂ, (**ಯದಾ** = ಯಾವಾಗ), **ಚಿತ್ರಸೇನೇನ** = ಚಿತ್ರಸೇನನಿಂದ, **ಧೃತಃ** = ಹಿಡಿಯಲ್ಪಟ್ಟನೋ, **ತದಾ** = ಆವಾಗ, **ಇಂದ್ರದತ್ತೈಃ** = ಇಂದ್ರನಿಂದ ಕೊಡಲ್ಪಟ್ಟ, **ವೈದ್ಯುತೈಃ** = ವಿದ್ಯುದ್ದೇವತೆಯಿಂದ ಅಭಿಮನ್ಯಮಾನವಾದ, **ಪಾಶೈಃ** = ಪಾಶಗಳಿಂದ, **ಬದ್ಧಃ** = ಕಟ್ಟಲ್ಪಟ್ಟವನು, **ಆಸೀತ್** = ಆದನು.

ತಾತ್ಪರ್ಯ :- ಇಂದ್ರನ ವರದಿಂದಲೂ ಹರೀಚ್ಛೆಯಿಂದಲೂ ಬಲಪೂರ್ಣನಾಗಿದ್ದ ಚಿತ್ರಸೇನ. ಅವನಿಂದ ಮಹಾಬಲನಾದ ದುರ್ಯೋಧನನೂ ಇಂದ್ರದತ್ತವಾದ ವಿದ್ಯುತ್‌ಪಾಶಗಳಲ್ಲಿ ಸೆರೆ ಹಿಡಿಯಲ್ಪಟ್ಟ.

ವಿಶೇಷಾಂಶ :- ಈ ವಿದ್ಯುತ್ ಪಾಶಗಳು ಸ್ಪರ್ಶಮಾತ್ರದಿಂದಲೂ ಸಂತಾಪಕಗಳಾಗಿದ್ದವು.

**ತಸ್ಯಾನುಜಾಃ ಶಕುನೀ ರಾಜಭಾರ್ಯಾಃ**
**ಸರ್ವೇ ಬದ್ಧಾಃ ಶಕ್ರಭೃತ್ಯೈಃ ಪ್ರಣೀತಾಃ ।**
**ಆದಾಯ ತಾನಂಬರಂ ಸಂಪ್ರಯಾತೇ-**
**ಷ್ವರೂರುವನ್ ಪಾಂಡವಾನ್ ಮಂತ್ರಿಣೋಽಸ್ಯ ॥ ೩೯೦ ॥**

**ಪದಚ್ಛೇದ :- ತಸ್ಯ, ಅನುಜಾಃ, ಶಕುನಿಃ, ರಾಜಭಾರ್ಯಾಃ, ಸರ್ವೇ, ಬದ್ಧಾಃ, ಶಕ್ರದೂತೈಃ, ಪ್ರಣೀತಾಃ, ಆದಾಯ, ತಾನ್, ಅಂಬರೇ, ಸಂಪ್ರಯಾತೇಷು, ಅರೂರುವನ್, ಪಾಂಡವಾನ್, ಮಂತ್ರಿಣಃ, ಅಸ್ಯ ।**

**ಅರ್ಥ :- ತಸ್ಯ** = ಆ ದುರ್ಯೋಧನನ, **ಸರ್ವೇ ಅನುಜಾಃ** = ಎಲ್ಲ ತಮ್ಮಂದಿರು, **ಶಕುನಿಃ** = ಶಕುನಿಯು, **ರಾಜಭಾರ್ಯಾಃ** = ದುರ್ಯೋಧನ ಮೊದಲಾದವರ ಹೆಂಡಂದಿರು, **ಬದ್ಧಾಃ** = ಕಟ್ಟಲ್ಪಟ್ಟವರಾಗಿ, **ಶಕ್ರದೂತೈಃ** = ಗಂಧರ್ವರುಗಳಿಂದ, **ಪ್ರಣೀತಾಃ** = (ತಮ್ಮ ಲೋಕವನ್ನು ಕುರಿತು) ಎಳೆದೊಯ್ಯಲ್ಪಟ್ಟರು, **ತಾನ್** = ದುರ್ಯೋಧನ ಮೊದಲಾದವರನ್ನು, **ಆದಾಯ** = ಹಿಡಿದು, **ಅಂಬರೇ** = ಆಕಾಶದಲ್ಲಿ, (**ಗಂಧರ್ವೇಷು** = ಗಂಧರ್ವರು), **ಸಂಪ್ರಯಾತೇಷು** = ಹೋಗಲು, **ಅಸ್ಯ** = ದುರ್ಯೋಧನನ, **ಮಂತ್ರಿಣಃ** = ಮಂತ್ರಿಗಳು, **ಪಾಂಡವಾನ್** = ಪಾಂಡವರನ್ನು ಕುರಿತು, **ಅರೂರುವನ್** = ಬೇಡಿಕೊಂಡರು.

ತಾತ್ಪರ್ಯ :- ದುರ್ಯೋಧನನ ತಮ್ಮಂದಿರನ್ನೂ ಶಕುನಿಯನ್ನೂ ರಾಣಿಯರನ್ನೂ ಎಲ್ಲರನ್ನೂ ಇಂದ್ರನ ಭೃತ್ಯರು ಕಟ್ಟಿ ಸೆಳೆದೊಯ್ದರು. ಅವರು ಎಲ್ಲರನ್ನೂ ಹಿಡಿದುಕೊಂಡು ಆಕಾಶದಲ್ಲಿ ವಿಜಯಸಂತಸದಿಂದ ಹೋಗುತ್ತಿದ್ದಾಗ ದುರ್ಯೋಧನನ ಮಂತ್ರಿಗಳು ಪಾಂಡವರಿದ್ದಲ್ಲಿಗೆ ಬಂದು ಗೋಳಾಡಿದರು.

ಸಮೀಪಮಾಗತ್ಯ ಪೃಥಾಸುತಾನಾಂ
ಪರಿಭೂತಂ ವಃ ಕುಲಂ ಶಕ್ರಭೃತ್ಯೈಃ ।
ಧೃತಃ ಸಭಾರ್ಯಃ ಸಾನುಜೋ ಧಾರ್ತರಾಷ್ಟ್ರ-
ಸ್ತಂ ಮೋಚಯಧ್ವಂ ಭ್ರಾತರಂ ಭಾರತಾಗ್ರ್ಯಾಃ ॥ ೩೯೧ ॥

ಪದಚ್ಛೇದ :- ಸಮೀಪಂ, ಆಗತ್ಯ, ಪೃಥಾಸುತಾನಾಂ, ಪರಾಭೂತಂ, ವಃ, ಕುಲಂ, ಶಕ್ರಭೃತ್ಯೈಃ, ಧೃತಃ, ಸಭಾರ್ಯಃ, ಸಾನುಜಃ, ಧಾರ್ತರಾಷ್ಟ್ರಃ, ತಂ, ಮೋಚಯಧ್ವಂ, ಭ್ರಾತರಂ, ಭಾರತಾಗ್ರ್ಯಾಃ ।

ಅರ್ಥ :- ಪೃಥಾಸುತಾನಾಂ = ಪಾಂಡವರ, ಸಮೀಪಂ = ಸಮೀಪಕ್ಕೆ, ಆಗತ್ಯ = ಬಂದು, ವಃ = ನಿಮ್ಮ, ಕುಲಂ = ಕುಲವು, ಶಕ್ರಭೃತ್ಯೈಃ = ಗಂಧರ್ವರಿಂದ, ಪರಾಭೂತಂ = ಸೋಲಿಸಲ್ಪಟ್ಟಿದೆ, ಸಭಾರ್ಯಃ = ಹೆಂಡಂದಿರೊಡಗೂಡಿ, ಸಾನುಜಃ ಧಾರ್ತರಾಷ್ಟ್ರಃ = ತಮ್ಮಂದಿರೊಡನೆ ದುರ್ಯೋಧನನು, ಧೃತಃ = ಸೆರೆ ಹಿಡಿಯಲ್ಪಟ್ಟಿದ್ದಾನೆ, ತಂ = ಆ, ಭ್ರಾತರಂ = ತಮ್ಮನನ್ನು (ದುರ್ಯೋಧನನನ್ನು), ಭಾರತಾಗ್ರ್ಯಾಃ = ಭರತಕುಲಶ್ರೇಷ್ಠರಾದ ಪಾಂಡವರೇ, ಮೋಚಯಧ್ವಂ = ಬಿಡಿಸಿರಿ (ಎಂದು).

ತಾತ್ಪರ್ಯ :- ಇಂದ್ರನ ಸೇವಕರು ನಿಮ್ಮ ಕುಲವನ್ನು ಪರಾಭವಗೊಳಿಸಿರುವರು. ದುರ್ಯೋಧನ ಸಪತ್ನೀಕನಾಗಿ ತಮ್ಮಂದಿರೊಡನೆ ಶತ್ರುಗಳಿಗೆ ಸೆರೆ ಸಿಕ್ಕಿದ್ದಾನೆ. ಭರತವಂಶದ ಶ್ರೇಷ್ಠರಾದ ನೀವು ನಿಮ್ಮ ತಮ್ಮನನ್ನು ಬಿಡಿಸಿಕೊಳ್ಳಿರಿ ಎಂದು.

ಇತ್ಯುಕ್ತ ಊಚೇ ಭೀಮಸೇನೋಽಗ್ರಜಂ ಸ್ವಂ
ಜಾನೇ ರಾಜನ್ ಯಾದೃಶೋಽಯಂ ವಿಮರ್ದಃ ।
ಐಶ್ವರ್ಯಂ ಸ್ವಂ ದರ್ಶಯನ್ ನಃ ಸಮಾಗಾದ್
ದುರ್ಯೋಧನಸ್ತೇಜಸೋ ಭಂಗಮಿಚ್ಛನ್ ॥ ೩೯೨ ॥

ಪದಚ್ಛೇದ :- ಇತಿ, ಉಕ್ತೇ, ಊಚೇ, ಭೀಮಸೇನಃ, ಅಗ್ರಜಂ, ಸ್ವಂ, ಜಾನೇ, ರಾಜನ್, ಯಾದೃಶಃ, ಅಯಂ, ವಿಮರ್ದಃ, ಐಶ್ವರ್ಯಂ, ಸ್ವಂ, ದರ್ಶಯನ್, ನಃ, ಸಮಾಗಾದ್, ದುರ್ಯೋಧನಃ, ತೇಜಸಃ, ಭಂಗಂ, ಇಚ್ಛನ್ ।

**ಅರ್ಥ** :- **ಇತಿ** = ಹೀಗೆಂದು, **ಉಕ್ತೇ** = ಹೇಳಲ್ಪಟ್ಟಾಗ, **ಭೀಮಸೇನ** = ಭೀಮಸೇನನು, **ಸ್ವಂ** = ತನ್ನ, **ಅಗ್ರಜಂ** = ಅಣ್ಣನನ್ನು ಕುರಿತು, **ಊಚೇ** = ಹೇಳಿದನು, **ರಾಜನ್** = ರಾಜನೇ, **ಅಯಂ ವಿಮರ್ದಃ** = ಈ ಯುದ್ಧವು, **ಯಾದೃಶಃ** = ಎಂತಹದ್ದು (ಎಂದು), **ಜಾನೇ** = ತಿಳಿದಿದ್ದೇನೆ, **ಸ್ವಂ** = ತನ್ನ, **ಐಶ್ವರ್ಯಂ** = ಐಶ್ವರ್ಯವನ್ನು, **ದರ್ಶಯನ್** = ತೋರಿಸುತ್ತಾ, **ನಃ** = ನಮ್ಮ, **ತೇಜಸಃ ಭಂಗಂ** = ತೇಜೋಭಂಗವನ್ನು, **ಇಚ್ಛನ್** = ಬಯಸುವವನಾಗಿ, **ದುರ್ಯೋಧನಃ** = ದುರ್ಯೋಧನನು, **ಸಮಾಗಾದ್** = ನಮ್ಮನ್ನು ಕುರಿತು ಬಂದಿದ್ದನು.

**ತಾತ್ಪರ್ಯ** :- ಮಂತ್ರಿಗಳು ಹೀಗೆ ಹೇಳಿದಾಗ ಭೀಮಸೇನ ತನ್ನ ಅಣ್ಣನಿಗೆ ಹೇಳಿದ, ಈ ಯುದ್ಧ ಯಾಕಾಯಿತು ಎಂದು ನನಗೆ ಗೊತ್ತು ನಮ್ಮ ಮುಂದೆ ತನ್ನ ಐಶ್ವರ್ಯವನ್ನು ತೋರಿಸಿ ನಮ್ಮ ತೇಜೋವಧೆ ಮಾಡಲು ದುರ್ಯೋಧನ ಸಪರಿವಾರನಾಗಿ ಬಂದಿದ್ದ.

**ವಿಜ್ಞಾಯ ತೇಷಾಂ ಮಂತ್ರಿತಂ ವಜ್ರಬಾಹು-**
**ರೇತಚ್ಚಕ್ರೇ ನಾತ್ರ ನಃ ಕಾರ್ಯಹಾನಿಃ ।**
**ದಿವ್ಯಂ ಜ್ಞಾನಂ ಸ್ವಾತ್ಮನೋ ದರ್ಶಯನ್ ಸ**
**ಏತಾವದುಕ್ತ್ವಾ ವಿರರಾಮ ಭೀಮಃ ॥ ೩೯೩ ॥**

ಪದಚ್ಛೇದ :- ವಿಜ್ಞಾಯ, ತೇಷಾಂ, ಮಂತ್ರಿತಂ, ವಜ್ರಬಾಹುಃ, ಏತತ್, ಚಕ್ರೇ, ನ, ಅತ್ರ, ನಃ, ಕಾರ್ಯಹಾನಿಃ, ದಿವ್ಯಂ, ಜ್ಞಾನಂ, ಸ್ವಾತ್ಮನಃ, ದರ್ಶಯನ್, ಸಃ, ಏತಾವದ್, ಉಕ್ತ್ವಾ, ವಿರರಾಮ, ಭೀಮಃ ।

**ಅರ್ಥ** :- **ವಜ್ರಬಾಹುಃ** = ಇಂದ್ರನು, **ತೇಷಾಂ** = ಆ ದುರ್ಯೋಧನಾದಿಗಳ, **ಮಂತ್ರಿತಂ** = ವಿಚಾರವನ್ನು, **ವಿಜ್ಞಾಯ** = ತಿಳಿದು, **ಏತತ್** = ಇದನ್ನು, **ಚಕ್ರೇ** = ಮಾಡಿದನು, **ಅತ್ರ** = ಇಲ್ಲಿ, **ನಃ** = ನಮ್ಮ, **ಕಾರ್ಯಹಾನಿಃ** = ಕಾರ್ಯಕ್ಕೆ ಚ್ಯುತಿಯು, **ನ** = ಆಗಿಲ್ಲ, **ಏತಾವದ್** = ಇಷ್ಟನ್ನು, **ಉಕ್ತ್ವಾ** = ಹೇಳಿ, **ಸ್ವಾತ್ಮನಃ** = ತನ್ನ, **ದಿವ್ಯಂ ಜ್ಞಾನಂ** = ದೇವತಾವಿಷಯಕವಾದ ಜ್ಞಾನವನ್ನು, **ದರ್ಶಯನ್** = ತೋರಿಸುತ್ತಾ, **ಭೀಮಃ** = ಭೀಮನು, **ವಿರರಾಮ** = ಸುಮ್ಮನಾದನು.

ತಾತ್ಪರ್ಯ :- ಆ ದುರ್ಯೋಧನ ಮೊದಲಾದವರ ದುರಾಲೋಚನೆಯನ್ನು ತಿಳಿದು ಅವರ ತೇಜೋವಧೆ ಮಾಡಲು ಬಯಸಿದ ಇಂದ್ರ ಈ ಯುದ್ಧವನ್ನು ಉಂಟು ಮಾಡಿದ. ನಮಗೆ ಇದರಿಂದ ಏನೂ ಕಾರ್ಯಹಾನಿ ಇಲ್ಲ. ಹೀಗೆ ಭೀಮನು ತನ್ನ ದಿವ್ಯಜ್ಞಾನವನ್ನು ತೋರುತ್ತಾ ಇಷ್ಟು ಹೇಳಿ ಸುಮ್ಮನಾದ.

ವಿಶೇಷಾಂಶ :- ನಾವು ಮಾಡಬೇಕಾದದ್ದನ್ನು ಗಂಧರ್ವರು ಮಾಡಿದ್ದಾರೆ, ಆದ್ದರಿಂದ ನಮಗೆ ಕಾರ್ಯಹಾನಿ ಆಗಿಲ್ಲ ಎಂದು ಭೀಮನ ಅಭಿಪ್ರಾಯ.

**ಏಕಾಹಯಜ್ಞೇ ದೀಕ್ಷಿತೇನೈವ ರಾಜ್ಞಾ**
**ಸಂಪ್ರೇಷಿತೋ ಭೀಮಸೇನೋಽರ್ಜುನಶ್ಚ ।**
**ಸಮಾದ್ರೇಯೌ ಚಿತ್ರಸೇನಂ ರಣೇ ತೌ**
**ವಿಜಿತ್ಯ ದುರ್ಯೋಧನಮಾಶ್ವಮುಂಚತಾಮ್ ॥ ೩೯೪ ॥**

**ಪದಚ್ಛೇದ :- ಏಕಾಹಯಜ್ಞೇ, ದೀಕ್ಷಿತೇನ, ಏವ, ರಾಜ್ಞಾ, ಸಂಪ್ರೇಷಿತಃ, ಭೀಮಸೇನಃ, ಅರ್ಜುನಃ, ಚ, ಸಮಾದ್ರೇಯೌ, ಚಿತ್ರಸೇನಂ, ರಣೇ, ತೌ, ವಿಜಿತ್ಯ, ದುರ್ಯೋಧನಂ, ಆಶು, ಅಮುಂಚತಾಂ ।**

**ಅರ್ಥ** :- **ಏಕಾಹಯಜ್ಞೇ** = ಒಂದು ದಿನದಲ್ಲಿ ಮುಗಿಯುವ ಯಜ್ಞದಲ್ಲಿ, **ದೀಕ್ಷಿತೇನ** = ದೀಕ್ಷಿತನಾದ, **ರಾಜ್ಞಾ ಏವ** = ರಾಜನಾದ ಯುಧಿಷ್ಠಿರನಿಂದಲೇ, **ಸಂಪ್ರೇಷಿತಃ** = ಕಳುಹಿಸಲ್ಪಟ್ಟ, **ಸಮಾದ್ರೇಯೌ** = ನಕುಲ ಸಹದೇವರಿಂದ ಕೂಡಿದ, **ಭೀಮಸೇನಃ** = ಭೀಮಸೇನನು, **ಚ** = ಮತ್ತು, **ಅರ್ಜುನಃ** = ಅರ್ಜುನನು, **ರಣೇ** = ಯುದ್ಧದಲ್ಲಿ, **ಚಿತ್ರಸೇನಂ** = ಚಿತ್ರಸೇನನನ್ನು, **ವಿಜಿತ್ಯ** = ಗೆದ್ದು, **ಆಶು** = ಕೂಡಲೇ, **ತೌ** = ಆ ಭೀಮಾರ್ಜುನರು, **ದುರ್ಯೋಧನಂ** = ದುರ್ಯೋಧನನನ್ನು, **ಅಮುಂಚತಾಂ** = ಬಂಧಮುಕ್ತಗೊಳಿಸಿದರು.

ತಾತ್ಪರ್ಯ :- ಏಕಾಹಯಜ್ಞದಲ್ಲಿ ದೀಕ್ಷಿತನಾಗಿದ್ದ ಧರ್ಮರಾಜ ಭೀಮಾರ್ಜುನರನ್ನು ನಕುಲ ಸಹದೇವರೊಂದಿಗೆ ಕಳಿಸಿದ. ಅವರು ಚಿತ್ರಸೇನನನ್ನು ಯುದ್ಧದಲ್ಲಿ ಬೇಗನೆ ಗೆದ್ದು, ('ಚಿತ್ರಸೇನ' ಬಿಡೆನು ಎನ್ನುತ್ತಿದ್ದರೂ 'ಅಣ್ಣನಾಜ್ಞೆ' ಎನ್ನುತ್ತಾ ನಗುತ್ತಾ) ದುರ್ಯೋಧನನನ್ನು ಬಿಡಿಸಿಕೊಂಡರು.

ವಿಶೇಷಾಂಶ :- "ಸಾದ್ಯಸ್ಕ" ಎಂಬ ಏಕಾಹಯಜ್ಞದಲ್ಲಿ ದೀಕ್ಷಿತನಾಗಿದ್ದ ಧರ್ಮರಾಜ ನೀವು ಹೋಗದಿದ್ದರೆ ನಾನು ಹೋಗುತ್ತೇನೆ ಎಂದಾಗ ಭೀಮ ಯುದ್ಧಕ್ಕೆ ಹೋದ.

**ಸ ಚಿತ್ರಸೇನೋ ವಾಸವೋಕ್ತಂ ಚ ಸರ್ವಂ**
**ಕುಮಂತ್ರಿತಂ ಧಾರ್ತರಾಷ್ಟ್ರಸ್ಯ ಚಾಽಽಹ ।**
**ಪಾರ್ಥಸ್ಯ ಭೀಮಸ್ಯ ಚ ತನ್ನಿಶಮ್ಯ**
**ಸುವ್ರೀಡಿತೋ ಧೃತರಾಷ್ಟ್ರಾತ್ಮಜೋಽಭೂತ್ ॥ ೩೫ ॥**

**ಪದಚ್ಛೇದ :- ಸಃ, ಚಿತ್ರಸೇನಃ, ವಾಸವೋಕ್ತಂ, ಚ, ಸರ್ವಂ, ಕುಮಂತ್ರಿತಂ, ಧಾರ್ತರಾಷ್ಟ್ರಸ್ಯ, ಚ, ಆಹ, ಪಾರ್ಥಸ್ಯ, ಭೀಮಸ್ಯ, ಚ, ತತ್, ನಿಶಮ್ಯ, ಸುವ್ರೀಡಿತಃ, ಧೃತರಾಷ್ಟ್ರಾತ್ಮಜಃ, ಅಭೂತ್ ।**

**ಅರ್ಥ** :- **ಸಃ** = ಆ, **ಚಿತ್ರಸೇನಃ ಚ** = ಚಿತ್ರಸೇನನಾದರೂ, **ವಾಸವೋಕ್ತಂ** = (ಬಂಧನಾದಿಗಳ ಮೂಲಕ ದುರ್ಯೋಧನಾದಿಗಳ ತೇಜೋಭಂಗ ಮಾಡು ಎಂದು) ಇಂದ್ರನಿಂದ ಹೇಳಲ್ಪಟ್ಟಿದ್ದನ್ನು, **ಚ** = ಮತ್ತು, **ಧಾರ್ತರಾಷ್ಟ್ರಸ್ಯ** = ದುರ್ಯೋಧನನ, **ಸರ್ವಂ** = ಎಲ್ಲ, **ಕುಮಂತ್ರಿತಂ** = ಕೆಟ್ಟ ವಿಚಾರವನ್ನು, **ಪಾರ್ಥಸ್ಯ** = ಅರ್ಜುನನಿಗೆ, **ಚ** = ಮತ್ತು ಭೀಮನಿಗೆ, **ಆಹ** = ಹೇಳಿದನು, **ತತ್** = ಅದನ್ನು, **ನಿಶಮ್ಯ** = ಕೇಳಿ, **ಧೃತರಾಷ್ಟ್ರಾತ್ಮಜಃ** = ದುರ್ಯೋಧನನು, **ಸುವ್ರೀಡಿತಃ** = ತುಂಬಾ ಲಜ್ಜೆಗೊಂಡವನು, **ಅಭೂತ್** = ಆದನು.

ತಾತ್ಪರ್ಯ :- ಚಿತ್ರಸೇನ ಅರ್ಜುನನಿಗೂ ಭೀಮನಿಗೂ ದುರ್ಯೋಧನನ ದುರಾಲೋಚನೆಯನ್ನೂ ಇಂದ್ರನ ಆಜ್ಞೆಯನ್ನೂ ಪೂರ್ತಿಯಾಗಿ ತಿಳಿಸಿದ. ಅದನ್ನು ಕೇಳಿ ಮೊದಲೇ ಪರಾಜಯದಿಂದ ನಾಚಿಕೊಂಡಿದ್ದ ದುರ್ಯೋಧನ ಈಗ ತನ್ನ ಗುಟ್ಟು ರಟ್ಟಾಯಿತೆಂದು ಇನ್ನಷ್ಟು ಲಜ್ಜಿತನಾದ, ಇದಕ್ಕಿಂತ ಸಾವು ಮೇಲು ಎಂದು ಅವನಿಗನಿಸಿತು ಎಂಬುದು ಅಭಿಪ್ರಾಯ.

**ಸಮಾಪ್ಯ ಯಜ್ಞಂ ಚ ತತೋಽಭಿಯಾತಂ**
**ಸರ್ವೇ ಪ್ರಾಪುರ್ಧರ್ಮರಾಜಂ ಸ ಚಾಽಽಖು ।**
**ಸಂಪೂಜ್ಯ ತೂತ್ಸೃಜ್ಯ ಚ ಚಿತ್ರಸೇನ-**
**ಮೂಚೇ ಗಾಂಧಾರೇ ನ ಪುನಃ ಕಾರ್ಯಮೀದೃಕ್ ॥ ೩೬ ॥**

ಪದಚ್ಛೇದ :- ಸಮಾಪ್ಯ, ಯಜ್ಞಂ, ಚ, ತತಃ, ಅಭಿಯಾಂತಂ, ಸರ್ವೇ, ಪ್ರಾಪುಃ, ಧರ್ಮರಾಜಂ, ಸಃ, ಚ, ಆಶು, ಸಂಪೂಜ್ಯ, ತು, ಉತ್ಸೃಜ್ಯ, ಚ, ಚಿತ್ರಸೇನಂ, ಊಚೇ, ಗಾಂಧಾರೇ, ನ ಪುನಃ, ಕಾರ್ಯಂ, ಈದೃಕ್ ।

ಅರ್ಥ :- ಯಜ್ಞಂ = ಯಜ್ಞವನ್ನು, ಸಮಾಪ್ಯ = ಮುಗಿಸಿ, ತತಃ = ಯಜ್ಞಭೂಮಿಯಿಂದ, ಅಭಿಯಾಂತಂ ಚ = ಎದುರಾಗಿ ಬರುತ್ತಲೂ ಇರುವ, ಧರ್ಮರಾಜಂ = ಧರ್ಮರಾಜನನ್ನು, ಸರ್ವೇ = ಭೀಮಾದಿಗಳು, ಪ್ರಾಪುಃ = ಹೊಂದಿದರು, ಸಃ ಚ = ಯುಧಿಷ್ಠಿರನಾದರೂ, ಆಶು = ಕೂಡಲೇ, ಚಿತ್ರಸೇನಂ = ಚಿತ್ರಸೇನನನ್ನು, ಸಂಪೂಜ್ಯ ತು = ವಿಶೇಷವಾಗಿ ಸತ್ಕರಿಸಿ, ಚ = ಮತ್ತು, ಉತ್ಸೃಜ್ಯ = ಬೀಳ್ಕೊಟ್ಟು, ಊಚೇ = (ದುರ್ಯೋಧನನಿಗೆ) ಹೇಳಿದನು, ಗಾಂಧಾರೇ = ಗಾಂಧಾರೀಪುತ್ರನೇ, ಪುನಃ = ಮತ್ತೆ, ಈದೃಕ್ = ಇಂತಹ ಅಸಾಧ್ಯವಾದ ಕೆಲಸವು, ನ ಕಾರ್ಯಂ = ಮಾಡಲ್ಪಡಬಾರದು.

ತಾತ್ಪರ್ಯ :- ಅಷ್ಟರಲ್ಲಿ ಯಜ್ಞವನ್ನು ಮುಗಿಸಿ ಎದುರಿಗೆ ಬಂದ ಧರ್ಮರಾಜನ ಬಳಿಯಲ್ಲಿ ಎಲ್ಲರೂ ಬೇಗನೆ ಬಂದು ಸೇರಿದರು. ಧರ್ಮರಾಜ ಚಿತ್ರಸೇನನನ್ನು ಪ್ರಶಂಸೆಯ ಮೂಲಕ ಸತ್ಕರಿಸಿ ಕಳಿಸಿಕೊಟ್ಟ ದುರ್ಯೋಧನನಿಗೆ 'ನೀನಿನ್ನು ಇಂಥ ಸಾಹಸಕ್ಕೆ ತೊಡಗಬೇಡ' ಎಂದ.

ವಿಶೇಷಾಂಶ :- ಮುಂದೆ ದೇವೇಂದ್ರ ಸಂತುಷ್ಟನಾಗಿ ಯುದ್ಧದಲ್ಲಿ ಮಡಿದ ಗಂಧರ್ವ ಸೈನ್ಯದ ಮೇಲೆ ಅಮೃತದ ಮಳೆಗರೆದು ಬದುಕಿಸಿದ.

**ಸ ಪಾಂಡವೈರ್ಮೋಚಿತಃ ಸಾನುಜಶ್ಚ**
**ಸಭಾರ್ಯಕಃ ಕಿಂಚಿದತೋಽಪಗಮ್ಯ ।**
**ಸಮ್ಮೇಳನಾಯೋಪವಿಷ್ಟಶ್ಚ ತತ್ರ**
**ಸುವ್ರೀಳಿತಃ ಸೂತಪುತ್ರಂ ದದರ್ಶ ॥ ೩೯೭ ॥**

ಪದಚ್ಛೇದ :- ಸಃ, ಪಾಂಡವೈಃ, ಮೋಚಿತಃ, ಸಾನುಜಃ, ಚ, ಸಭಾರ್ಯಕಃ, ಕಿಂಚಿದ್, ಅತಃ, ಅಪಗಮ್ಯ, ಸಮ್ಮೇಲನಾಯ, ಉಪವಿಷ್ಟಃ, ಚ, ತತ್ರ, ಸುವ್ರೀಡಿತಃ, ಸೂತಪುತ್ರಂ, ದದರ್ಶ ।

ಅರ್ಥ :- ಸಭಾರ್ಯಕಃ = ಹೆಂಡಂದಿರೊಡನೆ, ಸಾನುಜಃ ಸಃ = ತಮ್ಮಂದಿರೊಡಗೂಡಿ ದುರ್ಯೋಧನನು, ಪಾಂಡವೈಃ = ಪಾಂಡವರಿಂದ,

**ಮೋಚಿತಃ** = ಬಿಡಿಸಲ್ಪಟ್ಟವನಾಗಿ, **ಅತಃ** = ದ್ವೈತವನದಿಂದ, **ಕಿಂಚಿದ್** = ಸ್ವಲ್ಪ (ಮಾರ್ಗವನ್ನು), **ಅಪಗಮ್ಯ** = ಹೋಗಿ, **ಸಮ್ಮೇಲನಾಯ** = (ಗಂಧರ್ವರಿಂದ ಒಡಿಸಲ್ಪಟ್ಟ ತನ್ನ ಸೇನೆಯು) ಒಂದು ಕಡೆ ಸೇರುವುದಕ್ಕಾಗಿ, **ಉಪವಿಷ್ಟಃ** = ಕುಳಿತವನಾಗಿ, **ಸುವ್ರೀಡಿತಃ ಚ** = ತುಂಬಾ ಲಜ್ಜೆಗೊಂಡವ ನಾಗಿಯೂ, **ಸೂತಪುತ್ರಂ** = ಕರ್ಣನನ್ನು, **ದದರ್ಶ** = ಕಂಡನು.

**ತಾತ್ಪರ್ಯ** :- ದುರ್ಯೋಧನ ಪಾಂಡವರ ಸಹಾಯದಿಂದ ಬಿಡುಗಡೆ ಹೊಂದಿ ಬಹಳ ಲಜ್ಜಿತನಾಗಿ ಸೋದರರೊಂದಿಗೆ ಮತ್ತು ಹೆಂಡಂದಿರೊಂದಿಗೆ ದ್ವೈತವನದಿಂದ ಸ್ವಲ್ಪ ದೂರದವರೆಗೆ ಹೋಗಿ ಮಾರ್ಗದಲ್ಲಿಯೇ ಶುದ್ಧವಾದ ಸ್ಥಳದಲ್ಲಿ ತನ್ನ ಸೈನ್ಯವನ್ನು ಒಟ್ಟುಗೂಡಿಸುವುದಕ್ಕಾಗಿ ಕುಳಿತ ಅಲ್ಲಿಯೇ ಕರ್ಣನನ್ನು ಕಂಡ.

**ಸ ಚಾಽಽಹ ದಿಷ್ಟ್ಯಾ ಜಯಸಿ ರಾಜನ್ನಿತಿ ಸುಯೋಧನಮ್ ।**
**ವ್ರೀಡಿತೋ ನೇತಿ ತಂ ಚೋಕ್ತ್ವಾ ಯಥಾವೃತ್ತಂ ಸುಯೋಧನಃ ।**
**ಉಕ್ತ್ವಾ ಪ್ರಾಯೋಪವೇಶಂ ಚ ಚಕ್ರೇ ತತ್ರ ಸುದುಃಖಿತಃ ।। ೩೯ ।।**

**ಪದಚ್ಛೇದ** :– ಸಃ, ಚ, ಆಹ, ದಿಷ್ಟ್ಯಾ, ಜಯಸಿ, ರಾಜನ್, ಇತಿ, ಸುಯೋಧನಂ, ವ್ರೀಡಿತಃ, ನ, ಇತಿ, ತಂ, ಚ, ಉಕ್ತ್ವಾ, ಯಥಾವೃತ್ತಂ, ಸುಯೋಧನಃ, ಉಕ್ತ್ವಾ, ಪ್ರಾಯೋಪವೇಶಂ, ಚ, ಚಕ್ರೇ, ತತ್ರ, ಸುದುಃಖಿತಃ ।

**ಅರ್ಥ** :- **ಸಃ ಚ** = ಕರ್ಣನಾದರೂ, **ರಾಜನ್** = ರಾಜನೇ, **ದಿಷ್ಟ್ಯಾ** = ದೈವದಿಂದ, **ಜಯಸಿ** = ಜಯ ಹೊಂದುವಿ, **ಇತಿ** = ಎಂದು, **ಸುಯೋಧನಂ** = ದುರ್ಯೋಧನನನ್ನು ಕುರಿತು, **ಆಹ** = ಹೇಳಿದನು, **ವ್ರೀಡಿತಃ** = ಲಜ್ಜೆಗೊಂಡ, **ಸುಯೋಧನಃ** = ದುರ್ಯೋಧನನು, **ತಂ** = ಕರ್ಣನನ್ನು ಕುರಿತು, **ನ ಇತಿ** = ಗೆಲ್ಲಲಿಲ್ಲ ಎಂದು, **ಉಕ್ತ್ವಾ** = ಹೇಳಿ, **ಚ** = ಮತ್ತು, **ಯಥಾವೃತ್ತಂ** = ನಡೆದದ್ದೆಲ್ಲವನ್ನೂ, **ಉಕ್ತ್ವಾ** = ಹೇಳಿ, **ತತ್ರ** = ಪರಾಭವ ವಿಷಯದಲ್ಲಿ, **ಸುದುಃಖಿತಃ** = ತುಂಬಾ ದುಃಖಗೊಂಡವನಾಗಿ, **ಪ್ರಾಯೋಪವೇಶಂ ಚ** = ಮರಣಾಂತ ಉಪವಾಸವನ್ನೂ, **ಚಕ್ರೇ** = ಆರಂಭಿಸಿದನು.

ತಾತ್ಪರ್ಯ :- ಕರ್ಣ ದುರ್ಯೋಧನನಿಗೆ ಹೇಳಿದ. 'ರಾಜನೆ, ಸುದೈವದಿಂದ ನೀನು ಜಯಗಳಿಸಿದೆ' ಎಂದು. ದುರ್ಯೋಧನ ಲಜ್ಜಿತನಾಗಿ ''ಇಲ್ಲ'' ಎಂದು ಹೇಳಿ ಯಥಾವತ್ತಾಗಿ ನಡೆದುದನ್ನು ಹೇಳಿ, ಬಲು ದುಃಖಿತನಾಗಿ ಅಲ್ಲಿಯೇ ಆಮರಣಾಂತ ಉಪವಾಸಕ್ಕೆ ಕುಳಿತ.

**ಕರ್ಣದುಃಶಾಸನಾಭ್ಯಾಂ ಚ ಸೌಬಲೇನ ಚ ದೇವಿನಾ ।**
**ಅನ್ಯೈಶ್ಚ ಯಾಚ್ಯಮಾನೋऽಪಿ ನೈವೋತ್ತಸ್ಥೌ ಸುಯೋಧನಃ ॥ ೩೯ ॥**

**ಪದಚ್ಛೇದ :- ಕರ್ಣದುಃಶಾಸನಾಭ್ಯಾಂ, ಚ, ಸೌಬಲೇನ, ಚ, ದೇವಿನಾ, ಅನ್ಯೈಃ, ಚ, ಯಾಚ್ಯಮಾನಃ, ಅಪಿ, ನ, ಏವ, ಉತ್ತಸ್ಥೌ, ಸುಯೋಧನಃ ।**

ಅರ್ಥ :- **ಕರ್ಣದುಃಶಾಸನಾಭ್ಯಾಂ** = ಕರ್ಣದುಃಶಾಸನರಿಂದ, **ಚ** = ಮತ್ತು, **ದೇವಿನಾ** = ದ್ಯೂತ ಬಲ್ಲ, **ಸೌಬಲೇನ ಚ** = ಶಕುನಿಯಿಂದಲೂ, **ಚ** = ಮತ್ತು, **ಅನ್ಯೈಃ** = ತಮ್ಮಂದಿರೆ ಮೊದಲಾದ ಬೇರೆಯವರಿಂದಲೂ, **ಯಾಚ್ಯಮಾನಃ ಅಪಿ** = ಬೇಡಲ್ಪಟ್ಟವನಾಗಿಯೂ, **ಸುಯೋಧನಃ** = ದುರ್ಯೋಧನನು, **ನ ಏವ ಉತ್ತಸ್ಥೌ** = (ಉಪವಾಸ ಬಿಟ್ಟು) ಏಳಲೇ ಇಲ್ಲ.

ತಾತ್ಪರ್ಯ :- ಕರ್ಣ, ದುಃಶಾಸನ, ಜೂಜುಕೋರನಾದ ಶಕುನಿ, ಮತ್ತು ಇನ್ನಿತರರು ಎಲ್ಲರೂ ಬೇಡಿಕೊಂಡರು. ಆದರೂ ದುರ್ಯೋಧನ ಮೇಲೇಳಲಿಲ್ಲ.

ವಿಶೇಷಾಂಶ :- ದುರ್ಯೋಧನ ಯಾರ ಮಾತನ್ನೂ ಕೇಳದೆ ನೆಲದ ಮೇಲೆ ದರ್ಭೆ ಹಾಸಿ ದರ್ಭೆಯ ಬಟ್ಟೆಯನ್ನು ಉಟ್ಟು ಆಚಮನ ಮಾಡಿ ಮೌನದಿಂದ ಕುಳಿತುಬಿಟ್ಟಿದ್ದ.

**ತತೋ ನಿಶಾಯಾಂ ಪ್ರಾಪ್ತಾಯಾಂ ಸ್ವಪಕ್ಷೇ ಪ್ರವಿಷೀದತಿ ।**
**ಮಂತ್ರಯಿತ್ವಾऽಸುರೈಃ ಕೃತ್ಯಾ ನಿರ್ಮಿತಾ ಹೋಮಕರ್ಮಣಾ ॥ ೪೦೦ ॥**

ಪದಚ್ಛೇದ :- ತತಃ, ನಿಶಾಯಾಂ, ಪ್ರಾಪ್ತಾಯಾಂ, ಸ್ವಪಕ್ಷೇ, ಪ್ರವಿಷೀದತಿ, ಮಂತ್ರಯಿತ್ವಾ, ಅಸುರೈಃ, ಕೃತ್ಯಾ, ನಿರ್ಮಿತಾ, ಹೋಮಕರ್ಮಣಿ ।

ಅರ್ಥ :- ತತಃ = ನಂತರ, ನಿಶಾಯಾಂ = ರಾತ್ರಿಯು, ಪ್ರಾಪ್ತಾಯಾಂ = ಉಂಟಾದಾಗ, ಸ್ವಪಕ್ಷೇ = ತಮ್ಮ ಪಕ್ಷವು, ಪ್ರವಿಷೀದತಿ =

ವಿಷಾದಿಸುತ್ತಿರುವಾಗ, **ಅಸುರೈಃ** = ಅಸುರರಿಂದ, **ಮಂತ್ರಯಿತ್ವಾ** = ಮಂತ್ರಾಲೋಚನೆ ಪೂರ್ವಕವಾಗಿ, **ಹೋಮಕರ್ಮಣಿ** = ಹೋಮ ಕರ್ಮದಲ್ಲಿ, **ಕೃತ್ಯಾ** = ಭೂತವಿಶೇಷವು, **ನಿರ್ಮಿತಾ** = ನಿರ್ಮಿಸಲ್ಪಟ್ಟಿತ್ತು.

**ತಾತ್ಪರ್ಯ** :- ಅಸುರರು ತಮ್ಮ ಪಕ್ಷ ಹೇಗೆ ಬಲಗುಂದಿದಾಗ ರಾತ್ರಿಕಾಲದಲ್ಲಿ ಮಂತ್ರಾಲೋಚನೆ ಮಾಡಿ ಹೋಮಕರ್ಮದಿಂದ ಒಂದು ಭೂತವಿಶೇಷವನ್ನು ನಿರ್ಮಿಸಿದರು.

**ಶುಕ್ರೇಣೋತ್ಪಾದಿತಾ ಕೃತ್ಯಾ ಸಾ ಪ್ರಸುಪ್ತೇಷು ಮಂತ್ರಿಷು ।**
**ಧಾರ್ತರಾಷ್ಟ್ರಂ ಸಮಾದಾಯ ಯಯೌ ಪಾತಾಳಮಾಶು ಚ ।**
**ಅಥ ಸಂಬೋಧಯಾಮಾಸುರ್ದೈತ್ಯಾ ದುರ್ಯೋಧನಂ ನೃಪಮ್ ॥ ೪೦೧ ॥**

**ಪದಚ್ಛೇದ** :- ಶುಕ್ರೇಣ, ಉತ್ಪಾದಿತಾ, ಕೃತ್ಯಾ, ಸಾ, ಪ್ರಸುಪ್ತೇಷು, ಮಂತ್ರಿಷು । ಧಾರ್ತರಾಷ್ಟ್ರಂ, ಸಮಾದಾಯ, ಯಯೌ, ಪಾತಾಲಮ್, ಆಶು, ಚ । ಅಥ, ಸಂಬೋಧಯಾಮಾಸುಃ, ದೈತ್ಯಾಃ, ದುರ್ಯೋಧನಂ, ನೃಪಮ್ ॥

**ಅರ್ಥ** :- **ಶುಕ್ರೇಣ** = ಶುಕ್ರಾಚಾರ್ಯರಿಂದ, **ಉತ್ಪಾದಿತಾ** = ನಿರ್ಮಿಸಲ್ಪಟ್ಟ, **ಸಾ** = ಆಯಾವ, **ಕೃತ್ಯಾ** = ಭೂತ ವಿಶೇಷವು, **ಮಂತ್ರಿಷು** = ದುರ್ಯೋಧನನ ಮಂತ್ರಿಗಳು, **ಪ್ರಸುಪ್ತೇಷು** = ಮಲಗಿರಲು, **ಧಾರ್ತರಾಷ್ಟ್ರಂ** = ದುರ್ಯೋಧನನನ್ನು, **ಸಮಾದಾಯ** = ಎತ್ತಿಕೊಂಡು, **ಆಶು** = ಕೂಡಲೇ, **ಪಾತಾಲಂ** = ಪಾತಾಲವನ್ನು ಕುರಿತು, **ಯಯೌ ಚ** = ಹೋಯಿತೂ ಕೂಡ, **ಅಥ** = ಅನಂತರ, **ದೈತ್ಯಾಃ** = ದೈತ್ಯರು, **ನೃಪಮ್** = ರಾಜನಾದ, **ದುರ್ಯೋಧನಂ** = ದುರ್ಯೋಧನನನ್ನು ಕುರಿತು, **ಸಂಬೋಧಯಾಮಾಸುಃ** = ಉಪದೇಶಿಸಿದರು.

**ತಾತ್ಪರ್ಯ** :- ದುರ್ಯೋಧನನ ಮಂತ್ರಿಗಳು ಮಲಗಿದ್ದಾಗ ಶುಕ್ರಾಚಾರ್ಯರಿಂದ (ಅಥರ್ವಣ ಮಂತ್ರಗಳಿಂದ) ನಿರ್ಮಿಸಲ್ಪಟ್ಟ ಆಕೃತಿಯುಳ್ಳ ಆ ಭೂತವಿಶೇಷವು ದುರ್ಯೋಧನನನ್ನು ಎತ್ತಿಕೊಂಡು ಬೇಗನೆ ಪಾತಾಳವನ್ನು ಸೇರಿತು. ಬಳಿಕ ಅಸುರರು ದುರ್ಯೋಧನನಿಗೆ 'ಭರತಕುಲಭೂಷಣ' 'ರಾಜೇಂದ್ರ' ಎಂದು ಸಂಬೋಧಿಸಿ ಬೋಧಿಸಿದರು. ಅಭಿಮಾನ ಸಹಿತರಾಗಿ.

ತ್ವಂ ದಿವ್ಯಃ ಪುರುಷೋ ವೀರಃ ಸೃಷ್ಟೋಽಸ್ಮಾಭಿಃ ಪ್ರತೋಷಿತಾತ್ ।
ತಪಸಾ ಶಂಕರಾದ್ ವಜ್ರಕಾಯೋಽವಧ್ಯಶ್ಚ ಸರ್ವದಾ ।
ಅಸ್ಮಾಕಂ ಪಕ್ಷಭೂತಸ್ತ್ವಂ ದೇವಾನಾಂ ಚೈವ ಪಾಂಡವಾಃ ॥ ೪೦೨ ॥

ಪದಚ್ಛೇದ :- ತ್ವಂ, ದಿವ್ಯಃ, ಪುರುಷಃ, ವೀರಃ, ಸೃಷ್ಟಃ, ಅಸ್ಮಾಭಿಃ, ಪ್ರತೋಷಿತಾತ್ । ತಪಸಾ, ಶಂಕರಾದ್, ವಜ್ರಕಾಯಃ, ಅವಧ್ಯಃ, ಚ, ಸರ್ವದಾ । ಅಸ್ಮಾಕಂ, ಪಕ್ಷಭೂತಃ, ತ್ವಂ, ದೇವಾನಾಂ, ಚ, ಏವ, ಪಾಂಡವಾಃ ॥

ಅರ್ಥ :- ಅಸ್ಮಾಭಿಃ = ನಮ್ಮಿಂದ, ತಪಸಾ = ತಪಸ್ಸಿನಿಂದ, ಪ್ರತೋಷಿತಾತ್ = ಸಂತೋಷಗೊಳಿಸಲ್ಪಟ್ಟ, ಶಂಕರಾದ್ = ಶಂಕರನಿಂದ, ತ್ವಂ = ನೀನು, ಸೃಷ್ಟಃ = ಸೃಷ್ಟನಾಗಿರುವಿ, (ಆದ್ದರಿಂದಲೇ) ದಿವ್ಯಃ = ಪುರುಷಃ = ಅಲೌಕಿಕ ಪುರುಷನಾಗಿರುವಿ, ವೀರಃ = ಆರಂಭಿಸಿದ್ದನ್ನು ಮುಗಿಸುವವನಾಗಿರುವಿ, ಚ = ಮತ್ತು, ವಜ್ರಕಾಯಃ = ವಜ್ರದೇಹನಾಗಿರುವಿ, ಸರ್ವದಾ = ಯಾವಾಗಲೂ, ಅವಧ್ಯಃ = ಅವಧ್ಯನಾಗಿರುವಿ, ತ್ವಂ = ನೀನು, ಅಸ್ಮಾಕಂ = ನಮ್ಮ ಪಕ್ಷಭೂತಃ = ಪಕ್ಷದವನಾಗಿರುವಿ, ಪಾಂಡವಾಃ ಚ = ಪಾಂಡವರಾದರೂ, ದೇವಾನಾಂ ಏವ = ದೇವತೆಗಳ ಪಕ್ಷದವರೇ ಆಗಿದ್ದಾರೆ.

ತಾತ್ಪರ್ಯ :- ನೀನು ದಿವ್ಯ ಪುರುಷ, ವೀರ. ನಾವು ತಪಸ್ಸಿನಿಂದ ಒಲಿಸಿಕೊಂಡು ಶಿವನ ಮೂಲಕ ನಿನ್ನನ್ನು ವಜ್ರಕಾಯನನ್ನಾಗಿ ಅವಧ್ಯನನ್ನಾಗಿ ಮಾಡಿದ್ದೇವೆ. ನಮ್ಮ ಪಕ್ಷದವನು (ದೊರೆ) ನೀನು. ದೇವತೆಗಳ ಪಕ್ಷದವರು ಪಾಂಡವರು.

ವಿಶೇಷಾಂಶ :- ನಿನ್ನ ನಾಭಿಯ ಮೇಲ್ಭಾಗ ಅಭೇದ್ಯವಾಗಿ ಮಹೇಶ್ವರನಿಂದ ನಿರ್ಮಿತವಾಗಿದೆ. ಕೆಳಭಾಗ ಪುಷ್ಪಮಯವಾಗಿ ಆಕಾರದಲ್ಲಿ ಸ್ತ್ರೀಯರ ಮನಸೆಳೆವಂತೆ ಪಾರ್ವತಿಯಿಂದ ನಿರ್ಮಿತವಾಗಿದೆ. ಎಂದು ಅಸುರರ ಭಾವ.

ಇದಾನೀಂ ಸರ್ವದೇವಾನಾಂ ವರಾತ್ ತ್ವಂ ವಿಜಿತೋ ರಣೇ ।
ವಯಂ ತಥಾ ಕರಿಷ್ಯಾಮೋ ಯಥಾ ಜೇಷ್ಯಸಿ ಪಾಂಡವಾನ್ ॥ ೪೦೩ ॥

ಪದಚ್ಛೇದ :- ಇದಾನೀಂ, ಸರ್ವದೇವಾನಾಂ, ವರಾತ್, ತ್ವಂ, ವಿಜಿತಃ, ರಣೇ । ವಯಂ, ತಥಾ, ಕರಿಷ್ಯಾಮಃ, ಯಥಾ, ಜೇಷ್ಯಸಿ, ಪಾಂಡವಾನ್ ॥

ಅರ್ಥ :- ಇದಾನೀಂ = ಇವಾಗ, ಸರ್ವದೇವಾನಾಂ = ಎಲ್ಲ ದೇವತೆಗಳ, ವರಾತ್ = ವರದಿಂದ, ರಣೇ = ಯುದ್ಧದಲ್ಲಿ, ತ್ವಂ = ನೀನು, ವಿಜಿತಃ = ಸೋತಿರುವಿ, ಯಥಾ = ಹೇಗೆ, ಪಾಂಡವಾನ್ = ಪಾಂಡವರನ್ನು, ಜೇಷ್ಯಸಿ = ಗೆಲ್ಲುವಿಯೋ, ತಥಾ = ಹಾಗೆ, ವಯಂ = ನಾವು, ಕರಿಷ್ಯಾಮಃ = ಮುಂದೆ ಮಾಡುವೆವು.

ತಾತ್ಪರ್ಯ :- ಈಗ ನೀನು ಎಲ್ಲ ದೇವತೆಗಳ ವರದಿಂದ ಪರಾಭವಗೊಂಡಿರುವಿ. ಇನ್ನು ನೀನು ಪಾಂಡವರನ್ನು ಗೆಲ್ಲುವಂತೆ ನಾವು ಮಾಡುವೆವು.

ಕೃಷ್ಣೇನ ನಿಹತಶ್ಚೈವ ನರಕಃ ಕರ್ಣ ಆಸ್ಥಿತಃ ।
ಸ ಚ ಕೃಷ್ಣಾರ್ಜುನಾಭಾವಂ ಕರಿಷ್ಯತಿ ನ ಸಂಶಯಃ ॥ ೪೦೪ ॥

ಪದಚ್ಛೇದ :- ಕೃಷ್ಣೇನ, ನಿಹತಃ, ಚ, ಏವ, ನರಕಃ, ಕರ್ಣೇ, ಆಸ್ಥಿತಃ । ಸಃ, ಚ, ಕೃಷ್ಣಾರ್ಜುನಾಭಾವಂ, ಕರಿಷ್ಯತಿ, ನ, ಸಂಶಯಃ ॥

ಅರ್ಥ :- ಚ = ಮತ್ತು, ಕೃಷ್ಣೇನ = ಕೃಷ್ಣನಿಂದ, ನಿಹಿತಃ = ಸಂಹರಿಸಲ್ಪಟ್ಟ, ನರಕಃ ಏವ = ನರಕಾಸುರನೇ, ಕರ್ಣೇ = ಕರ್ಣನಲ್ಲಿ, ಆಸ್ಥಿತಃ = ಆವಿಷ್ಟನಾಗಿರುವವನು, ಸಃ ಚ = ಆ ನರಕಾವಿಷ್ಟ ಕರ್ಣನಾದರೂ, ಕೃಷ್ಣಾರ್ಜುನಾಭಾವಂ = ಕೃಷ್ಣಾರ್ಜುನರ ನಾಶವನ್ನು, ಕರಿಷ್ಯತಿ = ಮಾಡುವನು, ಸಂಶಯಃ = ಸಂಶಯ, ನ = ಇಲ್ಲ.

ತಾತ್ಪರ್ಯ :- ಕೃಷ್ಣನಿಂದ ಹತನಾದ ನರಕಾಸುರ ಈಗ ಕರ್ಣನಲ್ಲಿ ತಾನೇ ಆವೇಶಗೊಂಡಿದ್ದಾನೆ. ಅವನು ಕೃಷ್ಣಾರ್ಜುನರನ್ನು ನಾಶ ಮಾಡುತ್ತಾನೆ. ಇದರಲ್ಲಿ ಸಂಶಯವಿಲ್ಲ.

ಭೀಷ್ಮಾದೀಂಶ್ಚ ವಯಂ ಸರ್ವಾನಾವಿಶಾಮ ಜಯಾಯ ತೇ ।
ತಪಸಾ ವರ್ಧಯಿಷ್ಯಾಮಸ್ತ್ವಾಂ ಕರ್ಣಾದೀಂಶ್ಚ ಸರ್ವಶಃ ॥ ೪೦೫ ॥

**ಪದಚ್ಛೇದ :- ಭೀಷ್ಮಾದೀನ್, ಚ, ವಯಂ, ಸರ್ವಾನ್, ಆವಿಶಾಮ, ಜಯಾಯ, ತೇ । ತಪಸಾ, ವರ್ಧಯಿಷ್ಯಾಮಃ, ತ್ವಾಂ, ಕರ್ಣಾದೀನ್, ಚ, ಸರ್ವಶಃ ॥**

**ಅರ್ಥ** :- **ಚ** = ಮತ್ತು, **ತೇ** = ನಿನ್ನ, **ಜಯಾಯ** = ಜಯಕ್ಕಾಗಿ, **ಭೀಷ್ಮಾದೀನ್** = ಭೀಷ್ಮ ಮೊದಲಾದ, **ಸರ್ವಾನ್** = ಎಲ್ಲರನ್ನೂ, **ಆವಿಶಾಮ** = ಪ್ರವೇಶಿಸುವೆವು, **ತ್ವಾಂ** = ನಿನ್ನನ್ನು, **ಚ** = ಮತ್ತು, **ಕರ್ಣಾದೀನ್** = ಕರ್ಣ ಮೊದಲಾದವರನ್ನು, **ಸರ್ವಶಃ** = ಎಲ್ಲ ರೀತಿಯಿಂದ, **ತಪಸಾ** = ತಪಸ್ಸಿನ ಮೂಲಕ, **ವರ್ಧಯಿಷ್ಯಾಮಃ** = ಬಲ ಪೂರ್ಣರಾಗಿಸುವೆವು.

**ತಾತ್ಪರ್ಯ** :- ನಿನ್ನ ವಿಜಯಕ್ಕಾಗಿ ನಾವೆಲ್ಲರೂ ಭೀಷ್ಮಾದಿಗಳಲ್ಲಿ ಆವೇಶಗೊಳ್ಳುವೆವು. ತಪಸ್ಸಿನಿಂದ ನಿನ್ನನ್ನೂ ಕರ್ಣಾದಿಗಳನ್ನೂ ಎಲ್ಲ ರೀತಿಯಿಂದ ಬಲಪಡಿಸುತ್ತೇವೆ.

**ತಸ್ಮಾದ್ ಗತ್ವಾ ಪಾಲಯಸ್ವ ರಾಜ್ಯಂ ರಾಜನ್ನಪೇತಭೀಃ ।**
**ಇದಂ ಕಸ್ಯಾಪಿ ನಾಽಽಖ್ಯೇಯಂ ಸುಗುಪ್ತಂ ಭೂತಿವರ್ಧನಮ್ ॥ ೪೦೬ ॥**

**ಪದಚ್ಛೇದ :- ತಸ್ಮಾದ್, ಗತ್ವಾ, ಪಾಲಯಸ್ವ, ರಾಜ್ಯಂ, ರಾಜನ್, ಅಪೇತಭೀಃ । ಇದಂ, ಕಸ್ಯ, ಅಪಿ, ನ, ಆಖ್ಯೇಯಂ, ಸುಗುಪ್ತಂ, ಭೂತಿವರ್ಧನಮ್ ॥**

**ಅರ್ಥ** :- **ತಸ್ಮಾದ್** = ಆದ್ದರಿಂದ, **ರಾಜನ್** = ರಾಜನೇ, **ಅಪೇತಭೀಃ** = ಭಯ ತೊರೆದು, **ರಾಜ್ಯಂ** = ರಾಜ್ಯವನ್ನು ಕುರಿತು, **ಗತ್ವಾ** = ಹೋಗಿ, **ಪಾಲಯಸ್ವ** = ಪ್ರಜಾಪಾಲನೆ ಮಾಡು, **ಇದಂ** = ಇದು, **ಸುಗುಪ್ತಂ** = ಗೋಪ್ಯವಾಗಿಡಲ್ಪಟ್ಟದ್ದಾಗಿ, **ಭೂತಿವರ್ಧನಮ್** = ಶ್ರೇಯೋವೃದ್ಧಿಕರ, (ಆದ್ದರಿಂದ) **ಕಸ್ಯ ಅಪಿ** = ಯಾರಿಗೂ, **ನ ಆಖ್ಯೇಯಂ** = ಹೇಳಲ್ಪಡಬಾರದು.

**ತಾತ್ಪರ್ಯ** :- ಅದರಿಂದ ರಾಜನೆ, ನೀನು ನಿರ್ಭಯನಾಗಿ ರಾಜ್ಯವನ್ನು ಆಳು. ಈ ವಿಷಯವನ್ನು ಯಾರಿಗೂ ಹೇಳಬೇಡ. ಇದು ರಹಸ್ಯ ಐಶ್ವರ್ಯವರ್ಧಕ.

**ಇತ್ಯುಕ್ತ್ವಾ ಕೃತ್ಯಯಾ ಭೂಯಃ ಸ್ವಸ್ಥಾನೇ ಸ್ಥಾಪಿತೋ ನೃಪಃ ।**
**ಉಮಯಾ ನಿರ್ಮಿತಾತ್ಮಾರ್ಧಮುತ್ತರಂ ಹರನಿರ್ಮಿತಮ್ ।**
**ಜ್ಞಾತ್ವೈವಾವಧ್ಯತಾಂ ಚೈವ ರಾಜ್ಯೇ ಬುದ್ಧಿಂ ಚಕಾರ ಸಃ ॥ ೪೦೭ ॥**

ಪದಚ್ಛೇದ :- ಇತಿ, ಉಕ್ತ್ವಾ, ಕೃತ್ಯಯಾ, ಭೂಯಃ, ಸ್ವಸ್ಥಾನೇ, ಸ್ಥಾಪಿತಃ, ನೃಪಃ। ಉಮಯಾ, ನಿರ್ಮಿತಾತ್ಮಾರ್ಧಮ್, ಉತ್ತರಂ, ಹರನಿರ್ಮಿತಮ್। ಜ್ಞಾತ್ವಾ, ಏವ, ಅವಧ್ಯತಾಂ, ಚ, ಏವ, ರಾಜ್ಯೇ, ಬುದ್ಧಿಂ, ಚಕಾರ, ಸಃ ॥

ಅರ್ಥ :- ಇತಿ = ಎಂದು, ಉಕ್ತ್ವಾ = ಹೇಳಿ, ಭೂಯಃ = ಮತ್ತೆ, ಕೃತ್ಯಯಾ = ಭೂತವಿಶೇಷದಿಂದ, ನೃಪಃ = ದುರ್ಯೋಧನನು, ಸ್ವಸ್ಥಾನೇ = ತನ್ನ ಸ್ಥಾನದಲ್ಲಿ, ಸ್ಥಾಪಿತಃ = ಇಡಲ್ಪಟ್ಟನು, ಸಃ = ಆ ದುರ್ಯೋಧನನು, ಉಮಯಾ = ಪಾರ್ವತಿಯಿಂದ, ನಿರ್ಮಿತಾತ್ಮಾರ್ಧಂ = ನಿರ್ಮಿಸಲ್ಪಟ್ಟ ತನ್ನ ಅರ್ಧ ಶರೀರವನ್ನು, ಉತ್ತರಂ = ಉಳಿದ ಅರ್ಧಭಾಗವನ್ನು, ಹರನಿರ್ಮಿತಮ್ = ಹರ ನಿರ್ಮಿತ (ಎಂದು), ಜ್ಞಾತ್ವಾ ಏವ = ತಿಳಿದೇ, ಚ = ಮತ್ತು, ಅವಧ್ಯತಾಂ ಏವ = ಅವಧ್ಯತ್ವವನ್ನೇ (ತಿಳಿದು), ರಾಜ್ಯೇ = ರಾಜ್ಯಪಾಲನೆಯಲ್ಲಿ, ಬುದ್ಧಿಂ = ಮನಸ್ಸನ್ನು, ಚಕಾರ = ಮಾಡಿದನು.

ತಾತ್ಪರ್ಯ :- ಹೀಗೆ ಹೇಳಿ ಅಸುರರು, ಭೂತವಿಶೇಷದ ಮೂಲಕ ದುರ್ಯೋಧನನನ್ನು ಸ್ವಸ್ಥಾನದಲ್ಲಿ ಇರಿಸಿದರು. ಅವರಿಂದಲೇ ತನ್ನ ಶರೀರದ ಕೆಳಗಿನ ಅರ್ಧ ಉಮೆಯಿಂದ ನಿರ್ಮಿತವಾದುದೆಂದೂ ಮೇಲಿನ ಅರ್ಧ ಶಿವನಿಂದ ನಿರ್ಮಿತವಾದುದೆಂದೂ, ತಾನು ಹೀಗೆ ಅವಧ್ಯನೆಂದು ತಿಳಿದ ಕೂಡಲೇ ದುರ್ಯೋಧನ ರಾಜ್ಯವಾಳಲು ಮನಸ್ಸು ಮಾಡಿದ.

ನೋವಾಚ ಕಸ್ಯಚಿತ್ ತೇಷು
ಸ್ವಾನುಭೂತಂ ಸುಯೋಧನಃ ।
ಪ್ರಭಾತಾಯಾಂ ತು ಶರ್ವರ್ಯಾಂ
ಪುನಃ ಕರ್ಣೋ ವಚೋಽಬ್ರವೀತ್ ॥ ೪೦೮ ॥

ಪದಚ್ಛೇದ :- ನ, ಉವಾಚ, ಕಸ್ಯಚಿತ್, ತೇಷು, ಸ್ವಾನುಭೂತಂ ಸುಯೋಧನಃ। ಪ್ರಭಾತಾಯಾಂ, ತು, ಶರ್ವರ್ಯಾಂ, ಪುನಃ, ಕರ್ಣಃ, ವಚಃ, ಅಬ್ರವೀತ್ ॥

ಅರ್ಥ :- ಶರ್ವರ್ಯಾಂ = ರಾತ್ರಿಯಲ್ಲಿ, ಸುಯೋಧನಃ = ದುರ್ಯೋಧನನು, ಸ್ವಾನುಭೂತಂ = ತಾನು ಅನುಭವಿಸಿದ್ದನ್ನು, ತೇಷು = ಅಲ್ಲಿರುವ ತನ್ನವರಲ್ಲಿ, ಕಸ್ಯಚಿತ್ = ಯಾರೊಬ್ಬರಿಗೂ, ನ ಉವಾಚ = ಹೇಳಲಿಲ್ಲ, ಪ್ರಭಾತಾಯಾಂ ತು = ಅರುಣೋದಯ ಕಾಲದಲ್ಲಿ, ಕರ್ಣಃ = ಕರ್ಣನು, ಪುನಃ = ಮತ್ತೆ, ವಚಃ = ಈ ಮಾತನ್ನು, ಅಬ್ರವೀತ್ = ಹೇಳಿದನು.

ತಾತ್ಪರ್ಯ :- ತಾನು ಅನುಭವದಿಂದ ಕಂಡದ್ದನ್ನು ತನ್ನವರಲ್ಲಿಯೂ ಯಾರಿಗೂ ಹೇಳಲಿಲ್ಲ. ರಾತ್ರಿ ಬೆಳಗಾದಾಗ ಪುನಃ ಕರ್ಣ ಈ ಮಾತನ್ನು ಹೇಳಿದ.

**ಭೃತ್ಯೈಸ್ತವೈವ ಪಾರ್ಥೈರ್ಯನ್ಮೋಚಿತೋಽಸಿ ಪರಂತಪ ।**
**ತೇನ ಮಾನ್ಯೋಽಧಿಕಂ ಲೋಕೇ ಯದ್ ಭೃತ್ಯಾ ಏವ ತಾದೃಶಾಃ ।**
**ಕಿಮು ತ್ವಂ ರಾಜಶಾರ್ದೂಲ ತದುತ್ತಿಷ್ಠ ಸ್ಥಿರೋ ಭವ ॥ ೪೯ ॥**

**ಪದಚ್ಛೇದ :– ಭೃತ್ಯೈಃ, ತವ, ಏವ, ಪಾರ್ಥೈಃ, ಯತ್, ಮೋಚಿತಃ, ಅಸಿ, ಪರಂತಪ । ತೇನ, ಮಾನ್ಯಃ, ಅಧಿಕಂ, ಲೋಕೇ, ಯತ್‌ಭೃತ್ಯಾಃ, ಏವ, ತಾದೃಶಾಃ । ಕಿಮು, ತ್ವಂ, ರಾಜಶಾರ್ದೂಲ, ತದ್, ಉತ್ತಿಷ್ಠ, ಸ್ಥಿರಃ, ಭವ ॥**

**ಅರ್ಥ** :- **ಪರಂತಪ** = ಎಲೈ ಶತ್ರುತಾಪಕರನೇ, **ಯತ್** = ಯಾವ ಕಾರಣದಿಂದ, **ತವ ಏವ** = ನಿನ್ನದೇ, **ಭೃತ್ಯೈಃ** = ದಾಸರಾದ, **ಪಾರ್ಥೈಃ** = ಪಾಂಡವರಿಂದ, **ಮೋಚಿತಃ ಅಸಿ** = ಬಿಡಿಸಲ್ಪಟ್ಟಿರುವಿಯೋ, **ತೇನ** = ಅದರಿಂದ, **ಲೋಕೇ** = ಲೋಕದಲ್ಲಿ, **ಅಧಿಕಂ** = ಅತ್ಯಂತ, **ಮಾನ್ಯಃ** = ಮಾನ್ಯನಾಗಿರುವಿ, **ಯದ್‌ಭೃತ್ಯಾಃ**, **ಏವ** = ಯಾವ ದುರ್ಯೋಧನನ ದಾಸರೇ, **ತಾದೃಶಾಃ** = ಗಂಧರ್ವರನ್ನು ಗೆಲ್ಲುವವರೋ, **ಕಿಮು ತ್ವಂ** = ಆ ದುರ್ಯೋಧನ ಮತ್ತೇನು (ಎಂದು). **ತದ್** = ಆದ್ದರಿಂದ, **ರಾಜ ಶಾರ್ದೂಲ** = ರಾಜಸಿಂಹನೇ, **ಉತ್ತಿಷ್ಠ** = ಎದ್ದೇಳು. **ಸ್ಥಿರಃ ಭವ** = ಗಟ್ಟಿಮನಸ್ಸುಳ್ಳವನಾಗು.

ತಾತ್ಪರ್ಯ :- ಮಹಾರಾಜ, ಶತ್ರುನಾಶಕ, ನಿನ್ನ ದಾಸರಾದ ಪಾಂಡವರಿಂದಲೇ ಬಿಡುಗಡೆ ಹೊಂದಿರುವುದರಿಂದ ನೀನು ಲೋಕದಲ್ಲಿ ಇನ್ನೂ ಹೆಚ್ಚು ಮಾನ್ಯನೆನಿಸಿರುವಿ. ನಿನ್ನ ದಾಸರೇ ಅಂಥ ವೀರರೆಂದರೆ ನೀನು ಎಂಥವನು ಎಂದು. ಆದ್ದರಿಂದ ಎದ್ದೇಳು, ಸ್ಥಿರಬುದ್ಧಿಯವನಾಗು ಎಂದು.

**ಯಾ ಚ ತೇಽರ್ಜುನಮಾಹಾತ್ಮ್ಯೇ ಶಂಕಾ ಸಾ ವ್ಯೈತು ಮೇ ಶೃಣು ।**
**ಯಾವನ್ನೈವಾರ್ಜುನಂ ಹನ್ಯಾಂ ಪಾದೌ ಪ್ರಕ್ಷಾಳಯೇ ಸ್ವಯಮ್ ॥೫೦॥**

ಪದಚ್ಛೇದ :- ಯಾ, ಚ, ತೇ, ಅರ್ಜುನಮಾಹಾತ್ಮ್ಯೇ, ಶಂಕಾ, ಸಾ, ವ್ಯೈತು, ಮೇ, ಶೃಣು । ಯಾವತ್, ನ, ಏವ, ಅರ್ಜುನಂ, ಹನ್ಯಾಂ, ಪಾದೌ, ಪ್ರಕ್ಷಾಲಯೇ, ಸ್ವಯಮ್ ॥

ಅರ್ಥ :- ಚ = ಮತ್ತು, ತೇ = ನಿನಗೆ, ಅರ್ಜುನಮಾಹಾತ್ಮ್ಯೇ = ಅರ್ಜುನನ ಶಸ್ತ್ರ ಬಲಮಾಹಾತ್ಮ್ಯದಲ್ಲಿ, ಯಾ = ಯಾವ, ಶಂಕಾ = ದಿಗಿಲು ಇದೆಯೋ, ಸಾ = ಅದು, ವ್ಯೇತು = ತೊಲಗಲಿ, ಮೇ = ನನ್ನ, ಶೃಣು = (ಮಾತನ್ನು) ಕೇಳು, ಯಾವತ್ = ಎಲ್ಲಿಯವರೆಗೂ, ಅರ್ಜುನಂ = ಅರ್ಜುನನನ್ನು, ನ ಏವ ಹನ್ಯಾಂ = ಕೊಲ್ಲುವುದಿಲ್ಲವೋ, (ತಾವತ್ = ಅಲ್ಲಿವರೆಗೂ), ಸ್ವಯಂ = ನಾನೇ, ಪಾದೌ = ನನ್ನ ಕಾಲುಗಳನ್ನು, ಪ್ರಕ್ಷಾಲಯೇ = ತೊಳೆಯುವೆನು.

ತಾತ್ಪರ್ಯ :- ಅರ್ಜುನನ ಬಲದ ವಿಷಯದಲ್ಲಿ ಇರುವ ನಿನ್ನ ಭಯ ದೂರವಾಗಲಿ. ನಾನು ಹೇಳುವುದನ್ನು ಕೇಳು. ಅರ್ಜುನನನ್ನು ಕೊಲ್ಲದ ತನಕ ನಾನು ನನ್ನ ಪಾದಗಳನ್ನು ನಾನೇ ತೊಳೆದುಕೊಳ್ಳುತ್ತೇನೆ.

**ಇತ್ಯುಕ್ತೋಽವರಜೈಶ್ಚೈವ ಸರ್ವೈಃ ಶಕುನಿನಾ ತಥಾ ।**
**ಯಾಚಿತೋ ರಥಮಾರುಹ್ಯ ಯಯೌ ನಾಗಪುರಂ ದ್ರುತಮ್ ॥ ೪೧೧ ॥**

ಪದಚ್ಛೇದ :- ಇತಿ, ಉಕ್ತಃ, ಅವರಜೈಃ, ಚ, ಏವ, ಸರ್ವೈಃ, ಶಕುನಿನಾ, ತಥಾ । ಯಾಚಿತಃ, ರಥಮ್, ಆರುಹ್ಯ, ಯಯೌ, ನಾಗಪುರಂ, ದ್ರುತಮ್ ॥

ಅರ್ಥ :- ಇತಿ = ಹೀಗೆಂದು, ಉಕ್ತಃ = ಹೇಳಲ್ಪಟ್ಟ, ಚ = ಮತ್ತು, ಸರ್ವೈಃ ಏವ = ಎಲ್ಲಾ, ಅವರಜೈಃ = ತಮ್ಮಂದಿರಿಂದ, ತಥಾ = ಹಾಗೂ, ಶಕುನಿನಾ = ಶಕುನಿಯಿಂದ, ಯಾಚಿತಃ = ಕೇಳಲ್ಪಟ್ಟ ದುರ್ಯೋಧನನು, ದ್ರುತಮ್ = ಕೂಡಲೇ, ರಥಮ್ = ರಥವನ್ನು, ಆರುಹ್ಯ = ಹತ್ತಿ, ನಾಗಪುರಂ = ಹಸ್ತಿನಾಪುರವನ್ನು ಕುರಿತು, ಯಯೌ = ಹೋದನು.

ತಾತ್ಪರ್ಯ :- ಕರ್ಣ ಹೀಗೆ ಹೇಳಿ ರಾಜಧಾನಿಗೆ ಹಿಂತಿರುಗಲು ಬೇಡಿದ. ಎಲ್ಲ ಸೋದರರೂ ಶಕುನಿಯೂ ಬೇಡಿದರು. ಆಗ ದುರ್ಯೋಧನ ರಥವನ್ನೇರಿ ಬೇಗನೆ ಹಸ್ತಿನಾವತಿಗೆ ತೆರಳಿದ.

**ಸಕುಂಡಲಂ ಸಕವಚಮವಧ್ಯಂ ಸೂರ್ಯನಂದನಮ್ ।**
**ಜ್ಞಾತ್ವೇಂದ್ರ ಉಭಯಂ ತಸ್ಮಾದೈಚ್ಛದಾದಾತುಮುತ್ತಮಮ್ ॥ ೪೧೨ ॥**

**ಪದಚ್ಛೇದ :– ಸಕುಂಡಲಂ, ಸಕವಚಮ್, ಅವಧ್ಯಂ, ಸೂರ್ಯನಂದನಮ್ । ಜ್ಞಾತ್ವಾ, ಇಂದ್ರಃ, ಉಭಯಂ, ತಸ್ಮಾದ್, ಐಚ್ಛದ್, ಆದಾತುಮ್, ಉತ್ತಮಮ್ ॥**

**ಅರ್ಥ** :- **ಇಂದ್ರಃ** = ಇಂದ್ರನು, **ಸಕುಂಡಲಂ** = ಕುಂಡಲಗಳಿಂದ ಸಹಿತನಾದ, **ಸಕವಚಂ** = ಕವಚದಿಂದ ಕೂಡಿದ, **ಸೂರ್ಯನಂದನಮ್** = ಕರ್ಣನನ್ನು, **ಅವಧ್ಯಂ** = ಅವಧ್ಯ ಎಂಬುದಾಗಿ, **ಜ್ಞಾತ್ವಾ** = ತಿಳಿದು, **ಉತ್ತಮಂ** = ಕರ್ಣನ ಒಟ್ಟಿಗೆ ಹುಟ್ಟಿದ್ದರಿಂದ ಉತ್ತಮವಾದ, **ಉಭಯಂ** = ಕವಚ, ಕುಂಡಲಗಳನ್ನು, **ತಸ್ಮಾದ್** = ಕರ್ಣನಿಂದ, **ಆದಾತುಮ್** = ಪಡೆಯಲು, **ಐಚ್ಛದ್** = ಬಯಸಿದನು.

**ತಾತ್ಪರ್ಯ** :- ಕರ್ಣ ಕುಂಡಲಯುಕ್ತನಾಗಿಯೂ ಕವಚಯುಕ್ತ ನಾಗಿಯೂ ಇರುವಷ್ಟು ಕಾಲ ಅವಧ್ಯನಾಗಿರುತ್ತಾನೆ ಎಂದು ತಿಳಿದು ಇಂದ್ರ ಉತ್ತಮವಾದ ಆ ಎರಡನ್ನೂ ಅವನಿಂದ ತೆಗೆದುಕೊಳ್ಳಲು ಬಯಸಿದ.

ವಿಶೇಷಾಂಶ = ಈ ಕವಚ ಕುಂಡಲಗಳು ಅಮೃತದಿಂದ ಹುಟ್ಟಿದವುಗಳು ಎನ್ನುತ್ತಾನೆ ಸೂರ್ಯ.

**ತದ್ ವಿಜ್ಞಾಯ ರವಿಃ ಕರ್ಣಂ ಸ್ವಪ್ನ ಉಕ್ತ್ವಾ ನ್ಯವಾರಯತ್ ।**
**ಸರ್ವಥಾ ದಾಸ್ಯ ಇತ್ಯುಕ್ತೇ ಪ್ರಾಹಾಽದೇಯಂ ವರಾಯುಧಮ್ ॥೪೧೩॥**

**ಪದಚ್ಛೇದ :– ತದ್, ವಿಜ್ಞಾಯ, ರವಿಃ, ಕರ್ಣಂ, ಸ್ವಪ್ನೇ, ಉಕ್ತ್ವಾ, ನ್ಯವಾರಯತ್ । ಸರ್ವಥಾ, ದಾಸ್ಯೇ, ಇತಿ, ಉಕ್ತೇ, ಪ್ರಾಹ, ಆದೇಯಂ, ವರಾಯುಧಮ್ ॥**

**ಅರ್ಥ** :- **ತದ್** = ಇಂದ್ರನ ಬಯಕೆಯನ್ನು, **ವಿಜ್ಞಾಯ** = ತಿಳಿದು, **ರವಿಃ** = ಸೂರ್ಯನು, **ಸ್ವಪ್ನೇ** = ಕನಸಿನಲ್ಲಿ, **ಕರ್ಣಂ** = ಕರ್ಣನನ್ನು ಕುರಿತು, **ಉಕ್ತ್ವಾ** = ಹೇಳಿ, **ನ್ಯವಾರಯತ್** = (ಕುಂಡಲಾದಿಗಳನ್ನು ಕೊಡಬೇಡ ಎಂದು) ತಡೆದನು. **ಸರ್ವಥಾ ದಾಸ್ಯೇ** = ಕೇಳಿದರೆ ಕೊಟ್ಟೆ ಕೊಡುವೆನು, **ಇತಿ** = ಎಂದು, **ಉಕ್ತೇ** = ಕರ್ಣನಿಂದ ಹೇಳಲ್ಪಡಲು, **ವರಾಯುಧಮ್** = ಇಂದ್ರನ ದೆಸೆಯಿಂದ ವರಾಯುಧವು, **ಆದೇಯಂ** = ಗ್ರಾಹ್ಯ (ಎಂದು), **ಪ್ರಾಹ** = (ಸೂರ್ಯ) ಹೇಳಿದನು.

**ತಾತ್ಪರ್ಯ** :- ಇಂದ್ರನ ಸಂಕಲ್ಪವನ್ನು ತಿಳಿದ ಸೂರ್ಯ ಕರ್ಣನಿಗೆ ಸ್ವಪ್ನದಲ್ಲಿ (ಬ್ರಾಹ್ಮಣ ವೇಷದಲ್ಲಿ ಕಾಣಿಸಿ) ಇಂದ್ರನ ಬಯಕೆಯನ್ನು ತಿಳಿಸಿ, ''ಅವನು ಕೇಳುವುದನ್ನು ಕೊಡಬೇಡ'' ''ಸರ್ವಥಾ ಕೊಡುವೆ''ನೆಂದು ಕರ್ಣ ಹೇಳಿದಾಗ 'ಹಾಗಾದರೆ ಶ್ರೇಷ್ಠವಾದ ಆಯುಧವನ್ನು ಇಂದ್ರನಿಂದ ಪಡೆ' ಎಂದ.

**ದದೌ ಚೋತ್ಕೃತ್ಯ ಕವಚಂ ಕುಂಡಲೇ ಚ ಶಚೀಪತೇಃ ।**
**ಅಮೋಘಾಂ ಶಕ್ತಿಮಾದಾಯ ಜ್ಞಾತ್ವೈವ ದ್ವಿಜರೂಪಿಣಮ್ ॥ ೪೧೪ ॥**

**ಪದಚ್ಛೇದ** :- **ದದೌ, ಚ, ಉತ್ಕೃತ್ಯ, ಕವಚಂ, ಕುಂಡಲೇ, ಚ, ಶಚೀಪತೇಃ । ಅಮೋಘಾಂ, ಶಕ್ತಿಮ್, ಆದಾಯ, ಜ್ಞಾತ್ವಾ, ಇಂದ್ರಂ, ದ್ವಿಜರೂಪಿಣಮ್ ॥**

**ಅರ್ಥ** :- **ದ್ವಿಜರೂಪಿಣಮ್** = ಬ್ರಾಹ್ಮಣವೇಷಧಾರಿಯಾದ, **ಇಂದ್ರಂ** = ಇಂದ್ರನನ್ನು, **ಜ್ಞಾತ್ವಾ** = ತಿಳಿದು, **ಅಮೋಘಾಂ** = ವ್ಯರ್ಥವಾಗದ, **ಶಕ್ತಿಮ್** = ಶಕ್ತ್ಯಾಯುಧವನ್ನು, **ಆದಾಯ** = ಇಂದ್ರನಿಂದ ಸ್ವೀಕರಿಸಿ, **ಕವಚಂ** = ಕವಚವನ್ನು, **ಚ** = ಮತ್ತು, **ಕುಂಡಲೇ** = ಕುಂಡಲಗಳನ್ನು, **ಉತ್ಕೃತ್ಯ** = ತನ್ನ ದೇಹದಿಂದ ತೆಗೆದು, **ದದೌ ಚ** = ಕೊಟ್ಟನೂ ಕೂಡ.

**ತಾತ್ಪರ್ಯ** :- (ಮಧ್ಯಾಹ್ನ ಕಾಲದಲ್ಲಿ ಸೂರ್ಯೋಪಸ್ಥಾನ ಮಾಡುವಾಗ) ಕರ್ಣ ಬ್ರಾಹ್ಮಣರೂಪಿಯಾಗಿ ಬಂದವನನ್ನು ಇಂದ್ರನೆಂದು ತಿಳಿದು ಅವನಿಂದ ಅಮೋಘವಾದ ಶಕ್ತ್ಯಾಯುಧವನ್ನು ಪಡೆದು ಕವಚವನ್ನೂ ಕುಂಡಲವನ್ನೂ ಶರೀರದಿಂದ ಕತ್ತರಿಸಿ ಅವನಿಗೆ ಕೊಟ್ಟ.

**ಋತೇಽರ್ಜುನಾದೇಕಮೇವ ವಧಿಷ್ಯಸ್ಯನಯೇತಿ ಸಃ ।**
**ದತ್ವಾ ಶಕ್ತಿಂ ಯಯೌ ಶಕ್ರಃ ಸಾರ್ಧಂ ಕವಚಕುಂಡಲೈಃ ॥ ೪೧೫ ॥**

**ಪದಚ್ಛೇದ** :- **ಋತೇ, ಅರ್ಜುನಾದ್, ಏಕಮ್, ಏವ, ವಧಿಷ್ಯಸಿ, ಅನಯಾ, ಇತಿ, ಸಃ । ದತ್ವಾ, ಶಕ್ತಿಂ, ಯಯೌ, ಶಕ್ರಃ, ಸಾರ್ಧಂ, ಕವಚಕುಂಡಲೈಃ ॥**

**ಅರ್ಥ** :- **ಸಃ ಶಕ್ರಃ** = ಆ ಇಂದ್ರನು, **ಅನಯಾ** = ಈ ಶಕ್ತ್ಯಾಯುಧದಿಂದ, **ಏಕಮ್ ಏವ** = ಒಬ್ಬನನ್ನೇ, **ವಧಿಷ್ಯಸಿ** = ಸಂಹರಿಸುವಿ, **ಅರ್ಜುನಾದ್ ಋತೇ** = ಅರ್ಜುನನನ್ನು ಹೊರತುಪಡಿಸಿ, **ಇತಿ** = ಎಂದು (ಹೇಳಿ), **ಶಕ್ತಿಂ** = ಶಕ್ತ್ಯಾಯುಧವನ್ನು, **ದತ್ವಾ** = ಕೊಟ್ಟು, **ಕವಚಕುಂಡಲೈಃ** =

ಕವಚ ಕುಂಡಲಗಳಿಂದ, ಸಾರ್ಧಂ = ಸಹಿತನಾಗಿ, ಯಯೌ = ಹೊರಟುಹೋದನು.

**ತಾತ್ಪರ್ಯ** :- ಅರ್ಜುನನನ್ನು ಹೊರತು, ಒಬ್ಬನನ್ನು ಮಾತ್ರ ಈ ಶಕ್ತ್ಯಾಯುಧದಿಂದ ನೀನು ಕೊಲ್ಲುವಿ ಎನ್ನುತ್ತ ಇಂದ್ರ ಶಕ್ತ್ಯಾಯುಧವನ್ನಿತ್ತು ಕವಚ ಕುಂಡಲಗಳೊಂದಿಗೆ ಹೊರಟು ಹೋದ.

**ವಿಶೇಷಾಂಶ** - ''ಅರ್ಜುನನನ್ನು ಹೊರತುಪಡಿಸಿ ಈ ಶಕ್ತ್ಯಾಯುಧವನ್ನು ಪ್ರಯೋಗಿಸು'' ಎಂದು ಇಂದ್ರ ಹೇಳಲಿಲ್ಲ. ಶ್ರೀ ಕೃಷ್ಣ ಅರ್ಜುನನನ್ನು ರಕ್ಷಿಸುತ್ತಾನೆ ಎಂದಷ್ಟೇ ಹೇಳಿದ. ಆದ್ದರಿಂದ ಮುಂದೆ ಅವಶ್ಯವಾಗಿ ಆಗುವುದನ್ನು ಮಾತ್ರ ಇಂದ್ರ ಹೇಳಿದ್ದಾನೆ ಹೊರತು ಅದನ್ನೂ ಶರತ್ತಿನಲ್ಲಿ ಸೇರಿಸಿಲ್ಲ ಎಂದು ಜನಾರ್ದನೀಯದಲ್ಲೂ ತಾಮ್ರಪರ್ಣೀಯದಲ್ಲೂ ಸ್ಪಷ್ಟ ಪಡಿಸಿದ್ದಾರೆ. ಆದ್ದರಿಂದ ಮುಂದೆ ಈ ಶಕ್ತ್ಯಾಯುಧ ಘಟೋತ್ಕಚನಲ್ಲಿ ಪ್ರಯೋಗ ಗೊಂಡದ್ದು ಯುಕ್ತವಾಗಿದೆ. ಕರ್ಣನಿಗೆ ಇಂದ್ರನ ಅನುಗ್ರಹದಿಂದ ವ್ರಣ ದುರ್ಗಂಧಗಳಾಗಲಿಲ್ಲ.

**ಪಾರ್ಥಾ ವಿಮುಚ್ಯೈವ ಸುಯೋಧನಂ ತಂ**
**ವನೇ ವಸಂತೋ ಮುದಿತಾಃ ಸದೈವ ।**
**ಸಹಾರಣೀಭಾಂಡಮಥೋ ಮೃಗೇಣ**
**ಹೃತಂ ದ್ವಿಜಸ್ಯಾऽಶು ನಿಶಮ್ಯ ಚಾನ್ವಯುಃ ॥ ೪೧೬ ॥**

ಪದಚ್ಛೇದ :- ಪಾರ್ಥಾಃ, ವಿಮುಚ್ಯ, ಏವ, ಸುಯೋಧನಂ, ತಂ, ವನೇ, ವಸಂತಃ, ಮುದಿತಾಃ, ಸದಾ, ಏವ । ಸಹಾರಣೀಭಾಂಡಮ್, ಅಥೋ, ಮೃಗೇಣ, ಹೃತಂ, ದ್ವಿಜಸ್ಯ, ಆಶು, ನಿಶಮ್ಯ, ಚ, ಅನ್ವಯುಃ ॥

**ಅರ್ಥ** :- ತಂ = ಆ, ಸುಯೋಧನಂ = ದುರ್ಯೋಧನನನ್ನು, ವಿಮುಚ್ಯ = (ಗಂಧರ್ವರ ಬಂಧನದಿಂದ) ಬಿಡಿಸಿ, ವನೇ ಏವ = ದ್ವೈತವನದಲ್ಲಿಯೇ, ಸದಾ ಏವ = ಯಾವಾಗಲೂ, ಮುದಿತಾಃ = ಸಂತೋಷದಿಂದ ಕೂಡಿದವರಾಗಿ, ವಸಂತಃ = ಇರುವ, ಪಾರ್ಥಾಃ = ಪಾಂಡವರು, ಅಥೋ = ಅನಂತರ, ದ್ವಿಜಸ್ಯ = ಒಬ್ಬ ಬ್ರಾಹ್ಮಣನ, ಸಹಾರಣೀಭಾಂಡಮ್ = ಅಗ್ನಿಗೆ ಆಧಾರವಾದ (ಅಗ್ನ್ಯಾಧಾನ ಮಾಡಲ್ಪಟ್ಟ)

ಅರಣೀಕಟ್ಟಿಗೆಗಳಿಂದ ಕೂಡಿದ ಪಾತ್ರೆಯನ್ನು, ಮೃಗೇಣ = ಜಿಂಕೆಯಿಂದ, ಹೃತಂ = ಅಪಹೃತವಾದದ್ದನ್ನಾಗಿ, ನಿಶಮ್ಯ = ಕೇಳಿ, ಆಶು = ಕೂಡಲೇ, ಅನ್ವಯುಃ ಚ = ಜಿಂಕೆಯನ್ನು ಹಿಂಬಾಲಿಸಿದರೂ ಕೂಡ.

ತಾತ್ಪರ್ಯ :- ಪಾಂಡವರು ದುರ್ಯೋಧನನನ್ನು ಬಿಡುಗಡೆ ಮಾಡಿ ವನದಲ್ಲಿ ಸದಾ ಸುಖಿಗಳಾಗಿ ವಾಸ ಮಾಡಿದರು. ಒಬ್ಬ ಬ್ರಾಹ್ಮಣನ ಅರಣಿಕಾಷ್ಠ ಮತ್ತು ಪಾತ್ರೆಯನ್ನು ಜಿಂಕೆ ಅಪಹರಿಸಿದ್ದನ್ನು ಕೇಳಿ ಅದನ್ನು ಬೆನ್ನಟ್ಟಿದರು.

ವಿಶೇಷಾಂಶ - ಒಬ್ಬ ಬ್ರಾಹ್ಮಣ ತನ್ನ ಅರಣಿಕಾಷ್ಠಗಳನ್ನೂ ಯಜ್ಞಪಾತ್ರೆಯನ್ನೂ ಗಂಟು ಕಟ್ಟಿ ಮರದ ಕೊಂಬೆಯಲ್ಲಿ ಸಿಕ್ಕಿಸಿದ್ದ. ಜಿಂಕೆ ಬಂದು ತನ್ನ ಕೊಂಬುಗಳಿಂದ ಮರದ ಕೊಂಬೆಗೆ ತಿಕ್ಕಿದಾಗ ಅರಣಿ, ಪಾತ್ರೆಯ ಗಂಟು ಕೊಂಬಿನಲ್ಲಿ ಸಿಕ್ಕಿಕೊಂಡಿತು, ಜಿಂಕೆ ಓಡಿತು. ಬ್ರಾಹ್ಮಣ ಕೂಗಿಕೊಂಡ. ಆಗ ಪಾಂಡವರು ಜಿಂಕೆಯನ್ನು ಬೆನ್ನಟ್ಟಿದರು. ಯಮನೇ ಜಿಂಕೆಯಾಗಿ ಬಂದಿದ್ದ.

**ತಸ್ಮಿನ್ನದೃಶ್ಯೇ ತೃಷಿತಾ ಏಕೈಕಮ್ ಉದಕಾರ್ಥಿನಃ ।**
**ಯಯುರ್ಯುಧಿಷ್ಠಿರಮೃತೇ ಸುಪ್ತಾಸ್ತೇ ಧರ್ಮಮಾಯಯಾ ।**
**ಅದೃಶ್ಯೇನೈವ ಧರ್ಮೇಣ ವಾರಿತಾ ವಾರಿಪಾಯಿನಃ ॥ ೪೧೭ ॥**

**ಪದಚ್ಛೇದ :- ತಸ್ಮಿನ್, ಅದೃಶ್ಯೇ, ತೃಷಿತಾಃ, ಏಕೈಕಮ್, ಉದಕಾರ್ಥಿನಃ । ಯಯುಃ, ಯುಧಿಷ್ಠಿರಮ್, ಋತೇ, ಸುಪ್ತಾಃ, ತೇ, ಧರ್ಮಮಾಯಯಾ । ಅದೃಶ್ಯೇನ, ಏವ ಧರ್ಮೇಣ, ವಾರಿತಾಃ, ವಾರಿಪಾಯಿನಃ ॥**

**ಅರ್ಥ** :- **ತಸ್ಮಿನ್** = ಆ ಜಿಂಕೆಯು, **ಅದೃಶ್ಯೇ** = ಕಾಣದಿರಲು, **ತೃಷಿತಾಃ** = ಬಾಯಾರಿದ ಪಾಂಡವರು, **ಯುಧಿಷ್ಠಿರಮ್ ಋತೇ** = ಯುಧಿಷ್ಠಿರನನ್ನು ಹೊರತು ಪಡಿಸಿ, **ಏಕೈಕಮ್** = ಒಬ್ಬೊಬ್ಬರು ಬೇರೆ ಬೇರೆಯಾಗಿ, **ಉದಕಾರ್ಥಿನಃ** = ನೀರನ್ನು ಬಯಸುತ್ತಾ, **ಯಯುಃ** = ಹೋದರು, **ಅದೃಶ್ಯೇನ** = ಬಕರೂಪ ಧರಿಸಿದ್ದರಿಂದ ಅದೃಶ್ಯನಾಗಿರುವ, **ಧರ್ಮೇಣ ಏವ**= ಯಮಧರ್ಮನಿಂದಲೇ, **ವಾರಿತಾಃ** = 'ನನ್ನ ಪ್ರಶ್ನೆಗೆ ಉತ್ತರ ಕೊಡದೆ ನೀರು ಕುಡಿಯಬೇಡಿ' ಎಂದು ತಡೆಯಲ್ಪಟ್ಟವರಾಗಿಯೂ, **ವಾರಿಪಾಯಿನಃ** = ಬಲಾತ್ಕಾರದಿಂದ ನೀರು ಕುಡಿಯಲು ತೊಡಗಿದವರಾಗಿ,

ತೇ = ಭೀಮ ಮೊದಲಾದ ಪಾಂಡವರು, ಧರ್ಮಮಾಯಯಾ = ಯಮನ ಮಾಯೆಯಿಂದ, ಸುಪ್ತಾಃ = ಮಲಗಿದರು.

ತಾತ್ಪರ್ಯ :- ಜಿಂಕೆ ಅದೃಶ್ಯವಾದಾಗ ಪಾಂಡವರು ಬಾಯಾರಿದ್ದರು, ಯುಧಿಷ್ಠಿರ ಹೊರತು ಎಲ್ಲರೂ ಒಬ್ಬೊಬ್ಬರಾಗಿ ಜಲಾರ್ಥಿಗಳಾಗಿ ಹೋದರು. ಯಮನ ಮಾಯೆಯಿಂದ ಸುಪ್ತರಾದರು. ಏಕೆಂದರೆ ಯಮ ಅದೃಶ್ಯನಾಗಿ ಅಂದರೆ ಬಕಪಕ್ಷಿಯಾಗಿ ನಿಂತು ತಡೆದರೂ ಅವರು ನೀರನ್ನು ಕುಡಿಯತೊಡಗಿದ್ದರು.

ವಿಶೇಷಾಂಶ - ಬಾಯಾರಿದ ಪಾಂಡವರು ಒಂದು ಆಲದ ಮರದ ಬುಡದಲ್ಲಿ ಕುಳಿತರು. ಧರ್ಮರಾಜನ ಮಾತಿನಂತೆ ನಕುಲ ಮರವನ್ನೇರಿ ದೂರದಲ್ಲಿ ಒಂದು ಕೊಳವಿರುವುದನ್ನು ಕಂಡು ನೀರು ತರಲು ಹೊರಟ. ಮರಳಲಿಲ್ಲ. ನಂತರ, ಸಹದೇವ, ಅರ್ಜುನ ಭೀಮ ಹೀಗೆ ಹೋದರು.

**ಕ್ಷತ್ರಧರ್ಮಸ್ಯ ರಕ್ಷಾರ್ಥಂ ನ ತತ್ಪ್ರಶ್ನಾನ್ ವಿದಾಂ ವರಾಃ ।**
**ವ್ಯಾಚಕ್ರುಃ ಶಕ್ತಿಮಂತೋಽಪಿ ಪಾನೀಯಾರ್ಥಮರಿಂದಮಾಃ ॥ ೪೧೮ ॥**

ಪದಚ್ಛೇದ :- ಕ್ಷತ್ರಧರ್ಮಸ್ಯ, ರಕ್ಷಾರ್ಥಂ, ನ, ತತ್ಪ್ರಶ್ನಾನ್, ವಿದಾಂ ವರಾಃ । ವ್ಯಾಚಕ್ರುಃ, ಶಕ್ತಿಮಂತಃ, ಅಪಿ, ಪಾನೀಯಾರ್ಥಮ್, ಅರಿಂದಮಾಃ ॥

ಅರ್ಥ :- ಅರಿಂದಮಾಃ = ವೈರಿಗಳನ್ನು ಶಿಕ್ಷಿಸಲು ಸಮರ್ಥರಾದ, ವಿದಾಂ = ಜ್ಞಾನಿಗಳಲ್ಲಿ, ವರಾಃ = ಶ್ರೇಷ್ಠರಾದ, ಪಾಂಡವರು, ಶಕ್ತಿಮಂತಃ ಅಪಿ = ಪ್ರಶ್ನೆ ಪರಿಹಾರ ವಿಷಯದಲ್ಲಿ ಸಮರ್ಥರಾಗಿದ್ದರೂ, ಪಾನೀಯಾರ್ಥಮ್ = ನೀರಿಗಾಗಿ, ತತ್ಪ್ರಶ್ನಾನ್ = ಧರ್ಮ ಮಾಡಿದ ಪ್ರಶ್ನೆಗಳನ್ನು, ನ ವ್ಯಾಚಕ್ರುಃ = ಪರಿಹರಿಸಲಿಲ್ಲ, ಕ್ಷತ್ರಧರ್ಮಸ್ಯ = ಕ್ಷತ್ರಿಯಧರ್ಮದ, ರಕ್ಷಾರ್ಥಮ್ = ರಕ್ಷಣೆಗೋಸ್ಕರ.

ತಾತ್ಪರ್ಯ :- ಜ್ಞಾನಿಶ್ರೇಷ್ಠರೂ ಶತ್ರುನಾಶಕರೂ ಆದ ಪಾಂಡವರು ಯಮನ ಪ್ರಶ್ನೆಗಳನ್ನು ಉತ್ತರಿಸಲು ಶಕ್ತಿ ಉಳ್ಳವರಾಗಿದ್ದರೂ ನೀರಿಗಾಗಿ ಆ ಪ್ರಶ್ನೆಗಳನ್ನು ಉತ್ತರಿಸಲಿಲ್ಲ. ಇದು ತಮ್ಮ ಕ್ಷಾತ್ರಧರ್ಮದ ರಕ್ಷಣೆಗಾಗಿ.

ನ ವಿಪ್ರಾಣಾಂ ಚ ಧರ್ಮೋऽಯಂ ವಿದ್ಯಾಯಾ ಉಪಜೀವನಮ್ ।
ಕ್ಷತ್ರಿಯಾಣಾಂ ತು ಕಿಮುತ ಪ್ರಸಭಂ ತೇನ ತೇ ಪಪುಃ ॥ ೪೯ ॥

ಪದಚ್ಛೇದ :- ನ, ವಿಪ್ರಾಣಾಂ, ಚ, ಧರ್ಮಃ, ಅಯಂ, ವಿದ್ಯಾಯಾಃ, ಉಪಜೀವನಮ್ । ಕ್ಷತ್ರಿಯಾಣಾಂ, ತು, ಕಿಮ್, ಉತ, ಪ್ರಸಭಂ, ತೇನ, ತೇ, ಪಪುಃ ॥

ಅರ್ಥ :- ವಿಪ್ರಾಣಾಂ ಚ = ವಿಪ್ರರಿಗೂ, ವಿದ್ಯಾಯಾ = ವಿದ್ಯೆಯ ಮೂಲಕ, ಉಪಜೀವನಮ್ = ಬದುಕುವಿಕೆ, ನ ಧರ್ಮಃ = ಧರ್ಮವಲ್ಲ, ತು = ಹೀಗಿರುವಾಗ, ಅಯಂ = ಈ ಪ್ರಶ್ನೆ ಪರಿಹಾರದ ಮೂಲಕ ನೀರನ್ನು ಕುಡಿಯುವುದು (ವಿದ್ಯೋಪಜೀವನವು), ಕ್ಷತ್ರಿಯಾಣಾಂ = ಕ್ಷತ್ರಿಯರಾದ ನಮಗೆ, ಕಿಮ್ ಉತ = ಇನ್ನೇನು, ತೇನ = ಇಂತಹ ತಿಳುವಳಿಕೆಯ ಕಾರಣದಿಂದ, ತೇ = ಭೀಮಾದಿಗಳು, ಪ್ರಸಭಂ = ಬಲಾತ್ಕಾರವಾಗಿ, ಪಪುಃ = ಜಲಪಾನ ಮಾಡಿದರು.

ತಾತ್ಪರ್ಯ :- ಜೀವನಕ್ಕೆ ವಿದ್ಯೆಯನ್ನು ಅವಲಂಬಿಸುವುದು ಬ್ರಾಹ್ಮಣರಿಗೂ ಧರ್ಮವಲ್ಲದಿರುವಾಗ ಕ್ಷತ್ರಿಯರಿಗೆ ಇನ್ನೇನು ಹೇಳಬೇಕು? ಆದರಿಂದ ಪಾಂಡವರು ಬಲಾತ್ಕಾರದಿಂದ ನೀರನ್ನು ಕುಡಿಯತೊಡಗಿದರು.

ದೇವಾ ಅಪಿ ಮನುಷ್ಯೇಷು ಜಾತಾ ಸುಬಲಿನೋऽಪಿ ಹಿ ।
ಮಾನುಷೇಣೈವ ಭಾವೇನ ಯುಕ್ತಾಃ ಸ್ಯುಃ ಕೇಶವಾದೃತೇ ।
ಕಾರ್ಯೇಷ್ವೇಷಾಂ ಕ್ರಮೇಣೈವ ವ್ಯಕ್ತಿಮಾಯಾಂತಿ ಸದ್ಗುಣಾಃ ॥ ೫೦ ॥

ಪದಚ್ಛೇದ :- ದೇವಾಃ, ಅಪಿ, ಮನುಷ್ಯೇಷು, ಜಾತಾಃ, ಸುಬಲಿನಃ, ಅಪಿ, ಹಿ । ಮಾನುಷೇಣ, ಏವ, ಭಾವೇನ, ಯುಕ್ತಾಃ, ಸ್ಯುಃ, ಕೇಶವಾದ್, ಋತೇ । ಕಾರ್ಯೇಷು, ಏಷಾಂ, ಕ್ರಮೇಣ, ಏವ, ವ್ಯಕ್ತಿಮ್, ಆಯಾಂತಿ, ಸದ್ಗುಣಾಃ ॥

ಅರ್ಥ :- ಹಿ ಯದ್ಯಪಿ ದೇವಾಃ = ದೇವತೆಗಳು, ಮನುಷ್ಯೇಷು = ಮನುಷ್ಯರಲ್ಲಿ, ಜಾತಾಃ ಅಪಿ = ಹುಟ್ಟಿದವರಾದರೂ, ಸುಬಲಿನಃ = ಭಾರೀ ಬಲಿಷ್ಠರೇ, ಅಪಿ = ಹಾಗಿದ್ದರೂ, ಕೇಶವಾದ್ = ಕೇಶವನನ್ನು, ಋತೇ = ಹೊರತುಪಡಿಸಿ, ಮಾನುಷೇಣ = ಮಾನುಷವಾದ, ಭಾವೇನ ಏವ = ಸ್ವಭಾವದಿಂದಲೇ, ಯುಕ್ತಾಃ = ಕೂಡಿದವರು, ಸ್ಯುಃ = ಆಗಿರುತ್ತಾರೆ, ಏಷಾಂ

= ಅಂತಹ ಈ ದೇವತೆಗಳ, **ಸದ್ಗುಣಾಃ** = ಬಲ ಮೊದಲಾದ ಸದ್ಗುಣಗಳು, **ಕಾರ್ಯೇಷು** = ಬಲಾದಿ ಕಾರ್ಯಗಳು ಪ್ರಾಪ್ತವಾದಾಗ, **ಕ್ರಮೇಣ ಏವ** = ತಾರತಮ್ಯಕ್ರಮಕ್ಕನುಗುಣವಾಗಿಯೇ, **ವ್ಯಕ್ತಿಮ್** = ಅಭಿವ್ಯಕ್ತಿಯನ್ನು, **ಆಯಾಂತಿ** = ಹೊಂದುತ್ತವೆ.

ತಾತ್ಪರ್ಯ :- ದೇವತೆಗಳು ಮನುಷ್ಯರಲ್ಲಿ ಹುಟ್ಟಿದಾಗ ಹೆಚ್ಚು ಬಲವುಳ್ಳವರಾದರೂ ಮನುಷ್ಯ ಸ್ವಭಾವವನ್ನೇ ತೋರಬೇಕು. ಈ ನಿಯಮಕ್ಕೆ ಶ್ರೀಹರಿಯೊಬ್ಬನೇ ಹೊರತಾಗಿದ್ದಾನೆ. ಪ್ರಸಂಗ ಬಂದಾಗ ಮಾತ್ರ ದೇವತೆಗಳ ಸದ್ಗುಣಗಳು ತಾರತಮ್ಯಕ್ರಮಕ್ಕನುಗುಣವಾಗಿ ಅಭಿವ್ಯಕ್ತಿ ಹೊಂದುತ್ತವೆ.

**ಅತೋ ಭೀಮಾರ್ಜುನೌ ಧರ್ಮಾದತ್ಯುತ್ತಮಬಲಾವಪಿ ।**
**ದೇವಮಾಯಾಂ ಸಮಾಶ್ರಿತ್ಯ ಧರ್ಮೇಣ ಸ್ವಾಪಿತೌ ಕ್ಷಣಾತ್ ॥ ೪೨೧ ॥**

**ಪದಚ್ಛೇದ :- ಅತಃ, ಭೀಮಾರ್ಜುನೌ, ಧರ್ಮಾದ್, ಅತ್ಯುತ್ತಮಬಲೌ, ಅಪಿ । ದೇವಮಾಯಾಂ, ಸಮಾಶ್ರಿತ್ಯ, ಧರ್ಮೇಣ, ಸ್ವಾಪಿತೌ, ಕ್ಷಣಾತ್ ॥**

**ಅರ್ಥ :- ಭೀಮಾರ್ಜುನೌ** = ಭೀಮಾರ್ಜುನರು, **ಧರ್ಮಾದ್** = ಯಮಧರ್ಮನಿಗಿಂತ, **ಅತ್ಯುತ್ತಮಬಲೌ ಅಪಿ** = ಅತ್ಯುತ್ತಮ ಬಲವುಳ್ಳವ-ರಾದರೂ, **ಅತಃ** = ಮಾನುಷಸ್ವಭಾವದಿಂದ ಕೂಡಿದವರಾಗಿದ್ದರಿಂದ, **ದೇವ-ಮಾಯಾಂ** = ನಿದ್ರಾಪ್ರಾಪಕವಾದ ದೇವತಾಶಕ್ತಿವಿಶೇಷವನ್ನು, **ಸಮಾಶ್ರಿತ್ಯ** = ಅವಲಂಬಿಸಿ, **ಧರ್ಮೇಣ** = ಯಮ ಧರ್ಮನಿಂದ, **ಕ್ಷಣಾತ್** = ಕ್ಷಣ ಮಾತ್ರದಿಂದ **ಸ್ವಾಪಿತೌ** = ಮಲಗಿಸಲ್ಪಟ್ಟರು.

ತಾತ್ಪರ್ಯ :- ಆದರಿಂದ ಭೀಮಾರ್ಜುನರು ಯಮನಿಗಿಂತ ಅತ್ಯುತ್ತಮ ಬಲ ಉಳ್ಳವರಾಗಿದ್ದರೂ ದೇವಮಾಯೆಯ ಬಲವನ್ನಾಶ್ರಯಿಸಿ ಯಮನಿಂದ ಕ್ಷಣಮಾತ್ರದಲ್ಲಿ ಮಲಗಿಸಲ್ಪಟ್ಟರು.

**ಮುಹೂರ್ತಮೇವ ಸಾ ಮಾಯಾ ತಯೋರಾಚ್ಛಾದನಕ್ಷಮಾ ।**
**ತತಃ ಪ್ರಬುದ್ಧಯೋರ್ಧರ್ಮೋ ನೈವ ಶಕ್ತಿಶತಾಂಶಭಾಕ್ ॥ ೪೨೨ ॥**

**ಪದಚ್ಛೇದ :-** ಮುಹೂರ್ತಮ್, ಏವ, ಸಾ, ಮಾಯಾ, ತಯೋಃ, ಆಚ್ಛಾದನೇ, ಕ್ಷಮಾ । ತತಃ, ಪ್ರಬುದ್ಧಯೋಃ, ಧರ್ಮಃ, ನ, ಏವ, ಶಕ್ತಿಶತಾಂಶಭಾಕ್ ॥

ಅರ್ಥ :- ಸಾ ಮಾಯಾ = ಆ ದೇವಮಾಯೆಯು, ಮುಹೂರ್ತಮ್ ಏವ = ಸ್ವಲ್ಪ ಕಾಲ ಮಾತ್ರ, ತಯೋಃ = ಆ ಭೀಮಾರ್ಜುನರ, ಆಚ್ಛಾದನೇ = ಬಲಾದಿಗಳನ್ನು ಮುಚ್ಚುವುದರಲ್ಲಿ, ಕ್ಷಮಾ = ಸಮರ್ಥವಾಗಿದೆ. ಧರ್ಮಃ = ಯಮಧರ್ಮನು, ತತಃ = ಅನಂತರ, ಪ್ರಬುದ್ಧಯೋಃ = ಎಚ್ಚರಗೊಂಡ ಭೀಮಾರ್ಜುನರ, ಶಕ್ತಿಶತಾಂಶಭಾಕ್ = ಶಕ್ತಿಯ ನೂರನೇ ಒಂದಂಶಕ್ಕೆ ಭಾಜನನು, ನ ಏವ = ಅಲ್ಲವೇ ಅಲ್ಲ.

ತಾತ್ಪರ್ಯ :- ಆ ದೇವಮಾಯೆ ಒಂದು ಮುಹೂರ್ತ ಕಾಲ (ಸ್ವಲ್ಪ-ಕಾಲ) ಮಾತ್ರ ಭೀಮಾರ್ಜುನರನ್ನು ಆವರಿಸಲು ಶಕ್ತವಾಗಿರುತ್ತದೆ. ಅನಂತರ ಭೀಮಾರ್ಜುನರು ಎಚ್ಚೆತ್ತರೆ ಅವರ ಶಕ್ತಿಯಲ್ಲಿ ನೂರನೆ ಒಂದಂಶದಷ್ಟು ಉಳ್ಳವನಲ್ಲ ಯಮ.

ಉಕ್ತಂ ಪಾದ್ಮಪುರಾಣೇ ಚ ತದೇತತ್ ಸರ್ವಮಂಜಸಾ ।
ತಸ್ಮಾನ್ನಾಶಕ್ತಿರನಯೋಃ ಸಂಭಾವ್ಯಾ ಭೀಮಪಾರ್ಥಯೋಃ ॥ ೪೨೩ ॥

ಪದಚ್ಛೇದ :- ಉಕ್ತಂ, ಪದ್ಮಪುರಾಣೇ, ಚ, ತದೇತತ್, ಸರ್ವಮ್, ಅಂಜಸಾ । ತಸ್ಮಾತ್, ನ, ಅಶಕ್ತಿಃ, ಅನಯೋಃ, ಸಂಭಾವ್ಯಾ, ಭೀಮಪಾರ್ಥಯೋಃ ॥

ಅರ್ಥ :- ತದೇತತ್ = ಆ ಯಾವ ಈ, ಸರ್ವಮ್ = ಹಿಂದೆ ಹೇಳಲ್ಪಟ್ಟ ಎಲ್ಲ ವಿಷಯವು, ಪದ್ಮ ಪುರಾಣೇ ಚ = ಪದ್ಮಪುರಾಣದಲ್ಲೂ, ಅಂಜಸಾ = ಸ್ಪಷ್ಟವಾಗಿ, ಉಕ್ತಂ = ಹೇಳಲ್ಪಟ್ಟಿದೆ, ತಸ್ಮಾತ್ = ಆದ್ದರಿಂದ, ಅನಯೋಃ = ಈ, ಭೀಮಪಾರ್ಥಯೋಃ = ಭೀಮಾರ್ಜುನರಲ್ಲಿ, ಅಶಕ್ತಿಃ = ಅಸಾಮರ್ಥ್ಯವು, ನ ಸಂಭಾವ್ಯಾ = ತಿಳಿಯಲ್ಪಡಬಾರದು.

ತಾತ್ಪರ್ಯ :- ಇದೆಲ್ಲವೂ ಪಾದ್ಮಪುರಾಣದಲ್ಲಿ ಚೆನ್ನಾಗಿ ಉಕ್ತವಾಗಿದೆ. ಆದರಿಂದ ಭೀಮಾರ್ಜುನರಿಗೆ ಅಶಕ್ತಿಯನ್ನು ಶಂಕಿಸಬಾರದು.

ಧರ್ಮಾತ್ಮಜೋऽಥಾऽಜಗಾಮೋದಕಾಂತಂ
ದೃಷ್ಟ್ವಾ ಭ್ರಾತೄಂಸ್ತತ್ರ ದುಃಖಾಭಿತಪ್ತಃ ।
ಇಚ್ಛನ್ ಪಾತುಂ ವಾರಿ ಸಂವಾರಿತಸ್ತ
ಪಿತ್ರಾ ಬಕಾಕಾರಮಿತೇನ ನಾಪಾತ್ ॥ ೪೨೪ ॥

ಪದಚ್ಛೇದ :- ಧರ್ಮಾತ್ಮಜಃ, ಅಥ, ಆಜಗಾಮ, ಉದಕಾಂತಂ, ದೃಷ್ಟ್ವಾ, ಭ್ರಾತೄನ್, ತತ್ರ, ದುಃಖಾಭಿತಪ್ತಃ । ಇಚ್ಛನ್, ಪಾತುಂ, ವಾರಿ, ಸಂವಾರಿತಃ, ಚ, ಪಿತ್ರಾ, ಬಕಾಕಾರಮ್, ಇತೇನ, ನ, ಅಪಾತ್ ॥

**ಅರ್ಥ** :- **ಅಥ** = ಅನಂತರ, **ಧರ್ಮಾತ್ಮಜಃ** = ಯುಧಿಷ್ಠಿರನು, **ಉದಕಾಂತಮ್** = ಜಲಸಮೀಪಕ್ಕೆ, **ಆಜಗಾಮ** = ಬಂದನು, **ತತ್ರ** = ಆ ನೀರಿನ ದಡದಲ್ಲಿ, **ಭ್ರಾತೄನ್** = ತಮ್ಮಂದಿರನ್ನು, **ದೃಷ್ಟ್ವಾ** = ನೋಡಿ, **ದುಃಖಾಭಿತಪ್ತಃ ಚ** = ಭ್ರಾತೃಶೋಕದಿಂದ ಪೀಡಿತನಾಗಿದ್ದರೂ, **ವಾರಿ** = ನೀರನ್ನು **ಪಾತುಂ** = ಕುಡಿಯಲು, **ಇಚ್ಛನ್** = ಬಯಸುತ್ತಾ, **ಬಕಾಕಾರಮ್** = ಬಕ ಪಕ್ಷಿ ಸ್ವರೂಪವನ್ನು **ಇತೇನ** = ಹೊಂದಿರುವ, **ಪಿತ್ರಾ** = ತಂದೆಯಾದ ಯಮಧರ್ಮನಿಂದ, **ಸಂವಾರಿತಃ** = ತಡೆಯಲ್ಪಟ್ಟವನಾಗಿ, **ನ ಅಪಾತ್** = ಕುಡಿಯಲಿಲ್ಲ.

**ತಾತ್ಪರ್ಯ** :- ಅನಂತರ ಧರ್ಮರಾಜ ನೀರಿನ ಹತ್ತಿರ ಬಂದ ತಮ್ಮಂದಿರು ಮಲಗಿರುವುದನ್ನು ಕಂಡು ದುಃಖದಿಂದ ನೊಂದು ಬೆಂದ. ನೀರು ಕುಡಿಯಲು ಬಯಸಿದ. ಬಕದ ಆಕಾರವನ್ನು ಧರಿಸಿದ್ದ ತಂದೆ ಯಮ ತಡೆದುದರಿಂದ ಕುಡಿಯಲಿಲ್ಲ.

**ವಿಶೇಷಾಂಶ** - ಇದು ಕೌರವರ ಕೃತ್ಯವೋ ಏನೋ? ಎಂದು ಯುಧಿಷ್ಠಿರ ಯೋಚಿಸುತ್ತಿದ್ದಾಗ, ''ನಾನು ಬಕಪಕ್ಷಿ, ನಿನ್ನ ತಮ್ಮಂದಿರನ್ನೆಲ್ಲ ಮಲಗಿಸಿದವನು. ನನ್ನ ಪ್ರಶ್ನೆಗಳಿಗೆ ಉತ್ತರಿಸದೆ ನೀರು ಕುಡಿದರೆ ನೀನೂ ಮಲಗುವೆ'' ಎಂದಿತು ಬಕಪಕ್ಷಿ.

**ಅರ್ಥೇ ಭ್ರಾತೄಣಾಮೈಚ್ಛದಸೌ ತದೀಯ-**
**ಪ್ರಶ್ನಪ್ರತಿವ್ಯಾಹರಣಂ ದಯಾಳುಃ ।**
**ತತೋ ಧರ್ಮೋ ಯಕ್ಷತನುಃ ಸ ಭೂತ್ವಾ**
**ಪ್ರಶ್ನಾಂಶ್ಚಕ್ರೇ ವ್ಯಾಕರೋತ್ ತಾನ್ ಸ ಪಾರ್ಥಃ ॥ ೪೨೫ ॥**

ಪದಚ್ಛೇದ :- ಅರ್ಥೇ, ಭ್ರಾತೄಣಾಮ್, ಐಚ್ಛದ್, ಅಸೌ, ತದೀಯಪ್ರಶ್ನ ಪ್ರತಿವ್ಯಾಹರಣಂ, ದಯಾಲುಃ । ತತಃ, ಧರ್ಮಃ, ಯಕ್ಷತನುಃ, ಸಃ, ಭೂತ್ವಾ, ಪ್ರಶ್ನಾನ್, ಚಕ್ರೇ, ವ್ಯಾಕರೋತ್, ತಾನ್, ಸಃ, ಪಾರ್ಥಃ ॥

ಅರ್ಥ :- ದಯಾಲುಃ = ದಯಾಮಯನಾದ, ಅಸೌ = ಯುಧಿಷ್ಠಿರನು, ಭ್ರಾತೄಣಾವ್ = ತಮ್ಮಂದಿರ, ಅರ್ಥೇ = ಏಳುವಿಕೆಗೋಸ್ಕರ, ತದೀಯ-ಪ್ರಶ್ನ- ಪ್ರತಿವ್ಯಾಹರಣಮ್ = ಆ ಯಮಧರ್ಮನ ಒಂದೊಂದು ಪ್ರಶ್ನೆಗೆ ಪ್ರತಿಯಾಗಿ ಉತ್ತರ ಕೊಡುವಿಕೆಯನ್ನು, ಐಚ್ಛತ್ = ಬಯಸಿದನು. (ಆದ್ದರಿಂದಲೇ ಅವನು ದಯಾಲು). ತತಃ = ಅನಂತರ, ಸಃ = ಬಕರೂಪದಲ್ಲಿದ್ದ, ಧರ್ಮಃ = ಯಮ- ಧರ್ಮನು, ಯಕ್ಷತನುಃ = ಯಕ್ಷಸ್ವರೂಪನು, ಭೂತ್ವಾ = ಆಗಿ, ಪ್ರಶ್ನಾನ್, = ಪ್ರಶ್ನೆಗಳನ್ನು, ಚಕ್ರೇ = ಮಾಡಿದನು. ತಾನ್ = ಆ ಪ್ರಶ್ನೆಗಳನ್ನು, ಸಃ = ಆ, ಪಾರ್ಥಃ = ಯುಧಿಷ್ಠಿರನು, ವ್ಯಾಕರೋತ್ = ಉತ್ತರಿಸಿದನು.

ತಾತ್ಪರ್ಯ :- ದಯಾಳುವಾದ ಧರ್ಮರಾಜ ತಮ್ಮಂದಿರ ಜೀವನಕ್ಕೋಸ್ಕರ ಯಮನ ಪ್ರಶ್ನೆಗಳಿಗೆ ಉತ್ತರಿಸಲು ಕೇಳಿದ. ಧರ್ಮರಾಜ ಅವುಗಳನ್ನು ಉತ್ತರಿಸಿದ.

ವಿಶೇಷಾಂಶ - ನೀನು ಬಕಪಕ್ಷಿಯಲ್ಲ. ದೇವ ಅಸುರ ಗಂಧರ್ವಾದಿಗಳಿಗೆ ಯಾರಿಗೂ ಇವರನ್ನು ಇದಿರಿಸುವ ಶಕ್ತಿ ಇಲ್ಲ. ನೀನು ಯಾರು ನೀನು ಯಾರು ಹೇಳು' ಎಂದು ಧರ್ಮರಾಜ ಕೇಳಿದಾಗ ಯಮ ವಿಕೃತಾಕಾರದ ಭಯಂಕರ ಯಕ್ಷರೂಪದಿಂದ ಕಾಣಿಸಿಕೊಂಡ. ನಾನು ಯಕ್ಷ ಬಕಪಕ್ಷಿಯಲ್ಲ ಎಂದ. ಆದರಿಂದ ಯಮ ಕೇಳುವ ಪ್ರಶ್ನೆಗಳು ಯಕ್ಷಪ್ರಶ್ನೆ ಎಂದು ಪ್ರಸಿದ್ಧವಾಗಿವೆ.

ತತಸ್ತುಷ್ಟೋ ವರಮಸ್ಮೈ ದದೌ ಸ
ಏಕೋತ್ಥಾನಂ ಭ್ರಾತೃಮಧ್ಯೇ ಸ ವವ್ರೇ ।
ಯದ್ಯೇಕಃ ಸ್ಯಾನ್ನಕುಲೋಽಸ್ತ್ವಿತ್ಯಥಾಽಹ
ತುಷ್ಟೋ ಧರ್ಮಃ ಕಥಮೇತತ್ ಕೃತಂ ತೇ ।
ಅತಿಪ್ರೀತಿರ್ಭೀಮಸೇನೇ ತವಾಸ್ತಿ
ಬಲೀ ಚಾಸೌ ರಾಜ್ಯಹೇತುಸ್ತವಸ್ಯಾತ್ ॥ ೪೨೬ ॥

ಪದಚ್ಛೇದ :- ತತಃ, ತುಷ್ಟಃ, ವರಮ್, ಅಸ್ಮೈ, ದದೌ, ಸಃ, ಏಕೋತ್ಥಾನಂ, ಭಾತೃಮಧ್ಯೇ, ಸಃ, ವವ್ರೇ । ಯದಿ, ಏಕಃ, ಸ್ಯಾತ್, ನಕುಲಃ, ಅಸ್ತು, ಇತಿ, ಅಥ, ಆಹ, ತುಷ್ಟಃ, ಧರ್ಮಃ, ಕಥಮ್, ಏತತ್, ಕೃತಂ, ತೇ, ಅತಿಪ್ರೀತಿಃ, ಭೀಮಸೇನೇ, ತವ, ಅಸ್ತಿ, ಬಲೀ, ಚ, ಅಸೌ, ರಾಜ್ಯಹೇತುಃ, ತವ, ಸ್ಯಾತ್ ।

**ಅರ್ಥ** :- **ತತಃ** = ಅನಂತರ, **ತುಷ್ಟಃ** = ಸಂತುಷ್ಟನಾದ, **ಸಃ** = ಯಮಧರ್ಮನು, **ಭ್ರಾತೃಮಧ್ಯೇ** = ಯುಧಿಷ್ಠಿರನ ತಮ್ಮಂದಿರಲ್ಲಿ, **ಏಕೋತ್ಥಾನಂ** = ಒಬ್ಬರ ಜೀವನವನ್ನು, **ವರಮ್** = ವರವನ್ನಾಗಿ, **ಅಸ್ಮೈ** = ಈ ಯುಧಿಷ್ಠಿರನಿಗಾಗಿ, **ದದೌ** = ಕೊಟ್ಟನು. **ಸಃ** = ಯುಧಿಷ್ಠಿರನು, **ಯದಿ** = ಒಂದು ವೇಳೆ, **ಏಕಃ ಸ್ಯಾತ್** = ಒಬ್ಬ ಬದುಕುವುದಾದರೆ, **ನಕುಲಃ ಅಸ್ತು** = ನಕುಲ ಬದುಕಲಿ, **ಇತಿ** = ಎಂದು, **ವವ್ರೇ** = ವರಿಸಿದನು. **ಅಥ** = ಅನಂತರ, **ತುಷ್ಟಃ** = ಸಂತುಷ್ಟನಾದ, **ಧರ್ಮಃ** = ಯಮಧರ್ಮನು, **ಆಹ** = ಹೇಳಿದನು, **ತೇ** = ನಿನ್ನಿಂದ, **ಏತತ್** = ಮಲತಾಯಿಯ ಮಗನಾದ ನಕುಲನ ಜೀವನದ ಯಾಚನೆಯು, **ಕಥಂ** = ಹೇಗೆ ತಾನೆ, **ಕೃತಂ** = ಮಾಡಲ್ಪಟ್ಟಿತು. **ಚ** = ಏಕೆಂದರೆ **ತವ** = ನಿನಗೆ, **ಭೀಮಸೇನೇ** = ಭೀಮನಲ್ಲಿ, **ಅತಿಪ್ರೀತಿಃ** = ಅತ್ಯಂತ ಪ್ರೀತಿಯು, **ಅಸ್ತಿ** = ಇದೆ, **ಬಲೀ** = ಬಲಿಷ್ಠನಾದ, **ಅಸೌ** = ಈ ಭೀಮನು, **ತವ** = ನಿನಗೆ, **ರಾಜ್ಯಹೇತುಃ** = ರಾಜ್ಯ ಸಿಗಲು ಕಾರಣನೂ, **ಸ್ಯಾತ್** = ಆದಾನು.

**ತಾತ್ಪರ್ಯ** :- ಆಗ ಯಮ ಸಂತುಷ್ಟನಾಗಿ ಯುಧಿಷ್ಠಿರನಿಗೆ ನಿನ್ನ ತಮ್ಮಂದಿರಲ್ಲಿ ಯಾರಾದರೂ ಒಬ್ಬ ಮಾತ್ರ ಎದ್ದು ಬರುವನೆಂದು ವರ ನೀಡಿದ. ಒಬ್ಬ ಏಳುವುದಾದರೆ ನಕುಲ ಏಳಲಿ, ಎಂದ ಧರ್ಮರಾಜ. ಯಮ ಸಂತುಷ್ಟನಾಗಿ ಕೇಳಿದ. ನೀನು ಹೇಗೆ ಹೀಗೆ ಮಾಡಿದೆ?

**ಇತ್ಯುಕ್ತ ಊಚೇ ಮಾದ್ರಿಪುತ್ರಂ ವಿಹಾಯ**
**ಕುಂತೀಪುತ್ರೋ ನ ಮಯೋತ್ಥಾಪನೀಯಃ ।**
**ಸ ಏವಮುಕ್ತೋ ನಿತರಾಂ ಪ್ರೀಯಮಾಣ**
**ಉತ್ಥಾಪಯಾಮಾಸ ಚ ತಾನ್ ಸಮಸ್ತಾನ್ ॥ ೪೨೭ ॥**

ಪದಚ್ಛೇದ :– ಇತಿ, ಉಕ್ತಃ, ಊಚೇ, ಮಾದ್ರಿಪುತ್ರಂ ವಿಹಾಯ, ಕುಂತೀಪುತ್ರಃ, ನ, ಮಯಾ, ಉತ್ಥಾಪನೀಯಃ । ಸಃ, ಏವಮ್, ಉಕ್ತಃ, ನಿತರಾಂ, ಪ್ರೀಯಮಾಣಃ, ಉತ್ಥಾಪಯಾಮಾಸ, ಚ, ತಾನ್, ಸಮಸ್ತಾನ್ ॥

**ಅರ್ಥ** :- **ಇತಿ** = ಎಂದು, **ಉಕ್ತಃ** = ಹೇಳಲ್ಪಟ್ಟ ರಾಜನು, **ಊಚೇ** = ಹೇಳಿದನು, **ಮಾದ್ರಿಪುತ್ರಂ** = ಮಾದ್ರಿಯ ಮಗನನ್ನು, **ವಿಹಾಯ** = ಬಿಟ್ಟು, **ಕುಂತೀಪುತ್ರ** = ಕುಂತೀಪುತ್ರನು, **ಮಯಾ** = ನನ್ನಿಂದ, **ಉತ್ಥಾಪನೀಯಃ** =

ಬದುಕಿಸಲ್ಪಡಲು ಯೋಗ್ಯನು, ನ = ಅಲ್ಲ, ಏವಮ್ = ಹೀಗೆ, ಉಕ್ತಃ = ಹೇಳಲ್ಪಟ್ಟ, ಸಃ = ಯಕ್ಷರೂಪಿಯಾದ ಯಮನು, ನಿತರಾಂ = ಅತ್ಯಂತವಾಗಿ, ಪ್ರೀಯಮಾಣಃ = ಸಂತುಷ್ಟನಾಗಿ, ತಾನ್, ಆ ಎಚ್ಚರ ತಪ್ಪಿದ, ಸಮಸ್ತಾನ್ ಚ = ಎಲ್ಲರನ್ನೂ, ಉತ್ಥಾಪಯಾಮಾಸ = ಎಬ್ಬಿಸಿದನು.

ತಾತ್ಪರ್ಯ :- ನಿನಗೆ ಅತ್ಯಂತ ಪ್ರೀತಿ ಭೀಮನಲ್ಲಿ ಇದೆ. ಬಲಿಷ್ಠನಾದ ಅವನೇ ನಿನಗೆ ರಾಜ್ಯಲಾಭಕ್ಕೆ ಕಾರಣನಾಗುವನಲ್ಲವೇ. ಹೀಗೆ ಯಮ ಹೇಳಿದಾಗ ಧರ್ಮರಾಜನೆಂದ, 'ಮಾದ್ರೀಪುತ್ರನನ್ನು ಬಿಟ್ಟು ಹೇಗೆ ಕುಂತೀ ಪುತ್ರನನ್ನು ನಾನು ಎಬ್ಬಿಸುವುದು ಉಚಿತವಲ್ಲ.' ಧರ್ಮರಾಜ ಹೀಗೆ ಹೇಳಿದಾಗ ಯಮ ಬಹಳ ಸಂತಸಗೊಂಡು ಎಲ್ಲ ಪಾಂಡವರನ್ನೂ ಎಬ್ಬಿಸಿದ.

ಯಥೇಷ್ಟರೂಪಪ್ರಾಪ್ತಿಮೇಷಾಂ ಪುನಶ್ಚ
ಸ್ವಕಾಮತೋ ನಿಜರೂಪಾಪ್ತಿಮಾದಾತ್ ।
ಅಜ್ಞಾತವಾಸೇಽಜ್ಞಾತತಾಂ ಸರ್ವದೈವ
ದದೌ ತೇಷಾಂ ಪ್ರೀತ ಇವಾಽನೃಶಂಸ್ಯಾತ್ ।
ಏವಂ ಕ್ರೀಡನ್ ಪುತ್ರ ಇತ್ಯಾತ್ಮನೈವ
ಯಶೋಧರ್ಮಾವಾತ್ಮನೋ ವರ್ಧಯನ್ ಸಃ ॥ ೪೨೮ ॥

ಪದಚ್ಛೇದ :- ಯಥೇಷ್ಟರೂಪಪ್ರಾಪ್ತಿಮ್, ಏಷಾಂ, ಪುನಃ, ಚ, ಸ್ವಕಾಮತಃ, ನಿಜರೂಪಾಪ್ತಿಮ್, ಆದಾತ್ । ಅಜ್ಞಾತವಾಸೇ, ಅಜ್ಞಾತತಾಂ, ಸರ್ವದಾ, ಏವ, ದದೌ, ತೇಷಾಂ, ಪ್ರೀತಃ, ಏವ, ಆನೃಶಂಸ್ಯಾತ್ । ಏವಂ, ಕ್ರೀಡನ್, ಪುತ್ರಃ, ಇತಿ, ಆತ್ಮನಾ, ಏವ, ಯಶೋಧರ್ಮೌ, ಆತ್ಮನಃ, ವರ್ಧಯನ್, ಸಃ ॥

ಅರ್ಥ :- ಚ = ಮತ್ತು, ಸಃ = ಯಮನು, ಪುತ್ರಃ ಇತಿ = ಮಗನೆಂದು, ಆತ್ಮನಾ ಏವ = ತಾನೇ ಆಗಿರುವ ಯುಧಿಷ್ಠಿರನೊಂದಿಗೇನೇ, ಏವಂ = ಈ ರೀತಿಯಾಗಿ, ಕ್ರೀಡನ್ = ಆಟವಾಡುತ್ತಾ, ಆತ್ಮನಃ = ತನ್ನ (ಮಗನ), ಯಶೋಧರ್ಮೌ = ಯಶಸ್ಸು ಹಾಗೂ ಧರ್ಮವನ್ನು, ವರ್ಧಯನ್ = ಬೆಳೆಸುತ್ತಾ, ತೇಷಾಂ = ಪಾಂಡವರ, ಆನೃಶಂಸ್ಯಾತ್ = ಅಹಿಂಸೆಯಿಂದ, ಪ್ರೀತಃ ಏವ = ಸಂತುಷ್ಟನಾಗಿಯೇ, ಏಷಾಂ = ಈ ಪಾಂಡವರಿಗೆ, ಯಥೇಷ್ಟರೂಪಪ್ರಾಪ್ತಿಮ್ = ಬಯಸಿದ ರೂಪದ ಪ್ರಾಪ್ತಿಯನ್ನು, ಪುನಃ = ಮತ್ತೆ, ಸ್ವಕಾಮತಃ = ತಮ್ಮ ಬಯಕೆಗನುಗುಣವಾಗಿ, ನಿಜರೂಪಾಪ್ತಿಮ್ =

ತಮ್ಮ ರೂಪವನ್ನು ಹೊಂದುವ ಸಾಮರ್ಥ್ಯವನ್ನು, ಆದಾತ್ = ಕೊಟ್ಟನು, **ಚ** = ಮತ್ತು, **ಅಜ್ಞಾತವಾಸೇ** = ಅಜ್ಞಾತವಾಸ ಕಾಲದಲ್ಲಿ, **ಸರ್ವದಾ ಏವ** = ಅಜ್ಞಾತವಾಸ ಮುಗಿಯುವವರೆಗೂ, **ಅಜ್ಞಾತತಾಂ** = ಯಾರಿಂದಲೂ ಗುರುತಿಸಲಾಗದಿರುವಿಕೆಯನ್ನ, **ದದೌ** = ಕೊಟ್ಟನು.

**ತಾತ್ಪರ್ಯ** :- (ಯಕ್ಷನು ತಾನು, ಯಮನೆಂಬುವುದನ್ನು ತಿಳಿಸಿ) ಪಾಂಡವರಿಗೆ ತಾವು ಬಯಸಿದ ರೂಪಪ್ರಾಪ್ತಿ ವರವನ್ನೂ ನೀಡಿದ. ಸ್ವೇಚ್ಛೆಯಿಂದ ನಿಜರೂಪ ಪ್ರಾಪ್ತಿಯ ವರವನ್ನೂ ನೀಡಿದ. ಯುಧಿಷ್ಠಿರನ ಹಾಗೂ ಭೀಮಾದಿಗಳ ದಯಾಧರ್ಮದಿಂದ ಸಂತುಷ್ಟನಾದ ಯಮ, ಹೀಗೆ ಮಗನೆಂದು ತನ್ನೊಡನೆಯೆ ತಾನು ಕ್ರೀಡಿಸುತ್ತಾ, ಪಾಂಡವರಿಗೆ ಅಜ್ಞಾತವಾಸ ಕಾಲದಲ್ಲಿ ತಮ್ಮ ನಿಜರೂಪದಲ್ಲಿ ಓಡಾಡಿದರೂ ಸದಾ ಅಜ್ಞಾತವಾಗಿರುವಂತೆ ವರ ನೀಡಿದ. ಹಾಗೂ ತಾನೇ ಆದ ಯುಧಿಷ್ಠಿರನ ಯಶಸ್ಸು ಹಾಗೂ ಧರ್ಮಗಳನ್ನು ಬೆಳೆಸಿದ.

**ಯುಧಿಷ್ಠಿರಾತ್ಮನಸ್ತಸ್ಯ ಯಶೋಧರ್ಮವಿವೃದ್ಧಯೇ ।**
**ಕೃತ್ವಾಽರಣ್ಯಪಹಾರಾದಿ ಪುನರ್ದತ್ವಾ ಚ ತತ್ ಸ್ವಯಮ್ ।**
**ದಾತುಂ ವಿಪ್ರಾಯ ತದ್ಧಸ್ತೇ ಯಯೌ ಧರ್ಮೋ ದಿವಂ ಪುನಃ ॥ ೪೨ ॥**

ಪದಚ್ಛೇದ :- **ಯುಧಿಷ್ಠಿರಾತ್ಮನಃ, ತಸ್ಯ, ಯಶೋಧರ್ಮ ವಿವೃದ್ಧಯೇ । ಕೃತ್ವಾ, ಅರಣ್ಯಪಹಾರಾದಿ, ಪುನಃ, ದತ್ವಾ, ಚ, ತತ್, ಸ್ವಯಮ್ । ದಾತುಂ, ವಿಪ್ರಾಯ, ತದ್ಧಸ್ತೇ, ಯಯೌ, ಧರ್ಮಃ, ದಿವಂ, ಪುನಃ ॥**

**ಅರ್ಥ** :- **ಯುಧಿಷ್ಠಿರಾತ್ಮನಃ** = ಯುಧಿಷ್ಠಿರ ಸ್ವರೂಪನಾದ, **ತಸ್ಯ** = ಅವನ, **ಯಶೋಧರ್ಮವಿವೃದ್ಧಯೇ** = ಯಶಸ್ಸು, ಧರ್ಮಗಳ ವೃದ್ಧಿಗಾಗಿ, **ಸ್ವಯಂ** = ತಾನೇ ಜಿಂಕೆ ರೂಪದಿಂದ, **ಅರಣ್ಯಪಹಾರಾದಿ** = ಅರಣೀ ಅಪಹಾರ ಮೊದಲಾದವುಗಳನ್ನು, **ಕೃತ್ವಾ** = ಮಾಡಿ, **ಪುನಃ** = ಮತ್ತೆ, **ತತ್** = ಆ ಯಜ್ಞ ಪಾತ್ರೆಯನ್ನು, **ವಿಪ್ರಾಯ** = ಬ್ರಾಹ್ಮಣನಿಗೆ, **ದಾತುಂ** = ಕೊಡುವುದಕ್ಕಾಗಿ, **ತದ್ಧಸ್ತೇ ಚ** = ಆ ಯುಧಿಷ್ಠಿರನ ಕೈಯ್ಯಲ್ಲೇ, **ದತ್ವಾ** = ಕೊಟ್ಟು, **ಪುನಃ** = ನಂತರ, **ಧರ್ಮಃ** = ಯಮನು, **ದಿವಂ** = ಸ್ವರ್ಗವನ್ನು, **ಯಯೌ** = ಹೋದನು.

ತಾತ್ಪರ್ಯ :- ಯುಧಿಷ್ಠಿರ ರೂಪದಲ್ಲಿ ತನ್ನ ಯಶಸ್ಸು ಪುಣ್ಯಗಳ ವೃದ್ಧಿಗಾಗಿ ಅರಣಿಯ ಅಪಹಾರಾದಿಗಳನ್ನು ತಾನೇ ಮಾಡಿ, ಪುನಃ, ತಾನೇ ಅದನ್ನು ಬ್ರಾಹ್ಮಣನಿಗೆ ಕೊಡುವುದಕ್ಕಾಗಿ ಯುಧಿಷ್ಠಿರನ ಕೈಯಲ್ಲಿ ಕೊಟ್ಟು, ಅನಂತರ ಯಮ ಸ್ವರ್ಗಕ್ಕೆ ತೆರಳಿದ.

**ತತೋ ರಾಜಾ ಭೀಮಸೇನಾರ್ಜುನೌ ಚ**
**ಸಾರ್ದ್ಧಂ ಯಮಾಭ್ಯಾಮರಣೀಂ ಪ್ರದಾಯ ।**
**ಮುದಾ ಯುತಾಃ ಕೃಷ್ಣಯಾ ಸಾರ್ದ್ಧಮೇವ**
**ಸಂತುಷ್ಟುವುಃ ಕೃಷ್ಣಮನಂತಮಚ್ಯುತಮ್ ॥ ೪೩೦ ॥**

ಪದಚ್ಛೇದ :- ತತಃ, ರಾಜಾ, ಭೀಮಸೇನಾರ್ಜುನೌ, ಚ, ಸಾರ್ಧಂ, ಯಮಾಭ್ಯಾಮ್, ಅರಣೀಂ, ಪ್ರದಾಯ । ಮುದಾ, ಯುತಾಃ, ಕೃಷ್ಣಯಾ, ಸಾರ್ಧಮ್, ಏವ, ಸಂತುಷ್ಟುವುಃ, ಕೃಷ್ಣಮ್, ಅನಂತಮ್, ಅಚ್ಯುತಮ್ ॥

ಅರ್ಥ :- ತತಃ = ಅನಂತರ, ರಾಜಾ = ಯುಧಿಷ್ಠಿರನು, ಭೀಮಸೇನಾರ್ಜುನೌ = ಭೀಮಾರ್ಜುನರು, ಚ = ಮತ್ತು, ಯಮಾಭ್ಯಾಂ ಸಾರ್ಧಂ = ನಕುಲ ಸಹದೇವರೊಟ್ಟಿಗೆ, ಅರಣೀಂ = ಅರಣೀಯನ್ನು, ಪ್ರದಾಯ = ಬ್ರಾಹ್ಮಣನಿಗೆ ಕೊಟ್ಟು, ಮುದಾ = ಸಂತೋಷದಿಂದ, ಯುತಾಃ = ಕೂಡಿದವರಾಗಿ, ಕೃಷ್ಣಯಾ ಸಾರ್ಧಮ್ ಏವ = ದ್ರೌಪದಿಯ ಒಟ್ಟಿಗೇನೇ, ಅನಂತಮ್ = ದೇಶ, ಕಾಲ, ಗುಣಗಳ ಎಲ್ಲೆಯಿಲ್ಲದ, ಅಚ್ಯುತಮ್ = ನಾಶರಹಿತನಾದ, ಕೃಷ್ಣಮ್ = ಕೃಷ್ಣನನ್ನು, ಸಂತುಷ್ಟುವು = ಚೆನ್ನಾಗಿ ಸ್ತುತಿಸಿದರು.

ತಾತ್ಪರ್ಯ :- ಅನಂತರ ರಾಜಾ ಯುಧಿಷ್ಠಿರ ಮತ್ತು ಭೀಮಾರ್ಜುನರು ನಕುಲ ಸಹದೇವರೊಂದಿಗೆ ಬ್ರಾಹ್ಮಣನಿಗೆ ಅರಣಿಯನ್ನು ಕೊಟ್ಟು ಸಂತೋಷಪಡಿಸಿ, ಆನಂದಯುಕ್ತರಾಗಿ ದ್ರೌಪದಿಯೊಂದಿಗೆ ಅಚ್ಯುತನೆನಿಸಿದ. ಶ್ರೀಕೃಷ್ಣನನ್ನು ಚೆನ್ನಾಗಿ ಸ್ತುತಿಸಿದರು.

**ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ಶ್ರೀಮಹಾಭಾರತತಾತ್ಪರ್ಯನಿರ್ಣಯೇ**
**ಅರಣೀಪ್ರಾಪ್ತಿರ್ನಾಮ**
**ದ್ವಾವಿಂಶೋಽಧ್ಯಾಯಃ**

# ಅಧ್ಯಾಯ - 23

ಅಜ್ಞಾತವಾಸಸಮಾಪ್ತಿಃ

ನಾರಾಯಣಾನುಗ್ರಹತೋ ಯಥಾವ-
ನ್ನಿಸ್ತೀರ್ಯ ತಾನ್ ದ್ವಾದಶಾಬ್ದಾನ್ ವನೇ ತೇ ।
ವಿಸೃಜ್ಯ ಚ ಬ್ರಾಹ್ಮಣಾದೀನ್ ಸಧೌಮ್ಯಾ-
ನಜ್ಞಾತವಾಸಾಯ ತತೋ ಮನೋ ದಧುಃ ॥ ೧ ॥

ಪದಚ್ಛೇದ :- ನಾರಾಯಣಾನುಗ್ರಹತಃ ಯಥಾವತ್, ನಿಸ್ತೀರ್ಯ, ತಾನ್, ದ್ವಾದಶಾಬ್ದಾನ್, ವನೆ, ತೇ ವಿಸೃಜ್ಯ, ಚ ಬ್ರಾಹ್ಮಣಾದೀನ್, ಸಧೌಮ್ಯಾನ್, ಅಜ್ಞಾತವಾಸಾಯ, ತತಃ, ಮನಃ, ದಧುಃ ।

ಅರ್ಥ :- ನಾರಾಯಣಾನುಗ್ರತಃ = ಶ್ರೀಹರಿಯ ಅನುಗ್ರಹದಿಂದ, ತೇ = ಆ ಪಾಂಡವರು, ಯಥಾವತ್ = ಸರಿಯಾದ ರೀತಿಯಲ್ಲಿ, ತಾನ್ = ಆ ದ್ವಾದಶಾಬ್ದಾನ್, ವನೇ = ಕಾಡಿನಲ್ಲಿ, ನಿಸ್ತೀರ್ಯ = ಕಳೆದು, ಸಧೌಮ್ಯಾನ್ = ಧೌಮ್ಯರಿಂದ ಕೂಡಿದ, ಬ್ರಾಹ್ಮಣಾದೀನ್ ಚ = ಬ್ರಾಹ್ಮಣರು ಮೊದಲಾದವರನ್ನೂ ಕೂಡ, ವಿಸೃಜ್ಯ = ಬಿಟ್ಟು, ತತಃ = ಅನಂತರ ಅಜ್ಞಾತವಾಸಾಯ = ಅಜ್ಞಾತವಾಸಕ್ಕೋಸ್ಕರ, ಮನಃ = ಮನಸ್ಸನ್ನು, ದಧುಃ = ಮಾಡಿದರು. (ಧರಿಸಿದರು).

ತಾತ್ಪರ್ಯ :- ಭಗವಂತನ ಅನುಗ್ರಹದಿಂದ ಪಾಂಡವರು ವನದಲ್ಲಿ ವನವಾಸದ ಆ ಹನ್ನೆರಡು ವರುಷಗಳನ್ನು ಹೇಗೆ ವನವಾಸ ಮಾಡಬೇಕೆಂದು ನಿರ್ಧಾರವಾಗಿತ್ತೋ ಹಾಗೆ ಸರಿಯಾದ ಕ್ರಮದಲ್ಲಿ ಕಳೆದು ದೌಮ್ಯ ಮುಂತಾದ ಋಷಮುನಿಗಳನ್ನೂ, ಹಾಗೆಯೇ ಬ್ರಾಹ್ಮಣರನ್ನೂ ಬೀಳ್ಕೊಟ್ಟು, ಅಜ್ಞಾತವಾಸ ಮಾಡುವುದಕ್ಕೋಸ್ಕರ ಮನಸ್ಸನ್ನು ಮಾಡಿದರು.

ಗತ್ವಾ ವಿರಾಟಸ್ಯ ಪುರೀಂ ನಿಧಾಯ
ಹೇತೀಃ ಶಮ್ಯಾಂ ಛನ್ನರೂಪಾ ಬಭೂವುಃ ।
ಯತಿಃ ಸೂದಃ ಷಂಢವೇಷೋऽಶ್ವಸೂತ-
ವೇಷೋ ಗೋಪೋ ಗಂಧಕರ್ತ್ರೀ ಚ ಜಾತಾಃ ॥ ೨ ॥

ಪದಚ್ಛೇದ :- ಗತ್ವಾ, ವಿರಾಟಸ್ಯ, ಪುರೀಂ, ನಿಧಾಯ, ಹೇತೀಃ, ಶಮ್ಯಾಂ, ಛನ್ನರೂಪಾಃ, ಬಭೂವುಃ, ಯತಿಃ, ಸೂದಃ, ಷಂಡವೇಷಃ, ಅಶ್ವಸೂತವೇಷಃ, ಗೋಪಃ, ಗಂಧಕರ್ತ್ರೀ ಚ, ಜಾತಾಃ ॥

ಅರ್ಥ :- ವಿರಾಟಸ್ಯ = ವಿರಾಟರಾಜನ, ಪುರೀಂ = ನಗರವನ್ನು ಕುರಿತು, ಗತ್ವಾ = ಹೋಗಿ, ಹೇತೀಃ = ಆಯುಧಗಳನ್ನು, ಶಮ್ಯಾಂ = ಶಮೀವೃಕ್ಷ(ಬನ್ನಿಮರ)ದಲ್ಲಿ, ನಿಧಾಯ = ಇಟ್ಟು ಛನ್ನರೂಪಾಃ = ಸ್ವರೂಪವನ್ನು ಮರೆ ಮಾಡಿಕೊಂಡವರಾಗಿ (ಮಾರುವೇಷ ತೊಟ್ಟವರಾಗಿ) ಬಭೂವುಃ = ಆದರು. (ಕ್ರಮವಾಗಿ) ಯತಿಃ = ಸಂನ್ಯಾಸಿ, ಸೂದಃ = ಅಡಿಗೆ ಮಾಡುವವನು, ಷಂಡವೇಷಃ = ನಪುಂಸಕ ವೇಷಧರಿಸಿದವನು. ಅಶ್ವಸೂತವೇಷಃ = ಅಶ್ವಸೂತನ ವೇಷ ಧರಿಸಿದವನು. ಗೋಪಃ = ಗೋಪಾಲಕ, ಚ = ಮತ್ತು ಗಂಧಕರ್ತ್ರೀ = ಸೈರಂಧ್ರೀಯ (ಆಗಿ) ಜಾತಾಃ = ಆದರು.

ತಾತ್ಪರ್ಯ :- ಪಾಂಡವರು ವಿರಾಟನ ನಗರಕ್ಕೆ ಹೋಗಿ ತಮ್ಮ ಆಯುಧಗಳನ್ನು ಅಲ್ಲಿನ ಬನ್ನಿಮರದಲ್ಲಿ ಇಟ್ಟು ಮಾರುವೇಷವನ್ನು ತೊಟ್ಟರು. ಅವರು ಕ್ರಮವಾಗಿ ಸಂನ್ಯಾಸಿ, ಅಡಿಗೆಯವನು ನಪುಂಸಕವೇಷವುಳ್ಳವನು, ಅಶ್ವಸೂತ, ಗೋಪಾಲಕ ಮತ್ತು ಸೈರಂಧ್ರಿ ಗಂಧತೇಯುವವಳಾಗಿ ಆದರು.

ಸರ್ವೇ ವಿರಾಟಂ ಯಯುರತ್ರ ದೇವವತ್
ಸಂಭಾವಿತಾಸ್ತೇನ ಶುಭೋರುಲಕ್ಷಣಾಃ ।
ಯುಧಿಷ್ಠಿರಸ್ಯೈವ ಶುಶ್ರೂಷಣಂ ತೇ
ಚಕ್ರುರ್ಹೃದಾ ವಾಸುದೇವಸ್ಯ ನಾನ್ಯತ್ ॥ ೩ ॥

ಪದಚ್ಛೇದ :- ಸರ್ವೇ, ವಿರಾಟಂ, ಯಯುಃ, ಅತ್ರ ದೇವವತ್, ಸಂಭಾವಿತಾಃ, ತೇನ ಶುಭೋರು ಲಕ್ಷಣಾಃ, ಯುಧಿಷ್ಠಿರಸ್ಯೈವ, ಶುಶ್ರೂಷಣಂ, ತೇ, ಚಕ್ರುಃ, ಹೃದಾ, ವಾಸುದೇವಸ್ಯ ನ. ಅನ್ಯತ್ ।

ಅರ್ಥ :- ಸರ್ವೇ = ಎಲ್ಲಾ ಪಾಂಡವರು ಹಾಗೂ ದ್ರೌಪದಿಯೂ ವಿರಾಟಂ = ವಿರಾಟರಾಜನ ಬಳಿಗೆ, ಯಯುಃ = ಹೋದರು. ಶುಭೋರು ಲಕ್ಷಣಾಃ = ಉತ್ತಮವಾದ ಶುಭ ಲಕ್ಷಣಗಳಿಂದ ಕೂಡಿದ ಪಾಂಡವರು, ಅತ್ರ

= ಈ ವಿರಾಟರಾಜನ ಆಸ್ಥಾನದಲ್ಲಿ, **ತೇನ** = ಆ ವಿರಾಟರಾಜನಿಂದ, **ದೇವವತ್** = ದೇವತೆಗಳಂತೆ **ಸಂಭಾವಿತಾಃ** = ಸನ್ಮಾನಿಸಲ್ಪಟ್ಟರು. **ತೇ** = ಅವರು, **ವಾಸುದೇವಸ್ಯ** = ಶ್ರೀಹರಿಯ **ಹೃದಾ** = ಭಾವನೆಯಿಂದ **ಯುಧಿಷ್ಠಿರಸ್ಯೈವ** = ಧರ್ಮರಾಜನದ್ದೇ, **ಶುಶ್ರೂಷಣಂ** = ಸೇವೆಯನ್ನು, **ಚಕ್ರುಃ** = ಮಾಡಿದರು. **ಅನ್ಯತ್** = ಬೇರೆಯವರ ಸೇವೆಯನ್ನು **ನ** = ಮಾಡಲಿಲ್ಲ.

**ತಾತ್ಪರ್ಯ** :- ದ್ರೌಪದಿ ಮತ್ತು ಎಲ್ಲಾ ಪಾಂಡವರು ವಿರಾಟರಾಜನ ಬಳಿಗೆ ಹೋದರು. ಅಲ್ಲಿ ಆ ವಿರಾಟರಾಜನು ಇವರಲ್ಲಿರುವ ಉತ್ತಮವಾದ ಶುಭಲಕ್ಷಣಗಳನ್ನು ನೋಡಿ ದೇವತೆಗಳನ್ನು ಸತ್ಕರಿಸುವಂತೆ, ಸನ್ಮಾನಿಸಿದನು. ಅಲ್ಲಿದ್ದರೂ ಅವರೆಲ್ಲರು ಯುಧಿಷ್ಠಿರನ ಅಂತರ್ಯಾಮಿಯಾದ ನಾರಾಯಣನ ಸೇವೆಯೆಂದೇ ಯುಧಿಷ್ಠಿರನ ಸೇವೆಗಳನ್ನು ಮಾಡುತ್ತಿದ್ದರು. ಹೊರತು ವಿರಾಟರಾಜ ಮುಂತಾದವರ ಸೇವೆಯನ್ನು ಮಾಡುತ್ತಿರಲಿಲ್ಲ.

**ಪರಪಾಕೋ ಗೃಹಸ್ಥಸ್ಯ ಕ್ಷತ್ರಿಯಸ್ಯ ವಿಶೇಷತಃ ।**
**ನ ಯೋಗ್ಯ ಇತಿ ಸೂದಸ್ಯ ಬಭ್ರೇ ವೇಷಂ ವೃಕೋದರಃ ॥ ೪ ॥**

**ಪದಚ್ಛೇದ** :- ಪರಪಾಕಃ, ಗೃಹಸ್ಥಸ್ಯ, ಕ್ಷತ್ರಿಯಸ್ಯ, ವಿಶೇಷತಃ, ನ ಯೋಗ್ಯ ಇತಿ ಸೂದಸ್ಯ, ಬಭ್ರೇ, ವೇಷಂ, ವೃಕೋದರಃ ।

**ಅರ್ಥ** :- **ಗೃಹಸ್ಥಸ್ಯ** = ಗೃಹಸ್ಥನಾದ, **ಕ್ಷತ್ರಿಯಸ್ಯ** = ಕ್ಷತ್ರಿಯನಿಗೆ, **ವಿಶೇಷತಃ** = ವಿಶೇಷ ಕಾರಣವಿಲ್ಲದೆ, **ಪರಪಾಕಃ** = ಮತ್ತೊಬ್ಬರ ಅಡಿಗೆಯು, **ನ ಯೋಗ್ಯಃ** = ಯೋಗ್ಯವಲ್ಲ, **ಇತಿ** = ಈ ಕಾರಣದಿಂದ, **ವೃಕೋದರಃ** = ಭೀಮಸೇನನು, **ಸೂದಸ್ಯ** = ಅಡಿಗೆಯವನ **ವೇಷಂ** = ವೇಷವನ್ನು **ಬಭ್ರೆ** = ಧರಿಸಿದನು.

**ತಾತ್ಪರ್ಯ** :- ಗೃಹಸ್ಥನಾದ ಕ್ಷತ್ರಿಯನಿಗೆ, ವಿಶೇಷ ನಿಮಿತ್ತಗಳಿಲ್ಲದೆ ಪರಾನ್ನ ಭೋಜನವು ಉಚಿತವಾದುದಲ್ಲ, ಎಂಬ ನಿಯಮವಿರುವುದರಿಂದ ಭೀಮನು ಅಡಿಗೆಯವನ ವೇಷವನ್ನು ತೊಟ್ಟನು.

**ವೈದಿಕವ್ಯವಹಾರೇಷು ಜ್ಞಾನಾಧಿಕ್ಯಪ್ರಸಿದ್ಧಿತಃ ।**
**ಜಾನೀಯುರ್ಭೀಮ ಇತ್ಯೇವ ಶೂದ್ರವೇಷಸ್ತತೋಽಭವತ್ ॥ ೫ ॥**

ಪದಚ್ಛೇದ :- ವೈದಿಕವ್ಯವಹಾರೇಷು, ಜ್ಞಾನಾಧಿಕ್ಯ ಪ್ರಸಿದ್ಧಿತಃ, ಜಾನಿಯುಃ, ಭೀಮಃ, ಇತಿ ಏವ, ಶೂದ್ರವೇಷಃ, ತತಃ, ಅಭವತ್ ।

ಅರ್ಥ :- ವೈದಿಕವ್ಯವಹಾರೇಷು = ವೈದಿಕವಾದ ವ್ಯವಹಾರಗಳಲ್ಲಿ, ಜ್ಞಾನಾಧಿಕ್ಯ ಪ್ರಸಿದ್ಧಿತಃ = ಜ್ಞಾನದ ಹೆಚ್ಚಳದ ಪ್ರಸಿದ್ಧಿಯಿಂದ, ಭೀಮ ಇತಿ ಏವಂ = ಭೀಮ ಎಂದೇ, ಜಾನಿಯುಃ = ತಿಳಿಯುತ್ತಾರೆ. ತತಃ = ಆ ಕಾರಣಕ್ಕಾಗಿ, ಶೂದ್ರವೇಷಃ = ಸೂದನವೇಷ(ಶೂದ್ರನ ವೇಷ)ವುಳ್ಳವನಾಗಿ, ಅಭವತ್ = ಆದನು.

ತಾತ್ಪರ್ಯ :- ಭೀಮನು ಬ್ರಾಹ್ಮಣನ ವೇಷ ಧರಿಸಿದರೆ, ವೈದಿಕ ವ್ಯವಹಾರಗಳಾದ, ಯಜ್ಞ, ಚರ್ಚೆ, ಪಾಠ ಮುಂತಾದ ವ್ಯವಹಾರಗಳನ್ನು ಮಾಡಬೇಕಾಗುತ್ತದೆ. ಆ ಸಂದರ್ಭದಲ್ಲಿ ಭೀಮನಲ್ಲಿರುವ ಜ್ಞಾನದ ಹೆಚ್ಚಳವನ್ನು ನೋಡಿದಾಗ ಇವನು ಭೀಮನೇ ಎಂದು ಕೌರವಾದಿಗಳು ತಿಳಿಯುತ್ತಾರೆ. ಅದಕ್ಕೋಸ್ಕರ ಆ ವ್ಯವಹಾರಗಳಿಗೆ ಅವಕಾಶವಿಲ್ಲದ ಸೂದನ ವೇಷವನ್ನು ಭೀಮನು ಸ್ವೀಕರಿಸಿದನು.

**ಸ್ವೀಯಂ ವೇದವಿದಾಂ ಸರ್ವಂ ದೇವೇಶಾನಾಂ ಚ ಕಿಂ ಪುನಃ ।**
**ಅತಸ್ತೇಽನ್ಯಾಶ್ರಯಂ ನೈವ ಚಕ್ರುಃ ಸ್ವಬಲಸಂಶ್ರಯಾತ್ ॥ ೬ ॥**

ಪದಚ್ಛೇದ :- ಸ್ವೀಯಂ, ವೇದವಿದಾಂ, ಸರ್ವಂ, ದೇವೇಶಾನಾಂ ಚ, ಕಿಂ ಪುನಃ, ಅತಃ, ತೇ, ಅನ್ಯಾಶ್ರಯಂ, ನೈವ, ಚಕ್ರುಃ, ಸ್ವಬಲ ಸಂಶ್ರಯಾತ್ ।

ಅರ್ಥ :- ವೇದವಿದಾಂ = ವೇದಗಳನ್ನು ತಿಳಿದವರಿಗೆ, ಸರ್ವಂ = ಎಲ್ಲಾ ವಸ್ತುಗಳೂ, ಸ್ವೀಯಂ = ತಮ್ಮಸ್ವತ್ತು ಆಗುತ್ತವೆ. ದೇವೇಶಾನಾಂಚ = ದೇವೋತ್ತಮರಾದ ಪಾಂಡವರಿಗಾದರೂ, ಕಿಂ ಪುನಃ = ಬೇರೆ ಹೇಳಬೇಕೆ, ಅತಃ = ಆದ್ದರಿಂದ, ಸ್ವಬಲ ಸಂಶ್ರಯಾತ್ = ತಮ್ಮ ಬಲವನ್ನೇ ಆಶ್ರಯಿಸಿದ್ದರಿಂದ, ತೇ = ಆ ಪಾಂಡವರು, ಅನ್ಯಾಶ್ರಯಂ = ಮತ್ತೊಬ್ಬರ ಆಶ್ರಯವನ್ನು, ನೈವ ಚಕ್ರುಃ = ಮಾಡಲೇ ಇಲ್ಲ.

ತಾತ್ಪರ್ಯ :- ವೇದಜ್ಞರಾದ ಮಾನವರಿಗೇ ಜಗತ್ತಿನಲ್ಲಿರುವ ಸರ್ವವಸ್ತುಗಳೂ (ತಮಗಿಂತ ಕೆಳಗಿನವರ) ತಮ್ಮ ಸಂತದ್ದು ಎಂದು

ಶಾಸ್ತ್ರವಚನ ಹೀಗಿರುವಾಗ, ದೇವೋತ್ತಮರಾದ ಪಾಂಡವರಿಗೆ ಎಲ್ಲಾ ವಸ್ತುಗಳೂ ಅವರದ್ದೇ ಆಗಿದೆ ಎಂದು ಬೇರೆ ಹೇಳಬೇಕೆ. ಮತ್ತು ಪಾಂಡವರು ತಮ್ಮ ಬಲವನ್ನೇ ಆಶ್ರಯಿಸಿದ್ದರೂ ಆದ್ದರಿಂದ ಪರಾಶ್ರಯವನ್ನು ಮಾಡಿದಂತಾಗಲೇ ಇಲ್ಲ.

**ಶಾಪಾದೇವಾರ್ಜುನಃ ಷಂಢವೇಷೋಽಭೂನ್ನಕುಲಸ್ತಥಾ ।**
**ಕ್ಷತ್ರಿಯಾನಂತರತ್ವಾತ್ತು ಸೂತಜಾತೇಸ್ತಥಾಽಭವತ್ ॥ ೭ ॥**

**ಪದಚ್ಛೇದ :-** ಶಾಪಾತ್, ಏವ, ಅರ್ಜುನು, ಷಂಡವೇಷಃ, ಅಭೂತ್, ನಕುಲಃ, ತಥಾ, ಕ್ಷತ್ರಿಯಾನಂತರತ್ವಾತ್, ತು, ಸೂತಜಾತೇ, ತಥಾ ಅಭವತ್.

**ಅರ್ಥ :-** **ಶಾಪಾತ್ ಏವ** = ಊರ್ವಶಿಯ ಶಾಪದಿಂದಲೇ, **ಅರ್ಜುನಃ** = ಅರ್ಜುನನು, **ಷಂಡವೇಷಃ** = ನಪುಂಸಕನ ವೇಷವುಳ್ಳವನಾಗಿ, **ಅಭೂತ್** = ಆದನು, **ತಥಾ** = ಹಾಗೆಯೇ, **ಸೂತಜಾತೇಃ** = ಸೂತಜಾತಿಯು, **ಕ್ಷತ್ರಿಯಾನಂತರತ್ವಾತ್** = ಕ್ಷತ್ರಿಯಜಾತಿಯ ನಂತರದಾದ್ದರಿಂದ, **ನಕುಲಃ ತು** = ನಕುಲನಾದರೂ **ತಥಾ** = ಅಶ್ವಸೂತನಾಗಿ, **ಅಭವತ್** = ಆದನು.

**ತಾತ್ಪರ್ಯ :-** ಅರ್ಜುನನಿಗೆ ನಪುಂಸಕನಾಗು ಎಂದು ಊರ್ವಶಿಯ ಶಾಪವಿದ್ದುದರಿಂದಲೇ ಅರ್ಜುನನು, ನಪುಂಸಕ ವೇಷ ಧರಿಸಿದ, ಕ್ಷತ್ರಿಯ ಜಾತಿಯ ನಂತರದ ಜಾತಿ ಸೂತಜಾತಿ ಎನ್ನುನ ಕಾರಣದಿಂದ ವಿರಾಟನಲ್ಲಿಗೆ ಬರುವಾಗ ನಕುಲನು ಸೂತನಾಗಿ ಬಂದನು.

**ಸೂತಸ್ಯಾನಂತರತ್ವಾತ್ತು ವೈಶ್ಯಜಾತೇಸ್ತಥಾಽಭವತ್ ।**
**ಸಹದೇವೋ ವೈಶ್ಯಜಾತಿರ್ಗೋಪಾಲಸ್ತೇಷು ಚೋತ್ತಮಃ ।**
**ತತೋ ಗೋಪಾಲತಾಮಾಪ ಯತಿಃ ಪೂಜ್ಯೋಽಖಿಲೈರ್ಯತಃ ॥ ೮ ॥**

**ಯತಿರಾಸೀದ್ ಧರ್ಮಜೋಽತಃ ಸೋಽಭ್ಯಾಸಾರ್ಥಂ ಸದೈವ ಚ ।**
**ಅಕ್ಷಾಸಕ್ತೋಽಭವತ್ ಪಶ್ಚಾದ್ ದರ್ಶಯಿಷ್ಯನ್ ಸ್ವಶಿಷ್ಟತಾಮ್ ॥ ೯ ॥**

**ಪದಚ್ಛೇದ :-** ಸೂತಸ್ಯಾನಂತರತ್ವಾತ್, ತು, ವೈಶ್ಯಜಾತೇಃ, ತಥಾ, ಅಭವತ್, ಸಹದೇವಃ, ವೈಶ್ಯಜಾತಿಃ, ಗೋಪಾಲಃ, ತೇಷು, ಚ, ಉತ್ತಮಃ, ತತಃ, ಗೋಪಾಲತಾಂ, ಆಪ, ಯತಿಃ, ಪೂಜ್ಯಃ, ಅಖಿಲೈಃ, ಯತಃ, ಯತಿಃ, ಆಸೀತ್,

ಧರ್ಮರಾಜಃ, ಅತಃ, ಸಃ, ಅಭ್ಯಾಸಾರ್ಥಂ, ಸದಾ, ಏವ, ಚ ಅಕ್ಷಾಸಕ್ತಃ, ಅಭವತ್, ಪಶ್ಚಾತ್, ದರ್ಶಯಿಷ್ಯನ್, ಸ್ವಶಿಷ್ಟತಾಮ್ ॥

**ಅರ್ಥ** :- **ವೈಶ್ಯಜಾತೇಃ** = ವೈಶ್ಯಜಾತಿಯು, **ಸೂತಸ್ಯಾನಂತರತ್ವಾತ್** = ಸೂತಜಾತಿಯ ನಂತರದ ಜಾತಿಯಾದ್ದರಿಂದ **ಸಹದೇವಃ ತು** = ಸಹದೇವನಾದರೂ, **ತಥಾ ವೈಶ್ಯಜಾತಿಃ** = ಹಾಗೆ ವೈಶ್ಯನಾಗಿ, **ಅಭವತ್** = ಆದನು, **ತೇಷು ಚ** = ಆ ವೈಶ್ಯಜಾತಿಯವರಲ್ಲಿಯೂ, **ಗೋಪಾಲಃ** = ಗೋಪಾಲನು, **ಉತ್ತಮಃ** = ಉತ್ತಮನಾದವನು, **ತತಃ** = ಆ ಕಾರಣದಿಂದ **ಗೋಪಾಲಕತಾಂ** = ಗೋಪಾಲತ್ವವನ್ನು (ಗೊಲ್ಲತನವನ್ನು) **ಆಪ** = ಹೊಂದಿದನು. **ಯತಿಃ** = ಯತಿಯಾದವನು, **ಅಖಿಲೈಃ** = ಎಲ್ಲಾ ಜನರಿಂದ, **ಯತಃ** = ಯಾವಕಾರಣದಿಂದ, **ಪೂಜ್ಯಃ** = ಪೂಜ್ಯನೋ, **ಅತಃ** = ಆ ಕಾರಣದಿಂದ, **ಧರ್ಮಜಃ** = ಯುಧಿಷ್ಠಿರನು, **ಯತಿಃ** = ಸಂನ್ಯಾಸಿಯು, **ಆಸೀತ್** = ಆದನು. **ಸಃ** = ಅವನು, **ಅಭ್ಯಾಸಾರ್ಥಂ** = ಅಭ್ಯಾಸಕ್ಕೋಸ್ಕರ, **ಪಶ್ಚಾತ್** = ಅನಂತರ, **ಸ್ವಶಿಷ್ಟತಾಂ** = ತನ್ನ ಪ್ರಾವೀಣ್ಯತೆಯನ್ನು **ದರ್ಶಯಿಷ್ಯನ್** = ತೋರಿಸುವುದಕ್ಕಾಗಿ, **ಸದಾ ಏವ ಚ** = ಯಾವಾಗಲೂ ಕೂಡ, **ಅಕ್ಷಾಸಕ್ತಃ** = ಪಗಡೆಯಲ್ಲಿ ಆಸಕ್ತನಾದವನಾಗಿ, **ಅಭವತ್** = ಆದನು.

**ತಾತ್ಪರ್ಯ** :- ಸೂತಜಾತಿಯ ನಂತರದ ಜಾತಿ ವೈಶ್ಯಜಾತಿ ಎಂದು ಶಾಸ್ತ್ರದಲ್ಲಿ ಸಿದ್ಧವಾಗಿದೆ. ಅದಕ್ಕೋಸ್ಕರ, ಸಹದೇವ ತಾನು ವೈಶ್ಯಜಾತಿಯವನಾದ ಆ ವೈಶ್ಯರಲ್ಲಿಯೂ 'ಗೋಪಾಲಕನು.' ಉತ್ತಮನೆನಿಸಿಕೊಳ್ಳುತ್ತಾನೆ. ಅದಕ್ಕೋಸ್ಕರ, ಸಹದೇವ ಗೊಲ್ಲನಾಗಿ ವೇಷ ಧರಿಸುತ್ತಾನೆ. ಹಾಗೆಯೇ ಯತಿಯಾದ ವ್ಯಕ್ತಿ ಸರ್ವಜನರಿಂದಲೂ ಪೂಜ್ಯನಾಗಿರುತ್ತಾನೆ. ಅದಕ್ಕೋಸ್ಕರ ಯುಧಿಷ್ಠಿರನು ಯತಿಯ ವೇಷವನ್ನು ತೊಡುತ್ತಾನೆ. ಅಲ್ಲದೆ, ತನಗೆ ಪಗಡೆಯಾಟ ಮರೆಯಬಾರದು ಮತ್ತು ಅನಂತರ ತನ್ನ ಪ್ರಾವೀಣ್ಯವನ್ನು ತೋರಿಸಬೇಕು ಎನ್ನುವ ಇಚ್ಛೆಯಿಂದ ಸದಾ ಪಗಡೆಯಾಟದಲ್ಲಿ ಆಸಕ್ತನಾದವನಾಗಿ ಆಗಿದ್ದನು.

ಭೀಮಸೇನಸಧರ್ಮಾರ್ಥಂ ಶೂದ್ರಾ ಸೈರಂಧ್ರಿಕಾಽಭವತ್ ।
ದ್ರೌಪದೀ ಭರ್ತೃಸಾಧರ್ಮ್ಯಂ ಸ್ತ್ರೀಣಾಂ ಧರ್ಮೋ ಯತಃ ಸದಾ ॥ ೧೦ ॥

ಪದಚ್ಛೇದ :- ಭೀಮಸೇನಸಧರ್ಮಾರ್ಥಂ ಶೂದ್ರಾ, ಸ್ಯೆರಂಧ್ರಿಕಾ, ಅಭವತ್, ದ್ರೌಪದೀ, ಭರ್ತೃಸಾಧರ್ಮ್ಯಂ, ಸ್ತ್ರೀಣಾಂ, ಧರ್ಮ, ಯತಃ, ಸದಾ ।

ಅರ್ಥ :- ದ್ರೌಪದೀ = ದ್ರೌಪದೀ ದೇವಿಯು, ಭೀಮಸೇನ ಸಧರ್ಮಾರ್ಥಂ = ಭೀಮನ ಸಮಾನ ಧರ್ಮಕ್ಕಾಗಿ, ಶೂದ್ರಾ = ಶೂದ್ರವೇಷದ, ಸ್ಯೆರಂಧ್ರಿಕಾ = ಸ್ಯೆರಂಧಿಕೆಯಾಗಿ, ಅಭವತ್ = ಆದಳು, ಯತಃ = ಯಾವಕಾರಣದಿಂದ ಸದಾ = ಯಾವಾಗಲೂ ಭರ್ತೃಸಾಧರ್ಮ್ಯಂ = ಗಂಡನ ಸಮಾನ ಧರ್ಮವು ಸ್ತ್ರೀಣಾಂ = ಸ್ತ್ರೀಯರಿಗೆ ಧರ್ಮಃ = ಧರ್ಮವು.

ತಾತ್ಪರ್ಯ :- ದ್ರೌಪದಿದೇವಿಯು ಶೂದ್ರವೇಷದ ಭೀಮನ ಸಮಾನಧರ್ಮಕ್ಕೋಸ್ಕರ ಶೂದ್ರಳಾದ ಸ್ಯೆರಂಧ್ರಿಕೆಯ ವೇಷ ತೊಟ್ಟಳು. ಏಕೆಂದರೆ ಸ್ತ್ರೀಯರಿಗೆ ಗಂಡನ ಸಮಾನ ಧರ್ಮಿಣಿಯಾಗಿರುವುದರಿಂದ ಯಾವಾಗಲೂ ಮುಖ್ಯಧರ್ಮವಾಗಿದೆ.

**ಅಥಾऽಜಗಾಮ ಮಲ್ಲಕಃ ಸಮಸ್ತಭೂಮಿಮಂಡಲೇ ।**
**ವರೇಣ ಯೋऽಜಿತೋ ಜಯೀ ಶಿವಸ್ಯ ಸಂಜಗರ್ಜ ಚ ॥ ೧೧ ॥**

ಪದಚ್ಛೇದ :– ಅಥ, ಆಜಗಾಮ, ಮಲ್ಲಕಃ, ಸಮಸ್ತ ಭೂಮಿ ಮಂಡಲೇ, ವರೇಣ, ಯಃ, ಅಜಿತಃ, ಜಯೀ, ಶಿವಸ್ಯ, ಸಂಜಗರ್ಜ, ಚ ।

ಅರ್ಥ :- ಅಥ = ಅನಂತರ, ಶಿವಸ್ಯ = ಶಿವನ, ವರೇಣ = ವರಬಲದಿಂದ, ಸಮಸ್ತಭೂಮಿಮಂಡಲೇ = ಸಮಸ್ತ ಭೂಮಂಡಲದಲ್ಲಿ ಯಃ = ಯಾವನು ಅಜಿತಃ = ಸೋಲದೇ, ಜಯೀ = ಜಯಶೀಲನಾಗಿದ್ದನೋ, ಅಂಥಹ, ಮಲ್ಲಕಃ = ಜಟ್ಟಿಯು ಆಜಗಾಮ = ಬಂದನು, ಚ = ಮತ್ತು, ಸಂಜಗರ್ಜ = ಸಿಂಹನಾದಗ್ಯೆದನು.

ತಾತ್ಪರ್ಯ :- ಪಾಂಡವರು ವಿರಾಟನಲ್ಲಿಗೆ ಬಂದ ಬಳಿಕ ಒಮ್ಮೆ ಶಿವರ ವರದಿಂದ ಇಡೀ ಭೂಮಂಡಲದಲ್ಲಿ ಸೋಲದ ಮತ್ತು ಸದಾ ಜಯಶಾಲಿಯಾಗುತ್ತಿದ್ದ ಒಬ್ಬ ದುಷ್ಟ ಮಲ್ಲನು. ಅಲ್ಲಿಗೆ ಬಂದ ಮತ್ತು ಯುದ್ಧಕ್ಕೋಸ್ಕರ ಸಿಂಹನಾದವನು ಮಾಡಿದ.

**ತಮೀಕ್ಷ್ಯ ಸರ್ವಮಲ್ಲಕಾ ವಿರಾಟರಾಜಸಂಶ್ರಯಾಃ ।**
**ಪ್ರದುದ್ರುವುರ್ಭಯಾರ್ದಿತಾಸ್ತದಾऽವದದ್ ಯುಧಿಷ್ಠಿರಃ ॥ ೧೨ ॥**

**ಪದಚ್ಛೇದ :-** ತಂ. ಈಕ್ಷ್ಯ, ಸರ್ವ ಮಲ್ಲಕಾಃ, ವಿರಾಟರಾಜ ಸಂಶ್ರಯಾಃ, ಪ್ರದುದ್ರುವುಃ, ಭಯಾರ್ದಿತಾಃ, ತದಾ, ಅವದತ್, ಯುಧಿಷ್ಠಿರಃ।

**ಅರ್ಥ :-** ತಂ = ಆ ಮಲ್ಲನನ್ನು, ಈಕ್ಷ್ಯ = ನೋಡಿ, ವಿರಾಟರಾಜ ಸಂಶ್ರಯಾಃ = ವಿರಾಟರಾಜನನ್ನು ಆಶ್ರಯಿಸಿದ, ಸರ್ವಮಲ್ಲಕಾಃ = ಎಲ್ಲಾ ಮಲ್ಲರೂ ಭಯಾರ್ದಿತಾಃ = ಭಯದಿಂದ ಕಂಗೆಟ್ಟವರಾಗಿ, ಪ್ರದುದ್ರುವುಃ = ಓಡಿಹೋದರು. ತದಾ = ಆಗ ಯುಧಿಷ್ಠಿರಃ = ಧರ್ಮರಾಜನು, ಅವದತ್ = ಹೇಳಿದನು.

**ತಾತ್ಪರ್ಯ :-** ಆ ಮಲ್ಲನನ್ನು ನೋಡಿ ವಿರಾಟನಲ್ಲಿ ಆಶ್ರಯ ಪಡೆದಿದ್ದ ಎಲ್ಲಾ ಮಲ್ಲರು, ಭಯದಿಂದ ಕಂಗೆಟ್ಟು ಓಡಿಹೋದರು. ಆಗ ಧರ್ಮರಾಜನು ವಿರಾಟರಾಜನನ್ನು ಕುರಿತು ಹೇಳಿದನು.

**ಯ ಏಷ ಸೂದ ಆಶು ತಂ ನಿಹತ್ಯ ಮಲ್ಲಮೋಜಸಾ ।**
**ಯಶಸ್ತವಾಭಿವರ್ಧಯೇತ್ ಸಮಾಹ್ವಯಾದ್ಯ ತಂ ನೃಪ ॥ ೧೩ ॥**

**ಪದಚ್ಛೇದ :-** ಯಃ, ಏಷಃ, ಸೂದಃ, ಆಶು, ತಂ, ನಿಹತ್ಯ, ಮಲ್ಲಂ, ಓಜಸಾ, ಯಶಃ, ತವ, ಅಭಿವರ್ಧಯೇತ್, ಸಮಾಹ್ವಯ, ಅದ್ಯ, ತಂ, ನೃಪ.

**ಅರ್ಥ :-** ನೃಪ! = ರಾಜನೇ!, ಯಃ ಏಷಃ = ಯಾವ ಈ ಸೂದಃ = ಅಡಿಗೆಯವನಿದ್ದಾನೋ, ಅವನು, ಓಜಸಾ = ಬಲದಿಂದ, ತಂ = ಆ ಮಲ್ಲನನ್ನು, ಆಶು = ಕೂಡಲೇ, ನಿಹತ್ಯ = ಕೊಂದು, ತವ = ನಿನ್ನ, ಯಶಃ = ಕೀರ್ತಿಯನ್ನು ಅಭಿವರ್ಧಯೇತ್ = ಬೆಳೆಸಬಲ್ಲ, ತಂ = ಅವನನ್ನು, ಅದ್ಯ = ಈಗ, ಸಮಾಹ್ವಯ = ಕರೆಸು.

**ತಾತ್ಪರ್ಯ :-** ರಾಜ! ನಮ್ಮ ಈ ಅಡಿಗೆಯವನು, ಅತ್ಯಂತ ಬಲಶಾಲಿ, ಅವನು. ಬೇಗನೇ ಆ ಮಲ್ಲನನ್ನು ಕೊಂದು, ನಿನ್ನ ಕೀರ್ತಿಯನ್ನು ಹೆಚ್ಚಿಸುತ್ತಾನೆ. ಆದ್ದರಿಂದ ಈಗ ಅವನನ್ನು ಬೇಗನೆ ಕರೆಸು ಎಂದು ಹೇಳುತ್ತಾನೆ.

**ಇತೀರಿತೇ ಸಮಾಹುತೋ ಜಗಾದ ಮಾರುತಿರ್ವಚಃ ।**
**ಪ್ರಸಾದತೋ ಹರೇರಹಂ ನಿಷೂದಯೇಽದ್ಯ ಮಲ್ಲಕಮ್ ॥ ೧೪ ॥**

**ಪದಚ್ಛೇದ :– ಇತಿ, ಈರಿತೇ, ಸಮಾಹುತಃ, ಜಗಾದ, ಮಾರುತಿಃ, ವಚಃ, ಪ್ರಾಸಾದತಃ, ಹರೇಃ, ಅಹಂ, ನಿಷೂದಯೇ, ಅದ್ಯ, ಮಲ್ಲಕಮ್ ।**

**ಅರ್ಥ** :- **ಇತಿ** = ಈ ರೀತಿಯಾಗಿ, **ಈರಿತೇ** = (ಧರ್ಮರಾಜನಿಂದ) ಹೇಳಲ್ಪಟ್ಟಾಗ **ಸಮಾಹೃತಃ** = ಕರೆಸಲ್ಪಟ್ಟ, **ಮಾರುತಿಃ** = ಭೀಮನು, **ವಚಃ** = ಮಾತನ್ನು **ಜಗಾದ** = ಹೇಳಿದನು. **ಅಹಂ** = ನಾನು, **ಹರೇಃ** = ಶ್ರೀಹರಿಯ, **ಪ್ರಸಾದತಃ** = ಅನುಗ್ರಹದಿಂದ, **ಅದ್ಯ** = ಈಗಲೇ, **ಮಲ್ಲಕಂ** = ಮಲ್ಲನನ್ನು, **ನಿಷೋದಯೇ** = ಸಂಹರಿಸುತ್ತೇನೆ.

**ತಾತ್ಪರ್ಯ** :- ಧರ್ಮರಾಜನು ಹೀಗೆ ಹೇಳಿದಾಗ ವಿರಾಟರಾಜ, ಭೀಮನನ್ನು ಕರೆಸಿದ. ಆಗ ಭೀಮ, ನಾನು ಶ್ರೀಹರಿಯ ಅನುಗ್ರಹದಿಂದ ಈಗಲೇ ಆ ಮಲ್ಲನನ್ನು ಸಂಹರಿಸುತ್ತೇನೆ ಎಂದು ಹೇಳಿದ.

**ಯ ಏವ ದೇವನಾಮಧಾ ಇತಿ ಶ್ರುತಿರ್ಜಗಾದ ಹಿ ।**
**ಮಹಾಂಶ್ಚ ದೇವ ಏಷ ತತ್ ಸ ಮೇ ಜಯಂ ವಿಧಾಸ್ಯತಿ ॥ ೧೬ ॥**

**ಪದಚ್ಛೇದ :– ಯಃ, ಏವ, ದೇವನಾಮಧಾ, ಇತಿ, ಶ್ರುತಿಃ, ಜಗಾದ, ಹಿ, ಮಹಾನ್, ಚ, ದೇವ, ಏಷ, ತತ್, ಸ, ಮೇ, ಜಯಂ, ವಿಧಾಸ್ಯತಿ ।**

**ಅರ್ಥ** :- **ಯಃ ಏವ** = ಯಾವ ಶ್ರೀಹರಿಯೇ **ದೇವನಾಮಧಾ** = ದೇವತೆಗಳ ಹೆಸರನ್ನು ಧರಿಸಿದ್ದಾನೆ. **ಇತಿ** = ಎಂದು; **ಶ್ರುತಿಃ** = ವೇದವು **ಜಗಾದ** = ಹೇಳಿದೆ, **ಚ** = ಮತ್ತು **ಏಷಃ** = ಈ ಶ್ರೀಹರಿಯು, **ಮಹಾನ್** = ಶ್ರೇಷ್ಠನಾದ, **ದೇವಃ ಹಿ** = ದೇವತೆಯಾಗಿರುವನು, **ತತ್** = ಆ ಕಾರಣದಿಂದ **ಸಃ** = ಆ ಶ್ರೀಹರಿಯು **ಮೇ** = ನನಗೆ, **ಜಯಂ** = ಜಯವನ್ನು, **ವಿಧಾಸ್ಯತಿ** = ಉಂಟುಮಾಡುತ್ತಾನೆ.

**ತಾತ್ಪರ್ಯ** :- 'ಯೋ ದೇವಾನಾಂ ನಾ ಮಧಾ'' ಎಂಬ ಶ್ರುತಿಯು ಶ್ರೀಹರಿಯೇ ಎಲ್ಲಾ ದೇವತೆಗಳ ಹೆಸರುಳ್ಳವನು, ಎಂದು ಹೇಳಿದೆ. ಅಲ್ಲದೆ ಅವನು ಮಹಾನ್ ದೇವನಾಗಿದ್ದಾನೆಯಾದ್ದರಿಂದ ಮಹಾದೇವನೆಂದೆ ನಿಸಿದ್ದಾನೆ, ಆ ಶ್ರೀಹರಿಯು ನನಗೆ ಜಯವನ್ನು ತಂದುಕೊಡುತ್ತಾನೆ.

ಸಮಸ್ತದೇವವೃಂದತೋ ಮಹಾನ್ ಯ ಏವ ಕೇಶವಃ ।
ಸಮಸ್ತದೇವನಾಮವಾಂಸ್ತದೀಯಭಕ್ತಿತೋ ಬಲಮ್ ॥ ೧೫ ॥

ಪದಚ್ಛೇದ :- ಸಮಸ್ತದೇವ ವೃಂದತಃ, ಮಹಾನ್, ಯಃ, ಏವ, ಕೇಶವಃ, ಸಮಸ್ತದೇವನಾಮವಾನ್, ತದೀಯ ಭಕ್ತಿತಃ, ಬಲಮ್.

ಅರ್ಥ :- ಸಮಸ್ತದೇವ ವೃಂದತಃ = ಎಲ್ಲಾ ದೇವತೆಗಳ ಸಮೂಹಕ್ಕಿಂತ, ಯಃ = ಯಾವನು ಮಹಾನ್ = ಶ್ರೇಷ್ಠನೋ, ಯಃ = ಯಾವನು, ಸಮಸ್ತದೇವನಾಮವಾನ್ = ಎಲ್ಲಾ ದೇವತೆಗಳ ಹೆಸರನ್ನು ಧರಿಸಿದ್ದಾನೋ, ಅವನು ಕೇಶವಃ = ಶ್ರೀಹರಿಯು ತದೀಯ ಭಕ್ತಿತಃ = ಅವನ ಭಕ್ತಿಯಿಂದಲೇ, ಬಲಂ = ಬಲವು.

ತಾತ್ಪರ್ಯ :- ಯಾವನು ಸಕಲ ದೇವತಾ ಸಮೂಹಕ್ಕಿಂತಲೂ ಶ್ರೇಷ್ಠನಾಗಿರುವನೋ ಯಾವನು ಎಲ್ಲಾ ದೇವತೆಗಳ ಹೆಸರನ್ನು ಹೊಂದಿರುವನೋ ಅವನು ಶ್ರೀ ನಾರಾಯಣನಾಗಿದ್ದಾನೆ. ಅವನ ಭಕ್ತಿಯಿಂದ ನನಗೆ ಬಲವಿದೆ.

ಯುಧಿಷ್ಠಿರಾಭಿಧಶ್ಚ ಯೋ ಯುಧಿಷ್ಠಿರೇ ಸ್ಥಿತಃ ಸದಾ ।
ತ್ವಯಿ ಸ್ಥಿತಸ್ತ್ವಮಿತ್ಯಸೌ ಸದಾಽಭಿಧೀಯತೇ ಹರಿಃ ॥ ೧೭ ॥

ಪದಚ್ಛೇದ :- ಯುಧಿಷ್ಠಿರಾಭಿಧಃ, ಚ, ಯಃ, ಯುಧಿಷ್ಠಿರೇ, ಸ್ಥಿತಃ, ಸದಾ, ತ್ವಯಿ, ಸ್ಥಿತಃ, ತ್ವಂ ಇತಿ ಅಸೌ, ಸದಾ, ಅಭಿಧೀಯತೇ ಹರಿಃ.

ಅರ್ಥ :- ಅಸೌ ಹರಿಃ = ಶ್ರೀಹರಿಯು, ಯುಧಿಷ್ಠಿರೇ = ಧರ್ಮರಾಜನಲ್ಲಿ, ಸದಾ = ಯಾವಾಗಲೂ, ಸ್ಥಿತಃ = ಇರುವವನಾಗಿ, ಯುಧಿಷ್ಠಿರಾಭಿದಃ = ಯುಧಿಷ್ಠಿರನೆಂದು ಹೆಸರುಳ್ಳವನಾಗಿರುವವನು, ಚ = ಮತ್ತು, ತ್ವಯಿ = ನಿನ್ನಲ್ಲಿ, ಸ್ಥಿತಃ = ಇರುವವನಾಗಿ, ತ್ವಂ ಇತಿ = 'ನೀನು' ಎಂಬ ಹೆಸರಿನಿಂದ, ಸದಾ = ಯಾವಾಗಲೂ ಅಭಿದೀಯತೇ = ಕರೆಸಿಕೊಳ್ಳಲ್ಪಡುತ್ತಾನೆ.

ತಾತ್ಪರ್ಯ :- ಈ ಶ್ರೀಹರಿಯು ಯಾವಾಗಲೂ ಯುಧಿಷ್ಠಿರನಲ್ಲಿ ಇರುವುದರಿಂದ ಯುಧಿಷ್ಠಿರ ಎಂದೂ ಮತ್ತು ನಿನ್ನಲ್ಲಿ ಇರುವುದರಿಂದ 'ನೀನು' ಎಂದೂ ಆಯಾಯ ಹೆಸರಿನಿಂದ ಸದಾ ಕರೆಯಲ್ಪಡುತ್ತಾನೆ.

**ಇತಿ ಬ್ರುವಾಣೋ ಮಲ್ಲಂ ತಮಭಿಯಾತೋ ವೃಕೋದರಃ ।**
**ಅನಯನ್ಮೃತ್ಯುಲೋಕಾಯ ಬಲಾಢ್ಯೈರಪಿ ದುರ್ಜಯಮ್ ॥ ೧೮ ॥**

**ಪದಚ್ಛೇದ :- ಇತಿ ಬ್ರುವಾಣಃ, ಮಲ್ಲಂ, ತಂ, ಅಭಿಯಾತಃ, ವೃಕೋದರಃ, ಅನಯತ್, ಮೃತ್ಯುಲೋಕಾಯ, ಬಲಾಢ್ಯೈಃ ಅಪಿ, ದುರ್ಜಯಮ್.**

**ಅರ್ಥ :- ಇತಿ** = ಈ ರೀತಿಯಾಗಿ, **ಬ್ರುವಾಣಃ** = ಹೇಳತಕ್ಕ, **ವೃಕೋದರ** = ಭೀಮನು, **ತಂ** = ಆ, **ಮಲ್ಲಂ** = ಮಲ್ಲನನ್ನು, **ಅಭಿಯಾತಃ** = ಆಕ್ರಮಿಸಿದವನಾಗಿ, **ಬಲಾಢ್ಯೈಃ ಅಪಿ** = ಅತ್ಯಂತ ಬಲಶಾಲಿಗಳಿಂದಲೂ, **ದುರ್ಜಯಂ** = ಗೆಲ್ಲಲಾಗದವನನ್ನು, **ಮೃತ್ಯುಲೋಕಾಯ** = ಯಮಪಟ್ಟಣಕ್ಕೆ, **ಅನಯತ್** = ಕಳಿಸಿಕೊಟ್ಟನು.

**ತಾತ್ಪರ್ಯ :-** ಈ ರೀತಿಯಾಗಿ ಹೇಳುವವನಾದ, ಭೀಮನು, ಬಲಾಢ್ಯರಿಂದಲೂ ಗೆಲ್ಲಲಾಗದ, ಆ ಮಲ್ಲನನ್ನು ಆಕ್ರಮಿಸಿ, ಅವನನ್ನು ಕೊಂದು ಮೃತ್ಯುಲೋಕವಾದ ಯಮಪಟ್ಟಣಕ್ಕೆ ಕಳುಹಿಸಿದ.

**ಏವಂ ನಿವಸತಾಂ ತತ್ರ ಪಾಂಡವಾನಾಂ ಮಹಾತ್ಮನಾಮ್ ।**
**ಸಂವತ್ಸರೇ ದ್ವಿಮಾಸೋನೇ ವಿಜಿತ್ಯ ದಿಶ ಆಗತಃ ।**
**ಕೀಚಕೋ ಮತ್ಸ್ಯನೃಪತೇಃ ಸ್ಯಾಲೋ ಬಲವತಾಂ ವರಃ ॥ ೧೯ ॥**

**ಪದಚ್ಛೇದ :- ಏವಂ, ನಿವಸತಾಂ, ತತ್ರ ಪಾಂಡವಾನಾಂ, ಮಹಾತ್ಮನಾಂ, ಸಂವತ್ಸರೇ, ದ್ವಿಮಾಸೋನೇ ವಿಜಿತ್ಯ, ದಿಶಃ, ಆಗತಃ, ಕೀಚಕಃ, ಮತ್ಸ್ಯನೃಪತೇಃ, ಶ್ಯಾಲಃ, ಬಲವತಾಂ ವರಃ ।**

**ಅರ್ಥ :- ಏವಂ** = ಈ ರೀತಿಯಾಗಿ **ಮಹಾತ್ಮನಾಮ್** = ಮಹಾತ್ಮರಾದ, **ಪಾಂಡವಾನಾಮ್** = ಪಾಂಡವರು, **ತತ್ರ** = ಆ ವಿರಾಟನಗರದಲ್ಲಿ, **ನಿವಸತಾಂ** = ವಾಸ ಮಾಡುತ್ತಿರುವಾಗ **ದ್ವಿಮಾಸೋನೇ** = ಎರಡು ತಿಂಗಳು ಕಡಿಮೆಯಾದ, **ಸಂವತ್ಸರೇ** = ಒಂದು ವರ್ಷದ ಸಮಯದಲ್ಲಿ, **ಮತ್ಸ್ಯನೃಪತೇಃ** = ಮತ್ಸ್ಯದೇಶದ ರಾಜನಾದ ವಿರಾಟರಾಜನ, **ಶ್ಯಾಲಃ** = ಶ್ಯಾಲನಾದ (ಹೆಂಡತಿಯ ಅಣ್ಣ) **ಬಲವತಾಂ** = ಬಲಶಾಲಿಗಳಲ್ಲಿ, **ವರಃ** = ಶ್ರೇಷ್ಠನಾದ **ಕೀಚಕಃ** = ಕೀಚಕನು, **ದಿಶಃ** = ದಿಕ್ಕುಗಳನ್ನು, **ವಿಜಿತ್ಯ** = ಗೆದ್ದು **ಆಗತಃ** = ಬಂದನು.

ತಾತ್ಪರ್ಯ :- ಹೀಗೆ ಮಹಾತ್ಮರಾದ ಪಾಂಡವರು ಆ ವಿರಾಟನಗರದಲ್ಲಿ ಅಜ್ಞಾತವಾಸಮಾಡುತ್ತಿರುವಾಗ ವರ್ಷ ತುಂಬಲು ಎರಡು ತಿಂಗಳು ಇದ್ದಾಗ, ಆ ವಿರಾಟರಾಜನ ಹೆಂಡತಿಯ ಅಣ್ಣ, ಬಲಶಾಲಿಗಳಲ್ಲಿ ಶ್ರೇಷ್ಠನಾದ ಕೀಚಕ ದಿಗ್ವಿಜಯಕ್ಕೆ ಹೋದವನು. ಹಿಂದಿರುಗಿ ಬಂದನು.

ಸ ದ್ರೌಪದೀಮೀಕ್ಷ್ಯ ಮನೋಭವಾರ್ತಃ
ಸಂಪ್ರಾರ್ಥಯಾಮಾಸ ತಯಾ ನಿರಸ್ತಃ ।
ಮಾಸೇ ಗತೇ ಭಗಿನೀಂ ಸ್ವಾಂ ಸುದೇಷ್ಣಾಂ
ಸಂಪ್ರಾರ್ಥಯಾಮಾಸ ತದರ್ಥಮೇವ ॥ ೨೦ ॥

ಪದಚ್ಛೇದ :– ಸಃ, ದ್ರೌಪದೀಂ, ಈಕ್ಷ್ಯ, ಮನೋಭವಾರ್ತಃ, ಸಂಪ್ರಾರ್ಥಯಾಮಾಸ, ತಯಾ ನಿರಸ್ತಃ, ಮಾಸೇ, ಗತೇ, ಭಗಿನೀಂ, ಸ್ವಾಂ, ಸುದೇಷ್ಣಾಂ ಸಂಪ್ರಾರ್ಥಯಾಮಾಸ, ತದರ್ಥಂ ಏವ.

ಅರ್ಥ :- ಸಃ = ಆಕೀಚಕನು, ದ್ರೌಪದೀಂ = ದ್ರೌಪದಿಯನ್ನು ಈಕ್ಷ್ಯ = ನೋಡಿ ಮನೋಭವಾರ್ತಃ = ಮನ್ಮಥನಿಂದ ಪೀಡೆಗೊಳಗಾಗಿ (ಕಾಮಾರ್ತನಾಗಿ) ಸಂಪ್ರಾರ್ಥಯಾಮಾಸ = ಪ್ರಾರ್ಥಿಸಿಕೊಂಡನು. ತಯಾ = ಆ ದ್ರೌಪದಿಯಿಂದ ನಿರಸ್ತಃ = ತಿರಸ್ಕರಿಸಲ್ಪಟ್ಟನು. ಮಾಸೇ = ಒಂದು ತಿಂಗಳು, ಗತೇ = ಕಳೆಯುತ್ತಿರಲು, ತದರ್ಥಂ ಏವ = ಆ ದ್ರೌಪದಿಗೋಸ್ಕರವೇ, ಸ್ವಾಂ = ತನ್ನ ಭಗಿನೀಂ = ಸಹೋದರಿಯನ್ನು ಸಂಪ್ರಾರ್ಥಯಾಮಾಸ = ಕೇಳಿಕೊಂಡನು.

ತಾತ್ಪರ್ಯ :- ದಿಗ್ವಿಜಯ ಮಾಡಿ ಬಂದ ಆ ಕೀಚಕ ಅರಮನೆಯಲ್ಲಿರುವ ದ್ರೌಪದಿಯನ್ನು ನೋಡಿ, ಮೋಹಕ್ಕೊಳಗಾದ, ಅವಳಲ್ಲಿ, ಸಂಗಕ್ಕೋಸ್ಕರ ಬೇಡಿಕೊಂಡ, ಆದರೆ ದ್ರೌಪದಿ ಅವನನ್ನು ತಿರಸ್ಕರಿಸಿದಳು. ಅದಾದ ನಂತರ ಒಂದು ತಿಂಗಳ ಸುಮ್ಮನಿದ್ದ ಕೀಚಕ ತನ್ನ ಸಹೋದರಿಯ ಬಳಿ ಬಂದು ಹೇಗಾದರೂ ಮಾಡಿ ದ್ರೌಪದಿಯನ್ನು ಒಪ್ಪಿಸಲು ಪ್ರಾರ್ಥಿಸಿಕೊಂಡನು.

ತಯಾ ನಿಷಿದ್ಧೋಽಪಿ ಪುನಃಪುನಸ್ತಾಂ
ಯದಾ ಯಯಾಚೇಽಥ ಚ ಸಾಽಽಹ ಕೃಷ್ಣಾಮ್ ।

**ಸಮಾನಯಾಽಽಶ್ವೇವ ಸುರಾಂ ಮದರ್ಥ-**
**ಮಿತೀರಿತಾ ನೇತಿ ಭೀತಾಽವದತ್ ಸಾ ॥ ೨೦ ॥**

ಪದಚ್ಛೇದ :- ತಯಾ, ನಿಷಿದ್ಧಃ, ಅಪಿ, ಪುನಃ, ಪುನಃ, ತಾಂ, ಯದಾ, ಯಯಾಚೇ ಅಥ, ಚ, ಸಾ, ಆಹ, ಕೃಷ್ಣಾಮ್, ಸಮಾನಯ, ಆಶು, ಏವ, ಸುರಾಂ, ಮದರ್ಥಂ, ಇತಿ ಈರಿತಾ, ನ, ಇತಿ ಭೀತಾ, ಅವದತ್, ಸಾ.

**ಅರ್ಥ** :- **ತಯಾ** = ಆ ಸುದೇಷ್ಣೆಯಿಂದ, **ನಿಷಿದ್ಧಃ ಅಪಿ** = ತಡೆಯಲ್ಪಟ್ಟರೂ ಕೂಡ **ತಾಂ** = ಅವಳನ್ನು, **ಪುನಃ ಪುನಃ** = ಮತ್ತೆ ಮತ್ತೆ, **ಯದಾ** = ಯಾವಾಗ, **ಯಯಾಚೇ** = ಬೇಡಿದನೋ, **ಅಥ** = ಅನಂತರ, **ಸಾ.ಚ** = ಆ ಸುದೇಷ್ಣೆಯಾದರೂ, **ಕೃಷ್ಣಾಮ್** = ದ್ರೌಪದಿಯನ್ನು ಕುರಿತು, **ಮದರ್ಥಂ** = ನನಗೋಸ್ಕರ, **ಸುರಾಂ** = ಮದ್ಯವನ್ನು, **ಆಶು ಏವ** = ಕೂಡಲೇ, **ಸಮಾನಯ** = (ಕೀಚಕನ ಮನೆಯಿಂದ) ತೆಗೆದುಕೊಂಡು ಬಾ, **ಇತಿ** = ಎಂದು **ಆಹ** = ಹೇಳಿದಳು, **ಇತಿ** = ಈ ರೀತಿಯಾಗಿ **ಈರಿತಾ** = ಹೇಳಲ್ಪಟ್ಟ, **ಸಾ** = ದ್ರೌಪದಿಯು, **ಭೀತಾ** = ಭಗೊಂಡವಳಾಗಿ, **ನ ಇತಿ** = ಇಲ್ಲವೆಂದು, **ಅವದತ್** = ಹೇಳಿದಳು.

**ತಾತ್ಪರ್ಯ** :- ಆ ಕೀಚಕನ ಮಾತನ್ನು ಕೇಳಿ ಆ ಸುದೇಷ್ಣೆಯು ಮೊದಲು ಬೇಡ ಬೇಡವೆಂದು ನಿರಾಕರಿಸಿದಳು. ಆದರೆ ಕೀಚಕ ಮತ್ತೆ ಮತ್ತೆ ಕೇಳಿಕೊಂಡ. ಆಗ ಸುದೇಷ್ಣೆ, ದ್ರೌಪದಿಯನ್ನು ಕರೆದು ಕೀಚಕನ ಮನೆಯಿಂದ ನನಗೋಸ್ಕರ ಮದ್ಯವನ್ನು ತೆಗೆದುಕೊಂಡು ಬಾ ಎಂದು ಹೇಳಿದಳು. ಆಗ ಭಯದಿಂದ ದ್ರೌಪದಿಯು ಬೇಡವೆಂದು ಹೇಳಿದಳು.

**ಬಲಾತ್ ತಯಾ ಪ್ರೇಷಿತಾ ತದ್ಗೃಹಾಯ**
**ಯದಾಽಗಮತ್ ತೇನ ಹಸ್ತೇ ಗೃಹೀತಾ ।**
**ವಿಧೂಯ ತಂ ಪ್ರಾದ್ರವತ್ ಸಾ ಸಭಾಯೈ**
**ಸ್ಮೃತ್ವಾಽಽದಿತ್ಯಸ್ಥಂ ವಾಸುದೇವಂ ಪರೇಶಮ್ ॥ ೨೧ ॥**

ಪದಚ್ಛೇದ :- ಬಲಾತ್, ತಯಾ, ಪ್ರೇಷಿತಾ, ತದ್ಗೃಹಾಯ, ಯದಾ, ಅಗಮತ್, ತೇನ, ಹಸ್ತೇ, ಗೃಹೀತಾ, ವಿಧೂಯ, ತಂ, ಪ್ರಾದ್ರವತ್, ಸಾ, ಸಭಾಯೈ, ಸ್ಮೃತ್ವಾ, ಆದಿತ್ಯಸ್ಥಂ, ವಾಸುದೇವಂ, ಪರೇಶಮ್.

**ಅರ್ಥ** :- **ತಯಾ** = ಆ ಸುದೇಷ್ಣೆಯಿಂದ, **ಬಲಾತ್** = ಬಲವಂತ ದಿಂದ, **ತದ್ಗೃಹಾಯ** = ಆ ಕೀಚಕನ ಮನೆಗೆ, **ಪ್ರೇಷಿತಾ** = ಕಳಿಸಲ್ಪಟ್ಟ ದ್ರೌಪದಿಯು, **ಯದಾ** = ಯಾವಾಗ, **ಅಗಮತ್** = ಬಂದಳೋ ಆಗ **ತೇನ** = ಆ ಕೀಚಕನಿಂದ **ಹಸ್ತೇ** = ಕೈಯಲ್ಲಿ ಗೃಹೀತಾ = ಹಿಡಿಯಲ್ಪಟ್ಟಳು. **ಸಾ** = ಆ ದ್ರೌಪದಿಯು **ತಂ** = ಆ ಕೀಚಕನನ್ನು **ವಿಧೂಯ** = ತಳ್ಳಿ, **ಆದಿತ್ಯಸ್ಥಂ** = ಸೂರ್ಯಾಂತರ್ಗತನಾದ, **ಪರೇಶಮ್** = ಸರ್ವೋತ್ತಮನಾದ **ವಾಸುದೇವಂ** = ಶ್ರೀಕೃಷ್ಣನನ್ನು **ಸ್ಮೃತ್ವಾ** = ನೆನೆದು, **ಸಭಾಯೈ** = ಸಭೆಯನ್ನು ಕುರಿತು, **ಪ್ರಾದ್ರಾವತ್** = ಓಡಿದಳು.

**ತಾತ್ಪರ್ಯ** :- ದ್ರೌಪದಿದೇವಿ ಬೇಡವೆಂದರೂ ಸುದೇಷ್ಣೆಯು ಬಲವಂತವಾಗಿ ದ್ರೌಪದಿಯನ್ನು ಕೀಚಕನ ಮನೆಗೆ ಕಳುಹಿಸಿದಳು. ಆಗ ಬಂದಂತಹ ದ್ರೌಪದಿಯ ಕೈಯನ್ನು ಕೀಚಕನು ಹಿಡಿದನು. ಆಗ ದ್ರೌಪದಿ ಅವನನ್ನು ಕೊಡವಿಕೊಂಡು ಸೂರ್ಯಾಂತರ್ಗತ ಸರ್ವೋತ್ತಮನಾದ ಶ್ರೀಹರಿಯನ್ನು ಸ್ಮರಿಸುತ್ತಾ ಸಭೆಯ ಸ್ಥಳಕ್ಕೆ ಓಡಿಬಂದಳು.

**ಅನುದ್ರುತ್ಯೈತಾಂ ಪಾತಯಿತ್ವಾ ಪದಾ ಸ**
**ಸಂತಾಡಯಾಮಾಸ ತದಾ ರವಿಸ್ಥಿತಃ ।**
**ನಾರಾಯಣೋ ಹೇತಿನಾಮ್ನೈವ ರಕ್ಷೋ**
**ನ್ಯಯೋಜಯತ್ ತದದೃಶ್ಯಂ ಸಮಾಗಾತ್ ॥ ೨೩ ॥**

ಪದಚ್ಛೇದ :- ಅನುದ್ರುತ್ಯ, ಏನಾಂ, ಪಾತಯಿತ್ವಾ, ಪದಾ, ಸಃ, ಸಂತಾಡಯಾ ಮಾಸ, ತದಾ, ರವಿಸ್ಥಃ, ನಾರಾಯಣಃ=ಹೇತಿನಾಮ, ಏವ, ರಕ್ಷಃ, ನ್ಯಾಯೋಜಯತ್, ತತ್, ಅದೃಶ್ಯಂ, ಸಮಾಗಾತ್ ।

**ಅರ್ಥ** :- **ಸಃ** = ಆ ಕೀಚನು, **ಅನುದ್ರುತ್ಯ** = ಬೆನ್ನಟ್ಟಿಹೋಗಿ, **ಏನಾಂ** = ಈ ದ್ರೌಪದಿಯನ್ನು, **ಪಾತಯಿತ್ವಾ** = ಬೀಳಿಸಿ, (ಯಾವಾಗ) **ಪದಾ** = ಕಾಲಿನಿಂದ, **ಸಂತಾಡಯಾಮಾಸ** = ಪೀಡಿಸಿದನೋ, **ತದಾ** = ಆಗ, **ರವಿಸ್ಥಃ** = ಸೂರ್ಯನಲ್ಲಿರುವ, **ನಾರಾಯಣಃ ಏವ** = ಶ್ರೀಹರಿಯೇ, **ಹೇತಿ ನಾಮ** = 'ಹೇತಿ' ಎಂಬ ಹೆಸರಿನ, **ರಕ್ಷಃ** = ರಾಕ್ಷಸನನ್ನು **ನ್ಯಯೋಜಯತ್** = ನಿಯೋಜಿಸಿದನು. **ತತ್** = ಆ ರಾಕ್ಷಸನು, **ಅದೃಶ್ಯಂ** = ಅದೃಶ್ಯನಾಗಿ **ಸಮಾಗಾತ್** = ಬಂದನು.

ತಾತ್ಪರ್ಯ :- ದ್ರೌಪದಿಯು ಸಭೆಯನ್ನು ಕುರಿತು ಓಡಿಹೋದಾಗ ಅವಳನ್ನು ಬೆನ್ನಟ್ಟಿಕೊಂಡುಹೋದ. ಹಾಗೆಯೇ ಅವಳನ್ನು ಬೀಳಿಸಿ ಯಾವಾಗ ಕಾಲಿನಿಂದ ಪೀಡಿಸಿದನೋ ಆದೇ ಸಮಯದಲ್ಲಿ ಸೂರ್ಯಾಂತರ್ಗತ ನಾರಾಯಣ. ಅವಳ ರಕ್ಷಣೆಗೋಸ್ಕರ 'ಹೇತಿ' ಎಂಬ ರಾಕ್ಷಸನನ್ನು ನಿಯೋಜನೆ ಮಾಡಿದ. ಆ ರಾಕ್ಷಸ ಅದೃಶ್ಯನಾಗಿಯೇ ಅವಳ ರಕ್ಷಣೆಗೆ ಧಾವಿಸಿ ಬಂದ.

**ವಾಯುಸ್ತಮಾವಿಶ್ಯ ತು ಕೀಚಕಂ ತಂ**
**ನ್ಯಪಾತಯತ್ ತಾಂ ಸಮೀಕ್ಷ್ಯೈವ ಭೀಮಃ ।**
**ಚುಕೋಪ ವೃಕ್ಷಂ ಚ ಸಮೀಕ್ಷಮಾಣಂ**
**ತಂ ವಾರಯಾಮಾಸ ಯುಧಿಷ್ಠಿರೋಽಗ್ರಜಃ ॥ ೨೪ ॥**

**ಪದಚ್ಛೇದ :-** ವಾಯುಃ, ತದಾ, ಆವಿಶ್ಯ, ತು, ಕೀಚಕಂ, ತಂ, ನ್ಯಪಾತಯತ್, ತಾಂ, ಸಮೀಕ್ಷ್ಯ, ಏವ, ಭೀಮಃ, ಚುಕೋಪ, ವೃಕ್ಷಂ, ಚ ಸಮೀಕ್ಷಮಾಣಂ, ತಂ, ವಾರಯಾಮಾಸ, ಯುಧಿಷ್ಠಿರಃ, ಅಗ್ರಜಃ।

**ಅರ್ಥ :-** ತದಾ = ಆಗ, ವಾಯುಃ = ವಾಯುದೇವನು, ತಾ = ಆ ರಾಕ್ಷಸನನ್ನು, ಆವಿಶ್ಯ ತು = ಆವೇಶಗೊಂಡು ಕೀಚಕಂ = ಕೀಚಕನನ್ನು ನ್ಯಪಾತಯಾತ್ = ಬೀಳಿಸಿದನು ತಾಂ = ಆ ದ್ರೌಪದಿಯನ್ನು ಸಮೀಕ್ಷ್ಯೈವ = ನೋಡಿಯೇ, ಭೀಮಃ = ಭೀಮನು, ಚುಕೋಪ = ಕುಪಿತನಾದ, ವೃಕ್ಷಂ ಚ = ಮರವನ್ನು, ಸಮೀಕ್ಷಮಾಣಂ = ನೋಡುತ್ತಿರುವ, ತಂ = ಆ ಭೀಮನನ್ನು, ಅಗ್ರಜಃ = ಅಣ್ಣನಾದ ಯುಧಿಷ್ಠಿರಃ = ಧಮರಾಜನು, ವಾರಯಾಮಾಸ = ತಡೆದನು.

ತಾತ್ಪರ್ಯ :- ರಕ್ಷಣೆಗೆಂದು ಬಂದ ಆ ಹೇತಿ ರಾಕ್ಷಸನಲ್ಲಿ ವಾಯುದೇವರು ಆವಿಷ್ಟರಾದರು ಮತ್ತು ಆ ದುಷ್ಟ ಕೀಚಕನನ್ನು ಹೊಡೆದು ಬೀಳಿಸಿದರು. ಆ ಸಮಯದಲ್ಲಿ ದೀನಾವಸ್ಥೆಯಲ್ಲಿರುವ ದ್ರೌಪದಿಯನ್ನು ನೋಡಿ ಭೀಮನಿಗೆ ಸಿಟ್ಟು ಬಂದಿತು. ಸಿಟ್ಟಿನಿಂದ (ಒಂದು ದೊಡ್ಡಮರವನ್ನು ಕಿತ್ತೊಗೆಯುವಂತೆ ಈ ಪ್ರಸಂಗದಲ್ಲಿ ಸುಮ್ಮನಿರುವ ವಿರಾಟರಾಜನನ್ನು, ಕಿತ್ತೊಗೆಯುತ್ತೇನೆ ಎಂಬ ದೃಷ್ಟಿಯಿಂದ) ಮರವನ್ನೊಮ್ಮೆ ಯುಧಿಷ್ಠಿರನನ್ನೊಮ್ಮೆ ನೋಡುತ್ತಿರುವ ಭೀಮನನ್ನು ಅಣ್ಣನಾದ ಧರ್ಮರಾಜನು ತಡೆದನು.

ಕೃಷ್ಣಾ ರಾತ್ರೌ ಭೀಮಸಕಾಶಮೇತ್ಯ
ಹಂತುಂ ಪಾಪಂ ಕೀಚಕಂ ಪ್ರೈರಯತ್ ತಮ್ ।
ಭೀಮಸ್ಯ ಬುದ್ಧ್ಯಾ ನಿಶಿ ಸಾ ಕೀಚಕಂ ಚ
ಜಗಾದ ಗಂತುಂ ಶೂನ್ಯಗೃಹಂ ಸ ಚಾಗಾತ್ ॥ ೨೫ ॥

ಪದಚ್ಛೇದ :- ಕೃಷ್ಣಾ, ರಾತ್ರೌ, ಭೀಮಸಕಾಶಂ, ಏತ್ಯ, ಹಂತುಂ, ಪಾಪಂ, ಕೀಚಕಂ, ಪ್ರೈರಯತ್, ತಮ್, ಭೀಮಸ್ಯ, ಬುದ್ಧ್ಯಾ, ನಿಶಿ, ಸಾ, ಕೀಚಕಂ, ಚ, ಜಗಾದ, ಗಂತುಂ, ಶೂನ್ಯ ಗೃಹಂ, ಸ ಚ ಆಗಾತ್.

ಅರ್ಥ :- ಕೃಷ್ಣಾ = ದ್ರೌಪದಿಯು, ರಾತ್ರೌ = ರಾತ್ರಿಯಲ್ಲಿ ಭೀಮ ಸಕಾಶಂ = ಭೀಮನ ಸಮೀಪಕ್ಕೆ, ಏತ್ಯ = ಹೊಂದಿ, ಪಾಪಂ = ಪಾಪಿಷ್ಟನಾದ ಕೀಚಕಂ = ಕೀಚಕನನ್ನು ಹಂತುಂ = ಕೊಲ್ಲಲು, ತಂ = ಆ ಭೀಮನನ್ನು, ಪ್ರೈರಯತ್ = ಪ್ರೇರೇಪಿಸಿದಳು. ಸಾ = ಆ ದ್ರೌಪದಿಯು ಭೀಮಸ್ಯ = ಭೀಮನ, ಬುದ್ಧ್ಯಾ = ಬುದ್ಧಿಯಿಂದ, ನಿಶಿ = ರಾತ್ರಿಯಲ್ಲಿ, ಕೀಚಕಂ = ಕೀಚಕನನ್ನು ಕುರಿತು, ಶೂನ್ಯಗೃಹಂ = ನಿರ್ಜನವಾದ ನೃತ್ಯಶಾಲೆಯನ್ನು ಕುರಿತು, ಗಂತುಂ = ಹೋಗಲು, ಜಗಾದ = ಹೇಳಿದಳು. ಸ ಚ = ಅವನಾದರೂ ಅಗಾತ್ = ಅಲ್ಲಿಗೆ ಹೋದನು.

ತಾತ್ಪರ್ಯ :- ದ್ರೌಪದಿದೇವಿ ಆ ದಿನ ರಾತ್ರಿ ಭೀಮನ ಬಳಿಗೆ ಬಂದು ದುಷ್ಟನಾದ ಆ ಕೀಚಕನನ್ನು ಕೊಲ್ಲು ಎಂದು ಆ ಭೀಮನನ್ನು ಪ್ರೇರೇಪಿಸಿದಳು. ಆಗ ಭೀಮ ಹೇಳಿದ ಅವನನ್ನು ನಿರ್ಜನಪ್ರದೇಶವಾದ ನೃತ್ಯಶಾಲೆಗೆ ಬರಲು ಹೇಳು ಎಂದು ಅದರಂತೆ ದ್ರೌಪದಿ ರಾತ್ರಿಯಲ್ಲಿ ಅಲ್ಲಿಗೆ ಬರಲು ಹೇಳಿದಳು. ಅದರಂತೆ ಕೀಚಕ ನೃತ್ಯಶಾಲೆಗೆ ಹೋದನು.

ತತ್ರೈನಮಾಸಾದ್ಯ ತು ಭೀಮಸೇನೋ
ವಿಜಿತ್ಯ ತಂ ಬಾಹುಯುದ್ಧೇ ನಿಹತ್ಯ ।
ಶಿರೋ ಗುದೇ ಪಾಣಿಪಾದೌ ಚ ತಸ್ಯ
ಪ್ರವೇಶಯಾಮಾಸ ವಿಮೃದ್ಯ ವೀರಃ ॥ ೨೬ ॥

ಪದಚ್ಛೇದ :- ತತ್ರ, ಏನಂ, ಆಸಾದ್ಯ, ಚ, ಭೀಮಸೇನಃ, ವಿಜಿತ್ಯ, ತಂ, ಬಾಹು ಯುದ್ಧೇ, ನಿಹತ್ಯ ಶಿರಃ, ಗುದೇ, ಪಾಣಿಪಾದೌ, ಚ ತಸ್ಯ, ಪ್ರವೇಶಯಾಮಾಸ ॥

**ಅರ್ಥ** :- **ವಿಮೃದ್ಯ** = ಗುದ್ದಿ **ತಸ್ಯ** = ಅವನ **ಗುದೆ** = ಗುದ ಪ್ರದೇಶದಲ್ಲಿ **ಶಿರಃ** = ತಲೆಯನ್ನು **ಚ** = ಮತ್ತು **ಪಾಣಿಪಾದೌಚ** = ಕೈಕಾಲುಗಳನ್ನು **ಪ್ರವೇಶಯಾಮಾಸ** = ಸೇರಿಸಿದನು.

ತಾತ್ಪರ್ಯ :- ಭೀಮನು ಆಶಯನ ಗೃಹಕ್ಕೆ ಹೋಗಿ, ಅಲ್ಲಿರುವ ಕೀಚಕನನ್ನು ಬಾಹುಯುದ್ಧದಲ್ಲಿ ಸೋಲಿಸಿ ಕೊಂದು, ಅವನ ತಲೆ ಕೈಕಾಲುಗಳನ್ನು ಗುದ್ದಿ, ಮರ್ದನಮಾಡಿ ಅವನ ಗುದಪ್ರದೇಶದ ಮೂಲಕ ಅವುಗಳನ್ನು ಒಳಗೆ ಸೇರಿಸಿ ಒಂದು ಮಾಂಸದ ಮುದ್ದೆಯನ್ನೆಂಬಂತೆ ಮಾಡಿದನು.

**ಅವಧ್ಯಂ ತಂ ನಿಹತಂ ವೀಕ್ಷ್ಯ ತಸ್ಯ**
**ಪಂಚೋತ್ತರಂ ಶತಮೇವಾನುಜಾನಾಮ್ ।**
**ಸರ್ವಂ ವರಾಚ್ಛಂಕರಸ್ಯ ಹ್ಯವಧ್ಯಂ**
**ಸಹೈವ ಕೃಷ್ಣಾಂ ತೇನ ದಗ್ಧುಂ ಬಬಂಧ ॥ ೨೭ ॥**

ಪದಚ್ಛೇದ :- ಅವಧ್ಯಂ, ತಂ, ನಿಹತಂ ವೀಕ್ಷ್ಯ, ತಸ್ಯ, ಪಂಚೋತ್ತರಂ, ಶತಂ, ಏವ, ಅನುಜಾನಾಮ್, ಸರ್ವಂ, ವರಾತ್, ಶಂಕರಸ್ಯ, ಹಿ, ಅವಧ್ಯಂ, ಸಹ, ಏವ, ಕೃಷ್ಣಾಂ ತೇನ, ದಗ್ಧುಂ, ಬಬಂಧ.

**ಅರ್ಥ** :- **ಅವಧ್ಯಂ** = ಅವಧ್ಯನಾದ **ತಂ** = ಆ ಕೀಚಕನನ್ನು, **ನಿಹತಂ** = ಸತ್ತವನನ್ನಾಗಿ **ವೀಕ್ಷ್ಯ** = ನೋಡಿ, **ಶಂಕರಸ್ಯ** = ರುದ್ರದೇವರ **ವರಾತ್** = ವರದಿಂದ **ಅವಧ್ಯಂ** = ಅವಧ್ಯರಾದ, **ತಸ್ಯ** = ಆ ಕೀಚಕನ **ಪಂಚೋತ್ತರಂ** = ಐದು ಉತ್ತರದಲ್ಲಿರುವ **ಅನುಜಾನಾಂ** = ತಮ್ಮಂದಿರ, **ಶತಂ ಏವ** = ನೂರು ಮಂದಿಯೂ, **ತೇನ** = ಆ ಕೀಚಕನ, **ಸಹೈವ** = ಒಟ್ಟಿಗೇ **ದಗ್ಧುಂ** = ಸುಡಲು **ಬಬಂಧ** = ಕಟ್ಟಿದರು.

ತಾತ್ಪರ್ಯ :- ಅವಧ್ಯನಾದ ಕೀಚಕನು ಸತ್ತಿದ್ದನ್ನು ಕಂಡ ಅವನ ನೂರ ಐದು ಮಂದಿ ಶಿವನ ವರದಿಂದ ಅವಧ್ಯರಾದ ತಮ್ಮಂದಿರು (ಈ ದ್ರೌಪದಿಯ ಕಾರಣದಿಂದ ನಮ್ಮ ಅಣ್ಣ ಕೀಚಕ ಸತ್ತಿರುವುದರಿಂದ) ಅವನ ಒಟ್ಟಿಗೆ ಸುಡುವುದಕ್ಕೋಸ್ಕರ ದ್ರೌಪದಿದೇವಿಯನ್ನು ಕಟ್ಟಿದರು.

ಸಾ ನೀಯಮಾನಾ ಕೀಚಕೈಃ ಸಂರುರಾವ
ಶ್ರುತ್ವೈವ ತಂ ಭೀಮಸೇನೋ ಮಹಾಂತಮ್ ।
ಉದ್ಧೃತ್ಯ ವೃಕ್ಷಂ ತೇನ ಜಘಾನ ಸರ್ವಾ-
ನಾದಾಯ ಕೃಷ್ಣಾಂ ಪುನರಾಗಾತ್ ಪುರಂ ಚ ॥ ೨೮ ॥

ಪದಚ್ಛೇದ :- ಸಾ. ನೀಯಮಾನಾ, ಕೀಚಕೈಃ, ಸಂರುರಾವ, ಶ್ರುತ್ವಾ, ಏವ, ತಂ, ಭೀಮಸೇನಃ, ಮಹಾಂತಂ, ಉದ್ಧೃತ್ಯ, ವೃಕ್ಷಂ, ತೇನ, ಜಘಾನ, ಸರ್ವಾನ್, ಆದಾಯ, ಕೃಷ್ಣಾಂ, ಪುನಃ, ಆಗಾತ್, ಪುರ, ಚ.

ಅರ್ಥ :- ಕೀಚಕೈಃ = ಉಪಕೀಚಕರಿಂದ, ನೀಯಮಾನಾ = ಕರೆದೊಯ್ಯಲ್ಪಡುವ, ಸಾ = ಆ ದ್ರೌಪದಿಯು ಸಂರುರಾವ = ಕೂಡಿಕೊಂಡಳು, ತಂ = ಅದನ್ನು, ಶ್ರುತ್ವಾ ಏವ = ಕೇಳಿಯೇ, ಭೀಮಸೇನಃ = ಭೀಮಸೇನನು, ಮಹಾಂತಂ = ದೊಡ್ಡದಾದ, ವೃಕ್ಷಂ = ಮರವನ್ನು, ಉದ್ಧೃತ್ಯ = ಕಿತ್ತಿ, ತೇನ = ಅದರಿಂದ ಸರ್ವಾನ್ = ಎಲ್ಲರನ್ನೂ ಜಘಾನ = ಕೊಂದನು, ಕೃಷ್ಣಾಂ = ದ್ರೌಪದಿಯನ್ನು ಆದಾಯ = ಕರೆದುಕೊಂಡು, ಪುನಃ = ಪುನಃ, ಪುರಂ = ಪಟ್ಟಣವನ್ನು ಕುರಿತು, ಆಗಾತ್ = ಬಂದನು.

ತಾತ್ಪರ್ಯ :- ಉಪಕೀಚಕರು ಕೀಚಕನ ಜೊತೆಗೆ ಸುಡಲು ದ್ರೌಪದಿಯನ್ನು ಎಳೆದುಕೊಂಡು ಹೋಗುವಾಗ ದ್ರೌಪದಿಯು ಕಿರುಚುತ್ತಾಳೆ. ಆ ಕೂಡಿಕೊಂಡ ಶಬ್ದವನ್ನು ಕೇಳಿಯೇ ಭೀಮನು ಒಂದು ದೊಡ್ಡ ವೃಕ್ಷವನ್ನು ಕಿತ್ತಿ ಅದರಿಂದ ಎಲ್ಲಾ ಉಪಕೀಚಕರನ್ನು ಕೊಂದು, ದ್ರೌಪದಿಯನ್ನು ಕರೆದುಕೊಂಡು ಊರಿಗೆ ಬಂದನು.

ಏವಂ ಯತ್ನಾತ್ ತಪಸಾ ತೈರವಾಪ್ತೋ
ವರಃ ಶಿವಾದಜಯತ್ವಂ ರಣೇಷು ।
ಅವಧ್ಯತಾ ಚೈವ ಷಡುತ್ತರಾಸ್ತೇ
ಶತಂ ಹತಾ ಭೀಮಸೇನೇನ ಸಂಖೇ ॥ ೨೯ ॥

ಪದಚ್ಛೇದ :- ಏವಂ, ಯತ್ನಾತ್, ತಪಸಾ, ತೈಃ, ಅವಾಪ್ತಃ ವರಃ ಶಿವಾತ್, ಅಜಯತ್ವಂ, ರಣೇಷು, ಅವಧ್ಯತಾ, ಚ, ಏವ, ಷಡುತ್ತರಾಃ, ತೇ, ಶತಂ, ಹತಾ, ಭೀಮಸೇನೇನ, ಸಂಖ್ಯೇ.

**ಅರ್ಥ :-** **ತೈಃ** = ಆ ಉಪಕೀಚಕರಿಂದ **ಯತ್ನಾತ್** = ಬಹಳ ಪ್ರಯತ್ನದಿಂದ, **ತಪಸಾ** = ತಪಸ್ಸಿನಿಂದ, **ಶಿವಾತ್** = ಶಿವನ ದೆಸೆಯಿಂದ, **ರಣೇಷು** = ಯುದ್ಧಗಳಲ್ಲಿ, **ಅಜಯತ್ವಂ** = ಅಜೇಯಯತ್ವವು, **ಚ** = ಮತ್ತು **ಅವಧ್ಯತಾ** = ಅವಧ್ಯತ್ವವು, **ವರಃ** = ವರವಾಗಿ **ಪ್ರಾಪ್ತಃ** = ಹೊಂದಲ್ಪಟ್ಟಿತ್ತು, **ಷಡುತ್ತಾರಾಃ** = ಆರು ಉತ್ತರದಲ್ಲಿರುವ **ತೇ** = ಆ **ಶತಂ** = ನೂರು ಮಂದಿ, **ಏವಂ** = ಈ ರೀತಿಯಾಗಿ **ಭೀಮಸೇನೇನ** = ಭೀಮಸೇನನಿಂದ, **ಸಂಖ್ಯೇ** = ಯುದ್ಧದಲ್ಲಿ **ಹತಾಃ** = ಕೊಲ್ಲಲ್ಪಟ್ಟರು.

**ತಾತ್ಪರ್ಯ :-** ಆ ಉಪಕೀಚಕರೂ ಬಹಳ ಕಷ್ಟ, ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡು ಯುದ್ಧದಲ್ಲಿ ಅಜೇತ್ವವನ್ನೂ, ಅವಧ್ಯತ್ವವನ್ನೂ ವರವನ್ನಾಗಿ ಪಡೆದಿದ್ದರು. ಅಂತಹ ನೂರ ಆರು ಮಂದಿ ಕೀಚಕರು ಈ ರೀತಿಯಾಗಿ ಯುದ್ಧದಲ್ಲಿ ಭೀಮಸೇನನಿಂದ ಹತರಾದರು.

**ಗಂಧರ್ವಾ ಇತ್ಯೇವ ನಿಹತ್ಯ ಸರ್ವಾನ್**
**ಮುಮೋದ ಭೀಮೋ ದ್ರೌಪದೀ ಚಾಽಥ ಕೃಷ್ಣಾಮ್ ।**
**ಯಾಹೀತ್ಯೂಚೇ ತಾಂ ಸುದೇಷ್ಣಾ ಭಯೇನ**
**ತ್ರಯೋದಶಾಹಂ ಪಾಲಯೇತ್ಯಾಹ ತಾಂ ಸಾ ।**
**ಅಸ್ತ್ವಿತ್ಯೇನಾಮಾಹ ಭಯಾತ್ ಸುದೇಷ್ಣಾ**
**ತಥಾಽವಸನ್ ಪೂರ್ಣಮಬ್ದಂ ಚ ತೇಽತ್ರ ॥ ೩೦ ॥**

ಪದಚ್ಛೇದ :- ಗಂಧರ್ವಾಃ, ಇತಿ, ಏವ, ನಿಹತ್ಯ, ಸರ್ವಾನ್ ಮುಮೋದ, ಭೀಮಃ ದ್ರೌಪದೀ, ಚ, ಅಥ, ಕೃಷ್ಣಾಂ, ಯಾಹಿ, ಇತಿ, ಊಚೇ, ಸಾ, ಸುದೇಷ್ಣಾ, ಭಯೇನ, ತ್ರಯೋದಶಾಹಂ, ಪಾಲಯ, ಇತಿ, ಆಹ, ತಾಂ, ಸಾ, ಅಸ್ತು, ಇತಿ, ಏನಾಂ, ಆಹ, ಭಯಾತ್, ಸುದೇಷ್ಣಾ, ತಥಾ, ಅವಸನ್, ಪೂರ್ಣಂ, ಅಬ್ದಂ ಚ, ತೇ, ಅತ್ರ.

**ಅರ್ಥ :-** **ಭೀಮಃ** = ಭೀಮನು, **ಗಂಧರ್ವಾಃ ಇತಿ ಏವ** = ಗಂಧರ್ವನೆಂದುಕೊಂಡೇ, **ತಾನ್** = ಆ **ಸರ್ವಾನ್** = ಎಲ್ಲಾ ಕೀಚಕರನ್ನು **ನಿಹತ್ಯ** = ಕೊಂದು, **ಮುಮೋದ** = ಸಂತೋಷಪಟ್ಟನು, **ಚ** = ಮತ್ತು **ದ್ರೌಪದೀ** = ದ್ರೌಪದಿಯೂ ಕೂಡ, **ಮುಮೋದ** = ಸಂತೋಷ ಪಟ್ಟಳು, **ಅಥ** = ಅನಂತರ **ಸಾ** = ಆ, **ಸುದೇಷ್ಣಾ** = ವಿರಾಟರಾಜನ ಪತ್ನಿ ಸುದೇಷ್ಣೆಯು, **ಭಯೇನ** = ಭಯದಿಂದ, **ಕೃಷ್ಣಾಂ** = ದ್ರೌಪದಿಯನ್ನು,

**ಯಾಹಿ** = ಹೋಗು **ಇತಿ** = ಎಂದು, **ಊಚೇ** = ಹೇಳಿದಳು. **ತಾಂ** = ಆ ಸುದೇಷ್ಣೆಯನ್ನು ಕುರಿತು, **ಸಾ** = ಆ ದ್ರೌಪದಿಯು **ತ್ರಯೋದಶಾಹಂ** = ಹದಿಮೂರು ದಿನ **ಪಾಲಯ** = ರಕ್ಷಿಸು, **ಇತಿ** = ಈ ರೀತಿಯಾಗಿ **ಆಹ** = ಹೇಳಿದಳು, **ಏನಾಂ** = ಈ ದ್ರೌಪದಿಯನ್ನು ಕುರಿತು **ಸುದೇಷ್ಣಾ** = ಸುದೇಷ್ಣೆಯು **ಭಯಾತ್** = ಭಯದಿಂದ **ಅಸ್ತು ಇತಿ** = ಆಗಲಿ ಎಂದು **ಆಹ** = ಹೇಳಿದಳು. **ತೇ** = ಆ ಪಾಂಡವರು **ಅತ್ರ** = ಈ ವಿರಾಟನ ಅರಮನೆಯಲ್ಲಿ **ತಥಾ** = ಆ ರೀತಿ ಅಜ್ಞಾತವಾಸದಿಂದ **ಪೂರ್ಣಂ ಅಬ್ದಂ** = ಒಂದುವರ್ಷ ಪೂರ್ಣವಾಗಿ, **ಅವಸನ್** = ವಾಸ ಮಾಡಿದರು.

**ತಾತ್ಪರ್ಯ** :- ಭೀಮನು ಕೀಚಕರನ್ನು ಕೊಲ್ಲುವಾಗ ತನ್ನನ್ನು ಗಂಧರ್ವನೆಂದು ಹೇಳಿಕೊಂಡೇ ಸಾಯಿಸಿದ. ಹೀಗೆ ಅವರನ್ನು ಬೇರೆ ಹೆಸರಿನಿಂದ ಕೊಂದು ಭೀಮನೂ, ದ್ರೌಪದಿಯೂ ಸಂತೋಷ ಪಟ್ಟರು. ಅನಂತರ ದ್ರೌಪದಿಯ ನಿಮಿತ್ತವಾಗಿ ತನ್ನ ಸಹೋದರರು ನಾಶವಾದದ್ದನ್ನು ಕಂಡು ಸುದೇಷ್ಣೆಯು ಇನ್ನು ದ್ರೌಪದಿ ಇಲ್ಲೇ ಇದ್ದರೆ ಅವಳ ಗಂಧರ್ವ ಪತಿಯರಿಂದಾಗಿ ಇನ್ನೇನು ಕೆಡಕು ಆಗುತ್ತದೆಯೋ ಎಂಬ ಭಯದಿಂದ ದ್ರೌಪದಿಗೆ ನೀನು ಇಲ್ಲಿರಬೇಡ ಹೋಗು ಎಂದು ಹೇಳಿದಳು. ಆಗ ದ್ರೌಪದಿಯು ಇನ್ನು ಹದಿಮೂರು ದಿನ ತಾಳು ಅನಂತರ ಹೊರಡುತ್ತೇನೆ ಎಂದಳು. ಆಗ ಹದಿಮೂರುದಿನ ಇಲ್ಲಿರಲು ಒಪ್ಪದಿದ್ದರೆ ಪುನಃ ಅವಳಿಂದ ಏನಾಗುತ್ತದೋ ಎಂಬ ಭಯದಿಂದ ಹಾಗೆ ಆಗಲಿ ಎಂದು ಒಪ್ಪಿದಳು. ಹೀಗೆ ಆ ಪಾಂಡವರೆಲ್ಲರೂ ಒಂದು ವರ್ಷಪೂರ್ತಿ ಆ ವಿರಾಟನ ಅರಮನೆಯಲ್ಲಿ ಅಜ್ಞಾತವಾಸದಲ್ಲಿ ಕಳೆದರು.

**ತದಾ ಪಾರ್ಥಾನ್ ಪ್ರವಿಚಿತ್ಯಾಖಿಲಾಯಾಂ**
**ಪೃಥ್ವ್ಯಾಂ ಛನ್ನಾನ್ ಧಾರ್ತರಾಷ್ಟ್ರಸ್ಯ ದೂತಾಃ ।**
**ಅವಿಜ್ಞಾಯ ಪ್ರಯಯುರ್ಧಾರ್ತರಾಷ್ಟ್ರ-**
**ಮೂಚುರ್ಹತಂ ಕೀಚಕಂ ಯೋಷಿದರ್ಥೇ ॥ ೩೧ ॥**

ಪದಚ್ಛೇದ :- ತದಾ ಪಾರ್ಥಾನ್, ಪ್ರವಿಚಿತ್ಯ, ಅಖಿಲಾಯಾಂ, ಪೃಥಿವ್ಯಾಂ, ಛನ್ನಾನ್, ಧಾರ್ತರಾಷ್ಟ್ರಸ್ಯ, ದೂತಾಃ, ಅವಿಜ್ಞಾಯ ಪ್ರಯಯುಃ, ಧಾರ್ತರಾಷ್ಟ್ರಂ, ಊಚುಃ, ಹತಂ, ಕೀಚಕಂ, ಯೋಷಿದರ್ಥೇ.

**ಅರ್ಥ** :- **ತದಾ** = ಆ ಸಮಯದಲ್ಲಿ, **ಧಾರ್ತರಾಷ್ಟ್ರಸ್ಯ** = ದುರ್ಯೋಧನನ **ದೂತಾಃ** = ಸೇವಕರು, **ಅಖಿಲಾಯಾಂ** = ಎಲ್ಲಾ **ಪೃಥ್ವ್ಯಾಂ** = ಭೂಮಿಯಲ್ಲಿ **ಛನ್ನಾನ್** = ಮರೆಯಾಗಿದ್ದ, **ಪಾರ್ಥಾನ್** = ಪಾಂಡವರನ್ನು **ಪ್ರವಿಚಿತ್ಯ** = ಹುಡುಕಿ **ಅವಿಜ್ಞಾಯ** = ಕಾಣದೆ **ಪ್ರಯಯುಃ** = (ದುರ್ಯೋಧನನ ಬಳಿಗೆ) ಹೊರಟರು **ಧಾರ್ತರಾಷ್ಟ್ರಂ** = ದುರ್ಯೋಧನನ್ನು ಕುರಿತು **ಯೋಷಿದರ್ಥೇ** = ಸ್ತ್ರೀಗೋಸ್ಕರ **ಕೀಚಕಂ** = ಕೀಚಕನನ್ನು **ಹತಂ** = ಸತ್ತವನನ್ನಾಗಿ **ಊಚುಃ** = ಹೇಳಿದರು.

**ತಾತ್ಪರ್ಯ** :- ಪಾಂಡವರು ವಿರಾಟನಗರದಲ್ಲಿ ಅಜ್ಞಾತವಾಸ ಪೂರ್ಣ ಮಾಡಿದ ಸಮಯದಲ್ಲಿ ದುರ್ಯೋಧನನ ದೂತರು (ಗೂಢಚರರು) ಇಡೀ ಭೂಮಿಯನ್ನೆಲ್ಲಾ ಪಾಂಡವರಿಗೋಸ್ಕರ ಹುಡುಕಿ ಎಲ್ಲಿಯೂ ಪಾಂಡವರನ್ನು ಕಾಣದೆ, ತಿರುಗಿ ದುರ್ಯೋಧನನ ಬಳಿಗೇ ಪುನಃ ಬಂದರು. ಆ ಸಮಯದಲ್ಲಿ ವಿರಾಟನಗರದಲ್ಲಿ ಒಬ್ಬಳು ಸ್ತ್ರೀಯ ನಿಮಿತ್ತವಾಗಿ ಕೀಚಕನು ಸತ್ತಿದ್ದಾನೆ ಎಂಬ ವಿಷಯವನ್ನು ತಿಳಿಸಿದರು.

**ತೇನಾವದದ್ ದ್ರೌಪದೀಕಾರಣೇನ**
**ದುರ್ಯೋಧನೋ ನಿಹತಂ ಕೀಚಕಂ ತಮ್ ।**
**ಭೀಮೇನಾಗುಸ್ತತ್ರ ದುರ್ಯೋಧನಾದ್ಯಾ**
**ಭೀಷ್ಮಾದಿಭಿಃ ಸಹ ಕರ್ಣೇನ ಚೈವ ॥ ೩೨ ॥**

ಪದಚ್ಛೇದ :- ತೇನ, ಅವದತ್ ದ್ರೌಪದೀ ಕಾರಣೇನ, ದುರ್ಯೋಧನಃ, ನಿಹತಂ, ಕೀಚಕಂ, ತಂ, ಭೀಮೇನ, ಅಗುಃ, ತತ್ರ, ದುರ್ಯೋಧನಾದ್ಯಾಃ, ಭೀಷ್ಮಾದಿಭಿಃ, ಸಹ ಕರ್ಣೇನ, ಚ ಏವ.

**ಅರ್ಥ** :- **ತೇನ** = ಆ ವಿಷಯದಿಂದ **ದುರ್ಯೋಧನಃ** = ದುರ್ಯೋಧನನು, **ದ್ರೌಪದೀಕಾರಣೇನ** = ದ್ರೌಪದೀ ನಿಮಿತ್ತವಾಗಿ **ಭೀಮೇನ** = ಭೀಮನಿಂದ, **ತಂ** = ಆ **ಕೀಚಕಂ** = ಕೀಚಕನನ್ನು, **ನಿಹತಂ** = ಕೊಲ್ಲಲ್ಪಟ್ಟವನನ್ನಾಗಿ, **ಅವದತ್** = ಹೇಳಿದನು. **ತತ್ರ** = ಆ ವಿರಾಟ ನಗರಕ್ಕೆ **ದುರ್ಯೋಧನಾದ್ಯಾಃ** = ದುರ್ಯೋಧನ ಮೊದಲಾದವರು **ಭೀಷ್ಮಾದಿಭಿಃ** = ಭೀಷ್ಮಾಚಾರ್ಯ ಮೊದಲಾದವರಿಂದ **ಚ** = ಮತ್ತು, **ಕರ್ಣೇನ ಸಹ** = ಕರ್ಣನಿಂದಲೂ ಕೂಡಿಕೊಂಡು, **ಅಗುಃ** = ಹೊರಟರು.

ತಾತ್ಪರ್ಯ :- ದೂತರು ಹೇಳಿದ ಕೀಚಕನ ವಿಷಯದಿಂದ ತರ್ಕಿಸಿದ ದುರ್ಯೋಧನ ಹೀಗೆ ಹೇಳಿದ ಸ್ತ್ರೀಯ ನಿಮಿತ್ತವಾಗಿ ಕೀಚಕ ಕೊಲ್ಲಲ್ಪಟ್ಟಿದ್ದಾನೆ. ಎಂದರೆ, ಆ ಸ್ತ್ರೀ ಖಂಡಿತಾ ದ್ರೌಪದಿಯೇ ಆಗಿರಬೇಕು. ಅವನನ್ನು ಕೊಂದವನು ಭೀಮನೇ ಆಗಿದ್ದಾನೆ ಎಂದು ಹೀಗೆ ಹೇಳಿ ದುರ್ಯೋಧನ ಮುಂತಾದವರು ಭೀಷ್ಮಾದಿಗಳಿಂದ ಹಾಗೂ ಕರ್ಣನಿಂದ ಕೂಡಿಕೊಂಡು ವಿರಾಟನಗರಕ್ಕೆ ಹೊರಟರು.

**ಅಗ್ರೇ ಯಯೌ ತತ್ರ ಯೋದ್ಧುಂ ಸುಶರ್ಮಾ**
**ಸ ಗಾ ವಿರಾಟಸ್ಯ ಸಮಾಜಹಾರ ।**
**ಶ್ರುತ್ವಾ ವಿರಾಟೋಽನುಯಯೌ ಸಸೇನಃ**
**ತಂ ಪಾಂಡವಾಶ್ಚಾನುಯಯುರ್ವಿನಾಽರ್ಜುನಮ್ ॥ ೩೩ ॥**

ಪದಚ್ಛೇದ :- ಅಗ್ರೇ, ಯಯೌ, ತತ್ರ, ಯೋದ್ಧುಂ, ಸುಶರ್ಮಾ, ಸಃ, ಗಾಃ, ವಿರಾಟಸ್ಯ ಸಮಾಜಹಾರ, ಶ್ರುತ್ವಾ, ವಿರಾಟಃ, ಅನುಯಯೌ, ಸಸೇನಃ, ತಂ, ಪಾಂಡವಾಃ, ಚ, ಅನುಯಯುಃ ವಿನಾ ಅರ್ಜುನೇನ.

ಅರ್ಥ :- **ತತ್ರ** = ಆ ವಿರಾಟನಗರಕ್ಕೆ, **ಯೋದ್ಧುಂ** = ಯುದ್ಧ ಮಾಡಲು, **ಸುಶರ್ಮಾ** = ಸುಶರ್ಮಾನಂ, **ಅಗ್ರೇ** = ಮೊದಲು **ಯಯೌ** = ಹೊರಟನು. **ಸಃ** = ಅವನು, **ವಿರಾಟಸ್ಯ** = ವಿರಾಟರಾಜನ **ಗಾಃ** = ಗೋವುಗಳನ್ನು, **ಸಮಾಜಹಾರ** = ಅಪಹರಿಸಿದ, **ಶ್ರುತ್ವಾ** = (ಅದನ್ನು) ಕೇಳಿ, **ವಿರಾಟಃ** = ವಿರಾಟರಾಜನು, **ಸಸೇನಃ** = ಸೈನ್ಯ ಸಹಿತನಾಗಿ **ಅನುಯಯೌ** = (ಸುಶರ್ಮನನ್ನು) ಬೆನ್ನಟ್ಟಿದನು. **ತಂ** = ಆ ವಿರಾಟನನ್ನು **ಅರ್ಜುನಂ** = ಅರ್ಜುನನ್ನು **ವಿನಾ** = ಬಿಟ್ಟು, **ಪಾಂಡವಾಃ** = ಪಾಂಡವರು, **ಅನುಯಯುಃ** = ಅನುಸರಿಸಿ ಹೋದರು.

ತಾತ್ಪರ್ಯ :- ಆ ವಿರಾಟ ನಗರಕ್ಕೆ ಯುದ್ಧ ಮಾಡಲು ಮೊದಲು ಸುಶರ್ಮನೆಂಬ ದುರ್ಯೋಧನ ಪಕ್ಷದ ವಿರಾಟರಾಜ್ಯದ ಶತ್ರು ಹೋದನು. ಅಲ್ಲಿ ಅವನು ವಿರಾಟನ ಗೋವುಗಳನ್ನು ಅಪಹರಿಸಿದ, ಅದನ್ನು ಕೇಳಿ ವಿರಾಟರಾಜ ಸೈನ್ಯ ಸಮೇತನಾಗಿ ಅವನನ್ನು ಬೆನ್ನಟ್ಟಿದ. ಆ ವಿರಾಟರಾಜನ ಸಹಾಯಕ್ಕೆ ಅರ್ಜುನ ಬಿಟ್ಟು ಉಳಿದ ಪಾಂಡವರು ಅನುಸರಿಸಿ ಹೋದರು.

**ವಿಜಿತ್ಯ ಸಂಖೇ ಜಗೃಹೇ ವಿರಾಟಂ**
**ತದಾ ಸುಶರ್ಮಾ ತಮಯಾದ್ ವೃಕೋದರಃ ।**
**ಸ ತಸ್ಯ ಸೇನಾಂ ವಿನಿಹತ್ಯ ಮಾತ್ಸ್ಯಂ**
**ವಿಮೋಚ್ಯ ಜಗ್ರಾಹ ಸುಶರ್ಮರಾಜಮ್ ॥ ೩೪ ॥**

ಪದಚ್ಛೇದ :- ವಿಜಿತ್ಯ, ಸಂಖ್ಯೆ, ಜಗೃಹೇ, ವಿರಾಟಂ, ತದಾ, ಸುಶರ್ಮಾ, ತಂ, ಆಯಾತ್, ವೃಕೋದರಃ, ಸಃ, ತಸ್ಯ, ಸೇನಾಂ, ವಿನಿಹತ್ಯ, ಮಾತ್ಸ್ಯಂ, ವಿಮೋಚ್ಯ, ಜಗ್ರಾಹ, ಸುಶರ್ಮರಾಜಮ್.

**ಅರ್ಥ** :- **ಸುಶರ್ಮಾ** = ಸುಶರ್ಮನು, **ಸಂಖ್ಯೆ** = ಯುದ್ಧದಲ್ಲಿ **ವಿರಾಟಂ** = ವಿರಾಟರಾಜನನ್ನು, **ವಿಜಿತ್ಯ** = ಗೆದ್ದು, **ಜಗೃಹೇ** = ಸೆರೆ ಹಿಡಿದ, **ತದಾ** = ಆಗ, **ವೃಕೋದರಃ** = ಭೀಮನು **ತಂ** = ಆ ಸುಶರ್ಮನನ್ನು ಕುರಿತು **ಆಯಾತ್** = ಹೋದರು. **ಸಃ** = ಆ ಭೀಮನು, **ತಸ್ಯ** = ಆ ಸುಶರ್ಮನ, **ಸೇನಾಂ** = ಸೈನ್ಯವನ್ನು, **ವಿನಿಹತ್ಯ** = ಸಂಹರಿಸಿ, **ಮಾತ್ಸ್ಯಂ** = ಮತ್ಸ್ಯಾಧಿಪತಿಯಾದ ವಿರಾಟರಾಜನನ್ನು **ವಿಮೋಚ್ಯ** = ಬಿಡುಗಡೆ ಗೊಳಿಸಿ **ಸುಶರ್ಮರಾಜಂ** = ಸುಶರ್ಮರಾಜನನ್ನು **ಜಗ್ರಾಹ** = ಸೆರೆ ಹಿಡಿದನು.

**ತಾತ್ಪರ್ಯ** :- ವಿರಾಟನು ಸುಶರ್ಮನ ಮೇಲೆ ಯುದ್ಧಕ್ಕೆ ಬಂದಾಗ ಯುದ್ಧದಲ್ಲಿ ವಿರಾಟರಾಜನನ್ನು ಸೋಲಿಸಿ, ಸುಶರ್ಮನು ವಿರಾಟನನ್ನು ಸೆರೆ ಹಿಡಿಯುತ್ತಾನೆ. ಆಗ ಅದನ್ನು ನೋಡಿ ಭೀಮನು ಸುಶರ್ಮನ ಮೇಲೆ ಆಕ್ರಮಣ ಮಾಡಿ ಅವನ ಸೈನ್ಯವನ್ನು ಸಂಹರಿಸಿ ವಿರಾಟರಾಜನನ್ನು ಬಿಡುಗಡೆಗೊಳಿಸುತ್ತಾನೆ. ಅಲ್ಲದೆ, ಸುಶರ್ಮನನ್ನು ಸೆರೆ ಹಿಡಿಯುತ್ತಾನೆ.

**ಯುಧಿಷ್ಠಿರೋ ಮೋಚಯಾಮಾಸ ತಂ ಚ**
**ತತೋ ರಾತ್ರೌ ನ್ಯವಸನ್ ಬಾಹ್ಯತಸ್ತೇ ॥ ೩೪ ॥**

ಪದಚ್ಛೇದ :- ಯುಧಿಷ್ಠಿರಃ, ಮೋಚಯಾಮಾಸ, ತಂ, ಚ, ತತಃ ರಾತ್ರೌ, ನ್ಯವಸನ್ ಬಾಹ್ಯತಃ ತೇ ।

**ಅರ್ಥ** :- **ಯುಧಿಷ್ಠಿರಃ** = ಧರ್ಮರಾಜನಾದರೂ **ತಂ** = ಅವನನ್ನು **ಮೋಚಯಾಮಾಸ** = ಬಿಡುಗಡೆ ಗೊಳಿಸಿದ, **ತತಃ** = ಅನಂತರ, **ರಾತ್ರೌ** =

ರಾತ್ರಿಯಲ್ಲಿ ತೇ = ಆ ಕೌರವರು, ಬಾಹ್ಯತಃ = ಊರಿನ ಹೊರಗೆ, ನ್ಯವಸನ್ = ವಾಸ ಮಾಡಿದರು.

ತಾತ್ಪರ್ಯ :- ಧರ್ಮರಾಜ ಸೆರೆಸಿಕ್ಕ ಸುಶರ್ಮನನ್ನು ಬಿಡುಗಡೆ ಗೊಳಿಸಿದ. ಅನಂತರ ಅಂದು ರಾತ್ರಿಯಲ್ಲಿ ಆ ಕೌರವರು ವಿರಾಟನಗರದ ಹೊರಗೆ ವಾಸ ಮಾಡಿದರು.

**ತತೋಽಪರದಿನೇ ಸರ್ವೇ ಭೀಷ್ಮದ್ರೋಣಪುರಸ್ಸರಾಃ ।**
**ರಹಿತಂ ಕೀಚಕೈರ್ಮಾತ್ಸ್ಯಂ ಶಕ್ಯಂ ಮತ್ವಾಽಭಿನಿರ್ಯಯುಃ ॥ ೩೫ ॥**

ಪದಚ್ಛೇದ :- ತತಃ, ಅಪರದಿನೇ ಸರ್ವೇ ಭೀಷ್ಮದ್ರೋಣಪುರಸ್ಸರಾಃ, ರಹಿತಂ, ಕೀಚಕೈಃ, ಮಾತ್ಸ್ಯಂ, ಶಕ್ಯಂ, ಮತ್ವಾ, ಅಭಿನಿರ್ಯಯುಃ.

ಅರ್ಥ :- ತತಃ = ಅನಂತರ ಅಪರದಿನೇ = ಮರುದಿನದಲ್ಲಿ ಕೀಚಕೈಃ = ಕೀಚಕರಿಂದ ರಹಿತಂ = ರಹಿತವಾದ, ಮಾತ್ಸ್ಯಂ = ವಿರಾಟನನ್ನು, ಶಕ್ಯಂ = ವಶಕ್ಕೆ ತೆಗೆದುಕೊಳ್ಳಲು ಶಕ್ಯವೆಂದು ಮತ್ವಾ = ತಿಳಿದು, ಸರ್ವೇ = ಎಲ್ಲಾ ಭೀಷ್ಮದ್ರೋಣ ಪುರಸ್ಸರಾಃ = ಭೀಷ್ಮಾಚಾರ್ಯರು, ದ್ರೋಣಾಚಾರ್ಯರೇ ಮೊದಲಾದವರು ಅಭಿನಿರ್ಯಯುಃ = ಅಭಿಮುಖವಾಗಿ ಹೊರಟರು.

ತಾತ್ಪರ್ಯ :- ಮಾರನೇ ದಿನ ಕೌರವರು ಕೀಚಕರಿಲ್ಲದ ಮತ್ಸ್ಯರಾಜ ವಿರಾಟನನ್ನು ಸೆರೆ ಹಿಡಿಯುವುದು ಸುಲಭ ಎಂದು ತಿಳಿದು ಭೀಷ್ಮ, ದ್ರೋಣಾಚಾರ್ಯರೇ ಮೊದಲಾದವರು ಆಕ್ರಮಣ ಮಾಡಲು ಹೊರಟರು.

**ಕೀಚಕಸ್ಯ ಹಿಡಿಂಬಸ್ಯ ಬಕಕಿರ್ಮೀರಯೋರಪಿ ।**
**ಜರಾಸಂಧಸ್ಯ ನೃಪತೇಃ ಕಂಸಾದೀನಾಂ ಚ ಸರ್ವಶಃ ॥ ೩೬ ॥**

**ನ ಬಾಧನಾಯ ಭೀಷ್ಮಾದ್ಯಾ ಅಪಿ ಶೇಕುಃ ಕಥಂಚನ ।**
**ತಸ್ಮಾತ್ ತೇ ಕೀಚಕಂ ಶಾಂತಂ ಶ್ರುತ್ವಾ ಮಾತ್ಸ್ಯಂ ಯಯುರ್ಯುಧೇ ॥ ೩೭ ॥**

ಪದಚ್ಛೇದ :- ಕೀಚಕಸ್ಯ, ಹಿಡಿಂಬಸ್ಯ, ಬಕಕಿರ್ಮೀರಯೋಃ, ಅಪಿ, ಜರಾಸಂಧಸ್ಯ, ನೃಪತೇಃ, ಕಂಸಾದೀನಾಂ, ಚ ಸರ್ವಶಃ, ನ ಬಾಧನಾಯ, ಭೀಷ್ಮಾದ್ಯಾಃ, ಅಪಿ ಶೇಕುಃ, ಕಂಥಂಚನ, ತಸ್ಮಾತ್, ತೇ, ಕೀಚಕಂ, ಶಾಂತಂ, ಶ್ರುತ್ವಾ, ಮಾತ್ಸ್ಯಂ, ಯಯುಃ, ಯುಧೇ.

**ಅರ್ಥ** :- **ಕೀಚಕಸ್ಯ** = ಕೀಚಕನಿಗೆ **ಹಿಡಿಂಬಸ್ಯ** = ಹಿಡಿಂಬನಿಗೆ, **ಬಕಕಿರ್ಮೀರಯೋಃ ಅಪಿ** = ಬಕಾಸುರ ಮತ್ತು ಕಿರ್ಮೀರರಿಗೂ **ನೃಪತೇಃ** = ರಾಜನಾದ **ಜರಾಸಂಧಸ್ಯ** = ಜರಾಸಂಧನಿಗೆ **ಚ** = ಮತ್ತು **ಕಂಸಾದೀನಾಂ** = ಕಂಸ ಮೊದಲಾದವರಿಗೆ **ಕಥಂಚನ** = ಯಾವ ರೀತಿಯಿಂದಲೂ **ಬಾಧನಾಯ** = ಹಿಂಸಿಸಲು (ನಿಗ್ರಹಿಸಲು) **ಸರ್ವಶಃ** = ಎಲ್ಲಾ **ಭೀಷ್ಮಾದ್ಯಾಃ ಅಪಿ** = ಭೀಷ್ಮ ಮೊದಲಾದವರೂ ಕೂಡ **ನ ಶೇಕುಃ** = ಶಕ್ತರಾಗಿರಲಿಲ್ಲ. **ತಸ್ಮಾತ್** = ಆದ್ದರಿಂದ **ತೇ** = ಅವರುಗಳು **ಕೀಚಕಂ** = ಕೀಚಕನನ್ನು **ಶಾಂತಂ** = ಶಾಂತನಾದುದನ್ನು (ಹತನಾದುದನ್ನು) **ಶ್ರುತ್ವಾ** = ಕೇಳಿ, **ಮಾತ್ಸ್ಯಂ** = ವಿರಾಟನನ್ನು ಕುರಿತು **ಯುದ್ಧೆ** = ಯುದ್ಧಕ್ಕೋಸ್ಕರ **ಯಯುಃ** = ಹೊರಟರು.

**ತಾತ್ಪರ್ಯ** :- ಕೀಚಕ, ಹಿಡಿಂಬರ, ಬಕಾಸುರ, ಕಿರ್ಮೀರ ಮತ್ತು ರಾಜರಾದ ಜರಾಸಂಧ ಕಂಸ ಮೊದಲಾದವರನ್ನು ನಿಗ್ರಹಿಸಲು, ಭೀಷ್ಮಾದಿಗಳು ಯಾವ ರೀತಿಯಿಂದಲೂ ಸಮರ್ಥರಾಗಿರಲಿಲ್ಲ. ಆದ್ದರಿಂದ ಅವರು ಕೀಚಕ ನಾಶವಾದದ್ದನ್ನು ಕೇಳಿ ವಿರಾಟನ ಮೇಲೆ ಯುದ್ಧಕ್ಕೆ ಹೋದರು.

**ಯತಿಷ್ಯೇ ರಕ್ಷಿತುಂ ಭೀಮಾದ್ ಧಾರ್ತರಾಷ್ಟ್ರಾನಿತಿ ಸ್ವಕಾಮ್ ।**
**ಸತ್ಯಾಂ ಕರ್ತುಂ ಪ್ರತಿಜ್ಞಾಂ ತು ಯಯೌ ದ್ರೋಣಃ ಸಪುತ್ರಕಃ ॥ ೩೮ ॥**

**ಪದಚ್ಛೇದ** :- **ಯತಿಷ್ಯೇ, ರಕ್ಷಿತುಂ, ಭೀಮಾತ್, ಧಾರ್ತರಾಷ್ಟ್ರಾನ್, ಇತಿ ಸ್ವಕಾಂ, ಸತ್ಯಾಂ, ಕರ್ತುಂ, ಪ್ರತಿಜ್ಞಾಂ, ತು, ಯಯೌ, ದ್ರೋಣಃ ಸಪುತ್ರಕಃ.**

**ಅರ್ಥ** :- **ಧಾರ್ತರಾಷ್ಟ್ರಾನ್** = ದುರ್ಯೋಧನಾದಿಗಳನ್ನು, **ಭೀಮಾತ್** = ಭೀಮನಿಂದ **ರಕ್ಷಿತುಂ** = ರಕ್ಷಿಸಲು, **ಯತಿಷ್ಯೇ** = ಪ್ರಯತ್ನಿಸುತ್ತೇನೆ. **ಇತಿ** = ಎಂಬ **ಸ್ವಕಾಂ** = ತನ್ನ **ಪ್ರತಿಜ್ಞಾಂ** = ಪ್ರತಿಜ್ಞೆಯನ್ನು **ಸತ್ಯಾಂ** = ಸತ್ಯವನ್ನಾಗಿ **ಕರ್ತುಂ** = ಮಾಡಲು, **ಸ ಪುತ್ರಕಃ** = ಪುತ್ರನಿಂದ ಸಹಿತನಾದ **ದ್ರೋಣಃ ತು** = ದ್ರೋಣನಾದರೂ **ಯಯೌ** = ಹೋದನು.

**ತಾತ್ಪರ್ಯ** :- 'ದುರ್ಯೋಧನಾದಿ ಕೌರವರನ್ನು ಭೀಮನಿಂದ ರಕ್ಷಿಸಲು ಪ್ರಯತ್ನಿಸುವೆ' ಎಂದು ದ್ರೋಣಾಚಾರ್ಯರು ಪ್ರತಿಜ್ಞೆ ಮಾಡಿದ್ದರು. ಅದನ್ನು ಸತ್ಯವನ್ನಾಗಿಸಲು ದ್ರೋಣಾಚಾರ್ಯರು ಪುತ್ರನಾದ ಅಶ್ವತ್ಥಾಮನೊಡನೆ ಯುದ್ಧಕ್ಕೆ ಹೋದರು.

ಯದಿ ಯುದ್ಧಾಯ ನಿರ್ಯಾಂತಿ ಜ್ಞಾತಾಃ ಸ್ಯುಃ ಪಾಂಡವಾಸ್ತದಾ ।
ನ ಚೇದ್ ವಿರಾಟಮನತಂ ನಮಯಿಷ್ಯಾಮಹೇ ವಯಮ್ ।
ಇತಿ ಮತ್ವಾ ವಿರಾಟಸ್ಯ ಜಗೃಹುರ್ಗಾಃ ಸಮಂತತಃ ॥ ೩೯ ॥

ಪದಚ್ಛೇದ :- ಯದಿ, ಯುದ್ಧಾಯ, ನಿರ್ಯಾಂತಿ, ಜ್ಞಾತಾಃ, ಸ್ಯುಃ, ಪಾಂಡವಾಃ, ತದಾ, ನ, ಚೇತ್, ವಿರಾಟಂ, ಅನತಂ, ನಮಯಿಷ್ಯಾಮಹೇ, ವಯಮ್, ಇತಿ, ಮತ್ವಾ, ವಿರಾಟಸ್ಯ, ಜಗೃಹುಃ, ಗಾಃ, ಸಮಂತತಃ ।

ಅರ್ಥ :- ಯದಿ = ಒಂದುವೇಳೆ, ಪಾಂಡವಾಃ = ಪಾಂಡವರು, ಯುದ್ಧಾಯ = ಯುದ್ಧಕ್ಕೋಸ್ಕರ, ನಿರ್ಯಾಂತಿ = ಹೊರಗಡೆ ಬಂದರೆ, ಜ್ಞಾತಾಃ = ತಿಳಿಯಲ್ಪಟ್ಟವರಾಗಿ, ಸ್ಯುಃ = ಆಗುತ್ತಾರೆ, ನ ಚೇತ್ = ಹಾಗಿಲ್ಲದಿದ್ದರೆ, ಅನತಂ = ನಮಗೆ ಬಗ್ಗದ, ವಿರಾಟಂ = ವಿರಾಟನನ್ನು ವಯಂ = ನಾವು ನಮಯಿಷ್ಯಾಮಹೇ = ಬಗ್ಗಿಸುತ್ತೇವೆ ಇತಿ = ಈ ರೀತಿಯಾಗಿ ಮತ್ವಾ = ತಿಳಿದು ವಿರಾಟಸ್ಯ = ವಿರಾಟರಾಜನ ಗಾಃ = ಗೋವುಗಳನ್ನು ಸಮಂತತಃ = ಎಲ್ಲಾ ಕಡೆಗಳಿಂದಲೂ ಜಗೃಹುಃ = ಸೆರೆ ಹಿಡಿದರು.

ತಾತ್ಪರ್ಯ :- ಕೌರವರು ವಿರಾಟನ ಮೇಲೆ ಯುದ್ಧಕ್ಕೆ ಹೋಗುವಾಗ ಹೀಗೆ ಯೋಚಿಸುತ್ತಾರೆ. 'ಪಾಂಡವರು ವಿರಾಟನಲ್ಲಿ ಆಶ್ರಯ ಪಡೆದಿದ್ದರೆ ಯುದ್ಧಕ್ಕೋಸ್ಕರ ಹೊರಗಡೆ ಬರುತ್ತಾರೆ. ಆಗ ಅವರನ್ನು ಗುರುತಿಸಬಹುದು. (ಗುರುತಿಸಿದರೆ ಪುನಃ ವನವಾಸಾದಿಗಳಿಗೆ ಕಳಿಸಬಹುದು) ಅವರು ವಿರಾಟನಲ್ಲಿ ಇಲ್ಲದಿದ್ದರೆ ವಿರಾಟ ಹೇಗೂ ಕೀಚಕನಿಂದಾಗಿ ನಮಗೆ ವಶವಾಗಿಲ್ಲ. ಈಗ ಕೀಚಕನಿಲ್ಲದುದರಿಂದ ನಾವು ಅವನನ್ನು ವಶ ಮಾಡಿಕೊಳ್ಳಬಹುದು'' ಎಂದು ಈ ರೀತಿಯಾಗಿ ತಿಳಿದು, ಎಲ್ಲಾ ಕಡೆಗಳಿಂದಲೂ ವಿರಾಟರಾಜನ ಹಸುಗಳನ್ನು ಸೆರೆ ಹಿಡಿದರು.

ತದೋತ್ತರಃ ಸಾರಥಿತ್ವೇ ಪ್ರಕಲ್ಪ್ಯ
ಪಾರ್ಥಂ ಯಯೌ ತಾನ್ ನಿಶಾಮ್ಯೈವ ಭೀತಃ ।
ತತೋಽರ್ಜುನಃ ಸಾರಥಿಂ ತಂ ವಿಧಾಯ
ಕೃಚ್ಛ್ರೇಣ ಸಂಸ್ಥಾಪ್ಯ ಚ ತಂ ಯಯೌ ಕುರೂನ್ ॥ ೪೦ ॥

ಪದಚ್ಛೇದ :- ತದಾ, ಉತ್ತರಃ ಸಾರಥಿತ್ವೇ, ಪ್ರಕಲ್ಪ್ಯ, ಪಾರ್ಥಂ, ಯಯೌ, ತಾನ್, ನಿಶಾಮ್ಯ, ಏವ, ಭೀತಃ, ತತಃ, ಅರ್ಜುನಃ, ಸಾರಥಿಂ, ತಂ, ವಿಧಾಯ ಕೃಚ್ಛ್ರೇಣ, ಸಂಸ್ಥಾಪ್ಯ, ಚ, ತಂ, ಯಯೌ, ಕುರೂನ್.

**ಅರ್ಥ** :- **ತದಾ** = ಆವಾಗ **ಉತ್ತರಃ** = ಉತ್ತರಕುಮಾರನು, **ಪಾರ್ಥಂ** = ಅರ್ಜುನನನ್ನು **ಸಾರಥಿತ್ವೇ** = ಸಾರಥಿಯನ್ನಾಗಿ **ಪ್ರಕಲ್ಪ್ಯ** = ಮಾಡಿಕೊಂಡು, **ಯಯೌ** = (ಯುದ್ಧಕ್ಕೋಸ್ಕರ) ಹೋದನು. **ತಾನ್** = ಆ ಕೌರವರನ್ನು **ನಿಶಾಮ್ಯೈವ** = ಕಂಡೇ **ಭೀತಃ** = ಹೆದರಿದನು. (ಓಡಿದನು), **ತತಃ** = ಅನಂತರ, **ಅರ್ಜುನಃ** = ಅರ್ಜುನನು **ತಂ** = ಆ ಉತ್ತರಕುಮಾರನನ್ನು **ಕೃಚ್ಛ್ರೇಣ** = ಬಹಳ ಕಷ್ಟದಿಂದ, **ಸಂಸ್ಥಾಪ್ಯ** = ನಿಲ್ಲಿಸಿ, **ತಂ** = ಅವನನ್ನು **ಸಾರಥಿಂ** = ಸಾರಥಿಯನ್ನಾಗಿ, **ವಿಧಾಯ** = ಮಾಡಿಕೊಂಡು, **ಕುರೂನ್** = ಕೌರವರನ್ನು ಕುರಿತು, **ಯಯೌ** = ಹೊರಟನು.

**ತಾತ್ಪರ್ಯ** :- ಕೌರವರು ಗೋವುಗಳನ್ನು ಹಿಡಿದ ಸಮಯದಲ್ಲಿ ಉತ್ತರಕುಮಾರನು ಅರ್ಜುನನನ್ನು ಸಾರಥಿಯನ್ನಾಗಿ ಮಾಡಿಕೊಂಡು ಯುದ್ಧಕ್ಕೆ ಹೊರಟನು. ಅಲ್ಲಿ ಕೌರವರನ್ನು ನೋಡಿಯೇ ಹೆದರಿ ಓಡಿದನು. ಆಗ ಅರ್ಜುನನು ಅವನನ್ನು ಕಷ್ಟದಿಂದ ತಡೆದು ನಿಲ್ಲಿಸಿದ ಮತ್ತು ಅವನನ್ನು ಸಾರಥಿಯನ್ನಾಗಿ ಮಾಡಿಕೊಂಡು ಕೌರವರ ಮೇಲೆ ಯುದ್ಧಕ್ಕೆ ಹೋದನು.

**ಆದಾಯ ಗಾಂಡೀವಮಥ ಧ್ವಜಂ ಚ**
**ಹನೂಮದಂಕಂ ಸದರೋಽಗ್ರತೋ ಗಾಃ ।**
**ನಿವರ್ತ್ಯ ಯುದ್ಧಾಯ ಯಯೌ ಕುರೂಂಸ್ತಾನ್**
**ಜಿಗ್ಯೇ ಸರ್ವಾನ್ ದ್ವೈರಥೇನೈವ ಸಕ್ತಾನ್ ॥ ೪೧ ॥**

ಪದಚ್ಛೇದ :- ಆದಾಯ, ಗಾಂಡೀವಂ, ಅಥ, ಧ್ವಜಂ, ಚ ಹನೂಮದಂಕಂ, ಸದರಃ, ಅಗ್ರತಃ, ಗಾಃ, ನಿವರ್ತ್ಯ, ಯುದ್ಧಾಯ, ಯಯೌ, ಕುರೂನ್, ತಾನ್, ಜಿಗ್ಯೇ, ಸರ್ವಾನ್, ದ್ವೈರಥೇನ, ಏವ, ಸಕ್ತಾನ್.

**ಅರ್ಥ** :- **ಅಥ** = ರಥವೇರಿದ ನಂತರ ಅರ್ಜುನ, **ಗಾಂಡೀವಂ** = ಗಾಂಡೀವ ಧನಸ್ಸನ್ನು **ಚ** = ಮತ್ತು **ಹನೂಮದಂಕಂ** = ಹನುಮಂತನ ಚಿಹ್ನೆವುಳ್ಳ, **ಧ್ವಜಂ** = ಧ್ವಜವನ್ನೂ **ಆದಾಯ** = ಸ್ವೀಕರಿಸಿ **ಅಗ್ರತಃ** = ಮೊದಲಿಗೆ

**ಸದರಃ** = ಶಂಖವುಳ್ಳವನಾಗಿ **ಗಾಃ** = ಹಸುಗಳನ್ನು **ನಿವರ್ತ್ಯ** = ಹಿಂದೆ ಕಳಿಸಿ, **ಯುದ್ಧಾಯ** = ಯುದ್ಧಕ್ಕೋಸ್ಕರ, **ಕುರೂನ್** = ಕೌರವರನ್ನು ಕುರಿತು, **ಯಯೌ** = ಹೊರಟನು, **ದ್ವೈರಥೇನೇವ ಸಕ್ತಾನ್** = ದ್ವಂದ್ವ ರಥಯುದ್ಧದಲ್ಲಿ **ಸಕ್ತಾನ್** = ಆಸಕ್ತರಾದ **ತಾನ್** = ಆ **ಸರ್ವಾನ್** = ಎಲ್ಲರನ್ನೂ **ಜಿಗ್ಯೇ** = ಗೆದ್ದನು.

ತಾತ್ಪರ್ಯ :- (ಅರ್ಜುನ ಉತ್ತರಕುಮಾರನನ್ನು ತಡೆದು ನಂತರ ಅಗ್ನಿಯನ್ನ ಸ್ಮರಣೆ ಮಾಡಿದ. ಆಗ ಅವನ ರಥ ಬಂದಿತು) ಅದನ್ನೇರಿದ ಅರ್ಜುನ, ಹನುಮಂತನ ಚಿಹ್ನೆ ಇರುವ ಧ್ವಜವನ್ನು ಮತ್ತು ಗಾಂಡೀವ ಧನಸ್ಸನ್ನು ಸ್ವೀಕರಿಸಿದ. ಹಾಗೆಯೇ ತನ್ನ ಶಂಖವನ್ನೂ ಹಿಡಿದು ಮೊದಲು ಎಲ್ಲ ಗೋವುಗಳನ್ನು ಹಿಂದೆ ಕಳಿಸಿದ. ಅನಂತರ ಕೌರವರೊಡನೆ ಯುದ್ಧಕ್ಕೆ ಹೊರಟ. ಅಲ್ಲಿ ದ್ವಂದ್ವರಥಯುದ್ಧದಲ್ಲಿ ಎಲ್ಲಾ ಕೌರವರನ್ನು ಸೋಲಿಸಿದನು.

**ಏಕೀಭೂತಾನ್ ಪುನರೇವಾನುಯಾತಾನ್**
**ಸಮ್ಮೋಹನಾಸ್ತ್ರೇಣ ವಿಮೋಹಯಿತ್ವಾ ।**
**ಜಗ್ರಾಹ ತೇಷಾಮುತ್ತರೀಯಾಣ್ಯೃತೇ ತು**
**ಭೀಷ್ಮಸ್ಯ ವೇದಾಸ್ತ್ರಘಾತಂ ಸ ಏವ ॥ ೪೨ ॥**

**ಪದಚ್ಛೇದ :–** ಏಕೀ ಭೂತಾನ್, ಪುನಃ, ಏವ, ಅನುಯಾತಾನ್, ಸಮ್ಮೋಹನಾಸ್ತ್ರೇಣ, ವಿಮೋಹಯಿತ್ವಾ, ಜಗ್ರಾಹ, ತೇಷಾಂ, ಉತ್ತರೀಯಾಣಿ, ಋತೇ, ತು, ಭೀಷ್ಮಸ್ಯ, ವೇದ, ಅಸ್ತ್ರಘಾಂತಂ, ಸ, ಏವ.

ಅರ್ಥ :- **ಏಕೀಭೂತಾನ್** = ಒಟ್ಟಿಗೇ, **ಪುನಃ ಏವ** = ಪುನಃ, **ಅನುಯಾತಾನ್** = ಯುದ್ಧಕ್ಕೆ ಬಂದ ಕೌರವರನ್ನು (ಅರ್ಜುನನು) **ಸಮ್ಮೋಹನಾಸ್ತ್ರೇಣ** = ಸಮ್ಮೋಹನಾಸ್ತ್ರದಿಂದ **ವಿಮೋಹಯಿತ್ವಾ** = ಮೋಹಗೊಳಿಸಿ, **ಭೀಷ್ಮಸ್ಯ** = ಭೀಷ್ಮನನ್ನು **ಋತೇ** = ಹೊರತುಪಡಿಸಿ **ತೇಷಾಂ** = ಅವರ **ಉತ್ತರೀಯಾಣಿ** = ಉತ್ತರೀಯ ವಸ್ತ್ರಗಳನ್ನು **ಜಗ್ರಾಹ** = ಸ್ವೀಕರಿಸಿದನು. **ಸ ಏವ** = ಆ ಭೀಷ್ಮನೊಬ್ಬನೇ **ಅಸ್ತ್ರಾಘಾತಂ** = ಸಮ್ಮೋಹನಾಸ್ತ್ರದ ಪ್ರತ್ಯಸ್ತ್ರವನ್ನು **ವೇದ** = ತಿಳಿದಿದ್ದನು.

ತಾತ್ಪರ್ಯ :- ಅನಂತರ ಕೌರವರೆಲ್ಲರೂ ಒಟ್ಟಾಗಿ ಯುದ್ಧಕ್ಕೆ ಬಂದಾಗ ಅರ್ಜುನ ಅವರೆಲ್ಲರನ್ನೂ ಸನ್ಮೋಹನಾಸ್ತ್ರದಿಂದ ಮೋಹಗೊಳಿಸಿದ ಭೀಷ್ಮನನ್ನು

ಬಿಟ್ಟು ಉಳಿದ ಎಲ್ಲರ ಉತ್ತರೀಯ ವಸ್ತ್ರಗಳನ್ನು (ಉತ್ತರೆಗಾಗಿ) ಉತ್ತರ ಕುಮಾರನ ಮೂಲಕ ತೆಗೆದುಕೊಂಡನು. ಭೀಷ್ಮನು ಒಬ್ಬನೇ ಆ ಸಮ್ಮೋಹನಾಸ್ತ್ರದ ಪ್ರತ್ಯಸ್ತ್ರದಿಂದ ಉಪಶಮನವನ್ನು ತಿಳಿದಿದ್ದನು.

**ವಿಧಾಯ ಭೀಷ್ಮಂ ವಿರಥಂ ಜಗಾಮ**
**ತದಾ ಶ್ರುತ್ವಾ ಮತ್ಸ್ಯಪತಿರ್ಜಿತಾನ್ ಕುರೂನ್ ।**
**ಮುಮೋದ ಪುತ್ರೇಣ ಜಿತಾ ಇತಿ ಸ್ಮ**
**ತದಾऽऽಹ ಷಂಢೇನ ಜಿತಾನ್ ಯುಧಿಷ್ಠಿರಃ ॥ ೪೩ ॥**

**ಪದಚ್ಛೇದ :–** ವಿಧಾಯ, ಭೀಷ್ಮಂ, ವಿರಥಂ, ಜಗಾಮ, ತದಾ, ಶ್ರುತ್ವಾ, ಮತ್ಸ್ಯಪತಿಃ, ಜಿತಾನ್, ಕುರೂನ್, ಮುಮೋದ, ಪುತ್ರೇಣ, ಜಿತಾಃ, ಇತಿ ಸ್ಮ ತದಾ, ಆಹ ಷಂಢೇನ, ಜಿತಾನ್, ಯುಧಿಷ್ಠಿರಃ.

**ಅರ್ಥ :-** (ಅರ್ಜುನ) **ಭೀಷ್ಮಂ** = ಭೀಷ್ಮನನ್ನು, **ವಿರಥಂ** = ರಥರಹಿತನನ್ನಾಗಿ, **ವಿಧಾಯ** = ಮಾಡಿ, **ಜಗಾಮ** = ಹಿಂದಿರುಗಿದ, **ತದಾ** = ಆಗ **ಮತ್ಸ್ಯಪತಿಃ** = ವಿರಾಟನು, **ಕುರೂನ್** = ಕೌರವರನ್ನು **ಜಿತಾನ್** = ಗೆಲ್ಲಲ್ಪಟ್ಟವರನ್ನಾಗಿ (ಸೋತವರನ್ನಾಗಿ) **ಶೃತ್ವಾ** = ಕೇಳಿ, **ಪುತ್ರೇಣ** = ಮಗನಿಂದ **ಜಿತಾಃ ಇತಿ** = ಗೆಲ್ಲಲ್ಪಟ್ಟವರನ್ನಾಗಿ (ಸೋತವರನ್ನಾಗಿ) ತಿಳಿದು **ಮುಮೋದಸ್ಮ** = ಸಂತೋಷ ಪಟ್ಟನು. **ತದಾ** = ಆಗ **ಯುಧಿಷ್ಠಿರಃ** = ಧರ್ಮರಾಜನು, **ಷಂಡೇನ** = ಬೃಹನ್ನಳೆಯಿಂದ **ಜಿತಾನ್** = ಗೆಲ್ಲಲ್ಪಟ್ಟವರನ್ನಾಗಿ **ಆಹ** = ಹೇಳಿದನು.

**ತಾತ್ಪರ್ಯ :-** ಅರ್ಜುನ ಯುದ್ಧದಲ್ಲಿ ಭೀಷ್ಮನನ್ನು ರಥರಹಿತನನ್ನಾಗಿ ಮಾಡಿ ಹಿಂತಿರುಗಿದನು. ಆಗ ವಿರಾಟನು ಕೌರವರು ಸೋತ ವಾರ್ತೆಯನ್ನು ಕೇಳಿದ. ಆಗ ತನ್ನ ಮಗನಿಂದಲೇ ಕೌರವರು ಸೋತಿದ್ದಾರೆ ಎಂದು ತಿಳಿದು ಬಹಳ ಸಂತೋಷಪಟ್ಟ. ಆಗ ಯುಧಿಷ್ಠಿರ, ನಪುಂಸಕನಾದ ಬೃಹನ್ನಳೆಯಿಂದ ಕೌರವರು ಸೋತಿದ್ದಾರೆ ಎಂದು ಹೇಳಿದ.

**ತದಾ ಕ್ರುದ್ಧಃ ಪ್ರಾಹರತ್ ತಂ ವಿರಾಟಃ**
**ಸೋऽಕ್ಷೇಣ ತದ್ ಭೀಮಧನಂಜಯಾಭ್ಯಾಮ್ ।**

ಶ್ರುತಂ ತದಾ ಕುಪಿತೌ ತೌ ನಿಶಾಮ್ಯ
ನ್ಯವಾರಯತ್ ತಾವಪಿ ಧರ್ಮಸೂನುಃ ॥ ೪೪ ॥

ಪದಚ್ಛೇದ :- ತದಾ, ಕ್ರುದ್ಧಃ, ಪ್ರಾಹರತ್, ತಂ, ವಿರಾಟಃ, ಸಃ, ಅಕ್ಷೇಣ, ತದ್ ಭೀಮಧನಂಜಯಾಭ್ಯಾಂ, ಶ್ರುತಂ, ತದಾ ಕುಪಿತೌ, ತೌ, ನಿಶಾಮ್ಯ, ನ್ಯವಾರಯತ್, ತೌ, ಅಪಿ, ಧರ್ಮಸೂನುಃ।

ಅರ್ಥ :- ತದಾ = ಆಗ, ಕ್ರುದ್ಧಃ = ಕೋಪಗೊಂಡ, ಸಃ = ಆ, ವಿರಾಟಃ = ವಿರಾಟರಾಜನು ಅಕ್ಷೇಣ = ದಾಳದಿಂದ, ತಂ = ಆಯುಧಿಷ್ಠಿರನನ್ನು ಪ್ರಾಹರತ್ = ಹೊಡೆದನು. ತತ್ = ಆ ವಿಚಾರ ಭೀಮಧನಂಜಯಾಭ್ಯಾಂ = ಭೀಮ ಮತ್ತು ಅರ್ಜುನರಿಂದ ಶ್ರುತಂ = ಕೇಳಲ್ಪಟ್ಟಿತು. ತದಾ = ಆಗ ತೌ = ಅವರಿಬ್ಬರು ಕುಪಿತೌ = ಕೋಪಗೊಂಡವರನ್ನಾಗಿ ನಿಶಾಮ್ಯ = ನೋಡಿ ತಾ ಅಪಿ = ಅವರಿಬ್ಬರನ್ನೂ ಧರ್ಮಸೂನುಃ = ಧರ್ಮರಾಜನು, ನ್ಯವಾರಯತ್ = ತಡೆದನು.

ತಾತ್ಪರ್ಯ :- ಧರ್ಮರಾಜ ಹೇಳಿದ ಮಾತನ್ನು ಕೇಳಿ, ವಿರಾಟ ಕೋಪಗೊಂಡು, ಪಗಡೆಯಾಟದ ದಾಳದಿಂದ ಅವನನ್ನು ಹೊಡೆದ. ಈ ವಿಷಯ ಭೀಮಾರ್ಜುನರಿಗೆ ತಿಳಿಯಿತು. ಅದರಿಂದ ಕೋಪಗೊಂಡು ವಿರಾಟನ ಮೇಲೆ ಸಿಟ್ಟಾದ ಅವರಿಬ್ಬರನ್ನು ಧರ್ಮರಾಜ ತಡೆದ.

ನಿಜಸ್ವರೂಪೇಣ ಸಮಾಸ್ಥಿತಾನ್ ನೋ
ಯದಿ ಸ್ಮ ನಾಸೌ ಪ್ರಣಿಪಾತಪೂರ್ವಕಮ್ ।
ಕ್ಷಮಾಪಯೇದ್ ವಧ್ಯ ಇತ್ಯಾತ್ಮರೂಪಂ
ಸಮಾಸ್ಥಿತಾಸ್ತಸ್ಥುರಥಾಪರೇ ದಿನೇ ॥ ೪೫ ॥

ಪದಚ್ಛೇದ :- ನಿಜಸ್ವರೂಪೇಣ, ಸಮಾಸ್ಥಿತಾನ್, ನಃ, ಯದಿ, ಸ್ಮ, ನ, ಅಸೌ, ಪ್ರಣಿಪಾತ ಪೂರ್ವಕಂ, ಪ್ರಮಾಪಯೇತ್, ವಧ್ಯಃ, ಇತಿ ಆತ್ಮರೂಪಂ ಸಮಾಸ್ಥಿತಾಃ, ತಸ್ಥುಃ, ಅಥ, ಅಪರೇ, ದಿನೇ.

ಅರ್ಥ :- ನಿಜಸ್ವರೂಪೇಣ = ನಿಜಸ್ವರೂಪದಿಂದ, ಸಮಾಸ್ಥಿತಾನ್ = ಕುಳಿತಿರುವ ನಃ = ನಮ್ಮನ್ನು, ಅಸೌ = ಇವನು, ಯದಿ = ಒಂದುವೇಳೆ

**ಪ್ರಣಿಪಾತ ಪೂರ್ವಕಂ** = ತಲೆ ಬಾಗುವಿಕೆಯಿಂದ ಕೂಡಿ **ನ ಕ್ಷಮಾಪಯೇತ್ ಸ್ಮ** = ಕ್ಷಮೆ ಕೇಳದಿದ್ದರೆ (**ತರ್ಹಿ** = ಆ ಪಕ್ಷದಲ್ಲಿ) **ವಧ್ಯಃ** = ವಧಾರ್ಹನಾಗುತ್ತಾನೆ. **ಇತಿ** = ಈ ರೀತಿಯಾಗಿ (ಧರ್ಮರಾಜ ತಡೆದ) **ಅಥ** = ಅನಂತರ **ಅಪರೇ ದಿನೇ** = ಮಾರನೇ ದಿನ, **ಆತ್ಮರೂಪಂ ಸಮಾಸ್ಥಿತಾಃ** = ತಮ್ಮ ನಿಜಸ್ವರೂಪ ಹೊಂದಿದವರಾಗಿ **ತಸ್ಥುಃ** = ಕುಳಿತರು.

**ತಾತ್ಪರ್ಯ** :- ಕುಪಿತರಾದ ಭೀಮಾರ್ಜುನರನ್ನು ಕುರಿತು ಧರ್ಮರಾಜ ಹೀಗೆ ಹೇಳಿ ತಡೆದ 'ನಾವು ನಿಜರೂಪವನ್ನು ಹೊಂದಿದಾಗ, ಇವನು ಒಂದುವೇಳೆ ತಲೆ ಬಾಗಿ ಕ್ಷಮೆ ಕೇಳದಿದ್ದರೆ ಆಗ ಇವನು ಕೊಲ್ಲಲು ಯೋಗ್ಯನಾಗುತ್ತಾನೆ. (ಈಗ ನಮ್ಮ ಸ್ವರೂಪ ಗೊತ್ತಿಲ್ಲದ ಕಾರಣ ಹೊಡೆದಿದ್ದಾನೆ. ಈಗ ಶಿಕ್ಷಿಸುವುದು ಬೇಡ) ಎಂದು. ಅನಂತರ ಮಾರನೇ ದಿನ ಎಲ್ಲರೂ ತಮ್ಮ ನಿಜಸ್ವರೂಪವನ್ನು ಧರಿಸಿ ಕುಳಿತುಕೊಂಡರು.

**ತದಾ ವಿರಾಟಾಸನಮಾಸ್ಥಿತಂ ನೃಪಂ**
**ಯುಧಿಷ್ಠಿರಂ ವೀಕ್ಷ್ಯ ವಿರಾಟ ಆಹ ।**
**ಕಿಮೇತದಿತ್ಯೂಚಿವಾನುತ್ತರೋಽಸ್ಮೈ**
**ತಾನ್ ಪಾಂಡವಾನ್ ಗೋಗ್ರಹಣೇ ಚ ವೃತ್ತಮ್ ॥ ೪೬ ॥**

ಪದಚ್ಛೇದ :– ತದಾ, ವಿರಾಟಾಸನಂ, ಸಮಾಸ್ಥಿತಂ, ನೃಪ, ಯುಧಿಷ್ಠಿರಂ, ವೀಕ್ಷ್ಯ ವಿರಾಟಃ, ಆಹ, ಕಿಂ, ಏತದ್, ಊಚಿವಾನ್, ಉತ್ತರಃ, ಅಸ್ಮೈ, ತಾನ್, ಪಾಂಡವಾನ್, ಗೋಗ್ರಹಣೇ ಚ, ವೃತ್ತಮ್.

**ಅರ್ಥ** :- **ತದಾ** = ಆಗ, **ವಿರಾಟಾಸನಂ** = ವಿರಾಟನ ಆಸನದಲ್ಲಿ, **ಸಮಾಸ್ಥಿತಂ** = ಆರಾಮಾಗಿ ಕುಳಿತ **ನೃಪ** = ರಾಜನಾದ, **ಯುಧಿಷ್ಠಿರಂ** = ಧರ್ಮರಾಜನನ್ನು **ವೀಕ್ಷ್ಯ** = ನೋಡಿ, **ವಿರಾಟಃ** = ವಿರಾಟರಾಜನು, **ಏತತ್ ಕಿಮ್** = ಇದೇನು ಎಂದು **ಆಹ** = ಹೇಳಿದನು. **ಉತ್ತರಃ** = ಉತ್ತರಕುಮಾರನು **ಅಸ್ಮೈ** = ಆ ವಿರಾಟನಿಗೆ **ತಾನ್** = ಅವರನ್ನು, **ಪಾಂಡವಾನ್** = ಪಾಂಡವರನ್ನಾಗಿ **ಚ** = ಮತ್ತು **ಗೋಗ್ರಹಣೇ** = ಗೋಗ್ರಹಣ ಸಂದರ್ಭದಲ್ಲಿ, **ವೃತ್ತಂ** = ನಡೆದುದನ್ನು **ಊಚಿವಾನ್** = ಹೇಳಿದನು.

ತಾತ್ಪರ್ಯ :- ಆಗ ವಿರಾಟನ ಸಿಂಹಾಸನದಲ್ಲಿ ಕುಳಿತ ರಾಜನಾದ ಯುಧಿಷ್ಠಿರನನ್ನು ನೋಡಿ, ವಿರಾಟ ಆಶ್ಚರ್ಯಗೊಂಡು ಹೀಗೇಕೆ ಎಂದು ಕೇಳಿದ ಅವನಿಗೆ ಉತ್ತರಕುಮಾರ ಇವರು ಪಾಂಡವರು, ಅಲ್ಲದೆ ಗೋಗ್ರಹಣಕಾಲದಲ್ಲಿ ನಡೆದ ಸಮಾಚಾರವೇನು, ಎಂಬುದನ್ನು ಹೇಳಿದ.

**ತತೋ ವಿರಾಟೋ ಭಯಕಂಪಿತಾಂಗಃ**
**ಪ್ರಣಮ್ಯ ಪಾರ್ಥಾನ್ ಶರಣಂ ಜಗಾಮ ।**
**ದದೌ ಚ ಕನ್ಯಾಮುತ್ತರಾಂ ಫಲ್ಗುನಾಯ**
**ಪುತ್ರಾರ್ಥಮೇವ ಪ್ರತಿಜಗ್ರಾಹ ಸೋಽಪಿ ॥ ೪೭ ॥**

**ಪದಚ್ಛೇದ :-** ತತಃ, ವಿರಾಟಃ, ಭಯಕಂಪಿತಾಂಗಃ, ಪ್ರಾಣಮ್ಯ, ಪಾರ್ಥಾನ್, ಶರಣಂ, ಜಗಾಮ, ದದೌ, ಚ, ಕನ್ಯಾಂ, ಉತ್ತರಾಂ, ಫಲ್ಗುನಾಯ, ಪುತ್ರಾರ್ಥಂ, ಏವ ಪ್ರತಿಜಗ್ರಾಹ, ಸಃ ಅಪಿ.

**ಅರ್ಥ :-** **ತತಃ** = ಅನಂತರ, **ಭಯಕಂಪಿತಾಂಗಃ** = ಭಯದಿಂದ ನಡುಗಿದ ದೇಹವುಳ್ಳ **ವಿರಾಟಃ** = ವಿರಾಟ ರಾಜನು **ಪಾರ್ಥಾನ್** = ಆ ಪಾಂಡವರನ್ನು **ಪ್ರಣಮ್ಯ** = ಚೆನ್ನಾಗಿ ನಮಸ್ಕರಿಸಿ, **ಶರಣಂ** = ಶರಣನನ್ನು, **ಜಗಾಮ** = ಹೊಂದಿದ, **ಚ** = ಮತ್ತು **ಫಲ್ಗುನಾಯ** = ಅರ್ಜುನನಿಗೆ **ಕನ್ಯಾಂ** = ಕನ್ಯೆಯಾದ, **ಉತ್ತರಾಂ** = ಉತ್ತರೆಯನ್ನು **ದದೌ** = ಕೊಟ್ಟನು, **ಸಃ ಅಪಿ** = ಅವನಾದರೂ, **ಪುತ್ರಾರ್ಥಂ ಏ** = ಪುತ್ರನಾದ ಅಭಿಮನ್ಯುವಿಗೋಸ್ಕರ, **ಪ್ರತಿಜಗ್ರಾಹ** = ಸ್ವೀಕರಿಸಿದನು.

ತಾತ್ಪರ್ಯ :- ಅವರು ಪಾಂಡವರು ಎಂದ ಬಳಿಕ ಅವರಲ್ಲಿ ತಾನು ಮಾಡಿದ ಅಪರಾಧ ನೆನೆದು ಭಯದಿಂದ ನಡುಗಿದ. ಅವರಿಗೆ ಸಾಷ್ಟಾಂಗ ನಮಸ್ಕರಿಸಿ ಅವರನ್ನು ಶರಣು ಹೊಂದಿದ. ಅಲ್ಲದೆ ಅರ್ಜುನನಿಗೋಸ್ಕರ ತನ್ನ ಕನ್ಯೆ ಉತ್ತರೆಯನ್ನು ಕೊಟ್ಟ, ಆದರೆ ಅರ್ಜುನ ತನ್ನ ಮಗ ಅಭಿಮನ್ಯುವಿಗೋಸ್ಕರ ಅವಳನ್ನು ಸ್ವೀಕರಿಸಿದ.

**ಏವಂ ವಿರಾಟಂ ಮೋಚಯಿತ್ವೈವ ಗಾಶ್ಚ**
**ತಮಸ್ಯಂಧೇ ಕೀಚಕಾನ್ ಪಾತಯಿತ್ವಾ ।**
**ಪ್ರಾಪ್ತೋ ಧರ್ಮಃ ಸುಮಹಾನ್ ವಾಯುಜೇನ**
**ತಸ್ಯಾನು ಪಾರ್ಥೇನ ಚ ಗೋವಿಮೋಕ್ಷಣಾತ್ ॥ ೪೮ ॥**

ಪದಚ್ಛೇದ :– ಏವಂ, ವಿರಾಟಂ, ಮೋಚಯಿತ್ವಾ, ಏವ, ಗಾಃ, ಚ, ತಮಸಿ ಅಂಧೇ, ಕೀಚಕಾನ್, ಪಾತಯಿತ್ವಾ, ಪ್ರಾಪ್ತಃ, ಧರ್ಮಃ, ಸುಮಹಾನ್, ವಾಯುಜೇನ, ತಸ್ಯ, ಅನುಪಾರ್ಥೇನ, ಚ ಗೋವಿಮೋಕ್ಷಣಾತ್.

ಅರ್ಥ :- ಏವಂ = ಹೀಗೆ ವಿರಾಟಂ = ವಿರಾಟರಾಜನನ್ನು ಚ = ಮತ್ತು ಗಾಃ = ಹಸುಗಳನ್ನು ಮೋಚಯಿತ್ವಾ ಏವ = ಬಿಡಿಸಿದ್ದರಿಂದಲೇ, ಕೀಚಕಾನ್ = ಕೀಚಕರನ್ನು ಅಂಧೇ ತಮಸಿ = ಅಂಧಃತಮಸ್ಸಿನಲ್ಲಿ, ಪಾತಯಿತ್ವಾ = ಬೀಳಿಸಿದ್ದರಿಂದ ವಾಯುಜೇನ = ಭೀಮನಿಂದ ಸುಮಹಾನ್ = ಬಹಳ ಮಹತ್ತಾದ ಧರ್ಮಃ = ಪುಣ್ಯವು ಪ್ರಾಪ್ತಃ = ಹೊಂದಲ್ಪಟ್ಟಿತು. ತಸ್ಯ ಅನು = ಅವನ ನಂತರ, ಗೋವಿಮೋಕ್ಷಣಾತ್ = ಗೋವುಗಳನ್ನು ಬಿಡಿಸಿದ್ದರಿಂದ ಪಾರ್ಥೇ ನ ಚ = ಅರ್ಜುನನಿಂದಲೂ ಧರ್ಮಃ = ಪುಣ್ಯವು ಪ್ರಾಪ್ತಃ = ಹೊಂದಲ್ಪಟ್ಟಿತು.

ತಾತ್ಪರ್ಯ :- ಹೀಗೆ ಆ ಪ್ರಸಂಗದಲ್ಲಿ ವಿರಾಟರಾಜನನ್ನು ಮತ್ತು ಗೋವುಗಳನ್ನು ಬಿಡಿಸಿದ್ದರಿಂದ ಹಾಗೂ ಕೀಚಕರನ್ನು ತಮಸ್ಸಿಗೆ ಕಳಿಸಿದ್ದರಿಂದ ವಾಯುಪುತ್ರನಾದ ಭೀಮನು ಸುಮಹತ್ತರವಾದ ಧರ್ಮಕ್ಕೆ (ಪುಣ್ಯಕ್ಕೆ) ಭಾಗಿಯಾದ ಅವನ ಅನಂತರ ಗೋವುಗಳನ್ನು ಬಿಡಿಸಿದ್ದರಿಂದ ಅರ್ಜುನನೂ ಬಹಳ ಧರ್ಮಕ್ಕೆ ಭಾಗಿಯಾದ.

ಅಯಾತಯನ್ ಕೇಶವಾಯಾಥ ದೂತಾನ್
ಸಹಾಭಿಮನ್ಯುಃ ಸೋಽಪಿ ರಾಮೇಣ ಸಾರ್ಧಮ್ ।
ಆಗಾದನಂತಾನಂದಚಿದ್ ವಾಸುದೇವೋ
ವಿವಾಹಯಾಮಾಸುರಥಾಭಿಮನ್ಯುಮ್ ॥ ೪೯ ॥

ಪದಚ್ಛೇದ :– ಅಯಾತಯನ್, ಕೇಶವಾಯ, ಅಥ, ದೂತಾನ್, ಸಹ, ಅಭಿಮನ್ಯುಃ, ಸಃ, ಅಪಿ, ರಾಮೇಣ, ಸಾರ್ಧಂ, ಆಗಾತ್, ಅನಂತಾನಂದಚಿತ್, ವಾಸುದೇವಃ ವಿವಾಹಯಾಮಾಸುಃ, ಅಥ, ಅಭಿಮನ್ಯುಮ್.

ಅರ್ಥ :- ಅಥ = ಅನಂತರ, (ಪಾಂಡವರು), ಕೇಶವಾಯ = ಶ್ರೀಕೃಷ್ಣನಿಗೆ ದೂತಾನ್ = ದೂತರನ್ನು ಅಯಾತಯನ್ = ಹೇಳಿಕಳಿಸಿದರು. ಅನಂತಾನಂದಚಿತ್ = ಅನಂತ ಸುಖಜ್ಞಾನ ಸ್ವರೂಪನಾದ, ವಾಸುದೇವಃ =

ವಸುದೇವನ ಮಗನಾದ, **ಸಃ ಅಪಿ** = ಆ ಶ್ರೀಕೃಷ್ಣನಾದರೂ **ರಾಮೇಣ** = ಬಲರಾಮನಿಂದ **ಸಾರ್ಥಂ** = ಕೂಡಿಕೊಂಡು, **ಸಹಾಭಿಮನ್ಯುಃ** = ಅಭಿಮನ್ಯುವಿನ ಜೊತೆಗೆ **ಅಗಾತ್** = ಬಂದನು. **ಅಥ** = ಅನಂತರ, **ಅಭಿಮನ್ಯುಂ** = ಅಭಿಮನ್ಯುವನ್ನು **ವಿವಾಹಯಾಮಾಸುಃ** = ವಿವಾಹ ಮಾಡಿಸಿದರು.

**ತಾತ್ಪರ್ಯ** :- ಅನಂತರ ಪಾಂಡವರು ಶ್ರೀಕೃಷ್ಣನಿಗೆ ದೂತರ ಮೂಲಕ ಹೇಳಿಕಳಿಸಿದರು. ಅದನ್ನು ತಿಳಿದ ಅನಾಂತಾನಂದ ಜ್ಞಾನರೂಪಿಯಾದ ವಾಸುದೇವನಾದ ಶ್ರೀಕೃಷ್ಣನು ಅಭಿಮನ್ಯುವನ್ನು ಕರೆದುಕೊಂಡು ಬಲರಾಮನೊಂದಿಗೆ ಅಲ್ಲಿಗೆ ಬಂದನು. ಅನಂತರ ಎಲ್ಲರೂ ಸೇರಿ ಅಭಿಮನ್ಯುವಿಗೆ ವಿವಾಹ ಮಾಡಿಸಿದರು.

**ಆಸೀನ್ಮಹಾನುತ್ಸವಸ್ತತ್ರ ತೇಷಾಂ**
**ದಾಶಾರ್ಹವೀರೈಃ ಸಹ ಪಾಂಡವಾನಾಮ್ ।**
**ಸಪಾಂಚಾಲಾನಾಂ ವಾಸುದೇವೇನ ಸಾರ್ಥ-**
**ಮಜ್ಞಾತವಾಸಂ ಸಮತೀತ್ಯ ಮೋದತಾಮ್ ॥ ೫೦ ॥**

**ಪದಚ್ಛೇದ** :- **ಆಸೀತ್, ಮಹಾನ್, ಉತ್ಸವಃ, ತತ್ರ, ತೇಷಾಂ, ದಾಶಾರ್ಹವಿದ್ಯೈಃ, ಸಹ ಪಾಂಡವಾನಾಮ್, ಸಹ ಪಾಂಡವಾನಾಮ್, ಸಪಾಂಚಾಲಾನಾಂ, ವಾಸುದೇವೇನ, ಸಾರ್ಥಂ, ಅಜ್ಞಾತವಾಸಂ, ಸಮ್ ಅತೀತ್ಯ, ಮೋದತಾಮ್.**

**ಅರ್ಥ** :- **ಅಜ್ಞಾತವಾಸಂ** = ಅಜ್ಞಾತವಾಸವನ್ನು **ಸಮತೀತ್ಯ** = ಕಳೆದು **ಮೋದತಾಂ** = ಆನಂದ ಪಡುತ್ತಿರುವ, **ಸಪಾಂಚಾಲಾನಾಂ** = ಪಾಂಚಾಲರೊಂದಿಗೆ ಕೂಡಿದ **ಪಾಂಡವಾನಾಂ** = ಪಾಂಡವರಿಗೆ **ದಾಶಾರ್ಹವೀರೈಃ ಸಹ** = ಯಾದವ ವೀರರೊಂದಿಗೆ, **ವಾಸುದೇವೇನ ಸಾರ್ಥಂ** = ಶ್ರೀಕೃಷ್ಣನಿಂದ ಕೂಡಿದ, **ತತ್ರ** = ಆ ಅಭಿಮನ್ಯುವಿನ ಮದುವೆಯಲ್ಲಿ **ಮಹಾನ್** = ದೊಡ್ಡದಾದ, **ಉತ್ಸವಃ** = ಸಂಭ್ರಮವು, **ಆಸೀತ್** = ಉಂಟಾಯಿತು.

**ತಾತ್ಪರ್ಯ** :- ಅಜ್ಞಾತವಾಸವನ್ನು ಯಶಸ್ವಿಯಾಗಿ ಪೂರೈಸಿ ಆನಂದಗೊಂಡಂತಹ ಪಾಂಡವರು, ಆ ಅಭಿಮನ್ಯುವಿನ ಮದುವೆಯಲ್ಲಿ

ಶ್ರೀಕೃಷ್ಣ, ಯಾದವ ವೀರರೂ ಪಾಂಚಾಲರೂ ಇವರುಗಳಿಂದ ಕೂಡಿಕೊಂಡು ಬಹಳವಾಗಿ ಸಂಭ್ರಮಿಸಿದರು.

**ದುರ್ಯೋಧನಾದ್ಯಾಃ ಸೂತಪುತ್ರೇಣ ಸಾರ್ಧಂ**
**ಸಸೌಬಲೇಯಾ ಯುಧಿ ಪಾರ್ಥಪೀಡಿತಾಃ ।**
**ಭೀಷ್ಮಾದಿಭಿಃ ಸಾರ್ಧಮುಪೇತ್ಯ ನಾಗ-**
**ಪುರಂ ಮಂತ್ರಂ ಮಂತ್ರಯಾಮಾಸುರತ್ರ ॥ ೫೧ ॥**

ಪದಚ್ಛೇದ :- **ದುರ್ಯೋಧನದ್ಯಾಃ, ಸೂತ ಪುತ್ರೇಣ, ಸಾರ್ಧಂ, ಸಸೌಬಲೇಯಾಃ, ಯುಧಿ ಪಾರ್ಥಪೀಡಿತಾಃ, ಭೀಷ್ಮಾದಿಭಿಃ, ಸಾಧಕಂ, ಉಪೇತ್ಯ, ನಾಗಪುರಾ, ಮಂತ್ರಂ, ಮಂತ್ರಯಾಮಾಸಾಃ, ಅತ್ರ.**

**ಅರ್ಥ** :- **ಸೂತಪುತ್ರೇಣ** = ಕರ್ಣನೊಂದಿಗೆ **ಸಾರ್ಧಂ** = ಕೂಡಿದ **ಸಸೌಬಲೇಯಾಃ** = ಶಕುನಿಯಿಂದ ಕೂಡಿ, **ದುರ್ಯೋಧನಾದ್ಯಾಃ** = ದುರ್ಯೋಧನನೇ ಮೊದಲಾದವರು, **ಯುಧಿ** = ಯುದ್ಧದಲ್ಲಿ **ಪಾರ್ಥಪೀಡಿತಾಃ** = ಅರ್ಜುನನಿಂದ ಹಿಂಸೆಗಳೊಳಪಟವರಾಗಿ, **ಭೀಷ್ಮಾದಿಭಿಃ** = ಭೀಷ್ಮಾದಿಗಳಿಂದ ಕೂಡಿಕೊಂಡು **ನಾಗಪುರಂ** = ಹಸ್ತಿನಾಪುರವನ್ನು, **ಉಪೇತ್ಯ** = ಹೊಂದಿ, **ಅತ್ರ** = ಇಲ್ಲಿ **ಮಂತ್ರಂ** = ಸಮಾಲೋಚನೆಯನ್ನು **ಮಂತ್ರಯಾಮಾಸುಃ** = ಆಲೋಚಿಸಿದರು.

**ತಾತ್ಪರ್ಯ** :- ಯುದ್ಧದಲ್ಲಿ ಅರ್ಜುನನಿಂದ ಹಿಂಸಿಸಲ್ಪಟ್ಟ ದುರ್ಯೋಧನಾದಿಗಳು ಕರ್ಣ, ಶಕುನಿ, ಭೀಷ್ಮಾದಿಗಳು ಇವರುಗಳಿಂದ ಕೂಡಿಕೊಂಡು ಹಸ್ತಿನಾಪುರಕ್ಕೆ ಬಂದರು. ಅಲ್ಲಿ ರಹಸ್ಯ ಸಭೆಯನ್ನು ಕರೆದು ಸಮಾಲೋಚನೆ ಮಾಡಿದರು.

**ಅಜ್ಞಾತವಾಸೇ ಫಲ್ಗುನೋ ನೋಽದ್ಯ ದೃಷ್ಟ-**
**ಸ್ತಸ್ಮಾತ್ ಪುನರ್ಯಾಂತು ಪಾರ್ಥಾ ವನಾಯ ।**
**ಇತಿ ಬ್ರುವಾಣಾನಾಹ ಭೀಷ್ಮೋಽಭ್ಯತೀತ-**
**ಮಜ್ಞಾತವಾಸಂ ದ್ರೋಣ ಆಹೈವಮೇವ ॥ ೫೨ ॥**

ಪದಚ್ಛೇದ :- **ಅಜ್ಞಾತವಾಸೇ, ಫಾಲ್ಗುನಃ ನಃ, ಅದ್ಯ ದೃಷ್ಟ, ತಸ್ಮಾತ್, ಪುನಃ ಯಾಂತು, ಪಾರ್ಥಾಃ, ವನಾಯ, ಇತಿ, ಬ್ರುವಾಣಾನ್, ಆಹ, ಭೀಷ್ಮಃ ಅಭ್ಯತೀತಮ್, ಅಜ್ಞಾತವಾಸಂ, ದ್ರೋಣಃ, ಆಹ, ಏವಂ, ಏವ.**

ಅರ್ಥ :- ಅಜ್ಞಾತವಾಸೇ = ಅಜ್ಞಾತವಾಸದಲ್ಲಿ ಫಲ್ಗುನಃ = ಅರ್ಜುನನು, ನಃ = ನಮಗೆ ಅದ್ಯ = ಈಗ ದೃಷ್ಟಿಃ = ಕಂಡಿದ್ದಾನೆ. ತಸ್ಮಾತ್ = ಆದ್ದರಿಂದ ಪಾರ್ಥಾಃ = ಪಾಂಡವರು, ವನಾಯ = ವನವಾಸಕ್ಕೆ ಪುನಃ = ಮತ್ತೊಮ್ಮೆ ಯಾಂತು = ಹೋಗಲಿ ಇತಿ = ಈ ರೀತಿಯಾಗಿ ಬ್ರುವಾಣಾನ್ = ಹೇಳತಕ್ಕಂತಹ ಕೌರವರನ್ನು ಕುರಿತು, ಭೀಷ್ಮಃ = ಭೀಷ್ಮನು ಅಜ್ಞಾತವಾಸಂ = ಅಜ್ಞಾತವಾಸವನ್ನು ಅಭ್ಯತೀತಂ = ಕಳೆಯಲ್ಪಟ್ಟದ್ದನ್ನಾಗಿ (ಮುಗಿದಿದ್ದನ್ನಾಗಿ) ಆಹ = ಹೇಳಿದನು. ದ್ರೋಣಃ = ದ್ರೋಣಾಚಾರ್ಯರು ಏವಂ ಏವ = ಹಾಗೆಯೇ, ಆಹ = ಹೇಳಿದರು.

ತಾತ್ಪರ್ಯ :- ಮಂತ್ರಾಲೋಚನೆ ಮಾಡುವಾಗ ಕೌರವರು ಅಜ್ಞಾತವಾಸದಲ್ಲಿ ಈಗ ಅರ್ಜುನ ನಮ್ಮ ಕಣ್ಣಿಗೆ ಬಿದ್ದಿದ್ದಾನೆ. ಆದ್ದರಿಂದ ನಿಯಮ ಪ್ರಕಾರ ಪಾಂಡವರು ಪುನಃ ವನವಾಸಕ್ಕೆ ಹೋಗಲಿ ಎಂದು ಹೇಳಿದರು. ಆಗ ಅವರನ್ನು ಕುರಿತು ಭೀಷ್ಮರು ಅಜ್ಞಾತವಾಸ ಕಳೆದಿದೆ ಎಂದು ಹೇಳಿದರು. ದ್ರೋಣರೂ ಹಾಗೆಯೇ ಹೇಳಿದರು.

**ತಯೋರ್ವಾಕ್ಯಂ ತೇ ತ್ವನಾದೃತ್ಯ ಪಾಪಾ**
**ವನಂ ಪಾರ್ಥಾಃ ಪುನರೇವ ಪ್ರಯಾಂತು ।**
**ಇತಿ ದೂತಂ ಪ್ರೇಷಯಾಮಾಸುರತ್ರ**
**ಜಾನಂತಿ ವಿಪ್ರಾ ಇತಿ ಧರ್ಮಜೋಽವದತ್ ॥ ೫೩ ॥**

ಪದಚ್ಛೇದ :– ತಯೋಃ, ವಾಕ್ಯಂ, ತೇ, ತು, ಅನಾದೃತ್ಯ, ಪಾಪಾಃ, ವನಂ, ಪಾರ್ಥಾಃ, ಪುನಃ, ಏವ, ಪ್ರಯಾಂತು, ಇತಿ, ದೂತಂ, ಪ್ರೇಷಯಾಮಾಸುಃ, ಅತ್ರ ಜಾನಂತಿ, ವಿಪ್ರಾಃ ಇತಿ ಧರ್ಮಜಃ ಅಬ್ರವೀತ್.

ಅರ್ಥ :- ತಯೋಃ = ಆ ಭೀಷ್ಮದ್ರೋಣರಿಬ್ಬರ ವಾಕ್ಯಂ = ಮಾತನ್ನು ಅನಾದೃತ್ಯ = ತಿರಸ್ಕರಿಸಿ ಪಾಪಾಃ = ಪಾಪಿಷ್ಠರಾದ, ತೇ = ಆ ದುರ್ಯೋಧನಾದಿಗಳು ಪಾರ್ಥಾಃ = ಪಾಂಡವರು, ಪುನಃ ಏವ = ಮತ್ತೊಮ್ಮೆಯೂ ವನಂ = ಕಾಡನ್ನು ಕುರಿತು ಪ್ರಯಾಂತು = ಹೋಗಲಿ ಇತಿ = ಈ ರೀತಿಯಾಗಿ ದೂತಂ = ದೂತನನ್ನು ಪ್ರೇಷಯಾಮಾಸುಃ = ಕಳಿಸಿದರು. ಧರ್ಮಜಃ = ಧರ್ಮರಾಜನು ಅತ್ರ = ಈ ವಿಷಯದಲ್ಲಿ ವಿಪ್ರಾಃ = ಬ್ರಾಹ್ಮಣರು ಜಾನಂತಿ = ತಿಳಿದಿದ್ದಾರೆ. ಇತಿ = ಎಂದು ಅವದತ್ = ಹೇಳಿದನು.

ತಾತ್ಪರ್ಯ :- ಭೀಷ್ಮ, ದ್ರೋಣರಿಬ್ಬರ ಮಾತನ್ನು ಅನಾದರ ಮಾಡಿ, ಪಾಂಡವರು ಪುನಃ ಕಾಡಿಗೆ ಹೋಗಬೇಕು ಎಂದು ದೂತರ ಮೂಲಕ ಹೇಳಿಕಳುಹಿಸಿದನು. ಆಗ ಧರ್ಮರಾಜ ಈ ವಿಷಯದಲ್ಲಿ ಬ್ರಾಹ್ಮಣರು ಸರಿಯಾಗಿ ತಿಳಿದಿದ್ದಾರೆ ಎಂದು ಹೇಳಿದ.

**ಸೌರಮಾಸಾನುಸಾರೇಣ ಧಾರ್ತರಾಷ್ಟ್ರಾ ಅಪೂರ್ಣತಾಮ್ ।**
**ಆಹುಶ್ಚಾಂದ್ರೇಣ ಮಾಸೇನ ಪೂರ್ಣಃ ಕಾಲೋಽಖಿಲೋಽಪ್ಯಸೌ ॥ ೫೪ ॥**

**ಪದಚ್ಛೇದ** :- ಸೌರಮಾಸಾನುಸಾರೇಣ ಧಾರ್ತರಾಷ್ಟ್ರಾಃ, ಅಪೂರ್ಣತಾಂ, ಆಹುಃ, ಚಾಂದ್ರೇಣ, ಮಾಸೇನ, ಪೂರ್ಣಃ, ಕಾಲಃ, ಅಖಿಲಃ, ಅಪಿ, ಅಸೌ.

ಅರ್ಥ :- **ಸೌರಮಾಸಾನುಸಾರೇಣ** = ಸೌರಮಾನ ಮಾಸಾನುಸಾರವಾಗಿ **ಧಾರ್ತರಾಷ್ಟ್ರಾ** = ದುರ್ಯೋಧನಾದಿಗಳು **ಅಪೂರ್ಣತಾಂ** = ಅಜ್ಞಾತವಾಸದ ಕಾಲ ಮುಗಿದಿಲ್ಲ ಎಂದು. **ಆಹುಃ** = ಹೇಳಿದರು. **ಚಾಂದ್ರೇಣ** = ಚಾಂದ್ರಮಾನದ, **ಮಾಸೇನ** = ಮಾಸಾನುಸಾರಿಯಾಗಿ **ಅಖಿಲೋಪಿ** = ಎಲ್ಲಾ **ಅಸೌ** = ಈ **ಕಾಲಃ** = ಕಾಲವು **ಪೂರ್ಣಃ** = ಪೂರ್ಣಗೊಂಡಿದೆ.

ತಾತ್ಪರ್ಯ :- ದುರ್ಯೋಧನಾದಿಗಳು ಸೌರಮಾನ ಮಾಸದ ಪ್ರಕಾರ ಅಜ್ಞಾತವಾಸದ ಕಾಲ ಪೂರ್ಣ ಕೂಡಿಲ್ಲ ಎಂದು ಹೇಳಿದರು. ಆದರೇ ಚಾಂದ್ರಮಾನಮಾಸದ ಪ್ರಕಾರ ಎಲ್ಲಾ ಕಾಲವೂ ಮುಗಿದಿತ್ತು.

**ದಿನಾನಾಮಧಿಪಃ ಸೂರ್ಯಃ ಪಕ್ಷಮಾಸಾಬ್ದಪಃ ಶಶೀ ।**
**ತಸ್ಮಾತ್ ಸೌಮ್ಯಾಬ್ದಮೇವಾತ್ರ ಮುಖ್ಯಮಾಹುರ್ಮನೀಷಿಣಃ ॥**

**ಪದಚ್ಛೇದ** :- ದಿನಾನಾಂ, ಅಧಿಪಃ, ಸೂರ್ಯಃ, ಪಕ್ಷಮಾಸಾಬ್ದಪಃ, ಶಶೀ, ತಸ್ಮಾತ್, ಸೌಮ್ಯಾಬ್ದಂ, ಏವ, ಅತ್ರ, ಮುಖ್ಯಂ, ಆಹುಃ, ಮನೀಷಿಣಃ.

ಅರ್ಥ :- **ದಿನಾನಾಂ** = ದಿನಗಳಿಗೆ, **ಸೂರ್ಯಃ** = ಸೂರ್ಯನು, **ಅಧಿಪಃ** = ಒಡೆಯನು, **ಶಶೀ** = ಚಂದ್ರನು, **ಪಕ್ಷಮಾಸಾಬ್ದಪಃ** = ಪಕ್ಷ, ಮಾಸ, ವರ್ಷ ಇವುಗಳಿಗೆ ಒಡೆಯನು. **ತಸ್ಮಾತ್** = ಆದ್ದರಿಂದ **ಮನೀಷಿಣಃ** = ಜ್ಞಾನಿಗಳು, **ಅತ್ರ** = ಈ ವಿಷಯದಲ್ಲಿ **ಸೌಮ್ಯಾಬ್ದಂ ಏವ** = ಚಾಂದ್ರಮಾನದ ವರ್ಷವನ್ನೇ, **ಮುಖ್ಯಂ** = ಮುಖ್ಯವಾದದ್ದನ್ನಾಗಿ **ಆಹುಃ** = ಹೇಳುತ್ತಾರೆ.

ತಾತ್ಪರ್ಯ :- ದಿನಗಳಿಗೆ ಅಧಿಪತಿ, ಸೂರ್ಯ, ಪಕ್ಷ, ಮಾಸ, ವರ್ಷ ಇವುಗಳಿಗೆ ಅಧಿಪತಿ ಚಂದ್ರ, ಆದ್ದರಿಂದ ಅಜ್ಞಾತವಾಸದ ವರ್ಷ ಮುಗಿದಿದೆಯೋ ಇಲ್ಲವೋ ಎನ್ನುವ ವಿಷಯದಲ್ಲಿ ಚಾಂದ್ರಮಾನದ ವರ್ಷವೇ ಮುಖ್ಯ ಎಂದು ಜ್ಞಾನಿಗಳು ಹೇಳುತ್ತಾರೆ.

**ಸೌಮ್ಯಂ ಕಾಲಂ ತತೋ ಯಜ್ಞೇ ಗೃಹ್ಣಂತಿ ನತು ಸೂರ್ಯಜಮ್ ।**
**ತದೇತದವಿಚಾರ್ಯೈವ ಲೋಭಾಚ್ಚ ಧೃತರಾಷ್ಟ್ರಜೈಃ ।**
**ರಾಜ್ಯಂ ನ ದತ್ತಂ ಪಾರ್ಥೇಭ್ಯಃ ಪಾರ್ಥಾಃ ಕಾಲಸ್ಯ ಪೂರ್ಣತಾಮ್ ।**
**ಖ್ಯಾಪಯಂತೋ ವಿಪ್ರವರ್ಯೈರುಪಪ್ಲಾವ್ಯಮುಪಾಯಯುಃ ॥ ೫೬ ॥**

ಪದಚ್ಛೇದ :- **ಸೌಮ್ಯಂ, ಕಾಲಂ, ತತಃ, ಯಜ್ಞೇ, ಗೃಷ್ಣಂತಿ, ನ ತು ಸೂರ್ಯಜಂ ತದ್ ಏತದ್ ಅವಿಚಾರ್ಯ, ಏವ, ಲೋಭಾತ್, ಚ, ಧಾರ್ತರಾಷ್ಟ್ರಜೈಃ ರಾಜ್ಯಂ, ನ, ದತ್ತಂ, ಪಾಥೇಭ್ಯಃ, ಪಾರ್ಥಾಃ, ಕಾಲಸ್ಯ, ಪೂರ್ಣತಾಂ, ಖ್ಯಾಪಯಂತಃ, ವಿಪ್ರವರ್ಯೈಃ, ಉಪಪ್ಲಾವ್ಯಂ, ಉಪಾಯಯುಃ.**

**ಅರ್ಥ** :- **ತತಃ** = ಆ ಕಾರಣದಿಂದ **ಯಜ್ಞೇ** = ಯಜ್ಞದಲ್ಲಿ **ಸೌಮ್ಯಂ ಕಾಲಂ** = ಚಾಂದ್ರಮಾನದ, ಕಾಲವನ್ನು **ಗೃಷ್ಣಂತಿ** = ಸ್ವೀಕರಿಸುವುದಿಲ್ಲ, **ತದ್ ಏತದ್** = ಈ ಯಾವುದನ್ನು **ಅವಿಚಾರ್ಯ** = ವಿಚಾರ ಮಾಡದೆ **ಚ** = ಮತ್ತು **ಲೋಭಾತ್** = ರಾಜ್ಯದ ಮೇಲಿನ ಲೋಭದಿಂದ **ರಾಜ್ಯಂ** = ರಾಜ್ಯವು, **ಧಾರ್ತರಾಷ್ಟ್ರಜೈಃ** = ಧೃತರಾಷ್ಟನ ಮಕ್ಕಳಿಂದ, **ಪಾರ್ಥೇಭ್ಯಃ** = ಪಾಂಡವರಿಗೆ, **ನ ದತ್ತಂ** = ಕೊಡಲ್ಪಡಲಿಲ್ಲ, **ಪಾರ್ಥಾಃ** = ಪಾಂಡವರು **ಕಾಲಸ್ಯ** = ಕಾಲದ **ಪೂರ್ಣತಾಂ** = ಪೂರ್ಣತ್ವವನ್ನು **ವಿಪ್ರವರ್ಯೈಃ** = ಬ್ರಾಹ್ಮಣ ಶ್ರೇಷ್ಠರಿಂದ, **ಖ್ಯಾಪಯಂತಃ** = ತಿಳಿಸುತ್ತಾ, **ಉಪಪ್ಲಾವ್ಯಂ** = ಉಪಪ್ಲಾವ್ಯ ನಗರಕ್ಕೆ **ಉಪಾಯಯುಃ** = ಬಂದರು.

ತಾತ್ಪರ್ಯ :- ಚಾಂದ್ರಮಾನ ಕಾಲವೇ ಮುಖ್ಯವಾದ್ದರಿಂದ ಯಜ್ಞದಲ್ಲಿ ಅದನ್ನೇ ಸ್ವೀಕರಿಸುತ್ತಾರೆ ಹೊರತು ಸೌರಮಾನವನ್ನಲ್ಲ. ಇದನ್ನು ವಿಚಾರ ಮಾಡದೇ ದುರ್ಯೋಧನಾದಿಗಳು ಲೋಭದಿಂದ ರಾಜ್ಯವನ್ನು ಪಾಂಡವರಿಗೆ ಕೊಡಲಿಲ್ಲ. ಪಾಂಡವರು ಅಜ್ಞಾತವಾಸದ ಕಾಲ ಮುಗಿದಿರುವುದನ್ನು ಬ್ರಾಹ್ಮಣರ ಮೂಲಕ ಲೋಕಕ್ಕೆ ತಿಳಿಸುವವರಾಗಿ ಉಪಪ್ಲಾವ್ಯ ನಗರಕ್ಕೆ ಬಂದರು.

**ಸವಾಸುದೇವಾ ಅಖಿಲೈಶ್ಚ ಯಾದವೈಃ**
**ಪಾಂಚಾಲಮತ್ಸ್ಯೈಶ್ಚ ಯುತಾಃ ಸಭಾರ್ಯಾಃ ।**
**ಉಪಪ್ಲಾವ್ಯೇ ತೇ ಕತಿಚಿದ್ ದಿನಾನಿ**
**ವಾಸಂ ಚಕ್ರುಃ ಕೃಷ್ಣಸಂಶಿಕ್ಷಿತಾರ್ಥಾಃ ॥ ೫೭ ॥**

**ಪದಚ್ಛೇದ :–** ಸವಾಸುದೇವಾಃ, ಅಖಿಲೈಶ್ಚ ಯಾದವೈಃ, ಪಾಂಚಾಲಮತ್ಸ್ಯೈಃ, ಚ ಯುತಾಃ, ಸಭಾರ್ಯಾಃ, ಉಪಪ್ಲಾವ್ಯೇ, ತೇ ಕತಿಚತ್ ದಿನಾನಿ ವಾಸಂ, ಚಕ್ರುಃ, ಕೃಷ್ಣಸಂಶಿಕ್ಷಿತಾರ್ಥಾಃ.

**ಅರ್ಥ :-** **ಸ ವಾಸುದೇವಾಃ** = ಶ್ರೀಕೃಷ್ಣನಿಂದ ಕೂಡಿದ **ಚ** = ಮತ್ತು **ಅಖಿಲೈಃ** = ಎಲ್ಲಾ **ಯಾದವೈಃ** = ಯಾದವರಿಂದ **ಚ** = ಮತ್ತು **ಪಾಂಚಾಲಮತ್ಸ್ಯೈಃ** = ಪಾಂಚಾಲರು, ಮತ್ಸ್ಯದೇಶದವರಿಂದ **ಯುತಾಃ** = ಕೂಡಿದ **ಸಭಾರ್ಯಾಃ** = ಪತ್ನೀಸಮೇತರಾದ **ತೇ** = ಆ ಪಾಂಡವರು, **ಕೃಷ್ಣಸಂಶಿಕ್ಷಿತಾರ್ಥಾಃ** = ಶ್ರೀಕೃಷ್ಣನಿಂದ ಉಪದೇಶಿಸಲ್ಪಟ್ಟ ಪುರುಷಾರ್ಥವಿಷಯಗಳುಳ್ಳವರಾಗಿ **ಕತಿಚಿತ್** = ಕೆಲವು **ದಿನಾನಿ** = ದಿನಗಳನ್ನು **ಉಪಪ್ಲಾವ್ಯ** = ಉಪಪ್ಲಾವ್ಯ ನಗರದಲ್ಲಿ **ವಾಸಂ** = ವಾಸವನ್ನು **ಚಕ್ರು** = ಮಾಡಿದರು.

**ತಾತ್ಪರ್ಯ :-** ಪತ್ನಿ ಸಮೇತರಾದ ಆ ಪಾಂಡವರು, ಶ್ರೀಕೃಷ್ಣ, ಎಲ್ಲಾ ಯಾದವರು ಪಾಂಚಾಲರು, ಮಾತ್ಸ್ಯರು ಇವರುಗಳಿಂದ ಕೂಡಿಕೊಂಡು ಶ್ರೀಕೃಷ್ಣನಿಂದ ಪುರುಷಾರ್ಥ ಶಿಕ್ಷಣ ಪಡೆಯುವವರಾಗಿ, ಕೆಲವು ದಿನ. ಉಪಪ್ಲಾವ್ಯ ನಗರದಲ್ಲಿಯೇ ವಾಸ ಮಾಡಿದರು.

ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ
ಶ್ರೀಮಹಾಭಾರತತಾತ್ಪರ್ಯನಿರ್ಣಯೇ
ಅಜ್ಞಾತವಾಸಸಮಾಪ್ತಿರ್ನಾಮ
ತ್ರಯೋವಿಂಶೋಽಧ್ಯಾಯಃ

# ಅಧ್ಯಾಯ - 24

ಯುದ್ಧೋದ್ಯೋಗಃ

**ತತಃ ಸಮ್ಮಂತ್ರ್ಯಾನುಮತೇ ಕೃಷ್ಣಸ್ಯ ಸ್ವಪುರೋಹಿತಮ್ ।**
**ದ್ರುಪದಃ ಪ್ರೇಷಯಾಮಾಸ ಧೃತರಾಷ್ಟ್ರಾಯ ಶಾಂತಯೇ ॥ ೧ ॥**

**ಅರ್ಥ** :- **ತತಃ** = ಅನಂತರ, **ದ್ರುಪದಃ** = ದ್ರುಪದರಾಜನು, **ಸುಮಂತ್ರ್ಯ** = ಚೆನ್ನಾಗಿ ಮಂತ್ರಾಲೋಚನೆಯನ್ನು ಮಾಡಿ, **ಕೃಷ್ಣಸ್ಯ** = ಶ್ರೀಕೃಷ್ಣನ, **ಅನುಮತೆ** = ಅನುಮತಿಯನ್ನು ಪಡೆದು, **ಸ್ವಪುರೋಹಿತಂ** = ತನ್ನ ಪುರೋಹಿತನನ್ನು, **ಧೃತರಾಷ್ಟ್ರಾಯ** = ಧೃತರಾಷ್ಟ್ರನನ್ನು ಕುರಿತು ಹೇಳುವುದಕ್ಕೋಸ್ಕರ, **ಸಂಧಯೇ** = ಸಂಧಾನಕ್ಕಾಗಿ, **ಪ್ರೇಷಯಾಮಾಸ** = ಕಳುಹಿಸಿದನು.

**ತಾತ್ಪರ್ಯ** :- ಪಾಂಡವರ ಅಜ್ಞಾತವಾಸದ ಸಮಾಪ್ತಿಯ ನಂತರ ದ್ರುಪದರಾಜನು ಚೆನ್ನಾಗಿ ಮಂತ್ರಾಲೋಚನೆ ಮಾಡಿ ಶ್ರೀಕೃಷ್ಣನ ಅನುಮತಿಯನ್ನು ಪಡೆದು ತನ್ನ ಪುರೋಹಿತರನ್ನು ಧೃತರಾಷ್ಟ್ರನ ಹತ್ತಿರ ಸಂಧಾನಕ್ಕಾಗಿ ಕಳುಹಿಸಿದನು.

**ಸ ಗತ್ವಾ ಧೃತರಾಷ್ಟ್ರಂ ತಂ ಭೀಷ್ಮದ್ರೋಣಾದಿಭಿರ್ಯುತಮ್ ।**
**ಉವಾಚ ನ ವಿರೋಧಸ್ತ ಉತ್ಪಾದ್ಯೋ ಧರ್ಮಸೂನುನಾ ॥ ೨ ॥**

**ಅರ್ಥ** :- **ಸಃ** = ಆ ದ್ರುಪದನ ಪುರೋಹಿತನು, **ಗತ್ವಾ** = ಹಸ್ತಿನಾವತಿಗೆ ಹೋಗಿ, **ಭೀಷ್ಮದ್ರೋಣಾದಿಭಿಃ** = ಭೀಷ್ಮದ್ರೋಣರೇ ಮೊದಲಾದವರಿಂದ, **ಯುತಂ** = ಕೂಡಿದ, **ತಂ** = ಆ, **ಧೃತರಾಷ್ಟ್ರಂ** = ಧೃತರಾಷ್ಟ್ರನನ್ನು ಕುರಿತು, **ಉವಾಚ** = ಹೇಳಿದನು, **ಧರ್ಮಸೂನುನಾ (ಸಹ)** = ಧರ್ಮರಾಜನೊಂದಿಗೆ, **ವಿರೋಧಃ** = ವಿರೋಧವು, **ತೇ** = ನಿನ್ನಿಂದ, **ನ ಉತ್ಪಾದ್ಯಃ** = ಮಾಡಲ್ಪಡಬಾರದು.

**ತಾತ್ಪರ್ಯ** :- ದ್ರುಪದರಾಜನ ಪುರೋಹಿತನು ಹಸ್ತಿನಾವತಿಗೆ ಹೋಗಿ ಭೀಷ್ಮದ್ರೋಣ ಮೊದಲಾದ ಹಿರಿಯರ ಸಮ್ಮುಖದಲ್ಲಿ ಧೃತರಾಷ್ಟ್ರನಿಗೆ ''ನೀನು

ಪುತ್ರ ವ್ಯಾಮೋಹದಿಂದ ಧರ್ಮರಾಜನೊಡನೆ ವಿರೋಧ ಮಾಡಬೇಡ'' ಎಂದು ಹೇಳಿದನು.

**ಯಸ್ಯ ಭೀಮಾರ್ಜುನೌ ಯೌಧೌ ನೇತಾ ಯಸ್ಯ ಜನಾರ್ದನಃ ।**
**ಶ್ರುತಾಸ್ತೇ ಭೀಮನಿಹತಾ ಜರಾಸಂಧಾದಯೋಽಖಿಲಾಃ ॥ ೩ ॥**

**ಅರ್ಥ :-** **ಯಸ್ಯ** = ಯಾವ ಧರ್ಮರಾಜನಿಗೆ, **ಭೀಮಾರ್ಜುನೌ** = ಭೀಮ ಮತ್ತು ಅರ್ಜುನರು, **ಯೋಧೌ** = ಯೋಧರೋ, **ಯಸ್ಯ** = ಯಾವ ಧರ್ಮರಾಜನಿಗೆ, **ಜನಾರ್ದನಃ** = ಶ್ರೀಕೃಷ್ಣನು, **ನೇತಾ** = ಪ್ರೇರಕನಾಗಿದ್ದಾನೋ, **ತೇನ** = ಅಂಥ ಧರ್ಮರಾಜನೊಂದಿಗೆ (ವಿರೋಧ ಬೇಡ), **ತೇ** = ಆ ದುಷ್ಟರಾದ, **ಜರಾಸಂಧಾದಯಃ** = ಜರಾಸಂಧನೇ ಮೊದಲಾದ, **ಅಖಿಲಾಃ** = ಎಲ್ಲಾ ರಾಜರು, (**ಯಥಾ** = ಹೇಗೆ) **ಭೀಮನಿಹತಾಃ** = ಭೀಮನಿಂದ ಕೊಲ್ಲಲ್ಪಟ್ಟರೋ, (**ತಥಾ** = ಹಾಗೇ), **ಶ್ರುತಃ** = ಕೇಳಲ್ಪಟ್ಟಿದೆ.

**ತಾತ್ಪರ್ಯ :-** ವಿರೋಧ ಮಾಡಿದರೆ ನಿನಗೆ ತೊಂದರೆ ಎಂದು ಬೇರೆ ಬೇರೆ ನಿದರ್ಶ ಕೊಟ್ಟು ಉಪಪಾದನೆ ಮಾಡುತ್ತಿದ್ದಾನೆ. ಧರ್ಮರಾಜನಿಗೆ - ಭೀಮ ಮತ್ತು ಅರ್ಜುನರು ಸಮರ್ಥರಾದ ಯೋಧರಾಗಿದ್ದಾರೆ. ಸಾಕ್ಷಾತ್ ಶ್ರೀಕೃಷ್ಣನೇ ಅವರಿಗೆ ಮಾರ್ಗದರ್ಶಕನಾಗಿದ್ದಾನೆ. ಪ್ರಾಬಲರಾದ ಜರಾಸಂಧನೇ ಮೊದಲಾದ ರಾಜರನ್ನು ಭೀಮಸೇನ ಹೇಗೆ ಸಂಹಾರ ಮಾಡಿದ್ದಾನೆಂಬ ವಿಷಯವೂ ನಿನಗೆ ತಿಳಿದೇ ಇದೆ.

**ಯಥಾ ಚ ರುದ್ರವಚನಾದವಧ್ಯಾ ರಾಕ್ಷಸಾಧಿಪಾಃ ।**
**ತೀರ್ಥವಿಘ್ನಕರಾಃ ಸರ್ವತೀರ್ಥಾನ್ಯಾಚ್ಛಾದ್ಯ ಸಂಸ್ಥಿತಾಃ ॥ ೪ ॥**

**ತಿಸ್ರಃ ಕೋಟ್ಯೋ ಮಹಾವೀರ್ಯಾ ಭೀಮೇನೈವ ನಿಸೂದಿತಾಃ ।**
**ಭ್ಯಾಣಾಂ ಬ್ರಾಹ್ಮಣಾನಾಂ ಚ ಲೋಕಾನಾಂ ಚ ಹಿತೈಷಿಣಾ ॥ ೫ ॥**

**ತತೋ ಹಿ ಸರ್ವತೀರ್ಥಾನಿ ಗಮ್ಯಾನ್ಯಾಸನ್ ನೃಣಾಂ ಕ್ಷಿತೌ ।**
**ಯಥಾ ಜಟಾಸುರಃ ಪಾಪಃ ಶರ್ವಾಣೀವರಸಂಶ್ರಯಾತ್ ।**
**ಅವಧ್ಯೋ ವಿಪ್ರರೂಪೇಣ ವಂಚಯನ್ನೇವ ಪಾಂಡವಾನ್ ॥ ೬ ॥**

**ಅರ್ಥ** :- **ರುದ್ರವಚನಾತ್** = ರುದ್ರದೇವರ ವರದಿಂದ, **ಅವಧ್ಯಾಃ** = ಮರಣರಹಿತರಾದ, **ತೀರ್ಥವಿಘ್ನಕರಾಃ** = ತೀರ್ಥಗಳಲ್ಲಿ ವಿಘ್ನವನ್ನುಂಟು ಮಾಡುವ, **ಸರ್ವತೀರ್ಥಾನಿ** = ಎಲ್ಲಾ ತೀರ್ಥಗಳನ್ನು, **ಆಚ್ಛಾದ್ಯ** = ಸುತ್ತುವರಿದ, **ಸಸ್ಥಿತಾಃ** = ಇರುವ, **ತಿಸ್ರಕೋಟ್ಯಃ** = ಮೂರು ಕೋಟಿ ಸಂಖ್ಯಾತರಾದ, **ಮಹಾವೀರ್ಯಾಃ** = ಮಹಾಬಲಿಷ್ಠರಾದ, **ರಾಕ್ಷಸಾಧಿಪಾಃ** = ರಾಕ್ಷಸ ಶ್ರೇಷ್ಠರು, **ಭ್ರಾತೃಣಾಂ** = ಸಹೋದರರ, **ಬ್ರಾಹ್ಮಣಾನಾಂ** = ಬ್ರಾಹ್ಮಣರ, **ಚ** = ಮತ್ತು, **ಲೋಕಾನಾಂ** = ಜಗತ್ತಿನ, **ಹಿತೈಷಿಣಾ** = ಹಿತವನ್ನು ಬಯಸುವ, **ಭೀಮೇನ ಏವ** = ಭೀಮನಿಂದಲೇ, **ನಿಷೂದಿತಾಃ** = ಸಂಹರಿಸಲ್ಪಟ್ಟರು, **ತತಃ** = ಅನಂತರ, **ಕ್ಷಿತೌ** = ಭೂಮಿಯಲ್ಲಿ, **ಸರ್ವತೀರ್ಥಾನಿ** = ಎಲ್ಲಾ ತೀರ್ಥಗಳು, **ನೃಣಾಂ** = ಮನುಷ್ಯರಿಗೆ, **ಗಮ್ಯಾನಿ** = ಹೋಗಲು ಯೋಗ್ಯವಾದವುಗಳು, **ಯಥಾ** = ಹೇಗಾಗಬೇಕೋ, **ತಥಾ** = ಹಾಗೇ, **ಆಸನ್ ಹಿ** = ಆದವಷ್ಟೆ.

**ತಾತ್ಪರ್ಯ** :- ರುದ್ರದೇವರು ೩ಕೋಟಿ ರಾಕ್ಷಸರಿಗೆ ಅವಧ್ಯತ್ವ ವರವನ್ನು ಕೊಟ್ಟಿದ್ದರು. ಅದರ ಬಲದಿಂದ ಆ ರಾಕ್ಷಸರು ಎಲ್ಲಾ ತೀರ್ಥ ಕ್ಷೇತ್ರಗಳಲ್ಲಿ ವಿಘ್ನವನ್ನು ಉಂಟು ಮಾಡುತ್ತಾ ಅವುಗಳನ್ನು ಆಕ್ರಮಿಸಿದ್ದರು. ಅದರಿಂದ ಜನರಿಗೆ ಮತ್ತು ತನ್ನ ಸಹೋದರರಿಗೂ ತೊಂದರೆಯಾಗುತ್ತಿತ್ತು. ಎಲ್ಲರಿಗೂ ಹಿತವನ್ನು ಬಯಸಿ ಭೀಮಸೇನನೇ ಅವರೆಲ್ಲರನ್ನು ಸಂಹರಿಸಿದ. ಅದರಿಂದ ಈಗ ಭೂಮಿಯ ಎಲ್ಲಾ ಕ್ಷೇತ್ರಗಳೂ ಮನುಷ್ಯರಿಂದ ಹೋಗಲು ಯೋಗ್ಯವಾಗಿದೆ.

**ಜ್ಞಾತ್ವಾಽಪಿ ಭೀಮಸೇನೇನ ವಿಪ್ರರೂಪಸ್ಯ ನೋ ವಧಃ ।**
**ಯೋಗ್ಯ ಇತ್ಯಹತೋ ಭೀಮೇ ಮೃಗಯಾರ್ಥಂ ಗತೇ ಕ್ವಚಿತ್ ॥ ೭ ॥**

**ಅರ್ಥ** :- **ಪಾಪಃ** = ಪಾಪಿಯಾದ, **ಜರಾಸುರಃ** = ಜರಾ ಎಂಬ ಅಸುರನು, **ಶರ್ವಾಣೀವರ ಸಂಶ್ರಯಾತ್** = ಪಾರ್ವತಿಯ ವರ ಬಲದಿಂದ, **ಅವಧ್ಯಃ (ಸನ್)** = ಅವಧ್ಯನಾಗಿ, **ವಿಪ್ರರೂಪೇಣ** = ಬ್ರಾಹ್ಮಣರ ವೇಷದಿಂದ, **ಪಾಂಡವಾನ್** = ಪಾಂಡವರನ್ನು, **ವಂಚಯನ್ (ಏವ)** = ವಂಚಿಸುತ್ತಲೇ, **(ಆಸೀತ್** = ಇದ್ದನು)

**ತಾತ್ಪರ್ಯ** :- ಜಟಾ ಎಂಬ ಅಸುರ ಬದರಿಯಲ್ಲಿ ಬ್ರಾಹ್ಮಣವೇಶದಿಂದ ಪಾಂಡವರ ಗುಂಪನ್ನು ಸೇರಿ ಪಾಂಡವರನ್ನು ಮೋಸ ಮಾಡುತ್ತಲೇ ಇದ್ದ.

ಇವನು ಪಾರ್ವತಿಯಿಂದ ಅವಧ್ಯತ್ವ ವರವನ್ನು ಪಡೆದು ಆ ವರಬಲದ ಭಯರಹಿತನಾಗಿ ಮೋಸ ಮಾಡುತ್ತಿದ್ದ.

**ಯಮೌ ಯುಧಿಷ್ಠಿರಂ ಕೃಷ್ಣಾಂ ಚಾಽದಾಯ್ಯೈವ ಪರಾದ್ರವತ್ ।**
**ದೃಷ್ಟೋ ಭೀಮೇನ ತಾಂಸ್ತ್ಯಕ್ತ್ವಾ ಸಂಸಕ್ತಸ್ತೇನ ಸಂಗರೇ ॥ ೮ ॥**

**ನಿಪಾತ್ಯ ಭೂಮೌ ಪಾದೇನ ಸಂಚೂರ್ಣಿತಶಿರಾಸ್ತಮಃ ।**
**ಜಗಾಮ ಕಿಮು ತೇ ಪುತ್ರಾಃ ಶಕ್ಯಾ ಹಂತುಮಿತಿ ಸ್ಮ ಹ ॥ ೯ ॥**

**ಅರ್ಥ** :- **ಭೀಮಸೇನೇನ** = ಭೀಮಸೇನನಿಂದ, **ಜ್ಞಾತ್ವಾ ಅಪಿ** = ಬ್ರಾಹ್ಮಣ ವೇಷಧಾರಿ ಅಸುರರು ಎಂದು ತಿಳಿದರೂ, **ವಿಪ್ರರೂಪಸ್ಯ** = ಬ್ರಾಹ್ಮಣ ರೂಪದಲ್ಲಿರುವವನ, **ವಧಃ** = ಕೊಲ್ಲುವಿಕೆಯು, **ನ ಯೋಗ್ಯಃ** = ಯೋಗ್ಯವಲ್ಲ, **ಇತಿ** = ಈ ಕಾರಣದಿಂದ, **ಅಹತಃ** = ಕೊಲ್ಲಲ್ಪಡಲಿಲ್ಲ, **ಕ್ವಚಿತ್** = ಒಂದು ಕಡೆ, **ಭೀಮೇ** = ಭೀಮನು, **ಮೃಗಯಾರ್ಥಂ** = ಬೇಟೆಗಾಗಿ, **ಗತೇ (ಸತಿ)** = ಹೋಗುತ್ತಿರಲು, **ಯಮೌ** = ನಕಲು ಸಹದೇವರನ್ನು, **ಯುಧಿಷ್ಠಿರಂ** = ಧರ್ಮರಾಜನನ್ನು, **ಕೃಷ್ಣಾಂ** = ದ್ರೌಪದಿಯನ್ನು, **ಆದಾಯ ಏವ** = ಬಲಾತ್ಕಾರವಾಗಿ ಹೊತ್ತುಕೊಂಡೇ, **ಪರಾದ್ರವತ್** = ಪಲಾಯನ ಮಾಡಿದನು, **ಭೀಮೇನ** = ಭೀಮನಿಂದ, **ದೃಷ್ಟಃ** = ನೋಡಲ್ಪಟ್ಟ ಆ ಅಸುರನು, **ತಾನ್** = ಆ ಧರ್ಮಾದಿಗಳನ್ನು, **ತ್ಯಕ್ತ್ವಾ** = ಬಿಟ್ಟು, **ತೇನಃ** = ಆ ಭೀಮನೊಂದಿಗೆ, **ಸಂಗರೇ** = ಯುದ್ಧದಲ್ಲಿ, **ಸಂಸಕ್ತಃ** = (ಭಯದಿಂದ) ಆಸಕ್ತನಾದವನು, (**ಅಭೂತ್** = ಆದನು)

**ತಾತ್ಪರ್ಯ** :- ಭೀಮನು ತಿಳಿದಿದ್ದ ಇವನು ಮಾರುವೇಷದ ಅಸುರ ಎಂದು. ಆದರೂ ಬ್ರಾಹ್ಮಣೋನ ಹಂತವು ಎಂಬ ಮಾತಿನಂತೆ ಬ್ರಾಹ್ಮಣ ವೇಷಕ್ಕೆ ಗೌರವಕೊಟ್ಟು ಕೊಲ್ಲದೇ ಬಿಟ್ಟಿದ್ದ. ಒಮ್ಮೆ ಭೀಮನು ಬೇಟೆಗಾಗಿ ಒಂದು ಕಡೆ ಹೋದಾಗ ಸಮಯ ಸಾಧಕನಾದ ಅಸುರ ನಕುಲ ಸಹದೇವ ಧರ್ಮರಾಜ ಮತ್ತು ದ್ರೌಪದಿಯನ್ನು ಹೊತ್ತುಕೊಂಡು ಓಡಿದ. ಅಷ್ಟರಲ್ಲೇ ಭೀಮ ಅವನನ್ನು ನೋಡಿದ ಆಗ ಅಸುರ ಅವರೆಲ್ಲರನ್ನು ಬಿಟ್ಟು ಭೀಮನೊಡನೆ ಭಯದಿಂದಲೇ ಯುದ್ಧಕ್ಕೆ ನಿಂತ.

**ನಿವಾತಕವಚಾಶ್ಚೈವ ಹತಾಃ ಪಾರ್ಥೇನ ತೇ ಶ್ರುತಾಃ ॥ ೧೦ ॥**

**ಅರ್ಥ :- ಭೂಮೌ** = ಭೂಮಿಯಲ್ಲಿ, **ನಿಪಾತ್ಯ** = ಬೀಳಿಸಿ, **ಪಾದೇನ** = ಕಾಲಿನಿಂದ, **ಸಂಚೂರ್ಶಿತಾಶಿರಾಃ** = ಪುಡಿಯಾದ ತಲೆಯುಳ್ಳ ಆ ಜಟಾಸುರನು, **ತಮಃ** = ಅಂಧಂತಮಸ್ಸನ್ನು ಕುರಿತು, **ಜಗಾಮ** = ಹೋದನು, **ತೇ** = ಅಸುರನ, **ಪುತ್ರಾಃ** = ಮಕ್ಕಳಾದರೋ, **ಹಂತುಂ** = ಕೊಲ್ಲಲು, **ಶಕ್ಯಾಃ ಸ್ಮ ಇತಿ** = ನಿಶ್ಚಿತವಾಗಿಯೂ ಶಕ್ಯರೆಂದು, **ಕಿಮು ?** = ಏನು ಹೇಳಬೇಕು?, **ತೇ** = ಆ, **ನೀವಾತಕವಚಾಃ** = ನೀವಾತ ಕವಚರಾದರೋ, **ಪಾರ್ಥೇನ ಏವ** = ಅರ್ಜುನನಿಂದಲೇ, **ಹತಾಃ** = ಕೊಲ್ಲಲ್ಪಟ್ಟರು, **ಇತಿ** = ಹೀಗೆ, **ಶೃತಾಃ** = ಕೇಳಿರುವಿರಿ.

**ತಾತ್ಪರ್ಯ :-** ಭೀಮಸೇನ ಅವನನ್ನು ಭೂಮಿಯಲ್ಲಿ ಬೀಳಿಸಿ ತಲೆಯನ್ನು ಪುಡಿ ಪುಡಿ ಮಾಡಿದ. ವಸ್ತುತಸ್ತು ಹಿಂದೆ ಬ್ರಾಹ್ಮಣ ವೇಷದಲ್ಲಿ ಇದ್ದದ್ದರಿಂದ ಕೊಲ್ಲಲಿಲ್ಲ. ಆದರೆ ಈಗ ತಾನೇ ಯುದ್ಧಕ್ಕೆ ಬಂದಿದ್ದಾನೆ. ಮತ್ತು ರಾಕ್ಷಸ ವೇಷದಲ್ಲಿದ್ದಾನೆ. ಆದ್ದರಿಂದ ಅವರನ್ನು ಕೊಂದ. ಅವನು ಅಂಧತಮಸ್ಸಿಗೆ ಹೋದ. ಅವನನ್ನೆ ಕೊಂದಮೇಲೆ ಅವನ ಮಕ್ಕಳನ್ನು ಕೊಲ್ಲುವದಕ್ಕೆ ಭೀಮನಿಗೆ ನಿಶ್ಚಯವಾಗಿಯೂ ಸಾಧ್ಯವಾಗುತ್ತದೆ. ನೀವಾತ ಕವಚರನ್ನು ಅರ್ಜುನ ಸಂಹಾರ ಮಾಡಿದ. ಈ ವಿಷವನ್ನು ನೀವು ಕೇಳಿದ್ದೀರಿ ಎಂದು ಪುರೋಹಿತ ಧೃತರಾಷ್ಟನಿಗೆ ಹೇಳಿದ.

**ಜಾನಾಸಿ ಚ ಹರೇರ್ವೀರ್ಯಂ ಯಸ್ಯೇದಮಖಿಲಂ ವಶೇ ।**
**ಸಬ್ರಹ್ಮರುದ್ರಶಕ್ರಾದ್ಯಂ ಚೇತನಾಚೇತನಾತ್ಮಕಮ್ ॥ ೧೧ ॥**

**ಅರ್ಥ :- ಸಬ್ರಹ್ಮರುದ್ರಶತ್ರಾದ್ಯಂ** = ಬ್ರಹ್ಮ ರುದ್ರ ಇಂದ್ರ ಮೊದಲಾದವರಿಂದ ಸಹಿತವಾದ, **ಚೇತನಾಚೇತನಾತ್ಮಕಂ** = ಚೇತನಾಚೇತನಾತ್ಮಕವಾದ, **ಇದಂ ಅಖಿಲಂ** = ಈ ಎಲ್ಲಾ ಜಗತ್ತು, **ಯಸ್ಯ** = ಯಾರ, **ವಶೇ** = ವಶದಲ್ಲಿ (ಅಸ್ತಿ) ಇದೆಯೋ ಅಂತಹ, **ಹರೇಃ** = ಶ್ರೀಕೃಷ್ಣನ, **ವೀರ್ಯಂ ಚ** = ಶಕ್ತಿಯನ್ನಾದರೋ, **ಜಾನಾನಿ** = ನೀನು ತಿಳಿದಿರುವಿ.

**ತಾತ್ಪರ್ಯ :-** ಬ್ರಹ್ಮರುದ್ರಾದಿ ಸಕಲ ಚೇತನಾಚೇತನಾತ್ಮಕವಾದ ಸಕಲ ಜಗತ್ತೂ ಕೂಡ ಪರಮ್ಮಾನ ವಶದಲ್ಲಿ ಇದೆ. ಅಂತಹ ಶ್ರೀಕೃಷ್ಣನ ಶಕ್ತಿಯನ್ನು ನೀನು ತಿಳಿದವನಾಗಿದ್ದಿ.

**ತಸ್ಮಾದೇತ್ಯೈಃ ಪಾಲಿತಸ್ಯ ಧರ್ಮಜಸ್ಯ ಸ್ವಕಂ ವಸು ।**
**ದೀಯತಾಮಿತಿ ತೇನೋಕ್ತೋ ಧೃತರಾಷ್ಟ್ರೋ ನಚಾಕರೋತ್ ॥ ೧೨ ॥**

**ಅರ್ಥ :- ತಸ್ಮಾತ್** = ಆದ್ದರಿಂದ, **ಏತ್ಯೈಃ** = ಈ ಶ್ರೀಕೃಷ್ಣಭೀಮಾರ್ಜುನಿಂದ, **ಪಾಲಿತಸ್ಯ** = ರಕ್ಷಿತನಾದ, **ಧರ್ಮರಾಜಸ್ಯ** = ಧರ್ಮರಾಜನ, **ಸ್ವಕಂ ವಸು** = ದ್ಯೂತದಲ್ಲಿ ಅಪಹರಿಸಲ್ಪಟ್ಟ ಅವನ ಸಂಪತ್ತನ್ನು, **ದೀಯತಾಂ** = ಕೊಡಲ್ಪಡಲಿ, **ಇತಿ** = ಹೀಗೆ, **ತೇನ** = ಆ ಪುರೋಹಿತನಿಂದ, **ಉಕ್ತಃ** = ಹೇಳಲ್ಪಟ್ಟಿತು, **ಧೃತರಾಷ್ಟ್ರಃ** = ಧೃತರಾಷ್ಟ್ರನು, **ನ ಚ ಅಕರೋತ್** = ಮಾಡಲೇ ಇಲ್ಲ.

**ತಾತ್ಪರ್ಯ :-** ಹಿಂದೆ ಹೇಳಿದ ಎಲ್ಲ ಕಾರಣಗಳಿಂದ ನೀನು ಶ್ರೀಕೃಷ್ಣಭೀಮಾರ್ಜುನರಿಂದ ರಕ್ಷಿತರಾದ ಧರ್ಮರಾಜನ ಯಾವ ಮೃತದಲ್ಲಿ ಅಪಹರಿಸಲ್ಪಟ್ಟ ಸಂಪತ್ತಿದೆಯೊ ಅದನ್ನು ಅವನಿಗೆ ಕೊಡು ಎಂದು ದ್ರುಪಾನಾನ ಪುರೋಹಿತ ಹೇಳಿದರೂ ಧೃತರಾಷ್ಟ್ರ ಮಾತ್ರ ಸಂಪತ್ತನ್ನು ಕೊಡಲೇ ಇಲ್ಲ.

**ತತಃ ಸಹೈವ ಯದುಭಿಃ ಕೃಷ್ಣಂ ದ್ವಾರವತೀಂ ಗತಮ್ ।**
**ಯುದ್ಧಸಾಹಾಯ್ಯಮಿಚ್ಛಂತೌ ಧಾರ್ತರಾಷ್ಟ್ರಧನಂಜಯೌ ।**
**ಯುಗಪದ್ ಯಯತುಸ್ತತ್ರ ವೇಗೇನಾಜಯದರ್ಜುನಮ್ ॥ ೧೩ ॥**

**ಅರ್ಥ :- ತತಃ** = ಅನಂತರ, **ಯದುಭಿಃ ಸಹೈವ** = ಯದುಗಳ ಸಹಿತವಾಗಿಯೇ, **ದ್ವಾರಾವತೀಂ** = ದ್ವಾರಕಾ ಪಟ್ಟಣವನ್ನು ಕುರಿತು, **ಗತಂ** = ಹೋದ, **ಕೃಷ್ಣಂ** = ಶ್ರೀಕೃಷ್ಣನನ್ನು, **ಯುದ್ಧಸಹಾಯಮಿಚ್ಛಂತೌ** = ಯುದ್ಧಕ್ಕೆ ಸಹಾಯವನ್ನು ಇಚ್ಛಿಸುವ, **ಧಾರ್ತರಾಷ್ಟ್ರಧನಂಜಯೌ** = ದುರ್ಯೋಧನ ಮತ್ತು ಅರ್ಜುನ ಇಬ್ಬರು, **ಯುಗಪತ್** = ಒಟ್ಟಿಗೆ, **ಯಯತುಃ** = ಹೊರಟರು, **ವೇಗೇನ** = ವೇಗದಿಂದ, **ಅರ್ಜುನಂ** = ಅರ್ಜುನನನ್ನು, **ಅಜಯತ್** = ಜಯಿಸಿದನು.

**ತಾತ್ಪರ್ಯ :-** ಸಂಧಾನ ಮುರಿದು ಬಿದ್ದ ಮೇಲೆ ಶ್ರೀಕೃಷ್ಣ ಯಾದವರಿಂದ ಸಹಿತನಾಗಿ ದ್ವಾರಕಾಪಟ್ಟಣಕ್ಕೆ ಹೋದನು. ಯುದ್ಧ ಅನಿವಾರ್ಯ ಎಂದಾದ ಮೇಲೆ ಯುದ್ಧದಲ್ಲಿ ಸಹಾಯವನ್ನು ಬಯಸಿ ದುರ್ಯೋಧನ ಮತ್ತು ಅರ್ಜುನ ಇಬ್ಬರೂ ಒಟ್ಟಿಗೆ ಕೃಷ್ಣನ ಹತ್ತಿರ ಹೊರಟರು.

ಆಗ ದುರ್ಯೋಧನ ವೇಗದಿಂದ ಅರ್ಜುನನನ್ನು ಹಿಂದಿಕ್ಕಿ ಮೊದಲು ಹೋದನು.

**ದುರ್ಯೋಧನಃ ಶಿರಸ್ಥಾನ ಆಸೀನೋಽಭೂದ್ಧರೇಸ್ತದಾ ।**
**ದರ್ಪಾನ್ನಾಹಂ ರಾಜರಾಜ ಉಪಾಸ್ಯೇ ಪಾದಯೋರಿತಿ ॥ ೧೪ ॥**

**ಅರ್ಥ** :- **ದುರ್ಯೋಧನಃ** = ದುರ್ಯೋಧನನು, **ತದಾ** = ದ್ವಾರಕೆಗೆ ಹೋದ ಕಾಲಕ್ಕೆ, **ಅಹಂ** = ನಾನು, **ರಾಜಾಧಿರಾಜಃ** = ರಾಜಾಧಿರಾಜನು, **ಪಾದಯೋಃ** = ಪಾದಗಳಲ್ಲಿ, **ನ ಉಪಾಸ್ಯೇ** = ಇರಲಾರೆ, **ಇತಿ** = ಎಂದು, **ದರ್ಪಾತ್** = ದರ್ಪದಿಂದ (ಅಹಂಕಾರದಿಂದ), **ಹರೇಃ** = ಶ್ರೀಕೃಷ್ಣನ, **ಶಿರಸ್ಥಾನ** = ತಲೆಯ ಭಾಗದಲ್ಲಿ, **ಆಸೀನಃ ಅಭೂತ್** = ಕುಳಿತವನಾದರು.

**ತಾತ್ಪರ್ಯ** :- ದುರ್ಯೋಧನನು ಕೃಷ್ಣನ ಭೇಟಿಗೆಂದು ದ್ವಾರಕೆಗೆ ಹೋದನು. ಅಲ್ಲಿ ಕುಳಿತುಕೊಳ್ಳಲು ೨ ಕಡೆ ಅವಕಾಶವಿತ್ತು. ಒಂದು ಕೃಷ್ಣನ ತಲೆಯ ಹತ್ತಿರ. ಇನ್ನೊಂದು ಪಾದಗಳ ಹತ್ತಿರ. ಭಗವದ್ವೇಷಿಯಾದ ದುರ್ಯೋಧನನು ''ನಾನು ರಾಜಾಧಿರಾಜ, ನಾನು ಕೃಷ್ಣನ ಪಾದಗಳ ಸನಿಹದಲ್ಲಿ ಕುಳಿತುಕೊಳ್ಳಲು ಸಾಧ್ಯವೇ ಇಲ್ಲ'' ಎಂಬ ದುರಹಂಕಾರದಿಂದ ಶ್ರೀಕೃಷ್ಣನ ತಲೆಯ ಹತ್ತಿರ ಕುಳಿತನು.

**ತಯೋರಾಗಮನಂ ಪೂರ್ವಂ ಜ್ಞಾತ್ವೈವ ಹಿ ಹರಿಃ ಪ್ರಭುಃ ।**
**ಅಸುಪ್ತಃ ಸುಪ್ತವಚ್ಛಿಶ್ಯೇ ತತ್ರಾತಿಷ್ಠದ್ ಧನಂಜಯಃ ॥ ೧೫ ॥**

**ಪ್ರಣಮ್ಯ ಪಾದಯೋಃ ಪ್ರಹ್ವೋ ಭಕ್ತ್ಯುದ್ರೇಕಾತ್ ಕೃತಾಂಜಲಿಃ ॥ ೧೬ ॥**

**ಅರ್ಥ** :- **ತಯೋಃ** = ಅವರಿಬ್ಬರ, **ಆಗಮನಂ** = ಬರುವಿಕೆಯನ್ನು, **ಜ್ಞಾತ್ವಾ ಏವ** = ತಿಳಿದೇ, **ಪ್ರಭುಃ** = ಸಮರ್ಥನಾದ, **ಹರಿಃ** = ಶ್ರೀಕೃಷ್ಣನು, **ಅಸುಪ್ತಃ** = ನಿದ್ರೆಯಿಲ್ಲದವನಾದರೂ, **ಸುಪ್ತವತ್** = ಮಲಗಿದವನಂತೆ, **ಶಿಶ್ಯೇ** = ಮಲಗಿದ್ದನು, **ಧನಂಜಯಃ** = ಅರ್ಜುನನು, **ಪಾದಯೋಃ** = ಪಾದಗಳಲ್ಲಿ, **ಪ್ರಾಣಮ್ಯ** = ನಮಸ್ಕರಿಸಿ, **ಭಕ್ತ್ಯುದ್ರೇಕಾತ್** = ಭಕ್ತ್ಯುದ್ರೇಕದಿಂದ, **ಕೃತಾಂಜಲಿಃ (ಸನ್)** = ಕೈ ಮುಗಿದವನಾಗಿ, **ಪ್ರಹ್ವಃ** = ನಮ್ರನಾಗಿ, **ತತ್ರ** = ಶ್ರೀಕೃಷ್ಣನ ಪಾದಕಮಲದಲ್ಲಿ, **ಅತಿಷ್ಠತ್** = ನಿಂತುಕೊಂಡನು.

**ತಾತ್ಪರ್ಯ** :- ದುರ್ಯೋಧನಾರ್ಜುನರು ಬರುವ ವಿಷಯ ಶ್ರೀಕೃಷ್ಣನು ಮೊದಲೇ ತಿಳಿದಿದ್ದ. ಸರ್ವಸಮರ್ಥನಾದ ಶ್ರೀಕೃಷ್ಣನಿಗೆ ನಿದ್ರೆ ಎನ್ನುವುದೇ ಇಲ್ಲ. ಆದರೂ ಮಲಗಿದವನಂತೆ ನಿದ್ರೆಯ ನಟನೆಯನ್ನು ಮಾಡಿದ. ಅಲ್ಲಿಗೆ ಬಂದ ಅರ್ಜುನ ಅವನ ಪಾದಗಳಿಗೆ ನಮಸ್ಕರಿಸಿ ಭಕ್ತ್ಯುದ್ರೇಕದಿಂದ ನಮಸ್ಕರಿಸಿ ಬಾಗಿದವನಾಗಿ ಕಾಲುಗಳ ಹತ್ತಿರ ನಿಂತುಕೊಂಡನು.

**ತಮೈಕ್ಷತ್ ಪ್ರಥಮಂ ದೇವೋ ಜಾನನ್ನಪಿ ಸುಯೋಧನಮ್ ॥ ೧೭ ॥**

**ಸ್ವಾಗತಂ ಫಲ್ಗುನೇತ್ಯುಕ್ತೇ ಪೂರ್ವಮಾಗಾಮಹಂ ತ್ವಿತಿ ।**
**ಆಹ ದುರ್ಯೋಧನಸ್ತಂ ಚ ಸ್ವಾಗತೇನಾಭ್ಯಪೂಜಯತ್ ॥ ೧೮ ॥**

**ಅರ್ಥ** :- **ಸುಯೋಧನಂ** = ದುರ್ಯೋಧನನನ್ನು, **ಜಾನನ್ ಅಪಿ** = ಮೊದಲು ಬಂದವನನ್ನಾಗಿ ತಿಳಿದರೂ, **ದೇವಃ** = ಕ್ರೀಡಾದಿಗುಣ ವಿಶಿಷ್ಟನಾದ ಶ್ರೀಕೃಷ್ಣನು, **ತಂ** = ಅರ್ಜುನನು, **ಐಕ್ಷತ** = ನೋಡಿದನು, **ಫಲ್ಗುಣ** = ಹೇ ಅರ್ಜುನ, (**ತೇ** = ನಿನಗೆ), **ಸ್ವಾಗತಂ** = ಸ್ವಾಗತವು, **ಇತಿ** = ಹೀಗೆ, **ಉಕ್ತೇ** (**ಸತಿ**) = ಹೇಳುತ್ತಿರಲು, **ದುರ್ಯೋಧನಃ** = ದುರ್ಯೋಧನನು, **ಪೂರ್ವಂ** = ಮೊದಲು, **ಅಹಂ** = ನಾನು, **ಅಗಾಂ** = ಬಂದೆನು, **ಇತಿ** = ಹೀಗೆ, **ಆಹ** = ಹೇಳಿದನು, **ತಂ** = ಅವನನ್ನು, **ಸ್ವಾಗತೇನ** = ಸ್ವಾಗತ ಮಾತಿನಿಂದ, **ಅಭ್ಯಪೂಜಯತ್** = ಸತ್ಕರಿಸಿದನು.

**ತಾತ್ಪರ್ಯ** :- ಅರ್ಜುನನಿಗಿಂತಲೂ ದುರ್ಯೋಧನನು ಮೊದಲು ಬಂದಿದ್ದಾನೆ ಎಂದು ಶ್ರೀಕೃಷ್ಣನು ತಿಳಿದಿದ್ದರೂ ಅರ್ಜುನನನ್ನು ಮೊದಲು ನೋಡಿ ''ಅರ್ಜುನ ನಿನಗೆ ಸ್ವಾಗತ'' ಎಂದು ಮಾತಿನ ಮೂಲಕ ಅತಿಥಿ ಸತ್ಕಾರವನ್ನು ಮಾಡುತ್ತಿರಲು, ನನಗೆ ಮೊದಲು ಸ್ವಾಗತ ಸತ್ಕಾರ ಮಾಡಬೇಕೆಂಬ ಅಭಿಪ್ರಾಯದಿಂದ ದುರ್ಯೋಧನನು ''ನಾನು ಮೊದಲು ಬಂದದ್ದು'' ಎಂದನು. ಅವನನ್ನು ಸ್ವಾಗತ ಮಾತಿನಿಂದ ಸತ್ಕರಿಸಿದನು.

**ತಯೋರಾಗಮನೇ ಹೇತುಂ ಶ್ರುತ್ವಾ ಪ್ರಾಹ ಜನಾರ್ದನಃ ।**
**ಏಕಃ ಪೂರ್ವಾಗತೋಽತ್ರಾನ್ಯಃ ಪೂರ್ವದೃಷ್ಟೋ ಮಯಾ ಯತಃ ॥ ೧೯ ॥**

**ಸಮಂ ಕರಿಷ್ಯೇ ಯುವಯೋರೇಕತ್ರಾಹಂ ನಿರಾಯುಧಃ ।**
**ಅನ್ಯತ್ರ ದಶಲಕ್ಷಂ ಮೇ ಪುತ್ರಾಃ ಶೂರಾಃ ಪದಾತಯಃ ॥ ೨೦ ॥**

**ಅರ್ಥ** :- **ತಯೋಃ** = ಅವರಿಬ್ಬರ, **ಆಗಮನೆ** = ಬರುವಿಕೆಯಲ್ಲಿ, **ಹೇತುಂ** = ಕಾರಣವನ್ನು, **ಶ್ರುತ್ವಾ** = ಕೇಳಿ, **ಜನಾರ್ದನಃ** = ಶ್ರೀಕೃಷ್ಣನು, **ಪ್ರಾಹ** = ಹೇಳಿದನು, **ಯತಃ** = ಯಾವ ಕಾರಣದಿಂದ, **ಅತ್ರ** = ಇಲ್ಲಿಗೆ, **ಏಕಃ** = ಒಬ್ಬನು, **ಪೂರ್ವಾಗತಃ** = ಮೊದಲು ಬಂದವನು, **ಅನ್ಯಃ** = ಇನ್ನೊಬ್ಬನು, **ಮಯಾ** = ನನ್ನಿಂದ, **ಪೂರ್ವದೃಷ್ಟಃ** = ಮೊದಲು ನೋಡಲ್ಪಟ್ಟವನು, (**ಅತಃ** = ಆದ್ದರಿಂದ), **ಯುವಯೋಃ** = ನಿಮ್ಮಿಬ್ಬರಿಗೆ, **ಸಮಂ** = ಸಮವಾಗಿ, **ಕರಿಷ್ಯೇ** = ಸಹಾಯವನ್ನು ಮಾಡುತ್ತೇನೆ, **ಏಕತ್ರ** = ಒಂದು ಕಡೆಗೆ, **ನಿರಾಯುಧಃ** = ಆಯುಧ ರಹಿತನಾದ, **ಅಹಂ** = ನಾನು, (**ಭವಿಷ್ಯಾಮಿ** = ಇರುತ್ತೇನೆ), **ಅನ್ಯತ್ರ** = ಬೇರೆಕಡೆ, **ದಶಲಕ್ಷಂ** = ಹತ್ತು ಲಕ್ಷ ಸಂಖ್ಯಾತರಾದ, **ಶೂರಾಃ** = ಶೂರರಾದ, **ಮೇ** = ನನ್ನ, **ಪುತ್ರಾಃ** = ಮಕ್ಕಳು, **ಪದಾತಯಃ** (**ಭೂತ್ವಾ**) = ಕಾಲಾಳುಗಳು (ಸೈನಿಕರು) ಆಗಿ, (**ಭವಿಷ್ಯತಿ** = ಇರುತ್ತಾರೆ), **ಇತಿ** = ಎಂದು.

**ತಾತ್ಪರ್ಯ** :- ಅವರಿಬ್ಬರು ಬಂದಿರುವ ಕಾರಣವನ್ನು ಅವರ ಮುಖದಿಂದಲೇ ಕೇಳಿ ಶ್ರೀಕೃಷ್ಣನು ಅವರಿಬ್ಬರಿಗೂ ಹೇಳಿದ "ನಿವಿಬ್ಬರಲ್ಲಿ ಒಬ್ಬರು ನನ್ನ ಭೇಟಿಗೆ ಮೊದಲು ಬಂದಿದ್ದಾರೆ. ಇನ್ನೊಬ್ಬರನ್ನು ನಾನು ಮೊದಲು ನೋಡಿದ್ದೇನೆ. ಆದ್ದರಿಂದ ಇಬ್ಬರಿಗೂ ಸಮಾನವಾಗಿ ಸಹಾಯವನ್ನು ಮಾಡುತ್ತೇನೆ. ಹೇಗೆಂದರೆ ನಿರಾಯುಧನಾಗಿ ನಾನು ಒಂದು ಕಡೆ ಇರುತ್ತೇನೆ. ಸಶಸ್ತ್ರಧಾರಿಗಳಾದ ನನ್ನ ಶೂರರಾದ ಹತ್ತು ಲಕ್ಷ ಸಂಖ್ಯಾತರಾದ ನನ್ನ ಮಕ್ಕಳು ಒಂದು ಕಡೆ ಇರುತ್ತಾರೆ ಎಂದು.

**ಇತ್ಯುಕ್ತೇ ಫಲ್ಗುನಃ ಕೃಷ್ಣಂ ವವ್ರೇ ತದ್ಭಕ್ತಿಮಾನ್ ಯತಃ ।**
**ಅನ್ಯಸ್ತತ್ರಾಭಕ್ತಿಮತ್ತ್ವಾದ್ ವವ್ರೇ ಗೋಪಾನ್ ಪ್ರಯುಧ್ಯತಃ ॥ ೨೧ ॥**

**ಅರ್ಥ** :- **ಇತಿ** = ಈ ಪ್ರಕಾರವಾಗಿ ಶ್ರೀಕೃಷ್ಣನು, **ಉಕ್ತೇ** (**ಸತಿ**) = ಹೇಳುತ್ತಿರಲು, **ಫಲ್ಗುಣಃ** = ಅರ್ಜುನನು, **ಶ್ರೀಕೃಷ್ಣಂ** = ಶ್ರೀಕೃಷ್ಣನನ್ನು, **ವವ್ರೇ** = ಸ್ವೀಕರಿಸಿದನು, **ಯತಃ** = ಏಕೆಂದರೆ, **ತದ್ಭಕ್ತಿಮಾನ್** = ಅವನಲ್ಲಿ ಭಕ್ತಿಯುಳ್ಳವನು, **ಅಭಕ್ತಿಮಾನ್** = ಭಕ್ತಿರಹಿತನಾದ, **ಅನ್ಯಸ್ತು** = ದುರ್ಯೋಧನನಾದರೋ, **ಪ್ರಯುಧ್ಯತಃ** = ಯೋಧರಾದ, **ಗೋಪಾನ್** = ಗೋಪಾಲಕರನ್ನು, **ವವ್ರೇ** = ಸ್ವೀಕಾರಮಾಡಿದನು.

ತಾತ್ಪರ್ಯ :- ಹೀಗೆ ಎರಡು ರೀತಿಯಾದ ಸಹಾಯದ ಪ್ರಕಾರವನ್ನು ತಿಳಿಸಿದಾಗ ಕೂಡಲೇ ಅರ್ಜುನ ಕೃಷ್ಣನಲ್ಲಿ ಭಕ್ತಿಯುಳ್ಳವನಾದ್ದರಿಂದ ಕೃಷ್ಣನನ್ನು ಸ್ವೀಕರಿಸಿದ. ಭಕ್ತನಲ್ಲದ ದುರ್ಯೋಧನ ಯೋದ್ಧರಾದ ಗೋಪಾಲಕರನ್ನು ಆರಿಸಿಕೊಂಡ.

**ಪಾರ್ಥಾನಾಮೇವ ಸಾಹಾಯ್ಯಂ ಕರಿಷ್ಯನ್ನಪಿ ಕೇಶವಃ ।**
**ತಸ್ಯಾಭಕ್ತಿಂ ದರ್ಶಯಿತುಂ ಚಕ್ರೇ ಸಮವದೀಶ್ವರಃ ॥ ೨೨ ॥**

**ಅರ್ಥ** :- **ಕೇಶವಃ** = ಶ್ರೀಕೃಷ್ಣನು, **ಪಾಂಡವಾನಾಂ ಏವ** = ಪಾಂಡವರಿಗೆ ಮಾತ್ರ, **ಸಾಹಾಯ್ಯಂ** = ಸಹಾಯವನ್ನು, **ಕರಿಷ್ಯನ್ ಅಪಿ** = ಮಾಡುವವನಾದರೂ ಕೂಡ, **ತಸ್ಯ** = ಆ ದುರ್ಯೋಧನನ, **ಅಭಕ್ತಿಂ** = ಭಕ್ತ್ಯಭಾವವನ್ನು, **ದರ್ಶಯಿತುಂ** = ತೋರಿಸಲು, **ಈಶ್ವರಃ** = ಸಮರ್ಥನಾದ ಶ್ರೀಕೃಷ್ಣನು, **ಸಮವತ್** = ಸಮಾನವೆಂಬಂತೆ, **ಚಕ್ರೇ** = ಮಾಡಿದನು.

ತಾತ್ಪರ್ಯ :- ಶ್ರೀಕೃಷ್ಣನು ವಾಸ್ತವಿಕವಾಗಿ ಪಾಂಡವರಿಗೆ ಮಾತ್ರವೇ ಸಹಾಯವನ್ನು ಮಾಡುವವ. ಆದರೂ ದುರ್ಯೋಧನನಿಗೆ ಭಕ್ತಿಯು ಇಲ್ಲವೆಂದು ಲೋಕಕ್ಕೆ ತೋರಿಸುವುದಕ್ಕಾಗಿ ಸಮಾನವಾದ ಸಹಾಯ ಮಾಡುತ್ತೇನೆಂದು ಹೇಳಿದ. ಆದರೆ ವಾಸ್ತವಿಕವಾಗಿ ಸಮಾನತೆಯ ನಾಟಕವನ್ನು ಮಾಡಿದ್ದಾನೆ. ಏಕೆಂದರೆ ಕೃಷ್ಣ ಮತ್ತು ನಾರಾಯಣೀ ಸೈನ್ಯ ಸಮಾನವಾಗಲು ಸಾಧ್ಯವೇ ಇಲ್ಲ.

**ತತಃ ಪಾರ್ಥೇನ ಸಹಿತಃ ಪಾಂಡವಾನ್ ಕೇಶವೋ ಯಯೌ ।**
**ದುರ್ಯೋಧನೋ ಯಯೌ ರಾಮಂ ಸ ಭಯಾತ್ ಕೇಶವಸ್ಯ ಚ ।**
**ನ ಸಾಹಾಯ್ಯಂ ಕರೋಮೀತಿ ಪ್ರಾಹ ತತ್ಸ್ನೇಹವಾನಪಿ ॥ ೨೩ ॥**

**ಅರ್ಥ** :- **ತತಃ** = ಅನಂತರ, **ಪಾರ್ಥೇನ** = ಅರ್ಜುನನಿಂದ, **ಸಹಿತಃ** = ಕೂಡಿದ, **ಕೇಶವಃ** = ಶ್ರೀಕೃಷ್ಣನು, **ಪಾಂಡವಾನ್** = ಪಾಂಡವರನ್ನು ಕುರಿತು, **ಯಯೌ** = ಹೋದನು, **ದುರ್ಯೋಧನಃ** = ದುರ್ಯೋಧನನು, **ರಾಮಂ** = ಬಲರಾಮನನ್ನು ಕುರಿತು, **ಯಯೌ** = ಹೋದನು, **ಸಃ** = ಆ ಬಲರಾಮನು, **ಕೇಶವಸ್ಯ** = ಶ್ರೀಕೃಷ್ಣನ, **ಭಯಾತ್ ಚ** = ಭಯದಿಂದಲೇ, **ತತ್ ಸ್ನೇಹವಾನ್ ಅಪಿ** = ಆ ದುರ್ಯೋಧನನಲ್ಲಿ ಸ್ನೇಹವುಳ್ಳವನಾದರೂ,

**ಸಹಾಯ್ಯಂ** = ಸಹಾಯವನ್ನು, **ನ ಕರೋಮಿ ಇತಿ** = ಮಾಡುವದಿಲ್ಲವೆಂದು, **ಪ್ರಾಹ** = ಹೇಳಿದನು.

**ತಾತ್ಪರ್ಯ** :- ದುರ್ಯೋಧನ ಮತ್ತು ಅರ್ಜುನರು ತಮಗೆ ಬೇಕಾದ ಸಹಾಯವನ್ನು ಪಡೆದಾದ ಮೇಲೆ ಶ್ರೀಕೃಷ್ಣನು ಅರ್ಜುನನಿಂದ ಕೂಡಿಕೊಂಡು ಧರ್ಮರಾಜಾದಿಗಳ ಬಳಿ ತೆರಳಿದ. ದುರ್ಯೋಧನ ಬಲರಾಮನ ಬಳಿ ತೆರಳಿದ. ಸಹಾಯಾಪೇಕ್ಷಿತನಾದ ದುರ್ಯೋಧನನಿಗೆ ಬಲರಾಮ ಸಹಾಯ ಮಾಡಲಿಲ್ಲ. ವಾಸ್ತವಿಕವಾಗಿ ದುರ್ಯೋಧನನಲ್ಲಿ ಸ್ನೇಹವಿದ್ದರೂ ಶ್ರೀಕೃಷ್ಣನ ಸ್ನೇಹ ತಪ್ಪುವದೆಂಬ ಭಯದಿಂದ ಅವನಿಗೆ ಸಹಾಯ ಮಾಡುವದಿಲ್ಲವೆಂದು ಹೇಳಿದ.

**ಉಪಪ್ಲಾವ್ಯೇ ಸಹಾಯಾಂ ಹಿ ತತ್ಪಕ್ಷೀಯಂ ವಚೋ ಬ್ರುವನ್ ।**
**ನಿರಾಕೃತಃ ಸಾತ್ಯಕಿನಾ ಸಮಕ್ಷಂ ಕೇಶವಸ್ಯ ಚ ॥ ೨೪ ॥**

**ಅರ್ಥ** :- **ಉಪಪ್ಲಾವ್ಯೇ** = ಉಪಪ್ಲಾವ್ಯನಗರದಲ್ಲಿ ನಡೆದ, **ಸಭಾಯಾಂ** = ಸಭೆಯಲ್ಲಿ (ಬಲರಾಮನು), **ತತ್ಪಕ್ಷೀಯಂ** = ದುರ್ಯೋಧನನ ಪಕ್ಷಾನುಸಾರಿಯಾದ, **ವಚಃ** = ಮಾತನ್ನು, **ಬ್ರುವನ್** = ಹೇಳಿದನು, **ಕೇಶವಸ್ಯ** = ಶ್ರೀಕೃಷ್ಣನ, **ಸಮಕ್ಷಂ** = ಸಮ್ಮುಖದಲ್ಲಿ, **ಸಾತ್ಯಕಿನಾ ಚ** = ಸಾತ್ಯಕಿಯಿಂದಲೇ, **ನಿರಾಕೃತಃ** = ನಿರಾಕರಿಸಲ್ಪಟ್ಟಿತು.

**ತಾತ್ಪರ್ಯ** :- ಉಪಪ್ಲಾವ್ಯ ನಗರದಲ್ಲಿ ನಡೆದ ಸಭಯಲ್ಲಿ ಬಲರಾಮನು ದುರ್ಯೋಧನನ ಪಕ್ಷವನ್ನು ವಹಿಸಿ ಮಾತನಾಡಿದ. ಆಗ ಸಾತ್ಯಕೀಯು ಶ್ರೀಕೃಷ್ಣನ ಸಮ್ಮುಖದಲ್ಲಿಯೇ ಅವನ ವಾದವನ್ನು ನಿರಾಕರಿಸಿದ.

**ತತೋ ದುರ್ಯೋಧನಂ ನಾಯಾತ್ ಸ ಚ ಹಾರ್ದಿಕ್ಯಸಂಯುತಃ ।**
**ಜಗಾಮ ಹಸ್ತಿನಪುರಮಕ್ಷೋಹಿಣ್ಯೋ ದಶಾಭವನ್ ।**
**ಏಕಾ ಚ ಧಾರ್ತರಾಷ್ಟ್ರಸ್ಯ ನಾನಾದೇಶ್ಯೈರ್ನೃಪೈರ್ಯುತಾಃ ॥ ೨೫ ॥**

**ಅರ್ಥ** :- **ತತಃ** = ಅನಂತರ ಬಲರಾಮನು, **ದುರ್ಯೋಧನಂ** = ದುರ್ಯೋಧನನನ್ನು, **ನ ಆಯಾತ್** = ಸೇರಲಿಲ್ಲ, **ಸ ಚ** = ಆ ದುರ್ಯೋಧನನಾದರೋ, **ಹಾರ್ದಿಕ್ಯಸಂಯುತಃ** = ಸಾತ್ಯಕಿಯಿಂದ

ಕೂಡಿದವನಾಗಿ, **ಹಸ್ತಿನಪುರಂ** = ಹಸ್ತಿನಾವತಿಯನ್ನು ಕುರಿತು, **ಜಗಾಮ** = ಹೋದನು, **ಧಾರ್ತರಾಷ್ಟ್ರಸ್ಯ** = ದುರ್ಯೋಧನನಿಗೆ, **ನಾನಾದೇಶ್ಯೈಃ** = ಬೇರೆ ಬೇರೆ ದೇಶದವರಾದ, **ನೃಪೈಃ** = ರಾಜರಿಂದ, **ಯುತಾಃ** = ಕೂಡಿದ, **ಅಕ್ಷೌಹಿಣ್ಯಃ** = ಅಕ್ಷೌಹಿಣಿ ಸೇನೆಗಳು, **ಏಕಾದಶ ಚ** = ಹನ್ನೊಂದು ಸಂಖ್ಯಾಕವಾದದ್ದು, **ಅಭವನ್** = ಆದವು.

**ತಾತ್ಪರ್ಯ** :- ಸಭೆಯ ನಂತರ ಬಲರಾಮನು ದುರ್ಯೋಧನನ ಪಕ್ಷವನ್ನು ಸೇರಲಿಲ್ಲ. ದುರ್ಯೋಧನ ಸಾತ್ಯಕಿಯಿಂದ ಕೂಡಿದವನಾಗಿ ಹಸ್ತಿನಾವತಿಗೆ ಪ್ರಯಾಣ ಬೆಳೆಸಿದ. ನಾನಾ ದೇಶದ ರಾಜರು ಸೇರಿ ದುರ್ಯೋಧನನಿಗೆ ಒಟ್ಟು ೧೧ ಅಕ್ಷೋಹಿಣಿ ಸೇನೆಯು ಸಂಗ್ರಹವಾಯಿತು.

ಒಂದು ಅಕ್ಷೋಹಿಯಿ ಎಂದರೆ - ೨೧೮೭೦ ರಥಗಳು, ೨೧೮೭೦ ಆನೆಗಳು, ೬೫೬೧೦ ಕುದುರೆಗಳು, ೧೦೯೩೫೦ ಕಾಲಾಳುಗಳು.

**ಸಪ್ತ ಪಾಂಡುಸುತಾನಾಂ ಚ ಮಾತ್ಸ್ಯದ್ರುಪದಕೇಕಯೈಃ ।**
**ಧೃಷ್ಟಕೇತುಜರಾಸಂಧಸುತಕಾಶೀನೃಪೈರ್ಯುತಾಃ ॥ ೨೬ ॥**

**ಪುರುಜಿತ್ ಕುಂತಿಭೋಜಶ್ಚ ಚೇಕಿತಾನಶ್ಚ ಸಾತ್ಯಕಿಃ ।**
**ಪಾಂಡವಾನ್ ಸೇನಯಾ ಯುಕ್ತಾಃ ಸಮೀಯುರ್ದೇವಪಕ್ಷಿಣಃ ॥ ೨೭ ॥**

**ಅರ್ಥ** :- **ಪಾಂಡುಸುತಾನಾಂ ಚ** = ಪಾಂಡವರಿಗಾದರೋ, **ಮಾತ್ಸ್ಯದ್ರುಪದಕೇಕಯೈಃ** = ಮಾತ್ಸ್ಯ, ದ್ರುಪದ, ಕೇತಯ ರಾಜರುಗಳಿಂದ, **ಧೃಷ್ಟಕೇತುಜರಾಸಂಧಸುತಕಾಶಿನೃಪೈಃ** = ಧೃಷ್ಟಕೇತು, ಜರಾಸಂಧ ಮಗ ಸಹದೇವ ಮತ್ತು ಕಾಶಿರಾಜರಿಂದ, **ಸಪ್ತಃ** = ಏಳು ಅಕ್ಷೋಹಿಣಿಗಳು, **ಅಭವನ್** = ಆದವು, **ದೇವಪಕ್ಷಿಣಃ** = ದೇವತೆಗಳ ಪಕ್ಷದವರಾದ, **ಪಾಂಡವಾನ್** = ಪಾಂಡವರನ್ನು, **ಪುರುಜಿತ್** = ಪುರುಜಿತವು, **ಕುಂತಿಭೋಜಃ** = ಕುಂತಿಭೋಜನು, **ಚ** = ಮತ್ತು, **ಚೇಕಿತಾನಃ** = ಚೇಕಿತಾನನು, **ಸಾತ್ಯಕಿಃ ಚ** = ಸತ್ಯಕನ ಮಗನಾದ ಯುಧಾನನು (ಇವರೇ ಮೊದಲಾದವರು), **ಸೇನಯಾ** = ಸೇನೆಯಿಂದ, **ಯುಕ್ತಾಃ (ಭೂತ್ವಾ)** = ಕೂಡಿದವರಾಗಿ, **ಸಮೀಯುಃ** = ಸೇರಿದರು.

ತಾತ್ಪರ್ಯ :- ಮತ್ಸ್ಯದೇಶದ ರಾಜ ವಿರಾಟ್‌ರಾಜ. ಪಾಂಚಾಲದೇಶದ ರಾಜ ದ್ರುಪದ, ಕೇಕಯದೇಶದ ರಾಜರು, ಶಿಶುಪಾಲನ ಮಗ ಧೃಷ್ಟಕೇತು, ಜರಾಸಂಧನ ಮಗ ಸಹದೇವ, ಕಾಶಿರಾಜ ಇವರೇ ಮೊದಲಾದ ರಾಜರ ಸೈನ್ಯ ಸೇರಿ ಪಾಂಡವರಿಗೆ ಒಟ್ಟು ೭ ಅಕ್ಷೋಹಿಣೀ ಸೇನೆಯು ಒಟ್ಟಾಯಿತು. ದೇವ ಪಕ್ಷಪಾತಿಗಳಾದ ಪಾಂಡವರ ಜೊತೆಗೆ ಕುಂತಿಭೋಜನ ಮಗ ಪುರಜಿತ್, ಕುಂತಿಯ ಇನ್ನೊಬ್ಬ ತಮ್ಮ ಕುಂತಿಭೋಜ, ಯಾದವ ವೀರ ಚೇಕಿತಾನ್, ಅರ್ಜುನನ ಶಿಷ್ಯನಾದ ಯಾದವ ವೀರನಾದ ಸಾತ್ಯಕಿ ಇವರೆಲ್ಲರೂ ಸೈನ್ಯ ಸಹಿತರಾಗಿ ಸೇರುತ್ತಾರೆ.

ವಿಂದಾನುವಿಂದಾವಾವಂತ್ಯೌ ಜಯತ್ಸೇನೋಽನ್ಯಕೇಕಯಾಃ ।
ಕ್ಷೇಮಧೂರ್ತಿರ್ದಂಡಧಾರಃ ಕಲಿಂಗೋಽಂಬಷ್ಠ ಏವ ಚ ॥ ೨೮ ॥

ಶ್ರುತಾಯುರಚ್ಯುತಾಯುಶ್ಚ ಬೃಹದ್ಬಲಸುದಕ್ಷಿಣೌ ।
ಶ್ರುತಾಯುಧಃ ಸೈಂಧವಶ್ಚ ರಾಕ್ಷಸೋಽಲಂಬುಸಸ್ತಥಾ ।
ಅಲಾಯುಧೋಽಲಂಬಲಶ್ಚ ದೈತ್ಯಾ ದುರ್ಯೋಧನಂ ಯಯುಃ ॥ ೨೯ ॥

ಅರ್ಥ :- **ಆವಂತ್ಯೌ** = ಅವಂತೀದೇಶದ ರಾಜರಾದ, **ವಿಂದಾನುವಿಂದೌ** = ವಿಂದ ಮತ್ತು ಅನುವಿಂದರು, **ಜಯತ್ಸೇನಃ** = ಜಯತ್ಸೇನನು, **ಅನ್ಯಕೇಕಯಾಃ** = ಬೇರೆ ಕೇಕಯ ರಾಜರು, **ಕ್ಷೇಮಧೂರ್ತಿಃ** = ಕ್ಷೇಮಧೂರ್ತಿಯು, **ದಂಡಧರಃ** = ದಂಡಧರನು, **ಕಲಿಂಗಃ** = ಕಲಿಂಗನು, **ಅಂಬಷ್ಠಃ ಏವ** = ಅಂಬಷ್ಠನೂ, **ಚ** = ಮತ್ತು, **ಶ್ರುತಾಯುಃ** = ಶ್ರುತಾಯುವು, **ಅಚ್ಯುತಾಯುಃ ಚ** = ಅಚ್ಯುತಾಯುವೂ, **ಬೃಹದ್ಬಲಸುದಕ್ಷಿಣೌ** = ಬೃಹದ್ಬಲ ಮತ್ತು ಸುದಕ್ಷಿಣರು, **ಶ್ರುತಾಯುಧಃ** = ಶ್ರುತಾಯುಧನು, **ಸೈಂಧವಃ ಚ** = ಸೈಂಧವನೂ, **ರಾಕ್ಷಸಃ** = ರಾಕ್ಷಸನಾದ, **ಅಲಂಬುಸಃ** = ಅಲಂಬುಸನು, **ತಥಾ** = ಹಾಗೇ, **ದೈತ್ಯಾಃ** = ದೈತ್ಯರಾದ, **ಅಲಾಯುಧಃ** = ಅಲಾಯುಧನು, **ಅಲಂಬಃ ಚ** = ಅಲಂಬನೂ ಕೂಡ, **ದುರ್ಯೋಧನಮ್** = ದುರ್ಯೋಧನನನ್ನು ಅನುಸರಿಸಿ, **ಯಯುಃ** = ಹೋದರು.

ತಾತ್ಪರ್ಯ :- ಅವಂತೀದೇಶದ ರಾಜರಾದ ವಿಂದ ಮತ್ತು ಅನುವಿಂದರು ಜರಾಸಂಧನ ಇನ್ನೊಬ್ಬ ಮಗನಾದ ಜಯತ್ಸೇನ ಮತ್ತೆ ಕೆಲವು

ಪಾಂಡವಪಕ್ಷಕ್ಕೆ ಸೇರದಿರುವ ಕೇಕಯ ರಾಜರು. ಕ್ಷೇಮಧೂತಕ (ಈ ಹೆಸರಿನವರು ಕೌರವ ಸೈನದಲ್ಲಿ ಮೂರು ಜನರಿದ್ದಾರೆ) ದಂಡಧರ (ಈ ಹೆಸರಿನವರು ೩ ಜನ ಕೌರವ ಸೈನ್ಯದಲ್ಲಿ ಕಾಣಸಿಗುತ್ತಾರೆ) ಕಲಿಂಗ (ಈ ಹೆಸರಿನವರು ಅನೇಕ ಜನರಿದ್ದಾರೆ) ಅಂಬಷ್ಠನೆಂಬ ಅಂಬಷ್ಠ ದೇಶದ ರಾಜ ಕಲಿಂಗ ದೇಶದವರಾದ ಸಹೋದರರಾದ ಶುತಾಯು ಮತ್ತು ಅಚ್ಯುತಾಯುವು ಕೋಸಲದೇಶದ ಬೃದ್ಬಲ, ಕಾಂಬೋಜ ರಾಜನಾದ ಸುದಕ್ಷಿಣ, ಕಲಿಂಗರಾಜ ಶ್ರುತಾಯುಧ, ಸಿಂಧು ಸುವೀರದೇಶದ ರಾಜಜಯದ್ರಥನೆಂದು ಹೆಸರುಳ್ಳ ಸೈಂಧವ, ಹೀಗೆ ಅನೇಕ ದೇಶದ ರಾಜರು ಮತ್ತು ಅಲಂಬುಸ (ಈ ಹೆಸರಿನ ಇಬ್ಬರು ರಾಕ್ಷಸರಿದ್ದಾರೆ) ಬಕನ ಸಹೋದರನಾದ ಅಲಾಯುಧ ಮತ್ತು ಬಕನ ಇನ್ನೊಬ್ಬ ತಮ್ಮ ಅಲಂಬಲ ಈ ೩ ಜನ ರಾಕ್ಷಸರು ದುರ್ಯೋಧನನ ಪಕ್ಷಕ್ಕೆ ಸೇರುತ್ತಾರೆ.

(ಕ್ಷೇಮಧೂರ್ತಿ, ದಂಡಧನ, ಕಲಿಂಗ, ಮುಂತಾದವರು ಕೌರವ ಸೈನ್ಯದಲ್ಲಿ ಅನೇಕ ಜನರಿದ್ದಾರೆ. ಹಾಗಾಗಿ ಇಲ್ಲಿ ಅಚಾರ್ಯರ ಸಮೂಹದಲ್ಲಿ ಏಕವಚ ಪ್ರಯೋಗ ಮಾಡಿದ್ದಾರೆಂದು ತಿಳಿಯಬಹುದು.)

**ಗತ್ವಾ ದುರ್ಯೋಧನಾಹೂತೋ ಭಗದತ್ತೋಽಪಿ ತಂ ಯಯೌ ॥ ೩೦ ॥**

**ಸಪುತ್ರಪೌತ್ರೋ ಬಾಹ್ಲೀಕೋ ಭೀಷ್ಮದ್ರೋಣಕೃಪಾ ಅಪಿ ।**
**ಪ್ರೀತ್ಯರ್ಥಂ ಧೃತರಾಷ್ಟ್ರಸ್ಯ ಬಭೂವುಸ್ತತ್ಸುತಾನುಗಾಃ ॥ ೩೧ ॥**

**ಅರ್ಥ :-** **ಗತ್ವಾ** = ಪ್ರಾಜ್ಯೋತಿಷ ನಗರಕ್ಕೆ ತಾನೇ ಹೋಗಿ, **ದುರ್ಯೋಧನಾಹೂತಃ** = ದುರ್ಯೋಧನನಿಂದ ಕರೆಯಲ್ಪಟ್ಟ, **ಭಗದತ್ತಃ ಅಪಿ** = ಭಗದತ್ತನೂ ಕೂಡ, **ತಮ್** = ಆ ದುರ್ಯೋಧನನ ಪಕ್ಷವನ್ನು ಕುರಿತು, **ಯಯೌ** = ಹೋದನು, **ಸುಪುತ್ರಪೌತ್ರಃ** = ಮಕ್ಕಳು ಮೊಮ್ಮಕ್ಕಳಿಂದ ಸಹಿತನಾದ, **ಬಾಹ್ಲೀಕಃ** = ಬಾಹ್ಲೀಕ ರಾಜನು, **ಭಿಷ್ಮದ್ರೋಣಕೃಪಾಃ ಅಪಿ** = ಭಿಷ್ಮದ್ರೋಣ ಕೃಪರೂ ಕೂಡ, **ಧೃತ್‌ರಾಷ್ಟ್ರಸ್ಯ** = ಧೃತರಾಷ್ಟ್ರನ, **ಪ್ರೀತ್ಯರ್ಥಂ** = ತೃಪ್ತಿಗಾಗಿ, **ತುತ್ಸಾನುಗಃ** = ಅವನ ಮಗನನ್ನು ಅನುಸರಿಸುವವರು, **ಬಭೂವುಃ** = ಆದರು.

ತಾತ್ಪರ್ಯ :- ದುರ್ಯೋಧನನು ತಾನೇ ಪ್ರಾಜ್ಯೋತಿಷ ನಗರಕ್ಕೆ ಹೋಗಿ ನರಕಾಸುರನ ಮಗನಾದ ಭಗದತ್ತನನ್ನು ಯುದ್ಧಕ್ಕೆ ಸಹಾಯ ಮಾಡೆಂದು ಕರೆದ. ಅದಕ್ಕಾಗಿ ಭಗದತ್ತ ಕೌರವ ಸೈನ್ಯವನ್ನು ಸೇರಿದ. ಧೃತರಾಷ್ಟ್ರನ ಕನಿಷ್ಠ ಪ್ರಾಪಿತಾಮಹ (ಚಿಕ್ಕಮುತ್ತಜ್ಜ)ನಾದ ಬಾಹ್ಲೀಕರಾಜನು ಮಗನಾದ ಸೋಮರತ್ನ ಮತ್ತು ಮೊಮ್ಮಕ್ಕಳಾದ ಭೂರಿಶ್ರವ ಶಲರೊಂದಿಗೆ ಧೃತರಾಷ್ಟ್ರನ ಪ್ರೀತಿಗಾಗಿ ಅವನ ಮಗನಪಕ್ಷಕ್ಕೆ ಸೇರಿದ. ಹಾಗೆಯೇ ಭೀಷ್ಮಾಚಾರ್ಯರು ದ್ರೋಣಾಚಾರ್ಯರು, ಕೃಪಾಚಾರ್ಯರೂ ಕೂಡ ಧೃತರಾಷ್ಟ್ರನ ಸಂತೋಷಕ್ಕಾಗಿ ದುರ್ಯೋಧನನ ಪಕ್ಷಕ್ಕೆ ಸೇರಿದರು.

**ಪಾಂಡ್ಯಶ್ಚ ವೀರಸೇನಾಖ್ಯಃ ಪಾಂಡವಾನೇವ ಸಂಶ್ರಿತಃ ॥ ೩೨ ॥**

**ಶಲ್ಯಂ ಚ ಪಾಂಡವಾನೇವ ಯಾಂತಂ ಜ್ಞಾತ್ವಾ ಸುಯೋಧನಃ ।**
**ಸುಸಭಾಃ ಕಾರಯಾಮಾಸ ಸರ್ವಭೋಗಸಮನ್ವಿತಾಃ ॥ ೩೩ ॥**

**ತಾ ಯುಧಿಷ್ಠಿರಕ್ಲೃಪ್ತಾಃ ಸ ಮತ್ವಾ ಶಲ್ಯೋಽಬ್ರವೀದಿದಮ್ ।**
**ಯ ಏತಾಃ ಕಾರಯಾಮಾಸ ತದಭೀಷ್ಟಂ ಕರೋಮ್ಯಹಮ್ ॥ ೩೪ ॥**

**ಅರ್ಥ** :- **ವೀರಸೇನಾಖ್ಯಃ** = ವೀರಸೇನನೆಂಬ, **ಪಾಂಡ್ಯಃ ಚ** = ಪಾಂಡ್ಯ ದೇಶದ ರಾಜನಾದರೋ, **ಪಾಂಡವಾನ್ ಏವ** = ಪಾಂಡವರನ್ನೇ, **ಸಂಶ್ರಿತಃ** = ಆಶ್ರಯಿಸಿದನು, **ಶಲ್ಯಂ ಚ** = ಶಲ್ಯನಾದರು, **ಪಾಂಡವಾನ್ ಏವ** = ಪಾಂಡವರನ್ನು ಕುರಿತೇ, **ಯಾಂತಂ** = ಹೊರಟದ್ದನ್ನು, **ಸುಯೋಧನಃ** = ದುರ್ಯೋಧನನು, **ಸರ್ವಭೋಗಸಮನ್ವಿತಾಃ** = ಎಲ್ಲಾ ಭೋಗವಸ್ತುಗಳಿಂದ ಕೂಡಿದ, **ಸುಸಭಾಃ** = ಒಳ್ಳೆಯ ಮಂದಿರಗಳನ್ನು, **ಕಾರಯಾಮಾಸ** = ಮಾಡಿಸಿದನು, **ಸಃ** = ಆ ಶಲ್ಯನು, **ತಾಃ** = ಆ ಸಭಾಮಂದಿರಗಳು, **ಯುಧಿಷ್ಠಿರಕೃತಾಃ** = ಧರ್ಮರಾಜನಿಂದ ಸಿದ್ಧಪಡಿಸಲ್ಪಟ್ಟಿದೆ ಎಂದು, (**ಜ್ಞಾತ್ವಾ** = ತಿಳಿದು), **ಶಲ್ಯಃ** = ಶಲ್ಯನು, (**ಇದಂ** = ಈ ಮುಂದೆ ಹೇಳುವ ಮಾತನ್ನು, **ಅಬ್ರವೀತ್** = ಹೇಳಿದನು.), **ಯಃ** = ಯಾರು, **ಏತಾಃ** = ಈ ಸುಸಜ್ಜಿತವಾದ ಸಭಾಸದನಗಳನ್ನು, **ಕಾರಯಾಮಾಸ** = ಮಾಡಿಸಿದನೋ, **ತದಭೀಷ್ಟಂ** = ಅವನ ಅಭಿಲಾಷೆಯನ್ನು, **ಅಹಂ** = ನಾನು, **ಕರೋಮಿ** = ಮಾಡುತ್ತೇನೆ, **ಇದಂ** = ಎಂಬ ಈ ಮಾತನ್ನು, **ಅಬ್ರವೀತ್** = ಹೇಳಿದನು.

**ತಾತ್ಪರ್ಯ :-** ವೀರಸೇನನೆಂಬ ಪಾಂಡ್ಯದೇಶದ ರಾಜನು ಪಾಂಡವರನ್ನೇ ಆಶ್ರಯಿಸಿದ. ಈ ಮಧ್ಯದಲ್ಲಿ ಮಾದ್ರಿಯ ತಮ್ಮನಾದ ಶಲ್ಯರಾಜನು ಪಾಂಡವರನ್ನು ಸೇರಲು ಬರುತ್ತಿದ್ದ. ಆ ವಿಷಯವನ್ನು ತಿಳಿದ ದುರ್ಯೋಧನ ಶಕ್ಯ ಬರುವ ದಾರಿಯಲ್ಲಿ ಅವನ ವಿಶ್ರಾಂತಿಗಾಗಿ ಸಕಲ ಭೋಗ ಪದಾರ್ಥಗಳಿಂದ ಕೂಡಿದ ಅನೇಕ ಭವನಗಳನ್ನು ನಿರ್ಮಾಣ ಮಾಡಿದ. ಅದರಿಂದ ಸಂತುಷ್ಟನಾದ ಶಲ್ಯರಾಜ ಇದೆಲ್ಲಾ ಧರ್ಮರಾಜನೇ ಮಾಡಿಸಿದ್ದಾನೆಂದು ತಿಳಿದು ಈ ಎಲ್ಲಾ ಸುಸಜ್ಜಿತವಾದ ವ್ಯವಸ್ಥೆಯನ್ನು ಯಾರು ಮಾಡಿದ್ದನೋ ಅವನ ಅಭಿಲಾಷೆಯನ್ನು ನಾನು ಪೂರ್ಣ ಮಾಡುತ್ತೇನೆಂದು ಗಟ್ಟಿಯಾಗಿ ಹೇಳಿದ.

**ಲೀನಃ ಶ್ರುತ್ವಾ ಧಾರ್ತರಾಷ್ಟಃ ಸತ್ಯಂ ಕುರ್ವಿತ್ಯಭಾಷತ ।**
**ದೇಹಿ ಮೇ ಯುದ್ಧಸಾಹಾಯ್ಯಮಿತಿ ಸೋಽಪಿ ಯಶೋಽರ್ಥಯನ್ ।**
**ರಕ್ಷಾರ್ಥಮಾತ್ಮವಾಕ್ಯಸ್ಯ ತಥೇತ್ಯೇವಾಭ್ಯಭಾಷತ ॥ ೩೫ ॥**

**ಅರ್ಥ :- ಲೀನಃ** = ಅಡಗಿಕುಳಿತ, **ಧಾರ್ತರಾಷ್ಟ್ರ** = ದುರ್ಯೋಧನನು, **ಶೃತ್ವಾ** = (ಕೇಳಿ) ಶಲ್ಯ ಹೇಳಿದ ಮಾತನ್ನು ಕೇಳಿ, **ಸತ್ಯಂ ಕುರು** = ನೀನು ಹೇಳಿದ ಮಾತನ್ನು ಸತ್ಯವನ್ನಾಗಿ ಮಾಡು, **ಇತಿ** = ಎಂದು, **ಅಭಾಷತ** = ಹೇಳಿದನು, **ಮೇ** = ನನಗೆ, **ಯುದ್ಧಸಾಹಾಯ್ಯಂ** = ಯುದ್ಧದ ಸಹಾಯವನ್ನು, **ದೇಹಿ** = ಮಾಡು, **ಸಃ** = ಆ ಶಲ್ಯನೂ ಕೂಡ, **ಯಶಃ** = ಯಶಸ್ಸನ್ನು, **ಅಜಯನ್** = ಬಯಸಿದವನಾಗಿ, **ಆತ್ಮವಾಕ್ಯಸ್ಯ** = ತನ್ನ ಮಾತಿನ, **ರಕ್ಷಾರ್ಥಂ** = ರಕ್ಷಣೆಗಾಗಿ, **ತಥಾ ಇತಿ ಏವ** = ಹಾಗೇ ಆಗಲೆಂದು, **ಅಭಾಷತ** = ಹೇಳಿದನು.

**ತಾತ್ಪರ್ಯ :-** ಈ ಅವಕಾಶವನ್ನೇ ನಿರೀಕ್ಷಿಸುತ್ತ ಅಡಗಿ ಕುಳಿತ ದುರ್ಯೋಧನ ಶಲ್ಯ ಹೇಳಿದ ಈ ಮಾತನ್ನು ಕೇಳಿಸಿಕೊಂಡು ಕೂಡಲೇ ಬಂದು ''ನೀನು ಹೇಳಿದ ಮಾತನ್ನು ನೀನು ಸತ್ಯ ಮಾಡು ಈ ಸತ್ಕಾರವೆಲ್ಲ ನನ್ನದೆಂದು ತಿಳಿಸುತ್ತಾ ನನಗೆ ನೀನು ಯುದ್ಧದಲ್ಲಿ ಸಹಾಯ ಮಾಡೆಂದು'' ತನ್ನ ಅಭಿಲಾಷೆಯನ್ನು ವ್ಯಕ್ತಪಡಿಸಿದ. ''ಆಡಿದ ಮಾತಿಗೆ ತಪ್ಪಲಾರ'' ಎಂಬ ಕೀರ್ತಿಯನ್ನು ಬಯಸಿ ತನ್ನ ಮಾತನ್ನು ಉಳಿಸಿಕೊಳ್ಳುವದಕ್ಕಾಗಿ ಹಾಗೇ ಆಗಲೆಂದು ಹೇಳಿದ.

**ಸ ಪಾಂಡವಾಂಸ್ತತೋ ಗತ್ವಾ ತೈರನುಜ್ಞಾತ ಏವ ಚ ।**
**ತೇಜೋವಧಾರ್ಥಂ ಕರ್ಣಸ್ಯ ಧನಂಜಯಕೃತೇऽರ್ಥಿತಃ ॥ ೩೬ ॥**

**ತಥೇತ್ಯುಕ್ತ್ವಾ ಯಯೌ ಧರ್ಮನಂದನಂ ಕೌರವಾನ್ ಪ್ರತಿ ॥ ೩೭ ॥**

**ಅರ್ಥ :-** **ತತಃ** = ಅನಂತರ, **ಸಃ** = ಆ ಶಲ್ಯನು, **ಪಾಂಡವಾನ್** = ಪಾಂಡವರನ್ನು ಕುರಿತು, **ಗತ್ವಾ** = ಹೋಗಿ, **ತೈಃ** = ಆ ಪಾಂಡವರಿಂದಲೇ, **ಅನುಜ್ಞಾತಃ (ಸನ್)** = ಅಪ್ಪಣೆಯನ್ನು ಪಡೆದವನಾಗಿ, **ಚ** = ಮತ್ತು, **ಧನಂಜಯಕೃಪೆ** = ಅರ್ಜುನನಿಗೋಸ್ಕರ, **ಕರ್ಣಸ್ಯ** = ಕರ್ಣನ, **ತೇಜೋವಧಾರ್ಥಂ** = ತೇಜೋವಧೆಗಾಗಿ, **ಪ್ರಾರ್ಥಿತಃ (ಸನ್)** = ಧರ್ಮರಾಜನಿಂದ ಪ್ರಾರ್ಥಿತನಾಗಿ, **ಧರ್ಮನಂದನಂ** = ಧರ್ಮರಾಜನನ್ನು ಕುರಿತು, **ತಥಾ ಇತಿ ಉಕ್ತ್ವಾ** = ಹಾಗೇ ಆಗಲೆಂದು ಹೇಳಿ, **ಕೌರವಾನ್ ಪ್ರತಿ** = ಕೌರವರನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ :-** ದುರ್ಯೋಧನನಿಗೆ ಒಪ್ಪಿಗೆಯನ್ನು ಸೂಚಿಸಿ ಶಲ್ಯನು ಪಾಂಡವರ ಬಳಿಗೆ ಹೋಗಿ ಕೌರವರಿಗೆ ಸಹಾಯ ಮಾಡಲು ಅನುಮತಿಯನ್ನು ಕೋರಿದನು. ಧರ್ಮರಾಜ ಹಾಗೇ ಆಗಲೆಂದು ಹೇಳಿ ಬೇರೊಂದು ರೀತಿಯಲ್ಲಿ ಸಹಾಯವನ್ನು ಚಿಂತಿಸಿ ಅವನಿಗೆ ಹೇಳಿದ ಅರ್ಜುನನಿಗೋಸ್ಕರ ಕರ್ಣನ ಸಾರಥ್ಯವನ್ನು ಅಂಗೀಕರಿಸಿ ಕರ್ಣ ತೇಜೋವಧೆಯನ್ನು ಮಾಡಬೇಕೆಂದು ಪ್ರಾರ್ಥನೆಯನ್ನು ಮಾಡಿದನು. ಶಲ್ಯನು ಹಾಗೇ ಆಗಲೆಂದು ಹೇಳಿ ಕೌರವರ ಹತ್ತಿರ ಹೋದನು.

**ಸಂಜಯಂ ಪ್ರೇಷಯಾಮಾಸ ಧೃತರಾಷ್ಟ್ರೋऽಥ ಶಾಂತಯೇ ।**
**ಪಾಂಡವಾನ್ ಪ್ರತ್ಯಧರ್ಮಂ ಚ ಯುದ್ಧಂ ಸ ಪ್ರತ್ಯಪಾದಯತ್ ॥ ೩೮ ॥**

**ಅರ್ಥ :-** **ಅಥ** = ಅನಂತರ, **ಧೃತರಾಷ್ಟ್ರಃ** = ಧೃತರಾಷ್ಟ್ರನು, **ಶಾಂತಯೇ** = ಸಂಧಾನಕ್ಕಾಗಿ, **ಸಂಜಯಂ** = ಸಂಜಯನನ್ನು, **ಪ್ರೇಷಯಾಮಾಸ** = ಕಳುಹಿಸಿದನು, **ಸಃ** = ಆ ಸಂಜಯನು, **ಪಾಂಡವಾನ್ ಪ್ರತಿ** = ಪಾಂಡವರನ್ನು ಕುರಿತು, **ಯುದ್ಧಂ** = ಯುದ್ಧವನ್ನು, **ಅಧರ್ಮಂ ಚ** = ಅಧರ್ಮವೆಂದು, **ಪ್ರತಿಪಾದಯತ್** = ಪ್ರತಿಪಾದಿಸಿದನು.

**ತಾತ್ಪರ್ಯ** :- ಉಭಯ ಪಕ್ಷದಿಂದ ಸೈನ್ಯ ಸಂಗ್ರಹವಾಗಿ ಯುದ್ಧವು ಅನಿವಾರ್ಯ ಎಂದಾದ ಮೇಲೆ ಧೃತರಾಷ್ಟ್ರನು ಸಂಧಾನಕ್ಕಾಗಿ ಸಂಜಯನನ್ನು ಕಳುಹಿಸುತ್ತಾನೆ. ಸಂಜಯ ಬಂದು ಯುದ್ಧದಲ್ಲಿ ಹಿರಿಯರಾದ ಭೀಷ್ಮಾದಿಗಳ ಸಂಹಾರ ಮಾಡಬೇಕಾಗುತ್ತದೆ. ಆದ್ದರಿಂದ ಈ ಯುದ್ಧ ಅಧರ್ಮ, ಪಾಪಕ್ಕೆ ಕಾರಣವಾದದ್ದು. ಇದಕ್ಕಿಂತ ವನವಾಸವೇ ಲೇಸು ಎಂದು ಧೃತರಾಷ್ಟ್ರನ ಆದೇಶದಂತೆ ಸಮರ್ಥನೆ ಮಾಡುತ್ತಾನೆ.

**ಹಠವಾದೇऽವದದ್ ಭೀಮೋ ಯಂ ಧರ್ಮಂ ದ್ರೌಪದೀ ತಥಾ ।**
**ತಮೇವೋಕ್ತ್ವಾ ಧರ್ಮಜಸ್ತು ಚಕಾರ ಚ ನಿರುತ್ತರಮ್ ॥ ೩೯ ॥**

**ಕೃಷ್ಣೋऽಪಿ ತಸ್ಯ ಧರ್ಮಸ್ಯ ಪ್ರಾಮಾಣ್ಯಂ ಪ್ರತ್ಯಪಾದಯತ್ ॥ ೪೦ ॥**

**ಅರ್ಥ** :- **ಹಠವಾದೆ** = ಹಠವಾದದಲ್ಲಿ, **ಭೀಮಃ** = ಭೀಮನು, **ತಥಾ** = ಹಾಗೆಯೇ, **ದ್ರೌಪದೀ** = ದ್ರೌಪದಿಯು, **ಯಂ** = ಯಾವುದನ್ನು, **ಧರ್ಮಂ** = ಧರ್ಮವೆಂದು, **ಅವದತ್** = ಹೇಳಿದರೋ, **ತಂ** = ಅದನ್ನೇ, **ಧರ್ಮರಾಜಸ್ತು** = ಧರ್ಮರಾಜನೂ ಕೂಡ, **ಉಕ್ತ್ವಾ** = ಸಂಜಯನನ್ನು ಕುರಿತು ಹೇಳಿ, **ನಿರುತ್ತರಂ ಚ** = ಉತ್ತರವಿಲ್ಲದವನನ್ನಾಗಿ, **ಚಕಾರ** = ಮಾಡಿದರು, **ಕೃಷ್ಣೇ ಅಪಿ** = ಶ್ರೀಕೃಷ್ಣನೂ ಕೂಡ, **ತಸ್ಯ** = ಆ ಪಾಂಡವರು ಹೇಳಿದ ಧರ್ಮದ, **ಪ್ರಾಮಾಣ್ಯಂ** = ಪ್ರಾಮಾಣ್ಯವನ್ನು, **ಪ್ರತ್ಯಪಾದಯತ್** = ಪ್ರತಿಪಾದಿಸಿದನು.

**ತಾತ್ಪರ್ಯ** :- ಹಿಂದೆ ಭೀಮ ಮತ್ತು ಧರ್ಮರಾಜನಿಗೆ ಹಠವಾದ ಆರಂಭವಾಗಿತ್ತು ಯಾವನ್ನು ಅಧರ್ಮವೆಂದು ಹೇಳಿದನೋ ಅದು ದುಷ್ಟರ ವಿಷಯದಲ್ಲಿ ಧರ್ಮವಾಗುತ್ತದೆ. ದುರ್ಜನರಲ್ಲಿ ಕ್ಷಮೆಯು ಪಾಪಕ್ಕೆ ಕಾರಣವಾಗುತ್ತದೆ. ಆದ್ದರಿಂದ ಯುದ್ಧ ಅನಿವಾರ್ಯ ಎಂದು ಭೀಮ ದ್ರೌಪದಿಯರು ಮನವರಿಕೆ ಮಾಡಿಸಿ ಪ್ರತಿಜ್ಞೆ ಮಾಡಿಸಿದ್ದರು. ಅಲ್ಲಿ ಭೀಮದ್ರೌಪದಿಯರು ಹೇಳಿದ ಧರ್ಮವನ್ನೇ ಇಲ್ಲಿ ಯುಧಿಷ್ಠಿರ ಹೇಳಿ ಸಂಜಯನನ್ನು ನಿರುತ್ಸಾಹವನ್ನಾಗಿ ಮಾಡುತ್ತಾನೆ. ಶ್ರೀಕೃಷ್ಣ ಸಹ ಈಗ ನಡೆಯುವ ಯುದ್ಧ ಅಧರ್ಮ ಅಲ್ಲ ಎಂದು ಧರ್ಮರಾಜನ ಪಕ್ಷವನ್ನು ಸಮರ್ಥಿಸುತ್ತಾನೆ.

**ತತೋ ನಿರುತ್ತರಃ ಕೃಷ್ಣಂ ಪಾಂಡವಾಂಶ್ಚ ಪ್ರಣಮ್ಯ ಸಃ ।**
**ಧೃತರಾಷ್ಟ್ರಂ ಯಯೌ ತಂ ಚ ವಿನಿಂದ್ಯ ಪ್ರಯಯೌ ಗೃಹಮ್ ॥ ೪೧ ॥**

**ಅರ್ಥ** :- ತತಃ = ಅನಂತರ, ನಿರುತ್ತರಃ = ಉತ್ತರ ರಹಿತನಾದ, ಸಃ = ಆ ಸಂಜಯನು, ಕೃಷ್ಣಂ = ಶ್ರೀ ಕೃಷ್ಣನನ್ನು, ಪಾಂಡವಾನ್ ಚ = ಪಾಂಡವರನ್ನು ಕೂಡ, ಪ್ರಣಮ್ಯ = ನಮಸ್ಕರಿಸಿ, ಧೃತರಾಷ್ಟ್ರಂ = ಧೃತರಾಷ್ಟ್ರನನ್ನು ಕುರಿತು, ಯಯೌ = ಹೋದನು, ತಂ ಚ = ಅವನನ್ನು, ವಿನಿಂದ್ಯ = ನಿಂದಿಸಿ, ಗೃಹಂ = ಮನೆಯನ್ನು ಕುರಿತು, ಯಯೌ = ಹೋದನು.

**ತಾತ್ಪರ್ಯ** :- ಶ್ರೀಕೃಷ್ಣಧರ್ಮಜರ ಧರ್ಮಸಮರ್ಥನೆಗೆ ನಿರುತ್ತರನಾಗಿ ಸಂಜಯ ಶ್ರೀಕೃಷ್ಣನನ್ನು ಪಾಂಡವರನ್ನು ನಮಸ್ಕರಿಸಿ ಧೃತರಾಷ್ಟ್ರನ ಹತ್ತಿರ ಹೋದನು. ಅಲ್ಲಿ ಅವನನ್ನು ಚೆನ್ನಾಗಿ ಬೈಯುತ್ತಾನೆ. ಪಾಂಡವರು ಧರ್ಮಿಷ್ಠರು, ನಿನ್ನ ಮಕ್ಕಳು ಪಾಪಿಗಳು, ನೀನು ತುಂಬಾ ಅನ್ಯಾಯ ಮಾಡುತ್ತಿದ್ದೀ, ಅವರಿಗೆ ೫ ಗ್ರಾಮಗಳನ್ನಾದರೂ ಕೊಡು. ಇಲ್ಲದಿದ್ದರೆ ನಿನ್ನ ಮಕ್ಕಳೆಲ್ಲರೂ ನಾಶವನ್ನು ಹೊಂದುತ್ತಾರೆಂದು ನಿಂದಿಸಿ ತನ್ನ ಮನೆಗೆ ಹೋಗುತ್ತಾನೆ.

**ನಿಂದಿತಃ ಸಂಜಯೇನಾಸಾವಾಹೂಯ ವಿದುರಂ ನಿಶಿ ।**
**ಪಪ್ರಚ್ಛ ಸೋಽವದದ್ ಧರ್ಮಂ ಪಾರ್ಥಾನಾಂ ರಾಜ್ಯದಾಪನಮ್ ॥೪೨॥**

**ಅರ್ಥ** :- **ಸಂಜಯೇನ** = ಸಂಜಯನಿಂದ, **ನಿಂದಿತಃ** = ನಿಂದಿಸಲ್ಪಟ್ಟ, **ಅಸೌ** = ಈ ಧೃತರಾಷ್ಟ್ರನು, **ನಿಶಿ** = ರಾತ್ರಿಯಲ್ಲಿ, **ವಿದುರಂ** = ವಿದುರನನ್ನು, **ಸಮಾಹೂಯ** = ಕರೆಸಿಕೊಂಡು, **ಪಪ್ರಚ್ಛ** = ಧರ್ಮದ ಬಗ್ಗೆ ಕೇಳಿದನು, **ಸಃ** = ಆ ವಿದುರನು **ಪಾರ್ಥಾನಾಂ** = ಪಾಂಡವರಿಗೆ, **ರಾಜ್ಯದಾಪನಂ** = ರಾಜ್ಯವನ್ನು ಕೋಡಿಸುವುದೇ, **ಧರ್ಮಂ** = ಧರ್ಮವನ್ನಾಗಿ, **ಅವದತ್** = ಹೇಳಿದನು.

**ತಾತ್ಪರ್ಯ** :- ಸಂಜಯನು ಚೆನ್ನಾಗಿ ಬಯ್ದುದ್ದರಿಂದ ಸಂಜಯ ನಾಳೆ ಸಭೆಯಲ್ಲಿ ಏನು ಹೇಳುವನೋ ಎಂಬ ಭಯದಿಂದ ರಾತ್ರಿಯಲ್ಲಿಯೇ ವಿಧುರನನ್ನು ಧರ್ಮಾಧರ್ಮದ ಬಗ್ಗೆ ಕೇಳಿದನು. ಆಗ ವಿಧುರನು

ಪಾಂಡವರಿಗೆ ರಾಜ್ಯವನ್ನು ಕೊಡಿಸುವುದೇ ನಿನಗೆ ಧರ್ಮ ಎಂದು ಪ್ರತಿಪಾದಿಸಿದನು.

**ಐಹಿಕಸ್ಯ ಸುಖಸ್ಯಾಪಿ ಕಾರಣಂ ತದನಿಂದಿತಮ್ ।**
**ಅನ್ಯಥಾ ಸರ್ವಪುತ್ರಾಣಾಂ ನಾಶಂ ಧರ್ಮಾತಿಲಂಘನಮ್ ॥ ೪೩ ॥**

**ಅರ್ಥ** :- **ತತ್** = ಆ ರಾಜ್ಯ ಕೊಡುವಿಕೆಯು, **ಅನಿಂದಿತಂ** = ಧರ್ಮ ರೂಪವಾದದ್ದು, **ಐಹಿಕಸ್ಯ** = ಭೂಲೋಕ ಸಂಬಂಧಿಯಾದ, **ಸುಖಸ್ಯಾಪಿ** = ಸುಖಕ್ಕೂ ಕೂಡ, **ಕಾರಣಂ** = ಕಾರಣವಾದದ್ದು, **ಅನ್ಯಥಾ** = ರಾಜ್ಯವನ್ನು ಕೊಡದಿದ್ದರೆ, **ಸರ್ವಪುತ್ರಾಣಾಂ** = ನಿನ್ನ ಎಲ್ಲಾ ಮಕ್ಕಳ, **ನಾಶಂ** = ನಾಶವು (ಮತ್ತು), **ಧರ್ಮಾತಿಲಂಘನಂ** = ಧರ್ಮದ ಉಲ್ಲಂಘನೆಯು, (**ಭವತಿ** = ಆಗುತ್ತದೆ.)

**ತಾತ್ಪರ್ಯ** :- ವಿಧುರ ಹೇಳುತ್ತಾನೆ ಅಯ್ಯಾ ಧೃತರಾಷ್ಟ್ರ ಪಾಂಡವರಿಗೆ ರಾಜ್ಯವನ್ನು ಕೊಟ್ಟರೆ ಪಾರತ್ರಿಕ ಸುಖಕ್ಕಷ್ಟೇ ಅಲ್ಲ ಐಹಿಕ ಸುಖಕ್ಕೂ ಕಾರಣವಾಗುತ್ತದೆ. ಒಂದು ವೇಳೆ ರಾಜ್ಯ ಕೊಡದಿದ್ದರೆ ಎಲ್ಲ ಮಕ್ಕಳ ನಾಶದ ಜೊತೆಗೆ ಧರ್ಮದ ಉಲ್ಲಂಘನೆಯಾಗಿ ಪಾಪ ಅಂಟಿಕೊಳ್ಳುತ್ತದೆ ಎಂದು ಎಚ್ಚರಿಸಿದ.

**ತತ್ರ ಭಾವಮಕೃತ್ವಾ ಸ ಜ್ಞಾನಾದಿಚ್ಛನ್ನಘಕ್ಷಯಮ್ ।**
**ವಿಷ್ಣೋಃ ಸ್ವರೂಪಂ ಪಪ್ರಚ್ಛ ಸೋऽಸ್ಮರಚ್ಚ ಸನಾತನಮ್ ॥ ೪೪ ॥**

**ಅರ್ಥ** :- **ತತ್ರ** = ರಾಜ್ಯವನ್ನು ಕೊಡುವುದರಲ್ಲಿ, **ಭಾವಂ** = ಮನಸ್ಸನ್ನು, **ಅಕೃತ್ವಾ** = ಮಾಡದೇ, **ಸಃ** = ಆ ಧೃತರಾಷ್ಟ್ರನು, **ಜ್ಞಾನಾತ್** = ಜ್ಞಾನದಿಂದ, **ಅಘಕ್ಷಯೇ** = ಪಾಂಡವರ ದ್ವೇಷದಿಂದುಂಟಾದ ಪಾಪದ ನಾಶವನ್ನು, **ಇಚ್ಛನ್** = ಇಚ್ಛಿಸುತ್ತಾ, **ವಿಷ್ಣೋಃ** = ಭಗವಂತನ, **ಸ್ವರೂಪಂ** = ಸ್ವರೂಪವನ್ನು, **ಪಪ್ರಚ್ಛ** = ಕೇಳಿದನು, **ಸಃ** = ಆ ವಿದುರನು, **ಸನಾತನಂ** = ಸನಾತನ ಮುನಿಗಳನ್ನು, **ಅಸ್ಮರತ್** = ಸ್ಮರಣೆ ಮಾಡಿದನು.

**ತಾತ್ಪರ್ಯ** :- ವಿದುರನ ನೇರ ನುಡಿ ಧೃತರಾಷ್ಟ್ರನ ಮನಸ್ಸಿಗೆ ಒಪ್ಪಲಿಲ್ಲ. ರಾಜ್ಯವನ್ನು ಕೊಡಲು ಮನಸ್ಸಾಗಲಿಲ್ಲ. ಆದರೆ ಪಾಂಡವರಿಗೆ ಅನ್ಯಾಯ

ಮಾಡಿದ್ದರಿಂದ ಪಾಪದ ಭೀತಿ ಉಂಟಾಗಿದೆ. ಆದ್ದರಿಂದ ರಾಜ್ಯವನ್ನು ಕೊಡದೆ ಪಾಪವನ್ನು ಪರಿಹಾರ ಮಾಡಿಕೊಳ್ಳುವ ಇಚ್ಛೆಯಿಂದ ಜ್ಞಾನಮಾರ್ಗವನ್ನು ಅನುಸರಿಸಬೇಕೆಂದು ನಿಶ್ಚಯಿಸಿ ಭಗವಂತನ ಸ್ವರೂಪದ ಬಗ್ಗೆ ಕೇಳಿದ. ಅದಕ್ಕೆ ವಿದುರ ಉಪದೇಶ ಮಾಡಲು ಸನಾತನ ಮುನಿಗಳನ್ನು ಸ್ಮರಣೆ ಮಾಡಿದ.

**ಸ ಆಗತ್ಯಾವದತ್ ತತ್ವಂ ವಿಷ್ಣೋರ್ಮಾಯಾವಿನಃ ಶುಭಾ ।**
**ನ ಗತಿಶ್ಚೇತ್ಯಥ ಪ್ರಾತಃ ಸಂಜಯಃ ಪಾಂಡವೋದಿತಮ್ ।**
**ಅವದದ್ ಧೃತರಾಷ್ಟ್ರಾಯ ಸಭಾಯಾಂ ಕುರುಸನ್ನಿಧೌ ॥ ೪೫ ॥**

**ಅರ್ಥ** :- ಸಃ = ಆ ಸನಾತನ ಮುನಿಗಳು, ಅಗತ್ಯ = ಬಂದು, ವಿಷ್ಣೋಃ = ಭಗವಂತನ, ತತ್ವಂ = ಸ್ವರೂಪವನ್ನು, ಅವದತ್ = ಹೇಳಿದರು, ಮಾಯಾವಿನಃ = ಕಪಟಿಗೆ, ಶುಭಾ = ಒಳ್ಳೆಯ, ಗತಿಃ = ಗತಿಯು, ನ ಚ = ಖಂಡಿತಾ ಇಲ್ಲಾ, ಇತಿ = ಹೀಗೆ, ಅವದತ್ = ಹೇಳಿದರು, ಅಥ = ಅನಂತರ, ಪ್ರಾತಃ = ಬೆಳಿಗ್ಗೆ, ಸಭ್ಯಾಯಾಂ = ಸಭೆಯಲ್ಲಿ, ಕೌರವಸನ್ನಿಧೌ = ಕೌರವರ ಉಪಸ್ಥಿತಿಯಲ್ಲಿ, ಸಂಜಯಃ = ಸಂಜಯನು, ಪಾಂಡವೋದಿತಂ = ಪಾಂಡವರಿಂದ ಹೇಳಲ್ಪಟ್ಟಿದ್ದನ್ನು, ಧೃತರಾಷ್ಟ್ರಸ್ಯ = ಧೃತರಾಷ್ಟ್ರನಿಗೆ, ಅವದತ್ = ಹೇಳಿದನು.

**ತಾತ್ಪರ್ಯ** :- ವಿದುರನು ಸ್ಮರಣೆ ಮಾಡಿದ ಕೂಡಲೇ ಸನಾತನರು ಅಲ್ಲಿಗೆ ಬಂದು ಧೃತರಾಷ್ಟ್ರನಿಗೆ ಭಗವಂತನ ಸ್ವರೂಪದ ಉಪದೇಶವನ್ನು ಮಾಡಿದರು. ಇದರ ಜೊತೆಗೆ ಕಪಟಗಳಿಗೆ ಸದ್ಗತಿಯು ಖಂಡಿತವಾಗಿಯೂ ಆಗುವುದಿಲ್ಲವೆಂದು ಹೇಳಿ ನಿನ್ನ ಮಕ್ಕಳು ಕಪಟಿಗಳಾದ್ದರಿಂದ ಸದ್ಗತಿ ಇಲ್ಲವೆದು ಹೇಳಿದನು. ಅನಂತರ ಪಾತಃಕಾಲದಲ್ಲಿ ಸಂಜಯನು ಸಭೆಗೆ ಬಂದು ಎಲ್ಲಾ ಕೌರವರ ಉಪಸ್ಥಿತಿಯಲ್ಲಿ ಪಾಂಡವರು ಹೇಳಿದ ಸಂದೇಶವನ್ನು ಧೃತರಾಷ್ಟ್ರನಿಗೆ ಹೇಳಿದನು.

**ತಚ್ಛ್ರುತ್ವಾ ಸ ತು ಭೀತೋಽಪಿ ಪುತ್ರಸ್ನೇಹಾನುಗೋ ನೃಪಃ ।**
**ರಾಜ್ಯಂ ನಾದಾತ್ ಪಾಂಡವಾನಾಂ ತತೋ ಧರ್ಮಸುತೋ ನೃಪಃ ॥ ೪೬ ॥**

**ಯದುಕ್ತವಾನ್ ಸಂಜಯಾಯ ಯದಿ ದಿತ್ಸತಿ ನಃ ಪಿತಾ ।**
**ರಾಜ್ಯಂ ತದಾ ತ್ವಮಾಗಚ್ಛ ವಿದುರೋ ವಾ ನ ಚೇನ್ನಚ ।**
**ತಾವಥಾನಾಗತೌ ಜ್ಞಾತ್ವಾ ಮಂತ್ರಯಾಮಾಸ ಶೌರಿಣಾ ॥ ೪೭ ॥**

**ಅರ್ಥ** :- **ತತ್** = ಅದನ್ನು, **ಶೃತ್ವಾ** = ಕೇಳಿ, **ಸಃ ತು** = ಆ ಧೃತರಾಷ್ಟ್ರನಾದರೋ, **ಭೀತಃ ಅಪಿ** = ಭಯಗೊಂಡರೂ ಕೂಡ, **ಪುತ್ರಸ್ನೇಹಾನುಗಃ** = ಪುತ್ರವ್ಯಾಮೋಹಕ್ಕೆ ವಶನಾದ, **ನೃಪಃ** = ಧೃತರಾಷ್ಟ್ರನು, **ಪಾಂಡವಾನಾಂ** = ಪಾಂಡವರಿಗೆ, **ರಾಜ್ಯಂ** = ರಾಜ್ಯವನ್ನು, **ನ ಅದಾತ್** = ಕೊಡಲಿಲ್ಲ, **ತತಃ** = ಅನಂತರ, **ಧರ್ಮಸುತಃ** = ಯಮಧರ್ಮನ ಮಗನಾದ, **ನೃಪಃ** = ರಾಜನಾದ ಯುಧಿಷ್ಠಿರನು, **ಸಂಜಯಾಯ** = ಸಂಜಯನಿಗೆ, **ಯದಿ** = ಒಂದು ವೇಳೆ, **ನಃ** = ನಮ್ಮ, **ಪಿತಾ** = ದೊಡ್ಡಪ್ಪನಾದ ಧೃತರಾಷ್ಟ್ರನು, **ನಃ** = ನಮಗೆ, **ರಾಜ್ಯಂ** = ರಾಜ್ಯವನ್ನು, **ದಿತ್ಸತಿ** = ಕೊಡುವುದಾದರೆ, **ತದಾ** = ಆಗ, **ತ್ವಂ** = ನೀನು, **ಆಗಚ್ಛ** = ಬಾ, **ವಿದುರಃ ವಾ** = ವಿದುರನಾದರೂ (**ಆಗಚ್ಛತು** = ಬರಲಿ), **ನಚೇತ್** = ಕೊಡುವುದಿಲ್ಲವೆಂದಾದರೆ, **ನ** = ಬರಬೇಡ, **ಇತಿ** = ಎಂದು, **ಯದುಕ್ತಾವಾನ್** = ಯಾವ ಕಾರಣದಿಂದ ಹೇಳಿದ್ದನೋ, **ತಸ್ಮಾತ್** = ಆ ಕಾರಣದಿಂದ, **ಅನಾಗತೌ** = ಬಾರದಿರುವ, **ತೌ** = ಅವರಿಬ್ಬರಿಬ್ಬರನ್ನು, **ಜ್ಞಾತ್ವಾ** = ತಿಳಿದು, **ಅಥ** = ಅನಂತರ, **ಶೌರಿಣಾ** = ಶ್ರೀಕೃಷ್ಣನಿಂದ, **ಮಂತ್ರಯಾಮಾಸ** = ಮಂತ್ರಾಲೋಚನೆ ಮಾಡಿದರು.

**ತಾತ್ಪರ್ಯ** :- ಸಂಜಯನ ಮುಖದಿಂದ ಪಾಂಡವರ ಸಂದೇಶವನ್ನು ಕೇಳಿ ಧೃತರಾಷ್ಟ್ರ ಭಯಗೊಂಡ, ಆದರೂ ಪ್ರತ್ಯವ್ಯಾಮೋಹದಿಂದ ಪಾಂಡವರಿಗೆ ರಾಜ್ಯವನ್ನು ಕೊಡಲಿಲ್ಲ. ಈ ಮಧ್ಯೆ ಧರ್ಮರಾಜ ಸಂಜಯನಿಗೆ ಒಂದು ಮಾತನ್ನು ಹೇಳಿದ್ದ ಅದೇನೆಂದರೆ ಒಂದು ವೇಳೆ ನಮ್ಮ ದೊಡ್ಡಪ್ಪ ನಮಗೆ ರಾಜ್ಯವನ್ನು ಕೊಡುವುದಾಗಿ ಒಪ್ಪಿದರೆ ನೀನು ಅಥವಾ ವಿಧುರ ಇಬ್ಬರಲ್ಲಿ ಯಾರಾದರೊಬ್ಬರು ವಿಷಯವನ್ನು ತಿಳಿಸಿ. ಇಲ್ಲವಾದರೆ ಬರುವುದು ಬೇಡ ಎಂದು ಹೇಳಿದ್ದ. ಈಗ ಅವರಿಬ್ಬರೂ ಬರಲಿಲ್ಲವಾದ್ದರಿಂದ ರಾಜ್ಯವನ್ನು ಕೊಡುವುದಿಲ್ಲವೆಂದು ಅವರ ತೀರ್ಮಾನ. ಆದ್ದರಿಂದ ಯುದ್ಧವು ಅನಿವಾರ್ಯವೆಂದು ಶ್ರೀಕೃಷ್ಣನೊಡನೆ ಮಂತ್ರಾಲೋಚನೆಯನ್ನು ಧರ್ಮರಾಜ ನಡೆಸಿದನು.

**ಸೋಽಪ್ಯಾಹಾಹಂ ಗಮಿಷ್ಯಾಮಿ ಸಭಾಯಾಮೃಷಿಸನ್ನಿಧೌ ॥ ೪೮ ॥**

ವಕ್ಷ್ಯೇ ಪಥ್ಯಾನಿ ಯುಕ್ತಾನಿ ಯದಿ ನಾಸೌ ಗ್ರಹೀಷ್ಯತಿ ।
ವಧ್ಯಃ ಸರ್ವಸ್ಯ ಲೋಕಸ್ಯ ಸ ಭವೇತ್ ಸರ್ವಧರ್ಮಹಾ ॥ ೪೯ ॥

**ಅರ್ಥ** :- **ಸಃ ಅಪಿ** = ಶ್ರೀಕೃಷ್ಣನೂ ಕೂಡ, **ಅಹಂ** = ನಾನು, **ಗಮಿಷ್ಯಾಮಿ** = ಹೋಗುತ್ತೇನೆ, **ಸಭಾಯಾಂ** = ರಾಜ ಸಭೆಯಲ್ಲಿ, **ಋಷಿಸನ್ನಿಧೌ** = ಋಷಿಗಳ ಸಮಕ್ಷಮದಲ್ಲಿ, **ಪಥ್ಯಾ** = ಹಿತಕರವಾದ, **ಯುಕ್ತಾನಿ** = ಶಾಸ್ತ್ರ ಸಮ್ಮತವಾದ, (**ವಚಾಂಸಿ** = ಮಾತುಗಳನ್ನು), **ವಕ್ಷ್ಯೇ** = ಹೇಳುತ್ತೇನೆ, **ಯದಿ** = ಒಂದು ವೇಳೆ, **ಅಸೌ** = ಈ ದುರ್ಯೋಧನನು, **ನ ಗ್ರಸಿಸ್ಯಸಿ (ಚೇತ್)** = ಕೇಳದಿದ್ದರೆ, **ತದಾ** = ಆಗ, **ಸಃ** = ಆ ದುರ್ಯೋಧನನು, **ಸರ್ವಸ್ಯ** = ಎಲ್ಲಾ, **ಲೋಕಸ್ಯ** = ಲೋಕದ (ಜನರ) ದೃಷ್ಟಿಯಲ್ಲಿ, **ಸರ್ವಾಧರ್ಮಹಾ (ಭೂತ್ವಾ)** = ಎಲ್ಲಾ ಧರ್ಮವನ್ನು ಮೀರಿದವನಾಗಿ, **ವಧ್ಯಃ** = ವಧಾರ್ಹನು, **ಭವೇತ್** = ಆಗಬೇಕು.

**ಇತ್ಯುಕ್ತೇ ವೈರಮಾತ್ಮೋತ್ಥಂ ಲೋಕಮಧ್ಯೇ ಪ್ರಹಾಪಯನ್ ।**
**ಲೋಕಸಂಗ್ರಹಣಾರ್ಥಾಯ ಭೀಮಸೇನೋಽಬ್ರವೀದ್ ವಚಃ ॥ ೫೦ ॥**

**ಅರ್ಥ** :- **ಇತಿ** = ಆ ಪ್ರಕಾರವಾಗಿ, **ಉಕ್ತೇಸತಿ** = ಶ್ರೀಕೃಷ್ಣನು ಹೇಳುತ್ತಿರಲು, (**ಭೀಮಸೇನಃ** = ಭೀಮನು), **ವೈರಂ** = ದ್ವೇಷವು (ಯುದ್ಧವು), **ಲೋಕಮಧ್ಯೆ** = ಜನರ ಮಧ್ಯದಲ್ಲಿ ಇರುವ, **ಆತ್ಮೋತ್ಥಂ** = ತನ್ನಿಂದುಂಟಾದದ್ದು ಎಂಬ ತಪ್ಪು ಗ್ರಹಿಕೆಯನ್ನು, **ಪ್ರಹಾಪುರಾನ್** = ಕಳೆದುಕೊಳ್ಳಲು, **ಲೋಕಸಂಗ್ರಹಣಾರ್ಥಯ** = ಲೋಕದ ರೀತಿಯನ್ನು ಅನುಸರಿಸುವುದಕ್ಕಾಗಿ, **ಇದಂ** = ಈ ಮುಂದೆ ಹೇಳುವ ಮಾತನ್ನು, **ಭೀಮಃ** = ಭೀಮಸೇನನು, **ಅಬ್ರವೀತ್** = ಹೇಳಿದನು.

**ತಾತ್ಪರ್ಯ** :- ಹೀಗೆ ಶ್ರೀಕೃಷ್ಣ ರಾಜಧೂತನಾಗಿ ಸಂಧಿಕಾರ್ಯಕ್ಕೆ ಹೋಗಲು ಸಿದ್ಧನಾದ. ಭೀಮಸೇನನಿಂದಾಗಿ ಈಗ ಯುದ್ಧವಾಗುತ್ತಿದೆ ಎಂದು ಜನರು ತಿಳಿದುಕೊಳ್ಳಬಾರದು, ಅದಕ್ಕಾಗಿ ಲೋಕದ ನೀತಿಯನ್ನು ಅನುಸರಿಸಿ ಭೀಮಸೇನನು ಬಂದು ಮಾತನ್ನು ಹೇಳುತ್ತಾನೆ.

**ನಾಸ್ಮನ್ನಿಮಿತ್ತನಾಶಃ ಸ್ಯಾತ್ ಕುಲಸ್ಯಾಪಿ ವಯಂ ಕುಲಮ್ ।**
**ರಕ್ಷಿತುಂ ಧಾರ್ತರಾಷ್ಟ್ರಸ್ಯ ಭವೇಮಾಧಶ್ಚರಾ ಇತಿ ॥ ೫೧ ॥**

**ಅರ್ಥ** :- **ಅಸ್ಮತ್** = ನನ್ನ, **ನಿಮತ್ತಂ** = ಕಾರಣದಿಂದಾಗಿ, **ಕುಲಸ್ಯಾಪಿ** = ಕುಲದ, **ನಾಶಃ** = ನಾಶವು, **ನಸ್ಯಾತ್** = ಆಗುವುದು ಬೇಡ, **ಕುಲಂ** =

ಕುಲವನ್ನು, **ರಕ್ಷಿತುಂ** = ರಕ್ಷಿಸುವುದಕ್ಕೆ, **ವಯಂ** = ನಾವು, **ಧಾರ್ತ್ರರಾಷ್ಟ್ರಸ್ಯ** = ದುರ್ಯೋಧನನ, **ಅಧಶ್ಚರಾಃ (ಭೂತ್ವಾ)** = ಸೇವಕರಾಗಿ, **ಭವೇಮ** = ಇರೋಣ, **ಇತಿ** = ಎಂದು.

**ತಾತ್ಪರ್ಯ :-** ಒಂದು ವೇಳೆ ನಮ್ಮಿಂದಾಗಿ ಕುಲನಾಶವಾಗುವುದಾದರೆ ಅದು ಬೇಡ. ಕುಲದ ರಕ್ಷಣೆಗಾಗಿ ನಾವು ದುರ್ಯೋಧನನ ಸೇವಕರಾಗಿಯೂ ಇರಲು ಸಿದ್ಧ ಎಂದು ಭೀಮ ಹೇಳಿದ.

**ಇಚ್ಛತಾऽಪ್ಯಖಿಲಾನ್ ಹಂತುಂ ಧಾರ್ತರಾಷ್ಟ್ರಾನ್ ದೃಢಾತ್ಮನಾ ।**
**ಭೀಮೇನೋಕ್ತೋ ವಾಸುದೇವೋ ಲೋಕಸಂಗ್ರಹಣೇಚ್ಛಯಾ ॥ ೫೨ ॥**

**ಅರ್ಥ :- ದೃಢಾತ್ಮನಾ** = ನಿಶ್ಚಲ ಮನಸ್ಸಿನಿಂದ, **ಅಖಿಲಾನ್** = ಎಲ್ಲಾ, **ಧಾರ್ತ್ರರಾಷ್ಟ್ರಾನ್** = ದುಯೋಧನಾದಿಗಳನ್ನು, **ಹಂತುಂ** = ಕೊಲ್ಲಲು, **ಇಚ್ಛತಾಪಿ** = ಭೀಮ ಬಯಸಿಯೂ ಕೂಡ, **ಲೋಕ ಸಂಗ್ರಹಣಾರ್ಥಾಯ** = ಲೋಕದ ರೀತಿಯನ್ನು ಅನುಸರಿಸುವ ಇಚ್ಛೆಯಿಂದ, **ವಾಸುದೇವಃ** = ಶ್ರೀಕೃಷ್ಣನು, **ಭೀಮೇನ** = ಭೀಮಸೇನನಿಂದ, **ಉಕ್ತಃ** = ಹೇಳಲ್ಪಟ್ಟನು.

**ತಾತ್ಪರ್ಯ :-** ವಾಸ್ತವಿಕವಾಗಿ ಅಚಲವಾದ ಮನಸ್ಸಿನಿಂದ ಎಲ್ಲ ಕೌರವರನ್ನು ಕೊಲ್ಲುವುದಾಗಿ ಭೀಮಸೇನ ಸಂಕಲ್ಪಿಸಿದ್ದಾರೆ. ಹಾಗಿದ್ದರೂ ಸ್ವಾರ್ಥದಿಂದ ಧರ್ಮನಾಶವಾಯಿತೆಂಬ ಅಪಕೀರ್ತಿಯನ್ನು ತಪ್ಪಿಸಿಕೊಳ್ಳಲು ಲೋಕರೀತಿಯನ್ನನು ಸರಿಸಿ ಭೀಮಸೇನ ಕೃಷ್ಣನಿಗೆ ಈ ಮಾತನ್ನು ಹೇಳಿದ.

**ವಧಂ ತೇಷಾಂ ಧರ್ಮಮೇವ ಲೋಕೇ ಜ್ಞಾಪಯಿತುಂ ಹರಿಃ ।**
**ಆಕ್ಷಿಪನ್ನಿವ ಭೀಮಂ ತಂ ಯುದ್ಧಾಯ ಪ್ರೇರಯದ್ ದೃಢಮ್ ॥ ೫೩ ॥**

**ಅರ್ಥ :- ತೇಷಾಂ** = ಆ ಕೌರವರ, **ವಧಂ** = ಸಂಹಾರವು, **ಧರ್ಮಮೇವ** = ಧರ್ಮವೇ ಎಂದು, **ಲೋಕೇ** = ಲೋಕದಲ್ಲಿ, **ಜ್ಞಾಪಯಂತುಂ** = ತಿಳಿಸುವುದಕ್ಕಾಗಿ, **ಹರಿಃ** = ಶ್ರೀಕೃಷ್ಣನು, **ತಂ** = ಆ, **ಭೀಮಂ** = ಭಿಮನನ್ನು, **ಆಕ್ಷಿಪನ್ನಿವ** = ಆಕ್ಷೇಪಿಸುತ್ತಿರುವವನು ಎಂಬಂತೆ, **ಯುದ್ಧಾಯ** = ಯುದ್ಧಕ್ಕಾಗಿ, **ಧೃಢಂ** = ನಿಶ್ಚಯವಾಗಿ, **ಪ್ರೈರಯತ್** = ಪ್ರೇರೇಪಿಸಿದನು.

ತಾತ್ಪರ್ಯ :- ಭೀಮ ಹೀಗೆ ಹೇಳಿದ ಮೇಲೆ ಶ್ರೀಕೃಷ್ಣನು ಕೌರವರ ವಧೆ ಅಧರ್ಮವಲ್ಲ ಅದು ಧರ್ಮವೇ ಎಂದು ಲೋಕಕ್ಕೆ ತಿಳಿಸುವುದಕ್ಕಾಗಿ ಭೀಮಸೇನನನ್ನು ಕುರಿತು ಆಕ್ಷೇಪ ಮಾಡುವಂತೆ ಮಾತನಾಡಿ ನಿಶ್ಚಯವಾಗಿ ಯುದ್ಧ ಮಾಡುವಂತೆ ಪ್ರೇರೇಪಿಸಿದ.

**ಅಭಿಪ್ರಾಯಂ ಕೇಶವಸ್ಯ ಜಾನನ್ ಭೀಮೋ ನಿಜಂ ಬಲಮ್ ।**
**ರಾಜ್ಞಾಂ ಮಧ್ಯೇಽವದತ್ ತಚ್ಚ ಕೃಷ್ಣೋಽಭ್ಯಧಿಕಮೇವ ಹಿ ॥ ೫೪ ॥**

**ಅರ್ಥ** :- **ಕೇಶವಸ್ಯ** = ಶ್ರೀಕೃಷ್ಣನ, **ಅಭಿಪ್ರಾಯಂ** = ಅಭಿಪ್ರಾಯವನ್ನು, **ಜಾನನ್** = ತಿಳಿದ, **ಭೀಮಃ** = ಭೀಮಸೇನನು, **ನಿಜಂ** = ತನ್ನ, **ಬಲಂ** = (ಬಲವನ್ನು) ಸಾಮರ್ಥ್ಯವನ್ನು, **ರಾಜ್ಞಾಂ** = ರಾಜರುಗಳ, **ಮಧ್ಯೆ** = ಮಧ್ಯದಲ್ಲಿ, **ಅವದತ್** = ಹೇಳಿದನು, **ತತ್ ಚ** = ಆ ಬಲವಾದರೋ, **ಅಭ್ಯದಿಕಂ ಏವ** = ಹೆಚ್ಚಾಗಿಯೇ (**ಅಸ್ತಿ** = ಇದೆ, **ಇತಿ** = ಹೀಗೆ), **ಕೃಷ್ಣಃ** = ಶ್ರೀಕೃಷ್ಣನು, **ಅವದತ್ ಹಿ** = ಹೇಳಿದನಷ್ಟೆ.

ತಾತ್ಪರ್ಯ :- ನಮ್ಮಿಂದಾಗಿ ಕುಲನಾಶವಾಗದಿರಲಿ. ಬೇಕಾದರೆ ದಾಸರಾಗಿರುತ್ತೇವೆ. ಎಂದು ಭೀಮನು ಶಾಂತಿಯನ್ನು ಬಯಸಿದ. ಇದು ಭಯಾದಿಗಳಿಂದ ಹೇಳಿದ ಮಾತಲ್ಲ ಎಂದು ಲೋಕಕ್ಕೆ ತಿಳಿಸುವುದು ಕೃಷ್ಣನ ಅಭಿಪ್ರಾಯವಾಗಿತ್ತು. ಇದನ್ನು ತಿಳಿದ ಭೀಮ ಯುದ್ಧದ ಸಹಾಯಕ್ಕಾಗಿ ಬಂದ ದ್ರುಪದಾದಿರಾಜರುಗಳ ಮಧ್ಯದಲ್ಲಿ ತನ್ನ ಬಲವನ್ನು ಹೇಳಿಕೊಂಡ. ಆಗ ಶ್ರೀಕೃಷ್ಣನು ನಿನ್ನ ಸಾಮರ್ಥ್ಯ ನೀನು ಹೇಳುದುದಕ್ಕಿಂತ ಹೆಚ್ಚಿದೆಯೆಂದು ಹೇಳಿದ.

**ಶಶಂಸ ಸತ್ಯೈಃ ಸದ್ವಾಕ್ಯೈಃ ರಾಜ್ಞಾಂ ಮಧ್ಯೇ ಪ್ರಕಾಶಯನ್ ।**
**ವಧಂ ಕುರೂಣಾಂ ಸದ್ಧರ್ಮಂ ಗುಣಾನ್ ಭೀಮಸ್ಯ ಚಾಮಿತಾನ್ ॥೫೫॥**

**ಅರ್ಥ** :- **ಭೀಮಸ್ಯ** = ಭೀಮಸೇನನ, **ಅಮಿತಾನ್** = ಅಪರಿಮಿತವಾದ, **ಗುಣಾನ್** = ಗುಣಗಳನ್ನು, **ರಾಜ್ಞಾಂ** = ರಾಜರುಗಳ, **ಮಧ್ಯೇ** = ಮಧ್ಯದಲ್ಲಿ, **ಸತ್ಯೈಃ** = ಯಥಾರ್ಥವಾದ, **ಸದ್ವಾಕ್ಯೈಃ** = ದೋಷರಹಿತವಾದ ಮಾತುಗಳಿಂದ, **ಪ್ರಕಾಶಯನ್** = ಪ್ರಕಟಪಡಿಸುತ್ತಾ, **ಕುರೂಣಾಂ** = ಕೌರವರ, **ವಧಂ** = ಸಂಹಾರವು, **ಸದ್ಧರ್ಮಃ** = ಉತ್ತಮವಾದ ಧರ್ಮವೆಂದು, **ಶಶಂಸ** = ಪ್ರಶಂಸೆ ಮಾಡಿದನು.

ತಾತ್ಪರ್ಯ :- ಶ್ರೀ ಕೃಷ್ಣನು ರಾಜರುಗಳ ಮಧ್ಯದಲ್ಲಿ ಭೀಮಸೇನನಲ್ಲಿರುವ ಅಸಂಖ್ಯಾತ ಗುಣಗಳನ್ನು ಯತಾರ್ಥವಾದ ವ್ಯಾಕರಣಾದಿ ದೋಷಾರಹಿತವಾದ ಮಾತುಗಳಿಂದ ರಾಜರುಗಳ ಮಧ್ಯದಲ್ಲಿ ವ್ಯಕಪಡಿಸುತ್ತಾ ಕೌರವರ ವಧೆಯು ಉತ್ತಮವಾದ ಧರ್ಮಸಾಧನ ಎಂದು ಪ್ರಶಂಸಿದನು.

**ನಿತ್ಯಮೇಕಮನಸ್ಕೌ ತಾವಪಿ ಕೇಶವಮಾರುತೀ ।**
**ಏವಂ ಲೋಕಸ್ಯ ಸಂವಾದಹೇತೋಃ ಸಂವಾದಮಕ್ರತಾಮ್ ॥ ೫೬ ॥**

**ಅರ್ಥ** :- **ತೌ ಕೇಶವಭೀಮೌ** = ಆ ಕೃಷ್ಣಭೀಮರಿಬ್ಬರೂ, **ನಿತ್ಯಂ ಅಪಿ** = ಯಾವಾಗಲೂ ಕೂಡ, **ಏಕಮನಸ್ಕೌ** = ಒಂದೇ ಅಭಿಪ್ರಾಯ ಉಳ್ಳವರು, **ಏವಂ** = ಹೀಗಿದ್ದರೂ ಕೂಡ, **ಲೋಕಸ್ಯ** = ಲೋಕದ, **ಸಂವಾದ ಹೇತೋಃ** = ಸಹಮತ ಪಡೆಯುವದಕ್ಕಾಗಿ, **ಸುವಾದಂ** = ಸುವಾದವನ್ನು, **ಅಕ್ರತಾಂ** = ಮಾಡಿದರು.

ತಾತ್ಪರ್ಯ :- ಕೃಷ್ಣಭೀಮರಿಬ್ಬರೂ ಎಂದೆಂದಿಗೂ ವಿರುದ್ಧವಾದ ಅಭಿಪ್ರಾಯ ಉಳ್ಳವರಲ್ಲ. ಅವರಿಬ್ಬರದ್ದೂ ಏಕಾಭಿಪ್ರಾಯವಿರುತ್ತದೆ. ಆದರೂ ಪ್ರಕೃತ ಲೋಕದಲ್ಲಿ ಕುಲಕ್ಷಯವಾಗುತ್ತಿದ್ದರೂ ಕೃಷ್ಣಾ ತಡೆಯಲಿಲ್ಲ ಭೀಮನೇ ಜಗಳಗಂಟ ಎಂದೆಲ್ಲಾ ಜನ ಆಡಿಕೊಳ್ಳಬಾರದು. ಲೋಕವೇ ಯುದ್ಧ ಅನಿವಾರ್ಯ ಎಂದು ಹೇಳಬೇಕು. ಆದರೂ ಕೃಷ್ಣಭೀಮರು ಶಾಂತಿಗೆ ಪ್ರಯತ್ನ ಪಟ್ಟರು ಎಂದು ಲೋಕಕ್ಕೆ ತಿಳಿಸುವುದು ಇಬ್ಬರಿಗೂ ಅಭಿಪ್ರೇತವಾಗಿತ್ತು. ಯುದ್ಧ ನಡೆಯುವುದೆ ಸರಿಯಾದ ಕ್ರಮ ಎಂದು ಲೋಕದ ಸಹಮತಿ ಪಡೆಯುವುದಕ್ಕಾಗಿ ಈ ತರಹದ ಸುವಾದವನ್ನು ನಡೆಸಿದರು.

**ತತಃ ಕೃಷ್ಣೋಽರ್ಜುನಂ ಚೈವ ಕೃಪಾಲುಂ ಸಂಧಿಕಾಮುಕಮ್ ।**
**ಹೇತುಮದ್ಭಿಃ ಶುಭೈರ್ವಾಕ್ಯೈರನುನೀಯ ಜಗತ್ಪತಿಃ ।**
**ಉಕ್ತೋ ಮಾನುಷಯಾ ಬುದ್ಧ್ಯಾ ನಕುಲೇನ ಸುನೀತಿವತ್ ॥ ೫೭ ॥**

**ಅರ್ಥ** :- **ತತಃ** = ಅನಂತರ, **ಕೃಪಾಲುಂ** = ದಯಾಳುವಾದ, **ಸಂಧಿ ಕಾಮಂ** = ಸಂಧಿಯನ್ನು ಜಯಿಸಿದ, **ಅರ್ಜುನಂ ಚೈವ** = ಅರ್ಜುನನನ್ನು ಕೂಡ, **ಜಗತ್ಪತಿಃ** = ಜಗದೊಡೆಯನಾದ, **ಕೃಷ್ಣಃ** = ಶ್ರೀಕೃಷ್ಣನು, **ಹೇತುಮದ್ಭಿಃ**

= ಯುಕ್ತಿಗಳಿಂದ ಕೂಡಿದ, **ಶುಭೈಃ** = ಮಂಗಲಕರವಾದ, **ವಾಕ್ಯೈಃ** = ಮಾತುಗಳಿಂದ, **ಅನುನೀಯ** = ಯುದ್ಧಕ್ಕೆ ಒಪ್ಪಿಸಿ, **ನಕುಲೇನ** = ನಕುಲನಿಂದ, **ಮಾನುಷಯಾ** = ಮನುಷ್ಯನೆಂಬ, **ಬುಧ್ಯಾ** = ಬುದ್ಧಿಯಿಂದ, **ಸುನೀತಿವತ್** = ಒಳ್ಳೆಯ ನೀತಿಜ್ಞನಂತೆ, **ಉಕ್ತಃ** = ಶೀಕ್ಷಿತನು, (**ಅಭೂತ್** = ಆದನು).

**ತಾತ್ಪರ್ಯ** :- ಹೀಗೆ ಕೌರವಾದಿಗಳ ವಧೆ ಧರ್ಮವೆಂದು ಪ್ರಕಟಪಡಿಸಿ ನಂತರ ದಯಾಲುವಾದ ಅರ್ಜುನನು ಕೌರವರೊಡನೆ ರಾಜಿಯಾಗಬೇಕೆಂದು ಬಯಸಿದ್ದ ಆದರೆ ಜಗತ್ಪತಿಯಾದ ಶ್ರೀಕೃಷ್ಣನು ಯುದ್ಧದ ಅನಿವಾರ್ಯತೆಯ ಕಾರಣಗಳನ್ನು, ಯುದ್ಧವು ನಿರ್ದುಷ್ಟ ಎಂಬುದನ್ನು ಯುಕ್ತಿಯುಕ್ತ ಮಾತುಗಳಿಂದ ಒಪ್ಪಿಸಿದ. ಈ ಮಧ್ಯದಲ್ಲಿ ನಕುಲನು ಕೃಷ್ಣ ಮನುಷ್ಯ ಎಂದು ಭ್ರಮಿಸಿ ಹಿರಿಯರು ನೀತಿ ಹೇಳುವಂತೆ ಕೃಷ್ಣನಿಗೆ ಉಪದೇಶ ಮಾಡಿದ. ಕೃಷ್ಣನಿಗೆ ''ಸಾಮಬೇಧಾದಿಗಳಿಂದ ದುರ್ಯೋಧನನನ್ನು ದಾರಿಗೆ ತರಬಂತದು''ದೆಂದು ಉಪದೇಶ ಮಾಡಿದ.

**ಶೌರ್ಯಪ್ರಕಾಶಾನಾಯೈವ ಯುದ್ಧಂ ಯೋಜಯತಾಂ ಭವಾನ್ ।**
**ಇತ್ಯುಕ್ತಃ ಸಹದೇವೇನ ಯುಯುಧಾನೇನ ಚಾಚ್ಯುತಃ ॥ ೫೮ ॥**

**ಅರ್ಥ** :- **ಭವಾನ್** = ನೀನು, **ಶೌರ್ಯ ಪ್ರಕಾಶನಾಯ ಏವ** = ಶೌರ್ಯವನ್ನು ತೋರಿಸುವುದಕ್ಕಾಗಿಯೇ, **ಯುದ್ಧಂ** = ಯುದ್ಧವನ್ನು, **ಯೋಜಯತಾತ್** = ಆಯೋಜಿಸು, **ಇತಿ** = ಈ ರೀತಿಯಾಗಿ, **ಸಹದೇವೇನ** = ಸಹದೇವನಿಂದ, **ಚ** = ಮತ್ತು, **ಯುಯುಧಾನೇನ** = ಸಾತ್ಯಕಿಯಿಂದ, **ಅಚ್ಯುತಃ** = ಶ್ರೀಕೃಷ್ಣನು, **ಉಕ್ತಃ** = ಹೇಳಿಸಿಕೊಳ್ಳಲ್ಪಟ್ಟನು.

**ತಾತ್ಪರ್ಯ** :- ಸಹದೇವನು ಹಾಗೂ ಸತ್ಯಕಿಯು ಶ್ರೀಕೃಷ್ಣನಿಗೆ 'ಕೃಷ್ಣ ನೀನು ಶೌರ್ಯ ಪ್ರದರ್ಶನ ನಡೆಯುವುದಕ್ಕಾಗಿಯೇ ಈ ಯುದ್ಧ ನಡೆಯುವಂತೆ ಮಾಡು' ಎಂದು ಹೇಳಿದರು.

**ದಸ್ಯೂನಾಂ ನಿಗ್ರಹೋ ಧರ್ಮಃ ಕ್ಷತ್ರಿಯಾಣಾಂ ಯತಃ ಪರಃ ।**
**ಅತೋ ನ ಧಾರ್ತರಾಷ್ಟ್ರೈರ್ನಃ ಸಂಧಿಃ ಸ್ಯಾದಿತಿ ಪಾರ್ಷತೀ ॥ ೫೯ ॥**

**ಜಗಾದ ಕೃಷ್ಣಂ ಸೋಽಪ್ಯೇನಾಮೋಮಿತ್ಯುಕ್ತ್ವಾ ವಿನಿರ್ಯಯೌ ॥ ೬೦ ॥**

**ಅರ್ಥ** :- **ಪಾರ್ಷತೀ** = ದ್ರೌಪದಿಯು, **ದಸ್ಯೂನಾಂ** = ಕಳ್ಳರ, **ನಿಗ್ರಹಃ** = ನಿಗ್ರಹವು, **ಕ್ಷತ್ರಿಯಾಣಾಂ** = ಕ್ಷತ್ರಿಯರಿಗೆ, **ಯತಃ** = ಯಾವ ಕಾರಣದಿಂದ, **ಪರಃ** = ಉತ್ತಮವಾದ ಧರ್ಮವೋ, **ಅತಃ** = ಆದ್ದರಿಂದ, **ಧಾರ್ತರಾಷ್ಟ್ರೈಃ** = ಧೃತರಾಷ್ಟ್ರಾದಿಗಳ ದೆಸೆಯಿಂದ, **ನಃ** = ನಮಗೆ, **ಸಂಧಿಃ** = ಸಂಧಾನವು, **ನ ಸ್ಯಾತ್** = ಆಗದಿರಲಿ, **ಇತಿ** = ಹೀಗೆ ಕೃಷ್ಣನನ್ನು ಕುರಿತು ಹೇಳಿದಳು, **ಸಃ ಅಪಿ** = ಶ್ರೀಕೃಷ್ಣನೂ ಕೂಡ, **ಏನಾಂ** = ಈ ದ್ರೌಪದಿಯನ್ನು ಕುರಿತು, **ಓಂ ಇತಿ** = ಹಾಗೆ ಆಗಲೆಂದು, **ಉಕ್ತ್ವಾ** = ಹೇಳಿ, **ವಿನಿರ್ಯಂತೌ** = ಹೊರಟು ಹೋದನು.

**ತಾತ್ಪರ್ಯ** :- ದ್ರೌಪದಿಯು ಕೃಷ್ಣನನ್ನು ಕುರಿತು ಹೇಳುತ್ತಾಳೆ. ಕಳ್ಳರನ್ನು ನಿಗ್ರಹಿಸುವುದು ಕ್ಷತ್ರಿಯರಿಗೆ ಉತ್ತಮ ಧರ್ಮವಾಗಿದೆ ಆದ್ದರಿಂದ ದೊಡ್ಡ ದರೋಡೆಕೋರರಾದ ಕೌರವರಿಗೂ ನಮಗೂ ಸಂಧಾನ ಬೇಡವೇ ಬೇಡ. ಯುದ್ಧವೇ ನಡೆಯಲಿ ಎಂದು ಅಭಿಪ್ರಾಯ ವ್ಯಕ್ತಪಡಿಸಿದಳು. ಅದಕ್ಕೆ ಶ್ರೀಕೃಷ್ಣನು ಹಾಗೆ ಆಗಲಿ ಎಂದು ಹೇಳಿ ಹಸ್ತಿನಪುರಕ್ಕೆ ಹೊರಟು ಹೋದನು.

**ಸಸಾತ್ಯಕಿಃ ಸ್ಯಂದನವರ್ಯಸಂಸ್ಥಿತಃ**
**ಪೃಥಾತನೂಜೈರಖಿಲೈಃ ಸ ಭೂಮಿಪೈಃ ।**
**ಅನ್ವಾಗತೋ ದೂರತರಂ ಗಿರಾ ತಾನ್**
**ಸಂಸ್ಥಾಪ್ಯ ವಿಪ್ರಪ್ರವರೈಃ ಕುರೂನ್ ಯಯೌ ॥ ೬೧ ॥**

**ಅರ್ಥ** :- **ಸಸಾತ್ಯಕಿ** = ಸಾತ್ಯಕಿಯಿಂದ ಸಹಿತನಾದ, **ಸಂದನವರ್ಯಸಂಸ್ಥಾತಃ** = ಉತ್ತಮವಾದ ರಥದಲ್ಲಿ ಕುಳಿತ, **ಪೃಥಾತನೂಜೈಃ** = ಕುಂತಿಯ ಮಕ್ಕಳಿಂದ, **ಅಖಿಲೈಃ** = ಎಲ್ಲಾ, **ಭೂಮಿಜೈಃ** = ರಾಜರುಗಳಿಂದ, **ದೂರತರಂ** = ಬಹಳ ದೂರ, **ಅನ್ವಗತಃ** = ಅನುಸರಿಸಲ್ಪಟ್ಟ, **ಸಃ** = ಆ ಶ್ರೀಕೃಷ್ಣನು, **ತಾನ್** = ಆ ಎಲ್ಲರನ್ನು, **ಗಿರಾ** = ಮಾತಿನಿಂದ, **ಸಂಸ್ಥಾಪ್ಯ** = ನಿಲ್ಲಿಸಿ, **ವಿಪ್ರವರೈಃ (ಸಹ)** = ಬ್ರಾಹ್ಮಣರೊಂದಿಗೆ, **ಕುರೂನ್** = ಕೌರವರನ್ನು ಕುರಿತು, **ಯಯೌ** = ಹೋದನು.

**ತಾತ್ಪರ್ಯ** :- ಶ್ರೀಕೃಷ್ಣ ಪರಮಾತ್ಮ ಸಾತ್ಯಕಿಯಿಂದ ಸಹಿತನಾಗಿ ಒಳ್ಳೆಯ ರಥವನ್ನೆರಿ ಕುಳಿತು ಪ್ರಮಾಣ ಬಳಸಿದ. ಆಗ ಬಹುದೂರದವರೆಗೆ ಪಾಂಡವರು

ಅನೇಕ ರಾಜರುಗಳು ಬಹುದೂರ ಕೃಷ್ಣನನ್ನು ಅನುಸರಿಸಿ ಬರುತ್ತಿದ್ದರು. ಅವರೆಲ್ಲರಿಗೂ ''ನೀವು ಹಿಂಬಾಲಿಸಿದ್ದು ಸಾಕು ಎಂದು ಅವರನ್ನು ಅಲ್ಲೇ ನಿಲ್ಲಿಸಿ ಬ್ರಾಹ್ಮಣೋತ್ತಮರಿಂದ ಕೂಡಿಕೊಂಡು ಕೌರವರ .. ಸಂಧಿಗಾಗಿ ಹೊರಟನು.

**ಏಕೋಽಪಿ ವಿಷ್ಣುಃ ಸ ತು ಭಾರ್ಗವಾತ್ಮಾ**
**ವ್ಯಾಸಃ ಸಶಿಷ್ಯಸ್ತದನನ್ಯದೃಶ್ಯಃ ।**
**ಯಯೌ ತದುಕ್ತೇರ್ಹಿ ಗುಣಾನ್ ಪ್ರವೇತ್ತುಂ**
**ನಾನ್ಯೋ ಹಿ ಶಕ್ತಸ್ತಮೃತೇ ಯತಃ ಪ್ರಭುಮ್ ॥ ೬೨ ॥**

**ಅರ್ಥ** :- **ವಿಷ್ಣುಃ** = ಪರಮಾತ್ಮನು, ಏಕಃ ಅಪಿ = ಒಬ್ಬನೇ ಆದರೂ, **ಸಃ ತು** = ಶ್ರೀಕೃಷ್ಣರೂಪನಾದ ಅವನು, **ಭಾರ್ಗವಾತ್ಮಾ (ಭೂತ್ವಾ)** = ಪರಶುರಾಮ ರೂಪಿಯಾಗಿ, **ವ್ಯಾಸಾತ್ಮಕಃ ಚ (ಭೂತ್ವಾ)** = ವೇದವ್ಯಾಸ ರೂಪಿಯಾಗಿಯೂ ಕೂಡ, **ಮುನೀಂದ್ರೈಃ (ಸಹ)** = ಮುನಿಶ್ರೇಷ್ಠರೊಂದಿಗೆ, **ಅನುಗತಃ (ಸನ್)** = ಕೂಡಿದವನಾಗಿ, **ಯಯೌ** = ಹೊರಟನು, **ಯತಃ ಹಿ** = ಏಕೆಂದರೆ, **ತದುಕ್ತೇಃ** = ಅವನ ಮಾತಿನ, **ಗುಣಾನ್** = ಗುಣಗಳನ್ನು (ಸ್ವಾರಸ್ಯಗಳನ್ನು), **ಪ್ರವೇತ್ತುಂ** = ಚೆನ್ನಾಗಿ ತಿಳಿಯಲು, **ತಂ ಪ್ರಭುಂ ಋತೇ** = ಆ ಪರಮಾತ್ಮನ ಹೊರತಾಗಿ, **ಅನ್ಯಃ** = ಇನ್ನೊಬ್ಬನು, **ನ ಶಕ್ತಃ ಹಿ** = ಸಮರ್ಥನಲ್ಲವಷ್ಟೇ.

**ತಾತ್ಪರ್ಯ** :- ಮುನಿಶ್ರೇಷ್ಠರೊಂದಿಗೆ ವ್ಯಾಸರೂಪಿಯಾಗಿ ಪರಶುರಾಮ ರೂಪಿಯಾಗಿ ಶ್ರೀಕೃಷ್ಣ ಹೊರಟ. ಪರಮಾತ್ಮ ಒಬ್ಬನೇ ಯಾವ ರಪೂಗಳಲ್ಲಿಯೇ ಭೇದವಿಲ್ಲ. ಹೀಗಿದ್ದವ ಅನೇಕ ರೂಪಗಳಿಂದ ಏಕೆ ಹೊರಟ ಎಂದರೆ ಶ್ರೀಕೃಷ್ಣನು ಕೌರವ ಸಭೆಯಲ್ಲಿ ಸ್ವಾರಸ್ಯಕರವಾದ ಮಾತುಗಳನ್ನಾಡುತ್ತಾನೆ. ತಾನಾಡಿದ ಮಾತಿನ ಸ್ವಾರಸ್ಯವನ್ನು ತಾನೇ ತಿಳಿಯಲು ಸಾಧ್ಯವಿನಹ ಬೇರೆಯವರಿಂದ ಸಾಧ್ಯವಿಲ್ಲ. ಆದ್ದರಿಂದ ಅನೇಕ ರೂಪದಿಂದ ಹೊರಟ. ಅಂದರೆ ಕೃಷ್ಣ ಹೇಳಿದ ಮಾತುಗಳನ್ನು ಸಭೆಯಲ್ಲಿ ಧೃತರಾಷ್ಟನಿಗೆ ತಿಳಿಸಿ ಹೇಳಲು ವ್ಯಾಸರಾಮರೇ ಸಾಮರ್ಥರೆಂಮ ಅಭಿಪ್ರಾಯ.

**ಸ ವಂದ್ಯಮಾನೋಽಖಿಲರಾಷ್ಟ್ರವಾಸಿಭಿಃ**
**ಪ್ರಸೂನವರ್ಷೈರಭಿವರ್ಷಿತಃ ಸುರೈಃ ।**
**ಸಂಸ್ತೂಯಮಾನಃ ಪ್ರಣತೋಽಬ್ಜಜಾದಿಭಿ-**
**ರ್ಗಜಾಹ್ವಯಂ ಪ್ರಾಪ ಪರೋಽಪ್ರಮೇಯಃ ॥ ೬೩ ॥**

**ಅರ್ಥ** :- **ಪರಃ** = ಸರ್ವೋತ್ತಮನಾದ, **ಅಪ್ರಮೇಯಃ** = ಯಾರಿಂದಲೂ ಸಂಪೂರ್ಣವಾಗಿ ತಿಳಿಯಲು ಅಶಕ್ಯನಾದ, **ಸಃ** = ಆ ಶ್ರೀಕೃಷ್ಣನು, **ಅಖಿಲರಾಷ್ಟ್ರವಾಸಿಭಿಃ** = ಎಲ್ಲಾ ಪೌರರಿಂದ, **ವಂದ್ಯಮಾನಃ (ಸನ್)** = ನಮಸ್ಕೃತನಾಗುತ್ತಾ, **ಅಬ್ಜಜಾದಿಭಿಃ** = ಬ್ರಹ್ಮನೇ ಮೊದಲಾದ, **ಸುರೈಃ** = ದೇವತೆಗಳಿಂದ, **ಪ್ರಸೂನವರ್ಷೈಃ** = ಹೂಮಳೆಗಳಿಂದ, **ಅಭಿವರ್ಷಿತಃ ಸನ್** = ಸುರಿಸಿಕೊಳ್ಳುತ್ತಾ, **ಸಂಸ್ತೂಯಮಾನಃ (ಸನ್)** = ಚೆನ್ನಾಗಿ ಸ್ತೋತ್ರ ಮಾಡಿಸಿಕೊಳ್ಳುತ್ತಾ, **ಪ್ರಾಣತಃ (ಸನ್)** = ನಮಸ್ಕರಿಸಿಕೊಳ್ಳುತ್ತಾ, **ಗಜಾಹ್ವಯಂ** = ಹಸ್ತಿನಾವತಿಯನ್ನು, **ಪ್ರಾಪ** = ಹೊಂದಿದನು.

**ತಾತ್ಪರ್ಯ** :- ಅಪ್ರಮೇಯನಾದ ಸರ್ವೋತ್ತಮನಾದ ಶ್ರೀಕೃಷ್ಣನು ಹಸ್ತಿನಾವತಿಗೆ ಹೋಗುವಾಗ ಎಲ್ಲಾ ನಾಗರಿಕರು ಅವನಿಗೆ ನಮಸ್ಕಾರ ಮಾಡಿದರು. ಅದೃಷ್ಟರಾಗಿ ದೇವತೆಗಳು ಪುಷ್ಪವೃಷ್ಟಿಯನ್ನು ಮಾಡುತ್ತಾ ಚೆನ್ನಾಗಿ ಸ್ತೋತ್ರ ಮಾಡಿದರು. ಬ್ರಹ್ಮಾದಿ ದೇವತೆಗಳು ನಮಸ್ಕಾರ ಮಾಡಿದರು. ಹೀಗೆ ಶ್ರೀಕೃಷ್ಣನು ರಾಜಾಧಿರಾಜನಾಗಿ ಹಸ್ತಿನಾವತಿಗೆ ಹೋದನು.

**ಸ ಭೀಷ್ಮಮುಖ್ಯೈಃ ಸರಸಾಭಿಯಾತಃ**
**ಸಹೈವ ತೈಃ ಪ್ರಯಯೌ ರಾಜಮಾರ್ಗೇ ।**
**ದಿದೃಕ್ಷವಸ್ತಂ ಜಗದೇಕಸುಂದರಂ**
**ಗುಣಾರ್ಣವಂ ಪ್ರಾಯಯುರತ್ರ ಸರ್ವೇ ॥ ೬೪ ॥**

**ಅರ್ಥ** :- **ಸಃ** = ಆ ಶ್ರೀಕೃಷ್ಣನು, **ಭೀಷ್ಮಮುಖ್ಯೈಃ** = ಭೀಷ್ಮನೇ ಮೊದಲಾದವರಿಂದ, **ಸರಸಾ** = ಸ್ನೇಹಪೂರ್ವಕನಾಗಿ, **ಅಭಿಯಾತಃ** = ಎದುರುಗೊಂಡನು, **ರಾಜಮಾರ್ಗೇ** = ರಾಜಬೀದಿಯಲ್ಲಿ, **ತೈಃ** = ಆ ಭೀಷ್ಮಾದಿಗಳಿಂದ, **ಸಹೈವ** = ಜೊತೆಗೂಡಿ, **ಪ್ರಯಯೌ** = ಹೋದನು,

ಜಗದೇಕಸುಂದರಂ = ಜಗದೇಕ ಸುಂದನಾದ, ಗುಣಾರ್ಣವಂ = ಸದ್ಗುಣಗಳಿಂದ ಸಮುದ್ರದಂತಿರುವ, ತಂ = ಶ್ರೀಕೃಷ್ಣನನ್ನು, ದಿದೃಕ್ಷವಃ = ನೋಡುವ ಇಚ್ಛೆಯುಳ್ಳ, ಸರ್ವೇ = ಎಲ್ಲಾ ಪ್ರಜೆಗಳು, ತತ್ರ = ಆ ರಾಜಮಾರ್ಗಕ್ಕೆ, ಪ್ರಾಯಯುಃ = ಬಂದರು.

ತಾತ್ಪರ್ಯ :- ಶ್ರೀಕೃಷ್ಣ ಹಸ್ತಿನಾವತಿಗೆ ಬಂದಾಗ ಭೀಷ್ಮ ದ್ರೋಣಾದಿಗಳು ಬಹಳ ಪ್ರೀತಿಯಿಂದ ಎದುರುಗೊಂಡರು. ನಂತರ ಶ್ರೀಕೃಷ್ಣನು ಅವರೊಂದಿಗೆ ರಾಜಮಾರ್ಗದಲ್ಲಿ ನಡೆದ. ಜಗದೇಕಸುಂದರನಾದ ಸದ್ಗುಣಾಂಬೋಧಿಯಾದ ಶ್ರೀಕೃಷ್ಣನನ್ನು ನೋಡಬೇಕೆಂದು ಬಯಸಿ ಎಲ್ಲಾ ಪ್ರಜೆಗಳು ಆ ರಾಜಬೀದಿಗೆ ಬಂದರು.

ಸಭಾಜಿತಸ್ತೈಃ ಪರಮಾದರೇಣ
ವಿವೇಶ ಗೇಹಂ ನೃಪತೇರನಂತಃ ।
ಸ ಭೀಷ್ಮಮುಖ್ಯಾನ್ ಪುರತೋ ನಿಧಾಯ
ವೈಚಿತ್ರವೀರ್ಯೇಣ ಸಮರ್ಚಿತೋಽಜಃ ॥ ೬೫ ॥

ರೌಗ್ಮೇ ನಿಷಣ್ಣಃ ಪರಮಾಸನೇ ಪ್ರಭು-
ರ್ಬಭೌ ಸ್ವಭಾಸಾ ಕಕುಭೋಽವಭಾಸಯನ್ ॥ ೬೬ ॥

ಅರ್ಥ :- ತೈಃ = ಆ ಎಲ್ಲರಿಂದಲೂ, ಪರಮಾದರೇಣ = ಅತ್ಯಂತ ಆದರದಿಂದ, ಸಭಾಜಿತಃ (ಸನ್) = ಸತ್ಕರಿಸಲ್ಪಡುತ್ತಾ, ನೃಪತೇಃ = ಧೃತರಾಷ್ಟ್ರನ, ಗೇಹಂ = ಮನೆಯನ್ನು, ವಿವೇಶ = ಪ್ರವೇಶಮಾಡಿದನು, ಸಃ = ಧೃತರಾಷ್ಟ್ರನು, ಭೀಷ್ಮಮುಖ್ಯಾನ್ = ಭೀಷ್ಮನೇ ಮುಂತಾದವರನ್ನು, ಪುರತಃ = ಮುಂದೆ, ನಿಧಾಯ = ಇಟ್ಟುಕೊಂಡು, ವೈಚಿತ್ರವೀರ್ಯೇಣ = ಧೃತರಾಷ್ಟ್ರನಿಂದ, ಅಜಃ = ಶ್ರೀಕೃಷ್ಣನು, ಸಮರ್ಚಿತಃ = ಸತ್ಕರಿಸಲ್ಪಟ್ಟನು, ಪ್ರಭುಃ = ಸಮರ್ಥನಾದ ಶ್ರೀಕೃಷ್ಣನು, ರೌಗ್ಮೇ = ಬಂಗಾರದ, ಪರಮಾಸನೆ = ಉತ್ತಮವಾದ ಆಸನದಲ್ಲಿ, ನಿಷಣ್ಣಃ (ಸನ್) = ಕುಳಿತವನಾಗಿ, ಸ್ವಭಾಸಾ = ತನ್ನ ಕಾಂತಿಯಿಂದ, ಕಕುಭಃ = ದಿಕ್ಕುಗಳನ್ನು, ಅವಭಾಸಯನ್ = ಬೆಳಗುತ್ತಾ, ಬಭೌ = ಶೋಭಿಸಿದನು.

**ಯಥೋಚಿತಂ ತೇಷು ವಿಧಾಯ ಕೇಶವೋ**
**ದೌರ್ಯೋಧನಂ ಪ್ರಾಪ್ಯ ಗೃಹಂ ಚ ಪೂಜಿತಃ ।**
**ಪೂಜಾಂ ತದೀಯಾಂ ಗುಣವದ್ದ್ವಿಡಿತ್ಯಸೌ**
**ಜಗ್ರಾಹ ನೋ ವಿದುರಂ ಚಾऽಜಗಾಮ ॥ ೬೭ ॥**

**ಅರ್ಥ :-** **ಕೇಶವಃ** = ಶ್ರೀಕೃಷ್ಣನು, **ತೇಷು** = ಆ ಭೀಷ್ಮಾದಿಗಳಲ್ಲಿ, **ಯಥೋಚಿತಂ** = ಯಥಾಯೋಗ್ಯವಾದ ಗೌರವವನ್ನು, **ವಿಧಾಯ** = ಮಾಡಿ, **ದುರ್ಯೋಧನಂ** = ದುರ್ಯೋಧನನನ್ನು, **ಚ** = ಮತ್ತು, **ಗೃಹಂ** = ಮನೆಯನ್ನು, **ಪ್ರಾಪ್ಯ** = ಹೊಂದಿ, **ಪೂಜಿತಃ** = ಪೂಜಿಸಲ್ಪಟ್ಟನು, **ಅಸೌ** = ಈ ದುರ್ಯೋಧನನು, **ಗುಣವದ್ವಿಟ್** = ಗುಣವಂತರಾದ ಪಾಂಡವರ ದ್ವೇಷಿ, **ಇತಿ** = ಎಂಬ ಕಾರಣದಿಂದ, **ತದೀಯಾಂ** = ಅವನ, **ಪೂಜಾಂ** = ಪೂಜೆಯನ್ನು, **ನ ಜಗ್ರಾಹ** = ಸ್ವೀಕರಿಸಲಿಲ್ಲ, **ವಿದುರಂ** = ವಿದುರನನ್ನು ಕುರಿತು, **ಆಜಗಾಮ** = ಬಂದನು.

**ತಾತ್ಪರ್ಯ :-** ಭೀಷ್ಮಾದಿಗಳಿಂದ ಸತ್ಕೃತನಾದ ಶ್ರೀಕೃಷ್ಣನು ತಾನೂ ಕೂಡ ಅವರಿಗೆಲ್ಲ ಸಂಪ್ರದಾಯಾನುಸಾರವಾಗಿ ಗೌರವವನ್ನು ಸಲ್ಲಿಸಿದನು. ನಂತರ ದುರ್ಯೋಧನನ ಮನೆಗೆ ಹೋದನು. ಅಲ್ಲಿ ಅವನು ಪೂಜಿಸಿದನು. ಆದರೆ ಅವನು ಗುಣವಂತರಾದ ಪಾಂಡವರಲ್ಲಿ ದ್ವೇಷ ಮಾಡುತ್ತಾನೆ ಆದ್ದರಿಂದ ಉದ್ದೇಶಪೂರ್ವಕವಾಗಿಯೇ ಅವನ ಪೂಜೆಯನ್ನು ಸ್ವೀಕರಿಸಲಿಲ್ಲ. ದುಷ್ಟಾನ್ನವನ್ನು ತಿನ್ನಬಾರದೆಂಬ ಉದ್ದೇಶದಿಂದ ವಿದುರನ ಮನೆಗೆ ನಡೆದ.

**ಸ ಭೀಷ್ಮಪೂರ್ವೈರಭಿಯಾಚಿತೋऽಪಿ**
**ಜಗಾಮ ನೈಷಾಂ ಗೃಹಮಾದಿದೇವಃ ।**
**ಉಪೇಕ್ಷಿತಾ ದ್ರೌಪದೀತ್ಯಪ್ರಮೇಯೋ**
**ಜಗಾಮ ಗೇಹಂ ವಿದುರಸ್ಯ ಶೀಘ್ರಮ್ ॥ ೬೮ ॥**

**ಅರ್ಥ :-** **ಆದಿದೇವಃ** = ಆದಿದೇವನಾದ, **ಸಃ** = ಆ ಶ್ರೀಕೃಷ್ಣನು, **ಭೀಷ್ಮಪೂರ್ವೈಃ** = ಭೀಷ್ಮನೇ ಮೊದಲಾದವರಿಂದ, **ಅಭಿಯಾಚಿತಃ ಅಪಿ** = ಪ್ರಾರ್ಥಿತನಾದರೂ, **ಏಷಾಂ** = ಈ ಭೀಷ್ಮಾದಿಗಳ, **ಗೃಹಂ** = ಮನೆಯನ್ನು ಕುರಿತು, **ದ್ರೌಪದೀ** = ದ್ರೌಪದಿಯು, **ಉಪೇಕ್ಷಿತಾ ಇತಿ** = ಭೀಷ್ಮಾದಿಗಳಿಂದ

ಉಪೇಕ್ಷೆಗೊಳಗಾಗಿದ್ದಾಳೆಂಬ ಕಾರಣಕ್ಕಾಗಿ, **ನ ಜಗಾಮ** = ಹೋಗಲಿಲ್ಲ, **ಅಪ್ರಮೇಯಃ** = ಜ್ಞಾನಿಗಳಿಗೂ, ಅಗೋಚರನಾದ ಶ್ರೀಕೃಷ್ಣನು, **ಶೀಘ್ರಂ** = ಬೇಗನೇ, **ವಿದುರಸ್ಯ** = ವಿದುರನ, **ಗೇಹಂ** = ಮನೆಯನ್ನು ಕುರಿತು, **ಜಗಾಮ** = ಹೋದನು.

**ತಾತ್ಪರ್ಯ :-** ಆದಿದೇವನಾದ ಶ್ರೀಕೃಷ್ಣನಿಗೆ ಭೀಷ್ಮದ್ರೋಣಾದಿಗಳು ನಮ್ಮ ಮನೆಗೆ ಬಾ ಅತಿಥಿಸತ್ಕಾರವನ್ನು ಸ್ವೀಕರಿಸು ಎಂದು ಎಷ್ಟು ಪ್ರಾರ್ಥಿಸಿದರೂ ಅವರ ಮನೆಗೆ ಹೋಗಲೇ ಇಲ್ಲ. ಏಕೆಂದರೆ ಅವರೆಲ್ಲರೂ ದ್ರೌಪದಿಯ ವಸ್ತ್ರಾಪಹರಣದ ಸಂದರ್ಭದಲ್ಲಿ ಪ್ರತಿಭಟಿಸದೇ ಮೌನವಾಗಿದ್ದರು. ವಿದುರ ಮಾತ್ರ ಅನ್ಯಾಯದ ವಿರುದ್ಧ ಧ್ವನಿ ಎತ್ತಿ ಪಾಂಡವ ಪಕ್ಷಪಾತಿಯಾಗಿರುತ್ತಾನೆ. ಆದ್ದರಿಂದ ಬೇಗನೇ ವಿದುರನ ಮನೆಗೆ ಹೋದನು.

**ಸ ತೇನ ಭಕ್ತ್ಯಾಽಭಿಗತಃ ಪ್ರಸನ್ನಃ**
**ಪ್ರವಿಶ್ಯ ಚಾಂತರ್ಗೃಹಮೀಶ್ವರೋಽಜಃ ।**
**ಭಕ್ತ್ಯಾಽಭಿಪೂರ್ಣೇನ ಸಸಂಭ್ರಮೇಣ**
**ಸಂಪೂಜಿತಃ ಸರ್ವಸಮರ್ಪಣೇನ ॥ ೬೯ ॥**

**ಅರ್ಥ :- ತೇನ** = ಆ ವಿದುರನಿಂದ, **ಭಕ್ತ್ಯಾ** = ಭಕ್ತಿಯಿಂದ, **ಅಭಿಗತಃ** = ಎದುರುಗೊಂಡ, **ಪ್ರಸನ್ನಃ** = ಪ್ರಸನ್ನನಾದ, **ಈಶ್ವರಃ** = ಸ್ವಾಮಿಯಾದ, **ಅಜಃ** = ಹುಟ್ಟಿಲ್ಲದ, **ಸಃ** = ಆ ಶ್ರೀಕೃಷ್ಣನು, **ಅಂತರ್ಗೃಹಂ** = ಮನೆಯೊಳಗೆ, **ಪ್ರವಿಶ್ಯ** = ಪ್ರವೇಶಮಾಡಿ, **ಭಕ್ತ್ಯಾದಿಪೂರ್ಣೇನ** = ಭಕ್ತಿಯಿಂದ ತುಂಬಿದ **ಸಸಂಭ್ರೇಣ** = ಸಂಭ್ರಮದಿಂದ ಕೂಡಿದವನಾಗಿ, **ಸರ್ವಸಮರ್ಪಣೇನ** = ಎಲ್ಲವನ್ನೂ ಸಮರ್ಪಣೆ ಮಾಡುವುದರಿಂದ **ಸಂಪೂಜಿತಃ** = ವಿದುರನಿಂದ ಪೂಜಿತನಾದನು.

**ತಾತ್ಪರ್ಯ :-** ಸರ್ವಸ್ವಾಮಿಯಾದ ಶ್ರೀಕೃಷ್ಣನು ವಿದುರನ ಮನೆಗೆ ಹೋದಾಗ ವಿದುರ ಭಕ್ತಿಯಿಂದ ಬರಮಾಡಿಕೊಂಡ. ಪ್ರಸನ್ನಗೊಂಡ ಶ್ರೀಕೃಷ್ಣ ಅವನ ಮನೆಯನ್ನು ಪ್ರವೇಶಮಾಡಿದ. ವಿದುರ ಭಕ್ತಿಯಿಂದ ಸಂಭ್ರಮದಿಂದ ಸರ್ವಸ್ವವನ್ನು ಶ್ರೀಕೃಷ್ಣನಿಗೆ ಸಮರ್ಪಿಸಿ ಪೂಜಿಸಿದ.

**ಪರೇ ದಿನೇಽಸೌ ಧೃತರಾಷ್ಟ್ರಸೂನುನಾ**
**ಸಮಾನೀತಃ ಸಂಸದಿ ಕೌರವಾಣಾಮ್ ।**
**ವಿವೇಶ ದಿವ್ಯೇ ಮಣಿಕಾಂಚನಾಸನೇ**
**ಸಾರ್ಧಂ ಮುನೀಂದ್ರೈಃ ಪರಮಾರ್ಥವೇದಿಭಿಃ ॥ ೭೦ ॥**

**ಅರ್ಥ** :- **ಪರೇ ದಿನೇ** = ಮರುದಿವಸ, **ಅಸೌ** = ಈ ಶ್ರೀಕೃಷ್ಣನು, **ಕೌರವಾಣಾಂ** = ಕೌರವರ, **ಸಂಸದಿ** = ಸಭೆಯಲ್ಲಿ, **ಧೃತರಾಷ್ಟ್ರಸೂನುನಾ** = ದುರ್ಯೋಧನನಿಂದ, **ಸಮಾನೀತಃ (ಸನ್)** = ಕರೆಸಲ್ಪಟ್ಟವನಾಗಿ, **ಪರಮಾರ್ಥವೇದಿಭಿಃ** = ಮಹಾತತ್ತ್ವಜ್ಞಾನಿಗಳಾದ, **ಮುನೀಂದ್ರೈಃ ಸಾಕಂ** = ಮುನಿಶ್ರೇಷ್ಠರೊಂದಿಗೆ, **ದಿವ್ಯೇ** = ಉತ್ತಮವಾದ, **ಮಣಿಕಾಂಚನಾಸನೆ** = ರತ್ನ ಸುವರ್ಣಖಚಿತವಾದ ಆಸನದಲ್ಲಿ, **ವಿವೇಶ** = ಕುಳಿತನು.

**ತಾತ್ಪರ್ಯ** :- ಮರುದಿವಸ ಶ್ರೀಕೃಷ್ಣನನ್ನು ದುರ್ಯೋಧನ ಸಭೆಗೆ ಕರೆದ. ಸಭೆಗೆ ಬಂದ ಶ್ರೀಕೃಷ್ಣ ಮಹಾತತ್ತ್ವಜ್ಞಾನಿಗಳಾದ ಮುನಿಶ್ರೇಷ್ಠರೊಂದಿಗೆ ಸುವರ್ಣರತ್ನಗಳಿಂದ ನಿರ್ಮಿತವಾದ ಉತ್ತಮವಾದ ಆಸನದಲ್ಲಿ ಕುಳಿತನು.

**ಸಂಪೂಜಿತೋ ಭೀಷ್ಮಮುಖ್ಯೈಃ ಸಮಸ್ತೈ**
**ರರಾಜ ರಾಜೀವಸಮಾನನೇತ್ರಃ ।**
**ಯಥೋಚಿತಾಸ್ತತ್ರ ವಿಧಾಯ ವಾರ್ತಾ**
**ಜಗಾದ ಕಾಲೇ ಕಲಿಕಲ್ಪಷಾಪಹಃ ॥ ೭೧ ॥**

**ಅರ್ಥ** :- **ರಾಜೀವಸಮಾನನೇತ್ರಃ** = ಕಮಲದಂತೆ ಕಣ್ಣುಳ್ಳ ಶ್ರೀಕೃಷ್ಣನು, **ಸಮಸ್ತೈಃ** = ಎಲ್ಲಾ, **ಭೀಷ್ಮಮುಖ್ಯೈಃ** = ಭೀಷ್ಮಾದಿಗಳಿಂದ, **ಸಂಪೂಜಿತಃ (ಸನ್)** = ಪೂಜಿತನಾಗಿ, **ರರಾಜ** = ಶೋಭಿಸಿದನು, **ತತ್ರ** = ಆ ಸಭೆಯಲ್ಲಿ, **ಯಥೇಚಿತಃ** = ಸಂದರ್ಭೋಚಿತವಾದ, **ವಾರ್ತಾಃ** = ವಾಗ್ ವ್ಯವಹಾರವನ್ನು, **ವಿಧಾಯ** = ಮಾಡಿ, **ಕಲಕಲ್ಮಪಹಃ** = ಕಲಕಲ್ಮಷವನ್ನು ನಾಶಮಾಡುವ ಶ್ರೀಕೃಷ್ಣನು, **ಕಾಲೇ** = ಯೋಗ್ಯ ಕಾಲದಲ್ಲಿ, **ಜಗಾದ** = ಹೇಳಿದನು.

**ತಾತ್ಪರ್ಯ** :- ಕಮಲಾಕ್ಷನಾದ ಶ್ರೀಕೃಷ್ಣನಿಗೆ ಸಭೆಯಲ್ಲಿ ಸಭಾ ಮರ್ಯಾದೆಯನ್ನು ಭೀಷ್ಮಾದಿಗಳು ನಡೆಸಿದರು. ನಂತರ ಶ್ರೀಕೃಷ್ಣನು

ಸಭೆಯಲ್ಲಿ ಸಂದರ್ಭೋಚಿತ ಮಾತುಗಳನ್ನಾಡುತ್ತಾ ಮುಖ್ಯ ವಿಷಯವನ್ನು ಯೋಗ್ಯ ಕಾಲದಲ್ಲಿ ಹೇಳಿದ.

**ವೈಚಿತ್ರವೀರ್ಯ ಸ್ವಕುಲಸ್ಯ ವೃದ್ಧ್ಯೈ**
**ಪ್ರದೇಹಿ ರಾಜ್ಯಂ ತವ ಸತ್ಸುತಾಯ ।**
**ಯಶಶ್ಚ ಧರ್ಮಂ ಪರಮಂ ಪ್ರಸಾದಂ**
**ಮಮ ತ್ವಮಾಪ್ನೋಷಿ ತದೈವ ರಾಜನ್ ॥ ೭೨ ॥**

**ಅರ್ಥ** :- **ವೈಚಿತ್ರವೀರ್ಯ** = ವಿಚಿತ್ರವೀರ್ಯನ ಮಗನಾದ ಹೇ ಧೃತರಾಷ್ಟ್ರನೇ **ಸ್ವಕುಲಸ್ಯ** = ನಿನ್ನ ಕುಲದ, **ವೃದ್ಧ್ಯೈ** = ವೃದ್ಧಿಗಾಗಿ, **ತವ** = ನಿನ್ನ, **ಸತ್ಸುತಾಯ** = ಸುಪುತ್ರನಾದ ಧರ್ಮರಾಜನಿಗೆ, **ರಾಜ್ಯಂ** = ರಾಜ್ಯವನ್ನು, **ಪ್ರದೇಹಿ** = ಕೊಡು, **ರಾಜನ್** = ಹೇ ರಾಜನೇ, **ತ್ವಂ** = ನೀನು, **ತದಾ ಏವ** = ಆಗಲೇ, **ಯಶಃ** = ಯಶಸ್ಸನ್ನು, **ಧರ್ಮಂ** = ಪುಣ್ಯವನ್ನು, **ಚ** = ಮತ್ತು, **ಮಮ** = ನನ್ನ, **ಪರಮಂ** = ಉತ್ತಮವಾದ, **ಪ್ರಸಾದಂ** = ಅನುಗ್ರಹವನ್ನು, **ಆಪ್ನೋಷಿ** = ಹೊಂದುತ್ತೀ.

**ತಾತ್ಪರ್ಯ** :- ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನೇ ನಿನ್ನ ಕುಲವು ಬೆಳೆಯಬೇಕು ನಾಶವಾಗಬಾರದೆಂದು ಬಯಸಿದ್ದರೆ ಅದಕ್ಕೆ ನಿನ್ನ ತಮ್ಮ ಮಗ ಧರ್ಮರಾಜ ಒಳ್ಳೆಯ ಮಗ. ಅವನಿಗೆ ರಾಜ್ಯವನ್ನು ಕೊಡು. ನೀನು ಹೀಗೆ ಮಾಡಿದರೆ ಮಾತ್ರ ಕೀರ್ತಿಯನ್ನು ಪುಣ್ಯವನ್ನು ಮತ್ತು ನನ್ನ ಅನುಗ್ರಹವನ್ನು ಪಡೆಯುತ್ತೀ.

**ಅತೋಽನ್ಯಥಾ ಯಶಸೋ ಧರ್ಮತಶ್ಚ**
**ಹೀನಃ ಪ್ರತೀಪತ್ವಮುಪೈಷಿ ಮೇಽತಃ ।**
**ಇತೀರಿತಃ ಪ್ರಾಹ ಮಮಾತಿವರ್ತಿನಂ**
**ಸುತಂ ಸ್ವಯಂ ಮೇ ಪ್ರತಿಬೋಧಯೇತಿ ॥ ೭೩ ॥**

**ಅರ್ಥ** :- **ಅನ್ಯಥಾ** = ಹಾಗೆ ಮಾಡದಿದ್ದರೆ, **ಯತಃ** = ಯಾವ ಕಾರಣದಿಂದ, **ಯಶಸಃ** = ಕೀರ್ತಿಯ ದೆಸೆಯಿಂದ, **ಧರ್ಮತಃ ಚ** = ಧರ್ಮದಿಂದಲ್ಲ, **ಹೀನಃ** = ರಹಿತನು, (ಭವಿಷ್ಯಸಿ = ಆಗುತ್ತೀ), **ಅತಃ** = ಆ ಕಾರಣದಿಂದ, **ಮೇ** = ನನ್ನ, **ಪ್ರತೀಪತ್ವಂ** = ವಿರೋಧವನ್ನು, (ಯತಃ)

ಯಾವ ಕಾರಣದಿಂದ, **ಉಪೈಷಿ** = ಹೊಂದುತ್ತೀಯೋ, **ಅತಃ** = ಆದ್ದರಿಂದಲೂ, (**ಪ್ರದೇಹಿ** = ರಾಜ್ಯವನ್ನು ಕೊಡು), **ಇತಿ** = ಎಂದು, **ಈರಿತಃ** = ಕೃಷ್ಣನಿಂದ ಉಪದಿಷ್ಟನಾದ ಧೃತರಾಷ್ಟ್ರನು, **ಮಮಾತಿ ವರ್ತಿನಂ** = ನನ್ನ ಮಾತನ್ನು ಮೀರುವ, **ಮೇ** = ನನ್ನ, **ಸುತಂ** = ಮಗನನ್ನು ಕುರಿತು, **ಸ್ವಯಂ** = ನೀನೇ, **ಪ್ರತಿಬೋಧಯ** = ತಿಳಿಹೇಳು, **ಇತಿ** = ಹೀಗೆ, **ಪ್ರಾಹ** = ಹೇಳಿದನು.

**ತಾತ್ಪರ್ಯ :-** ಶ್ರೀಕೃಷ್ಣನು ''ಒಂದು ವೇಳೆ ನಾನು ಹೇಳಿದ ಹಾಗೆ ಮಾಡದಿದ್ದರೆ ಕೀರ್ತಿಯನ್ನು ಪುಣ್ಯವನ್ನು ಕಳೆದುಕೊಳ್ಳುತ್ತೀ. ಅಷ್ಟು ಮಾತ್ರವಲ್ಲದೇ ನನ್ನ ವಿರೋಧವನ್ನು ಕಟ್ಟಿಕೊಳ್ಳುತ್ತೀ'' ಎಂದು ಧೃತರಾಷ್ಟ್ರನಿಗೆ ಹೇಳಿದಾಗ ಅವನು ಕೃಷ್ಣನಿಗೆ ಹೇಳುತ್ತಾನೆ ಏನು ಮಾಡಲಿ ನನ್ನ ಮಾತನ್ನು ಕೇಳುವುದೇ ಇಲ್ಲ. ನೀನೇ ಅವನಿಗೆ ಬುದ್ಧಿ ಹೇಳು ಎಂದು.

**ಸ ವಾಸುದೇವೇನ ವಿಬೋಧಿತೋಽಪಿ**
**ಪಾಪಾಭಿಸಂಧಿರ್ಧೃತರಾಷ್ಟ್ರಸೂನುಃ ।**
**ಉತ್ಥಾಯ ತಸ್ಮಾದನುಜೈರಮಾತ್ಯೈ-**
**ರ್ನಿಯಂತುಮೀಶಂ ಕುಮತಿರ್ವ್ಯಧಾನ್ಮತಿಮ್ ॥ ೭೪ ॥**

**ಅರ್ಥ :-** **ವಾಸುದೇವೇನ** = ಶ್ರೀಕೃಷ್ಣನಿಂದ, **ವಿಬೋಧಿತಃ ಅಪಿ** = ಬೋಧಿಸಲ್ಪಟ್ಟರೂ ಕೂಡ, **ಪಾಪಾಭಿಸಂಧಿಃ** = ಪಾಪವಿಷಯದಲ್ಲಿ ಬುದ್ಧಿಯುಳ್ಳ, **ಧೃತರಾಷ್ಟ್ರಸೂನುಃ** = ಧೃತರಾಷ್ಟ್ರನ ಮಗನಾದ, **ಕುಮತಿಃ** = ದುಷ್ಟಬುದ್ಧಿಯುಳ್ಳ, **ಸಃ** = ಆ ದುರ್ಯೋಧನನು, **ತಸ್ಮಾತ್** = ಆ ಸಭೆಯಿಂದ, **ಅನುಜೈಃ** = ತಮ್ಮಂದಿರಿಂದ, **ಅಮಾತ್ಯೈಃ (ಸಹ)** = ಮಂತ್ರಿಗಳಿಂದ ಕೂಡಿ, **ಉತ್ಥಾಯ** = ಎದ್ದು, **ಈಶಂ** = ಶ್ರೀಕೃಷ್ಣನನ್ನು, **ನಿಯಂತುಂ** = ಬಂಧಿಸಲು, **ಮತಿಂ** = ಬುದ್ಧಿಯನ್ನು, **ವ್ಯಧಾತ್** = ಮಾಡಿದನು.

**ತಾತ್ಪರ್ಯ :-** ಶ್ರೀ ಕೃಷ್ಣನು ದುರ್ಯೋಧನನಿಗೆ ಎಷ್ಟು ಉಪದೇಶ ಮಾಡಿದರೂ ಸಹ ಪಾಪಕರ್ಮದಲ್ಲಿ ಬುದ್ಧಿಯುಳ್ಳ ದುಷ್ಟ ದುರ್ಯೋಧನನು ತನ್ನ ತಮ್ಮಂದಿರು ಹಾಗು ಮಂತ್ರಿಗಳಿಂದ ಸಹಿತನಾಗಿ ಸಭಾತ್ಯಾಗ ಮಾಡಿದನು. ನಂತರ ಶ್ರೀಕೃಷ್ಣನನ್ನೆ ಬಂಧಿಸಲು ಸಂಕಲ್ಪಿಸಿದನು.

**ಯೇಯೇ ತದಾ ಕೇಶವಸಂಯಮಾಯ**
**ನ್ಯಮಂತ್ರಯಂಸ್ತೇ ವಿಬುಧಪ್ರತೀಪಾಃ ।**
**ಅತೋ ವಿಕರ್ಣಪ್ರಮುಖಾ ಅಪಿ ಸ್ಮ**
**ವಧ್ಯತ್ವಮಾಯನ್ನಶುಭಾಂ ಗತಿಂ ಚ ॥ ೭೫ ॥**

**ಅರ್ಥ** :- **ಯೇ ಯೇ** = ಯಾರು ಯಾರು, **ತದಾ** = ಮಂತ್ರಾಲೋಚನೆಯ ಸಂದರ್ಭದಲ್ಲಿ, **ಕೇಶವ ಸಂಯಮಾಯ** = ಶ್ರೀಕೃಷ್ಣನನ್ನು ಬಂಧಿಸಲು, **ನ್ಯಮಂತ್ರಯನ್** = ಆಲೋಚಿಸಿದರೋ, **ತೇ** = ಅವರೆಲ್ಲರೂ, **ವಿಬುಧಪ್ರತೀಪಾಃ** = ದೇವದ್ವೇಷಿಗಳು, **ಅತಃ** = ಆದ್ದರಿಂದ, **ವಿಕರ್ಣಪ್ರಮುಖಾಃ ಅಪಿ** = ವಿಕರ್ಣ ಮೊದಲಾದವರೂ ಕೂಡ, **ವಧ್ಯತ್ವಂ** = ವಧಾರ್ಹತೆಯನ್ನು, **ಅಯನ್** = ಹೊಂದುತ್ತಾರೆ, **ಅಶುಭಾಂ** = ಅಮಂಗಳಕರವಾದ, **ಗತಿಂ ಚ** = ನರಕಾದಿಗಳನ್ನು (**ಪ್ರಾಪ್ನುವಂತಿ** = ಹೊಂದುತ್ತಾರೆ).

**ತಾತ್ಪರ್ಯ** :- ಆ ಮಂತ್ರಾಲೋಚನೆ ಸಭೆಯಲ್ಲಿ ಯಾರು ಯಾರು ಶ್ರೀಕೃಷ್ಣನನ್ನು ಬಂಧಿಸಬೇಕೆಂದು ಆಲೋಚಿಸಿದರೋ ಅವರೆಲ್ಲರೂ ಅಸುರರೆಂದು ತೀರ್ಮಾನ. ಆದ್ದರಿಂದ ದ್ರೌಪದಿಯ ವಸ್ತ್ರಾಪಹರಣದ ಸಂದರ್ಭದಲ್ಲಿ ಇದು ತಪ್ಪು ಎಂದು ಬಾಯಿಮಾತಿಗೆ ಹೇಳಿದ ವಿಕರ್ಣನೂ ಕೂಡ. ಶ್ರೀಕೃಷ್ಣನನ್ನು ಬಂಧಿಸಬೇಕೆಂದು ಆಲೋಚಿಸಿದ್ದರಿಂದ ಅವನೂ ಅಸುರನೇ. ಆದ್ದರಿಂದ ಅವರೆಲ್ಲರೂ ಸಂಹಾರಕ್ಕೆ ಯೋಗ್ಯರಾದವರೇ ಆಗಿದ್ದಾರೆ. ಅವರಿಗೆ ಎಂದಿಗೂ ಸದ್ಗತಿ ಇಲ್ಲ. ನರಕಾದಿ ಅನರ್ಥವನ್ನೆ ಹೊಂದುತ್ತಾರೆ.

**ಕರ್ಣಃ ಸುರಾಗ್ರ್ಯೋಽಪಿ ಸುಯೋಧನಾರ್ಥೇ**
**ನ್ಯಮಂತ್ರಯದ್ ಭಾವತೋ ನೈವ ದುಷ್ಟಃ ।**
**ಅತೋ ಗತಿಶ್ಚಾಸ್ಯ ಸುಶೋಭನಾಽಭೂದ್**
**ಯೇಽತ್ರಾನುಕೂಲಾಃ ಪರಮಸ್ಯ ತೇ ಶುಭಾಃ ॥ ೭೬ ॥**

**ಅರ್ಥ** :- **ಕರ್ಣಃ** = ಕರ್ಣನು, **ಸುರಾಂಶಃ ಅಪಿ** = ದೇವಾಂಶ ಸಂಭೂತನಾದರೂ, **ಸುಯೋಧನಾರ್ಥಾಯ** = ದುರ್ಯೋಧನನಿಗೋಸ್ಕರ,

**ಸ್ಯಮಂತ್ರಯತ್** = ಮಂತ್ರಾಲೋಚನೆ ಮಾಡಿದನು, **ಸ್ವಭಾವತಃ** = ಸ್ವಭಾವದಿಂದ, **ದುಷ್ಟಃ** = ದುಷ್ಟನು, ನ ಏವ = ಅಲ್ಲವೆ ಅಲ್ಲ, **ಅಥಃ** = ಆದ್ದರಿಂದ, **ಅಸ್ಯ** = ಈ ಕರ್ಣನಿಗೆ, **ಸುತೋಭಿನಾ** = ಒಳ್ಳೆಯದ್ದಾದ, **ಗತಿಃ** = ಗತಿಯು (ಲೋಕಪ್ರಾಪ್ತಿಯು), **ಅಭುತ್** = ಆಯಿತು, **ಪರಮ್** = ಆದರೆ, **ಅತ್ರ** = ಈ ವಿಷಯದಲ್ಲಿ, **ಯೇ** = ಯಾರು, **ಅಸ್ಯ** = ಈ ಕೃಷ್ಣನಿಗೆ, **ಅನುಕೂಲಃ** = ಅನುಕೂಲರಾಗಿದ್ದಾರೋ (ಅವರೆಲ್ಲಾ), **ಶುಭಾಃ** = ಸಜ್ಜನರು.

**ತಾತ್ಪರ್ಯ** :- ಕರ್ಣ ಮಾತ್ರ ಸ್ವರೂಪದ್ವೇಷದಿಂದ ಬಂಧಕ್ಕೆ ಮುಂದಾಗಲಿಲ್ಲ. ದುರ್ಯೋಧನನ ಪ್ರೀತಿಗಾಗಿ ಜೊತೆಗೂಡಿದ. ಕರ್ಣ ದೇವಾಂಶ ಸಂಭೂತನಾದ್ದರಿಂದ ಸ್ವಭಾವತಃ ದುಷ್ಟನಲ್ಲ. ಆದ್ದರಿಂದ ಅವನಿಗೆ ಸದ್ಗತಿಯೇ ಆಯಿತು. ಆದರೆ ಒಂದಂತೂ ನಿಶ್ಚಯ ಈ ಸಂದರ್ಭದಲ್ಲಿ ಯಾರೆಲ್ಲ ಕೃಷ್ಣನಿಗೆ ದ್ರೋಹ ಬಗೆಯದೇ ಕೃಷ್ಣನಿಗೆ ಅನುಕೂಲರಾಗಿದ್ದರೋ ಅವರೆಲ್ಲ ಸಜ್ಜನರು.

**ಋಷಿಭಿರ್ಜಾಮದಗ್ನ್ಯೇನ ವ್ಯಾಸೇನಾಪ್ಯಮಿತೌಜಸಾ ।**
**ವಾಸುದೇವಾತ್ಮನಾ ಚೈವ ತ್ರಿರೂಪೇಣೈವ ವಿಷ್ಣುನಾ ॥ ೭೭ ॥**

**ಮಾತಾಪಿತೃಭ್ಯಾಂ ಭೀಷ್ಮಾದ್ಯೈರನುಶಿಷ್ಟೋಽಪಿ ದುರ್ಮತಿಃ ।**
**ದುರ್ಯೋಧನೋ ಮಂತ್ರಯತೇ ಮುಕುಂದಸ್ಯಾಽಶು ಬಂಧನಮ್ ॥ ೭೮ ॥**

**ಅರ್ಥ** :- **ಋಷಿಭಿಃ** = ಋಷಿಗಳಿಂದ, **ಅಮಿತೌಜಸಾ** = ಅಪರಿಮಿತ ಪರಾಕ್ರಮಿಯಾದ, **ಜಾಮದಗ್ನಿನಾ** = ಪರಶುರಾಮನಿಂದ, **ವ್ಯಾಸೇನಾಪಿ** = ವೇದವ್ಯಾಸರಿಂದಲೂ, **ವಾಸುದೇವಾತ್ಮಕೇನ** = ಶ್ರೀಕೃಷ್ಣರೂಪದಿಂದ, **ಏವಂ** = ಹೀಗೆ, **ತ್ರೀರೂಪೇಣ ಏವ** = ಮೂರುರೂಪದಿಂದಲೂ, **ವಿಷ್ಣುನಾ** = ನಾರಾಯಣನಿಂದ, **ಮಾತಾಪಿತೃಭ್ಯಾಂ** = ತಂದೆ ತಾಯಿಯಿಂದ, **ಭೀಷ್ಮಾದ್ಯೈರಪಿ** = ಭೀಷ್ಮಾದಿಗಳಿಂದಲೂ ಕೂಡ, **ಅನುಶಿಷ್ಟಃ ಅಪಿ** = ಉಪದಿಷ್ಟನಾದರೂ, **ದುರ್ಮತಿಃ** = ದುಷ್ಟಬುದ್ಧಿಯುಳ್ಳ, **ದುರ್ಯೋಧನಃ** = ದುರ್ಯೋಧನನು, **ಮುಕುಂದಸ್ಯ** = ಶ್ರೀಕೃಷ್ಣನ, **ಬಂಧನಂ** = ಬಂಧನವನ್ನು, **ಮಂತ್ರಯತೆ** = ಆಲೋಚಿಸುತ್ತಾನೆ.

ತಾತ್ಪರ್ಯ :- ದುರ್ಯೋಧನನಿಗೆ ಋಷಿಗಳು ಅಪರಿಮಿತ ಪರಾಕ್ರಮಿಯಾದ ರಾಮಕೃಷ್ಣ ವೇದವ್ಯಾಸ ಎಂಬ ಮೂರು ಭಗವದ್ರೂಪಗಳು ತಂದೆ ತಾಯಿಗಳು, ಭೀಷ್ಮದ್ರೋಣಾದಿ ಹಿರಿಯರು ಹೀಗೆ ಎಲ್ಲರೂ ಉಪದೇಶ ಮಾಡಿದರೂ ಅವನಿಗೆ ಉಪದೇಶ ತಾಗಲೇ ಇಲ್ಲ. ಮತ್ತು ದುರ್ಬುದ್ಧಿಯಿಂದ ದುರ್ಯೋಧನ ಶ್ರೀಕೃಷ್ಣನನ್ನು ಸೆರೆ ಹಿಡಿಯುದಕ್ಕೋಸ್ಕರ ವಿಚಾರ ಮಾಡಿದ.

ಸಾತ್ಯಕಿಃ ಕೃತವರ್ಮಾ ಚ ತಚ್ಛುಶ್ರುವತುರಂಜಸಾ ।
ಸಂಸ್ಥಾಪ್ಯ ಕೃತವರ್ಮಾಣಂ ರಹಃ ಸಾತ್ಯಕಿರತ್ರ ಚ ।
ಅಭ್ಯೇತ್ಯ ಕೇಶವಂ ಪ್ರಾಹ ದುರ್ಯೋಧನವಿನಿಶ್ಚಯಮ್ ॥ ೭೯ ॥

ಅರ್ಥ :- ಸಾತ್ಯಕಿಃ = ಸಾತ್ಯಕಿಯೂ, ಚ = ಮತ್ತು, ಕೃತವರ್ಮಾ = ಕೃತವರ್ಮನು, ತತ್ = ಆ ಮಂತ್ರಾಲೋಚನೆಯನ್ನು, ಅಂಜಸಾ = ನಿಶ್ಚಯವಾಗಿ, ಶುಶ್ರುವತುಃ = ಕೇಳಿಸಿಕೊಂಡರು, ಸಾತ್ಯಕಿಃ = ಸಾತ್ಯಕಿಯು, ಕೃತವರ್ಮಾಣಂ = ಕೃತವರ್ಮನನ್ನು, ತತ್ರ ಚ = ಸಭಾದ್ವಾರದಲ್ಲೆ, ಸಂಸ್ಥಾಪ್ಯ = ನಿಲ್ಲಿಸಿ, ಕೇಶವಂ = ಶ್ರೀಕೃಷ್ಣನನ್ನು, ಅಭ್ಯೇತ್ = ಹೊಂದಿ, ರಹಃ = ಏಕಾಂತದಲ್ಲಿ, ದುರ್ಯೋಧನವಿನಿಶ್ಚಯಂ = ದುರ್ಯೋಧನನ ನಿರ್ಧಾರವನ್ನು, ಪ್ರಾಹ = ಹೇಳಿದನು.

ತಾತ್ಪರ್ಯ :- ಹೀಗೆ ದುರ್ಯೋಧನ ಮಂತ್ರಾಲೋಚನೆಯನ್ನು ಸಾತ್ಯಕಿ ಮತ್ತು ಕೃತವರ್ಮರು ಸ್ಪಷ್ಟವಾಗಿ ಕೇಳಿಸಿಕೊಂಡರು. ನಂತರ ಸಾತ್ಯಕಿಯು ಕೃತವರ್ಮನನ್ನು ಸಭಾದ್ವಾರದಲ್ಲಿ ನಲ್ಲಿಸಿ ಕೃಷ್ಣನಿಗೆ ಹೇಳುವ ಉದ್ದೇಶದಿಂದ ಕೃಷ್ಣನಿದ್ದಲ್ಲಿಗೆ ಬಂದು ಏಕಾಂತದಲ್ಲಿ ನಡೆದ ದುರ್ಯೋಧನನ ನಿರ್ಧಾರವನ್ನು ಶ್ರೀಕೃಷ್ಣನಿಗೆ ತಿಳಿಹೇಳಿದ.

ಜಾನನ್ನಪ್ಯಖಿಲಂ ಕೃಷ್ಣಸ್ತಚ್ಛ್ರುತ್ವಾ ಸಾತ್ಯಕೇರ್ಮುಖಾತ್ ।
ವೈಚಿತ್ರವೀರ್ಯಮವದತ್ ಪಶ್ಯ ಮಾಮಿತಿ ಸರ್ವಗಮ್ ॥ ೮೦ ॥

ಅರ್ಥ :- ಕೃಷ್ಣಸ್ಯ = ಶ್ರೀಕೃಷ್ಣನಾದರೋ, ಅಖಿಲಂ = ಎಲ್ಲವನ್ನೂ, ಜಾನನ್ ಅಪಿ = ತಿಳಿದವನಾದರೂ, ಸಾತ್ಯಕೇಃ = ಸಾತ್ಯಕಿಯ, ಮುಖಾತ್ = ಮುಖದಿಂದ, ತತ್ = ಆ ಬಂಧನದ ವಿಷಯವನ್ನು, ಶ್ರುತ್ವಾ = ಕೇಳಿ, ವೈಚಿತ್ರ್ಯವೀರ್ಯಂ = ಧೃತರಾಷ್ಟನನ್ನು ಕುರಿತು, ಸರ್ವಗತಂ = ಎಲ್ಲಕಡೆ

ವ್ಯಾಪ್ತನಾದ, **ಮಾಂ** = ನನ್ನನ್ನು, **ಪಶ್ಯ** = ನೋಡು, **ಇತಿ** = ಎಂದು, **ಅವದತ್** = ಹೇಳಿದನು.

**ತಾತ್ಪರ್ಯ** :- ಸ್ವಯಂ ಸರ್ವಜ್ಞನಾದ ಭಗವಂತ ಮೊದಲೇ ಎಲ್ಲವನ್ನೂ ತಿಳಿದಿದ್ದರೂ ಸಾತ್ಯಕಿಯ ಮುಖದಿಂದ ತನ್ನನ್ನು ಬಂಧಿಸುವ ವಿಚಾರವನ್ನು ತಿಳಿದು ಶ್ರೀಕೃಷ್ಣನು ಧೃತರಾಷ್ಟ್ರನಿಗೆ ದಿವ್ಯ ದೃಷ್ಟಿಯನ್ನು ಕೊಟ್ಟು ಎಲ್ಲಕಡೆ ವ್ಯಾಪ್ತವಾದ ನನ್ನ ವಿಶ್ವರೂಪವನ್ನು ನೋಡು ಎಂದು ಅವನಿಗೆ ಹೇಳಿದ.

**ಅಥ ತೇನಾಽಹುತೇ ಪುತ್ರೇ ಸಾಮಾತ್ಯೇ ಪುರುಷೋತ್ತಮಃ ।**
**ಸ್ವಂ ರೂಪಂ ದರ್ಶಯಾಮಾಸ ಸರ್ವಗಂ ಪೂರ್ಣಸದ್ಗುಣಮ್ ॥ ೮೧ ॥**

**ಅರ್ಥ** :- **ಅಥ** = ಅನಂತರ, **ತೇನ** = ಆ ಧೃತರಾಷ್ಟ್ರನಿಂದ, **ಪುತ್ರೇ** = ದುರ್ಯೋಧನನು, **ಅಮಾತ್ಯೇ** = ಮಂತ್ರಿಗಳು, **ಆಹೂತೇ (ಸತಿ)** = ಕಲೆಯಲ್ಪಡುತ್ತಿರಲು, **ಪುರುಷೋತ್ತಮಃ** = ಶ್ರೀಕೃಷ್ಣನು, **ಸರ್ವಗಂ** = ಎಲ್ಲ ಕಡೆ ವ್ಯಾಪ್ತವಾದ, **ಪೂರ್ಣಷಡ್ಗುಣಂ** = ಷಡ್ಗುಣಪೂರ್ಣವಾದ, **ಸ್ವರೂಪಂ** = ತನ್ನ ರೂಪವನ್ನು, **ದರ್ಶಯಾಮಾಸ** = ತೋರಿಸಿದನು.

**ತಾತ್ಪರ್ಯ** :- ಶ್ರೀಕೃಷ್ಣನು ಹೀಗೆ ಹೇಳಿದ ಮೇಲೆ ಧೃತರಾಷ್ಟ್ರನು ಮಕ್ಕಳು ಮಂತ್ರಿಗಳನ್ನೆಲ್ಲ ಕರೆದನು. ಆಗ ಶ್ರೀಕೃಷ್ಣನು ಎಲ್ಲ ಕಡೆಗೂ ವ್ಯಾಪ್ತವಾದ ಐಶ್ವರ್ಯಾದಿ ಷಡ್ಗುಣಗಳಿಂದ ಪೂರ್ಣವಾದ ತನ್ನ ವಿಶ್ವರೂಪವನ್ನು ತೋರಿಸಿದ.

**ತತ್ ಕಾಲಸೂರ್ಯಾಮಿತದೀಪ್ತಿ ಸರ್ವ-**
**ಜಗದ್‌ಭರಂ ಶಾಶ್ವತಮಪ್ರಮೇಯಮ್ ।**
**ದೃಷ್ಟ್ವೈವ ಚಕ್ಷೂಂಷಿ ಸುಯೋಧನಾದ್ಯಾ**
**ನ್ಯಮೀಲಯನ್ ದೀಧಿತಿವಾರಿತಾನಿ ॥ ೮೨ ॥**

**ಅರ್ಥ** :- **ಕಾಲಸೂರ್ಯಾಮಿತದೀಪ್ತಾ** = ಪ್ರಳಯಕಾಲದ ಸೂರ್ಯನಂತೆ ಮಿತಿ ಇಲ್ಲದ ಪ್ರಕಾಶವುಳ್ಳ, **ಸರ್ವಜಗದ್ಭರಂ** = ಎಲ್ಲ ಜಗತ್ತಿನಲ್ಲಿ ತುಂಬಿದ, **ಶಾಶ್ವತಂ** = ನಾಶವಿಲ್ಲದ, **ಅಪ್ರಮೇಯಂ** = ತಿಳಿಯಲು ಅಶಕ್ಯವಾದ, **ತತ್** = ಆ ವಿಶ್ವರೂಪವನ್ನು, **ದೃಷ್ಟ್ವಾ ಏವ** = ನೋಡಿದ

ಕೂಡಲೇ, ಸುಯೋಧನಾದ್ಯಃ = ದುರ್ಯೋಧನಾದಿಗಳು, ದೀಧಿತಿವಾರಿತಾನಿ = ಬೆಳಕಿನಿಂದ ತಡೆಯಲ್ಪಟ್ಟ, ಚಕ್ಷೂಂಷಿ = ಕಣ್ಣುಗಳನ್ನು, ನ್ಯಮೀಲಯತ್ = ಮುಚ್ಚಿದರು.

ತಾತ್ಪರ್ಯ :- ಆ ವಿಶ್ವರೂಪವು ಪ್ರಳಯಕಾಲದ ಸೂರ್ಯನಂತೆ ಅಮಿತವಾದ ಪ್ರಕಾರವುಳ್ಳದ್ದಾಗಿತ್ತು. ಹಾಗೇ ಜಗತ್ತಿನಲ್ಲಿ ಎಲ್ಲ ತುಂಬಿ ಜಗತ್ತನ್ನು ಧಾರಣೆಮಾಡಿತ್ತು. ಹಾಗೆ ನಾಶವಿಲ್ಲದ್ದು ತಿಳಿಯಲು ಅಶಕ್ಯವೂ ಆಗಿತ್ತು. ಅಂತಹ ವಿಶ್ವರೂಪವನ್ನು ನೋಡಿದ ಕೂಡಲೇ ದುರ್ಯೋಧನಾದಿಗಳು ಕಣ್ಣುಗಳನ್ನು ಮುಚ್ಚಿಬಿಟ್ಟರು. ಏಕೆಂದರೆ ಅದರ ಪ್ರಕಾಶ ಅಷ್ಟು ಪ್ರಖರವಾದ್ದರಿಂದ ಕಣ್ಣುಗಳನ್ನು ಕುಕ್ಕುತ್ತಿತ್ತು.

**ಪಿಧಾಯ ರೂಪಂ ಪುನರೇವ ತದ್ಧರಿ-**
**ರ್ವೈಚಿತ್ರವೀರ್ಯೇಣ ಸಮರ್ಥಿತಃ ಪುನಃ ।**
**ಕೃತ್ವಾಽಂಧಮೇವ ಪ್ರಯಯೌ ಸುಯೋಧನಂ**
**ಸಹಾನುಗಂ ಪಾಪತಮಂ ಪ್ರಕಾಶ್ಯ ॥ ೮೩ ॥**

**ಅರ್ಥ :-** ತತ್ ರೂಪಂ = ಆ ವಿಶ್ವರೂಪವನ್ನು, ಪಿಧಾಯ = ಮರೆಮಾಡಿ, ವೈಚಿತ್ರವೀರ್ಯೇಣ = ಧೃತರಾಷ್ಟ್ರನಿಂದ, ಪುನಃ ಪುನಃ = ಮತ್ತೆ ಮತ್ತೆ, ಸಮರ್ಥಿತಃ = ಅಂಧನನ್ನಾಗಿ ಮಾಡೆಂದು ಪ್ರಾರ್ಥಿತನಾದ, ಹರಿಃ = ಶ್ರೀಕೃಷ್ಣನು, ಅಂಧಂ ಏವ = ಅಂಧನನ್ನಾಗಿಯೇ, ಕೃತ್ವಾ = ಮಾಡಿ, ಸಹಾನುಗಂ = ಅನುಯಾಯಿಗಳಿಂದ ಕೂಡಿದ, ಸುಯೋಧನಂ = ದುರ್ಯೋಧನನನ್ನು, ಪಾಪತಮಂ (ಇತಿ) = ಅತ್ಯಂತ ಪಾಪಿಯೆಂದು, ಪ್ರಕಾಶ್ಯ = ಲೋಕಕ್ಕೆ ತೋರಿಸಿ, ಪ್ರಯಯೌ = ಹೋದನು.

ತಾತ್ಪರ್ಯ :- ಶ್ರೀಕೃಷ್ಣನು ವಿಶ್ವರೂಪವನ್ನು ಮರೆ ಮಾಡಿದನು. ನಿನ್ನ ವಿಶ್ವರೂಪವನ್ನು ನೋಡಿದ ಬಳಿಕ ಬೇರೆನೂ ನೋಡಲಾರೆ ಸ್ವಾಮಿ. ನನ್ನನ್ನು ಮತ್ತೇ ಕುರುಡನನ್ನಾಗಿ ಮಾಡು ಎಂದು ಧೃತರಾಷ್ಟ್ರನು ಪರಿಪರಿಯಾಗಿ ಪ್ರಾರ್ಥನೆ ಮಾಡಿದ್ದರಿಂದ ಅವನನ್ನು ಮತ್ತೆ ಕುರುಡನನ್ನಾಗಿ ಮಾಡಿ, ದುರ್ಯೋಧನ ಮತ್ತು ಅವನ ಅನುಯಾಯಿಗಳೆಲ್ಲರೂ ಅತ್ಯಂತ ಪಾಪಿಗಳು ಎಂದು ಲೋಕಕ್ಕೆ ತಿಳಿಸುತ್ತಾ ಹೊರಗೆ ಹೋದನು.

**ಅನಂತಶಕ್ತಿಃ ಪುರುಷೋತ್ತಮೋಽಸೌ**
**ಶಕ್ತೋಽಪಿ ದುರ್ಯೋಧನಚಿತ್ತನಿಗ್ರಹೇ ।**
**ನೈವ ವ್ಯಧಾದೇನಮಥೋಕ್ತಕಾರಿಣಂ**
**ನಿಪಾತಯನ್ನಂಧಮಸ್ಯನಂತಃ ॥ ೮೪ ॥**

**ಅರ್ಥ :- ಅನಂತಶಕ್ತಿಃ** = ಅಪರಿಮಿತವಾದ ಶಕ್ತಿಯುಳ್ಳ, **ಅನಂತಃ** = ಆದಿಮಧ್ಯಾಂತ ರಹಿತನಾದ, **ಅಸೌ** = ಈ, **ಪುರುಷೋತ್ತಮಃ** = ಶ್ರೀಕೃಷ್ಣನು, **ದುರ್ಯೋಧನಚಿತ್ತನಿಗ್ರಹೇ** = ದುರ್ಯೋಧನನ ಮನಸ್ಸನ್ನು ನಿಗ್ರಹಿಸುವುದರಲ್ಲಿ, **ಶಕ್ತಃ ಅಪಿ** = ಸಮರ್ಥನಾದರೂ, **ಏನಂ** = ಈ ದುರ್ಯೋಧನನನ್ನು, **ಉಕ್ತಕಾರಿಣಂ** = ತನ್ನ ವಾಕ್ಯವನ್ನು ನಡೆಸುವಂತೆ, **ನೈವ ವ್ಯಧಾತ್** = ಮಾಡಲೇ ಇಲ್ಲ, **ಅಥ** = ಏಕೆಂದರೆ, **ಅಂಧಃತಮಸಿ** = ಅಂಧಃತಮಸ್ಸಿನಲ್ಲಿ, **ನಿಪಾತಯನ್** = ಬೀಳಿಸುವುದಕ್ಕಾಗಿ, **ನೈವ ವ್ಯಧಾತ್** = ಮಾಡಲಿಲ್ಲ.

**ತಾತ್ಪರ್ಯ :-** ಅಪರಿಮಿತ ಶಕ್ತಿಯುಳ್ಳ ಆದಿಮದ್ಯಂತ ರಹಿತನಾದ ಶ್ರೀಕೃಷ್ಣನು ದುರ್ಯೋಧನನ ದುಷ್ಟಬುದ್ಧಿಯನ್ನು ಬಿಡಿಸಿ ತಾನು ಹೇಳಿದಂತೆ ಕೇಳುವ ಹಾಗೆ ಮಾಡುವ ಸಾಮರ್ಥ್ಯವಿತ್ತು. ಆದರೂ ಅವನು ಹಾಗೆ ಮಾಡಲಿಲ್ಲ. ಏಕೆಂದರೆ ಅವನು ಅಂಧಃತಮಸ್ಸಿಗೆ ಹೋಗಲು ಯೋಗ್ಯನಾದ್ದರಿಂದ ಅವನಿಂದ ಪಾಪಕಾರ್ಯಗಳನ್ನು ಮಾಡಿಸಿ ಅಂಧಃತಮಸ್ಸಿನ್ನು ಕೆಡುವುದಕ್ಕಾಗಿ ಹಾಗೇ ಅಂತಃ ಪ್ರೇರಣೆಯನ್ನು ಮಾಡಲಿಲ್ಲ.

**ಪುನಶ್ಚ ಕುಂತೀಗೃಹಮೇತ್ಯ ಕೃಷ್ಣ-**
**ಸ್ತಯೋದ್ಯೋಗಂ ಧರ್ಮಸುತಸ್ಯ ಶಿಷ್ಟಮ್ ।**
**ಶ್ರುತ್ವಾ ಯಯೌ ಸೂರ್ಯಜಮಾತ್ಮಯಾನೇ**
**ನಿಧಾಯ ತಸ್ಯಾವದದಾತ್ಮಜನ್ಮ ।**
**ಆಯಾಹಿ ಪಾಂಡೂನಿತಿ ತದ್ವಚಃ ಸ**
**ನೈವಾಕರೋನ್ಮಾನಿತೋ ಧಾರ್ತರಾಷ್ಟ್ರೈಃ ॥ ೮೫ ॥**

**ಅರ್ಥ :- ಕೃಷ್ಣಃ** = ಶ್ರೀಕೃಷ್ಣನು, **ಪುನಃ ಚ** = ಮತ್ತೇ, **ಕುಂತೀ ಗೃಹಂ** = ಕುಂತಿಯ ಮನೆಯನ್ನು, **ಏತ್ಯ** = ಹೊಂದಿ, **ತಯಾ** = ಆ ಕುಂತಿಯಿಂದ, **ಧರ್ಮಸುತಸ್ಯ** = ಧರ್ಮರಾಜನಿಗೆ, **ಶಿಷ್ಟಂ** = ಶಿಕ್ಷಣಕೊಟ್ಟ, **ಉದ್ಯೋಗಂ**

= ಯುದ್ಧದ ಪ್ರಯತ್ನವನ್ನು, ಶ್ರುತ್ವಾ = ಕೇಳಿ, ಸೂರ್ಯಜಂ = ಕರ್ಣನನ್ನು, ಆತ್ಮಯಾನೇ = ತನ್ನ ರಥದಲ್ಲಿ, ನಿಧಾಯ = ಕೂಡಿಸಿಕೊಂಡು (ಸ್ವಲ್ಪದೂರ), ಯಯೌ = ಹೋದನು, ತಸ್ಯ = ಅವನಿಗೆ, ಆತ್ಮಜನ್ಮ = ತನ್ನ ಜನ್ಮವನ್ನು, ಅವದತ್ = ಹೇಳಿದನು, ಪಾರ್ಥಾನ್ = ಪಾಂಡವರನ್ನು ಕುರಿತು, ಆಯಾಹಿ = ಬಾ, ಇತಿ = ಎಂಬ, ತದ್ವಚಃ = ಆ ಕೃಷ್ಣನ ಮಾತನ್ನು, ಧಾರ್ತರಾಷ್ಟ್ರೈಃ = ದುರ್ಯೋಧನಾದಿಗಳಿಂದ, ಸಮ್ಮಾನಿತಃ = ಸಮ್ಮಾನಿತನಾದ, ಸಃ = ಆ ಕರ್ಣನು, ನ ಏವ ಅಕರೋತ್ = ಒಪ್ಪಲಿಲ್ಲ.

ತಾತ್ಪರ್ಯ :- ಸಂಧಾನ ವಿಫಲವಾದ ಮೇಲೆ ಪುನಃ ಕುಂತಿಯ ಮನೆಗೆ ಶ್ರೀಕೃಷ್ಣನು ಬಂದನು. ಅಲ್ಲಿ ಕುಂತಿಯು ಧರ್ಮರಾಜನಿಗೆ ಉಪದೇಶವನ್ನು ಮಾಡುತ್ತಿದ್ದಳು. ''ನೀವು ಕೌರವರೊಂದಿಗೆ ಯುದ್ಧ ಮಾಡಬೇಕೆಂದು. ಅದನ್ನು ಕೇಳಿ ಕೂಡಲೆ ಕರ್ಣನನ್ನು ಕರೆದುಕೊಂಡು ತನ್ನ ರಥದಲ್ಲಿ ಕೂಡಿಸಿಕೊಂಡು ಸ್ವಲ್ಪ ದೂರ ಹೋದ. ಅಲ್ಲಿ ಅವನ ಜನ್ಮರಹಸ್ಯವನ್ನು ಅವನಿಗೆ ಹೇಳಿ ನೀನು ಪಾಂಡವ ಸಂಬಂಧಿಯಾದ್ದರಿಂದ ಪಾಂಡವ ಪಕ್ಷಕ್ಕೆ ಬಾ ಎಂದು ಕರೆದ. ಆದರೆ ಕರ್ಣಮಾತ್ರ ಕೌರವರಿಂದ ಸನ್ಮಾನಿತರಾದ್ದರಿಂದ ಕೃಷ್ಣ ಕರೆದಾಗ ಬರಲಿಲ್ಲ.

ವಾಸ್ತವಿಕವಾಗಿ ಭೂಭಾರಹರಣದಲ್ಲಿ ಕರ್ಣನದ್ದು ಒಂದು ಪ್ರಧಾನಪಾತ್ರವಿದೆ. ಕರ್ಣನ ಬಲದಿಂದಲೇ ಕೌರವ ಯುದ್ಧಕ್ಕೆ ಧೈರ್ಯಮಾಡಿದ್ದ. ಆದ್ದರಿಂದ ಇಲ್ಲಿಯೂ ಕೃಷ್ಣ ಆಂತರಿಕವಾಗಿ ಪ್ರೇರಣೆ ಮಾಡಲಿಲ್ಲ.

ಸಂಸ್ಥಾಪ್ಯ ತಂ ಭಗವಾನ್ ದ್ರೌಣಯೇ ಚ
ರಹೋऽವದನ್ಮಿತ್ರಭಾವಂ ಪೃಥಾಜೈಃ ।
ಯಾವತ್ ಪಿತುರ್ಮರಣಂ ಸೋऽಪಿ ಮೈತ್ರೀಂ
ವವ್ರೇ ಪಾರ್ಥೈಸ್ತಂ ಚ ವಿಸೃಜ್ಯ ಕೃಷ್ಣಃ ॥ ೮೬ ॥

ಯಯೌ ಕುರೂನ್ ಪೂರ್ವಮೇವೋದ್ವಿಸೃಜ್ಯ
ಪೃಥಾಸುತಾನಾಂ ಸ ಸಕಾಶಮೀಶಃ ॥ ೮೭ ॥

ಅರ್ಥ :- ಭಗವಾನ್ = ಶ್ರೀಕೃಷ್ಣನು, ತಂ = ಆ ಕರ್ಣನನ್ನು, ಸಂಸ್ಥಾಪ್ಯ = ಕೆಳಗಿಳಿಸಿ, ದ್ರೌಣಯೇ ಚ = ಅಶ್ವತ್ಥಾಮನಿಗೂ, ಪೃಥಾಜೈಃ =

ಪಾಂಡವರೊಡನೆ, ಮಿತ್ರಭಾವಂ = ಮಿತ್ರಭಾವವನ್ನು, (ಪ್ರಾಪ = ಹೊಂದು, ಇತಿ = ಎಂದು), ರಹಃ = ಏಕಾಂತದಲ್ಲಿ, ಅವದತಂ = ಹೇಳಿದನು, ಸಃ ಅಪಿ = ಅವನೂ ಕೂಡ, ಯಾವತ್ = ಎಲ್ಲಿಯವರೆಗೆ, ಪಿತುಃ = ತಂದೆಯಾದ ದ್ರೋಣಾಚಾರ್ಯರ, ಮರಣಂ = ಮರಣವೋ, ತಾವತ್ = ಅಲ್ಲಿಯವರೆಗೆ, ಪಾರ್ಥೈಃ (ಸಾಕಂ) = ಪಾಂಡವರೊಂದಿಗೆ, ಮೈತ್ರೀಂ = ಮಿತ್ರಭಾವವನ್ನು, ವವ್ರೇ = ಅಂಗೀಕರಿಸಿದನು, ಈಶಃ = ಸ್ವಾಮಿಯಾದ, ಸಃ ಕೃಷ್ಣಃ = ಆ ಶ್ರೀಕೃಷ್ಣನು, ತಂ ಚ = ಆ ಅಶ್ವತ್ಥಾಮನನ್ನು, ವಿಸೃಜ್ಯ = ಬಿಟ್ಟು, ಪೂರ್ವಮೇವ = ಕರ್ಣಸಂವಾದಕ್ಕಿಂತ ಮೊದಲೇ, ಕುರೂನ್ = ಕೌರವರನ್ನು, ಉದ್ವಿಸೃಜ್ಯ = ಬಿಟ್ಟು, ಪೃಥಾಸುತಾನಾಂ = ಕುಂತಿಯ ಮಕ್ಕಳಾದ ಪಾಂಡವರ, ಸಕಾಶಂ = ಹತ್ತಿರ, ಯಯೌ = ಹೋದನು.

ತಾತ್ಪರ್ಯ :- ಶ್ರೀಕೃಷ್ಣನು ಹೀಗೆ ಕರ್ಣನೊಂದಿಗೆ ಮಾತನಾಡಿ ಅವನನ್ನು ರಥದಿಂದ ಕೆಳಗೆ ಇಳಿಸಿದ. ನಂತರ ಅಶ್ವತ್ಥಾಮಾಚಾರ್ಯರಿಗೂ ಏಕಾಂತದಲ್ಲಿ ಪಾಂಡವರೊಡನೆ ಮಿತ್ರಭಾವದಿಂದಿರಲು ಹೇಳಿದ. ಅದಕ್ಕೆ ಅಶ್ವತ್ಥಾಮಾ ಚಾರ್ಯರು ''ನನ್ನ ತಂದೆಯ ಮರಣಪರ್ಯಂತ ಮಿತ್ರಭಾವದಿಂದ ಇರುತ್ತೇನೆಂದು ಹೇಳಿದರು. ನಂತರ ಅವರನ್ನು ಬಿಟ್ಟನು. ಕೌರವರನನ್ನಂತೂ ಕರ್ಣನೊಂದಿಗೆ ಮಾತನಾಡುವ ಮೊದಲೇ ಬಿಟ್ಟಿದ್ದನು. ಹೀಗೆ ಅವರೆಲ್ಲರನ್ನೂ ಬಿಟ್ಟು ಸ್ವಾಮಿಯಾದ ಶ್ರೀಕೃಷ್ಣನು ಪಾಂಡವರ ಬಳಿಗೆ ಬಂದನು.

ಸಂಪ್ರಾರ್ಥಿತಃ ಪೃಥಯಾ ಚೈವ ಕರ್ಣಃ
ಪಾರ್ಥೈರ್ಯೋಗಂ ಯಾಹಿ ಸೂನುರ್ಮಮಾಸಿ ।
ತೇನಾಪ್ಯುಕ್ತಾ ವಾಸವಿನಾ ವಿನಾऽಹಂ
ಹನ್ಯಾಂ ಸುತಾಂಸ್ತೇ ನ ಕಥಂಚನೇತಿ ॥ ೮೮ ॥

ಅರ್ಥ :- ಪೃಥಯಾ ಚ ಏವ = ಕುಂತಿಯಿಂದಲೂ ಕೂಡ, ಕರ್ಣಃ = ಕರ್ಣನು, ಪಾರ್ಥೈಃ = ಪಾಂಡವರೊಡನೆ, ಯೋಗಂ = ಸಂಬಂಧವನ್ನು, ಯಾಹಿ = ಹೊಂದು, ಮಮ = ನನ್ನ, ಸೂನುಃ = ಮಗನು, ಅಸಿ = ಇದ್ದೀ (ಇತಿ) ಎಂದು, ಸಂಪ್ರಾರ್ಥಿತಃ = ಬೇಡಿಕೊಳ್ಳಲ್ಪಟ್ಟನು, ತೇನಾಪಿ = ಅವನಿಂದಲೂ ಕೂಡ, ವಾಸವಿನಾ ವಿನಾ = ಅರ್ಜುನನ್ನು ಬಿಟ್ಟು, ತೇ = ನಿನ್ನ, ಸುತಾನ್ = ಮಕ್ಕಳನ್ನು, ಕಥಂ ಚನ = ಯಾವ ಕಾರಣದಿಂದಲೂ, ನ ಹನ್ಯಾಂ = ಕೊಲ್ಲುವುದಿಲ್ಲ, ಇತಿ = ಎಂದು, ಉಕ್ತಾ = ಹೇಳಲ್ಪಟ್ಟಿತು.

ತಾತ್ಪರ್ಯ :- ಕುಂತಿಯು ಕೂಡಾ ಕರ್ಣನನ್ನು ಕೇಳಿಕೊಂಡಳು ಪಾಂಡವರ ಜೊತೆಗೆ ಬಂದು ಸೇರು ನೀನು ಕೂಡಾ ನನ್ನ ಮಗನೇ ಆಗಿರುವಿ ಎಂದು. ಆದಕ್ಕೆ ಕರ್ಣನು ಹೇಳಿದ ಅರ್ಜುನನ್ನು ಬಿಟ್ಟು ಬೇರೆ ನಿನ್ನ ಯಾವ ಮಕ್ಕಳನ್ನು ಸರ್ವಥಾ ಕೊಲ್ಲುವದಿಲ್ಲ ಎಂದು.

**ತತೋ ಯಯುಃ ಕೌರವಾಃ ಪಾಂಡವಾಶ್ಚ**
**ಕುರುಕ್ಷೇತ್ರಲಂ ಯೋದ್ಧುಕಾಮಾಃ ಸಕೃಷ್ಣಾಃ ।**
**ಚಕ್ರುಶ್ಚ ತೇ ಶಿಬಿರಾಣ್ಯತ್ರ ಸರ್ವೇ**
**ಶುಭೇ ದೇಶೇ ಪಾಂಡವಾಃ ಕೃಷ್ಣಬುದ್ಧ್ಯಾ ॥ ೮೯ ॥**

ಅರ್ಥ :- **ತತಃ** = ಎಲ್ಲಾ ರೀತಿಯಿಂದ ಸನ್ನದ್ಧರಾದ ಮೇಲೆ, **ಯೋದ್ಧುಕಾಮಾಃ** = ಯುದ್ಧವನ್ನು ಬಯಸಿದ, **ಸಕೃಷ್ಣಾಃ** = ಕೃಷ್ಣನಿಂದ ಸಹಿತರಾದ, **ಪಾಂಡವಾಃ** = ಪಾಂಡವರು, **ಚ** = ಮತ್ತು, **ಕೌರವಾಃ** = ಕೌರವರು, **ಕುರುಕ್ಷೇತ್ರಂ** = ಕುರುಕ್ಷೇತ್ರವನ್ನು ಕುರಿತು, **ಯಯುಃ** = ಹೋದರು, **ತೇ ಸರ್ವೇ** = ಆ ಕೌರವರೆಲ್ಲರೂ, **ಶಿಬಿರಾಣಿ** = ಶಿಬಿರಗಳನ್ನು, **ಚಕ್ರುಃ** = ನಿರ್ಮಿಸಿದರು, **ಅತ್ರ** = ಈ ವಿಷಯದಲ್ಲಿ, **ಪಾಂಡವಾಃ ಚ** = ಪಾಂಡವರಾದರೋ, **ಕೃಷ್ಣಬುದ್ಧ್ಯಾ** = ಕೃಷ್ಣನಿಂದ ಹೇಳಲ್ಪಟ್ಟ ರೀತಿಯಿಂದ, **ಶುಭೇ** = ಶುಭಕರವಾದ, **ದೇಶೇ** = ಸ್ಥಳದಲ್ಲಿ, **ಶಿಬಿರಾಣಿ** = ಶಿಬಿರಗಳನ್ನು, **ಚಕ್ರುಃ** = ನಿರ್ಮಾಣ ಮಾಡಿದರು.

ತಾತ್ಪರ್ಯ :- ಎಲ್ಲ ರೀತಿಯಿಂದ ಉಭಯ ಪಕ್ಷಗಳು ಯುದ್ಧಕ್ಕೆ ಸನ್ನದ್ಧರಾದ ಮೇಲೆ ಯುದ್ಧ ಮಾಡುವ ಇಚ್ಛೆಯಿಂದ ಕೃಷ್ಣನಿಂದ ಕುಡಿದ ಕೌರವರು ಮತ್ತು ಪಾಂಡವರು ಕುರುಕ್ಷೇತ್ರಕ್ಕೆ ಹೋದರು. ಅಲ್ಲಿ ಎಲ್ಲರು ಶಿಬಿರಗಳನ್ನು ನಿರ್ಮಾಣ ಮಾಡಿಕೊಂಡರು. ಪಾಂಡವರು ಕೃಷ್ಣನ ನಿರ್ದೇಶದಂತೆ ಶುಭಕರವಾದ ಸ್ಥಳದಲ್ಲಿ ಶಿಬಿರಗಳನ್ನು ನಿರ್ಮಾಣ ಮಾಡಿದನು.

**ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ಶ್ರೀಮಹಾಭಾರತತಾತ್ಪರ್ಯನಿರ್ಣಯೇ**
**ಯುದ್ಧೋದ್ಯೋಗೋ ನಾಮ**
**ಚತುರ್ವಿಂಶೋಽಧ್ಯಾಯಃ**

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ

# ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ



ಪ್ರಕಾಶಕರು

**ಶ್ರೀಗುರುರಾಜ ಅಸೋಸಿಯೇಷನ್ (ರಿ.)**

# 53, ಮಾಡಲ್ ಹೌಸ್ ಬೀದಿ, ಬಸವನಗುಡಿ,

ಬೆಂಗಳೂರು 560 004. ದೂರವಾಣಿ: 26625658/59

Website: www.srigururajaassociation.org